

# ಅವಲೋಕನ

## ಕರ್ನಾಟಕ ಪರಂಪರೆಯ ಸಮೀಕ್ಷೆ











# ಅವಲೋಕನ

## ಕರ್ನಾಟಕದ ಪರಂಪರೆಯ ಸಮೀಕ್ಷೆ

ಸಂಪಾದಕ : ಎಚ್ಚೆಸ್ಕೆ

ವಿಶ್ವ ಕನ್ನಡ ಸಮ್ಮೇಳನ

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
೧೪–೩–ಅ, ನೃಪತುಂಗ ರಸ್ತೆ
ಬೆಂಗಳೂರು ೫೬೦ ೦೦೨

Avalokana, a Compendium (in Kannada) on Karnataka, edited by HSK (H.S. Krishnaswamy Iyengar), published by the Directorate of Kannada and Culture, 14-3A, Nripatunga Road, Bangalore 560 002



1985 10,000 Copies

ಸಂಪಾದಕೀಯ ಸಮಿತಿ:

ಡಾ। ಹಾ. ಮಾ. ನಾಯಕ

ಶ್ರೀ। ಹಂಪ ನಾಗರಾಜಯ್ಯ

ಶ್ರೀ। ಗೊರೂರು ರಾಮಸ್ವಾಮಿ ಅಯ್ಯಂಗಾರ್

ಶ್ರೀ। ಕೆ. ಎಸ್. ನಿಸಾರ್ ಅಹಮದ್

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಅಧಿಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಶ್ರೀ। ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್ (ಸಂಪಾದಕ)

ಮುದ್ರಕರು: ಮಣಿಪಾಲ ಪವರ್ ಪ್ರೆಸ್, ಮಣಿಪಾಲ

ಕರ್ನಾಟಕ  ಸರ್ಕಾರ

ಮುಖ್ಯ ಮಂತ್ರಿ

ಪಿಎಸ್‌ಸಿಎಂ : ೭೧೬-೮೫

ವಿಧಾನ ಸೌಧ, ಬೆಂಗಳೂರು,
ದಿನಾಂಕ: ೨೭ – ೧೧ – ೧೯೮೫.

# ಮುನ್ನುಡಿ

೧೯೮೨ರಲ್ಲಿ ನಡೆಯಬೇಕಾಗಿದ್ದ ವಿಶ್ವಕನ್ನಡ ಸಮ್ಮೇಳನವನ್ನು ಕಾರಣಾಂತರಗಳಿಂದ ಮುಂದೂಡ-ಲಾಗಿತ್ತು. ಮತ್ತೆ ಮುಂದೂಡುವುದು ಸೂಕ್ತವಲ್ಲವೆಂದು ಭಾವಿಸಿ ೧೯೮೫ರ ಡಿಸೆಂಬರ್ ೧೫, ೧೬ ಮತ್ತು ೧೭ರಂದು ಮೈಸೂರಿನಲ್ಲಿ ಸಮ್ಮೇಳನವನ್ನು ಸರಳವಾಗಿ ಏರ್ಪಡಿಸಲು ನಮ್ಮ ಸರಕಾರ ನಿರ್ಧರಿಸಿದೆ. ಈ ಸಮ್ಮೇಳನ ಕನ್ನಡಿಗರ ಸರ್ವತೋಮುಖ ಬೆಳವಣಿಗೆಯ, ಕನ್ನಡ ಸಂಸ್ಕೃತಿಯ ಪ್ರತೀಕವಾಗಬೇಕೆಂಬುದು ನಮ್ಮ ಆಕಾಂಕ್ಷೆ. ಈ ನಿಟ್ಟಿನಲ್ಲಿ ಅನೇಕ ಅರ್ಥಪೂರ್ಣ ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ.

ಈ ಸಮ್ಮೇಳನ ಕನ್ನಡದ ಸಾಹಿತ್ಯ, ಸಂಸ್ಕೃತಿಯ ಪ್ರತಿಬಿಂಬವಾಗಬೇಕೆಂಬುದು ನಮ್ಮ ಹಿರಿಯ ಆಸೆ. ಇದರ ಅಂಗವಾಗಿ ಸಾಹಿತ್ಯ ಸಂಪತ್ತನ್ನು ಕನ್ನಡಿಗರೆಲ್ಲರಿಗೆ ತಲುಪಿಸುವ ಕಾರ್ಯ ಹಾಗೂ ರಂಗಮಂದಿರಗಳ ನಿರ್ಮಾಣ ಪ್ರಮುಖವಾದುವು ಎನ್ನಬಹುದು. ಆರ್ಥಿಕ ಮುಗ್ಗಟ್ಟಿದ್ದರೂ ಕನ್ನಡದ ಕೆಲಸ ನಿಧಾನವಾಗ-ಬಾರದು; ನಿಲ್ಲಬಾರದು ಎಂಬ ದೃಢನಿಶ್ಚಯ ನಮ್ಮ ಸರಕಾರದ್ದು.

ಕನ್ನಡ ಸಂಸ್ಕೃತಿಗೆ ಹಿರಿದಾದ ಅಂತಸ್ಸತ್ವವಿದೆ, ಭವ್ಯ ಪರಂಪರೆಯಿದೆ. ಅನೇಕ ಶತಮಾನಗಳ ಅವಧಿ-ಯಲ್ಲಿ ಸುಂದರವಾದದ್ದನ್ನು, ಸತ್ಯವಾದದ್ದನ್ನು ಮೈಗೂಡಿಸಿಕೊಂಡ ಈ ಸಂಸ್ಕೃತಿ ಇಂದು ಸೊಂಪಾಗಿ ಬೆಳೆದಿದೆ. ಹಳೆಯದನ್ನು ಮರೆಯದೆ, ಹೊಸದನ್ನು ಅಲಕ್ಷಿಸದೆ, ಉತ್ತಮಾಂಶಗಳನ್ನು ತನ್ನದನ್ನಾಗಿಸಿಕೊಂಡು ಕರ್ನಾಟಕ ಸಂಸ್ಕೃತಿ ವಿಶಿಷ್ಟ ಘನತೆಯನ್ನು ಔನ್ನತ್ಯವನ್ನು ಕಾಪಾಡಿಕೊಂಡು ಬಂದಿದೆ. ನಮ್ಮ ಜನ ಬಾಳಿದ ಬಗೆ, ನಂಬಿದ ಮೌಲ್ಯಗಳು, ಅನುಸರಿಸಿದ ಆಚಾರ – ವಿಚಾರ ನಮ್ಮ ಸಾಹಿತ್ಯ ಕಲಾಪ್ರಕಾರಗಳಲ್ಲಿ ಅಚ್ಚಳಿಯದೆ ಪ್ರತಿಬಿಂಬಿಸಿವೆ. ಅಂದು ಕಲೆ, ಸಾಹಿತ್ಯ, ಸಂಸ್ಕೃತಿ ವರ್ಧನೆಗೆ ರಾಜರು ಆಶ್ರಯ ನೀಡಿದ್ದರು. ಇಂದು ಜನತೆಯ ಸರಕಾರ ಈ ಹೊಣೆಯನ್ನು ಹೊತ್ತಿದೆ.

ವಿಶ್ವಕನ್ನಡ ಸಮ್ಮೇಳನದ ಅಂಗವಾಗಿ ಈಗಾಗಲೇ ಕನ್ನಡದ ಖ್ಯಾತ ಲೇಖಕರ ೧೧೭ ಕೃತಿಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸಲಾಗಿದೆ. ಈ ಪುಸ್ತಕ ಮಾಲೆಗೆ ದೊರೆತ ಜನಪ್ರಿಯತೆಯಿಂದಾಗಿ ಈ ಯೋಜನೆಯನ್ನು ಮುಂದುವರಿಸಿ, ಇದೀಗ ೫೦ ಪುಸ್ತಕಗಳನ್ನು ಹೊರತರಲಾಗುತ್ತಿದೆ. ಈ ಪ್ರಕಟಣೆಗಳ ಶ್ರೇಣಿಯಲ್ಲಿ ಕೆಲವು ಕಾದಂಬರಿ, ಸಣ್ಣಕತೆ, ನಾಟಕ ವಿಚಾರ ಕೃತಿಗಳಲ್ಲದೆ, ಕುಮಾರ ವ್ಯಾಸ ಭಾರತ, ಹರಿಶ್ಚಂದ್ರ ಕಾವ್ಯ, ಪ್ರಭುಲಿಂಗ-ಲೀಲೆ, ಜೈಮಿನಿ ಭಾರತ, ಯಶೋಧರ ಚರಿತ್ರೆಯಂತಹ ಪ್ರಸಿದ್ಧ ಅಭಿಜಾತ ಕೃತಿಗಳೂ ಸೇರಿವೆ.

ಇದೇ ಸಂದರ್ಭದಲ್ಲಿ ಕನ್ನಡನಾಡಿನ ಇತಿಹಾಸ, ಧರ್ಮ, ಸಂಸ್ಕೃತಿ, ಸಾಹಿತ್ಯ, ಭಾಷೆ, ಜಾನಪದಕ್ಕೆ ಸಂಬಂಧಿಸಿದ ಹಾಗೂ ಅಭಿವೃದ್ಧಿ ಕಾರ್ಯಗಳನ್ನು ಕುರಿತ ಸತ್ವಪೂರ್ಣವೂ ವಿಚಾರಪೂರ್ಣವೂ ಆದ ಲೇಖನ-ಗಳಿಂದ ಕೂಡಿದ 'ಅವಲೋಕನ'ವೆಂಬ ಕೃತಿಯೊಂದನ್ನು ಕನ್ನಡಿಗರ ಕೈಯಲ್ಲಿಡಲು ಸಂತೋಷಿಸುತ್ತೇನೆ.

ಈ 'ಅವಲೋಕನ' ಗ್ರಂಥವನ್ನು ಪ್ರೊ। ಎಚ್. ಎಸ್. ಕೃಷ್ಣಸ್ವಾಮಿ ಐಯಂಗಾರ್ ಅವರು (ಎಚ್ಚೆಸ್ಕೆ) ಸಂಪಾದಿಸಿಕೊಟ್ಟಿದ್ದಾರೆ. ನಾಡಿನ ಹಿರಿಯರು ವಿದ್ವಾಂಸರು, ಸಾಹಿತಿಗಳು, ವಿಚಾರವಂತರು ತಮ್ಮ ಉತ್ತಮ ಲೇಖನಗಳನ್ನು ನೀಡಿ, ಕೃತಿ ಸಂದರ್ಭೋಚಿತವಾಗಿ ಮಹತ್ವಪೂರ್ಣ ಪ್ರಕಟಣೆಯಾಗಲು ಸಹಕರಿಸಿದ್ದಾರೆ. ಸಂಪಾದಕರು ಹಾಗೂ ಲೇಖಕರನ್ನು ಕನ್ನಡಿಗರ ಪರವಾಗಿ ವಂದಿಸುತ್ತೇನೆ.

ರಾಮಕೃಷ್ಣ ಹೆಗಡೆ

# ಈ ಗ್ರಂಥವನ್ನು ಕುರಿತು

ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಕರ್ನಾಟಕವನ್ನು ಕುರಿತ ಈ ಹೆಬ್ಬೊತ್ತಗೆಯನ್ನು ಕನ್ನಡಿಗರ ಕೈಯಲ್ಲಿಡಲು ನಮಗೆ ಸಂತೋಷ ವಾಗುತ್ತದೆ. ಕರ್ನಾಟಕದ ಹಿರಿಮೆ ಗರಿಮೆಗಳ ಪರಿಚಯ ಮಾಡಿಕೊಡುವ ಗ್ರಂಥವಿದು.

'ಕರ್ನಾಟಕ' ಎಂಬುದು ಬರಿಯ ಹೆಸರಲ್ಲ. 'ಮಂತ್ರ ಕಣಾ, ಶಕ್ತಿ ಕಣಾ, ತಾಯಿ ಕಣಾ, ದೇವಿ ಕಣಾ' ಎನ್ನುತ್ತಾರೆ ಕವಿ ಕುವೆಂಪು. 'ನಮ್ಮ ಕರ್ಣಾಟಕ ಬರಿಯ ದೇಶ ವಿಸ್ತೀರ್ಣಕ್ಕೆ ಮಾತ್ರ ಸಂಬಂಧಪಟ್ಟುದಲ್ಲ; ಕಾಲ ವಿಸ್ತೀರ್ಣವನ್ನೂ ನಾವು ಪ್ರಮುಖವಾಗಿ ಭಾವಿಸುತ್ತೇವೆ. ಅದನ್ನು ಚದರ ಮೈಲಿಗಳಿಂದ ಅಳೆದರೆ ಸಾಲದು; ಚದರ ವರ್ಷಗಳಿಂದಲೂ ಗುರುತಿಸಬೇಕು. ವ್ಯಷ್ಟಿರೂಪವಾದ ವ್ಯಕ್ತಿಗೆ ಕೋಶಗಳಿರುವಂತೆ ಸಮಷ್ಟಿರೂಪವಾದ ದೇಶಕ್ಕೂ ಕೋಶಗಳಿವೆ ಎಂದು ಭಾವಿಸುವುದಾದರೆ ಕರ್ನಾಟಕಕ್ಕೆ ಅನ್ನಮಯರೂಪವಾದ ಭೂಪ್ರದೇಶವಿರುವಂತೆಯೇ ಪ್ರಾಣಮನೋಮಯರೂಪವಾದ ಚಿತ್‌ಪ್ರದೇಶವೂ ಇದೆ. ಚಿನ್ಮಯವೂ ಆಧ್ಯಾತ್ಮಿಕವೂ ಆಗಿರುವ ಆ ಸಂಸ್ಕೃತಿಕೋಶವೆ ಕರ್ಣಾಟಕದೇವಿಯ ಸೂಕ್ಷ್ಮಶರೀರ' ಎಂಬುದು ಅವರ ನಂಬಿಕೆ. ಅಂತೆಯೇ ಕರ್ನಾಟಕ ಎಂದೊಡನೆಯೇ ಒಬ್ಬೊಬ್ಬರಲ್ಲಿ ಒಂದೊಂದು ತೆರನಾದ ಭಾವನೆ ಸ್ಫುರಿಸುವುದು ಸಹಜ. ಕರ್ನಾಟಕ ಎಂಬ ಹೆಸರಿನ ಪ್ರಾಚೀನತೆಯನ್ನು ನೆನೆಯುವುದಾದರೆ ಮಹಾಭಾರತದಷ್ಟು ಹಿಂದಕ್ಕೆ ನಮ್ಮ ನೆನಪು ಜಾರುತ್ತದೆ. ಕನ್ನಾಡು, ಕರುನಾಡು ಎಂಬ ಅಚ್ಚಕನ್ನಡ ಪದಗಳಿಂದ ಕರ್ನಾಟಕ, ಕರ್ಣಾಟಕ ಪದಗಳ ವ್ಯುತ್ಪನ್ನವಾಗಿದೆಯೆನ್ನುವುದು ಒಂದು ಅಭಿಪ್ರಾಯ. ಅದು ಕರಿಯ ಮಣ್ಣಿನ ಭೂಮಿಯುಳ್ಳ ಚೆಲುವಾದ ಪ್ರದೇಶ. 'ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾಂಬೊಲ ಕಪ್ಪು, ಬೆಟ್ಟಗಳು ಕಪ್ಪು, ಕಾರ್ಮೋಡಗಳು ಕಪ್ಪು, ಹೊಳೆಕೆರೆಯ ಮಡು ಕಪ್ಪು, ತಾಯ ಕಾಲ್ ತೊಳೆವ ಉಪ್ಪು ಕಡಲದು ಕಪ್ಪು– ಕನ್ನಡದ ಕಣ್ನೋಟ–ಕೂರ್ಪು, ಆರ್ಪು!' ಎಂಬುದು ಬಿಎಂ ಶ್ರೀ ವಾಣಿ.

ಕರ್ನಾಟಕದ ಇತಿಹಾಸ ಸುದೀರ್ಘವಾದ್ದು. ಅಶೋಕನ ಕಾಲಕ್ಕೂ ಹಿಂದಿನಿಂದಲೂ ಇದನ್ನು ಗುರುತಿಸಬಹುದು. ಕರ್ನಾಟಕದಲ್ಲಿಯ ಮಾನವನ ಪ್ರಾಚೀನತ್ವ ಪ್ರಾಕ್ ಶಿಲಾಯುಗದ ಸುಮಾರಿನಿಂದಲೇ ಆರಂಭವಾಗುವಂಥದು. ಮೌರ್ಯರ ಕಾಲಕ್ಕೂ ಹಿಂದೆ ಕರ್ನಾಟಕಕ್ಕೆ ರಾಜಕೀಯ ಸ್ಥಾನಮಾನಗಳಿದ್ದುವೆಂಬುದು ಇತಿಹಾಸಕಾರರ ಅಭಿಮತ. ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ, ಮೈಸೂರು ಅರಸರ ಆಳ್ವಿಕೆಗಳು ಕರ್ನಾಟಕದ ರಾಜಕೀಯ ಹಾಗೂ ಸಾಂಸ್ಕೃತಿಕ ಇತಿಹಾಸದ ಉಜ್ವಲ ಅಧ್ಯಾಯಗಳು.

ಕಲಾ ದೃಷ್ಟಿಯುಳ್ಳವರಿಗೂ ಕರ್ನಾಟಕದ ತುಂಬ ಕಣ್ಣಿಗೆ ಹಬ್ಬ. ಬಾದಾಮಿಯ ಗುಹಾಲಯಗಳು, ಐಹೊಳೆ – ಪಟ್ಟದ ಕಲ್ಲುಗಳ ದೇಗುಲಗಳ ದಿವ್ಯ ಜಾಲ, ಶ್ರವಣಬೆಳಗೊಳದ ಗೊಮ್ಮಟ ಮೂರ್ತಿ, ಬೇಲೂರು – ಹಳೇಬೀಡುಗಳ ಶಿಲ್ಪಚಾತುರ್ಯ, ಹಂಪಿಯಲ್ಲಿ ಹಬ್ಬಿರುವ ಗತವೈಭವ, ಬಿಜಾಪುರದ ಗೋಳಗುಮ್ಮಟ, ಹಲವೆಡೆಗಳಲ್ಲಿ ಸಿಂಪಡಿಸಿದ ಚಿತ್ರಕಲಾ ಸೌಂದರ್ಯ – ಇವಕ್ಕೆ ಮನಸೋಲದಿರುವವರು ಯಾರು ?

ಕರ್ನಾಟಕದ ಧಾರ್ಮಿಕ ಪರಂಪರೆಯೂ ಉಜ್ವಲವಾದದ್ದು. ಬಹುತೇಕ ಎಲ್ಲ ಧರ್ಮಗಳನ್ನೂ ಕರ್ನಾಟಕ ಸ್ವಾಗತಿಸಿದೆ. ದ್ವೈತಾದ್ವೈತ ವಿಶಿಷ್ಟಾದ್ವೈತಗಳು ಇಲ್ಲಿ ಕುಡಿವರಿದಿವೆ. ಹನ್ನೆರಡನೆಯ ಶತಮಾನದಷ್ಟು ಹಿಂದೆಯೇ ಸಾಮಾಜಿಕ ಧಾರ್ಮಿಕ ಕ್ರಾಂತಿಯನ್ನು ಮೆರೆದ ವೀರಶೈವ ಧರ್ಮ ಕರ್ನಾಟಕದ್ದೇ ಎನ್ನಬಹುದು. ಅಂತೆಯೇ ದ್ವೈತ ಕೂಡ. ಕಾಲಾನುಕ್ರಮದಲ್ಲಿ ಇಸ್ಲಾಂ ಹಾಗೂ ಕ್ರೈಸ್ತಧರ್ಮಗಳಿಗೂ ಕರ್ನಾಟಕ ಇಂಬು ನೀಡಿತು. ಹೀಗಾಗಿ ಧರ್ಮಸಮನ್ವಯವೇ ಕರ್ನಾಟಕದ ಆದರ್ಶವೆನ್ನಬಹುದು.

ಒಂದು ಕಾಲದಲ್ಲಿ ಕಾವೇರಿಯಿಂದ ಗೋದಾವರಿಯ ವರೆಗೆ ಹಬ್ಬಿತ್ತೆಂದು ಕವಿಯಿಂದ ವರ್ಣಿತವಾದ ಕರ್ನಾಟಕ ಇನ್ನೊಂದು ದೃಷ್ಟಿಯಿಂದಲೂ ವಿಶಿಷ್ಟವಾದ್ದು. ದಕ್ಷಿಣದ ಸಂಗೀತ ಸಂಪ್ರದಾಯಕ್ಕೆ ಕರ್ನಾಟಕ ಸಂಗೀತವೆಂದೇ ಹೆಸರು. ಅಲ್ಲದೆ ಉತ್ತರದ ಹಿಂದೂಸ್ತಾನಿ ಸಂಗೀತ ಸಂಪ್ರದಾಯವನ್ನೂ ಕರ್ನಾಟಕ ಪೋಷಿಸುತ್ತ ಬಂದಿದೆ. ಇವೆರಡೂ ಸಂಪ್ರದಾಯಗಳಲ್ಲಿ ಸುವಿಖ್ಯಾತರಾದ ಅನೇಕ ಸಂಗೀತಗಾರರು ಕರ್ನಾಟಕದವರು.

ಕನ್ನಡ ಭಾರತದ ಅತ್ಯಂತ ಪ್ರಾಚೀನ ಭಾಷೆಗಳಲ್ಲೊಂದು. ಕರ್ನಾಟಕದ ಸಾಹಿತ್ಯ ಪರಂಪರೆ ಕೂಡ ಸುದೀರ್ಘವಾದ್ದು. ಪಂಪರನ್ನಾದಿ ಜೈನ ಕವಿಗಳೂ ಹರಿಹರ ರಾಘವಾಂಕ ಚಾಮರಸರೇ ಮುಂತಾದ ವೀರಶೈವ ಕವಿಗಳೂ ಲಕ್ಷ್ಮೀಶ ಕುಮಾರ ವ್ಯಾಸ ರತ್ನಾಕರ ವರ್ಣಿಯೇ ಮುಂತಾದವರೂ ಮಾಸ್ತಿ, ಬೇಂದ್ರೆ, ಕುವೆಂಪು, ಕಾರಂತ ಮುಂತಾದ ಆಧುನಿಕರೂ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರಲ್ಲದೆ ವಿಶ್ವಸಾಹಿತ್ಯ ಶ್ರೇಣಿಯಲ್ಲಿ ನಿಲ್ಲಬಲ್ಲ ಉದ್ಭ ಕೃತಿಗಳನ್ನು ರಚಿಸಿದ್ದಾರೆ.

ನಾಟಕ, ಚಿತ್ರಕಲೆ, ಜಾನಪದ ಮುಂತಾದ ಅನೇಕ ರಂಗಗಳಲ್ಲಿ ಕೂಡ ಮುಂದಿರುವ ಕರ್ನಾಟಕದ ಭೌತಿಕ ಸ್ಥಾನಮಾನಗಳೂ ನಿಸರ್ಗ ಸಂಪತ್ತೂ ಕಡಿಮೆಯೇನಲ್ಲ. ಇಲ್ಲಿಯ ನೆಲ, ಜಲ, ಖನಿಜ ಎಲ್ಲವೂ ವೈವಿಧ್ಯಮಯ. ಅಂತೆಯೇ ಪ್ರಾಣಿಲೋಕ ಹಾಗೂ ಸಸ್ಯಸಂಪತ್ತು. ಹುಲಿ, ಆನೆ, ಕಾಡೆಮ್ಮೆ, ಶ್ರೀಗಂಧ, ಕಾಫಿ, ಚಿನ್ನ, ಕಬ್ಬಿಣ ಎಲ್ಲಕ್ಕೂ ಇದು ಪ್ರಸಿದ್ಧ. ಏಷ್ಯದಲ್ಲೇ ಮೊದಲ ಬಾರಿಗೆ ಜಲವಿದ್ಯುತ್ತನ್ನುತ್ಪತ್ತಿ ಮಾಡತೊಡಗಿದ್ದೂ ಹಳೆಯ ಮೈಸೂರಿನ ಶಿವಸಮುದ್ರದಲ್ಲಿ. ದಕ್ಷರಾದ ದೂರದೃಷ್ಟಿಯ ಅನೇಕ ಆಡಳಿತಗಾರರು ಕರ್ನಾಟಕವನ್ನು ಆಧುನಿಕಗೊಳಿಸಲು ಶ್ರಮಿಸಿದ್ದಾರೆ.

ಕರ್ನಾಟಕದ ಈ ಎಲ್ಲ ಮುಖಗಳ ಪರಿಚಯ ಮಾಡಿಕೊಡುವ ಪ್ರಯತ್ನ ಈ ಗ್ರಂಥದಲ್ಲಿ ನಡೆದಿದೆ. ಇದಕ್ಕಾಗಿ ಲೇಖನ ಬರೆದುಕೊಟ್ಟಿರುವ ವರೆಲ್ಲ ತಂತಮ್ಮ ಕ್ಷೇತ್ರಗಳಲ್ಲಿ ಪರಿಣತರು. ಕರ್ನಾಟಕವನ್ನು ಕುರಿತ ವಿಶ್ವಕೋಶ ಸದೃಶವಾದ ಈ ಗ್ರಂಥವನ್ನು ಕನ್ನಡಿಗರು ಆದರದಿಂದ ಬರಮಾಡಿಕೊಳ್ಳುವರೆಂಬ ನಂಬಿಕೆ ನಮ್ಮದು.

ಈ ಗ್ರಂಥ ಸಂಪಾದನೆಯಲ್ಲಿ ಅನೇಕರು ನೆರವಾಗಿದ್ದಾರೆ. ಡಾ। ಹಾ. ಮಾ. ನಾಯಕ, ಶ್ರೀಗಳಾದ ಹಂಪ ನಾಗರಾಜಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕೆ. ಎಸ್. ನಿಸಾರ್ ಅಹಮದ್ ಇವರಿಂದ ಕೂಡಿದ ಸಂಪಾದಕ ಸಮಿತಿಗೆ ಕೃತಜ್ಞತೆ ಸಲ್ಲಬೇಕು. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರು ಅಥವಾ ಅಧಿಕ ನಿರ್ದೇಶಕರಾಗಿದ್ದ ದಿವಂಗತ ನ. ನಾ. ಕಠಾವಿ, ಶ್ರೀ। ಕೆ. ಜಯಾಚಾರ್ಯ, ಶ್ರೀ। ಐ. ಎಂ. ವಿಠ್ಠಲಮೂರ್ತಿ ಇವರಿಗೂ ಈಗಿನ ನಿರ್ದೇಶಕರಾದ ಶ್ರೀ। ಚಂದ್ರಹಾಸ ಗುಪ್ತ ಅವರಿಗೂ ಅಧಿಕ ನಿರ್ದೇಶಕರಾದ ಶ್ರೀ। ಹಾಲಪ್ಪನವರ್ ಅವರಿಗೂ ಇದನ್ನು ಅಂದವಾಗಿ ಮುದ್ರಿಸಿರುವ ಸುಪ್ರಸಿದ್ಧ ಮಣಿಪಾಲ ಪವರ್ ಪ್ರೆಸ್ ಇವರಿಗೂ ಸಕಾಲದಲ್ಲಿ ಲೇಖನಗಳನ್ನು ಬರೆದುಕೊಟ್ಟ ವಿದ್ವಾಂಸರಿಗೂ ಅನುವಾದಕರಿಗೂ ಕರಡಚ್ಚು ತಿದ್ದಿದ ಮಿತ್ರರಿಗೂ ಧನ್ಯವಾದಗಳು.

ಮೈಸೂರು
ಡಿಸೆಂಬರ್ ೧೫, ೧೯೮೫

— "ಎಚ್ಚೆಸ್ಕೆ"
ಸಂಪಾದಕ

# ಪರಿವಿಡಿ




**ಚಿತ್ರ 1 ಜಲಚಕ್ರ**

ಲೇಖನ : ಕರ್ನಾಟಕದ ಅಂತರ್ಜಲ ಸಂಪತ್ತು ಪುಟ : ೩೧




ಚಿತ್ರ 2 ಕರ್ನಾಟಕದ ಭೂ ವೈಜ್ಞಾನಿಕ, ಮಳೆಯ ಹಾಗೂ ಜಲಾನಯನ ಪ್ರದೇಶಗಳ ನಕಾಶೆ

ಲೇಖನ : ಕರ್ನಾಟಕದ ಅಂತರ್ಜಲ ಸಂಪತ್ತು ಪುಟ: ೩೧







**ಚಿತ್ರ 3 ಕಠಿನ ಶಿಲೆಯಲ್ಲಿ ಅಂತರ್ಜಲದ ಅಸ್ತಿತ್ವ ಮತ್ತು ಚಲನೆ**

ಕೊ 1 : ಈ ಕೊಳವೆ ಬಾವಿಯು ಹಲವಾರು ಭೇದಗಳನ್ನು ದಾಟಿರುವುದರಿಂದಲೂ ಸಾಕಷ್ಟು ಆಳವಾಗಿರುವುದರಿಂದಲೂ ನೀರನ್ನು ಎಲ್ಲಾ ಋತುಗಳಲ್ಲಿಯೂ ಹಾಗೂ ಬರಗಾಲದಲ್ಲಿಯೂ ನ.ಡಬಲ್ಲುದು.

ಕೊ 2 : ಈ ಕೊಳವೆ ಬಾವಿಯು ಕೆಲವೇ ಭೇದಗಳನ್ನು ದಾಟಿರುವುದರಿಂದಲೂ ಸಾಕಷ್ಟು ಆಳವಾಗಿರದರಿಂದಲೂ ಅಷ್ಟು ಹೆಚ್ಚು ನೀರನ್ನು ನೀಡಲಾರದು.

ಕೊ 3 : ಇದು ಯಾವ ಭೇದವನ್ನು ದಾಟಿರದ್ದರಿಂದ ನೀರೇ ಇಲ್ಲದ ಬಾವಿಯಾಗಿದೆ.

ತೋ : ತೋಡುಬಾವಿಯು ಶಿಥಿಲಿತ ವಲಯದಿಂದ ಮಾತ್ರ ನೀರನ್ನು ಪಡೆಯುವುದರಿಂದ ಮಳೆ ಕಡಿಮೆಯಾದರೆ ಅಥವಾ ತಡವಾದರೆ ನೀರು ಬತ್ತಿ ಹೋಗುತ್ತದೆ.

ಕೊ 4 ಮತ್ತು ಕೋ 5: ಈ ಎರಡು ಬಾವಿಗಳು ಕಠಿಣ ಶಿಲೆಯಲ್ಲಿ ನುಗ್ಗಿರುವ ಡೈಕ್ ಶಿಲೆಯ ಒಂದೊಂದು ಬದಿಯಲ್ಲಿವೆ.
ಕೊ 5: ಕೊಳವೆ ಬಾವಿಯ ಬದಿಯಲ್ಲಿ ಅಂತರ್ಜಲವು ಮಡಗುಟ್ಟುವದರಿಂದ ಕೊಳವೆ ಬಾವಿ (5)ಯು ಹೆಚ್ಚು ನೀರನ್ನು ನೀಡುತ್ತದೆ. ನಾಲ್ಕನೆಯ ಕೊಳವೆಯು ತುಲನಾತ್ಮಕವಾಗಿ ಕಡಿಮೆ ನೀರನ್ನು ನೀಡುತ್ತದೆ.

ಲೇಖನ : ಕರ್ನಾಟಕದ ಅಂತರ್ಜಲ ಸಂಪತ್ತು ಪುಟ : ೩೧




ಲೇಖನ: ಕರ್ನಾಟಕದ ಭೂ ಇತಿಹಾಸ. ಪುಟ: ೨೧



ಕರ್ನಾಟಕ
ಪ್ರಾಚೀನ ಐತಿಹಾಸಿಕ ಸ್ಥಳಗಳು
76°
77°
78°
18°
17°
16°
15°
14°
13°
12°
75°
ಬೀದರ್
ಗುಲ್ಬರ್ಗ
ಸನ್ನತಿ
ಸಾತ್ಪುರ
ಬಿಜಾಪುರ
ಕೃಷ್ಣಾನದಿ
ಬೆಳಗಾಂ
ವಡಂಗಾವ್
ಮಾಧವಪುರ
ಪಿಕ್ಲಿಹಾಳ
ಮಾಸ್ಕಿ
ರಾಯಚೂರು
ತುಂಗಭದ್ರಾನದಿ
ಧಾರವಾಡ
ಅಕ್ಕಿಯಾಲೂರು
0 50 100
ಕಿಲೊಮೀಟರುಗಳು
ಬಳ್ಳಾರಿ
H. KANARA
ಹಾನಗಲ್
ಬನವಾಸಿ
ಬ್ರಹ್ಮಗಿರಿ
ಹಲ್ಲೂರು
ಚಿತ್ರದುರ್ಗ
ಚಂದ್ರವಳ್ಳಿ
ಶಿವಮೊಗ್ಗ
ಚಿಕ್ಕಮಗಳೂರು
ತುಮಕೂರು
ಕೋಲಾರ
ದ. ಕನ್ನಡ
ಹಾಸನ
ಬೆಂಗಳೂರು
ಬೆಂಗಳೂರು
N
ಮಂಡ್ಯ
ಕಾವೇರಿ ನದಿ
ಕೊಡಗು
ಟಿ. ನರಸೀಪುರ
ಹೆಮ್ಮಿಗೆ
ಮೈಸೂರು

# ಕರ್ನಾಟಕದ ಪ್ರಾಚೀನತೆ

ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ

'ಕರ್ಣಾ(ರ್ನಾ)ಟಕ' ಎನ್ನುವುದು ನಾವಿರುವ ದೇಶಭಾಗದ ಹೆಸರಾಗಿ ಇಂದು ರೂಢಿಯಲ್ಲಿದೆಯಷ್ಟೆ. ಅದು ಹಾಗೆ ಎಂದಿನಿಂದ ರೂಢಿಯಲ್ಲಿದೆ, ಯಾವ ಯಾವ ಆಕಾರಗಳಲ್ಲಿ, ಅರ್ಥಗಳಲ್ಲಿ ಕಂಡುಬಂದಿದೆ, ಎಂಬುದು ಕುತೂಹಲದ ಜಿಜ್ಞಾಸೆಯ ವಿಷಯವಾಗಿದೆ. ಸಾರಾಂಶವೆಂದರೆ:

## ಪ್ರಾಚೀನ ಉಲ್ಲೇಖಗಳು

ಈ ಶಬ್ದ ಈಗ ತಿಳಿದ ಮಟ್ಟಿಗೆ ಸು. ೪ ನೆಯ ಶತಮಾನದಿಂದ ಕರ್ಣಾಟ(ಕ), ಕರ್ನಾಟ(ಕ) ಈ ಮುಂತಾದ ರೂಪಗಳಲ್ಲಿ ನಮ್ಮ ದೇಶದ ಸಾಹಿತ್ಯ ಗ್ರಂಥಗಳಲ್ಲಿ ಕಾಣಿಸಿಕೊಳ್ಳತೊಡಗಿದೆ. 'ಮಹಾಭಾರತ'ದಲ್ಲಿಯೇ ಅದು "ಕರ್ಣಾಟಕ ಮಹಿಷಕಾ ವಿಕಲ್ಪಾ ಮೂಷಕಾಸ್ತಥಾ" (ಭೀಷ್ಮಪರ್ವ, ೯–೫೯) ಎಂಬ ಶ್ಲೋಕ ಭಾಗದಲ್ಲಿ ಬಂದಿದೆಯೆಂದು ನಮಗೆ ತಿಳಿದಿದೆ. ಆದರೆ ಈ ಗ್ರಂಥದ ಪುಣೆಯ ಅಧಿಕೃತ ಪರಿಷ್ಕರಣದಲ್ಲಿ ಈ ಭಾಗ ಬೇರೆ ರೀತಿಯಲ್ಲಿದೆ. ಪಾಠಾಂತರವಾಗಿ ಮಾತ್ರ ಉದ್ಧೃತ ಶ್ಲೋಕ ಭಾಗವನ್ನು ತೋರಿಸಿದೆ. ಈ ಸಂದಿಗ್ಧವಾದ ಉಲ್ಲೇಖವನ್ನು ಬಿಟ್ಟರೂ, ಶೂದ್ರಕ ಕವಿಯ (ಸು. ೪೦೦) ಮೃಚ್ಛಕಟಿಕ ಪ್ರಕರಣ, ವಿಷ್ಣುಧರ್ಮೋತ್ತರ ಪುರಾಣ, (ಸು. ೪೦೦–೫೦೦), ವರಾಹಮಿಹಿರನ (ಸು. ೯ನೆಯ ಶ.) 'ಬೃಹತ್ ಸಂಹಿತೆ' 'ಭಾಗವತ ಪುರಾಣ' (ಸು. ೯ನೆಯ ಶ.) ಮಾರ್ಕಂಡೇಯ ಪುರಾಣ (ಸು. ೮ನೆಯ ಶ.) ಈ ಕೆಲವು ಪ್ರಾಚೀನ ಉಲ್ಲೇಖಗಳ ಆಕರಗಳಂತೂ ಇದ್ದೇ ಇವೆ. ಅಲ್ಲದೆ ಮತಂಗ, ಜಯಕೀರ್ತಿ, ಕ್ಷೇಮೇಂದ್ರ, ಕಲ್ಹಣ, ಬಿಲ್ಹಣ, ಸೋಮದೇವ ಮೊದಲಾದವರ ಗ್ರಂಥಗಳಲ್ಲಿಯೂ ಈ ಶಬ್ದವುಂಟು. ಪ್ರಾಕೃತ, ಮರಾಠಿ, ತಮಿಳು ಮುಂತಾದ ಅನ್ಯ ಭಾಷೆಗಳ ಪ್ರಾಚೀನ ಗ್ರಂಥಗಳಲ್ಲಿಯೂ ಈ ಶಬ್ದ ವಿವಿಧ ರೂಪಗಳಲ್ಲಿ ಕಾಣಿಸಿಕೊಂಡಿದೆ. ಇವುಗಳಲ್ಲಿ ಉದ್ಯೋತನ ಸೂರಿಯ ಪ್ರಾಕೃತ ಕುವಲಯಮಾಲಾ ಕಥಾ ೭೭೯ ತಮಿಳು 'ಶಿಲಪ್ಪದಿಕಾರಂ' (ಸು. ೬೦೦) ಗ್ರಂಥಗಳ ಉಲ್ಲೇಖಗಳು ಸಾಕಷ್ಟು ಪ್ರಾಚೀನವಾದವು. ಇನ್ನು ಕನ್ನಡ ಭಾಷೆಯಲ್ಲಿಯೇ 'ವಡ್ಡಾರಾಧನೆ', ಪಂಪ ಕವಿಯ ಗ್ರಂಥಗಳು, ನಾಗವರ್ಮನ 'ಕರ್ಣಾಟಕ ಕಾದಂಬರಿ' ಈ ಮುಂತಾದ ಗ್ರಂಥಗಳಲ್ಲಿ ಈ ಶಬ್ದದ ಸಾಕಷ್ಟು ಪ್ರಯೋಗಗಳನ್ನು ಗಮನಿಸಬಹುದು.

'ಕರ್ನಾಟಕ' ಶಬ್ದಪ್ರಯೋಗದ ಈಚಿನ ಉಲ್ಲೇಖಗಳಿಗೆ ನಾವು ಹೆಚ್ಚು ಮಹತ್ವ ಕೊಡಬೇಕಾಗಿಲ್ಲವೆಂದರೂ, ಪ್ರಾಚೀನ ಸಂಸ್ಕೃತ ಕನ್ನಡ ಶಾಸನಗಳ ಉಲ್ಲೇಖಗಳನ್ನು ಅವಶ್ಯವಾಗಿ ಗಮನಿಸಬೇಕಾಗುತ್ತದೆ. ಇವುಗಳಲ್ಲಿ ಕದಂಬರ ದೊರೆ ಶಾಂತಿವರ್ಮನ ಸು. ೪೫೦ ರ ಒಂದು ಶಾಸನದಲ್ಲಿ ಬರುವ 'ವೈಜಯಂತೀತಿಲಕ' "ಸಮಗ್ರಕರ್ಣಾಟಕ ಭೂ ವರ್ಗ್ಗಭರ್ತ್ತಾರಂ" ಎಂಬುದೇ (ಎಕ., ೬, ೧೬೨) ಪ್ರಾಯಶಃ ಮೊದಲನೆಯದು. ತಲಕಾಡು ಗಂಗರ ಭೂ ವಿಕ್ರಮನ ಒಂದು ತಾಮ್ರಶಾಸನದಲ್ಲಿ "ಅಸ್ಯ ಸೀಮಾ: ಕರ್ನಾಟಕೇ ಪ್ರವಷ್ಯಾಮಿ" ಎಂದೂ (ಎಂ. ಎ. ಆರ್. ೧೯೨೫ ಕ್ರಿ.ಶ. ೬೩೩) ದಂತಿದುರ್ಗನೆಂಬ ರಾಷ್ಟ್ರಕೂಟ ದೊರೆಯ ೭೫೩ ರ ಸಾಮನ್‌ಗಡ ತಾಮ್ರಶಾಸನದಲ್ಲಿ "ಕರ್ಣಾಟಕಂ ಬಲಮಚಿನ್ತ್ಯಮ ಅಜೇಯಮನ್ಯೈ" ಎಂದೂ (ಇಂ ಆ ೧೧ ಪು. ೧೧೧) ಬಂದಿರುವುದು ನೂರಾರು ಶಾಸನೋಲ್ಲೇಖಗಳಲ್ಲಿ ಮೊದಮೊದಲಿನವು. ಪಾಂಡ್ಯರಾಜನಾದ ಶಡೈಯನ್ ಪರಾಂತಕನ ವೇಳ್ವಿಕುಡಿ ತಾಮ್ರಶಾಸನದಲ್ಲಿ (ಸು. ೭೭೦) 'ಕರುನಾಡಗನ್' ರೂಪದಲ್ಲಿ ಈ ಶಬ್ದವಿದೆ. ಅನ್ಯ ತಮಿಳು ಶಾಸನಗಳಲ್ಲಿ 'ಕನ್ನಾಟ, ಕನ್ನಾಟಕ, ಕನ್ನಾಡಗರುಂ', ಎಂಬ ಇತರ ರೂಪಗಳಿವೆ.

## ಕರ್ಣಾ(ರ್ನಾ)ಟಕ ಶಬ್ದದ ಅರ್ಥ ನಿಷ್ಪತ್ತಿ

ಈ ಶಬ್ದ ಮೊದಲು ದೇಶವನ್ನು ಹೇಳುವ ಹೆಸರಾಗಿ, ಬಳಿಕ ಆ ದೇಶದ ಜನಕ್ಕೆ, ಅವರು ಆಡುವ ಭಾಷೆಗೆ ಪ್ರಚಲಿತವಾಯಿತು. ಇಷ್ಟು ಮಾತ್ರವಲ್ಲ, ಕುಲದ ಹೆಸರಾಗಿ ರೂಢಿಯಾದುದು ಹೊಯ್ಸಳರ ಶಾಸನಗಳಿಂದಲೂ, ಗೋತ್ರದ ಹೆಸರಾಗಿ ರೂಢಿಯಲ್ಲಿದ್ದುದು, 'ಪಾಣಿನೀಯ ಗಣಪಾಠ'ದಿಂದಲೂ ನಮಗೆ ತಿಳಿದಿದೆ; ರಾಗದ ಹೆಸರಾಗಿ ಸಂಗೀತ ಶಾಸ್ತ್ರ ಗ್ರಂಥಗಳಲ್ಲಿದೆ.

ಸರಿ ತಪ್ಪುಗಳ ನಾನಾ ರೂಪಗಳಲ್ಲಿರುವ ಈ ಶಬ್ದ ಹಾಗೂ ಇದೇ ಆಶಯದ 'ಕನ್ನಡ' ಎಂಬ ಶಬ್ದ ಮೂಲತ: ಯಾವ ಯಾವ ರೂಪದಿಂದ ನಿಷ್ಪನ್ನಗೊಂಡಿದೆ, ಆ ರೂಪದ ಅರ್ಥ, ವ್ಯಾಪ್ತಿಗಳೇನು, ಎನ್ನುವುದು ವಿಚಾರಣೀಯ ವಿಷಯವಾಗಿದೆ.

'ಶಬ್ದರತ್ನಾವಲಿ', ಸ್ಕಾಂದ ಪುರಾಣಗಳ, ಕೇಶವವರ್ಣಿ, ವೆಂಕಟಾಧ್ವರಿ ಮೊದಲಾದವರ ಗ್ರಂಥಗಳ ಸಾಂಪ್ರದಾಯಿಕ ಹಾಗೂ ಸಂಸ್ಕೃತ ವ್ಯಾಕರಣಾನುಸಾರವಾದ ಅರ್ಥ ನಿಷ್ಪತ್ತಿಗಳ ಸೂಚನೆಗಳನ್ನು ಆಧುನಿಕ ವಿದ್ವಾಂಸರು ಕಲ್ಪಿತಗಳೆಂದು ತಿರಸ್ಕರಿಸಿದ್ದಾರೆ. ಇದು ಸರಿ. ಅಲ್ಲದೆ ಅವರು ಸಾಮಾ

ನ್ಯವಾಗಿ ಕರ್ಣಾಟ ಅಥವಾ ಕರ್ನಾಟ, ಕನ್ನಡ ಈ ಶಬ್ದಗಳ ಉತ್ತರ ಪದ 'ನಾಡು' ಎಂಬ ದೇಶ ಶಬ್ದದ ಪರಿವರ್ತಿತ ರೂಪವೆಂದು ಗ್ರಹಿಸಿ ವಿಚಾರ ಮಾಡಿದ್ದಾರೆ. ಆದರೆ ಪೂರ್ವ ಪದದ ಸ್ವರೂಪವನ್ನು ಗುರುತಿಸುವಾಗ, ಅರ್ಥ ಹೇಳುವಾಗ ಅವರ ನಡುವೆ ಭಿನ್ನಾಭಿಪ್ರಾಯಗಳಿವೆ. ಆ ಪೂರ್ವಪದವನ್ನು ಕರಿದು ಎಂಬರ್ಥದ 'ಕರ್' ಎಂಬ ಗುಣವಾಚಕವಾಗಿಟ್ಟುಕೊಂಡು, ಕರ್—ನಾಟ (ನಾಡು) (ಕರುನಾಡು) ಎಂದರೆ "ಕರಿಯ ಮಣ್ಣಿನ ಭೂಮಿಯುಳ್ಳ ಪ್ರದೇಶ" ಎಂಬುದಾಗಿ ಗುಂಡರ್ಟ್, ಕಾಲ್ಡ್ವೆಲ್, ಆರ್. ರಘುನಾಥ ರಾವ್, ಎಲ್. ಡಿ. ಬಾರ್ನೆಟ್, ಎಚ್. ಸಿ. ರಾಯ್ ಚೌಧುರಿ, ಬಿ. ಎಂ. ಶ್ರೀಕಂಠಯ್ಯ ಮುಂತಾದವರು ಗ್ರಹಿಸಿದ್ದಾರೆ. ಅದನ್ನು ದೊಡ್ಡದು, ವಿಸ್ತಾರವಾದುದು, ಎಂಬರ್ಥದ 'ಕರು' ಎಂದಿಟ್ಟುಕೊಂಡು, ಕರು, ನಾಡು (ಕರುನಾಡು—ಕರ್ನಾಟ) ಎಂದರೆ ವಿಶಾಲವಾದ ನಾಡು, ಮಹಾರಾಷ್ಟ್ರ ಎಂಬುದಾಗಿ ಗೋವಿಂದ ಪೈ, ರಾ. ಹ. ದೇಶಪಾಂಡೆ, ಮಾಸ್ಟರ್ ಬಿ. ಎ. ಸಾಲೆತೊರೆ ಮುಂತಾದವರು ಒಪ್ಪಿದ್ದಾರೆ, ಎತ್ತರವಾದುದು ಎಂಬರ್ಥದ 'ಕರು' ಎಂದಿಟ್ಟುಕೊಂಡು. ಹೀಗೆಯೇ ನಿಷ್ಪನ್ನಗೊಳಿಸಿ ಸಮುದ್ರ ಮಟ್ಟಕ್ಕಿಂತ ಎತ್ತರವಾದ ಘಟ್ಟದ ಮೇಲಿರುವ ಪ್ರದೇಶವೆಂದು ಎಚ್. ನಾರಾಯಣರಾಯರು ಗ್ರಹಿಸಿದ್ದಾರೆ. ಈಚಿನ ವಿದ್ವಾಂಸರು ಇವುಗಳಲ್ಲಿ ಯಾವುದಾದರೂ ಒಂದರ ಕಡೆಗೆ ಸಾಮಾನ್ಯವಾಗಿ ಒಲವು ತೋರುತ್ತಾರೆ.

ಇನ್ನೂ ಹಲವು ಅಭಿಪ್ರಾಯಗಳು ಪ್ರಕಟವಾಗಿವೆ. ಆದರೆ ಇವುಗಳಲ್ಲಿ ಹೆಚ್ಚಿನವು ಊಹೆಗಳು, ಪೋಷಕ ಆಧಾರಗಳ ಕೊರತೆಯಿಂದ ಕೂಡಿದುವು. ಶಾತವಾಹನ ದೊರೆಗಳ ಆಳ್ವಿಕೆಯ ಕಾಲದ ಆಂಧ್ರದೇಶದ ಒಂದು ಚಿಕ್ಕ ಜಿಲ್ಲೆ 'ಕಣ್ಣವಿಷಯ' ಎಂಬುದೇ ಮುಂದೆ ಅಧಿಕವ್ಯಾಪ್ತಿಯ 'ಕರ್ಣಾಟಕ' ದೇಶಕ್ಕೆ ಮೂಲವಾಗಿರಬಹುದು ಎಂದು ಇತಿಹಾಸಜ್ಞರಾದ ಎನ್. ವೆಂಕಟರಮಣಯ್ಯನವರು ವಾದಿಸಿದ್ದಾರೆ. ಈ ವಿಷಯದಲ್ಲಿ ಇನ್ನೂ ವಿಚಾರ ವಿಮರ್ಶೆ ನಡೆಯಬೇಕಾಗಿದೆ.

ಕರ್ನಾಟಕದ ಕೆಲವು ಜಿಲ್ಲೆಗಳು ಕಪ್ಪು ಮಣ್ಣಿನ ಸೀಮೆಯಾಗಿರುವುದು ನಿಜ, ಸಮುದ್ರ ಮಟ್ಟಕ್ಕಿಂತಲೂ, ಕಣಿವೆ ಕೆಳಗಿನ ಸೀಮೆಗಿಂತಲೂ ಮೇಲಿರುವುದೂ ನಿಜ. ಇವುಗಳಲ್ಲಿ ಯಾವುದು ನಿಮಿತ್ತವಾಗಿ 'ಕರ್ಣಾಟ' ಹುಟ್ಟಿತು? ತಮಿಳು ಹೊರತಾದ ಭಾಷೆಗಳಲ್ಲಿ 'ಕರುನಾಡು' ಹಾಗೂ ಅದನ್ನು ಹೋಲುವ ರೂಪ, ಹಿಂದಿ ಸಾಹಿತ್ಯ ಗ್ರಂಥಗಳಲ್ಲಿ ಕಾಣಿಸುವುದಿಲ್ಲವಾದ್ದರಿಂದ, ಸಂ. ಕರ್ಣಾಟ ಶಬ್ದವೇ ತಮಿಳು ಉಚ್ಚಾರಣೆಯಲ್ಲಿ 'ಕರುನಾಡು' ಮುಂತಾಗಿ ಆಗಿರುವುದು ಸಾಧ್ಯ. ಅಲ್ಲದೆ ಎತ್ತರವಾದ್ದು, ವಿಸ್ತಾರವಾದ್ದು ಎಂಬರ್ಥಗಳಲ್ಲಿ 'ಕರು' ಶಬ್ದ ತಮಿಳು ಭಾಷೆಯಲ್ಲಿ ಪ್ರಸಿದ್ಧವಾಗಿರುವಂತೆ ತೋರುವುದಿಲ್ಲವೆಂಬುದನ್ನೂ ಗಮನಿಸಬೇಕು. ಮೊದಮೊದಲು 'ಕರ್ಳಾಟ(ಕ)' ವೆಂದು ಕರೆಯಲ್ಪಡುತ್ತಿದ್ದ ನಿರ್ದಿಷ್ಟವಾದೊಂದು ಪ್ರದೇಶ ಬಾದಾಮಿ ಚಾಲುಕ್ಯರ ಸೀಮೆಯೊಳಗಿದ್ದು, ಅದು ಕಪ್ಪು ಮಣ್ಣಿನ ಪ್ರದೇಶವಾಗಿರುವುದು ನಿಜವಾಗಿರುವುದರಿಂದ, ಅದಕ್ಕೆ ಅನುಗುಣವಾದ ನಿಷ್ಪತ್ತಿಯಿಂದ (ಕರ್+ನಾಟ ನಾಡು=ಕರ್ಣಾಟ:ಕರ್ನಾಟ; ಕರ್+ನಾಡು=ಕರ್ನಾಡು ಕನ್ನಾಡು ಕನ್ನಡ) = ಶಬ್ದ ಕಾಣಿಸಿಕೊಂಡಿದ್ದರೂ ಇರಬಹುದು; ಮುಂದೆ ಅದೇ ದೊಡ್ಡ ಪ್ರದೇಶಕ್ಕೆ ಸಾರ್ವತ್ರಿಕವಾಗಿ ಬಳಕೆಗೆ ಬಂದಿರಬಹುದು. 'ಪುನ್ನಾಡು' ಶಬ್ದದ ಪರಿವರ್ತನಸಾದೃಶ್ಯದಿಂದ (ಪುನಲ್+ನಾಡು=ಪುನ್ನಾಡು ಪುರಾಷ್ಟ್ರ.) ದೇಶಶಬ್ದವಾದ 'ಕನ್ನಡ' ಸಂಸ್ಕೃತದಲ್ಲಿ ಕರ್ಣಾ(ರ್ನಾ)ಟವಾಯಿತೆಂದು (ಕರ್+ನಾಡು=ಕರ್ನಾಡು ಕನ್ನಡ ಕರ್ಣಾಟಕ|ಕನ್ನಾಟ) ತಿಳಿಯುವುದರಲ್ಲಿ ಅಸಾಮಂಜಸ್ಯವೇನೂ ಇಲ್ಲ. ಶಬ್ದಾಂತ್ಯ 'ಕ' ಪ್ರತ್ಯಯವಷ್ಟೆ; ಕೆಲವರು ಅಕಂ (ಗಂ) ಎಂದು ಬಿಡಿಸಿ, ಕಪ್ಪುನಾಡಿನ 'ಪ್ರದೇಶ' ವೆಂದು ತಿಳಿದಿರುವರು. ಪ್ರಾಯಃ ಮೊದಲಿನದೇ ಸರಿಯಾದ ಗ್ರಹಿಕೆ.

ಕ್ರಿ.ಶ. ೫ನೆಯ ಶತಮಾನದಿಂದ ೯ನೆಯ ಶತಮಾನದವರೆಗೆ ದೊರೆಯುವ ಸಮಕಾಲೀನ ದಾಖಲೆಗಳಿಂದ, ಅಂದಿನ ಕರ್ನಾಟಕ, ಇಂದಿನ ಉತ್ತರ ಕನ್ನಡ, ಧಾರವಾಡ, ಬಿಜಾಪುರ, ರಾಯಚೂರು ಮತ್ತು ಗುಲ್ಬರ್ಗ ಜಿಲ್ಲೆಗಳು ಸೇರಿದ ಒಂದು ಪ್ರದೇಶವಾಗಿತ್ತೆಂದು ತಿಳಿಯಲಾಗಿದೆ. 'ಕವಿರಾಜಮಾರ್ಗ' ದಲ್ಲಿ (ಸು. ೮೫೦) ಹೇಳಿರುವ ಕಿಸುವೊಳಲು, ಕೊಪಣನಗರ, ಪುಲಿಗೆರೆ ಮತ್ತು ಒಂಕುಂದಗಳೆಂಬ ಕರ್ನಾಟಕದ ತಿರುಳಾದ ಭಾಗಗಳು ಸಹ (೧–೩೭) ಈ ಪ್ರದೇಶದೊಳಗೇ ಬಹುಮಟ್ಟಿಗೆ ಸೇರುತ್ತವೆ. ಕಾವೇರಿಯಿಂದ ಗೋದಾವರಿಯವರೆಗೆ ನಾಡಿನ ಗಡಿಗಳು ಆಗ ಚಾಚಿಕೊಂಡಿದ್ದವು. 'ಶಕ್ತಿ ಸಂಗಮ ತಂತ್ರ' ದ ಸೂಚನೆಯನ್ನು ಹಿಡಿದು, ತುಂಗಭದ್ರಾ ನದಿಗಳ ಸಂಗಮ ಸ್ಥಾನದಿಂದ ದಕ್ಷಿಣಕ್ಕೆ ಕೆಲವು ಮೈಲಿಗಳು ದೂರದಲ್ಲಿರುವ ಸಣ್ಣ ದ್ವೀಪದಿಂದ ಹಿಡಿದು, ಶ್ರೀರಂಗ ಪಟ್ಟಣದವರೆಗೆ ಹಬ್ಬಿದ್ದ ನಾಡು ಕರ್ನಾಟಕವೆಂದು ಕೆಲವರು ತಿಳಿದಿದ್ದಾರೆ.

'ಕರ್ನಾಟಕ' ಶಬ್ದದ ಜೊತೆಗೆ ಕುಂತಲ, ವನವಾಸಿ ಮಹಿಷಮಂಡಲ ಇತ್ಯಾದಿಯಾಗಿ ಪ್ರಸಿದ್ಧವಾದ ಪ್ರದೇಶ ವಾಚಕಗಳು ಶಾಸನಗಳಲ್ಲಿಯೂ ಸಾಹಿತ್ಯ ಗ್ರಂಥಗಳಲ್ಲಿಯೂ ಗೋಚರಿಸಿವೆ. ಇವು ಸಹ ಇಂದಿನ ನಮ್ಮ ಕರ್ನಾಟಕದ ವ್ಯಾಪ್ತಿಯೊಳಗೇ ಬರುವ ಪ್ರದೇಶಗಳೆಂದು ನಾವು ತಿಳಿದಿರಬೇಕು. 'ಕುಂತಲ' ಎಂಬುದು ಮತ್ಸ್ಯ ಮಾರ್ಕಂಡೇಯಾದಿ ಪುರಾಣಗಳಲ್ಲಿಯೂ ಇತರತ್ರವೂ ಬಂದಿದೆ. ಕರ್ನಾಟಕ–ಕುಂತಲಗಳು ಒಮ್ಮೊಮ್ಮೆ ಪ್ರತ್ಯೇಕವಾಗಿ, ಒಮ್ಮೊಮ್ಮೆ ಒಂದಕ್ಕೊಂದು ಪರ್ಯಾಯವಾಗಿ ಶಾಸನಗಳಲ್ಲಿ ಬಳಕೆಯಾಗಿರುವುದುಂಟು. ವಿಶಾಲವಾದ ಅರ್ಥದಲ್ಲಿ 'ಕುಂತಲ' ಬಹುಮಟ್ಟಿಗೆ ಮುಂಬಯಿ, ಮದ್ರಾಸು, ಮೈಸೂರು (ಪ್ರಾಯಶ: ತೀರಪ್ರದೇಶವನ್ನು ಬಿಟ್ಟು) ಇವುಗಳ ಕನ್ನಡ ಮಾತನಾಡುವ ಪ್ರದೇಶಗಳನ್ನು ಹೇಳುತ್ತದೆಂದು ತಿಳಿಯಲಾಗಿದೆ. ಈ ಕುಂತಲ ಸೀಮೆಯನ್ನು ಶಾಸನಗಳ ಆಧಾರದಿಂದ ಕೃಷ್ಣವರ್ಣಾ ನದಿ ತೊಳೆಯುವ ಬಳ್ಳಾರಿ ಜಿಲ್ಲೆಯ ಕುರುಗೋಡು, ಮೈಸೂರಿನ ಗಂಗವಾಡಿ, ಧಾರವಾಡ ಜಿಲ್ಲೆಯ ನರಗುಂದ, ಕೊಥ್ಲಾಪುರದ ತರಗಲ್, ಸಾಂಗ್ಲಿಯ ತೇರದಾಳ ಮೈಸೂರಿಗೆ ವಾಯುವ್ಯ ದಿಕ್ಕಿನಲ್ಲಿರುವ ಸುಬತ್ತೂರ್ (ಕುಂತಲ ನಗರ) ಇದನ್ನು ಒಳಗೊಂಡಿದ್ದ ಪ್ರದೇಶವೆಂದೂ ಹೇಳುವ ಅವಕಾಶವಿದೆ. ವನವಾಸಿ, ಬನವಾಸಿ, ಬನವಸಿ, ವೈಜಯಂತೀಪುರ ಮುಂತಾದ ರೂಪಗಳಲ್ಲಿ ಪ್ರಚಲಿತವಾಗಿರುವ 'ವನವಾಸಿ'ಯಂತೂ ಉತ್ತರ ಕನ್ನಡ ಜಿಲ್ಲೆಯ ಇಂದಿನ ಬನವಾಸಿಯ ಪ್ರದೇಶವೆಂಬುದು ತಿಳಿದಿದೆ. ಈ ಬನವಾಸಿಗೂ ಭೀಮಾನದಿಗೂ ನಡುವೆ ಬರುವ ಕರ್ನಾಟಕದ ಕೆಲವು ಸ್ಥಳಗಳನ್ನು ಗ್ರೀಕ್ ಭೂಗೋಳಶಾಸ್ತ್ರಜ್ಞ, ಟಾಲೆಮಿ (ಸು. ೧೫೦) ತಿಳಿಸಿರುವನೆಂದೂ ಅವು ಇಂದಿನ ಉತ್ತರ ಕರ್ನಾಟಕದ ಸೀಮೆಯೊಳಗಿನ ನಾಗರೂರು (ನಾಗೂರು). ತಾವಸಿ, ಇಂಡಿ, (ಗಡ) ಹಿಂಗಲಜ, ಹೂವಿನ ಹಿಪ್ಪರಗಿ, (?) ಸವಡಿ, ಚಿಮ್ಮಲಗಿ, ಕಲಕೇರಿ, ಮದ್ಗಲ, ಹತ್ತಿರ್ಕಿಹಾಳ ಎಂಬ ಸ್ಥಳಗಳನ್ನು ಸೂಚಿಸುವ ಅನ್ಯದೇಶ ರೂಪಗಳೆಂದೂ ಗೋವಿಂದ ಪೈ ಭಾವಿಸಿದ್ದಾರೆ. ಬೇರೆ ವಿದ್ವಾಂಸರ ಬೇರೆ ಸಮೀಕರಣಗಳ ಪ್ರಕಾರ ಅವು ನಗರ, ಕೊಲ್ಲಗಿರಿ ಅಥವಾ ಕೊಲ್ಲಾಪುರ, ತಗರ ಅಥವಾ

ತೊರ್ಕೆ ಎಂದೂ ತಿಳಿಯುವುದು. ಪುನ್ನಾಟ, ಮುದುಗಲ್, ಕಲ್ಲಿಗೆರೆ ಎಂಬವು ಆತನು ಕೊಡುವ ಸ್ಥಳಗಳ ಪಟ್ಟಿಯಲ್ಲಿ ಅಚ್ಚ ಕನ್ನಡ ಹೆಸರುಗಳೆಂದೂ ಬನವಾಸಿ ತದ್ಭವ ಶಬ್ದವೆಂದೂ ಗುರುತಿಸಲಾಗಿದೆ. ಅಂತೂ ಬನವಾಸಿ, ಶಾಂತಿವರ್ಮನ ಶಾಸನದಿಂದ (ಸು. ೪೫೦) ಇದು ಕರ್ನಾಟಕದ ಹೃದಯ ಸ್ಥಾನವಾಗಿತ್ತೆಂದು ತಿಳಿಯುವುದು. ಇನ್ನು 'ಮಹಿಷ ಮಂಡಲ' ಎನ್ನುವುದೂ ಭಾರತ ಮತ್ತು ಪುರಾಣಗಳಲ್ಲಿಯ 'ಮಾಹಿಷಕ' ಇತ್ಯಾದಿ ರೂಪಗಳೂ ಅಭಿನ್ನವೋ ಹೇಗೆ ಎಂದು ನಿಶ್ಚಯಿಸುವುದು ಕಷ್ಟ. ಆದರೆ ಬೌದ್ಧ 'ಮಹಾವಂಶದ ಮಹಿಷಮಂಡಲ'ವೂ, ಶಾಸನ ಮತ್ತು ಸಾಹಿತ್ಯ ಕೃತಿಗಳ 'ಮಹಿಷರಾಷ್ಟ್ರ' 'ಮಹಿಷಮಂಡಲ' ಎಂಬವೂ, 'ತಮಿಳು' 'ಅಗನಾನೂರು'ವಿನ 'ಎರುಮೈನಾಡು' 'ಎರುಮೈಯೂರ್' ಮುಂತಾದವೂ ಈಗಿನ ಮೈಸೂರೇ ಇರಬೇಕೆಂದು ವಿದ್ವಾಂಸರ ಗ್ರಹಿಕೆ.

ಬಾದಾಮಿ ಚಾಲುಕ್ಯರ ಕಾಲದಲ್ಲಿ ಕನ್ನಡ ಸೀಮೆ ಕರ್ಣಾಟ, ಕುಂತಲ, ಲಾಟ, ಕರಹಾಟ, ವನವಾಸ, ತುಳುವ, ಆಳ್ವಖೇಡ, ಗೋಮಂತಕ, ಕೊಂಕಣ, ಪುನ್ನಾಟ ಮತ್ತು ವೆಂಗಿಮಂಡಲ ಎಂದು ಬೇರೆ ಬೇರೆ ವಿಷಯಗಳಾಗಿ ವಿಭಜನೆಗೊಂಡಿದ್ದು, ಆ ಪ್ರದೇಶಗಳು 'ಕರ್ಣಾಟ' ಎಂಬ ಒಂದು ಹೆಸರಿನ ಕೆಳಗೆ ಬಂದುವೆಂದೂ ಇದಕ್ಕೆ ಇಮ್ಮಡಿ ಪುಲಿಕೇಶಿಯ ಸಾಹಸೋದ್ಯಮಗಳು ಕಾರಣವಾದುವೆಂದೂ ಪಿ. ಬಿ. ದೇಸಾಯಿಯವರು ತಿಳಿಸಿದ್ದಾರೆ. ಅವರ ಕಾಲದಿಂದೀಚೆಗೆ ಗಂಗರು, ಕಲ್ಯಾಣ ಚಾಲುಕ್ಯರು, ಕಳಚುರ್ಯರು, ಹೊಯ್ಸಳರು, ವಿಜಯನಗರದ ಹಾಗೂ ಮೈಸೂರು ಅರಸರ ಕಾಲದವರೆಗೆ ದೊರೆಗಳು ತಮ್ಮನ್ನು ಕರ್ನಾಟಕ ರಾಜ್ಯದ ಒಡೆಯರೆಂದು ಹೇಳಿಕೊಂಡಿರುವುದರಿಂದ, ಹೆಸರಿನ ಸೀಮೆ ವ್ಯಾಪ್ತಿ ವಿಸ್ತರಿಸಿತಲ್ಲದೆ, ಕನ್ನಡ ಮಾತನಾಡುವವರ ನೆಲೆ ಕರ್ನಾಟಕವೆಂದಾಯಿತು. ಈಚೆಗೆ ನಂದಿಬೆಟ್ಟವನ್ನು ಕರ್ನಾಟಕ ದೇಶದ ಪೂರ್ವದಿಕ್ಕಿಗಿದೆಯೆಂದು ಒಂದು ಶಾಸನದಲ್ಲಿ ಹೇಳಿರುವುದನ್ನು ನೋಡಿದರೆ, ಆ ಶಾಸನದ ಕಾಲದ ಸು. ೧೬೪೦ ರಲ್ಲಿ ಮೈಸೂರು ಕರ್ನಾಟಕವೆಂಬುದಾಗಿ ವ್ಯವಹರಿಸಲ್ಪಡುತ್ತಿದ್ದಿತು ಎನ್ನಬೇಕು. ಇನ್ನೂ ಈಚೆಗೆ ಕೆಲವು ಕಾಲ ಅಖಂಡ ಕರ್ನಾಟಕದ ಭಾಗಗಳು ಬೇರೆ ಬೇರೆ ಭಾಷಾಪ್ರಾಂತಗಳಿಗೆ ರಾಜಕೀಯ ಕಾರಣಗಳಿಗಾಗಿ ಸೇರಿ ಹೋಗಿದ್ದು, 'ಕರ್ನಾಟಕ' ಎಂಬ ಹೆಸರು ಗತ ಇತಿಹಾಸದ ಭಾಗವೆನ್ನುವಂತೆ ನೆನೆಗುದಿಯಲ್ಲಿದ್ದಿತು. ನಾಡಿನ ಹಿರಿಯರು ಕರ್ನಾಟಕತ್ವದ ಭಾವನೆಯನ್ನು ಮತ್ತೆ ಮತ್ತೆ ಎತ್ತಿ ಬೆಳೆಸುವ ನಿರಂತರ ಸಾಹಸವನ್ನು ಕೈಗೊಂಡದ್ದಾಗಿ, ಬೇರೆ ನಿಮಿತ್ತಗಳೂ ಒದಗಿ, ೧೯೫೬ರಲ್ಲಿ, ಕೆಲಭಾಗಗಳು ಹೊರತಾಗಿ ಕರ್ನಾಟಕ ಒಗ್ಗೂಡಿತು; ೧೯೭೩ರ ನವೆಂಬರ್ ೧ ರಿಂದ ಕನ್ನಡ ನಾಡಿನ ಹೆಸರೂ 'ಕರ್ನಾಟಕ'ವೆಂದು ಸ್ಥಿರವಾಯಿತು.

### ಕರ್ಣಾ(ರ್ನಾ)ಟಕ ಪರಂಪರೆಯುಲ್ಲಿ

ರಾಮಾಯಣದಲ್ಲಿಯ ದಂಡಕಾರಣ್ಯ, ಗೋದಾವರಿ, ಕೃಷ್ಣವೇಣಿ (ಮಹಾನದಿ) ಕಾವೇರಿ, ತಾಮ್ರಪರ್ಣಿ ಈ ನಾಮೋಲ್ಲೇಖಗಳು ನಮ್ಮ ಪ್ರದೇಶಗಳ ಬಗೆಗೆ ಬೆಳಕು ಚೆಲ್ಲುತ್ತವೆ: ಕಿಷ್ಕಿಂಧೆ, ಹಂಪೆಯ ಹತ್ತಿರದ ಆನೆಗೊಂದಿಯೆಂದು ತಿಳಿಯಲ್ಪಟ್ಟಿದೆ. ಉತ್ತರ ಕನ್ನಡ ದಕ್ಷಿಣ ಕನ್ನಡ ಜಿಲ್ಲೆಗಳು ಕೂಡಿದ ಕೊಂಕಣ ಪರಶುರಾಮ ಕ್ಷೇತ್ರವೆನಿಸಿದೆ. ಪಾಂಡವರು ಅಜ್ಞಾತವಾಸದಲ್ಲಿದ್ದ ವಿರಾಟನಗರ, ಧಾರವಾಡ ಜಿಲ್ಲೆಯ ಹಾನಗಲ್ಲು ಎಂದೂ, ಚಂದ್ರಹಾಸನ ರಾಜಧಾನಿ ಕುಂತಲಪುರ ಶಿವಮೊಗ್ಗಾ ಜಿಲ್ಲೆಯ ಸೊರಬ ತಾಲ್ಲೂಕಿನ ಕುಬಟೂರು ಗ್ರಾಮವೆಂದೂ ಅರ್ಜುನನು ಬಭ್ರುವಾಹನನೊಂದಿಗೆ ಹೋರಾಡಿದ ಮಣಿಪುರ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ಒಂದು ಊರೆಂದೂ ಮುಂತಾಗಿ ಪ್ರತೀತಿಯಿದೆ. ಹೇಗೆಯೇ ಗೋಕರ್ಣ, ಹಂಪೆ, ಚಂದ್ರಗುತ್ತಿ, ತಮ್ಮಸಂದ್ರ, ಆವನಿ, ಶೃಂಗೇರಿ, ಬನವಾಸಿ, ಜಟಿಂಗ, ರಾಮೇಶ್ವರ ರಾಮನಾಥಪುರ, ನಂದಿ, ಮುಳುಕುಂಟೆ, ಮೊದಲಾದ ಎಷ್ಟೋ ಕನ್ನಡ ನಾಡಿನ ಊರುಗಳು ರಾಮಾಯಣ ಕಥಾ ಸಂದರ್ಭಗಳೊಂದಿಗೆ ಚಿತ್ರದುರ್ಗ, ತಾಳಗುಂದ, ರಹಮಾನಬೇಟ, ಕೈವಾರ, ಶ್ರೀಶೈಲ, ಮಣಿಪುರ, ಬಳ್ಳಿಗಾವಿ, ಹಾನಗಲ್ಲು, ಹರಿಹರ, ಬನವಾಸಿ, ಗೋಕರ್ಣ–ಮೊದಲಾದ ಇನ್ನೆಷ್ಟೋ ಊರುಗಳು ಮಹಾಭಾರತದ ಕಥಾಸಂದರ್ಭಗಳೊಂದಿಗೆ ಸಂಬಂಧವುಳ್ಳ ಐತಿಹ್ಯಗಳಿಂದ ಕೂಡಿರುವುದು ಪುರಾಣಗಳು, ಸ್ಥಳ ಮಾಹಾತ್ಮ್ಯಗಳು, ಸಾಹಿತ್ಯ ಗ್ರಂಥಗಳು ಮೊದಲಾದ ಆಕರಗಳಿಂದಲೂ ಜನಪ್ರವಾದಗಳಿಂದಲೂ ಜನಪದ ಸಾಹಿತ್ಯ ರಚನೆಗಳಿಂದಲೂ ತಿಳಿದ ವಿಷಯವಾಗಿದೆ. ಆದರೆ ಈ ಸ್ಥಳಗಳ ಪ್ರಾಮುಖ್ಯವನ್ನೂ ಪ್ರಾಚೀನತೆಯನ್ನೂ ಈ ಆಕರಗಳನ್ನು ಆಶ್ರಯಿಸಿ ಐತಿಹಾಸಿಕವಾಗಿ ಬಹು ಪ್ರಾಚೀನ ಕಾಲಕ್ಕೆ ಕೊಂಡೊಯ್ಯುವುದು ತುಂಬ ಕಷ್ಟವಿದೆ. ರಾಮಾಯಣ ಭಾರತಗಳ ವಿಷಯದಲ್ಲಿ ನಮ್ಮ ಜನಕ್ಕೆ ಇರುವ ಆತ್ಮೀಯತೆಯನ್ನು ಈ ಮೂಲಕವಾಗಿ ನಾವು ಗುರುತಿಸಬಹುದು ಅಷ್ಟೆ.

### ಕರ್ಣಾ(ರ್ನಾ)ಟಕದ ಮೂಲವಾಸಿಗಳು

ಪ್ರಾಗೈತಿಹಾಸಿಕ ಅಧ್ಯಯನದಿಂದ ಸುಮಾರು ನಾಲ್ಕು ಲಕ್ಷ ವರ್ಷಗಳಷ್ಟು ಹಿಂದೆಯೇ ಕರ್ನಾಟಕದಲ್ಲಿ ಜನವಸತಿಯಿತ್ತೆಂದು ಭಾವಿಸಿದೆ. ಬೇರೆ ಬೇರೆ ಪ್ರದೇಶಗಳಿಂದ, ಬೇರೆ ಬೇರೆ ಕಾಲಗಳಲ್ಲಿ ವಲಸೆ ಬಂದ ವಿಭಿನ್ನ ಬುಡಕಟ್ಟುಗಳ ಜನ ಇಂದಿನ ಕರ್ನಾಟಕದ ಜನಸಮುದಾಯಕ್ಕೆ ಕಾರಣವಾಗಿದೆ. ಈ ನೆಲದಲ್ಲಿ ಎಷ್ಟೋ ಹಿಂದೆ ವಸತಿ ಪಡೆದ ಭಿನ್ನ ದೈಹಿಕ ಲಕ್ಷಣಗಳ ನಾಲ್ಕು ಮುಖ್ಯ ಬುಡಕಟ್ಟುಗಳ ಜನರನ್ನು ಗುರುತಿಸಲಾಗಿದೆ. ಸುದೀರ್ಘವಾದ ಜೀವನ ನಿರ್ವಹಣೆ ನಿಮಿತ್ತವಾಗಿ ಪರಸ್ಪರ ರಕ್ತಸಂಬಂಧಗಳಿಂದ ಈ ಜನ ತಮ್ಮ ತಮ್ಮಲ್ಲಿಯೇ ಬೆರೆತುಹೋಗಿದ್ದರೂ, ಮೂಲ ಲಕ್ಷಣಗಳು ಯಾವುದೋ ಪ್ರಮಾಣದಲ್ಲಿ ಇನ್ನೂ ಉಳಿದು ಬಂದಿರುವುದನ್ನು ಕಾಣಬಹುದು.

ನೇಗ್ರಿಟೋ ಬುಡಕಟ್ಟಿನವರು ಮೊದಲು ಬಂದವರು ಎನ್ನಲಾಗಿದೆ. ಇವರ ದೈಹಿಕ ಲಕ್ಷಣಗಳನ್ನು ಪೂರ್ಣವಾಗಿ ಹೊಂದಿರುವವರನ್ನು ಈಗ ಕಾಣುವುದು ದುರ್ಲಭವಾದರೂ ಇವರ ಹಲವಂಶಗಳನ್ನು ಹೊಂದಿರುವವರು ಕಾಣಸಿಗುತ್ತಾರೆ. ಕರ್ನಾಟಕದಲ್ಲಿ ಕಂಡು ಬರುವ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಇಲ್ಲವೆ ಅದಕ್ಕೂ ಹಿಂದಿನ ಕಾಲದ ಪಟ್ಟೆಚಕ್ಕೆ ಶಿಲಾಯುಧದ ಸಂಸ್ಕೃತಿಯ ಜನ ಇದೇ ಬುಡಕಟ್ಟಿನವರು ಇರಬಹುದೇ ಎಂಬುದಾಗಿ ಊಹಿಸಲಾಗಿದೆ. ಆನಂತರದ ಆಸ್ಟ್ರಲಾಯಿಡ್ ಬುಡಕಟ್ಟಿನ ಜನರ ದೈಹಿಕ ಲಕ್ಷಣಗಳನ್ನು ಇಂದಿನ ಇರುಳ, ಸೋಲಿಗ, ಕೊರಗ ಮುಂತಾದ ಆದಿವಾಸಿ ಜನರಲ್ಲಿ ವಿಶೇಷವಾಗಿ ಗುರುತಿಸಬಹುದೆಂದು ಬಲ್ಲವರ ಅಭಿಪ್ರಾಯ. ಈ ಜನ ಆಸ್ಟ್ರೇಲಿಯದ ಮತ್ತು ಆಗ್ನೇಯ ಏಶ್ಯಾದ ಕಡೆಗಳಿಂದ ಭಾರತಕ್ಕೆ ಬಂದು, ಕರ್ನಾಟಕ ಭಾಗಕ್ಕೆ ಸಹ ಬಂದಿರಬೇಕೆಂದು ತಿಳಿಯಲಾಗಿದೆ.

ಆದರೆ ಕರ್ನಾಟಕದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಸಿಗುವವರು ಎಂದರೆ, ಮೆಡಿಟರೇನಿಯನ್ ಬುಡಕಟ್ಟಿನ

ದೈಹಿಕ ಲಕ್ಷಣ ಹೊಂದಿರುವವರು ಎನ್ನಬಹುದು. ಮೆಡಿಟರೇನಿಯನ್ ರೀತಿಯ ಅಸ್ಥಿಪಂಜರಗಳು ಇಲ್ಲಿಯ ನವಶಿಲಾಯುಗ ಸಂಸ್ಕೃತಿ ಕಾಲದ ಸಮಾಧಿಗಳಲ್ಲಿ ಕಂಡುಬಂದಿರುವುದನ್ನು ಗಮನಿಸಲಾಗಿದೆ. ಈ ಬುಡಕಟ್ಟಿನ ಜನ ತಮ್ಮ ನೆಲೆಗಳಿಂದ ವಾಯುವ್ಯ ಭಾರತದ ಮೂಲಕ ದಕ್ಷಿಣ ಭಾರತಕ್ಕೆ ಬಂದು, ನವಶಿಲಾಯುಗ ಸಂಸ್ಕೃತಿಯ ಕಾಲದಲ್ಲಿ ಕರ್ನಾಟಕದಲ್ಲಿ ವಾಸಿಸುತ್ತಿದ್ದರೆಂದು ಗುರುತಿಸಲಾಗಿದೆ. ಅಲ್ಲದೆ ಇವರ ಮೂಲಕವೇ ದ್ರಾವಿಡ ಭಾಷೆ ಇಲ್ಲಿ ಪ್ರಚಲಿತಗೊಂಡಿತೆಂದು ಸಾಧಿಸುವ ಯತ್ನ ಮಾಡಿದೆ. ಈಚೆಗೆ ಯುರೋಪ್ ಖಂಡದ ಮೆಡಿಟರೇನಿಯನ್ ಪೂರ್ವ ತೀರ ಪ್ರದೇಶ, ಪೂರ್ವ ಹೆಲನೀಯ ಗ್ರೀಸ್, ಕ್ರೀಟ್ ಮತ್ತು ಎಜಿಯನ್ ಸಮುದ್ರದಲ್ಲಿಯ ಗ್ರೀಕ್ ದ್ವೀಪಗಳು ಮತ್ತು ಏಷ್ಯಾ ಮೈನರಿನ ಕೆಲವು ಭಾಗಗಳ ಜನಾಂಗಗಳೊಂದಿಗೆ ದ್ರಾವಿಡ ಜನಾಂಗದ ಸಂಪರ್ಕ ಸಮಾನ ಲಕ್ಷಣಗಳನ್ನು ಧಾರ್ಮಿಕವಾಗಿ ಸಾಮಾಜಿಕ ಹಾಗೂ ಭಾಷಿಕವಾಗಿ ಗುರುತಿಸುವ ಯಶಸ್ವಿಯಾದ ಪ್ರಯತ್ನಗಳನ್ನು ಮಾಡಿದೆ. ಮಾನವ ಶಾಸ್ತ್ರಜ್ಞರೂ ಭಾಷಾ ಶಾಸ್ತ್ರಜ್ಞರೂ ಆದ ಡಾ| ಹಾಲ್, ಡಾ| ಎನ್. ಲಹೋರಿ, ಡಾ| ಸುನೀತಿಕುಮಾರ ಚಟರ್ಜಿ, ಎಫ್. ಜೆ. ರಿಚರ್ಡ್, ಜೇಮ್ಸ್ ಹಾರ್ನೆಟ್, ಡಾ| ಜಿ. ಒಲಿವಿಯರ್ ಮೊದಲಾದ ವಿದ್ವಾಂಸರು ಆ ಪ್ರಯತ್ನಗಳನ್ನು ಮಾಡಿದ್ದಾರೆ.

ಕ್ರಿ.ಪೂ. ೨೦೦೦ ದ ಹೊತ್ತಿಗೆ ವಾಯುವ್ಯ ಭಾಗದ ಭಾರತಕ್ಕೆ ಬಂದ ಕಕೇಷಿಯನ್ ಬುಡಕಟ್ಟಿನ ಜನ ಕರ್ನಾಟಕದಲ್ಲಿ ಹರಡಿದ್ದಾರೆ ಎನ್ನುವುದನ್ನು ಸುಲಭವಾಗಿ ತಿಳಿಯಲು ಸಾಧ್ಯವಾಗಿಲ್ಲ. ಆದರೆ ಚಾರಿತ್ರಿಕ ಯುಗದ ಆದಿಭಾಗದಲ್ಲಿ ಭಾರತಕ್ಕೆ ವಲಸೆ ಬಂದ ಶಕರು ಇಲ್ಲಿಯ ಅಗಲ ತಲೆಯ ಇನ್ನೊಂದು ಜನ ವರ್ಗಕ್ಕೆ ಕಾರಣವಾಗಿರಬಹುದೆಂದು ತಿಳಿಯಲಾಗಿದೆ. ಈಚಿನ ಶೋಧನೆಗಳಿಂದ ಬೃಹತ್ ಶಿಲಾಸಮಾಧಿ ಸಂಸ್ಕೃತಿಯ ಕಾಲದಲ್ಲಿಯೂ ಈ ಲಕ್ಷಣದ ಜನರು ಇದ್ದರೆಂಬುದಾಗಿ ತಿಳಿದುಬಂದಿರುವುದರಿಂದ ಈ ಸಂಬಂಧದ ಸಮಸ್ಯೆಯಲ್ಲಿ ಕ್ಲೇಶವಿದೆ.

ಹೀಗೆ ಕ್ರಿಸ್ತ ಶಕಾರಂಭದ ೩-೪ ನೆಯ ಶತಮಾನಗಳ ಹೊತ್ತಿಗೆ ಕರ್ನಾಟಕ ಬೇರೆ ಬೇರೆ ಬುಡಕಟ್ಟುಗಳ ನೆಲೆವೀಡಾಗಿತ್ತು. ಈಚೆಗೆ ಚಾರಿತ್ರಿಕ ಕಾಲದ ಆರಂಭದೊಂದಿಗೆ ಗ್ರೀಕೋ-ರೋಮನರು, ಅನಂತರದಲ್ಲಿ ಕ್ರಮವಾಗಿ ಅರಬ್ಬರು, ಪರ್ಶಿಯನ್ನರು, ಸಿಂಹಲೀಯರು, ಮಹಮ್ಮದೀಯರು ಮುಂತಾದವರು ಕರ್ನಾಟಕ ಸಂಬಂಧಗಳನ್ನು ಪಡೆದುದು ತಿಳಿಯುತ್ತದೆ.

# ಕವಿಗಳ ಕಣ್ಣಿನಲ್ಲಿ ಕರ್ನಾಟಕ

ಡಾ. ಸಿ. ಪಿ. ಕೃಷ್ಣ ಕುಮಾರ್

ತಾಯ್ನಾಡಿನ ಮೇಲೆ ಪ್ರೀತಿ ಅಭಿಮಾನಗಳನ್ನುಳ್ಳವರ ಪಾಲಿಗೆ ಅದು ಕೇವಲ ಒಂದು ಭೌತಿಕ, ಭೌಗೋಳಿಕ ಪ್ರದೇಶವಾಗಿ ಉಳಿಯುವುದಿಲ್ಲ; ಚಿನ್ಮಯ ಧಾಮವಾಗಿ, ಸಾಕ್ಷಾತ್ ಸ್ವರ್ಗವೆ ಆಗುತ್ತದೆ. ೧ ಅಭಿಮಾನಶೀಲರಾದ ಕನ್ನಡಿಗರ ಕಣ್ಣಿಗೆ ಕನ್ನಡ ನಾಡು ಬರಿಯ ಮಣ್ಣಲ್ಲ; ಅದೊಂದು ವಿರಾಟ್ ಜೀವಂತ ಶಕ್ತಿ, ಮಾತೃಸತ್ವ, ಭೂನಂದನ—ಎಲ್ಲರ ಹೆಮ್ಮೆಗೆ, ಭಕ್ತಿ ಗೌರವ ಕೃತಜ್ಞತೆಗಳಿಗೆ, ಪೂಜೆ ಸ್ತೋತ್ರಗಳಿಗೆ ಪಾತ್ರವಾಗುವಂಥದು.

ನೈಸರ್ಗಿಕವಾಗಿ ಕರ್ಣಾಟಕ ಪರಮ ರಮಣೀಯವಾದದ್ದು. ಬಾಹ್ಯ ದೃಷ್ಟಿಗೇ ಗೋಚರಿಸುತ್ತದೆ, ಆ ಸೌಂದರ್ಯಶ್ರೀ. ಇದಕ್ಕಿಂತ ಮಿಗಿಲಾದದ್ದು, ಉಜ್ವಲವಾದದ್ದು ಕರ್ಣಾಟಕದ ಆತ್ಮಶ್ರೀ; ಅದು ಅಂತರ್ದೃಷ್ಟಿಗೆ ಮಾತ್ರ ವೇದ್ಯ. ಈ ನಾಡಿನ ರಾಜಕೀಯವಾದ, ಧಾರ್ಮಿಕವಾದ ಸಾಮಾಜಿಕವಾದ ಮತ್ತು ಸಾಹಿತ್ಯ ಸಂಗೀತ ಶಿಲ್ಪಾದಿ ಕಲಾ ಸಂಬಂಧವಾದ ಪರಂಪರೆ ಅಸಾಧಾರಣವೂ ಪ್ರಕಾಶಮಾನವೂ ಆದುದು. ಎಷ್ಟೊಂದು ಮಂದಿ ಮಹಾವ್ಯಕ್ತಿಗಳು, ವಿಭೂತಿಗಳು! ಎಂಥೆಂಥ ಲೋಕೋತ್ತರ ಮೌಲ್ಯಗಳನ್ನು ಅವರು ಬೆಳಗಿದರು; ನೆನೆದರೆ ಮೈ ಪುಲಕಗೊಳ್ಳುತ್ತದೆ. ಎಂತಹ ಶ್ರೇಷ್ಠವಾದ ಆಸ್ತಿಗೆ ನಾವು ಉತ್ತರಾಧಿಕಾರಿಗಳಾಗಿದ್ದೇವೆಂದು ಮನಸ್ಸು ಬೀಗುತ್ತದೆ. ಹಿಗ್ಗುತ್ತದೆ.

ಇಂತಹ ಕರ್ಣಾಟಕ ಸಹಜವಾಗಿಯೆ ಪ್ರಾಚೀನ ಕಾಲದಿಂದಲೂ—ಹೆಚ್ಚು ಕಡಿಮೆ ಕನ್ನಡ ಸಾಹಿತ್ಯದ ಆರಂಭದಿಂದಲೂ—ನಮ್ಮ ಕವಿಗಳ ಹೃದಯವನ್ನು ಸೆಳೆದುಕೊಂಡಿದೆ, ಗೆದ್ದುಕೊಂಡಿದೆ, ಅವರ ಹಾಡಿನ ವಸ್ತುವಾಗಿ ಪರಿಣಮಿಸಿದೆ. ಕರ್ಣಾಟಕ ಅವರ ಪಾಲಿಗೆ ಬರಿಯ ಹೆಸರಲ್ಲ, ಶಬ್ದಕೋಶಗತನಾದ ವಿಷಯವಲ್ಲ, ಅದು ಭಾವಕೋಶಗತವಾದ ಶಕ್ತಿ. ತಾಯ್ನಾಡಿನ ಅಂತರಂಗ-ಬಹಿರಂಗಗಳಿಗೆ ಅವರು ಕಳಕಳಿಯ ಅಭಿವ್ಯಕ್ತಿ ಕೊಟ್ಟಿದ್ದಾರೆ.

ಅನೇಕ ಪ್ರಾಚೀನ ಕಾವ್ಯ, ಶಾಸನಗಳಲ್ಲಿ ಕರ್ಣಾಟಕದ ವರ್ಣನೆ ಬಂದಿದೆ—ಕೆಲವೆಡೆ ಸಹಜ ಬಂಧುರವಾಗಿ, ಕೆಲವೆಡೆ ಸಾಂಪ್ರದಾಯಿಕವಾಗಿ. ಅಧುನಿಕ ಯುಗದಲ್ಲೂ ಕವಿಗಳು ಕರ್ಣಾಟಕವನ್ನು ಕುರಿತು ಬರೆದಿದ್ದಾರೆ. ಒಂದು ಮಾತಿನಲ್ಲಿ ಹೇಳುವುದಾದರೆ, ಪ್ರಾಚೀನರ ಕರ್ಣಾಟಕದರ್ಶನ ಸರಳವಾದದ್ದು, ಆಧುನಿಕರ ಕರ್ಣಾಟಕದರ್ಶನ ಸಂಕೀರ್ಣವಾದದ್ದು ಮತ್ತು ತತ್ಕಾರಣದಿಂದ ಹೆಚ್ಚು ಮಹತ್ವದ್ದು. ಕಾಲದೇಶಗಳ ವಿಭಿನ್ನ ಹಿನ್ನೆಲೆ ಈ ಭೇದಕ್ಕೆ ಕಾರಣವಾಗಿದೆ.

ಕನ್ನಡದ ಉಪಲಬ್ಧ ಆದಿಗ್ರಂಥವಾದ "ಕವಿರಾಜಮಾರ್ಗ"ದಲ್ಲೆ ಕರ್ಣಾಟಕದ ಮತ್ತು ಕನ್ನಡಿಗರ ಚಿತ್ರವಿದೆ. "ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್" ಎಂದು ಕವಿರಾಜಮಾರ್ಗಕಾರ ಕನ್ನಡ ನಾಡಿನ ಮೇರೆಗಳನ್ನು ನಿರ್ದೇಶಿಸಿರುವುದು ಪ್ರಸಿದ್ಧ ಸಂಗತಿ. ಇದೊಂದು ಅಮೂಲ್ಯವಾದ ಚಾರಿತ್ರಿಕ ದಾಖಲೆ. ಆದರೆ ಚರಿತ್ರೆ, ಭೂಗೋಳಗಳಷ್ಟೆ ಒಂದು ನಾಡಿನ ಸರ್ವಸ್ವವಲ್ಲ. ಅಲ್ಲಿನ ಜನ, ಅವರ ವ್ಯಕ್ತಿತ್ವ ಮತ್ತು ಸಾಧನೆ ಕೂಡ ಅಷ್ಟೇ ಮುಖ್ಯ. ಕವಿರಾಜಮಾರ್ಗಕಾರ ಕನ್ನಡಿಗರ ವಿಶಿಷ್ಟ ವ್ಯಕ್ತಿತ್ವವನ್ನು ಹೀಗೆ ಹಿಡಿದಿಟ್ಟಿದ್ದಾನೆ:

ಪದನರಿದು ನುಡಿಯಲುಂ ನುಡಿ
ದುದನರಿದಾರಯಲುಮಾರ್ಪರಾ ನಾಡವರ್ಗಳ್|
ಚದುರರ್ ನಿಜದಿಂ ಕುರಿತೋ
ದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್||
ಸುಭಟರ್ಕಳ್ ಕವಿಗಳ್ ಸು
ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್|
ಅಭಿಮಾನಿಗಳತ್ಯುಗ್ರರ್
ಗಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್||

ಕನ್ನಡ ಸಂಸ್ಕೃತಿಯ ಈ ಚಿತ್ರ ಅಂದಿನ ಅಸ್ತಿತ್ವದಂತೆ ಇಂದಿನ ಅಭಾವವೂ ಆಗಿದೆ; ಎಂತಲೇ ಸಾವಿರಕ್ಕೂ ಹೆಚ್ಚು ವರ್ಷಗಳ ದೂರದಲ್ಲೂ ಎದ್ದುಕಾಣುತ್ತದೆ.

ಕನ್ನಡದ ಆದಿಕವಿಯೆನಿಸಿದ ಪಂಪ ತನ್ನ ಭಾರತದಲ್ಲಿ ಬನವಾಸಿಯ ವ್ಯಾಜದಲ್ಲಿ ಕೊಟ್ಟಿರುವ ಕನ್ನಡ ನಾಡಿನ ಈ ವರ್ಣನೆ ಅನನ್ಯವಾದುದು.

ಸೊಗಯಿಸಿ ಬಂದ ಮಾಮರನೆ ತಳ್ತಲೆವಳ್ಳಿಯೆ ಪೂತಜಾತಿ ಸಂ
ಪಗೆಯ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರೊಳ್ಮೊಗಂ
ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಳ್ಪೊಡಾವ ಬೆ
ಟ್ಟುಗಳೊಳಮಾವ ನಂದನವನಂಗಳೊಳಂ ಬನವಾಸಿ ದೇಶದೊಳ್||

೧ "ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ." ಒಂದರ್ಥದಲ್ಲಿ ಜನನಿಗಿಂತಲೂ ದೊಡ್ಡದು, ಗೌರವಾಸ್ಪದವಾದದ್ದು ಜನ್ಮ ಭೂಮಿ.

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿ
ನಿಂಪುಗ
ಳ್ಳಾಗರವಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ
ನಾಗಿಯುಮೇನೊ ತೀರ್ದಪುದೆ ತೀರದೊಡಂ ಮರಿ
ದುಂಬಿಯಾಗಿ ಮೇಣ್
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿ
ದೇಶದೊಳ್||
ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪ
ನಾಳ್ದಗೇ
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ
ಕೆಂದಲಂ
ಪಂ ಗಡೆಗೊಂಡೊಡಂ ಮಧುಮಹೋತ್ಸವಮಾದೊಡ
ಮೇನನೆಂಬೆನಾ
ರಂಕುಸವಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ
ದೇಶಮಂ||೨

ಈ ಮೂರು ಪದ್ಯಗಳಲ್ಲಿ ಕನ್ನಡದ ಒಂದು ಪ್ರಪಂಚವೆ ಕಟ್ಟಿ ನಿಂತಿದೆ. ಕರ್ಣಾಟಕದಪ್ರಕೃತಿಯ ಚೆಲುವು, ಕನ್ನಡಿಗರ ರಸಿಕತೆ, ತ್ಯಾಗ–ಭೋಗ ಸಮನ್ವಯ ಸ್ವಭಾವ, ಅಂದಿನ ಕೆಲವು ಆಚರಣೆಗಳು–ಎಲ್ಲವನ್ನೂ ಪಂಪ ಮರೆಯಲಾಗದ ಕವಿತೆಯಾಗಿ ಕ್ರೋಢೀಕರಿಸಿದ್ದಾನೆ. "ಚಾಗದ ಭೋಗದಕ್ಕರದ....ಮಾನಸರ್" ಎಂಬ ಸೂತ್ರಪ್ರಾಯವಾದ ಮಾತು ಎಂದಿಗೂ ಮಾನುಷತೆಯ ಆದರ್ಶವಾಗ ಬಲ್ಲದು. ಆರಂಕುಶವಿಟ್ಟೊಡಂ....ಎಂಬ ನುಡಿ ಕವಿಯ ನಿರಂಕುಶ ಪ್ರವೃತ್ತಿಯನ್ನು ಮಾತ್ರವಲ್ಲದೆ, ಕನ್ನಡ ನಾಡಿನ ದುರ್ದಮ್ಯ ಆಕರ್ಷಣೆಯನ್ನು ಅತ್ಯಂತ ಪರಿಣಾಮಕಾರಿಯಾಗಿ ಧ್ವನಿಸುತ್ತದೆ. ಎಲ್ಲ ಕಟ್ಟುಗಳನ್ನೂ ಹರಿದುಕೊಂಡು ಸ್ವೈರವಾಗಿ ಧಾವಿಸುವ ಮದಗಜದ ಚಿತ್ರವೂ ಇಲ್ಲಿ ಸೂಚ್ಯ. (ಆನೆ ಕನ್ನಡನಾಡಿನ ಒಂದು ವೈಶಿಷ್ಟ್ಯ ತಾನೆ!) ಒಟ್ಟಿನಲ್ಲಿ ಸಾಹಿತ್ಯ, ಸಂಸ್ಕೃತಿ ಎರಡೂ ಆಗಿರುವ ಈ ಪದ್ಯತ್ರಯವೊಂದು ಉತ್ಕೃಷ್ಟ ಭಾವಗೀತೆ.

ಆಂಡಯ್ಯ "ಕಬ್ಬಿಗರ ಕಾವ"ದಲ್ಲಿ "ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು" ಎಂದು ಉದ್ಘೋಷಿಸಿ, ಅದಕ್ಕೆ ಹೀಗೆ ವಿವರಣೆ ಕೊಡುತ್ತಾನೆ:

ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ
ಬಣ್ಣಿಸಲ್ಕಾರನಾ
ನೆಲನಂ ಮತ್ತಿನ ಮಾನಿಸರ್ ಪೊಗಳಲೇನಂ
ಬಲ್ಲರೆಂಬೊಂದು ಬ
ಲ್ಲುಲಿಯಿಂ ನೆಟ್ಟಗೆ ತಾಳ್ದು ಕನ್ನಡಮೆನಿಪ್ಪಾ ನಾಡು
ಚೆಲ್ವಾಯ್ತು ಮೆ
ಲ್ಲೆಲರಿಂ ಪೂತ ಕೊಳಂಗಳಿಂ ಕೆರೆಗಳಿಂ ಕಾಲೂರ್ಗಳಿಂ
ಕೆಯ್ಗಳಿಂ||

ಈ ಶಾಸನ ಪದ್ಯವೊಂದು ಅತ್ಯಂತ ಗಮನಾರ್ಹವಾದದ್ದು:

ಜಿನಧರ್ಮಾವಾಸಮಾದತ್ತಮಳ ವಿನಯದಾಗಾರ
ಮಾದತ್ತು ಪದ್ಮಾ
ಸನಪಿರ್ಪಾ ಸದ್ಮಮಾದತ್ತತಿ ವಿಶದಯಶೋಧಾಮ
ಮಾದತ್ತು ವಿದ್ಯಾ
ಧನ ಜನ್ಮಸ್ಥಾನಮಾದತ್ತಸಮ ತರಳ ಗಂಭೀರ
ಸದ್ಗೇಹಮಾದ
ತ್ತೆನಿಸಲ್ಕಿಂತುಳ್ಳ ನಾನಾಮಹಿಮೆಯೊಳೆಸಗುಂ
ಚಾರುಕರ್ಣಾಟದೇಶಂ||
(ಸೊರಬ, ೨೬೧)

ಕರ್ಣಾಟಕ ಸಂಸ್ಕೃತಿಯ ಒಂದು ಜೀವಗುಣವಾದ ಧಾರ್ಮಿಕ ಸಾಮರಸ್ಯವನ್ನು ಶಾಸನ ಕವಿ ಇಲ್ಲಿ ಪ್ರಸ್ತಾಪಿಸಿದ್ದಾನೆ. (ಈ ನಾಡು "ಬಹುಧರ್ಮಧೇನುನಿವಹಕ್ಕಾಡುಂಬೊಲಂ" ಎಂಬ ಇನ್ನೊಂದು ಶಾಸನದ ಉಕ್ತಿಯನ್ನೂ ನೆನೆಯಬಹುದು.) ಕರ್ಣಾಟಕ ಏತಕ್ಕೆ "ಚಾರು" ಎಂಬುದನ್ನು ಅವನು ಚೆನ್ನಾಗಿ ವಿವರಿಸಿದ್ದಾನೆ, ಅಥವಾ ಚಾರುತ್ವಕ್ಕೆ ಮೀರಿದ ಗರಿಮೆ ಆ ನಾಡಿನಲ್ಲಿ ಏನುಂಟು ಎಂಬುದನ್ನು ಮನಗಾಣಿಸಿದ್ದಾನೆ.

ನಂಜುಂಡಕವಿಯ "ರಾಮನಾಥ ಚರಿತೆ"ದಲ್ಲಿ, ಕರ್ಣಾಟಕ "ಕಾವೇರಿಯಿಂದ ಗೋದಾವರಿವರೆಗಮಿರ್ಪಾ ವಸುಧಾತಳವಳಯ" ಎನ್ನಲಾಗಿದೆ. ಕನ್ನಡ ಜನತೆಯ ಬಗ್ಗೆ ನಂಜುಂಡನ ಮೆಚ್ಚುನುಡಿಗಳಿವು:

ವೀರರಲ್ಲದೆ ಹಂದೆಗಳು ವಿತರಣಗುಣ| ಶೂರರಲ್ಲದೆ
ಲೋಭಿಗಳು||
ಸಾರಗುಣಗ್ರಾಹಿರಸಿಕರಲ್ಲದೆ ದುರ್ವಿ|ಕಾರಿಗಳಿಲ್ಲಾ
ನೆಲದೊಳು||
ಆಡುವರಿಲ್ಲನೃತವನಾಜಿರಂಗದೊ|ಳೋಡುವರಿಲ್ಲೆ
ರೆಮದನು||
ಕೂಡೆ ಕೊಡದರಿಲ್ಲಾ ನಾಡ ಮನುಜರ|ಗಾಡಿಯನೇನ
ಬಣ್ಣಿಪೆನು||

ಗೋವಿಂದ ವೈದ್ಯನ "ಕಂಠೀರವ ನರಸರಾಜವಿಜಯ", ತಿರುಮಲಾರ್ಯನ 'ಚಿಕದೇವರಾಯ ವಂಶಾವಳಿ', ಲಿಂಗಣ್ಣನ 'ಕೆಳದಿ ನೃಪವಿಜಯ', ಮುಂತಾದ ಐತಿಹಾಸಿಕ ಕಾವ್ಯಗಳಲ್ಲಿ ಕರ್ಣಾಟಕ ವರ್ಣನೆ ಬಂದಿದ್ದರೂ, ಅವೆಲ್ಲಾ ಬಹುಮಟ್ಟಿಗೆ ಗತಾನುಗತಿಕವಾದ ಶುಷ್ಕ ಚಿತ್ರಗಳು. ತಿರುಮಲಾರ್ಯನ 'ಅಪ್ರತಿಮ ವೀರ ಚರಿತೆ' ಪದ್ಯವೊಂದು ಉಲ್ಲೇಖನೀಯ:

ಪೊರೆದರ್ಕೊಂಗಣಿವರ್ಮರ ಬಳಕ್ಕೆ ಬಲ್ಲಾಳರ್ಕುಂ
ಬರ್ತಲುಂ
ಗರುಮಂದಿಂಗವರೊಳ್ಪುದುಂಗದರವೆಂಬುಲಿತಿರ್ದು
ದಿಂದಿಂತು ಸಾ
ದರದಿಂ ಕನ್ನಡ ರಾಯರಾಳ್ವಿನೆಗಮಿ ಕರ್ನಾಟ ದೇಶಂ
ಕರಂ
ಹರಿಸಂ ಬೆತ್ತುದು ಮತ್ತಮಪ್ರತಿಮನಿಂಬಪ್ಪುದಾನಂದ
ದೊಳ್||

ಚಿಕುಪಾಧ್ಯಾಯ ತನ್ನ 'ಹಸ್ತಿಗಿರಿಮಾಹಾತ್ಮ್ಯ'ದಲ್ಲಿ 'ಗಾಡಿಯ ಸೀಮೆ ಚೆಲ್ವೊಸಗೆವ ತಾಣಂ....ಮುಕ್ತಿಕಾಂತೆ ಕೈಗೂಡುವ ಬೀಡು ಕನ್ನಡದ ನಾಡು ವಿರಾಜಿಪುದೆಂತು ಬಣ್ಣಿಪಂ' ಎಂದು ಆಶ್ಚರ್ಯೋದ್ಗಾರ ತೆಗೆದಿರುವುದನ್ನು ಸ್ಮರಿಸಬಹುದು.

೨

ಈ ಕ್ರಿ.ಶ. ಇಪ್ಪತ್ತನೆಯ ಶತಮಾನದಲ್ಲಿ ಕರ್ನಾಟಕವನ್ನು ಕುರಿತು ಹಾಡಿದ ಹೊಸಗನ್ನಡ ಕವಿಗಳಿಗೆ ಒಂದು ವಿಶಿಷ್ಟ ಹಿನ್ನೆಲೆಯಿತ್ತೆಂಬುದನ್ನು ಬಗೆಯಬೇಕು. ಕಾಲುಶತಮಾನದ ಹಿಂದೆ ಕನ್ನಡ ನಾಡು ರಾಜಕೀಯವಾಗಿ ಛಿದ್ರ ಛಿದ್ರವಾಗಿತ್ತು; ಅನೇಕ ಪ್ರಾಚೀನ ಕವಿಗಳ ಪಾಲಿಗಿದ್ದಂತೆ ಒಂದು ಉಂಡೆಯಾ

---

೨ ಹೀಗೆಯೆ ನಮ್ಮ ಶಾಸನಗಳಲ್ಲಿ ಬರುವ ಊರುಗಳ ಮತ್ತು ಪ್ರಾಂತ್ಯಗಳ ವರ್ಣನೆ ಸಮಗ್ರ ಕರ್ಣಾಟಕದ ವರ್ಣನೆಯೂ ಆಗಬಹುದು; ಕಾವ್ಯಗಳಲ್ಲಿ ನಗರವರ್ಣನೆ ಮಾಡುವಾಗ ಕವಿಗಳ ದೃಷ್ಟಿಯಲ್ಲಿ ಕರ್ಣಾಟಕ ಇದ್ದಿರಲೂ ಬಹುದು.

ಗಿರಲಿಲ್ಲ. ಆದ್ದರಿಂದ ಅರ್ವಾಚೀನ ಕವಿಗಳು ಕರ್ಣಾಟಕದ ಗತ ವೈಭವವನ್ನು ನೆನೆದು ಉಬ್ಬುವುದು ಮಾತ್ರವಲ್ಲದೆ ವರ್ತಮಾನದ ದುಸ್ಥಿತಿಗಾಗಿ ದುಃಖಿಸುವುದು ಮತ್ತು ಪ್ರೋಜ್ವಲ ಭವಿಷ್ಯದ ಕನಸು ಕಾಣುವುದು ಸ್ವಾಭಾವಿಕವಾಗಿತ್ತು. ಅವರಿಗೆ ಕನ್ನಡ ಪ್ರಜ್ಞೆ ಭಾರತ ಪ್ರಜ್ಞೆಯ ಮತ್ತು ವಿಶ್ವಪ್ರಜ್ಞೆಯ ಒಂದು ಅಂಗವಾದುದೂ ಅನಿವಾರ್ಯವೇ. (ಸಮಗ್ರ ಭಾರತದ ಅರಿವು ಮತ್ತು ಜಾಗತಿಕ ಪ್ರಜ್ಞೆ ಹಿಂದಿನ ಕವಿಗಳಿಗಿರುವುದು ಅಸಾಧ್ಯವಾಗಿತ್ತು.) ಭಾರತದ ಸ್ವಾತಂತ್ರ್ಯ ಸಂಗ್ರಾಮ ಮತ್ತು ಕನ್ನಡ ನವೋದಯ ಏಕಕಾಲಿಕ ಪ್ರಕ್ರಿಯೆಗಳೆಂಬುದನ್ನು ಲಕ್ಷಿಸಬೇಕು. ಹೊಸ ಕವಿಗಳದು ವಸ್ತುನಿಷ್ಠ ಕವಿತೆಯಲ್ಲ, ವ್ಯಕ್ತಿನಿಷ್ಠ ಕವಿತೆ; ಅವರಲ್ಲಿ ಅನೇಕರು ಕನ್ನಡ ನಾಡನ್ನು ವ್ಯಕ್ತಿಯನ್ನಾಗಿ, ತಾಯನ್ನಾಗಿ ಕಂಡು, ಕಂಡರಿಸಿದ್ದಾರೆ.

ಕರ್ನಾಟಕ ಸಂಬಂಧಿಯಾದ ಹೊಸ ಕವಿತೆಯನ್ನು ಏಕೀಕರಣಪೂರ್ವ ಮತ್ತು ಏಕೀಕರಣೋತ್ತರ ಎಂದು ಬೇಕಾದರೆ ವಿಂಗಡಿಸಿಕೊಳ್ಳಬಹುದು. ಒಟ್ಟಿನ ಮೇಲೆ ಈ ಕಾವ್ಯದಲ್ಲಿ ಮೂಡಿಬಂದಿರುವ ಕರ್ಣಾಟಕದ ಕಾಣ್ಕೆಗೆ ಕೆಲವು ಅಪೂರ್ವ ಆಯಾಮಗಳುಂಟು.

'ಶ್ರೀ' ಯವರ 'ಕನ್ನಡ ತಾಯ ನೋಟ'ವೊಂದು ಅಗ್ರಗಣ್ಯವಾದ ಪದ್ಯ; ನಾಟಕೀಯವಾದದ್ದು. ಇದರಲ್ಲಿ 'ಶ್ರೀ' ಯವರ ಕನ್ನಡ ಪ್ರೇಮ ಉನ್ಮಾದವಾಗಿ ಹೊಮ್ಮಿದೆ.

ಏನು ಚೆಲುವಿನ ನಾಡು| ಚೆಲುವು ಚೆಲ್ಲುವ ನಾಡು||
ಕನ್ನಡದ ನಾಡು|
ಏನು ಚೆನ್ನದ ನಾಡು| ನಮ್ಮೊಲುಮೆಯ ನಾಡು|
ನಮ್ಮಿನಿಯ ನಾಡು|

ಎಂದು ಉದ್ಗರಿಸುವ ಕವಿ ಪವಿತ್ರಯಾತ್ರೆಯ ನೆಪದಲ್ಲಿ ಕನ್ನಡ ನಾಡಿನ ಒಂದು ಸಮಗ್ರ ಚಿತ್ರವನ್ನು ಹೃದ್ಯವಾಗಿ ಕೊಡುತ್ತಾರೆ. ಆ ಮೇಲೆ, ಹಾಳು ಹಂಪೆಯಲ್ಲಿ ತುಂಗೆಯ ತಡಿಯ ಒಂದು ಅರೆಯ ಮೇಲೆ ಖಿನ್ನಳಾಗಿದ್ದ ಮುದುಕಿಯೊಬ್ಬಳು ಕಾಣಿಸುತ್ತಾಳೆ ಅವರಿಗೆ. "ಯಾರವ್ವ, ನೀ ತಾಯಿ? ಏತಕಿಂತೊಬ್ಬಳೇ ಕುಳಿತೆ ಕಾಡಿನಲಿ?" ಎಂದು ಕೇಳುತ್ತಾರೆ. ಅವಳು ತನ್ನ ಕತೆ ಹೇಳುತ್ತಾಳೆ.

ಕೇಳಣ್ಣ, ನಾನೊಬ್ಬ ಹಳೆಯ ಮುತ್ತೈದೆ-ಹಿರಿದಾಗಿ
ಬಾಳಿದವಳೊಮ್ಮೆ:
ಈಗ ಬಡತನ, ಬಡವೆ, ಬಡವಾದೆ: ಬಡವಾದ
ಮಕ್ಕಳನು ನೋಡಿ,
ಬತ್ತಿ, ಮತ್ತಿಮ್ಮಡಿಯ ಸೊರಗಿನಲಿ ಬಡವಾದೆ-ಸಾವಿಲ್ಲ
ನನಗೆ,
ಸಾವಿಲ್ಲ—ಸಾಯುತಿಹ........

ತನ್ನ ಅಕ್ಕ ತಂಗಿಯರೆಲ್ಲ 'ಪೇರೂಕ್ಕಲಾಗಿ' ಬದುಕುತ್ತಿರುವಾಗ, ತಾನು ಈ ದುರವಸ್ಥೆಯಲ್ಲಿರುವುದಾಗಿಯೂ ತನ್ನ ಮಕ್ಕಳು "ತಾವ್ ಬಾಳಿ, ತಾಯ ಬಾಳಿಸರು" ಎಂದೂ ಅವಳು ಅಳಲನ್ನು ತೋಡಿಕೊಳ್ಳುತ್ತಾಳೆ. ಆಗ, ಹಾಗೆ ಮಾತನಾಡುತ್ತಿರುವವಳು ಕನ್ನಡದ ತಾಯಿ ಎಂದು ಕವಿಗೆ ಗೊತ್ತಾಗುತ್ತದೆ. ಅವರು ಅವಳಿಗೆ ಭರವಸೆ ಕೊಡುತ್ತಾರೆ.

ಏಕಮ್ಮ, ಇನಿಸೊಂದು ಕೊರಗು?
ಬೇಡಮ್ಮ ಮಕ್ಕಳಲಿ ಇನಿಸೊಂದು ಕಡುಮುನಿಸು-
ಬಾರಮ್ಮ, ಹರಸು

ನಿನ್ನ ನಾಡಿನೊಳದೆಕೊ ಬೆಳಕು ಮೂಡಿಹುದು-ಜೀವ
ಕೂಡಿಹುದು
ನಿನ್ನ ಮಕ್ಕಳು ನಿದ್ದೆಗಳೆದೆದ್ದ ಸಿಂಹದಂತೇಳುತ್ತ,
ಮೊಳಗಿ,
ಕಣಕಿಳಿದು ಪಂಪ ನೃಪತುಂಗರಾ ಮಾತುಗಳು ದಿಟವೆನಿಸು
ತಿಹರು
ಸೆರೆಯನೊಕ್ಕಡೆಗೊಗೆದು, ಬಿಡುಗಡೆಯ ಕೈಕೊಂಡು,
ಹಳನೆನಪು ನೆನೆದು,
ಹೊಸ ಕಾಣ್ಕೆಗಳ ಕಂಡು, ಸಾಮ್ರಾಜ್ಯಗಳ ಮತ್ತೆ
ಕಟ್ಟುತಿಹರು
ನಿನ್ನ ನಾಡೊಂದಾಗಿ, ನಿನ್ನ ನುಡಿ ಮೇಲಾಗಿ, ಮನೆ
ಮಕ್ಕಳೆಲ್ಲ
ಪೇರೊಕ್ಕಲಾಗಿ ಪಾಡುವರು,

ತಾಯ್ ಬದುಕಿ, ತಾವ್ ಬದುಕಿ, ಹೆರರ ಬದುಕಿಪರು ಆಗ "ನಕ್ಕಳಾ ತಾಯಿ". ಅವಳು ತರುಣಿಯಾಗಿ, "ಕಡಲ ತೆರೆಗಳನುಟ್ಟು, ಬೆಟ್ಟ ಬಯಲನು ತೊಟ್ಟು, ಅರಲ ಮುಡಿಗಿಟ್ಟು" ನಸುನಗುತ್ತಾಳೆ. ಕಡೆಗೆ "ಭುವನೇಶ್ವರೀ ದೇವಿ ರಥವನೇರಿದಳು" ಎಲ್ಲರೂ ಕೂಗುತ್ತಾರೆ.

ತಾಯ್‌ಬಿಜಯ ಮಾಡುವಳು, ದಾರಿಬಿಡಿ, ದಾರಿಬಿಡಿ,
ಅಡ್ಡಬಾರದಿರಿ.
ಭಾರತಾಂಬೆಯ ಹಿರಿಯ ಹೆಣ್‌ಮಗಳೆ, ದಾರಿ ತೋರುವ
ಹಿರಿಯ ಸೊಡರೆ, ಬಾಳಮ್ಮ, ಬಾಳು.

'ಶ್ರೀ'ಯವರ ಈ ಕನಸು ಇನ್ನೂ ಸಂಪೂರ್ಣವಾಗಿ ನನಸಾಗಿಲ್ಲ. ಆದರೆ ಅದು ಮಹತ್ವದ ಕನಸು, ಹೊಂಗನಸು; ಎಲ್ಲ ಕನ್ನಡಿಗರ ಧ್ಯೇಯವಾಗಲು ಯೋಗ್ಯವಾದದ್ದು.

ಕರ್ಣಾಟಕದ ಏಕೀಕರಣಕ್ಕೆ ಮುನ್ನ ಹುಯಿಲಗೋಳ ನಾರಾಯಣರಾಯರು,

ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು

ಬದುಕು ಬಲುಹಿನ ನಿಧಿಯು ಸದಭಿಮಾನದ ಗೂಡು

ಎಂದು ಉತ್ಕಟವಾಗಿ ಹಾರೈಸಿದರು; ಆ ಹಾರೈಕೆ ನಾಡಿನಾದ್ಯಂತ ಅನುರಣಿಸಿತು. ಏಕೀಕರಣವಾದ ಮೇಲೆ 'ಉದಯವಾಗಲಿ' ಎಂಬುದನ್ನು 'ಉದಯವಾಯಿತು' ಎಂದು ಬದಲಿಸಲಾಯಿತು—ಉದಯವಾಗಬೇಕಾದದ್ದು ಇನ್ನೂ ಬಹಳಷ್ಟಿದ್ದರೂ.

'ಕನ್ನಡನಾಡಿನ ಸ್ಥಿತಿಯನ್ನು ನೆನೆದು' ಎಂಬ ಕವನದಲ್ಲಿ ಶ್ರೀನಿವಾಸರು 'ಹರಿದು ತುಂಡಾಗಿಹುದು ಇಂದು ಕನ್ನಡ ನಾಡು' ಎಂದು ಸಕಾರಣವಾಗಿ ಕೊರಗಿ, ಕಡೆಗೆ

ಹಾ ನನ್ನ ಸೋದರರೆ ಬನ್ನಿ ಒಂದಾಗಿ,
ಜಯವಧುವ, ನಿಮ್ಮ ತೋಳಿನೊಳಿಟ್ಟು ತೂಗಿ

ಎಂದು ಕರೆಕೊಟ್ಟಿದ್ದಾರೆ.

ವಿನಾಯಕರ 'ನಾಡಿನ ಹಾಡು' ಕವನದಲ್ಲಿ ಕರ್ಣಾಟಕದ ಪೂರ್ವವೈಭವಕ್ಕಾಗಿ ಹಿಗ್ಗಿ, ವರ್ತಮಾನ ಪರಿಸ್ಥಿತಿಗಾಗಿ ಮರುಗುವ ಬಗೆಯಿದೆ:

ತಾರೆಗಳು ಮೇಳವಿಸಿ ಬಂದು ಬಿಟ್ಟಿಹ ಬೀಡು ನಮ್ಮ
ಕನ್ನಡವ ನಾಡು
ತಾರೆಗಳ ಒಡಹುಟ್ಟಿ, ತಾರೆಗಳ ಒಡನಾಡಿ, ನಮ್ಮ
ಕನ್ನಡದ ಹಾಡು
ಭೂಪತಿಯು ಕವಿಯಾಗಿ ಕವಿ ಚಮೂಪತಿಯಾಗಿ
ಮೆರೆದಿರುವ ನಮ್ಮ ನಾಡು

ಪತಿಯಿಲ್ಲದವಳಂತೆ ಗತಿಯಿಲ್ಲವಾಗಿಹುದು,
ಹೀನವಾಗಿಹುದು ನೋಡು.

"ಭೀಷ್ಮರಂತಹ ಸುತರ ತಾಯಿ ಚಿಂತೆಯಲಿಹಳು ವಿಧವೆಯಹ ಬಂಚೆಯಂತೆ" ಎಂದು ಕವಿ ವಿಷಾದಿಸಿ, "ಮತ್ತೆ ನಿನ್ನುದಲದಲ್ಲಿ ಬೆಳಗುವುದು ಹೊಸ ಹುಟ್ಟು, ಬರಲಿಹನು ಸುಕುಮಾರ, ಬರಲಿ ಹನು ಪರಮಪುರುಷ" ಎಂದು ಆಶ್ವಾಸಿಸುತ್ತಾರೆ.

ಗೋವಿಂದ ಪೈಗಳ 'ಕನ್ನಡಿಗರ ತಾಯಿ' ಸಾಕಷ್ಟು ಹೆಸರುವಾಸಿಯೂಗಿದೆ. ತಾಯಿಯ ಬಗ್ಗೆ ಮಕ್ಕಳ ಪ್ರೀತಿ ಮತ್ತು ಸರ್ವಾರ್ಪಣ ಮನೋಭಾವ ಹಾಗೂ ಮಕ್ಕಳ ಬಗ್ಗೆ ತಾಯ ವಾತ್ಸಲ್ಯ ಇಲ್ಲಿ ಹೆಪ್ಪಾಗಿವೆ.

ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ,
ಹರಸು ತಾಯೆ, ಸುತರ ಕಾಯೆ, ನಮ್ಮ ಜನ್ಮದಾತೆಯೆ,
ನಮ್ಮ ತಪ್ಪನೆನಿತೊ ತಾಳ್ವೆ,
ಅಕ್ಕರೆಯಿಂದೆಮ್ಮನಾಳ್ವೆ
ನೀನೆ ಕಣಾ ನಮ್ಮ ಬಾಳ್ವೆ,
ನಿನ್ನ ಮರೆಯಲಮ್ಮೆವು—

ತನು ಕನ್ನಡ 'ಮನ ಕನ್ನಡ' ನುಡಿ ಕನ್ನಡವೆಮ್ಮವು. ಕವಿ "ಜೇನು ಸುರಿವ ಹಾಲು ಹರಿವ ದಿವಂ ಭೂಮಿಗಿಳಿದುದೇ?" ಎಂದು ಹೆಮ್ಮೆಯಿಂದ ಉದ್ಗರಿಸಿ, ಕರ್ಣಾಟಕದ ಗತ ವೈಭ ವವನ್ನು ಕಣ್ಮುಂದೆ ಸುರುಳಿ ಬಿಚ್ಚಿಸುತ್ತಾರೆ. ಭಾವುಕತೆಯಷ್ಟೆ ಈ ಕವನದ ತಿರುಳಾಗಿಲ್ಲ; "ಹೊಸತು ಕಿನ್ನರಿಯಲಿ ನಿನ್ನ ಹಳೆ ಯ ಹಾಡನುಕ್ಕಿಸು", "ಕನ್ನಡ ಕಸ್ತೂರಿಯನ್ನು ಹೊಸತು ಸುರಿಂ ತೀಡದನ್ನ ಸುರಭಿ ಎಲ್ಲಿ?" ಮುಂತಾದ ಮಾತುಗಳಲ್ಲಿ ಚಿಂತನಾಂಶವೂ ಇದೆ.

"ನನ್ನದು ಈ ಕನ್ನಡನಾಡು" ಎಂದು ಅಂಬಿಕಾತನಯದ ತ್ತರು ತೀವ್ರ ಮಮತೆಯಿಂದ ಉಗ್ಗಡಿಸಿ, "ಅದು ನನ್ನದೆಂ ತು ಹಾಗೇ ನಿನ್ನದೋ" ಎಂದು ಅನ್ಯರನ್ನೂ ಚುಚ್ಚಿ ಎಚ್ಚರಿಸು ತ್ತಾರೆ. ಅವರ ಪಾಲಿಗೆ ಕನ್ನಡನಾಡು ಹೃತ್ ಕೇಂದ್ರದಲ್ಲಿ ನೆಲೆಗೊಂಡಿದೆ ಮಾತ್ರವಲ್ಲ, ಭೌಗೋಳಿಕವಾಗಿಯೂ ಕೇಂದ್ರ ಸ್ಥಾನದಲ್ಲಿದೆ:

ಮೊಸತಿಯ ಬೀಡು, ಮುಡುಪಾದ ನಾಡು, ಇದಕಾರು
ಜೋಡು,
ಎತ್ತೂ ಸುತ್ತಲೂ
ಮಲೆಯೊಳ ಮಂದ್ರ ದ್ರಾವಿಡವು ಸಾಂದ್ರಮೊರಾಷ್ಟ್ರ
ಆಂಧ್ರ
ಸುತ್ತು ಮುತ್ತಲೂ
ಇಗೋ ನಡುವಿನ ಕನ್ನಡನಾಡು
ನನ್ನದು.

ಆನಂದಕಂದರು 'ಕನ್ನಡನಾಡು' ಕವನದಲ್ಲಿ ಕರ್ಣಾಟ ಕದ ಹಿರಿಮೆಯನ್ನು ಹೀಗೆ ಕೊಂಡಾಡುತ್ತಾರೆ:

ಕನ್ನಡನಾಡಿನ ಹಾಡನ್ನು ಬರೆಯುವುದಕ್ಕೆ ಸಾಲದು
ಮುಗಿಲು
ಶ್ರೀ ವ್ಯಾಸಶುಕಾದಿ ಕವಿಗಳು ಬೇಸರಿಸುವರಿದನು
ಬರೆಯಲು
ಹಾಡುವುದಕೆ ಹದನಾದವರು ಆ ನಾರದ
ತುಂಬುರರುಗಳು:
ಈ ನಾಡಿನ ಹಾಡೆಮಗಿಂದು
ಒಳುದಾರಿಯ ತೋರುವುದೆಂದು
ಬಲುಬೆಳಕನು ಬೀರುವುದೆಂದು,
ಹಾಡುವೆನು ಸತತವೀ ಹಾಡು,
'ನನ್ನದು ಈ ಕನ್ನಡ ನಾಡು.'

'ಕರ್ಣಾಟಕ ಗೀತ'ದಲ್ಲಿ ಕೆ. ಎಸ್. ನರಸಿಂಹಸ್ವಾಮಿಯ ವರು ಕೊಡುವ ನಾಡಿನ ಕೆಲವು ಚೇತೋಹರ ಚಿತ್ರಗಳು:

ಪಡುವಣ ಕಡಲಿನ ನೀಲಿಯ ಬಣ್ಣ,
ಮುಡಿಯೊಳು ಸಂಜೆಯ ಅಂಚಿನ ಚಿನ್ನ,
ಹೊಳೆಗಳ ಸೆರಗಿನ ಪಚ್ಚೆಯ ಬಯಲು,
ಬಿರುಮಳೆಗಂಜದ ಬೆಟ್ಟದ ಸಾಲು,
ಹುಲಿಕಾಡಾನೆಗಳಲೆಯುವ ಕಾಡಿದು,
ಸಿರಿಗನ್ನಡ ನಾಡು.

ಕುವೆಂಪು ಅವರ 'ಜಯ ಹೇ ಕರ್ಣಾಟಕ ಮಾತೆ' ಅತ್ಯಂ ತ ಪ್ರಖ್ಯಾತವೂ ಜನಪ್ರಿಯವೂ ಆದ ಹಾಡು. ಈಚೆಗೆ ಇದು ನಾಡಗೀತೆಯಾಗಿ ಅಂಗೀಕೃತವಾಗಿದೆ. ಕರ್ಣಾಟಕ ಮಾತೆಯನ್ನು ಭಾರತಮಾತೆಯ ಮಗಳನ್ನಾಗಿ ಪರಿಕಲ್ಪಿಸಿಕೊಂಡಿದ್ದಾರೆ ಕವಿ; ಅದು ಪಲ್ಲವಿಯಾಗಿ ಕವನದಲ್ಲಿ ಆಮೂಲಾಗ್ರ ವ್ಯಾಪಿಸಿದೆ. ಎಂತಲೇ ಭಾರತದ ಹಿರಿಮೆ, ಕರ್ಣಾಟಕದ ಹಿರಿಮೆ ಎರಡೂ ಒಟ್ಟಿಗೆ ಕೀರ್ತಿತವಾಗುತ್ತವೆ ಈ ಕವನದಲ್ಲಿ; ಅದೇ ಇದರ ವೈಶಿಷ್ಟ್ಯ. ಕನ್ನಡಪ್ರೇಮ ಭಾರತಪ್ರೇಮಕ್ಕೆ ವಿರುದ್ಧ ವಲ್ಲ, ಒಂದರ ಹಿತ ಮತ್ತೊಂದರ ಹಿತದಲ್ಲಿದೆ; ಒಂದನ್ನು ಪ್ರೀತಿಸುವವರು ಮತ್ತೊಂದನ್ನೂ ಪ್ರೀತಿಸುತ್ತಾರೆ ಎಂಬ ವಿಚಾ ರ ಗರ್ಭಿತವಾಗಿದೆ. ಕವಿಯ ನಿಲುವಿನಲ್ಲಿ ಔದಾರ್ಯ, ವಿವೇಕ ಎರಡೂ ಇವೆ. ಇದು ರಾಜ್ಯಗೀತವೂ ಹೌದು, ರಾಷ್ಟ್ರಗೀತವೂ ಹೌದು. ತೀರ ಪರಿಚಿತವಾದ ಈ ಪದ್ಯದ ಪ್ರಾರಂಭದ ಕೆಲವು ಪಂಕ್ತಿಗಳನ್ನಷ್ಟೆ ಉದ್ಧರಿಸಬಹುದು:

ಜಯ ಭಾರತ ಜನನಿಯ ತನುಜಾತೆ,
ಜಯ ಹೇ ಕರ್ಣಾಟಕ ಮಾತೆ,
ಜಯ ಸುಂದರ ನದಿ ವನಗಳ ನಾಡೆ,
ಜಯ ಹೇ ರಸಋಷಿಗಳ ಬೀಡೆ,
ಭೂದೇವಿಯ ಮಕುಟದ ನವಮಣಿಯೆ,
ಗಂಧದ ಚಂದದ ಹೊನ್ನಿನ ಗಣಿಯೆ,
ರಾಘವ ಮಧುಸೂದನರವತರಿಸಿದ
ಭಾರತ ಜನನಿಯ ತನುಜಾತೆ,
ಜಯ ಹೇ ಕರ್ಣಾಟಕ ಮಾತೆ.

ಕುವೆಂಪು ಅವರ ಇನ್ನೊಂದು ಮುಖ್ಯ ಕವನ 'ಅಖಂಡ ಕರ್ಣಾಟಕ' ಇದು ಏಕೀಕರಣವನ್ನು ವಿರೋಧಿಸಿದವರಿಗೆ ಕೊಟ್ಟ ಸಿಡಿಲುತ್ತರ.

ಅಖಂಡ ಕರ್ಣಾಟಕ:
ಅಲ್ತೊ ನಮ್ಮ ಕೂಗಾಟದ ರಾಜಕೀಯ ನಾಟಕ.

ಎಂದು ಸಾರುವ ಕವಿ ಸಂಸ್ಕೃತಿ ಕರ್ಣಾಟಕದ ಚಿತ್ರವೊಂದನ್ನು ನೀಡುತ್ತಾರೆ:

ನೃಪತುಂಗ ಚಕ್ರವರ್ತಿ,
ಪಂಪನಲ್ಲಿ ಮುಖ್ಯಮಂತ್ರಿ,
ರನ್ನ ಜನ್ನ ನಾಗವರ್ಮ
ರಾಘವಾಂಕ ಹರಿಹರ
ಬಸವೇಶ್ವರ ನಾರಣಪ್ಪ
ಸರ್ವಜ್ಞ ಷಡಕ್ಷರ:
ಸರಸ್ವತಿಯ ರಚಿಸಿದೊಂದು
ನಿತ್ಯಸಚಿವ ಮಂಡಲ
ತನಗೆ ರುಚಿರ ಕುಂಡಲ.

ಕರ್ಣಾಟಕವೆಂಬುದು ಬರಿಯ ಹೆಸರಲ್ಲ, ಕವಿಯ ದೃಷ್ಟಿಯಲ್ಲಿ: "ಮಂತ್ರ ಕಣಾ, ಶಕ್ತಿ ಕಣಾ, ತಾಯಿ ಕಣಾ, ದೇವಿ ಕಣಾ, ಈ ದಿಸೆಯಲ್ಲಿ ಕುವೆಂಪು ಅವರ "ಮೆಟ್ಟುವ ನೆಲ ಕರ್ಣಾಟಕ" ಎಂಬುದು ಅತ್ಯಂತ ಗಮನಾರ್ಹವಾದ ಕವನ. ಇದು ಕರ್ಣಾಟಕವನ್ನು ಭೌಗೋಳಿಕ ಗಡಿಗಳಿಂದಾಚೆಗೆ ಕೊಂಡೊಯ್ಯುವ, ಕನ್ನಡತನವುಳ್ಳ ಕನ್ನಡಿಗರು ಇರುವಲ್ಲೆಲ್ಲ ಪ್ರತಿಷ್ಠಾಪಿಸುತ್ತದೆ:

ನೀ ಮೆಟ್ಟುವ ನೆಲ–ಅದೆ ಕರ್ಣಾಟಕ;
ನೀನೇರುವ ಮಲೆ ಸಹ್ಯಾದ್ರಿ,
ನೀ ಮುಟ್ಟುವ ಮರ–ಶ್ರೀಗಂಧದ ಮರ;
ನೀ ಕುಡಿಯುವ ನೀರೇ–ಕಾವೇರಿ.

ಕುವೆಂಪು ಅವರ ಈ ಸಂಸ್ಕೃತಿ ಕರ್ಣಾಟಕದ ಕಲ್ಪನೆ ಸ್ವೋಪಜ್ಞವಾದುದು. ಅದರ ಪ್ರಕಾರ, ಕರ್ಣಾಟಕತ್ವ ಕಾವೇರಿಯಿಂದ ಗೋದಾವರಿಯವರೆಗೆ ಮಾತ್ರ ಇರುವಂಥದಲ್ಲ; ಅದು ವಿಶ್ವವ್ಯಾಪ್ತಿ. "ಕರ್ಣಾಟಕಕ್ಕೆ ಅನ್ನಮಯ ರೂಪವಾದ ಭೂ ಪ್ರದೇಶವಿರುವಂತೆಯೆ ಪ್ರಾಣಮನೋಮಯ ರೂಪವಾದ ಚಿತ್ ಪ್ರದೇಶವೂ ಇದೆ" 'ಕರ್ಣಾಟಕ ರಾಜ್ಯೋದಯ ಶ್ರೀ ಗೀತೆ'ಯಲ್ಲಿ ಕುವೆಂಪು ಆಡಿರುವ ಈ ಉಕ್ತಿಗಳನ್ನೂ ಪರಿಭಾವಿಸಬಹುದು:

ಬರಿಯ ಚದರಮೈಲಿಗಳಲ್ತು ಕರ್ಣಾಟಕದ ದೇಶ
ವಿಸ್ತೀರ್ಣಂ;
ನೆನೆ, ನೆನೆ, ಮನೋಮಯದ ಸಂಸ್ಕೃತಿಯ ಕೋಶ
ವಿಸ್ತೀರ್ಣಮಂ;
ಮರೆಯದಿರು ಸದರ ಸಂವತ್ಸರದ ಶತಮಾನಗಳ
ಕಾಲ ವಿಸ್ತೀರ್ಣಮಂ;
ಪ್ರಾಣಮಯ ಭಾವಪ್ರದೇಶ ವಿಸ್ತೀರ್ಣಮಂ,
ಚಿದಾಕಾಶ ವಿಜ್ಞಾನ ವಿಸ್ತೀರ್ಣಮಂ.

ಕನ್ನಡ ನಾಡು ಒಂದಾದಾಗ ಕವಿಗಳಿಗೆ ಹರ್ಷೋದ್ರೇಕವುಂಟಾದುದು ಸಹಜವೇ. ಕುವೆಂಪು ಆವೇಶದಿಂದ ಘೋಷಿಸುತ್ತಾರೆ:

ಕನಸು ನನಸಾಯಿತಿದೊ ಏಕೈಕ ಕರ್ನಾಟಕ:
ಕಣ್‌ನಟ್ಟು ಬಯಸಿ ಕಾಣ್ ದಿಕ್‌ತಟ ಧ್ವಜಪಟ.

ಈಚೆಗೆ ಚೆನ್ನವೀರ ಕಣವಿಯವರ 'ವಿಶ್ವಭಾರತಿಗೆ ಕನ್ನಡದಾರತಿ' ಮತ್ತು ಕೆ. ಎಸ್. ನಿಸಾರ್ ಅಹಮದ್ ಅವರ 'ನಿತ್ಯೋತ್ಸವ' ಸಾಕಷ್ಟು ಜನಪ್ರಿಯವಾಗಿವೆ. ಕಣವಿಯವರ ಕವನದ ವಿವರಗಳಲ್ಲಿ ಹೊಸತೇನೂ ಇಲ್ಲವಾದರೂ ೧. 'ವಿಶ್ವಭಾರತಿಗೆ ಕನ್ನಡದಾರತಿ'ಯ ಕಲ್ಪನೆಯ ನೂತನವಾಗಿದೆ; ಕನ್ನಡಿಗನಲ್ಲಿ ಎಚ್ಚರುತ್ತಿರುವ ವಿಶ್ವಪ್ರಜ್ಞೆಗೆ ದ್ಯೋತಕವಾಗಿದೆ. ಇಂದು ಕನ್ನಡಿಗ ಕನ್ನಡವನ್ನು ಮರೆಯದೆ, ತನ್ನತನವನ್ನು ತೊರೆಯದೆ ವಿಶ್ವಮಾನವನಾಗಬೇಕಿದೆ; ತನ್ನ ಅರಿವಿನ ಕ್ಷಿತಿಜಗಳನ್ನು ವಿಸ್ತರಿಸಿಕೊಳ್ಳಬೇಕಿದೆ. ಈ ಸಮನ್ವಯದ 'ಮಂಗಳ ಜಯಭೇರಿ'ಯಾಗಿದೆ ಕಣವಿಯವರ ಗೀತೆ. ನಿಸ್ಸಾರ್ ಅಹಮದರ 'ನಿತ್ಯೋತ್ಸವ' ಕನ್ನಡ ನಾಡಿನ ಹಿರಿಮೆಯನ್ನು ರೂಪವಿಧಾನದಿಂದ ಹಾಡುತ್ತದೆ.

'ರಾಜ್ಯೋತ್ಸವ' ಎಂಬ ನಿಸ್ಸಾರರ ಕವನ ಕರ್ಣಾಟಕವನ್ನು ನೋಡುವ ವ್ಯತ್ಯಸ್ತ ದೃಷ್ಟಿಯೊಂದಕ್ಕೆ ಪ್ರಾತಿನಿಧಿಕವಾಗಿದೆಯೆನ್ನಬಹುದು. ಇದರಲ್ಲಿ ಭಾವಾತಿರೇಕವಿಲ್ಲ; ಸಂಯಮದ ಆಲೋಚನೆಯಿದೆ, ಸ್ವಸ್ಥವಿಡಂಬನದ ಧೋರಣೆಯಿದೆ. "ಗತ ವೈಭವೋಪೇತ ಪ್ರೇತಗಳನಗೆಯುವ" ಕನ್ನಡದ ನಕಲಿ ಭಕ್ತರನ್ನು ಕವಿ ಟೀಕಿಸುತ್ತಾರೆ:

ಹಿಂದುಹಿಂದಕೆ ನಡೆವ ಬದುಕಿನಾವೇಗಕ್ಕೆ
ಬುದ್ಧಿ ಬ್ರೇಕನು ಹಾಕಿ ಇಪ್ಪತ್ತನೆಯ ಶತಮಾನದಲ್ಲಿ
ನಿಲ್ಲಿಸದವರು;
ಋಣವ ಸಲ್ಲಿಸದವರು.

ಕವಿಯ ದೃಷ್ಟಿಯಲ್ಲಿ ರಾಜ್ಯೋತ್ಸವ ಇಷ್ಟೆ:

ನಮ್ಮ ರಾಜ್ಯೋತ್ಸವವೂ ಬರಿಯ ರಜ,
ಸೋಂಭೇರಿಗಳ ಮಜ.
ಬಾಜಾ ಭಜಂತ್ರಿ ಜೊತೆ ನೂಕು ನುಗ್ಗಲು ಝೋಕು;

ಎಂತಲೇ "ಮನೋಭಾವ ಬದಲಾಗಬೇಕು" ಎಂಬ ವಿಚಾರ ಸ್ವಾಗತಾರ್ಹ.

ಕರ್ಣಾಟಕವನ್ನು ಕುರಿತು ಭಾವನಿರ್ಭರವಾದ ಕವಿತೆಗಳ ರಚನೆ ಈಚೆಗೆ ವಿರಳವಾಗುತ್ತಿದೆ. ಬೌದ್ಧಿಕತೆಯ ಬೆಳವಣಿಗೆ ಇದಕ್ಕೊಂದು ಕಾರಣವಿದ್ದೀತು. ಬೌದ್ಧಿಕತೆ ಅಥವಾ ವೈಚಾರಿಕತೆ ಒಳ್ಳೆಯದೇ; ಆದರೆ ಅದು ಹೃದಯದಾರಿದ್ರ್ಯಕ್ಕೆ, ನಿರಭಿಮಾನಕ್ಕೆ ಕಾರಣವಾಗಬಾರದು.

ಕವಿಗಳ ಕಣ್ಣಿನಲ್ಲಿ ಕರ್ಣಾಟಕ ಹೊಳೆದಿರುವ ಪರಿಯ ಒಂದು ಸ್ಥೂಲ ಪರಿಚಯವಿದು ೨. ಈ ನಾಡು ನಮ್ಮ ಹೆಮ್ಮೆಗೆ ಮತ್ತು ಹಾಡಿಗೆ ಎಂದೂ ಸ್ಫೂರ್ತಿ, ಪ್ರೇರಣೆಗಳನ್ನು ಒದಗಿಸಬಲ್ಲದು ಎಂಬುದು ಇಲ್ಲಿ ಲಕ್ಷಿಸಬೇಕಾದ ಮೂಲಭೂತ ಸತ್ಯ.

---

೧ ಹಾಗೆ ನೋಡಿದರೆ ಬಹುಪಾಲು ಕರ್ಣಾಟಕ ಕವನಗಳಲ್ಲಿ ಒಂದೇ ಬಗೆಯ ಪಟ್ಟಿಗಳು ಕಂಡುಬರುತ್ತವೆ.

೨ ಆಧುನಿಕರಲ್ಲಿ ಶಾಂತಕವಿ, ವಿ. ಸೀ., ಬೆನಗಲ್ ರಾಮರಾವ್, ಪು. ತಿ. ನ., ರಂ. ಶ್ರೀ ಮುಗಳಿ, ಎಸ್. ವಿ. ಪರಮೇಶ್ವರ ಭಟ್ಟ, ದಿನಕರ ದೇಸಾಯಿ, ತಿರುಮಲೇಶ್ ಮುಂತಾದವರೂ ಕರ್ಣಾಟಕದ ಬಗ್ಗೆ ಕವನರಚನೆ ಮಾಡಿದ್ದಾರೆಂಬುದನ್ನು ಸೂಚಿಸಬೇಕು. ಈ ವಿಷಯಕ್ಕೆ ಸಂಬಂಧಿಸಿದಂತೆ, ಎಸ್. ಚನ್ನಪ್ಪನವರು ಸಂಪಾದಿಸಿರುವ 'ಕವಿಗಳು ಕಂಡ ಕರ್ಣಾಟಕ' ಎಂಬ ಸಂಕಲನವನ್ನೂ ಮುಗಳಿಯವರ 'ಸಾಹಿತ್ಯೋಪಾಸನೆ'ಯ ಕಡೆಯ ಎರಡು ಲೇಖನಗಳನ್ನೂ ಆಸಕ್ತರು ನೋಡಬಹುದು.

# ಪ್ರವಾಸಿಗಳು ಕಂಡಂತೆ ಕರ್ನಾಟಕ

ಎಚ್. ಎಲ್. ನಾಗೇಗೌಡ

ಪುರಾಣ, ಪುಣ್ಯಕಥೆ, ಅಷ್ಟಾದಶ ವರ್ಣನೆಗಳ ಕಾವ್ಯ ರಚನೆ, ಅವುಗಳಲ್ಲಿ ತಮ್ಮ ರಾಜನ ಹೊಗಳಿಕೆ – ಇವುಗಳನ್ನೇ ಪ್ರಧಾನ ಮಾಡಿದ ಕಾರಣ ನಮ್ಮವರು ಅಪ್ಪಟ ಇತಿಹಾಸ ವನ್ನೇ ಬರೆಯುವ ಗೋಜಿಗೆ ಹೋಗಲಿಲ್ಲ. ಈ ಕಾರಣ ಬಹು ಪ್ರಾಚೀನತೆಯ ಭಾರತ ದೇಶದಲ್ಲಿದ್ದ ಆಳರಸರು ಅವರ ಕಾಲದಲ್ಲಿ ಇದ್ದ ರಾಜಕೀಯ, ಆರ್ಥಿಕ, ಸಾಮಾಜಿಕ ಇತ್ಯಾದಿ ವಿಷಯಗಳ ಅರಿವು ಆಗುವುದೇ ಕಷ್ಟ. ಬ್ರಿಟಿಷರೇ ನಮಗೆ ಸರಿಯಾದ ಇತಿಹಾಸ ಬರೆಯಲು ಕಲಿಸಿದರೆಂದರೆ ತಪ್ಪಾಗ ಲಾರದು. ಅವರಿಂದಲೇ ಭಾರತ ಹಾಗೂ ಕರ್ನಾಟಕದಲ್ಲಿ ಪ್ರವಾಸ ಮಾಡಿದ ವಿದೇಶೀಯರ ಕಥನಗಳು ನಮಗೆ ದೊರೆಯುವಂತೆ ಆದದ್ದು ಮತ್ತು ನಮ್ಮ ಇತಿಹಾಸವನ್ನು ಮತ್ತೆ ಬರೆಯುವಂತೆ ಆದದ್ದು.

ಕ್ರಿ.ಪೂ. ೫೦೦ ರಿಂದಲೂ ಭಾರತಕ್ಕೆ ವಿದೇಶೀ ಪ್ರವಾಸಿ ಗಳು ಬರಲಾರಂಭಿಸಿದರು. ಈ ದೇಶದ ಪ್ರಾಚೀನತೆ ಇಲ್ಲಿ ಸಿಗುವ ವಜ್ರ ವೈಡೂರ್ಯಗಳ ಹಾಗೂ ಸಂಬಾರವಸ್ತುಗಳ ಮೇಲಿನ ಆಸೆ, ಹೊಸ ದೇಶವನ್ನು ನೋಡುವ ಕುತೂಹಲ- ಇವೆಲ್ಲಾ ಪ್ರವಾಸಿಗರನ್ನು ಆಕರ್ಷಿಸಿದುವು. ಅವರು ಪ್ರವಾ ಸದ ವೇಳೆ ಅನುಭವಿಸಿದ ಕಷ್ಟನಷ್ಟಗಳು ಅಪಾರ. ಆದರೂ ತಾವು ಕಂಡುದನ್ನು ಕೇಳಿದುದನ್ನೂ ವಿವರವಾಗಿ ಬರೆದಿಟ್ಟ ಆ ಮಹನೀಯರ ಶ್ರದ್ಧಾಸಕ್ತಿಗಳನ್ನು ಎಷ್ಟು ಹೇಳಿದರೂ ತೀರದು.

ಮೊದಮೊದಲು ಭಾರತಕ್ಕೆ ಬಂದ ಪ್ರವಾಸಿಗಳು ಬಂದರುಗಳುಳ್ಳ ಕಡಲುತೀರದ ವಿಷಯಗಳನ್ನೇ ಹೆಚ್ಚಾಗಿ ಪ್ರಸ್ತಾಪ ಮಾಡಿದ್ದಾರೆ. ಆದರೂ ೨ನೆಯ ಶತಮಾನದ ಗ್ರೀಸಿನ ಖಗೋಳ ಶಾಸ್ತ್ರಜ್ಞನಾದ ಟಾಲೆಮಿ ಶಾತವಾಹ ನರ ರಾಜಧಾನಿಯಾಗಿದ್ದ ಪೈಠಣ, ರಾಯಚೂರು ಜಿಲ್ಲೆಯ ಮುದುಗಲ್, ಬಾಗೇವಾಡಿ ತಾಲ್ಲೂಕಿನ ಹೂವಿನ ಹಿಪ್ಪರಗಿ, ಬೆಳಗಾಂ ಜಿಲ್ಲೆಯ ನಾಗೂರು, ಗುಲ್ಬರ್ಗಾ ಜಿಲ್ಲೆಯ ಮಳ ಖೇಡ, ಬಿಜಾಪುರ ಜಿಲ್ಲೆಯ ಇಂಡಿ, ಉತ್ತರ ಕನ್ನಡ ಜಿಲ್ಲೆಯ ಬನವಾಸಿ, ಎಲ್ಲಾಪುರ - ಈ ಸ್ಥಳಗಳನ್ನು ಹೆಸರಿಸಿ ದ್ದಾನೆ. ಇವೆಲ್ಲಾ ಆಗ ರಾಜಧಾನಿಯಾಗಿದ್ದರಿಂದಲೋ ಅಥವಾ ವ್ಯಾಪಾರ ಕೇಂದ್ರಗಳಾಗಿದ್ದರಿಂದಲೋ ವಿದೇಶೀಯರ ಗಮನ ಕ್ಕೆ ಬಂದಿರಬಹುದು.

ಮತ್ತೆ ಪ್ರವಾಸಿಗಳ ಕಥನಗಳಲ್ಲಿ ಕರ್ನಾಟಕ ಕಾಣಿಸಿ ಕೊಳ್ಳುವುದು ೭ನೆಯ ಶತಮಾನದಲ್ಲಿ. ಬೌದ್ಧ ಸನ್ಯಾಸಿ ಹುಯನ್‌ತ್ಸಾಂಗ್ ಬೌದ್ಧಮತದ ಮಾತೃಸ್ಥಾನವಾದ ಭಾರತ ಕ್ಕೆ ಬಂದಿದ್ದಾಗ ಕರ್ನಾಟಕದ ಮೂಲಕ ಹಾದುಹೋದ. ಸಿಂಹಳ ದಿಂದ ಉತ್ತರ ಭಾರತದ ಕಡೆಗೆ ಭೂಮಾರ್ಗವಾಗಿ ಪ್ರಯಾಣ ಮಾಡುವಾಗ ಕೊಂಕಣಪುರವೆಂಬ ನಾಡಿಗೆ ಬಂದ. ಇದೇ ಕದಂ ಬರು ಆಳುತ್ತಿದ್ದ ಉತ್ತರ ಕನ್ನಡ ಜಿಲ್ಲೆಯ ಬನವಾಸಿ ಎಂಬ ನಾಡು. ಇದಲ್ಲದೆ ಆತ ಕನ್ನಡಿಗನಾದ ಚಾಳುಕ್ಯರ ಎರಡನೆ ಯ ಪುಲಿಕೇಶಿ ದೊರೆಯ ಆಧಿಪತ್ಯಕ್ಕೆ ಒಳಪಟ್ಟಿದ್ದ "ಮಹಾ ರಾಷ್ಟ್ರ" ವೆಂಬ ನಾಡಿನ ಬಗ್ಗೆ ಹೇಳುತ್ತಾ ಇಲ್ಲಿಯ ನಿವಾಸಿ ಗಳು ಕೆಚ್ಚೆದೆಯ ಕಲಿಗಳು, ಉಪಕಾರ ಸ್ಮರಣೆ, ದೀನರಲ್ಲಿ ದಯೆ, ಶರಣಾಗತರ ರಕ್ಷಣೆ, ವಿದ್ಯೆಯಲ್ಲಿ ಆಸಕ್ತಿ–ಎಂಬೀ ಗುಣಗಳು ನಾಡಿನ ಜನರಲ್ಲಿದ್ದುವೆಂದು ಹೇಳಿ, ಈ ದೊರೆಗೆ ಪರನಾಡಿನ ದೊರೆಗಳೆಂದರೆ ಲಕ್ಷ್ಯವೇ ಇಲ್ಲ ಎಂದು ವರ್ಣಿ ಸಿದ್ದಾನೆ.

ಚೀನೀ ಪ್ರವಾಸಿಗಳ ನಂತರ ಅರಬ್ಬೀ ಪ್ರವಾಸಿಗಳು ಭಾರತಕ್ಕೆ ಬರಲಾರಂಭಿಸಿದರು. ಅವರಲ್ಲಿ ಇಬ್ನ ಖುರ್ದಾದ್ ಬೇ, ಸುಲೇಮಾನ್, ಅಬೂಜೈದ್ ಹಸನ್ ಎಂಬ ಲೇಖಕರು ಮಾಲಖೇಡವನ್ನು ರಾಜಧಾನಿಯಾಗಿ ಮಾಡಿಕೊಂಡಿದ್ದ ರಾಷ್ಟ್ರ ಕೂಟರ ವಲ್ಲಭರಾಜ ಬಹು ಬಲಾಢ್ಯನಾಗಿದ್ದನೆಂದೂ ಆತನ ಮುದ್ರೆಯುಂಗುರದ ಮೇಲೆ "ಒಮ್ಮನಸ್ಸಿನಿಂದ ಆರಂಭಿಸಿದ ಕೆಲಸಕ್ಕೆ ಜಯ ಖಂಡಿತ" ಎಂಬ ಸೂಕ್ತಿಯನ್ನು ಕೆತ್ತಲಾಗಿ ತ್ತೆಂದೂ ಇಲ್ಲಿನ ಜನರು ಕಳ್ಳಕಾಕರ ಭಯವಿಲ್ಲದೆ ಸುಖವಾಗಿ ರುವಷ್ಟು ಬೇರೆಲ್ಲಿಯೂ ಇಲ್ಲವೆಂದೂ ಹೇಳುತ್ತಾರೆ. ರಾಜ ಕಾಲವಾಗಿದ್ದಾಗ ಅವನ ಅನುಚರರೂ ಬೆಂಕಿಯಲ್ಲಿ ಬಿದ್ದು ದೇಹಾರ್ಪಣೆ ಮಾಡಿಕೊಳ್ಳುತ್ತಿದ್ದರೆಂದೂ ಹೇಳುತ್ತಾರೆ.

ಇನ್ನೊಬ್ಬ ಅರಬ್ಬೀ ಪ್ರವಾಸಿ ಅಲ್‌ಬರೂನಿ ಈ ದೇಶದ ಲಿಪಿಗಳ ವಿಷಯ ಹೇಳುತ್ತ ಸೇನಾಪಡೆಗಳಲ್ಲಿರುವ "ಕನ್ನರ" ಎಂಬ ಹೆಸರಿನ ಜನರ ದೇಶವಾದ ಕರ್ನಾಟಕ ದೇಶದಲ್ಲಿ "ಕರ್ನಾಟ" ಎಂಬ ಲಿಪಿ ಇತ್ತೆಂದು ಹೇಳಿದ್ದಾನೆ. ಆದರೆ ದರ್ಭೆ ಬೆಳೆಯದ, ಕಪ್ಪು ಕೂದಲಿನ ಜಿಂಕೆಗಳಿರುವ ಈ ನಾಡು ಬ್ರಾಹ್ಮಣರ ವಾಸಕ್ಕೆ ನಿಷಿದ್ಧವಾಗಿತ್ತಂತೆ.

೧೪ನೆಯ ಶತಮಾನದ ಇನ್ನೊಬ್ಬ ಪ್ರವಾಸಿ ಇಬ್ನಬಟೂ ಟ ಪಶ್ಚಿಮ ಕರಾವಳಿಯ ಬಂದರುಗಳಾದ ಹೊನ್ನಾವರ ಬಸರೂರು ಬಾರ್ಕೂರು ಮಂಗಳೂರುಗಳ ಪ್ರಸ್ತಾಪ ಮಾಡು ತ್ತಾನೆ. ಹೊನ್ನಾವರದಲ್ಲಿ ಸುಲ್ತಾನ್ ಜಲಾಲುದ್ದೀನ್ ಎಂಬ ಮುಸಲ್ಮಾನ ಆಳುತ್ತಿದ್ದನೆಂದೂ, ಈತ ವಿಜಯನಗರದ ಹರಿ ಹರ ರಾಜನಿಗೆ ಅಧೀನನಾಗಿದ್ದನೆಂದೂ ಇಲ್ಲಿದ್ದ ಮಹ ಮ್ಮದೀಯ ಸ್ತ್ರೀಯರು ಕುರಾನನ್ನು ಬಾಯಿಪಾಠ ಮಾಡಿದ್ದಾ

ರೆಂದೂ ಹೆಣ್ಣು ಮಕ್ಕಳಿಗೆ ೧೩ ಶಾಲೆಗಳೂ ಗಂಡು ಮಕ್ಕಳಿಗೆ ೩೨ ಶಾಲೆಗಳೂ ಇದ್ದುವೆಂದೂ ತಿಳಿಸಿದ್ದಾನೆ. ಬಸರೂರು ತೆಂಗಿನ ಕಾಯಿಗೂ, ಬಾರ್ಕೂರು ಕಬ್ಬಿಗೂ, ಮಂಗಳೂರು ಒಣ ಶುಂಠಿಗೂ ಹೆಸರಾಗಿದ್ದುವಂತೆ.

ಕರ್ನಾಟಕವನ್ನು ಕುರಿತು ವಿವರವಾದ ವರ್ಣನೆ ಬರುವುದು ವಿಜಯನಗರ ಸಾಮ್ರಾಜ್ಯ ಅಸ್ತಿತ್ವದಲ್ಲಿದ್ದ ಕಾಲದಲ್ಲಿ ಬಂದ ನಿಕೊಲೊ (೧೪೪೪) ಬಂದಿದ್ದಾಗ ಎರಡನೇ ದೇವರಾಯ ರಾಜ್ಯವಾಳುತ್ತಿದ್ದನು. ಈ ರಾಜ ಬೇರೆಲ್ಲ ರಾಜರಿಗಿಂತ ಬಲಾಢ್ಯನೆಂದು ಆತ ಹೇಳಿದ್ದಾನೆ. ಹದಿನೈದನೆ ಶತಮಾನದಲ್ಲಿ ಬಂದಿದ್ದ ಅಬ್ದುಲ್ ರಜಾಕ್ ಮಂಗಳೂರಿನಿಂದ ೧೫ ಮೈಲು ದೂರದಲ್ಲಿ ಪೊಳಲಿ ದೇವಸ್ಥಾನದಲ್ಲಿದ್ದ ರಾಜರಾಜೇಶ್ವರಿ ವಿಗ್ರಹದ ವರ್ಣನೆ ಮಾಡಿದ್ದಾನೆ. ರಾಯಭಾರಿಯಾಗಿ ಬಂದಿದ್ದ ಆತನಿಗೆ ವಿಜಯನಗರದಲ್ಲಿ ಭಾರೀ ಸ್ವಾಗತ ದೊರೆಯಿತು. ಬಹು ದೊಡ್ಡದಾದ ವಿಜಯನಗರ ಜನಭರಿತವಾಗಿತ್ತು. ಇಂತಹ ನಗರವನ್ನು ಆತನ ಕಣ್ಣು ಕಂಡಿರಲಿಲ್ಲ, ಕಿವಿ ಕೇಳಿರಲಿಲ್ಲವಂತೆ. ನಗರದ ಅಂಗಡಿ ಬೀದಿಗಳಲ್ಲಿ ಗುಲಾಬಿ ಹೂವುಗಳನ್ನು ರಾಶಿಹಾಕಿ ಮಾರುತ್ತಿದ್ದರು. ಬೀದಿಗಳಲ್ಲೆಲ್ಲಾ ಗುಲಾಬಿಯ ಪರಿಮಳ ಇಟ್ಟಾಡುತ್ತಿತ್ತು. ಹೊಟ್ಟೆಗೆ ಹಿಟ್ಟು ಎಷ್ಟು ಅವಶ್ಯಕವೋ ಜುಟ್ಟಿಗೆ ಗುಲಾಬಿ ಹೂವೂ ಅಷ್ಟೇ ಅವಶ್ಯಕವಾಗಿತ್ತು ಜನಗಳಿಗೆ. ರತ್ನಪಡಿ ವ್ಯಾಪಾರ ಬಹಿರಂಗವಾಗಿ ನಡೆಯುತ್ತಿತ್ತು. ದೇಶದ ಪ್ರತಿಯೊಬ್ಬ ಪ್ರಜೆಯ ಮೈಮೇಲೂ ಮುತ್ತು ರತ್ನ ಖಚಿತವಾದ ಆಭರಣಗಳಿದ್ದವು. ರಾಜನ ಖ್ಯಾತಿಯಂತೂ ಹೇಳತೀರದು. ಇಂತಹ ದೊರೆಯನ್ನು ಮೀರಿಸುವ ದೊರೆ ಇಡೀ ಇಂಡಿಯಾದಲ್ಲಿಯೇ ಇಲ್ಲ. ಈ ದೊರೆ ಮಹಾನವಮಿ ಹಬ್ಬವನ್ನು ಬಹು ವೈಭವದಿಂದ ಆಚರಿಸುತ್ತಿದ್ದ. ದೇಶದ ಎಲ್ಲಾ ಕಡೆಗಳಿಂದ ಶ್ರೀಮಂತ ಸರದಾರರೂ, ಬಗೆಬಗೆಯ ಕಲಾವಿದರೂ ಈ ಹಬ್ಬಗಳಲ್ಲಿ ಭಾಗವಹಿಸುತ್ತಿದ್ದರು. ಈ ವೈಭವದ ಹಬ್ಬವನ್ನು ಒಂಬತ್ತು ದಿನಗಳ ಕಾಲ ಅದ್ದೂರಿಯಿಂದ ನಡೆಸುತ್ತಿದ್ದ ವಿಜಯನಗರದ ರಾಜ ನಿಜವಾಗಿಯೂ ಮಹೋನ್ನತನೇ ಸರಿ ಎಂದು ರಜಾಕ್ ಹೇಳುತ್ತಾನೆ.

ರಷ್ಯಾದೇಶದ ಕುದುರೆ ವ್ಯಾಪಾರಿ ನಿಕಿಟಿನ್ ಮೊದಲು ಬಂದದ್ದು ಬೀದರ್‌ಗೆ. ನಾಲ್ಕು ವರ್ಷಗಳ ಕಾಲ ಅಲ್ಲಿದ್ದು, ಕುದುರೆ, ರೇಷ್ಮೆ ಹಾಗೂ ಕರಿಯ ಜನರ ವ್ಯಾಪಾರ ನಡೆಯುತ್ತಿದ್ದುದನ್ನೂ ಸುಲ್ತಾನನ ಸೊಗಸಾದ ಅರಮನೆಯನ್ನೂ ನಾಡಿನ ಜನಭರಿತವನ್ನೂ, ಶ್ರೀಮಂತರು ಅಷ್ಟೈಶ್ವರ್ಯಗಳಲ್ಲಿ ಮೆರೆದರೆ ಹಳ್ಳಿಯವರು ಬಡತನದಲ್ಲಿ ಬೇಯುತ್ತಿರುವುದನ್ನೂ ಹೇಳಿ ವಿಜಯನಗರದ ಮೇಲೆ ಬೀದರ್ ಸುಲ್ತಾನನೂ ಬೇರೆ ಸುಲ್ತಾನರೂ ಒಟ್ಟುಗೂಡಿ ಮುತ್ತಿಗೆ ಹಾಕಿದಾಗ ಅನ್ನ ನೀರಿನ ಅಭಾವದಿಂದ ವಿಜಯನಗರ ಶರಣಾಗಬೇಕಾಯಿತೆಂದು ತಿಳಿಸುತ್ತಾನೆ. ಆಗ ಇಪ್ಪತ್ತು ಸಾವಿರ ಹೆಂಗಸರು ಗಂಡಸರ ತಲೆಗಳು ಉರುಳಿದುವಂತೆ. ಹುಡುಗರು ಮುದುಕರೆನ್ನದೆ ಅವರನ್ನು ಸೆರೆಹಿಡಿದು ದುಡ್ಡಿಗೆ ಮಾರಲಾಯಿತಂತೆ.

ವಿಜಯನಗರಕ್ಕೂ ಸುಲ್ತಾನರಿಗೂ ಆಗಾಗ್ಗೆ ಯುದ್ಧಗಳಾಗುತ್ತಿದ್ದ ವಿಷಯವನ್ನು ೧೬ನೆಯ ಶತಮಾನದಲ್ಲಿ ಕರ್ನಾಟಕಕ್ಕೆ ಬಂದಿದ್ದ ಪೋರ್ಚುಗೀಸ ಪ್ರವಾಸಿ ಬಾರ್ಬೋಸಾನು ಹೇಳುತ್ತಾ ವಿಜಯನಗರ ಸಾಮ್ರಾಜ್ಯದಲ್ಲಿ ಐದು ದೊಡ್ಡ ವಿಭಾಗಗಳಿದ್ದುವು. ಒಂದು ಸಮುದ್ರತೀರದ ತುಳುನಾಡು. ಇನ್ನೊಂದು ಒರಿಸ್ಸಾ ರಾಜ್ಯಕ್ಕೆ ಹೊಂದಿಕೊಂಡಂತಿದ್ದ ಲೆಗಿನಿ (ಅಥವಾ ಬಂಕಾಪುರ) ನಾಡು, ಮೂರನೆಯ ವಿಜಯನಗರ ಇರುವ "ಕನರಿ" (ಕನ್ನಡ) ಎಂಬ ನಾಡು. ನಾಲ್ಕನೆಯದು "ತಮುಳ್" (ತಮಿಳು) ಎಂದು ಕರೆಯಲ್ಪಡುತ್ತಿದ್ದ ಚೋಳಮಂಡಲ ಎಂದು ತಿಳಿಸುತ್ತಾನೆ. ಐದನೆಯ ನಾಡು ಯಾವುದೆಂದು ಆತ ಹೇಳುವುದಿಲ್ಲ. ಹದಿನಾರನೆ ಶತಮಾನದಲ್ಲಿ ಬಂದಿದ್ದ ಇನ್ನೊಬ್ಬ ಪೋರ್ಚುಗೀಸ್ ಪ್ರವಾಸಿ ವಿಜಯನಗರದ ಅರಸರ ಭಾಷೆಯ ವಿಷಯ ಹೇಳುತ್ತಾ ನರಸಿಂಗ ರಾಜ ವಿಜಯನಗರದ ರಾಜನೆಂದೂ. ಆ ಕಡೆ ಈತ ಕಳಿಂಗನೂ ಹೌದು. ಅವನ ಆಸ್ಥಾನದಲ್ಲಿ ಹಲವಾರು ಭಾಷೆಗಳನ್ನು ಮಾತನಾಡುತ್ತಾರೆ. ಆದರೆ ರಾಜನ ಮಾತೃಭಾಷೆ ಕನರೀಸ್ (ಕನ್ನಡ) ಎಂದಿದ್ದಾನೆ.

ಮೇಲೆ ಹೇಳಿದ ಬಾರ್ಬೋಸಾ ಕೇವಲ ರಾಜಕೀಯ ವಿಷಯಗಳಲ್ಲದೆ ಇನ್ನೂ ಬೇರೆ ಕೆಲವು ವಿಷಯಗಳನ್ನೂ ಹೇಳುತ್ತಾನೆ. ಉದಾಹರಣೆಗೆ ದ.ಕ. ಜಿಲ್ಲೆಯ ಬೈಂದೂರಿನಲ್ಲಿ ಆಗ ಬೆಳೆಯುತ್ತಿದ್ದ ಬೇರೆ ಜಾತಿಯ ಬತ್ತಗಳನ್ನೂ, ಅಕ್ಕಿಯನ್ನು ಬತ್ತದ ಹುಲ್ಲಿನಲ್ಲಿ "ಪನಗಾ" ಎಂಬ ಮೂಡೆ ಕಟ್ಟುತ್ತಿದ್ದುದನ್ನೂ, ಅದನ್ನು ಮಲಬಾರಿಗೆ ರವಾನೆ ಮಾಡುತ್ತಿದ್ದುದನ್ನೂ ಹೇಳುತ್ತಾನೆ. ಮತ್ತು ವಿಜಯನಗರ ಸಾಮ್ರಾಜ್ಯದಲ್ಲಿದ್ದ ಸತಿ ಪದ್ಧತಿಯ ವರ್ಣನೆ ಮಾಡುತ್ತಾನೆ. ಕೆಂಡಕೊಂಡವಾಗುವುದು ಪತ್ನಿಯ ಧರ್ಮ. ಸತಿಯಾಗುವವಳು ಸರ್ವಾಲಂಕಾರ ಮಾಡಿಕೊಂಡು ತನ್ನ ನೆಂಟರಿಷ್ಟರೊಡನೆ ಬೂದು ಬಣ್ಣದ ಅಥವಾ ಬಿಳಿಯ ಕುದುರೆಯ ಮೇಲೆ ಚಿತೆಯ ಬಳಿಗೆ ಮೆರವಣಿಗೆಯಲ್ಲಿ ಹೊರಡುತ್ತಾಳೆ. ಚಿತೆಯನ್ನು ಮೂರು ಸಲ ಪ್ರದಕ್ಷಿಣೆ ಮಾಡಿ ತೊಟ್ಟ ಆಭರಣಗಳನ್ನು ತನಗಿಷ್ಟ ಬಂದವರಿಗೆ ಕೊಟ್ಟುಬಿಟ್ಟು ಕೇವಲ ಒಂದು ತುಂಡು ಬಟ್ಟೆಯಲ್ಲಿರುತ್ತಾಳೆ. ಆಗ ಅವಳ ಕೈಗೆ ಎಣ್ಣೆಗಡಿಗೆ ಕೊಡುತ್ತಾರೆ. ಅದನ್ನು ಹೊತ್ತು ಚಿತೆಯನ್ನು ಮತ್ತೆ ಪ್ರದಕ್ಷಿಣೆ ಮಾಡಿ ಎಣ್ಣೆಯನ್ನು ಅದಕ್ಕೆ ಸುರಿದು ಗಡಿಗೆಯನ್ನೂ ಅದರಲ್ಲಿ ಎಸೆದು ಕೊಂಡಕ್ಕೆ ಧುಮುಕುತ್ತಾಳೆ–ನೀರಿನ ಕೊಳಕ್ಕೆ ಧುಮುಕುವಷ್ಟು ಸಂತೋಷದಿಂದ, ಸುತ್ತ ನೆರೆದವರೆಲ್ಲ ಎಣ್ಣೆ ತುಪ್ಪ ಸೌದೆಗಳನ್ನು ಚಿತೆಗೆ ಹಾಕುತ್ತಾರೆ. ಆ ಮಹಾಜ್ವಾಲೆಯಲ್ಲಿ ಆಕೆ ಅರೆಕ್ಷಣದಲ್ಲಿ ಸುಟ್ಟು ಬೂದಿಯಾಗುತ್ತಾಳೆ. ಬೂದಿಯನ್ನು ಹರಿಯುವ ನದಿಗಳಿಗೆ ಬಿಡುತ್ತಾರೆ. ಹೀಗೆ ಸಹಗಮನ ಮಾಡದ ಹೆಂಗಸನ್ನು ಸಮಾಜ ಬಹು ಹೀನಾಯವಾಗಿ ಕಾಣುತ್ತದೆ. ಆಕೆಯ ತಲೆ ಬೋಳಿಸಿ ಮನೆಯಿಂದ ಅಟ್ಟುತ್ತಾರೆ. ಆ ಮೇಲೆ ಆಕೆ ಅನಿವಾರ್ಯವಾಗಿ ತಪ್ಪು ದಾರಿ ಹಿಡಿದು ಬಾಳು ಸಾಗಿಸಬೇಕಾಗುತ್ತದೆ.

ಇಷ್ಟೇ ಅಲ್ಲ, ರಾಜ ಸತ್ತರೂ ಅವನ ಹೆಂಡಿರೂ ನೂರಾರು ಅನುಚರರೂ ಚಿತೆಯಲ್ಲಿ ಬಿದ್ದು ತಮ್ಮ ಸ್ವಾಮಿ ನಿಷ್ಠೆಯನ್ನು ತೋರಿಸುತ್ತಾರೆ.

ವಿಜಯನಗರ ರಾಜ್ಯದಲ್ಲಿ ಇದ್ದ ಜಾತಿಗಳ ವಿಷಯ ಹೇಳುತ್ತಾ ಬಾರ್ಬೋಸಾ ಬ್ರಾಹ್ಮಣರು ಮತ್ತು ಕ್ಷತ್ರಿಯರ ವರ್ಣನೆ ಮಾಡುತ್ತಾ ಲಿಂಗ ಧರಿಸಿದ ವರ್ತಕರ ವಿಷಯ. ಅವರು ಏಕಪತ್ನೀವ್ರತಸ್ಥರಾಗಿದ್ದುದು, ಗಂಡ ಸತ್ತಾಗ ಹೆಂಡತಿಯನ್ನು ಸುಡದೆ ಜೀವಸಹಿತ ಹೂಳುತ್ತಿದ್ದುದು, ದೇವರಿಗೆ ಹರಕೆ ಕಟ್ಟಿಕೊಂಡವರು ಈಗ ಇನ್ನೂ ಅಲ್ಲಲ್ಲಿ ಅನುಷ್ಠಾನದಲ್ಲಿರುವ ಆದರೆ ಸಾಮಾನ್ಯವಾಗಿದ್ದ 'ಸಿಡಿ' ಪದ್ಧತಿಯನ್ನು ವರ್ಣಿಸುತ್ತಾನೆ.

ಬೆಳಗಾವಿಯಲ್ಲಿ ಈಗ ಮುತ್ತು ರತ್ನಗಳ ವ್ಯಾಪಾರದ ಸುದ್ದಿ ಇಲ್ಲ. ಆದರೆ ೧೭ನೆಯ ಶತಮಾನದಲ್ಲಿ ಕರ್ನಾಟಕದ ಮುಖಾಂತರ ಹಾದು ಹೋದ ಇಂಗ್ಲಿಷ್ ಪ್ರವಾಸಿಯೊಬ್ಬ ಬೆಳಗಾವಿಯಲ್ಲಿ ವಜ್ರವೈಡೂರ್ಯಗಳ ಮುತ್ತುರತ್ನಗಳ ದೊಡ್ಡ ಮಾರುಕಟ್ಟೆಯೇ ಇತ್ತೆಂದು ಹೇಳುತ್ತಾನೆ. ಇಲ್ಲಿಂದ ಬಿಜಾ

ಪುರಕ್ಕೆ ಹೋದ ಈತ ಬಿಜಾಪುರ ದೊಡ್ಡ ಪಟ್ಟಣವಾಗಿತ್ತೆಂದು ತಿಳಿಸುತ್ತಾನೆ.

ಇದೇ ವೇಳೆ ಬಂದಿದ್ದ ಅನಸ್ಕತನ್ ಎಂಬ ಹಾಲೆಂಡ್ ದೇಶದ ಪ್ರವಾಸಿಯೊಬ್ಬ ಪಶ್ಚಿಮ ಕರಾವಳಿಯಲ್ಲಿ ಕೋಟೆ ಕೊತ್ತಲಗಳು ಹಾಗೂ ಬಂದರುಗಳ ಬಗ್ಗೆ ಹೇಳುತ್ತಾ ಹೊನ್ನಾವರದಿಂದ ಪ್ರತಿವರ್ಷ ಏಳೆಂಟು ಸಾವಿರ ಕ್ವಿಂಟಾಲ್‌ನಷ್ಟು ಮೆಣಸು ರವಾನೆಯಾಗುತ್ತಿತ್ತೆಂದೂ, ಈ ಮೆಣಸು ಒಳನಾಡಿನಲ್ಲಿದ್ದ "ಬಟಕೊಳ" (ಭಟ್ಕಳ) ಎಂಬ ಹೆಸರಿನ ರಾಣಿಗೆ ಸೇರಿದ ಪ್ರದೇಶದಿಂದ ಬರುತ್ತಿತ್ತೆಂದು ತಿಳಿಸುತ್ತಾನೆ.

ವಿಜಯನಗರ ಸಾಮ್ರಾಜ್ಯದ ಕೊನೆಗಾಲವನ್ನು ಬರ್ನೆ ಎಂಬ ಫ್ರೆಂಚ್ ಪ್ರವಾಸಿ (೧೬೫೮–೧೬೬೭) ಚಿತ್ರಿಸಿದ್ದಾನೆ. ಆತ ಹೇಳುತ್ತಾನೆ: ಕಳೆದ ೪೦ ವರ್ಷಗಳಿಂದ ಮೊಗಲರ ರಾಜ್ಯ ರಣರಂಗವಾಗಿದೆ. ಒಂದು ಕಡೆ ಪ್ರಬಲರಾದ ಬಿಜಾಪುರ ಗೋಲ್ಕೊಂಡಾ ಸುಲ್ತಾನರೊಡನೆಯೂ, ಇನ್ನೊಂದು ಕಡೆ ಸಣ್ಣ ಪುಟ್ಟ ರಾಜರುಗಳೊಡನೆಯೂ ಮೊಗಲ್ ಚಕ್ರವರ್ತಿ ಒಂದೇ ಸಮನೆ ಯುದ್ಧದಲ್ಲಿ ತೊಡಗಿದ್ದಾನೆ. ಈ ಬಿಜಾಪುರ ಮತ್ತು ಗೋಲ್ಕೊಂಡಾ ಸುಲ್ತಾನರು ಮೊದಲಿಗೆ ವಿಜಯನಗರದ ಕೊನೆಯ ಚಕ್ರವರ್ತಿ ರಾಮರಾಯನ ಸೇವೆಯಲ್ಲಿದ್ದರು. ಆದರೆ ಆತನ ಅವಿವೇಕದಿಂದಾಗಿ ಸಾಮ್ರಾಜ್ಯ ಒಡೆಯಿತು. ಆತನ ಅಡಿಯಾಳಾಗಿದ್ದವರು ಆಳುವ ಅರಸರಾದರು.

ಬರ್ನೇ ಮುಂದುವರಿದು, ಬಿಜಾಪುರ ಅವನತಿಯ ಹಾದಿ ಹಿಡಿದಿದೆ ಎನ್ನುತ್ತಾನೆ. ರಾಜ್ಯದಲ್ಲೆಲ್ಲಾ ಭದ್ರವಾದ ಕೋಟೆ ಕೊತ್ತಲಗಳಿದ್ದರೂ ಹುಲ್ಲು ನೀರು ಸಿಗುವುದೇ ಕಷ್ಟ. ಹಿಂಗಾರು ಪ್ರದೇಶದಲ್ಲಿರುವ ಬಿಜಾಪುರ ಪಟ್ಟಣದಲ್ಲಿ ಸಿಹಿನೀರಿಗೆ ಪರದಾಡಬೇಕು. ಕೋಟೆಯೊಳಗೆ ಮಾತ್ರ ಸಿಹಿನೀರು. ಈ ಪರಿಸ್ಥಿತಿಯನ್ನು ಶಿವಾಜಿ ತನ್ನ ಏಳಿಗೆಗೆ ಉಪಯೋಗಿಸಿಕೊಂಡಿದ್ದಾನೆಂದು ಹೇಳಿದ್ದಾನೆ.

ವಿಜಯನಗರ ಸಾಮ್ರಾಜ್ಯಕ್ಕೆ ಅಧೀನವಾಗಿದ್ದ ಇಕ್ಕೇರಿ ವೆಂಕಟಪ್ಪನಾಯಕನ ಆಸ್ಥಾನಕ್ಕೆ ಬಂದಿದ್ದ ಪಿಯತ್ರೊದೆಲ್ಲಾವಲ್ಲೆ ಎಂಬ ಇಟಲಿ ದೇಶದ ಪ್ರವಾಸಿಯ ವರ್ಣನೆ ಬಹು ಸ್ವಾರಸ್ಯಕರವಾಗಿದೆ. ಬೇರೆ ಯಾವ ಪ್ರವಾಸಿಗಳೂ ಹೇಳದ ಅನೇಕ ವಿಷಯಗಳನ್ನೂ ಈತ ಹೇಳಿದ್ದಾನೆ. ಈತ ಹೊನ್ನಾವರದಿಂದ ಗೇರ್‌ಸೊಪ್ಪೆ ಮೂಲಕ ಇಕ್ಕೇರಿಗೆ ಪ್ರಯಾಣ ಮಾಡುತ್ತಾನೆ. ಗರ್ಸೊಪ್ಪೆಯಲ್ಲಿ ರೈತರ ನಾಲ್ಕಾರು ಹುಲ್ಲುಗುಡಿಸಲುಗಳನ್ನು ಬಿಟ್ಟರೆ ಇಲ್ಲಿ ನಗರವಿದ್ದ ಬೇರಾವ ಕುರುಹುಗಳೂ ಇಲ್ಲ. ಇಲ್ಲಿ ಬೆಳೆಯುವಷ್ಟು ಮೆಣಸು ಬೇರೆಲ್ಲಿಯೂ ಬೆಳೆಯುವುದಿಲ್ಲ. ಅದಕ್ಕೋಸ್ಕರವೇ ಇಲ್ಲಿಯ ರಾಣಿಯನ್ನು ಪೋರ್ಚುಗೀಸರು "ಮೆಣಸಿನ ರಾಣಿ" ಎಂದು ಕರೆಯುತ್ತಿದ್ದರು. ಅವರು ಇಲ್ಲಿ ಹರಿಯುವ ನದಿಯನ್ನು "ಗೊರ್ಸೊಪಾ" ಎಂದು ಕರೆದರು. ಈ ನದಿಯ ಎರಡು ಶಾಖೆಗಳಲ್ಲಿ ಒಂದನ್ನು ಇಂಡಿಯದವರು "ಅಂಬು ನದಿ" ಎಂದೂ, ಇನ್ನೊಂದನ್ನು "ಶರಾವತಿ" ಎಂದೂ ಕರೆದರು ಎಂದು ಹೇಳಿದ್ದಾನೆ.

ಹದಿನೇಳನೆಯ ಶತಮಾನದ ಪೂರ್ವಾರ್ಧದಲ್ಲಿ ಬಂದಿದ್ದ ಇಂಗ್ಲೀಷ್ ಪ್ರವಾಸಿ ಪೀಟರ್ ಮಂಡಿಯೂ ಇಕ್ಕೇರಿಗೆ ಹೋಗಿದ್ದ. ಆತ ಅಲ್ಲಿ ತಾನು ಕಂಡ ಆನೆ, ಕೋಳಿ ಮಂತಾದ ಪ್ರಾಣಿಗಳ ಕಾಳಗ, ದೊಂಬರಾಟ, ಮತ್ತು ದೇವರ ರಥೋತ್ಸವಗಳ ಬಗ್ಗೆ ಹೇಳುತ್ತಾನೆ. ಇಕ್ಕೇರಿ ಬಹು ದೊಡ್ಡ ದೊಡ್ಡ ಬೀದಿಗಳಿಂದಲೂ ಬಜಾರುಗಳಿಂದಲೂ ಕೂಡಿದ್ದ ದೊಡ್ಡ ನಗರವಾಗಿತ್ತು. ಮನೆಗಳಿಗೆ ನೆಲಗಾರೆ ಹಾಕಿ ಹೊರಗಡೆ ಗೋಡೆಗಳಿಗೆ ಸುಣ್ಣಕೆಮ್ಮಣ್ಣುಗಳ ಪಟ್ಟೆ ಬಳಿದಿದ್ದರಂತೆ.

ಮನೂಚಿ ಎಂಬವನು ಇಟಲಿ ದೇಶದ ಪ್ರವಾಸಿ. ಕೇವಲ ೧೮ ವರ್ಷದ ಹುಡುಗನಾಗಿದ್ದಾಗ ಕದ್ದೋಡಿ ಇಂಡಿಯಾಕ್ಕೆ ಬಂದ. ಈತ ತನ್ನ ೮೦ನೇ ವಯಸ್ಸಿನವರೆಗೆ ಇಂಡಿಯಾದಲ್ಲೆಲ್ಲಾ ಅಲೆದಾಡಿ ಇಲ್ಲಿಯೇ ಕಾಲವಾದ. ತನ್ನ ದೀರ್ಘ ಪ್ರವಾಸದ ಅನುಭವವನ್ನು ವಿವರವಾಗಿ ಬರೆದಿಟ್ಟ. ಬಿಜಾಪುರದಲ್ಲಿದ್ದ ಪ್ಲಾಸ್ಟಿಕ್ ಸರ್ಜನ್‌ಗಳ ವಿಷಯ ಹೇಳುತ್ತಾನೆ. ಮೊಗಲ್ ಚಕ್ರವರ್ತಿ ೧೬೭೦ರಿಂದ ೧೬೮೬ರವರೆಗೆ ಬಿಜಾಪುರದ ಮೇಲೆ ದಂಡಯಾತ್ರೆ ನಡೆಸಿದ ವೇಳೆ ಆತನ ಸೈನಿಕರು ತಮ್ಮ ಕೈಗೆ ಸಿಕ್ಕಿದ ಹಳ್ಳಿಯ ಜನರ ಮೂಗು ಕೊಯ್ದು ಬಿಡುತ್ತಿದ್ದರು. ಹಳ್ಳಿಯ ವೈದ್ಯರು ಹಣೆಯ ಮೇಲಿನ ಚರ್ಮವನ್ನು ಎತ್ತಿ ಆ ಹಸಿಚರ್ಮವನ್ನು ತಿರಿಚಿ ತಿದ್ದಿ ಕೊಯ್ದ ಮೂಗಿನ ಹಸಿಯ ಚರ್ಮಕ್ಕೆ ಅಂಟಿಸಿ ಔಷಧಿ ಹಾಕಿ ಹೆಚ್ಚು ಕಡಿಮೆ ಹೊಸ ಮೂಗನ್ನೆ ಮಾಡುತ್ತಿದ್ದರಂತೆ.

ಮೊಗಲರ ಕಾಲದಲ್ಲಿ ಕಂದಾಯ ಕವಳಿಗೆಗಳನ್ನು ಭಾರಿ ಚಿತ್ರಹಿಂಸೆಯಿಂದ ವಸೂಲು ಮಾಡಲಾಗುತ್ತಿತ್ತಂತೆ. ಊರ ಪಟೇಲನಿಗೆ ಚಿತ್ರಹಿಂಸೆ. ಅವನಿಂದ ಪ್ರತಿಯಾಗಿ ರೈತರಿಗೆ ಚಿತ್ರಹಿಂಸೆ. ಹುಣಸೆ ಬರಲಿನಿಂದ ಹೊಡೆಸುವುದು, ತಲೆಯ ಮೇಲೆ ಕಲ್ಲು ಹೊರಿಸಿ ಬಿಸಿಲಿನಲ್ಲಿ ನಿಲ್ಲಿಸುವುದು – ಇವೆಲ್ಲಾ ಕಂದಾಯದ ವಸೂಲಿಗೆ ಅನುಸರಿಸುತ್ತಿದ್ದ ಕ್ರಮಗಳು. (ಈ ಕ್ರಮಗಳು ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದವರೆಗೂ ಇದ್ದುವು). ಜನಗಳ ಸೋಮಾರಿತನ, ಇಸ್ಲಾಂ ಧರ್ಮಕ್ಕೆ ಮತಾಂತರ, ಶ್ರೀಮಂತರ ಪಗಡೆ ಆಟದ ಹುಚ್ಚು, ಸೈನಿಕರ ಪಕ್ಷಾಂತರ, ಸೈನ್ಯದಿಂದ ಪಲಾಯನ, ಹಿಂದುಗಳು ಮದುವೆಯಾಗಲು ತೋರಿಸುತ್ತಿದ್ದ ಆತುರ, ಚಿಕ್ಕ ವಯಸ್ಸಿನಲ್ಲಿಯೇ ಮಕ್ಕಳಿಗೆ ಮದುವೆ, ಮದುವೆಗಳಲ್ಲಿ ಹಾಡುತ್ತಿದ್ದ ಸೋಬಾನೆ ಪದಗಳು, ಸಹಗಮನ ಪದ್ಧತಿ, ಔರಂಗಜೇಬ ಹಿಂದುಗಳ ದೇವಸ್ಥಾನಗಳನ್ನು ನಾಶಮಾಡಿದ್ದು, ಅವರ ಮೇಲೆ ಹಾಕಿದ ತಲೆಗಂದಾಯ, ಆತ ಮಾಡುತ್ತಿದ್ದ ಮಣದಷ್ಟು ವಾಗ್ದಾನ, ಆದರೆ ಕಣದಷ್ಟು ಕೆಲಸ, ದಖಿನ್‌ನಲ್ಲಿ ೧೭೦೨ರಿಂದ ೧೭೧೪ರ ವರೆಗೆ ಬಂದ ಭೀಕರ ಬರ ಅದನ್ನು ಹಿಂಬಾಲಿಸಿ ಬಂದ ಪ್ಲೇಗು, ಇವುಗಳಿಂದಾಗಿ ೨೦ ಲಕ್ಷಕ್ಕೂ ಹೆಚ್ಚು ಜನರ ಮರಣ. ಜನರು ಹೊಟ್ಟೆಗಿಲ್ಲದೆ ತಮ್ಮ ಮಕ್ಕಳು ಮರಿಗಳನ್ನೇ ನಾಲ್ಕಾಣೆ ಎಂಟಾಣೆಗೆ ಮಾರಿಕೊಂಡದ್ದು ಇತ್ಯಾದಿ ಅನೇಕ ಸಂಗತಿಗಳನ್ನು ತಿಳಿಸುತ್ತಾನೆ.

# ಕರ್ನಾಟಕದ ಭೂವಿವರಣೆ

ಪ್ರಧಾನ್ ಗುರುದತ್ತ

ಭಾರತದ ಇಪ್ಪತ್ತೆರಡು ರಾಜ್ಯಗಳ ಪೈಕಿ ಒಂದಾಗಿರುವ ಕರ್ನಾಟಕ, ದಖಿನ್ ಪ್ರಸ್ಥಭೂಮಿ ಎಂದು ಹೆಸರಾಗಿರುವ ದಕ್ಷಿಣ ಭಾರತದ ನಡುವಣ ಪ್ರದೇಶದಲ್ಲಿ ಸ್ವಲ್ಪ ಪಶ್ಚಿಮಕ್ಕೆ, ಅರಬ್ಬೀ ಸಮುದ್ರಕ್ಕೆ ಸೇರಿದಂತೆ ಸುಮಾರು ೧,೯೧,೭೯೧ ಚ. ಕಿ.ಮೀ.ಗಳಷ್ಟು ವಿಶಾಲ ಭೂಭಾಗದಲ್ಲಿ ನೆಲೆಗೊಂಡಿರುವ ರಾಜ್ಯ. ಭೌಗೋಳಿಕವಾಗಿ ಇದರ ನೆಲೆ ಉತ್ತರ ರೇಖಾಂಶ ೭೪°೧೨′ ನಿಂದ ೭೮°೩೦′ ವರೆಗೆ - ಅಂದರೆ, ಉತ್ತರ-ದಕ್ಷಿಣವಾಗಿ ಸುಮಾರು ೭೭೦ ಕಿ.ಮೀ. ವರೆಗೂ, ಪೂರ್ವ-ಪಶ್ಚಿಮವಾಗಿ ೪೦೦ ಕಿ.ಮೀ. ವರೆಗೂ ವಿಸ್ತರಿಸಿಕೊಂಡಿದೆ. ವಾಯವ್ಯ ಮತ್ತು ಉತ್ತರ ದಿಕ್ಕುಗಳಲ್ಲಿ ಮಹಾರಾಷ್ಟ್ರದಿಂದಲೂ, ಈಶಾನ್ಯ ಮತ್ತು ಪೂರ್ವದಲ್ಲಿ ಆಂಧ್ರಪ್ರದೇಶದಿಂದಲೂ, ಆಗ್ನೇಯದಲ್ಲಿ ತಮಿಳುನಾಡಿನಿಂದಲೂ, ನೈರುತ್ಯ ದಿಕ್ಕಿನಲ್ಲಿ ಕೇರಳ ರಾಜ್ಯದಿಂದಲೂ, ಪಶ್ಚಿಮ ದಿಕ್ಕಿನಲ್ಲಿ ಅರಬ್ಬೀ ಸಮುದ್ರದಿಂದಲೂ ಆವೃತವಾಗಿದೆ. ಬೆಂಗಳೂರು, ಬೆಳಗಾಂವಿ, ಬಳ್ಳಾರಿ, ಬಿದರೆ, ಬಿಜಾಪುರ, ಚಿಕ್ಕಮಗಳೂರು, ಚಿತ್ರದುರ್ಗ, ಕೊಡಗು, ಧಾರವಾಡ, ಗುಲ್ಬರ್ಗ, ಹಾಸನ, ಕೋಲಾರ, ಮಂಡ್ಯ, ಮೈಸೂರು, ಉತ್ತರ ಕನ್ನಡ, ರಾಯಚೂರು, ಶಿವಮೊಗ್ಗ, ದಕ್ಷಿಣ ಕನ್ನಡ ಮತ್ತು ತುಮಕೂರು ಎಂಬ ಹತ್ತೊಂಬತ್ತು ಜಿಲ್ಲೆಗಳನ್ನು ಒಳಗೊಂಡಿರುವ ಈ ರಾಜ್ಯವನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದೆ. ಬೆಂಗಳೂರು, ಮೈಸೂರು, ಬೆಳಗಾಂವಿ ಮತ್ತು ಗುಲ್ಬರ್ಗ – ಇವೇ ಆ ನಾಲ್ಕು ವಿಭಾಗಗಳು. ರಾಜ್ಯದ ರಾಜಧಾನಿ ಬೆಂಗಳೂರು. ೧೯೮೧ರ ಜನಗಣತಿಯ ತಾತ್ಕಾಲಿಕ ವರದಿಯ ಪ್ರಕಾರ ಕರ್ನಾಟಕದ ಜನಸಂಖ್ಯೆ ೩,೭೦,೪೩,೪೫೧.

## ಮೇಲ್ಮೈ

ಭೌಗೋಲಿಕವಾಗಿ ಮತ್ತು ಭೂವೈಜ್ಞಾನಿಕವಾಗಿ ಭಾರತದಲ್ಲಿಯೇ ಅತ್ಯಂತ ಪ್ರಾಚೀನ ಭೂಭಾಗವೆಂದು ಹೇಳಲಾಗಿರುವ ದಖಿನ್ ಪ್ರಸ್ಥಭೂಮಿಯಲ್ಲಿ ಕರ್ನಾಟಕದ ಬಹುಭಾಗ ನೆಲೆಗೊಂಡಿವೆ. ಈ ಪ್ರಸ್ಥಭೂಮಿಯ ಎರಡೂ ಬದಿಗಳಲ್ಲಿ ಮೊಲೆಯಂತೆ ಹಬ್ಬಿಕೊಂಡಿರುವ ಪೂರ್ವ ಮತ್ತು ಪಶ್ಚಿಮ ಘಟ್ಟಗಳು ಕರ್ನಾಟಕಕ್ಕೆ ದಕ್ಷಿಣದಲ್ಲಿರುವ ನೀಲಗಿರಿಯಲ್ಲಿ ಬಂದು ಸಂಧಿಸುತ್ತವೆ. ಅರಬ್ಬೀ ಸಮುದ್ರಕ್ಕೆ ಸೇರಿದಂತಿರುವ ಪಶ್ಚಿಮದ ಅಂಚಿನ ಕಿರಿದಾದ ಪಟ್ಟಿಯೊಂದೇ ಇದರಲ್ಲಿನ ತಗ್ಗು ಪ್ರದೇಶ. ಸುಮಾರು ಮುನ್ನೂರ ಇಪ್ಪತ್ತು ಕಿ.ಮೀ. ವರೆಗೆ ವಿಸ್ತರಿಸಿಕೊಂಡಿರುವ ಈ ಕಡಲ ತೀರ ಬಹುಮಟ್ಟಿಗೆ ನೇರವಾಗಿದೆ. ಕಡಲತೀರದಿಂದ ಸುಮಾರು ೬೦-೮೦ ಕಿ.ಮೀ. ವರೆಗಿನ ಖಂಡಾವರಣ ವಲಯದಲ್ಲಿ ಸಮುದ್ರದ ಆಳ ೧೮೦ ಮೀಟರುಗಳನ್ನು ಮೀರುವುದಿಲ್ಲ. ಈ ಪಶ್ಚಿಮ ಅಂಚಿನಿಂದ ಕಡಿದಾಗಿ ಮೇಲೇರುವ ಪಶ್ಚಿಮ ಘಟ್ಟಗಳು ಪೂರ್ವ ಘಟ್ಟಗಳಿಗಿಂತಲೂ ಹೆಚ್ಚು ಎತ್ತರವಾಗಿವೆ. ಈ ಕಡಿದಾದ ಬೆಟ್ಟಗಳಿಂದ ಕೆಳಗಿಳಿದು ಪಶ್ಚಿಮದ ಕಡೆ ಹರಿದು ಸಮುದ್ರವನ್ನು ಸೇರುವ ನದಿಗಳು ಮತ್ತು ಝರಿಗಳು ಕರ್ನಾಟಕದ ಮೀನುಗಾರಿಕೆಗೆ ಪೋಷಕವಾಗಿವೆ.

ಕರ್ನಾಟಕದ ಮೇಲ್ಮೈಯ ಒಂದು ವೈಶಿಷ್ಟ್ಯವೆಂದರೆ ಅದು ಕರಾವಳಿ, ಮಲೆನಾಡು ಮತ್ತು ಬಯಲುಸೀಮೆಗಳನ್ನೆಲ್ಲ ಒಳಗೊಂಡಿರುವುದು. ಇದು ವೈವಿಧ್ಯಮಯವಾಗಿರುವ ಕರ್ನಾಟಕದ ಪ್ರಾಕೃತಿಕ ಸನ್ನಿವೇಶದ ಸ್ಥೂಲ ವಿಂಗಡಣೆ ಮಾತ್ರ. ಪ್ರಾಕೃತಿಕವಾಗಿ ಭಿನ್ನವಾಗಿರುವ ಕರಾವಳಿಯ ಉತ್ತರ ಹಾಗೂ ದಕ್ಷಿಣ ಭಾಗಗಳನ್ನು, ಕರ್ನಾಟಕದ ಮಧ್ಯಭಾಗದಲ್ಲಿ ೧೫° ಉತ್ತರ ಅಕ್ಷಾಂಶದ ಸಮೀಪದಲ್ಲಿ ಹರಿಯುವ ತುಂಗಭದ್ರಾ ನದಿಯಿಂದ ಪ್ರತ್ಯೇಕಿತವಾಗಿರುವ ಬಯಲು ಸೀಮೆಯ ಉತ್ತರ-ದಕ್ಷಿಣ ಪಾರ್ಶ್ವಗಳನ್ನೂ, ಎತ್ತರದಲ್ಲಿ ಪೂರ್ವಘಟ್ಟಗಳನ್ನು ಮೀರಿನಿಲ್ಲುವ ಪಶ್ಚಿಮ ಘಟ್ಟಗಳನ್ನೂ ದೃಷ್ಟಿಯಲ್ಲಿರಿಸಿಕೊಂಡು ಸೂಕ್ಷ್ಮವಾಗಿ ವಿಭಜಿಸುವುದಾದರೆ, ಕರ್ನಾಟಕದ ಪ್ರಾಕೃತಿಕ ಸನ್ನಿವೇಶವನ್ನು ಉತ್ತರ ಕರಾವಳಿ, ದಕ್ಷಿಣ ಕರಾವಳಿ, ಪಶ್ಚಿಮ ಘಟ್ಟ ಅಥವಾ ಸಹ್ಯಾದ್ರಿಶ್ರೇಣಿ, ಪೂರ್ವ ಘಟ್ಟ, ಉತ್ತರ ಪ್ರಸ್ಥಭೂಮಿ, ದಕ್ಷಿಣ ಪ್ರಸ್ಥಭೂಮಿ ಹಾಗೂ ಮಲೆನಾಡು ಎಂದು ವರ್ಗೀಕರಿಸಬಹುದು. ತ್ರಿಕೋಣಾಕಾರದಲ್ಲಿ ಇರುವ ಕರ್ನಾಟಕದ ಪ್ರಸ್ಥಭೂಮಿಯ ಪಾದ ಉತ್ತರದಲ್ಲಿಯೂ, ಶಿರ ದಕ್ಷಿಣದಲ್ಲಿಯೂ ಇದೆ. ಇದು ದಖಿನ್ ಪ್ರಸ್ಥಭೂಮಿಯ ಬಹುಭಾಗದ ವರೆಗೆ ವ್ಯಾಪಿಸಿ ಕೊಂಡಿದೆ. ಈ ಪ್ರಸ್ಥಭೂಮಿಯ ಅತ್ಯಂತ ಎತ್ತರದ ಭಾಗ ಇರುವುದೂ ಇಲ್ಲಿಯೇ. ವಾಸ್ತವವಾಗಿ, ಪರ್ಯಾಯದ್ವೀಪೀಯ ಭಾರತದಲ್ಲಿ ಕರ್ನಾಟಕವೇ ತುಂಬ ಎತ್ತರದಲ್ಲಿರುವ ಭೂಭಾಗ. ಕರ್ನಾಟಕ ಶಬ್ದದ ವ್ಯುತ್ಪತ್ತಿಯ ಸಂದರ್ಭದಲ್ಲಿ "ಕರುನಾಡು"–ಅಂದರೆ ಎತ್ತರವಾದ ಪ್ರದೇಶ – ಎಂಬ ಅರ್ಥದ ಶಬ್ದಗಳನ್ನು ಸೂಚಿಸುವುದಕ್ಕೆ ಈ ಭೌಗೋಲಿಕ ಸನ್ನಿವೇಶ ಸಮರ್ಥನೆಯನ್ನು ಕೊಡುತ್ತದೆಂಬುದನ್ನೂ ಇಲ್ಲಿ ಗಮನಿಸಬಹುದು. ಈ ಪ್ರಸ್ಥಭೂಮಿ ಸಮುದ್ರಮಟ್ಟಕ್ಕಿಂತ ಸಾಮಾನ್ಯವಾಗಿ ೬೦೦ ಮೀಟರುಗಳಿಗಿಂತಲೂ ಹೆಚ್ಚು ಎತ್ತರವಾಗಿದ್ದು, ಇಡೀ ದಕ್ಷಿಣ ಭಾರತಕ್ಕೇ ಛಾವಣಿಯಂತೆ ಇದೆ.

ಪಶ್ಚಿಮ ಘಟ್ಟಗಳು ಅಥವಾ ಸಹ್ಯಾದ್ರಿಶ್ರೇಣಿ ಉತ್ತರ–ದಕ್ಷಿಣವಾಗಿ ವಿಸ್ತರಿಸಿಕೊಂಡಿದ್ದು, ದಕ್ಷಿಣದತ್ತ ಸಾಗುತ್ತ

ಬಂದಂತೆ ಹೆಚ್ಚು ಹೆಚ್ಚು ಎತ್ತರವಾಗುತ್ತ ಬಂದು, ಕೊನೆಗೆ ನೀಲಗಿರಿಯೊಂದಿಗೆ ಬೆರೆಯುವುದನ್ನು ಕಾಣಬಹುದಾಗಿದೆ. ರಾಜ್ಯದ ಸ್ಥಳವಿನ್ಯಾಸ ಮತ್ತು ಮೇಲ್ಮೈ ರಚನೆಯ ಮೇಲೆ ಇವೆಲ್ಲ ತುಂಬ ಪ್ರಭಾವ ಬೀರಿವೆ. ಸಹ್ಯಾದ್ರಿಯ ನೆತ್ತಿಯ ಮೇಲೆ ಶಿಲೆಗಳು ಶತಶತಮಾನಗಳಿಂದ ಮಳೆ ಗಾಳಿ ಮೊದಲಾದ ಪ್ರಾಕೃತಿಕ ಜಂಜಡಗಳನ್ನೆದುರಿಸಿ ನಿಂತಿವೆ. ಆದರೆ, ಮೃದುಶಿಲೆಗಳೇನೋ ಕೊರೆದುಹೋಗಿ, ಅಲ್ಲಲ್ಲಿ ಸೀಳುಗಳು ಸಂಭವಿಸಿರುವುದನ್ನು ಕಾಣಬಹುದಾಗಿದೆ. ಈ ಶ್ರೇಣಿಯಲ್ಲಿ ಕರ್ನಾಟಕದ ಅತ್ಯುನ್ನತ ಶಿಖರಗಳೂ ಕಂಡುಬರುತ್ತವೆ. ಇದರ ಒಂದು ಶಾಖೆಯಾದ ಚಂದ್ರದ್ರೋಣ ಪರ್ವತ ಅಥವಾ ಬಾಬಾ ಬುಡನ್‌ಗಿರಿಯಲ್ಲಿರುವ ಮುಳ್ಳಯ್ಯನಗಿರಿ ಶಿಖರದ ಎತ್ತರ ಸು. ೧೯೨೪.೮ ಮೀಟರುಗಳು, ಕುದುರೆ ಮುಖದ ಎತ್ತರ ಸು. ೧೮೯೨ ಮೀಟರುಗಳು, ಕೊಡಚಾದ್ರಿ (೧೩೪೪ ಮೀ.), ಪುಷ್ಪಗಿರಿ (೧,೭೧೩ ಮೀ). ಇಂಥ ಅನೇಕ ಉನ್ನತ ಶಿಖರಗಳು ಈ ಶೇಣಿಯಲ್ಲಿವೆ. ಸಹ್ಯಾದ್ರಿಯ ಪೂರ್ವಭಾಗಕ್ಕಿಂತ ಪಶ್ಚಿಮ ಭಾಗ ಹೆಚ್ಚು ಕಡಿದು ಹಾಗೂ ಅಸ್ತವ್ಯಸ್ತವಾಗಿರುವಂಥದು. ಅಡ್ಡವಾಗಿ ಹಬ್ಬಿಕೊಂಡಿರುವ ಬೆಟ್ಟ ಸಾಲುಗಳ ನಡುವೆ ಇರುವ ಕಣಿವೆಮಾರ್ಗಗಳು ಸಂಪರ್ಕಮಾಧ್ಯಮಗಳಾಗಿ ಪರಿಣಮಿಸಿವೆ. ಇವುಗಳಲ್ಲಿ ಉತ್ತರ ಕರ್ನಾಟಕದಲ್ಲಿರುವ ಕೊಲ್ಲೂರ್‌ಘಾಟ್, ಶಿವಮೊಗ್ಗ – ಉಡುಪಿಗಳ ನಡುವೆ ಬರುವ ಆಗುಂಬೆ ಘಾಟಿ ಹಾಗೂ ಚಿಕ್ಕಮಗಳೂರು–ಮಂಗಳೂರು ನಡುವೆ ಬರುವ ಚಾರ್ಮಾಡಿ ಘಾಟಿ ಮುಖ್ಯವಾದವು.

ಈಶಾನ್ಯ ದಿಕ್ಕಿನಿಂದ ನೈಋತ್ಯಾಭಿಮುಖವಾಗಿ ಸಾಗುವ ಪೂರ್ವಘಟ್ಟಗಳು ನೀಲಗಿರಿಯಲ್ಲಿ ಪಶ್ಚಿಮಘಟ್ಟಗಳೊಂದಿಗೆ ಕೂಡುತ್ತವೆ. ಕೋಲಾರದ ಸಮೀಪದಲ್ಲಿ ಮಾತ್ರವೇ ಇವು ಎದ್ದು ಕಾಣುವಂತೆ ನಿಲ್ಲುವುದು. ಹಂದಿಯ ಬೆನ್ನಿನಂಥ ಉದ್ದ ಏಣಿನ ಬಂಡೆಗಲ್ಲುಗಳು ಈ ಶ್ರೇಣಿಯಲ್ಲಿ ಕಾಣಬರುವ ವೈಶಿಷ್ಟ್ಯ. ಪಶ್ಚಿಮದಿಂದ ಪೂರ್ವದ ಕಡೆಗೆ ಸಾಗುತ್ತ ಬಂದಂತೆ ಪ್ರಸ್ಥಭೂಮಿ ಇಳಿಜಾರಾಗತೊಡಗುತ್ತದೆ. ಈ ಕಾರಣದಿಂದಾಗಿಯೂ ಇವು ಸಹ್ಯಾದ್ರಿ ಶ್ರೇಣಿಗಿಂತ ತಗ್ಗಾಗಿ ಕಾಣಿಸುತ್ತವೆ.

ಪೂರ್ವ ಮತ್ತು ಪಶ್ಚಿಮ ಘಟ್ಟಗಳ ನಡುವಣ ಪ್ರಸ್ಥಭೂಮಿಯನ್ನು ಬಯಲು ಸೀಮೆ ಎಂದು ಹೆಸರಿಸಲಾಗಿದೆ. ತುಂಗಭದ್ರೆಯ ಉತ್ತರಕ್ಕಿರುವ ಭೂಪ್ರದೇಶ ಕಪ್ಪುಮಣ್ಣಿನಿಂದ ಕೂಡಿದೆ. ಒಟ್ಟಿನಲ್ಲಿ, ಅಲ್ಲಲ್ಲಿ ಮರಗಳನ್ನೊಳಗೊಂಡ ದಿಣ್ಣೆಯ ನೆಲಗಳಿರುವ ಸಮತಟ್ಟಾದ ಭೂಮಿಯೆಂಬಂತೆ ಇದು ಕಾಣುತ್ತದೆಯಾದರೂ, ಸ್ವಲ್ಪಮಟ್ಟಿನ ಭೌತಿಕ ಭಿನ್ನತೆಯನ್ನು ಗುರುತಿಸಬಹುದಾಗಿದೆ. ಉತ್ತರದ ಬಯಲುಸೀಮೆಯ ಹೆಚ್ಚು ಭಾಗ ಸಮುದ್ರಮಟ್ಟದಿಂದ ಸುಮಾರು ೬೧೦ ಮೀಟರುಗಳಷ್ಟು ಎತ್ತರದಲ್ಲಿದೆಯಾದರೂ ಪೂರ್ವ ಭಾಗದ ಕೆಲವು ಘಟ್ಟಗಳು ಸುಮಾರು ೩೬೬ರಿಂದ ೩೯೬ ಮೀಟರುಗಳಷ್ಟು ಕೆಳಸ್ತರದಲ್ಲಿರುವುದನ್ನು ಕಾಣಬಹುದಾಗಿದೆ. ಬೋಳು ಬೆಟ್ಟ ಸಾಲುಗಳೂ, ವಿಶಾಲವಾದ ಕಣಿವೆಗಳೂ, ನದಿಗಳೂ ಈ ಬಯಲು ಸೀಮೆಯನ್ನು ಅಲ್ಲಲ್ಲಿ ಬೇರ್ಪಡಿಸಿರುವುದುಂಟು. ದಕ್ಷಿಣಭಾಗದ ಮೈದಾನ ಇನ್ನೂ ಹೆಚ್ಚು ಎತ್ತರದಲ್ಲಿದ್ದು ೯೧೫ರಿಂದ ೯೭೫ ಮೀಟರುಗಳಷ್ಟು ಎತ್ತರವನ್ನು ತಲುಪುವುದೂ ಉಂಟು. ಜೊತೆಗೆ, ಈ ಭೂಭಾಗ ಹೆಚ್ಚಿನ ವೈವಿಧ್ಯವನ್ನು ತೋರುತ್ತದೆ. ಇಂಗ್ಲಿಷ್ ವರ್ಣಮಾಲೆಯ "ಹೆಚ್" ಅಕ್ಷರವನ್ನು ಹೋಲುವ ಉಬ್ಬು ನೆಲ ಇಲ್ಲಿಯ ಭೂಭಾಗದ ಸಾಮಾನ್ಯ ಲಕ್ಷಣವೆನ್ನಬಹುದು. ಉತ್ತರಭಾಗದಲ್ಲಿ ಕಾಣದೊರೆಯುವ ನಯವಾದ ಶಿಲಪದರ ಧಾರವಾಡಶಿಲೆ ಹಾಗೂ ಮರಳುಕಲ್ಲು, ಸುಣ್ಣಕಲ್ಲು ಹಾಗೂ ಬುರುದಿ ಕಲ್ಲುಗಳಿಗೆ ಹೋಲಿಸಿದರೆ, ದಕ್ಷಿಣದ ಮೈದಾನದ ತಳ ಧಾರವಾಡ ಶಿಲೆ ಮತ್ತು ಗ್ರಾನೈಟ್ ಮಾದರಿಯ ಕಲ್ಲುಗಳನ್ನು ಒಳಗೊಂಡಿರುವುದೇ ಈ ವೈಲಕ್ಷಣ್ಯಕ್ಕೆ ಕಾರಣವೆಂದು ಹೇಳಲಾಗಿದೆ. ಈ ಆಕೃತಿಯ (ಹೆಚ್) ಪಶ್ಚಿಮ ಪಾದ ಮಲೆನಾಡಿನ ಪೂರ್ವದ ಅಂಚಿನಲ್ಲಿ ನೆಲೆಗೊಂಡಿದ್ದರೆ ಪೂರ್ವದ ಪಾದ ನೆಲೆಗೊಂಡಿರುವುದು ಬಿಳಿಗಿರಿರಂಗನ ಬೆಟ್ಟದಿಂದ ಮಧುಗಿರಿ–ಪಾವಗಡಗಳವರೆಗೆ ಹಬ್ಬಿಕೊಂಡಿರುವ ಹಾಗೂ ರಾಮನಗರದ ಮೂಲಕ ಹಾದು ಹೋಗುವ ಗ್ರಾನೈಟ್ ಶಿಲಾಶ್ರೇಣಿಯಲ್ಲಿ. ಅಲ್ಲಿಂದ ಇದು ಮುಂದೆ ಸಾಗಿ ಸಂಡೂರಿನ ಕಬ್ಬಿಣದ ಅದುರಿನ ಬೆಟ್ಟಗಳ ಮೇಲೆ ಹಾದುಹೋಗುತ್ತದೆ. ಈ ಭೂಭಾಗದ ಎತ್ತರ ೯೧೫ ಮೀಟರುಗಳಿಂದ (ಮಲೆನಾಡಿನಲ್ಲಿ) ಹಿಡಿದು ೧೭೩೭ ಮೀಟರುಗಳವರೆಗೆ (ಬಿಳಿಗಿರಿ ರಂಗನಬೆಟ್ಟ) ಹೆಚ್ಚು ಕಡಿಮೆಯಾಗುವುದುಂಟು. "H" ಆಕೃತಿಯ ನಡುವಣ ಅಡ್ಡಪಟ್ಟಿ ಅಲ್ಲಲ್ಲಿ ಕತ್ತರಿಸಿದಂತೆಯೂ ತೋರುತ್ತದೆ. ನದೀಕಣಿವೆ ಪ್ರದೇಶಗಳು ಅಲ್ಲಲ್ಲಿ ಏರ್ಪಟ್ಟಿರುವುದೇ ಇದಕ್ಕೆ ಕಾರಣ. ಈ ಆಕೃತಿಯ ಕೆಳ ಅರ್ಧದ ಆವರಣದಲ್ಲಿ ಕಾವೇರಿ ಕಣಿವೆಯ ಮಧ್ಯಭಾಗವೂ ಉತ್ತರಾರ್ಧದಲ್ಲಿ ತುಂಗಭದ್ರಾ ಕಣಿವೆ ಭಾಗವೂ ಕಾಣಬರುತ್ತವೆಯಾದರೂ, ಈ ನಡುಪಟ್ಟಿಯನ್ನೇ ಜಲವಿಭಾಜಕ ರೇಖೆಯೆಂದೇನೂ ಭಾವಿಸಲಾಗುವುದಿಲ್ಲ. ಬಿಳಿಗಿರಿ ರಂಗನ ಬೆಟ್ಟದ ಶ್ರೇಣಿಗಳೂ ದಕ್ಷಿಣಾಭಿಮುಖವಾಗಿ ಸಾಗಿ ನೀಲಗಿರಿ ಶ್ರೇಣಿಯನ್ನು ಸೇರುತ್ತವೆ.

ರಾಮನಗರ–ಹೊಳೆನರಸೀಪುರ ನಡುಪಟ್ಟಿಯ ಉತ್ತರಕ್ಕೆ ಇರುವ ಪ್ರಸ್ಥಭೂಮಿಯ ಸರಾಸರಿ ಎತ್ತರ ಸು. ೯೧೫ ಮೀ. ಗಳಾಗಿದ್ದು, ಈ ಭೂಭಾಗದಲ್ಲಿ ಧಾರವಾಡ ಸರಣಿಯ ಶಿಲೆಗಳಿಂದ ಕೂಡಿದ ಹಾಗೂ ಅಲ್ಲಲ್ಲಿ ಗ್ರಾನೈಟ್ ಭೂಯಿಷ್ಠವಾಗಿರುವ ಸಮಾನಾಂತರ ಶ್ರೇಣಿಗಳು ಕಾಣದೊರೆಯುತ್ತವೆ. ಇವು ಅಲ್ಲಲ್ಲಿ ಕಡಿದಿರುವುದೂ ಉಂಟು. ಒಂದು ಶ್ರೇಣಿ ಚಿಕ್ಕನಾಯಕನ ಹಳ್ಳಿಯ ಬಳಿಯಿಂದ ದಾವಣಗೆರೆಯನ್ನು ಹಾಯ್ದು ಉತ್ತರದ ಮೈದಾನ ಪ್ರದೇಶದಲ್ಲಿನ ಮಂಡರಗಿ ಬಳಿಯಿರುವ ಡಂಬಳ ಬೆಟ್ಟಗಳ ವರೆಗೆ ವ್ಯಾಪಿಸಿಕೊಂಡಿದೆ. ಇನ್ನೊಂದು ಶ್ರೇಣಿ ಹೆಚ್ಚು ಸಂಕೀರ್ಣವಾಗಿದ್ದು, ಕೃಷ್ಣರಾಜಪೇಟೆಯಿಂದ ವಾಯುವ್ಯ ದಿಕ್ಕಿನಲ್ಲಿ ಸಾಗಿ ಹೊನ್ನಾಳಿಯ ಆಚೆಯವರೆಗೂ ವಿಸ್ತರಿಸಿಕೊಂಡಿದೆ. ಇವುಗಳ ನಡುವಣ ಭೂಭಾಗವನ್ನು ದಕ್ಷಿಣ ಮೈದಾನದ ಉಪಪ್ರದೇಶವೆಂದು ಕರೆಯಲಾಗಿದೆ. ಇದರ ಪೂರ್ವಭಾಗ ಸಮತಟ್ಟಾಗಿದ್ದು, ಇದರ ಸರಾಸರಿ ಎತ್ತರ ೯೧೫ ಮೀಟರುಗಳಷ್ಟಾಗಿರುತ್ತದೆ. ಈ ನೆಲದ ಉತ್ತರದ ಏರು ಹೆಚ್ಚು ಎತ್ತರವಾಗಿದ್ದು. ನಂದಿಬೆಟ್ಟದಲ್ಲಿ ೧೪೭೭ ಮೀ. ಎತ್ತರವನ್ನು ತಲುಪುತ್ತದೆ. ಇಲ್ಲಿಂದ ಸುಮಾರು ೨೫ ಕಿ.ಮೀ. ವರೆಗೆ ಪಶ್ಚಿಮದತ್ತ ಸಾಗುವ ಬೆಟ್ಟಸಾಲು ಕುಳ್ಳಾಗಿದೆ. ನಂದಿಯ ಉತ್ತರ ಭೂಭಾಗವಂತೂ ಥಟ್ಟನೆ ಇಳಿಯುತ್ತಾ ಸಾಗಿ ಪೆನ್ನಾರ್ ನದಿಯ ಬಳಿ ಸುಮಾರು ಅರ್ಧದಷ್ಟು ಎತ್ತರವನ್ನು ಕಳೆದುಕೊಂಡಿದೆ. (ಸು. ೭೩೦ ಮೀ.) ಬಾಗೇಪಲ್ಲಿಯ ಪೂರ್ವದಿಂದ ಬಂಗಾರ ಪೇಟೆಯವರೆಗೆ ಇನ್ನೊಂದು ಶ್ರೇಣಿ ವಿಸ್ತರಿಸಿಕೊಂಡಿದೆ.

ದಕ್ಷಿಣದ ಮೈದಾನ ಹಳೆಯ ಮೈಸೂರು ರಾಜ್ಯದ ಒಂಬತ್ತು ಜಿಲ್ಲೆಗಳನ್ನೊಳಗೊಂಡಿರುವ ಭೂಭಾಗ. ಈ ಭೂಭಾಗದ ಉತ್ತರದ ಪಾರ್ಶ್ವ ದಕ್ಷಿಣ ಪಾರ್ಶ್ವಕ್ಕಿಂತ ಹೆಚ್ಚು ಸಮತಲ ಪ್ರದೇಶವನ್ನೊಳಗೊಂಡಿದ್ದು, ಸುಮಾರು ೬೯೦ ಮೀ. ಎತ್ತರದಲ್ಲಿದೆ. ಪಶ್ಚಿಮ ಹಾಗೂ ದಕ್ಷಿಣದ ಕೆಲವೊಂದು ಭಾಗಗಳು ಸರಾಸರಿ ಸುಮಾರು ೧,೦೮೦ ಮೀಟರುಗಳಷ್ಟು ಎತ್ತರದಲ್ಲಿದ್ದು ಕೆಲವೆಡೆಗಳಲ್ಲಿ ೧,೮೦೦ ಮೀಟರುಗಳಷ್ಟು ಎತ್ತರಕ್ಕೆ ಏರುವುದೂ ಉಂಟು. ಉತ್ತರದ ಮೈದಾನಕ್ಕೆ ತದ್ವಿ

ಮುದ್ದವಾಗಿ ದಕ್ಷಿಣದ ಮೈದಾನ ಕೆಂಪು ಮಣ್ಣಿನಿಂದ ಕೂಡಿರುವುದು ಎದ್ದು ಕಾಣುವ ಒಂದು ಸಂಗತಿ.

ರಾಜ್ಯದ ಪಶ್ಚಿಮದ ಅಂಚಿನಲ್ಲಿ, ದಕ್ಷಿಣದ ತುದಿಯಿಂದ ಉತ್ತರದ ಕಾರವಾರದ ಸುಮಾರು ೩೨೦ ಕಿ.ಮೀ. ಗಳಷ್ಟು ದೂರದ ವರೆಗೆ ವಿಸ್ತರಿಸಿಕೊಂಡಿರುವ ಭೂಭಾಗವನ್ನು ಕರಾವಳಿ ಪ್ರದೇಶವೆನ್ನಲಾಗಿದೆ. ಇದರ ಅಗಲ ಸುಮಾರು ೧೦ ರಿಂದ ೬೪ ಕಿ.ಮೀ. ವರೆಗೆ ವ್ಯತ್ಯಾಸಗೊಳ್ಳುತ್ತ ಸಾಗುತ್ತದೆ. ಕೆಲವೆಡೆಗಳಲ್ಲಿ ಮಾತ್ರ ಇದರ ಎತ್ತರ ೧೨೦ ಮೀಟರುಗಳನ್ನು ಮೀರುವುದುಂಟು. ಅಪ್ಪಳಿಸುವ ಅಲೆಗಳನ್ನೊಳಗೊಂಡಿರುವ ಕಡಲತೀರ, ತೆಂಗು-ಗೇರಿನ ತೋಟಗಳು ಹಾಗೂ ಹಸಿರು ಗದ್ದೆಗಳು ಮತ್ತು ಇವಕ್ಕೆಲ್ಲ ಹಿನ್ನೆಲೆಯಾಗಿ ಅರಣ್ಯಾವೃತವಾದ ಘಟ್ಟ ಪ್ರದೇಶ – ಇದು ಈ ಭೂಭಾಗದಲ್ಲಿ ಸಾಮಾನ್ಯವಾಗಿ ಕಾಣಬರುವ ದೃಶ್ಯ. ಬೈಂದೂರಿನಿಂದ ಉತ್ತರಕ್ಕೆ ಸಾಗಿದಂತೆ ಕಿರಿದಾಗುತ್ತ ಬರುವ ಈ ಭೂಭಾಗ ಬೈಂದೂರಿನಿಂದ ದಕ್ಷಿಣಕ್ಕೆ ಮಂಗಳೂರಿನತ್ತ ಸಾಗುತ್ತ ಬಂದಂತೆ ಅಗಲವಾಗುತ್ತಾ ಹೋಗುತ್ತದೆ. ಲ್ಯಾಟರೈಟ್ ಸಮಾವಿಷ್ಟವಾಗಿರುವ ಈ ಭೂಭಾಗದಲ್ಲಿ ಕೆಲವು ಕಣಿವೆಗಳೂ, ಅಳುವೆಗಳೂ ಏರ್ಪಟ್ಟಿವೆ. ಕಾರವಾರದಿಂದ ಪೂರ್ವ ಹಾಗೂ ದಕ್ಷಿಣಾಭಿಮುಖವಾಗಿ ಸಾಗುತ್ತ ಬಂದಂತೆ ಪ್ರಸ್ಥಭೂಮಿ ಎದುರಾಗಿ ಸು. ೬೧೦ ಮೀಟರುಗಳಷ್ಟು ಎತ್ತರದ ಭೂಭಾಗವನ್ನು ಸೇರುತ್ತದೆ. ಇತ್ತ ಉಡುಪಿಯಿಂದ ಪುತ್ತೂರಿನ ವರೆಗೆ ಮೇಲ್ಮುಖವಾಗಿ ಸಾಗುವ ಭೂಭಾಗದಲ್ಲಿ ಕೆಲವೆಡೆ ಸು. ೩೦೫ ಮೀ. ಗಳಷ್ಟು ಎತ್ತರವನ್ನೂ ಮೀರುವ ಗಿರಿಶ್ರೇಣಿಗಳನ್ನು ಕಾಣಬಹುದು. ಹೀಗಾಗಿ, ಕರಾವಳಿಯ ಈ ಭೂಭಾಗದಲ್ಲಿ ವೈವಿಧ್ಯವೂ ಕಾಣದೊರೆಯುತ್ತದೆ. ಇದರಿಂದಾಗಿ, ಕೆಲವು ಭಾಗಗಳನ್ನು ಕರಾವಳಿಯ ಮಲೆನಾಡೆಂದೂ ಕರೆಯಲಾಗಿದೆ.

ಪಶ್ಚಿಮಘಟ್ಟಗಳ ಏಣಿನಿಂದ ಪೂರ್ವಕ್ಕೆ ಮೈದಾನದ ವರೆಗೆ ಚಾಚಿಕೊಂಡಿರುವ ಅರಣ್ಯಾವೃತ ಪ್ರದೇಶವೇ ಮಲೆನಾಡು. ವಾಯುವ್ಯೋತ್ತರದಿಂದ ದಕ್ಷಿಣಾಗ್ನೇಯದ ವರೆಗೆ ಒಮ್ಮೆ ಅಖಂಡ ಪಟ್ಟಿಯಂತಿದ್ದ ಅರಣ್ಯಾವೃತ ಪ್ರದೇಶ ಇದಾಗಿತ್ತು. ಈಗಂತೂ ಅರಣ್ಯ ಮಾಯವಾಗುತ್ತ ಬಂದು, ಪಟ್ಟಿ ಮಾತ್ರ ಎದ್ದು ಕಾಣುವಂತೆ ಆಗುತ್ತಿದೆ. ಇದರ ಅಗಲ ಒಂದೇ ಸಮನಾಗಿಲ್ಲ. ಸಕಲೇಶಪುರದ ಬಳಿ ಕೇವಲ ಸುಮಾರು ಎರಡು ಕಿಮೀ. ಗಳಷ್ಟು ಅಗಲವಾಗಿರುವ ಈ ಭೂಭಾಗ ಕೆಲವೆಡೆಗಳಲ್ಲಿ ೧೦೦ ಕಿಮೀ. ಗಳಷ್ಟು ವ್ಯಾಪ್ತಿಯನ್ನು ಪಡೆಯುವುದುಂಟು. ಈ ಭೂಭಾಗದ ಕೆಲವೆಡೆಗಳು ನೆರೆಯ ಪ್ರಸ್ಥಭೂಮಿಯಂತೆಯೇ ಇದ್ದು ಹೆಚ್ಚು ಎತ್ತರವಾಗಿಯೇನೂ ಇಲ್ಲವಾದರೂ, ದಕ್ಷಿಣದ ಭಾಗ ೭೩೦ರಿಂದ ೮೫೦ ಮೀಟರುಗಳಷ್ಟು ಎತ್ತರವನ್ನು ಪಡೆದುಕೊಳ್ಳುತ್ತ ಪಶ್ಚಿಮದತ್ತ ಸಾಗಿದಂತೆ ಇನ್ನೂ ಹೆಚ್ಚಿನ ಔನ್ನತ್ಯವನ್ನು ಸಾಧಿಸುತ್ತಾ, ಬಾಬಾಬುಡನ್ ಗಿರಿ ಶ್ರೇಣಿಯಲ್ಲಿ ೧,೩೫೦ ರಿಂದ ೧,೮೯೦ ಮೀಟರುಗಳ ವರೆಗೆ ವ್ಯತ್ಯಾಸವನ್ನು ಮೆರೆಯುತ್ತದೆ. ಮುಂದೆ ಕರಾವಳಿಯತ್ತ ಕಡಿದಾಗಿ ಇಳಿಯುತ್ತಾ ಸಾಗುತ್ತದೆ.

### ವಾಯುಗುಣ

ಕರ್ನಾಟಕದಲ್ಲಿ ಬಹುಭಾಗ ಸಮುದ್ರಮಟ್ಟಕ್ಕಿಂತ ಹೆಚ್ಚಿನ ಎತ್ತರದಲ್ಲಿರುವುದರಿಂದ ವಾಯುಗುಣದ ವೈಪರೀತ್ಯಗಳೇನೂ ಅಷ್ಟಾಗಿ ಕಂಡುಬರುವುದಿಲ್ಲ. ಸಾಮಾನ್ಯವಾಗಿ ಎಲ್ಲಿಯೂ ಕನಿಷ್ಠ ಮತ್ತು ಗರಿಷ್ಠ ಉಷ್ಣತೆಗಳ ನಡುವಣ ಅಂತರ ಅತಿರೇಕದ ಪ್ರಮಾಣಗಳನ್ನು ತೋರುವುದಿಲ್ಲ. ಆದರೆ, ಕೆಲವೆಡೆಗಳಲ್ಲಿ ಮಾತ್ರ ವೈಪರೀತ್ಯಗಳು ಕಂಡುಬರುತ್ತವೆ. ಪ್ರಸ್ಥಭೂಮಿಯ ನಡುಗಡ್ಡೆಯಲ್ಲಿ ಹಾಗೂ ಹಾಸನ, ಕೊಡಗು, ಬೆಂಗಳೂರು, ಧಾರವಾಡ ಮತ್ತು ಬೀದರ್ ಜಿಲ್ಲೆಗಳಲ್ಲಿ ಸಾಮಾನ್ಯವಾಗಿ ಹವಾಗುಣ ತಂಪಾಗಿರುತ್ತದೆ. ಇಲ್ಲಿಯೂ ಭಾರತ ಪರ್ಯಾಯ ದ್ವೀಪದ ವಿಲಕ್ಷಣ ಮನ್ಸೂನ ವಾಯುಗುಣದ ಲಕ್ಷಣಗಳೇ ಗೋಚರಿಸುತ್ತವೆ. ಅಂದರೆ, ನೈಋತ್ಯ ಹಾಗೂ ಈಶಾನ್ಯ ಮನ್ಸೂನ್ ಮಾರುತಗಳ ಪ್ರಭಾವ ಇಲ್ಲಿ ಕಂಡುಬರುತ್ತದೆ. ಇದರಿಂದಾಗಿ ಜೂನ್ ಮಧ್ಯಭಾಗದಿಂದ ಸೆಪ್ಟೆಂಬರ್ ವರೆಗೆ ನೈಋತ್ಯ ಮನ್ಸೂನ್ ಪ್ರೇರಿತವಾದ ಮಳೆಗಾಲ ಕಾಣಿಸಿಕೊಳ್ಳುತ್ತದೆ. ಈ ಅವಧಿಯಲ್ಲಿ ರಾಜ್ಯದ ಪಶ್ಚಿಮಭಾಗದಲ್ಲಿ ವಿಶೇಷವಾಗಿ ಮಳೆಯಾಗುತ್ತದೆ. ಪ್ರಮಾಣದ ದೃಷ್ಟಿಯಿಂದ ಈ ಅವಧಿಯಲ್ಲಿನ ಮಳೆ ಕಡಿಮೆಯಾದರೂ ಕೃಷಿಯ ದೃಷ್ಟಿಯಿಂದ ಉಪಯುಕ್ತವಾದುದು. ಡಿಸೆಂಬರ್ ಮಧ್ಯದಿಂದ ಫೆಬ್ರುವರಿಯ ವರೆಗೆ ಚಳಿಗಾಲ. ಈ ಅವಧಿಯಲ್ಲಿ ಮಾರುತಗಳು ಭೂಭಾಗದಿಂದ ಸಮುದ್ರದ ಕಡೆಗೆ ಬೀಸತೊಡಗುವುದರಿಂದ ರಾಜ್ಯದಲ್ಲಿ ಸಾಮಾನ್ಯವಾಗಿ ಮಳೆಯೇನೂ ಇರುವುದಿಲ್ಲ. ಉತ್ತರ ಕನ್ನಡ, ದಕ್ಷಿಣ ಕನ್ನಡ, ಬೆಳಗಾಂವಿ, ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳಲ್ಲಿ ಮಳೆ ಹೆಚ್ಚಾಗಿರುತ್ತದೆ. ಈ ಜಿಲ್ಲೆಗಳಲ್ಲಿನ ಸರಾಸರಿ ಮಳೆ ೩೭೫೦ ಮಿ.ಮೀ. ಶಿವಮೊಗ್ಗ ಜಿಲ್ಲೆಯ ಆಗುಂಬೆಯಂತೂ ದಕ್ಷಿಣದ ಚಿರಾಪುಂಜಿಯೆಂದು ಪ್ರಸಿದ್ಧವಾಗಿದ್ದು, ವಾರ್ಷಿಕವಾಗಿ ಸರಾಸರಿ ೭,೬೦೦ ಮಿ.ಮೀ. ಗಳಷ್ಟು ಮಳೆಯನ್ನು ಪಡೆಯುತ್ತದೆ. ಬೆಂಗಳೂರು, ಕೋಲಾರ, ಮಂಡ್ಯ ಮತ್ತು ಮೈಸೂರು ಜಿಲ್ಲೆಗಳಲ್ಲಿನ ಮಳೆಯ ಸರಾಸರಿ ಸು. ೭೫೦ ಮಿ.ಮೀ. ಗಳಷ್ಟಾದರೆ ಇತ್ತ ಬಿದರೆ, ಗುಲ್ಬರ್ಗ, ಬಿಜಾಪುರ ರಾಯಚೂರು, ಬಳ್ಳಾರಿ, ಚಿತ್ರದುರ್ಗ, ಧಾರವಾಡ ಮತ್ತು ತುಮಕೂರು ಜಿಲ್ಲೆಗಳಲ್ಲಿ ಈ ಸರಾಸರಿ ೬೫ ಮಿ.ಮೀ. ಗಳಿಗೆ ಕುಸಿಯುತ್ತದೆ. ಈಜಿಲ್ಲೆಗಳ ಕೆಲವು ಭಾಗಗಳಲ್ಲಿಯಂತೂ ವರ್ಷಕ್ಕೆ ಸು. ೩೨೫ ಮಿ.ಮೀ. ಗಳಿಗಿಂತಲೂ ಕಡಿಮೆ ಮಳೆಯಾಗುವುದುಂಟು. ವಾಸ್ತವವಾಗಿ ಇವು ಮಳೆನೆರಳು ಪ್ರದೇಶಗಳೆನಿಸಿಕೊಂಡಿವೆ.

ಕರಾವಳಿ ಪ್ರದೇಶದ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಹೆಚ್ಚಾಗಿ ಮಳೆಯಾಗುತ್ತದೆ. ಮೇ ತಿಂಗಳಲ್ಲಿ ಸ್ವಲ್ಪ ಮಟ್ಟಿನ ಮಳೆಯಾಗುವ ಸಾಧ್ಯತೆಗಳಿವೆಯಾದರೂ, ಜೂನ್‌ನಲ್ಲಿ ಆರಂಭಗೊಳ್ಳುವ ನಿಯತ ಮಳೆ ಜುಲೈ ತಿಂಗಳಿನಲ್ಲಿ ಪರಮಾವಧಿ ಮುಟ್ಟಿ, ಸೆಪ್ಟೆಂಬರ್-ಅಕ್ಟೊಬರ್ ಹೊತ್ತಿಗೆ ಕಡಿಮೆಯಾಗುತ್ತಾ ಹೋಗುತ್ತದೆ. ನವೆಂಬರಿನಿಂದ ಏಪ್ರಿಲ್ ವರೆಗಿನ ಅವಧಿಯಲ್ಲಿ ಒಣ ಹವೆ ಇರುತ್ತದೆ. ಇದನ್ನನುಸರಿಸಿ ಉಷ್ಣತೆಯಲ್ಲೂ ಏರಿಳಿತಗಳು ಉಂಟಾಗುತ್ತವೆ. ಒಟ್ಟಿನಲ್ಲಿ ಇವು ಉಷ್ಣತೆ ಹೆಚ್ಚಾಗಿರುವ ಪ್ರದೇಶಗಳೇ ಆಗಿದ್ದರೂ, ಉಷ್ಣತೆ ಸುಮಾರು ೭೩° ಫ್ಯಾ. ನಿಂದ ೮೯°ಫ್ಯಾ. ವರೆಗಿನ ವ್ಯತ್ಯಾಸವನ್ನು ತೋರುತ್ತದೆ. ಅಂದರೆ, ವಾಯುಗುಣದಲ್ಲಿ ಅತಿಯಾದ ವೈಪರೀತ್ಯಗಳೇನೂ ಇರುವುದಿಲ್ಲ. ದೈನಿಕ ಉಷ್ಣತೆಯ ಅಂತರವೂ ಅಷ್ಟೆ. ಜನವರಿ – ಫೆಬ್ರುವರಿ ತಿಂಗಳುಗಳಲ್ಲಿ ಉಷ್ಣತೆ ಕಡಿಮೆಯಾಗಿದ್ದು, ಮಾರ್ಚ್ – ಏಪ್ರಿಲ್ ಅವಧಿಯಲ್ಲಿ ಹೆಚ್ಚಾಗಿರುತ್ತದೆ.

ಮಳೆನಾಡು ಅತ್ಯಂತ ಹೆಚ್ಚಿನ ಮಳೆ ಪಡೆಯುವ ಪ್ರದೇಶವಾಗಿದ್ದು ಇಲ್ಲಿಯೂ ಜುಲೈ ತಿಂಗಳಿನಲ್ಲಿ ಅದರ ಪರಮಾವಧಿಯನ್ನು ಕಾಣುತ್ತೇವೆ. ಆದರೆ, ಮಳೆಯ ಪ್ರಮಾಣದ ದೃಷ್ಟಿಯಿಂದ ಘಟ್ಟಗಳ ಪೂರ್ವ ಮತ್ತು ಪಶ್ಚಿಮ ಬದಿಗಳನ್ನು ಹೋಲಿಸಿನೋಡಿದರೆ, ಅಂತರ ತುಂಬ ಹೆಚ್ಚಾಗಿರುವುದನ್ನೂ ಕಾಣುತ್ತೇವೆ. ಪಶ್ಚಿಮದಲ್ಲಿ ಸರಾಸರಿ ೨,೫೦೦ ಮಿ.ಮೀ.

ಗಳಷ್ಟು ಮಳೆಯಾದರೆ, ಪೂರ್ವದಲ್ಲಿ ೧,೦೦೦ ಮಿ.ಮೀ. ಗಳಷ್ಟು ಮಳೆಯಾಗುವ ಪ್ರದೇಶಗಳೂ ಇವೆ. ಜೂನ್ ತಿಂಗಳ ಮೊದಲ ವಾರದಿಂದ ಆಗಸ್ಟ್ ತಿಂಗಳ ಕೊನೆಯ ವರೆಗೆ ಕಾರ್ಮೋಡಗಳು ದಟ್ಟೈಸಿ ಗುಡುಗು–ಮಿಂಚುಗಳ ಅಬ್ಬರದಿಂದ ಕೂಡಿದ ಧಾರಾಕಾರವಾದ ಮಳೆಯನ್ನು ಕಾಣುತ್ತೇವೆ. ಅನಂತರ ಮಳೆ ಕಡಿಮೆಯಾಗುತ್ತಾ ಹೋಗುತ್ತದೆ. ಡಿಸೆಂಬರ್‌ನಿಂದ ಮಾರ್ಚಿಯ ಕೊನೆಯವರೆಗೆ ಮಳೆ ಇರುವುದೇ ಇಲ್ಲ.

ಉಷ್ಣತೆಯಲ್ಲಿ ಕರಾವಳಿ ಪ್ರದೇಶದಂತೆಯೇ ಇಲ್ಲಿಯೂ ಏರಿಳಿತಗಳು ಕಂಡುಬರುತ್ತವೆಯಾದರೂ, ಈ ಭೂಭಾಗ ಹೆಚ್ಚಿನ ಎತ್ತರದಲ್ಲಿರುವುದರಿಂದ ಅಲ್ಲಿಗಿಂತಲೂ ಇಲ್ಲಿ ತಂಪಾದ ವಾಯುಗುಣವಿರುತ್ತದೆ. ಅಂದರೆ, ಕರಾವಳಿ ಪ್ರದೇಶಕ್ಕಿಂತಲೂ ಸುಮಾರು ೧೦°–೧೧° ಫ್ಯಾ. ನಷ್ಟು ವ್ಯತ್ಯಾಸವಿರುತ್ತದೆ. ಕರಾವಳಿಯ ಅಂಚಿನ ಎತ್ತರದ ಪ್ರದೇಶವಾದ ಮಡಿಕೇರಿಯಂಥ ಜಾಗದಲ್ಲಿ ಇದನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಘಟ್ಟ ಪ್ರದೇಶದ' ತಳಭಾಗವನ್ನು ತಲುಪುತ್ತಿದ್ದಂತೆಯೇ ವಾಯುಗುಣದ ಈ ವ್ಯತ್ಯಾಸ ನಮ್ಮ ಅನುಭವಕ್ಕೆ ಬರತೊಡಗುತ್ತದೆ. ಮಳೆಯ ಪ್ರಮಾಣವನ್ನು ಅನುಸರಿಸಿ ಉಷ್ಣತೆಯಲ್ಲಿ ಏರಿಳಿತಗಳು ಉಂಟಾಗುವುದರಿಂದ, ಮಾರ್ಚ್‌ನಿಂದ ಮೇ ತಿಂಗಳ ವರೆಗಿನ ಅವಧಿ ಅಧಿಕ ಉಷ್ಣತೆಯದಾಗಿರುತ್ತದೆ. ಜೂನಿನಿಂದ ಆಗಸ್ಟ್ ತಿಂಗಳಿನ ವರೆಗಿನ ಅವಧಿಯಲ್ಲಿ ಉಷ್ಣತೆ ಕಡಿಮೆಯಾಗುತ್ತಾ ಹೋಗುತ್ತಿದೆ. ಮಲೆನಾಡಿನ ಉತ್ತರಭಾಗ, ದಕ್ಷಿಣಭಾಗಕ್ಕಿಂತಲೂ ಕಡಿಮೆ ಎತ್ತರದಲ್ಲಿರುವುದರಿಂದ ಅಲ್ಲಿಯ ಉಷ್ಣತೆ ದಕ್ಷಿಣ ಭಾಗಕ್ಕಿಂತ ಸ್ವಲ್ಪ ಹೆಚ್ಚಾಗಿಯೇ ಇರುತ್ತದೆ. ಮುಂಗಾರು ಅಲ್ಲಿ ಆರಂಭವಾಗುವುದೂ ಕೊಂಚ ತಡವಾಗಿಯೇ.

ಮಲೆನಾಡಿನ ಸೆರಗಿನಂತೆ ಬಹುಮಟ್ಟಿಗೆ ದಕ್ಷಿಣೋತ್ತರವಾಗಿ ಹರಡಿಕೊಂಡಿರುವ ಅರೆ ಮಲೆನಾಡು ಪ್ರದೇಶದಲ್ಲಿ ಮಳೆ ಮಧ್ಯಸ್ಥವಾಗಿರುತ್ತದೆ. ಇದರ ಉತ್ತರದ ಅಂಚಿನಲ್ಲಿ ಕಪ್ಪು ಎರೆಮಣ್ಣಿನಿಂದ ಕೂಡಿರುವ ಹಾಗೂ ಹುಬ್ಬಳ್ಳಿಯಿಂದ ಬೆಳಗಾವಿಯ ವರೆಗೆ ವಿಸ್ತರಿಸಿಕೊಂಡಿರುವ ಪ್ರಮುಖ ವಲಯವಿದೆ. ದಕ್ಷಿಣದ ಅಂಚಿನಲ್ಲಿ ಶಿವಮೊಗ್ಗದಿಂದ ದಕ್ಷಿಣಕ್ಕೆ ಇರುವ ವಲಯದಲ್ಲಿ ಮಲೆನಾಡಿನ ಪ್ರಭಾವ ಕಾಣಿಸಿಕೊಳ್ಳುತ್ತದೆ. ಅಂದರೆ ಉತ್ತರ ದಿಕ್ಕಿಗೆ ಸಾಗುತ್ತ ಬಂದಂತೆ ಮಳೆ ಕಡಿಮೆಯಾಗುತ್ತಾ ಹೋಗುತ್ತದೆ. ಇದರ ಪರಿಣಾಮವಾಗಿ ಉಷ್ಣತೆ ಹೆಚ್ಚುತ್ತ ಹೋಗುತ್ತದೆ. ಮಳೆ ಅನಿರ್ದಿಷ್ಟವಾಗುತ್ತಾ ಬರುವುದರಿಂದ ಕೃಷಿಕಾರ್ಯಕ್ಕೆ ಅಡ್ಡಿ ಆತಂಕಗಳು ಎದುರಾಗುತ್ತವೆ. ಆದರೆ ಇದನ್ನು ಸರಿದೂಗಿಸಲೋ ಎಂಬಂತೆ ಇಲ್ಲಿಯ ಮಣ್ಣಿನಲ್ಲಿ ಜಲಧಾರಣಶಕ್ತಿ ಹೆಚ್ಚಾಗಿದೆ. ಮಲೆನಾಡಿನ ಹಾಗೂ ಕರಾವಳಿ ಪ್ರದೇಶದ ಭೂಮಿಯಲ್ಲಿ ಮಳೆಬಂದು ಬಿಟ್ಟ ಕೆಲಹೊತ್ತಿನಲ್ಲಿಯೇ ನೀರು ಇಂಗಿಹೋಗಿ ಒಣನೆಲದಂತೆ ಭಾಸವಾಗುವ ಅನುಭವವಾದರೆ, ಇಲ್ಲಿಯ ನೆಲದಲ್ಲಿ ಮಳೆ ನಿಂತ ಬಹುಕಾಲದ ಮೇಲೂ ಕೆಸರಿನಿಂದ ಕೂಡಿದ ಒದ್ದೆಯಾದ ಭೂಮಿಯನ್ನು ಕಾಣಬಹುದು.

ಮೈದಾನದ ಪ್ರದೇಶದಲ್ಲಿಯೂ ಉತ್ತರಕ್ಕಿಂತ ದಕ್ಷಿಣ ಮೈದಾನದ ಭಾಗ ಹೆಚ್ಚು ಎತ್ತರದಲ್ಲಿರುವುದರಿಂದ, ಉತ್ತರಕ್ಕೆ ಹೋಲಿಸಿದರೆ ದಕ್ಷಿಣದಲ್ಲಿ ಮಳೆ ಹೆಚ್ಚು; ಹಾಗೂ ವಾತಾವರಣ ತಂಪಾಗಿರುತ್ತದೆ. ಒಟ್ಟಾರೆ ಮಳೆಯ ಪ್ರಮಾಣವೇನೋ ಕಡಿಮೆಯೇ. ಸ್ಥೂಲವಾಗಿ ಈ ಭಾಗವನ್ನು ೫೦೦ ಮಿ.ಮೀ. ಗಳಿಗಿಂತ ಹೆಚ್ಚಿನ ಮಳೆ ಬೀಳುವ ಹಾಗೂ ೫೦೦ ಮಿ.ಮೀ. ಗಳಿಗಿಂತ ಕಡಿಮೆ ಮಳೆಯಾಗುವ ಪ್ರದೇಶಗಳೆಂದು ವಿಂಗಡಿಸಬಹುದಾಗಿದೆ. ಉದಾಹರಣೆಗೆ ಚಿತ್ರದುರ್ಗ, ಕೋಲಾರ, ಮಂಡ್ಯ ಮತ್ತು ಮೈಸೂರು ಜಿಲ್ಲೆಯ ಕೆಲವು ಭಾಗಗಳು ೫೦೦ ಮಿ.ಮೀ. ಗಳಿಗಿಂತಲೂ ಕಡಿಮೆ ಮಳೆ ಪಡೆಯುವಂಥವು. ಇಲ್ಲಿಯ ಒಟ್ಟಾರೆ ಹಿತಕರವಾದ ಹವಾಗುಣ ಈ ಭಾಗದ ತೀವ್ರತರ ಅಭಿವೃದ್ಧಿಗೆ ಕಾರಣವಾಗಿದೆ. ಅದರಲ್ಲಿಯೂ ಸಮುದ್ರ ತೀರಕ್ಕೆ ಸುಮಾರು ೯೧೫ ಮೀ. ಗಳಷ್ಟು ಎತ್ತರದಲ್ಲಿರುವ ಬೆಂಗಳೂರಿನಂಥ ನಗರ ತನ್ನ ತಂಪಾದ ಹವಾಗುಣದಿಂದಾಗಿಯೇ ತೀವ್ರತರ ಅಭಿವೃದ್ಧಿಯನ್ನು ಸಾಧಿಸಿದೆ.

ಒಟ್ಟಿನಲ್ಲಿ ಹವಾಗುಣದ ದೃಷ್ಟಿಯಿಂದ ವಿಭಜಿಸುವುದಾದರೆ ಕರ್ನಾಟಕದಲ್ಲಿನ ಋತುಮಾನ ಸಾಮಾನ್ಯವಾಗಿ ಭಾರತದ ಋತುಮಾನವನ್ನೇ ಅನುಸರಿಸುತ್ತಿದೆಯಾದರೂ ಇತರ ಕೆಲವು ರಾಜ್ಯಗಳಲ್ಲಿ ಕಂಡುಬರುವಂತೆ ಇಲ್ಲಿ ವೈಪರೀತ್ಯಗಳೇನೂ ಕಾಣುವುದಿಲ್ಲ. ಅಂದರೆ, ಬಿಸಿಲಿನ ಪ್ರಖರತೆಯಿಂದಾಗಿ ಅಥವಾ ಚಳಿಯ ತೀವ್ರತೆಯಿಂದಾಗಿ ಪ್ರಾಣಹಾನಿಯಾಗುವಂಥ ನಿದರ್ಶನಗಳು ಇಲ್ಲಿ ಕಾಣದೊರೆಯುವುದಿಲ್ಲ. ಕರಾವಳಿಯ ಪ್ರದೇಶಗಳಲ್ಲಿ, ಗುಲ್ಬರ್ಗಾ, ರಾಯಚೂರು ಹಾಗೂ ಬೀದರ್ ಜಿಲ್ಲೆಗಳಲ್ಲಿ ಉಷ್ಣತೆ ಹೆಚ್ಚಿರಬಹುದಾದರೂ, ಅದು ಅತಿರೇಕದ ಹಂತವನ್ನೇನೂ ತಲುಪುವುದಿಲ್ಲ. ಮೂರು ಪ್ರಮುಖ ಋತುಗಳ ದೃಷ್ಟಿಯಿಂದ ನೋಡಿದರೆ, ಸ್ಥೂಲವಾಗಿ ಮಾರ್ಚಿನಿಂದ ಮೇವರೆಗಿನ ಮೂರು ತಿಂಗಳುಗಳು ಬೇಸಗೆಯ ಅವಧಿ; ಜೂನ್‌ನಿಂದ ಅಕ್ಟೋಬರ್‌ವರೆಗಿನ ಐದು ತಿಂಗಳುಗಳು ಮಳೆಗಾಲ ಅವಧಿ; ಹಾಗೂ ನವೆಂಬರದಿಂದ ಫೆಬ್ರುವರಿಯ ವರೆಗಿನ ನಾಲ್ಕು ತಿಂಗಳ ಅವಧಿ ಚಳಿಗಾಲ ಅವಧಿ.

## ಜಲ ಸಂಪತ್ತು

ಕರ್ನಾಟಕದ ಮೇಲ್ಮೈ ಲಕ್ಷಣಗಳಿಗೆ ಅನುಗುಣವಾಗಿ ಇಲ್ಲಿನ ನೀರಿನ ಹರಿವು ಬಹುಮಟ್ಟಿಗೆ ಪಶ್ಚಿಮದಿಂದ ಪೂರ್ವದ ಕಡೆಗೇ ಇದೆಯಾದರೂ, ಪಶ್ಚಿಮ ದಿಕ್ಕಿಗೆ ಹರಿಯುವ ನದೀಜಾಲವೂ ಇದೆ. ಒಟ್ಟಿನಲ್ಲಿ ಕರ್ನಾಟಕದ ಜಲಸಂಪತ್ತನ್ನು (೧) ಪಶ್ಚಿಮಕ್ಕೆ ಹರಿಯುವ ನದೀಜಾಲ, (೨) ಕೃಷ್ಣಾ ನದೀಜಾಲ, (೩) ಕಾವೇರಿ ನದೀಜಾಲ, (೪) ಗೋದಾವರಿ ನದೀಜಾಲ ಹಾಗೂ (೫) ಪಾಲಾರ್–ಪೆನ್ನಾರ್ ನದೀಜಾಲವೆಂದು ಐದು ಭಾಗಗಳಾಗಿ ವಿಂಗಡಿಸಬಹುದಾಗಿದೆ.

## ಪಶ್ಚಿಮ ನದೀಜಾಲ

ಪಶ್ಚಿಮ ಘಟ್ಟಗಳಲ್ಲಿ ಉಗಮಿಸಿ ಪಶ್ಚಿಮ ದಿಕ್ಕಿಗೇ ಹರಿಯುವ ನದಿಗಳ ಸಮೂಹವನ್ನು ಇದು ಸೂಚಿಸುತ್ತದೆ. ಘಟ್ಟ ಪ್ರದೇಶದಿಂದ ಒಮ್ಮೆಗೇ ಇಳಿದು ಜಲಪಾತಗಳನ್ನು ಸೃಷ್ಟಿಸಿ, ಕಿರಿದಾದ ಕರಾವಳಿಯ ಮೂಲಕ ಹಾದುಹೋಗುವಾಗ ಅಳಿವೆಗಳನ್ನು ನಿರ್ಮಿಸಿ, ಅಂತಿಮವಾಗಿ ಅರಬ್ಬೀ ಸಮುದ್ರವನ್ನು ಸೇರುವ ಈ ನದಿಗಳಿಂದ ಕರ್ನಾಟಕದ ಕೃಷಿಗೆ ದೊರೆತಿರುವ ನೆರವಿಗಿಂತ ವಿದ್ಯುದುತ್ಪಾದನೆಗೆ ಆಗಿರುವ ಅನುಕೂಲವೇ ಮಹತ್ತ್ವದಾಗಿದೆ. ಚೆನ್ನಾಗಿ ಮಳೆಯಾಗುವ ಪ್ರದೇಶಗಳಾಗಿರುವುದರಿಂದ, ಕೃಷಿಗೆ ಇವುಗಳ ಅಗತ್ಯ ಅಷ್ಟಾಗಿ ಇಲ್ಲವಾದರೂ, ಘಟ್ಟ ಪ್ರದೇಶಗಳಿಂದ ಇವು ಹೊತ್ತು ತರುವ ಮೆಕ್ಕಲುಮಣ್ಣು ಕರಾವಳಿ ಪ್ರದೇಶದ ಫಲವತ್ತತೆಯನ್ನು ಹೆಚ್ಚಿಸುತ್ತದೆ. ಅಷ್ಟೇ ಅಲ್ಲ, ಸಸ್ಯದ ಮೇಲೆ ಹಾಗೂ ಮಣ್ಣಿನಿಂದ ಹರಿದುಬರುವ ಸಾರವತ್ತಾದ ಅಂಶ ಕರ್ನಾಟಕದ ಕರಾವಳಿ ಕಡಲು ಮೀನುಗಾರಿಕೆಯ ಸಮೃದ್ಧ ನೆಲೆಯಾಗಲು ಕಾರಣವಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಂತೂ ಉತ್ತರಾಭಿಮುಖವಾದ ಸಂಚಲನೆಗೆ ಹೆಜ್ಜೆ ಹೆಜ್ಜೆಗೂ ಅಡ್ಡಿಯನ್ನುಂಟುಮಾಡುವಷ್ಟು ಹೇರಳವಾದ ಸಂಖ್ಯೆಯಲ್ಲಿನ ನದಿಗಳೂ ತೊರೆಗಳೂ ಹರಡಿಕೊಂಡಿರುವುದನ್ನು ಕಾಣಬಹುದು. ಒಟ್ಟಿನಲ್ಲಿ ಈ ಪಶ್ಚಿಮ ನದೀಜಾಲ ತುಂಬ ಸಮೃದ್ಧವಾಗಿರುವಂಥದು. ಇವುಗಳಲ್ಲಿ ಕಾಳಿ (೧೬೧ ಕಿ.ಮೀ. ಉದ್ದ), ಶರಾವತಿ (೧೩೨

ಕಿ.ಮೀ.), ಅಘನಾಶಿನಿ (೧೨೧ ಕಿ.ಮೀ.), ನೇತ್ರಾವತಿ (೯೬ ಕಿ.ಮೀ.), ತಟ್ಟಹಳ್ಳ (೯೦ ಕಿ.ಮೀ.), ಸೀತಾ (೮೦ ಕಿ.ಮೀ.), ಕುಮಾರಧಾರಾ (೭೪ ಕಿ.ಮೀ.), ಗಂಗಾವಳಿ (೭೨ ಕಿ.ಮೀ.), ಮತ್ತು ಚಕ್ರ (೭೨ ಕಿ.ಮೀ.) ಮುಖ್ಯವಾದುವು. ಗೌರಿ ಹೊಳೆ, ಗುರುಪುರ, ತದಡಿ, ಸ್ವರ್ಣ, ವಾರಾಹಿ, ಹರಿದ್ರಾವತಿ, ಬೆಣ್ಣೆ ಹೊಳೆ, ಬೇಡ್ತಿ ಮೊದಲಾದ ೫೭ ನದಿಗಳ ಜಾಲ ಇದೆಯೆಂದು ಗುರುತಿಸಲಾಗಿದೆ. ಇವುಗಳಲ್ಲಿ ಕೆಲವನ್ನಾದರೂ ಪೂರ್ವದತ್ತ ತಿರುಗಿಸಿ ನೀರಾವರಿಗೆ ಬಳಸಿಕೊಳ್ಳಬಹುದಾದ ಸಾಧ್ಯತೆಗಳನ್ನು ಪರಿಶೀಲಿಸಲಾಗುತ್ತಿದೆ. ಸದ್ಯಕ್ಕೆ ಇವು ಜಲವಿದ್ಯುತ್ ಉತ್ಪಾದನೆಯ ದೃಷ್ಟಿಯಿಂದ ಮಹತ್ವದ್ದಾಗಿವೆ. ಕಾರಣಾಂತರಗಳಿಂದ, ಈ ದಿಕ್ಕಿನಲ್ಲಿ ಕೈಗೊಂಡ ಯೋಜನೆಗಳಿಂದಲೂ ಹಿಂದೆ ಸರಿಯುತ್ತಿರುವ ನಿದರ್ಶನಗಳನ್ನು ಕಾಣತೊಡಗಿದ್ದೇವೆ. ಒಟ್ಟಿನಲ್ಲಿ ಈ ಒಂದು ನದೀ ಜಾಲದ ವ್ಯವಸ್ಥೆಯ ಜಲಸಂಪತ್ತು ೩೮ ಶತ ಕೋಟಿ ಘನಮೀಟರುಗಳೆಂದು ಅಂದಾಜು ಮಾಡಲಾಗಿದೆ. ಈ ನದೀ ಜಾಲ ಬಹುಮಟ್ಟಿಗೆ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳನ್ನೂ, ಕೊಡಗಿನ ಮೂರನೆಯ ಒಂದು ಭಾಗವನ್ನೂ, ಶಿವಮೊಗ್ಗ ಜಿಲ್ಲೆಯ ಕಾಲು ಭಾಗವನ್ನೂ, ಹಾಗೂ ಬೆಳಗಾವಿ, ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಯ ಶೇ. ೧೦ರಷ್ಟು ಭಾಗವನ್ನೂ ಅಂದರೆ ಒಟ್ಟಿನಲ್ಲಿ ಕರ್ನಾಟಕದ ಶೇ. ೧೦ರಷ್ಟು ಪ್ರದೇಶವನ್ನು ಒಳಗೊಂಡಿದೆ.

### ಕೃಷ್ಣಾ ನದೀಜಾಲ

ಮಹಾರಾಷ್ಟ್ರದ ಮಹಾಬಲೇಶ್ವರದಲ್ಲಿ ಮೂಡಿ ಕರ್ನಾಟಕದೆಲ್ಲಿ ಹರಿದು, ಆಂಧ್ರಪ್ರದೇಶವನ್ನು ಹೊಗುವ ಒಂದು ಮುಖ್ಯ ನದಿ ಕೃಷ್ಣಾ. ಕರ್ನಾಟಕದ ಪಶ್ಚಿಮ ಘಟ್ಟದಲ್ಲಿ ಉಗಮಿಸಿ, ಬೇರೆ ಬೇರೆ ದಿಕ್ಕುಗಳಲ್ಲಿ ಮುನ್ನಡೆದು, ಚಿಕ್ಕಮಗಳೂರು ಜಿಲ್ಲೆಯಲ್ಲಿ ಹರಿದು, ಶಿವಮೊಗ್ಗ ಜಿಲ್ಲೆಯ ಕೂಡಲಿಯಲ್ಲಿ ಸಂಗಮಿಸುವ ತುಂಗಾ ಮತ್ತು ಭದ್ರಾ ನದಿಗಳು, ಇಲ್ಲಿಂದ ಮುಂದಕ್ಕೆ ತುಂಗಭದ್ರ ಎನಿಸಿಕೊಂಡು ತಮ್ಮ ಪ್ರಯಾಣವನ್ನು ಮುಂದುವರಿಸಿ ವೇದಾವತಿ, ವರದಾ, ಭೀಮಾ, ಘಟಪ್ರಭಾ, ಮಲಪ್ರಭಾ, ಡೋಣಿ ಮೊದಲಾದ ಉಪನದಿಗಳನ್ನು ಒಳಗೊಂಡು, ಕೊನೆಗೆ ಆಂಧ್ರಪ್ರದೇಶದಲ್ಲಿ ಕರ್ನೂಲಿನ ಬಳಿ ಕೃಷ್ಣಾ ನದಿಯನ್ನು ಸೇರುತ್ತವೆ. ಈ ನದೀಜಾಲಕ್ಕೆ ತನ್ನದೇ ಆದ ಇನ್ನೊಂದು ವೈಶಿಷ್ಟ್ಯವೂ ಉಂಟು. ಘಟಪ್ರಭಾ ಮತ್ತು ಭೀಮಾ ನದಿಗಳು, ಮಹಾರಾಷ್ಟ್ರದಲ್ಲಿ ಮೂಡಿ ಕರ್ನಾಟಕದಲ್ಲಿ ಕೃಷ್ಣೆಯೊಡನೆ ಸಂಗಮಿಸಿದರೆ, ತುಂಗಭದ್ರ ಕರ್ನಾಟಕದಲ್ಲಿ ಉಗಮಿಸಿ ಆಂಧ್ರದಲ್ಲಿ ಕೃಷ್ಣೆಯನ್ನು ಸೇರಿದರೆ, ವೇದಾವತಿ ಕರ್ನಾಟಕದಲ್ಲಿ ಹುಟ್ಟಿ ಆಂಧ್ರಪ್ರದೇಶದಲ್ಲಿ ಸ್ವಲ್ಪ ದೂರ ಹರಿದು ಮತ್ತೆ ಕರ್ನಾಟಕದಲ್ಲಿಯೇ ತುಂಗಭದ್ರೆಯನ್ನು ಕೂಡುತ್ತದೆ. ಕೃಷ್ಣೆಗೆ ಬಂದು ಸೇರುವ ಎಲ್ಲ ನದಿಗಳು ಹಾಗೂ ಉಪನದಿಗಳು ಸುಮಾರು ೨೮ ಕೋಟಿ ಘನ ಮೀಟರುಗಳಷ್ಟು ನೀರನ್ನು ಒದಗಿಸುತ್ತವೆಂದು ಅಂದಾಜು ಮಾಡಲಾಗಿದೆ. ಈ ನದೀಜಾಲಕ್ಕೆ ಒಳಪಡುವ ಸುಮಾರು ೯೩ ಲಕ್ಷ ಹೆಕ್ಟೇರುಗಳಷ್ಟು ಭೂಮಿಯಲ್ಲಿ ಇನ್ನೂ ಶೇ. ೧೨ರಷ್ಟು ಭೂಮಿ ಮಾತ್ರ ನೀರಾವರಿ ಯೋಜನೆಗಳಿಗೆ ಒಳಪಟ್ಟಿದೆ. ಜಲಸಂಪತ್ತಿನ ಪ್ರಮಾಣದ ದೃಷ್ಟಿಯಿಂದ ನೋಡಿದರೆ, ಮೂರನೆಯ ಒಂದು ಭಾಗದಷ್ಟು ಮಾತ್ರ ಬಳಕೆಯಾಗುತ್ತಿದೆ.

### ಕಾವೇರಿ ನದೀಜಾಲ

ಕೊಡಗು ಜಿಲ್ಲೆಯ ಭಾಗಮಂಡಲದಲ್ಲಿ ಹುಟ್ಟಿ, ಪೂರ್ವಾಭಿಮುಖವಾಗಿ ಹರಿಯುವ ಕಾವೇರಿ ಮುಖ್ಯವಾಗಿ ಬಯಲು ಸೀಮೆಯ ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಿಗೆ ಜಲಸಮೃದ್ಧಿಯನ್ನುಂಟುಮಾಡುವಂಥ ಮುಖ್ಯವಾದ ನದಿ. ಬೆಂಗಳೂರು ಜಿಲ್ಲೆಯ ದಕ್ಷಿಣದ ಅಂಚನ್ನೇ ಸೋಂಕಿ ತಮಿಳುನಾಡಿನತ್ತ ಹರಿಯುವ ಈ ನದಿಗೆ ಕರ್ನಾಟಕದಲ್ಲಿ ಸೇರುವ ಉಪನದಿಗಳಲ್ಲಿ ಹಾರಂಗಿ, ಯಗಚಿ, ಹೇಮಾವತಿ, ಲಕ್ಷ್ಮಣ ತೀರ್ಥ, ಕಪಿಲಾ, ಸುವರ್ಣಾವತಿ, ಶಿಂಷಾ, ಅರ್ಕಾವತಿ ಮುಖ್ಯವಾದುವು. ಹೀಗೆ ಕಾವೇರಿಯನ್ನು ಸೇರುವ ಉಪನದಿಗಳ ಸಂಖ್ಯೆ ೨೦. ತನ್ನ ಉಗಮಸ್ಥಾನದಿಂದ ಕರ್ನಾಟಕದ ಗಡಿಯನ್ನು ದಾಟುವವರೆಗಿನ ಕಾವೇರಿಯ ಹರಿವಿನ ಉದ್ದ ಸುಮಾರು ೪೦೦ ಕಿ.ಮೀ. ಕರ್ನಾಟಕದಲ್ಲಿ ಕಾವೇರಿ ಕಣಿವೆಯ ವಿಸ್ತಾರ ಸುಮಾರು ೩೦,೦೦೦ ಚ. ಕಿ.ಮೀ. ಕೇಂದ್ರ ಸರ್ಕಾರದ ವತಿಯಿಂದ ಅಂಕಿ–ಅಂಶಗಳನ್ನು ಸಂಗ್ರಹಿಸಿದ ಕಾವೇರಿ ಅಂಕಿ ಅಂಶಗಳ ಸಂಗ್ರಹಣ ಸಮಿತಿಯ ಪ್ರಕಾರ ಈ ನದಿಯ ಜಲ ಸಂಪತ್ತು ಸುಮಾರು ೧೧ ಶತಕೋಟಿ ಘನಮೀಟರ್. ಆದರೆ ರಾಜ್ಯದ ಇಂಜನಿಯರುಗಳ ಅಂದಾಜಿನ ಪ್ರಕಾರ ಈ ಪ್ರಮಾಣ ಸುಮಾರು ೧೭ ಶತಕೋಟಿ ಘನಮೀಟರ್. ಕಾವೇರಿ ನದೀತೀರದ ವ್ಯವಸಾಯ ಯೋಗ್ಯವಾದ ೨೪.೫ ಲಕ್ಷ ಹೆಕ್ಟೇರು ಭೂಮಿಯಲ್ಲಿ ಸುಮಾರು ೧೫ ಲಕ್ಷ ಹೆಕ್ಟೇರು ಭೂಮಿಯಲ್ಲಿ ಸಾಗುವಳಿಯಾಗುತ್ತಿದ್ದರೂ, ನೀರಾವರಿ ಸೌಲಭ್ಯ ಒದಗಿರುವುದು ಕೇವಲ ಸುಮಾರು ೩ ಲಕ್ಷ ಹೆಕ್ಟೇರು ಭೂಮಿಗೆ ಮಾತ್ರ. ರಾಜ್ಯದಲ್ಲಿ ಇದರ ಬಳಕೆಯನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನಗಳು ನಡೆದಿವೆ. ಈಚೆಗೆ ಇದರಿಂದ ಹಾಸನ, ಕೊಡಗು, ಬೆಂಗಳೂರು, ತುಮಕೂರು ಮತ್ತು ಚಿಕ್ಕಮಗಳೂರು ಜಿಲ್ಲೆಗಳೂ ಪ್ರಯೋಜನ ಪಡೆಯುತ್ತಿವೆ. ಮೈಸೂರು–ಬೆಂಗಳೂರು ನಗರಗಳಿಗೆ ಕುಡಿಯುವ ನೀರು ಒದಗುತ್ತಿರುವುದೂ ಕಾವೇರಿಯಿಂದಲೆ.

### ಗೋದಾವರಿ ನದೀಜಾಲ

ಗೋದಾವರಿಯನ್ನು ಸೇರುವ ಉಪನದಿಗಳನ್ನು ಒಳಗೊಂಡಿರುವ ಬಿದರೆ ಜಿಲ್ಲೆಯ ಮಾಂಜರಾ, ಕಾರಂಜಿ, ಮಧುರನಾಲಾ, ದೇವನಾಲಾ, ಹಬ್ಬಾಳ ಮೊದಲಾದುವನ್ನು ಲಕ್ಷ್ಯದಲ್ಲಿರಿಸಿಕೊಂಡಿರುವುದರಿಂದ ಈ ಜಲವ್ಯವಸ್ಥೆಯನ್ನು ಗೋದಾವರಿ ನದೀಜಾಲವೆನ್ನಲಾಗಿದೆ. ಈ ಜಿಲ್ಲೆಯ ವ್ಯವಸಾಯ ಯೋಗ್ಯವಾಗಿರುವ ಸುಮಾರು ೪ ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಕೇವಲ ೦.೧೭ ಲಕ್ಷ ಹೆಕ್ಟೆರುಗಳಷ್ಟು ಭೂಮಿಗೆ ಮಾತ್ರ ನೀರಾವರಿ ಸೌಲಭ್ಯ ಲಭ್ಯವಾಗಿದೆ. ಉಳಿದ ಸುಮಾರು ೧.೫ ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಕೆರೆ ಕುಂಟೆಗಳ ನೆರವಿನಿಂದ ಸಾಗುವಳಿಯಾಗುತ್ತಿದೆ. ಸುಮಾರು ೧.೪೫ ಶತಕೋಟಿ ಘನಮೀಟರುಗಳಷ್ಟು ಜಲಸಂಪತ್ತಿದೆಯೆಂದು ಅಂದಾಜುಮಾಡಲಾಗಿರುವ ಮಾಂಜರಾನದಿಯ ನೀರಿನ ಬಳಕೆ ಇನ್ನೂ ಹೆಚ್ಚು ಉಪಯುಕ್ತ ರೀತಿಯಲ್ಲಿ ಆಗಬೇಕಾಗಿದೆ. ಗೋದಾವರಿ ನೀರಿನ ಹಂಚಿಕೆಯ ವಿಷಯದಲ್ಲಿ ಕರ್ನಾಟಕ ಮತ್ತು ಆಂಧ್ರಪ್ರದೇಶಗಳ ನಡುವೆ ಆಗಿರುವ ತಾತ್ಕಾಲಿಕ ಒಪ್ಪಂದದಂತೆ ಕಾರಂಜಾ ಯೋಜನೆಯನ್ನು ಕೈಗೊಳ್ಳಲಾಗಿದೆ. ಅದರಿಂದ ಸುಮಾರು ೦.೪೨ ಲಕ್ಷ ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯ ಒದಗಲಿದೆ.

### ಪಾಲಾರ್ – ಪೆನ್ನಾರ್ ನದೀಜಾಲ

ನಂದೀದುರ್ಗದ ಪೂರ್ವಕ್ಕೆ ಹರಿಯುವ ನದಿಗಳನ್ನು ಈ ಜಾಲ ಒಳಗೊಂಡಿದೆ. ಇವುಗಳಲ್ಲಿ ಪಿನಾಕಿನಿ (ಉತ್ತರ ಮತ್ತು ದಕ್ಷಿಣ), ಪಾಲಾರ್ ಮತ್ತು ಪೆನ್ನಾರ್ ಮುಖ್ಯವಾದುವು. ಕೋಲಾರ ಜಿಲ್ಲೆಯ ಬಹುಭಾಗ, ಬೆಂಗಳೂರು ಜಿಲ್ಲೆಯ ಸುಮಾರು ಮೂರನೆಯ ಒಂದು ಭಾಗ ಹಾಗೂ ತುಮಕೂರು ಜಿಲ್ಲೆಯ ಸುಮಾರು ಕಾಲು ಭಾಗ ಈ ನದೀ ಜಾಲದ ವ್ಯಾಪ್ತಿಗೆ ಒಳಪಡುತ್ತವೆಯಾದರೂ, ಈ ಭಾಗದಲ್ಲಿ ಮಳೆ ಕಡಿಮೆ.

ಆದ್ದರಿಂದ ಈ ನದೀಜಾಲದ ಒಟ್ಟಾರೆ ಜಲಸಂಪತ್ತು ಕೇವಲ ೦.೯೮ ಶತಕೋಟಿ ಘನ ಮೀಟರ್ ಎಂದು ಅಂದಾಜು.

ಒಟ್ಟಿನಲ್ಲಿ ರಾಜ್ಯದ ನೀರಾವರಿ ಯೋಗ್ಯ ಭೂಮಿಯಲ್ಲಿ ಪಶ್ಚಿಮಕ್ಕೆ ಹರಿಯುವ ನದಿಗಳಿಂದ ಸುಮಾರು ೧.೭೬ ಲಕ್ಷ ಹೆಕ್ಟೇರುಗಳಷ್ಟು ಪ್ರದೇಶವೂ, ಕೃಷ್ಣಾ ನದೀಜಾಲದಿಂದ ಸುಮಾರು ೭.೪ ಲಕ್ಷ ಹೆಕ್ಟೇರುಗಳಷ್ಟು ಪ್ರದೇಶವೂ, ಕಾವೇರಿ ನದೀಜಾಲದಿಂದ ಸುಮಾರು ೩ ಲಕ್ಷ ಹೆಕ್ಟೇರು ಪ್ರದೇಶವೂ, ಗೋದಾವರಿ ನದೀಜಾಲದಿಂದ ಸುಮಾರು ೦.೧೭ ಲಕ್ಷ ಹೆಕ್ಟೇರ್ ಪ್ರದೇಶವೂ, ಪಾಲಾರ್ ಪೆನ್ನಾರ್ ನದೀಜಾಲದಿಂದ ಜಲ ಪೂರೈಕೆಯಾಗುವ ಕೆರೆ ಕುಂಟೆಗಳಿಂದ ಸುಮಾರು ೧.೩೭ ಲಕ್ಷ ಹೆಕ್ಟೇರ್ ಪ್ರದೇಶವೂ ನೀರಾವರಿ ಸೌಲಭ್ಯ ಪಡೆದು ಕೊಂಡಿವೆ. ಉಳಿದಂತೆ ಸಾಗುವಳಿಯಾಗುವ ಸುಮಾರು ೮೬ ಲಕ್ಷ ಹೆಕ್ಟೇರ್ ಭೂಮಿಗೆ ಮಳೆಯೇ ಮುಖ್ಯ ಆಧಾರ.

ಕರ್ನಾಟಕದ ಜಲಸಂಪತ್ತಿನಿಂದ ಆಗಿರುವ ಮತ್ತೊಂದು ವಿಶಿಷ್ಟ ಪ್ರಯೋಜನವೆಂದರೆ ಜಲವಿದ್ಯುತ್ ಯೋಜನೆಗೆ ಅದರಿಂದ ಒದಗಿರುವ ನೆರವು. ಶಿವಸಮುದ್ರದ ಬಳಿ ರಮ್ಯವಾದ ಜಲಪಾತಗಳನ್ನು ಸೃಷ್ಟಿಸಿರುವ ಶಿಂಷಾನದಿ ಕರ್ನಾಟಕದ ಮೊಟ್ಟಮೊದಲ ಜಲವಿದ್ಯುತ್‌ಯೋಜನೆಗೆ ಅವಕಾಶ ಮಾಡಿಕೊಟ್ಟಿದೆ. ಗೇರುಸೊಪ್ಪೆಯಲ್ಲಿ ಜಗದ್ವಿಖ್ಯಾತವಾದ ಜಲಪಾತವನ್ನು ಸೃಷ್ಟಿಸಿರುವ ಶರಾವತಿ ಹಾಗೂ ಉತ್ತರಕನ್ನಡ ಜಿಲ್ಲೆಯಲ್ಲಿ ಹರಿಯುವ ಕಾಳೀ ಕರ್ನಾಟಕದ ವಿದ್ಯುದುತ್ಪಾದನೆಯ ದೃಷ್ಟಿಯಿಂದ ಪ್ರಾಣಸ್ವರೂಪವಾಗಿರುವಂಥವು. ಕಾಳಿಯಂತೂ ಕರ್ನಾಟಕದ ವಿದ್ಯುತ್ ಕ್ಷಾಮವನ್ನು ನೀಗಬಲ್ಲುದೆಂದು ಹೇಳಲಾಗಿದೆ.

**ಅಂತರ್ಜಲ ಸಂಪತ್ತು**

ಅಂತರ್ಜಲ ಸಂಪತ್ತನ್ನು ಯಶಸ್ವಿಯಾಗಿ ನಡೆಸಿಕೊಳ್ಳುವ ವಿಶಿಷ್ಟ ಯೋಜನೆಗಳನ್ನೇನೂ ಕೈಗೊಳ್ಳಲಾಗಿಲ್ಲವೆಂದೇ ಹೇಳಬೇಕು. ಇಷ್ಟಾಗಿಯೂ ಏತ, ಕಪಿಲೆ ಮತ್ತು ವಿದ್ಯುತ್-ಚಾಲಿತ ಪಂಪುಗಳ ಮೂಲಕ ಅಂತರ್ಜಲಸಂಪತ್ತನ್ನು ಆಧರಿಸಿಯೂ ಕರ್ನಾಟಕದಲ್ಲಿ ಕೃಷಿಯ ಕಾರ್ಯ ನಡೆದು ಬಂದಿದೆ. ಆದರೆ, ಇದರ ಪ್ರಮಾಣ ತೀರ ಕಡಿಮೆಯಾಗಿದೆ. ೧೯೭೪ರಲ್ಲಿ ನಡೆಸಿದ ಗಣತಿಯೊಂದರ ಪ್ರಕಾರ ಕರ್ನಾಟಕದಲ್ಲಿ ನೀರಾವರಿ ಬಾವಿಗಳ ಸಂಖ್ಯೆ ೩.೫ ಲಕ್ಷ.

**ಸಸ್ಯ ಮತ್ತು ಪ್ರಾಣಿಜೀವನದ ಮೇಲೆ ಪ್ರಭಾವ**

ಸಮುದ್ರಮಟ್ಟದಿಂದ ಸುಮಾರು ೧,೮೦೦ ಮೀಟರುಗಳವರೆಗೆ ನಾನಾ ಎತ್ತರದ ಭೂಪ್ರದೇಶಗಳೂ, ತೀರ ತಂಪಾದ ಹವಾಗುಣದಿಂದ ಹಿಡಿದು ತುಂಬ ಶುಷ್ಕವಾಗಿರುವ ವಾಯುಗುಣವುಳ್ಳ ವಲಯಗಳೂ, ತುಂಬ ಹೆಚ್ಚು ಮಳೆಯಾಗುವ ಮಲೆನಾಡಿನ ಪ್ರದೇಶದಿಂದ ಹಿಡಿದು ಮಳೆಯೇ ವಿರಳವೆಂಬಂತಿರುವ ಭಾಗಗಳೂ ಇದ್ದು ಅತ್ಯಂತ ವೈವಿಧ್ಯಮಯವಾಗಿರುವ ಕರ್ನಾಟಕದ ಭೌತ ಲಕ್ಷಣದ ಹಾಗೂ ವಾಯುಗುಣದ ಪ್ರಭಾವ ಸಹಜವಾಗಿಯೇ ಇಲ್ಲಿಯ ಸಸ್ಯ ಮತ್ತು ಪ್ರಾಣಿಜೀವನದ ಮೇಲೆ ಪ್ರಭಾವ ಬೀರಿದೆ. ಕರ್ನಾಟಕದ ಪ್ರಸ್ಥಭೂಮಿಯ ಉತ್ಕೃಷ್ಟ ವಾಯುಗುಣ ಮತ್ತು ಸಮೃದ್ಧವಾದ ಮಳೆಯ ಪರಿಣಾಮದಿಂದ ಇಲ್ಲಿಯ ಗಹನವಾದ ಅರಣ್ಯಗಳು ವೈವಿಧ್ಯಮಯವಾದ ಸಸ್ಯಸಂಪತ್ತಿನಿಂದಲೂ, ಪ್ರಾಣಿ ಸಮೂಹಗಳಿಂದಲೂ ಕೂಡಿವೆ. ಇಲ್ಲಿಯ ಕಾಡು ಶ್ರೀಗಂಧವನ್ನು ಬೆಳೆಸುತ್ತದೆ, ಆನೆಗಳನ್ನು ಬೆಳೆಸುತ್ತದೆ ಎಂದು ಕವಿಯೊಬ್ಬ ವರ್ಣಿಸಿದ್ದರೆ, ಮತ್ತೊಬ್ಬ ಕವಿ "ಗಂಧದ ಗುಡಿ"ಯೆಂದೇ ಹಾಡಿ ಹೊಗಳಿದ್ದಾನೆ. ಕರ್ನಾಟಕಕ್ಕೆ ಭೇಟಿಕೊಟ್ಟ ವಿದೇಶಿ ಪ್ರವಾಸಿಗಳಲ್ಲಿ ಮಾರ್ಕೊಪೋಲೋ ಎಂಬಾತನೂ (ಕ್ರಿ.ಶ. ೧೨೯೦) ವಿಜಯನಗರವನ್ನು ಬಹುವಾಗಿ ಮೆಚ್ಚಿಕೊಂಡ ಅಬ್ದುಲ್ ರಜಾಕ್ ಎಂಬಾತನೂ (ಕ್ರಿ.ಶ. ೧೪೪೪) ಕರ್ನಾಟಕದ ಸಸ್ಯ ಸಂಪತ್ತನ್ನು ಪ್ರಶಂಸಿಸಿದ್ದಾರೆ.

ಕರ್ನಾಟಕದ ಒಟ್ಟಾರೆ ಭೂವಿಸ್ತೀರ್ಣದ ಸುಮಾರು ಶೇ. ೧೫ರಷ್ಟು ಭಾಗ ಮಾತ್ರ – ಅಂದರೆ, ೧,೯೦,೪೫,೫೭೪ ಹೆಕ್ಟೇರುಗಳಲ್ಲಿ ೨೮,೯೫,೧೫೮ ಹೆಕ್ಟೇರುಗಳಷ್ಟು ಪ್ರದೇಶ ಮಾತ್ರ ಅರಣ್ಯಾವೃತವಾಗಿದ್ದು, ಭಾರತದ ಇತರ ರಾಜ್ಯಗಳಲ್ಲಿಯ ಹಾಗೂ ಒಟ್ಟಾರೆ ಭಾರತದಲ್ಲಿಯ ಅರಣ್ಯ ಸರಾಸರಿಗಿಂತ ತುಂಬಾ ಕಡಿಮೆಯಾಗಿದೆ. ಸುಮಾರು ⅓ ಭಾಗದಷ್ಟು ಅರಣ್ಯಪ್ರದೇಶವಿರಬೇಕೆಂಬ ಆದರ್ಶದೊಂದಿಗೆ ಹೋಲಿಸಿದರಂತೂ ತೀರ ಕಡಿಮೆಯೆಂದೇ ತೋರುತ್ತದೆ. ವಿವೇಚನಾರಹಿತವಾಗಿ ಕಾಡುಗಳನ್ನು ಕಡಿಯುತ್ತಿರುವುದು, ತೀವ್ರ ಕಾಳಜಿಯಿಂದ ಅರಣ್ಯ ಸಂವರ್ಧನೆ ನಡೆಯದೆ ಇರುವುದು, ಬೃಹತ್ ಜಲವಿದ್ಯುತ್ ಹಾಗೂ ಗಣಿಗಾರಿಕೆ ಯೋಜನೆಗಳನ್ನು ಕೈಗೊಳ್ಳುತ್ತಿರುವುದು, ಇದರಿಂದಾಗಿ ಮರುವಸತಿಗಾಗಿ ಹಾಗೂ ಕೃಷಿ ಭೂಮಿಗಾಗಿ ಕಾಡುಗಳನ್ನು ಸವರಿ ಹಾಕುತ್ತಿರುವುದು – ಇವೇ ಮೊದಲಾದ ಕಾರಣಗಳಿಂದಾಗಿ ಈ ಪ್ರಮಾಣ ಮತ್ತಷ್ಟು ಕಡಿಮೆಯಾಗುತ್ತ ಬರುತ್ತಿರುವುದರಿಂದ ಸಸ್ಯ ಸಂಪತ್ತಿಗೆ ಹಾಗೂ ಪ್ರಾಣಿ ಸಂಪತ್ತಿಗೆ ಆತಂಕಕಾರಿ ಪರಿಸ್ಥಿತಿ ಏರ್ಪಡುತ್ತಿದೆ. ತಡವಾಗಿಯಾದರೂ ಅಲ್ಲಲ್ಲಿ ಅರಣ್ಯ ಸಂವರ್ಧನ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿರುವುದು ಹಾಗೂ ವಿಶಿಷ್ಟ ಪ್ರಾಣಿಸಂತತಿಯ ಸಂರಕ್ಷಣೆಯ ದೃಷ್ಟಿಯಿಂದ "ಹುಲಿಯೋಜನೆ"ಯಂಥ ಕಾರ್ಯಕ್ರಮಗಳು ಆರಂಭಗೊಳ್ಳುತ್ತಿರುವುದು ಸ್ವಲ್ಪ ಮಟ್ಟಿಗಾದರೂ ಸಮಾಧಾನ ತರುವಂಥ ಉಪಕ್ರಮಗಳಾಗಿವೆ.

**ಸಸ್ಯಸಂಪತ್ತು**

ಕರ್ನಾಟಕದ ಕರಾವಳಿ, ಮಲೆನಾಡು ಮತ್ತು ಮೈದಾನ ಪ್ರದೇಶಗಳು ಹಾಗೂ ದಕ್ಷಿಣ ಉಷ್ಣವಲಯದ ಇಲ್ಲಿಯ ವಾಯುಗುಣ, ಮಳೆಯ ವಾರ್ಷಿಕ ಸರಾಸರಿ ಹಾಗೂ ಭೂಗುಣಗಳನ್ನು ದೃಷ್ಟಿಯಲ್ಲಿರಿಸಿಕೊಂಡು (೧) ಉಷ್ಣವಲಯದ ನಿತ್ಯ ಹರಿದ್ವರ್ಣದ ಕಾಡುಗಳು, (೨) ಉಷ್ಣವಲಯದ ಆಂಶಿಕ ನಿತ್ಯ ಹರಿದ್ವರ್ಣದ ಕಾಡುಗಳು, (೩) ಬೇಸಿಗೆಯಲ್ಲಿ ಎಲೆಯುದುರುವ ಮಲೆನಾಡಿನ ಕಾಡು, (೪) ಮೈದಾನಪ್ರದೇಶದ ಒಣಕಾಡು ಹಾಗೂ (೫) ಕುರುಚಲುಕಾಡು ಎಂದು ಇಲ್ಲಿಯ ಸಸ್ಯ ಸಂಪತ್ತನ್ನು ವರ್ಗೀಕರಿಸಲಾಗಿದೆ. ಉತ್ತರ ಕನ್ನಡ ಜಿಲ್ಲೆಯ ಹಲವು ಭಾಗಗಳು, ಶಿವಮೊಗ್ಗ ಜಿಲ್ಲೆಯ ಆಗುಂಬೆ, ಹಾಸನ ಜಿಲ್ಲೆಯ ಬಿಸಲೆ ಘಾಟ್ ಹಾಗೂ ಕೊಡಗು ಜಿಲ್ಲೆಯ ಮೂಕುಟ್ಟಗಳಲ್ಲಿ ಕಾಣದೊರೆಯುವ ನಿತ್ಯಹರಿದ್ವರ್ಣದ ಕಾಡುಗಳಿಗೆ ಈ ಭಾಗಗಳಲ್ಲಿ ಆಗುವ ಸುಮಾರು ೩,೦೦೦ದಿಂದ ೬,೦೦೦ ಮಿ.ಮೀ. ವರೆಗಿನ ಮಳೆಯೇ ಮುಖ್ಯ ಕಾರಣ. ಇಲ್ಲಿಯ ತೇವ ಹಾಗೂ ಹಿತಕರವಾದ ಉಷ್ಣತೆಯಿಂದಾಗಿ ಕಾಡುಗಳು ದಟ್ಟವಾಗಿ ಬೆಳೆದಿದ್ದು, ಅವು ತಮ್ಮ ಮೇಲ್ಪದರದಲ್ಲಿ ಸುಮಾರು ೩೬.೬ಮೀ ಗಳಷ್ಟು ಎತ್ತರಕ್ಕೆ ಬೆಳೆಯಬಲ್ಲಂಥ ನಾಗಸಂಪಿಗೆ, ಕೀರಲಭೋಗಿ, ಬೂರುಗ, ಹೈಗ, ಗಂಧಗರಿಗೆ, ಬೊಬ್ಬೆ, ಹಲಸು ಮೊದಲಾದ ವೃಕ್ಷಗಳನ್ನು ಒಳಗೊಂಡಿವೆ. ನಡುವಣ ಪದರದಲ್ಲಿ ಸುಮಾರು ೧೫ ಮೀ.ಗಳಷ್ಟು ಮೀರಿ ಬೆಳೆಯುವ ಬಿಳಿಸಂಪಿಗೆ, ದೇವಗರಿಗೆ, ಸಂಪಿಗೆ, ಕಾಡುಹಿಪ್ಪೆ, ನೇರಳೆ ಮೊದಲಾದ ಬೇರೆ ಬಗೆಗಳು ಕಾಣಬಂದರೆ, ಕೆಳಪದರದಲ್ಲಿ ಸುಮಾರು ೭.೫ ಮೀ.ಗಳವರೆಗೆ ಬೆಳೆಯುವ ಅಶೋಕ, ಲವಂಗ, ಲೋಕುಂದಿ, ಗುರಿಗೆ, ಕಾಡು ನೇರಳೆ

ಬಸವನಪಾದ ಮೊದಲಾದ ವೃಕ್ಷಗಳೂ, ಅವುಗಳ ಅಕ್ಕಪಕ್ಕಗಳಲ್ಲಿ ಬೆಳೆಯುವಂಥ ಬೆತ್ತದ ಜಾತಿಯ ಗಿಡಗಳೂ, ಬಗನಿ, ಮಂಗರೆ, ಕಿರು ಈಚಲು ಮೊದಲಾದವೂ ಕಂಡುಬರುತ್ತಿವೆ. ಮಣಸು, ನೀಟಮ್, ತಲೆಜಾದರಿ ಮೊದಲಾದ ಅಡರು ಸಸ್ಯಗಳೂ ಇಲ್ಲಿ ಬೆಳೆಯುತ್ತವೆ.

ಸುಮಾರು ೨,೦೦೦ದಿಂದ ೩,೦೦೦ ಮಿ.ಮೀ.ಗಳಷ್ಟು ಮಳೆಯಾಗುವ ಉತ್ತರ ಕನ್ನಡ ಜಿಲ್ಲೆಯ ಕೆಲವು ಭಾಗಗಳು, ಕೊಡಗು ಜಿಲ್ಲೆಯ ಬಹುಭಾಗ, ಶಿವಮೊಗ್ಗ ಜಿಲ್ಲೆಯ ಜೋಗ, ಬೆಳಗಾಂವಿ ಜಿಲ್ಲೆಯ ಅನೇಕ ಭಾಗಗಳು ಆಂಶಿಕ ನಿತ್ಯ ಹರಿದ್ವರ್ಣದ ಕಾಡುಗಳನ್ನು ಒಳಗೊಂಡಿವೆ. ಇಲ್ಲಿಯ ಮಧ್ಯಮ ಸ್ವರೂಪದ ಮಳೆಯಿಂದಾಗಿ ನಿತ್ಯ ಹರಿದ್ವರ್ಣ ವೃಕ್ಷಗಳ ಜೊತೆಗೆ ಬೇಸಗೆಯಲ್ಲಿ ಎಲೆಯುದುರುವ ಜಾತಿಯ ವೃಕ್ಷಗಳೂ ಸಮೃದ್ಧವಾಗಿ ಬೆಳೆಯುತ್ತವೆ. ಇಲ್ಲಿಯ ಮೇಲುಪದರಗಳಲ್ಲಿ ಬೂರುಗ, ದೂಪ, ಮಾವು, ಹಲಸು, ನಂದಿ, ಮೊದಲಾದ ಜಾತಿಯ ಮರಗಳೂ, ಕೆಳಪದರಗಳಲ್ಲಿ ಲವಂಗ ಪಟ್ಟೆ, ನಂಜಿನ ಕೊರಡು, ಕಾವಲ ಮೊದಲಾದ ಬಗೆಗಳೂ ಕಾಣಬರುತ್ತವೆ. ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಭಾಗಗಳಲ್ಲಿ ದೊರೆಯುವ ಬೀಟೆ, ತೇಗ, ಮತ್ತಿ ಮೊದಲಾದವು ಆರ್ಥಿಕವಾಗಿ ಪ್ರಾಮುಖ್ಯ ಹೊಂದಿರುವಂಥವು. ಅಕ್ಕಪಕ್ಕಗಳಲ್ಲಿ ಏಲಕ್ಕಿ, ಮೆಣಸು ಮುಂತಾದ ನಗದು ಬೆಳೆಗಳೂ ಕಾಣಬರುತ್ತಿವೆ.

ಸುಮಾರು ೧,೫೦೦ರಿಂದ ೨,೦೦೦ ಮಿ.ಮೀ. ಮಳೆಯಾಗುವ ಮೈಸೂರು, ಚಿಕ್ಕಮಗಳೂರು, ಹಾಸನ ಮತ್ತು ಶಿವಮೊಗ್ಗ ಜಿಲ್ಲೆಯ ಕೆಲವು ಭಾಗಗಳಲ್ಲಿಯ ಅರಣ್ಯಗಳಲ್ಲಿ ಬೇಸಗೆಯಲ್ಲಿ ಎಲೆ ಉದುರುವ ಮಲೆನಾಡಕಾಡು ಕಾಣದೊರೆಯುತ್ತವೆ. ಇಲ್ಲಿಯ ಭೂಮಿಯ ಧಾರಣಶಕ್ತಿಯಿಂದಾಗಿ, ಐದಾರು ತಿಂಗಳ ಒಣ ಹವೆಯನ್ನು ಈ ಕಾಡುಗಳು ತಡೆದುಕೊಳ್ಳಬಲ್ಲವು. ತೇಗ, ಮತ್ತಿ, ನಂದಿ, ಹೊನ್ನೆ, ಬೀಟೆ, ಬಿಳಿಮತ್ತಿ ಮೊದಲಾದುವು ಮೇಲುಪದರಗಳಲ್ಲಿ ಕಾಣದೊರೆತರೆ ಕೆಳಪದರದಲ್ಲಿ ಬಿದಿರು ಹೇರಳವಾಗಿ ಬೆಳೆಯುತ್ತದೆ.

ಸುಮಾರು ೭೫೦ರಿಂದ ೧೫೦೦ ಮಿ.ಮೀ. ಮಳೆಯಾಗುವ ಬಯಲು ಸೀಮೆಯ ಒಣಕಾಡಿನಲ್ಲಿ ದಟ್ಟವಾದ ಅರಣ್ಯಗಳೇನೂ ಕಾಣುವುದಿಲ್ಲ. ಮೇಲಿನ ಪದರಗಳಲ್ಲಿ ತೇಗ, ಬಾಗೆ, ಹೊನ್ನೆ, ನಂದಿ, ಮತ್ತಿ, ಬೂರಗ, ನೇರಳೆ ಮೊದಲಾದ ಜಾತಿಯ ಮರಗಳು ಕಂಡು ಬಂದರೆ, ಕೆಳಪದರಗಳಲ್ಲಿ ಮುತ್ತುಗ, ಶ್ರೀಗಂಧ, ನೆಲ್ಲಿ ಮೊದಲಾದ ಬಗೆಗಳೂ ಕಾಣದೊರೆಯುತ್ತವೆ. ಮರಗಳ ಬದಿಗಳಲ್ಲಿ ಲಂಟಾನ, ಕಿರುಬಿದುರು, ಅನೇಕ ಬಗೆಯ ಅಡರು ಬಳ್ಳಿಗಳು ಹಾಗೂ ಹುಲ್ಲುಗಳು ಬೆಳೆದಿರುತ್ತವೆ.

ಸುಮಾರು ೫೦೦ರಿಂದ ೭೫೦ ಮಿ.ಮೀ. ಮಳೆಯಾಗುವ ಹಾಗೂ ವರ್ಷದಲ್ಲಿ ಆರು ತಿಂಗಳಿಗೂ ಹೆಚ್ಚುಕಾಲ ಒಣ ಹವೆಯೇ ಇರುವ ಮೈಸೂರು, ಹಾಸನ, ಚಿತ್ರದುರ್ಗ, ಗುಲ್ಬರ್ಗಾ, ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಯ ಭಾಗಗಳಲ್ಲಿ ಕುರುಚಲು ಗಿಡಗಳ ಕಾಡುಗಳನ್ನು ಕಾಣಬಹುದು. ಮರಗಳು ತೀರ ಹೆಚ್ಚೆಂದರೆ ೧೨.೫ ಮೀ. ಎತ್ತರದವಾಗಿರುತ್ತವೆ. ಬೇಲ, ಹಿಪ್ಪೆ, ಗೊಬ್ಬಳಿ, ಬಾಗೆ, ಮತ್ತಿ, ಆಲ, ಅತ್ತಿ ಮೊದಲಾದ ಜಾತಿಯ ಮರಗಳನ್ನು ಇಲ್ಲಿ ಕಾಣಬಹುದು. ಕೆಳಹಂತಗಳಲ್ಲಿ ಯಲಚಿ, ಸೀತಾಫಲ, ಈಚಲು ಮೊದಲಾದವಿರುತ್ತವೆ. ಸೀಗೆ, ಗುಲಗಂಜಿ ಮೊದಲಾದ ಮೆಳೆಗಳೂ ಹಂಬುಗಳೂ, ಲಂಟಾನ, ಮತ್ತು ಕೆಲವು ಬಗೆಯ ಕಳ್ಳಿಗಳೂ ಹರಡಿಕೊಂಡಿರುವುದು ಸಾಮಾನ್ಯವಾಗಿ ಕಂಡುಬರುವ ದೃಶ್ಯ.

ಇವುಗಳಲ್ಲದೆ ಅರಬ್ಬೀ ಸಮುದ್ರಕ್ಕೆ ಅಭಿಮುಖವಾಗಿರುವ ಕರಾವಳಿ ಪ್ರದೇಶದಲ್ಲಿ ಅವಿಸೀನಿಯ, ಸೊನ್ನರೇಷಿಯ, ರೈಸೊಫೊರ ಮೊದಲಾದ ವೃಕ್ಷಜಾತಿಗಳನ್ನೊಳಗೊಂಡಿರುವ ಮ್ಯಾಂಗ್ರೋವ್ ಕಾಡುಗಳನ್ನು ಕಾಣಬಹುದಾಗಿದೆ. ಅಂತೆಯೇ, ಮಲೆನಾಡಿನ ಗುಡ್ಡಗಾಡುಗಳಲ್ಲಿ ರಬ್ಬರ್ ಕಾಡುಗಳನ್ನು ಬೆಳೆಸಲಾಗುತ್ತಿದೆ, ಈಗ ಇವುಗಳ ವಿಸ್ತೀರ್ಣ ಸುಮಾರು ೬೦೦೦ ಹೆಕ್ಟೇರುಗಳನ್ನು ಮೀರಿದೆ. ಎಲ್ಲ ಕಡೆಗಳಲ್ಲಿಯೂ ಬೆಳೆಯಬಹುದಾಗಿರುವ ನೀಲಗಿರಿ ಕಾನನಗಳೂ ವಿಶೇಷವಾಗಿ ತಲೆಎತ್ತುತ್ತಲಿವೆ. ಕೊಡಗು ಮತ್ತು ಚಿಕ್ಕಮಗಳೂರು ಜಿಲ್ಲೆಯ ಅನೇಕ ಭಾಗಗಳಲ್ಲಿ ಕಾಫಿ ತೋಟಗಳೂ ಸಾಕಷ್ಟು ಪ್ರಮಾಣದಲ್ಲಿ ಕಾಣದೊರೆಯುತ್ತವೆ. ಒಣಹವೆಯ ಲಾಭವನ್ನು ಪಡೆದುಕೊಂಡು ರಾಜ್ಯದ ಅನೇಕ ಭಾಗಗಳಲ್ಲಿ ಹೊಗೆಸೊಪ್ಪನ್ನು ಬೆಳೆಯುವ ಉದ್ಯಮವೂ ಅಗಾಧವಾದ ಪ್ರಗತಿ ಸಾಧಿಸಿದೆ. ಕರ್ನಾಟಕದ ಆದರ್ಶಪ್ರಾಯ ವಾಯುಗುಣದಲ್ಲಿ ಬೆಳೆಯಲಾಗದಿರುವಂಥ ಬೆಳೆಯಿಲ್ಲವೆಂದು ಹೇಳಲಾಗಿದೆಯಾದರೂ, ನೀರಾವರಿ ಸೌಲಭ್ಯಗಳು ದೊರೆತಿರುವ ಎಡೆಗಳಲ್ಲಿ ಕಬ್ಬು ಮತ್ತು ಬತ್ತ ಮುಖ್ಯ ಬೆಳೆಗಳು. ಇತರ ಭಾಗಗಳಲ್ಲಿ ರಾಗಿ, ದ್ವಿದಳಧಾನ್ಯಗಳು, ಜೋಳ ಮೊದಲಾದುವನ್ನು ಬೆಳೆಯಲಾಗುತ್ತಿದೆ. ಹುಬ್ಬಳ್ಳಿ ಧಾರವಾಡ ಮೊದಲಾದ ಭಾಗಗಳಲ್ಲಿನ ಕಪ್ಪು ಎರೆಮಣ್ಣು ಹತ್ತಿಯ ಬೆಳೆಗೆ ತುಂಬ ಉಪಯುಕ್ತ. ಕರ್ನಾಟಕದ ಸಸ್ಯ ಅಥವಾ ಅರಣ್ಯ ಸಂಪತ್ತಿನ ಗಣನೀಯವಾದ ಭಾಗ ಇಂಧನದ ಉದ್ದೇಶಗಳಿಗೇ ಬಳಕೆಯಾಗುತ್ತಿದ್ದು, ಅರಣ್ಯನಾಶದ ಪ್ರಭಾವ ಈ ವಲಯದಲ್ಲೂ ತನ್ನ ಬಿಸಿಯನ್ನು ತಾಗಿಸುತ್ತಿದೆ.

**ಪ್ರಾಣಿ ಸಂಪತ್ತು**

ಕರ್ನಾಟಕದ ಕರಾವಳಿ, ಮಲೆನಾಡು ಮತ್ತು ಬಯಲು ಸೀಮೆಗಳಲ್ಲಿ ವೈವಿಧ್ಯಮಯ ಪ್ರಾಣಿಸಂಪತ್ತು ಗೋಚರಿಸುತ್ತದೆ. ಕರ್ನಾಟಕದಲ್ಲಿ ಸಸ್ತನಿಗಳು, ಪಕ್ಷಿಗಳು, ಸರೀಸೃಪಗಳು, ದ್ವಿಚರಿಗಳು, ಮತ್ಸ್ಯಗಳು ಮೊದಲಾದ ಕಶೇರುಕಗಳೂ ಹಲವು ಬಗೆಯ ..ಅಕಶೇರುಕಗಳೂ ಕಾಣದೊರೆಯುತ್ತವೆ. ದಕ್ಷಿಣ ಕನ್ನಡ, ಉತ್ತರ ಕನ್ನಡ, ಕೊಡಗು, ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಬಹುಮಟ್ಟಿಗೆ ಎಲ್ಲ ಬಗೆಯ ಪ್ರಾಣಿವರ್ಗಗಳೂ ಕಾಣಿಸುತ್ತವೆ. ಕೋತಿ, ಸಿಂಗಲೀಕ, ಮುಸುವ, ನೀಲಗಿರಿ ಲಂಗೂರ್, ಕಾಡುಪಾಪ ಮೊದಲಾದ ಬಗೆಯ ಹೋಮೋಸೇಪಿಯನ್ ಪರಿವಾರದ ಪ್ರಾಣಿಗಳು ಕರ್ನಾಟಕದಲ್ಲಿವೆ. ಬಹುಮಟ್ಟಿಗೆ ಹಣ್ಣು ಹಂಪಲೇ ಇವುಗಳ ಆಹಾರವಾದರೂ, ಕೀಟ, ಹಲ್ಲಿ, ಕಪ್ಪೆ ಹಾಗೂ ಸಣ್ಣಮಟ್ಟ ಹಕ್ಕಿಗಳನ್ನೂ ಇವು ತಿನ್ನುವುದುಂಟು. ಮಾಂಸಾಹಾರಿ ಪ್ರಾಣಿಗಳಲ್ಲಿ ಸಿಂಹಗಳಂತೂ ಕರ್ನಾಟಕದಲ್ಲಿ ಇಲ್ಲವೇ ಇಲ್ಲ. ಹುಲಿ, ಚಿರತೆ, ಕಿರುಬ, ತೋಳ, ನೀರುನಾಯಿ, ಕರಡಿಗಳು ಸಾಕಷ್ಟು ಸಂಖ್ಯೆಯಲ್ಲಿ ಇದ್ದುವಾದರೂ, ಮಾನವನ ಉಪದ್ರವದಿಂದಾಗಿ ಇವುಗಳಲ್ಲಿ ಅನೇಕವು ಅವಶೇಷದ ಅಂಚಿಗೆ ಬಂದಿವೆ. ಜಿಂಕೆ, ಕಾಡುಹಂದಿ, ಬಾವಲಿ, ಅಳಿಲು, ಮೊಲ ಮೊದಲಾದುವು ಸಾಕಷ್ಟು ಸಂಖ್ಯೆಗಳಲ್ಲಿವೆ. ಕಾಡುಗಳಲ್ಲಿರುವ ಅತ್ಯಂತ ಬೃಹದಾಕಾರಾದ ಪ್ರಾಣಿಯೆಂದರೆ ಆನೆ. ಹಾಸನ, ಮೈಸೂರು, ಶಿವಮೊಗ್ಗ, ಕಡೂರು ಮೊದಲಾದ ಭಾಗಗಳಲ್ಲಿ ಹೆಚ್ಚಿಗೆ ಕಾಣಬರುತ್ತವೆ. ಕಾರಾಪುರ ಅರಣ್ಯದಲ್ಲಿ ನಡೆಯುತ್ತಿದ್ದ ಖೆಡ್ಡಾ ಕಾರ್ಯಕ್ರಮ ಜಗದ್ವಿಖ್ಯಾತವಾಗಿತ್ತು. ಕಾಡುಕೋಣ, ಸಾರಂಗ, ನರಿ,

ಮೊದಲಾದುವನ್ನು ಇಲ್ಲಿನ ಅರಣ್ಯಗಳಲ್ಲಿ ಕಾಣಬಹುದಾಗಿದೆ.

ಕರ್ನಾಟಕದ ಹಕ್ಕಿಗಳೆಲ್ಲವೂ ಹಾರುವ ಗುಂಪಿಗೆ ಸೇರಿದಂಥವು. ಇಲ್ಲಿಯೇ ವಾಸಿಸುವ ಪಕ್ಷಿಗಳಿರುವಂತೆಯೇ, ಇಲ್ಲಿಂದ ಬೇರೆಡೆಗೆ ವಲಸೆ ಹೋಗುವ ಹಾಗೂ ಬೇರೆಡೆಯಿಂದ ಇಲ್ಲಿಗೆ ವಲಸೆ ಬರುವ ಪಕ್ಷಿಗಳೂ ಇವೆ. ರಂಗನತಿಟ್ಟಿನ ಬಳಿಯಿರುವ ಪಕ್ಷಿಧಾಮ ಸುಪ್ರಸಿದ್ಧವಾದುದು. ನವಿಲು ತುಂಬಾ ಸುಂದರವಾದ ಪಕ್ಷಿ. ಇದು ಭಾರತದ ರಾಷ್ಟ್ರಪಕ್ಷಿ. ಕಾಗೆ, ಟಿಟ್ಟಿಭ, ಬುಲ್‌ಬುಲ್, ಕೋಳಿ, ಕಾಡುಕೋಳಿ, ಲಾವಕ್ಕಿ, ಪಾರಿವಾಳ, ಕೋಗಿಲೆ, ಗಿಳಿ, ಗೂಬೆ, ಮೈನಾ, ಗುಬ್ಬಚ್ಚಿ, ಗೀಜಗ, ಮಿಂಚುಳ್ಳಿ, ಕೊಕ್ಕರೆ, ಬಾತು ಮೊದಲಾದ ಅನೇಕ ಬಗೆಯ ಹಕ್ಕಿಗಳು ಇಲ್ಲಿಯ ಹಲವು ಭಾಗಗಳಲ್ಲಿ ಕಾಣಸಿಗುತ್ತವೆ. ಗರುಡ, ಡೇಗೆ, ಗಿಡುಗ, ಹದ್ದು, ರಣಹದ್ದು ಮೊದಲಾದುವನ್ನು ಇಲ್ಲಿ ಕಾಣಬಹುದು.

ಸರೀಸೃಪಗಳಲ್ಲಿ ಮೊಸಳೆಯೇ ದೊಡ್ಡದು. ಹೆಂಟೆಗೊದ್ದ, ಗೋಸುಂಬೆ, ಹಾವುರಾಣಿ, ಆಮೆ, ಹಲ್ಲಿ, ಹೆಬ್ಬಾವು, ಕೇರೆಹಾವು, ಹಸುರುಹಾವು, ಕಟ್ಟುಹಾವು, ನಾಗರಹಾವು, ಮಂಡಲದ ಹಾವು ಮೊದಲಾದುವೂ ಇಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಾಣದೊರೆಯುತ್ತವೆ. ಕಪ್ಪೆಗಳಿಗೂ ಮೀನುಗಳಿಗೂ ಕರ್ನಾಟಕದಲ್ಲಿ ಕೊರತೆಯೇನೂ ಇಲ್ಲ. ಕರಾವಳಿಯಲ್ಲಂತೂ ಮೀನುಗಾರಿಕೆ ಒಂದು ಬೃಹತ್ ಉದ್ಯಮ. ಒಳನಾಡಿನ ಕೆರೆಕುಂಟೆ ನದಿಹಳ್ಳಗಳೂ ಇವುಗಳಿಗೆ ಅನುಕೂಲಕರವಾದ ಸನ್ನಿವೇಶವನ್ನು ಒದಗಿಸಿವೆ. ಕ್ರಿಮಿಕೀಟಗಳೂ, ಸಸ್ಯಾಹಾರಗಳೂ, ಧಾರಾಳವಾಗಿ ದೊರೆಯುವ ಅರಣ್ಯಗಳಿರುವುದೇ ಈ ಬಗೆಯ ಪಶುಪಕ್ಷಿಗಳ ಸಮೃದ್ಧಿಗೆ ಕಾರಣ. ಕುರಿ, ಆಡು, ಹಸು, ಎಮ್ಮೆ, ಮೊದಲಾದುವು ಸಾಕು ಪ್ರಾಣಿಗಳು. ಉತ್ತರ ಬಯಲಿನಲ್ಲಿ ಎಮ್ಮೆಗಳ ಸಂಖ್ಯೆ ಹಸುಗಳ ಸಂಖ್ಯೆಗಿಂತ ಹೆಚ್ಚು. ಈಚೆಗೆ ಮಿಶ್ರತಳಿಯ ದನಕರುಗಳ ಸಂಖ್ಯೆಯೂ ಹೆಚ್ಚುತ್ತಿದೆ.

ಅಕಶೇರುಕ ವರ್ಗದ ಅನೇಕ ಪ್ರಾಣಿಗಳು – ಉದಾಹರಣೆಗೆ, ಅಮೀಬ, ಯೂಗ್ಲಿನ, ಪ್ಯಾರಮೀಸಿಯಂ, ಮೊದಲಾದುವು – ಜಲಾಶಯಗಳಲ್ಲಿ ಕಂಡು ಬರುತ್ತವೆ. ಹಲವು ಬಗೆಯ ಪರತಂತ್ರ ಜೀವಿಗಳೂ, ಮಲೇರಿಯಾ ಮತ್ತು ಆನೆಕಾಲು ರೋಗದಂಥ ಉಪದ್ರವಗಳಿಗೆ ಕಾರಣವಾಗುವ ಸೊಳ್ಳೆಗಳೂ. ಬೆಳೆಗಳಿಗೆ ಹಾನಿಯನ್ನುಂಟುಮಾಡುವಂಥ ಕೀಟಗಳೂ. ಕಡಲಿನ ಸ್ಪಂಜು ಪ್ರಾಣಿಗಳೂ, ಜೌಗು ಪ್ರದೇಶದ ಜೀವಿಗಳಾದ ಜಿಗಣೆ ಮೊದಲಾದುವೂ, ಬಸವನ ಹುಳುವಿನಂಥ ಮೃದ್ವಂಗಿಗಳೂ ಈ ವರ್ಗಕ್ಕೆ ಸೇರಿದವು. ಅನುಕೂಲಕರವಾದ ಅಥವಾ ವಿಶಿಷ್ಟವಾದ ಪರಿಸರಗಳಲ್ಲಿ ಅವುಗಳ ಸಂಖ್ಯೆ ಹಾಗೂ ಪರಿಣಾಮ ಎದ್ದು ಕಾಣುತ್ತಿರುವುದನ್ನು ಕಾಣಬಹುದು. ಈಚೆಗೆ ಮಲೇರಿಯಾದಂಥ ರೋಗವನ್ನು ತೊಡೆದು ಹಾಕಲು ಸಾಧ್ಯವಾಗಿದ್ದರೂ, ಆ ವರ್ಗದ ಪ್ರಾಣಿಗಳು ಇನ್ನೂ ಉಳಿದು ಕೊಂಡಿದ್ದು ಮತ್ತೆ ತಲೆ ಎತ್ತುವ ಸೂಚನೆಗಳೂ ಕಾಣಿಸುತ್ತಿವೆ. ಹೊಸ ಹೊಸ ಬಗೆಯ ಹಾಗೂ ನಿರೋಧಕ ಗುಣಗಳನ್ನು ಬೆಳೆಸಿಕೊಂಡ ಕೀಟಗಳೂ ಪ್ರಾಣಿಗಳೂ ಕಾಣಿಸಿಕೊಳ್ಳುತ್ತಿವೆಯೆಂದೂ ಹೇಳಲಾಗಿದೆ.

ಒಟ್ಟಿನಲ್ಲಿ ಕರ್ನಾಟಕದ ಪ್ರಾಣಿಸಂಪತ್ತು ವಿಪುಲವಾಗಿಯೂ, ವೈವಿಧ್ಯಮಯವಾಗಿಯೂ ಇದೆಯೆಂಬುದರಲ್ಲಿ ಅನುಮಾನವೇನೂ ಇಲ್ಲ. ಇದಕ್ಕೆ ಕರ್ನಾಟಕದ ಒಟ್ಟಾರೆ ಹಿತಕರವಾದ ವಾಯುಗುಣ ಮತ್ತು ವೈವಿಧ್ಯಮಯವಾದ ಭೂಪ್ರದೇಶ ಕಾರಣ ಎಂಬುದೂ ಸ್ಪಷ್ಟವಾಗಿಯೇ ಇದೆ.

# ಕರ್ನಾಟಕದ ಭೂ ಇತಿಹಾಸ

ವೈ. ಲಿಂಗರಾಜು

ಕರ್ನಾಟಕದ ನೆಲಕ್ಕೆ ಬಹು ಪುರಾತನ ಇತಿಹಾಸವಿದೆ. ಈ ನೆಲದ ಶಿಲಾ ಪರಂಪರೆ ಭೂಮಿ ರೂಪುಗೊಂಡಾಗಿನಿಂದಲೂ ತನ್ನ ಪರಿಸರಕ್ಕೆ ತಕ್ಕಂತೆ ಬದಲಾಗುತ್ತಾ ಬಂದಿದೆ. ಈ ಭೂಭಾಗ ಈಗ ಇರುವಂತೆ ದಕ್ಷಿಣ ಭಾರತದ ಆಕಾರವನ್ನು ಹೊಂದಿರಲಿಲ್ಲ. ನೆಲ, ಜಲಗಳ ಹಂಚಿಕೆ ಈಗಿನ ಹಾಗೆ ಇರಲಿಲ್ಲ. ಮೊತ್ತ ಮೊದಲಿಗೆ ಪಡೆದ ರೂಪವನ್ನು ಅನೇಕ ಬಾರಿಗೆ ಬದಲಿಸುತ್ತಾ ಬಂದಿದೆ. ಈಗಿನ ನೆಲದಲ್ಲಿರುವ ಶಿಲೆಗಳಲ್ಲಿನ ಕುರುಹುಗಳು ಯಾವ ಯಾವ ಕಾಲದಲ್ಲಿ ಎಂತಹ ಪರಿಸರವಿತ್ತು, ಇದು ಬದಲಾದ ಬಗೆ ಹೇಗೆ ಎಂಬುದನ್ನು ಸೂಚಿಸುತ್ತವೆ. ನಿಸರ್ಗವೇ ಛಾಪಿಸಿರುವ 'ಶಿಲಾ ಲೇಖ'ಗಳನ್ನು ಅಭ್ಯಸಿಸಿದ ಭೂ ವಿಜ್ಞಾನಿಗಳು ಕರ್ನಾಟಕದ ಭೂ ಇತಿಹಾಸವನ್ನು ಬರೆದಿದ್ದಾರೆ.

ಇವರ ಅಧ್ಯಯನಗಳ ಪ್ರಕಾರ ವಿಶ್ವದ ಅತಿಪುರಾತನ ಶಿಲೆಗಳು ಕರ್ನಾಟಕದ ನೆಲದಲ್ಲಿ ಉಳಿದುಬಂದಿವೆ. ಈ ನೆಲ ಹಿಂದೆ ಸಾಗರದಾಳದಲ್ಲಿತ್ತು ಎಂಬುದಕ್ಕೆ, ಅಸಂಖ್ಯಾತ ಜ್ವಾಲಾಮುಖಿಗಳು ಭೂ ಗರ್ಭದಿಂದ ಶಿಲಾಪಾಕವನ್ನು ಉಗ್ಗಿದ್ದಕ್ಕೆ, ಸವೆದ ಶಿಲಾಕಣಗಳು ಜಲತಲದಲ್ಲಿ ಸಂಚಯಿಸಿ ಹರವಲ್ಪಟ್ಟು ಪದರು ಪದರಾದ ಸಂಚಿತ ಶಿಲೆಗಳು ಸೃಷ್ಟಿಯಾದದ್ದಕ್ಕೆ ಮತ್ತು ಭೂ ಗರ್ಭದ ಶಾಖ ಮತ್ತು ಒತ್ತಡಗಳಿಗೆ ಒಳಗಾದ ಶಿಲೆಗಳು ರೂಪಾಂತರಗೊಂಡು ಮೇಲಕ್ಕೆತ್ತಲ್ಪಟ್ಟು ನೀರಿನಾಳದಲ್ಲಿದ್ದ ಭೂಮಿ ನೆಲವಾಗಿದ್ದಕ್ಕೆ, ನಾವು ಕಾಣುವ ಕುರುಹುಗಳನ್ನು ಅಭ್ಯಸಿಸಿದಾಗ ಮತ್ತು ಆಗ ಗತಿಸಿದ ಪ್ರಕ್ರಿಯೆಗಳನ್ನು ಈಗಿನ ಸಾಗರದಾಳ ಮತ್ತು ನೆಲದ ಮೇಲೆ ಸಾಗುತ್ತಿರುವ ಪ್ರಕ್ರಿಯೆಗಳಿಗೆ ಹೋಲಿಸಿದಾಗ ಗತಿಸಿದ ಇತಿಹಾಸ ಚಿತ್ರಿತವಾಗುತ್ತದೆ.

ಕ್ಯಾಪ್ಟನ್ ಟಿ. ಜೆ. ನ್ಯೂಬೋಲ್ಡ (೧೮೮೦) ಎಂಬ ಭೂ ವಿಜ್ಞಾನಿ ಮೊದಲ ಬಾರಿಗೆ ಕರ್ನಾಟಕದ ನೆಲದ ಸೇಕಡಾ ೭೦ ಭಾಗ ಬೂದುಬಣ್ಣದ ಸೂಕ್ಷ್ಮ ಗೆರೆಗಳಿರುವಂತೆ ಕಾಣುವ ಗ್ರಾನೈಟ್‌ನೀಸ್ ಎಂಬ ಶಿಲೆಗೂ ಮಿಕ್ಕ ಭಾಗದಲ್ಲಿ ಸುಮಾರು ೨೦ ಭಾಗ ಹಸಿರ್ಗಪ್ಪು ವರ್ಣದ ಪದರು ಪದರಾದ ಶಿಸ್ಟ್ ಎಂಬ ಶಿಲೆಗೂ ಇರುವ ವ್ಯತ್ಯಾಸವನ್ನು ಕಂಡುಹಿಡಿದಾಗಿನಿಂದ ಕರ್ನಾಟಕದ ಭೂ ಇತಿಹಾಸದ ಅಧ್ಯಯನ ಆರಂಭವಾಯಿತು. ಅನಂತರ ೧೮೮೮ ರಲ್ಲಿ ಬ್ರೂಸ್‌ಫೂಟ್ ಮತ್ತು ೧೯೦೦ರ ಅನಂತರ ಡಾ| ಸ್ಮಿತ್ ತರುವಾಯ ಸಂಪತ್ ಅಯ್ಯಂಗಾರ್, ಸಾಂಬಶಿವಯ್ಯ, ಬಿ. ಜಯರಾಮ್ ಮತ್ತು ಬಿ. ರಾಮರಾವ್‌ರವರು, ಪ್ರಸ್ತುತ ಡಾ. ಸಿ. ಎಸ್. ಪಿಚ್ಚಮುತ್ತು ಹಾಗೂ ಡಾ. ಬಿ. ಪಿ. ರಾಧಾಕೃಷ್ಣ ಹಾಗೂ ಅನೇಕ ಭೂ ವಿಜ್ಞಾನಿಗಳು ಈ ನೆಲದ ಇತಿಹಾಸ ಶೋಧನೆಯಲ್ಲಿ ತೊಡಗಿದ್ದಾರೆ.

ಇವರ ಸಂಶೋಧನೆಗೆ ಮುಖ್ಯ ಪರಿಕರಗಳಾದ ನೆಲವನ್ನು ನಕಲಿಸುವ ಭೂ ವೈಜ್ಞಾನಿಕ ನಕ್ಷೆಗಳು, ಭೂ ಭೌತ ಮತ್ತು ಭೂ ರಾಸಾಯನಿಕ ಸಂಶೋಧನೆಗಳು ಅರ್ಥವಾಗದ ಅನೇಕ ಸಮಸ್ಯೆಗಳನ್ನು ಬಿಡಿಸಲು ಸಹಕಾರಿಯಾಗಿವೆ. ಮೂಲ ಸಂಶೋಧನೆಗಳು ಅಭಿವೃದ್ಧಿಯಾದಂತೆಲ್ಲ ಅವುಗಳನ್ನು ಅನ್ವಯಿಸಿ ಬಿಡಿಸಬಹುದಾದ ಸಮಸ್ಯೆಗಳು ಭೂ ಇತಿಹಾಸವನ್ನು ಹೆಚ್ಚು ಸ್ಪಷ್ಟಗೊಳಿಸುತ್ತವೆ. ಈ ಲೇಖನದ ವ್ಯಾಪ್ತಿಯಲ್ಲಿ ಭೂ ಇತಿಹಾಸದ ಅಧ್ಯಯನ ಕ್ರಮ ಮತ್ತು ಪರಿಚಯದೊಡನೆ ಇದುವರೆಗಿನ ಕರ್ನಾಟಕ ಭೂ ಇತಿಹಾಸದ ಸಂಶೋಧನೆಯ ಸಾರಾಂಶವನ್ನು ಸಂಗ್ರಹವಾಗಿ ವಿವರಿಸಲು ಪ್ರಯತ್ನಿಸಿದೆ.

## ಭೂ ಇತಿಹಾಸ

ಭೂಮಿಯ ವ್ಯಾಸ ಸುಮಾರು ೧೨,೭೪೨ ಕಿ.ಮೀ. ಅದರ ಹೊರ ಪದರದ ಗಾತ್ರ ಕೇವಲ ೩೫ ಕಿ.ಮೀ. ಅದರಲ್ಲಿ ನಾವು ನಡೆದಾಡುವ ನೆಲ ೫ ಕಿ.ಮೀ. ಗಾತ್ರದ್ದು. ಭೂಮಿಯ ಹೊರ ಪದರ, ಟೊಮಟೋ ಹಣ್ಣಿಗೆ ಸಿಪ್ಪೆ ಇದ್ದಂತೆ. ಈ ತೆಳು ಹೊರ ಪದರದೊಡನೆ ಜಲಮಂಡಲ ಹಾಸುಹೊಕ್ಕಾಗಿದ್ದು ಶೇಕಡಾ ೭೦ ಕ್ಕೂ ಹೆಚ್ಚುಭಾಗ ನೀರಿನಿಂದ ಆವೃತವಾಗಿದೆ. ಭೂಮಿಯ ಜಲ ಮತ್ತು ಹೊದಿಕೆ ಅನೇಕ ಭಾರೀ ವ್ಯತ್ಯಾಸಗಳಿಗೆ ಒಳಗಾಗಿದೆ. ಇದಕ್ಕೆ ಕಾರಣ ಭೂಮಿಯ ಒಳಪದರಗಳಲ್ಲಿ ಸಾಗುವ ಪ್ರಕ್ರಿಯೆಗಳು ಹಾಗೂ ವಾತಾವರಣ, ನೆಲ ಮತ್ತು ಜಲಗಳ ನಡುವೆ ಆಗುವ ಕೆಲ ಅಂತರ್ ಪ್ರಕ್ರಿಯೆಗಳು. ಭೂ ಗರ್ಭದೊಳಗಿನ ಅಪಾರ ಶಾಖದ ಜೊತೆಗೆ ವಿಕಿರಣಪಟು ಖನಿಜ ಉತ್ಪಾದಿಸುವ ಶಾಖವೂ ಸೇರುತ್ತದೆ. ಇದರಿಂದ ಒತ್ತಡದಲ್ಲಿ ವ್ಯತ್ಯಾಸ ವೈಪರೀತ್ಯವೂ ಆಗಿ ಅದರಿಂದ ಅಲ್ಲಲ್ಲೇ ಉಂಟಾಗುವ ಸಂವಹನ ಕೋಶಗಳು ನೆಲ ಕುಸಿಯಲು, ಜ್ವಾಲಾಮುಖಿಯಾಗಿ ಶಿಲಾರಸ ಹೊರ ಹೊಮ್ಮಲು ಕಾರಣವಾಯಿತು.

ಭೂಮಿಯ ಹೊರಗಿನ ಬಿಸಿಲು, ಗಾಳಿ, ಮಂಜುಗಡ್ಡೆ, ಮಳೆ ಮತ್ತು ನದಿ ಇವುಗಳ ನಿಯೋಗದಿಂದ ದಿನ ನಿತ್ಯ ಭೂಮಿಯ ಸವೆತ ಅವ್ಯಾಹತವಾಗಿ ಸಾಗುತ್ತಾ ಸಾಗರದೊಡಲು ತುಂಬುತ್ತಾ ಬರುತ್ತದೆ. ಕೆಲವೊಮ್ಮೆ ಸಾಗರತಳ ಕೆಲವೆಡೆ

ಕುಸಿದರೆ ಮತ್ತೆ ಕೆಲವೆಡೆ ಮೇಲಕ್ಕೆತ್ತಲ್ಪಟ್ಟು ಪರ್ವತವಾಗಿರುವುದನ್ನು ಸಹ ಕಾಣಬಹುದು.

ಈಗ ಪ್ರಕೃತಿಯಲ್ಲಿ ಸಾಗಿರುವ ಈ ಪ್ರಕ್ರಿಯೆಗಳನ್ನು ಗಮನಿಸಿ ನೆಲದಾಳದ ಶಿಲೆಗಳಲ್ಲಿ ಇಂತಹ ಪ್ರಕ್ರಿಯೆಗಳು ಹಿಂದೆ ಆಗಿರುವುದನ್ನು ಗುರುತಿಸಬಹುದಾಗಿದೆ. ಭೂ ವಿಜ್ಞಾನದಲ್ಲಿ ವರ್ತಮಾನದ ಪ್ರಕ್ರಿಯೆಗಳು ಭೂತಕಾಲದಲ್ಲಿ ನಡೆದ ಪ್ರಕ್ರಿಯೆಗಳನ್ನರಿಯಲು ಕೀಲಿಯಂತೆ.

ನೆಲದ ಮೇಲೆ ನಮಗೆ ಶಿಲೆಗಳಲ್ಲಿ ಕಂಡ ಕುರುಹುಗಳು ಇಂತಿಷ್ಟು ಕಾಲದ ಹಿಂದೆ ನಡೆದದ್ದು ಎಂದು ನಿರ್ಧರಿಸಲು ಭೂವೈಜ್ಞಾನಿಕ ಕಾಲಪಟ್ಟಿಯನ್ನು ರೂಪಿಸಲಾಯಿತು. ಈ ಕಾಲಪಟ್ಟಿ ಮೊದಮೊದಲು, ಶಿಲೆಗಳ ಶಿಥಿಲೀಕರಣದ ಗತಿಯನ್ನು, ಸಮುದ್ರಗಳ ನೀರು, ನೆಲದ ಮಣ್ಣುಂಡು ಉಪ್ಪಿನ ಅಂಶ ಹೆಚ್ಚಿಸಿಕೊಂಡ ಗತಿಯನ್ನು, ಜೀವರಾಶಿಗಳು ವಿಕಾಸವಾದ ಗತಿಯನ್ನು, ಸೂರ್ಯ ಅಥವಾ ಭೂಮಿ ಶಾಖ ಕಳೆದುಕೊಳ್ಳುತ್ತಿರುವ ಗತಿಯನ್ನು, ಸಾಗರದಾಳದ ಪ್ರಪಾತಗಳು ತುಂಬುತ್ತಿರುವ ಗತಿಯನ್ನು ಅಥವಾ ಪರ್ವತರಾಶಿ ಮೇಲಕ್ಕೇರುತ್ತಿರುವ ಗತಿಯನ್ನು ಆಧರಿಸಲಾಗಿರುತ್ತಿತ್ತು. ಆದರೆ ಈ ಎಲ್ಲ ಕ್ರಮಗಳೂ ಸತ್ಯಕ್ಕೆ ಹತ್ತಿರವಾದರೂ ನಿಖರವಾಗಿರಲಿಲ್ಲ. ಖನಿಜಗಳಲ್ಲಿ ವಿಕಿರಣ ಶೀಲತೆಯನ್ನು ಆವಿಷ್ಕರಿಸಿದ ಅನಂತರ ನಿಖರ ಕಾಲಮಾನ ಕ್ರಮವನ್ನು ಈ ಕಾಲಪಟ್ಟಿಯ ತಯಾರಿಕೆಗೆ ಅಳವಡಿಸಲಾಯಿತು.

**ಶಿಲೆಯೊಳಗಿನ ಗಡಿಯಾರ**

ವಿಕಿರಣಶೀಲ ಖನಿಜಗಳು ನಿಯತ ಗತಿಯಲ್ಲಿ ಶಾಖವನ್ನು ಬಿಡುಗಡೆ ಮಾಡುತ್ತಾ ಬೇರೆ ಖನಿಜವಾಗುತ್ತವೆ. ಉದಾಹರಣೆಗೆ ಯುರೇನಿಯಂ ಖನಿಜವು (ಯು೨೩೮), ಸೀಸ (ಪಿಬಿ ೧೦) ಮತ್ತು ಎಂಟು ಹೀಲಿಯಂ ಪರಮಾಣುವಾಗಿ ಪರಿಣಮಿಸಲು ೪,೫೦೦ ದಶಲಕ್ಷಕ್ಕೂ ಸ್ವಲ್ಪ ಹೆಚ್ಚು ವರ್ಷಗಳು ಬೇಕಾಗುತ್ತವೆ. ಯಾವುದೋ ಒಂದು ಶಿಲೆ ಹರಳುಗಟ್ಟಿದೊಡನೆ ಅದರಲ್ಲಿರುವ ವಿಕಿರಣಪಟು ಖನಿಜ ತನ್ನಲ್ಲಿನ ಯುರೇನಿಯಂ ಮತ್ತು ಹೀಲಿಯಂ ಹಾಗೂ ಯುರೇನಿಯಂ ಮತ್ತು ಸೀಸದ ಪ್ರಮಾಣವನ್ನನುಸರಿಸಿ ಇಂತಿಷ್ಟು ಕಾಲ ಸಾಗಿದೆ ಎಂದು ನಿರ್ಧರಿಸಿ ಶಿಲೆಯ ವಯಸ್ಸನ್ನು ಗುರುತಿಸಬಹುದು. ಈ ಕುರುಹು 'ಶಿಲೆಯೊಳಗಿನ ಗಡಿಯಾರ' ಇದ್ದಂತೆ.

ಕೆಲವು ಶಿಲೆಗಳೊಳಗೆ ಇರಬಹುದಾದ ಜೀವಿಗಳ ಪಳೆಯುಳಿಕೆಗಳು ಹಿಂದೆ ಬಾಳಿದ ಪ್ರಾಣಿಗಳ ಅವಶೇಷಗಳು, ಏಕಕೋಶ ಜೀವಿಗಳಂಥ ನೀರಿನಲ್ಲಿ ಮಾತ್ರ ವಾಸಿಸುತ್ತಿದ್ದ ಜಲಚರ ಪ್ರಾಣಿಗಳು, ನೀರು ನೆಲ ಎರಡರಲ್ಲೂ ವಾಸಿಸಬಲ್ಲ ದ್ವಿಚರಿಗಳು, ಅನಂತರ ಸರೀಸೃಪಗಳು, ಹಕ್ಕಿಗಳು, ಸಸ್ತನಿಗಳು ಹೀಗೆ ಕ್ರಮವಾಗಿ ಸೃಷ್ಟಿ ವಿಕಾಸವಾದದ್ದನ್ನು ಪಳೆಯುಳಿಕೆಗಳ ಸಹಾಯದಿಂದ ಶಿಲೆಗಳಲ್ಲಿ ಗುರುತಿಸಲಾಗಿದೆ. ಅದೇ ಕ್ರಮದಲ್ಲಿ ಆಯಾ ಜೀವಿ ವರ್ಗ ಪ್ರಮುಖವಾಗಿದ್ದ ಕಾಲವನ್ನು ಗುರುತಿಸಿ ವಿಂಗಡಿಸಲಾಗಿದೆ. ಇದು ಕರ್ನಾಟಕ ಚರಿತ್ರೆಯಲ್ಲಿ ಚಾಲುಕ್ಯರ ಕಾಲ, ಕದಂಬರ ಕಾಲ ಎಂದ ಹಾಗೆ.

**ಜಗತ್ತಿನ ಅತಿ ಪುರಾತನ ಭೂಫಲಕ**

ಭೂಮಿ ಉಗಮಿಸಿ ಸುಮಾರು ಐದು ಸಾವಿರ ದಶಲಕ್ಷಕ್ಕೂ ಮೀರಿದೆ. ಅದರಲ್ಲಿ ಮೂರು ಸಾವಿರ ದಶಲಕ್ಷ ವರ್ಷಗಳವರೆಗೂ ನಮಗೆ ಯಾವ ತೆರನಾದ ಘಟನೆಗಳ ಕುರುಹೂ ಕಂಡುಬಂದಿಲ್ಲ. ಈ ಕಾಲವನ್ನು (ಎಜೊಯಿಕ್ ಈಪಾಕ್) ಎಂದರೆ ನಿರ್ಜೀವ ಕಲ್ಪ ಎಂದು ಕರೆಯಲಾಗಿದೆ.

ಮೂರು ಸಾವಿರದ ಎಂಟುನೂರು ದಶಲಕ್ಷ ವರ್ಷಗಳ ಹಿಂದಿನಿಂದ ಆರುನೂರು ದಶಲಕ್ಷ ವರ್ಷಗಳವರೆಗಿನ ಹಿಂದಿನ ಕಾಲವನ್ನು ಕೇವಲ ಹಸಿರು ಪಾಚಿ, ಕೆಲ ಜಾತಿಯ ಬೂಜು ಮತ್ತು ಸೂಕ್ಷ್ಮಾಣು ಜೀವಿಗಳ ಚಟುವಟಿಕೆಯಿಂದ ಉಂಟಾಗಿರಬಹುದೆಂದು ಸಂದೇಹಿಸಲಾಗಿರುವ ಕಬ್ಬಿಣ, ಗ್ರಾಫೈಟ್ ಮತ್ತು ಇಂಗಾಲಯುಕ್ತ ಜೇಡು ಶಿಲೆಗಳ ಕುರುಹಿನಿಂದ ಗುರುತಿಸಬಹುದಾಗಿದೆ. ಈ ಕಾಲವನ್ನು ಆರ್ಷೇಯ ಜೀವಕಲ್ಪ (ಆರ್ಕಿಯೋಜೋಯಿಕ್ ಈಪಾಕ್) ಎಂದು ಕರೆಯಲಾಗಿದೆ.

ಒಂದು ಸಾವಿರ ದಶಲಕ್ಷ ವರ್ಷಗಳ ಹಿಂದಿನಿಂದ ೬೦೦ ದಶಲಕ್ಷ ವರ್ಷದ ಹಿಂದಿನ ವರೆಗಿನ ಕಾಲವನ್ನು ಸೂಕ್ಷ್ಮಾಣು ಜೀವಿಗಳು, ಸಮುದ್ರ ಜೀವಿಗಳು, ಪಾಚಿಗಳ ಪಳೆಯುಳಿಕೆ ಮತ್ತು ಹುಳುಗಳು ಕೊರೆದ ಕುರುಹಿನಂಥ ಪರೋಕ್ಷ ಚಿಹ್ನೆಗಳಿಂದ ಗುರುತಿಸಬಹುದಾಗಿದೆ. ಈ ಕಾಲವನ್ನು ಪ್ರಾಚ್ಯ ಜೀವಿಕಲ್ಪ (ಪ್ರೊಟೆರೊಜೊಯಿಕ್ ಈಪಾಕ್) ಎಂದು ಹೆಸರಿಸಲಾಗಿದೆ.

ಈ ಮೂರು ಕಲ್ಪಗಳನ್ನು ಸೇರಿಸಿ ಪ್ರಿಕೇಂಬ್ರಿಯನ್ ಅಥವಾ ಕೇಂಬ್ರಿಯನ್ ಪೂರ್ವಯುಗ ಎಂದು ಕರೆಯಲಾಗಿದೆ. ಈ ಯುಗದಲ್ಲಿ ರೂಪುಗೊಂಡ ಶಿಲೆಗಳನ್ನು ಕರ್ನಾಟಕದ ನೆಲದಲ್ಲಿ ಗುರುತಿಸಬಹುದಾಗಿದೆ. ಆದ್ದರಿಂದಲೇ ಈ ಭೂಭಾಗವನ್ನು ಜಗತ್ತಿನ ಅತಿ ಪುರಾತನ ಭೂ ಫಲಕಗಳಲ್ಲಿ ಒಂದೆಂದು ಗುರುತಿಸಲಾಗಿದೆ. ಇಂತಹ ಪುರಾತನ ಭೂ ಫಲಕಗಳನ್ನು ಆಸ್ಟ್ರೇಲಿಯ, ದಕ್ಷಿಣ ಆಫ್ರಿಕ, ಬ್ರೆಜಿಲ್, ಕೆನಡ, ಗಯಾನ ಮತ್ತು ನೈಜೀರಿಯಗಳಲ್ಲಿ ಕಾಣಬಹುದಾಗಿದೆ.

ಈ ಯುಗದ ಅನಂತರ ಪ್ರಾಚೀನ ಜೀವಿಯುಗ (ಪೇಲಿಯೊಜೊಯಿಕ್ ಈರ) ಉರುಳಿತು. ಈ ಯುಗದ ಕಾಲ ೬೦೦ ದಶಲಕ್ಷ ವರ್ಷ ಹಿಂದಿನಿಂದ ೨೨೦ ದಶಲಕ್ಷ ವರ್ಷಗಳ ಹಿಂದಿನ ವರೆಗೆ ಇದ್ದು, ಆ ಕಾಲವನ್ನು ಒಟ್ಟು ಆರು ಕಲ್ಪಗಳಾಗಿ ವಿಂಗಡಿಸಲಾಗಿದೆ. ಈ ಪ್ರತಿ ಕಲ್ಪದಲ್ಲಿನ ಬೇರೆ ಬೇರೆ ಜಾತಿಯ ಜೀವಿ ವರ್ಗ ಪ್ರಮುಖ ಪಾತ್ರವಹಿಸಿದವು. ಕೆಲ ಜಾತಿಯ ಜೀವಿಗಳು ಹೊಸತಾಗಿ ವಿಕಾಸವಾದರೆ ಕೆಲವು ಅಂತ್ಯಗೊಂಡುವು. ಮೊದಲ ಕಲ್ಪವಾದ ಕೇಂಬ್ರಿಯನ್ ಕಲ್ಪದಲ್ಲಿ ತ್ರಿಭಾಗಿ ದೇಹ ಹೊತ್ತ ಟ್ರೈಲೋಬೈಟ್ ಎಂಬ ಪ್ರಾಣಿ ಪ್ರಮುಖವಾಗಿದ್ದು ಅವುಗಳ ಪಳೆಯುಳಿಕೆಯನ್ನು ಆ ಕಲ್ಪದ ಶಿಲೆಗಳಲ್ಲಿ ಕಾಣಬಹುದು. ಎರಡನೆಯದಾದ ಆರ್ಡೋವೀಶಿಯನ್ ಕಲ್ಪದ ಶಿಲೆಗಳಲ್ಲಿ ಗ್ರಾಪ್ಟೋಲೈಟ್ ಎಂಬ ಸಮೂಹ ಜೀವಿಯ ಪಳೆಯುಳಿಕೆಗಳನ್ನು ವಿಶೇಷವಾಗಿ ಕಾಣಬಹುದು. ಅನಂತರದ ಸೈಲ್ಯೂರಿಯನ್ ಕಲ್ಪದಲ್ಲಿ ಹವಳರಾಶಿ ವಿಕಾಸಗೊಂಡಿದ್ದು ಅದರ ಪಳೆಯುಳಿಕೆಗಳನ್ನು ವಿಶೇಷವಾಗಿ ಅಂದಿನ ಶಿಲೆಗಳಲ್ಲಿ ಕಾಣಬಹುದು. ನಾಲ್ಕನೇಯದಾದ ಡಿವೋನಿಯನ್ ಕಲ್ಪದಲ್ಲಿ ಮೀನು ಮತ್ತು ದ್ವಿಚರ ಪ್ರಾಣಿಗಳ ಪಳೆಯುಳಿಕೆಗಳು ಕಂಡುಬರುತ್ತವೆ. ಐದನೆಯದಾದ ಇಂಗಾಲ ಕಲ್ಪದ ಶಿಲೆಗಳಲ್ಲಿ ಕಲ್ಲಿದ್ದಲಾಗಿರುವ ಬೃಹತ್ ದೇಹೀ ಮೀನು, ಚೇಳು, ಜಿರಲೆ ಬೃಹದಾಕಾರ ಸಸ್ಯರಾಶಿ ಮುಂತಾದವುಗಳ ಪಳೆಯುಳಿಕೆಗಳು ಕಂಡುಬರುತ್ತವೆ. ಆರನೆಯ ಮತ್ತು ಪ್ರಾಚೀನ ಜೀವಿ ಯುಗದ ಕೊನೆಯ ಕಲ್ಪವಾದ ಪರ್ಮಿಯನ್ ಕಲ್ಪದಲ್ಲಿ ಸಸ್ತನಿಗಳನ್ನು ಹೋಲುತ್ತಿದ್ದ ಸರೀಸೃಪಗಳು ವಿಕಾಸಗೊಂಡಿರುವುದನ್ನು ಅವುಗಳ ಪಳೆಯುಳಿಕೆಗಳಿಂದ ಗುರುತಿಸಬಹುದಾಗಿರುತ್ತದೆ. ಪ್ರಾಚೀನ ಜೀವಿ ಯುಗದ (ಪೇಲಿಯೋಜೋಯಿಕ್ ಈರ) ಶಿಲೆಗಳು ಕರ್ನಾಟಕದ ನೆಲದಲ್ಲಿ ಕಂಡುಬಂದಿಲ್ಲ.

ಇನ್ನೂರ ಇಪ್ಪತ್ತು ದಶಲಕ್ಷ ವರ್ಷಗಳ ಹಿಂದಿನಿಂದ ೭೦ ದಶಲಕ್ಷ ವರ್ಷಗಳ ಹಿಂದಿನ ವರೆಗಿನ ಕಾಲವನ್ನು ಮಧ್ಯ

ಜೀವಿಯುಗ ಎಂದು ಕರೆಯಲಾಗಿದೆ. ಈ ಯುಗವನ್ನು ಮೂರು ಕಲ್ಪಗಳನ್ನಾಗಿ ವಿಂಗಡಿಸಲಾಗಿದೆ. ಮೊದಲನೆಯದಾದ ಟ್ರಿಯೊಸಿಕ್ ಕಲ್ಪದಲ್ಲಿ ಪೆಡಂಭೂತಗಳಂಥ ಡೈನೋಸಾರ್‌ಗಳು ಬಾಳಿದುವು. ಅವುಗಳ ದೈತ್ಯಾಕೃತಿ ಆಗಿನ ಬೃಹತ್ ಸಸ್ಯರಾಶಿ ಮತ್ತು ಹವೆಯನ್ನು ಪ್ರತಿನಿಧಿಸುತ್ತದೆ. ಈ ಯುಗದ ಎರಡನೆಯ, ಜುರಾಸಿಕ್ ಕಲ್ಪದಲ್ಲಿ ಹೊಸ ಬಗೆಯ ಡೈನೋಸಾರ್‌ಗಳು ಸುಧಾರಿತ ಸಸ್ಯರಾಶಿಗಳು ಕಂಡು ಬಂದುವು. ಮಧ್ಯ ಜೀವಿಯುಗದ ಕೊನೆಯ, ಕ್ರಿಟೇಶಿಯನ್ ಕಲ್ಪದಲ್ಲಿ ಬೃಹತ್ ಡೈನೋಸಾರ್‌ಗಳು ಅಂತ್ಯಗೊಂಡುವು. ಹವೆಯಲ್ಲಿ ಬದಲಾವಣೆ ಆಯಿತು. ಹೂ ಬಿಡುವ ಸಸ್ಯಗಳು ವಿಕಾಸವಾದದ್ದು ಅವುಗಳ ಪಳೆಯುಳಿಕೆಯಿಂದ ಸೂಚಿತವಾಗುತ್ತದೆ.

ಅನಂತರದ ಯುಗ ಕಯಸೋಜೊಯಿಕ್ ಯುಗ ಅಥವಾ ನವಜೀವಕಲ್ಪ ಎನ್ನಬಹುದು. ಈ ಯುಗ ೭೦ ದಶಲಕ್ಷ ವರ್ಷಗಳಿಂದ ಇತ್ತೀಚಿನ ವರೆಗಿನದಾಗಿದ್ದು, ಪ್ರಾಚೀನ ಸಸ್ತನಿಗಳಿಂದ ಮನುಷ್ಯ ಜೀವಿಯ ವರೆಗಿನ ಪಳೆಯುಳಿಕೆಗಳನ್ನು ಈ ಕಾಲದ ಶಿಲೆಗಳಲ್ಲಿ ಗುರುತಿಸಬಹುದಾಗಿದೆ.

ಭೂವೈಜ್ಞಾನಿಕ ಕಾಲ ಪಟ್ಟಿಯಲ್ಲಿನ ಪ್ರಿಕೇಂಬ್ರಿಯನ್ ಯುಗದ ಆರ್ಷೇಯ ಕಲ್ಪ (Archeam Epoch) ಮತ್ತು ಪ್ರಾಚ್ಯ ಜೀವಿ ಕಲ್ಪದ (Proterozase Epoch) ಶಿಲೆಗಳನ್ನು ಕರ್ನಾಟಕದ ನೆಲದಲ್ಲಿ ಗುರುತಿಸಬಹುದು. ಇದೇ ತೆರನಾದ ಶಿಲೆಗಳನ್ನು ಇವುಗಳ ಸಮಕಾಲೀನ ಭೂಫಲಕಗಳಲ್ಲಿಯೂ ಕಾಣಬಹುದು.

ಜಗತ್ತಿನ ಅತಿ ಪುರಾತನ ಭೂಫಲಕಗಳ ಬಗ್ಗೆ ವಿಶೇಷ ಅಧ್ಯಯನಗಳು ಸುದೀರ್ಘವಾಗಿ ಸಾಗಿವೆ. ಕರ್ನಾಟಕದ ಭೂಫಲಕವನ್ನು ಈ ಅಧ್ಯಯನಕ್ಕೆ ಮಾದರಿಯನ್ನಾಗಿಸಿಕೊಂಡಿದ್ದಾರೆ. ಕರ್ನಾಟಕದ ಮತ್ತು ವಿದೇಶಗಳಲ್ಲಿರುವ ಅನೇಕ ಭೂವಿಜ್ಞಾನಿಗಳು ಈ ಅಧ್ಯಯನದಲ್ಲಿ ಸತತವಾಗಿ ಪಾಲ್ಗೊಂಡು ಚರ್ಚಿಸಿ ಆಗಿಂದಾಗ್ಗೆ ಪ್ರಕಟಿಸುತ್ತ ಇರುತ್ತಾರೆ.

**ಕರ್ನಾಟಕದ ಭೂಫಲಕ**

ಕರ್ನಾಟಕದ ಭೂಫಲಕ ಬೇರೆಲ್ಲ ಪುರಾತನ ಫಲಕಗಳ ಹಾಗೇ ೨,೭೦೦ ದಶಲಕ್ಷ ವರ್ಷಗಳ ಹಿಂದೆ ಅತಿ ಶಾಖದಿಂದ ಕೂಡಿತ್ತು, ಆದ್ದರಿಂದಲೇ ಮೃದುವಾಗಿದ್ದು ಸುಲಭ ಚಲನೆಗೆ ಒಳಗಾಗುವಂತಿತ್ತು. ನೀರಿನಿಂದ ಆವೃತವಾಗಿದ್ದು ಈ ಭಾಗದಲ್ಲಿ ಮಧ್ಯೆ ಮಧ್ಯೆ ಭೂವೈಜ್ಞಾನಿಕ ನಕ್ಷೆಯಲ್ಲಿ ಶಿಸ್ಟ್ ಶಿಲಾಸ್ತೋಮಗಳು ಸೂಚಿತವಾಗಿರುವೆಡೆಗಳಲ್ಲಿ ಉದ್ದವಾದ ಮಹಾಕಂದರಗಳು ಇದ್ದವು. ಆ ಕಂದರಗಳ ತಳದಲ್ಲಿನ ಶಾಖ ವಿಪರೀತ ಇತ್ತು. ಇದಕ್ಕೆ ಕಾರಣ ಮೊದಲೇ ಇದ್ದ ಶಾಖದ ಜೊತೆಗೆ ಭೂಗರ್ಭದಿಂದ ಆಗಾಗ್ಗೆ ಉಗ್ಗಿಬರುತ್ತಿದ್ದ ಶಿಲಾಪಾಕ. ಉಗ್ಗಿಬಂದ ಶಿಲಾಪಾಕ ನೀರಿನ ಸಂಪರ್ಕವಾಗುತ್ತಿದ್ದಂತೆ ತಣ್ಣಗಾಗಿ ದಿಂಬಿನಾಕೃತಿಯನ್ನು ತಾಳಿ ಒಂದರ ಮೇಲೊಂದರಂತೆ ಪೇರಿಸಲ್ಪಡುತ್ತಿದ್ದವು. ಈ ತೆರನಾದ ಶಿಲಾಪಾಕದ 'ದಿಂಬು'ಗಳ ಸೃಷ್ಟಿಯನ್ನು ಈಗಿನ ಸಾಗರದಾಳಗಳಲ್ಲಿ ಕಾಣಬಹುದು. ಈ ರೀತಿ ಹಿಂದೆ ಆದ ಪ್ರಕ್ರಿಯೆಯ ಕುರುಹಾಗಿ ನಮಗೆ ಅನೇಕ ಸ್ಥಳಗಳಲ್ಲಿ ಇಂತಹ ದಿಂಬಿನ ರಚನೆಗಳು ಕಂಡುಬರುತ್ತವೆ. ಚಿತ್ರದುರ್ಗ ಜಿಲ್ಲೆಯ ಮರಡಿಹಳ್ಳಿ ಎಂಬಲ್ಲಿ ಇಂತಹ ದಿಂಬಿನ ರಚನೆಗಳನ್ನು ಕಾಣಬಹುದು. ಈ ಸ್ಥಳವನ್ನು ರಾಷ್ಟ್ರೀಯ ಭೂವೈಜ್ಞಾನಿಕ ಸ್ಮಾರಕವನ್ನಾಗಿ ಕಾದಿರಿಸಲಾಗಿದೆ. ಜ್ವಾಲಾಮುಖೀಕೃತ ಶಿಲೆಗಳೊಂದಿಗೆ ಆಗಿದ್ದ ಕಂದರಗಳ ಪಾರ್ಶ್ವಗಳಿಂದ ಕುಸಿಯುತ್ತಿದ್ದ ಶಿಲಾಕಣಗಳು ಸಂಚಯಿಸಿ ಸಂಚಿತ ಶಿಲೆಗಳ ಸೃಷ್ಟಿಯೂ ಆಗಿದೆ.

ಹೀಗೆ ಸೃಷ್ಟಿಯಾದ ಜ್ವಾಲಾಮುಖಿಯಿಂದಾದ ಶಿಲೆಗಳು ಸಂಚಯಿಸಿ ಇದರೊಟ್ಟಿಗೆ ಸಂಚಯಿಸಿದ ಶಿಲೆಗಳು ಶಾಖ ಒತ್ತಡಗಳಿಗೆ ಒಳಪಟ್ಟು ರೂಪಾಂತರಗೊಂಡಿವೆ. ಮಹಾಕಂದರದಲ್ಲಿ (Geosyncline) ರೂಪುಗೊಂಡ ಈ ಶಿಲೆಗಳು ಮೇಲಕ್ಕೆತ್ತಲ್ಪಟ್ಟು ನೆಲವಾಗಿ ನಮ್ಮ ನಾಡಿನ ಭಾಗಗಳಾಗಿವೆ. ಈ ಭೂಭಾಗವನ್ನು ಶಿಸ್ಟ್ ಶಿಲಾಸ್ತೋಮ ಎಂದು ಕರೆಯಲಾಗಿದೆ. ಇದರ ಮಾದರಿ ಶಿಲೆ ಹಸುರ್ಗಪ್ಪು ವರ್ಣದಿಂದ ಕೂಡಿದ್ದು ಪದರುಪದರಾದ ರಚನೆಯನ್ನು ಹೊಂದಿರುತ್ತದೆ. ಈ ಶಿಲೆಯನ್ನು ಬ್ರೂಸ್‌ಫೂಟ್‌ರವರು ಮೊದಲಿಗೆ ಧಾರವಾಡದಬಳಿ ಅಧ್ಯಯನ ಮಾಡಿದ್ದರಿಂದ ಈ ಶಿಲೆಗಳಿಗೆ 'ಧಾರವಾರ್ ಶಿಸ್ಟ್' ಶಿಲೆಗಳೆಂದು ಕರೆದರು. ಧಾರವಾರ್ ಶಿಸ್ಟ್ ಶಿಲಾಸ್ತೋಮ ಸೃಷ್ಟಿಯಾಗುವ ಮುಂಚೆ ಅಲ್ಲಿದ್ದ ಮಹಾ ಕಂದರದ ತಳ ಮತ್ತು ಪಾರ್ಶ್ವಗಳು ಗ್ರಾನೈಟ್ ಎಂಬ ಶಿಲೆಯಿಂದ ಕೂಡಿತ್ತೇ ಎಂಬುದರ ಬಗ್ಗೆ ಚರ್ಚೆ ನಡೆದಿದೆ. ಗ್ರಾನೈಟ್ ಎಂಬ ಅಗ್ನಿಶಿಲೆ ಬೆಣಚು ಮತ್ತು ಫೆಲ್ಸ್‌ಪಾರ್ ಖನಿಜಾಂಶವನ್ನು ವಿಶೇಷವಾಗಿ ಒಳಗೊಂಡಿದ್ದು ಬೂದುಬಣ್ಣದಿಂದ ಕೂಡಿರುತ್ತದೆ. ಈ ಶಿಲೆಗಳು ಧಾರವಾಡ್ ಶಿಸ್ಟ್ ಶಿಲೆಗಳಿಗೂ ಪುರಾತನವಾಗಿದ್ದು ಅನೇಕ ಬಾರಿ ಹೊಸದಾಗಿ ನುಗ್ಗಿಬಂದ ಶಿಲಾಪಾಕಗಳಲ್ಲಿ ಕರಗಿ ಮಿಶ್ರಿತವಾಗಿರಬಹುದಾಗಿದ್ದು ಅದರಲ್ಲಿ ಹಳತು, ಹೊಸತರ ಗುರುತಿಸುವಿಕೆ ಕಷ್ಟಸಾಧ್ಯ. ಹಾಸನ ಜಿಲ್ಲೆಯ ಗೋರೂರಿನ ಬಳಿಯ ಗ್ರಾನೈಟ್ ಶಿಲೆಯ ವಯೋ ನಿರ್ಧಾರ ಮಾಡಿದಾಗ ಅದಕ್ಕೆ ೩,೪೦೦ ದಶಲಕ್ಷ ವರ್ಷಗಳೆಂದು ತಿಳಿದುಬಂತು. ಇದೇ ಸದ್ಯಕ್ಕೆ ತಿಳಿದಂತೆ ಕರ್ನಾಟಕದ ಅತಿಪುರಾತನ ಶಿಲೆ. ವಿಕಿರಣಪಟು ಕ್ರಮದಲ್ಲಿ ಈ ಶಿಲೆಯ ವಯೋ ನಿರ್ಧಾರ ಮಾಡಲಾಯಿತು. ಈ ಗ್ರಾನೈಟ್ ಶಿಲೆ ಕೆಲವು ಭಾಗಗಳಲ್ಲಿ ಅಪಾರ ಶಾಖ ಮತ್ತು ಒತ್ತಡಗಳಿಗೊಳಗಾಗಿ ಕರಗಿದಾಗ ಹತ್ತಿರದ ಪರಿಸರದಲ್ಲಿದ್ದ ಶಿಸ್ಟ್ ಶಿಲೆಯನ್ನು ತನ್ನಲ್ಲಿ ಅರಗಿಸಿ ಕೊಂಡು ಬಿಟ್ಟಿರುವುದಕ್ಕೆ ಕುರುಹುಗಳಿವೆ. ಇದಕ್ಕೆ ಉತ್ತಮ ಉದಾಹರಣೆ ಬೆಂಗಳೂರಿನ ಲಾಲ್‌ಬಾಗಿನ ಗುಡ್ಡದಲ್ಲಿ ಗುರುತಿಸಿ ರಾಷ್ಟ್ರೀಯ ಭೂವೈಜ್ಞಾನಿಕ ಸ್ಮಾರಕವೆಂದು ಸಾರಲಾಗಿರುವ ಬೂದು ಬಣ್ಣದ ಬಂಡೆಯ ಮಧ್ಯ ಇರುವ ಕಪ್ಪು ಶಿಸ್ಟ್ ಶಿಲೆ. ಮತ್ತೊಂದು ಉತ್ತಮ ನಿದರ್ಶನ ಕರ್ನಾಟಕದ ದಕ್ಷಿಣ ತುದಿಯಲ್ಲಿ ಸರಗೂರಿನ ಬಳಿ ಗ್ರಾನೈಟ್ ಮಧ್ಯೆ ಹರಡಿಕೊಂಡು ರೂಪಾಂತರಗೊಂಡಿರುವ ಸಂಚಿತ ಶಿಲೆಗಳು.

ಸಮಗ್ರವಾಗಿ ಭೂವೈಜ್ಞಾನಿಕ ಭೂಪಟವನ್ನು ನೋಡಿದಾಗ ನಮಗೆ ಕಾಣುವುದು ಅವರ್ಗೀಕೃತ ಗ್ರಾನೈಟ್–ನೀಸ್ ಶಿಲೆಗಳ ಮಧ್ಯ ಶಿಸ್ಟ್ ಶಿಲಾಸ್ತೋಮಗಳು. ಈ ಶಿಲಾಸ್ತೋಮದಿಂದ ಆವರಿಸಿರುವ ನೆಲ ಇತಿಹಾಸ ಗರ್ಭದಲ್ಲಿ ಆದ ಘಟನೆಗಳನ್ನು (ಶಿಲಾಪಾಕ ಹೊರಹೊಮ್ಮುವಿಕೆ, ಶಿಲಾಕಣಗಳ ಸಂಚಯನ, ರೂಪಾಂತರ ಕ್ರಿಯೆ, ಚಲನೆ) ಸೂಚಿಸುತ್ತವೆ. ಇದು ಆದದ್ದು ೩,೦೦೦ ದಶಲಕ್ಷ ವರ್ಷಗಳ ಹಿಂದಿನಿಂದ ೨,೬೦೦ ದಶಲಕ್ಷ ವರ್ಷಗಳ ಹಿಂದಿನವರೆಗಿನ ಕಾಲದಲ್ಲಿ. ಈ ಕಾಲ ಭೂವೈಜ್ಞಾನಿಕ ಕಾಲಪಟ್ಟಿಯ ಆರ್ಷೇಯ ಯುಗಕ್ಕೆ ಸೇರುತ್ತದೆ.

ಸರಿಸುಮಾರು ಉತ್ತರ–ದಕ್ಷಿಣ ದಿಕ್ಕಿನಲ್ಲಿ ಹಬ್ಬಿರುವ ಶಿಸ್ಟ್ ಶಿಲಾಸ್ತೋಮಗಳು ಮುಖ್ಯವಾಗಿ ಚಿತ್ರದುರ್ಗ, ಕೋಲಾರ. ಸಂಡೂರು, ಬಾಬಾಬುಡನ್, ಕುದುರೆಮುಖ ಮತ್ತು ಉತ್ತರ ಕನ್ನಡದ ಸಾಲುಗಳಲ್ಲಿರುತ್ತವೆ.

ಶಿಸ್ಟ್ ಶಿಲಾಸ್ತೋಮಗಳ ಶಿಲೆಗಳಲ್ಲಿನ ಖನಿಜ ಸಂಯೋಜನೆ ಮತ್ತು ರಚನೆಗಳನ್ನು ಅಭ್ಯಾಸಮಾಡಿದಾಗ ಅವು ರೂಪುಗೊಳ್ಳುವಾಗ ಶಿಲಾಸ್ತೋಮಗಳು ಬಿರುಕುಗೊಂಡಿದ್ದು, ಕುಸಿದಿ

ದ್ದು ಅನೇಕ ಹೊಸ ಖನಿಜ ಉತ್ಪತ್ತಿಯಾದದ್ದು ಹಾಗೂ ರೂಪಾಂತರಗೊಂಡದ್ದನ್ನು ತಿಳಿಯಬಹುದು.

ಎರಡು ಸಾವಿರದ ಆರುನೂರು ದಶಲಕ್ಷ ವರ್ಷಗಳಿಂದೀಚೆಗೆ ಮತ್ತು ಎರಡು ಸಾವಿರ ದಶಲಕ್ಷ ವರ್ಷಗಳ ವರೆಗೆ ಹಿಂದೆ ಬಿರಿದಿದ್ದ ಬಿರುಕುಗಳನ್ನು ಪುನ: ಚಿಮ್ಮಿದ ಶಿಲಾಪಾಕಗಳು ತುಂಬಿದವು, ಅವುಗಳನ್ನು ಈಗ ನಾವು ನೆಲದ ಮೇಲೆ ಕರಿ ಘಟ್ಟಗಳಾಗಿ (ಡೈಕ್) ಕಾಣುತ್ತೇವೆ. ಚಿತ್ರದುರ್ಗ ಶಿಸ್ಟ ಶಿಲಾಸ್ತೋಮದ ಪೂರ್ವ ಬದಿಯುದ್ದಕ್ಕೂ ಕೆಂಪು ಬಣ್ಣದ ಗ್ರಾನೈಟ್ ಶಿಲಾಪಾಕ ಉಗ್ಗಿ ಹೆಪ್ಪುಗಟ್ಟಿತು. ರಾಮನಗರದ ಬಳಿ ಚೆನ್ನಾಗಿ ಕಾಣುವ ಈ ಶಿಲೆಗಳಿಗೆ "ಕ್ಲೋಸ್‌ಪೇಟ್ ಗ್ರಾನೈಟ್" ಎಂದೇ ಹೆಸರಾಯಿತು.

ಆರ್ಷೇಯ ಜೀವಿಯುಗದ ಕೊನೆಯ ಭಾಗದಲ್ಲಿ ಎಂದರೆ ಒಂದು ಸಾವಿರದ ಆರುನೂರು ದಶಲಕ್ಷ ವರ್ಷಗಳ ಹಿಂದಿನಿಂದ ಒಂಬೈನೂರು ದಶಲಕ್ಷ ವರ್ಷಗಳ ವರೆಗೆ ಕಲ್ಲಡ್ಗಿ ಮತ್ತು ಭೀಮಸಮೂಹದ ಶಿಲೆಗಳು ಕರ್ನಾಟಕದ ಉತ್ತರ ಭಾಗದಲ್ಲಿ ಸೃಷ್ಟಿಯಾದುವು. ಇವುಗಳಲ್ಲಿ ಹೆಚ್ಚಾಗಿ ಸುಣ್ಣಶಿಲೆ ಕ್ವಾರ್ಟ್‌ನೈಟ್ ಮತ್ತು ಶೇಲ್‌ನಂತಹ ಸಂಚಯಿತ ಶಿಲೆಗಳು ಸೃಷ್ಟಿಯಾದವು.

ಅನಂತರ ಬಹುಕಾಲ ಎಂದರೆ ಮಧ್ಯಜೀವಿ ಕಲ್ಪದ ಕೊನೆಯ ಭಾಗವಾದ ಕ್ರಿಟೇಶಿಯಿಸ್ ಕಲ್ಪದ ವರೆಗಿನ ಕಾಲದಲ್ಲಿ ಯಾವ ತೆರನಾದ ಚಟುವಟಿಕೆಗಳ ಕುರುಹಿಲ್ಲ. ಕ್ರಿಟೇಶಿಯಸ್ ಕಲ್ಪದಲ್ಲಿ ಕರ್ನಾಟಕದ (ಬೆಳಗಾಂ ಮತ್ತು ಬೀದರ್‌ಗಳಲ್ಲಿ) ಜ್ವಾಲಾಮುಖಿಗಳು ಶಿಲಾಪಾಕವನ್ನು ಹೊರಚೆಲ್ಲಿದವು. ಹೊರ ಹೊಮ್ಮಿದ ಶಿಲಾಪಾಕ ಹಂತ ಹಂತವಾಗಿ ದಪ್ಪನಾದ ಪದರುಗಳಲ್ಲಿ ಹೆಪ್ಪುಗಟ್ಟಿತು. ಹೆಪ್ಪುಗಟ್ಟುವಾಗ ತನ್ನಲ್ಲಿದ್ದ ಅನಿಲಗಳನ್ನು ಹೊರಬಿಟ್ಟು ಕುಳಿಗಳನ್ನು ಸೃಜಿಸಿಕೊಂಡಿತು. ಆರಿ ಗಟ್ಟಿಯಾಗುವಾಗ ಪಂಚ ಭುಜಾಕೃತಿಯ ಬಿರುಕುಗಳು ಉಂಟಾದವು. ಇದೇ ರೀತಿಯ ಶಿಲಾ ನಿರ್ಮಾಣ ಪಶ್ಚಿಮ ತೀರದ ಸಂತ ಮೇರಿ ದ್ವೀಪಗಳಲ್ಲಿ ಚೆನ್ನಾಗಿ ಕಾಣಬಹುದು. ಇದಾಗುವ ಹೊತ್ತಿಗೆ ಕರ್ನಾಟಕದ ನೆಲ ಚಲನೆಗಳಿಗೊಳಗಾಗಿ ತನ್ನ ರೂಪವನ್ನು ಬದಲಿಸುತ್ತಾ ಬಂದಿತ್ತು; ತರುವಾಯ ಕಾಲ ಕಳೆದಂತೆ ವಾತಾವರಣದಲ್ಲಿ ಮತ್ತು ನೆಲದ ಮೇಲೆ ಅನೇಕ ಬದಲಾವಣೆಗಳಾದುವು. ವಾತಾವರಣದ ಮಳೆ ನೀರು ನೆಲಮುಟ್ಟಿತು. ನೆಲದ ಶಿಲೆಗಳ ರಚನೆಗೆ ತಕ್ಕಂತೆ ಸವೆತ ಉಂಟಾಗಿ ನದಿ ಸರೋವರಗಳು ಸೃಷ್ಟಿಯಾದವು. ಶಿಲೆಗಳು ಶಿಥಿಲೀಕರಣಕ್ಕೊಳಗಾದುವು. ಮಣ್ಣಿನ ಹೊದಿಕೆ ಸೃಷ್ಟಿಯಾಯಿತು. ಕಾಡು ಬೆಳೆಯಿತು, ನದಿಗಳು ನೆಲ ಕೊರೆಯುತ್ತಾ ತಮ್ಮ ಹಾದಿಯನ್ನು ಸವೆಸಿ, ಇನ್ನು ಹೆಚ್ಚು ಸವೆಸಲಾಗದ ಮಟ್ಟವನ್ನು ತಲುಪಿದುವು. ಶಿಥಿಲ ಶಿಲಾಭಾಗಗಳಲ್ಲಿ ಅಲೂಮಿನಂ ನೀಡುವ ಬಾಕ್ಸೈಟ್ ಮತ್ತು ಲ್ಯಾಟರೈಟ್ ಅಥವಾ ಮುರಕಲ್ಲು ಸೃಷ್ಟಿಯಾಯಿತು. ವಾತಾವರಣ–ನೆಲಗಳ ಮಧ್ಯೆ ಅವ್ಯಾಹತವಾಗಿ ಅನೇಕ ಭೂವೈಜ್ಞಾನಿಕ ಪ್ರಕ್ರಿಯೆಗಳು ಸಾಗುತ್ತಿವೆ. ಇದರೊಟ್ಟಿಗೆ ಜೀವ ವಿಕಾಸಗೊಂಡು ಮಾನವನ ಆಕ್ರಮಣ ನಿಸರ್ಗದತ್ತ ರೂಪವನ್ನು ಪುನಃ ಬದಲಿಸಲು ಕಾರಣವಾಗುತ್ತಿದೆ.

# ಕರ್ನಾಟಕದ ಶಿಲಾ ರಚನೆಗಳು

ಕೆ. ಎಸ್. ನಿಸಾರ್ ಅಹಮದ್

ಕರ್ನಾಟಕದ ನೆಲಕ್ಕೆ ವೈವಿಧ್ಯಮಯವಾದ ಮೇಲ್ಮೈ ಲಕ್ಷಣಗಳಿವೆ. ಪಶ್ಚಿಮ ಭಾಗದಲ್ಲಿ ಉತ್ತರ–ದಕ್ಷಿಣ ದಿಕ್ಕಿಗೆ ಹರಡಿದಂತೆ ಎತ್ತರವಾದ ಬೆಟ್ಟಗಳ ಸಾಲಿದೆ. ಪೂರ್ವಭಾಗದಲ್ಲಿ ಬಯಲು, ಬೆಟ್ಟ, ನದಿಗಳು, ಏರು ತಗ್ಗುಗಳನ್ನು ರೂಪಿಸಿ, ಅನೇಕ ಬಗೆಯ ನೈಸರ್ಗಿಕ ವೈಲಕ್ಷಣ್ಯಗಳಿಗೆ ಕಾರಣವಾಗಿದೆ. ಇಂಥ ವೈವಿಧ್ಯಮಯ ಮೇಲ್ಮೈ ಲಕ್ಷಣಗಳಿಗೆ ನೆಲದಾಳದಲ್ಲಿ ಹರಡಿರುವ ಶಿಲೆಗಳ ರಚನೆ ಬಹುಮಟ್ಟಿಗೆ ಕಾರಣ. ಭೂರಚನೆಗೂ ನೆಲದ ಒಳಗೆ ಹರಡಿಕೊಂಡಿರುವ ಶಿಲೆಗಳ ರಚನೆಗೂ ನಿಕಟ ಸಂಬಂಧವಿದೆ.

ಭೂರಚನೆಯ ಅಧ್ಯಯನದಿಂದ ನೆಲದಲ್ಲಿ ಹುದುಗಿರುವ ಶಿಲೆಗಳ ವಿನ್ಯಾಸ, ಭೌತಿಕಗುಣ ಹಾಗೂ ಖನಿಜಗಳ ಇರುವಿಕೆಯನ್ನು ಪತ್ತೆ ಹಚ್ಚಬಹುದು. ಹಾಗೆಯೇ ಸಿವಿಲ್ ಇಂಜನಿಯರಿಂಗ್ ತಂತ್ರಜ್ಞಾನವನ್ನು ಬಳಸಿ ಜನಜೀವನಕ್ಕೂ ಹಲವಾರು ಅನುಕೂಲಗಳನ್ನು ಮಾಡಬಹುದು. ಮುಂದೊಮ್ಮೆ ಸಂಭವಿಸಬಹುದಾದ ನೈಸರ್ಗಿಕ ಸ್ವರೂಪವನ್ನು ಸೂಕ್ಷ್ಮವಾಗಿ ಅರಿಯಬಹುದು. ಈ ದಿಶೆಯಲ್ಲಿ ಭೂವಿಜ್ಞಾನಿಗಳು ಭೂಮ್ಯಂತರಾಳದ ಶಿಲಾರಚನೆಗಳ ಬಗ್ಗೆ ಅಧ್ಯಯನ ನಡೆಸುತ್ತಿದ್ದು ಹೆಚ್ಚಿನ ಮಾಹಿತಿಗಳನ್ನು ಸಂಗ್ರಹಿಸುತ್ತಿದ್ದಾರೆ. ಕರ್ನಾಟಕದ ಭೂರಚನೆಯ ತಿಳಿವಿಗೆ ಪೂರ್ವ ಭಾವಿಯಾಗಿ ವಿವಿಧ ಶಿಲೆಗಳ ರಚನೆಗಳನ್ನು ಅರಿತು ಅವು ಎಲ್ಲೆಲ್ಲಿ ಪ್ರಕಟಗೊಂಡಿವೆ ಎಂಬ ವಿಚಾರವನ್ನು ಚರ್ಚಿಸುವುದೊಳಿತು.

ಕೋಟ್ಯಂತರ ವರ್ಷಗಳಿಂದ ಭೂಮಿಯ ಮೇಲ್ಮೈ ಅಗಾಧ ಬದಲಾವಣೆಗಳಿಗೆ ಈಡಾಗಿದೆ. ಈ ಬದಲಾವಣೆಗಳಿಗೆ ವಾತಾವರಣ ಹಾಗೂ ನೆಲದ ಒಳಗಿನ ಒತ್ತಡ ಮತ್ತು ಶಾಖ ಕಾರಣ. ಮನುಷ್ಯ–ಪೂರ್ವ ಭೂ ಇತಿಹಾಸದಲ್ಲಿ ಅನೇಕ ಪ್ರಾಕೃತಿಕ ಘಟನೆಗಳನ್ನು ದಾಖಲಿಸಲು ಶಿಲೆಗಳು ಮತ್ತು ಅವುಗಳ ರಚನೆ ಮಾಧ್ಯಮವಾಗುತ್ತದೆ. ಆದ್ದರಿಂದ ಶಿಲೆಗಳನ್ನು ನೆಲದಲ್ಲಿನ ಪುಸ್ತಕಗಳೆನ್ನಬಹುದು.

ಶಿಲೆಗಳಲ್ಲಿ ಮೂರು ವಿಧ: ಅಗ್ನಿ ಶಿಲೆ, ಸಂಚಿತ ಶಿಲೆ ಮತ್ತು ರೂಪಾಂತರ ಶಿಲೆ. ಅಗ್ನಿ ಶಿಲೆ ಮೂಲ ಅಥವಾ ಪ್ರಾಥಮಿಕ ಶಿಲೆಯಾಗಿದ್ದು (ಪ್ರೈಮರಿ ರೋಕ್) ಅದರ ಉಗಮ ಹಾಗೂ ಅದು ಹೊಂದುವ ರಚನೆ ಮುಖ್ಯವಾಗುತ್ತವೆ. ಅಗ್ನಿಶಿಲೆ ಆಗುವುದು ಭೂಗರ್ಭದಲ್ಲಿರುವ ಶಿಲಾಪಾಕ (ಮಾಗ್ಮ) ಮೇಲೇರಿ, ಕೆಲವೊಮ್ಮೆ ಹೊರಹೊಮ್ಮಿ, ಆರಿ ಗಟ್ಟಿಯಾಗುವುದರಿಂದ. ಶಿಲಾಪಾಕ ಭೂಮಿಯ ಆಳದಿಂದ ಹೊರಪದರಗಳನ್ನು ಛೇದಿಸಿ, ಇಲ್ಲವೇ ಮೇಲಿದ್ದ ಶಿಲೆಗಳನ್ನು ಕರಗಿಸಿ ತನ್ನಲ್ಲಿ ಅರಗಿಸಿಕೊಂಡು ಮೇಲಕ್ಕೆ ನುಗ್ಗಬೇಕಾಗುತ್ತದೆ. ಹಾಗೆ ನುಗ್ಗುವಾಗ, ಹಾದಿಯಲ್ಲೇ ಅದರ ಶಾಖ ಒತ್ತಡಗಳು ಕಡಿಮೆಯಾಗಿ, ಅದು ಭೂಮಿಯ ಒಳಗೇ ಗಟ್ಟಿಯಾದರೆ ಅದಕ್ಕೆ ವಿಶಿಷ್ಟ ಆಕಾರಗಳು ಉಂಟಾಗುತ್ತವೆ. ಇಂಥ ಆಕಾರಗಳಿಗೆ ಅಂತಸ್ಸರಣ (ಇಂಟ್ರೂಸಿವ್ಸ್) ಗಳೆನ್ನುತ್ತೇವೆ. ಅಂತಸ್ಸರಣಗಳಲ್ಲಿ ಗೋಡೆಯಾಕಾರದ ಡೈಕ್, ಚಪ್ಪಟೆಯಾಗಿ ಹಲಗೆಯಂತಿರುವ ಸಿಲ್, ಗುಮ್ಮಟಾಕೃತಿಯ ಬ್ಯಾಥೋಲಿತ್ ಬಹಳ ಮುಖ್ಯ. ವಿವಿಧ ಬಗೆಯ ಕಪ್ಪು ಬಣ್ಣದ ಡಾಲರೈಟ್ ಶಿಲೆಯ ಡೈಕ್‌ಗಳನ್ನು ಕರ್ನಾಟಕದ ಬಹು ಭಾಗಗಳಲ್ಲಿ ಕಾಣಬಹುದು. ಅದರಲ್ಲೂ ಶ್ರೀರಂಗಪಟ್ಟಣ, ಕೊಳ್ಳೆಗಾಲ ಮತ್ತು ಪಾಂಡವಪುರ ಪ್ರದೇಶಗಳಲ್ಲಿ ಇವು ವಿಶಿಷ್ಟವಾಗಿವೆ.

ಶಿಲಾಪಾಕ ತಣಿವುಗೊಂಡು ಮುದ್ದೆಯಂತೆ ಒಂದೆಡೆ ಪೇರಿತವಾಗಿ ಬೃಹತ್‌ಗಾತ್ರ ಪಡೆದು ಬೆಟ್ಟವನ್ನೂ, ಗುಡ್ಡವನ್ನೂ ಹೋಲುತ್ತದೆ. ಇಂಥ ಹಲವಾರು ಮೈಲಿಗಳ ವ್ಯಾಸವುಳ್ಳ, ಗುಮ್ಮಟಾಕಾರದ ಶಿಲಾರಚನೆಗಳು ಕರ್ನಾಟಕದಲ್ಲಿ ಸಾಮಾನ್ಯ. ಇವಕ್ಕೆ 'ಬ್ಯಾಥೊಲಿತ್' ಎಂದು ಹೆಸರು. ದೂರಕ್ಕೆ ನುಣುಪಾಗಿ ಕಾಣುವ, ಕಡಿದಾದ ಪಕ್ಕಗಳುಳ್ಳ ಬ್ಯಾಥೊಲಿತ್, ಹೂತಿರುವ ಗೋಲದಂತೆ ಕಂಗೊಳಿಸುತ್ತದೆ.

ಇಂಥ ಬೃಹತ್ ಶಿಲಾರಚನೆಗಳಿಗೆ ರಾಮನಗರದ ಸುತ್ತಮುತ್ತ ಇರುವ ಬೆಟ್ಟಗುಡ್ಡಗಳು ಮತ್ತು ಶ್ರವಣಬೆಳಗೊಳದ ಗೊಮ್ಮಟಗಿರಿ ಒಳ್ಳೆಯ ಉದಾಹರಣೆ.

ನೆಲವನ್ನು ಛೇದಿಸಿ ಹೊರಟ ಹರಿಯುವ ಶಿಲಾದ್ರವಕ್ಕೆ ಲಾವಾ ಪ್ರವಾಹ (ಲಾವಾ ಫ್ಲೋ) ಎಂದು ಹೆಸರು. ಇದು ಒಂದರ ಮೇಲೊಂದು ಪೇರಿತವಾಗಿ ಹಲವು ಪದರಗಳನ್ನು ಹೊಂದಿದ್ದು, ಹಲವಾರು ವಿಶಿಷ್ಟ ರಚನೆಗಳನ್ನು ವ್ಯಕ್ತಪಡಿಸುತ್ತದೆ. ತುಂಬಾ ಬಿಸಿಯಾದ ಶಿಲಾದ್ರವ ಭೂಮಿಯ ಮೇಲೆ ಒಮ್ಮೆಲೆ ತಣ್ಣಗಾಗುವುದರಿಂದ ಅದರಲ್ಲಿನ ರಾಸಾಯನಿಕ ಧಾತುಗಳು ಹರಳುಗಟ್ಟಿ ಖನಿಜಗಳಾಗುವ ಅವಕಾಶ ಕಡಿಮೆ. ಶಿಲಾದ್ರವ ಆರುವಾಗ ಅದರೊಳಗಿನ ಅನಿಲಗಳು ಹೊರಕ್ಕೆ ಬರುತ್ತವೆ. ಇದರ ಕುರುಹಾಗಿ ಶಿಲೆಯ ಮೇಲ್ಮೈಯಲ್ಲಿ ಹಲವಾರು ಸಣ್ಣ ಕುಳಿಗಳು (ವೆಸಿಕ್ಯೂಲ್ಸ್) ಮೂಡುತ್ತವೆ. ಕಾಲಕ್ರಮೇಣ ಈ ಕುಳಿಗಳಲ್ಲಿ ತಡವಾಗಿ ಹರಳುಗಟ್ಟುವ ಖನಿ-

ಜಗಳು ತುಂಬಿಕೊಳ್ಳುತ್ತವೆ. ಇಂತಹ ಕುಳಿಗಳು ಕೊಬ್ಬರಿ ಗಿಟುಕಿನಂತೆ ಕಾಣುತ್ತವೆ.

ಈ ರೀತಿ ಅನೇಕ ದ್ವಿತೀಯ ಖನಿಜಗಳು ಆ ಶಿಲೆಗೆ ಒಂದು ರಮ್ಯ ರೂಪವನ್ನು ಕೊಡುತ್ತವೆ. ಇವುಗಳಲ್ಲಿ ಮುಖ್ಯವಾದದ್ದು ಬಿಳಿದಾದ ಜಿಯೋಲೈಟ್ ಖನಿಜ ವರ್ಗ. ಬೆಳಗಾಂ, ಬಿಜಾಪುರ ಪ್ರದೇಶಗಳಲ್ಲಿ ಇಂಥ ಶಿಲೆಗಳನ್ನು ಕಾಣಬಹುದು. ಈ ಜ್ವಾಲಾಮುಖಿಜನ್ಯ ಅಗ್ನಿಶಿಲೆಗಳನ್ನು ಬೆಸಾಲ್ಟ ಎನ್ನುತ್ತೇವೆ.

ಬೆಸಾಲ್ಟನಲ್ಲಿ ಮತ್ತೊಂದು ಅನನ್ಯವಾದ ರಚನೆಯನ್ನು ಗುರುತಿಸಬಹುದು. ಇದು ಹಲವು ಮುಖಗಳುಳ್ಳ ಕಂಬಗಳನ್ನು ಹೋಲುತ್ತದೆ. ಆ ಶಿಲೆ ಆರುವಾಗ ಉಂಟಾಗುವ ನಿಯತ ಸೀಳುಗಳೇ ಇದಕ್ಕೆ ಕಾರಣ. ಜ್ಯಾಮಿತೀಯ ವಿನ್ಯಾಸಗಳಲ್ಲಿ ಒತ್ತೊತ್ತಾಗಿ ಸೆಟೆದುನಿಂತ ಇಂಥ ಸಹಸ್ರಾರು ರಚನೆಗಳ ಸಮೂಹ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತದೆ. ನಮ್ಮ ಕರಾವಳಿಯ ಸೈಂಟ್ ಮೇರಿ ದ್ವೀಪ ಇದಕ್ಕೆ ಉತ್ತಮ ನಿದರ್ಶನ. ಈ ಶಿಲಾರಚನೆಗಳನ್ನು ಪ್ರಿಸ್ಮಾಟಿಕ್ ಅಥವಾ ಸ್ತಂಭಾಕೃತಿಯ ರಚನೆಗಳೆನ್ನುತ್ತಾರೆ.

ಸೋಡಿಯಂಸಮೃದ್ಧ ಬೆಸಾಲ್ಟನ ಹೆಸರು ಸ್ಪೈಲೈಟ್. ಇದು ವಿಚಿತ್ರವಾದ ದಿಂಬುರಚನೆಗಳನ್ನು ಹೊಂದಿರುತ್ತದೆ. ಇದರ ಮೂಲ ಶಿಲಾದ್ರವ ಕಡಲ ತಳದಲ್ಲಿ ಹೊರಹೊಮ್ಮಿದಾಗ ಅಥವಾ ಲಾವಾ ಪ್ರವಾಹ ಸಾಗರವನ್ನು ಸಂಪರ್ಕಿಸಿದಾಗ, ಅದು ಒಮ್ಮೆಲೇ ತಣ್ಣಗಾಗಿ ಸಂಕುಚಿತಗೊಂಡು ಹಲವಾರು ದಿಂಬಿನಾಕೃತಿಯನ್ನು ತಾಳಿ ಒಂದರ ಮೇಲೊಂದು ರಾಶಿಗೊಳ್ಳುತ್ತದೆ. ಇಂಥ ಪುರಾತನ ದಿಂಬುರಚನೆಗಳು ಚಿತ್ರದುರ್ಗದ ಬಳಿಯ ಮರಡಿಹಳ್ಳಿಯ ಪಶ್ಚಿಮ ಭಾಗದಲ್ಲಿವೆ. ಭೂವೈಜ್ಞಾನಿಕವಾಗಿ ಇವಕ್ಕೆ ಬಹುಮುಖ್ಯವಾದ ಪ್ರಾಶಸ್ತ್ಯವಿದೆ ಎಂದೇ ಇದನ್ನು ರಾಷ್ಟ್ರೀಯ ಸ್ಮಾರಕವೆಂದು ಘೋಷಿಸಿ, ಸಂರಕ್ಷಿಸಲಾಗಿದೆ. ಕೋಲಾರದ ಚಿನ್ನದಗಣಿ ಪ್ರದೇಶ, ಬಳ್ಳಾರ ಮತ್ತು ಜೋಗಿಮರಡಿಗಳಲ್ಲೂ ಇಂತಹ ರಚನೆಗಳು ಕಂಡುಬರುತ್ತವೆ. ಇದರಿಂದ ಒಂದಾನೊಂದು ಕಾಲದಲ್ಲಿ ಕರ್ನಾಟಕದ ಕೆಲವು ಭಾಗಗಳು ಸಾಗರತಳವಾಗಿದ್ದವು ಎಂಬ ಊಹೆಗೆ ಪುಷ್ಟಿ ದೊರೆಯುತ್ತದೆ.

ಎರಡನೆಯ ಬಗೆಯದು ಸಂಚಿತ ಶಿಲೆ (ಸೆಡಿಮೆಂಟರಿ ರಾಕ್). ಇದನ್ನು ಜಲಜ ಶಿಲೆ ಎಂದೂ ಕರೆಯುತ್ತಾರೆ. ಮಳೆ, ನದಿ, ಹಿಮನದಿ, ಕಡಲ ಅಲೆ, ಗಾಳಿ ಇತ್ಯಾದಿ ಭೂವ್ಯಾಪಾರಕಾರಕಗಳು (ಜಿಯೊಲಾಜಿಕಲ್ ಏಜೆಂಟ್ಸ್) ಶಿಲೆಗಳನ್ನು ಶಿಥಿಲೀಕರಿಸಿ ಸಣ್ಣ ಚೂರುಗಳಾಗಿಸುತ್ತವೆ. ಕ್ರಮೇಣ ಇವು ಸಮುದ್ರವನ್ನು ಸೇರಿ, ನೀರಿನಲ್ಲಿ ಅರಗಿರುವ ಖನಿಜ ವಸ್ತುಗಳಿಂದ ಒಂದರೊಡನೊಂದು ಅಂಟಿಕೊಂಡು ಸ್ತರಗೊಳ್ಳುತ್ತವೆ. ಇಂತಹ ಶಿಲೆಗಳೇ ಸಂಚಿತ ಶಿಲೆಗಳು. ಇವು ರೂಪುಗೊಳ್ಳುವಾಗ ಹಲವು ರಚನೆಗಳು ಉಂಟಾಗುತ್ತವೆ. ಇವುಗಳಲ್ಲಿ ಅಲೆಗುರುತು (ರಿಪ್ಲ್ ಮಾರ್ಕ್ಸ್) ಅಡ್ಡಪದರಿಕೆ (ಕ್ರಾಸ್ ಬೆಡಿಂಗ್), ಕೆಸರುಬಿರಿತ (ಮಡ್ ಕ್ರೇಕ್ಸ್), ಮಳೆಯೊತ್ತು (ರೈನ್ ಪ್ರಿಂಟ್) ಮುಂತಾದವನ್ನು ಗುರುತಿಸಬಹುದು. ಸಂಚಿತ ಶಿಲಾಸ್ತೋಮಗಳನ್ನು ಉತ್ತರ ಕರ್ನಾಟಕದ ಬಿಜಾಪುರ, ಬೀದರ್, ಬೆಳಗಾಂ ಜಿಲ್ಲೆಗಳಲ್ಲಿ ಕಾಣಬಹುದು. ಜಗತ್ಪ್ರಸಿದ್ಧ ಬಾದಾಮಿಯ ಗುಹೆಗಳು, ಐಹೊಳೆ, ಪಟ್ಟದಕಲ್ಲಿನ ದೇಗುಲಗಳು ರಚಿತವಾಗಿರುವುದು ಸಂಚಿತ ಶಿಲೆಯ ಒಂದು ಬಗೆಯಾದ ಮರಳುಗಲ್ಲಿನಿಂದ.

ಅಗ್ನಿಶಿಲಾ ಪ್ರದೇಶದಲ್ಲಿ ಕೆಲವು ಸಂಚಿತ ಶಿಲಾರಚನೆಗಳನ್ನು ಗುರುತಿಸಿದ್ದಾರೆ. ಭೂಮಿಯ ಗತ ಇತಿಹಾಸವನ್ನು ಗುರುತಿಸುವಲ್ಲಿ ಇವು ಸಹಕಾರಿಯಾಗುತ್ತವೆ. ಶಿವಮೊಗ್ಗ-ಸವಳಂಗದ ರಸ್ತೆಯ ಬದಿಯ ಗುಡ್ಡದಲ್ಲಿ ಅಡ್ಡಪದರಿಕೆ, ಕಲ್ಲುದುರ್ಗದ ಬಳಿಯಿರುವ ಉಂಡೆಗಲ್ಲು (ಕೊಂಗ್ಲಾಮರೇಟ್) ಇಂಥವು. ಕರ್ನಾಟಕದ ಕೆಲ ಭಾಗ ಸಮುದ್ರದ ತಳವಾಗಿತ್ತು ಎಂಬುದಕ್ಕೆ ಇವು ಸಾಕ್ಷಿ ಒದಗಿಸುತ್ತವೆ.

ಮೂರನೆಯದು ರೂಪಾಂತರ ಶಿಲೆ (ಮೆಟಮೊರ್ಫಿಕ್ ರೋಕ್). ನೆಲದಾಳದ ಶಾಖ ಮತ್ತು ಒತ್ತಡಗಳಿಗೆ ಒಳಗಾದ ಮೂಲ ಶಿಲೆಗಳ ರೂಪ ಹಾಗೂ ಖನಿಜಗಳ ಮಾರ್ಪಾಟಿನಿಂದ ಈ ಶಿಲೆಗಳು ಉಂಟಾಗುತ್ತವೆ. ಕರ್ನಾಟಕದ ಭೂಮಿಯ ಬಹುಭಾಗ ರೂಪಾಂತರ ಶಿಲೆಗಳಿಂದ ಕೂಡಿದೆ. ಇವುಗಳಲ್ಲಿ ನೈಸ್ ಮತ್ತು ಶಿಸ್ಟ ಮುಖ್ಯವಾದವು. ನೈಸ್‌ನಲ್ಲಿ ನಸು ಹಾಗೂ ಗಾಢ ಬಣ್ಣದ ಖನಿಜಗಳು ಪಟ್ಟೆ ಪಟ್ಟೆಯಾದ ರಚನೆಯನ್ನು ತೋರಿಸುತ್ತವೆ. ಇದಕ್ಕೆ ನೈಸಿಕ್ ರಚನೆ (ನೈಸಿಕ್ ಸ್ಟ್ರಕ್ಚರ್) ಎನ್ನುತ್ತೇವೆ. ಶಿಸ್ಟ ಶಿಲೆಗಳಲ್ಲಿ ಸಹಜ ಸೀಳುಗಳಿರುವ ಖನಿಜಗಳ ಹೆಚ್ಚಳದಿಂದ ಒಂದು ಬಗೆಯ ಪದರುಪದರಾದ ರಚನೆ ಉಂಟಾಗುತ್ತದೆ. ಇದೇ ಶಿಸ್ಟೋಸ್ ರಚನೆ (ಶಿಸ್ಟೋಸ್ ಸ್ಟ್ರಕ್ಚರ್) ಪ್ರಾಚೀನ ಕಾಲದಿಂದ ಸವೆತಕ್ಕೆ ಒಳಗಾಗಿರುವ ಶಿಲೆಗಳಿಗೆ ಮೇಲ್ಮಾಣಿಸಿದ ರಚನೆ ವಿಶಿಷ್ಟ ರೂಪವನ್ನು ನೀಡುತ್ತದೆ. ದೂರದಿಂದ ನೋಡಿದಾಗ ಈ ಸವೆದ ಶಿಲಾಖಂಡಗಳು ತಿಮಿಂಗಿಲದ ಬೆನ್ನಂತೆ ನುಣುಪಾಗಿ ಕಂಗೊಳಿಸುತ್ತವೆ.

ಈವರೆಗೂ ಹೇಳಿದ ರಚನೆಗಳು ಆಯಾ ಶಿಲೆಯ ಉಗಮದ ಸಮಯದಲ್ಲೇ ರೂಪುಗೊಂಡವು; ಎಂದೇ ಇವಕ್ಕೆ ಸಹಜನ್ಯ (ಸಿನಾಜೆನಿಕ್) ಶಿಲಾರಚನೆ ಎನ್ನಬಹುದು. ಇದರ ಜೊತೆಗೆ, ಶಿಲೆಗಳು ಸೃಷ್ಟಿಯಾದ ಅನಂತರ ಕೆಲವು ರಚನೆಗಳು ಮೂಡುತ್ತವೆ. ಇಂತಹ ಮಹತ್ ವಿಸ್ತೀರ್ಣದ ದ್ವಿತೀಯ ರಚನೆಗಳಲ್ಲಿ ಮುಖ್ಯವಾದದ್ದು ಸ್ತರಭಂಗ (ಫಾಲ್ಟ) ಮತ್ತು ಮಡಿಕೆ (ಫೋಲ್ಡ). ಭೂಮಿಯ ಅಂತರಾಳದಲ್ಲಿನ ಅತಿಯಾದ ಶಾಖ ಮತ್ತು ಒತ್ತಡ ಹಾಗೂ ಮೇಲ್ಪದರದ ಕೆಳಭಾಗದಲ್ಲಿ ಅಲ್ಲಲ್ಲೇ ವಿಕಿರಣಪಟು ಖನಿಜಗಳಿಂದ ಹೊರಹೊಮ್ಮುವ ಶಾಖ, ಇವು ಶಿಲೆಗಳಲ್ಲಿನ ಖನಿಜಗಳನ್ನು ಕರಗಿಸಿ ಸಂವಹನ ಕೋಶ (ಕನ್ವೆಕ್ಶನ್ ಸೆಲ್) ಗಳನ್ನು ಮೂಡಿಸುತ್ತವೆ. ಈ ಕೋಶಗಳ ಸುತ್ತಮುತ್ತಲಿರುವ ಬೃಹತ್ ಶಿಲಾಖಂಡಗಳು ಚಲನೆಗೆ ಒಳಗಾಗುತ್ತವೆ. ಚಲನೆಯ ಸಮಯದಲ್ಲಿ ಶಾಖ ಹೆಚ್ಚಿದರೆ ಶಿಲೆಗಳು ಮಡಿಕೆಗೊಳ್ಳುತ್ತವೆ. ಶಾಖ ಕಡಿಮೆ ಇದ್ದು ಚಲನೆ ಹೆಚ್ಚಿದರೆ ಶಿಲಾಸ್ತರಗಳು ಬಿರುಕುಗೊಂಡು ಕುಸಿಯುತ್ತವೆ. ಮೊದಲನೆಯ ನೈಸರ್ಗಿಕ ಪ್ರಕ್ರಿಯೆಗೆ ಮಡಿಕೆಗೊಳ್ಳುವಿಕೆ (ಫೋಲ್ಡಿಂಗ್) ಎಂದೂ, ಎರಡನೆಯದಕ್ಕೆ ಸ್ತರ ಭಂಗವಾಗುವಿಕೆ (ಫಾಲ್ಟಿಂಗ್) ಎಂದೂ ಕರೆಯುತ್ತಾರೆ. ಕೆಲವೊಮ್ಮೆ ಎರಡಕ್ಕೂ ನಡುವಿನ ಹಂತದಲ್ಲಿ ಬೃಹತ್‌ಜರಿತಗಳು (ಮೇಜರ್ ಶಿಯರ್ಸ್) ಉದ್ಭವಿಸುತ್ತವೆ. ಈ ಮೂರು ಶಿಲಾರಚನೆಗಳು ಕೆಲವೆಡೆ ಉಪಯುಕ್ತ ಖನಿಜ ಸಂಪತ್ತಿನ ಅಮೂಲ್ಯ ಆಗರಗಳಾಗಿವೆ. ಭೂಮಿಯ ಮೇಲ್ಮೈರಚನೆಯನ್ನು ರೂಪಿಸುವುದರಲ್ಲಿ ಇಂಥ ಬೃಹತ್ ಶಿಲಾರಚನೆಗಳು ಬಹುಮಟ್ಟಿಗೆ ಕಾರಣವಾಗುತ್ತವೆ. ಕಣಿವೆ, ಬೆಟ್ಟಗಳ ಏರುತಗ್ಗುಗಳಿಂದ ನೆಲದ ಹೊರಮೈಗೆ ವೈವಿಧ್ಯವನ್ನು ಲಭ್ಯವಾಗಿಸಿ, ನದಿಗಳ ಪಾತ್ರ ಹಾಗೂ ಹಾದಿಯನ್ನು ತಿದ್ದಿ, ಇಡೀ ಭೂದೃಶ್ಯಕ್ಕೆ ಅತಿಶಯತೆಯನ್ನು ಒದಗಿಸಿವೆ ಈ ರಚನೆಗಳು.

ಪಶ್ಚಿಮ ಘಟ್ಟದ ಪಡುವಣ ದಿಕ್ಕಿಗಿರುವ ಕರಾವಳಿ ಪ್ರದೇಶ ಬಲು ಹಿಂದೆ ಘಟ್ಟದ ಸಮಕ್ಕಿದ್ದದ್ದು, ಅನಂತರ ಕುಸಿದಿದೆ ಎಂದು ಸಂಶೋಧಕರ ಅಭಿಮತ. ಈ ಕಾರಣಕ್ಕಾಗಿಯೇ ಘಟ್ಟದ ಪಶ್ಚಿಮ ಮಗ್ಗಲು ಬಹಳ ಕಡಿದಾಗಿದೆ. ಪೂರ್ವದ

ಇಳುಕಲು ಸಾಧಾರಣವಾಗಿದೆ. ಈಗಿನ ಪಶ್ಚಿಮವಾಹಿ ನದಿಗಳು ಒಂದು ಕಾಲಕ್ಕೆ ಪೂರ್ವದಿಕ್ಕಿನಲ್ಲಿ ಹರಿಯುತ್ತಿದ್ದವು. ಕರಾವಳಿ ಪ್ರದೇಶ ಕುಸಿತದ ಪರಿಣಾಮವಾಗಿ, ಈ ನದಿಗಳು ನದೀ ಚೌರ್ಯವೆಂಬ (ರಿವರ್‌ಪೈರೆಸಿ) ಪ್ರಕೃತಿ ಪ್ರಕ್ರಿಯೆಗೆ ಒಳಗಾಗಿ ತಮ್ಮ ಈಗಿನ ದಿಕ್ಕನ್ನು ಪಡೆದಿವೆ ಎಂಬ ಅಭಿಪ್ರಾಯವಿದೆ. ಈ ದಿಕ್ಕು ಬದಲಾವಣೆಯಿಂದ ನದಿಗಳು ಆಳಕ್ಕೆ ಧುಮುಕಲು ಅವಕಾಶವಾಯಿತು. ಈ ಇಳಿತವನ್ನು ತಂತ್ರಜ್ಞರು ವಿದ್ಯುಚ್ಛಕ್ತಿಯ ಉತ್ಪಾದನೆಗೆ ಬಳಸಿಕೊಳ್ಳುತ್ತಿದ್ದಾರೆ.

ಶಿಲಾರಚನೆಗಳು ಭೂಮಿಯ ರಚನೆಯ ಒಂದು ಭಾಗವೋ ಎನ್ನಿಸುವಷ್ಟು ದೊಡ್ಡದಾಗಿದ್ದಲ್ಲಿ ನೆಲದ ಮೇಲೆ ನಿಂತು ಗುರುತಿಸುವುದು ಸುಲಭಸಾಧ್ಯವಲ್ಲ. ಅಂಥವು ಎತ್ತರದಿಂದ ಸಮಗ್ರವಾಗಿ ಕಾಣಿಸಿಕೊಳ್ಳುತ್ತವೆ. ಉಪಗ್ರಹಗಳು ತೆಗೆಯುವ ಚಿತ್ರಗಳಲ್ಲಿ ಈ ತೆರನಾದ ಬೃಹತ್ ಶಿಲಾರಚನೆಗಳನ್ನು ಗುರುತಿಸಬಹುದು. ಉಪಗ್ರಹ ತೆಗೆದ ಚಿತ್ರವನ್ನು ಮೊದಲು ಪರಿಶೀಲಿಸಿ ಗುರುತು ಹಿಡಿದ ಮೇಲೆ, ಅದೇ ಜಾಗದಲ್ಲಿ ಕಡಿಮೆ ಎತ್ತರದಿಂದ ವಿಮಾನದ ಮೂಲಕ ಹಿಡಿದ ಛಾಯಾಚಿತ್ರಗಳಿಂದ ಆ ರಚನೆಗಳನ್ನು ಹೆಚ್ಚು ನಿಖರವಾಗಿ ಅಧ್ಯಯನ ಮಾಡಲು ಸಾಧ್ಯ. ಇಂಥ ಅಧ್ಯಯನ ಇತ್ತೀಚೆಗೆ ಹೆಚ್ಚುತ್ತಿದ್ದು, ಗಣಿಗಾರಿಕೆ ಹಾಗೂ ಸಿವಿಲ್ ಇಂಜನಿಯರಿಂಗ್ ಕ್ಷೇತ್ರಗಳಲ್ಲಿ ಹೆಚ್ಚು ಬಳಕೆಯಾಗುತ್ತಿದೆ.

ನೆಲದ ಮೇಲಿನ ಶಿಲಾರಚನೆಗಳ ಬಗ್ಗೆ ಸ್ಥೂಲವಾಗಿ ತಿಳಿದದ್ದಾಯಿತು. ನೆಲದ ಒಳಗಿನ ಶಿಲಾ ಹಾಗೂ ಭೂರಚನೆಗಳನ್ನು ತಿಳಿಯಲು ಪರೋಕ್ಷ ವಿಧಾನವನ್ನು ಅನುಸರಿಸಬೇಕು. ಕೃತಕವಾಗಿ ಭೂಕಂಪನಗಳನ್ನು ಸೃಷ್ಟಿಸಿ, ಹಲವಾರು ಕಿಲೋಮೀಟರ್ ಆಳಕ್ಕೆ ಪ್ರವಹಿಸಿ ಹಿಂದಿರುಗುವ ಶಬ್ದದ ಅಲೆಗಳ ವೇಗವನ್ನು ಅಳೆದು, ಯಾವ ಆಳದಲ್ಲಿ ಯಾವ ತೆರನಾದ ಶಿಲೆ ಹಾಗೂ ಅದರ ವಿನ್ಯಾಸವಿದೆ ಎಂದು ವಿಜ್ಞಾನಿಗಳು ತಿಳಿಯುತ್ತಿದ್ದಾರೆ.

೧೯೭೮ ರಲ್ಲಿ ಹೈದರಾಬಾದಿನ ರಾಷ್ಟ್ರೀಯ ಭೂಭೌತ ಸಂಶೋಧನಾ ಸಂಸ್ಥೆ (ನೇಶನಲ್ ಜಿಯೋಫಿಸಿಕಲ್ ರಿಸರ್ಚ್ ಇನ್ಸ್ಟಿಟ್ಯೂಟ್) ಭೂಕಂಪಮಾಪಕ ಬಳಸಿ ಪ್ರಯೋಗವೊಂದನ್ನು ನಡೆಸಿತು. ಆಂಧ್ರದ ಕಾವಲಿ ಎಂಬ ಸ್ಥಳದಿಂದ ಕರ್ನಾಟಕದ ಉಡುಪಿಯವರೆಗೆ ಪೂರ್ವ–ಪಶ್ಚಿಮ ದಿಕ್ಕಿನಲ್ಲಿ ಬೇರೆ ಬೇರೆ ಬಗೆಯ ಶಿಲಾಶ್ರೇಣಿಗಳನ್ನು ಭೂಕಂಪನದ ಅಲೆಗಳಿಂದ ಅಡ್ಡಹಾಯಿಸಿ, ನೆಲದ ಆಳದಲ್ಲಿರುವ ಸಂಕೀರ್ಣ ಶಿಲಾರಚನೆಗಳನ್ನು ಪತ್ತೆ ಹಚ್ಚಲು ಈ ಪ್ರಯೋಗ ನೆರವಾಯಿತು. ಇದರಿಂದ ಅಂತರ್ಜಲ ಮತ್ತು ಖನಿಜ ನಿಕ್ಷೇಪಗಳನ್ನು ಪತ್ತೆ ಹಚ್ಚುವ ಕಾರ್ಯಗಳಿಗೆ ಮತ್ತು ಸಿವಿಲ್ ಇಂಜನಿಯರಿಂಗ್ ಅಧ್ಯಯನಗಳಿಗೆ ಅನುಕೂಲವಾಗಿದೆ.

# ಕರ್ನಾಟಕದ ಖನಿಜ ಸಂಪತ್ತು

ಬಿ.ಪಿ. ರಾಧಾಕೃಷ್ಣ

ಭಾರತದ ಖನಿಜ ಸಂಪತ್ತಿನಲ್ಲಿ ಕರ್ನಾಟಕ ರಾಜ್ಯದ ಭಾಗ ಮುಖ್ಯವಾದ್ದು. ದೇಶದಲ್ಲಿ ಉತ್ಪತ್ತಿಯಾಗುತ್ತಿರುವ ಚಿನ್ನವೆಲ್ಲವೂ ಕರ್ನಾಟಕದಿಂದ ಬಂದದ್ದು. ಉತ್ತಮ ದರ್ಜೆಯ ಕಬ್ಬಿಣದ ಅದುರಿಗೆ ಕರ್ನಾಟಕ ಹೆಸರುವಾಸಿಯಾದ್ದು. ಇವೇ ಅಲ್ಲದೆ ಇನ್ನೂ ಅನೇಕ ಲೋಹ ಹಾಗೂ ಅಲೋಹ ಖನಿಜಗಳಿಗೆ ಇದು ತವರಾಗಿದೆ. ೧೮೯೪ರ ಸುಮಾರಿನಲ್ಲಿ ದಿವಾನ್ ಶೇಷಾದ್ರಿ ಅಯ್ಯರ್ ಅವರ ದೂರದೃಷ್ಟಿಯ ಫಲವಾಗಿ ಆಗಿನ ಮೈಸೂರು ಸಂಸ್ಥಾನದಲ್ಲಿ ಭೂಶೋಧನಾ ಇಲಾಖೆಯೊಂದು ಸ್ಥಾಪಿತವಾಯಿತು. ಭಾರತದ ಬೇರೆ ಯಾವ ಪ್ರಾಂತವೂ ಇಂಥ ಅಭಿವೃದ್ಧಿ ಕಾರ್ಯದ ಕಡೆ ಆಗಿನ ಕಾಲದಲ್ಲಿ ಗಮನ ಕೊಟ್ಟಿರಲಿಲ್ಲ. ಅಲ್ಲಿಂದೀಚೆಗೆ ಈ ಇಲಾಖೆ ಬಹುಮುಖವಾಗಿ ಬೆಳೆದಿದೆ. ಇಲಾಖೆಯ ತಜ್ಞರು ದೇಶದಲ್ಲೆಲ್ಲ ಸಂಚರಿಸಿ ಅಮೂಲ್ಯವಾದ ಅನೇಕ ಮುಖ್ಯ ಖನಿಜ ವರ್ಗಗಳನ್ನು ಗುರುತಿಸಿದ್ದಾರೆ. ೧೯೭೮ ರಲ್ಲಿ ರಾಜ್ಯದ ಖನಿಜ ಉತ್ಪತ್ತಿಯ ಮೌಲ್ಯ ರೂ. ೩೭,೭೮,೭೪,೦೦೦.

### ಚಿನ್ನ

ಕರ್ನಾಟಕ ರಾಜ್ಯದ ಚಿನ್ನದ ಗಣಿಗಾರಿಕೆ ಪುರಾತನವಾದ್ದು. ನೂರುವರ್ಷಗಳಿಗೆ ಹಿಂದೆ ಬ್ರಿಟಿಷರು ಕೋಲಾರದ ಬಳಿ ಈ ಉದ್ಯಮವನ್ನು ಸ್ಥಾಪಿಸಿದರು ಎನ್ನುವುದು ಸಾಮಾನ್ಯವಾಗಿರುವ ಅಭಿಪ್ರಾಯ. ಆದರೆ ಈ ನಾಡಿನವರಿಗೆ ಚಿನ್ನ ಬಹಳ ಹಿಂದಿನಿಂದಲೂ ಪರಿಚಿತವಾದ, ಬಳಕೆಯಲ್ಲಿರುವ ಲೋಹ. ಎರಡು ಸಾವಿರ ವರ್ಷಗಳಿಗೂ ಹಿಂದೆ ಇಲ್ಲಿ ಚಿನ್ನವನ್ನು ತೆಗೆದು ಚಿನ್ನದ ಆಭರಣಗಳನ್ನು ತಯಾರಿಸಲಾಗುತ್ತಿತ್ತು. ಚಿನ್ನದ ನಾಣ್ಯಗಳು ಬಳಕೆಯಲ್ಲಿದ್ದುವು. ಇವರು ತೋಡಿಟ್ಟ ಹಳೆಯ ಗಣಿಗಳು ಕನ್ನಡ ರಾಜ್ಯದ ಬಹುತೇಕ ಎಲ್ಲ ಜಿಲ್ಲೆಗಳಲ್ಲೂ ಕಾಣಸಿಗುತ್ತವೆ. ಭಾರತದ ಮೇಲೆ ತಮ್ಮ ಪ್ರಭುತ್ವ ಸ್ಥಾಪಿಸಿದ ಬ್ರಿಟಿಷರು ಕೋಲಾರ ಜಿಲ್ಲೆಯ ಉರಿಗಂ ಬಳಿಯಲ್ಲೂ ರಾಯಚೂರು ಜಿಲ್ಲೆಯ ಹಟ್ಟಿಯ ಬಳಿಯಲ್ಲೂ ಚಿನ್ನದ ಗಣಿ ಉದ್ಯಮವನ್ನಾರಂಭಿಸಿದರು. ಆದರೆ ಇದರಿಂದ ಬಂದ ಲಾಭವೆಲ್ಲ ಬಹುಪಾಲು ದೇಶದಿಂದ ಹೊರಗೆ ಹೋಯಿತು. ಸ್ವಾತಂತ್ರ್ಯದೊರೆತ ಮೇಲೆ ರಾಜ್ಯ ಸರ್ಕಾರ ಈ ಗಣಿಗಳನ್ನು ರಾಷ್ಟ್ರೀಕರಿಸಿತು. ಕಳೆದ ನೂರು ವರ್ಷಗಳಲ್ಲಿ ಸುಮಾರು ಎಂಟುನೂರು ಟನ್‌ಗಳಷ್ಟು ಬಂಗಾರ ಈ ಗಣಿಗಳಿಂದ ಉತ್ಪತ್ತಿಯಾಗಿದೆ.

ಕೋಲಾರದ ಗಣಿಗಳು ನೆಲದ ಮಟ್ಟದಿಂದ ಮೂರು ಕಿಲೋ ಮೀಟರುಗಳಿಗೂ ಹೆಚ್ಚು ಆಳವನ್ನು ಮುಟ್ಟಿವೆ. ಪ್ರಪಂಚದ ಅತ್ಯಂತ ಆಳವಾದ ಚಿನ್ನದ ಗಣಿಗಳು ಇವು. ಇಲ್ಲಿ ಇಪ್ಪತ್ತು ಸಾವಿರಕ್ಕೂ ಹೆಚ್ಚು ಜನ ಕೆಲಸಮಾಡುತ್ತಿದ್ದಾರೆ.

ಈ ಗಣಿಗಳ ಅಕ್ಕಪಕ್ಕಗಳಲ್ಲಿ ಹೊಸ ಹೊಸ ಗಣಿಗಳು ಪತ್ತೆಯಾಗುತ್ತಿವೆ. ಇಲ್ಲಿಯ ಕೈಗಾರಿಕೆ ಇನ್ನು ಅನೇಕ ವರ್ಷಗಳ ಕಾಲ ಸುಸೂತ್ರವಾಗಿ ಮುಂದುವರಿಯಬಹುದು.

ಕರ್ನಾಟಕದ ಇತರ ಹಳೆಯ ಗಣಿಗಳ ಪೈಕಿ ತುಮಕೂರು ಜಿಲ್ಲೆಯ ಅಜ್ಜನಹಳ್ಳಿ, ಬೆಳ್ಳಾರ, ಚನ್ನರಾಯ ಪಟ್ಟಣದ ಬಳಿ ಇರುವ ಕೆಂಪಿನಕೋಟೆ, ರಾಯಚೂರು ಜಿಲ್ಲೆಯ ಮಸ್ಕಿ, ವಂದಲಿ, ಗುಲ್ಬರ್ಗ ಜಿಲ್ಲೆಯ ಮಂಗ್ಳೂರು, ನಂಜನಗೂಡು ಬಳಿ ಇರುವ ಅರಬಳೆ, ಒಳಗೆರೆ ಇಲ್ಲಿಯವು ಮುಖ್ಯವಾದವು. ಈ ಸ್ಥಳಗಳಲ್ಲೆಲ್ಲ ಆದಷ್ಟು ಶೀಘ್ರವಾಗಿ ಕೆಲಸ ಕೈಗೊಳ್ಳುವಂತಾಗಬೇಕು. ಕೋಲಾರ, ಹಟ್ಟಿ ಗಣಿಗಳಲ್ಲಿ ಕಾರ್ಯಮಾಡಿ ಗಳಿಸಿಕೊಂಡಿರುವ ಅನುಭವದಿಂದ ಈ ಹಳೆಯ ಗಣಿಗಳನ್ನು ಊರ್ಜಿತಗೊಳಿಸಿ ಅಭಿವೃದ್ಧಿ ಸ್ಥಿತಿಗೆ ತರುವುದು ಸಾಧ್ಯವಾದೀತು.

ಗಾಳಿ ಮಳೆ ಪ್ರವಾಹ ಮುಂತಾದ ನಿಸರ್ಗಬಲಗಳಿಂದ ಕಲ್ಲು, ನಗ್ನೀಕರಣ ಪ್ರಕ್ರಿಯೆಗೆ ಒಳಗಾಗಿ ಅದರಲ್ಲಿಯ ಚಿನ್ನದ ರೇಕುಗಳು ಬೇರೆಯಾಗಿ ಮಣ್ಣಿನಲ್ಲಿ ಬೆರೆಯುತ್ತವೆ. ಅವುಗಳ ಮೇಲೆ ಹರಿಯುವ ನೀರು ತೂಕವಾದ ಚಿನ್ನದ ಕಣಗಳನ್ನು ಒಯ್ದು ನೀರಿನ ವೇಗ ಕಡಿಮೆಯಾದ ಸ್ಥಳಗಳಲ್ಲಿ ಸಂಗ್ರಹಿಸುತ್ತದೆ. ತುಂಗಭದ್ರೆ ನದೀ ಪಾತ್ರದಲ್ಲಿ ಅಲ್ಲಲ್ಲಿ ಈ ರೀತಿ ಮೆಕ್ಕಲು ಚಿನ್ನ ಸೇರಿದೆ. ಮಳೆಗಾಲದ ದಿನಗಳಲ್ಲಿ ಕುಶಲರಾದ ಕೆಲವು ಜನರು ಈ ಚಿನ್ನವನ್ನು ಜಾಲಿಸಿ ತೆಗೆಯುವುದುಂಟು. ಸರಕಾರದ ಆಶ್ರಯದಲ್ಲಿ ಈ ಕೈಗಾರಿಕೆ ವ್ಯವಸ್ಥಿತ ರೂಪದಲ್ಲಿ ಬಲಗೊಳ್ಳಬೇಕು.

### ಕಬ್ಬಿಣ

ಕರ್ನಾಟಕದ ಖನಿಜ ನಿಕ್ಷೇಪಗಳಲ್ಲಿ ಕಬ್ಬಿಣಕ್ಕೆ ಎರಡನೆಯ ಸ್ಥಾನ. ರಾಜ್ಯದ ನಾನಾ-ಭಾಗಗಳಲ್ಲಿ ಹೇರಳವಾದ ಕಬ್ಬಿಣ ಅದುರಿನ ನಿಕ್ಷೇಪಗಳಿವೆ, ಸಂಪತ್ತಿದೆ. ಬಳ್ಳಾರಿ–ಹೊಸಪೇಟೆ ನಡುವಣ ಗುಡ್ಡಗಳಲ್ಲಿಯ ನಿಕ್ಷೇಪಗಳು ಪ್ರಪಂಚದಲ್ಲೇ ಅತ್ಯುತ್ತಮವಾದಂಥವು. ಇಲ್ಲಿ ೧೯೫೭ ರಲ್ಲಿ ಸುಮಾರು ೫೦,೦೦೦ ಟನ್ ಉತ್ಪಾದನೆಯಾಗುತ್ತಿದ್ದು ೧೯೭೮ ರ ಕೊನೆಗೆ ಇದು ೩,೦೦೦,೦೦೦ ಟನ್ನಿಗೆ ಹೆಚ್ಚಿತು. ದು:ಖದ ಸಂಗತಿಯೆಂದರೆ ಇದೆಲ್ಲವೂ ಇತರ ದೇಶಗಳಿಗೆ ರಫ್ತಾಗಿ ಹೋಗುತ್ತಿದೆ. ಇಂಥ ಉತ್ತಮ ಅದುರನ್ನು ಉಪಯೋಗಿಸಿಕೊಂಡು ಉಕ್ಕನ್ನು

ತಯಾರಿಸುವ ಯೋಜನೆ ಇನ್ನೂ ಕಾರ್ಯಗತವಾಗಿಲ್ಲ. ಈಗ ಸುಮಾರು ೬೦ ವರ್ಷಗಳ ಹಿಂದೆ ಭದ್ರಾವತಿಯ ಬಳಿಯ ಬಾಬಾ ಬುಡನ್ ಪರ್ವತ ಶ್ರೇಣಿಯಲ್ಲಿ ದೊರೆಯುವ ಕಬ್ಬಿಣದ ಅದುರನ್ನು ಬಳಸಿಕೊಳ್ಳುವ ಕಬ್ಬಿಣ ಉಕ್ಕು ಕಾರ್ಖಾನೆ ಭದ್ರಾವತಿಯಲ್ಲಿ ಸ್ಥಾಪಿತವಾಯಿತು. ಆಗ ಮೈಸೂರಿನ ದಿವಾನರಾಗಿದ್ದ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ನಾಡಿಗೆ ನೀಡಿದ ಕೊಡುಗೆ ಇದು. ಈ ಕಾರ್ಖಾನೆ ಈಗ ದೊಡ್ಡದಾಗಿ ಬೆಳೆದಿದೆ. ಬೆಲೆಬಾಳುವ ಬಗೆಬಗೆಯ ಉಕ್ಕನ್ನೂ ಮಿಶ್ರಲೋಹಗಳನ್ನೂ ಇಲ್ಲಿ ತಯಾರಿಸಲಾಗುತ್ತಿದೆ.

ಸೊಂಡೂರಿನ ಬಳಿ ವಿದ್ಯುತ್ ಕುಲುಮೆಗಳಲ್ಲಿ ಉತ್ತಮ ದರ್ಜೆಯ ಉಕ್ಕನ್ನು ತಯಾರಿಸಲಾಗುತ್ತಿದೆ. ಕಬ್ಬಿಣದ ಅದಿರು ಹೇರಳವಾಗಿ ದೊರೆಯುವ ಚಿಕ್ಕನಾಯಕನ ಹಳ್ಳಿ, ಉತ್ತರ ಕನ್ನಡ ಜಿಲ್ಲೆಯ ದಾಂಡೇಲಿ, ಚಿತ್ರದುರ್ಗ, ಚಿಕ್ಕಮಗಳೂರು, ಈ ಸ್ಥಳಗಳಲ್ಲಿ ವಿದ್ಯುತ್ ಶಕ್ತಿಯನ್ನು ಬಳಸಿಕೊಂಡು ಉಕ್ಕನ್ನು ತಯಾರಿಸುವುದು ಸಾಧ್ಯ.

### ಕುದುರೆಮುಖ ಯೋಜನೆ

ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮದ ಅಂಚಿನಲ್ಲಿರುವ ಕುದುರೆಮುಖ ಬೆಟ್ಟ ಸಾಲಿನಲ್ಲಿದಟ್ಟವಾಗಿ ಕಬ್ಬಿಣ ಬೆರೆತಿರುವ ಶಿಲಾಪದರಗಳು ಹರಡಿವೆ. ಇವುಗಳಲ್ಲಿ ಕಬ್ಬಿಣದ ಅಂಶ ಕಡಿಮೆಯಾದರೂ ಅದಕ್ಕೆ ಅಯಸ್ಕಾಂತ ಶಕ್ತಿ ಇದೆ. ಅದರ ನೆರವಿನಿಂದ ಕಬ್ಬಿಣ ಅಂಶವನ್ನು ಪ್ರತ್ಯೇಕಿಸಿ ತೆಗೆಯಬಹುದು. ಹೀಗೆ ತೆಗೆದ ಕಬ್ಬಿಣದ ಸಾರವನ್ನು ಉಂಡೆಗಟ್ಟಿ ಗುಂಡುಗೋಲಿಗಳಾಗಿ (ಪೆಲೆಟ್ಸ್) ಮಾಡಬಹುದು. ಈ ಕಾರ್ಯ ಈಗ ಯಶಸ್ವಿಯಾಗಿ ನಡೆಯುತ್ತಿದೆ. ಇಲ್ಲಿ ಉತ್ಪತ್ತಿಯಾದ ಕಬ್ಬಿಣದ ಸಾರವನ್ನು ನೀರಿನೊಂದಿಗೆ ಬೆರಸಿ, ಸರಿಯ ರೂಪದಲ್ಲಿ ದೊಡ್ಡ ಕೊಳವೆಗಳ ಮೂಲಕ ೬೪ ಕಿ.ಮೀ. ದೂರದ ಮಂಗಳೂರು ಬಂದರಿಗೆ ಸಾಗಿಸಲಾಗುತ್ತಿದೆ. ಅದರ ಬಳಿ ಕಬ್ಬಿಣದ ಕಲ್ಲುಂಡೆಗಳನ್ನು ತಯಾರಿಸುವ ಕಾರ್ಖಾನೆ ಸ್ಥಾಪಿತವಾಗುತ್ತಿದೆ. ವರ್ಷಂಪ್ರತಿ ಇಪ್ಪತ್ತು ಲಕ್ಷ ಟನ್ ಕಬ್ಬಿಣದ ಉಂಡೆಗಳು ಇಲ್ಲಿ ತಯಾರಾಗುತ್ತವೆ. ಸದ್ಯಕ್ಕೆ ಈ ಉಂಡೆಗಳನ್ನು ರಫ್ತುಮಾಡಲಾಗುತ್ತಿದೆ.

### ಕಬ್ಬಿಣ ಸಂಬಂಧದ ಇತರ ಲೋಹ ಖನಿಜಗಳು

ಕಬ್ಬಿಣದ ತಯಾರಿಕೆಯಲ್ಲಿ ವಿಶೇಷವಾಗಿ ಉಪಯೋಗವಾಗುವ ಕ್ರೋಮೈಟ್, ಮ್ಯಾಂಗನೀಸ್, ಟಿಟೇನಿಯಂ, ವನೇಡಿಯಂ ಅದುರುಗಳು ಹಾಸನ ಜಿಲ್ಲೆಯ ನುಗ್ಗೆಹಳ್ಳಿ, ಶಿವಮೊಗ್ಗ ಜಿಲ್ಲೆಯ ಕುಂಸ ಮತ್ತು ಶಂಕರಗುಡ್ಡ, ಹಾರನಹಳ್ಳಿ, ಉತ್ತರ ಕನ್ನಡದ ಸೂಪ ಮತ್ತು ದಾಂಡೇಲಿ, ಬಳ್ಳಾರಿಯ ಸೊಂಡೂರು ಈ ಪ್ರದೇಶಗಳಲ್ಲಿ ಸದ್ಯದಲ್ಲಿ ದೊರೆಯುತ್ತವೆ. ಬಹು ಮುಖ್ಯವಾದ ಈ ಅದುರುಗಳು ರಫ್ತಾಗುತ್ತಿವೆ.

### ಅಲ್ಯುಮಿನಿಯಂ

ಅಲ್ಯುಮಿನಿಯಂ ಲೋಹ ಈಚಿನ ವರ್ಷಗಳಲ್ಲಿ ಅತ್ಯಂತ ಪ್ರಾಮುಖ್ಯವನ್ನು ಪಡೆದಿದೆ. ಇದರ ಅದುರು ಪಶ್ಚಿಮಘಟ್ಟಗಳ ಸಾಲಿನಲ್ಲಿ, ಮುಖ್ಯವಾಗಿ ಬೆಳಗಾಂ ನಗರಕ್ಕೆ ಪಶ್ಚಿಮಕ್ಕಿರುವ ಗುಡ್ಡ ಸಾಲಿನಲ್ಲಿ ದೊರೆಯುತ್ತದೆ. ಬೆಳಗಾಂ ಬಳಿಯ ಕಾರ್ಖಾನೆಯಲ್ಲಿ ವರ್ಷಪ್ರತಿ ೩೦,೦೦೦ ಟನ್‌ಗಳಷ್ಟು ಅಲ್ಯುಮಿನಿಯಂ ಲೋಹದ ಉತ್ಪಾದನೆಯಾಗುತ್ತಿದೆ.

ಪಶ್ಚಿಮ ಕರಾವಳಿ ಪ್ರದೇಶದಲ್ಲಿ, ಮುಖ್ಯವಾಗಿ ಬೈಂದೂರು, ಭಟ್ಕಳಗಳ ಬಳಿ ಸ್ವಲ್ಪ ಕಡಿಮೆ ದರ್ಜೆಯ ಅಲ್ಯುಮಿನಿಯಂ ಅದುರು ಪತ್ತೆಯಾಗಿದೆ. ಇದರಿಂದ ಘರ್ಷಕ ವಸ್ತುಗಳನ್ನೂ ಸ್ಫಟಿಕವನ್ನು ತಯಾರಿಸಬಹುದು.

### ತಾಮ್ರ

ಕಂಚು, ಹಿತ್ತಾಳೆ, ತಾಮ್ರ ಇವು ಪುರಾತನ ಕಾಲದಿಂದಲೂ ನಮ್ಮಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿರುವ ಲೋಹಗಳು. ಕರ್ನಾಟಕದಲ್ಲಿ ತಾಮ್ರದ ಗಣಿಗಾರಿಕೆ ಬಲು ಹಿಂದಿನಿಂದಲೂ ನಡೆಯುತ್ತಿತ್ತು. ಆದರೆ ವಿದೇಶೀಯರ ಆಕ್ರಮಣಗಳಿಂದಾಗಿ ಈ ಉದ್ಯಮ ನಶಿಸಿ ಹೋಯಿತು. ಕರ್ನಾಟಕ ರಾಜ್ಯದಲ್ಲಿ ಅನೇಕ ಕಡೆಗಳಲ್ಲಿ ತಾಮ್ರ ಗಣಿಗಳಿದ್ದವು. ಚಿತ್ರದುರ್ಗದ ಬಳಿಯ ಇಂಗಳದಾಳು ಪ್ರದೇಶದ ಗಣಿಗಳನ್ನು ಊರ್ಜಿತಗೊಳಿಸಿ, ೧೯೭೩ ರಿಂದೀಚೆಗೆ ಅಲ್ಲಿ ತಾಮ್ರದ ಸಾರವನ್ನು ಪಡೆಯಲಾಗುತ್ತಿದೆ. ಅರಸೀಕೆರೆ ತಾಲೂಕು ಕಲ್ಯಾಡಿ ಬಳಿ ಇರುವ ಗಣಿಗಳನ್ನು ಅಭಿವೃದ್ಧಿ ಪಡಿಸಲಾಗಿದೆ. ಅಲ್ಲಿ ತಾಮ್ರಸಾರದ ಉತ್ಪಾದನೆ ಕಳೆದ ವರ್ಷದಿಂದ ಮಾಡಲಾಗಿದೆ. ಗಂಡಸಿ ಬಳಿ ಇರುವ ಆಲದ ಹಳ್ಳಿ, ಗುಲ್ಬರ್ಗ ಜಿಲ್ಲೆಯ ತಿಂತಿಣಿ, ರಾಯಚೂರು ಜಿಲ್ಲೆಯ ಕಲ್ಲೂರು, ಈಚನೂರು ಇವುಗಳ ಸುತ್ತಯಿರುವ ಗಣಿಗಳನ್ನು ಊರ್ಜಿತಗೊಳಿಸುವ ಪ್ರಯತ್ನ ನಡೆಯುತ್ತಿದೆ.

ಕರ್ನಾಟಕ ರಾಜ್ಯದಲ್ಲಿರುವ ನಾನಾ ಕೈಗಾರಿಕೆಗಳಿಗೆ ವರ್ಷಂಪ್ರತಿ ೫೦೦೦ ಟನ್ ತಾಮ್ರ ಬೇಕಾಗುತ್ತಿದೆ. ಇದನ್ನು ರಾಜ್ಯದಲ್ಲೇ ಉತ್ಪಾದಿಸುವುದು ಕಷ್ಟವೇನಲ್ಲ.

ಇಂಗಳದಾಳಿನ ಬಳಿ ಉತ್ಪತ್ತಿಯಾಗುತ್ತಿರುವ ತಾಮ್ರ ಸಾರವನ್ನು ಬಳಸಿಕೊಂಡು ಮೈಲತುತ್ತನ್ನು (ಕಾಪರ್ ಸಲ್ಫೇಟ್) ತಯಾರಿಸಲಾಗುತ್ತಿದೆ.

### ಇತರ ಖನಿಜಗಳು

ಬೆಂಗಳೂರಿನ ಸುತ್ತಮುತ್ತ ದೊರೆಯುವ ಕಾವಿಟ್ಟಿಗೆ ಮಣ್ಣು ಕೊಳವೆಗಳನ್ನೂ ಜಾಡಿಗಳನ್ನೂ ತಯಾರಿಸಲು ಉಪಯುಕ್ತವಾಗಿದೆ. ಚಿಕ್ಕ ಬಾಣಾವರದ ಬಳಿ ಇವುಗಳ ಕಾರ್ಖಾನೆಯಿದೆ. ಜೇಡಿ ಮಣ್ಣು ಇನ್ನೊಂದು ಉಪಯುಕ್ತ ಖನಿಜ. ಇದರಿಂದ ಇನ್ಸುಲೇಟರ್‌ಗಳನ್ನು ತಯಾರಿಸಲಾಗುತ್ತದೆ. ಮೈಸೂರು ಪಿಂಗಾಣಿ ಕಾರ್ಖಾನೆಯಲ್ಲಿ ಪಿಂಗಾಣಿ ಸರಕುಗಳನ್ನೂ ಹಾಸನ ಜಿಲ್ಲೆಯ ಬಾಗೇಶಪುರ, ತೀರ್ಥಹಳ್ಳಿಯ ಬಳಿಯ ದೇವಂಗಿ ಈ ಪ್ರದೇಶಗಳಲ್ಲಿ, ಬಿಳಿಯ ಜೇಡಿ ದೊರೆಯುತ್ತದೆ. ಇದು ಕಾಗದ ಹಾಗೂ ಪಿಂಗಾಣಿ ಸಾಮಾನುಗಳ ತಯಾರಿಕೆಯಲ್ಲಿ ಉಪಯುಕ್ತ. ಗಾಜನ್ನು ತಯಾರಿಸಲು ಬೇಕಾಗುವ ಬೆಣಚುಕಲ್ಲೂ ಹೇರಳವಾಗಿ ಸಿಗುತ್ತದೆ.

### ಹೆಂಚು ಇಟ್ಟಿಗೆ ತಯಾರಿಕೆ

ಮಂಗಳೂರು ಬಳಿ ನದಿಯ ದಡದಲ್ಲಿ ಶೇಖರವಾಗಿರುವ ನಯವಾದ ಮೆಕ್ಕಲು ಮಣ್ಣು ಹೆಂಚಿನ ತಯಾರಿಕೆಗೆ ಉಪಯುಕ್ತ. ಮಂಗಳೂರು ಸುತ್ತಮುತ್ತ, ಬೆಂಗಳೂರಿನ ಯಲಹಂಕದ ಬಳಿ, ಕಡೂರಿನ ಹತ್ತಿರ ದೊಡ್ಡ ಪ್ರಮಾಣದಲ್ಲಿ ಹೆಂಚುಗಳು ತಯಾರಾಗುತ್ತಿವೆ. ಸಿಮೆಂಟು ತಯಾರಿಕೆಗೆ ಬೇಕಾಗುವ ಮುಖ್ಯ ಖನಿಜ ವಸ್ತುವಾದ ಸುಣ್ಣಕಲ್ಲು ನಮ್ಮ ರಾಜ್ಯದಲ್ಲಿ ಹೇರಳವಾಗಿ ದೊರೆಯುತ್ತದೆ. ಮುಖ್ಯ ನಿಕ್ಷೇಪಗಳು ಗುಲ್ಬರ್ಗ ಜಿಲ್ಲೆಯ ವಾಡಿ, ಸೇಡಂ ಚಿಂಚೋಳಿ, ಚಿತ್ತಾಪುರ, ಜೇವರಗಿ, ಷಹಬಾದ್, ಬಿಜಾಪುರ ಜಿಲ್ಲೆಯ ತಾಳಿಕೋಟೆ, ಬಿಜಾಪುರ ಜಿಲ್ಲೆಯ ಬಾಗಲಕೋಟೆ, ಲೋಕಾಪುರ, ಮುಧೋಳ, ನಾಗರಗಾಳಿ, ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ, ತುಮಕೂರು ಜಿಲ್ಲೆಯ ಬಾಣಸಂದ್ರ, ಚಿಕ್ಕ

ನಾಯಕನ ಹಳ್ಳಿ, ಭದ್ರಾವತಿಯ ಭಂಡಿಗುಡ್ಡ, ಉತ್ತರ ಕನ್ನಡ ಜಿಲ್ಲೆಯ ಎಲ್ಲಾಪುರ, ಯಾಣ ಈ ಪ್ರದೇಶಗಳಲ್ಲಿವೆ.

## ಸುಣ್ಣಕಲ್ಲು ಚಿಪ್ಪು

ಪಶ್ಚಿಮ ಕರಾವಳಿ ಪ್ರದೇಶದಲ್ಲಿ ಮುಖ್ಯವಾಗಿ, ಕುಂದಾಪುರ, ಹೊನ್ನಾವರ, ಕುಮಟ, ಕಾರವಾರ ಈ ಸುತ್ತ ನದಿಯ ತಿಳಿ ನೀರು ಸಮುದ್ರದ ಉಪ್ಪು ನೀರನ್ನು ಕೂಡುವಂಥ ಸ್ಥಳಗಳಲ್ಲೆಲ್ಲ ವಿಶೇಷ ರೀತಿಯ ಸುಣ್ಣ ಸಂಬಂಧದ ಚಿಪ್ಪುಗಳನ್ನು ಬೆಳೆಸುವ ಪ್ರಾಣಿವರ್ಗ ತಾನೇತಾನಾಗಿ ವೃದ್ಧಿಹೊಂದುತ್ತದೆ. ಈ ಜೀವಿಗಳು ಸತ್ತಾಗ ಇವುಗಳ ದಪ್ಪನೆಯ ಚಿಪ್ಪುಗಳು ನದಿಯ ತಳದಲ್ಲಿ ತಂಗುತ್ತವೆ. ಈ ಸುಣ್ಣ ಚಿಪ್ಪುಗಳನ್ನು ಕಲೆಹಾಕಿ ಸುಟ್ಟರೆ ಉತ್ತಮ ದರ್ಜೆಯ ಸುಣ್ಣ ದೊರೆಯುತ್ತದೆ. ಕರಾವಳಿ ಪ್ರದೇಶದಲ್ಲಿ ಮೀನುಗಾರಿಕೆಯ ಜೊತೆಗೆ, ಚಿಪ್ಪುಗಳನ್ನು ಕಲೆಹಾಕುವ ಮತ್ತು ಅವುಗಳಿಂದ ಉತ್ತಮ ದರ್ಜೆಯ ಸುಣ್ಣವನ್ನು ಉತ್ಪಾದಿಸುವ ಕೈಗಾರಿಕೆ ಹಲವಾರು ಕುಟುಂಬಗಳಿಗೆ ಜೀವನೋಪಾಯವನ್ನು ಕಲ್ಪಿಸಿದೆ.

ವಜ್ರ, ಕುರಂದ ಮುಂತಾದ ಖನಿಜಗಳು ಬಹು ಗಡುಸಾದ, ಗಟ್ಟಿಯಾದ ಖನಿಜ ರೂಪಗಳು. ಅವುಗಳ ಬಲದಿಂದ ಬೇರೆ ಯಾವ ವಸ್ತುವನ್ನೇ ಆಗಲಿ ಕೊರೆಯಬಹುದು. ಕತ್ತರಿಸಬಹುದು. ಉಜ್ಜಿ ನಯಮಾಡಬಹುದು. ಪಾಲೀಷು ಮಾಡಿ ಥಳಥಳ ಹೊಳೆಯುವಂತೆ ಮಾಡಬಹುದು. ಅದು ಕಾರಣವೇ ಘರ್ಷಕ ವಸ್ತುಗಳಿಗೆ ಆಧುನಿಕ ಕೈಗಾರಿಕೆಗಳಲ್ಲಿ ವಿಶೇಷ ಪ್ರಾಶಸ್ತ್ಯವುಂಟು. ಘರ್ಷಕ ಖನಿಜಗಳೇ ಅಲ್ಲದೆ ಶುದ್ಧ ಬೆಣಚು, ಅಲ್ಯುಮಿನಿಯಂ ಅದುರಿನಿಂದ ಕೃತಕ ಘರ್ಷಕ ಖನಿಜಗಳನ್ನು ತಯಾರಿಸಲು ಬರುತ್ತದೆ. ಇಂಥ ಕೃತಕ ಘರ್ಷಕಗಳನ್ನು ಕಾರ್ಬೋರಂಡಂ, ಅಲುಂಡಮ್, ಅಲೊಕ್ಸೈಟ್ ಎಂದು ಮುಂತಾಗಿ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಬೆಂಗಳೂರಿನಿಂದ ಹೊಸಕೋಟೆಗೆ ಹೋಗುವ ದಾರಿಯಲ್ಲಿ ಕೃತಕ ಘರ್ಷಕ ಖನಿಜಗಳನ್ನು ತಯಾರಿಸುವ ದೊಡ್ಡ ಕಾರ್ಖಾನೆ ಸ್ಥಾಪಿತವಾಗಿದೆ. ಇಲ್ಲಿ ತಯಾರಾದ ಘರ್ಷಕಗಳ ಉಪಯೋಗಮಾಡಿಕೊಂಡು ಅನೇಕ ಬಗೆಯ ಯಂತ್ರೋಪಕರಣ ಕೈಗಾರಿಕೆಗಳು ಬೆಳೆಯಲು ಸಾಧ್ಯವಾಗಿದೆ. ಕಟ್ಟಡಗಳನ್ನು ಕಟ್ಟುವುದಕ್ಕೆ ಬೇಕಾಗುವ ಕಲ್ಲು ರಾಜ್ಯದ ಎಲ್ಲ ಭಾಗಗಳಲ್ಲೂ ಹೇರಳವಾಗಿ ದೊರೆಯುತ್ತಿದೆ. ದಕ್ಷಿಣ ಜಿಲ್ಲೆಗಳಲ್ಲಿ ಮುಖ್ಯವಾಗಿ ಬೆಂಗಳೂರು, ಮೈಸೂರು, ತುಮಕೂರು, ಸುತ್ತಮುತ್ತ "ಗ್ರಾನೈಟ್" ಶಿಲೆ ಹೇರಳವಾಗಿ ದೊರೆಯುತ್ತದೆ.

ಮೈಸೂರು ನಗರದ ಸುತ್ತಮುತ್ತ ದೊರೆಯುವ ಕಲ್ಲು ರಮಣೀಯವಾದವು. ಅವುಗಳ ಬಣ್ಣ, ಹೊಳಪು ಬಹುಕಾಲ ಇರುತ್ತದೆ. ಸಾವಿರ ವರ್ಷಗಳಾದರೂ ಕಂದದ ಕುಂದದ ಸೊಬಗನ್ನು ತೋರಿಸುತ್ತಿರುವ ಗೊಮಟೇಶ್ವರ ಮಹಾಮೂರ್ತಿಯು, ರಾಜ್ಯದ ಕಟ್ಟಡ ಕಲ್ಲುಗಳು ಎಷ್ಟು ಉತ್ಕೃಷ್ಟವಾದವು ಎನ್ನುವುದನ್ನು ತೋರಿಸುತ್ತದೆ.

ಗುಲ್ಬರ್ಗ, ಬಿಜಾಪುರ ಜಿಲ್ಲೆಗಳಲ್ಲಿ ಹಲವಾರು ಕಡೆ ಸುಣ್ಣಶಿಲೆ ಪದರವಾಗಿ, ಹಾಳೆ ಹಾಳೆಯಾಗಿ ಬಿಟ್ಟುಕೊಳ್ಳುತ್ತದೆ. ಈ ಶಿಲೆಯದು ಮನೋಹರವಾದ ತಿಳಿ ನೀಲಿ ಬಣ್ಣ. ಕಲ್ಲು ಅಷ್ಟು ಮೃದುವೂ ಅಲ್ಲ, ಗಡಸೂ ಅಲ್ಲ. ಉಜ್ಜಿದರೆ ಗಾಜಿನಂತೆ ಹೊಳೆಯುತ್ತದೆ. ಈ ಕಲ್ಲು ಉತ್ತರ ಕರ್ನಾಟಕದಲ್ಲೆಲ್ಲ "ಷಹಬಾದ್ ಕಲ್ಲು" ಎಂದು ಪ್ರಸಿದ್ಧವಾಗಿದೆ.

ಬಳಪದ ಕಲ್ಲು ಇನ್ನೊಂದು ಉತ್ತಮವಾದ ಕಟ್ಟಡ ಶಿಲೆ. ಈ ಕಲ್ಲಿನ ಕೆತ್ತನೆ ಕೆಲಸಕ್ಕೆ ಬೇಲೂರು, ಹಳೇಬೀಡಿನ ದೇವಸ್ಥಾನಗಳು ಸಾಕ್ಷಿಯಾಗಿವೆ.

# ಕರ್ನಾಟಕದ ಅಂತರ್ಜಲ ಸಂಪತ್ತು

ಡಾ॥ ಚಂದ್ರಶೇಖರ

ಗಾಳಿಯ ನಂತರ ನೀರು ಎಲ್ಲ ಜೀವಿಗಳಿಗೂ ಅತ್ಯಂತ ಆವಶ್ಯಕ ವಸ್ತು. ನೀರಿಲ್ಲದಿದ್ದರೆ ಈ ಭೂಮಿ ಚಂದ್ರನಂತೆ ನಿರ್ಜೀವವಾಗಿರುತ್ತಿತ್ತು, ಬರಡಾಗಿರುತ್ತಿತ್ತು.

### ಜಲಚಕ್ರ

ಇಂಥ ವಸ್ತು, ನಿಸರ್ಗದಲ್ಲಿ ಘನ (ಹಿಮ), ದ್ರವ (ನೀರು) ಮತ್ತು ಅನಿಲ (ನೀರಾವಿ) ಈ ಮೂರು ರೂಪಗಳಲ್ಲಿ ಸಿಗುತ್ತದೆ. ಭೂಮಿಯ ಮೇಲೆ ನೀರು ಸೃಷ್ಟಿಯಾದಾಗಿನಿಂದ, ಇಂದಿನ ವರೆಗೂ ನೀರಿನ ಒಟ್ಟು ಪರಿಮಾಣ ವ್ಯತ್ಯಾಸಗೊಂಡಿಲ್ಲ. ಅಂದಿನಿಂದ ಇಂದಿನವರೆಗೂ ಪ್ರತಿ ಹನಿ ನೀರು ಒಂದು ರೂಪದಿಂದ ಇನ್ನೊಂದು ರೂಪಕ್ಕೆ ಸ್ಥಿತ್ಯಂತರಗೊಳ್ಳುತ್ತಲೇ ಇದೆ. ಆದರೆ ಒಂದು ಹನಿ ನೀರೂ ವೃದ್ಧಿಯಾಗಿಲ್ಲ ಅಥವಾ ಕುಂದಿಲ್ಲ. ಈ ನಿರಂತರ ಹಾಗೂ ಆವರ್ತ ಕ್ರಿಯೆಯನ್ನು ಜಲ ವಿಜ್ಞಾನಿಗಳು ಜಲ ಚಕ್ರ ಎಂದು ಕರೆಯುತ್ತಾರೆ. (ಚಿತ್ರ ೧).
ಜನನ-ಮರಣಗಳುಂಟಾದರೂ ಜನಸಂಖ್ಯೆ ಈ ಭೂಮಿಯ ಮೇಲೆ (ಅದರಲ್ಲೂ ನಮ್ಮ ದೇಶದಲ್ಲಿ) ಕ್ಷಣಕ್ಷಣಕ್ಕೂ ಬೆಳೆಯುತ್ತಿದೆ. ಆದರೆ ಜಲದ ಪರಿಮಾಣ ಮಾತ್ರ ಅಂದಿನಿಂದ ಇಂದಿನವರೆಗೂ ಮುಂದೆಂದೂ ಒಂದೇ. ಆದ್ದರಿಂದಲೇ ದಿನೇ ದಿನೇ ಬೆಳೆಯುತ್ತಿದೆ – ನೀರಿನ ಅಭಾವ.

### ನೀರಿನ ಹಂಚಿಕೆ

ಮನುಷ್ಯನ ಉಪಯೋಗಕ್ಕೆ ಬರುವ ನೀರಿನ ಮೊತ್ತ ತೀರ ಅಲ್ಪ. ಭೂಮಿಯ ಮೇಲಿರುವ ಒಟ್ಟು ಜಲದ ಶೇಕಡ ೯೭.೨ರಷ್ಟು ಮತ್ತು ೨.೧೫ರಷ್ಟು ನೀರು ಅನುಕ್ರಮವಾಗಿ (ಉಪ್ಪುನೀರಿನ) ಸಾಗರಗಳಲ್ಲಿ ಮತ್ತು ಹಿಮಫಲಕ ಹಾಗೂ ಹಿಮ ನದಿಗಳಲ್ಲಿದೆ. ನದಿ, ಹಳ್ಳಗಳು, ಸರೋವರಗಳು ಇತ್ಯಾದಿಯಾಗಿ ಮೇಲು ಜಲದ ರೂಪದಲ್ಲಿ ಮತ್ತು ಭೂಮಿಯೊಳಗಡೆ ಅಂತರ್ಜಲದ ರೂಪದಲ್ಲಿ ಅನುಕ್ರಮವಾಗಿ ಶೇಕಡ ೦.೦೧೭ರಷ್ಟು ಮತ್ತು ಶೇಕಡ ೦.೬೫ರಷ್ಟು ನೀರು ನಿಸರ್ಗದಲ್ಲಿ ಸಿಗುತ್ತದೆ. ಅಂದರೆ ಸಾಮಾನ್ಯ ಕಲ್ಪನೆಗೆ ವಿರುದ್ಧವಾಗಿ ಅಂತರ್ಜಲಿದ ಮೊತ್ತ (೮೪, ೦೬, ೭೨೦ ಘನ ಕಿ.ಮೀ.) ಮೇಲು ಜಲದ ಮೊತ್ತಕ್ಕಿಂತ (೨, ೩೦, ೬೦೧ ಘನ ಕಿ.ಮೀ.) ಹಲವಾರು ಪಟ್ಟು ಹೆಚ್ಚಾಗಿದೆ. ಆದ್ದರಿಂದಲೇ ಮೇಲುಜಲದಿಂದ ಮಾತ್ರ ನಮ್ಮ ಅವ್ಯಶಕತೆಗಳನ್ನು ಪೂರೈಸಿಕೊಳ್ಳುವುದು ಅಸಾಧ್ಯ. ಮೇಲುಜಲ ಮತ್ತು ಅಂತರ್ಜಲಿ ಇವನ್ನು ಹದವರಿತು ಸೂಕ್ತ ಸಂದರ್ಭಗಳಲ್ಲಿ ..ಬಳಸಬೇಕು. ಆದ್ದರಿಂದ, ಈ ಎರಡೂ ಬಗೆಯ ಜಲದ ಅಸ್ತಿತ್ವ. ಮೊತ್ತ, ರಾಸಾಯನಿಕ ಗುಣಗಳ ಅಧ್ಯಯನ ಅವಶ್ಯಕ.

### ಭಾರತದಲ್ಲಿ ನೀರಿನ ಹಂಚಿಕೆ

ಭಾರತದಲ್ಲಿ ಬಹು ಹಿಂದಿನ ಕಾಲದಿಂದಲೂ ನೀರನ್ನು ಸಾಮೂಜಿಕ ಹಾಗೂ ವೈಯಕ್ತಿಕ ಆವಶ್ಯಕತೆಗಳನ್ನು ಪೂರೈಸಲು ಬಳಸುತ್ತ ಬರಲಾಗಿದೆ. ಹಿಂದಿನ ರಾಜರೂ, ಶ್ರೀಮಂತರೂ ಕೆರೆಕುಂಟೆಗಳನ್ನು ಕಟ್ಟಿಸುವುದೂ, ಬಾವಿಗಳನ್ನು ತೋಡಿಸುವುದೂ ಪುಣ್ಯದ ಕಾರ್ಯವೆಂದು ಬಗೆದಿದ್ದರು. ವಿಜಯನಗರದ ಅರಸರ ಕಾಲದ ತುಂಗಭದ್ರಾ ಕಾಲುವೆಗಳು (ಬಳ್ಳಾರಿ ಜಿಲ್ಲೆ), ಕಲ್ಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕಿನ ಮುದ್ನೂರು ಗ್ರಾಮದ ಬಹುಶಃ ೧೧ನೇಯ ಶತಮಾನದಲ್ಲಿ ತೋಡಿರಬಹುದಾದ ಬುಗ್ಗೆಯ ಬಾವಿಗಳು ನಮ್ಮ ಪೂರ್ವಜರ ತಾಂತ್ರಿಕ ಜ್ಞಾನಕ್ಕೆ ಸಾಕ್ಷಿಗಳಾಗಿವೆ. ಮೈಸೂರು ಅರಸರ ಕಾಲದಲ್ಲಿ ಕಟ್ಟಲಾದ ವಾಣಿ ವಿಲಾಸ ಸಾಗರ, ಕೃಷ್ಣರಾಜ ಸಾಗರ ಮುಂತಾದ ನೀರಾವರಿ ಯೋಜನೆಗಳು ಅಧುನಿಕ ಕರ್ನಾಟಕದ ನೀರಾವರಿ ಕ್ಷೇತ್ರದ ನಕ್ಷತ್ರಗಳು. ಈ ಸತ್ಪರಂಪರೆ ಮುಂದುವರೆದಿರುವುದು ಶುಭ ಲಕ್ಷಣ.

ಭಾರತದ ಒಟ್ಟು ವಿಸ್ತೀರ್ಣ ೩೨.೮ ಕೋಟಿ ಹೆಕ್ಟೇರುಗಳಷ್ಟು. ಈ ಪ್ರದೇಶದ ಮೇಲೆ ಬೀಳುವ ವಾರ್ಷಿಕ ಮಳೆ (ಹಿಮವೂ ಸೇರಿದಂತೆ) ೧೨೧ ಮಿ. ಮೀ. ಈ ಲೆಕ್ಕದ ಪ್ರಕಾರ ನಮ್ಮ ದೇಶದ ಮೇಲೆ ಸುಮಾರು ಒಟ್ಟು ೩೭ ಕೋಟಿ ಹೆಕ್ಟೇರು ಮೀಟರುಗಳಷ್ಟು ನೀರು ಸುರಿಯುತ್ತದೆ. ಇದರಲ್ಲಿ ಬಹುಭಾಗ ನೀರಾವಿ ಆಗಿ ಪುನಃ ವಾತಾವರಣವನ್ನು ಸೇರುತ್ತದೆ. ಕೇವಲ ೧೭.೯ ಕೋಟಿ ಹೆ. ಮೀ. ನೀರು ಮಾತ್ರ ನಮಗೆ ಲಭ್ಯ. ಇದರಲ್ಲಿ ಸ್ವಲ್ಪ ಭಾಗ ಮೇಲುಜಲವಾಗಿಯೂ, ಸ್ವಲ್ಪ ಭಾಗ ಅಂತರ್ಜಲವಾಗಿಯೂ ಹಂಚಿಹೋಗುತ್ತದೆ. ಭೂಮ್ಯಾಕೃತಿ, ಸದ್ಯ ಲಭ್ಯವಿರುವ ತಂತ್ರಜ್ಞಾನ ಮುಂತಾದ ಅಂಶಗಳನ್ನು ಗಮನದಲ್ಲಿರಿಸಿಕೊಂಡು, ಈ ನೀರಿನ ಪೈಕಿ ಸುಮಾರು ೬.೭ ಕೋಟಿ ಹೆ. ಮೀ. ಗಳಷ್ಟು ಮೇಲುಜಲವನ್ನೂ, ೨.೬೫ ಕೋಟಿ ಹೆ. ಮೀ. ಗಳಷ್ಟು ಅಂತರ್ಜಲವನ್ನೂ ಲಾಭಾದಾಯಕವಾಗಿ ಬಳಸಬಹುದೆಂದು ತಜ್ಞರು ಅಂದಾಜಿಸಿದ್ದಾರೆ.

### ಕರ್ನಾಟಕದ ಮಳೆ

ಈ ಹಿನ್ನಲೆಯಲ್ಲಿ ನೋಡಿದರೆ ಕರ್ನಾಟಕದ ಜಲಸಂಪತ್ತಿನ ಚಿತ್ರವೂ ನಮ್ಮ ದೇಶದ ಚಿತ್ರವನ್ನೇ ಹೆಚ್ಚು ಕಡಿಮೆ

ಹೋಗುತ್ತದೆ. ಸುಮಾರು ೧.೯೧೭ ಕೋಟಿ ಹೆಕ್ಟೇರುಗಳಷ್ಟು ವಿಸ್ತೀರ್ಣವುಳ್ಳ ಕರ್ನಾಟಕಕ್ಕೆ ಕೇವಲ ಮಳೆಯೊಂದೇ ನೀರಿನ ಮೂಲ. ರಾಜ್ಯದ ವಾರ್ಷಿಕ ಸರಾಸರಿ ಮಳೆ ೧,೩೫೦ ಮಿ. ಮೀ. ಆದರೆ ನಮ್ಮ ರಾಜ್ಯದ ಮೇಲೆ ಬೀಳುವ ಮಳೆ ವಿರೋಧಾಭಾಸಗಳನ್ನು ಹೊಂದಿದೆ. ಮಳೆ ನಮ್ಮ ರಾಜ್ಯದ ಎಲ್ಲ ಕಡೆ ಮತ್ತು ಎಲ್ಲ ಕಾಲದಲ್ಲಿ ಸಮವಾಗಿ ಬೀಳುವುದಿಲ್ಲ. ಮಲೆನಾಡಿನ ಕೆಲವು ಸ್ಥಳಗಳಲ್ಲಿ ವರ್ಷಕ್ಕೆ ಸುಮಾರು ೬,೦೦೦ ಮಿ. ಮೀ. ಮಳೆ ಬಿದ್ದರೆ, ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಸುಮಾರು ೫೦೦ ಮಿ. ಮೀ. ಮಳೆ ಬೀಳುತ್ತದೆ (ಚಿತ್ರ ೨). ಇದಲ್ಲದೆ ನಮ್ಮ ರಾಜ್ಯದ ಒಟ್ಟು ಮಳೆಯ ಶೇಕಡ ೭೦–೮೦ ರಷ್ಟು ಮಳೆ ಮೇ – ಅಕ್ಟೋಬರ್ ತಿಂಗಳುಗಳ ಅವಧಿಯಲ್ಲಿ ಬೀಳುತ್ತದೆ. ಅಂದರೆ, ಉಳಿದ ಆರು ತಿಂಗಳುಗಳಲ್ಲಿ ನಮಗೆ ಬೇಕಾಗಬಹುದಾದ ನೀರನ್ನು ಕೆರೆ, ಜಲಾಶಯ ಇತ್ಯಾದಿ ಕೃತಕ ಸಂಗ್ರಹಾಲಯಗಳಿಂದಲೂ, ಅಂತರ್ಜಲವೆಂಬ ನೈಸರ್ಗಿಕ ಸಂಗ್ರಹಾಲಯದಿಂದಲೂ ಪಡೆಯಬೇಕು. ಆದ್ದರಿಂದ ನೀರಿನ ಅಸ್ತಿತ್ವ, ಪರಿಮಾಣ ಇತ್ಯಾದಿ ವಿಷಯಗಳ ಬಗ್ಗೆ ವಿವರವಾದ, ಸಾಧ್ಯವಾದಷ್ಟು ನಿಖರವಾದ ಅಧ್ಯಯನ ಆವಶ್ಯಕ. ಜಲ ವಿಜ್ಞಾನದಲ್ಲಿ ಶತಶಃ ನಿಖರವಾದ ಅಧ್ಯಯನ ಬಹುಶಃ ತಲುಪಲಾಗದ ಗುರಿಯಷ್ಟೇ. ಆದರೆ ಕಾಲ ಕಾಲಕ್ಕೆ ಲಭ್ಯವಿರುವ, ತೌಲನಿಕವಾಗಿ ನಿಖರವಾದ ಅಂಕಿಅಂಶಗಳಿಂದ ಕರ್ನಾಟಕದ ಜಲ ಸಂಪತ್ತಿನ ಚಿತ್ರವನ್ನು ಮುಂದೆ ನೀಡಲಾಗಿದೆ.

**ಮೇಲು ಜಲ ಸಂಪತ್ತು**

ಕರ್ನಾಟಕದ ವಾರ್ಷಿಕ ಸರಾಸರಿ ಮಳೆಯ ಬಹುಭಾಗ ಆವಿಯಾಗಿ ಪುನಃ ವಾತಾವರಣವನ್ನು ಸೇರುತ್ತದೆ. ಉಳಿದ ಮಳೆ ನೀರು ನದಿಗಳಲ್ಲಿ, ಹಳ್ಳಗಳಲ್ಲಿ ಮೇಲುಜಲವಾಗಿಯೂ, ಮಣ್ಣಿನ ತೇವವಾಗಿಯೂ, ಅಂತರ್ಜಲವಾಗಿಯೂ ಹಂಚಲ್ಪಡುತ್ತದೆ. ಸದ್ಯಕ್ಕೆ ಲಭ್ಯವಿರುವ ಮಾಹಿತಿಗಳ ಆಧಾರದಿಂದ ನಮ್ಮ ನದಿಗಳಲ್ಲಿ ಸುಮಾರು ೧ ಕೋಟಿ ಹೆಕ್ಟೇರ್ ಮೀಟರುಗಳಷ್ಟು (ಕೋ. ಹೆ. ಮೀ) ನೀರು ಹರಿಯುತ್ತದೆ ಎಂದು ತಜ್ಞರು ಅಂದಾಜಿಸಿದ್ದಾರೆ. ನಮ್ಮ ರಾಜ್ಯದ ವಿವಿಧ ನದೀ ಕಣಿವೆಗಳಲ್ಲಿ ಹರಿವ ನೀರಿನ ಪರಿಮಾಣ, ಬಳಕೆ, ನೀರಾವರಿ ಪ್ರದೇಶ ಮತ್ತಿತರ ವಿವರಗಳನ್ನು ಕೋಷ್ಟಕ ೧ ರಲ್ಲಿ ಕೊಡಲಾಗಿದೆ.

ಸದ್ಯಕ್ಕೆ ಲಭ್ಯವಿರುವ ತಾಂತ್ರಿಕ ನೈಪುಣ್ಯ, ಭೂಮ್ಯಾಕೃತಿಯ ರಚನೆ, ಭೂಮಿಯ ಬಳಕೆ ಮುಂತಾದವನ್ನು ಗಮನದಲ್ಲಿಟ್ಟುಕೊಂಡು, ತಜ್ಞರು ನಮ್ಮ ರಾಜ್ಯದಲ್ಲಿ ೪೫ ಲಕ್ಷದಿಂದ ೫೦ ಲಕ್ಷ ಹೆ. ಮೀ.ಗಳಷ್ಟು ಮೇಲುಜಲವನ್ನು ಬಳಸಲು ಸಾಧ್ಯವೆಂದು ಅಂದಾಜಿಸಿದ್ದಾರೆ. ಹೀಗೆ ನಮ್ಮ ರಾಜ್ಯದಲ್ಲಿ ೫೦ ಲಕ್ಷ ಹೆ. ಮೀ.ಗಳಷ್ಟು ಮೇಲುಜಲವನ್ನು ನೀರಾವರಿಗೆಂದು ಬಳಸಿದರೆ ಒಟ್ಟು ೪೧.೨ ಲಕ್ಷ ಹೆ. ಭೂಮಿಗೆ ನೀರುಣಿಸಲು ಸಾಧ್ಯ. ನಮ್ಮ ಎಲ್ಲ ಯೋಜನೆಗಳು ಸರಿಯಾಗಿ ಕಾರ್ಯಗತವಾದರೆ, ಈ ಶತಮಾನದ ಅಂತ್ಯದ ವೇಳೆಗೆ ಈ ಗುರಿಯನ್ನು ತಲುಪಬಹುದು ಎಂದು ಕೆಲವು ತಜ್ಞರ ಅಭಿಪ್ರಾಯ. ಅಂದರೆ, ಸುಮಾರು ಇನ್ನೊಂದು ಕಾಲು ಶತಮಾನದ ನಂತರ ನಮ್ಮ ನದಿಗಳಲ್ಲಿ ನಮ್ಮ ಬಳಕೆಗೆ ನೀರು ಇರಲಾರದು.

**ಅಂತರ್ಜಲ**

ಮನುಷ್ಯ ಸಹಜವಾಗಿಯೇ, ಅನಾದಿ ಕಾಲದಿಂದಲೂ ಕಣ್ಣಿಗೆ ಕಾಣುವ ಹಾಗೂ ಸುಲಭವಾಗಿ ಎಟಕುವ ನದಿ, ಹಳ್ಳ, ಕೊಳ್ಳಗಳ ನೀರನ್ನು ಮೊದಮೊದಲು ಬಳಸಿರಬೇಕು. ಜನಸಂಖ್ಯೆ ಬೆಳೆದಂತೆ ನೀರಿನ ಬೇಡಿಕೆ ಬೆಳೆಯುತ್ತ ಹೋದಂತೆ, ಮತ್ತು ಮೇಲುಜಲದ ಮೂಲದಿಂದ ದೂರದಲ್ಲಿ ಮನುಷ್ಯನ ವಸತಿಗಳು ನಿರ್ಮಾಣಗೊಂಡಾಗ, ಅವನು ಅಂತರ್ಜಲದತ್ತ ಗಮನ ಹರಿಸಿದ, ಅಂತರ್ಜಲದ ಅಧ್ಯಯನ ಮತ್ತು ಬಳಕೆಗೆ ಇದೇ ಚೋದನೆ. ಕುರುಕ್ಷೇತ್ರ ಯುದ್ಧಭೂಮಿಯಲ್ಲಿ ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮನಿಗೆ ನೀರಡಿಕೆಯಾದಾಗ ಅರ್ಜುನ ತನ್ನ ಬಾಣವನ್ನು ನೆಲಕ್ಕೆ ಹೊಡೆದಾಗ ನೀರಿನ ಸೆಲೆಯೊಂದು ಭೂಮಟ್ಟದಿಂದ ಮೇಲಕ್ಕೆ ಚಿಮ್ಮಿ ಬಂತು. ಆ ನೀರಿನಿಂದ ಭೀಷ್ಮನ ದಾಹ ತಣಿದಿತ್ತು. ಬಹುಶಃ ಅರ್ಜುನ ಒಬ್ಬ ತಜ್ಞ ಜಲಭೂ ವಿಜ್ಞಾನಿಯಂತೆ ಅಂತರ್ಜಲದ ಪರಿಶೋಧನೆ ಮಾಡಿರಬೇಕು. ಅಂದರೆ ಮಹಾಭಾರತದ ಕಾಲದಲ್ಲಿ ಮತ್ತು ಅದಕ್ಕೂ ಪೂರ್ವದಲ್ಲಿ ಅಂತರ್ಜಲದ ಪರಿಶೋಧನೆ ಮತ್ತು ಬಳಕೆ ನಮ್ಮಲ್ಲಿ ಇದ್ದಿರಬೇಕು.

ಕರ್ನಾಟಕದಲ್ಲಿ ಅಂತರ್ಜಲದ ಬಳಕೆ ಬಹು ಹಿಂದಿನ ಕಾಲದಿಂದಲೂ ಇದ್ದರೂ, ಅದರ ಬಗ್ಗೆ ವೈಜ್ಞಾನಿಕ ಅಧ್ಯಯನ ಪ್ರಾರಂಭವಾದದ್ದು ಮೊದಲಿಗೆ ಹೈದರಾಬಾದ್ ಕರ್ನಾಟಕದಲ್ಲಿ – ಬಹುಶಃ ಇಡೀ ದೇಶದಲ್ಲಿಯೇ ಪ್ರಪ್ರಥಮ ಎಂದರೂ ಸರಿಯೇ. ಈ ಶತಮಾನದ ಆದಿಭಾಗದಲ್ಲಿ ಅಂದಿನ ಹೈದರಾಬಾದ್ ಸಂಸ್ಥಾನದಲ್ಲಿ ತಜ್ಞ ಭೂವಿಜ್ಞಾನಿ ದಿವಗಂತ ಕ್ಯಾಪ್ಟನ್ ಮನ್ ಎಂಬವರ ನೇತೃತ್ವದಲ್ಲಿ ಕುಡಿಯುವ ನೀರಿಗಾಗಿ ಈ ಅಧ್ಯಯನ ಆರಂಭ. ಆದರೆ ಆಗ ಸೀಮಿತ ದೃಷ್ಟಿಯನ್ನು ಇಟ್ಟುಕೊಂಡು ಆರಂಭವಾದ ಅಂತರ್ಜಲ ಅಧ್ಯಯನ ಮುಂದೆ ಮನ್ ತೀರಿಕೊಂಡ ಮೇಲೆ ಬೆಳೆಯಲಿಲ್ಲ. ನಮ್ಮ ರಾಜ್ಯದ ಗಣಿ ಮತ್ತು ಭೂವಿಜ್ಞಾನ ಇಲಾಖೆ ೧೯೬೬ ರಲ್ಲಿ ಕುಡಿಯುವ ನೀರು ಮತ್ತು ಬಾವಿ ನೀರಾವರಿ ಇವೆರಡನ್ನೂ ದೃಷ್ಟಿಯಲ್ಲಿಟ್ಟುಕೊಂಡು ಅಂತರ್ಜಲದ ಅಧ್ಯಯನ ಮತ್ತು ಸಮೀಕ್ಷೆಯನ್ನು ಪುನರಾರಂಭಿಸಿತು. ಅಲ್ಲಿಂದೀಚೆಗೆ ಸಾಕಷ್ಟು ಮಾಹಿತಿ ಸಂಗ್ರಹವಾಗಿದೆ.

**ಅಂತರ್ಜಲದ ಅಸ್ತಿತ್ವ**

ದಾಸವರೇಣ್ಯರಾದ ಶ್ರೀ ಪುರಂದರದಾಸರು ತಮ್ಮದೊಂದು ಪದದಲ್ಲಿ,

"ಬಾಯಾರಿತು ಎಂದು ಬಾವಿ ನೀರಿಗೆ ಪೋದೆ
ಬಾವಿ ಜಲ ಬತ್ತಿ ಬರಿದಾಯ್ತು ಹರಿಯೇ"

ಎಂದು ಹಾಡಿದ್ದಾರೆ. ಬಾವಿಯಲ್ಲಿ ಜಲ ಸಿಗುವುದು ಬತ್ತುವುದು ದೈವಭಕ್ತರಾದ ಪುರಂದರದಾಸರಿಗೆ ದೇವರ ಕೃಪೆಯಾಗಿ ಕಂಡರೆ, ಜಲ ಭೂ ವಿಜ್ಞಾನಿಗೆ ಆಯಾ ಪ್ರದೇಶದ ಶಿಲೆಗಳು, ಆಯಾ ಪ್ರದೇಶದ ಭೂ ವೈಜ್ಞಾನಿಕ ಲಕ್ಷಣಗಳು, ಅಲ್ಲಿ ಬೀಳುವ ಮಳೆ, ಆಯಾ ಪ್ರದೇಶದ ಬಾಷ್ಪ ವಿಸರ್ಜನೆ ಇತ್ಯಾದಿಗಳೇ ಅದಕ್ಕೆ ಕಾರಣಗಳೆಂದು ತೋರುತ್ತದೆ. ಅಂತರ್ಜಲ ಹಲವಾರು ಸಂಕೀರ್ಣ ನೈಸರ್ಗಿಕ ಅಭಿಕರಣಗಳ ಪರಸ್ಪರ ಕ್ರಿಯೆಗಳ ಫಲ. ಆದ್ದರಿಂದಲೇ ಇದರ ಅಧ್ಯಯನವೂ ಬಹಳ ಕ್ಲಿಷ್ಟ.

ಕರ್ನಾಟಕ ಜಗತ್ತಿನ ಪೀಠಭೂಮಿಗಳಲ್ಲಿ ಒಂದಾದ ದಕ್ಷಿಣದ ಪೀಠ ಭೂಮಿಯ ಒಂದು ಭಾಗ. ನಮ್ಮ ರಾಜ್ಯದಲ್ಲಿ ಸ್ಥೂಲವಾಗಿ ಆರು ಬಗೆಯ ಶಿಲಾ ಸಮುದಾಯಗಳನ್ನು ಗುರುತಿಸಬಹುದು:

೧ ಕಣ ಶಿಲೆ ಮತ್ತು ತತ್ಸಂಬಂಧಿತ ಶಿಲೆಗಳು
೨ ಪದರ ಶಿಲೆಗಳು
೩ ದಖಿನ್ ಬೆಸಾಲ್ಟ್
೪ ಗಟ್ಟಿಗೊಂಡ ಮಡ್ಡಿ ಶಿಲೆಗಳು
೫ ಜಂಬಿಟ್ಟಿಗೆ
೬ ಮೆಕ್ಕಲು

ಈ ಶಿಲೆಗಳು ಸಿಗುವ ಪ್ರದೇಶಗಳನ್ನು ಚಿತ್ರ ೨ ರಲ್ಲಿ ಗುರ್ತಿಸಲಾಗಿದೆ.

ಮೊದಲ ನಾಲ್ಕು ಬಗೆಯ ಶಿಲೆಗಳು ನಮ್ಮ ರಾಜ್ಯದ ಶೇಕಡ ೯೫ಕ್ಕಿಂತ ಹೆಚ್ಚು ಭಾಗವನ್ನು ಆಕ್ರಮಿಸಿವೆ. ಇವುಗಳಲ್ಲಿ ಉತ್ತರ ಭಾರತದಲ್ಲಿ ಸಿಗುವ ಮೆಕ್ಕಲುಗಳಲ್ಲಿ ಇರುವಂತೆ ರಂಧ್ರಗಳಿಲ್ಲ. ಆದ್ದರಿಂದ ಈ ಶಿಲೆಗಳನ್ನು ಇತ್ತೀಚಿನವರೆಗೂ ಕಠಿಣ ಶಿಲೆಗಳೆಂಬ ಕಾರಣದಿಂದ ಅಂತರ್ಜಲದ ಅಭಿವೃದ್ಧಿಯ ದೃಷ್ಟಿಯಿಂದ ಕಡೆಗಣಿಸಲಾಗಿತ್ತು. ಆದರೆ ಪದೇ ಪದೇ ಬರುವ ಬರಗಾಲದಿಂದಾಗಿ ಇವುಗಳತ್ತ ನಮ್ಮ ದೃಷ್ಟಿ ಹರಿಯಿತು.

ರಂಧ್ರಗಳು ಇರದಿದ್ದರೂ ಈ ಶಿಲೆಗಳ ಮೇಲೆ ೩–೫ ಮೀಟರುಗಳಷ್ಟು ಮಂದವಾಗಿರುವ ಶಿಥಿಲಿತ ವಲಯ ಮತ್ತು ಅದರ ಕೆಳಗಿರುವ ಛೇದಗಳಿಂದ ಕೂಡಿರುವ ವಲಯ ಎಂಬೆರಡು ವಲಯಗಳಲ್ಲಿ ಸಾಕಷ್ಟು ಅಂತರ್ಜಲ ಸಂಗ್ರಹವಾಗುತ್ತದೆ. ಬಾವಿಯನ್ನು ತೋಡಿದಾಗ ಅಥವಾ ಕೊರೆದಾಗ ಅಂತರ್ಜಲ ಬಾವಿಯೊಳಕ್ಕೆ ಹರಿದು ಬರುತ್ತದೆ (ಚಿತ್ರ ೩).

**ಕರ್ನಾಟಕದ ಅಂತರ್ಜಲ ಸಂಪತ್ತು**

ನಮ್ಮ ರಾಜ್ಯದ ಸಂಕೀರ್ಣ ಭೂವೈಜ್ಞಾನಿಕ ಲಕ್ಷಣಗಳು, ಬೇರೆ ಬೇರೆ ಭಾಗದಲ್ಲಿರುವ ವಾಯುಗುಣ, ಮಣ್ಣಿನ ಗುಣ ಮುಂತಾದವುಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ರಾಜ್ಯದಲ್ಲಿರುವ ಸುಮಾರು ೨,೦೦೦ ನಿರೀಕ್ಷಣಾ ಬಾವಿಗಳಲ್ಲಿ ದಾಖಲಾದ ಜಲಮಟ್ಟದ ಏರಿಳಿತಗಳನ್ನು ಗಣನೆಗೆ ತೆಗೆದುಕೊಂಡು ನಮ್ಮ ರಾಜ್ಯದ ಸರಾಸರಿ ಮಳೆಯ ಸುಮಾರು ಶೇಕಡ೧೦ರಷ್ಟು ನೀರು ಭೂಮಿಯೊಳಕ್ಕೆ ಪ್ರತಿ ವರ್ಷ ಇಳಿಯುತ್ತದೆಂದು ಅಂದಾಜು. ಇದು ಮೇಲ್ಕಾಣಿಸಿದ ಹಲವಾರು ನೈಸರ್ಗಿಕ ಕಾರಣಗಳಿಂದಾಗಿ ಸ್ಥಾನಿಕವಾಗಿ ವ್ಯತ್ಯಾಸಗೊಳ್ಳುತ್ತದೆ. ಈ ವೈಜ್ಞಾನಿಕ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನಮ್ಮ ರಾಜ್ಯದಲ್ಲಿ ಒಟ್ಟು ಸುಮಾರು ೯೭೦ ಕೋಟಿ ಘನ ಮೀಟರುಗಳಷ್ಟು (ಕೋ. ಘ. ಮೀ.) ನೀರು ಪ್ರತಿವರ್ಷ ಮರು ಭರ್ತಿಯಾಗುತ್ತದೆ ಎಂದು ಅಂದಾಜಿಸಲಾಗಿದೆ.

ನಮ್ಮ ರಾಜ್ಯದಲ್ಲಿ ೩,೬೭,೯೭೦ (ಜನವರಿ ೧೯೭೮ರ ಅಂಕಿ) ನೀರಾವರಿ ಬಾವಿಗಳಿಂದ ಸುಮಾರು ೨೫೦ ಕೋಟಿ ಘ. ಮೀ. ಅಂತರ್ಜಲವನ್ನು ಈ ಬಾವಿಗಳಿಂದ ಬಳಸಲಾಗುತ್ತದೆ ಎಂದು ಅಂದಾಜಿಸಲಾಗಿದೆ. ಉಳಿದ ಸುಮಾರು ೩೬,೮೦೦ ಕೋಟಿ ಘ. ಮೀ. ಗಳಷ್ಟು ಅಂತರ್ಜಲವನ್ನು ಬಳಸಲು ೬,೩೫,೦೦೦ ಬಾವಿಗಳನ್ನು ತೋಡಬಹುದೆಂದು ಲೆಕ್ಕ ಹಾಕಬಹುದು. ನಮ್ಮ ರಾಜ್ಯದ ಜಿಲ್ಲಾವಾರು ಅಂತರ್ಜಲದ ಮರು ಭರತಿ, ಬಳಕೆ, ಸಿಲ್ಕು ಇತ್ಯಾದಿ ವಿವರಗಳನ್ನು ಕೋಷ್ಟಕ ೨ರಲ್ಲಿ ಕೊಡಲಾಗಿದೆ.

ಆದರೆ, ಈ ಎಲ್ಲಾ ಲೆಕ್ಕಾಚಾರಗಳು ನೂರಕ್ಕೆ ನೂರರಷ್ಟು ಖಚಿತ ವೈಜ್ಞಾನಿಕ ಪರಿಶೀಲನೆ ಮತ್ತು ಪ್ರಯೋಗಗಳ ಮೇಲೆ ಆಧಾರಿತವಾಗಿಲ್ಲ. ಜಲವಿಜ್ಞಾನದಲ್ಲಿ ಹಲವಾರು ಸಂಕೀರ್ಣ ಅಭಿಕರಣಗಳನ್ನು ಖಚಿತಪಡಿಸುವುದು ಅತ್ಯಂತ ಮುಂದುವರಿದ ದೇಶಗಳಲ್ಲೂ ಸಾಧ್ಯವಾಗಿಲ್ಲ. ಆದ್ದರಿಂದ ಲಭ್ಯವಿರುವ ಮಾಹಿತಿಗಳನ್ನು ಆಧರಿಸಿ, ಉಚಿತವೆನಿಸಬಹುದಾದ ಕೆಲವೊಂದು ವೈಜ್ಞಾನಿಕ ಊಹೆಗಳನ್ನಾಧರಿಸಿ ಈ ಬಗೆಯ ಲೆಕ್ಕಾಚಾರ ಮಾಡಬೇಕಾಗುತ್ತದೆ. ಸದ್ಯಕ್ಕೆ ಲಭ್ಯವಿರುವ ವೈಜ್ಞಾನಿಕ ಮಾಹಿತಿ, ತಾಂತ್ರಿಕ ನೈಪುಣ್ಯ ಮುಂತಾದುವುಗಳನ್ನು ಗಮನದಲ್ಲಿಟ್ಟುಕೊಂಡು ಈಗ ೧೮,೪೦೦ ಕೋಟಿ ಘ. ಮೀ. ಅಂತರ್ಜಲವನ್ನು ಬಳಸಬಹುದೆಂದು ಹೇಳಬಹುದು. ಇಷ್ಟು ಅಂತರ್ಜಲವನ್ನು ಬಳಸಲು ಸುಮಾರು ೩,೧೭,೦೦೦ ಬಾವಿಗಳನ್ನು ನಿರ್ಮಿಸಬೇಕು.

**ಕೆಲವು ಮುನ್ನೆಚ್ಚರಿಕೆಯ ಸೂಚನೆಗಳು**

ನೀರು ಯಾವುದೇ ರೂಪದಲ್ಲಿದ್ದರೂ ನಿಸರ್ಗ ನಮಗಿತ್ತಿರುವ ಅತ್ಯಮೂಲ್ಯ ಸಂಪತ್ತು. ಬಹು ಮೂಲ್ಯಧಾತುಗಳಾದ ಚಿನ್ನ, ಬೆಳ್ಳಿಗಳಿಗಿಂತಲೂ ಅದು ಅಮೂಲ್ಯ. ಅದೊಂದು ನಿಸರ್ಗದತ್ತ ಮಹಾವರ – ಸರಿಯಾಗಿ ಬಳಸಿದರೆ. ಇಲ್ಲವಾದರೆ ಅದು ಶಾಪವಾಗಲೂಬಹುದು. ಅದಕ್ಕಾಗಿ ಕೆಲವು ಸೂಚನೆಗಳನ್ನು ನೀಡದೆ ಈ ಲೇಖನ ಮುಗಿಸಿದರೆ ಅನುಚಿತವಾದೀತು. ಆ ಸೂಚನೆಗಳು ಹೀಗಿವೆ:

೧ ಸದ್ಯಕ್ಕೆ ನೀರಾವರಿ ಯೋಜನೆಗಳಿಂದ ಕಾಲುವೆಗಳಲ್ಲಿ ಹರಿದು ಬರುವ ನೀರನ್ನು ಬೆಳೆಗಳಿಗೆ ಬೇಕಾಗುವ ನೀರಿಗಿಂತಲೂ ಹೆಚ್ಚಾಗಿ ಭೂಮಿಗೆ ಉಣಿಸಲಾಗುತ್ತಲಿದೆ. ಇದರಿಂದ ನಮ್ಮ ನೀರಾವರಿ ಪ್ರದೇಶ ಕುಂಠಿತಗೊಂಡಿದೆಯಲ್ಲದೆ, ಅದು ಜೌಗು ಹಿಡಿಯುತ್ತದ. ಈ ಮಾತು ಎರೆ ಮಣ್ಣಿನ ಪ್ರದೇಶಗಳಿಗಂತೂ ಸಂಪೂರ್ಣವಾಗಿ ಅನ್ವಯವಾಗುತ್ತದೆ. ಈಗಾಗಲೇ ತುಂಗಭದ್ರಾ ಮತ್ತು ಮಲಪ್ರಭಾ ಅಣೆಕಟ್ಟು ಪ್ರದೇಶಗಳಲ್ಲಿ ಈ ಸಮಸ್ಯೆ ಭೂತಾಕಾರವಾಗಿ ಬೆಳೆಯುತ್ತಲಿದೆ. ಕಾರಣ ಮಣ್ಣಿಗೆ ಅನುಗುಣವಾಗಿ ಬೆಳೆಯನ್ನು ಬೆಳೆಯಬೇಕು. ಬೆಳೆಗೆ ಅನುಗುಣವಾಗಿ ನೀರನ್ನು ಬಳಸಬೇಕು. ಮೊದಲ ಒಂದೆರಡು ವರ್ಷಗಳಲ್ಲಿ ಸಿಗುವ ಭಾರಿ ಹಣದಾಸೆಗಾಗಿ ಭತ್ತ, ಕಬ್ಬು ಇತ್ಯಾದಿ ಇತ್ಯಾದಿ ಭಾರಿ ನೀರುಣ್ಣುವ ಬೆಳೆಗಳನ್ನು ನಾವು ಬೆಳೆಯಲೇಬಾರದು. ಇದಕ್ಕಾಗಿ ನಿರ್ದಾಕ್ಷಿಣ್ಯವಾಗಿ ಸೂಕ್ತ ಕ್ರಮ ಕೈಗೊಳ್ಳಬೇಕು.

೨ ಎಕರೆಗನುಗುಣವಾಗಿ ನೀರುಗಂದಾಯ ವಿಧಿಸುವುದರ ಬದಲಾಗಿ, ಬಳಸುವ ನೀರಿನ ಪರಿಮಾಣಕ್ಕನುಗುಣವಾಗಿ ನೀರುಗಂದಾಯ ವಿಧಿಸಬೇಕು.

೩ ನಮ್ಮ ದೇಶದಲ್ಲಿ ಮೇಲುಜಲ ಮಾತ್ರ ರಾಜ್ಯದ ಸ್ವತ್ತು. ಅಂತರ್ಜಲದ ಒಡೆತನ ಸದ್ಯಕ್ಕೆ ಆಯಾ ಭೂ ಮಾಲೀಕನಿಗೆ ಸೇರಿದ್ದು. ಇದರಿಂದ ಅಂತರ್ಜಲದ ಬಳಕೆಯ ಮೇಲೆ ನಿಯಂತ್ರಣ ಇಲ್ಲ. ಅದ್ದರಿಂದ ಕೂಡಲೇ ಈ ಬಗ್ಗೆ ಒಂದು ಕಾನೂನನ್ನು ಜಾರಿಗೆ ತಂದು ಅಂತರ್ಜಲ ರಾಜ್ಯದ ಸ್ವತ್ತು ಎಂದು ಘೋಷಿಸಬೇಕು. ಇಲ್ಲವಾದರೆ ಅನಿರ್ಬಂಧಿತವಾಗಿ ಬಾವಿಗಳನ್ನು ತೋಡಿ ಅಂತರ್ಜಲವನ್ನು ಬಳಸುವುದರಿಂದ ಜಲಮಟ್ಟ ವರ್ಷ ವರ್ಷವೂ ಕೆಳಕ್ಕೆ ಇಳಿಯುತ್ತಾ ಹೋಗುತ್ತದೆ. ನಮ್ಮ ವೆಚ್ಚ ಆದಾಯದ ಮಿತಿಯ ಒಳಗೆ ಇರಬೇಕೆಂಬ ಸಾಮಾನ್ಯ ನೀತಿ ಅಂತರ್ಜಲಕ್ಕೂ ಅನ್ವಯವಾಗುತ್ತದೆ. ಈ ಬಗೆಯ ಕಾನೂನು ಬೇರೆ ಹಲವಾರು ದೇಶಗಳಲ್ಲಿದೆ. ನಮ್ಮ ದೇಶದಲ್ಲಿ ಇಲ್ಲ.

೪ ಹಳ್ಳಿಗಳಲ್ಲಿ ಕುಡಿಯುವುದಕ್ಕೆ ಬಾವಿ ನೀರೇ ಆಧಾರ. ಆದ್ದರಿಂದ ಅಂತರ್ಜಲವನ್ನು ಮಲಿನಗೊಳಿಸುವುದನ್ನು, ತಕ್ಷಣವೇ ಕ್ರಮಗಳನ್ನು ಕೈಗೊಂಡು, ತಡೆಯಬೇಕು. ಮಲಿನಗೊಂಡ ಮೇಲುಜಲವನ್ನು ಸ್ವಚ್ಛಗೊಳಿಸುವುದು ತೌಲನಿಕವಾಗಿ ಸುಲಭಸಾಧ್ಯ. ಮೇಲುಜಲದಲ್ಲಿರುವ ಮಾಲಿನ್ಯವನ್ನು ಹೊರತೆಗೆಯಬಹುದು. ಆದರೆ ಅಂತರ್ಜಲದ ಮಾಲಿನ್ಯವನ್ನು ಹೊರ ತೆಗೆಯುವುದು ಅಸಾಧ್ಯವೆನ್ನುವಷ್ಟರ ಮಟ್ಟಿಗೆ ಕಷ್ಟ. ಆದ್ದರಿಂದ ಚಿಕಿತ್ಸೆಗಿಂತ ಮುನ್ನೆಚ್ಚರಿಕೆಯೇ ಮೇಲು.

**ಕೋಷ್ಟಕ 1**

**ಕರ್ನಾಟಕದ ನದೀಜಲದ ಪರಿಮಾಣ, ಜಲಸಂಪನ್ಮೂಲ, ಬಳಕೆ ಮತ್ತು ನೀರಾವರಿ ಪ್ರದೇಶ**

| ಜಲಾನಯನ ಅಥವಾ ನದೀಸಮೂಹ ಮತ್ತು ವಿಸ್ತೀರ್ಣ ( ಚ. ಕಿ. ಮೀ. ) | ಸರಾಸರಿ ಸಿಗುವ ನೀರಿನ ಪರಿಮಾಣ | ನೀರಿನ ಬಳಕೆ ಮತ್ತು ನೀರಾವರಿ ಪ್ರದೇಶ: ಅಸ್ತಿತ್ವದಲ್ಲಿರುವ ಯೋಜನೆಗಳು | | ನಿರ್ಮಾಣದಲ್ಲಿರುವ ಯೋಜನೆಗಳು | | ಉದ್ದೇಶಿತ ಯೋಜನೆಗಳು | | ಒಟ್ಟು | |
|---|---|---|---|---|---|---|---|---|---|
| | | ಜಲ ಸಂ- ಪನ್ಮೂಲ | ನೀರಾವರಿ ಪ್ರದೇಶ | ಜಲ ಸಂ- ಪನ್ಮೂಲ | ನೀರಾವರಿ ಪ್ರದೇಶ | ಜಲ ಸಂ- ಪನ್ಮೂಲ | ನೀರಾವರಿ ಪ್ರದೇಶ | ಜಲ ಸಂ- ಪನ್ಮೂಲ | ನೀರಾವರಿ ಪ್ರದೇಶ |
| ೧ ಗೋದಾವರಿ (೪,೪೦೫) | ೦.೧೫ | ೦.೦೦೨ | ೦.೦೦೧ | ೦.೦೦೪ | ೦.೦೫ | ೦.೦೯೯ | ೦.೦೭ | ೦.೧೪೫ | ೦.೧೨ |
| ೨ ಕೃಷ್ಣಾ (೧,೧೩,೨೭೧) | ೨.೭೫ | ೧.೦೯೮ | ೧.೧೩ | ೦.೭೦ | ೦.೯೪ | ೧.೦೭೫ | ೦.೬೧ | ೨.೯೭೩ | ೨.೬೭ |
| ೩ ಕಾವೇರಿ (೩೪,೨೭೩) | ೧.೧೦ | ೦.೫೨೮ | ೦.೨೭ | ೦.೪೫ | ೦.೪೨ | ೦.೧೯ | ೦.೧೯ | ೧.೧೬೮ | ೦.೮೮ |
| ೪ ಪಶ್ಚಿಮಕ್ಕೆ ಹರಿವ ನದಿಗಳು (೨೬,೨೪೧) | ೫.೯ | ೦.೦೬೭ | ೦.೦೬ | ೦.೦೦೬ | ೦.೦೦೬ | ೦.೨೩೬ | ೦.೩೦ | ೦.೩೯ | ೦.೩೭ |
| ೫ ಉತ್ತರ ಮತ್ತು ದಕ್ಷಿಣ ಪೆನ್ನಾರ್ ಪಾಲಾರ್ (೧೩,೬೧೦) | ೦.೧ | ೦.೦೬೨ | ೦.೬೨ | ೦.೦೦೩ | ೦.೦೦೪ | ೦.೦೦೪ | ೦.೦೦೮ | ೦.೦೭೯ | ೦.೦೭ |
| ಕರ್ನಾಟಕ (೧,೯೧,೭೭೩) | ೧೧.೦೦ | ೧.೮೬೭ | ೧.೫೧ | ೧.೨೦೩ | ೧.೪೨ | ೧.೬೦೪ | ೧.೧೮ | ೪.೬೭೪ | ೪.೧೨ |

ಸೂಚನೆ: ನೀರಿನ ಪರಿಮಾಣ ಮತ್ತು ಜಲಸಂಪನ್ಮೂಲವನ್ನು ಮಿಲಿಯ ಹೆ. ಮೀ. ಗಳಲ್ಲಿ ಹಾಗೂ ನೀರಾವರಿ ಪ್ರದೇಶವನ್ನು ಮಿಲಿಯ ಹೆ. ಗಳಲ್ಲಿ ಕೊಡಲಾಗಿದೆ.

## ಕೋಷ್ಟಕ 2

### ಕರ್ನಾಟಕದ ಜಿಲ್ಲಾವಾರು ಅಂತರ್ಜಲದ ಮರುಭರತಿ, ಬಳಕೆ, ಸಿಲ್ಕು ಮತ್ತು ಬಾವಿಗಳು.

| ಕ್ರಮ ಸಂಖ್ಯೆ | ಜಿಲ್ಲೆ | ಮರು ಭರತಿ (ದ.ಘ.ಮೀ.) | ಬಳಕೆ (ದ.ಘ.ಮೀ.) | ಸಿಲ್ಕು (ದ.ಘ.ಮೀ.) | ಅಸ್ತಿತ್ವದಲ್ಲಿರುವ ಬಾವಿಗಳು | ಹೆಚ್ಚುವರಿ ಬಾವಿಗಳು |
|---|---|---|---|---|---|---|
| ೧ | ಬೆಂಗಳೂರು | ೩೩೮ | ೨೪೫ | ೯೩ | ೩೫,೭೦೩ | ೧೩,೦೦೦ |
| ೨ | ಬೆಳಗಾಂ | ೯೯೫ | ೩೨೯ | ೬೬೫ | ೪೬,೫೭೭ | ೫೪,೨೯೨ |
| ೩ | ಬಳ್ಳಾರಿ | ೩೦೪ | ೬೪ | ೨೪೦ | ೭,೮೪೩ | ೧೯,೭೦೯ |
| ೪ | ಬೀದರ | ೪೪೯ | ೯೩ | ೩೫೫ | ೧೧,೫೯೪ | ೩೩,೪೩೦ |
| ೫ | ಬಿಜಾಪುರ | ೯೦೭ | ೨೬೭ | ೬೪೦ | ೪೦,೪೯೫ | ೫೫,೫೨೯ |
| ೬ | ಚಿಕ್ಕಮಗಳೂರು | ೧೭೯ | ೧೫ | ೧೬೩ | ೨,೦೧೩ | ೧೫,೬೭೧ |
| ೭ | ಚಿತ್ರದುರ್ಗ | ೫೫೩ | ೧೪೬ | ೪೦೭ | ೧೭,೭೦೫ | ೩೨,೬೯೦ |
| ೮ | ದಕ್ಷಿಣ ಕನ್ನಡ | ೭೧೫ | ೨೧೦ | ೫೦೫ | ೩೧,೯೮೪ | ೪೦,೯೪೧ |
| ೯ | ಧಾರವಾಡ | ೮೦೭ | ೯೪ | ೭೧೨ | ೧೧,೬೦೪ | ೫೮,೬೬೨ |
| ೧೦ | ಕಲುಬುರ್ಗಿ | ೯೨೯ | ೮೭ | ೮೪೨ | ೧೫,೧೧೦ | ೮೦,೦೦೭ |
| ೧೧ | ಹಾಸನ | ೨೬೪ | ೨೨ | ೨೪೨ | ೨,೮೭೯ | ೨೨,೭೫೧ |
| ೧೨ | ಕೊಡಗು | ೧೪೭ | ೦.೮ | ೧೪೭ | ೯೭ | ೧೨,೦೦೯ |
| ೧೩ | ಕೋಲಾರ | ೪೬೧ | ೩೨೪ | ೭೭ | ೫೨,೮೨೭ | ೮,೨೭೫ |
| ೧೪ | ಮಂಡ್ಯ | ೨೭೧ | ೭೧ | ೨೦೦ | ೮,೪೯೭ | ೧೭,೬೨೧ |
| ೧೫ | ಮೈಸೂರು | ೩೪೫ | ೯೫ | ೨೪೯ | ೧೦,೭೩೦ | ೨೧,೧೫೪ |
| ೧೬ | ರಾಯಚೂರು | ೬೨೪ | ೮೩. | ೫೪೧ | ೧೧,೫೨೫ | ೪೫,೫೭೯ |
| ೧೭ | ಶಿವಮೊಗ್ಗ | ೬೦೮ | ೨೬ | ೫೮೧ | ೩,೭೮೦ | ೪೮,೧೧೫ |
| ೧೮ | ತುಮಕೂರು | ೫೩೬ | ೨೪೫ | ೨೯೧ | ೩೭,೭೧೨ | ೩೨,೨೮೧ |
| ೧೯ | ಉತ್ತರ ಕನ್ನಡ | ೨೬೬ | ೭೧ | ೧೯೫ | ೧೯,೨೯೫ | ೨೨,೬೪೪ |
| | ಕರ್ನಾಟಕ | ೯,೬೯೮ | ೨,೪೮೮ | ೭,೧೪೫ | ೩,೬೭,೯೭೦ | ೬,೩೪,೩೫೮ |
| | | ಅಥವಾ | ಅಥವಾ | ಅಥವಾ | ಅಥವಾ | ಅಥವಾ |
| | | ೯,೭೦೦ | ೨,೫೦೦ | ೭,೧೫೦ | ೩,೬೮,೦೦೦ | ೬,೩೪,೦೦೦ |

# ಪ್ರಾಣಿಲೋಕ

ಡಾ॥ ಎಚ್. ಬಿ. ದೇವರಾಜ ಸರ್ಕಾರ್

ಕೃಷ್ಣ–ಕಾವೇರಿಗಳಂತಹ ಬೃಹದ್ ನದಿಗಳು ಹರಿದು ನಲಿಸುವ ನಲ್ಮೆಯ ನಾಡು ಕರ್ನಾಟಕ. ಪಶ್ಚಿಮದುದ್ದಕ್ಕೂ ಹರಡಿದ ಅರಬೀಸಮುದ್ರ, ಅದಕ್ಕೆ ಸಮಾಂತರವಾಗಿ ಹಠಾತ್ತನೆ ಏರಿನಿಂತ ಸಹ್ಯಾದ್ರಿ ಸಾಲು, ಅದರ ನೆರೆಯ ಮಲೆನಾಡು. ಅನಂತರ ಪೂರ್ವಕ್ಕಿರುವ ಬಯಲು ಸೀಮೆ. ಮುಂಗಾರಿನ ಕಾರ್ಮೋಡಗಳನ್ನು ತಡೆದು ತಣಿಸುವ ಪಶ್ಚಿಮಘಟ್ಟದ ಮಲೆನಾಡು ಒಂದೆಡೆಯಾದರೆ, ಪದೇ ಪದೇ ಅನಾವೃಷ್ಟಿಯಿಂದ ನರಳುವ ಪೂರ್ವದ ಬಂಜರು ಬಯಲು ಸೀಮೆ ಇನ್ನೊಂದೆಡೆ. ಪಶ್ಚಿಮ ಘಟ್ಟದ ಕಣಿವೆಯ ನಿತ್ಯ ಹರಿದ್ವರ್ಣ, ದಟ್ಟಕಾಡುಗಳಿಂದ ಬಯಲು ಸೀಮೆಯ ಕುರುಚಲು ಕಾಡುಗಳವರೆಗಿನ ವೈವಿಧ್ಯಪೂರ್ಣ ವನಶ್ರೀ. ಶ್ರೀಗಂಧಕ್ಕೆ ಹೆಸರಾದ, ಬಂಗಾರದ ಗಣಿಯ ನೆಲೆವೀಡಾದ ೨,೦೦೦ ವರ್ಷಗಳಿಗೂ ಮೀರಿದ ಸಾಹಿತ್ಯ–ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡು ಮೆರೆದು ಬೆಳೆದ ನಾಡು. ಇತಿಹಾಸದ ಪುಟಗಳುದ್ದಕ್ಕೂ ಕಂಡುಬರುವ ಯುದ್ಧ ಪರಂಪರೆಯಲ್ಲಿ ಪ್ರಧಾನ ಪಾತ್ರ ವಹಿಸುವ ಆನೆಗಳ ತೌರು. ಪಶ್ಚಿಮಘಟ್ಟಗಳಿಂದ ಪಡುವಲಕ್ಕಿರುವ ಕಣಿವೆ ಕರಾವಳಿಯ ವಿನಹ ಉಳಿದೆಲ್ಲವೂ ದಖಿನ್ ಪ್ರಸ್ಥಭೂಮಿಯ ಭದ್ರಬುನಾದಿಯ ಮೇಲೆ ನಿಂತ ಬಟ್ಟ ಬಯಲು. ಜ್ವಾಲಾಮುಖಿ, ಭೂಕಂಪನಗಳಂತಹ ಉತ್ಪಾತಗಳಿಂದ ಮುಕ್ತವಾದ ಪ್ರದೇಶ. ಮಾನವ ಸಂತತಿ, ಮೇರೆ ಮೀರಿ ಬೆಳೆದು ಜನಸಂಖ್ಯೆ ಆಸ್ಫೋಟಿಸುವವರೆಗೆ ವನ್ಯಜೀವಿ ಸಂಪತ್ತಿನಿಂದ ತುಂಬಿ ತುಳುಕಿದ ನಾಡು. ಬಂಡಿಪುರ, ನಾಗರಹೊಳೆ, ರಂಗನತಿಟ್ಟು, ರಾಣಿಬೆನ್ನೂರುಗಳಂತಹ ಅಭಯಾರಣ್ಯಗಳಲ್ಲಿ ಮಾನವ ಹಸ್ತಕ್ಷೇಪರಹಿತ ವನ್ಯಜೀವಿ ನಾಟಕದ ತುಣುಕುನೋಟ ಸಂದರ್ಶನ ಸೌಲಭ್ಯ. ಹಿಂದಿನ ಕೀರ್ತಿ ಕಾಮನೆಯ ಸೌರಭವನ್ನು ಹರಡುವ ತಾಣಗಳು ಕಳೆದೆರಡು ಶತಮಾನಗಳಲ್ಲಿ ಬ್ರಿಟಿಷ್ ಆಳರಸರ, ಭಾರತದ ಬೇಟೆಯ ಆಟದ ಅಟ್ಟಹಾಸಕ್ಕೆ ಸಿಲುಕಿ ನಲುಗುವವರೆಗೆ ಘನ–ಗಂಭೀರತೆಯಿಂದ ಮೊರೆದು ಮೆರೆದ ವನ್ಯಜೀವಿ ಸಂಪದ್ಭರಿತ ನಾಡು. ಪ್ರತಿ ಕ್ಷಣವೂ ಹೆಚ್ಚುತ್ತಿರುವ ಜನಸಂಖ್ಯೆ. ಅದರ ಹೊಟ್ಟೆ ತುಂಬಲು, ದೇಹ ಮುಚ್ಚಲು, ಆಶ್ರಯ ನಿರ್ಮಿಸಲು ನಡೆದ ಕಾಡುಗಳ ಧ್ವಂಸ, ಸ್ವಂತ ಬೊಕ್ಕಸ ತುಂಬಿ ಅವಸರದಲ್ಲಿ ಸಿರಿವಂತರಾಗಲು ಎದ್ದು ನಿಂತ ಸ್ವಾರ್ಥಿಗಳ ಮಿತಿ ಮೀರಿದ ಆಸೆಗೆ ವನ್ಯಶ್ರೀಯ ಜೊತೆಗೆ ಸ್ವೇಚ್ಛೆಯಾಗಿ ತಿರುಗಿ ಕಾಡಿನ ಜೀವಕ್ಕೆ ಮೆರುಗು ನೀಡುತ್ತಿದ್ದ ವನ್ಯಜೀವಿಗಳ ಕಣ್ಮರೆ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಕನ್ನಡ ನಾಡಿನ ಪ್ರಾಣಿ ಪರಂಪರೆಯ ಗತ ಇತಿಹಾಸದ ಮೆಲುಕು ನಮ್ಮೆಲ್ಲರ ಕಣ್ಣು ತೆರೆಸೀತು. ಮಸುಕಾದ ವಿವೇಕವನ್ನು ಹೊಡೆದೆಬ್ಬಿಸೀತು. ಎಂಬ ಕಿರು ಆಸೆ ಅರಿತು ತಿದ್ದಿಕೊಂಡರೆ ಈಗಲೂ ಕಾಲಮಿಂರಿಲ್ಲ. ಮನಸ್ಸು ಮಾಡಿದರೆ ಕರುನಾಡಿನ ವನ್ಯಶ್ರೀ ಪುನ: ಚೇತರಿಸಿಕೊಂಡು ಕಿರುನಗೆ ಬೀರಿ ನಮ್ಮೆಲ್ಲರ ಬದುಕನ್ನು ಸಾರ್ಥಕಪಡಿಸಬಹುದು. ಭೂತ ಭವಿಷ್ಯಗಳ ನಡುವಿನ ಈ ವರ್ತಮಾನ ಕೇವಲ ಕನಸೆನ್ನಿಸಬಹುದು. ಈ ಕನ್ನಡ ನಾಡು ಪುನಶ್ಚೇತನದ ತನ್ನ ಕೀರ್ತಿ ಪತಾಕೆಯನ್ನು ಹಾರಿಸಬಹುದು. ಅದಕ್ಕೆಂದೇ ಅಳಿದುಳಿದ ಆದರೂ ಅಷ್ಟೇ ಅಂದಚೆಂದದ ಕರ್ನಾಟಕದ ಪ್ರಾಣಿ ಪರಂಪರೆಯ ಪರಿಚಯದ ಪ್ರಯತ್ನ.

ಪ್ರಾಣಿಗಳ ಭೌಗೋಳಿಕ ವಿಸ್ತರಣೆಗೆ ಆ ಪ್ರದೇಶದ ಭೂವಿವರಣೆ ವಾತಾವರಣಗಳಂತಹ ಪರಿಸರ ಘಟಕಗಳೂ ಪ್ರಧಾನ ಅಂಶಗಳೆಂಬುದನ್ನು ಪ್ರಾಣಿಜೀವನ ಅಭ್ಯಾಸ ತಿಳಿಸುತ್ತದೆ. ಇದರಲ್ಲಿ ನೀರು, ನೆಲೆ, ಶಾಖ, ಆಹಾರ ಮುಖ್ಯ ಪಾತ್ರ ವಹಿಸುತ್ತವೆ. ಕಾವೇರಿ – ಕೃಷ್ಣ, ತುಂಗ – ಭದ್ರ, ಕಾಳಿ, ಶರಾವತಿಯಂಥ ತುಂಬು ನದಿಗಳ ವಿಶಾಲ ಜಲಾನಯನ ಪ್ರದೇಶ ಕರ್ನಾಟಕ. ಈ ನದಿಗಳು ಕನ್ನಡನಾಡಿನ ಉದ್ದಗಲಕ್ಕೂ ಹರಿದು ಪೋಷಿಸುತ್ತವೆ. ವಿಸ್ತಾರದಲ್ಲಿ ವ್ಯಾಪಕವೂ ಉಪಯುಕ್ತತೆಯಲ್ಲಿ ಅಪಾರವೂ ಆದ ಈ ನದಿಗಳು ನಾಡಿನ ಜನಜೀವನವನ್ನೇ ಅಲ್ಲದೆ ಪ್ರಾಣಿ ಪರಂಪರೆಯನ್ನು ರೂಪಿಸಿವೆ ಎಂದರೆ ಉತ್ಪ್ರೇಕ್ಷೆಯಾಗಲಾರದು. ಪಶ್ಚಿಮದ ಸಹ್ಯಾದ್ರಿ ಸಾಲು ನಾಡಿನ ನಡೆ–ನುಡಿಗಳನ್ನು ನಿಯಂತ್ರಿಸಿದಂತೆಯೇ ಅದರ ವಾತಾವರಣವನ್ನೂ ನಿರ್ದೇಶಿಸಿದೆ. ನೈರುತ್ಯದಿಂದ ಬೀಸಿ ಬರುವ ಮುಂಗಾರಿನ ಮುಗಿಲ ಮಾಲೆಯನ್ನು ತಡೆದು, ಸಹ್ಯಾದ್ರಿಯನ್ನು ತಣಿಸಿ ಕಾಡು ಬೆಳೆಯಲು ಪೂರಕವಾಗಿ ವನ್ಯಜೀವನವನ್ನು ಅಪ್ರತ್ಯಕ್ಷವಾಗಿ ರೂಪಿಸಿದೆ.

ಸಹ್ಯಾದ್ರಿಯಲ್ಲಿ ಹುಟ್ಟಿ ಪೂರ್ವಾಭಿಮುಖವಾಗಿ ಹರಿದು, ಉಷ್ಣವಲಯದ ಬಿಸಿಲಿನಲ್ಲಿ ಬೆಂದು ಬೆಂಗಾರಿದ ಬಯಲಿಗೆ ತಂಪನೆರೆದು ತನುವನುಣಿಸಿ, ಕಾಡು ಬೆಳೆಯಲು ಅವಕಾಶ ಮಾಡಿಕೊಟ್ಟು ಪ್ರದೇಶ ಸೀಮಿತ ಪ್ರಾಣಿ ಸಂಕುಲಗಳು ಬೆಳೆಯಲು ಕಾರಣವಾಗಿವೆ. ಈ ನದಿಗಳು ಸಹ್ಯಾದ್ರಿಯಲ್ಲಿಯೇ ಹುಟ್ಟಿದರೂ ಪಾತ್ರದಲ್ಲಿ ಉದ್ದದಲ್ಲಿ ಕಿರಿದಾದರೂ, ಕೀರ್ತಿಯಲ್ಲಿ ಅಪಾರವಾದ ಕಾಳಿ–ಶರಾವತಿಯರೂ ಆಧುನಿಕ ಕರ್ನಾಟಕವನ್ನು ರೂಪಿಸಿದಂತೆ ಪ್ರಾಚೀನ ಪ್ರಾಣಿ ಪರಂಪರೆಯನ್ನು ರೂಪಿಸುವಲ್ಲಿ ಸಮಾನ ಪಾತ್ರವಹಿಸಿವೆ. ಎಡವಿ, ಮುಗ್ಗರಿಸಿ, ಪಶ್ಚಿಮಾಭಿಮುಖವಾಗಿ ಹರಿದು, ಅರಬೀ ಸಮುದ್ರವನ್ನು ತಲುಪುವ

ಆತುರ, ಆದರೂ ವಹಿಸುವ ಪಾತ್ರ ಹಿರಿದು. ಈ ಹಿನ್ನಲೆಯಲ್ಲಿ ಕರ್ನಾಟಕ ಪರಂಪರೆಗೂ, ಪ್ರಕೃತಿಗೂ ಇರುವ ಸಂಬಂಧ, ಸಾಮರಸ್ಯ ಪರಿಶೀಲನ ಯೋಗ್ಯ. ಬಂಡೀಪುರ, ನಾಗರಹೊಳೆ, ರಾಣಿಬೆನ್ನೂರು ಪ್ರಾಣಿಧಾಮಗಳು ಮತ್ತು ರಂಗನತಿಟ್ಟು ಪಕ್ಷಿಧಾಮ, ಪಶ್ಚಿಮಘಟ್ಟಗಳ ನೆಲೆಯಲ್ಲಿ, ಸಹ್ಯಾದ್ರಿಯ ಮಡಿಲಲ್ಲಿ ಈ ಜೀವ ನದಿಗಳ ಜಲಾನಯನ ಪ್ರದೇಶದಲ್ಲಿ ಇರುವುದು ಆಕಸ್ಮಿಕವಲ್ಲ. ಅವು ತಮ್ಮ ವನ್ಯಶ್ರೀ ಮತ್ತು ವಿಪುಲ ಆಹಾರಗಳೊಂದಿಗೆ ಸುಸಂಬಂಧ ಬೆಳೆಸಿ ತಮ್ಮ ಪ್ರಸಿದ್ಧಿಗೆ ಕಾರಣವಾಗಿವೆ. ಈ ವರ್ಣರಂಜಿತ ವಾತಾವರಣದಲ್ಲಿ ಪ್ರಾಣಿಗಳು ಅಷ್ಟೇ ವೈವಿಧ್ಯ ತೋರಿದರೆ ಆಶ್ಚರ್ಯ ಪಡಬೇಕಾದುದಿಲ್ಲ.

ಹಳೆಯ ಮೈಸೂರು ಸಂಸ್ಥಾನದಲ್ಲಿ ಪ್ರತಿವರ್ಷವೂ ನಡೆಯುತ್ತಿದ್ದ ಜಗತ್ಪ್ರಸಿದ್ಧ ಖೆಡ್ಡಾ ಕಾರ್ಯಾಚರಣೆ, ರಾಜ-ಮಹಾರಾಜರ ಹಾಗೂ ಬ್ರಿಟಿಷ್ ಅಧಿಕಾರಿಗಳ ಹುಲಿ-ಚಿರತೆಗಳ ಬೇಟೆಗಳ ವಿವರಣೆಯನ್ನು ಓದಿದಾಗ ಯಾರಿಗಾದರೂ ಅರ್ಥವಾದೀತು ಆ ಕಾಲಕ್ಕೆ ವಿಪುಲ ಆನೆಗಳ ಹಿಂಡು, ಅಪಾರ ಹುಲಿ-ಚಿರತೆ ಸಂತತಿ ಇದ್ದಿತೆಂದು. ಒಂದು ಕಾಲಕ್ಕೆ ಆರ್ಯಾವರ್ತವೆಲ್ಲಕ್ಕೂ ವ್ಯಾಪಿಸಿದ್ದ ಆನೆ ಹಿಂಡುಗಳ ಸಂಖ್ಯೆ ಇಂದು ಸಂಕುಚಿಸಿದೆ. ಇತ್ತೀಚೆಗೆ ನಡೆಸಿದ ಗಣತಿಯ ಪ್ರಕಾರ ಕರ್ನಾಟಕದಲ್ಲಿ ಬೆರಳೆಣಿಕೆಯಷ್ಟು ಹಿಂಡುಗಳು ಉಳಿದಿವೆ. ಅವುಗಳ ಒಟ್ಟು ಸಂಖ್ಯೆ ನೂರರ ಸೀಮಾರೇಖೆಯ ಚೌಕಟ್ಟಿಗೆ ಸೀಮಿತವಾಗಿದೆ ಎಂದು ತಿಳಿದುಬಂದಿದೆ. ಹಿಂದಿನ ಯುದ್ಧಗಳಲ್ಲಿ ಗಜಸೇನೆ ಕದನಗಳನ್ನೂ ಗೆಲ್ಲುತ್ತಿತ್ತು. ನೆಲದ ಮೇಲೆ ಬದುಕಿರುವ ಪ್ರಾಣಿಗಳಲ್ಲಿಯೇ ಅತ್ಯಂತ ದೊಡ್ಡದು ಎನ್ನುವ ಪಟ್ಟ ಕಟ್ಟಿಕೊಂಡ ಈ ಘನ-ಗಂಭೀರ ಗಜರಾಜ (ಎಲಫಾಸ್ ಮ್ಯಾಕ್ಸಿಮಸ್) ಸುಮಾರು ೧೫ ಅಡಿ ಎತ್ತರ, ಕೆಲವಾರು ಟನ್ ತೂಕ ತೂಗುತ್ತದೆ. ಈ ಪ್ರಾಣಿ ಕರ್ನಾಟಕದ ಇತಿಹಾಸದಲ್ಲಿ ಹಾಸುಹೊಕ್ಕಾಗಿ ಸೇರಿ ಹೋಗಿದೆ. ಇಂದಿನ ಕಾಡು ಕಡಿದ ಪರಿಸ್ಥಿತಿ ಮುಂದುವರಿದರೆ ಕೆಲವಾರು ವರ್ಷಗಳಲ್ಲಿ ಪುಸ್ತಕಗಳಲ್ಲಿ ಮಾತ್ರ ಕಾಣಬಹುದಾದ ಪ್ರಾಣಿಯಾಗಬಹುದು.

ಶೌರ್ಯಕ್ಕೆ ಹೆಸರಾದ, ಗಂಭೀರತೆಗೆ ಪ್ರಸಿದ್ಧವಾದ, ಕಪ್ಪು ಪಟ್ಟೆಗಳ ಸುಂದರ ಬಣ್ಣದ ಮೃಗರಾಜ ಸಿಂಹಕ್ಕೆ ಎರಡನೆಯದೆನ್ನಿಸಿಕೊಂಡ ಹುಲಿ ಇಂದು ವಿರಳವಾಗುತ್ತಿದೆ. ಅಂತರರಾಷ್ಟ್ರೀಯ ಸಂಸ್ಥೆಯ (ಐ.ಯು.ಸಿ.ಎನ್.) ನೆರವಿನಿಂದ ಆರಂಭವಾದ ಟೈಗರ್ ಪ್ರಾಜೆಕ್ಟ್ ಹುಲಿ ಸಂತತಿಯನ್ನು ಸುಧಾರಿಸಬಹುದೆಂದು ಭಾವಿಸಲಾಗಿದೆ. ಇದೇ ರೀತಿ ಕಾಡಿನ ರಮ್ಯ ಜೀವನಕ್ಕೆ ಆದರ್ಶಪ್ರಾಯವಾಗಿದ್ದು ಶಕ್ತಿ-ಯುಕ್ತಿಗಳಿಗೆ ಹೆಸರಾಗಿದ್ದ ಚಿರತೆಗಳು ಹೆಚ್ಚು-ಕಡಿಮೆ ನಿರ್ನಾಮವಾಗಿವೆ. ಹುಲಿ ಚಿರತೆಗಳು ಸಸ್ತನಿವರ್ಗದ ಮಾಂಸಾಹಾರಿ (ಕಾರ್ನಿವೋರ) ಗಣಕ್ಕೆ ಸೇರಿದ ಪ್ರಾಣಿಗಳು. ಇದೇ ಗಣಕ್ಕೆ ಸೇರಿದ ಕರ್ನಾಟಕದಲ್ಲಿ ದೊರಕುವ ಇತರ ಪ್ರಾಣಿಗಳೆಂದರೆ ಕರಡಿ, ತೋಳ, (ಕ್ಯಾನಿಸ್‌ನಾರಿಯ), ನರಿ (ಕ್ಯಾ-ಇಂಡಿಕಸ್), ಸೀಳುನಾಯಿ (ಕುವಾನ್ ದುಕುವನ್ಸಿಸ್); ಕಿರುಬಗಳು, ಮುಂಗುಸಿಗಳು (ಮುಂಗಾಸ್ ಎಲ್ಲಿಯೋಟಿ), ಪುನುಗುಬೆಕ್ಕು, ಸೇಂದಿ ಬೆಕ್ಕು ಮುಂತಾದ ಅನೇಕ ಜಾತಿಯ ಕಾಡು ಬೆಕ್ಕುಗಳು ಸೇರುತ್ತವೆ. ಇವುಗಳಲ್ಲಿ ಅತ್ಯಂತ ಕುತೂಹಲಕಾರಕ ಪ್ರಾಣಿಗಳು ಎಂದರೆ ಆಟರ್ ಎಂಬ ನೀರು ನಾಯಿಗಳು. (ಲುಟ್ರ ಲುಟ್ರ ಮತ್ತು ಐಯೋನಿಕ್ಸ್ ಸಿನೇರಿಯ) ನೀರಿನಲ್ಲಿ ಸಮರ್ಥವಾಗಿ ಈಜಬಲ್ಲ, ನೆಲದ ಮೇಲೆ ಓಡಾಡುವ, ಮೀನು ಮುಂತಾದ ಜಲಚರಗಳನ್ನು ತಿನ್ನುವ ಉಭಯಚರಿ ಸಸ್ತನಿ ಇದು. ಕರ್ನಾಟಕದ ಪ್ರಾಣಿ ಪರಂಪರೆಯಲ್ಲಿ ಅಪರೂಪವಾದ ಪ್ರಾಣಿಯಾದ ಇದು ಇತ್ತೀಚಿನ ದಿನಗಳಲ್ಲಿ ಬದಲಾದ ಸನ್ನಿವೇಶಗಳಲ್ಲಿ ಪಿಡುಗಾಗಿ ಬೆಳೆಯುತ್ತಿದೆ. ಕಾವೇರಿ ಜಲಾನಯನ ಪ್ರದೇಶಗಳಲ್ಲಿ ಅದರ ಉಪನದಿಗಳಲ್ಲಿ ಹರಡಿದ ಈ ಪ್ರಾಣಿ, ನೀರಾವರಿಗಾಗಿ ಕಟ್ಟಿದ ಅಣೆಕಟ್ಟುಗಳ ಬಳಿ ಸದಾ ನೀರು ದೊರಕುವ ಸೌಲಭ್ಯದಿಂದಾಗಿ ಆರಂಭಿಸಿದ ಒಳನಾಡು ಮೀನುಗಾರಿಕೆ ಇಲಾಖೆಯವರ ಮೀನು ಬೆಳೆಸುವ ಕೇಂದ್ರಗಳಿಗೆ ಮಾರಕವಾಗಿ ರೂಪುಗೊಂಡಿದೆ.

ಅಷ್ಟೇ ಅಪರೂಪ ಹಾಗೂ ವಾಸ್ತವವಾಗಿ ಆದಿಮ ಪ್ರಾಣಿ ಎಂದರೆ ಚಿಪ್ಪು ಹಂದಿ (ಪ್ಯಾಂಗೊಲಿನ್). ಇದು ಇರುವೆ ಗೆದ್ದಲುಗಳನ್ನು ಭಕ್ಷಿಸುವ ಕೀಟಾಹಾರಿ. ದೇಹದ ಮೇಲೆ ಅಗಲವಾದ ಚಿಪ್ಪು ತಟ್ಟೆಗಳ ಹೊದಿಕೆ, ೧೦ ಅಂಗುಲದವರೆಗೂ ಚಾಚಬಹುದಾದ ಚಾಟಿಯಂತಿರುವ ಅಂಟು ನಾಲಿಗೆಯುಳ್ಳ ಇವು ಭೂವಾಸಿಗಳು ಮತ್ತು ಶಾಖಾವಾಸಿಗಳು. ಇದೇ ಅಲ್ಲದೆ ಮುಳ್ಳಿಲಿ (ಎರಿನೇಸಿಯಸ್ ಮೈಕ್ರೋಪನ್), ಮರಮುಳ್ಳಿಲಿ (ಅನತಾನ ಎಲ್ಲಿಯೋಟಿ), ಕೆಂದು ಮೂಗಿಲಿ (ಪ್ಯಾಚಿಯೂರ ಮ್ಯೂರಿನ) ಮತ್ತು ಸಾಮಾನ್ಯ ಮೂಗಿಲಿಗಳಂತಹ (ಸಂಕಸ್ ಮೂರಿನಸ್ ಸಂ ಇಟೆ, ರೊಸ್ಸಸ್‌ಕ್ರೊಳಿಡೋ, ಹಾರ್‌ಪಲ್ಲಿ) ಕೀಟಾಹಾರಿ (ಇನ್ಸೂರ, ಕೇವೂರ)ಗಳೂ ದೊರಕುತ್ತವೆ. ಅನೇಕ ಜಾತಿಯ (ಸರ್ವಿಡ್) ಜಿಂಕೆಗಳು, ಚಿಗರೆಗಳು, ಸಾರಂಗಗಳು, ಕಾಡು ಹಂದಿಗಳು (ಸಿಸ್‌ಕ್ರಿಸ್ಟೇಟಸ್), ಕಾಡೆಮ್ಮೆಗಳು, ಶ್ಯಾಮಲೆ (ಬ್ಲಾಕ್ ಬಕ್), ಕಾಡುಕುರಿ ಕರ್ನಾಟಕದಲ್ಲಿ ದೊರಕುವ ಸಸ್ಯಾಹಾರಿಗಳಲ್ಲಿ ಮುಖ್ಯ ಸಸ್ತನಿಗಳು.

ಹಾರುವ ಗಾರುಡಿ ವಿದ್ಯೆಯನ್ನು ಮೈಗೂಡಿಸಿಕೊಂಡ ವಿವಿಧ ಜಾತಿಯ ಅನೇಕ ಬಾವಲಿಗಳಿವೆ. ಹಗಲು ಮರದ ತುದಿಯ ರೆಂಬೆಗಳಿಗೆ ನೇತುಬಿದ್ದು, ವಿರಮಿಸಿ, ರಾತ್ರಿ ಆಹಾರಾನ್ವೇಷಣೆಗೆ ಹೊರಡುವ ಫಲಾಹಾರಿ ಬೃಹದ್ ಬಾವಲಿಗಳು, ಹಾಳು ಮಂಟಪ, ಮುರುಕು ಮನೆ, ಮರದ ಸಂದುಗಳು, ದೇಗುಲಗಳಲ್ಲಿ ವಿರಮಿಸುವ ಕೀಟಾಹಾರಿ ಕಿರಿಯ ಬಾವಲಿಗಳು ಅಪಾರ. ಇದರೊಂದಿಗೆ ಹಾರುವ ಅಳಿಲುಗಳಿವೆ.

ಇವನ್ನು ಬಿಟ್ಟರೆ ಉಳಿದ ಪ್ರಧಾನ ಸಸ್ತನಿ ಗುಂಪೆಂದರೆ ಮನು ಕುಲಕ್ಕೆ (ಪ್ರೈಮೇಟ ಗಣ) ಸೇರಿದ ಕೋತಿ ಸಂತತಿ. ಇವುಗಳಲ್ಲಿ ಅತಿಶಯವಾದ ಪ್ರಾಣಿ ಎಂದರೆ ಕವಿಯ ಕಲ್ಪನೆಗೆ ಸಿಕ್ಕು ಬಿದರೆ ಮೇಗಳ ಚೆದುರೆ (ಲೋದ್ರಿಸ್ ಡೆಂಕರೇನಿಸಸ್) ಎಂದು ಹೆಸರಾದ ಕಾಡುಪಾಪ ದಕ್ಷಿಣ ಕರ್ನಾಟಕದ ಕಾಡುಗಳಿಗೆ ಸೀಮಿತವಾಗಿವೆ. ಪಶ್ಚಿಮ ಘಟ್ಟಗಳಲ್ಲಿ ಜೀವಿಸುವ ತುಮಕೂರು, ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳ ಬಯಲು ನಾಡಿನ ಕಾಡುಗಳಿಗೆ ಸೀಮಿತವಾದ ಎರಡು ಪ್ರಭೇದಗಳಿರುವಂತೆ ತೋರುತ್ತದೆ. ಮುಗ್ಧತೆ, ಸಾಧು ಸ್ವಭಾವ, ಸರಳತೆಗಳನ್ನು ಮೈಗೂಡಿಸಿಕೊಂಡ ವಿಶಾಲನೇತ್ರಗಳ ನಿಶಾಚರಿ, ಬಿದಿರು ಮೆಳೆಗಳನ್ನು ಹೆಚ್ಚು ಬಯಸುವುದಾದರೂ ನೀಲಗಿರಿ, ಸರ್ವೆ, ಹುಣಸೆ, ಹೊಂಗೆ, ಬೇವಿನ ಮರಗಳಲ್ಲಿಯೂ ವಾಸಿಸುವ, ಹಣ್ಣುಹಂಪಲು, ಕೀಟಗಳನ್ನು ತಿನ್ನುವ ಪ್ರಾಣಿ. ಕರ್ನಾಟಕದಲ್ಲಿ ವ್ಯಾಪಕವಾಗಿ ಹರಡಿದ್ದರೂ ಇದು ಕರ್ನಾಟಕವೇ ಏಕೆ ಭಾರತದ ನೆಲದಲ್ಲಿಯೇ ವಿಕಸಿಸಿದ ಪ್ರಾಣಿಯಲ್ಲ. ಇದರ ನಿಜವಾದ ತೌರು ಮಲಯ ಪರ್ಯಾಯ ದ್ವೀಪಸ್ತೋಮದ ಭಾಗವಾಗಿತ್ತು. ನೀರನ್ನು ಕಂಡರೆ ಅಂಜುವ ಈ ಅಪರೂಪದ ಪ್ರಾಣಿ ಭಾರತಕ್ಕೆ ವಲಸೆ ಬಂದುದು ಹೇಗೆ? ಇದರ ಇತಿಹಾಸದಲ್ಲಿ ಭಾರತ ಉಪಖಂಡ ಭೌಗೋಳಿಕವಾಗಿ ರೂಪುಗೊಂಡ ಐತಿಹ್ಯವಿದೆ. ಭಾರತ ಉಪಖಂಡ ಪ್ರಾಚೀನ ಏಷ್ಯಾ ಖಂಡದ ಮೂಲ ನೆಲಭಾಗವಲ್ಲ. ಇದು ಮಲಯ ದ್ವೀಪಸ್ತೋಮದ ಭಾಗವಾಗಿತ್ತು. ಅನೇಕ ಲಕ್ಷ ವರ್ಷಗಳ ಹಿಂದೆ ನಡೆದ ಖಂಡಾಂತರ ಚಲನೆಯ ಕಾಲದಲ್ಲಿ ಮಲಯ ದ್ವೀಪಸ್ತೋಮಗಳಿಂದ ಕಳಚಿಕೊಂಡು ಬಂದು ಏಷ್ಯಾ ಖಂಡದೊಡನೆ ಕೂಡಿಕೊಂಡಿತು. ಹೀಗಾಗಿ

ಈ ಪ್ರಾಣಿ ಭಾರತ ಉಪಖಂಡವನ್ನು ಸೇರುವಂತಾಯಿತು. ಇದರ ಹತ್ತಿರದ ಬಂಧುಗಳಾದ ಲೆಮರ್‌ಗಳು ಬಂಗ್ಲಾದೇಶದಲ್ಲಿ ಇವೆ. ಮಕಾಸಸ್ ಮತ್ತು ನಿತಿಕಸ್ ಎಂಬೆರಡು ಜಾತಿಯ ಆರು ಪ್ರಭೇದದ ಕೋತಿಗಳು ಕರ್ನಾಟಕದಲ್ಲಿ ದೊರಕುತ್ತವೆ.

ಇವುಗಳನ್ನು ಬಿಟ್ಟರೆ ಸಂಖ್ಯೆ ಮತ್ತು ನಾಶದ ದೃಷ್ಟಿಯಿಂದ ಹೇರಳವಾಗಿರುವ ಸಸ್ತನಿಗಳೆಂದರೆ ಮೂಷಕಗಣಕ್ಕೆ ಸೇರಿದ ವಿವಿಧ ಜಾತಿಯ ಇಲಿಗಳು ಮತ್ತು ಮೊಲಗಳು. ಇವು ಸುಗ್ಗಿಯ ಕಾಲದಲ್ಲಿ ಬೆಳೆಯನ್ನು, ಕಣಜದಲ್ಲಿ ಕೂಡಿದ್ದ ಕಾಳುಗಳನ್ನು ತಿಂದು ಕೊಬ್ಬಿ ಬೆಳೆಯುತ್ತಿವೆ. ಇವುಗಳನ್ನು ಹತೋಟಿಗೆ ತರುವುದು ಇನ್ನೂ ಸಾಧ್ಯವಾಗಿಲ್ಲ. ಕರ್ನಾಟಕದ ಎಲ್ಲೆಗಟ್ಟಿನ ಅರಬೀ ಸಮುದ್ರದಲ್ಲಿ ಆಗಾಗ ಕಾಣಿಸಿಕೊಂಡು ಕಡಲ ತೀರಕ್ಕೆ ಕೊಚ್ಚಿ ಬಂದು ಸತ್ತ ತಿಮಿಂಗಿಲಗಳ ನಿದರ್ಶನಗಳೂ ಇವೆ.

ಪಕ್ಷಿ ಪರಂಪರೆಯ ದೃಷ್ಟಿಯಿಂದ ಕರ್ನಾಟಕ ಅತ್ಯಂತ ಶ್ರೀಮಂತವಾದ ನಾಡು. ಕಾಗೆ (ಕೋರ್ವಿಡ್) ಟುವ್ವಿ, ಸುವ್ವಿ, ಪಾರಿವಾಳ, ಹಾಲವಾಳ, ಉಲಿಯಕ್ಕಿ, ಕವಲುತೋಕೆ, ಗೌಜಲ, ಕಾಡುಕೋಳಿ, ಹದ್ದು, ಗಿಡುಗ, ಗರುಡ, ರಣಹದ್ದು, ಬುಲ್‌ಬುಲ್ ಹಕ್ಕಿ, ಮಿಂಚುಳ್ಳಿಗಳು, ಕೆಂಬೂತ, ಗೂಬೆ, ಲಾವಕ್ಕಿ, ಮೈನಾ, ಮರಕುಟುಕ ಮುಖ್ಯವಾದುವು. ಕೋಗಿಲೆಯ ಹಾಡು ಕೇಳದವಾರು? ಇವೇ ಅಲ್ಲದೆ ತಮ್ಮ ರಚನಾ ಕೌಶಲದಿಂದ ಬೆರಗುಗೊಳಿಸುವ ದರ್ಜಿಹಕ್ಕಿ, ಗೀಜಗನ ಹಕ್ಕಿಗಳು, ಕರ್ನಾಟಕದಲ್ಲೆಲ್ಲಾ ಹರಡಿವೆ. ಮರಗಳಲ್ಲಿ ಗೂಡುಕಟ್ಟುವ ಗುಬ್ಬಚ್ಚಿ ಸುಪರಿಚಿತ. ಭಾರತದ ರಾಷ್ಟ್ರ ಪಕ್ಷಿ ನವಿಲೂ ಇಲ್ಲಿ ದೊರಕುತ್ತದೆ. ನೀರ ಬಳಿ ಕಂಡುಬರುವ ಬೆಳ್ಳಕ್ಕಿ, ಕೊಕ್ಕರೆ, ಕ್ರೌಂಚ ಪಕ್ಷಿ, ನೀರುಗಾಲಿ, ಚಮಚಮುಖಿ, ರಾಜಹಂಸ, ಹಂಸಗಳು ಮುಖ್ಯ ನೀರು ಹಕ್ಕಿಗಳು, ಬಾತುಕೋಳಿ ಹೆಚ್ಚು ಕಡಿಮೆ ಪೂರ್ಣವಾಗಿ ಸಾಕುಪ್ರಾಣಿಯಾಗಿಬಿಟ್ಟಿದೆ. ಇವಲ್ಲದೆ ಸೈಬೀರಿಯ ಮತ್ತು ಯೂರೋಪು ಖಂಡದಿಂದ ವಲಸೆ ಬಂದು ಸ್ವಲ್ಪಕಾಲ ಇಲ್ಲಿ ಕಳೆದು (ರಂಗನತಿಟ್ಟು ಪಕ್ಷಿಧಾಮ) ನೋಡುವವರ ಕಣ್ಣುಣಿಸಿ; ವಿಜ್ಞಾನಿಗಳ ಅಭ್ಯಾಸಕ್ಕೆ ಅನುವು ಮಾಡಿಕೊಡುವ ಅಸಂಖ್ಯಾತ ಪಕ್ಷಿಗಳಿವೆ. ಪ್ರಾಚೀನ ಕಾಲದಿಂದಲೂ ಮನುಷ್ಯನಿಗೆ ಅತಿ ಹತ್ತಿರವಾಗಿ, ಮಾತು ಕಲಿತು ಬೆರಗುಗೊಳಿಸಿ ಈಗೀಗ ಕಾಳು ತಿನ್ನುವ ಪಿಡುಗಾಗಿರುವ ಗಿಣಿಯನ್ನು ಮರೆಯುವಂತಿಲ್ಲ. ಮಲೆನಾಡಿನ ಕಾಡುಗಳಲ್ಲಿ ವಾಸಿಸುವ ಬೃಹತ್ ಕೊಕ್ಕಿನ ಮಲೆಹಕ್ಕಿ ಮತ್ತೊಂದು ಕೌತುಕ ಪ್ರಾಣಿ. ಮೊಟ್ಟೆ ಇಟ್ಟು ಕಾವು ಕೊಡುವ ಕಾಲಕ್ಕೆ ಮೊಟ್ಟೆ ಮತ್ತು ಸಂಗಾತಿ ಹೆಣ್ಣು ಹಕ್ಕಿಯನ್ನು ಪೊಟರೆಯಲ್ಲಿಟ್ಟು ಬಾಯಿ ಮುಚ್ಚಿ ಸಣ್ಣ ರಂಧ್ರದ ಮೂಲಕ ಹೆಣ್ಣು ಹಕ್ಕಿ, ಮರಿಗಳಿಗೆ ಆಹಾರ ಸರಬರಾಜು ಮಾಡುವ ತನ್ನ ಆದರ್ಶ ವರ್ತನೆಯಿಂದ ಕುತೂಹಲ ಕೆರಳಿಸುತ್ತದೆ. ನಿಸರ್ಗ ಪ್ರೇಮಿ, ಕಲಾವಿದ, ಕವಿ, ವಿಜ್ಞಾನಿಗಳೆಲ್ಲರಿಗೂ ಸಮಾನ ಆಸಕ್ತಿ ಕೆರಳಿಸುವ ಈ ಪಕ್ಷಿ ಸಂಕುಲ ಅಪಾರ, ಅಪರೂಪ ಮತ್ತು ವೈವಿಧ್ಯಮಯ.

ಪಕ್ಷಿಗಳನ್ನು ಬಿಟ್ಟರೆ ಅಷ್ಟೇ ಕೌತುಕಮಯವಾದ ಕಶೇರುಕ ವರ್ಗವೆಂದರೆ ಸರೀಸೃಪಗಳದು (ರೆಪ್ಟೈಲ್‌ಗಳು) ಕರ್ನಾಟಕದ ಎಲ್ಲ ನದಿಗಳಲ್ಲಿಯೂ ಒಂದು ಕಾಲಕ್ಕೆ ಹೇರಳವಾಗಿದ್ದು ಈಗ ಅಪರೂಪವಗಿರುವ ಜಾಗುಮೊಸಳೆ (ಕೆವ್ರಾಕೊಡೈಲಸ್ ಪಾಲಿಟ್ರಸ್) ಅದೇ ರೀತಿ ನದಿಮುಖಜ ಭೂಮಿಯ ಉಪ್ಪುನೀರಿನ ಮೊಸಳೆ (ಕ್ರೊ. ಪೊರೋಸಸ್) ಇಂದು ಹೆಚ್ಚು ಕಡಿಮೆ ಕಣ್ಮರೆಯಾಗಿದೆ. ಅಂತಹ ಸರ್ಕಾರದ ವತಿಯಿಂದ ಸಂರಕ್ಷಿಸಲ್ಪಟ್ಟು ಹೆಸರಘಟ್ಟ ಪ್ರಾಣಿಧಾಮದಲ್ಲಿ ಪೋಷಿಸಲ್ಪಡುತ್ತಿದೆ ಈ ಮೊಸಳೆ ಸಂತತಿ.

ನಾಲ್ಕಾರು ಪ್ರಭೇದದ ಆಮೆಗಳು ದೊರಕುತ್ತವೆ. ನದಿ ಕೆರೆಕಟ್ಟೆಗಳೇ ಅಲ್ಲದೆ ಗುಡ್ಡದ ಮೇಲೆ ದೊರಕುವ ಆಮೆಗಳಿವೆ. ಕರಾವಳಿಯಲ್ಲಿ ದೊರಕುವ ಕಡಲಾಮೆಗಳಿವೆ.

ಹಸುರುಹಾವು, ಕೇರೆಹಾವು, ನಾಗರಹಾವು, ಕಟ್ಟುಹಾವು, ಮಂಡಲದ ಹಾವು, ಕಾಳಿಂಗ ಸರ್ಪ, ಹೆಬ್ಬಾವು ಮುಂತಾದ ಅನೇಕ ಜಾತಿಯ ಹಾವುಗಳು ವಿಪುಲವಾಗಿ ದೊರಕುತ್ತವೆ. ನಾಗರಹಾವಿನ ವಿಷವನ್ನು ಔಷಧವಾಗಿಯೂ ಬಳಸಬಹುದೆಂದು ತಿಳಿದು ಬಂದ ಮೇಲೆ ಹಾವು ಕುಟೀರಗಳನ್ನು ಕಟ್ಟುವವರು ಹೆಚ್ಚುತ್ತಿದ್ದಾರೆ.

ಹೆಂಟೆಗೊದ್ದ, (ಕೆಲೊಟಿನ ವರ್ಸಿಕೊಲಾರ), ಹಲವಾರು ಪ್ರಭೇದದ ಹಾವುರಾಣಿಗಳು (ಮಬೂಬ ಕ್ಯಾರಿನೇಟ, ಮ. ಟ್ರಿವಿಟ್ಟೇಟ, ಮ. ಬೆಡೊಮಿ, ಮ. ಕ್ವಾಡ್ರಿರೇಟಸ್), ಉಡ (ವೆರಾಸ ಮಾನೀಟರ್), ಗೋಸುಂಬೆ (ಕೆಮಿಯೊನ್ ಕಾಲ್ಕರೇಟಸ್); ಬಾಚೆಹಲ್ಲಿ (ನೆಮ್ಮೈಫಿಲಸ್ ಹಾರ್ಸಾಲಿಸ್), ಗೌಳಿ (ಹೆಮಿಡ್ಯಾಕ್ಟೈಲಸ್ ಬ್ರೂಕಿ) ಗಳು ಮುಖ್ಯ ಹಲ್ಲಿ ಜಾತಿಗಳು.

ಹಸಿರುಕಪ್ಪೆ (ರಾನ ಹೆಕ್ಸಡ್ಯಾಕ್ಟೈಲ), ಗೂಳಿಕಪ್ಪೆ (ರಾ. ಟೈಗ್ರಿನ್), ನೆಲಗಪ್ಪೆ (ಬ್ಯುಫೋ ಮೆಲನೊಸ್ಟಿಟಸ್), ಮರಗಪ್ಪೆ (ಹೈಲ) (ರ್‍ಯಾಕೊಫೋರಸ್ ಮ್ಯಾಕ್ಯುಲೇಟಸ್) ಮರಳುಗಪ್ಪೆಗಳೆಂಬ ಅನೇಕ ಜಾತಿಯ ಉಭಯಚರಿಗಳು ದೊರಕುತ್ತವೆ. ಇವುಗಳಲ್ಲಿ ವಿಶಿಷ್ಟವಾದ ಕಾಲುಗಳಿಲ್ಲದ ಇಕ್ತಿಯೋಫಿಸ್ ಜಾತಿಯ ಉಭಯಚರಿಗಳು ಪಶ್ಚಿಮ ಘಟ್ಟದ ಕೊಟ್ಟಿಗೆಹಾರದ ಬಳಿ ದೊರಕುತ್ತವೆ.

ಸಾಕಷ್ಟು ಉದ್ದವಾದ ಕರಾವಳಿ ಮತ್ತು ಕರ್ನಾಟಕಾದ್ಯಂತ ಮೀನು ಪ್ರಭೇದಗಳು ಕಂಡು ಬರುತ್ತವೆ. ಇವುಗಳನ್ನು ಕಡಲು ಮೀನುಗಳು ಮತ್ತು ಸಿಹಿನೀರಿನ ಮೀನುಗಳೆಂದು ವರ್ಗೀಕರಿಸಬಹುದು. ನಾಯಿ ಮೀನು, ರಶ್ಮಿ ಮೀನುಗಳು, ಕಡಲ ಮೀನುಗಳಲ್ಲಿ ಪ್ರಮುಖವಾದ ಕೋಮಲಾಸ್ಥಿ ಮೀನುಗಳು ಮುಲ್ಲೆಟ್, ಸಾಲಮೊನ್ ಮುಂತಾದವು ಮೂಳೆ (ಅಸ್ಥಿ) ಮೀನುಗಳು. ಸಿಹಿನೀರಿನಲ್ಲಿ ಅನೇಕ ಜಾತಿಯ ಮೀನುಗಳಿವೆ. ಅವುಗಳಲ್ಲಿ ಆಹಾರದ ದೃಷ್ಟಿಯಿಂದ ಪ್ರಮುಖವಾದುದೆಂದರೆ ಮೀಸೆ ಮೀನು (ಕ್ಯಾಟ್‌ಫಿಷ್)ಗಳು, ಇತ್ತೀಚೆಗೆ ಕರ್ನಾಟಕಕ್ಕೆ ತರಲಾದ ಕಾಟ್ಲ ಕಾಟ್ಲ ಎಂಬ ಮೀನು ಆರ್ಥಿಕವಾಗಿ ಸಾಕಬಹುದಾದ ಪ್ರಮುಖ ಮೀನು.

ಸ್ಥಳಾಭಾವದಿಂದಾಗಿ ಹಾಗೂ ಶಾಸ್ತ್ರೀಯವಾದ ಅಭ್ಯಾಸದ ಅಭಾವದಿಂದಾಗಿ ಕರ್ನಾಟಕದಲ್ಲಿ ಕಂಡುಬರುವ ಅಕಶೇರುಕ ಪ್ರಾಣಿಗಳ ವಿವರಣೆ ತೊಡಕಾಗುತ್ತದೆ ಮತ್ತು ಅಸಾಧ್ಯವಾಗುತ್ತದೆ. ಮೇಲೆ ಕಶೇರುಕ ವಂಶಕ್ಕೆ ಸೇರಿದ ಪ್ರಾಣಿಗಳನ್ನು ಮಾತ್ರ ವಿವರಿಸಿದೆ. ಈ ಸಂದರ್ಭದಲ್ಲಿ ಕರ್ನಾಟಕದ ಪ್ರಾಣಿ ಪರಂಪರೆಯ ಶಾಸ್ತ್ರೀಯವಾದ ಅಭ್ಯಾಸ ಮತ್ತು ಸಂಶೋಧನೆ ಅಗತ್ಯ ಎಂಬುದನ್ನು ಒತ್ತಿಹೇಳಿ ರಾಜ್ಯ ಸರ್ಕಾರ ಇತ್ತ ಗಮನ ಹರಿಸಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ. ಈ ಲೇಖನದ ಜೊತೆಗೆ ಒದಗಿಸಿರುವ ಪ್ರಾಣಿ ಭೂ ವಿಸ್ತರಣಾ ಭೂಪಟವು ಅಪೂರ್ಣ ಎನ್ನುವುದನ್ನು ನೆನಪು ಮಾಡಿಕೊಡಲಿಚ್ಛಿಸುತ್ತೇನೆ.

# ಕರ್ನಾಟಕದ ಪ್ರಾಣಿ ಪರಂಪರೆ.



೧. ಚಿರತೆ
೨. ಶ್ಯಾಮಲೆ
೩. ನವಿಲು
೪. ಮೊಲ
೫. ಹುಲಿ
೬. ಸಾಂಬಾರ್
೭. ಬಾತು
೮. ಹಂದಿ
೯. ತೋಳ
೧೦. ಕಾಡಮ್ಮೆ
೧೧. ಗುಳ್ಳೆನರಿ
೧೨. ಬಾವಲಿ
೧೩. ಕೆಂದಳಿಲು
೧೪. ಮೊಸಳೆ
೧೫. ಹಾರುಬೆಕ್ಕು
೧೬. ಇಲಿಜಿಂಕೆ
೧೭. ಹಯನ
೧೮. ಕಂದು ಕೋತಿ
೧೯. ಕೆಂಪುಮೂತಿ ಕೋತಿ
೨೦. ಗೌಜಲ ಹಕ್ಕಿ
೨೧. ನರಿ
೨೨. ಜಿಂಕೆ
೨೩. ಕಾಡು ಬೆಕ್ಕು
೨೪. ಕೊಕ್ಕರೆ
೨೫. ಹರಿಣೆ
೨೬. ಕಾಡುಬಾತು
೨೭. ಕ್ರೌಂಚ
೨೮. ಕರಡಿ
೨೯. ಕಾಳಿಂಗ ಸರ್ಪ
೩೦. ಆನೆ
೩೧. ಚುಕ್ಕಿ ಜಿಂಕೆ
೩೨. ನಾಗರ ಹಾವು
೩೩. ಚಿಪ್ಪು ಹಂದಿ
೩೪. ಕಾಡು ಪಾಪ
೩೫. ಹಾವುಗಳು
೩೬. ಸೀಳು ನಾಯಿ
೩೭. ಬಸ್ಟರ್ಡ್
೩೮. ಮುಂಗುಸಿ

# ಜನಾಂಗ ವೈವಿಧ್ಯ

ಡಾ. ಕೆ. ಶಿವರಾಮ ಕಾರಂತ

ಮಾನವಕುಲ ವಿಶಾಲ ಜಗತ್ತಿನಲ್ಲಿ ಹಬ್ಬಿ ಹರಡುತಿದ್ದಾಗ ಹಾಗೆ ಹಬ್ಬಿ ಹರಡುತ್ತಿದ್ದ ಜನಗಳು ಭಾರತಕ್ಕೂ ಬಂದು, ಅಲ್ಲಲ್ಲಿ ತಂತಮ್ಮಷ್ಟಕ್ಕೆ ಗುಂಪಾಗಿ ವಾಸಿಸುತ್ತಿದ್ದರು. ಅಂಥವರು ಬೇಟೆಯಾಡಿ, ಇಲ್ಲವೆ ಹಣ್ಣು ಹಂಪಲು, ಕಂದಮೂಲಗಳನ್ನು, ಹುಲ್ಲಿನಲ್ಲಿ ಬೆಳೆದ ಕಾಳುಕಡ್ಡಿಗಳನ್ನು ಹೆಕ್ಕಿ, ತಿಂದು ಬದುಕಿದ್ದರೇ ಹೊರತು, ಕೃಷಿಕರಾಗಿ ಒಂದೇ ಸ್ಥಳದಲ್ಲಿ ನೆಲೆನಿಂತು ಬದುಕಿದಂತೆ ಕಾಣಿಸದು. ಅಂಥ ಕೆಲವು ಜನರು ಸಮುದ್ರ ಸಮೀಪದ ಸಿಂಧೂ ದೇಶದಲ್ಲೂ, ಅದರ ಪಶ್ಚಿಮದಲ್ಲಿರುವ ಬಲೂಚಿಸ್ಥಾನದ ಕರಾವಳಿ ಪ್ರದೇಶದಲ್ಲೂ, ಕ್ರಿ. ಪೂ. ೩೦೦೦ ವರ್ಷಗಳಿಗಿಂತ ಹಿಂದೆ ಕೆಲವು ಹಳ್ಳಿಗಳಲ್ಲಿ ವಾಸಿಸುತ್ತಿದ್ದುದನ್ನು ಶೋಧಿಸಿದ್ದಾರೆ. ಅವರು ಅಲ್ಪಸ್ವಲ್ಪ ಕೃಷಿಯನ್ನೂ ಮಾಡುತ್ತಿದ್ದರು. ಶಿಲಾಯುಧಗಳ ಜತೆಯಲ್ಲಿ, ತಾಮ್ರದಂಥ ಲೋಹದ ಆಯುಧಗಳನ್ನೂ ಬಳಸುತ್ತಿದ್ದರು. ಆವೆ ಮಣ್ಣಿನ ಕುಡಿಕೆ ಮಡಿಕೆಗಳನ್ನು ಮಾಡುವ ಕಸುಬು ಅವರಿಗೆ ಗೊತ್ತಿತ್ತು. ಈ ಜನರು ಮೆಸೊಪೊಟೇಮಿಯದಿಂದ ಸಮುದ್ರ ಕರಾವಳಿ ಮಾರ್ಗವಾಗಿ ಇಲ್ಲಿಗೆ ಬಂದು ನೆಲೆಸಿದರು. ಅವರ ವಂಶ ಲಕ್ಷಣ–ಉತ್ತರ ಆಫ್ರಿಕದಿಂದ ಬಲೂಚಿಸ್ಥಾನದ ತನಕವೂ ಹಬ್ಬಿದ ಜನಗಳಂತೆ ಇತ್ತು.

ಮಾನವಕುಲ ವಿವಿಧ ಪ್ರದೇಶಗಳಿಗೆ ಸಾಗಿ, ಇಲ್ಲಿ ತೀರ ಮೊದಲಿಗೆ ಗುಂಪು ಜೀವನ ನಡೆಸುತ್ತಿದ್ದ ಕಾಲದಲ್ಲೂ, ಅಲೆಮಾರಿಗಳು ಗುಂಪಾಗಿ ಬದುಕುತ್ತಿದ್ದ ಕಾಲದಲ್ಲೂ, ತಂತಮ್ಮೊಳಗೆ ವಿಚಾರ ವಿನಿಮಯ ನಡೆಸಲು ಒಂದಲ್ಲ ಒಂದು ಭಾಷೆಯನ್ನು ಕಲಿತೇ ಇದ್ದರು. ಅಂಥ ಕುಲಗಳ ಮೂಲ ಭಾಷೆಯ ಶಬ್ದ ಸಂಪತ್ತು ಅವರ ಜೀವನದ ವೃತ್ತಿಗಳಿಗೆ, ಬಳಸುತ್ತಿದ್ದ ಸಾಧನಗಳಿಗೆ, ಕೌಟುಂಬಿಕ ಸಂಬಂಧಗಳಿಗೆ ಅಂಗಭಾಗಗಳಿಗೆ, ಮತ್ತು ಅವುಗಳ ಕ್ರಿಯೆಗಳಿಗೆ ಸಂಬಂಧಿಸಿದುವು. ಕಾಲಕ್ರಮೇಣ ಆ ಭಾಷೆಯಲ್ಲಿ ತಮ್ಮ ಭಾವನೆಗಳನ್ನು ಬಿಂಬಿಸಬಲ್ಲ ಶಬ್ದಗಳೂ, ನಾಲ್ಕು ಸುತ್ತಿನ ನಿಸರ್ಗದ ಜೀವ ಮತ್ತು ಸಸ್ಯಗಳನ್ನು ಸೂಚಿಸುವ ಪದಗಳೂ ಸೇರಿದವು. ಅವರ ಈ ಮೂಲ ಭಾಷೆಗಳಿಗೆ ಕ್ರಮಬದ್ಧ ವಾಕ್ಯ ರಚನೆಯೂ ಇತ್ತು.

ಆದಿ ಮಾನವರ ಗುಂಪುಗಳು ಎಲ್ಲಿಗೆಲ್ಲ ಹೋದವೋ, ಅಲ್ಲಿಗೂ ಅವರ ಭಾಷೆ ಹೋಗಬೇಕಷ್ಟೆ. ಹೋಗಿ ನೆಲೆಸಿದ ಆವರಣದಲ್ಲಿ ಅಲ್ಲಿನ ವಸ್ತುಗಳಿಂದ, ವಿದ್ಯಮಾನಗಳಿಂದ ಅದರ ಶಬ್ದ ಸಂಪತ್ತು ಬೆಳೆಯಬಹುದು. ಒಂದೆಡೆ ದೀರ್ಘ ಕಾಲ ಗುಂಪಾಗಿ ನಿಂತ ಜನರಲ್ಲಿ ಅವರ ಬಳಗದ ವಿಶೇಷ ಲಕ್ಷಣಗಳು ಮುಂದಣ ಸಂತತಿಯಲ್ಲಿ ವಿಶಿಷ್ಟವಾಗಿ ಕಾಣಿಸಿಕೊಂಡಂತೆ ಒಂದೊಂದು ಭಾಷೆಯಲ್ಲೂ ರೂಪವ್ಯತ್ಯಾಸ ಕಾಣಿಸಿತು.

ಈ ಕಾಲದಲ್ಲಿ ಸಣ್ಣಪುಟ್ಟ ಗುಂಪುಗಳು ವಲಸೆ ಹೋಗಿ ದೊಡ್ಡ ಗುಂಪುಗಳ ನಡುವೆ ಬಾಳಿದಾಗ, ತಮ್ಮ ಆಡುನುಡಿಗಳನ್ನು ಬಿಟ್ಟು ಸುತ್ತಣ ಅಧಿಕ ಸಂಖ್ಯಾತರ ಭಾಷೆಯನ್ನು ಕಲಿತುದೂ ಉಂಟು. ಹಾಗೆ ಮಾಡದೆ ಹೋದಾಗ ಸುತ್ತಣ ಜನರ ಭಾಷೆಗಳ ಶಬ್ದಗಳು ಅವರ ಆಡುನುಡಿಯಲ್ಲಿ ಸೇರಿದ್ದು ಉಂಟು. ಇಂಥ ಆಡುಭಾಷೆಗಳ ಅನ್ವೇಷಣೆಯಿಂದ – ಯಾವುದೇ ಭಾಷೆಯನ್ನಾಡುವ ಜನರು ಬಲು ಮೊದಲು ಎಲ್ಲಿ ಜೀವಿಸುತ್ತಿದ್ದಿರಬಹುದು – ಎಂದು ತರ್ಕಿಸಲು ಸಾಧ್ಯ.

ತೆಲುಗು, ಕನ್ನಡ, ತಮಿಳು, ತುಳು ಮತ್ತು ಮಲೆಯಾಳಿ ಭಾಷೆಗೆ ತಾಯಿಯಾಗಿದ್ದ ಭಾಷೆಯನ್ನೇ ಇಂದು 'ದ್ರಾವಿಡ ಭಾಷೆ' ಯೆಂದು ಕರೆಯುತ್ತಾರೆ; ಎಂದರೆ ಪುರಾತನ ದ್ರಾವಿಡರ ಭಾಷೆ. ಅದರದ್ದೇ ಲಕ್ಷಣಗಳುಳ್ಳ ಮಾನವನ ಅತಿ ನಿಕಟ ಅವಶ್ಯಕತೆಗಳ ಸಲುವಾಗಿ ಬಳಸುವ ಶಬ್ದಗಳ, ರೂಪಗಳನ್ನು ಹೋಲುವ ಭಾಷೆಗಳ ಜನರು ಇಂದು ಜಗತ್ತಿನ ಎಲ್ಲೆಲ್ಲಿ ವಾಸಿಸುತ್ತಿದ್ದಾರೆ– ಎಂಬ ಅನ್ವೇಷಣೆಯನ್ನು ವಿದ್ವಾಂಸರು ಮಾಡಿದ್ದಾರೆ. ಆಫ್ರೀಕದ ಇಂದಿನ ಕೆಲವು ನೀಗ್ರೋ ಬಣಗಳ, ಮೊರಕ್ಕೋದ ಕೆಲವು ಬಣಗಳ, ಸ್ಪೈಯಿನ್ ಬಾಸ್ಕ ಜನರ ಭಾಷೆ, ನೂರಿಸ್ತಾನದ ಕಾಫಿರರ ಭಾಷೆಗಳು ದ್ರಾವಿಡ ಭಾಷೆಗೆ ಸಂಬಂಧಿಸಿದುವು– ಎಂದು ತರ್ಕಿಸಿದ್ದಾರೆ.

ಅದೇ ರೀತಿ– ಸಂಸ್ಕೃತ, ಫಾರಸಿ, ಲೆಟಿನ್, ಲೆಟವಿಯನುಗಳಂಥ ಆರ್ಯ ಭಾಷೆಗಳು ಒಂದೇ ಮೂಲದವು ಎಂದು ತರ್ಕಿಸಿದ್ದಾರೆ. ಹೀಗೆ ಜೀವಂತ ಭಾಷೆಗಳ ಮೂಲಕವೂ ಮಾನವ ಕುಲಗಳ ಅನಾದಿ ಸಂಬಂಧಗಳನ್ನೂ ನಿರ್ಧರಿಸುತ್ತಾರೆ. ಆರ್ಯರಂತೆ ದ್ರಾವಿಡರೂ ಈ ದೇಶಕ್ಕೆ ಹೊರಗಿನಿಂದ ಬಂದವರೆಂಬುದು ತಿಳಿಯುತ್ತದೆ.

ಇವನ್ನೆಲ್ಲ ಎಣಿಸುವಾಗ–ಇಂದಿನ ನಾವು ಜಾತಿಯ ಹೆಸರಲ್ಲಾಗಲಿ ಮತಧರ್ಮಗಳ ಹೆಸರಲ್ಲಾಗಲಿ ವಿಭಿನ್ನರು, ಶ್ರೇಷ್ಠರು, ಶುದ್ಧರು ಎಂದು ತಿಳಿಯುವುದಕ್ಕೆ ಯಾವ ಭದ್ರ ತಳಹದಿಯೂ ಇಲ್ಲ. ನಮ್ಮ ಭಾರತ ದೇಶದಲ್ಲಿ ನಾಗರಿಕತೆ ತೊಡಗುವ

ಮೊದಲು ಹೊರಗಿನಿಂದ ಬಂದು ಸೇರಿದ ಮೂಲ ಮಾನವ ವಂಶಗಳು ಒಂದೋ ಎರಡೋ ಇದ್ದಿರಬಹುದಾದರೂ ಅನಂತರದ ೫೦೦೦ ವರ್ಷಗಳ ಅವಧಿಯಲ್ಲೇ ಹಲವಾರು ವಿಭಿನ್ನ ವಂಶಗಳು ಬಂದು ಸೇರಿಕೊಂಡವು. ಅದರಿಂದಾಗಿಯೇ ಹಲವಾರು ಸಮ್ಮಿಶ್ರ ಲಕ್ಷಣಗಳು ಈ ದೇಶದ ಜನರ ಅಂಗಲಕ್ಷಣಗಳಲ್ಲಿ ಕಾಣಿಸಿಕೊಂಡವು. ಆದಿಯುಗಗಳಲ್ಲಿ ಆಡುತ್ತಿದ್ದ ಭಾಷೆಗಳು, ಎಷ್ಟೊಂದು ಸ್ವತಂತ್ರವೆನಿಸಬಹುದಾದ, ಆಡುನುಡಿಗಳ ರೂಪ ತಾಳಿದವು. ಈ ದೇಶವೊಂದರಲ್ಲೇ ಇಂದು ಲಿಪಿಯಲ್ಲದ ಮತ್ತು ಇರುವ ಸುಮಾರು ೬೦೦ರಷ್ಟು ಆಡುನುಡಿಗಳಿವೆ. ಒಂದೇ ನುಡಿಯನ್ನಾಡುವ ಜನರು, ತಾವು ಒಂದು ಪ್ರತ್ಯೇಕ ಗುಂಪಿಗೆ ಸೇರಿದವರೆಂಬ ಭಾವನೆ ತಾಳುವುದು ಸಹಜ. ಇದು ಒಂದು ವಿಶಾಲ ದೇಶದ ಜನರಲ್ಲಿ ತಾವು ವಿಭಿನ್ನರು, ಪ್ರತ್ಯೇಕರು– ಎಂದು ತಿಳಿಯುವ ಪ್ರವೃತ್ತಿಯನ್ನು ಹುಟ್ಟಿಸುತ್ತದೆ. ಇಂಥ ಜನರೂ ಸಹ ತಾವಿದ್ದ ಪ್ರಾಂತಗಳಲ್ಲಿ ದೀರ್ಘಕಾಲ ಕ್ಷಾಮ ತಲೆದೋರಿದಾಗ ಅಥವಾ ಯುದ್ಧ ಇಲ್ಲವೆ ದಂಡಯಾತ್ರೆಗಳ ಹಾವಳಿ ಹೆಚ್ಚಿದಾಗ, ಸಾಂಕ್ರಾಮಿಕ ರೋಗಗಳಿಂದ ಅಸಂಖ್ಯರು ಸಾಯತೊಡಗಿದಾಗ,– ತಮ್ಮ ಊರನ್ನು ಬಿಟ್ಟು ಬೇರೊಂದೆಡೆಗೆ ಹೋಗಿ, ಅಲ್ಲಿನ ಬೇರೆ ಭಾಷೆಯ, ಬೇರೆ ನಡವಳಿಕೆಯ, ಬೇರೆ ಮತದ ಜನಗಳ ನಡುವೆ ಬಾಳಿದ್ದುಂಟು. ಆಗ ಹಾಗೆ ವಲಸೆ ಹೋದವರು ಸಣ್ಣ ಸಣ್ಣ ಗುಂಪುಗಳಾಗಿ ಚದರಿ ಬಾಳಿದರು. ಆಗ ಅವರು ತಾವು ಆಡುತ್ತಿದ್ದ ಭಾಷೆಯನ್ನು ಕಲಿತುದುಂಟು. ಅವರ ಸಾಮಾಜಿಕ ಜೀವನ ಬೇರೆಯಾದಾಗ ಉಭಯತರಲ್ಲಿ ಶ್ರಮ ವಿನಿಮಯ, ವಸ್ತು ವಿನಿಮಯಗಳ ಸಂಪರ್ಕ ಬೆಳೆಯಿತು. ಅಂಥ ಸಂದರ್ಭದಲ್ಲಿ ಅವರ ಭಾಷೆಯೇ ಬೇರೆ, ಅವರು ಬೇರೆಯೇ ಜನ ಎಂಬ ಭೇಧಭಾವದಿಂದಾಗಿ ವಿವಾಹಬಾಂಧವ್ಯ ಬೆಳೆಯಿಸದ ಗುಂಪುಗಳನ್ನಾಗಿ ಮಾಡಿತು. ಈ ಕುರಿತು ನನ್ನ ಅನುಭವದ ಕೆಲವೊಂದು ಉದಾಹರಣೆಗಳನ್ನು ತಿಳಿಸುತ್ತೇನೆ.

ದಕ್ಷಿಣ ಕನ್ನಡ ಜಿಲ್ಲೆಯ ಸಹ್ಯಾದ್ರಿ ಸೆರಗಿನಲ್ಲಿ ಮಲೆಕುಡಿಯರೆಂಬ ಒಂದು ಪ್ರತ್ಯೇಕ ಗುಂಪು ಕೆಲವು ಶತಮಾನಗಳಿಂದಲೂ ವಾಸಿಸುತ್ತ ಬಂದಿದೆ. ಆ ಗುಂಪಿನವರು ಗಡ್ಡೆಗೆಣಸುಗಳನ್ನು ಸಂಗ್ರಹಿಸಿ, ಪ್ರಾಣಿಗಳನ್ನು ಬೇಟೆಯಾಡಿ, ಪ್ರತಿ ವರ್ಷ ಕಾಡು ಕಡಿದು ಸುಟ್ಟು ನೆಲವನ್ನಗೆದು ಭತ್ತದ ಬೆಳೆ ಬೆಳೆಯಿಸಿ ತಮ್ಮ ಜೀವನ ಸಾಗಿಸುತ್ತಿದ್ದರು. ಈ ಶತಮಾನದ ಆದಿಯಲ್ಲಿ ಹಲವರು ಗುಹೆಗಳಲ್ಲಿಯೂ ವಾಸಿಸಿಕೊಂಡಿದ್ದರು. ಹಲವರು ಗುಡಿಸಲುಗಳಲ್ಲೂ ವಾಸಿಸುತ್ತಿದ್ದರು. ತೀರ ಮೊದಲು ಇವರು ಇಲ್ಲಿಗೆ ಎಲ್ಲಿಂದ ಬಂದರೋ ಏನೋ?. ಆದರೆ ಇವರ ಒಂದು ಪಂಗಡ, ಘಟ್ಟದ ಕೆಳಗಣ ಬಯಲು ಭೂಮಿಗೆ ಬಂದು ಅಲ್ಲಿನ ಇತರರಂತೆ ಕೃಷಿಕರಾದರು. ಅವರೆಲ್ಲರೂ ತಮ್ಮ ಮೂಲ ಭಾಷೆಯನ್ನು ಮರೆತು 'ತುಳು'ವನ್ನು ಆಡುಭಾಷೆಯನ್ನಾಗಿ ಮಾಡಿಕೊಂಡರು. 'ಕಾಸ್ಟ್ ಎಂಡ್ ಕ್ರೀಡ್ಸ್ ಆಫ್ ಸೌತ್ ಇಂಡಿಯಾ' ಎಂಬ ಕೋಶವನ್ನು ಬರೆದ ಥರ್ಸ್ಟನ್, ಅವರಲ್ಲಿ ಗಂಡ ಸತ್ತ ಒಬ್ಬಳು ಹೆಂಗಸು ತನ್ನ ಮಗನನ್ನು ಮದುವೆಯಾದ ನಿದರ್ಶನ ಕೊಟ್ಟಿದ್ದಾನೆ. ಈ ಮಲೆಕುಡಿಯರಲ್ಲಿ ಘಟ್ಟದ ಮೇಲೆ ಉಳಿದುಕೊಂಡವರು ಬೇರೆಯೇ ಉಳಿದರು. ಈ ಶತಮಾನದ ಮೂರು ನಾಲ್ಕು ದಶಕಗಳ ತನಕ ಅವರೊಳಗಿನ ಎರಡು 'ಬಳಿ' ಇಲ್ಲವೆ ಗೋತ್ರಗಳಲ್ಲಿ ವಿವಾಹ ಸಂಬಂಧ ಹೂಡುತ್ತಿದ್ದರು. ಅವರು ವಾಸಿಸುತ್ತಿರುವ ಮಲೆಗಳಲ್ಲಿ ಏಲಕ್ಕಿ ಧಾರಾಳವಾಗಿ ಬೆಳೆಯುವುದರಿಂದ ಕೆಳಗಣ ಬಯಲು ಭೂಮಿಯಲ್ಲಿ ಶ್ರೀಮಂತರು ಆ ಬೆಟ್ಟಗಳ ಒಡೆತನವನ್ನು ಪಡೆದುಕೊಂಡರು. ಆ ಧನಿಗಳು ಅಲ್ಲಿನ ಮಲೆಕುಡಿಯರಿಗೆ ಬೇಕಾದ ಅರಿವೆ, ಉಪ್ಪು ಒದಗಿಸಿದರೂ ಅಂಥ ಇಬ್ಬರು ಧನಿಗಳಲ್ಲಿ ವೈಷಮ್ಯ ಬಂದುದರಿಂದ- ಎರಡು (ಗೋತ್ರ) ಬಳಿಗಳೊಳಗೆ ನಡೆಯುತ್ತಿದ್ದ ವಿವಾಹ ಸಂಬಂಧ ನಿಂತೇ ಬಿಟ್ಟಿತು. ಮುಂದೆ ಅವರು ಒಂದೇ ಬಳಿಯೊಳಗಿಂದಲೇ ನಂಟುತನ ಬೆಳೆಸುವ ಪ್ರಸಂಗ ಬಂತು. ಆ ಸಂದಿಗ್ಧ ಕಾಲದಲ್ಲಿ ನಾನು, ಅವರಿದ್ದಲ್ಲಿಗೆ ಹೋಗಿ ಅವರನ್ನು ವಿಚಾರಿಸಿದ್ದೆ. ಮುಂದೆ ಅವರ ಜೀವನ ಸಮಸ್ಯೆಗಳನ್ನು ಕುರಿತು ನನ್ನ 'ಕುಡಿಯರ ಕೂಸು' ಎಂಬ ಕಾದಂಬರಿಯಲ್ಲಿ ಬರೆದೆ. ಅದರ ಇಂಗ್ಲೀಷ್ ಅನುವಾದದಿಂದ ಪ್ರಚೋದಿತರಾದ ಡಾ. ವಾನ್ ಫ್ಯೂರರ್ ಹೈಮನ್‌ಡಾರ್ಫ್ ಎಂಬ ಮಾನವ ಶಾಸ್ತ್ರಜ್ಞರನ್ನು ಅಲ್ಲಿಗೆ ಕರೆದೊಯ್ದೆ. ಆಗ ಹತ್ತು ವರ್ಷಗಳು ಸಂದಿದ್ದವು. ಆ ಮಲೆ ಕುಡಿಯರನ್ನು ಕಂಡೊಡನೆಯೇ ಡಾ. ಹೈಮನ್‌ಡಾರ್ಫರು "ಇವರು ಚೆಂಚುಗಳಂತಿದ್ದಾರೆ" ಎಂದು ಉದ್ಗರಿಸಿದರು. ಅವರು ಸುಪ್ರಸಿದ್ಧ ಮಾನವಕುಲ ಶಾಸ್ತ್ರಜ್ಞರು. ಆಂಧ್ರದ ಚೆಂಚುಗಳೊಡನೆ ವಾಸ ಮಾಡಿದ್ದರು. ಮಧ್ಯಪ್ರದೇಶದ ಆದಿವಾಸಿ ಗೊಂಡರೊಡನೆ ನೆಲೆಸಿದ್ದರು. ನಾಗಾಲ್ಯಾಂಡಿನ ಆದಿವಾಸಿಗಳನ್ನು ಕುರಿತು ಅಭ್ಯಾಸ ನಡೆಸಿದ್ದರು. ನೇಪಾಳದ 'ಅಪೌತಾನಿ' ಜನಗಳನ್ನೂ ಕುರಿತು ಅಭ್ಯಸಿಸಿದ್ದರು. ಅವರು, ಈ ಮಲೆಕುಡಿಯರು ಚೆಂಚುಗಳ ಬಳಗಕ್ಕೆ ಸೇರಿದವರು ಎಂದು ಸೂಚಿಸಿದಾಗ ನನಗಂತು ಆಶ್ಚರ್ಯವಾಯಿತು. ಚೆಂಚುಗಳು ಆಂಧ್ರಕ್ಕೆ ಸೇರಿದ ಒಂದು ಬುಡಕಟ್ಟಿನವರು. 'ಅವರು ಇಲ್ಲಿಗೇಕೆ ಬಂದರು?' ಎಂಬ ಸಮಸ್ಯೆ ನನ್ನನ್ನು ಕಾಡಿತು. ಆ ಸಮಸ್ಯೆ ನನ್ನನ್ನು ಕಾಡಿದಾಗಲೇ, ದಕ್ಷಿಣ ಕನ್ನಡದ ಕೋಟದಲ್ಲಿ ವಾಸಿಸುತ್ತಿದ್ದ ನಾನು, ನನ್ನ ಜನಗಳನ್ನೂ ಕುರಿತು ಯೋಚಿಸಬೇಕಾಯಿತು. ನನ್ನ ಎಳೆತನದಲ್ಲಿ ಕೋಟದ ಸುತ್ತಣ ಹದಿನಾಲ್ಕು ಗ್ರಾಮಗಳಿಗೆ ಸೇರಿದ ಬ್ರಾಹ್ಮಣ ವರ್ಗದವರನ್ನು 'ಕೂಟ ಮತಸ್ಥರು' ಎಂದು ಕರೆಯುತ್ತಿದ್ದರು. ನಮಗೆ ಕನ್ನಡ ಜಿಲ್ಲೆಯ ಇತರ ಬ್ರಾಹ್ಮಣ ಕುಲದವರೊಡನೆ ವಿವಾಹ ಸಂಬಂಧ ಇದ್ದಿರಲಿಲ್ಲ. ನಮ್ಮ ಮನೆಮಾತು ಕನ್ನಡ, ನಾವು ನಿತ್ಯ ಪಠಿಸುವ ಸಂಕಲ್ಪದಲ್ಲಿ 'ಪರಶುರಾಮ ಕ್ಷೇತ್ರ, ಗೋದಾವರಿ ತೀರೇ' ಎಂಬ ಮಾತು ಬರುತ್ತದೆ. ಗೋದಾವರಿ ಆಂಧ್ರ ದೇಶದಲ್ಲಿ ಹರಿಯುವ ನದಿ. ಈ ಜಿಲ್ಲೆಗೂ ಅದಕ್ಕೂ ಸಂಬಂಧವಿಲ್ಲ. ಪರಶುರಾಮ ಕ್ಷೇತ್ರ ಭಾರತದ ಕೊಂಕಣ ತೀರ. ಆ ನದಿಯ ಹೆಸರು ಆಂಧ್ರದಿಂದ ಪರಶುರಾಮ ಕ್ಷೇತ್ರಕ್ಕೆ ಬಂದ ಬ್ರಾಹ್ಮಣ ಬಳಗದ ಜತೆಯಲ್ಲಿ ಬಂದಿರಲೇಬೇಕು—ಅನಿಸಿತು . ಅಲ್ಪಸಂಖ್ಯಾಕರಾಗಿ ಬಂದ ನಾವು ನಮ್ಮ ಮೂಲ ತೆಲುಗು ಭಾಷೆಯನ್ನು ಬಿಟ್ಟು, ಸುತ್ತಣ ಜನರ ಕನ್ನಡವನ್ನು ರೂಢಿಸಿಕೊಂಡೆವು. ನಾವು ಇಲ್ಲಿಗೆ ಬಂದಿರಬಹುದಾದ ಕಾಲ ಸುಮಾರು ಹದಿನಾಲ್ಕನೆಯ ಶತಮಾನ. ಬರುವುದಕ್ಕೆ ಕಾರಣವಾಗಿರಬಹುದಾದ ಪ್ರಸಂಗ ಮಾಲಿಕಕಾಫರನ ದಂಡು ೧೩೧೭ರ ಸುಮಾರಿಗೆ ದ್ವಾರಸಮುದ್ರದಿಂದ ವಾರಂಗಲ್ಲಿನ ತನಕ ನಡೆಯಿಸಿದ ದಂಡಯಾತ್ರೆ, ಸುಲಿಗೆ, ದೇಗುಲಗಳ ನಾಶ ಮತಾಂತರದ ಹಾವಳಿ, ದುಷ್ಟತನ. ಅವಕ್ಕೆ ನಮ್ಮ ಪೂರ್ವಜರು ಚದರಿ ಬಂದಂತೆ, ಈ ಚೆಂಚುಗಳೂ ಬಂದು, ಸಹ್ಯಾದ್ರಿಯಲ್ಲಿ ನೆಲೆಸಿದರು ಎಂದು ತರ್ಕಿಸಬೇಕಾಯಿತು.

ನಾನು ಪ್ರಥಮ ಬಾರಿಗೆ ಅವರಿದ್ದ ಮಲೆಗೆ ಹೋದಾಗ, ನನ್ನಲ್ಲಿ ಯಾವ ಒಂದು ಅನುಮಾನ ಕಾದಿತ್ತೊ, ಮುಂದಣ ಹತ್ತೇ ಹತ್ತು ವರ್ಷಗಳಲ್ಲಿ ಡಾ. ಹೈಮನ್‌ಡಾರ್ಫರೊಡನೆ ಹೋದಾಗ, ಅದು ಖಾತ್ರಿಯಾಯಿತು. ಅಲ್ಲಿ ಪ್ರತ್ಯೇಕ ಗುಂಪಾಗಿ ಬಾಳುತ್ತಿದ್ದ ಮಲೆಕುಡಿಯರಲ್ಲಿ ಹುಟ್ಟಿದ ಕೆಲವು ಮಕ್ಕಳ

ಮುಖಚಹರೆಗಳನ್ನು ಕಂಡಾಗ, ಅದು ವಿಶಿಷ್ಟ ಅಂಗಲಕ್ಷಣದ ಕುಡಿಯರಿಗಿಂತ ಬೆಳ್ಳಗಿನ ಜನವರ್ಗವೊಂದರ ಸಂತತಿಯವರಾಗಿ ಕಾಣಿಸಿದರು.

ಭಾರತ ದೇಶದ ಸಿಂಧೂ ನಾಗರಿಕತೆಗಿಂತ ಪೂರ್ವದ ಜನಗಳ ಅಂಗಲಕ್ಷಣವೇನಿದ್ದೀತು, ಅವರು ಯಾವ ವಂಶದವರು– ಎಂದು ಊಹಿಸಲು ಅಲ್ಲಿನ ಉತ್ಖನನಗಳು ಸಾಕ್ಷಿ ಒದಗಿಸಬೇಕು. ಸಿಂಧೂ ಕಣಿವೆಯ ನಾಗರಿಕ ಯುಗ ಕ್ರಿ. ಪೂ. ೨೫೦೦ರಿಂದ ೧೫೦೦ ವರ್ಷಗಳ ತನಕ ವ್ಯಾಪಿಸುತ್ತಾದರೂ, ಪುರಾತನ ಸಮಾಧಿಗಳ ಸಂಶೋಧನೆಗಳಲ್ಲಿ ದೊರಕಿದ ಅಸ್ಥಿಪಂಜರಗಳ ಸಂಖ್ಯೆ ಕೆಲವೇ ಕೆಲವು ಲಕ್ಷಣವನ್ನು 'ಪ್ರೋಟೋ ಆಸ್ಟ್ರಲಾಯ್ಡ್' ಎಂದು ತರ್ಕಿಸುತ್ತಾರೆ. ಈ ಲಕ್ಷಣಗಳನ್ನು ಸ್ಥೂಲವಾಗಿ ಪ್ರತೇಕ ಬಳಗವಾಗಿ ವಾಸಿಸುವ ಬಂಗಾಲ ಮತ್ತು ಒರಿಸ್ಸಾ ಪ್ರಾಂತ್ಯಗಳ ಸಂತಾಲರಿಗೆ ಹೋಲಿಸಬಹುದೋ ಏನೋ. ಕರ್ನಾಟಕದ ಕಾವೇರಿ ದಂಡೆಯ ಟಿ. ನರಸೀಪುರ, ಬಳ್ಳಾರಿ ಜಿಲ್ಲೆಯ ತೆಕ್ಕಲ ಕೋಟೆಗಳಲ್ಲಿ ದೊರೆತ ಪುರಾತನ ಅಸ್ಥಿಪಂಜರಗಳೂ ಇವೇ ಲಕ್ಷಣದವು. ಕೊನೆಯ ಎರಡು ಮಾದರಿಗಳು ಮಾತ್ರ ೨೦೦೦ ವರ್ಷ ಈಚಿನವು, ಅದಕ್ಕಿಂತ ಹಿಂದಿನವಲ್ಲ. ಅದಕ್ಕಿಂತ ಪೂರ್ವದಲ್ಲಿ– ಸಿಂಧೂ ಕಣಿವೆಯಲ್ಲಿ ಯಾವ ಜನಾಂಗ ನೆಲೆಸಿತ್ತು ಎಂದು ತೀರ್ಮಾನವಾಗಿ ಹೇಳುವ ಸ್ಥಿತಿ ಇಲ್ಲ. ಈ ನಾಗರಿಕತೆಯ ಕಾಲದಲ್ಲಿ ಮತ್ತು ಮುಂದೆ ಪುರಾತನ ಈಜಿಪ್ಟಿನ ಜನಗಳ ಚಹರೆಯ ಲಕ್ಷಣಗಳುಳ್ಳ ಒಂದು ಜನಾಂಗ, ಭಾರತಕ್ಕೆ ಭೂಮಾರ್ಗವಾಗಿಯೂ, ಜಲಮಾರ್ಗವಾಗಿಯೂ ಬಂದು ನೆಲೆಸತೊಡಗಿತು. ಅವರು ಆಡುತ್ತಿದ್ದ ಭಾಷೆಯನ್ನು ಮೂಲ ದ್ರಾವಿಡ ಭಾಷೆಯೆಂದು ಕರೆದಿದ್ದಾರೆ. ಭಾಷಾ ಶಾಸ್ತ್ರಜ್ಞರು ಆಫ್ರಿಕದ ಹಲವಾರು ಬಳಗಗಳ ಭಾಷೆಗೂ, ಮೂಲ ದ್ರಾವಿಡ ಭಾಷೆಗೂ ಅದರಿಂದ ಕವಲೊಡೆದ ಕೆಲವು ಆದಿವಾಸಿಗಳ ಭಾಷೆಗೂ ದ್ರಾವಿಡಜನ್ಯ ಭಾಷೆಗಳಿಗೂ ಇರುವ ಸಂಬಂಧವನ್ನು ಗುರುತಿಸಿ, ಆ ಭಾಷೆಗಳು ದ್ರಾವಿಡ ವರ್ಗಕ್ಕೆ ಸೇರಿದ ಜನಾಂಗಗಳಿಂದಲೇ ಬಂದಿರಬೇಕು ಎಂದು ತರ್ಕಿಸಿದ್ದಾರೆ. ದ್ರಾವಿಡರ ಕೆಲಕೆಲವು ಬಳಗಗಳು ಮೆಡಿಟರೇನಿಯನ್ ದೇಶಗಳಿಂದ ಆರಂಭದ ಕ್ರಿ. ಶ. ಎರಡು ಶತಮಾನಗಳ ತನಕವೂ ಸಮುದ್ರ ಕರಾವಳಿಯ ಮಾರ್ಗವಾಗಿ ಬಂದ ನಿದರ್ಶನಗಳು ಕರ್ನಾಟಕದಲ್ಲಿ ಸಿಗುತ್ತವೆ. ದಕ್ಷಿಣ ಹಿಂದೂಸ್ಥಾನದ ಕೆಲವು ಕಡೆಗಳಲ್ಲಿ ಸಿಗುತ್ತವೆ. ಅವರ ಗೋರಿಗಳ ಲಕ್ಷಣ ಮತ್ತು ಗೋರಿಗಳಲ್ಲಿ ಕಾಣಸಿಗುವ ಕುಡಿಕೆ ಮಡಿಕೆಗಳ ಲಕ್ಷಣಗಳಿಂದ ಅದನ್ನು ಗುರುತಿಸಿದ್ದಾರೆ. ಅಂಥ ಕಲ್ಗೋರಿಗಳು (ಮೇಗಾಲಿಥ್ಸ್) ಪಶ್ಚಿಮ ಕರಾವಳಿಯಲ್ಲೂ, ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲೂ ಇವೆ.

ಈ ಕಾಲದ ಬಳಿಕ ಎಂದರೆ ಕ್ರಿ. ಪೂ. ೧೫೦೦ರ ಬಳಿಕ ಸಿಂಧೂ ಬಯಲಿನಲ್ಲಿ, ದ್ರಾವಿಡರಿಗಿಂತ ಭಿನ್ನ ಶರೀರ ಲಕ್ಷಣದ ಬಿಳಿ ತೊಗಲಿನ, ನೀಲ, ನೀಲಿಹಸುರು ಕಣ್ಣಿನ, ಎದೆಯ ಮೇಲೆ ವಿರಳ ಕೂದಲುಳ್ಳ ಜನರಾದ ಆರ್ಯರ ಬಳಿಗೆ ಪಶುಪಾಲನೆಯಿಂದ ಬದುಕುತ್ತಿದ್ದ ಅಲೆಮಾರಿ ಜನಗಳು ಭಾರತಕ್ಕೆ ಬಂದರು. ಅವರು ಸಿಂಧೂ ಕಣಿವೆಯಲ್ಲಿ ಮೊದಲು ನೆಲೆಸಿದರು. ಅವರ ಜೀವನದ ಬಗೆಗಳನ್ನು ವೇದಗಳಿಂದ ತಿಳಿಯಬಹುದು. ಆ ಸಾಹಿತ್ಯ ಇಂದಿಗೂ ಉಳಿದುಕೊಂಡಿದೆ. ಆ ವೇದಗಳಲ್ಲಿ ಬರುವ ಅಗ್ನಿ, ಮಿತ್ರ, ಇಂದ್ರ ಮೊದಲಾದ ಕೆಲಕೆಲವು ದೇವತೆಗಳು ಭಾರತಕ್ಕೆ ಬಂದ ಮೇಲೆಯೇ ಕಾಣಿಸಿಕೊಂಡ ದೇವತೆಗಳಲ್ಲ, ಅವರು ಭಾರತಕ್ಕೆ ಬರುವಾಗ ಹೊತ್ತು ತಂದವರು. ಉದಾಹರಣೆಗೆ 'ಮಿತ್ರ' ದೇವತೆಯ ಪೂಜೆ– ಆರ್ಯರು ಇಲ್ಲಿಗೆ ಬಂದ ಕಾಲದಲ್ಲೇ ಇರಾನಿನಲ್ಲೂ ಏಷ್ಯಾಮೈನರಿನ ಪ್ರಾಂತವಾದ ಹಿಟ್ಟೈಟ್ ರಾಜ್ಯದಲ್ಲೂ, ಗ್ರೀಸಿನಲ್ಲೂ ಕಾಣಿಸಿಕೊಂಡಿತ್ತು.

ಲಿಖಿತ ದಾಖಲೆಗಳು ಸಿಗತೊಡಗಿದ ಮುಂದಣ ಅವಧಿಯನ್ನು 'ಇತಿಹಾಸ ಯುಗ' ಎಂದು ಕರೆಯುತ್ತಾರೆ. ಈ ಅವಧಿಯಲ್ಲಿ ಗ್ರೀಕ್ ದೊರೆ ಅಲೆಕ್ಸಾಂಡರನ ದಂಡಯಾತ್ರೆಯ ದೆಸೆಯಿಂದ ಬಿಳಿ ಜನಾಂಗದ ಇನ್ನೊಂದು ಗುಂಪಿನವರು ಭಾರತ ದೇಶವನ್ನು ಸೇರಿ ಪಾಟಲೀಪುತ್ರದವರೆಗೂ ಸಂಪರ್ಕ ಬೆಳೆಯಿಸಿದರು. ಮುಂದಣ ಶತಮಾನಗಳಲ್ಲೆಲ್ಲ ಭಾರತಕ್ಕೆ ಹೊರಗಿನಿಂದ ಎಷ್ಟೆಲ್ಲ ಹೊಸ ಜನಗಳ ಗುಂಪು ಬಂದಿತು ಎನ್ನುವುದಕ್ಕಿಲ್ಲ. ಇರಾನಿನ ಉತ್ತರದಿಂದ ಪಾರ್ಥಿಯನ ಜನಾಂಗದ ಜನರು ಬಂದರು. ಕಾರಕೋರಂ ಪರ್ವತಗಳ ದಾರಿಯಾಗಿ ಉತ್ತರ ಚೀನದ ಕುಶಾನರು ಬಂದರು. ಅವರು ಹೆಚ್ಚಾಗಿ ಮಂಗೋಲ ಜನಾಂಗದ ಲಕ್ಷಣಗಳನ್ನು ಪಡೆದರು. ಅನಂತರ ಹೂಣರು ಬಂದರು. ಸಿಥಿಯನರು ಬಂದರು. ಮುಂದೆ ಭಾರತದ ಸಂಪತ್ತಿನ ಆಸೆಗೆ ಸುಲಿಗೆಯ ಆಸೆಗೆ ಪಶ್ಚಿಮೋತ್ತರ ಪ್ರದೇಶಗಳಿಂದ ಮೇಲಿಂದ ಮೇಲೆ ಇಸ್ಲಾಮ್ ಧರ್ಮದ ಅಂಧ ಅನುಯಾಯಿಗಳಾದ ರಾಜ್ಯವಿಸ್ತಾರದ ಹಂಬಲ ತಾಳಿದ ತುರ್ಕರೂ, ಅವರ ಅಧೀನವಾದ ರಾಷ್ಟ್ರಗಳಿಂದ ಅವರ ಸೇನೆಗಳನ್ನು ಸೇರಿದ ವಿಭಿನ್ನ ಜನಾಂಗದ ಜನಗಳು ಬಂದುದನ್ನು ಕಾಣುತ್ತೇವೆ. ಹೀಗೆ ಆಗಮಿಸಿದ ಜನರ ಗುಂಪುಗಳು ಆ ಮೊದಲೇ ಇಲ್ಲಿ ನೆಲೆಸುತ್ತಿದ್ದ ಆದಿವಾಸಿ ಬುಡಕಟ್ಟುಗಳೊಡನೆಯೂ, ದ್ರಾವಿಡ ಕುಟುಂಬಗಳೊಡನೆಯೂ, ಅವರ ಎಡೆಗಳಲ್ಲಿ ಹಬ್ಬಿ ಜಿನುಗಿದ ಆರ್ಯವಂಶಸ್ಥರೊಡನೆಯೂ ಬೆರೆತೇ ಬಾಳಿದರು.

ವಿವಿಧ ಜನವಂಶಗಳು ಬೆರೆತು ಮಿಶ್ರಜನಾಂಗಗಳಾಗುವುದಕ್ಕೂ ಕಾರಣವಿದೆ: ಪ್ರತ್ಯೇಕವಾಗಿ ಉಳಿದು ಸ್ವತಂತ್ರ ಕುಲ ಲಕ್ಷಣಗಳನ್ನು ಪಡೆಯುವುದಕ್ಕೂ ಕಾರಣವಿದೆ. ಇಂತಹ ವಿದ್ಯಮಾನಗಳಿಗೆ ಕಾರಣವಾಗುವ ಸಂದರ್ಭಗಳೇನು ಎಂಬುದನ್ನು ಯೋಚಿಸುವ.

ಆರ್ಯರು ಭಾರತಕ್ಕೆ ಬಂದು ನೆಲೆಸಿದ ಕಾಲಕ್ಕೆ ತಾವು ಆಚೀಚಿನ ಜನಗಳಿಗಿಂತ ಶೇಷ್ಠರು ಎನಿಸಿಕೊಂಡು ತಮ್ಮ ಬಳಗದವರನ್ನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ವರ್ಣ ವಿಭಾಗಗಳವರಾಗಿ ತಿಳಿದು, ಉಳಿದೆಲ್ಲರನ್ನೂ 'ಶೂದ್ರರು' ಎಂದು ಪರಿಗಣಿಸಿದರು. ಈ ನಾಲ್ಕು ವರ್ಣದವರೂ ಅಸಂಖ್ಯ ಆದಿವಾಸಿ ಬಳಗಗಳೊಡನೆ ಮೊದಮೊದಲು ಸಂಪರ್ಕ ಬೆಳೆಯಿಸದೆ ಹೋದರೂ, ಕಾಲಕ್ರಮದಲ್ಲಿ ಅವರೂ ಪ್ರಾಂತ ಬಿಟ್ಟು ಪ್ರಾಂತಕ್ಕೆ ಹೋದಾಗ, ಯುದ್ಧಗಳ ದೆಸೆಯಿಂದ ವಿಭಿನ್ನ ಗುಂಪುಗಳಲ್ಲಿ ಅನುಲೋಮ ಪ್ರತಿಲೋಮ ವಿವಾಹಗಳಾಗಿ ಸಮ್ಮಿಶ್ರ ಸಂತತಿಯನ್ನೇ ಪಡೆದರು.

ಅನಂತರವಂತೂ ಪಾರ್ಥಿಯನರು, ಸಿಥಿಯನರು, ಹೂಣರು ಬಹುದೊಡ್ಡ ಪ್ರಮಾಣದಿಂದ ಇದೇ ನಾಡಿಗೆ ಬಂದು, ಇಲ್ಲಿನ ಪೂರ್ವ ನಿವಾಸಿಗಳ ಜತೆಯಲ್ಲಿ ಬಾಳಿ ಬದುಕಿ, ಯುದ್ಧಹೂಡಿ, ಸ್ನೇಹಮಾಡಿ ಇರಬೇಕಾಯಿತು.

ಬುದ್ಧ ಮತ್ತು ಮಹಾವೀರರು, ಆರ್ಯರು ನಂಬಿಬಂದ ವರ್ಣಾಶ್ರಮ ಧರ್ಮವನ್ನು ಖಂಡಿಸಿದರು. ಮುಂದಣ ಹತ್ತು ಹದಿನೈದು ಶತಮಾನಗಳ ಅವಧಿಯಲ್ಲಿ ಬೌದ್ಧ ಧರ್ಮದ

ಪ್ರಭಾವ ಯಾವತ್ತೂ ಭಾರತಕ್ಕೆ ಹಬ್ಬಿತ್ತು. ಅದಕ್ಕಿಂತ ತುಸು ಕಟ್ಟುನಿಟ್ಟಿನ ದೃಷ್ಟಿಯುಳ್ಳ ಜೈನ ಧರ್ಮದ ಪ್ರಭಾವವೂ ಹಿಂದೂಸ್ಥಾನದಲ್ಲಿ ಸಾಕಷ್ಟು ಹಬ್ಬಿತ್ತು. ಅಲ್ಲಿಯತನಕ ಭಾರತದಲ್ಲಿ ಹಬ್ಬಿದ ಜನಗಳೇ, ಬ್ರಾಹ್ಮಣ ಧರ್ಮವನ್ನೇ ಅನುಸರಿಸುತ್ತಿದ್ದವರೇ, ಈ ಎರಡೂ ಹೊಸ ಧರ್ಮಗಳನ್ನು ತಬ್ಬಿಕೊಂಡರು. ಹಾಗೆ ಮಾಡಿದುದರಿಂದ ಆರ್ಯರು ಬೆಳೆಯಿಸಿಕೊಂಡು ಬಂದಿದ್ದ ಪದ್ಧತಿಗೆ ಮಾರಕ ಪ್ರಾಯರಾಗಿ, ವರ್ಣಾಶ್ರಮ ಧರ್ಮವನ್ನು ನಂಬಿ ಬಂದ ಬ್ರಾಹ್ಮಣ ವರ್ಗ ಪ್ರತ್ಯೇಕ ಉಳಿಯಿತೆಂದು ತಿಳಿದರೂ, ಕ್ಷತ್ರಿಯ ಮತ್ತು ವೈಶ್ಯ ಪಂಗಡಗಳ ಜನರು ಬೌದ್ಧ ಮತ್ತು ಜೈನ ಧರ್ಮಗಳನ್ನು ಸ್ವೀಕರಿಸಿದ ನಂತರ, ಮೊದಲಿನಂತೆ ಪ್ರತ್ಯೇಕವಾಗಿ ಉಳಿಯುವುದು ಶಕ್ಯವೇ ಇಲ್ಲ. ವೃತ್ತಿಯಿಂದ ಬೇರೆಯಾದ ವ್ಯಾಪಾರಿ ವರ್ಗದ ಜನರ ಉಂಬಳಿಯಿಂದ ಬೌದ್ಧರ ಸ್ತೂಪ, ಗುಹಾಲಯ, ಚೈತ್ಯಾಲಯಗಳು ಎಲ್ಲೆಲ್ಲೂ ಕಾಣಿಸಿಕೊಂಡವು. ಅವರು ಆರ್ಯರ ವರ್ಣಾಶ್ರಮ ಧರ್ಮವನ್ನು ನಂಬಿದವರಲ್ಲ. ಅಂದಿನಿಂದ ಮುಂದಣ ರಾಜರಾಜರುಗಳ ಸೇನೆಗಳಲ್ಲಿ ಆರ್ಯ ವಂಶದ ಶುದ್ಧ ಕ್ಷತ್ರಿಯರ ಬದಲು, ದೇಹದಾರ್ಢ್ಯವುಳ್ಳ ಅಸಂಖ್ಯರು, ಹಲವಾರು ಬಣಗಳಿಗೆ ಸೇರಿದವರೂ ಸೇರಿಕೊಂಡರು. ಹಾಗೆ ನಡೆದ ಯುದ್ಧಗಳ ಸಂಖ್ಯೆ ಅಪಾರ. ಅದೇ ಮಾನದಲ್ಲಿ ವ್ಯಾಪಾರ ವ್ಯವಹಾರಗಳ ದೆಸೆಯಿಂದ ವ್ಯಾಪಾರಿ ವೃತ್ತಿ ಬೆಳೆದರೂ, ಪೂರ್ವದ ಆರ್ಯಮೂಲದ 'ವೈಶ್ಯರೇ' ಅದನ್ನು ನಡೆಯಿಸಿಕೊಂಡು ಬಂದರೆಂದು ಹೇಳುವಂತೆಯೇ ಇಲ್ಲ.

ಈ ದೇಶದಲ್ಲಿ ಕ್ರಿ. ಶಕದ ಪ್ರಥಮ ಹತ್ತು ಶತಮಾನಗಳಲ್ಲಿ ವಿವಿಧ ಪ್ರಾಂತದ ದೊರೆಗಳು ನಡೆಸಿದ ದಂಡಯಾತ್ರೆಗಳ ಮತ್ತು ಯುದ್ಧಗಳ ಸಂಖ್ಯೆ ಒಂದೆರಡಲ್ಲ, ಪ್ರಾಂತದಿಂದ ಪ್ರಾಂತಕ್ಕೆ, ಉತ್ತರದಿಂದ ದಕ್ಷಿಣಕ್ಕೆ, ದಕ್ಷಿಣದಿಂದ ಉತ್ತರಕ್ಕೆ ದಂಡೆತ್ತಿ ಹೋದ ಅರಸರು, ಗೆದ್ದು ಮರಳಿರಬಹುದಾದರೂ– ಸೋತ ಸೈನಿಕರು, ಅವರ ಸೇವಕರು, ಬೆಂಬಲಿಗರು ಸೆರೆಯಾಗಿಯೋ ಬಸವಳಿದೋ ಅಲ್ಲಲ್ಲೇ ನೆಲೆಸಬೇಕಾಗಿಯೂ ಬಂದಿತ್ತು. ಈ ಕಾರಣವಲ್ಲದೆಯೂ–ಈ ದೇಶದಲ್ಲಿ ಆಗಾಗ ಕಾಣಿಸಿರುವ ಕ್ಷಾಮಗಳಿಂದಾಗಿ ಪಿಡುಗುಗಳ ಉತ್ಪಾತದಿಂದಾಗಿ ಭಯಗೊಂಡು–ಪ್ರಾಂತದಿಂದ ಪ್ರಾಂತಕ್ಕೆ ವಲಸೆಹೋದವರ ಸಂಖ್ಯೆಯೂ ಬೇಕಷ್ಟಿತ್ತು. ಅಂಥವರು ಬಾಳಿ ಬದುಕಬೇಕಾದದ್ದು ಅವರು ಯಾವ ನಾಡನ್ನು ಸೇರಿದರೋ, ಅಲ್ಲಿನ ಜನರ ಎಡೆಯಲ್ಲಷ್ಟೆ. ಅಲ್ಲಿಗೆ ಅಲ್ಪಸಂಖ್ಯಾಕರು ಹೋಗಿದ್ದರೆ, ಅವರ ಮಾತೃಭಾಷೆಯೂ ಕಾಲಕ್ರಮದಲ್ಲಿ ಉಡುಗುತ್ತದೆ. ಅವರು ತಮ್ಮ ಜತೆಗೆ ಹೊತ್ತು ತಂದ ಸ್ವಜಾತೀಯ ಸ್ಥಾನಮಾನಗಳು ಅವರು ಹೋಗಿ ನೆಲೆಸಿದ ಪ್ರಾಂತಗಳಲ್ಲಿ ಮಾನ್ಯತೆ ಪಡೆಯದೆ ಹೋಗುತ್ತವೆ. ಅವರ ಗುಂಪು ಆ ಹೊಸ ನಾಡಿನ ಜನರ ಪಾಲಿಗೆ ಮನ್ನಣೆಯಿಲ್ಲದೆ ಒಂದು ಪ್ರತ್ಯೇಕ ಜಾತಿಯಾಗಿ ಉಳಿದೀತು. ಹಾಗ ಹೋದಲ್ಲೆಲ್ಲ ಮನ್ನಣೆ ಗಳಿಸಿ, ಅಲ್ಲಿಯೂ ತಮ್ಮ ಸ್ಥಾನಮಾನ ಕಾಯ್ದುಕೊಳ್ಳಲು ಕೆಲವೇ ಮತಾಚಾರ್ಯರಿಗೋ ವಿದ್ವಾಂಸರಿಗೋ ಶ್ರೀಮಂತರಿಗೋ ಅಥವಾ ಕ್ಷಾತ್ರಬಲ ಮೆರೆಯಿಸಿದವರಿಗೋ ಮಾತ್ರ ಸಾಧ್ಯ.

ಕ್ಷಾಮ ಡಾಮರಗಳಿಗೆ ಹೆದರಿ, ಸಂಸಾರ ಸಹಿತರಾಗಿ ವಲಸೆ ಹೋದವರು ತಾವು ಸೇರಿಕೊಂಡ ಪ್ರಾಂತಗಳಲ್ಲಿ ಅಲ್ಲಿನವರಿಂದ ಮನ್ನಣೆ ಸಿಗದಾಗಲೂ, ಪ್ರತ್ಯೇಕ ಜಾತಿ ಎನಿಸಿಕೊಂಡು ಬದುಕಿರಬಹುದು. ಯುದ್ಧಗಳಲ್ಲಿ ಸೋತು ಸಂಸಾರ ವಿರಹಿತರಾಗಿ, ಪಲಾಯನ ಹೂಡಿದ ಜನರು ಕಾಲಕ್ರಮದಲ್ಲಿ ತಾವು ಸೇರಿದ ಪರನಾಡಿನ ಹೆಂಗಸರನ್ನೇ ಮದುವೆಯಾಗಿ ಮಿಶ್ರಜಾತಿಯವರಾಗಿ ಬಾಳಿದರು.

ಈ ಬಗೆಯ ಸಾಮೂಹಿಕ ವಲಸೆ ಅಥವಾ ನಿರಾಶ್ರಿತ ಸ್ಥಿತಿ ಬಂದುದರಿಂದ ಕೊನೆಯ ತನಕವೂ ಹೊರಗಣ ಸಂಪರ್ಕವಿಲ್ಲದೆ ಬಾಳಿ ಬದುಕಿದ ಕೆಲವೇ ಆದಿವಾಸಿ ಕುಟುಂಬಗಳನ್ನು ಬಿಟ್ಟರೆ, ಉಳಿದೆಲ್ಲರಲ್ಲೂ ವರ್ಣ ಸಂಕರ ಆಗಿಯೇ ಆಗಿದೆ. ಅದನ್ನು ಜನಗಳ ಅಂಗಲಕ್ಷಣಗಳು ಸಾರಿಹೇಳುತ್ತವೆ. ಇವತ್ತಿನ ಯಾವುದೇ ಒಂದು ಜಾತಿ ಇಲ್ಲವೆ ಕೋಮು ಎಂಬ ಗುಂಪನ್ನು ಆರಿಸಿಕೊಂಡು ಅದಕ್ಕೆ ಸೇರಿದ ಜನರನ್ನು ಪರಿಶೀಲಿಸಿದರೆ, ಮೈಚರ್ಮದ ಬಣ್ಣಗಳಲ್ಲಿ ಎಲುಬಿನ ರಚನೆಯಲ್ಲಿ, ತಲೆಯೋಡಿನ ಆಕೃತಿಯಲ್ಲಿ, ಎತ್ತರದಲ್ಲಿ, ದಪ್ಪದಲ್ಲಿ ಕೂದಲಿನ ಬಣ್ಣ ಮತ್ತು ಗುಣಗಳಲ್ಲಿ, ಕಣ್ಣಿನ ಬಣ್ಣದಲ್ಲಿ, ಮೂಗಿನ ಆಕೃತಿಯಲ್ಲಿ, ತುಟಿ, ಹಣೆ, ಗದ್ದಗಳ ಆಕೃತಿಯಲ್ಲಿ ಇರುವ ವಿಭಿನ್ನತೆ ನಮಗೆ ಕಣ್ಣಿಗೆ ಚುಚ್ಚಿ ಕಾಣಿಸುತ್ತವೆ. ಶುದ್ಧ ಆರ್ಯರು ಅಥವಾ ಶುದ್ಧ ದ್ರಾವಿಡರು ಇಲ್ಲವೆ, ಇನ್ನಿತರ ಅಂತಹ ಶುದ್ಧ ಅಂಗ ಲಕ್ಷಣವುಳ್ಳವರು ಇಂದು ಎಲ್ಲಿಯೂ ಉಳಿದಿಲ್ಲ. ಇಂದು ಉಳಿದಿರುವ ಎಲ್ಲ ಜಾತಿಗಳಲ್ಲೂ ನಿಡುಗಾಲದ ವಂಶಸಂಕರ ಲಕ್ಷಣಗಳೇ ಧಾರಾಳವಾಗಿ ಕಂಡು ಬರುತ್ತವೆ. ಆರ್ಯರ ವರ್ಣ ವಿಭಾಗ ಪದ್ಧತಿ, ಅವರ ವಲಸೆಯಿಂದಾಗಿಯೂ ಜೈನ ಮತ್ತು ಬೌದ್ಧ ಧರ್ಮಗಳ ಪ್ರಭಾವದಿಂದಾಗಿಯೂ ಮೊದಲಿನಂತೆ ಉಳಿಯದೆ ಹೋಯಿತು. ವಿವಾಹ ಸಂಬಂಧಗಳಿಗೆ ಸೀಮಿತವಾದ ಪ್ರತಿಯೊಂದು ಸಣ್ಣ ಸಮಾಜ ಮತ್ತು ಗಣದಲ್ಲೂ ನಾವು ಇಂದು ತಂತಮ್ಮ ಸ್ಥಾನಮಾನಗಳನ್ನು ಕಾಯ್ದುಕೊಳ್ಳುವ ಹಟದಿಂದ ಕಾದುಕೊಂಡ ಮತ್ತು ಉಳಿದೆಲ್ಲರ ಎದುರಿಗೆ ತಮ್ಮ ಸಂಘಶಕ್ತಿಯನ್ನು ಕಳೆದುಕೊಳ್ಳಬಾರದೆಂಬ ಒತ್ತಾಯದಿಂದ ಹುಟ್ಟಿಕೊಂಡ ಜಾತಿ ಕೋಮುಗಳ ಪ್ರತ್ಯೇಕತೆಯನ್ನು ಕಂಡೇ ಕಾಣುತ್ತೇವೆ. ಪ್ರತ್ಯೇಕತಗೆ ಸ್ಥಳೀಕ ಸಂಪ್ರದಾಯಗಳ ಹೊರತು ಆರ್ಯರಾಗಲಿ, ಅವರ ಶಾಸ್ತ್ರಕಾರ ಮನುವಾಗಲಿ ಹಾಕಿಕೊಟ್ಟ ಕಟ್ಟುಪಾಡು ಉಳಿದೇ ಇಲ್ಲ. ವಿವಿಧ ಧಾರ್ಮಿಕ ಪಂಥಗಳೂ ಅಂಥ ಪ್ರತ್ಯೇಕತೆಯನ್ನು ಸೃಷ್ಟಿಸಿವೆ. ಹಿಂದೂ ಧರ್ಮವೊಂದರಲ್ಲೇ ಶೈವ, ವೀರಶೈವ, ವೈಷ್ಣವ ಇತ್ಯಾದಿ ಮಾನಸಿಕ ಸಂಸ್ಕಾರದ ಪ್ರಭಾವಗಳು ಜಾತಿ ಗುಂಪುಗಳನ್ನು ಹೆಚ್ಚಿಸಿವೆ. ತೀರ ಕೆಳ ಒಂದು ಗುಂಪಿನವರು ಇನ್ನೊಂದು ಗುಂಪಿನೊಡನೆ ವಿವಾಹ ಸಂಬಂಧ ಬೆಳೆಯಿಸದಿರುವ ಎಷ್ಟೆಲ್ಲ ಒಳಜಾತಿಗಳು ಇಲ್ಲ(!)

ಉತ್ತರ ಕನ್ನಡ ಜಿಲ್ಲೆಯ ಕೆಲವು ನಿದರ್ಶನಗಳನ್ನು ಇಲ್ಲಿ ಹೇಳುತ್ತೇನೆ. ಅಲ್ಲಿನ ಕಳೆದ ಶತಮಾನದ ಗಜೆಟ್ಟಿಯರಿನಲ್ಲೆ ಪ್ರಕಟವಾದಂತೆ ರೂಢಿಯಲ್ಲಿದ್ದ ಜಾತಿ ಪ್ರಭೇದಗಳನ್ನು ನೋಡಿದರೆ ಕೆಲವೊಂದು ವೃತ್ತಿಗಳನ್ನು ಅನುಸರಿಸುವ ಜನರಲ್ಲಿ ಕೊಂಕಣಿ ಮಾತಿನ ಕ್ಷೌರಿಕರು ಬೇರೆ, ತೆಲುಗು ಮಾತಿನವರು ಬೇರೆ, ಜೈನ ಧರ್ಮದವರು ಬೇರೆ, ಬಸವಣ್ಣನ ಮಾತಿನವರು ಬೇರೆ ಇದ್ದುದು ತಿಳಿಯುತ್ತದೆ. ಹಾಗೆಯೇ ಇಸ್ಲಾಮು ಧರ್ಮ ಅನುಸರಿಸಿದವರು ಬೇರೆ, ಹಿಂದೂ ಧರ್ಮದವರು ಬೇರೆ, ಜೈನ ಧರ್ಮದವರು ಬೇರೆ, ಬಸವಣ್ಣನ ಅನುಯಾಯಿಗಳು ಬೇರೆ ಇದ್ದುದು ತಿಳಿಯುತ್ತದೆ.

ಹೀಗೆ ಮತಧರ್ಮಗಳಿಂದಲೂ ವಿಭಿನ್ನ ಜಾತಿಗಳುಂಟು. ಜನರಾಡುವ ಮಾತಿನಿಂದಾಗಿಯೂ, ಹೊರಗಿನಿಂದ ವಲಸೆ ಬಂದ ಜನಗಳು ವಿಭಿನ್ನ ಜಾತಿಯವರೆನಿಸಿಕೊಂಡರು.

ಭಾರತಕ್ಕೆ ದಂಡೆತ್ತಿ ಬಂದ ಇಸ್ಲಾಮಿನ ಅನುಯಾಯಿಗಳೂ ಒಂದೇ ದೇಶದಿಂದ ಬಂದವರಲ್ಲ. ಅಲ್ಲದೆ ಅವರು ಇಸ್ಲಾಮಿನ ಎರಡೋ ಮೂರೋ ಪಂಥಗಳಿಗೆ ಸೇರಿದವರು. ಅರೇಬಿಯ, ಅಬಿಸೀನಿಯ, ಮೊರಾಕೋ, ಅಫ್ಘಾನಿಸ್ಥಾನ ಮತ್ತು ಪರ್ಷಿಯ ದೇಶಗಳಲ್ಲಿ ನೆಲೆಸಿ, ಅಲ್ಲಿನ ಜನಗಳ ಅಂಗ ಚಹರೆಯನ್ನು ಹೊತ್ತು ಬಂದ ಜನರು ಭಾರತಕ್ಕೆ ದಂಡೆತ್ತಿ ಬಂದ ತುರ್ಕರ ಪಡೆಗಳಲ್ಲಿ ಸೇರಿಕೊಂಡಿದ್ದರು. ಅವರೆಲ್ಲ ಮುಸ್ಲಿಮರೆನಿಸಿದ್ದರೂ ಅವರ ಶರೀರ ಲಕ್ಷಣಗಳು ವಿಭಿನ್ನ ಕುಲ ಮೂಲಗಳನ್ನು ತೋರಿಸುತ್ತವೆ. ಅಂಥವರು ಸಾಕಷ್ಟು ದೊಡ್ಡ ಸಂಖ್ಯೆಯಲ್ಲಿ ಭಾರತಕ್ಕೆ ದಂಡೆತ್ತಿ ಬಂದು ಇಲ್ಲಿನ ಬೇರೆ ಬೇರೆ ಊರುಗಳಲ್ಲಿ ನೆಲೆಸಿ, ಇಲ್ಲಿನವರೊಡನೆ ವಿವಾಹ ಸಂಬಂಧ ಬೆಳೆಯಿಸಿದರು. ಆಗ ಸ್ವಾಭಾವಿಕವಾಗಿಯೇ, ಅವರ ಕೆಲವೊಂದು ದೈಹಿಕ ಲಕ್ಷಣಗಳು ಪ್ರತ್ಯೇಕ ಜನಾಂಗವೆಂಬಂತೆ ಕಾಣಿಸುವುದು ಸಹಜ. ಉತ್ತರ ಕನ್ನಡದ ನವಾಯತರು ಇಂದು ಇಸ್ಲಾಮ್ ಧರ್ಮದ ಅನುಯಾಯಿಗಳಾಗಿದ್ದಾರೆ. ಆದರೆ ಅವರು ವಲಸೆ ಬಂದದ್ದು ಪರ್ಷಿಯ ಸರಹದ್ದಿನಿಂದ. ಇಸ್ಲಾಮು ಧರ್ಮೀಯರ ಧಾಳಿಗೆ ಬೆದರಿ ಉತ್ತರ ಕನ್ನಡ ಜಿಲ್ಲೆಗೆ ಓಡಿ ಬಂದರು. ಬಂದ ಮೇಲೆ ಅಲ್ಪ ಸಂಖ್ಯಾತಕರಾಗಿ ಬಂದ ಅವರ ಮಾತು ಕೊಂಕಣಿ ಸಮ್ಮಿಶ್ರವಾದ ಭಾಷೆಯಾಯಿತು. ಆ ರೀತಿಯಲ್ಲಿ ಉಳಿದುಕೊಂಡ ಅವರು ಮುಂದೆ, ತಮ್ಮ ಪೂರ್ವಜರು ಬೆದರಿ ಬಂದ ಇಸ್ಲಾಮು ಧರ್ಮವನ್ನೇ ಸ್ವೀಕರಿಸಿದರು. ಆದರೂ, ಅವರ ದೇಹ ಲಕ್ಷಣಗಳಿಂದ ಪ್ರತ್ಯೇಕ ಬಣ ವರ್ಗದವರಂತೆ ಕಾಣಿಸುತ್ತಿದ್ದಾರೆ. ಅದೇ ರೀತಿಯಲ್ಲಿ ಮೊಗಲರ ದಂಡಿನಲ್ಲಿ, ಅನಂತರ ಬಿಜಾಪುರದ ಸುಲ್ತಾನರ ದಂಡಿನಲ್ಲೂ ಸೇರಿಕೊಂಡು ಕರ್ನಾಟಕಕ್ಕೆ ಬಂದು ನೆಲೆಸಿದ ಸಿದ್ಧಿಯರು ಕರಿಮೈಯ, ಗುಂಗುರು ಕೂದಲಿನ ಜನಗಳು ಒಂದು ಪ್ರತ್ಯೇಕ ಗಣವಾಗಿ ಉಳಿದುಕೊಂಡರು. ಅವರಲ್ಲೇ ಕೆಲವರು ಕ್ರೈಸ್ತರಾದರು, ಕೆಲವರು ಮಹಮ್ಮದೀಯರಾದರು. ಇನ್ನೂ ಕೆಲವರು ಉತ್ತರ ಕನ್ನಡ ಜಿಲ್ಲೆಯಲ್ಲಿ ಬಾಳಿ ಬದುಕಿ, ಅಲ್ಲಿನ ಕೆಳವರ್ಗದ ದೈವ, ದೇವ್ವಗಳನ್ನು ನಂಬತೊಡಗಿದರು. ಸಮಾನ ಲಕ್ಷಣಗಳುಳ್ಳ ಸಿದ್ಧಿಯರ ಬಳಗವೇ ಇಂದು ಜಾತಿ ದೃಷ್ಟಿಯಿಂದ ಮೂರು ವಿಭಿನ್ನ ಬಣಗಳಾಗಿ ಒಡೆದದ್ದನ್ನು ಕಾಣುತ್ತೇವೆ.

ಈ ಉದಾಹರಣೆ ಯಾವತ್ತು ಭಾರತಕ್ಕೂ ಅನ್ವಯಿಸಬಹುದು. ಕರ್ನಾಟಕಕ್ಕಂತು ಧಾರಾಳವಾಗಿ ಅನ್ವಯಿಸಬಹುದು. ತಾವು ಪ್ರತ್ಯೇಕವೆಂದು ಉಳಿದುಕೊಂಡು, ಅನ್ಯರೊಡನೆ ವಿವಾಹ ಸಂಪರ್ಕ ಬೆಳೆಯಿಸದ ಯಾವುದೇ ಜಾತಿಯಿರಲಿ ಅದು ಸಮಾಜದಲ್ಲಿ ಕೀಳಿರಲಿ, ಮೇಲಿರಲಿ ಅದನ್ನು ನಾವು ಪರಿಶೀಲಿಸಿದರೆ ಅಂಗಲಕ್ಷಣಗಳಲ್ಲಿ ಅವರು ವಿಭಿನ್ನ ಮಾನವ ಕುಲಗಳ ಸಂಕರದಿಂದ ಉಂಟಾದವರೆಂಬುದನ್ನು ಗುರುತಿಸಬಹುದು. ಅತ್ತ ಗುಂಪಿನ ಒಳಗೇ ವಿವಾಹವಾಗುತ್ತ ಬಂದುದರಿಂದ ಸಮಾನ ಲಕ್ಷಣಗಳನ್ನೂ ಕಾಣಬಹುದು.

ಹಾಗೆ ಕೇಳಹೋದರೆ, ಅನಾದಿಕಾಲದ ಆರ್ಯರಿಂದ ಅಥವಾ ಅನಾದಿಕಾಲದ ದ್ರಾವಿಡರಿಂದ, ಮುಂದಣ ಎರಡೋ ಮೂರೋ ಸಾವಿರ ಅವಧಿಯ ಉದ್ದಕ್ಕೂ, ಒಂದೇ ಕುಲ ಮೂಲದಿಂದ ಹುಟ್ಟಿದವರೋ, ಒಂದೇ ಧರ್ಮವನ್ನು ಹಿಂದಿನಿಂದ ಅನುಸರಿಸುತ್ತ ಬಂದವರೋ, ಬಹಳ ವರ್ಣಸಂಕರವಿಲ್ಲದ ಅಪ್ಪಟ ಜಾತಿಯವರು ನೂರಕ್ಕೆ ಒಬ್ಬನಂತೆಯೂ ಸಿಗಲಾರರು.

ತಮ್ಮ ತಮ್ಮ ಹಿರಿಯರು ಮೂರು ನಾಲ್ಕು ಶತಮಾನಗಳ ಹಿಂದೆ ಎಲ್ಲಿದ್ದರು ಎಲ್ಲಿಂದ ಇಂದು ತಾವು ಇರುವಲ್ಲಿಗೆ ಬಂದರು ಎಂಬ ವಿಚಾರ ಜನರಿಗೆ ತಿಳಿಯದಿದ್ದುದರಿಂದ, ಕೆಲವೇ ತಲೆಮಾರುಗಳ ಈಚೆ ನಿಂತ ತಾವೆಲ್ಲರೂ, 'ವಿಶುದ್ಧ ಕುಲ'ದವರು ಎಂಬ ಭ್ರಮೆ ಹುಟ್ಟುವುದು ಸಹಜ. ಅದರ ಸಾಮಾಜಿಕ ಲಾಭವನ್ನು ಪಡೆಯುವುದಕ್ಕೋ ಉಳಿಸಿಕೊಳ್ಳುವುದಕ್ಕೋ ನಾವು ಕಾತರರಾದಂತಿದೆ.

ಜಗತ್ತಿನ ಯಾವತ್ತು ಮಾನವ ಕುಲ ಒಂದೇ ಮೂಲದಿಂದ ಉದಯಿಸಿತಾದರೆ, ಅದರಿಂದ ಕವಲೊಡೆದು ವಿಭಿನ್ನ ದೇಶಗಳನ್ನು ಸೇರಿ ಶತಶತಮಾನಗಳ ಕಾಲ ತೊಳಲಾಡಿ, ಬೇರೆ ಬೇರೆ ಗುಂಪು ಕಟ್ಟಿಕೊಂಡು ಅಥವಾ ಗುಂಪಿಗೆ ಬದ್ಧವಾಗಿ, ನಾವು ಇಂದು ಬಾಳುತ್ತಿದ್ದರೂ, ಮನುಷ್ಯರ ಜೀವನದ ಸಮಸ್ಯೆಗಳಲ್ಲವೂ ಒಂದೇ. ಅದು ನಾಡು, ನುಡಿ, ಮತ, ಧರ್ಮಗಳಿಂದ ಬೇರೆಯಾಗಿ ಕಾಣಿಸಿದರೂ– ಬೇರೆಯಲ್ಲ. ಸಂಪತ್ತಿನ ಅನುಕೂಲತೆ, ಅನಾನುಕೂಲತೆಗಳಿಂದ ಹೆಚ್ಚುಕಡಿಮೆಯಾಗಿ ಕಾಣಿಸಿದರೂ ಅದು ಬೇರೆಯಲ್ಲ.

# ಕರ್ನಾಟಕದ ಪ್ರಾಗಿತಿಹಾಸ

ಡಾ. ಬಿ.ಕೆ. ಗುರುರಾಜ ರಾವ್

ಭಾರತದ ಭೂಶಿರದ ಪ್ರಾಚೀನತಮ ಭೂಖಂಡವಾದ ಕರ್ನಾಟಕದ ನೆಲವು ಪ್ರಾಕ್- ಪ್ರಾಚೀನ ಮಾನವನ ಬಹು ಕಾಲದ ವಸತಿಯಾಗಿತ್ತು. ಉತ್ಖನನ ಸಂಶೋಧನೆಯಿಂದ ಕಂಡು ಬಂದದ್ದೇನೆಂದರೆ, ಪ್ರಾಕ್- ಪ್ರಾಚೀನ ಮಾನವನ ಆಗಮನ ಕಾಲದಿಂದಲೂ ಕರ್ನಾಟಕದಲ್ಲಿ ಅವನ ಉತ್ಕ್ರಾಂತಿಯ ವಿವಿಧ ಘಟ್ಟಗಳಲ್ಲಿ ಅವನ ಸಂತತಿ ಅವಿಚ್ಛಿನ್ನ ಪರಂಪರೆ ಭಾರತದ ಇನ್ನಿತರ ನಾಡುಗಳಲ್ಲಿ ಇರುವಷ್ಟೇ ಸ್ಪಷ್ಟವಾಗಿ ಕರ್ನಾಟಕದಲ್ಲೂ ಮೂಡಿ ಬಂದಿದೆ.

ಭಾರತದಲ್ಲಿಯ ಮಾನವ, ವಿಶೇಷತಃ ಕರ್ನಾಟಕದಲ್ಲಿಯ ಮಾನವನ ಪ್ರಾಚೀನತ್ವವು ಅಜಮಾಸು ಕ್ರಿ. ಪೂ. ೫,೦೦೦,೦೦೦ದಿಂದ ಶುರುವಾಗುತ್ತದೆಯೆಂದು ಇತ್ತೀಚೆಗೆ ಗುರುತಿಸಲಾಗಿದೆ. ಪ್ರಾಗೈತಿಹಾಸಿಕ ಉತ್ಕ್ರಾಂತಿಯೆಂದು ಗುರುತಿಸಲಾದ ಘಟ್ಟಗಳು ಇವು: ಪ್ರಾಕ್ – ಪಾಷಾಣ ಯುಗ (ಇದರಲ್ಲಿ ಐದು ಘಟ್ಟಗಳು ಇವೆ: ಪೂರ್ವಿಕ, ಮಧ್ಯ ಮತ್ತು ಉತ್ತರ, ಮಧ್ಯ ಮತ್ತು ನವಪಾಷಾಣ ಯುಗಗಳೆಂದು) ನಂತರ ಬಳಪ ಯುಗ, ಅಲ್ಲದೆ ಪರ್ಯಾಯ ಯುಗ, ನಂತರ ಲೋಹ ಯುಗ. ಈ ಉದ್ಯಮಗಳ ಹಂಗಾಮಿ ಕಾಲ ನಿರ್ಣಯವನ್ನು ಉತ್ಖನನ ಶಾಸ್ತ್ರ ಮತ್ತು ವಿಜ್ಞಾನಗಳ ಆಧಾರದಿಂದ ಹೀಗೆ ಮಾಡಲಾಗಿದೆ:

೧. ಪುರಾ ಶಿಲಾಯುಗ:
- ೧) ಪೂರ್ವಪುರಾ ಶಿಲಾಯುಗ –
  ಕ್ರಿ. ಪೂ. ೫,೦೦೦,೦೦೦ ದಿಂದ ಕ್ರಿ. ಪೂ. ೫೦,೦೦೦
- ೨) ಮಧ್ಯಪುರಾ ಶಿಲಾಯುಗ:
  ಕ್ರಿ. ಪೂ. ೫೦,೦೦೦ದಿಂದ ಕ್ರಿ. ಪೂ. ೨೦,೦೦೦
- ೩) ಉತ್ತರ ಪುರಾ ಶಿಲಾಯುಗ –
  ಕ್ರಿ. ಪೂ. ೨೦,೦೦೦ದಿಂದ ಕ್ರಿ.ಪೂ. ೧೦,೦೦೦

೨. ಮಧ್ಯ ಶಿಲಾಯುಗ:
  ಕ್ರಿ. ಪೂ. ೧೦,೦೦೦ದಿಂದ ಕ್ರಿ.ಪೂ. ೨,೦೦೦

೩. ನವ ಶಿಲಾಯುಗ:
- ೧) ಮೂಲ ನವ ಶಿಲಾಯುಗ –
  ಕ್ರಿ. ಪೂ. ೩,೫೦೦ರಿಂದ ಕ್ರಿ. ಪೂ. ೨,೦೦೦
- ೨) ನವ ಶಿಲಾ–ಬಳಪ ಯುಗ –
  ಕ್ರಿ. ಪೂ. ೨,೫೦೦ರಿಂದ ಕ್ರಿ. ಪೂ. ೮೦೦

೪. ಕಬ್ಬಿಣ ಯುಗ: ಮಹಾ ಶಿಲಾ ಸಂಸ್ಕೃತಿ.
  ಕ್ರಿ. ಪೂ. ೧,೦೦೦ದಿಂದ ಕ್ರಿಸ್ತ ಯುಗದ ಪ್ರಾರಂಭದ ವರೆಗೆ.

ಅಲ್ಲದೆ ಕರ್ನಾಟಕದಲ್ಲಿ ಆಗಲೇ ಇಡೀ ಭಾರತದ ಭೂಶಿರದಲ್ಲಾಗಲೀ, ಪುರಾಶಿಲಾ ಮಾನವನ ಬಗ್ಗೆ ನಮ್ಮ ಜ್ಞಾನ ಇನ್ನೂ ಪ್ರಾರಂಭಾವಸ್ಥೆಯಲ್ಲಿ ಇದೆ ಎಂಬುದನ್ನು ಅರಿಯಬೇಕು. ಅವನು ರಚಿಸಿದ ಕಲ್ಲು ಸಾಮಗ್ರಿಗಳನ್ನು ನಾವು ಹೇರಳವಾಗಿ ಸಂಗ್ರಹಿಸಿದ್ದೇವೆ. ಆದರೆ ಅವನು ರಚಿಸಿದ ಕಾಷ್ಠ ಸಾಮಗ್ರಿಗಳನ್ನಾಗಲೀ, ಅಸ್ಥಿ ಸಾಮಗ್ರಿಗಳನ್ನಾಗಲೀ ನಾವು ಇನ್ನೂ ಅಷ್ಟೇ ಪ್ರಮಾಣದಲ್ಲಿ ಪಡೆದಿಲ್ಲ. ಕಲ್ಲು ಸಾಮಗ್ರಿಗಳು ಉಳಿದುಕೊಂಡ ಕಾರಣವೇನೆಂದರೆ ಭೂಮಧ್ಯ ಪಟ್ಟಿಯ ವಾಯಗುಣ. ನಮ್ಮ ಎಲ್ಲಾ ತರ್ಕಗಳಿಗೆ ಆಧಾರವೆಂದರೆ ಅವನು ಬಿಟ್ಟು ಹೋದ ಕಲ್ಲು ಉಪಕರಣಗಳಷ್ಟೆ. ಏಕೆಂದರೆ, ಅವನ ಶಾರೀರಿಕ ಅವಶೇಷಗಳಾಗಲಿ, ಅವನ ವಾಸ ಸ್ಥಳಗಳ ವಿವರಗಳಾಗಲಿ ನಮಗೆ ಬಹಳಷ್ಟು ತಿಳಿದಿಲ್ಲ. ಇದಕ್ಕೆ ಅಪವಾದಗಳೆಂದರೆ ಕರ್ನಾಟಕದ ಗುಲ್ಬರ್ಗಾ ಜಿಲ್ಲೆಯ ಹುಣಸಗಿ ಗ್ರಾಮದ ಒಂದು ಪ್ರಾಗಿತಿಹಾಸ ಪ್ರದೇಶ. ಅಥವಾ ಮಧ್ಯಪ್ರದೇಶದ ರಾಯಿಸೇನ ಜಿಲ್ಲೆಯ ಗ್ರಾಮ ಬಿಂಬೇಟಕಾದ ಬಳಿ ಇನ್ನೊಂದು ಪ್ರಾಗಿತಿಹಾಸ ಸ್ಥಾನ. ಇಂಥ ಬಂಧನಕಾರಿ ಆತಂಕಗಳಿರುವಾಗ ಕರ್ನಾಟಕದ ಪ್ರಾಗಿತಿಹಾಸದ ಚಿತ್ರಣ ಮಸುಕಾಗುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದಾಗ್ಯೂ ಭಾರತದ ಮತ್ತು ಇತರ ದೇಶಗಳ ಇತರ ಸಮಾನ ಸಾಂಸ್ಕೃತಿಕ ಸೀಮಾರೇಖೆಗಳ ಪುರಾವೆಗಳನ್ನು ಬಳಸಿಕೊಂಡು ನಮ್ಮ ಚರಿತ್ರೆಯ ರೇಖಾ ಚಿತ್ರಣಕ್ಕೆ ತುಸುವಾದರೂ ರಕ್ತ ಮಾಂಸಗಳನ್ನು ತುಂಬಬಹುದು.

### ಪೂರ್ವ ಪುರಾ ಶಿಲಾಯುಗ

ಭೂಗರ್ಭ ಮತ್ತು ಪರಿಸರಗಳ ಅನುಕೂಲತೆಗಳ ಸಹಾಯ ಪಡೆದು ಕರ್ನಾಟಕದ ಕೆಲವು ಸ್ಥಳಗಳಲ್ಲಿ ಪುರಾ ಶಿಲಾಯುಗೀನ ಮಾನವ ತಲೆಯೆತ್ತಿದನೆಂದು ತೋರುತ್ತದೆ. ಹಳೆಯ ಮೈಸೂರು ಸಂಸ್ಥಾನದ ಜಿಲ್ಲೆಗಳಾದ ತುಮಕೂರು, ಚಿಕ್ಕಮಗಳೂರು, ಶಿವಮೊಗ್ಗ, ಚಿತ್ರದುರ್ಗ, ಹೈದರಾಬಾದ್ ಕರ್ನಾಟಕದ ಬಳ್ಳಾರಿ – ಗುಲಬರ್ಗಾ ಜಿಲ್ಲೆಗಳು ಮುಂಬೈ ಕರ್ನಾಟಕದ ವಿಜಾಪುರ–ಬೆಳಗಾಂವಿ ಜಿಲ್ಲೆಗಳು ಇಂಥ ಪ್ರದೇಶಗಳು. ಈ ಎಲ್ಲ ಪ್ರದೇಶಗಳಲ್ಲಿ ಮಾನವನ

ಪ್ರಥಮ ಕರಕುಶಲ ಸಾಮಗ್ರಿಗಳು-ಅಷ್ಯೂಲಿಯನ್ ಕೈಗೊಡಲಿಗಳು, ಸೀಳುವ ಉಳಿಗಳು, ಅವುಗಳಿಗೆ ಸಂಬಂಧಪಟ್ಟ ಕಲ್ಲುಚೂರಿನ ಸಾಧನಗಳು ದೊರೆಕುತ್ತವೆ. ಈ ಕಾಲದ ಮಾನವ ಮುಖ್ಯತ : ಆಹಾರ ಸಂಗ್ರಾಹಿ. ತುಸುಮಟ್ಟಿಗೆ ಕಾಡುಮೃಗಗಳ ಬೇಟೆಗಾರನೂ ಹೌದು. ಅನಿಬಿಡ ಅರಣ್ಯ ಪ್ರದೇಶಗಳಲ್ಲೂ, ನಿರಂತರ ನೀರು ಸಿಕ್ಕುವ ಜಾಗಗಳಲ್ಲೂ (ಉದಾ: ನದೀತೀರ, ಸರೋವರ-ಕೆರೆಗಳ ತಟಾಕಗಳು, ಮುಂತಾದವು.) ಅವನು ವಸತಿ ಮಾಡಿದ. ಇಂಥಲ್ಲಿ ಆದಿ ಮಾನವನಿಗೆ ಕುಡಿಯುವ ನೀರು ಸಿಕ್ಕುವುದು ಖಾತರಿ. ಇಷ್ಟೇ ಅಲ್ಲ, ಅವನಿಗೆ ತಿನ್ನಲಿಕ್ಕೆ ಸಸ್ಯಗಳ ಆಹಾರ, ಅಲ್ಲದೆ ನೀರಿಗಾಗಿ ಬಂದ ಪಶುಗಳ ಶಿಕಾರಿಯಿಂದ ಮಾಂಸಾಹಾರ, ಇವು ದೊರಕಬಹುದಾಗಿತ್ತು. ಕರ್ನಾಟಕದ ಪುರಾ ಶಿಲಾಯುಗೀನ ಮಾನವ ಗುಹೆಗಳಲ್ಲಿ ವಸತಿ ಮಾಡಿದ್ದು ಕಮ್ಮಿ. ಮಧ್ಯಭಾರತ ಅಥವಾ ನೈರುತ್ಯ ಯುರೋಪಿನ ಇಂಥ ಮನುಷ್ಯ ಗುಹಾವಾಸಿ. ಅಲ್ಲಿ ನೈಸರ್ಗಿಕ ಗುಹೆಗಳು ವಿಪುಲ; ಆದರೆ ಕರ್ನಾಟಕದಲ್ಲಿ ಅಲ್ಲ.

ಕರ್ನಾಟಕದ ಈ ಕಾಲದ ಉಷ್ಣವಲಯ ವಾಯುಗುಣವನ್ನು ಇದ್ದ ಪುರಾವೆಗಳಿಂದ ಗುರುತಿಸಬಹುದು ಬೋಸ್ ನಾಮೊರಿಕಸ್ ಜಾತಿಯ ಹಸುಗಳ ಫಾಸಿಲೀಕೃತ ಅಸ್ಥಿಪಂಜರಗಳ ಪಳೆಯುಳಿಕೆಗಳು ನೆರೆಯ ಪ್ರದೇಶಗಳಾದ ಮಹಾರಾಷ್ಟ್ರ-ಆಂಧ್ರಗಳ ಫಾಸಿಲ್ ಅವಶೇಷಗಳನ್ನು ಹೋಲುತ್ತವೆ. ಆಗ ಮಳೆ ವಿಪುಲವಾಗಿ ಬೀಳುತ್ತಿತ್ತು. ಭೂಮಿಯ ಮೇಲೆ ಒಳ್ಳೆಯ ಕಾಡಿನ ಉತ್ಪಾದನವಿತ್ತು. ತರತರದ ಹಣ್ಣು ಹಂಪಲು, ಖಾದ್ಯ ಬೇರು-ಗೆಣಸುಗಳು ಜೊತೆಗೆ ವಿಧವಿಧ ಅರಣ್ಯಕ ಖಾದ್ಯಗಳಾದ ಜೇನು ಮುಂತಾದವು ಲಭ್ಯವಿದ್ದುವು. ಈ ಅಡವಿಗಳಲ್ಲಿ ದೊಡ್ಡ ಬೇಟೆ ಮೃಗಗಳಾದ ಆನೆ, ಘೇಂಡಾಮೃಗ, ನೀರಾನೆ, ಕಾಡುಕೋಣ ಮುಂತಾದವು ವಾಸವಾಗಿದ್ದವು. ಭಾರತದ ಪ್ರಾಂತ್ಯಗಳಲ್ಲಿಯಂತೆ ಇಲ್ಲಿಯೂ ಆದಿಮಾನವನು ಗುಂಪು ಕಟ್ಟಿಕೊಂಡು, ಚೂಪುಗಲ್ಲಿನ ಮೊನೆಯುಳ್ಳ ಈಟಿ, ಭಲ್ಲೆಗಳಿಂದ ಬೇಟೆಯಾಡುತ್ತಿದ್ದನು. ಭಲ್ಲೆಗಳಿಗೆ ಒಂದೊಂದು ಬಾರಿ ಎಲುವಿನ ತುದಿಯೂ ಇರುತ್ತಿತ್ತು. ಹೀಗೆ ಕೊಂದ ಮೃಗಗಳ ಚರ್ಮಗಳನ್ನು ಕೈಗೊಡಲಿ ಅಥವಾ ಕಲ್ಲು ಚಿಪ್ಪುಗಳ ಸಾಧನಗಳಿಂದ ಸುಲಿದು, ಮಾಂಸವನ್ನು ಚರ್ವಣಕ್ಕೆ ತಕ್ಕ ತುಣುಕುಗಳಾಗಿ ಕಡಿಯುತ್ತಿದ್ದರು. ಚರ್ಮ ಹದಗೊಳಿಸಿ ಅಂಗ ಹೊದಿಕೆಯಾಗಲೀ ತಾತ್ಕಾಲಿಕ ವಸತಿಗೆ ಡೇರೆಯೆಂದಾಗಲಿ ಛಾವಣಿಯೆಂದಾಗಲಿ ಬಳಸುತ್ತಿರಬೇಕು. (ಕಲ್ಲಿನ) ಮಚ್ಚುಗಳನ್ನು ಬಳಸಿ ಗಿಡದ ಟೊಂಗೆಗಳನ್ನು ಕಡಿದು ಈಟಿ-ಭಲ್ಲೆಗಳನ್ನಾಗಲಿ ದೊಣ್ಣೆಗಳನ್ನಾಗಲಿ ಮಾಡಿ, ತಿಕ್ಕುಗಲ್ಲುಗಳನ್ನು ಬಳಸಿ ಅವುಗಳನ್ನು ಸಾಪುಗೊಳಿಸುತ್ತಿದ್ದರು. ಇವರು ಬೆಂಕಿಯನ್ನು ಬಲ್ಲವರು. ಪಂಜಿಗಾಗಿ, ಚಳಿಯಲ್ಲಿ ಮೈಕಾಸಿಕೊಳ್ಳುವುದಕ್ಕಾಗಿ, ಹಿಂಸ್ರ ಪಶುಗಳನ್ನು ಬೆದರಿಸಿ ಓಡಿಸುವುದಕ್ಕಾಗಿ, ಮತ್ತು ತಮ್ಮ ಕಟ್ಟಿಗೆಯ ದೊಣ್ಣೆಗಳಿಗೆ ಮೊನಚು ತರುವದಕ್ಕಾಗಿ, ಬೆಂಕಿ ಬಳಸುತ್ತಿದ್ದರು. ಈ ಪ್ರಾಚೀನ ಕಾಲದಲ್ಲಿ ಅವರು ಮಾಂಸವನ್ನು ಬೇಯಿಸುತ್ತಿದ್ದರೋ ಇಲ್ಲವೊ ಖಂಡಿತ ಹೇಳುವುದು ಅಸಾಧ್ಯ. ಹಾಗಿದ್ದರೆ, ಬೆಂಕಿ ಹೊತ್ತಿಸಿ ಮಾಂಸ ಮೊತ್ತವನ್ನು ಅದರ ಮೇಲೆ ನೆಲದಲ್ಲಿ ಹೂಳಿದ ಕಟ್ಟಿಗೆಯ ಮೂರು ತೊಲೆಗಳ ತ್ರಿಕೋಣಾಕಾರದ ಹೊಡಿಕೆಯಿಂದ ತೂಗುಬಿಟ್ಟು ಸುಡುವ ವಿಧಾನವನ್ನೇ ಬಳಸುತ್ತಿರಬೇಕು.

### ಮಧ್ಯ ಶಿಲಾಯುಗ

ಪುರಾ ಪಾಷಾಣ ಯುಗದ ಮುಂದಿನ ಘಟ್ಟವಾದ ಮಧ್ಯ ಪಾಷಾಣ ಯುಗದಲ್ಲಿ ವಾಯುಗುಣದಲ್ಲಿ ಗಮನೀಯ ಪಲ್ಲಟ ತೋರಿಬರುತ್ತದೆ. ವೃಷ್ಟಿ ಕಡಿಮೆ, ಉಷ್ಣ ಹೆಚ್ಚು. ಇದರ ಪರಿಣಾಮವಾಗಿ ಇಡೀ ಉಪಖಂಡದಲ್ಲೇ ಅರಣ್ಯದ ಛಾವಣಿ ಇನ್ನೂ ವಿರಲವಾಯಿತು. ಇದರ ಜೊತೆ ಪರಿಣಾಮ ಪಶುಜೀವನದಲ್ಲಿ ಕೂಡ. ಬೃಹದಾಕಾರದ ಪಶು ಜಾತಿಗಳು ಮೆಲ್ಲನೆ ಮಾಯವಾಗುತ್ತ ಹೋಗಿ ಚಿಕ್ಕ, ತೀವ್ರಗತಿಯ ಹರಿಣ, ಮೊಲಗಳಂಥ ಪಶುಜಾತಿ ಅವುಗಳ ಸ್ಥಾನ ತುಂಬಿದುವು. ಪಶುಜಾತಿಯ ಈ ಪಲ್ಲಟದ ಪರಿಣಾಮವಾಗಿ ಬೇಟೆಯ ವೈಖರಿಯೂ ಬದಲಾಗಿದೆ. ಜಡ ಆಯುಧಗಳೊಂದಿಗೆ ಸಾಮೂಹಿಕ ಬೇಟೆಯ ರೀತಿ ಮಾಯವಾಗುತ್ತ, ಚಪಲವಾಗಿ ಬೆನ್ನಟ್ಟಿ ಓಡುವ ವ್ಯಕ್ತಿಶಃ ಅಥವಾ ಚಿಕ್ಕ ಗುಂಪುಗಳು ಚಿಕ್ಕ, ಕಡಿಮೆ ತೂಕದ, ಆದರೆ ಹೆಚ್ಚು ಪರಿಣಾಮಕಾರಿಯಾದ ಸಂಕೀರ್ಣ ಆಯುಧಗಳ ಬಳಕೆಯ ಬೇಟೆ ಪ್ರಚಲಿತವಾಯಿತು. ಈ ಆಯುಧಗಳು ಚಿಕ್ಕವೂ, ಸಂಕೀರ್ಣವೂ ಕಡಮೆ ತೂಕದವೂ ಆಗಿದ್ದು ಕಲ್ಲಿನ ಚಿಪ್ಪುಗಳ ಮೊನೆ, ಕಟ್ಟಿಗೆ ಅಥವಾ ಎಲಬುಗಳ ಹಿಡಿಕೆ ಇದ್ದವುಗಳು. ಈ ಆಯುಧಗಳನ್ನು ದೊಡ್ಡ ಬೆಣಚುಗಲ್ಲಿನ ಬಂಡೆಗಳಿಂದ ರಚಿಸುವುದು ಸಾಧ್ಯವಿಲ್ಲ. ಇವಕ್ಕೆ ಸಾಪು ಕಣದ ಕಲ್ಲುಗಳಾದ ಜಾಸ್ಪರ್; ಬೆಣಚುಗಲ್ಲು ಅಥವಾ ರಂಗೋಲಿಕಲ್ಲು ಮುಂತಾದ ಸಾಮಗ್ರಿಗಳನ್ನು ಆಯ್ದು, ಅವುಗಳ ಹರಿತ ಪಕಳೆಗಳನ್ನು ಸೀಳಿ ತೆಗೆಯುವ ವಿಧಾನ ಬಳಸಲಾಯಿತು. ಸ್ವಾಭಾವಿಕವಾಗಿ ಈ ಆಯುಧಗಳಿಗಾಗಿ ಕಟ್ಟಿಗೆಯ ಮತ್ತು ಎಲಬುಗಳ ಬಳಕೆ ವಿಶೇಷ ಪ್ರಮಾಣದಲ್ಲಿ ಇದ್ದಿರಲೇಬೇಕು. ಆದರೆ ಅವು ನಮಗೆ ಕಾಣ ಸಿಗುವದಿಲ್ಲ. ಸಿಕ್ಕುವ ಆಯುಧಗಳೆಂದರೆ ಬಗೆಬಗೆಯ ತಿಕ್ಕುಗಲ್ಲುಗಳು, ತೂತು ಮಾಡುವ ಮೊನಚುಗಲ್ಲುಗಳು, ಮೊನೆಯುಳ್ಳ ಚಕ್ಕೆಗಳು, ಅಲ್ಲದೆ ಚಪಗೊಡಲಿ, ಗಟ್ಟಿ ಕಲ್ಲಿನಲ್ಲಿ ಮಾಡಿದ ಕಲ್ಲು ಮಚ್ಚುಗಳು ಸಿಕ್ಕುತ್ತವೆ. ಕಡಿಯುವ ಆಯುಧಗಳು ತೀರ ಕಡಿಮೆ.

ವಾಯುಗುಣ ಒಣ, ವೃಷ್ಟಿಕಮ್ಮಿ, ಅರಣ್ಯಗಳ ಉತ್ಪಾದನೆ ಹೆಚ್ಚು ವಿರಲ, ನದೀ ತೀರದ ಪಾತ್ರದಲ್ಲಿ ಇರುವ ಉಸುಕಿನ ಮೇಲೆ ಚಿಕ್ಕ ದುಂಡು ಹರಳುಗಳು, ಇಂಥ ಪರಿಸರ ಈ ಕಾಲಕ್ಕೆ ನೆಲೆಗೊಂಡಿತ್ತು. ಇದರ ಪುರಾವೆಕಾಣಸಿಕ್ಕುವದು ತುಮಕೂರು ಜಿಲ್ಲೆಯ ಕಿಬ್ಬನ ಹಳ್ಳಿಯ ಬಳಿಯ ನೆಲೆ; ಬಳ್ಳಾರಿಯ ಜಿಲ್ಲೆಯ ನಿಟ್ಟೂರು ಬಳಿಯಲ್ಲಿ ತುಂಗಭದ್ರಾ ನದಿಯ ತೀರದ ಸ್ಥಾನ, ಬೆಳಗಾವಿ ಜಿಲ್ಲೆಯ ಘಟಪ್ರಭಾ ದಂಡೆ, ವಿಜಾಪೂರ ಜಿಲ್ಲೆಯ ಮಲಪ್ರಭಾ ತೀರದ ನೆಲೆಗಳು. ನಿಟ್ಟೂರಿನ ಬಳಿಯಲ್ಲಿ ದೊರಕುವ ಹಸು ಮತ್ತು ಆನೆಗಳ ಅಸ್ಥಿ ಅವಶೇಷಗಳಿಗೂ, ಆಂಧ್ರ-ಮಹಾರಾಷ್ಟ್ರಗಳಂಥ ನೆರೆ ನಾಡಿನಲ್ಲಿ ಸಿಕ್ಕುವ ಅವಶೇಷಗಳಿಗೂ ನಿಕಟ ಸಂಬಂಧವಿದೆ. ಇಂಗಾಲ-೧೪ ಪರೀಕ್ಷೆಗೆ ಪುಣೆಯ ಬಳಿಯಲ್ಲಿ ಮುಟಾನಗರದ ಬಳಿ ದೊರಕಿದ, ಮಧ್ಯ ಪಾಷಾಣ ಯುಗದ ನೆಲಪದರಿನಲ್ಲಿ ದೊರಕಿದ ಕಾರ್ಬನೀಭವಿತ ಕಟ್ಟಿಗೆಯನ್ನು ಒಳಪಡಿಸಲಾಗಿ ದೊರಕಿದ ಅಜಮಾಸು ಕಾಲ ನಿರ್ಣಯ ಸುಮಾರು ಕ್ರಿ. ಪೂ. ೩೯,೦೦೦–೧೭,೦೦೦. ಪಾಷಾಣ ಯುಗದ ಕೈಗಾರಿಕೆಯ ಈ ಘಟ್ಟವನ್ನು ಫ್ರಾನ್ಸ್ ಮತ್ತು ಪಶ್ಚಿಮ ಯೂರೋಪಿನ ಮಸ್ತೇರಿಯನ್ ಮತ್ತು ಲವೊಲೋಶಿಯನ್ ಸಂಸ್ಕೃತಿಗೆ ಹೋಲಿಸಲಾಗಿದೆ. ಆಯುಧಗಳ ಪ್ರಕಾರಗಳು ಮತ್ತು ತಾಂತ್ರಿಕ ದೃಷ್ಟಿಯಿಂದ ಆದರೂ, ಸ್ಥಾನಿಕ ವಿಧಿವಿಧಾನಗಳ ಅಂತರವು ಈ ಕಾಲ ನಿರ್ಣಯದಲ್ಲೂ ಅಂತರ ಹುಟ್ಟಿಸಬಲ್ಲದೆಂಬುದು ನಿಜ.

### ಉತ್ತರ ಪುರಾ ಶಿಲಾಯುಗ

ಕರ್ನಾಟಕದ ಉತ್ತರ ಪುರಾಶಿಲಾಯುಗದ ಉದ್ಯಮಿಗಳ ಅವಸ್ಥಾಂತರದ ಬಗ್ಗೆ ಇನ್ನೂ ಹೆಚ್ಚು ವಿವರಗಳು

ತಿಳಿದಿಲ್ಲ. ಮೊನ್ನೆ ಮೊನ್ನೆಯವರೆಗೆ ಭಾರತದಲ್ಲೇ ಉತ್ತರ ಪುರಾಶಿಲಾಯುಗ ಇರಲೇ ಇಲ್ಲವೆಂದು ನಂಬಲಾಗಿತ್ತು. ಆದರೆ ಇತ್ತೀಚೆಗಿನ ವರ್ಷಗಳಲ್ಲಿ ದಪ್ಪ ಕಲ್ಲಿನ ಪಕಳೆಗಳಿಂದ ಮಾಡಿದ ಅಲಗು–ಆಯುಧಗಳು, ಕೆಲವು ಅಸ್ಥಿ–ಆಯುಧಗಳು ಈ ಕಾಲದವೆಂದು ಗುರುತಿಸಲಾಯಿತು. ತತ್ಫಲವಾಗಿ ಅಲಗು ಕೈಗಾರಿಕೆಯ ಸ್ಥಾನಗಳನ್ನು ಭಾರತದ ತುಂಬೆಲ್ಲ ಶೋಧಿಸುವ ಅಲ್ಲದೆ ಈಗಾಗಲೇ ದೊರಕಿ ವಸ್ತು ಪ್ರದರ್ಶನಾಲಯಗಳಲ್ಲಿ ಮತ್ತು ಇತರ ಪ್ರಾಣೇತಿಹಾಸ ಸಂಶೋಧನೆಯ ಸಂಸ್ಥೆಗಳಲ್ಲಿ ಸಂಗ್ರಹವಾದ ವಸ್ತುಗಳ ಪುನರಾವಲೋಕನ ಕಾರ್ಯವನ್ನು ಸಂಘಟಿತವಾಗಿ ಕೈಕೊಳ್ಳಲಾಯಿತು. ಉತ್ತರ ಪುರಾ ಶಿಲಾಯುಗದ ಅಲಗು ಕೈಗಾರಿಕೆಯ ಅತ್ಯಂತ ಮನವರಿಕೆ ಮಾಡಿಕೊಡುವ, ಅವುಗಳಿಗೆ ಸಂಲಗ್ನ ಭೂಪದರು ನಕ್ಷೆಯ ಪುರಾವೆಗಳು ಈ ನೆಲೆಗಳಲ್ಲಿವೆ. ತಿರುಪತಿಯ ಬಳಿ ರೇಣಿಗುಂಟಾ, ನಾಗಾರ್ಜುನ ಕೊಂಡದ ಬಳಿ ಯರ್ರಾಗೊಂಡ ಪೊಲೆಂ, ಕರ್ನೂಲ ಬಳಿ ಬೇಟೆಂಬರ್‌ಲಾ ಮತ್ತು ಬಿಲ್ಲಸುರ್ಗಂ, ಇವೆಲ್ಲ ಆಂಧ್ರದಲ್ಲಿವೆ. ಮಹಾರಾಷ್ಟ್ರದಲ್ಲಿ ಜಳಗಾಂ ಜಿಲ್ಲೆಯ ಪಟ್ಟೆಯಲ್ಲಿ, ಕರ್ನಾಟಕದ ಕೃಷ್ಣಾ–ಭೀಮಾ ಕೊಳ್ಳದ ಗುಲ್ಬರ್ಗಾ ಜಿಲ್ಲೆಯ ಶೋರಾಪೂರ ಬಳಿ ಮತ್ತು ಬಿಜಾಪುರ ಜಿಲ್ಲೆಯ ಕೃಷ್ಣಾ–ಭೀಮಾ ನದಿಗಳ ಹೊಳೆ ಮಧ್ಯಂತರ ಇಲ್ಲಿ ದೊರೆತ ಪುರಾವೆಯಿಂದ ಕರ್ನಾಟಕದ ಉತ್ತರ ಪುರಾ ಶಿಲಾಯುಗದ ಅಸ್ತಿತ್ವ ಸಿದ್ಧವಾಗುತ್ತದೆ. ಈ ಮೊದಲೇ ಶ್ರೀ ಎಂ. ಶೇಷಾದ್ರಿ ಸಾಲ್ವಾಡಿಗಿಯ (ಪ್ರಾಚೀನ ಸಾಲೋಟಗಿ, ವಿಜಾಪುರ ಜಿಲ್ಲೆ) ಬಳಿ ದೊರಕಿದ ಆಯುಧ ಸಂಗ್ರಹದ ಆಧಾರದ ಮೇಲಿಂದ ತರ್ಕಿಸಿದ ಉತ್ತರ ಪುರಾ ಶಿಲಾಯುಗದ ಕಲ್ಪನೆಗೆ ಈ ಶೋಧಗಳು ಬಲಕೊಡುತ್ತವೆ. ಮರಳಭಾವಿ, ಸಾಲವಡಿಗೆ, ಬನಹಟ್ಟಿ ಮತ್ತು ಹುಣಸಗಿ ನೆಲೆಗಳಲ್ಲಿ ದೊರೆವ ಈ ಅಲಗು ಮತ್ತು ಕೆತ್ತನೆಯ ಆಯುಧಗಳು ಮಧ್ಯ ಶಿಲಾಯುಗದ ಮತ್ತು ಮಧ್ಯ ಪುರಾ ಶಿಲಾಯುಗದ ಗುಂಪು ಹರಳುಗಳ ಹರಹಿನ ಪದರಿನ ತಳಭಾಗದಲ್ಲಿ ಸಿಕ್ಕುತ್ತವೆ. ಇದೇ ಪದರು ಅಭ್ಯಾಸ ಇವುಗಳ ಸಾಂದರ್ಭಿಕ ಮಹತ್ವವನ್ನು ಮನಗಾಣಿಸುತ್ತವೆ. ಕೆಂಪು ಬೆಣಚುಗಲ್ಲಿನಲ್ಲಿ ಈ ಎಲ್ಲಾ ಆಯುಧಗಳು ರಚಿತವಾಗಿದೆ. ತಾಂತ್ರಿಕ ದೃಷ್ಟಿಯಲ್ಲಿ ನೆರೆಹೊರೆಯ ರೇಣಿಗುಂಟಾ ಜಿಲ್ಲೆಯಲ್ಲಿ ದೊರಕುವ ಕಲ್ಲು ಆಯುಧಗಳಿಗಿಂತ ಕರ್ನಾಟಕದ ಈ ಆಯುಧಗಳು ತುಸು ಹಳೆಯವು. ಈ ಪ್ರಕಾರದ ಆಯುಧಗಳು ಮುಖ್ಯವಾಗಿ ಅಲಗುಗಳು, ಮೊನಚುಗಳು, ರಂಧ್ರಕಗಳು, ಮೊನಚುಳ್ಳ ತುದಿಯ ಅಲಗುಗಳು, ಮೊನೆಯ ಆನಿಗುದ್ದಿಗಳು ಮತ್ತು ವಿಶಿಷ್ಟ ರೀತಿಯ ಕೆತ್ತನೆ ಲೆಕ್ಕಣಿಕೆ ಸಾಮಗ್ರಿಗಳು, ಇವುಗಳ ತಾಂತ್ರಿಕ ಹುಂಬತನದ ಮೂಲಕವೇ ನೆರೆಹೊರೆಯ ಪ್ರದೇಶದ ಉತ್ತರ ಪುರಾ ಶಿಲಾಯುಗದ ಆಯುಧಗಳಿಗಿಂತ ಇವು ಪೂರ್ವಿಕವೆಂದು ಭಾವಿಸಲಾಗಿದೆ. ವಾಯುಗುಣ ತುಸು ಶುಷ್ಕವಾದರೂ ಮಾನವನ ಜೀವನ ಪದ್ಧತಿ ಹೆಚ್ಚು ಕಮ್ಮಿ ಮೊದಲನ ಕಾಲದಲ್ಲಿಇದ್ದಂತೆಯೇ ಇತ್ತು ಎಂದು ಭಾವಿಸಬಹುದು.

## ಪರ್ಯಾಯ ಕಾಲ

ಮಧ್ಯ ಪುರಾಶಿಲಾಯುಗೀನ ಕೈಗಾರಿಕೆಗಳ ಅವಶೇಷಗಳು ಕರ್ನಾಟಕದಲ್ಲಿ ಕಳೆದ ಐವತ್ತು ವರ್ಷಗಳಲ್ಲಿ ಗಮನಕ್ಕೆ ಬರುತ್ತಲೆ ಇವೆ. ರಾಬರ್ಟ್ ಬ್ರೂಸ್‌ಫೂಲೆನ್ ಹೇಳಿಕೆಯ ಪ್ರಕಾರ ಬಹುಕಾಲದ ವರೆಗೆ ಭಾರತದ ಪುರಾ ಶಿಲಾಯುಗ ಮತ್ತು ನವಶಿಲಾ ಯುಗದ ನಡುವೆ ಒಂದು ಮಧ್ಯಂತರ ವಿರಾಮವಿದೆಯೆಂದು ನಂಬಲಾಗಿತ್ತು. ಆಗೊಮ್ಮೆ ಈಗೊಮ್ಮೆ ಲಘು ಮತ್ತು ಸೂಕ್ಷ್ಮ ಆಯುಧಗಳು ದೊರಕುತ್ತಲೇ ಇದ್ದಾಗ್ಯೂ ಈ ನಂಬುಗೆ ಬಲವತ್ತಾಗಿತ್ತು. ಕಳೆದ ಮೂವತ್ತು ವರ್ಷಗಳಲ್ಲಿ ನಡೆದ ಉತ್ಖನನ ಮತು ಸ್ತರೀಕೃತ ಅವಶೇಷಗಳ ಅಭ್ಯಾಸದ ಫಲವಾದ ಸಿದ್ಧ ನಿಸ್ಸಂಶಯ ನಿರ್ಣಯವೆಂದರೆ ಈ ಲಘು ಶಿಲಾಉದ್ಯಮಗಳು ಪುರಾ ಶಿಲಾಯುಗದ ಅನಂತರ ರಚಿತ, ಆದರೆ ಆಹಾರೋತ್ಪಾದಕ ನವ ಶಿಲಾ ಮತ್ತು ಬಳಪದ ಸಂಸ್ಕೃತಿಗಿಂತ ಮೊದಲಿನವು–ಭಾರತದಲ್ಲಿ ಇತರ ಜಗತ್ತಿನ ಹಾಗೆಯೇ, ಕರ್ನಾಟಕದ ಬಳ್ಳಾರಿ ಜಿಲ್ಲೆಯ ಬಳಿ ಸಂಗನಕಲ್ ನೆಲೆ ನೀಡಿದ ಪುರಾವೆಯನ್ನು ನೋಡಿದರೆ ಸ್ಪಷ್ಟವಾಗುವ ನಿರ್ಣಯವೆಂದರೆ ಇಂಥ ಆಯುಧ ಸಾಮಗ್ರಿಗಳು ಉತ್ತರ ಪುರಾ ಶಿಲಾಯುಗದ ಆಯುಧಸ್ತರದ ಮೇಲ್ಭಾಗದಲ್ಲಿ ಹರಡಿವೆ. ಇವುಗಳ ಮೇಲಿನ ಸ್ಥಾನದಲ್ಲಿ ನುಣುಪು ಕೆತ್ತನೆಯ ಆಯುಧಗಳು ದೊರಕುತ್ತವೆ. (ನುಣುಪು ಕೆತ್ತನೆಯ ಆಯುಧಗಳು ಕುಂಬಾರ ಉದ್ಯಮದ ಲಕ್ಷಣಗಳು). ಇದೇ ಕಾರಣಕ್ಕಾಗಿ ಈ ಸಂಸ್ಕೃತಿಯನ್ನು ಮಧ್ಯ ಶಿಲಾ ಉದ್ಯಮ, ಇಲ್ಲವೆ ಪುರಾ ಶಿಲಾ ಮತ್ತು ನವಶಿಲಾ ಸಂಸ್ಕೃತಿಯ ಪರ್ಯಾಯ ಕಾಲದ ಘಟ್ಟವೆಂದು ಕರೆಯುವದು ಯೋಗ್ಯ.

## ಮಧ್ಯಶಿಲಾಯುಗ

ಪ್ಲಾಸ್ಟೊಸೀನ್ ಯುಗದ ನಂತರದ ಮತ್ತು ಹೊಲೊಸೀನ್ ಯುಗದ ಪ್ರಾರಂಭದಲ್ಲಿ ಮಾನವ ರಚಿಸಿದ ಉದ್ಯಮವಿದು. ವಾಯುಗುಣ ಶುಷ್ಕವಾಗುತ್ತಿತ್ತು, ವೃಷ್ಟಿ ಕಡಿಮೆಯಾಗಿತ್ತು. ಅರಣ್ಯಗಳು ಅಳಿದು ಪೊದೆ ವನ ಹೆಚ್ಚಾಗತೊಡಗಿತ್ತು. ನೀರಿನ ಶಾಶ್ವತ ಉಗಮಗಳು ಸಂಖ್ಯೆಯಲ್ಲಿ ಕಡಿಮೆಯಾಗಿದ್ದವು. ತತ್ಫಲವಾಗಿ ಮಾನವ ಹೊಸ ಒಳ ಪರಿಸರಕ್ಕೆ ಜೀವನ ಪದ್ಧತಿಯನ್ನು ಹೊಂದಾಣಿಕೆ ಮಾಡಿಕೊಳ್ಳುವುದು ಅಗತ್ಯವಾಗಿತ್ತು. ಇಂಥ ಪುಡಿ ವನಗಳಲ್ಲಿ ವೇಗ ಗತಿಯ ಪುಡಿ ಪಶುಗಳೇ ಹೆಚ್ಚು, ವನ್ಯ ಆಹಾರವೂ ಅಷ್ಟಕಷ್ಟೇ. ಮಾನವ ನದೀ ತೀರ ಅಥವಾ ಸಮುದ್ರ ತಟಾಕಗಳ ದಂಡೆಗಳನ್ನೇ ಆಶ್ರಯಿಸಬೇಕಾಯಿತು, ಖಾಯಂ ನೀರಿನ ಪ್ರಾಪ್ತಿಗಾಗಿ. ತತ್ಪರಿಣಾಮವಾಗಿ ಮೀನು—ಏಡಿಗಳಂಥ ಜಲಚರಗಳನ್ನು ಮಾನವ ಹಿಡಿದು ತಿನ್ನತೊಡಗಿದ. ವಾಯುಗುಣ ಪರಿಸರಗಳಲ್ಲಾದ ತೀವ್ರ ಏರಿಳಿತಗಳ ಮಟ್ಟದ ಮೂಲಕ ತನ್ನ ಜೀವನ ನಕ್ಷೆಯನ್ನೂ ಬೇಟೆಯ ಪರಿಯನ್ನೂ ಬದಲಿಸಿ ತನ್ನ ಆಹಾರವನ್ನು ಜಲಚರಗಳ ಬೇಟೆಯಿಂದ ಭರತಿ ಮಾಡಿಕೊಳ್ಳಬೇಕಾಯಿತು. ಈ ಅಭಾವ ಪರಿಸರದಲ್ಲಿ ಅವನ ಜೀವನ ದೃಷ್ಟಿಯಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಪರಿಣಾಮತಃ ಜರುಗಿ ಹೋದವು. ಆಹಾರ ಸಂಗ್ರಾಹಕನಿದ್ದವನು ಈಗ ಆಹಾರ ಉತ್ಪಾದಕನಾಗುವದು ಅಗತ್ಯವಾಯಿತು. ಈ ಪರಿವರ್ತನೆಯ ಯುಗಕ್ಕೆ ಮಧ್ಯ ಶಿಲಾಯುಗವೆಂದು ಹೆಸರಿಸಿದ್ದು ಬಹು ಯೋಗ್ಯವಾಗಿದೆ.

ತಾಂತ್ರಿಕ ದೃಷ್ಟಿಕೋನದಿಂದ ನೋಡಿದರೆ ಪೂರ್ವಕಾಲದ ಉದ್ಯಮಗಳಿಗಿಂತ ಈ ಉದ್ಯಮ ತೀರಾ ಭಿನ್ನವಾದದ್ದು. ಧಕ್ಕೆ–ಧುಮ್ಮಸ್ಸನ್ನು ಬಳಸಿ ಚೆಕ್ಕೆ ತೆಗೆಯುವ ರೀತಿಯ ಬದಲು ಸೀಳಿಗೆಯ ಉಳಿಯಿಂದ ಚೆಕ್ಕೆ ತೆಗೆಯುವ ವಿಧಾನ ಬಳಸಲ್ಪಡತೊಡಗಿತು. ಮೊದಲು ಕಲ್ಲಿನ ಪಿಂಡವನ್ನು ಬೇರ್ಪಡಿಸುತ್ತಿದ್ದರು. ಮೊನಚು ತೂತು ಮಾಡುವ ಉಳಿಯ ಮುಖಾಂತರ ಒತ್ತಡ ಹಾಕಿ ಚಿಕ್ಕ ಚೆಕ್ಕೆ ಅಲಗು ಬೇರ್ಪಡಿಸುವ ವಿಧಾನ ಬಂತು. ಮೊದಮೊದಲು ಈ ತಂತ್ರದ ಬಳಕೆಯಿಂದ ಪಡೆದ ಅಲಗುಗಳು ಹೇರಳವಾಗಿದ್ದವು. ಆದರೆ ಕಾಲಾಂತರದಲ್ಲಿ ಇನ್ನೂ ಮುಂದುವರಿದ ತಂತ್ರವೊಂದು ಬಳಕೆಗೆ ಬಂತು. ಇದಕ್ಕೆ ದಿಗ್ದರ್ಶಕ ಪದರು, ಮಗ್ಗಲು ತಂತ್ರವನ್ನುತ್ತಾರೆ. ಇದರ ಸಹಾಯದಿಂದ ಅಲಗುಗಳ ಭೂರಿ ಉತ್ಪಾ

ದನೆ ಶಕ್ಯವಾಯಿತು. ನಿಜವಾಗಿ ಇಂಥ ಚಿಕ್ಕ ಅಲಗುಗಳ ಭೂರಿ ಉತ್ಪಾದನಾತಂತ್ರ ಅನಂತರ ಬಂದ ಬಳಪ ಸಂಸ್ಕೃತಿಗೆ ಸೇರಬೇಕಾದುದು. ಆದರೆ ಮಧ್ಯ ಶಿಲಾಯುಗದಲ್ಲೇ ಇಂಥ ಚಿಕ್ಕ ಶಿಲಾ ಉದ್ಯಮವೂ ಹುಟ್ಟಿಕೊಂಡು ಹೊಸ ಸಂಸ್ಕೃತಿಯೊಂದಿಗೆ ತಳಕುಗೊಂಡಿತೆಂದು ತೋರುತ್ತದೆ. ನೈಜ ಮಧ್ಯಯುಗೀನ ಶಿಲಾ ಆಯುಧಗಳನ್ನು ಎರಡು ಬಗೆಯವೆಂದು ವರ್ಗೀಕರಿಸಬಹುದು, ಬೇಟೆಗೆ ಬಳಸುವ ಲಘು ಕಲ್ಲಾಯುಧಗಳು, ಭೂಮಿತಿ ಪ್ರಧಾನ ಲಘು ಕಲ್ಲಾಯುಧಗಳು. ಬೇಟೆಯ ಆಯುಧಗಳು ಆಕಾರದಲ್ಲಿ ಅರ್ಧ ಚಂದ್ರಾಕಾರ, ಮೊನೆ ಮತ್ತು ಬಾಣದ ಅಲಗುಗಳು, ಇವಲ್ಲದೆ ಅಸ್ಥಿಗಳ ಮೇಲೆ ಹೂಡಿದ ಕಟ್ಟಿಗೆಯ ಮೇಲೆ ಅಥವಾ ಮೃಗ ಭುಜದ ಮೇಲೆ ಸಜ್ಜುಪಡಿಸಿದ ಬೇಟೆಯ ಸಂಕೀರ್ಣ ಆಯುಧಗಳೂ ಸಿಕ್ಕುತ್ತವೆ. ಎರಡನೆಯ ಬಗೆಯ ಭೂಮಿತಿ ಪ್ರಧಾನ ಆಯುಧಗಳು ಹೆಚ್ಚು ಮುಂದುವರಿದ ಗ್ರಾಮವಾಸಿಗಳ ದಿನಬಳಕೆಯ ಆಯುಧಗಳು – ಸಮಾಂತರ ಬದಿಯುಳ್ಳ ಅಲಗುಗಳು, ಚಾಕು ಚೂರಿಗಳು, ಕೆತ್ತನೆಯ ಕೆಲಸಕ್ಕಾಗಿ ಉಪಕರಣ, ನುಣುಪುಗೊಳಿಸುವುದಕ್ಕಾಗಿ ತಿಕ್ಕುವ ಕಲ್ಲುಗಳು, ರಂಧ್ರಕಗಳು ಆಗೊಮ್ಮೆ ಈಗೊಮ್ಮೆ ಲೆಕ್ಕಣಿಕೆಯಂಥ ಆಯುಧ. ಅನೇಕ ಬಾರಿ ಮೊದಲನೆಯ ಬಗೆಯ ಆಯುಧಗಳು ಎರಡನೆಯ ಬಗೆಯ ಆಯುಧಗಳ ಜೊತೆ ಜೊತೆಗೆ ಸಿಕ್ಕುತ್ತಿದ್ದ ಮೂಲಕ ಎರಡೂ ಬಗೆಯ ಬಾಳಿನ ಸಹಯೋಗ ಸೂಚಿತವಾಗುತ್ತದೆ. ಇದಲ್ಲದೆ ಗಮನೀಯ ಅಂಶವೆಂದರೆ ಮೀನುಗಾಳಗಳೂ ಜೊತೆಗೆ ಬಲೆಯನ್ನು ಮುಳುಗಿಸುವ ತೂಕದ ಕಲ್ಲುಗಳೂ ಜೊತೆಯಾಗಿ ಸಿಕ್ಕುತ್ತವೆ. ಮೀನುಗಾರಿಕೆಯ ಉದ್ಯಮ, ಮೀನ ಬಲೆಯ ಬಳಕೆ ಇವನ್ನೂ ಸೂಚಿಸುತ್ತದೆ.

ಬಳ್ಳಾರಿಯ ಬಳಿಯ ಸಂಗನಕಲ್ಲು ನೆಲೆ ಸರ್ವಸಾಮಾನ್ಯ ಮಧ್ಯಯುಗೀನ ಸಂಸ್ಕೃತಿಯ ಉತ್ತಮ ಉದಾಹರಣೆಯೆಂದು ಹೇಳಬಹುದು. ಇದು ಉತ್ತಮ ಸ್ಥಳಪರೀಕ್ಷಣೆಯ ನಿರ್ಣಾಯಕ ಸುಬದ್ಧ ಪುರಾವೆ ಒದಗಿಸುತ್ತದೆ. ಇದಲ್ಲದೆ ಲಘು ಶಿಲಾ ಆಯುಧಗಳ ಪುರಾವೆಗಳನ್ನು ಬೆಂಗಳೂರ–ಜಾಲಹಳ್ಳಿ, ಹಿಂದೂಸ್ತಾನ ವಿಮಾನ ನಿಲ್ದಾಣ ಕ್ಷೇತ್ರ, ಆನೆಕಲ್ ರಸ್ತೆಯ ಬದಿಯಲ್ಲಿ ಸೂಡಸಂದ್ರ ಮತ್ತು ಸಿದ್ದಾಪುರ ಕ್ಷೇತ್ರಗಳಲ್ಲೂ, ತುಮಕೂರು ಬಳಿ ಕಿಬ್ಬನಹಳ್ಳಿ ಕ್ಷೇತ್ರ, ವಿಜಾಪುರ ಜಿಲ್ಲೆಯ ಹಲವಾರು ಕ್ಷೇತ್ರಗಳಲ್ಲೂ ಇಂಥಲ್ಲೆಲ್ಲ ಅನೇಕ ಲಘು ಶಿಲಾ ಆಯುಧಗಳು ಸಿಕ್ಕಿವೆ. ಇವುಗಳಲ್ಲಿ ವಿಶೇಷ ಮಹತ್ವದ ಕ್ಷೇತ್ರಗಳೆಂದರೆ ಗುಲ್ಬರ್ಗ, ಕೋವಳ್ಳಿ ಮತ್ತು ಶೋರಾಪುರದಂಥ ನದೀಮಧ್ಯ ಕ್ಷೇತ್ರಗಳು. ಇಲ್ಲಿ ಸುಮಾರು ಹತ್ತು ನೆಲೆಗಳು ದೊರಕಿದ್ದು ಅವುಗಳ ಅಭ್ಯಾಸದಿಂದ ಭೂರಿ ಪುರಾವೆಗಳು ದೊರಕುವವು.

## ನವ ಶಿಲಾಯುಗ

ಮುಂಚಿನ ಕಾಲಾವಧಿಯಲ್ಲಿ ಬದುಕಿದ ಮಾನವ ಮುಖ್ಯವಾಗಿ ಆಹಾರ ಸಂಗ್ರಾಹಕ. ನಿಸರ್ಗ ಒದಗಿಸಿದ ಆಹಾರದ ಶೇಖರಣೆಯೇ ಅವನ ಉಪಜೀವನದ ಮಾರ್ಗ. ಮುಂದೆ ಬಂದ ನವಶಿಲಾ ಯುಗದಲ್ಲಿ ಅವನ ಉಪ ಜೀವನದಲ್ಲಿ ಕ್ರಾಂತಿಕಾರಿ ಪಲ್ಲಟವಾಯಿತು. ನಿಸರ್ಗದ ಮೇಲೆ ನಿಯಂತ್ರಣದಿಂದ ತನಗೆ ಬೇಕಾದ ಸ್ಥಳದಲ್ಲಿ ತನಗೆ ಅನುಕೂಲವಾಗುವಂತೆ ತನಗೆ ಬೇಕಾಗುವ ಸಾಮಗ್ರಿಗಳನ್ನು ತಾನೇ ನಿರ್ಮಿಸಿಕೊಳ್ಳುವ ಪರಿಯನ್ನು ಶೋಧಿಸಿದ. ಅಡವಿ ಮೃಗಗಳ ಬೇಟೆಯನ್ನು ಅವಲಂಬಿಸುವುದನ್ನು ಬಿಟ್ಟುಕೊಟ್ಟು ಅವನು ಮನೆಮಾರಿಗೆಯ ಪಶುಗಳನ್ನಾಗಿ ಸಾಧು ಮಾಡಿ ಮನೆಯಲ್ಲೇ ತನ್ನ ಅಗತ್ಯಗಳಾದ ಹಾಲು ಮಾಂಸ ಇತ್ಯಾದಿಗಳನ್ನು ಬೇಕಾದ ಹಾಗೆ ಪಡೆಯುವ ಕಲೆಯನ್ನು ಸಾಧಿಸಿದ. ಅಲ್ಲದೆ, ಒಕ್ಕಲುತನ ಮಾಡಿ ಹಣ್ಣು, ಬೇಳೆ ಕಾಳುಗಳನ್ನು ಬೆಳೆಸುವ ಕಲೆಯನ್ನೂ ಸಾಧಿಸಿದ. ಈ ಸಾಧನೆಯಿಂದ ತನ್ನ ಉಪಜೀವನದ ಮಾರ್ಗವನ್ನು ತನ್ನದೇ ವಶದಲ್ಲಿ ತಂದುಕೊಂಡ. ಈ ಬೆಳವಣಿಗೆಯ ಫಲವಾಗಿ ಅವನು ಸ್ಥಿರಸ್ಥಾವರ ಜೀವನವನ್ನು ನಡೆಸತೊಡಗಿದ. ತನ್ನ ಜಮೀನಿನ ಸಮೀಪದಲ್ಲಿ ಗುಡಿಸಲು ಹಾಕಿಕೊಂಡು ಚಿಕ್ಕ ಚಿಕ್ಕ ಹಳ್ಳಿಗಳನ್ನು ನಿರ್ಮಿಸಿಕೊಂಡ. ದ್ರವರೂಪ ಪದಾರ್ಥಗಳಿಗಾಗಿ ಪಾತ್ರೆ ಪಗಡಗಳನ್ನು, ಅವುಗಳ ಪಾಕಕ್ಕಾಗಿ ಪಾತ್ರೆಗಳು, ಕಾಳು–ಬೇಳೆಗಳ ಸಂಗ್ರಹಕ್ಕಾಗಿ ಪಾತ್ರೆ–ಬುಟ್ಟಿಗಳು, ಹೀಗೆ ಅನೇಕ ಚಟುವಣಿಕೆಗಳನ್ನು ಬೆಳೆಸಿಕೊಂಡ.

ಈ ಯುಗದಲ್ಲಿ ಕಲ್ಲಿನ ಚೆಕ್ಕೆ ಸೀಳುವ ಮತ್ತು ಆಯುಧ ಮಾಡುವ ತಂತ್ರಗಳ ಬದಲಾಗಿ, ತೀಡುವ, ಸಾಣೆ ಹಿಡಿಯುವ ಮತ್ತು ನುಣುಪು ಕೊಡುವರೀತಿಯ ಸಾಧನಗಳು ಬೆಳೆದುಬಂದಿದ್ದು ಕಾಣುತ್ತದೆ. ಈ ಸಾಧನಗಳಿಂದ ಆಯುಧಗಳು ಹೆಚ್ಚು ಕುಶಾಗ್ರ, ಪರಿಣಾಮಕಾರಿ, ಏಕರೂಪ ಹರಿತ ಮೊನೆಗಳನ್ನು ಬೆಳೆಸಿಕೊಂಡವು. ಈ ಯುಗದಲ್ಲಿ ಮಾನವನ ಚಟುವಟಿಕೆಗಳ ಸೀಮೆ ವಿಸ್ತಾರಗೊಂಡು ಕುರಿ ಸಾಕಣೆ, ಬೇಟೆ, ಒಕ್ಕಲುತನ, ಕಟ್ಟಿಗೆಯ ಕೆಲಸ ಸೇರ್ಪಡೆಗೊಂಡದ್ದರಿಂದ ಸಾಧೆನ ಸಾಮಗ್ರಿಗಳ ವಿವಿಧತೆಯೂ ವಿಸ್ತಾರಗೊಂಡಿತು. ಗಿಡ ಕಡಿಯುವುಧಕ್ಕಾಗಿ, ಕಟ್ಟಿಗೆ ಸೀಳುವುದಕ್ಕಾಗಿ ಮಚ್ಚುಗಳು ಬಡಗಿಯ ಸಾಧನಗಳಾದ ಕೆತ್ತುಗತ್ತಿ, ರಂಟೆಕುಂಟೆಗಳಂತಿರುವ ಊಳುವ ಸಾಧನಗಳು, ಚಾಕು, ಕುಡುಗೋಲು–ಖುರ್ಪಿಗಳಂಥ ಸಸ್ಯ ಅಥವಾ ಹುಲ್ಲು ಕಡಿಯುವ ಸಾಧನಗಳು. ಕಲ್ಲಿನ ಮೊಳೆ ಮತ್ತು ಸುತ್ತಿಗೆ, ಕವಣೆಗಲ್ಲುಗಳು ಅಥವಾ ಬಾಣಮೊನೆಗಳಂಥ ಬೇಟೆಯ ಸಾಧನಗಳು, ಚೂರಿಗಳು, ಇತರ ಶಿಲಾ ಆಯುಧಗಳನ್ನು ರೂಪಿಸುವದಕ್ಕಾಗಿ ಮೂಲ ರಚನಾ ಸಾಮಗ್ರಿಗಳು, ಇವಲ್ಲದೆ ವಿವಿಧ ಉದ್ದೇಶಕ್ಕಾಗಿ ಮಾಡಿದ ಆಯುಧಗಳು, ದೊರಕುತ್ತವೆ. ಈ ಕಲ್ಲಿನ ಸಾಧನಗಳಲ್ಲದೆ ಅಸ್ಥಿ, ಕಾಷ್ಠ ಸಾಧನಗಳು, ಒಮ್ಮೊಮ್ಮೆ ಮಾತ್ರ ಸುಟ್ಟ ಮಣ್ಣಿನ ಸಾಧನಗಳು ದೊರಕಿವೆ. ಇದರ ಮೇಲಿಂದ ಸ್ಪಷ್ಟವಾಗುವದೇನೆಂದರೆ ಈ ಯುಗದಲ್ಲಿ ಮಾನವನ ಚಟುವಟಿಕೆಗಳಲ್ಲಿ ಬಹುಮುಖಿ ಪ್ರಗತಿ ಕಂಡು ಬಂದು ಅವನ ನಾಗರಿಕತೆಯೆಡೆ ನಡೆದ ಅವನ ಪುರೋಗಮನದ ಕ್ರಾಂತಿಕಾರಕ ಘಟ್ಟ ಸೂಚಿಸುತ್ತದೆ. ನಾಗರಿಕತೆ ಇನ್ನೂ ಬಹಳ ದೂರವಿತ್ತೇನೋ ನಿಜ.

ಉತ್ತರ ಕರ್ನಾಟಕ ಮತ್ತು ಆಂಧ್ರ ಪ್ರದೇಶಗಳು, ವಿಶೇಷತಃ ರಾಯಚೂರು ನದೀಮಧ್ಯ ಕ್ಷೇತ್ರವೆಂದು ಗುರುತಿಸಲಾದ ಪ್ರದೇಶ ದಕ್ಷಿಣ ಭಾರತದಲ್ಲೇ ಈ ಸಂಸ್ಕೃತಿಯ ತೊಟ್ಟಿಲು ಎಂದು ಹೇಳಬಹುದು. ಕಳೆದ ನಲ್ವತ್ತು ವರ್ಷಗಳಲ್ಲಿ ಬಹಳ ಸಂಖ್ಯೆಯಲ್ಲಿ ಕರ್ನಾಟಕದ ಬೇರೆ ಬೇರೆ ಸ್ಥಾನಗಳಲ್ಲಿ ಪರಿವೀಕ್ಷಣೆ ನಡೆದಿದೆ. ಗಮನೀಯ ಸ್ಥಾನಗಳೆಂದರೆ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಬಳ್ಳಾರಿ ಜಿಲ್ಲೆಯ ಸಂಗನಕಲ್ಲು, ಕಪ್ಪಗಲ್ಲು ಮತ್ತು ತೆಕ್ಕಲುಕೋಟೆ, ಕೋಲಾರ ಜಿಲ್ಲೆಯ ಬನವಳ್ಳಿ, ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಪಿಕಲಿಹಾಳ, ಧಾರವಾಡ ಜಿಲ್ಲೆಯ ಹಳ್ಳೂರು, ಮೈಸೂರು ಜಿಲ್ಲೆಯ ಹೆಮ್ಮಿಗೆ ಮತ್ತು ತಿರುವಕೂಡ್ಲು, ನರಸಿಂಹಪುರ, ಗುಲ್ಬಾರ್ಗಾ ಜಿಲ್ಲೆಯ ಕೊಡೆಕಲ್ಲ ಇವು. ಅಲ್ಲದೆ ಈ ಸಂಸ್ಕೃತಿಗೆ ಸಂಲಗ್ನವಾದ ಅಥವಾ ಈ ಸಂಸ್ಕೃತಿಯ ಪೂರ್ವ ಭಾವಿ ಕಾಲದ ಅನೇಕ ಬೂದಿ

ಗುಡ್ಡ ನೆಲೆಗಳನ್ನು ಶೋಧಿಸಲಾಗಿದೆ. ಈ ನೆಲೆಗಳೆಂದರೆ, ಕುಪ್ಪಗಲ್ಲು ಮತ್ತು ಕೋಡೆಗಲ್ಲು. ಅಲ್ಲದೆ ಜಿಲ್ಲೆಯ ಮಸ್ಕಿ ಮತ್ತು ಪಿಕಲಿಹಾಳ, ಧಾರವಾಡ ಜಿಲ್ಲೆಯ ಬೇರೆ ನೆಲೆಗಳಾದ ಕುಡಚೆ, ತೇರದಾಳ, ತುಡಕಿನಿ, ಕಲ್ಲೊಳ್ಳಿ, ಮುಂತಾದವು. ಕೊನೆಗೆ ಹೆಸರಿಸಿದ ನೆಲೆಗಳಲ್ಲಿ ಹಸುಗಳ ಗೋದಲೆಗಳ ಸಗಣಿ ಸುಟ್ಟ ಸ್ಥಳಗಳು ಇವುಗಳಲ್ಲಿ ಹಸುಗಳ ಸುಟ್ಟ ಅವಶೇಷಗಳೂ, ನವ ಶಿಲಾಯುಗದ ಹೆಂಚು ಪಾತ್ರೆಗಳೂ, ಶಿಲಾ ಯುಗದ ಹೆಂಚು ಪಾತ್ರೆಗಳೂ ಶಿಲಾ ಆಯುಧ ಸಾಧನಗಳೂ ದೊರಕಿವೆ.

ಪೂರ್ವದಲ್ಲಿ ಗುಡ್ಡಗಳ ದುಬರಿ ಮೇಲೆ ಹಾಗೂ ದಿಬ್ಬಗಳ ಮೇಲೆ ವಸತಿ ಮಾಡಿಕೊಂಡಿದ್ದ ಈ ಜನರು ತದನಂತರದ ಕಾಲದಲ್ಲಿ ಬಯಲು ಸೀಮೆಗೆ ಮತ್ತು ನದೀ ತೀರಗಳಿಗೆ ಇಳಿದು ಬಂದು ಅಲ್ಲಿ ಪ್ರಾಥಮಿಕ ಒಕ್ಕಲುತನ ಮಾಡಿದಂತೆ ತೋರುತ್ತದೆ. ಮೊದಮೊದಲು ಗುಹೆಗಳಲ್ಲೂ ಕಲ್ಲು ಮಂಟಪಗಳಲ್ಲೂ ಆಶ್ರಯ ಪಡೆದು, ತದನಂತರ ದುಂಡು ಇಲ್ಲವೆ ದೀರ್ಘ ಚೌಕ ಆಕಾರದ ಹುಲ್ಲು ಚಾವಣಿಯ ಗುಡಿಸಲುಗಳನ್ನು ಕೆಲವೊಮ್ಮೆ ಅಡ್ಡದಿಡ್ಡ ಏರಿಸಿದ ಗೋಡೆಗಳು, ಕಲ್ಲಿನಿಂದ ಮಾಡಿದ ಬೇಲಿ, ಇಂಥಲ್ಲಿ ವಾಸಿಸತೊಡಗಿದರು. ಛಾವಣಿಗೆ ಆಧಾರ ಕಟ್ಟಿಗೆಯ ಅಥವಾ ಬಿದುರಿನ ಕಂಬಗಳು.

### ಅನಂತರದ ಕಾಲ

ಈ ಕಾಲದ ಕೊನೆಯ ಭಾಗದಲ್ಲಿ ಉತ್ತರದಿಂದ ಸಾಂಸ್ಕೃತಿಕ ಪ್ರಭಾವ ಬಂತು. ವಿಶೇಷತಃ ಮಧ್ಯ ಮತ್ತು ಪಶ್ಚಿಮ ಭಾರತದ ಪ್ರಭಾವ ಈ ಪ್ರದೇಶಗಳಲ್ಲಿ ಆಗಲೇ ನೆಲೆಗೊಂಡಿದ್ದ ಬಳಪ ಸಂಸ್ಕೃತಿಯಲ್ಲಿ ಖನಿಜದ ಶೋಧ–ವಿಶೇಷತಃ ತಾಮ್ರ ಆಗಿತ್ತು. ಈ ಸಂಸ್ಕೃತಿಯ ಮುಖ್ಯ ಲಕ್ಷಣಗಳೆಂದರೆ ಸಮಾಂತರ ಭುಜದ ಅಥವಾ ಅಂಥದೇ ಆಕಾರದ ಕಲ್ಲು ಅಲಗುಗಳು, ತಾಮ್ರದ ಸಾಧನಗಳು, ಕೆಂಪು ವರ್ಣದ ಗಡಿಗೆ ಮಡಿಕೆಗಳು, ಅವುಗಳ ಮೇಲೆ ಮೂಡಿಸಿದ ಅಥವಾ ಕಪ್ಪು ಬಣ್ಣದಲ್ಲಿ ಚಿತ್ರಿಸಿದ ವರ್ತುಳ (ಗರಗಡೆ), ಅದು ಅರೆ– ನಾಗರ ಸಂಸ್ಕೃತಿ, ಒಕ್ಕಲುತನವೇ ಅದರ ಮುಖ್ಯ ಉದ್ಯೋಗ, ಉದ್ಯಮಗಳು ವಿಶೇಷತಃ ಲೋಹ ಗಣಿಗಳು, ಕಲ್ಲು ಕೆಲಸ, ಕುಂಭಾರ ಕೆಲಸ, ಇವು ಬಂದುದಲ್ಲದೆ ಕರಕುಶಲ ವೃತ್ತಿಗಳಾದ ಮಣಿ–ಬಳೆ–ಆಭರಣಗಳ ರಚನೆ ಇವರಿಗೆ ಪರಿಚಿತವಾಗಿತ್ತು. ನೀರಾವರಿ ರೀತಿಯನ್ನು ಒಕ್ಕಲುತನದಲ್ಲಿ ತರಲಾಯಿತು. ಬತ್ತ, ಗೋದಿ, ಜವೆಗೋದಿ, ಇಂಥ ಖಾಯಂ ಬೆಳೆಗಳನ್ನಲ್ಲದೆ ಬೇರೆ ಬೇರೆ ತರದ ಕಾಯಿಪಲ್ಯ ಮತ್ತು ಬೆಳೆಧಾನ್ಯಗಳನ್ನು ಬೆಳೆಸುತ್ತಿದ್ದರು.

ಇಂಥ ಆಕ್ರಾಮಕ ಸಂಸ್ಕೃತಿ ಈ ಯುಗದ ಮುಗಿತಾಯ ಸಮಯದಲ್ಲಿ ಅಲ್ಪ ಪ್ರಮಾಣದಲ್ಲಿ ಬೆಳೆಯಿತಾದರೂ ಇದರ ಪ್ರಭಾವ ಬಳ್ಳಾರಿ, ರಾಯಚೂರು ಮತ್ತು ಕೆಲವು ಸ್ಥಾನಗಳಲ್ಲಿ ಹೆಚ್ಚು ಕಂಡು ಬರುವದಿಲ್ಲ. ಕರ್ನಾಟಕದ ಈಶಾನ್ಯ ದಿಶೆಯಲ್ಲಿ ಇದರ ಪ್ರಭಾವ ಹೆಚ್ಚು. ಈ ಜನರ ಗೋರಿ ನೆಲೆಗಳೆಷ್ಟೋ ಕಂಡುಬಂದಿವೆ. ಮಕ್ಕಳನ್ನು ಒಂದು ಅಥವಾ ಹೆಚ್ಚು ಮಣ್ಣಿನ ಹೂಜಿಗಳಲ್ಲಿ ಹೂಳಲಾಗಿತ್ತು. ವಯಸ್ಕರನ್ನು ಮಣ್ಣಿನಲ್ಲಿ ಅಗಿದ ತಗ್ಗುಗಳಲ್ಲಿ ಕೆಲವು ಗೋರಿ ಸರಕುಗಳೊಂದಿಗೆ ಇಟ್ಟು ಹೂಳಲಾಗಿತ್ತು. ಮರಣೋತ್ತರ ಜೀವನದಲ್ಲಿ ನಂಬಿಕೆ ಇದ್ದುದರ ಕುರುಹು ಇದು. ಬಹಳಷ್ಟು ಇಂಗಾಲ ೧೪ ಪರೀಕ್ಷೆಗಳು ತೋರಿಸುವ ಕಾಲ ನಿರ್ಣಯ ಕ್ರಿ. ಪೂ. ೨೫೦೦–೮೦೦. ಈಗ ವಿದ್ವಾಂಸರ ಸಾಮಾನ್ಯ ನಂಬುಗೆಯೆಂದರೆ ಕರ್ನಾಟಕದ ನವ ಶಿಲಾಯುಗೀನ ಜನರು ಚಿನ್ನದ ಗಣಿಯಿಂದ ಚಿನ್ನ ತೆಗೆದು ಭಾರತದ ಪ್ರಥಮ ಪಟ್ಟಣ ನಾಗರಿಕತೆಯ ಜನರಾದ ವಾಯವ್ಯ ಭಾರತದ ಹರಪಾನರಿಗೆ ಮಾರುತ್ತಿದ್ದರು. ಆದರೆ ಇದಕ್ಕೆ ಇನ್ನೂ ಪುರಾತತ್ವದ ನಿರ್ಣಯ ಆಗಬೇಕಾಗಿದೆ.

ಕರ್ನಾಟಕ ಕಬ್ಬಿಣ ಯುಗದ ವಿಶಿಷ್ಟ ಲಕ್ಷಣವೆಂದರೆ ಶವಗಳನ್ನು ಹೂಳುವ ವಿಶಿಷ್ಟ ಯುಗ ಪದ್ಧತಿ. ಪುರಾತತ್ವಜ್ಞರು ಇದನ್ನು ಬೃಹತ್ ಶಿಲಾ ಸಂಸ್ಕೃತಿಯೆಂದು ಗುರುತಿಸುತ್ತಾರೆ. ಬೃಹತ್ ಶಿಲಾ ಸಂಸ್ಕೃತಿಯ ಲಕ್ಷಣಗಳೆಂದರೆ ಸಾಧನ ಸಾಮಗ್ರಿಗಳಿಗಾಗಿ ಕಬ್ಬಿಣದ ಉಪಯೋಗ, ಗಾಲಿ ತಿರುವಿ ಮಾಡಿದ ಚಿತ್ರಿತ ಕುಂಬಾರಿಕಾ ಉದ್ಯಮ (ಒಳಗೆ ಕಪ್ಪು ಬಣ್ಣ ಹೊರಗೆ ಅಂಶತಃ ಕಂದು ಇಲ್ಲವೆ ಕೆಂಪು ಬಣ್ಣಗಳ ಇತರ ಭಾಗಗಳು ಕೆಂಪು ಬಣ್ಣದ ವರೆಗಿನವು.) ಈ ಸಂಸ್ಕೃತಿಯ ಇನ್ನೊಂದು ಲಕ್ಷಣವೆಂದರೆ ಮೃತರ ಶವದ ವಿಸರ್ಜನೆ. ಶವಗಳನ್ನು ನಿಸರ್ಗದ ಕ್ರಿಯೆಗೆ ತುಸು ಸಮಯ ಬಿಡಲಾಗುತ್ತಿತ್ತು. ಎಲುವಿನ ಹಂದರದ ಅವಶೇಷವನ್ನು ಸಂಚಯಿಸಿ ನೆಲ ಮಾಳಿಗೆಯಲ್ಲಿಯೋ, ಅಥವಾ ಮಣ್ಣಿನಲ್ಲಿ ಹೂಳಲ್ಪಟ್ಟ ದುಂಡನೆಯ ಕಲ್ಲು ಕೊಳಗದಲ್ಲೊ, ಮಣ್ಣು ಹೂಜಿಗಳಲ್ಲೋ, ಅಥವಾ ದೀರ್ಘವೃತ್ತ ಕಲ್ಲಿನ ಶವಪೆಟ್ಟಿಗೆಯಲ್ಲೋ ಹಾಕಿ ಹೂಳುತ್ತಿದ್ದರು. ಅಥವಾ ವಿರಳವಾಗಿ ಬಂಡೆ ಕೊರೆದು ಮಾಡಿದ ಗುಹಾಲಯಗಳಲ್ಲಿ ಇಡುತ್ತಿದ್ದರು. ಇಂಥ ಗುಹಾಲಯಗಳನ್ನು ಬಿಟ್ಟರೆ, ಇತರ ಗೋರಿಗಳ ವಿಶಿಷ್ಟ ಹೊರಕವಚವೆಂದರೆ ಕಲ್ಲುಬಂಡೆಗಳ ವೃತ್ತಾಕಾರದ ರಚನೆ, ಅಥವಾ ದುಂಡಾಗಿ ಕಡೆದ ಕಲ್ಲು, ಮುಚ್ಚಳ ಹೊಚ್ಚಿದ ಕಲ್ಲು ಮಂಟಪ, ಮಣ್ಣಿನದಿಣ್ಣೆ ಅಥವಾ ಮೂರು ಮೇಲ್ಮುಖಿದ ಹಾಸುಗಲ್ಲಿನ ತಲೆಗೂಡಿಸಿದ ದುಂಡು ರಚನೆಯ ಆಧಾರದ ಮೇಲೆ ನಿಲ್ಲಿಸಲಾದ ಕಡೆದು ದುಂಡು ಮಾಡಿದ ಗುಂಡುಕಲ್ಲು, ಅಥವಾ ಭೂತಗನ್ನಡಿಯ ಆಕಾರದ ಹಲಪೆ ಕಲ್ಲು.

ಇಂಥ ಬೃಹತ್ ಶಿಲಾ ಗೋರಿಗಳು ಕರ್ನಾಟಕದ ತುಂಬೆಲ್ಲ ಸಿಕ್ಕುತ್ತವೆ. ಕೆಲ ಕೆಲವು ಪ್ರದೇಶಗಳಲ್ಲಿ ಕೆಲ ಕೆಲವು ಬಗೆಗಳು ಹೆಚ್ಚು ಜನಪ್ರಿಯವಾಗಿದ್ದವು. ಹೆಚ್ಚು ಕುತೂಹಲ ಕೆರಳಿಸುವ ವಿಶಿಷ್ಟ ಗೋರಿ ಸ್ಥಳಗಳೂ ಇದ್ದವು. ಪ್ರವೇಶಕ್ಕಾಗಿ ಅಥವಾ ನೋಡುವುದ್ಕಾಗಿ ಮಾಡಿದ ರಂಧ್ರಗಳುಳ್ಳ ಹಾಸುಗಲ್ಲಿನಿಂದ ಮುಚ್ಚಿದ ನೆಲಮನೆ ಗೋರಿಗಳು, ತೆಳ್ಳನೆಯ ಪಾಟಿಕಲ್ಲುಗಳಿಂದ ನಿರ್ಮಿಸಲಾದ ವರ್ತುಳದಿಂದ ಸುತ್ತುವರಿಯಲ್ಪಟ್ಟ ಗೋರಿಗಳು, ಅಡ್ಡತಿಡ್ಡ ಗೋಡೆ ಅಥವಾ ಭಿನ್ನ ಕೋಣೆಗಳುಳ್ಳ ಗೋರಿಗಳು, ಹೂಳುಸ್ಥಳ, ಪ್ರವೇಶ ದ್ವಾರದ ಗೋಡೆಯಿಂದ ಸುತ್ತುವರಿಯಲ್ಪಟ್ಟ ದಾರಿಯುಳ್ಳ ಗೋರಿಗಳು, ಇವು ಗಮನಾರ್ಹವಾದವು. ಗೋರಿಗಳ ರಚನಾ ವಿಧಾನವನ್ನು ಕರ್ನಾಟಕದ ಕಟ್ಟಡ ನಿರ್ಮಾಣ ಕಲೆಯ ಮತ್ತು ಕಲ್ಲಿನ ಕಟ್ಟಡ ಕಸುಬಿನ ಉದಯಕಾಲದ ಮುನ್ಸೂಚಿಯೆನ್ನಬಹುದು.

ಈ ಜನರು ಅರೆ–ನಾಗರ ದಕ್ಷಿಣ ಭಾರತೀಯ ಸಮಾಜದ ಮೂಲ ಪುರುಷರು. ಇವರೇ ಅನಂತರ ದೊಡ್ಡ ಪ್ರಮಾಣದ ವಸತಿಗಳನ್ನು ನಿರ್ಮಿಸಿದರು. ಪುರಾತತ್ವಜ್ಞರು ಈ ವರೆಗೆ ಗುರುತಿಸಿ ಮಾಡಿರುವವು ಕೆಲವು ಮಾತ್ರ. ಬ್ರಹ್ಮಗಿರಿ, ಮಸ್ಕಿ, ಹಳ್ಳೂರ, ಪಿಕ್ಲಿಹಾಳ ಮತ್ತು ಟಿ. ನರಸೀಪುರದ ಕಬ್ಬಿಣ ಯುಗದ ವಸತಿ ನೆಲೆಗಳು ಈ ಜನರವು. ಅವರು ಪ್ರಗತಿಪರ ಒಕ್ಕಲು ಮಕ್ಕಳು. ಈ ಸ್ಥಳಗಳಲ್ಲಿ ಕಂಡು ಬಂದ ನೀರಾವರಿ

ವ್ಯವಸ್ಥೆ, ಅವರು ಬಳಸುತ್ತಿದ್ದ ಕಂಟಿಕುಂಟೆಗಳು, ಕುಡುಗೋಲುಗಳು, ಹರಗುವ ಸಾಧನಗಳು, ಹಾರೀಕೋಲುಗಳ ವಿಸ್ತಾರ ವೈವಿಧ್ಯ. ಅವರು ಬೆಳೆದ ಭತ್ತ, ರಾಗಿ, ಹುರುಳಿ, ಬೇಳೆಕಾಳುಗಳ ಗಡ್ಡೆಗೆಣಸುಗಳ ವೈವಿಧ್ಯ ವಿಸ್ತಾರ ಇವು ಅವರ ಪ್ರಗತಿಪರತೆಗೆ ಸಾಕ್ಷಿ ಹೇಳುತ್ತವೆ. ಇವರು ಹಸು, ಕುದುರೆ, ಕುರಿ, ಆಡು, ಕೋಳಿ, ನಾಯಿಗಳನ್ನಲ್ಲದೆ ಬೇರೆ ಜಾತಿಯ ಪಶುಗಳನ್ನೂ ಸಂಗೋಪನ ಮಾಡಿದ್ದರು. ತಾವು ಬೆಳೆದ ಆಹಾರ ಧಾನ್ಯಕ್ಕೆ ಪೂರಕವಾಗಿ ಕಾಡು ಪ್ರಾಣಿಗಳ ಬೇಟೆಯಾಡುತ್ತಿದ್ದರು. ಅವರು ಗೈದ ಲೋಹ ಉದ್ಯಮಗಳೂ ವಿಸ್ತಾರ ವೈವಿಧ್ಯದಿಂದ ಕೂಡಿದ್ದವು. ವಿಶೇಷತಃ ಕಬ್ಬಿಣ, ತಾಮ್ರ, ಬಂಗಾರಗಳನ್ನು ಅವರು ಅರಿತಿದ್ದರು. ಕುಂಬಾರಿಕೆ ಉದ್ಯಮವನ್ನು ಅರಿತದ್ದಲ್ಲದೆ ಕಲ್ಲಿನ ಎಲುಬಿನ ಚಿಪ್ಪಿನ ಮತ್ತು ಸುಟ್ಟ ಮಣ್ಣಿನ ಬಳೆ-ಮಣಿಗಳನ್ನು ಮಾಡುತ್ತಿದ್ದರು. ಅಭಿವೃದ್ಧಿಪರ, ಅರೆ-ನಾಗರ ಸಮಾಜದ ಪುರಾವೆಯನ್ನು ಒದಗಿಸುವದಲ್ಲದೆ ಬೇಗ ಬೇಗ ಇತಿಹಾಸದ ಉದಯದತ್ತ ಧಾವಿಸುತ್ತಿದ್ದ ಸಮಾಜದ ಚಿತ್ರ ಇಲ್ಲಿ ಕಂಗೊಳಿಸುತ್ತದೆ. ಭಾರತದ ಈ ಪ್ರದೇಶದ ಇತಿಹಾಸ ಕ್ರಿ. ಪೂ. ೨, ೩ನೇ ಶತಮಾನದಲ್ಲಿ ಪ್ರಾರಂಭವಾಗುತ್ತದೆ. ಕ್ರಿ. ಪೂ. ೩ನೆಯ ಶತಮಾನದಲ್ಲಿ ಈ ಭಾಗದ ಮೇಲೆ ಅಶೋಕ ನಡೆಸಿದ ವಿಜಯ ಯಾತ್ರೆ ಹಾಗೂ ಕ್ರಿ. ಪೂ. ೨ನೆಯ ಶತಮಾನದಲ್ಲಿ ಶಾತವಾಹನರ ಸಾಮ್ರಾಜ್ಯದ ಆರಂಭಯುಗ ಇವುಗಳೊಂದಿಗೆ ಕರ್ನಾಟಕದ ಇತಿಹಾಸ ಯುಗ ಮೊದಲಾಗುತ್ತದೆ.

# ಗಂಗಕದಂಬ ಪೂರ್ವ ಇತಿಹಾಸ

ಡಾ. ಅ. ಸುಂದರ

ಲೋಹ ಯುಗ (ಕ್ರಿ. ಪೂ. ೧೦೦೦ ನಂತರ) ಆರಂಭವಾದ ಕೆಲವು ನೂರು ವರ್ಷಗಳ ಬಳಿಕ ಉತ್ತರ ಭಾರತದಲ್ಲಿ ಇಟ್ಟಿಗೆ ಮತ್ತು ಕಲ್ಲುಗಳಿಂದ ರಚಿಸಲಾದ ಭವ್ಯ ಕಟ್ಟಡಗಳಿಂದೊಡಗೂಡಿದ ನಗರಗಳೂ ನಗರಾಡಳಿತ ವ್ಯವಸ್ಥೆಯೂ ಇದ್ದಿರುವುದು ಕಾಣಿಸುತ್ತದೆ. (ಉದಾ: ಕ್ರಿ. ಪೂ. ೬ನೇ ಶತಮಾನದ ಮಹಾಜನಪದಗಳು) ಸಂಕೀರ್ಣ ನಾಗರಿಕ ಜೀವನಕ್ಕೆ ಅಗತ್ಯವೆನಿಸುವ ವರ್ಣಮಾಲೆ ಪದ್ಧತಿಯ ಲಿಪಿ, ವಾಣಿಜ್ಯ ಸಂಘಗಳು, ವಿನಿಮಯಕ್ಕಾಗಿ ನಾಣ್ಯಗಳು ಈ ಸಮಯದಲ್ಲಿ ಬೆಳವಣಿಗೆ ಪಡೆದವು. ಧಾರ್ಮಿಕ ಹಾಗೂ ಮನೋರಂಜನೆಯ ಉದ್ದೇಶಕ್ಕಾಗಿ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರ ಮುಂತಾದ ಲಲಿತ ಕಲೆಗಳೂ ಸಾಕಷ್ಟು ಪ್ರಚಾರದಲ್ಲಿದ್ದವು. ಇವೆಲ್ಲವೂ ಮುಂದೆ ಸಹಜವಾಗಿ ಸಾಮ್ರಾಜ್ಯ ಸ್ಥಾಪನೆಗೆ ನೆರವಾದವು. ಇವುಗಳಲ್ಲಿ ಕ್ರಿ. ಪೂ. ನಾಲ್ಕನೆಯ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದ ಮೌರ್ಯ ಸಾಮ್ರಾಜ್ಯ ಅತ್ಯಂತ ಹಿರಿದಾಗಿತ್ತು.

ದಕ್ಷಿಣದಲ್ಲಿ ಅಶೋಕನ ಶಾಸನಗಳಲ್ಲಿ (ಕ್ರಿ. ಪೂ. ೨೭೩-೨೩೬) ಕಂಡು ಬರುವಂಥ ಅಸಿಕ-ಅಸ್ಸಾಕ ಮೂಲಕ, ಆಂಧ್ರಪಥ, ಮುಂತಾದ ಕಿರಿಯ ಜನಪದಗಳೂ ಚೇರ. ಪಾಂಡ್ಯ, ಕೇರಳಪುತ, ಸತ್ಯಪುತ ಮುಂತಾದ ರಾಜ್ಯಗಳು ಅಸ್ತಿತ್ವದಲ್ಲಿದ್ದವು.

ಹೀಗಿದ್ದರೂ ೧೮೯೨ ರಲ್ಲಿ ಬಿ. ಎಲ್. ರೈಸ್ ಅವರು ಬ್ರಹ್ಮಗಿರಿ ಮತ್ತು ಅದರ ನೆರೆ ಪ್ರದೇಶಗಳಾದ ಸಿದ್ಧಾಪುರ. ಜಟ್ಟಿಂಗ ರಾಮೇಶ್ವರ, (ಮೊಳಕಾಲ್ಮೂರು ತಾಲೂಕು, ಚಿತ್ರದುರ್ಗ ಜಿಲ್ಲೆ) ಗಳಲ್ಲಿ ಅಶೋಕ ಚಕ್ರವರ್ತಿಯ ಕಿರು ಶಿಲಾಶಾಸನಗಳನ್ನು ಪತ್ತೆ ಹಚ್ಚುವವರೆಗೆ ಈಗ ಕರ್ನಾಟಕವೆಂದು ಕರೆಸಿಕೊಳ್ಳುತ್ತಿರುವ ಪ್ರದೇಶದ ಪ್ರಾಚೀನ ಇತಿಹಾಸವೇನೂ ತಿಳಿದಿರಲಿಲ್ಲ. ಕ್ರಿ. ಶ. ನಾಲ್ಕನೆಯ ಶತಮಾನದಲ್ಲಿ ಉತ್ತರದಲ್ಲಿ ಬನವಾಸಿ ಮತ್ತು ದಕ್ಷಿಣದಲ್ಲಿ ತಲಕಾಡುವರೆಗೆ ಪಸರಿಸಿದ್ದ ಗಂಗ ಮತ್ತು ಕದಂಬರ ಆಳ್ವಿಕೆಯ ಮುನ್ನಿನ ಕರ್ನಾಟಕದ ಚರಿತ್ರೆ ಪ್ರಧಾನವಾಗಿ ಪುರಾಣ ಮತ್ತು ಸ್ಥಳೀಯ ದಂತಕತೆಗಳ ಆಧಾರದಲ್ಲಿದೆ. ವೈದಿಕ ಸಂಸ್ಕೃತಿಯ ಪ್ರವರ್ತಕರಾದ ಋಷಿವರ್ಯ ಅಗಸ್ತ್ಯರು ಉತ್ತರದಿಂದ ದಕ್ಷಿಣಕ್ಕೆ ಬಂದು ಅಲ್ಲಿನ ಮೂಲ ನಿವಾಸಿಗಳಿಗೆ ನಾಗರಿಕ ಜೀವನವನ್ನು ಪರಿಚಯಿಸಿದರು. ಎನ್ನುವ ಕತೆಯನ್ನು ಇದಕ್ಕೆ ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಇಲ್ವಲ ಮತ್ತು ಬಾದಾಮಿ ಎಂಬ ರಕ್ಕಸರನ್ನು ಅಗಸ್ತ್ಯರು ಹೇಗೆ ಸೋಲಿಸಿದರು ಎನ್ನುವ ಆಧುನಿಕ ಬಾದಾಮಿಗೆ ಸಂಬಂಧಿಸಿದ ಕತೆ ಎಲ್ಲರಿಗೂ ತಿಳಿದದ್ದೇ ಆಗಿದೆ. ಆದರೆ ಅವುಗಳ ಚಾರಿತ್ರಿಕ ಅಂಶ ಮತ್ತು ಕಾಲವನ್ನು ನಿರ್ಧರಿಸುವುದು ಬಹು ಕಷ್ಟದ ಕೆಲಸ.

ಈ ಪ್ರದೇಶ ಮತ್ತು ಜನರ ಬಗ್ಗೆ ಮಾಹಿತಿ ನೀಡುವ ಇನ್ನೊಂದು ಮೂಲವೆಂದರೆ ಇಬ್ಬರು ಚರಿತ್ರಕಾರರ ಬರಹಗಳು. ಅನಾಮಿಕ ಇಜಿಪ್ಶಿಯನ್ ಭೂಗೋಳ ತಜ್ಞ (ಕ್ರಿ. ಪೂ. ೧ನೆಯ ಶತಮಾನ) ಮತ್ತು ಟಾಲೆಮಿ ಕ್ರಿ.ಶ.೨ನೆಯ ಶತಮಾನ) ಅರೇಬಿಯಾ, ಪರ್ಶಿಯನ್ ಕೊಲ್ಲಿ, ಭಾರತ ಮತ್ತು ಆಗ್ನೇಯ ಏಶಿಯಾ ದ್ವೀಪಗಳಲ್ಲಿ ಸಂಚರಿಸಿದ್ದ ವ್ಯಾಪಾರಿಗಳಿಂದ ವಿಷಯ ಸಂಗ್ರಹಿಸಿದ್ದರು. ಇವರ ಬರಹಗಳಲ್ಲಿ ಕರ್ನಾಟಕಕ್ಕೆ ಸೇರಿದ ಕಾರವಾರ, ಹೊನ್ನಾವರ, ಉದ್ಯಾವರ (ಉಡುಪಿಯ ಸಮೀಪ) ಬಾದಾಮಿ, ಪುನ್ನಾಟ, ಮುಂತಾದ ಪ್ರದೇಶಗಳ ಉಲ್ಲೇಖವಿದೆ. ಆದರೆ ಚಾರಿತ್ರಿಕ ದೃಷ್ಟಿಯಿಂದ ಇವರ ವರದಿ ತೀರ ಕಿರಿದು ಹಾಗೂ ಅಪೂರ್ಣ. ಹೀಗಿದ್ದೂ ಕ್ರಿ. ಶ. ಒಂದನೆಯ ಶತಮಾನದಲ್ಲೇ ಕರ್ನಾಟಕ ನಾಗರಿಕತೆಯ ಪ್ರಧಾನ ಅಂಗವಾದ ಆರ್ಥಿಕ ಪ್ರಗತಿಯನ್ನು ಪಡೆದು 'ದಕ್ಷಿಣ ಏಶ್ಯಾ ಮತ್ತು ರೋಮ್' ಸಾಮ್ರಾಜ್ಯದೊಂದಿಗೆ ವ್ಯಾಪಾರೋದ್ಯಮವನ್ನು ನಡೆಸುತ್ತಿತ್ತು ಎನ್ನುವ ವಿಚಾರ ಕುತೂಹಲಕಾರಿಯಾಗಿದೆ. ಕ್ರಿ. ಶ. ಆರಂಭವಾಗುವ ಮೂನ್ನೂರು ಅಥವಾ ನಾನ್ನೂರು ವರ್ಷಗಳ ಹಿಂದೆ ನಾಗರಿಕತೆ ಇಲ್ಲಿ ಕಾಲಿಟ್ಟಿತ್ತು ಎನ್ನುವ ಅಂಶ ಇದರಿಂದ ನಮಗೆ ವ್ಯಕ್ತವಾಗುತ್ತದೆ.

ಆದರೆ ಈ ಎರಡು ಮೂಲಗಳು ಈ ಪ್ರದೇಶದ ಸ್ಥೂಲ ಚರಿತ್ರೆಯನ್ನು ರೂಪಿಸಲು ಕೂಡ ನೆರವಾಗುವುದಿಲ್ಲ. ಈ ದೃಷ್ಟಿಯಿಂದ ಅಶೋಕನ ಬ್ರಹ್ಮಗಿರಿ ಶಾಸನದ ಪತ್ತೆ ಮಹತ್ವದ್ದೆನ್ನಬಹುದು. ಸುದೈವದಿಂದ ಮಾಸ್ಕಿ, ಕೊಪ್ಪಳ (ರಾಯಚೂರು ಜಿಲ್ಲೆ) ಗಳಲ್ಲಿ ದೊರೆತ ಮೌರ್ಯ ಚಕ್ರವರ್ತಿಯ ಶಾಸನಗಳು ಮತ್ತು ಇತ್ತೀಚೆಗೆ (೧೯೭೭-೭೮) ನಿಟ್ಟೂರು ಮತ್ತು ಉಡೆಗೋಲಂನಲ್ಲಿ ದೊರೆತ ಚಕ್ರವರ್ತಿಯ ಹೆಸರು ತಿಳಿಸುವ ಶಾಸನಗಳು ತುಂಬ ಸಹಕಾರಿಯಾಗಿವೆ. ಬೆಳಕಿಗೆ ಬಂದ ಇತರ ಮಹತ್ವದ ಶಾಸನಗಳೆಂದ'ರೆ ಬೆಳಗಾಂನ ವಡಗಾಂ — ಮಾಧವಪುರದಲ್ಲಿ ದೊರೆತ ಷಡ್ಭುಜ ಕಂಬದಲ್ಲಿನ ಪ್ರಾಕೃತ ಬರಹ (ಕ್ರಿ. ಪೂ. ೧ ನೆಯ ಶತಮಾನ) ಕ್ರಿ. ಶ. ಎರಡನೆಯ ಶತಮಾನಕ್ಕೆ ಸಂಬಂಧಿಸಿದ ಬನವಾಸಿ ನಾಗಾ ಶಾಸನ, ಮ್ಯಾಕೆ ದೋಣಿ (ಬಳ್ಳಾರಿ ಸಮೀಪ) ಶಾಸನ, ಹಿರೆ ಹಡಗಲಿಯ ಶಿವಸ್ಕಂದ ವರ್ಮನ ತಾಮ್ರ ಶಾಸನ ಮತ್ತು ಸಣ್ಣತ್ತಿ ಬನವಾಸಿ, ಹಳವಾಸನ (ರೋಣ ತಾಲೂಕು, ಧಾರವಾಡ) ಗಳಲ್ಲಿ ದೊರೆತ ಕ್ರಿ. ಪೂ. ೧ ನೆಯ

ಮತ್ತು ಕ್ರಿ. ಶ. ೨ನೆಯ ಶತಮಾನಗಳಿಗೆ ಸೇರಿದ ಪ್ರಾಕೃತ ಶಾಸನಗಳು.

ಯಶವಂತಪುರ (೧೯೯೧) ಎಚ್. ಎ. ಎಲ್. ಬೆಂಗಳೂರು (೧೯೬೫) ಮಾಸ್ಕಿ (೧೯೩೪–೩೫) ಕಾರವಾರ, ಬನವಾಸಿ, ಚಂದ್ರವಳ್ಳಿ ವಡಗಾಂ ಮಾಧವಪುರ ಮುಂತಾದೆಡೆಗಳಲ್ಲಿ ದೊರೆತ ಈ ಕಾಲಕ್ಕೆ ಸೇರಿದ ವಿವಿಧ ಬಗೆಯ ನಾಣ್ಯಗಳು ಹೆಚ್ಚಿನ ಮಾಹಿತಿಯನ್ನು ಒದಗಿಸುತ್ತವೆ. ಕೊಪ್ಪಳ ತಾಲೂಕಿನ ಸಿಂದೋಗಿಯಲ್ಲಿ ಬರಹಗಳಿರುವ ತಾಮ್ರದ ಕೊಡದಲ್ಲಿ ಕೊರೆದ ಚಿಹ್ನೆಗಳಿರುವ ೫೦೦೦ ನಾಣ್ಯಗಳು ಇತ್ತೀಚೆಗೆ (೧೯೮೯) ದೊರಕಿವೆ. ಇನ್ನೊಂದು ಮಹತ್ವದ ಪತ್ತೆ ಎಂದರೆ ಹಾನಗಲ್ ತಾಲೂಕಿನ ಅಕ್ಕಿಆಲೂರಲ್ಲಿ ದೊರೆತ ೪೬ ರೋಮನ್ ನಾಣ್ಯಗಳು. ಕಾನ್‌ಸ್ಟೆಂಟಿನೋಪಲ್‌ನಲ್ಲಿ ಅಚ್ಚಾಗಿದ್ದ ಈ ನಾಣ್ಯಗಳು ಕ್ರಿ. ಪೂ. ೨೯ ರಿಂದ ಕ್ರಿ. ಶ. ೫೭೭ರ ವರೆಗೆ ಆಳಿದ ೯ ರೋಮನ್ ಚಕ್ರವರ್ತಿಗಳ ಕಾಲಕ್ಕೆ ಸೇರಿದವುಗಳಾಗಿವೆ. ಇತ್ತೀಚೆಗೆ ಗುಲ್ಬರ್ಗಾದಲ್ಲೂ ರೋಮನ್ ಮತ್ತಿತರ ನಾಣ್ಯಗಳು ಪತ್ತೆಯಾಗಿರುವುದು ತಿಳಿದು ಬಂದಿದೆ.

ಇವುಗಳು ಅಂದಿನ ಜನತೆಯ ರಾಜಕೀಯ ಆರ್ಥಿಕ ಮತ್ತು ಧಾರ್ಮಿಕ ಸ್ವರೂಪವನ್ನು ಅರಿತುಕೊಳ್ಳಲು ಮಹತ್ವದ ನೆರವನ್ನೇ ನೀಡಿದರೆ ಚಾರಿತ್ರಿಕ ಸ್ಥಳಗಳಾದ ಚಂದ್ರವಳ್ಳಿ, ವಡಗಾವ–ಮಾಧವಪುರ, ಟಿ. ನರಸೀಪುರ ಮೊದಲಾದೆಡೆಗಳಲ್ಲಿ ನಡೆದ ಪ್ರಾಚ್ಯಶೋಧನೆ ದೈನಂದಿನ ಜನಜೀವನಕ್ಕೆ ಸಂಬಂಧಿಸಿದ ಹಲವು ವಿವರಗಳನ್ನು ಹೊರಗೆಡಹಿವೆ. ಈ ಸಾಕ್ಷ್ಯಾಧಾರಗಳ ಹಿನ್ನೆಲೆಯಲ್ಲಿ ಗಂಗ – ಕದಂಬ ಪೂರ್ವ ಕರ್ನಾಟಕದ ಚರಿತ್ರೆ ಮತ್ತು ಸಂಸ್ಕೃತಿಯನ್ನು ಪರಿಶೀಲಿಸೋಣ.

## ರಾಜಕೀಯ ಇತಿಹಾಸ

ಬ್ರಹ್ಮಗಿರಿ ಶಾಸನದಲ್ಲಿ ಸಿದ್ಧಾಪುರದ ಸಮೀಪದ ಬೆಟ್ಟದ ಬುಡದಲ್ಲಿರುವ ‘ಇಸಿಲ’ ಎನ್ನುವ ಪ್ರಮುಖ ನಗರದ ಸ್ಪಷ್ಟ ಉಲ್ಲೇಖವಿದೆ. ಇದರಲ್ಲಿ ಮೌರ್ಯ ಸಾಮ್ರಾಜ್ಯಕ್ಕೆ ಸೇರಿದ ಆ ಪ್ರದೇಶವನ್ನು ಆಳುತ್ತಿದ್ದವರ ಹೆಸರನ್ನು ತಿಳಿಸಲಾಗಿದೆ. ಸುವರ್ಣಗಿರಿಯ ಮಹಾಮಾತ್ಯರ ಮೂಲಕ ಆ ಪ್ರದೇಶದ ಆಡಳಿತಗಾರರಿಗೆ ಚಕ್ರವರ್ತಿ ದೇವನಾಮ ಪ್ರಿಯ ಪ್ರಿಯದರ್ಶಿ ನೀಡಿದ ಆಜ್ಞೆ ಆ ಶಾಸನದಲ್ಲಿ ಉಲ್ಲೇಖಗೊಂಡಿರುತ್ತದೆ. ಇದರಿಂದ ಸಹಜವಾಗಿ ಕರ್ನಾಟಕದ ಉತ್ತರ ಭಾಗವು ಮೌರ್ಯ ಸಾಮ್ರಾಜ್ಯದ ದಕ್ಷಿಣದ ಗಡಿಯಾಗಿತ್ತೆನ್ನುವುದು ಸ್ಪಷ್ಟವಾಗುತ್ತಿದೆ. ಸುವರ್ಣಗಿರಿ ಪ್ರಾಂತವನ್ನೊಳಗೊಂಡ ದಕ್ಷಿಣದ ಈ ಭಾಗದ ರಾಜಕೀಯ ಇತಿಹಾಸದ ಆರಂಭವನ್ನು ನಿರ್ಧರಿಸುವಲ್ಲಿ ಬ್ರಹ್ಮಗಿರಿ ಶಾಸನ ಮಹತ್ವದ ಮೈಲಿಗಲ್ಲಾಗಿದೆ.

ಅಶೋಕ ಚಕ್ರವರ್ತಿಯ ನಿಜನಾಮಧೇಯ ದೇವನಾಮ ಪ್ರಿಯದರ್ಶಿ ಎನ್ನುವುದು ಮೊತ್ತ ಮೊದಲಬಾರಿಗೆ ಮಾಸ್ಕಿಯ ಕಿರುಶಾಸನಗಳಲ್ಲಿ ವ್ಯಕ್ತಗೊಂಡಿದ್ದರೂ ಅದು ಖಚಿತವಾದದ್ದು ನಿಟ್ಟೂರು ಮತ್ತು ಉಡೆಗೊಲಂ ಶಾಸನಗಳಲ್ಲಿ. ಇದಕ್ಕಿಂತ ಹಿಂದಿನ ಶಾಸನಗಳಲ್ಲಿ ಅಶೋಕನನ್ನು ಆತನ ಬಿರುದಾವಳಿಗಳ ಮೂಲಕ ಮಾತ್ರ ಪರಿಚಯಿಸಲಾಗಿತ್ತು.

ಮೌರ್ಯ ಸಾಮ್ರಾಜ್ಯದ ಪತನದ ಬಳಿಕ ಕ್ರಿ. ಪೂ. ೧ನೆಯ ಮತ್ತು ಕ್ರಿ. ಶ. ೩ನೆಯ ಶತಮಾನಗಳ ನಡುವೆ ಕರ್ನಾಟಕದ ಉತ್ತರ ಭಾಗ ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತು. ಅದು ಅಂದು ‘ಸಾತವಾಹನೀಯಾಹರ’ ವೆಂದು ಕರೆಸಿಕೊಳ್ಳುತ್ತಿದ್ದ ಬಳ್ಳಾರಿ ಪ್ರದೇಶ ಪ್ರಾಯಶಃ ಎರಡನೆಯ ಪುಲುಮಾವಿ (ಮ್ಯಾಕದೋಣಿ ಶಾಸನದಲ್ಲಿ ಈತನನ್ನು ವಾಸಿಷ್ಠೀಪುತ್ರ ಪುಲುಮಾವಿ ಎನ್ನಲಾಗಿದೆ) ಯ ಕಾಲದಲ್ಲಿ ಶಾತವಾಹನರ ನೇರ ಆಳ್ವಿಕೆಗೆ ಒಳಪಟ್ಟಿತ್ತು. ಈತನ ಬಳಿಕ ಪಟ್ಟಕ್ಕೆ ಬಂದವನು ಬನವಾಸಿ ಸ್ಮಾರಕಶಾಸನದಲ್ಲಿ ಕಾಣಿಸಿಕೊಳ್ಳುವ ವಾಸಿತಿಪುತ ಸೀವ ಸಿರಿ ಪುಲುಮಾವಿ. ಈತನ ಪಟ್ಟದರಸಿ ಮಹಾದೇವಿಯು ಬನವಾಸಿಯವಳಾದ ಕಾರಣ ಆಕೆಯ ಸ್ಮಾರಕ ಶಾಸನವನ್ನು ಈ ಪ್ರದೇಶದಲ್ಲಿ ಸ್ಥಾಪಿಸಿದ್ದಿರಬೇಕು. ಆಂಧ್ರ ಪ್ರದೇಶದ ಧೂಲಿಕಟ್ಟದಲ್ಲಿ ಈ ರಾಜರುಗಳ ಭಾವಚಿತ್ರ ಮೊಹರು ಮಾಡಲ್ಪಟ್ಟ ನಾಣ್ಯಗಳು ದೊರಕಿವೆ.

ಬಳಿಕ ಕಾರವಾರ, ಬನವಾಸಿ, ಚಿತ್ರದುರ್ಗ, ರಾಯಚೂರು ಪ್ರಾಂತಗಳನ್ನು ಶಾತವಾಹನ ಸಾಮ್ರಾಟರ ಸಾಮಂತರಾಗಿ ಅವರ ಸಂಬಂಧಿಗಳಾದ ಕೋಲಾಪುರದ ಕೂರ, ಚೂತು ಮತ್ತು ಸಡಕಣಮಹಾರಥಿಗಳು ಆಳಿದರು. ಇವರು ಪರಸ್ಪರ ಮಾತ್ರವಲ್ಲದೆ ಕೊಂಕಣದ ಮಹಾಭೋಜರಿಗೂ ಸಂಬಂಧಿಗಳಾಗಿದ್ದರು.

ಮಾನವ್ಯಸ ಗೋತ್ರದ ಚೂತರಲ್ಲಿ ಹಾರೀತಪುತ್ರ ವಿಣುಕಾದ ಚೂತುಕುಲಾನಂದ ಶಾತಕರಣಿಯ ಹೆಸರು ಬನವಾಸಿ ನಾಗಾ ಶಾಸನದಲ್ಲಿ ಕಾಣಿಸುತ್ತಿದೆ. ಆತನ ರಾಜ್ಯಭಾರದ ೧೨ನೆಯ ವರ್ಷದಲ್ಲಿ ಆತನ ಮಗಳು, ಪ್ರಾಯಶಃ ಮಹಾಭೋಜ ಸದಾಶಿವ ಖಾದನಾಗಸಿರಿ (ಶಾತ ಶಿವಸ್ಕಂದ ನಾಗಶ್ರೀ) ಯ ರಾಣಿ ಯುವರಾಜನೊಂದಿಗೆ ಒಂದು ಕೆರೆ, ವಿಹಾರ ಮತ್ತು ನಾಗ ಪ್ರತಿಮೆಯನ್ನು ನಿರ್ಮಿಸಿದಳು. ಮಾಲವಳ್ಳಿ (ಸೊರಬ ತಾಲೂಕು) ಸ್ತಂಭ ಶಾಸನದಲ್ಲಿ ಕಾಣಿಸಿಕೊಳ್ಳುವ ವಿಣುಕಾದ ಚೂತುಕುಲಾನಂದ ಶಾತಕರಣಿ ೨ ಈ ಯುವರಾಜನೆನ್ನಲಾಗಿದೆ. ಈ ವಂಶದ ದೊರೆಗಳಲ್ಲಿ ಒಬ್ಬಾತನಿಗೆ ವಿಜಯಪುರಿಯ (ನಾಗಾರ್ಜುನಕೊಂಡ) ಸಿರಿ ವೀರಪುರಿಸನ ಮಗಳೊಂದಿಗೆ ವಿವಾಹವಾಗಿತ್ತು.

ಚಿತ್ರದುರ್ಗ ರಾಯಚೂರು ಪ್ರದೇಶಗಳನ್ನು ಇವರಲ್ಲದೆ ಸಡಕಣ ಕಲಲಾಯ, ಚಟಿತನ ಮಹಾರಥಿ ಮತ್ತು ಕಾರವಾರ ಪ್ರದೇಶಗಳನ್ನು ವಾಸಿತಿಪುತ ವಿಲಿವಾಯ ಕೂರ ಮೊದಲಾದವರು ಆಳಿದ್ದರೆನ್ನುವುದು ಚಂದ್ರವಳ್ಳಿ, ಮಾಸ್ಕಿ, ಕಾರವಾರಗಳಲ್ಲಿ ದೊರೆತ ನಾಣ್ಯಗಳಿಂದ ತಿಳಿದುಬರುತ್ತದೆ.

ಶಾತವಾಹನರ ಶಕ್ತಿಗುಂದತೊಡಗಿದಾಗ ಕಾಂಚಿ ಪಲ್ಲವರ ಆರಂಭದ ದೊರೆಗಳು (ಪ್ರಾಕೃತ ಸನ್ನದುಗಳಲ್ಲಿ ಉಲ್ಲೇಖಿಸಲ್ಪಟ್ಟವರು) ದಕ್ಷಿಣದಲ್ಲಿ ಬಳ್ಳಾರಿ ಬನವಾಸಿ ಒಳಗೊಂಡಂತೆ ತಮ್ಮ ರಾಜ್ಯವನ್ನು ವಿಸ್ತರಿಸಿಕೊಂಡರು. ಪಲ್ಲವ ಶಿವಸ್ಕಂದ ವರ್ಮನ ಹಿರೆ ಹಡಗಲಿ ತಾಮ್ರ ಶಾಸನ (ಕ್ರಿ. ಶ. ೪ನೆ ಶತಮಾನ) ಈ ಪ್ರಾಂತದಲ್ಲಿ ಪಲ್ಲವರ ಆಳ್ವಿಕೆ ಇದ್ದಿರುವುದನ್ನು ಸೂಚಿಸುತ್ತದೆ.

ಈ ಶಾಸನದಲ್ಲೂ ಈ ಪ್ರದೇಶವನ್ನು ಈ ಸಾತವಾಹನೀಯ ರಠ (ಶಾತವಾಹನೀಯ ರಾಷ್ಟ್ರ) ಎಂದು ಕರೆದಿರುವುದರಿಂದ ಹಿಂದೆ ಇದು ಶಾತವಾಹನರಿಗೆ ಸೇರಿತ್ತೆನ್ನುವುದು ಸ್ಪಷ್ಟವಾಗುತ್ತದೆ.

ತಾಳಗುಂಡ ಮತ್ತು ಗುಡ್ನಾಪುರ ಸ್ತಂಭ ಶಾಸನಗಳನುಸಾರ ಪಲ್ಲವ ಅಧಿಕಾರಿಗಳ ದುರ್ನಡತೆಯಿಂದ ಕುಪಿತನಾದ ಮಯೂರ ಶರ್ಮನು ಅವರಿಂದ ಈ ಪ್ರದೇಶವನ್ನು ಕಸಿದುಕೊಂಡು ಬನವಾಸಿಯನ್ನು ರಾಜಧಾನಿಯಾಗಿಸಿ, ಸ್ವತಂತ್ರ ರಾಜ್ಯ ಸ್ಥಾಪಿಸಿ, ಕರ್ನಾಟಕದ ಉತ್ತರ ಪ್ರಾಂತವನ್ನು ಆಳಿದ ವಿಚಾರ ತಿಳಿದು ಬರುತ್ತದೆ.

ಚಂದ್ರವಳ್ಳಿ ಶಾಸನದಲ್ಲೂ ಮಯೂರ ಶರ್ಮರು ಪುನ್ನಾಟವನ್ನು ಗೆದ್ದುಕೊಂಡ ವಿಚಾರ ರೂಪಿತವಾಗಿದೆ. ಇದು ದ. ಕರ್ನಾಟಕದಲ್ಲಿ ಪುನ್ನಾಟವೆನ್ನುವ ರಾಜ್ಯ ಇದ್ದುದನ್ನು ಸೂಚಿಸುತ್ತಿದೆ. ಈ ರಾಜ್ಯ ಮತ್ತು ರಾಜರುಗಳ ಬಗೆಗೆ ಈವರೆಗೆ ಬೇರಾವುದೇ ಸಾಕ್ಷ್ಯಾಧಾರಗಳು ದೊರೆತಿಲ್ಲ. ಇಂದಿನ ಶಿವಮೊಗ್ಗ ಪ್ರದೇಶವನ್ನು ಸೇಂದ್ರಕರು ಆಳುತ್ತಿದ್ದರು. ಮಯೂರ ಶರ್ಮ ಅವರನ್ನೂ ಸೋಲಿಸಿದ್ದನು. ಮಯೂರ ಶರ್ಮನ ರಾಜಕೀಯ ಉತ್ಕರ್ಷದ ಕಾಲದಲ್ಲೇ ಸಿಂಹನಂದಿ ಆಚಾರ್ಯರ ನಿರ್ದೇಶನದಲ್ಲಿ ದಡಿಗ ಮತ್ತು ಮಾಧವರು ಗಂಗ ಪೆರೂರ್ ಪ್ರದೇಶದಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಿದ್ದರು. ಹನ್ನೊಂದನೆ ಶತಮಾನದ ಒಂದು ಶಾಸನದನುಸಾರ ೯೬೦೦೦ ಹಳ್ಳಿಗಳಿದ್ದ (?) ಈ ರಾಜ್ಯಕ್ಕೆ ಕುವಲಲ (ಕೋಲಾರ) ರಾಜಧಾನಿ ಮತ್ತು ನಂದಿಗಿರಿ (ಬೆಂಗಳೂರಿನ ನಂದಿಬೆಟ್ಟ) ಶಕ್ತಿಶಾಲಿ ಕೇಂದ್ರವಾಗಿತ್ತು. ಈ ವಂಶದ ಆರಂಭಕಾಲದ ಶಾಸನಗಳಲ್ಲಿ ರಾಜ್ಯಸ್ಥಾಪಕನು ಕೊಂಗುಣಿ ವರ್ಮ ಎಂದಿದೆ. ದಡಿಗನ ಪ್ರಸ್ತಾಪವಿರುವುದಿಲ್ಲ.

### ಇತರ ಸಾಂಸ್ಕೃತಿಕ ಮುಖಗಳು

ಬ್ರಹ್ಮಗಿರಿ ಶಾಸನದಲ್ಲಿ ಬರುವ 'ಇಸಿಲ'ಪದ ಇನ್ನೊಂದು ವಿಚಾರದಲ್ಲೂ ಮಹತ್ವದ್ದಾಗಿದೆ. ಇತಿಹಾಸ ಪೂರ್ವ ಸಂಸ್ಕೃತಿಯ ಬೆನ್ನಲ್ಲಿ ಬಂದ 'ಇಸಿಲ'ನಗರದ ಅವಶೇಷಗಳನ್ನು ಶೋಧಿಸಲು ಪ್ರಾಕ್ತನ ಶಾಸ್ತ್ರಜ್ಞ ಡಾ| ಎಮ್. ಎಚ್. ಕೃಷ್ಣ ಅವರಿಗೆ ಇದೇ ಮೂಲಕಾರಣವಾಯಿತು. ಪ್ರಾಚೀನ ಕರ್ನಾಟಕ, ಅದರಲ್ಲೂ ವಿಶೇಷವಾಗಿ ಅಂದಿನ ನಗರಗಳ ಅವಶೇಷಗಳನ್ನು ಅರ್ಥಮಾಡಿಕೊಳ್ಳಲು ಬ್ರಹ್ಮಗಿರಿ ಶಾಸನ ಅದೆಷ್ಟು ನೆರವಾಗಿದೆ ಎಂದು ಪ್ರತ್ಯೇಕ ಹೇಳಬೇಕಾದ್ದಿಲ್ಲ.

ಚಂದ್ರವಳ್ಳಿ, ಬ್ರಹ್ಮಗಿರಿ, ಮಾಸ್ಕಿ, ಬನವಾಸಿ ವಡಗಾಂ–ಮಾಧವಪುರ ಮುಂತಾದೆಡೆಗಳಲ್ಲಿ ನಡೆಸಿದ ಪ್ರಾಚ್ಯಶೋಧನೆಯ ಫಲವಾಗಿ ಇಸಿಲದಂತೆಯೇ ಇತರ ಕಡೆಗಳಲ್ಲೂ ಇಟ್ಟಿಗೆ ಕಟ್ಟಡಗಳಿಂದೊಡಗೂಡಿ, ವಿದೇಶಗಳೊಂದಿಗೂ ವ್ಯಾಪಾರ ಸಂಬಂಧವಿರಿಸಿಕೊಂಡಿದ್ದ ಹಲವಾರು ನಗರಗಳಿದ್ದುದು ತಿಳಿದುಬಂತು. ತಡ್ಡವಾಡಿ, ಸತ್ತೂರ, ತನ್ನೊಲ್ಲಿ, ಪಟ್ಟದ ಕಲ್ಲು, ಐಹೊಳೆ (ಬಿಜಾಪುರ ಜಿಲ್ಲೆ), ಸಣ್ಣಚ್ಚಿ (ಗುಲ್ಬರ್ಗ), ನಾಗವಂದ, ಇಟಗಿ (ಧಾರವಾಡ), ಹಟ್ಟಿಯಂಗಡಿ, ಉದ್ಯಾವರ (ದ. ಕನ್ನಡ), ಬೆಂಗಳೂರು, ಮನ್ನೇ (ಬೆಂಗಳೂರು), ತಿಪ್ಪೂರು (ಮಂಡ್ಯ), ಹೆಮ್ಮಿಗೆ, ಬೂದಿತಿಟ್ಟ (ಮೈಸೂರು) ಮುಂತಾದೆಡೆಗಳಲ್ಲೆಲ್ಲ ನಗರಗಳ ಅವಶೇಷಗಳು ದೊರೆತಿವೆ. ಪ್ರಾಕ್ತನ ಹಾಗೂ ಶಾಸನ ಶಾಸ್ತ್ರದೃಷ್ಟಿಯಿಂದ ಈ ಅವಶೇಷಗಳ ಅಧ್ಯಯನ ಅಂದಿನ ಕಟ್ಟಡಗಳು, ಆಭರಣಗಳು, ಗೃಹೋಪಯೋಗಿ ಸಾಧನಗಳು, ಕಲೆ, ಧರ್ಮ, ಭಾಷೆ, ಲಿಪಿ, ನಾಣ್ಯ–ಒಟ್ಟಿನಲ್ಲಿ ಅಂದಿನ ನಾಗರಿಕತೆಯನ್ನು ಅರಿತುಕೊಳ್ಳಲು ತುಸುಮಟ್ಟಿಗೆ ಸಹಕಾರಿಯಾಗುತ್ತದೆ.

### ವಾಸ್ತು ಶಿಲ್ಪ (ಧಾರ್ಮಿಕ ಮತ್ತಿತರ ಕಟ್ಟಡಗಳು)

ಹಲವಾರು ಕಡೆಗಳಲ್ಲಿ ಅದರಲ್ಲೂ ವಿಶೇಷವಾಗಿ ವಡಗಾಂ–ಮಾಧವಪುರದಲ್ಲಿ ನಡೆಸಿದ ಭೂಸಂಶೋಧನೆ ಸಂಪದ್ಭರಿತ ನಗರವೊಂದರ ಸ್ಥೂಲ ರೂಪವನ್ನು ನಮಗೆ ಒದಗಿಸಿಕೊಡುತ್ತದೆ. ನಗರಾವಶೇಷಗಳನ್ನು ಗಮನಿಸಿದಾಗ ಜನವಸತಿ ಪ್ರದೇಶದಲ್ಲಿ ಅಗಲವಾದ ರಸ್ತೆಗಳೂ ಅಲ್ಲಲ್ಲಿ ಇದಕ್ಕೆ ಅಡ್ಡವಾಗಿ ಬರುವ ಸಮಾನಾಂತರ ಕಾಲು ದಾರಿಗಳೂ ಇದ್ದುದು ಕಂಡು ಬರುತ್ತದೆ. ಮಾರ್ಗದ ಇಕ್ಕೆಡೆಗಳಲ್ಲೂ ಇಟ್ಟಿಗೆಯಿಂದ ನಿರ್ಮಿಸಲಾದ ಕಟ್ಟಡಗಳಿದ್ದುವು. ವಸತಿ ಗೃಹಗಳಿಗೆ ಇಟ್ಟಿಗೆಯ ಆವರಣವಿರುವ ಬಾವಿಯ ಪೂರೈಕೆ ಇತ್ತು. ಇಟ್ಟಿಗೆ ಕಟ್ಟಡವಿರುವ ಬೃಹತ್ತಾದ ಕೆರೆಗಳೂ ಇದ್ದುವು. ವಸತಿ ಪ್ರದೇಶದ ಸುತ್ತ ಎತ್ತರದ ಗೋಡೆಗಳ ಸರಳ ಆವರಣ ಕಾಣಿಸುತ್ತದೆ. (ಸಣ್ಣಚ್ಚಿ) ಬನವಾಸಿಯಲ್ಲಿ ಕೋಟೆಯ ಗೋಡೆಯ ಸುತ್ತ ನೀರು ತುಂಬುವ ಕಂದಕಗಳಿದ್ದುವು. ಒಟ್ಟಿನಲ್ಲಿ ಹರಪ್ಪ ಮೊಹೆಂಜದಾರೋ ಸಂಸ್ಕೃತಿಯನ್ನು ನೆನಪಿಗೆ ತರುವ ಸುಯೋಜಿತ ನಗರಗಳನ್ನು ಇಲ್ಲಿ ಕಾಣಬಹುದಾಗಿದೆ. ನದೀ ದಡದ ಪಟ್ಟಣಗಳಲ್ಲಿ ಇಟ್ಟಿಗೆಯಿಂದ ನಿರ್ಮಿಸಲಾದ ಸ್ನಾನ ಘಟ್ಟಗಳಿದ್ದುವು. (ಸಣ್ಣಚ್ಚಿ, ಬನವಾಸಿ).

ಬ್ರಹ್ಮಗಿರಿ, ವಡಗಾಂ–ಮಾಧವಪುರ ಮತ್ತು ಬನವಾಸಿಗಳಲ್ಲಿ ವೈವಿಧ್ಯಮಯವಾದ ಇಟ್ಟಿಗೆ ಕಟ್ಟಡಗಳ ಅವಶೇಷಗಳನ್ನು ಕಾಣಬಹುದು. ಕೆಲವೊಂದು ಕಟ್ಟಡಗಳಲ್ಲಿ ಕೇಂದ್ರದಲ್ಲಿ ವಿಭಾಗಿಸಲ್ಪಟ್ಟ ದೊಡ್ಡ ಸಭಾಂಗಣಗಳಿವೆ. ಅರ್ಧವೃತ್ತಾಕಾರದ ಹಿಂಭಾಗ, ಇಕ್ಕೆಡೆಗಳಲ್ಲಿ ಹಜಾರವಿರುವ ಈ ರಚನೆಗಳು ನಾಗಾರ್ಜುನಕೊಂಡದ ಬೌದ್ಧ ಚೈತ್ಯಗಳನ್ನು ಹೋಲುತ್ತವೆ. ವಡಗಾಂ–ಮಾಧವಪುರದ ಇನ್ನು ಕೆಲವು ರಚನೆಗಳಲ್ಲಿ ಎರಡು ಕೊನೆಗಳ ನಡುವೆ ಚೌಕಾಕಾರದ ಕಣಜವಿದೆ. ನೆನಗುಳಿ ಮತ್ತು ಸ್ನಾನ ಗೃಹ ಲಗತ್ತಾದ ದೊಡ್ಡ ಕೋಣೆಗಳೂ ಕಾಣಿಸುತ್ತವೆ. ನೆಲಕ್ಕೆ ಚೌಕಾಕೃತಿಯ ಇಟ್ಟಿಗೆ ತುಂಡುಗಳನ್ನು ಹಾಸಲಾಗಿದೆ. ಪಟ್ಟದ ಕಲ್ಲಿನ ಕಟ್ಟಡಗಳು ಸಾಮಾನ್ಯವಾಗಿ ಚೌಕಾಕೃತಿಯಲ್ಲಿದ್ದು ಬಿಳಿ ಸುಣ್ಣದ ಗಾರೆ ಇರುವ ನಾಲ್ಕು ಕಂಬಗಳನ್ನು ಹೊಂದಿವೆ. ಇವೆಲ್ಲವೂ ಧಾರ್ಮಿಕ ಕ್ರಿಯೆಗಳಿಗಾಗಿ ನಿರ್ಮಾಣಗೊಂಡಂತೆ ವ್ಯಕ್ತವಾಗುತ್ತದೆ.

ಅಶೋಕನ ಕಾಲದಿಂದಲೂ ಬನವಾಸಿ ಪ್ರಾಂತದಲ್ಲಿ ಬೌದ್ಧ ಧರ್ಮ ಪ್ರಚಾರದಲ್ಲಿತ್ತು ಎನ್ನುವುದು ಸಾಹಿತ್ಯ ಮೂಲಗಳಿಂದ ನಮಗೆ ತಿಳಿದು ಬರುತ್ತದೆ. ಆದರೆ ಈವರೆಗೆ ಇಲ್ಲಿನ ಅವಶೇಷಗಳಲ್ಲಿ ಬೌದ್ಧ ಸ್ತೂಪಗಳು ಪತ್ತೆಯಾಗಿಲ್ಲ. ಆದರೆ ಬನವಾಸಿಯ ಕಡಗೋಡುನಲ್ಲಿ ಭಾಗಶ: ನಾಶವಾಗಿರುವ ರಚನೆ ಸ್ತೂಪವಾಗಿದ್ದಿರುವ ಸಾಧ್ಯತೆ ಇದೆ. ಇದೇ ರೀತಿಯಲ್ಲಿ ಸಣ್ಣಚ್ಚಿಯಲ್ಲಿ ಸ್ತೂಪದ ವೃತ್ತಾಕಾರದ ತಳಭಾಗ ದೊರೆಕಿದೆ.

ತಾಳಗುಂದ (ಪುರಾತನ ಸ್ಥಾನುಕುಂದೂರು)ದಲ್ಲಿ ಶಾತಕರಣಿ ಭೇಟಿ ನೀಡಿದ್ದ ಶಿವ ದೇವಸ್ಥಾನ ಒಂದು ಇತ್ತು ಎಂದು ಕದಂಬರಾಜ ಶಾಂತಿವರ್ಮನ ತಾಳಗುಂದ ಶಾಸನ ಹೇಳುತ್ತದೆ. ಪಕ್ಕದಬನವಾಸಿಯಲ್ಲಿ ಕಮಾನಿನಾಕೃತಿಯ ಕಟ್ಟಡ ಒಂದರಲ್ಲಿ ಕ್ರಿ. ಶ. ಮೂರನೆಯ ಶತಮಾನದ ಶೈಲಿಯಲ್ಲಿರುವ ಕಾರ್ತಿಕೇಯನ ಮೂರ್ತಿ ಒಂದು ದೊರಕಿದೆ.

ವಿಣ್ಹುಕದ ಚುಟುಕುಲಾನಂದ ಶಾತಕರಣಿಯ ಮಗಳು ಶಿವಸ್ಕಂದ ನಾಗಸಿರಿ ಬನವಾಸಿಯಲ್ಲಿ ಒಂದು ಕೆರೆಯನ್ನು ಕಟ್ಟಿಸಿದ್ದಳು. ಪ್ರಾಯಶ: ಆದಿ ಮಧುಕೇಶ್ವರದ ಸಮೀಪದಲ್ಲಿ ಇಟ್ಟಿಗೆಯ ಬಂಧದ ಚಿಹ್ನೆ ಇರುವ ಕೆರೆಯೇ ಇದಾಗಿರಬೇಕು. ಅಕ್ಕಪಕ್ಕದಲ್ಲಿ ಇಟ್ಟಿಗೆ ಕಟ್ಟಡ ಅವಶೇಷಗಳು ಒಂದು ನಗರದ ಅಸ್ತಿತ್ವವನ್ನು ಸಾರುತ್ತಿವೆ. ವಡಗಾಂ–ಮಾಧವಪುರ ಚಂದ್ರವಳ್ಳಿಗಳಲ್ಲಿ ಆಯತಾಕಾರದ ಕೋಣೆಗಳಿರುವ ಸಾರ್ವಜನಿಕ ಕಟ್ಟಡಗಳು, ಚೌಕಾಕೃತಿಯ ಕೋಣೆ, ದೀರ್ಘಾಯತ ಹಜಾರ, ವೃತ್ತಾಕಾರ ಬಾವಿ ಮತ್ತು ಕಣಜಗಳಿರುವ ವಸತಿಗಳೂ, ದೀರ್ಘವಾದ ಮತ್ತು ಅಗಲವಾದ (೭ ಮೀ.) ರಸ್ತೆಗಳೂ, ಇವುಗಳ ಪಕ್ಕದಲ್ಲಿ ಬೃಹತ್ ಕಟ್ಟಡಗಳೂ ಇದ್ದಿರುವುದು ಕಂಡುಬರುತ್ತದೆ.

ಜಲ್ಲಿ ಕಲ್ಲು ಮತ್ತು ಕೆಂಪು ಮುರ ಕಲ್ಲುಗಳ ಗಟ್ಟಿ ತಳಪಾಯದ ಮೇಲೆ ಕಟ್ಟಡಗಳನ್ನು ಕಟ್ಟಲಾಗಿದೆ. ಸಡಿಲಾದ ಮತ್ತು ಸಮತಳವಿಲ್ಲದ ಭೂಮಿಯಲ್ಲಿ ಇಂತಹ ಅಡಿಗಟ್ಟು ಅಗತ್ಯವಾಗಿದೆ. ಇಟ್ಟಿಗೆಗಳನ್ನು ಅನುಕ್ರಮವಾಗಿ ಉದ್ದಕ್ಕೂ ಅಡ್ಡಕ್ಕೂ ಇರಿಸಿ (ಇದು ಇಂಗ್ಲಿಷ್ ಬಂಧ ಎನ್ನುವ ಹೆಸರಿನಿಂದ ಜನಪ್ರಿಯವಾಗಿದೆ) ಗೋಡೆಗಳನ್ನು ಕಟ್ಟಲಾಗಿದೆ. ಹೆಚ್ಚು ಕಮ್ಮಿ ಸಮನಾದ ದಪ್ಪಹೊಂದಿರುವ ಗೋಡೆಗಳಿಗೆ ಕೆಲವೆಡೆ ಸುಣ್ಣದ ಗಾರೆ ಕೊಡಲಾಗಿದೆ. ಇಟ್ಟಿಗೆಗಳ ಬಂಧ ಸಾಮಗ್ರಿ ಮಣ್ಣಿನ ಗಾರೆ. ವಡಗಾಂ–ಮಾಧವಪುರದ ಭೂಶೋಧನೆಯಲ್ಲಿ ದೊರೆತ ಇಟ್ಟಿಗೆ ಕಟ್ಟಡಗಳಲ್ಲಿ ಈ ಎಲ್ಲಾ ರಚನಾ ವಿಧಾನಗಳು ಕಾಣಿಸುತ್ತಿವೆ.

ಕೋಣೆಗಳ ಉದ್ದೇಶಿತ ಆಕೃತಿ ಚೌಕ ಅಥವಾ ಆಯತವಿದ್ದರೂ ಕೋನ ಹಾಗೂ ಬದಿಯಲ್ಲಿ ವ್ಯತ್ಯಾಸ ಕಾಣಿಸುತ್ತದೆ. ಪ್ರಾಯಶಃ ಕರ್ಣರೇಖೆಗಳು ಸಮಾನವಾಗಿರುವಂತೆ ಎಚ್ಚರವಹಿಸದಿರುವುದೇ ಇದಕ್ಕೆ ಕಾರಣವಿರಬಹುದು. ರಚನಾವಿಧಾನ ಅರ್ಧವೃತ್ತಾಕೃತಿಯಲ್ಲಿದೆ.

ಕೆಲವು ಕಟ್ಟಡಗಳಲ್ಲಿ ಗೋಡೆಗಳನ್ನು ಮಾಡಿನವರೆಗೂ ಏರಿಸದೆ ಅರ್ಧದ ವರೆಗೆ ತಂದು ನಡುನಡುವೆ ಮರದ ಕಂಬಗಳನ್ನು ನಾಟಿರುವುದು ಕಾಣಿಸುತ್ತದೆ. ಪ್ರಾಯಶಃ ಇವುಗಳ ಮಧ್ಯ ಬಿದಿರಿನ ತಟ್ಟಿ ಅಥವಾ ತೆಂಗು ಕಂಗಿನ ಓಲೆಗಳನ್ನು ಹೆಣೆದು ಕಂಬಗಳಿಗೆ ಕಟ್ಟಿ ಮಾಡಿನವರೆಗೆ ಏರಿಸುತ್ತಿದ್ದಿರಬೇಕು. ಈ ಬಗೆಯ ಗೋಡೆಗಳನ್ನು ಘಟ್ಟ ಪ್ರದೇಶಗಳಲ್ಲಿ ಇಂದು ಕೂಡಾ ಸರ್ವೇಸಾಮಾನ್ಯವಾಗಿ ಕಾಣಬಹುದು. ಕಟ್ಟಡಗಳ ಮಾಡಿಗೆ ಕೈಯಿಂದ ತಯಾರಿಸಿ ಸುಟ್ಟಿರುವ ಹಂಚುಗಳನ್ನು ಹೊದಿಸಲಾಗಿದೆ.

ಮಾಮೂಲಿ ಗಾತ್ರದ ೪೫×೨೨×೮ ಸೆ.ಮೀ. ಇಟ್ಟಿಗೆಗಳನ್ನಲ್ಲದೆ ೫೨×೨೮×೧೦ ಸೆ.ಮೀ., ೪೪×೨೩×೧೦ ಸೆ.ಮೀ., ೩೪×೩೭×೧೦ ಸೆ.ಮೀ., ೨೪×೨೪×೮ ಸೆ.ಮೀ. ಗಾತ್ರದ ಇಟ್ಟಿಗೆಗಳನ್ನು ಇಲ್ಲಿ ಬಳಸಲಾಗಿದೆ. ಗೋಡೆ ಕಟ್ಟಲು ಕೆಲವೆಡೆ ಇಟ್ಟಿಗೆಯ ತುಂಡುಗಳನ್ನು ಬಳಸಿರುವುದೂ ಕಾಣಿಸುತ್ತದೆ.

ಕಣಜ ಮತ್ತು ಬಾವಿಗಳಿಗೆ ಮೂರು ಬಗೆಯ (ಬೆಣೆಯಾಕೃತಿ, ಬಾಗಿದ ಆಯತಾಕೃತಿ, ಹಾಗೂ ದೀರ್ಘಾಯತ) ಇಟ್ಟಿಗೆಗಳನ್ನು ಬಳಸಿದ್ದರು. ಎಲ್ಲಾ ಕಡೆಗಳಲ್ಲೂ ಗಾರೆಗೆ ಮಣ್ಣನ್ನೇ ಬಳಸಲಾಗಿದೆ. ಮೊದಲೆರಡು ಬಗೆಯ ಇಟ್ಟಿಗೆಗಳನ್ನು ಬಳಸಿದ ಕಣಜ ಮತ್ತು ಬಾವಿಗಳು ಪರಿಪೂರ್ಣ ವೃತ್ತಾಕೃತಿಯಲ್ಲಿದ್ದರೆ ದೀರ್ಘಾಯತ ಇಟ್ಟಿಗೆಗಳನ್ನು ಬಳಸಿದಾಗ ಅಂಡಾಕೃತಿಯಲ್ಲಿರುವುದು ಕಾಣಿಸುತ್ತದೆ.

### ಗೃಹೋಪಯೋಗಿ ಪರಿಕರಗಳು

ಗೃಹೋಪಯೋಗಿ ಸಾಧಾನಗಳಾಗಿ ಮಣ್ಣಿನ ಕೊಡಗಳು, ದಾಸ್ತಾನಿಡುವ ದಪ್ಪದ ಹೂಜಿಗಳು, ಬೋಗುಣಿಗಳು, ಲೋಟಾಗಳು, ವಿವಿಧ ಬಗೆಯ ಮುಚ್ಚಳಗಳು ಆ ಕಾಲದಲ್ಲಿ ಬಳಕೆಯಲ್ಲಿದ್ದುವು. ಇವುಗಳಲ್ಲಿ ಕೆಲವಕ್ಕೆ ಕೆಂಪು–ಕಪ್ಪು ಬಣ್ಣದ ಮೆರುಗಿನ ಮೇಲ್ಮೈ ಇದ್ದುವು. ಕೇಂದ್ರದಲ್ಲಿ ಗೆರೆಗಳನ್ನೆಳೆದಿರುವ ಆಳವಿಲ್ಲದ, ಚಪ್ಪಟೆ ತಳದ ಪಾತ್ರೆಗಳೂ ಬಳಕೆಯಲ್ಲಿದ್ದುವು. ಮೆಡಿಟರೇನಿಯನ್ ಪ್ರದೇಶಗಳಲ್ಲಿ ಸಾಮಾನ್ಯವಾಗಿರುವ ಈ ಬಗೆಯ ಮಡಕೆಯ ಶೈಲಿ ರೋಮನ್ ಪ್ರಭಾವದಿಂದ ಇಲ್ಲೂ ಕಾಣಿಸಿಕೊಂಡಿರಬೇಕು. ಇನ್ನೊಂದು ವಿಶಿಷ್ಟ ಬಗೆಯ ಪಾತ್ರೆ ಎಂದರೆ ಕೆಂಪು ಮೆರುಗು ಕೊಡಲಾದ, ಚಿಮುಕುದಾನಿ. ಸಮನಾಗಿ ಸುಡಲ್ಪಟ್ಟ, ನಯವಾದ ಮಣ್ಣಿನ ಈ ಪಾತ್ರೆಗೆ ನಸುಗೆಂಪು ಬಣ್ಣವಿದೆ. ಇದು ವಿದೇಶಿ ಮೂಲದ ಕುಂಬಾರಿಕೆ ಎನ್ನುವ ಅಭಿಪ್ರಾಯವಿದ್ದರೂ ಈಗ ಈ ಶೈಲಿಯನ್ನು ದೇಸೀ ಎಂದೇ ಪರಿಗಣಿಸಲಾಗಿದೆ.

ಕೆಲವು ಚಿಕ್ಕ ಗಾತ್ರದ ಪಾತ್ರೆಗಳ ಹೊರ ಮೈಯನ್ನು ರೇಖಾ ವಿನ್ಯಾಸಗಳಿಂದ ಅಲಂಕರಿಸಲಾಗಿದೆ. ಕೆಂಪು, ಹಳದಿ ಮತ್ತು ಕಂದು ಬಣ್ಣಗಳ ಹಿನ್ನೆಲೆಯಲ್ಲಿ ಅಡ್ಡ ನೀಟ ಸಮಾನಾಂತರ, ಅಡ್ಡಾದಿಡ್ಡಿ ಮತ್ತು ವೃತ್ತಾಕಾರದಲ್ಲಿ ರೇಖೆಗಳನ್ನೆಳೆಯಲಾಗಿದೆ.

ಬಲು ಅಪರೂಪವಾಗಿ ಕಬ್ಬಿಣದ ಮತ್ತು ತಾಮ್ರದ ಮುಚ್ಚಳ, ತಟ್ಟೆ ಮೊದಲಾದ ಸಾಮಗ್ರಿಗಳು ಬಳಕೆಯಲ್ಲಿದ್ದುವು.

### ಆಭರಣಗಳು

ಅರೆ ಪ್ರಶಸ್ತ ಕಲ್ಲುಗಳಿಂದ ತೂತಿನ ಮಣಿ ಮತ್ತು ಪದಕಗಳನ್ನು ನಿರ್ಮಿಸುವುದರಲ್ಲಿ ಅಂದಿನ ಜನರ ಆಭರಣಗಳ ಅಭಿರುಚಿ ವ್ಯಕ್ತವಾಗುತ್ತದೆ. ಇದಕ್ಕಾಗಿ ಅವರು ಮಬ್ಬುಗೆಂಪಿನ ಶಿಲೆ, ಶ್ವೇತ ಸ್ಫಟಿಕ ಮತ್ತು ಸೂರ್ಯಕಾಂತ ಮಣಿಗಳನ್ನು ಬಳಸುತ್ತಿದ್ದರು. ಹಾರ, ಬಳೆ ಮತ್ತು ಉಂಗುರಗಳಲ್ಲಿ ವೈಡೂರ್ಯವನ್ನು ಬಳಸಲಾಗುತ್ತಿತ್ತು. ಇದು ಗಮನಾರ್ಹಯಾಕೆಂದರೆ ಭಾರತದಲ್ಲಿ ವಾಣಿಜ್ಯೋಪಯೋಗಕ್ಕೆ ಬರುವಷ್ಟು ವೈಡೂರ್ಯ ದೊರಕುವುದಿಲ್ಲ. ಆದರೆ ಇರಾನ್ ಮತ್ತು ಅಫಘಾನಿಸ್ತಾನದಲ್ಲಿ ದೊರೆಯುತ್ತದೆ. ಆದಕಾರಣ ಇವು ದೂರ ಪ್ರದೇಶಗಳ ವ್ಯಾಪಾರ ಸಂಪರ್ಕದಿಂದ ಇಲ್ಲಿಗೆ ಆಮದಾಗಿರಬೇಕು. ಕೆಂಪು ಕಲ್ಲಿನ ಕೆತ್ತನೆ ಮತ್ತು ಅವುಗಳನ್ನು ಜೇಡಿ ಮಣ್ಣಿನ ಮೇಲೆ ಕೂರಿಸುವ ಕಲೆಯೂ ವಿಶಿಷ್ಟದ್ದಾಗಿದೆ. ತಾಮ್ರ, ಬಂಗಾರ ಮುಂತಾದ ಲೋಹಗಳಿಂದಲ್ಲದೆ ಚಿಪ್ಪು, ಎಲುಬು, ಆವೆ ಮಣ್ಣಿನಿಂದಲೂ ಆಭರಣಗಳನ್ನು ತಯಾರಿಸುತ್ತಿದ್ದರು. ತಾಮ್ರದ ಬಳೆಗಳು ತೀರಾ ಅಪರೂಪ. ಜೇಡಿ ಮಣ್ಣಿನವುಗಳು ಸಾಮಾನ್ಯ.

### ಕಲೆ

ಅಂದಿನ ಜನತೆಯ ಕಲಾಭಿಜ್ಞತೆ ಮತ್ತು ಸೃಜನಶೀಲತೆ ಶಿಲೆ ಮತ್ತು ಆವೆ ಮಣ್ಣಿನಿಂದ ಕಲಾತ್ಮಕವಾಗಿ ನಿರ್ಮಿಸಲಾದ ಆಟಿಕೆಗಳು, ವೃತ್ತಾಕೃತಿಯ ಬಟ್ಟಲುಗಳು, ಸೊಗಸಾದ ಉಡುಗೆತೊಟ್ಟ ಮಾನವಾಕೃತಿಗಳು, ಆನೆ, ಕುದುರೆ, ಎತ್ತು, ನಾಯಿ, ಹಕ್ಕಿಗಳು, ರಥಚಕ್ರ ಮುಂತಾದ ರಚನೆಗಳಲ್ಲಿ ಕಾಣಿಸುತ್ತದೆ.

ಸಣ್ಣಚ್ಚಿಯಲ್ಲಿ ದೊರೆತ ವಿವಿಧ ಬಗೆಯ ಆಭರಣ ತೊಟ್ಟು ರುಮಾಲು ಧರಿಸಿದ ಶ್ರೀಮಂತ ವ್ಯಕ್ತಿಗಳ ಚಿಕ್ಕ ಪ್ರತಿಮೆಗಳು, ವಡಗಾಂ–ಮಾಧವಪುರದ ಆನೆ, ಹಕ್ಕಿ, ಕುದುರೆ ಮುಂತಾದ ಆಕೃತಿಗಳು, ಉತ್ತಮ ಮಾದರಿಗಳಾಗಿವೆ. ಇದಲ್ಲದೆ ಧಾರ್ಮಿಕ ಮಹತ್ವದ ಬುದ್ಧನ ಪ್ರತಿಮೆಗಳು, ಪುರಾಣಕ್ಕೆ ಸಂಬಂಧಿಸಿದ ಬುದ್ಧ ಶಿರ, ಕಾಲಾರಿ ಶಿವ ವಿಗ್ರಹಗಳೂ ವಡಗಾಂ–ಮಾಧವಪುರದಲ್ಲಿ ದೊರೆತಿವೆ.

ಚಿಕ್ಕ ವಿಗ್ರಹಗಳನ್ನು ಟೊಳ್ಳು ಅಥವಾ ಗಟ್ಟಿರೂಪದಲ್ಲಿ ಒಂದು ಅಥವಾ ಎರಡು ಅಚ್ಚುಗಳಲ್ಲಿ ತಯಾರಿಸಲಾಗಿದೆ. ಸಾಂಪ್ರದಾಯಿಕ ರೂಪದಲ್ಲಿದ್ದರೂ ಈ ಮಾದರಿಗಳು ಅತ್ಯಂತ ಸುಂದರವಾಗಿವೆ. ಇವುಗಳ ವಿನ್ಯಾಸ, ಅಲಂಕಾರಗಳಲ್ಲಿ ದೇಸೀ ಶೈಲಿಯೊಂದಿಗೆ ಅಮರಾವತಿ ಗಾಂಧಾರ ಮತ್ತು ಕುಶಾನ ಶೈಲಿಗಳು ಮಿಳಿತಗೊಂಡಿರುವುದನ್ನು ಕಾಣಬಹುದಾಗಿದೆ. ಸಣ್ಣಚ್ಚಿ,

ಬನವಾಸಿ, ಗೂಡನಾಪುರ, ಹೈಗೊಂಡ, ಗೋಕರ್ಣ ಮತ್ತಿತರ ಕಡೆಗಳಲ್ಲಿ ಸುಣ್ಣ ಕಲ್ಲು ಮತ್ತು ಶಿಲೆಯಲ್ಲಿ ನಿರ್ಮಿಸಲಾದ ಶಿಲ್ಪಗಳು ದೊರೆತಿವೆ.

ಸಣ್ಣಚ್ಚಿಯ ಸಹಜ ಭಂಗಿಯಲ್ಲಿರುವ ತಲೆ ಇಲ್ಲದ ಕುಬ್ಜ ಬುದ್ಧನ ಜೀವನ ಚರಿತ್ರೆಯನ್ನು ನಿರೂಪಿಸುವ ಚಿತ್ರ ಫಲಕ, ಕೈಮುಗಿದ ಭಕ್ತನ ಮೇಲು ಕೆತ್ತನೆ ಇರುವ ಸಂಪುಟ, ಬನವಾಸಿಯಲ್ಲಿ ದೊರೆತ ಸೂಕ್ಷ್ಮ ಕೆತ್ತನೆ ಕೆಲಸದಿಂದ ಕೂಡಿದ ಸುಣ್ಣ ಕಲ್ಲಿನ ಪಂಚಶಿರದ ಮುಚಿಲಿಂದ ನಾಗಾ ಪ್ರತಿಮೆ, ಗುಂಡಪುರದ ಕುಬ್ಜ, ಸಹಜ ಭಂಗಿಯ ಯಕ್ಷ, ಹೈಗುಂಡದ ಬೃಹದ್ಗಾತ್ರದ ಪಾಲಕ ಯಕ್ಷ, ಕುಬ್ಜ ಯಕ್ಷ, ಬನವಾಸಿಯ ಮಿದು ಭಿನ್ನ ಸ್ತರ ಶಿಲೆಯಲ್ಲಿ ರಚಿಸಲಾದ ಕೈಮುಗಿದ ಭಕ್ತೆಯೊಬ್ಬಳ ಶಿಲ್ಪ, ಗೋಕರ್ಣದ ದ್ವಿಭುಜ ಮಹಾ ಗಣಪತಿ, ಇವೆಲ್ಲವು ಆ ಕಾಲದ ಶಿಲ್ಪಗಳ ಶ್ರೀಮಂತ ಕಲಾ ಪರಂಪರೆಯನ್ನು ತೋರುತ್ತಿವೆ.

ಕ್ರಿ. ಪೂ. ೧ ನೆಯ ಶತಮಾನದಿಂದ ಕ್ರಿ. ಶ. ೩ ನೆಯ ಶತಮಾನದ ನಡುವೆ ಅಮರಾವತಿ, ನಾಗಾರ್ಜುನ ಕೊಂಡ ಮತ್ತು ಪಶ್ಚಿಮ ದಕ್ಷಿಣದ ಪ್ರಭಾವ ಇವರ ಶೈಲಿಯ ಮೇಲಾದುದನ್ನು ಮೂರು ಅಥವಾ ನಾಲ್ಕು ಘಟ್ಟಗಳಲ್ಲಿ ಗುರುತಿಸಬಹುದು. ಸಣ್ಣಚ್ಚಿಯ ಹೆಚ್ಚಿನ ಕೆತ್ತನೆಗಳಲ್ಲಿ ಕ್ರಿ. ಶ. ೧ ಮತ್ತು ೨ ನೇ ಶತಮಾನದ ಶೈಲಿ ಮತ್ತು ಅಮರಾವತಿಯ ಸಂಪ್ರದಾಯವನ್ನು ಗುರುತಿಸಬಹುದಾದರೆ ಬನವಾಸಿಯ ಮಹಿಳೆ ಮತ್ತು ಯಕ್ಷರಲ್ಲಿ ಪಶ್ಚಿಮ ದಕ್ಷಿಣ, ವಿಶೇಷವಾಗಿ ಕಾರ್ಲೆ (ಪೂಣೆ)ಯ ಪ್ರಭಾವವಿದ್ದು ಮೊದಲನೆಯ ಎರಡು ಘಟ್ಟಗಳನ್ನು ಪ್ರತಿನಿಧಿಸುತ್ತದೆ. ಬನವಾಸಿಯ ಮೂರನೆಯ ಘಟ್ಟದ ಮುಚಿಲಿಂದ ನಾಗಾ ಸಣ್ಣಚ್ಚಿಯ ಅಮರಾವತಿಯ ಶೈಲಿ ನಾಗನ ದೇಸೀ ರೂಪವಾಗಿದೆ. ಕ್ರಿ. ಶ. ಮೂರನೆಯ ಶತಮಾನಕ್ಕೆ ಸೇರಿದ ಗೋಕರ್ಣದ ದ್ವಿಭುಜ ಗಣೇಶ ನಾಲ್ಕನೆಯ ಘಟ್ಟದ ದೇಸೀ ಶೈಲಿಗೆ ಮಾದರಿಯಾಗಿದೆ.

ಹೊಲೆ (ಉತ್ತರ ಕನ್ನಡ ಜಿಲ್ಲೆಯ ಅಂಕೋಲದ ಸಮೀಪ), ಹಂಶಿ (ಶಿವಮೊಗ್ಗ ಜಿಲ್ಲೆ), ಹಟ್ಟಿಯಂಗಡಿ (ದ. ಕನ್ನಡ)ಗಳ ಸಮೀಪ ದೊರಕಿರುವ ಬ್ರಹ್ಮ ಸೂತ್ರದ ಶಿವಲಿಂಗಗಳು ಗಮನಾರ್ಹವಾದ ಭಿನ್ನ ಮಾದರಿಗಳಾಗಿವೆ.

''ಛಾಯಾ ಪತಿಮಾ'' ಎಂದೆನಿಸಿಕೊಂಡ, ಬರಹಗಳಿಂದೊಡಗೂಡಿದ, ಮೃತರ ಸ್ಮಾರಕ ಶಿಲ್ಪ ಪಟ್ಟಗಳೂ ಕೆಲವೆಡೆ ದೊರೆತಿವೆ. ಮೇಲು ಬದಿಯಲ್ಲಿ ಚೈತ್ಯ ಮುದ್ರೆ ಇರುವ ಬನವಾಸಿಯ ಶಿಲ್ಪ ಪಟ್ಟ ಶಿವ ಸಿರಿ ಪುಲುಮಾವಿಯ ಮಹಾದೇವಿಯದ್ದಾಗಿರುತ್ತದೆ. ಬೆಳವಡಿಗಿ ಮತ್ತು ಸಣ್ಣಚ್ಚಿಯಲ್ಲಿ ದೊರೆತ ಇನ್ನೊಂಮ ಮಾದರಿಯಲ್ಲಿ ಎರಡು ಪಟ್ಟಗಳಿವೆ. ಅವುಗಳಲ್ಲಿ ಕಾಣಿಸುವ ಬದಿತೆರೆದುಕೊಂಡು, ಗಟ್ಟಿಯೊದ ಚಕ್ರಗಳ ಎತ್ತಿನ ಗಾಡಿ ಜೀವನ ಯಾತ್ರೆಯ ಕೊನೆಯನ್ನು ಸೂಚಿಸುತ್ತದೆ. ಮೃತರ ಹೆಸರುಗಳನ್ನು ಪೇಮನಸ (ಪೇಮನದ) ಮತ್ತು ಕಲಕ ಎಂದು ಸೂಚಿಸಲಾಗಿದೆ.

ಪ್ರಾಚೀನ ಭಾರತದ ಶ್ರೇಷ್ಠ ಶಿಲ್ಪಿ ಮತ್ತು ವಾಸ್ತು ಶಿಲ್ಪಿಗಳ ಹೆಸರುಗಳು ನಮಗೆ ತಿಳಿಯದಿರುವುದು ನಿಜ. ಆದರೆ ಸುದೈವದಿಂದ ಬನವಾಸಿ ನಾಗಾ ಪ್ರತಿಮೆಯ ಶಿಲ್ಪಿ ಇಡಮೋರಕನ ಶಿಷ್ಯನಾದ ನಟಕ ಎನ್ನುವುದು ಶಾಸನಗಳಿಂದ ತಿಳಿದು ಬರುತ್ತದೆ.

ಬಂಡೆಗತ್ತನೆಯ ಕಲಾ ಪ್ರಕಾರವೂ ಈ ಕಾಲದಲ್ಲಿ ಕಂಡುಬಂದಿದೆ. ಇದನ್ನು ಜನಪ್ರಿಯ ಅಥವಾ ಜಾನಪದ ಕಲೆ ಎನ್ನಲೂ ಬಹುದು. ಚಾರಿತ್ರಿಕ ನಗರದ ಅವಶೇಷಗಳಿರುವ ಚಿತ್ರದುರ್ಗದ ಚಂದ್ರವಳ್ಳಿಯಲ್ಲಿ ದೊಡ್ಡ ಬಂಡೆಯೊಂದರ ಮೇಲೆ ಎರಡು ಮಾನವಾಕೃತಿ ಮತ್ತು ನಾಯಿಯ ಅಪೂರ್ವ ಕೆತ್ತನೆ ಕಾಣಿಸುತ್ತದೆ. ಬ್ರಹ್ಮಗಿರಿ, ಜಟಿಂಗ, ರಾಮೇಶ್ವರ, ಹಳಕುಂಡಿ (ಬಳ್ಳಾರಿ ಜಿಲ್ಲೆ), ಬಿಲ್ಲಮ ರಾಯನ ಗುಡ್ಡ ಮುಂತಾದೆಡೆಗಳಲ್ಲಿ ಧಾರಾಳವಾಗಿ ಕಾಣಸಿಗುವ ಈ ಬಗೆಯ ಕಲಾಪ್ರಕಾರ ಕನಿಷ್ಠ ಲೋಹಯುಗದ ಆರಂಭ ಕಾಲದಿಂದ ಬೆಳೆದು ಬಂದಿರಬೇಕು.

## ಧರ್ಮ

ಕರ್ನಾಟಕದಲ್ಲಿ ಅಂದು ಬುದ್ಧ ಧರ್ಮ ಪ್ರಚಾರದಲ್ಲಿತ್ತು. ಸುಪ್ರಸಿದ್ಧ ಅಮರಾವತಿಗೆ ಹೋಲಿಸಬಹುದಾದ ಸಣ್ಣಚ್ಚಿಯ ಬೌದ್ಧ ಅವಶೇಷಗಳು ಇದೊಂದು ಶ್ರೇಷ್ಠ ಬೌದ್ಧ ಧರ್ಮ ಕೇಂದ್ರವಾಗಿತ್ತು ಎನ್ನುವುದನ್ನು ಸೂಚಿಸುತ್ತದೆ. ಅಶೋಕನ ಕಾಲದಿಂದ ಹರಡುತ್ತಿರುವ ಬೌದ್ಧ ಧರ್ಮದ ಕುರಿತಾಗಿ ಶ್ರೀಲಂಕಾದ ದೀಪವಂಶ (ಕ್ರಿ. ಶ. ನಾಲ್ಕನೆಯ ಶತಮಾನದ ಪಾಲಿಗ್ರಂಥ) ಮುಂತಾದ ಸಾಹಿತ್ಯಕ ರಚನೆಗಳಲ್ಲಿ ದೊರಕುವ ಉಲ್ಲೇಖಗಳು, ಮೈತ್ರೇಯ ಶಿಲ್ಪಗಳು, ವಿಹಾರ ನಿರ್ಮಾಣಕ್ಕೆ ಸಂಬಂಧಿಸಿದ ಶಾಸನಗಳು, ವಡಗಾಂ ಮಾಧವಪುರದಲ್ಲಿ ದೊರೆತ ಆವೆಮಣ್ಣಿನ ಬುದ್ಧನ ಮೂರ್ತಿ ಇತ್ಯಾದಿ ಬೌದ್ಧ ಧರ್ಮದ ಉನ್ನತಿ ಮತ್ತು ವಿಸ್ತಾರವನ್ನು ತಿಳಿಸುತ್ತವೆ. ವಡಗಾಂ ಮಾಧವಪುರ ಮತ್ತು ತಾಳಗುಂಡದ ಎರಡು ಶಾಸನಗಳು ಮೊಲೆಯ ಶಿಲಾಶಿವಲಿಂಗ ಮತ್ತು ವಡಗಾಂ ಮಾಧವಪುರದ ಆವೆ ಮಣ್ಣಿನ ವೃತ್ತ ಫಲಕ ದೊರೆಯದಿರುತ್ತಿದ್ದರೆ ಆ ಕಾಲದಲ್ಲಿ ವೈದಿಕ ಧರ್ಮವಾಗಲಿ ಶೈವ ಮುಂತಾದ ಸ್ಥಾನೀಯ ಪಂಥಗಳಾಗಲೀ ಪ್ರಚಲಿತವಿದ್ದುದು ನಮ್ಮ ಅರಿವಿಗೆ ಬಾರದೆ ಹೋಗುತ್ತಿತ್ತು.

ವಡಗಾಂನ ಕ್ರಿ. ಪೂ. ೧ ನೆಯ ಶತಮಾನಕ್ಕೆ ಸೇರಿದ ಶಾಸನ ಕಾಶ್ಯಪ ಗೋತ್ರದ ಒಬ್ಬಾತ ಬ್ರಾಹ್ಮಣ ವಾಜಪೇಯ ಎನ್ನುವ ವೈದಿಕ ವಿಧಿಯನ್ನು ನೆರವೇರಿಸಿದ ಎಂಬುದಾಗಿ ಹೇಳುತ್ತದೆ. ಇಟಗಿ (ಇಷ್ಟಿಕಾ: ಬಲಿಪೀಠ?)ಯಲ್ಲಿ ಕಂಡುಬಂದ ಇಟ್ಟಿಗೆ ಅವಶೇಷ ಒಂದರಲ್ಲಿ ವಿಶಿಷ್ಟ ಬಗೆಯ ಮಣ್ಣಿನ ಪಾತ್ರೆ ದೊರೆತಿದೆ. ಇದು 'ಗರುಡಚಯನ' ಧಾರ್ಮಿಕ ವಿಧಿಯಲ್ಲಿ ಬಳಸಲಾಗುವ 'ಉಖಾಪಾತ್ರ' ಎಂದು ಇದನ್ನು ಪತ್ತೆ ಹಚ್ಚಿದ ಪಂಚಮುಖಿ ತಿಳಿಸುತ್ತಾರೆ.

ಶಾಸನದಲ್ಲಿ ಶಾತಕರಣ ಭೇಟಿ ನೀಡುತ್ತಿದ್ದ ಎಂದು ಹೇಳಲಾದ ತಾಳಗುಂಡದ ಮಹಾದೇವ ದೇವಸ್ಥಾನ ಶಿವಾರಾಧನೆಯೂ ಆಗ ಜನಪ್ರಿಯವಾಗಿದ್ದಿರಬೇಕು ಎನ್ನುವುದನ್ನು ಸೂಚಿಸುತ್ತದೆ. ಅಂಕೋಲದ ಬೋಲೆಯಲ್ಲಿ ಕ್ರಿ. ಶ. ಎರಡನೆಯ ಶತಮಾನಕ್ಕೆ ಸೇರಿದ ಇಟ್ಟಿಗೆಯ ಶಿವ ದೇವಸ್ಥಾನ, ಬನವಾಸಿ, ಹರಿಶಿ, ಹಟ್ಟಿಯಂಗಡಿ ಮತ್ತು ಹೊಸ ಮಹಾಕೂಟಗಳಲ್ಲಿ ಶಿವಲಿಂಗವಿದ್ದ ಇಟ್ಟಿಗೆಯ ದೇವಾಲಯಗಳ ಅವಶೇಷಗಳು ಕಾಣಸಿಕ್ಕಿವೆ. ವಡಗಾಂ–ಮಾಧವಪುರದ ವೃತ್ತಾಕಾರದ ಆವೆ ಮಣ್ಣಿನ ಫಲಕದಲ್ಲಿ ಮಾರ್ಕಂಡೇಯನನ್ನು ಯಮನಿಂದ ಶಿವನು ರಕ್ಷಿಸುತ್ತಿರುವುದನ್ನು ನಿರೂಪಿಸಲಾಗಿದೆ.

## ನಾಣ್ಯಗಳು

ವ್ಯಾಪಾರದಲ್ಲಿ ನಾಣ್ಯಗಳು ವಿನಿಮಯ ಸಾಧನವಾಗಿ ಬಳಸಲ್ಪಡುತ್ತಿದ್ದವು. ಇವುಗಳಲ್ಲಿ ಅತಿ ಪ್ರಾಚೀನ ಹಾಗೂ ಸರಳವಾದವುಗಳೆಂದರೆ ಕೊರೆದ ಗುರುತಿನ ನಾಣ್ಯಗಳು. ಸಾಮಾನ್ಯವಾಗಿ ಆಯತ, ದೀರ್ಘಾಯತ, ವೃತ್ತ ಅಥವಾ ಬಹುಭುಜಾಕೃತಿಯಲ್ಲಿರುವ ತಾಮ್ರದ ತೆಳುತಗಡಿನ ನಾಣ್ಯಗಳಿಗೆ ಬೆಳ್ಳಿಯ

ಲೇಪ ಕೊಡಲಾಗಿದೆ. ಇವುಗಳ ಮೇಲೆ ಸೂರ್ಯ, ಬೆಟ್ಟ ಮತ್ತು ಅರ್ಧಚಂದ್ರ, ನವಿಲು, ಮೀನು, ಎತ್ತು, ಆನೆ, ಸಸ್ಯ, ಸ್ವಸ್ತಿಕ ಅಥವಾ ರೇಖಾಕೃತಿಗಳನ್ನು ಕೊರೆಯುತ್ತಿದ್ದರು. ಹೆಸರಾಗಲೀ ಕಾಲವಾಗಲೀ ಇವುಗಳಲ್ಲಿ ಕಂಡು ಬರುವುದಿಲ್ಲ. ಉತ್ತರ ಭಾರತದಲ್ಲಿ ಮೌರ್ಯರ ಕಾಲದಲ್ಲೇ ಪ್ರಚಾರದಲ್ಲಿದ್ದ ಈ ಬಗೆಯ ನಾಣ್ಯಗಳು ಕ್ರಿ. ಶ. ೨ ನೆಯ ಶತಮಾನದವರೆಗೆ ದೇಶಾದ್ಯಂತ ಬಳಕೆಯಲ್ಲಿದ್ದು ಕರ್ನಾಟಕದಲ್ಲಿ ಮಾಸ್ಕಿ, ರಾಯಚೂರು, ಹಬ್ಬಾಳ (ಗುಲ್ಬರ್ಗಾ ಜಿಲ್ಲೆ)ಗಳಲ್ಲಿ ಕಾಲ ನಿರ್ಧರಿಸಬಹುದಾದ ಪದರಗಳಲ್ಲಿ ಮತ್ತು ಚಂದ್ರವಳ್ಳಿ, ವಡಗಾಂ, ಮಾಧವಪುರಗಳಲ್ಲೂ ಈ ಬಗೆಯ ನಾಣ್ಯಗಳು ಪತ್ತೆಯಾಗಿವೆ. ವಡಗಾಂನ ಒಂದು ನಾಣ್ಯ ಕನಿಷ್ಠ ಶಾತವಾಹನ ಪೂರ್ವದ್ದಾಗಿರಬೇಕೆಂದು ನಂಬಲಾಗಿದೆ. ಚಾಂತಸ (ಚಂತಕ್ಕೆ ಸೇರಿದ) ಹೆಸರು ಬರೆದಿರುವ ತಾಮ್ರದ ಕೊಡದಲ್ಲಿ ದೊರೆತ ೫೫೩೪ ನಾಣ್ಯಗಳು ದ. ಭಾರತದ ಅತ್ಯಂತ ದೊಡ್ಡ ಪತ್ತೆಯಾಗಿದೆ. ಕಾರವಾರ, ಬನವಾಸಿ, ವಡಗಾಂ–ಮಾಧವಪುರ, ತಡ್ಕವಾಡಿ, ಮಾಸ್ಕನಲ್ ಮುಂತಾದೆಡೆಗಳಲ್ಲಿ ದೊರೆತ ನೂರಾರು ವಾಸಿಷ್ಠಿ ಪುತ್ರ ಪುಲುಮಾವಿ, (ಕ್ರಿ. ಶ. ೧೩೦–೧೫೯) ಶ್ರೀ ಯಜ್ಞ ಶಾತಕರಣ (ಕ್ರಿ. ಶ. ೧೭೪–೨೦೩) ಮತ್ತು ಅವರ ಸಾಮಂತರುಗಳಾದ ಸಡಕಣ ಕಲಲಾಯ, ಮಹಾರಥಿ ವಿಲಿವಾಯ ಕುರ, ಚುಟುಕುಲಾನಂದ ಮೊದಲಾದ ರಾಜರುಗಳ ಹೆಸರು ಕಾಣಸಿಗುತ್ತವೆ. ವಿವಿಧ ಆಕಾರ ಮತ್ತು ಭಾರ ಹೊಂದಿರುವ ಈ ನಾಣ್ಯಗಳು ವಿವಿಧ ಮೌಲ್ಯವನ್ನು ಸೂಚಿಸುತ್ತಿರಬಹುದು.

### ವ್ಯಾಪಾರೋದ್ಯಮ

ಅಗಸ್ಟಸ್ (ಕ್ರಿ. ಪೂ. ೨೩–ಕ್ರಿ. ಶ. ೧೪) ಮತ್ತು ಟೈಬಿರಿಯಸ್ (ಕ್ರಿ. ಶ. ೧೪–೩೭) ರೋಮನ್ ದೊರೆಗಳ ಕಾಲದಲ್ಲಿ ಮೆಡಿಟರೇನಿಯನ್ ಪ್ರದೇಶದ ವ್ಯಾಪಾರಿಗಳನ್ನು ಕರ್ನಾಟಕದ ವ್ಯಾಪಾರೋದ್ಯಮ ಆಕರ್ಷಿಸಿತು. ವಾಸ್ತವದಲ್ಲಿ ಕ್ರಿ. ಶ. ೧ ನೆಯ ಶತಮಾನದಲ್ಲಿ ದ. ಭಾರತದ ನಾಲ್ಕು ಪ್ರಮುಖ ರಾಜಕೀಯ ಶಕ್ತಿಗಳು ರೋಮ್‌ನೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿದ್ದವು. ಕಲ್ಲಿಕೋಟೆಯಿಂದ ಕನ್ಯಾಕುಮಾರಿವರೆಗೆ ಆಧಿಪತ್ಯ ಸ್ಥಾಪಿಸಿದ ಚೇರರು, ಮಧುರೈ ಮತ್ತು ತಿನ್ನೆಲ್‌ವೆಲ್ಲಿ ಪ್ರಾಂತ್ಯಗಳನ್ನಾಳುತ್ತಿದ್ದ ಪಾಂಡ್ಯರು, ವೈಶ್ಯ ಮತ್ತು ನೆಲ್ಲೂರುಗಳಿಂದ ಚೋಳರು, ಕಾವೇರಿ ಪಟ್ಟಣ, ಅರಿಕ ಮೇಡು ತ್ರಿಂಗನೂರು, ಕಾರವಾರ, ಕಲ್ಯಾಣ ಮುಂತಾದ ವಾಣಿಜ್ಯ ಕೇಂದ್ರಗಳನ್ನು ಪಡೆದಿದ್ದ ದಕ್ಷಿಣದ ಶಾತವಾಹನರು ಕಾಳುಮೆಣಸು, ಮಸ್ಲಿನ್, ಮುತ್ತು, ಸೂರ್ಯಕಾಂತಮಣಿ, ಅರ್ಧ ಪ್ರಶಸ್ತ ಶಿಲೆಗಳು, ದಂತ ಮತ್ತು ಉಕ್ಕನ್ನು ರಫ್ತು ಮಾಡುತ್ತಿದ್ದರು. ಹವಳ ಮತ್ತು ಮದ್ಯ ಆಮದಾಗುತ್ತಿತ್ತು. ಈ ವಾಣಿಜ್ಯ ವ್ಯವಹಾರದ ಸಂದರ್ಭದಲ್ಲಿ ಉರುಳು ಚಕ್ರ ವಿಧಾನ ಸ್ಥಾನೀಯ ಕುಂಬಾರಿಕೆಯಲ್ಲಿ ಸೇರಿಕೊಂಡಿದ್ದಿರಬೇಕು. ಈ ವರೆಗೆ ದ. ಭಾರತದ ಎಪ್ಪತ್ತೊಂದು ಕಡೆಗಳಲ್ಲಿ ರೋಮನ್ ನಾಣ್ಯಗಳ ಸಂಗ್ರಹಗಳು ಪತ್ತೆಯಾಗಿವೆ. ಕರ್ನಾಟಕದ ಚಂದ್ರವಳ್ಳಿ, ಯಶವಂತ ಪುರ, ಎಚ್. ಎ. ಎಲ್. (ಬೆಂಗಳೂರು)ನಲ್ಲಿ ದೊರೆತ ನಾಣ್ಯಗಳು ಅಗಸ್ಟಸ್ ಮತ್ತು ಟೈಬಿರಿಯಸ್ ದೊರೆಗಳದ್ದಾಗಿದೆ. ಈ ನಾಣ್ಯಗಳ ಒಂದು ಬದಿಯಲ್ಲಿ ಚಕ್ರವರ್ತಿಯ ಶಿರದ ಚಿತ್ರ ಮತ್ತು ಹೆಸರಿದೆ. ಇನ್ನೊಂದು ಮೈಯಲ್ಲಿ ಕುರ್ಚಿಯಲ್ಲಿ ಕುಳಿತು, ಒಂದು ಕೈಯಲ್ಲಿ ರಾಜದಂಡ ಇನ್ನೊಂದು ಕೈಯಲ್ಲಿ ರೆಂಬೆಯನ್ನು ಹಿಡಿದು ಎರಡು ಕಾಲುಗಳನ್ನು ಕಾಲುಮಣೆಯ ಮೇಲಿಟ್ಟಿರುವ ಮಹಿಳೆಯ ಚಿತ್ರ ಅಥವಾ ಪವಿತ್ರ ದಂಡ, ಸಟ್ಟುಗ, ಕೆಳಬದಿಯಲ್ಲಿ ಗುರಾಣಿ. ಇವುಗಳ ನಡುವೆ ನಿಂತಿರುವ ಎರಡು ಮಾನವಾಕೃತಿಗಳು ಇರುತ್ತವೆ. ಅಕ್ಕಿ ಆಲೂರಲ್ಲಿ ದೊರೆತ ನಾಣ್ಯ ಸಂಗ್ರಹದಲ್ಲಿ ಈ ಎರಡು ದೊರೆಗಳಲ್ಲದೆ ಅವರ ಬಳಿಕ ಆಳಿದ ಅಂತೋಣಿಯಸ್ ಪಾಯಸ್ (ಕ್ರಿ. ಶ. ೧೩೮–೧೬೧), ಎರಡನೆ ಥಿಯೋಡೋನಿಯಸ್ (ಕ್ರಿ. ಶ. ೪೦೮–೪೫೦) ಮಾರ್ಷಿಯಸ್ (ಕ್ರಿ. ಶ. ೪೫೦–೪೫೭); ಒಂದನೆ ಅಯೋ (ಕ್ರಿ. ಶ. ೪೫೭–೪೭೪) ಜೆನೋ (ಕ್ರಿ. ಶ. ೪೭೪–೪೯೧), ಅನಾಸ್ಟೇಸಿಯಸ್ (ಕ್ರಿ. ಶ. ೪೯೧–೫೧೮) ಮತ್ತು ಜಸ್ಟಿನಿಯಸ್ (ಕ್ರಿ. ಶ. ೫೧೮–೫೨೭) ಇವರ ನಾಣ್ಯಗಳೂ ದೊರೆತಿರುವುದರಿಂದ ೬ ನೇ ಶತಮಾನದವರೆಗೂ ಈ ಎರಡು ದೇಶಗಳ ನಡುವೆ ವ್ಯಾಪಾರ ನಡೆಯುತ್ತಿತ್ತೆನ್ನುವುದು ವೇದ್ಯವಾಗುತ್ತದೆ. ಈ ನಾಣ್ಯ ಸಂಗ್ರಹವನ್ನು ಗಮನಿಸಿದಾಗ ಕರ್ನಾಟಕದ ಎಲ್ಲಾ ಪ್ರಮುಖ ಕೇಂದ್ರಗಳಲ್ಲೂ ರೋಮನ್ ವಾಣಿಜ್ಯ ಹರಡಿದ್ದಿರುವುದು ಸ್ಪಷ್ಟವಾಗುತ್ತದೆ.

ಕರ್ನಾಟಕದ ಐಹೊಳೆ, ಬಾದಾಮಿ, ಕಾರವಾರ, ಕುಂದಾಪುರ ಮುಂತಾದ ವಾಣಿಜ್ಯ ಕೇಂದ್ರಗಳ ಕುರಿತು ಟಾಲೆಮಿಯ ಉಲ್ಲೇಖವನ್ನು ಆ ಸ್ಥಳಗಳಲ್ಲಿ ವೈಜ್ಞಾನಿಕವಾದ ಪ್ರಾಚ್ಯ ಶೋಧನೆ ನಡೆಸಿ ಖಚಿತಪಡಿಸಿಕೊಳ್ಳಬೇಕಾಗಿದೆ. ಆದರೆ ವಡಗಾಂ–ಮಾಧವಪುರ ಮತ್ತು ಚಂದ್ರವಳ್ಳಿ ನಗರಗಳು ಭೂಶೋಧನೆಯಿಂದ ತಿಳಿದುಬಂದಂತೆ ನಿಜಕ್ಕೂ ಪ್ರಮುಖ ವಾಣಿಜ್ಯ ಕೇಂದ್ರಗಳಾಗಿದ್ದವು. ಹಲವಾರು ವಸತಿ ಗೃಹ ಮತ್ತು ಸಾರ್ವಜನಿಕ ಕಟ್ಟಡಗಳಲ್ಲಿ ಬೇರೆಬೇರೆ ದಾನ್ಯಗಳ ದಾಸ್ತಾನಿಗಾಗಿ ಎರಡು ಅಥವಾ ಮೂರು ಕಣಜಗಳು ಇಲ್ಲಿ ಪತ್ತೆಯಾಗಿವೆ. ಇವುಗಳಲೊಂದರಲ್ಲಿ ಒಂದು ಕೆ. ಜಿ. ಯಷ್ಟು ಭತ್ತವೂ ದೊರಕಿತ್ತು. ಅವುಗಳು ವಾಣಿಜ್ಯ ಕೇಂದ್ರಗಳಲ್ಲವಾಗಿದ್ದಲ್ಲಿ ಅತಿ ನಗರೀಕರಣಗೊಂಡಿದ್ದ ವಡಗಾಂ–ಮಾಧವಪುರದಂಥ ಸ್ಥಳದಲ್ಲಿ ಒಂದಕ್ಕಿಂತ ಹೆಚ್ಚು ಕಣಜಗಳಿರಬೇಕಾದ ಕಾರಣವಿಲ್ಲ. ಹಿಂದಿನ ಕಾಲಕ್ಕೆ ಸೇರಿದ್ದು ಆದರೆ ಇನ್ನೂ ಅಲ್ಲಿ ಚಲಾವಣೆಯಲ್ಲಿದ್ದ ಹಲವು ನಾಣ್ಯಗಳ ಪತ್ತೆ ಈ ಮಾತನ್ನು ಪುಷ್ಟೀಕರಿಸುತ್ತದೆ. ಇವುಗಳಲ್ಲಿ ಪಶ್ಚಿಮ ಭಾರತವನ್ನು ಆಳುತ್ತಿದ್ದ ಕ್ಷಾತ್ರಪ ರಾಜರ ನಾಣ್ಯಗಳು, ರೋಮನ್ ನಾಣ್ಯಗಳು, ಸ್ಥಳೀಯ ಶಾತವಾಹನ ದೊರೆಗಳ ನಾಣ್ಯಗಳೂ, ಸೇರಿವೆ. ವಿಭಿನ್ನ ಪ್ರಾಂತಗಳಿಗೆ ಸೇರಿದ ಕಲಾಶೈಲಿ ಇಲ್ಲಿ ಕಂಡು ಬರುತ್ತಿರುವ ಕಾರಣ ಶ್ರೀಮಂತ ವ್ಯಾಪಾರಿಗಳು ಮತ್ತು ಅದೃಷ್ಟವನ್ನರಸುವ ಕುಶಲಕರ್ಮಿಗಳು ಇಲ್ಲಿಗೆ ಭೇಟಿ ನೀಡುತ್ತಿದ್ದರೆಂದು ಊಹಿಸಬಹುದಾಗಿದೆ. ದಕ್ಷಿಣ ಮತ್ತು ಪಶ್ಚಿಮದ ವಾಣಿಜ್ಯ ಕೇಂದ್ರಗಳ ಭೌಗೋಳಿಕ ಸ್ಥಾನವನ್ನು ಪರಿಶೀಲಿಸಿದಾಗ ವಡಗಾಂ–ಮಾಧವಪುರ ಸೋಪಾ ಮತ್ತು ಕಾಂಚಿಯ ನಡುವಿರುವುದು ಕಾಣಿಸುತ್ತದೆ. ಈ ಮಹತ್ವದ ಸ್ಥಾನ ಇಂದಿನ ಮುಂಬಯಿ, ಬೆಂಗಳೂರು–ಮದ್ರಾಸು ಹೆದ್ದಾರಿಯ ನಡುವಿನ ಬೆಳಗಾಂ ವನ್ನು ಹೋಲುತ್ತದೆ.

### ಭಾಷೆ ಮತ್ತು ಲಿಪಿ

ಶಾಸನ ಮತ್ತು ನಾಣ್ಯಗಳು ಸೂಚಿಸುವಂತೆ ಅಂದಿನ ಜನರು ಅಲ್ಲಲ್ಲಿ ಪ್ರಾಂತೀಯ ಪ್ರಭೇದಗಳಿರಬಹುದಾದ ಪ್ರಾಕೃತ ಭಾಷೆಯನ್ನಾಡುತ್ತಿದ್ದರು. ಆದರೆ ಬ್ರಹ್ಮಗಿರಿಯ 'ಇಸಿಲ' ನಗರದ ಹೆಸರು ಕನ್ನಡವಾಗಿರಬೇಕು ಎನ್ನುವ ಅಭಿಪ್ರಾಯವಿದೆ. ಯಾಕೆಂದರೆ ಭಾಷಾ ಶಾಸ್ತ್ರದ ಪ್ರಕಾರ ಸಂಸ್ಕೃತಕ್ಕಾಗಲೀ, ಪ್ರಾಕೃತಕ್ಕಾಗಲೀ ಸೇರುವುದಿಲ್ಲ. ಅಲ್ಲದೆ ಹಲ್ಮಿಡಿ ಶಾಸನದ ಪ್ರಕಾರ ಐದನೆಯ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದಿರುವ ಕನ್ನಡ ಭಾಷೆ ಅದಕ್ಕಿಂತ ಒಂದೆರಡು

ಶತಮಾನಗಳ ಹಿಂದೆ ಮೂಲಭೂತರೂಪದಲ್ಲಿ ಇದ್ದಿರಬಹುದು ಎಂದು ನಂಬಲು ಸಾಧ್ಯವಿದೆ.

ಕನ್ನಡವೂ ಸೇರಿದಂತೆ ಭಾರತೀಯ ಲಿಪಿಗಳಿಗೆ ಮೂಲವಾದ ಬ್ರಾಹ್ಮಿಲಿಪಿಯೇ ಆಗ ಪ್ರಚಾರದಲ್ಲಿತ್ತು. ಕ್ರಿ. ಪೂ. ೪ನೇ ಶತಮಾನದಿಂದ ಕ್ರಿ.ಶ. ೩ನೇ ಶತಮಾನದವರೆಗೆ ಭಾರತದ ವಾಯುವ್ಯ ಪ್ರಾಂತ್ಯಗಳಲ್ಲಿ ಪ್ರಚಲಿತವಿದ್ದ ಖರೋಷ್ಠಿ ಲಿಪಿಯೂ ಅಪರೂಪವಾಗಿ ಬಳಕೆಯಾಗುತ್ತಿತ್ತು. ಅಶೋಕನ ಬ್ರಹ್ಮಗಿರಿ ಶಾಸನದ ಕೊನೆಯ ಪದ 'ಲಿಪಿಕರೆನ' ಈ ಲಿಪಿಯಲ್ಲಿದೆ. ಒಂದು ಬಗೆಯ ಸಂಖ್ಯಾಪದ್ಧತಿ ಪ್ರಚಲಿತದಲ್ಲಿದ್ದರೂ ೦ಯಿಂದ ೯ರವರೆಗಿನ ಎಲ್ಲಾ ಅಂಕೆಗಳ ಸಂಜ್ಞೆ ಆಗ ಹುಟ್ಟಿಕೊಂಡಿರಲಿಲ್ಲ. ಧರ್ಮ ಪ್ರಚಾರಕ್ಕಾಗಿ ಅಶೋಕನು ನಡೆಸಿದ ೨೫೬ ದಿನಗಳ ಪ್ರಯಾಣವನ್ನು ಸೂಚಿಸಲು ೨೦೦, ೫೦ ಮತ್ತು ೬ ಸಂಖ್ಯೆಗಳನ್ನು ಬರೆಯಲಾಗಿದೆ. ಬರವಣಿಗೆಯನ್ನು ವೃತ್ತಿಯನ್ನಾಗಿಸಿಕೊಂಡಿದ್ದ ಒಂದು ವರ್ಗ ಆ ಕಾಲದಲ್ಲಿ ಅಸ್ತಿತ್ವದಲ್ಲಿದ್ದಂತೆ ಕಂಡು ಬರುತ್ತದೆ. ಬ್ರಹ್ಮಗಿರಿ ಶಾಸನದ ಲಿಪಿಕಾರನ ಹೆಸರನ್ನು 'ಚಪಡ' ಎಂದು ಸೂಚಿಸಲಾಗಿದೆ. ಈತ ಕರ್ನಾಟಕದ ಅತ್ಯಂತ ಪ್ರಾಚೀನ ಲಿಪಿಕಾರನಾಗಿರುತ್ತಾನೆ.

**ಉಪ ಸಂಹಾರ**

ಇದು ಕರ್ನಾಟಕದ ಆರಂಭಕಾಲದ ನಾಗರಿಕತೆ ಹಾಗೂ ರಾಜಕೀಯ ವ್ಯವಸ್ಥೆಯ ಸೂಕ್ಷ್ಮಾವಲೋಕನವಾಗಿದೆ. ಈ ಕಾಲದಲ್ಲಿ ವಾಸ್ತುಶಿಲ್ಪ, ವ್ಯಾಪಾರ, ವಾಣಿಜ್ಯ ಕೇಂದ್ರಗಳು, ನಾಣ್ಯ ಲಿಪಿ, ಮತ್ತು ಕಲ್ಲಿನ ಕೆತ್ತನೆಗಳಲ್ಲಿ ಯಾವ ರೀತಿ ಹೊಸ ಚಿಂತನೆ ಹೊಸ ಮಾದರಿಗಳು ಮೂಡಿ ಪ್ರಾಯೋಗಿಕವಾಗಿ ಬೆಳಕು ಕಂಡವು ಎನ್ನುವುದು ನಮ್ಮ ಅರಿವಿಗೆ ಬರುತ್ತದೆ. ಪ್ರಧಾನವಾಗಿ ಈ ಸಂದರ್ಭದಲ್ಲಿ ನಾಗರಿಕತೆಗೆ ಭದ್ರ ತಳಪಾಯ ನಿರ್ಮಾಣವಾಯಿತು. ಸ್ಥಳೀಯ ಮತ್ತು ದೂರ ಪ್ರಾಂತ್ಯಗಳಲ್ಲಿ ವಾಣಿಜ್ಯ ಸಂಪರ್ಕ ಬೆಳೆಸುವ ಮೂಲಕ ವ್ಯಾಪಾರಿಗಳು ರಾಜ್ಯವನ್ನು ಸಂಪದ್ಭರಿತವಾಗುವಂತೆ ಮಾಡಿದರು. ಶಿಲ್ಪಿ ಮತ್ತು ವಾಸ್ತುಶಿಲ್ಪಿಗಳು ಕಠಿಣ ಹಾಗೂ ಸಂಕೀರ್ಣ ವಾಸ್ತುಶಿಲ್ಪದ ವಿನ್ಯಾಸಗಳಲ್ಲಿ ಪ್ರಾವೀಣ್ಯ ಪಡೆದರು. ಜ್ಞಾನಪ್ರಸಾರಕ್ಕಾಗಿ ವಿದ್ಯಾಭ್ಯಾಸವೂ ದೊರೆಯುತ್ತಿತ್ತು. ಅಧಿಕ ಸಂಪತ್ತು, ತುಂಬಿಕೊಳ್ಳುವ ಜ್ಞಾನ, ಜನರ ಪ್ರತಿಭೆಯನ್ನು ಕ್ರೋಢೀಕರಿಸಿ ಕಲೆ, ಸಾಹಿತ್ಯ, ವಿಜ್ಞಾನ, ಧರ್ಮಗಳಲ್ಲಿ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಯಶಸನ್ನು ಗಳಿಸಲು ರಾಜಕೀಯ ಸುಭದ್ರತೆ ಮತ್ತು ಉದಾರ ಗುಣದ ಶಕ್ತಿಶಾಲಿ ರಾಜರುಗಳ ಆವಶ್ಯಕತೆ ಇತ್ತು. ಇದನ್ನು ಒದಗಿಸಿ ಸ್ವತಂತ್ರ ರಾಜ್ಯದ ಅಡಿಪಾಯವನ್ನು ಹಾಕಿದ ಕೀರ್ತಿ ನಾಲ್ಕನೆಯ ಶತಮಾನದ ಬನವಾಸಿಯ ಕದಂಬರಿಗೂ ತಲಕಾಡಿನ ಗಂಗರಿಗೂ ಸಲ್ಲುತ್ತದೆ.

# ಗಂಗರ ಕಾಲ

ಡಾ. ಶ್ರೀನಿವಾಸ ರಿತ್ತಿ

## ಪ್ರಸ್ತಾವನೆ

ಕರ್ನಾಟಕದ ರಾಜಕೀಯ ಚರಿತ್ರೆ ಏನಿಲ್ಲೆಂದರೂ ಕ್ರಿ.ಪೂ. ನಾಲ್ಕನೆಯ ಶತಮಾನದಿಂದ ಅಂದರೆ ಮೌರ್ಯರ ಕಾಲದಿಂದ ಆರಂಭವಾಯಿತೆಂದು ಹೇಳಲು ಸ್ಪಷ್ಟ ಆಧಾರಗಳಿದ್ದರೂ ಅದಕ್ಕೂ ಮುಂಚೆಯೇ ಈ ಪ್ರದೇಶಕ್ಕೆ ರಾಜಕೀಯ ಸ್ಥಾನಮಾನಗಳಿದ್ದುವೆಂದು ಹೇಳಲು ಅವಕಾಶವಿದೆ. ಆದರೆ ಮೊಟ್ಟಮೊದಲು ಸಾಮ್ರಾಜ್ಯಗಳು ಸ್ಥಾಪಿತವಾದುದು ಕ್ರಿ. ಶ. ನಾಲ್ಕನೆಯ ಶತಮಾನದಲ್ಲಿ. ಈ ಕಾಲಕ್ಕೆ ಕರ್ನಾಟಕದ ಈ ಪ್ರದೇಶದಲ್ಲಿ ಎರಡು ರಾಜ್ಯಗಳು ಸ್ಥಾಪಿತವಾದವು. ಒಂದು ಉತ್ತರ ಕನ್ನಡ ಜಿಲ್ಲೆಯಲ್ಲಿಯ ಸಿರಸಿ ತಾಲೂಕಿನ ಬನವಾಸಿಯನ್ನು ರಾಜಧಾನಿಯನ್ನಾಗಿಸಿಕೊಂಡು ಸ್ಥಾಪಿತವಾದ ಕದಂಬ ರಾಜ್ಯ. ಇದು ಕರ್ನಾಟಕದ ಉತ್ತರ ಭಾಗದ ಬಹಳಷ್ಟು ಪ್ರದೇಶವನ್ನೊಳಗೊಂಡಿದ್ದಿತು. ಇನ್ನೊಂದು ಕೋಲಾರ, ಮುಂದೆ ತಳಕಾಡು ಇವುಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸ್ಥಾಪಿತವಾದ ಗಂಗ ರಾಜ್ಯ. ಈ ರಾಜ್ಯ ಕರ್ನಾಟಕದ ದಕ್ಷಿಣ ಭಾಗವನ್ನು ಒಳಗೊಂಡಿದ್ದಿತು. ಹೀಗೆ ರಾಜ್ಯಗಳು ಎರಡಾದರೂ ಇವು ಸಮಗ್ರ ಕನ್ನಡ ಸಂಸ್ಕೃತಿ ಬೆಳೆಯಲು ಭದ್ರವಾದ ತಳಹದಿಯನ್ನು ಹಾಕಿದುವು. ಮುಂದೆ, ಆರನೆಯ ಶತಮಾನದಲ್ಲಿ ಇವೆರಡೂ ರಾಜ್ಯಗಳು ಒಂದಾಗಿ ಚಾಲುಕ್ಯ ಅರಸರಿಂದ ವಿಸ್ತರಿಸಲ್ಪಟ್ಟು ಮುಂದೆ ರಾಷ್ಟ್ರಕೂಟ ನೃಪತುಂಗ ಹೇಳಿದ, "ಕಾವೇರಿಯಿಂದಮಾ ಗೋದಾವರಿಮಿರ್ದ ನಾಡದಾ ಕನ್ನಡ" ಎಂದು ಪ್ರಸಿದ್ಧವಾಗಿ ದಖಿನ್ ಪ್ರಸ್ತರದ ವಿಶಾಲ ಭೂಪ್ರದೇಶದಲ್ಲಿ ವಿಸ್ತಾರವಾಗಿ ಹಬ್ಬಿ ಮುಂದೆ ಏಳೆಂಟು ನೂರು ವರ್ಷಗಳವರೆಗೆ ಒಂದೇ ಆಳ್ವಿಕೆಗೆ ಒಳಪಟ್ಟು ಭಾಷೆ, ಸಾಹಿತ್ಯ, ಕಲೆ, ಧರ್ಮ ಮುಂತಾಗಿ ಕರ್ನಾಟಕಕ್ಕೆ ವಿಶಿಷ್ಟವಾದ ಸಂಸ್ಕೃತಿ ಸಮೃದ್ಧವಾಗಿ ಬೆಳೆಯಿತು. ಇಂಥ ಬೆಳವಣಿಗೆಗೆ ಮೊದಲ ಹಂತದಲ್ಲಿ ನೀರೆರೆದವರು ಗಂಗರು ಮತ್ತು ಕದಂಬರು.

## ರಾಜಕೀಯ ಚರಿತ್ರೆ

ಮೇಲೆ ಹೇಳಿದಂತೆ ಗಂಗರು ಬನವಾಸಿಯ ಕದಂಬರೊಂದಿಗೆ ಸುಮಾರು ನಾಲ್ಕನೆಯ ಶತಮಾನದ ಆರಂಭದಲ್ಲಿಯೇ ರಾಜ್ಯದ ಆಡಳಿತವನ್ನು ಪ್ರಾರಂಭಿಸಿದರು. ಈ ಮನೆತನದ ಉಗಮದ ಬಗ್ಗೆ ಹಲವಾರು ಐತಿಹ್ಯಗಳು ಪ್ರಚಲಿತವಿವೆ. ಹತ್ತನೆಯ ಶತಮಾನದ ಒಂದು ಶಾಸನದಲ್ಲಿ ಇವರು ಮೂಲತ: ಅಯೋಧ್ಯೆಯವರೆಂದೂ, ಅಲ್ಲಿಂದ ಮುಂದೆ ಅಹಿಚ್ಛತ್ರಕ್ಕೆ ಬಂದರೆಂದೂ ಹೇಳಲಾಗಿದೆ. ಇಂಥ ಆಳರಸರು ಇದೇ ಪ್ರದೇಶಕ್ಕೆ ಸೇರಿದವರಾಗಿದ್ದರೂ ಇವರ ಮನೆತನ ಪ್ರಸಿದ್ಧಿಗೆ ಬಂದನಂತರ ಅದಕ್ಕೆ ಒಂದು ಶ್ರೇಷ್ಠ ಸ್ಥಾನಮಾನವನ್ನು ಕೊಡುವ ದೃಷ್ಟಿಯಿಂದ ಮತ್ತು ಅದು ಬಹು ಪುರಾತನವಾದುದೆಂದು ತೋರಿಸುವ ದೃಷ್ಟಿಯಿಂದ ಇಂಥ ಐತಿಹ್ಯಗಳು ಹುಟ್ಟಿಕೊಳ್ಳುವುದು ಸಾಮಾನ್ಯವಾದ ಮಾತಾಗಿದೆ. ಕರ್ನಾಟಕದಲ್ಲಿ ನೆಲೆಗೊಂಡ ಬಹುತೇಕ ಎಲ್ಲ ರಾಜಮನೆತನಗಳ ಬಗ್ಗೆಯೂ ಇಂಥ ಐತಿಹ್ಯಗಳು ಪ್ರಚಲಿತವಿವೆ. ಈ ಧಾಟಿಯಲ್ಲಿಯೇ ಗಂಗರು ಜಾಹ್ನವೀಯ ಕುಲದವರೆಂದೂ, ಕಾಣ್ವಾಯನ ಗೋತ್ರದವರೆಂದೂ, ಕರೆಯಲ್ಪಟ್ಟಿದ್ದಾರೆ.

ದಡಿಗ ಮತ್ತು ಮಾಧವರೆಂಬ ಈ ಮನೆತನದ ಇಬ್ಬರು ದಕ್ಷಿಣಕ್ಕೆ ಬಂದು ಗಂಗಪೇರೂರೆಂಬಲ್ಲಿ ನೆಲೆಯೂರಿ ಮುಂದೆ ಗಂಗವಾಡಿಯ ಅರಸರಾದರೆಂದು ಕೆಲವೆಡೆಗಳಲ್ಲಿ ಹೇಳಲಾಗಿದೆ. ಕುವಳಾಲ (ಈಗಿನ ಕೋಲಾರ), ನಂದಗಿರಿ (ಈಗಿನ ನಂದಿ ಬೆಟ್ಟ), ಇವುಗಳ ಅಧಿಪತಿಗಳಾಗಿದ್ದರೆಂದು ಶಾಸನಗಳು ಹೇಳುವುದರಿಂದ ಇವರು ಮೂಲತಃ ಕೋಲಾರ ಪ್ರದೇಶಕ್ಕೆ ಸೇರಿದವರಾಗಿದ್ದು ಅವಕಾಶ ದೊರೆತಂತೆ ಅಧಿಕಾರವನ್ನು ವಿಸ್ತರಿಸುತ್ತ ಗಂಗವಾಡಿ ಎಂಬ ರಾಜ್ಯವನ್ನು ರೂಪಿಸಿಕೊಂಡು ಈಗಿನ ತಲಕಾಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳತೊಡಗಿದರು.

ಗಂಗರ ವಂಶಾವಳಿ ಮತ್ತು ಆಳ್ವಿಕೆಯ ಕಾಲಾನುಕ್ರಮಗಳ ಬಗ್ಗೆ ನಿರ್ದಿಷ್ಟ ಆಧಾರಗಳ ಅಭಾವದಿಂದಾಗಿ ನಿಶ್ಚಿತವಾದ ಅಭಿಪ್ರಾಯಗಳನ್ನು ತಳೆಯುವುದು ಕಠಿಣವಾಗಿದೆ. ಇವರ ಆರಂಭದ ಕಾಲದ ಶಾಸನಗಳ ಮೇಲಿಂದ ಕೊಂಗುಣಿವರ್ಮನೆಂಬವನು ಈ ಮನೆತನದ ಮೊದಲ ಅರಸನೆಂದು ಹೇಳಬಹುದಾಗಿದೆ. ಇವನು ಸ್ವಪ್ರಯತ್ನದಿಂದ ಸ್ವತಂತ್ರ ರಾಜ್ಯವನ್ನು ರೂಪಿಸಿಕೊಂಡನೆಂದೂ ಈ ಪ್ರಯತ್ನದಲ್ಲಿ ಸಿಂಹನಂದಿ ಎಂಬ ಜೈನಯತಿ ಸಹಾಯ ಮಾಡಿದನೆಂದೂ ಹೇಳಲಾಗಿದೆ. ಈ ಘಟನೆ ಕ್ರಿ. ಶ. ೩೫೦ರಲ್ಲಿ ನಡೆಯಿತೆಂದು ತೋರುತ್ತದೆ. ಕೊಂಗುಣಿವರ್ಮನ ಮಗ ಒಂದನೆಯ ಮಾಧವ. ಮಾಧವನಿಗೆ ಹರಿವರ್ಮನೆಂಬ ಮಗನಿದ್ದ. ಹರಿವರ್ಮನಿಗೆ ಕೃಷ್ಣವರ್ಮ ಮತ್ತು ಆರ್ಯವರ್ಮ ಎಂಬ ಇಬ್ಬರು ಮಕ್ಕಳಿದ್ದರೆಂದು ಹಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಇವೆರಡೂ ಹೆಸರುಗಳು ಹರಿವರ್ಮನವೇ ಎಂದು ಇನ್ನೊಂದು ಅಭಿಪ್ರಾಯವಿದೆ. ಹರಿವರ್ಮನ ಅನಂತರ ಎರಡನೆಯ ಮಾಧವ ಅರಸ

ನಾದ. ಪಲ್ಲವ ಸಿಂಹವರ್ಮ ಇವನ ಪಟ್ಟಾಭಿಷೇಕವನ್ನು ನೆರವೇರಿಸಿದನೆಂದು ಶಾಸನಗಳಲ್ಲಿ ಹೇಳಲಾಗಿದೆ. ಮಾಧವನಿಗೆ ವಿಷ್ಣುಗೋಪನೆಂಬ ತಮ್ಮನಿದ್ದ. ವಿಷ್ಣುಗೋಪನ ಮಗ ೩ನೆಯ ಮಾಧವ. ಗಂಗ ಮನೆತನದ ಆರಂಭದ ಕಾಲದ ಈ ಅರಸರ ಬಗೆಗೆ ಹೆಚ್ಚಿನ ವಿವರಗಳು ತಿಳಿದುಬಂದಿಲ್ಲ.

ಮೂರನೆಯ ಮಾಧವನ ಆಳ್ವಿಕೆಯೊಂದಿಗೆ ಗಂಗರಾಜ್ಯ ಪ್ರಬಲವಾಗುತ್ತ ನಡೆಯಿತು. ಈ ರಾಜ್ಯದ ಉತ್ತರಕ್ಕೆ ಕದಂಬರ ರಾಜ್ಯ ಮತ್ತು ದಕ್ಷಿಣಕ್ಕೆ ಪಲ್ಲವರ ರಾಜ್ಯವಿದ್ದು ಇವೆರಡೂ ರಾಜ್ಯಗಳೊಡನೆಯೂ ಗಂಗರ ಸಂಬಂಧ, ವಿರಸ, ಇವು ಅನಿವಾರ್ಯವಾದುವು. ಕದಂಬರೊಡನೆ ವೈರವನ್ನು ಸಾಧಿಸುತ್ತಿದ್ದ ಪಲ್ಲವರೊಡನೆ ಸೇರಿಕೊಂಡು ಗಂಗರು ಕದಂಬರನ್ನು ವಿರೋಧಿಸಿದ ಘಟನೆಗಳು ಇವೆ. ಬಹುಶಃ ನೆರೆಯವರೊಂದಿಗೆ ತಿಕ್ಕಾಟಗಳನ್ನು ತಪ್ಪಿಸಲು ಕದಂಬ ಕಾಕುಸ್ಥವರ್ಮ ಮಾಧವನಿಗೆ ತನ್ನ ಮಗಳನ್ನು ವಿವಾಹ ಮಾಡಿಕೊಟ್ಟು ಸೌಹಾರ್ದ ಸ್ಥಾಪಿಸಲು ಯತ್ನಿಸಿದ. ಮಾಧವನ ಮಗ ಅವಿನೀತನ ಕಾಲದಲ್ಲಿ ಗಂಗರಾಜ್ಯ ಇನ್ನಷ್ಟು ಪ್ರಬಲವಾಯಿತು. ಪಲ್ಲವರೊಡನೆ ಅವನಿಗೆ ನಿಕಟ ಸಂಬಂಧವಿದ್ದಿತು. ಅವನ ಹೊಸಕೋಟೆ ತಾಮ್ರ ಶಾಸನ ಹೇಳುವಂತೆ ಪಲ್ಲವ ಸಿಂಹವಿಷ್ಣುವಿನ ತಾಯಿ ಗಂಗರಾಜ್ಯದಲ್ಲಿ ಜಿನಾಲಯವನ್ನು ಕಟ್ಟಿಸಿದಳು. ಅವಳು ಗಂಗಕುಲಕ್ಕೆ ಸೇರಿದ್ದಿರಬಹುದೆಂದು ಇದರಿಂದ ಸೂಚಿತವಾಗುತ್ತದೆ. ಪುನ್ನಾಟ ಸಾಮಂತನಾದ ಎರಡನೆಯ ಸ್ಕಂದವರ್ಮನ ಮಗಳಾದ ಜ್ಯೇಷ್ಠಾ ದೇವಿಯನ್ನು ಅವನೀತ ಮದುವೆಯಾಗಿ ನೆರೆಯವರೊಡನೆ ಸ್ನೇಹ ಸಂಬಂಧವನ್ನು, ತನ್ಮೂಲಕ ರಾಜಕೀಯ ಸ್ಥಿರತೆಯನ್ನು ಸ್ಥಾಪಿಸಲು ಯತ್ನಿಸಿದನೆಂದು ಹೇಳಬಹುದಾಗಿದೆ. ಇವನ ಸುದೀರ್ಘವಾದ ೫೦ ವರ್ಷಗಳ ಆಳ್ವಿಕೆಯಲ್ಲಿ ಅನೇಕ ವಿಜಯಗಳನ್ನು ಸಂಪಾದಿಸಿದನೆಂದು ಇವನ ಶಾಸನಗಳು ಹೇಳುತ್ತವೆಯಾದರೂ ನಿರ್ದಿಷ್ಟ ಘಟನೆಗಳ ಉಲ್ಲೇಖವಿಲ್ಲ.

ಅವಿನೀತನ ಮಗ ದುರ್ವಿನೀತನ ಆಳ್ವಿಕೆಯ ಕಾಲದಿಂದ ಗಂಗರಾಜ್ಯ ಬೆಳವಣಿಗೆಯ ಇನ್ನೊಂದು ಮೆಟ್ಟಿಲನ್ನು ಏರಿತೆಂದು ಹೇಳಬಹುದು. ಶಾಸನಗಳು ಸೂಚಿಸುವಂತೆ ಇವನು ಪಟ್ಟದ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸುವುದಕ್ಕಾಗಿ ತನ್ನ ತಮ್ಮನೊಡನೆ ಹೋರಾಡಬೇಕಾಯಿತು. ಅಧಿಕಾರವನ್ನು ವಹಿಸಿಕೊಂಡ ತಾರುಣ್ಯದಲ್ಲಿಯೇ ಅಲ್ಲತ್ತೂರು ಮುಂತಾಗಿ ೨-೩ ಯುದ್ಧಗಳಲ್ಲಿ ಇವನು ತೊಡಗಬೇಕಾಯಿತು. ಈ ಕಾಲದ ಇನ್ನೊಂದು ಮಹತ್ವದ ಘಟನೆ ಎಂದರೆ ಪುನ್ನಾಟರಾಜ್ಯ ಗಂಗರಾಜ್ಯದಲ್ಲಿ ಸೇರ್ಪಡೆಯಾಯಿತು. ದುರ್ವಿನೀತ ಕ್ರಿ. ಶ. ಸುಮಾರು ೫೨೯ರಿಂದ ೫೭೯ರ ವರೆಗೆ ೫೦ ವರ್ಷಗಳ ಕಾಲ ರಾಜ್ಯವಾಳಿದ. ಈ ಅವಧಿಯಲ್ಲಿಯೇ ಬಾದಾಮಿಯಲ್ಲಿ ೧ನೆಯ ಪುಲಿಕೇಶಿಯ ನೇತೃತ್ವದಲ್ಲಿ ಚಾಲುಕ್ಯ ಸಾಮ್ರಾಜ್ಯ ಸ್ಥಾಪಿತವಾಯಿತು.

ದುರ್ವಿನೀತ ಸಮರ್ಥ ಅರಸನಲ್ಲದೆ ವಿದ್ವಾಂಸನೆಂದೂ ಖ್ಯಾತಿಯನ್ನು ಪಡೆದಿದ್ದ. ಸಮಕಾಲೀನ ಕವಿಯಾದ ಭಾರವಿಯ ಕಿರಾತಾರ್ಜುನೀಯದ ೧೫ನೆಯ ಸರ್ಗಕ್ಕೆ ಇವನು ಟೀಕೆ ಬರೆದನೆಂದು ಶಾಸನಗಳು ಹೇಳುತ್ತವೆ. ಇವನು ಪೈಶಾಚಿ ಭಾಷೆಯಲ್ಲಿಯ ಬೃಹತ್ಕಥೆಯನ್ನು ಸಂಸ್ಕೃತಕ್ಕೆ ಭಾಷಾಂತರಿಸಿದನೆಂದೂ, ಶಬ್ದಾವತಾರವೆಂಬ ವ್ಯಾಕರಣ ಗ್ರಂಥವನ್ನು ಬರೆದನೆಂದೂ ಹೇಳಲಾಗಿದೆ. ಈ ಕೊನೆಯ ಗ್ರಂಥ ಇವನ ಗುರು ಪೂಜ್ಯಪಾದ ಎಂಬವರು ಬರೆದ ಗ್ರಂಥಕ್ಕೆ ಕನ್ನಡ ಟೀಕೆ ಇರಬಹುದೆಂದು ಊಹಿಸಲಾಗಿದೆ.

ದುರ್ವಿನೀತನ ಅನಂತರ ಅವನ ಹಿರಿಯ ಮಗ ಮುಷ್ಕರ ಪಟ್ಟಕ್ಕೆ ಬಂದ. ಇವನ ಆಳ್ವಿಕೆಯ ಬಗೆಗೆ ಹೆಚ್ಚಿನ ವಿವರಗಳು ತಿಳಿದುಬಂದಿಲ್ಲ. ಇವನು ಸಿಂಧುರಾಜನೆಂಬವನ ಮಗಳನ್ನು ಮದುವೆಯಾದನೆಂದು ಹೇಳಿದೆಯಾದರೂ ಸಿಂಧುರಾಜ ಯಾರೆಂದು ತಿಳಿದುಬಂದಿಲ್ಲ. ಮುಷ್ಕರನ ಅನಂತರ ಅವನ ತಮ್ಮ ಪೊಲವೀರ ಪಟ್ಟಕ್ಕೆ ಬಂದ. ಕಾಡವೆಟ್ಟಿ ಅಂದರೆ ಪಲ್ಲವ ಮತ್ತು ಪಲ್ಲವರಸ ಅಂದರೆ ಚಾಲುಕ್ಯ ಅರಸ ಇವರಿಬ್ಬರೂ ಕೂಡಿ ಪೊಲವೀರನಿಗೆ ಪಟ್ಟ ಕಟ್ಟಿದರು ಎಂಬ ಒಂದು ಐತಿಹ್ಯ ಶಾಸನಗಳಲ್ಲಿ ಬರುತ್ತದೆ. ಆದರೆ ನಿರಂತರ ವೈರವನ್ನು ಸಾಧಿಸುತ್ತಿದ್ದ ಅರಸರಿಬ್ಬರೂ ಕೂಡಿ ಈ ಕಾರ್ಯವನ್ನು ಸಾಧಿಸಿದರೆಂದು ನಂಬುವದು ದುಸ್ತರವಾಗುತ್ತದೆ. ಪೊಲವೀರನ ಅನಂತರ ಮುಷ್ಕರನ ಶ್ರೀ ವಿಕ್ರಮ (೬೬೫–೬೭೯) ಅನಂತರ ಭೂವಿಕ್ರಮ ರಾಜ್ಯವಾಳಿದರು.

ಅನಂತರದ ಗಂಗ ಅರಸು ಭೂವಿಕ್ರಮನ ತಮ್ಮ ಶಿವಮಾರ. ಇವನು ಕ್ರಿ. ಶ. ಸುಮಾರು ೬೭೯ರಲ್ಲಿ ಪಟ್ಟಕ್ಕೆ ಬಂದ. ಇವನ ಕಾಲಕ್ಕೆ ಗಂಗರಾಜ್ಯ ಸಾಕಷ್ಟು ವಿಸ್ತಾರವಾಗಿ, ಅನೇಕ ಸಾಮಂತರ ಬೇರೆ ಬೇರೆ ಭಾಗಗಳಲ್ಲಿ ಅರಸೊತ್ತಿಗೆ ನಡೆಸುತ್ತಿದ್ದರು. ಕೊಂಗಲನಾಡು–೨,೦೦೦, ತೊರೆನಾಡು–೫೦೦, ಮಲೆ–೧,೦೦೦ ಮುಂತಾದವು ಇಂಥ ಪ್ರದೇಶಗಳಾಗಿದ್ದವು. ಶಿವಮಾರನ ಅನಂತರ ಅವನ ಮೊಮ್ಮಗ ಶ್ರೀಪುರುಷ ಅಧಿಕಾರಕ್ಕೆ ಬಂದ. ಈ ಅವಧಿಯಲ್ಲಿ ಬಾದಾಮಿ ಚಾಲುಕ್ಯರು ಹೆಚ್ಚು ಹೆಚ್ಚು ಪ್ರಬಲರಾಗಿ ಅವರ ರಾಜ್ಯವು, ವಿಸ್ತಾರವಾಗುತ್ತ ನಡೆದಿತ್ತು. ಮಂಗಲೀಶ, ೨ನೆಯ ಪುಲಕೇಶಿಯಂಥ ಅರಸರು ಕರ್ನಾಟಕದ ಗಡಿಯನ್ನು ನರ್ಮದೆಯ ವರೆಗೂ ಮುಟ್ಟಿಸಿದರು. ದಕ್ಷಿಣದ ಪಲ್ಲವರೊಡನೆ ಅವರ ನಿರಂತರ ಹೋರಾಟ ನಡೆದಿತ್ತು. ಸ್ವತಂತ್ರರಾಗಿದ್ದ ಗಂಗರೊಡನೆ ತಿಕ್ಕಾಟ ಅನಿವಾರ್ಯವಾಯಿತು. ಇಡೀ ದಕ್ಷಿಣ ದಿಗ್ವಿಜಯವನ್ನು ಸಾಧಿಸಿದ ೨ನೆಯ ಪುಲಕೇಶಿ ಗಂಗರನ್ನು ತನ್ನ ಸಾಮಂತರನ್ನಾಗಿ ಮಾಡಿಕೊಂಡದ್ದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ೨ನೆಯ ಪುಲಕೇಶಿಯ ಆಳ್ವಿಕೆಯ ಕೊನೆಯಲ್ಲಿ ಚಾಲುಕ್ಯ ರಾಜ್ಯಕ್ಕೆ ತೀವ್ರ ಆಘಾತ ಒದಗಿದುದರಿಂದ ಆ ಕಾಲಕ್ಕೆ ಗಂಗರು ಮತ್ತೆ ಸ್ವತಂತ್ರರಾದಂತೆ ತೋರುತ್ತದೆ.

ಶ್ರೀಪುರುಷನ ೬೦ ವರ್ಷಗಳ ಸುದೀರ್ಘ ಆಳ್ವಿಕೆಯಲ್ಲಿ (೭೨೫–೭೮೮) ದಕ್ಷಿಣದ ರಾಜಕೀಯದಲ್ಲಿ ಬಹಳಷ್ಟು ಬದಲಾವಣೆಗಳಾದುವು. ಚಾಲುಕ್ಯ ಸಾಮ್ರಾಜ್ಯದ ಹಿಡಿತ ಸಡಿಲಾಗುತ್ತ ಕೊನೆಗೆ ೮ನೆಯ ಶತಮಾನದ ಆದಿಭಾಗದಲ್ಲಿ ರಾಷ್ಟ್ರಕೂಟರು ಈ ರಾಜ್ಯವನ್ನು ಆಕ್ರಮಿಸಿದರು. ದಕ್ಷಿಣದಲ್ಲಿ ಪಲ್ಲವರು ಪ್ರಬಲರಾಗುತ್ತ ನಡೆದಿದ್ದು ಅವರು ತಮ್ಮ ರಾಜ್ಯವನ್ನು ವಿಸ್ತರಿಸುವ ನೆವದಲ್ಲಿ ಅನೇಕ ಸಲ ಗಂಗರಾಜ್ಯದ ಮೇಲೆ ದಾಳಿ ಮಾಡಿದರು. ಶ್ರೀಪುರುಷ ಚಾಲುಕ್ಯರ ಸಹಾಯದೊಡನೆ ಇಂಥ ದಾಳಿಗಳನ್ನು ಎದುರಿಸಿದನಾದರೂ ಮುಂದೆ ರಾಷ್ಟ್ರಕೂಟರ ಒತ್ತಡವನ್ನು ಎದುರಿಸುವುದು ಕಠಿಣವಾಯಿತು. ಕ್ರಿ. ಶ. ೭೬೮ರಲ್ಲಿ ಮಣ್ಣೆ ಎಂಬಲ್ಲಿ ಯುದ್ಧವಾಗಿ ಗಂಗರ ಸ್ವಾತಂತ್ರ್ಯಕ್ಕೆ ಧಕ್ಕೆ ಬಂದಿತು. ಅನಂತರದ ಅರಸನಾದ ೨ನೆಯ ಶಿವಮಾರನ ಕಾಲಕ್ಕೆ ಈ ಒತ್ತಡ ಇನ್ನೂ ಹೆಚ್ಚಾಗಿ ಗಂಗರು ಹೆಚ್ಚು ಕಡಿಮೆ ರಾಷ್ಟ್ರಕೂಟರ ಸಾಮಂತರಂತಾದರು. ರಾಷ್ಟ್ರಕೂಟ ಧ್ರುವನೊಂದಿಗೆ ಮುದುಗುಂದೂರು ಎಂಬಲ್ಲಿ ನಡೆದ ಯುದ್ಧದಲ್ಲಿ ಇವನು ಹೋರಾಡಿದ. ಶಿವಮಾರ ವಿಜಯಿಯಾದನೆಂದು ಅವನ ಶಾಸನಗಳು ಹೇಳುತ್ತವೆಯಾದರೂ ಈ ಒತ್ತಡಗಳ ಪರಿಣಾಮವಾಗಿ ಗಂಗವಾಡಿ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ಒಂದು ಪ್ರಾಂತವಾಗಿ ಮಾರ್ಪಟ್ಟಿತು.

ಎಂಬುದು ಸ್ಪಷ್ಟವಿದೆ. ಧ್ರುವನ ಹಿರಿಯ ಮಗನಾದ ಸ್ತಂಭ ಅಥವಾ ಕಂಬಯ್ಯ ಈ ಪ್ರಾಂತದ ಅಧಿಕಾರಿಯಾಗಿ ನೇಮಿಸಲ್ಪಟ್ಟ. ಈ ಘಟನೆಯೊಂದಿಗೆ ಗಂಗರ ಸ್ವತಂತ್ರ ಅಸ್ತಿತ್ವ ಅಳಿದು ಅವರು ರಾಷ್ಟ್ರಕೂಟರ ಆಳ್ವಿಕೆಯುದ್ದಕ್ಕೂ ಅಂದರೆ ೧೦ನೆಯ ಶತಮಾನದ ಕೊನೆಯ ವರೆಗೂ ರಾಷ್ಟ್ರಕೂಟರ ವಿಧೇಯ ಸಾಮಂತರಾಗಿ ಉಳಿಯಬೇಕಾಯಿತು.

ರಾಷ್ಟ್ರಕೂಟ ಧ್ರುವನ ಮಗ ೩ನೆಯ ಗೋವಿಂದ ಶಿವಮಾರನನ್ನು ಗಂಗವಾಡಿಯ ಅಧಿಪತಿಯನ್ನಾಗಿ ಮಾಡಿದರೂ ಶಿವಮಾರ ಅವನ ವಿರುದ್ಧವೇ ನಿಂತು ಅವನ ವಿರೋಧಿಯಾದ ಸ್ತಂಭನ ಪಕ್ಷ ಕಟ್ಟಿದ. ಇದೇ ವೇಳೆಗೆ ಸ್ತಂಭನೂ ಗೋವಿಂದನ ವಿರುದ್ಧ ದಂಗೆ ಎದ್ದ. ಈ ಪರಿಸ್ಥಿತಿಯಲ್ಲಿ ಗೋವಿಂದ ಶಿವಮಾರನನ್ನು ಸೆರೆಯಲ್ಲಿಟ್ಟ. ಸ್ತಂಭನನ್ನು ನಿಗ್ರಹಿಸಿ ಅವನನ್ನು ಗಂಗವಾಡಿಯ ಸಾಮಂತನನ್ನಾಗಿ ಮಾಡಿದ. ಹೀಗೆ ಶಿವಮಾರ ರಾಷ್ಟ್ರಕೂಟರ ಆಧಿಪತ್ಯವನ್ನು ಒಪ್ಪದಿರಲು ಮಾಡಿದ ಪ್ರಯತ್ನ ವಿಫಲವಾಗಿ ಅವನ ಮಗ ೧ನೇ ಮಾರಸಿಂಹ ಅನಿವಾರ್ಯವಾಗಿ ರಾಷ್ಟ್ರಕೂಟರ ಅಧೀನನಾಗಿಯೇ ಉಳಿದ. ಮುಂದಿನ ಕೆಲ ವರ್ಷಗಳ ವರೆಗೆ ಗಂಗರ ಚಟುವಟಿಕೆಗಳು ಅಷ್ಟಾಗಿ ಎದ್ದು ಕಾಣುವುದಿಲ್ಲ. ಶಿವಮಾರ ಸೆರೆಮನೆಯಲ್ಲಿಯೇ ಮರಣ ಹೊಂದಿದ. ಮಾರಸಿಂಹ ಅನಾಮಧೇಯನಾಗಿ ಉಳಿದ. ಅವನ ಅನಂತರ ಪಟ್ಟಕ್ಕೆ ಬಂದ ವಿಜಯಾದಿತ್ಯ (ಇವನು ಶಿವಮಾರನ ತಮ್ಮ) ಪರಿಸ್ಥಿತಿಯನ್ನು ಎದುರಿಸಲಾರದೆ ತನ್ನ ಮಗ ೧ನೆಯ ರಾಚಮಲ್ಲನಿಗೆ ಅಧಿಕಾರವನ್ನು ಬಿಟ್ಟುಕೊಟ್ಟ.

ರಾಚಮಲ್ಲ ಅಧಿಕಾರಕ್ಕೆ ಬಂದಾಗ ಅವನು ಗಂಗವಾಡಿಯ ನಾಮ ಮಾತ್ರ ಅಧಿಕಾರಿಯಾದ ಬಂಕೇಶನ ಹಿಡಿತದಲ್ಲಿದ್ದ. ಆದರೂ ರಾಚಮಲ್ಲ ಸ್ವತಂತ್ರನಾಗಲು ಆಗಾಗ ಯತ್ನಿಸಿದನೆಂದು ತೋರುತ್ತದೆ. ಈಗ ಪರಿಸ್ಥಿತಿ ಸ್ವಲ್ಪ ಅನುಕೂಲವಿದ್ದಿತು. ೩ನೆಯ ಗೋವಿಂದನ ಅನಂತರ ಪಟ್ಟಕ್ಕೆ ಬಂದ ೧ನೆಯ ಅಮೋಘವರ್ಷ, ಬಹಳ ಚಿಕ್ಕವನಿದ್ದು ಎಷ್ಟೋ ವಿರೋಧಗಳನ್ನು ಎದುರಿಸಬೇಕಾಯಿತು. ರಾಚಮಲ್ಲ ಈ ಸಂಧಿಯನ್ನು ಸಾಧಿಸಿ ನೊಳಂಬರನ್ನು ಕೂಡಿಕೊಂಡು ರಾಷ್ಟ್ರಕೂಟರ ವಿರುದ್ಧ ಹೋರಾಡಲು ಯತ್ನಿಸಿದ. ಆದರೆ ಬಂಕೇಶ ಅವನನ್ನು ಸಂಪೂರ್ಣವಾಗಿ ನಿಗ್ರಹಿಸಿದ. ಕ್ರಿ. ಶ. ಸುಮಾರು ೮೪೩ರಲ್ಲಿ ಅಧಿಕಾರಕ್ಕೆ ಬಂದ ರಾಚಮಲ್ಲನ ಮಗ ನೀತಿಮಾರ್ಗ ತಂದೆಯ ಪ್ರಯತ್ನಗಳನ್ನು ಮುಂದುವರಿಸಿದ. ರಾಜಮಡು ಎಂಬಲ್ಲಿ ನಡೆದ ಯುದ್ಧದಲ್ಲಿ ಅವನು ಬಂಡೀಶನೊಡನೆ ಯಶಸ್ವಿಯಾಗಿ ಹೋರಾಡಿದ. ಸ್ವಭಾವತಃ ಶಾಂತಿಪ್ರಿಯನಾಗಿದ್ದ ಅಮೋಘವರ್ಷ ಇವನೊಂದಿಗೆ ಸ್ನೇಹ ಬೆಳೆಸಲು ತನ್ನ ಮಗಳಾದ ಚಂದ್ರೊಬಲಬ್ಬೆಯನ್ನು ನೀತಿಮಾರ್ಗನ ಮಗ ೧ನೆಯ ಬೂತುಗನಿಗೆ ಮದುವೆ ಮಾಡಿಕೊಟ್ಟ. ಇದರಿಂದ ಗಂಗ ಮತ್ತು ರಾಷ್ಟ್ರಕೂಟರ ನಡುವೆ ವಿರಸ ಅಳಿದು ಗಂಗರು ರಾಷ್ಟ್ರಕೂಟರ ನೆಚ್ಚಿನ ಸಾಮಂತರಾಗಿ ಅವರ ಸಾಮ್ರಾಜ್ಯದ ದಕ್ಷಿಣ ಗಡಿಯನ್ನು ರಕ್ಷಿಸಲು ನೆರವಾದರು.

ನೀತಿಮಾರ್ಗನ ಅನಂತರ ೨ನೆಯ ರಾಚಮಲ್ಲ ಅಧಿಕಾರಕ್ಕೆ ಬಂದ. ೨ನೆಯ ಶಿವಮಾರನ ಮೊಮ್ಮಗನಾದ ನನ್ನಿಯ ಗಂಗ ಈ ಹೊತ್ತಿಗೆ ರಾಚಮಲ್ಲನನ್ನು ಕೆಳಗಿಳಿಸಿ ತಾನೇ ಅಧಿಪತಿಯಾಗಲು ಹವಣಿಸಿದ. ಈ ದಿಶೆಯಲ್ಲಿ ಅವನು ಬಾಣ ಮತ್ತು ವೈದುಂಬರ ನೆರವನ್ನೂ ಪಡೆದ. ಆದರೆ ರಾಚಮಲ್ಲನ ನೆರವಿಗೆ ನಿಂತ ನೊಳಂಬ ಮಹೇಂದ್ರ ಸೋರೆಮುಡಿ ಎಂಬಲ್ಲಿ ನಡೆದ ಯುದ್ಧದಲ್ಲಿ (ಕ್ರಿ. ಶ. ಸುಮಾರು ೮೭೦) ಈ ಕೂಟವನ್ನು ಬಗ್ಗು ಬಡಿದ. ಆದರೆ ಮುಂದೆ ಈ ಮಹೇಂದ್ರನೇ ಗಂಗ ರಾಜ್ಯವನ್ನು ಕಬಳಿಸಲು ಯತ್ನಿಸಿದ. ಇದರಿಂದಾಗಿ ರಾಚಮಲ್ಲನ ತಮ್ಮ ಬೂತುಂಗ ಹಿರಿಯೂರು, ಸೂಳೂರು, ಸಾಮಿಯೂರು ಮುಂತಾದ ಕಡೆಗಳಲ್ಲಿ ನೊಳಂಬನೊಡನೆ ಹೋರಾಡಬೇಕಾಯಿತು. ಇಂಥ ಒಂದು ಯುದ್ಧದಲ್ಲಿ ಬೂತುಂಗನ ಮಗ ಎರೆಯಂಗ ಮಹೇಂದ್ರನನ್ನು ಕೊಂದು (ಕ್ರಿ. ಶ. ಸುಮಾರು ೮೯೫) ಮಹೇಂದ್ರಾಂತಕ ಎಂಬ ಬಿರುದನ್ನು ಪಡೆದ. ಎರೆಯಂಗನ ಅನಂತರ ಅವನ ಮಗ ನರಸಿಂಹ (೯೨೦–೯೩೩), ಅನಂತರ ಅವನ ತಮ್ಮ ೩ನೆಯ ರಾಚಮಲ್ಲ ಅಧಿಕಾರಕ್ಕೆ ಬಂದರು. ಆದರೆ ರಾಚಮಲ್ಲನ ತಮ್ಮ ೨ನೆಯ ಬೂತುಗ ರಾಷ್ಟ್ರಕೂಟ ೩ನೆಯ ಕೃಷ್ಣನ ಬೆಂಬಲದಿಂದ ಗಂಗ ರಾಜ್ಯದ ಆಧಿಪತ್ಯವನ್ನು ರಾಚಮಲ್ಲನಿಂದ ಕಸಿದುಕೊಂಡ. ಬೂತುಗ ರಾಷ್ಟ್ರಕೂಟರ ಅನೇಕ ಯುದ್ಧಗಳಲ್ಲಿ ನೆರವಾದನಲ್ಲದೆ ಕೃಷ್ಣನ ತಂಗಿಯಾದ ರೇವಕನಿಮ್ಮಡಿಯನ್ನು ಮದುವೆಯಾಗಿದ್ದ. ಹೀಗೆ ರಾಷ್ಟ್ರಕೂಟರ ಬೆಂಬಲದಿಂದ ಅವನ ಅಧಿಕಾರ ವ್ಯಾಪ್ತಿ ಬೆಳ್ವೊಲ, ಪುರಿಗೆರೆ, ಬಾಗೆ, ಕಿಸುಕಾಡು ನಾಡುಗಳ ವರೆಗೆ ಹಬ್ಬಿತ್ತು. ಚೋಳರೊಡನೆ ಕೃಷ್ಣ ನಡೆಸಿದ ತಕ್ಕೋಲಂ ಯುದ್ಧದಲ್ಲಿ ಬೂತುಗ ನೆರವಾದುದಕ್ಕೆ ಕೃಷ್ಣ ಬೂತುಗನಿಗೆ ಬನವಾಸಿ ಮಂಡಲದ ಆಧಿಪತ್ಯವನ್ನೂ ಕೊಟ್ಟ. ಬೂತುಗನ ಅನಂತರ ಅವನ ಮಗ ಮರುಳ ಅನಂತರ ಅವನ ತಮ್ಮ ೨ನೆಯ ಮಾರಸಿಂಹ ಅಧಿಕಾರಕ್ಕೆ ಬಂದರು.

ಮಾರಸಿಂಹ ಅಧಿಕಾರವನ್ನು ವಹಿಸಿಕೊಂಡ ಕಾಲಕ್ಕೆ ಕರ್ನಾಟಕದ ರಾಜಕೀಯದಲ್ಲಿ ಮತ್ತೆ ಬದಲಾವಣೆಗಳಾದವು. ೩ನೆಯ ಕೃಷ್ಣನ ಪ್ರಬಲ ಆಳ್ವಿಕೆ ಮುಗಿದು ರಾಷ್ಟ್ರಕೂಟರ ಅವನತಿ ಪ್ರಾರಂಭವಾಯಿತು. ಇದೇ ವೇಳೆಗೆ ಪರಮಾರ ಸೀಯಕನ ದಾಳಿಯಿಂದ ರಾಷ್ಟ್ರಕೂಟರ ಆಡಳಿತವು ದುರ್ಬಲಗೊಂಡ ಸಂಧಿಯನ್ನು ಸಾಧಿಸಿ ..ಖೊಟ್ಟಿಗನನ್ನು ಚಾಲುಕ್ಯ ೨ನೆಯ ತೈಲ ಸೋಲಿಸಿ ರಾಷ್ಟ್ರಕೂಟ ರಾಜ್ಯವನ್ನು ಆಕ್ರಮಿಸಿದ. (ಕ್ರಿ. ಶ. ಸುಮಾರು ೯೭೩). ರಾಷ್ಟ್ರಕೂಟರ ವಿಧೇಯ ಸಾಮಂತನಾದ ಮಾರಸಿಂಹ ಚಾಲುಕ್ಯರ ವಿರುದ್ಧ ರಾಷ್ಟ್ರಕೂಟ ೩ನೇ ಕರ್ಕನನ್ನು ಬೆಂಬಲಿಸಿದರೂ ಅದು ವಿಫಲವಾಯಿತು. ಆದರೂ ಮಾರಸಿಂಹ ತನ್ನ ಪ್ರಯತ್ನವನ್ನು ಬಿಡಲಿಲ್ಲ. ೪ನೇ ಇಂದ್ರನಿಗೆ ಪಟ್ಟಕಟ್ಟಿ ರಾಷ್ಟ್ರಕೂಟ ಸಾರ್ವಭೌಮತ್ವವನ್ನೇ ಎತ್ತಿ ಹಿಡಿಯಲು ಯತ್ನಿಸಿದ. ಆದರೆ ಪ್ರಬಲ ವಿರೋಧಿಗಳೆದುರಿಗೆ ಈ ಪ್ರಯತ್ನ ಫಲಿಸಲಿಲ್ಲ. ಕೊನೆಗೆ ಹತಾಶನಾಗಿ ಶ್ರವಣಬೆಳಗೊಳಕ್ಕೆ ಹೋಗಿ ಅಲ್ಲಿ ಸಲ್ಲೇಖನ ವ್ರತದಿಂದ ಮರಣ ಹೊಂದಿದ. (ಸುಮಾರು ಕ್ರಿ. ಶ. ೯೭೪).

ಗಂಗರ ಆಳ್ವಿಕೆಯಲ್ಲಿ ಹೆಚ್ಚುಕಡಿಮೆ ೨ನೆಯ ಮಾರಸಿಂಹನೇ ಕೊನೆಯವನು. ಅವನ ಅನಂತರ ಅವನ ಮಗ ೪ನೆಯ ರಾಚಮಲ್ಲ ಮತ್ತು ತಮ್ಮ ನೀತಿ ಮಾರ್ಗ ಇವರ ನಡುವೆ ಅಧಿಕಾರಕ್ಕಾಗಿ ಕಚ್ಚಾಟ ನಡೆಯಿತು. ಮಾರಸಿಂಹನ ಚಾವುಂಡರಾಯ ರಾಚಮಲ್ಲನನ್ನು ಬೆಂಬಲಿಸಿದ. ಆದರೆ ಬಲಿಯುತ್ತ ನಡೆದಿದ್ದ ಚಾಲುಕ್ಯ ೨ನೆಯ ತೈಲ ಗಂಗರ ಆಳ್ವಿಕೆಗೆ ಆಸ್ಪದ ಕೊಡಲಿಲ್ಲ. ಗಂಗವಾಡಿಯ ಬಹುಭಾಗ ಚಾಲುಕ್ಯ ಸಾಮ್ರಾಜ್ಯದ ಭಾಗವಾಯಿತು. ಇದೇ ವೇಳೆಗೆ ದಕ್ಷಿಣದಲ್ಲಿ ಪ್ರಬಲರಾಗುತ್ತಿದ್ದ ಚೋಳರು ಇತ್ತಕಡೆ ತಮ್ಮ ರಾಜ್ಯವನ್ನು ವಿಸ್ತರಿಸಲು ಹವಣಿಸುತ್ತಿದ್ದರು. ಇದರಿಂದಾಗಿ ಚಾಲುಕ್ಯ, ಚೋಳರ ನಡುವೆ ನಿರಂತರ ದ್ವೇಷ ಮತ್ತು ಹೋರಾಟ ನಡೆದು ಗಂಗವಾಡಿಯ ಸ್ವತಂತ್ರ ಅಸ್ತಿತ್ವ ಕೊನೆಗೊಂಡಿತು. ಮುಂದಿನ ಸಾಮ್ರಾಜ್ಯಗಳಲ್ಲಿ ಗಂಗವಾಡಿ ಒಂದು ಪ್ರಾಂತವಾಗಿ ಅನೇಕ ಅಧಿಕಾರಿಗಳ ಆಡಳಿತಕ್ಕೆ ಒಳಪಟ್ಟಿತು. (ಸುಮಾರು ೧೧ನೆಯ ಶತಮಾನದ ವರೆಗೂ ಚಾಲುಕ್ಯ ಸಾಮ್ರಾಜ್ಯದಲ್ಲಿ,

ವಿಶೇಷವಾಗಿ ಬೆಳಗಾಂವ್ ಕಲಬುರ್ಗಿ ವಿಭಾಗಗಳಲ್ಲಿ, ಗಂಗ ಮನೆತನಕ್ಕೆ ಸೇರಿದವರ ಹೆಸರುಗಳು ದೊರೆಯುತ್ತವೆ. ಆದರೆ ಇವರಿಗೂ, ತಳಕಾಡಿನ ಗಂಗರಿಗೂ ನೇರ ಸಂಬಂಧ ವನ್ನು ಕಲ್ಪಿಸುವುದು ದುಸ್ತರವಾಗುತ್ತದೆ.

### ಸಾಂಸ್ಕೃತಿಕ ಅಂಶಗಳು

ತಳಕಾಡಿನ ಗಂಗರು ಕರ್ನಾಟಕದ ರಾಜಕೀಯ ಚರಿತ್ರೆಯ ಆರಂಭದ ಕಾಲಕ್ಕೆ ಇದ್ದವರು. ಅವರು ಈ ಪ್ರದೇಶಕ್ಕೊಂದು ರಾಜಕೀಯ ಸ್ವರೂಪವನ್ನು, ರಾಜಕೀಯ ಸ್ಥಿರತೆಯನ್ನು ತಂದು ಕೊಟ್ಟರು. ವ್ಯವಸ್ಥಿತ ಆಡಳಿತಕ್ಕೆ ಭದ್ರ ಬುನಾದಿಯನ್ನು ಹಾಕಿದರು. ಜೊತೆಗೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರ ಗಳಲ್ಲಿ ಕರ್ನಾಟಕಕ್ಕೊಂದು ನಿಶ್ಚಿತ, ಪ್ರಮುಖ ಸ್ಥಾನವನ್ನು ದೊರಕಿಸಿಕೊಟ್ಟರು.

ಕರ್ನಾಟಕದ, ಅದೇಕೆ, ಭಾರತದ ಧಾರ್ಮಿಕ ಬೆಳವಣಿ ಗೆಯ ಒಂದು ವೈಶಿಷ್ಟ್ಯವೆಂದರೆ ಸರ್ವಧರ್ಮ ಸಮಾನತೆ ಮತ್ತು ಸಹಿಷ್ಣುತೆ. "ಏಕಂ ಸದ್‌ವಿಪ್ರಾಬಹುಧಾ ವದಂತಿ" ಎಂಬ ವೈದಿಕ ನುಡಿ ಭಾರತೀಯ ಜೀವನದಲ್ಲಿ ಹಾಸುಹೊಕ್ಕಾಗಿ ಬಂದು ಭಾರತ ಅನೇಕ ಧರ್ಮಗಳ, ಅಂತೆಯೇ ಧರ್ಮ ಸಮನ್ವಯದ ನಾಡಾಗಿ ಇಂದಿನ ವರೆಗೂ ಬೆಳೆಯುತ್ತಾ ಬಂದಿದೆ. ಗಂಗರ ಕಾಲವೂ ಈ ಪ್ರಣಾಲಿಕೆಗೆ ಇನ್ನೊಂದು ಉದಾಹ ರಣೆಯನ್ನು ಒದಗಿಸುತ್ತದೆ.

ಗಂಗರ ನಾಡಿನಲ್ಲಿ, ಹಾಗೂ ಕಾಲದಲ್ಲಿ ಅಂದಿನ ಪ್ರಮುಖ ಧರ್ಮಗಳಾದ ವೈದಿಕ (ಅಂದರೆ ಹಿಂದು) ಮತ್ತು ಜೈನ ಧರ್ಮಗಳು ಪ್ರಚಲಿತವಿದ್ದುವು. ಆಳರಸರ ವೈಯ ಕ್ತಿಕ ಶ್ರದ್ಧೆ, ನಂಬಿಕೆಗಳಿಗನುಗುಣ ಯಾವದೊಂದು ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ, ಪ್ರಚಾರ ದೊರೆತರೂ ಇತರ ಧರ್ಮ ಗಳ ಪ್ರಗತಿಗೆ ಅಡ್ಡಿ ಉಂಟಾಗಲಿಲ್ಲ. ಗಂಗರ ಕಾಲದಲ್ಲಿ ಜೈನ ಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹವಿದ್ದಿತು ಎಂದು ಸಾಮಾನ್ಯವಾಗಿ ನಂಬಲಾಗಿದೆ. ಇಂಥ ಪರಿಸ್ಥಿತಿಯೇ ಗಂಗ ಮನೆತನದ ಉಗಮಕ್ಕೆ ಜೈನ ಮುನಿಯೇ ಕಾರಣನಾದನು ಎಂಬ ಐತಿಹ್ಯಕ್ಕೆ ಮೂಲವಾಗಿರಬಹುದು. ಯಾರೊಬ್ಬ ಆಳರಸರೂ ಇಂಥ ಧರ್ಮದ ಅನುಯಾಯಿಗಳೇ ಆಗಿದ್ದರು ಎಂದು ಹೇಳುವುದು ದುಸ್ತರವಾಗುತ್ತದೆ. ಯಾಕೆಂದರೆ ಅವರು ಎಲ್ಲ ಧರ್ಮಗಳನ್ನೂ ಪ್ರೋತ್ಸಾಹಿಸುತ್ತಿದ್ದರು. ಎಲ್ಲ ಧರ್ಮಗಳ ಗುರುಗಳೂ ರಾಜಗುರುಗಳೆಂದೇ ಗಣಿಸಲ್ಪಡು ತ್ತಿದ್ದರು. ಆದರೂ ಗಂಗರ ಕಾಲ ಜೈನ ಧರ್ಮದ ಉಚ್ಛ್ರಾ ಯದ ಕಾಲವೆಂದು ಹೇಳಬಹುದು. ಗಂಗರ ಬಹಳಷ್ಟು ಶಾಸ ನಗಳು ಜಿನಸ್ತುತಿಯಿಂದ ಪ್ರಾರಂಭವಾಗುತ್ತವೆ. ಬಸದಿಗಳ, ಜೈನ ಶಿಲ್ಪಗಳ ನಿರ್ಮಾಣದ ಆರಂಭವಾದುದು ಈ ಕಾಲ ದಲ್ಲಿಯೇ, ಕನ್ನಡದಲ್ಲಿ ಜೈನ ಸಾಹಿತ್ಯದ ನಿರ್ಮಾಣಕ್ಕೆ ಗಂಗರ ಕಾಲವೇ ಆದಿಕಾಲ ಎಂದು ಹೇಳಬಹುದು. ಜಿನಸೇನಾ ಚಾರ್ಯ, ಅಜಿತಸೇನಾಚಾರ್ಯ, ವೀರಸೇನಾಚಾರ್ಯ, ಶಿವನಂದಿ ಆಚಾರ್ಯ, ದೇವನಂದಿ ಆಚಾರ್ಯ, ಮೇಘನಂದಿ ಆಚಾರ್ಯ, ಮುಂತಾದ ಖ್ಯಾತ ಜೈನ ವಿದ್ವಾಂಸರೂ, ಯತಿಗಳೂ ಈ ಕಾಲ ದಲ್ಲಿ ಜೈನ ಧರ್ಮದ ಪ್ರಸಾರಕ್ಕೆ ನೆರವಾದರು. ಗಂಗ ಅರಸರು ಉದಾರ ದಾನದತ್ತಿಗಳಿಂದ, ಬಸದಿಗಳ ನಿರ್ಮಾಣ ದಿಂದ ಜೈನ ಧರ್ಮದ ಪ್ರಸಾರದಲ್ಲಿ ಹೆಚ್ಚಿನ ಉತ್ಸಾಹ ತೋರಿದರು. ಶ್ರವಣಬೆಳಗೊಳದಲ್ಲಿ ಚಿಕ್ಕ ಬೆಟ್ಟದ ಮೇಲೆ ಇವನು ನಿರ್ಮಿಸಿದ ಬಸದಿಯೊಂದಿಗೆ, ಮುಂದಿನ ಅರಸರಾದ ರಾಚಮಲ್ಲ, ನೀತಿಮಾರ್ಗ, ಬೂತುಗ, ಮಾರಸಿಂಹ ಮುಂತಾ ದವರ ಕಾಲದಲ್ಲಿ ಜೈನಧರ್ಮ ಇನ್ನಷ್ಟು ಪ್ರಚಾರಗೊಂಡಿತು.

ಇವರ ಕಾಲದಲ್ಲಿ ಅನೇಕ ಬಸದಿಗಳು, ಮಾನಸ್ತಂಭಗಳು ನಿರ್ಮಾಣಗೊಂಡವು. ಅನೇಕ ಅರಸರು ಸ್ವತಃ ಜೈನ ಧರ್ಮದ ಅನುಯಾಯಿಗಳಾಗಿದ್ದು, ಜೈನ ವ್ರತಗಳನ್ನು ನಿಷ್ಠೆಯಿಂದ ಪಾಲಿಸಿದರು. ಅಲ್ಲದೆ ಜೈನಶಾಸ್ತ್ರದಲ್ಲಿ ಪರಿಣಿತರಾಗಿದ್ದರು. ಮೂರನೆಯ ಮಾರಸಿಂಹನ ಜೈನಧರ್ಮ ಪ್ರೀತಿಯನ್ನು ಒಂದು ಶಾಸನ ಸುಂದರವಾಗಿ ವರ್ಣಿಸುತ್ತದೆ. ಅಜಿತಸೇನಾಚಾರ್ಯರ ಶಿಷ್ಯನಾದ ಇವನು ಶ್ರವಣಬೆಳಗೊಳದಿಂದ ಚಂದ್ರಗಿರಿ ಬೆಟ್ಟ ದಲ್ಲಿ ಮಾನಸ್ತಂಭವನ್ನು ನಿರ್ಮಿಸಿದ. ಕೊನೆಗೆ ಸಲ್ಲೇಖನ ವ್ರತದಿಂದ ಶ್ರವಣಬೆಳಗೊಳದಲ್ಲಿಯೇ ಪ್ರಾಣತ್ಯಾಗ ಮಾಡಿದ. ಮಾರಸಿಂಹನ ಮಂತ್ರಿಯಾದ ಚಾವುಂಡರಾಯನ ಜಿನಧರ್ಮ ಪಕ್ಷಪಾತವಂತೂ ಲೋಕವಿದಿತವಿದೆ. ಅದರ ಪ್ರತೀಕವಾಗಿ ಲೋಕ ವಿಖ್ಯಾತವಾದ ಗೊಮ್ಮಟ ವಿಗ್ರಹ ಶ್ರವಣಬೆಳಗೊಳದಲ್ಲಿ ನಿಂತಿದೆ. ಅವನ ಚಾವುಂಡರಾಯ ಪುರಾಣ, ಅವನ ಜೈನ ಶಾಸ್ತ್ರದ ಪರಿಣತೆಯ ಪ್ರತೀಕ ವಾಗಿದೆ. ಶವಣಬೆಳಗೊಳದಲ್ಲಿಯ ಚಾವುಂಡರಾಯ ಬಸದಿ ಯಂತೂ ಸರಿಯೆ. ಹೀಗೆ ಅರಸು ಮನೆತನಗಳ ಪೋಷಣೆ ಯಲ್ಲದೆ ಅನೇಕ ಸಾಮಾನ್ಯ ಭಕ್ತರು ಜೈನ ಧರ್ಮವನ್ನು ನಿಷ್ಠೆಯಿಂದ ಪಾಲಿಸಿ ಪಾವನರಾದುದಕ್ಕೆ ಸಾಕ್ಷಿಯಾಗಿ ಅನೇಕ ಶಾಸನಗಳು, ನಿಸಿದಿಗಳು ಹೇರಳವಾಗಿ ದೊರೆಯುತ್ತವೆ.

ಈ ಮೊದಲು ಹೇಳಿದಂತೆ ಧರ್ಮ ಸಮಾನತೆ ಮತ್ತು ಧರ್ಮ ಸಮನ್ವಯ ಪ್ರಾಚೀನ ಕರ್ನಾಟಕದ ರಾಜಕೀಯದ ಸರ್ವಸಮ್ಮತ ತತ್ವವಾಗಿದೆ. ಹಾಗೆಂದೇ ಎಲ್ಲ ಧರ್ಮಗಳೂ ಈ ನಾಡಿನಲ್ಲಿ ಇಂದಿಗೂ ಬೆಳೆಯುತ್ತ ಬಂದಿವೆ. ಗಂಗ ಅರಸರು ಜೈನ ಧರ್ಮವನ್ನು ಪೋಷಿಸಿದಂತೆ ವೈದಿಕ ಧರ್ಮ ವನ್ನೂ ಅನುಸರಿಸಿದರು. ವೈದಿಕ ವಿಧಿ ವಿಧಾನಗಳನ್ನು, ಯಜ್ಞಯಾಗಾದಿಗಳನ್ನು ಅವರು ಆಚರಿಸಿದರು. ಶೈವ ವೈಷ್ಣವ ದೇವತೆಗಳನ್ನು ಆರಾಧಿಸಿದರು. ದೇವಾಲಯ ಗಳನ್ನು ನಿರ್ಮಿಸಿದರು. ಹೀಗೆ ಹಿಂದೂ ಧರ್ಮದ ಪ್ರಮುಖ ವೈಶಿಷ್ಟ್ಯವಾದ ಭಕ್ತಿ ಮಾರ್ಗ ಬೆಳೆಯಲು ಅನುಕೂಲವಾಯಿತು. ಅನೇಕ ಅರಸರು ವೈದಿಕ ವಿದ್ವಾಂಸರನ್ನು ಪೋಷಿಸಿ ದಾನ ದತ್ತಿಗಳನ್ನು ಕೊಟ್ಟು ವೈದಿಕ ಧರ್ಮ, ವೈದಿಕ ವಿದ್ಯೆ ಮುನ್ನಡೆಯುವಂತೆ ಮಾಡಿದರು. ದುರ್ವಿನೀತ ಹಿರಣ್ಯ ಗರ್ಭ ವೆಂಬ ಯಜ್ಞವನ್ನು ಮಾಡಿದ ಬಗ್ಗೆ ಶಾಸನವೊಂದರಲ್ಲಿ ಉಲ್ಲೇಖವಿದೆ. ಹರಿವರ್ಮ ಮೂಲಸ್ಥಾನೇಶ್ವರ ದೇವರಿಗೆ ದಾನ ಮಾಡಿದ ಉಲ್ಲೇಖ ಸಿಗುತ್ತದೆ. ವಿಷ್ಣುಗೋಪ ನಾರಾಯಣ ಚರಣಾನುಧ್ಯಾತನೆಂದು ಕರೆಯಲ್ಪಟ್ಟಿದ್ದಾನೆ ಹರಚರಣಾರವಿಂದ ಪ್ರಣಿಪಾತನೆಂದು ಅವಿನೀತ ಕರೆಯಲ್ಪಟ್ಟಿ ದ್ದಾನೆ. ಕಾಲಾಮುಖ ಶೈವ ಧರ್ಮವೂ ಈಗಾಗಲೇ ಈ ಪ್ರದೇ ಶದಲ್ಲಿ ಪ್ರಚಲಿತವಿದ್ದಿತು. ಈ ಪಂಥದ ಯತಿಗಳಿಗೆ ಅನೇ ಕರು ದಾನಮಾಡಿದ ವಿಷಯ ಶಾಸನಗಳಲ್ಲಿ ಸಿಗುತ್ತದೆ. ಕೆಲವು ಶಾಸನಗಳಲ್ಲಿ ಸೂರ್ಯಾರಾಧನೆಯ ಉಲ್ಲೇಖ ವೂ ಇದೆ. ೪ ನೆಯ ರಾಚಮಲ್ಲನ ಸೋಮೇಶ್ವರ ದೇವಾಲಯಕ್ಕೆ ದಾನ ಮಾಡಿದ ಉಲ್ಲೇಖವಿದೆ. ೨ನೆಯ ಬೂತುಗನ ರಾಣಿ ಶಿವದೇವಾಲಯವನ್ನು ನಿರ್ಮಿಸಿ ಅದರ ನಿರ್ವಹಣೆಗಾಗಿ ದಾನ ಮಾಡಿದ ವಿಷಯ ಒಂದು ಶಾಸನದಲ್ಲಿ ಸಿಗುತ್ತದೆ. ಚಾಮರಾಜ ತಾಲೂಕಿನ ನರಸಿಂಹ ಮಂಗಲದಲ್ಲಿಯ ಭೋಗ ನಂದಿ ದೇವಾಲಯ, ಕೃಷ್ಣರಾಜ ಪೇಟೆ ತಾಲೂಕಿನ ಶಿಡ್ಲ ಘಟ್ಟದಲ್ಲಿಯ ಸಂಗಮೇಶ್ವರ ದೇವಾಲಯ, ತಳಕಾಡಿನ ಬಳಿಯ ಮರಳೇಶ್ವರ, ಅರಿಕೇಶ್ವರ, ಪಾತಾಳೇಶ್ವರ ಮಹ ಲಿಂಗೇಶ್ವರ ದೇವಾಲಯಗಳು, ಮೈಸೂರಿನ ಬಳಿಯ ವರು ಣದಲ್ಲಿಯ ಮಹಲಿಂಗೇಶ್ವರ ದೇವಾಲಯ ಮುಂತಾದವುಗಳು

ಗಂಗರ ಕಾಲದಲ್ಲಿಯ ಧಾರ್ಮಿಕ ಸ್ಥಿತಿಗಳ ಮತ್ತು ವಾಸ್ತುಕಲೆಯ ಬೆಳವಣಿಗೆಯ ದ್ಯೋತಕವಾಗಿವೆ.

ಗಂಗನಾಡಿನ ಸಾಮಾಜಿಕ ಸ್ಥಿತಿಗಳು ಅಂದಿನ ದೇಶದ ಇತರ ಭಾಗಗಳಿಗಿಂತ ಭಿನ್ನವಾಗಿರಲಿಲ್ಲ. ವರ್ಣವ್ಯವಸ್ಥೆ ಅಂದಿನ ಸಮಾಜದ ಪ್ರಮುಖ ವೈಶಿಷ್ಟ್ಯ. ಶ್ರಮ ವಿಭಜನೇ (ಡಿವಿಷನ್ ಆಫ್ ಲೇಬರ್) ಈ ವ್ಯವಸ್ಥೆಗೆ ಮೂಲ ಕಾರಣವಾದರೂ, ಭಾರತೀಯ ಸಮಾಜದಲ್ಲಿ ರೂಢ ಮೂಲವಾಗಿರುವ ಆನುವಂಶಿಕತೆಯಿಂದಾಗಿ ಈ ವರ್ಣಗಳು ಆನುವಂಶಿಕ ಪದ್ಧತಿಗೊಳಪಟ್ಟು ಜಾತಿಗಳರೂಪ ತಳೆದು ಬೆಳೆದವು. ಹೀಗಿದ್ದರೂ ಆಯಾ ವರ್ಣಗಳವರು ತಮ್ಮ ತಮ್ಮ ಭಿನ್ನ ಭಿನ್ನ ವೃತ್ತಿಗಳನ್ನು ಅನುಸರಿಸುತ್ತಿದ್ದುದು ಅಂದಿನ ಸಮಾಜದಲ್ಲಿ ಕಂಡು ಬರುತ್ತದೆ. ಧಾರ್ಮಿಕ ವಿಧಿ ವಿಧಾನಗಳು, ಪೂಜೆ ಪುರಸ್ಕಾರಗಳು, ಶಿಕ್ಷಣ ಪ್ರಸಾರ, ಅಧ್ಯಯನ, ಅಧ್ಯಾಪನ ಇವು ಬ್ರಾಹ್ಮಣ ವರ್ಗದವರ ಪ್ರಮುಖ ಕರ್ತವ್ಯಗಳಾಗಿದ್ದುವು. ತಮ್ಮ ವಿದ್ವತ್ತೆಯಿಂದ, ನಿಷ್ಠುರ ನೈತಿಕ ಜೀವನದಿಂದ, ವಿದ್ಯಾ ಪ್ರಸಾರದಿಂದ ಬ್ರಾಹ್ಮಣ ವರ್ಗದವರು ಆಳರಸರ, ಇತರ ವೃತ್ತಿಯವರ ಗೌರವಕ್ಕೆ ಪಾತ್ರರಾಗಿರುತ್ತಿದ್ದರು. ಅವರ ವೃತ್ತಿ-ಪ್ರವೃತ್ತಿಗಳಿಗೆ ಅನುಕೂಲವಾಗುವಂತೆ ಅಗ್ರಹಾರಗಳ ನಿರ್ಮಾಣ, ಹೇರಳವಾದ ದಾನದತ್ತಿಗಳ ಕೊಡುಗೆ, ಇವುಗಳ ಉಲ್ಲೇಖಗಳು ನಮಗೆ ಶಾಸನಗಳಲ್ಲಿ ದೊರೆಯುತ್ತವೆ. ಇದೇ ರೀತಿಯಾಗಿ ಕ್ಷತ್ರಿಯರು ಆಡಳಿತ, ರಾಜ್ಯ ರಕ್ಷಣೆ, ರಾಜ್ಯ ವಿಸ್ತಾರದ ಚಟುವಟಿಕೆಗಳಲ್ಲಿ ನಿರತರಾಗಿರುತ್ತಿದ್ದರು. ವ್ಯಾಪಾರ, ಒಕ್ಕಲತನ ಮುಂತಾದುವು ವೈಶ್ಯವರ್ಗದ ಪ್ರಮುಖ ಉದ್ಯೋಗಗಳಾಗಿದ್ದುವು. ಗಂಗರ ಶಾಸನಗಳಲ್ಲಿ ಅಂಥ ಅನೇಕ ಸ್ಥಿತಿವಂತ ಶೆಟ್ಟಿಗಳ, ಪಟ್ಟಣಸ್ವಾಮಿಗಳ ಉಲ್ಲೇಖಗಳನ್ನು ನಾವು ಕಾಣುತ್ತೇವೆ. ಇಲ್ಲಿ ಎದ್ದು ಕಾಣುವ ಒಂದು ಅಂಶವೆಂದರೆ ಇಂಥ ವೈಶ್ಯರು ತಮ್ಮ ಗಳಿಕೆಯ ಬಹುಭಾಗವನ್ನು ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಗಳಿಗೆ ವಿನಿಯೋಗಿಸುತ್ತಿದ್ದುದು. ದೇವಾಲಯಗಳ ನಿರ್ವಹಣೆಗಾಗಿ, ವಿದ್ಯಾ ಕೇಂದ್ರಗಳ ನಿರ್ವಹಣೆಗಾಗಿ, ಕೆರೆ ಕಟ್ಟೆಗಳ, ನಿರ್ಮಾಣಕ್ಕಾಗಿ ತಮ್ಮ ದ್ರವ್ಯವನ್ನು ಅವರು ವಿನಿಯೋಗಿಸುತ್ತಿದ್ದ ಉಲ್ಲೇಖಗಳು ದೊರೆಯುತ್ತವೆ. ಉಪಜೀವನಕ್ಕಾಗಿ ಶೂದ್ರರು ಅನೇಕ ವಿಧ ವೃತ್ತಿಗಳನ್ನು ಕೈಗೊಳ್ಳುತ್ತಿದ್ದರು. ಕೆಲಸಲ ಶಾಸನಗಳಲ್ಲಿ ಚತುರ್ಥ ವರ್ಗ ಎಂಬ ಉಲ್ಲೇಖವು ದೊರೆಯುತ್ತಿದ್ದು ಅದು ಈ ವರ್ಗವನ್ನು ಸೂಚಿಸುತ್ತದೆ ಎಂದು ತೋರುತ್ತದೆ. ಹೆಚ್ಚಾಗಿ ಇಂಥ ವರ್ಗ ವಿಭಜನೆಗೆ ಆನುವಂಶಿಕತೆ ಕಾರಣವಾಗಿದ್ದರೂ ಎಷ್ಟೋ ಸಲ ಈ ವಿಭಜನೆ ಅಷ್ಟೊಂದು ಕಟ್ಟುನಿಟ್ಟಾಗಿ ಇರುತ್ತಿರಲಿಲ್ಲ ಎಂದೆನಿಸುತ್ತದೆ. ಅನೇಕ ವಿದ್ವಾಂಸರಾದ ಬ್ರಾಹ್ಮಣರೂ, ವೈಶ್ಯರೂ ಚತುರ್ಥ ವರ್ಗದವರೂ ಆಡಳಿತಗಾರರಾಗಿದ್ದ, ದಂಡನಾಯಕರಾಗಿದ್ದ ಉದಾಹರಣೆಗಳು ನಮಗೆ ದೊರೆಯುತ್ತವೆ.

ಪಿತೃ ಪ್ರಧಾನವಾಗಿದ್ದ ಕುಟುಂಬ ಪದ್ಧತಿ ಇತರೆಡೆಗಳಂತೆ ಗಂಗ ನಾಡಿನಲ್ಲಿಯೂ ಪ್ರಚಲಿತವಿದ್ದಿತು. ಇಂಥ ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನದ ಬಗ್ಗೆ ಎಷ್ಟೋ ಚರ್ಚೆಗಳು ನಡೆದಿದ್ದರೂ, ಖಚಿತವಾದ ವಿವರಗಳು ದೊರೆಯುವುದಿಲ್ಲ. ಶಾಸನಗಳಲ್ಲಿಯಾಗಲಿ, ಇತರ ಸಾಧನೆಗಳಲ್ಲಾಗಲಿ, ಸಾಮಾನ್ಯ ಮನೆತನಗಳ ಸ್ತ್ರೀಯರ ಬಗೆಗಂತೂ ವಿವರಗಳು ತೀರ ವಿರಳ. ರಾಜ ಮನೆತನಗಳ, ಅಧಿಕಾರ ವರ್ಗದ ಮನೆತನಗಳ ಸ್ತ್ರೀಯರು ಅಗತ್ಯವಾದ ವಿದ್ಯೆಯನ್ನು ಪಡೆಯುತ್ತಿದ್ದರೆಂದು ತೋರುತ್ತದೆ. ಇಂಥ ಸ್ತ್ರೀಯರು ಚಿಕ್ಕ ದೊಡ್ಡ ಪ್ರದೇಶದ ಅಧಿಕಾರಿಗಳಾಗಿ ಆಡಳಿತದಲ್ಲಿ ಭಾಗವಹಿಸುತ್ತಿದ್ದ ಉದಾಹರಣೆಗಳು ದೊರೆಯುತ್ತವೆ. ಎರೆಯಂಗನ ಹೆಂಡತಿ ರೇವಕನಿಮ್ಮಡಿ ಎಡೆದೊರೆ ನಾಡನ್ನಾಳುತ್ತಿದ್ದ ಬಗ್ಗೆ ಉಲ್ಲೇಖವಿದೆ. ಭೂತುಗನ ರಾಣಿ ಕುರುಗಲ್ಲು ಪ್ರದೇಶವನ್ನು, ಶ್ರೀಪುರುಷನ ಸೊಸೆ ಕಂಚಿಯಬ್ಬೆ ಅಗಳಿ ಪ್ರದೇಶವನ್ನು ಆಳುತ್ತಿದ್ದರು. ಇಂಥ ಉದಾಹರಣೆಗಳನ್ನು ಬಿಟ್ಟರೆ, ಸಾಮಾನ್ಯವಾಗಿ ಸ್ತ್ರೀಯರು ಕುಟುಂಬ ನಿರ್ವಹಣೆಯಲ್ಲಿ ತೊಡಗಿರುತ್ತಿದ್ದರೆಂದು ಹೇಳಬಹುದಾಗಿದೆ. ಸಂಗೀತ, ನೃತ್ಯ ಕಲೆಗಳಲ್ಲಿ ಪರಿಣತೆಯನ್ನು ಪಡೆದ ಸ್ತ್ರೀಯರ ಉದಾಹರಣೆಗಳು ಕೆಲವು ದೊರೆಯುತ್ತವೆ.

ಈ ಮೊದಲು ಹೇಳಿದಂತೆ ಗಂಗರ ಕಾಲ ಕರ್ನಾಟಕದ ರಾಜಕೀಯ ಜೀವನ ರೂಪುಗೊಳ್ಳುತ್ತಿದ್ದ ಕಾಲ. ಅಂದಿನ ಸಮಾಜ ಇತರ ಪ್ರದೇಶಗಳಲ್ಲಿಯಂತೆ ಧರ್ಮದ ಪ್ರಭಾವಕ್ಕೆ ಒಳಪಟ್ಟಿದ್ದಿತು ಎಂಬುದು ಸ್ಪಷ್ಟವಿದೆ. ದೇವಾಲಯಗಳು, ಬಸದಿಗಳು, ಧಾರ್ಮಿಕ ಚಟುವಟಿಕೆಗಳಂತೆ ಸಾಮಾಜಿಕ ಚಟುವಟಿಕೆಗಳ ಮೇಲೂ ಅತ್ಯಂತ ಪ್ರಭಾವ ಬೀರುತ್ತಿದ್ದವು. ವಿದ್ಯಾ ಕೇಂದ್ರಗಳು ಈ ಪ್ರಭಾವಕ್ಕೊಳಗಾಗಿಯೇ ಬೆಳೆಯುತ್ತಿದ್ದವು. ವಾಸ್ತುಕಲೆ, ಶಿಲ್ಪಕಲೆ, ಲಲಿತಕಲೆಗಳು ಈ ಪ್ರಭಾವದಿಂದ ಹೊರತಾಗಿರಲಿಲ್ಲ. ಗಂಗರ ಪ್ರಮುಖ ಕೊಡುಗೆ ಎಂದರೆ ಕರ್ನಾಟಕದ ರಾಜಕೀಯ ಜೀವನದ ಆರಂಭ ಕಾಲದಲ್ಲಿ ಈ ಎಲ್ಲ ಬೆಳವಣಿಗೆಗೆ ಮೂರ್ತ ಸ್ವರೂಪವನ್ನು ಕೊಟ್ಟುದು.

# ಚಾಲುಕ್ಯರು ಮತ್ತು ಇತರರು

ಡಾ. ಎ. ವಿ. ನರಸಿಂಹ ಮೂರ್ತಿ

ಕರ್ನಾಟಕದ ರಾಜಕೀಯ ಹಾಗೂ ಸಾಂಸ್ಕೃತಿಕ ಘನತೆ ಭಾರತದ ತುಂಬೆಲ್ಲ ಪ್ರಕಾಶಮಾನವಾಗಿ ಬೆಳಗಿದ್ದು ಬಾದಾಮಿಯ ಚಾಲುಕ್ಯ ಅರಸರ ಕಾಲದಲ್ಲಿಯೇ ಇದಕ್ಕೆ ಕಾರಣವೆಂದರೆ ಚಾಲುಕ್ಯರ ಸೈನಿಕ ಶಕ್ತಿ, ಆಡಳಿತ ಸಾಮರ್ಥ್ಯ ಮತ್ತು ಸಾಂಸ್ಕೃತಿಕ ಪ್ರಜ್ಞೆ ತುಂಬಾ ಪ್ರಭಾವಪೂರ್ಣವಾಗಿದ್ದವು. ಹೀಗೆ ಆರನೆಯ ಶತಾಬ್ದಿಯಿಂದ ಹನ್ನೆರಡನೆಯ ಶತಾಬ್ದಿವರೆಗಿನ ಕಾಲಾವಧಿಯು ಕರ್ನಾಟಕದ ಇತಿಹಾಸ ಹಾಗೂ ಸಂಸ್ಕೃತಿಯ ದೃಷ್ಟಿಯಿಂದ ಬಹಳ ಮಹತ್ವದ್ದಾಗಿದೆ. ಈ ಅವಧಿಯಲ್ಲಿಯೇ ರಾಷ್ಟ್ರಕೂಟ ಅರಸರು ಗಂಗಾನದಿಯ ವರೆಗೂ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿದರು. ಅವರ ಆಳಿಗಾಲದ ನಂತರದ ಕಲ್ಯಾಣದ ಚಾಲುಕ್ಯರು ಕರ್ನಾಟಕದ ದೈವರೇಖೆಯ ಸಂರಕ್ಷಕರಾಗಿ ಮೆರೆದರು. ಇಷ್ಟಲ್ಲದೆ ಈ ಸಮಯದಲ್ಲೇ ಅನೇಕ ಸಣ್ಣ ಪುಟ್ಟ ಮನೆತನಗಳೂ ಬೆಳಕಿಗೆ ಬಂದವು. ಇಂಥವರಲ್ಲಿ ಚೋಳ ದೇಶದ ಅರಸರೂ ಒಬ್ಬರಾಗಿದ್ದರು.

ಚಾಲುಕ್ಯರು ತಾವು ಬ್ರಹ್ಮದೇವನ ಚುಲಕದಿಂದ ಹುಟ್ಟಿದವರೆಂದು ಹೇಳಿಕೊಳ್ಳುತ್ತಿದ್ದರು. ಆದರೆ ಅವರೆಲ್ಲರೂ ಸದ್ಯದ ಬಾದಾಮಿ ಮತ್ತು ಸಮೀಪದ ಪ್ರದೇಶದಲ್ಲಿ ವಾಸಿಸುತ್ತಿದ್ದ ಜನಗಳೇ ಆಗಿದ್ದರು. ವಿಷ್ಣುವಿನ ಅವತಾರವಾದ ವರಾಹವೇ ಅವರ ರಾಜ್ಯ ಚಿಹ್ನವಾಗಿತ್ತು. ಈ ಮನೆತನದ ಮೂಲಪುರುಷನೇ ಜಯಸಿಂಹನೆಂಬ ಅರಸು. ಆತನು ರಾಜ್ಯವಾಳಲು ಪ್ರಾರಂಭಿಸಿದ್ದು ಕ್ರಿ. ಶ. ೫೦೦ರಲ್ಲಿ. ಮುಂದೆ ಇದೇ ಮನೆತನದ ಮೊದಲನೆಯ ಪುಲಿಕೇಶಿ, ಅಂದರೆ ರಣರಾಜನ ಮಗನೇ ಬನವಾಸಿಯ ಕದಂಬರನ್ನು ಸೋಲಿಸಿ ತನ್ನ ಸ್ವಂತ ರಾಜ್ಯವನ್ನು ಸ್ಥಾಪಿಸಿದನು. ಆತನು ಬಾದಾಮಿಯ ಕೋಟೆಯನ್ನು ಕಟ್ಟಿಸಿದನಲ್ಲದೆ ಅಶ್ವಮೇಧ ಯಜ್ಞವನ್ನೂ ನೆರವೇರಿಸಿದನು. ಈ ಮನೆತನದಲ್ಲಿ ಕೀರ್ತಿವರ್ಮ ಮತ್ತು ಮಂಗಳೇಶರು ಆಳಿದ ನಂತರ ಎರಡನೆಯ ಪುಲಿಕೇಶಿ ಕ್ರಿ. ಶ. ೬೧೦ರಲ್ಲಿ ಪಟ್ಟಕ್ಕೆ ಬಂದು ಕ್ರಿ. ಶ. ೬೪೨ರ ವರೆಗೂ ರಾಜ್ಯವಾಳಿದ ಈತನ ಆಳ್ವಿಕೆಯ ಇತಿಹಾಸ ಅಹಿಹೊಳೆಯ ರವಿಕೀರ್ತಿ ಕವಿಯ ಶಾಸನದಿಂದ ನಮಗೆ ಗೊತ್ತಾಗುತ್ತದೆ.

ಮುಂದೆ ಈತನು ತನ್ನ ಸುತ್ತುಮುತ್ತಲಿನ ಸ್ಥಾನವನ್ನು ಭದ್ರಗೊಳಿಸಿ ಸ್ಥಾನೇಶ್ವರ ಹರ್ಷವರ್ಧನನ ಮೇಲೆ ದಂಡೆತ್ತಿ ಹೋಗಿ ಅವನನ್ನು ಜೈಸಿ ಪರಮೇಶ್ವರನೆಂಬ ಬಿರುದಿನಿಂದ ಮೆರೆದನು. ಆ ಮೇಲೆ ಪಲ್ಲವ ಅರಸನಾದ ನರಸಿಂಹವರ್ಮನನ್ನು ಸೋಲಿಸಿದ, ಚಾಲುಕ್ಯರ ಸೈನ್ಯವು ಕಾವೇರಿಯನ್ನು ದಾಟಿ, ಚೋಳ, ಪಾಂಡ್ಯ ಹಾಗೂ ಕೇರಳದ ಅರಸರ ಜೊತೆಗೆ ಮೈತ್ರಿಯನ್ನು ಬೆಳೆಸಿತು. ಮುಂಬೈ ಸಮೀಪದ ಠಾಣೆ ಬಂದರದ ಮೇಲೆ ಅರಬ್ಬೀಯರು ದಾಳಿ ಮಾಡಿದಾಗ ಅಲ್ಲಿಂದ ಪುಲಿಕೇಶಿಯು ಅವರನ್ನು ಹಿಮ್ಮೆಟ್ಟಿಸಿದ. ಲಾಟ, ಮಾಳವ, ಗುರ್ಜರ ದೇಶದ ಅರಸರುಗಳೆಲ್ಲ ಪುಲಿಕೇಶಿಗೆ ಶರಣಾಗತರಾದರು. ದಕ್ಷಿಣಕೋಸಲದ ಅರಸನು ಅವನಿಗೆ ಸೋತನು. ಹೀಗಾಗಿ ಪುಲಿಕೇಶಿಯು ದಕ್ಷಿಣಾಪಥದ ಅಜಿಂಕ್ಯ ಯಜಮಾನನಾಗಿ ಮೆರೆದನು. ಅವನು ತನ್ನ ವಿಶಾಲ ರಾಜ್ಯದ ಆಡಳಿತೆಗಾಗಿ ಒಳ್ಳೆಯ ವ್ಯವಸ್ಥೆಯನ್ನು ಮಾಡಿದನಲ್ಲದೆ ಕಲೆ ಮತ್ತು ಸಾಹಿತ್ಯ ಸಂವರ್ಧಕನಾಗಿದ್ದನು. ಆದರೆ ತನ್ನ ಆಡಳಿತದ ಅಂತ್ಯ ಕಾಲದಲ್ಲಿ ಅವನು ಪಲ್ಲವರಿಂದ ಸ್ವಲ್ಪ ಕಾಲ ತೊಂದರೆಗೆ ಈಡಾದನು.

ಆ ಮೇಲೆ ಎರಡನೆಯ ಪುಲಿಕೇಶಿಯ ಮೂರನೆಯ ಮಗನಾದ ವಿಕ್ರಮಾದಿತ್ಯನೆಂಬವನು ಪಟ್ಟವೇರಿದ. ಅವನು ಪಲ್ಲವ ಅರಸರುಗಳಾದ ನರಸಿಂಹವರ್ಮ, ಮಹೇಂದ್ರವರ್ಮ ಮತ್ತು ಪರಮೇಶ್ವರ ವರ್ಮರನ್ನು ಸೋಲಿಸಿದನಲ್ಲದೆ ಅವರುಗಳಿಂದ ಅತ್ಯಂತ ಬೆಲೆಬಾಳುವ 'ಉಗ್ರೋದಯ'ವೆಂಬ ರತ್ನಹಾರವನ್ನು ಕಿತ್ತುಕೊಂಡನು. ಅಂತೂ ಆತನು ಚಾಲುಕ್ಯ ಮನೆತನದ ಕೀರ್ತಿವೈಭವಗಳನ್ನು ಪುನ: ಪ್ರತಿಷ್ಠಾಪಿಸಿದ. ವಿಕ್ರಮಾದಿತ್ಯನ ನಂತರ ವಿನಯಾದಿತ್ಯ ರಾಜ್ಯವಾಳಿದ. ಈ ವಿನಯಾದಿತ್ಯನು ತನ್ನ ಮಗನಾದ ವಿಜಯಾದಿತ್ಯನನ್ನು ಉತ್ತರಕ್ಕೆ ಜೈತ್ರ ಯಾತ್ರೆಗೆ ಕಳುಹಿದಾಗ ಅಲ್ಲಿ ಅವನು ಅಕಸ್ಮಾತ್ ವೈರಿ ಅರಸರಿಗೆ ಸೆರೆಸಿಕ್ಕಿಬಿದ್ದ. ಆದರೂ ಅವನು ಅಲ್ಲಿಂದ ಅತ್ಯಂತ ಯಶಸ್ವಿಯಾಗಿ ಪಾಲಿಧ್ವಜದೊಂದಿಗೆ ಹಿಂತಿರುಗಿ ಕ್ರಿ. ಶ. ೭೩೪ರ ವರೆಗೂ ರಾಜ್ಯವಾಳಿದ. ತದನಂತರ ಎರಡನೆಯ ವಿಕ್ರಮಾದಿತ್ಯನು ಸಿಂಹಾಸನವನ್ನೇರಿದ. ಅವನ ಆಡಳಿತ ಕಾಲದ ಒಂದು ದೊಡ್ಡ ಸಾಧನೆ ಎಂದರೆ ಪಲ್ಲವರ ಸೋಲು ಮತ್ತು ಕಂಚೀಪುರದ ಸ್ವಾಧೀನತೆ. ಆತನು ಕಂಚೀಪುರವನ್ನು ಯಶಸ್ವಿಯಾಗಿ ಪ್ರವೇಶಿಸಿ ಅಲ್ಲಿಯ ದೇವಾಲಯಗಳಿಗೆ ಧನಕನಕಗಳ ದತ್ತಿಯನ್ನು ಸಲ್ಲಿಸಿದನಲ್ಲದೆ ಅತ್ಯಂತ ಪುರಾತನವಾದ ರಾಜಸಿಂಹೇಶ್ವರ ದೇವಾಲಯದಲ್ಲಿ ತನ್ನ ಕಂಚೀಪುರದ ವಿಜಯದ ನೆನಪಿಗಾಗಿ ಒಂದು ಶಿಲಾಲೇಖವನ್ನು ಬರೆಯಿಸಿದ. ತಮಿಳುನಾಡಿನ ಕಂಚೀಪುರದ ಈ ಕನ್ನಡ ಶಿಲಾಲೇಖವು ವೈರಿ ರಾಜ್ಯದಲ್ಲಿ ಕೂಡ ಕನ್ನಡ ಅರಸರು ಧರ್ಮ, ದೇವರುಗಳಿಗೆ ಅದೆಂಥ ಮನ್ನಣೆ ಕೊಡುತ್ತಿ

ದ್ದರು ಅಲ್ಲದೆ ವೈರಿ ಅರಸರೊಂದಿಗೆ ಅದೆಷ್ಟು ವಿನಮ್ರರಾಗಿ ನಡೆದುಕೊಳ್ಳುತ್ತಿದ್ದರೆಂಬುದಕ್ಕೆ ಶಾಶ್ವತ ಸಾಕ್ಷಿಯಾಗಿ ನಿಂತಿದೆ. ಅಲ್ಲದೆ ವಿಕ್ರಮಾದಿತ್ಯನ ಪಟ್ಟಮಹಿಷಿಯರಾದ ಲೋಕಮಹಾದೇವಿ, ತ್ರೈಲೋಕ್ಯ ಮಹಾದೇವಿ–ಈರ್ವರೂ ಪಟ್ಟದ ಕಲ್ಲಿನಲ್ಲಿ ಅತ್ಯುತ್ತಮ ವಾಸ್ತುಶಿಲ್ಪಗಳನ್ನೊಳಗೊಂಡ ವಿರೂಪಾಕ್ಷ ದೇವಾಲಯ ಮತ್ತು ಮಲ್ಲಿಕಾರ್ಜುನ ದೇವಾಲಯಗಳನ್ನು ಕಟ್ಟಿಸಿ ತಮ್ಮ ಹೆಸರನ್ನು ಅಜರಾಮರವಾಗಿಸಿದ್ದಾರೆ. ವಿಕ್ರಮಾದಿತ್ಯನ ಮರಣಾನಂತರ ಎರಡನೆಯ ಕೀರ್ತಿವರ್ಮನು ಪಟ್ಟಕ್ಕೆ ಬಂದ. ಆದರೆ ಆತನು ರಾಷ್ಟ್ರಕೂಟ ಅರಸನಾದ ಎರಡನೆಯ ದಂತಿ ದುರ್ಗನಿಂದ ಕ್ರಿ. ಶ ೭೫೩ರಲ್ಲಿ ಪರಾಭವಗೊಂಡು ತನ್ನ ರಾಜ್ಯಕ್ಕೆ ಎರವಾದನು. ಹೀಗೆ ಎರಡೂವರೆ ಶತಕಗಳ ವರೆಗೆ ಬಾದಾಮಿಯ ಚಾಲುಕ್ಯರು ಕರ್ನಾಟಕದಲ್ಲಿ ರಾಜ್ಯವಾಳಿದರು.

ಈ ಅರಸರು ತಮ್ಮ ವಿಶಾಲ ರಾಜ್ಯವನ್ನು ಸಣ್ಣ, ಸಣ್ಣ ಘಟಕಗಳನ್ನಾಗಿ ವಿಭಾಗಿಸಿ, ಒಂದೊಂದು ಘಟಕಕ್ಕೆ ಒಬ್ಬ ರಾಜಪ್ರತಿನಿಧಿಯನ್ನು ನೇಮಿಸಿ ರಾಜ್ಯವಾಳುತ್ತಿದ್ದರು. ಮಂತ್ರಿಗಳು ಅರಸನಿಗೆ ಸಲಹೆಗಾರರಾಗಿ ಕೆಲಸ ನಿರ್ವಹಿಸುತ್ತಿದ್ದರು. ಅತ್ಯಂತ ಕುತೂಹಲಜನಕ ಸಂಗತಿ ಎಂದರೆ ಅರಸನ ಈ ಸಲಹಾಮಂಡಳದಲ್ಲಿ ಹೆಣ್ಣು ಮಕ್ಕಳು ಕೂಡಾ ಸಲಹೆಗಾರರಾಗಿ ಭಾಗವಹಿಸುತ್ತಿದ್ದರಂತೆ. ರಾಜ್ಯದ ಬಂದೋಬಸ್ತಿಗಾಗಿ, ಸಂರಕ್ಷಣಕ್ಕಾಗಿ ಅರಸನ ಸೈನ್ಯ ಸದಾಸಿದ್ಧವಾಗಿರುತ್ತಿದ್ದು ರಾಜ್ಯದ ಒಳಗೂ, ಹೊರಗೂ "ಕರ್ನಾಟ ಬಲ" ಎಂದು ಕನ್ನಡ ಅರಸರ ಸೇನೆಯು ಹೆಸರುವಾಸಿಯಾಗಿತ್ತು. ಅದನ್ನು ಕಂಡು ದಕ್ಷಿಣ ಹಾಗೂ ಉತ್ತರ ದೇಶದ ಅನೇಕ ಅರಸರು ಭಯಗೊಳ್ಳುತ್ತಿದ್ದರು. ಸೈನ್ಯದ ಜೊತೆಗೇನೆ ಚಾಲುಕ್ಯ ಅರಸರು ಸುವ್ಯಸ್ಥಿತವಾದ ಹಣಕಾಸಿನ ತಂತ್ರವನ್ನೂ ಯಶಸ್ವಿಯಾಗಿ ಬಜಾಯಿಸುತ್ತಿದ್ದರು. ಇವರ ಕಾಲದಲ್ಲಿ ರಾಜ್ಯವು ಆರ್ಥಿಕ ದೃಷ್ಟಿಯಿಂದ ಸ್ವಾವಲಂಬಿಯಾಗಿತ್ತಲ್ಲದೆ ವರಾಹ ಆಕಾರದ ಮುದ್ರೆಯುಳ್ಳ ನಾಣ್ಯಗಳನ್ನು ತಮ್ಮ ಸ್ವಂತದ ಟಂಕಸಾಲೆಯಲ್ಲಿ ತಯಾರಿಸಿ ಅದಕ್ಕೆ ತಮ್ಮ ರಾಜ್ಯದಲ್ಲಿ ಚಲಾವಣೆ ಕೊಡುತ್ತಿದ್ದರು. ಕಾಲಾಂತರದಲ್ಲಿ ಈ ವರಾಹ ಮುದ್ರೆಯ ನಾಣ್ಯವು ಬಹಳಷ್ಟು ಪ್ರಚಲಿತವಾಗಿ ವರಹವೆಂದರೆ ಚೊಕ್ಕ ಪರಿಶುದ್ಧ ಚಿನ್ನವೆಂದೇ ಪ್ರಸಿದ್ಧಿ ಪಡೆಯಿತು.

ಚಾಲುಕ್ಯರು ಮೂಲತಃ ವಿಷ್ಣುವಿನ ಉಪಾಸಕರಾಗಿದ್ದರೂ ಶೈವ, ಜೈನ, ಮತ್ತು ಬುದ್ಧ ಧರ್ಮಗಳ ಪ್ರಚಾರಕ್ಕೆ ಸಾಕಷ್ಟು ಉತ್ತೇಜನಕೊಟ್ಟರು. ಬಾದಾಮಿಯಲ್ಲಿ ಕೊರೆಯಿಸಿದ ಗುಹೆಗಳಲ್ಲಿ ಮೂರು ಧರ್ಮಗಳಿಗೆ ಸ್ಥಾನವಿದ್ದುದನ್ನು ನೋಡಿದರೆ ಅವರುಗಳಿಗೆ ಅದೆಂಥ ಧರ್ಮಸಹಿಷ್ಣುತೆ ಇತ್ತೆಂಬುದು ಗೊತ್ತಾಗುತ್ತದೆ. ಹ್ಯುಯೆನ್‌ತ್ಸ್ಯಾಂಗ್ ಎಂಬ ಚೀನಾ ದೇಶದ ಯಾತ್ರಿಕನ ಹೇಳಿಕೆಯಂತೆ ಚಾಲುಕ್ಯರ ರಾಜ್ಯದಲ್ಲಿ ಒಂದು ನೂರಕ್ಕೂ ಹೆಚ್ಚಾಗಿ ಸಂಘಾರಾಮಗಳು ಇದ್ದುವಲ್ಲದೆ ೧೦ ಸಾವಿರಕ್ಕೂ ಹೆಚಾಗಿ ಬುದ್ಧ ಭಿಕ್ಷುಗಳು ಇರುತ್ತಿದ್ದರು. ಕಪ್ಪೆ ಅರಭಟ್ಟನ ಶಿಲಾಶಾಸನವು ಕನ್ನಡ ತ್ರಿಪದಿ ಛಂದಸ್ಸಿನ ಅತ್ಯುತ್ತಮ ಕಾವ್ಯವಾದರೆ, ಅಹಿಹೊಳೆಯ ರವಿಕೀರ್ತಿಯ ಶಾಸನವು ಅತ್ಯುತ್ತಮ ಸಂಸ್ಕೃತ ಕಾವ್ಯವಾಗಿದೆ. ಎರಡನೆಯ ಪುಲಿಕೇಶಿಯ ಸೊಸೆ ವಿಜಯಭಟ್ಟಾರಿಕಾ ಎಂಬವಳನ್ನು ಕನ್ನಡ ಮತ್ತು ಸಂಸ್ಕೃತ ಶಿಲಾಲೇಖಗಳಲ್ಲಿ 'ಸರಸ್ವತಿ' ಎಂದು ಕರೆಯಲಾಗಿದೆ. ಬಾದಾಮಿ ಚಾಲುಕ್ಯರ ಅತ್ಯಂತ ಮಹತ್ವದ ಕೊಡುಗೆ ಎಂದರೆ ಕಲೆ ಹಾಗೂ ಶಿಲ್ಪಶಾಸ್ತ್ರಗಳಲ್ಲಿ. ಈ ದೃಷ್ಟಿಯಿಂದ ಅವರು ಬಾದಾಮಿಯಲ್ಲಿ ಕೊರೆಯಿಸಿದ ಶಿಲಾಗುಹೆಗಳು ಅತ್ಯಂತ ರಮ್ಯವಾಗಿವೆ. ಅವುಗಳ ಸುಂದರವಾದ ಹೊರವಲಯದ ಪ್ರಾಂಗಣ, ರಮಣೀಯವಾದ ಶಿಲ್ಪ, ಅಲಂಕೃತವಾಗಿ ನಿಂತ ಕಂಬಗಳು ಬಹು ಮನೋಹರವಾಗಿವೆ. ಚಾಲುಕ್ಯ ಅಥವಾ ವೆಸರ ಈ ಶಿಲ್ಪಕಲಾ ಪಂಥವು ನಾಗರ ಮತ್ತು ದ್ರಾವಿಡ ಕಲಾಪಂಥಗಳಿಗಿಂತ ಭಿನ್ನವಾಗಿದ್ದು ಭಾರತದ ಶಿಲ್ಪಕ್ಕೂ ಇತಿಹಾಸದಲ್ಲಿ ತನ್ನದೇ ಆದ ವೈಶಿಷ್ಟ್ಯ ಪೂರ್ಣ ಸ್ಥಾನವನ್ನು ಗಳಿಸಿದೆ. ಈ ಚಾಲುಕ್ಯ ಶಿಲ್ಪ ಪಂಥದ ಶ್ರೇಷ್ಠ ಕೇಂದ್ರಗಳೆಂದರೆ ಬಾದಾಮಿ, ಅಹಿಹೊಳೆ, ಪಟ್ಟದಕಲ್ಲು ಮತ್ತು ಮಹಾಕೂಟಗಳು. ಈ ಊರುಗಳಿಗೆಲ್ಲ ಅಖಿಲಭಾರತ ಕೀರ್ತಿ ಇತ್ತಲ್ಲದೆ, ಇಲ್ಲಿಯ ವಿದ್ಯಾಪೀಠಗಳಿಗೆ ದೇಶದ ನಾನಾ ಭಾಗಗಳಿಂದ ಜನರು ಕಲಾಭ್ಯಾಸಕ್ಕಾಗಿ ಬರುತ್ತಿದ್ದರು. ಚಾಲುಕ್ಯರ ದೇವಾಸ್ಥಾನ ಶಿಲ್ಪ ಕಲೆಯು ಉತ್ತರ ಹಿಂದೂಸ್ತಾನದಲ್ಲಿ ಮೊಟ್ಟಮೊದಲು ಪ್ರಾದುರ್ಭವಿಸಿದ ಗುಪ್ತ ಕಾಲದ ದೇವಸ್ಥಾನ ಶಿಲ್ಪಕಲೆಯೊಂದಿಗೆ ಸರಿಸಮವಾಗಿ ತೂಗಬಲ್ಲದು. ಲಾಟಖಾನ, ದುರ್ಗ, ಮೇಲಗತ್ತಿಗಳಲ್ಲಿಯ ಶಿವಾಲಯಗಳು, ಮಲ್ಲಿಕಾರ್ಜುನ, ವಿರೂಪಾಕ್ಷ, ಗಳಗನಾಥ ಮತ್ತಿತರ ನೂರಾರು ದೇವಾಲಯಗಳ ವಾಸ್ತು ಶಿಲ್ಪಕಲೆಯ ಈ ನಾಡಿನಲ್ಲಿ ಹೇಗೆ ವಿವಿಧ ಪ್ರಯೋಗಗಳನ್ನು, ಶೈಲಿಗಳನ್ನು ಒಳಗೊಂಡು ಬೆಳೆಯಿತೆಂಬುದನ್ನು ಸಾರುತ್ತವೆ. ಒಂದು ದೃಷ್ಟಿಯಿಂದ ಈ ಎಲ್ಲ ದೇವಾಲಯಗಳು ಮುಕ್ತ ವಸ್ತುಸಂಗ್ರಹಾಲಯಗಳಂತೆ ರಮಣೀಯವಾಗಿವೆ. ಇದಲ್ಲದೆ ಬಾದಾಮಿಯ ಗುಹೆಗಳಲ್ಲಿ ಭಿತ್ತಿ ಚಿತ್ರಗಳು ಕೂಡಾ ಆ ಕಾಲದ ಕಲಾ ವಿಷಯದಲ್ಲಿಯ ಪರಿಣತ ಬುದ್ಧಿಯ ದ್ಯೋತಕವಾಗಿವೆ. ಹೀಗೆ ಚಾಲುಕ್ಯರು ಕರ್ನಾಟಕದ ರಾಜಕೀಯ ಹಾಗೂ ಸಾಂಸ್ಕೃತಿಕ ವೈಭವಕ್ಕೆ ಒಳ್ಳೆಯ ತಳಹದಿ ಹಾಕಿದರೆಂದು ಹೇಳಲಡ್ಡಿಯಿಲ್ಲ.

ರಾಷ್ಟ್ರಕೂಟ ವಂಶದ ದಂತಿದುರ್ಗನು ಎರಡನೆಯ ಕೀರ್ತಿವರ್ಮನನ್ನು ಸೋಲಿಸಿ ಕ್ರಿ. ಶ. ೭೫೩ರಲ್ಲಿ ತನ್ನ ಆಳ್ವಿಕೆ ಪ್ರಾರಂಭಿಸಿದನು. ಅವನು ತನ್ನ ನೆರೆಹೊರೆಯ ಲಾಟ, ಮಾಳವ ಅರಸರನ್ನು ಸೋಲಿಸಿದನಲ್ಲದೆ ಹಿರಣ್ಯಗರ್ಭವೆಂಬ ಸಮಾರಂಭವನ್ನೂ ನೆರವೇರಿಸಿದನು. ಅವನ ನಂತರ ಆತನ ಚಿಕ್ಕಪ್ಪನಾದ ಒಂದನೆಯ ಕೃಷ್ಣನು ರಾಜ್ಯವಾಳಿದನು. ಈತನೇ ಅಜರಾಮರ ಶಿಲ್ಪಕಲೆಯಿಂದ ಮೆರೆಯುತ್ತಿರುವ ಎಲ್ಲೋರದ ಕೈಲಾಸ ದೇವಾಲಯವನ್ನು ಕಟ್ಟಿಸಿದನು. ಅಲ್ಲಿ ಕೊರೆಯಲಾದ, ಒಂದು ಶಿಲಾಲೇಖವು ಇದು ಮನುಷ್ಯ ನಿರ್ಮಿತ ಕೃತಿ ಅಲ್ಲವೆಂದೂ ಆದರೆ ಇದೊಂದು ಅಭೂತಪೂರ್ವ ದೈವಿಕ ಕಲಾಕೃತಿಯಾಗಿದೆ ಎಂದೂ ಹೇಳುತ್ತದೆ. ಈ ವಂಶದ ಮಹತ್ವದ ಅರಸನೆಂದರೆ ಧ್ರುವನೆಂಬುವನು. ಆತನು ಕ್ರಿ. ಶ. ೭೮೦ ರಿಂದ ೭೯೩ರ ವರೆಗೂ ರಾಜ್ಯವಾಳಿದ. ಅವನು ಉತ್ತರ ಹಿಂದೂಸ್ತಾನದ ಜೈತ್ರಯಾತ್ರೆ ಕೈಕೊಂಡು ನರ್ಮದೆಯ ಆಚೆಗಿನ ವತ್ಸರಾಜನನ್ನೂ ಸೋಲಿಸಿದನು. ಇನ್ನೂ ಮುಂದೆ ಹೋಗಿ ವಂಗದೇಶದ ಧರ್ಮಪಾಲನನ್ನು ಪರಾಜಯಗೊಳಿಸಿದ. ಈ ಜೈತ್ರ ಯಾತ್ರೆಯಿಂದ ಸಾಕಷ್ಟು ಸಂಪತ್ತು ಅವನಿಗೆ ದೊರಕಿತು. ಆ ಮೇಲೆ ತನ್ನ ಸುತ್ತುಮುತ್ತಲಿನ ವೆಂಗಿಯ ವಿಷ್ಣುವರ್ಧನನ್ನು, ಪಲ್ಲವರ ನಂದಿವರ್ಮನನ್ನು ಸೋಲಿಸಿದನು. ತಲಕಾಡಿನ ಗಂಗವಂಶದ ಶಿವಮಾರನನ್ನು ಸೆರೆಹಿಡಿದು ತನ್ನ ಮಗನಾದ ಸ್ತಂಬನನ್ನು ಗಂಗಾವಾಡಿಯ ಮಂಡಲಾಧಿಪತಿಯನ್ನಾಗಿ ನಿಯಮಿಸಿದನು. ಒಟ್ಟು ಹದಿಮೂರು ವರ್ಷಗಳ ವರೆಗೆ ಧ್ರುವನು ದಕ್ಷಿಣಾಪಥದ ಸಾರ್ವಭೌಮನಾಗಿ ರಾಜ್ಯವಾಳಿ ರಾಷ್ಟ್ರಕೂಟ ಅರಸರೆಂದರೆ ಭಾರತದಲ್ಲೇ ಒಂದು ಗಣನೀಯ ಶಕ್ತಿ ಎಂದು ತೋರಿಸಿಕೊಟ್ಟನು.

ಧ್ರುವನ ನಂತರ ಮೂರನೆಯ ಗೋವಿಂದ ಪಟ್ಟವೇರಿದ. ಈತನು ತನ್ನ ಪೂರ್ವಜನಿಗಿಂತ ಬಲಶಾಲಿಯಾಗಿದ್ದ. ವಂಗದೇಶದ ಮೇಲೆ ಧಾಳಿ ಮಾಡಿ ಧರ್ಮಪಾಲ, ನಾಗಭಟ, ಮತ್ತು ಚಕ್ರಾಯುಧ ಎಂಬ ಅರಸರನ್ನು ಸೋಲಿಸಿದ. ಕನೋಜದವರೆಗೂ ಮುನ್ನಡೆದು ಅಲ್ಲಿಯ ಅರಸರಿಂದ ಕಪ್ಪ ಕಾಣಿಕೆಗಳನ್ನು ವಸೂಲಿಸಿದನು. ಗುಜರಾತದಲ್ಲಿ ದೊರೆತ ಸುಪ್ರಸಿದ್ಧವಾದ ಸಂಜಾನ ನಗರದ ತಾಮ್ರ ಪಟವೊಂದು ಅವನ ಸಾಧನೆಗಳನ್ನು ಈ ರೀತಿ ವರ್ಣಿಸುತ್ತದೆ:

"ಗೋವಿಂದ ರಾಜನ ಕುದುರೆಗಳು ಹಿಮಾಲಯದಿಂದ ಭೋರ್ಗರೆದು ಬರುತ್ತಿರುವ ಬರ್ಫದ ತಣ್ಣೀರನ್ನು ಕುಡಿಯುತ್ತಿದ್ದವಲ್ಲದೆ ಅವನ ಯುದ್ಧದ ಮದ್ದಾನೆಗಳು ಗಂಗೆಯ ಪವಿತ್ರ ಜಲವನ್ನು ಸೇವಿಸುತ್ತಿದ್ದವು." ಗೋವಿಂದನು ತನ್ನ ರಾಜ್ಯದ ಸುತ್ತುಮುತ್ತಲಿನ ಚೋಳ, ಕೇರಳ, ಪಾಂಡ್ಯ ಅರಸರನ್ನು ಸೋಲಿಸಿ ಅವರಿಂದ ಕಪ್ಪ ಕಾಣಿಕೆಗಳನ್ನು ಪಡೆದನು. ಅವನ ಸಾಮ್ರಾಜ್ಯವು ವಿಶಾಲವಾಗಿದ್ದು ಅದರಲ್ಲಿ ಗುಜರಾತ, ಕೋಸಲ ದೇಶ, ಆಂಧ್ರಪ್ರದೇಶದ ಭಾಗಗಳು ಸಮಾವಿಷ್ಟಗೊಂಡಿದ್ದವು. ಅವನ ಸೈನ್ಯಗಳು ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೂ ಜೈತ್ರ ಯಾತ್ರೆಯನ್ನು ಕೈಕೊಂಡವು. ಸಿಂಹಳ ದೇಶದ ಅರಸು ಕೂಡಾ ಅವನಿಗೆ ಶರಣಾಗತನಾದನು. ಹೀಗೆ ರಾಷ್ಟ್ರಕೂಟ ರಾಜರು ಮೂರನೆಯ ಗೋವಿಂದನ ಕಾಲದಲ್ಲಿ ಬಲಾಢ್ಯ ಶಕ್ತಿಯಾಗಿ ಪ್ರಕಟಗೊಂಡರು.

ಗೋವಿಂದನ ತರುವಾಯ ಮೊದಲನೆಯ ಅಮೋಘವರ್ಷನು ಕ್ರಿ. ಶ. ೮೧೪ರಿಂದ ೮೭೮ರವರೆಗೆ ರಾಜ್ಯವಾಳಿದ. ಅವನು ತನ್ನ ಕಾಲದ ಸುತ್ತುಮುತ್ತಲಿನ ಬಂಡಾಯಗಳನ್ನು ಸದೆಬಡೆದನಲ್ಲದೆ ಪಲ್ಲವ, ಚಾಲುಕ್ಯ, ಚೋಳ ಹಾಗೂ ಗಂಗ ಅರಸರೊಂದಿಗೆ ಮೈತ್ರಿಪೂರ್ಣ ಸಂಬಂಧ ಬೆಳೆಸಿಕೊಂಡನು. ಈತನು ಸ್ವತಃ ತಾನು ಪಂಡಿತನಾಗಿದ್ದನಲ್ಲದೆ ಪಂಡಿತಾಢ್ಯರಿಗೆ ಆಶ್ರಯದಾತನಾಗಿ ನೆರವಾಗುತ್ತಿದ್ದನು. ಕವಿರಾಜಮಾರ್ಗ ಮತ್ತು ಪ್ರಶ್ನೋತ್ತರ ಮಾಲಿಕಾ ಎಂಬ ಎರಡು ಗ್ರಂಥಗಳನ್ನು ಬರೆದನೆಂದು ಹೇಳಲಾಗುತ್ತದೆ. ಜೈನ ಮುನಿಗಳಿಗೆ ಸದಾ ಆಶ್ರಯ ನೀಡುತ್ತಿದ್ದನು. ಆತನ ರಾಜ್ಯದಲ್ಲಿ ಒಮ್ಮೆ ಬರಗಾಲ ಉಂಟಾಗಿ ಜನ ಕಂಗಾಲಾದಾಗ ಅವನು ಸ್ವತಃ ಮಹಾಲಕ್ಷ್ಮೀ ದೇವಿಯ ಗುಡಿಗೆ ಹೋಗಿ ತನ್ನ ಜನರು ಸುಖಿಯಾಗಬೇಕೆಂದು ಪ್ರಾರ್ಥಿಸಿ ತನ್ನ ಹೆಬ್ಬೆಟ್ಟನ್ನು ಕತ್ತರಿಸಿ ದೇವಿಗೆ ಸಮರ್ಪಿಸಿದನು. ನಿಜವಾಗಿಯೂ ಇಂಥ ಧರ್ಮಿಷ್ಠರಾದ ರಾಜರು ಇತಿಹಾಸದಲ್ಲಿ ಕ್ವಚಿತ್ತಾಗಿ ಪ್ರಕಟಗೊಳ್ಳುತ್ತಾರೆ. ಈ ವಂಶದ ಮೂರನೆಯ ಇಂದ್ರನ ಆಳಿಕೆಯ ಕಾಲದಲ್ಲಿ ರಾಷ್ಟ್ರಕೂಟರು ಪುನಃ ಉತ್ತರ ಹಿಂದೂಸ್ತಾನದ ಕಡೆ ದಂಡೆತ್ತಿ ಹೋಗಿ ಕನೋಜ ನಗರವನ್ನು ಕೆಲಕಾಲ ಆಕ್ರಮಿಸಿದರು. ಆಮೇಲೆ ಮೂರನೆಯ ಕೃಷ್ಣನು ಕ್ರಿ. ಶ. ೯೩೯ರಿಂದ ೯೬೭ರವರೆಗೂ ರಾಜ್ಯವಾಳಿದನು. ಇವನು ಛೇದಿ, ಬಾಣ, ವೈದುಂಬ ಹಾಗೂ ಚೋಳ ಅರಸರನ್ನು ಗೆದ್ದನಲ್ಲದೆ, ಇವನ ಸಾಮ್ರಾಜ್ಯವು ಸದ್ಯದ ತಮಿಳು ನಾಡಿನ ಕೆಲಭಾಗಗಳನ್ನು ಅಲ್ಲದೆ ಮಧ್ಯ ಭಾರತದ ಕೆಲ ಪ್ರದೇಶಗಳನ್ನು ಒಳಗೊಂಡಿತ್ತು. ಅಂತೂ ಈತನು ರಾಷ್ಟ್ರಕೂಟರ ಅತ್ಯಂತ ಹೆಸರುವಾಸಿಯಾದ ಕೊನೆಯ ಅರಸನಾಗಿದ್ದ. ಕನ್ನಡದ ಸುಪ್ರಸಿದ್ಧ ಕವಿ ಪೊನ್ನ ಈತನ ಆಸ್ಥಾನದಲ್ಲಿಯೇ ಇದ್ದ. ಖೊಟ್ಟಿಗ ಮತ್ತು ಎರಡನೆಯ ಕರ್ಕ ಈ ಈರ್ವರ ಆಳ್ವಿಕೆಯ ನಂತರ ರಾಷ್ಟ್ರಕೂಟರು ಬಲಹೀನರಾಗಿ ಕ್ರಿ. ಶ. ೯೭೩ರ ಸುಮಾರಿಗೆ ರಾಜ್ಯ ಕಳೆದುಕೊಂಡರು. ಹೀಗಾಗಲು ಕಲ್ಯಾಣದ ಚಾಲುಕ್ಯರ ಪ್ರಾಬಲ್ಯವೇ ಕಾರಣ.

ರಾಷ್ಟ್ರಕೂಟರ ಕಾಲ ಅತ್ಯಂತ ವೈಭವೋನ್ನತಿಯ ಕಾಲ. ಉತ್ತರ ಹಿಂದೂಸ್ತಾನದಲ್ಲಿ ದೊರಕಿಸಿದ ವಿಜಯಗಳೂ ಅತ್ಯಂತ ಮಹತ್ವದ ಸಾಧನೆಗಳಾಗಿವೆ. ವಿಶಾಲ ರಾಜ್ಯದ ಸಾಮ್ರಾಟರಾಗಿ ಸುವ್ಯವಸ್ಥೆಯನ್ನು ನೆಲೆಗೊಳಿಸಿದ್ದರಿಂದ ರಾಜ್ಯದಲ್ಲಿ ಶಾಂತಿ, ಸಮೃದ್ಧಿಗಳು ತಲೆದೋರಿದವು. ಈ ವಂಶದ ಅರಸರೆಲ್ಲರೂ ಸರ್ವಧರ್ಮಗಳಿಗೂ ಉತ್ತೇಜನವಿತ್ತರು. ಜೈನ ಧರ್ಮದ ಇತಿಹಾಸದಲ್ಲಿ ಇದೊಂದು ಸುವರ್ಣಯುಗವಾಯಿತು. ಈ ಅವಧಿಯಲ್ಲಿ ಕರ್ನಾಟಕ ಮತ್ತು ದಕ್ಷಿಣ ಭಾರತದಲ್ಲಿ ಜೈನ ಧರ್ಮದ ವರ್ಚಸ್ಸು ಬೆಳೆಯಿತಲ್ಲದೆ, ಸಾಕಷ್ಟು ಪ್ರಮಾಣದಲ್ಲಿ ಈ ವೇಳೆಗೆ ಪ್ರತಿಭಾವಂತ ಜೈನ ಮಹಾನುಭಾವರು ಬೆಳಕಿಗೆ ಬಂದರು. ಸಂಸ್ಕೃತ ಹಾಗೂ ಕನ್ನಡ ಸಾಹಿತ್ಯಗಳ ದೃಷ್ಟಿಯಿಂದಲೂ ಈ ಕಾಲವು ಮಹತ್ವದ್ದಾಗಿದೆ. ಸುಪ್ರಸಿದ್ಧ ಸಂಸ್ಕೃತ ಕಾವ್ಯವಾದ ನಳಚಂಪುವಿನ ಕರ್ತೃ ತ್ರಿವಿಕ್ರಮ, ಯಶಸ್ತಿಲಕ ಬರೆದ ಸೋಮದೇವ, ಧವಲ ಹಾಗೂ ಜಯಧವಲಗಳ ಕರ್ತೃಗಳಾದ ವೀರಸೇನ ಮತ್ತು ಜಿನಸೇನ ಮುನಿಗಳು ಈ ಅವಧಿಯಲ್ಲಿಯೇ ಜೀವಿಸಿದ್ದರು. ಮುನಿ ಜಿನಸೇನಾಚಾರ್ಯರು ಅಮೋಘ ವರ್ಷನ ಪಟ್ಟಾಚಾರ್ಯರಾಗಿದ್ದರು. ಇದಲ್ಲದೆ ಅಮೋಘ ವರ್ಷನೇ ಕನ್ನಡದ ಮೊಟ್ಟ ಮೊದಲಿನ ಲಾಕ್ಷಣಿಕ ಗ್ರಂಥವಾದ ಕವಿರಾಜಮಾರ್ಗವನ್ನು ರಚಿಸಿದನೆಂದೂ ಊಹಿಸಲಾಗುತ್ತದೆ. ಈ ಗ್ರಂಥದ ವೈಶಿಷ್ಟ್ಯವೆಂದರೆ ಇದರಲ್ಲಿ ಮೊಟ್ಟಮೊದಲು ಕರ್ನಾಟಕ ರಾಜ್ಯದ ಮೇರೆಗಳನ್ನು ನಿರ್ದಿಷ್ಟವಾಗಿ ಉಲ್ಲೇಖಿಸಲಾಯಿತು. ಕಾವೇರಿ ಗೋದೆಯರ ನಡುವಣ ಪ್ರದೇಶವೇ ಕರ್ನಾಟಕವಾಯಿತು. ಕನ್ನಡದ ಇನ್ನೋರ್ವ ಸುಪ್ರಸಿದ್ಧ ಜೈನ ಕವಿ ಪೊನ್ನನು ಈ ಕಾಲದ ಮೂರನೆಯ ಕೃಷ್ಣನಿಂದ ಕವಿಚಕ್ರವರ್ತಿ ಎಂದು ಪ್ರಶಸ್ತಿ ಪಡೆದ, ಆದಿಕವಿಯೆಂದು ಹೆಸರಾದ ಪಂಪನೂ ಕೂಡಾ ರಾಷ್ಟ್ರಕೂಟ ಅರಸರ ಮಾಂಡಲೀಕರಲ್ಲೊಬ್ಬನಾದ ಅರಿಕೇಸರಿಯ ಆಸ್ಥಾನ ಕವಿಯಾಗಿದ್ದ.

ಕಲೆ ಮತ್ತು ವಾಸ್ತುಶಿಲ್ಪಗಳ ದೃಷ್ಟಿಯಿಂದ ರಾಷ್ಟ್ರಕೂಟರ ಆಳಿಕೆಯು ಪ್ರಶಂಸಾರ್ಹವಾಗಿದೆ. ಎಲ್ಲೋರ ಮತ್ತು ಎಲಿಫಂಟಾಗಳಲ್ಲಿಯ ಶಿಲಾಗುಹೆಗಳನ್ನು ಇವರ ಕಾಲದಲ್ಲೇ ಕೊರೆಯಿಸಲಾಯಿತು. ಎಲ್ಲೋರಾದ ಕೈಲಾಸ ದೇವಾಲಯ ಭಾರತೀಯ ಕಲಾ ಇತಿಹಾಸದಲ್ಲೇನೇ ರಾಷ್ಟ್ರಕೂಟ ಪರಂಪರೆಗಳ ವೈಭವದ ದ್ಯೋತಕವಾಗಿದೆ. ಎಲ್ಲೋರಾದಲ್ಲಿಯ ದಶಾವತಾರ ಮತ್ತು ದುಮರ್‌ಲೇನ, ಎಲಿಫಂಟಾದ ತ್ರಿಮೂರ್ತಿ ದೇವಾಲಯ ಅಲ್ಲದೆ ಇನ್ನೂ ಕೆಲವು ದೇವಾಲಯಗಳು ರಾಷ್ಟ್ರಕೂಟ ಕಲೆಯ ಉಚ್ಚಮಟ್ಟದ ಉದಾಹರಣೆಗಳಾಗಿವೆ. ಇಲ್ಲಿಯ ಫಲಕಗಳಲ್ಲಿ ಕೊರೆಯಲಾದ ಕೆಲವೊಂದು ದೃಶ್ಯಗಳಂತೂ ಅತ್ಯಂತ ಮನೋಹರವಾದ ಕಲಾಕೃತಿಗಳಾಗಿವೆ. ರಾವಣನು ಕೈಲಾಸ ಪರ್ವತವನ್ನು ಅಲುಗಾಡಿಸುವ ದೃಶ್ಯ, ಶಿವ–ಪಾರ್ವತಿ ಕಲ್ಯಾಣ, ಗಜ ಸಂಹಾರ ದೃಶ್ಯ ಇವೆಲ್ಲವೂ ವೈಶಿಷ್ಟ್ಯಪೂರ್ಣವಾಗಿವೆ. ಹೀಗೆ ರಾಷ್ಟ್ರಕೂಟರ ರಾಜಕೀಯ, ಸಾಂಸ್ಕೃತಿಕ ಸಾಧನೆಗಳು ಕರ್ನಾಟಕದ ಹೆಸರನ್ನು ಭಾರತದ ಬೃಹತ್ ನಕ್ಷಾಪಟದ ಮೇಲೆ ಬೆಳಗುವಂತೆ ಮಾಡಿದವು.

ಕಲ್ಯಾಣದ ಚಾಲುಕ್ಯರು ಮೂಲತಃ ಬಾದಾಮಿ ಚಾಲುಕ್ಯರ ವಂಶಜರೇ ಆಗಿದ್ದರು. ಇವರು ಕರ್ನಾಟಕದ ವೈಭವ ಪರಂಪರೆಯನ್ನು ಮುಂದುವರಿಸಿ ಎರಡು ಶತಮಾನಗಳ ಕಾಲ, ಅಂದರೆ ಕ್ರಿ. ಶ. ೯೭೩ರಿಂದ ೧೨೦೦ರವರೆಗೂ ರಾಜ್ಯವಾಳಿದರು. ಈ ವಂಶದ ಎರಡನೆಯ ತೈಲಪನೇ ಕಲ್ಯಾಣದ ಚಾಲುಕ್ಯರಲ್ಲಿಯ ಸ್ವತಂತ್ರ, ಧೀರೋದಾತ್ತ ನಾಯಕನಾಗಿ

ಪ್ರಸಿದ್ಧನಾದ. ಆವನು ರಾಜರಾಜ ಉತ್ತಮ ಚೋಳನನ್ನೂ, ಪರಮಾರರ ಮುಂಜನನ್ನೂ, ಚಾಲುಕ್ಯ, ಮೂಲರಾಜನನ್ನು ಕೊಂಕಣದ ಶಿಲಾಹಾರರನ್ನೂ ಸೋಲಿಸಿದನು. ಸೇವುಣ ವಂಶದ ೨ನೆಯ ಭಿಲ್ಲಮನು ಇವನ ಅಧೀನನಾದನು.ಹೀಗಾಗಿ ಅಲ್ಪಾವಧಿಯಲ್ಲಿಯೇ ಚಾಲುಕ್ಯರೂ ಬಲಾಢ್ಯ ಅರಸರೆಂಬುದನ್ನು ಈತನು ತೋರಿಸಿಕೊಟ್ಟನು. ಆ ಮೇಲೆ ಸತ್ಯಾಶ್ರಯ ಇರಿವಬೆಡಂಗನು ಅರಸನಾದನು. ಇವನೇ ಸುಪ್ರಸಿದ್ಧ ಕನ್ನಡ ಕವಿ ರನ್ನನಿಗೆ ಆಶ್ರಯದಾತನಾಗಿದ್ದನು. ಈತನ ಕಾಲದಲ್ಲಿ ರಾಜರಾಜನಾದ ಮೊದಲನೆಯ ಚೋಳನು ಯಶಸ್ವಿಯಾದರೂ ಕೊನೆಯಲ್ಲಿ ಸೋಲಿಸಲ್ಪಟ್ಟನು. ತರುವಾಯದ ಮಹತ್ವದ ಅರಸನೆಂದರೆ ಜಯಸಿಂಹನೆಂಬವನು. ಈತನಿಗೆ ಜಗದೇಕಮಲ್ಲನೆಂಬ ಬಿರುದು ಕೂಡಾ ಇತ್ತು. ಇವನು ಚೋಳರೊಡನೆ ಯುದ್ಧವನ್ನು ಮುಂದುವರಿಸುತ್ತಿದ್ದಂತೆ ರಾಜರಾಜ ಚೋಳನಿಂದ ಮಾಸಂಗಿಯಲ್ಲಿ ಪರಾಭವಗೊಂಡನು. ಪರಮಾರ ಭೋಜನು ಚಾಲುಕ್ಯರಿಂದ ಕೊಂಕಣವನ್ನು ಕಿತ್ತುಕೊಂಡನು. ಹೀಗೆ ಜಯಸಿಂಹನು ಅನೇಕ ಸಲ ಸೋಲನ್ನು ಅನುಭವಿಸಬೇಕಾಯಿತು.

ಜಯಸಿಂಹನ ತರುವಾಯ ಆತನ ಮಗ ತ್ರೈಲೋಕ್ಯಮಲ್ಲ ಮೊದಲನೆಯ ಸೋಮೇಶ್ವರ ರಾಜನಾದ. ಆತನು ತನ್ನ ರಾಜಧಾನಿಯಾದ ಕಲ್ಯಾಣವನ್ನು ಸುಂದರವಾಗಿ ಕಟ್ಟಿಸಿದ. ಈತನು ಚೋಳರಿಂದ ಪರಾಭವಗೊಂಡರೂ, ಕೊಪ್ಪದಲ್ಲಿ ನಡೆದ ಯುದ್ಧದಲ್ಲಿ ಮಾತ್ರ ಚಾಲುಕ್ಯರು ಚೋಳರನ್ನು ಸೋಲಿಸಿ ತಮಗಾದ ಅಪಮಾನದ ಸೇಡನ್ನು ಯಶಸ್ವಿಯಾಗಿ ತೀರಿಸಿಕೊಂಡರು. ಇಲ್ಲಿಯೇ ರಾಜಾಧಿರಾಜ ಚೋಳನು ಯುದ್ಧದಲ್ಲಿ ಕೊಲ್ಲಲ್ಪಟ್ಟನು. ಮುಂದೆ ಚೋಳರ ಎರಡನೆಯ ರಾಜೇಂದ್ರನು ಕ್ರಿ. ಶ.೧೦೫೪ರಲ್ಲಿ ಚಾಲುಕ್ಯ ರಾಜ್ಯದ ಮೇಲೆ ದಂಡೆತ್ತಿ ಬಂದಾಗ ಅವನು ತುಂಗಭದ್ರೆಯ ದಡದ ಮೇಲೆ ಸೋಲಿಸಲ್ಪಟ್ಟ. ಇಷ್ಟಲ್ಲದೆ ಸೋಮೇಶ್ವರನು ಗುಜರಾತದ ಚಾಲುಕ್ಯರನ್ನು, ಧಾರದ ಪರಮಾರರನ್ನು ಪರಾಭವಗೊಳಿಸಿದ. ಪರಮಾರ ಭೋಜನಂತೂ ಯುದ್ಧದಲ್ಲಿಯೇ ಕೊಲ್ಲಲ್ಪಟ್ಟ. ಸೋಮೇಶ್ವರನು ಅನೇಕ ಸಲ ಚೋಳರಿಂದ ಪರಾಭವಗೊಂಡರೂ ತನ್ನ ರಾಜ್ಯದ ಮೇಲಿನ ಹತೋಟಿಯನ್ನು ಮಾತ್ರ ಭದ್ರವಾಗಿ ಉಳಿಸಿಕೊಂಡಿದ್ದ. ತನ್ನ ಆಳ್ವಿಕೆಯ ಕೊನೆಗೆ ಆತನು ತಾನು ಮಾಡಿಕೊಂಡ ಧಾರ್ಮಿಕ ವ್ರತಕ್ಕನುಸಾರವಾಗಿ ತುಂಗಭದ್ರೆಯ ದಡದಲ್ಲಿ ಮುಳುಗಿ ಪ್ರಾಣ ತೆತ್ತನು.

ಎರಡನೆಯ ಸೋಮೇಶ್ವರನು ಎಂಟು ವರ್ಷ ಆಳಿದ ನಂತರ ಆತನ ತಮ್ಮ ಆರನೆಯ ವಿಕ್ರಮಾದಿತ್ಯ ಪಟ್ಟವೇರಿ ಕ್ರಿ. ಶ. ೧೦೭೬ರಿಂದ ೧೧೨೬ರವರೆಗೂ ಒಳ್ಳೆ ವೈಭವ ಪೂರ್ಣವಾಗಿ ರಾಜ್ಯವಾಳಿದನು. ಆತನು ಮನೆತನದ ಬಲಾಢ್ಯ ಅರಸನಾಗಿದ್ದನಲ್ಲದೆ ಅವನ ಆಳ್ವಿಕೆಯು ಕಲ್ಯಾಣದ ಚಾಲುಕ್ಯರ ಸುವರ್ಣಯುಗವಾಗಿತ್ತು. ಇವನು ತನ್ನ ಸಿಂಹಾಸನಾರೋಹಣದ ನೆನಪಿಗಾಗಿ ಕ್ರಿ. ಶ. ೧೦೭೬ರ ವರ್ಷದಿಂದ ಚಾಲುಕ್ಯ ವಿಕ್ರಮ ಶಕೆ ಎಂಬ ಹೊಸ ಶಕೆಯನ್ನೇ ಪ್ರಾರಂಭಿಸಿದನು. ಅನೇಕ ಸಲ ಪರಮಾರರ ಮೇಲೆ ದಂಡೆತ್ತಿ ಹೋಗಿ ಮಹತ್ವದ ವಿಜಯಗಳನ್ನೂ ಸಾಧಿಸಿದ. ಅಲ್ಲದೆ ತನ್ನ ನೆರೆಹೊರೆಯ ಚಿಕ್ಕ ಪುಟ್ಟ ಮನೆತನದ ಅರಸರನ್ನಲ್ಲದೆ ಹೊಯ್ಸಳರನ್ನು ಮತ್ತು ಗೋವೆಯ ಕದಂಬರನ್ನು ಯಶಸ್ವಿಯಾಗಿ ಎದುರಿಸಿ ಸೋಲಿಸಿದ. ಚೋಳ ಮತ್ತು ವೆಂಗಿಯ ಚಾಲುಕ್ಯರನ್ನು ಸಂಪೂರ್ಣ ಸದೆ ಬಡೆದ. ಗುಜರಾತದ ಚಾಲುಕ್ಯರು ರತ್ನಪುರದ ಚೇದಿಗಳು ಪರಾಭಗೊಂಡರು. ಹೀಗೆ ವಿಕ್ರಮಾದಿತ್ಯ ವಿಶಾಲ ಸಾಮ್ರಾಜ್ಯದ ಅಧಿಪತಿಯಾದ. ಈತನು ಕಲೆ ಹಾಗೂ ಸಾಹಿತ್ಯಗಳಿಗೆ ಅತಿ ದೊಡ್ಡ ಪ್ರೋತ್ಸಾಹಕನಾಗಿದ್ದ. ಕಾಶ್ಮೀರ ದೇಶದ ಸುಪ್ರಸಿದ್ಧ ಕವಿ ಬಿಲ್ಹಣ ಇವನ ಆಸ್ಥಾನವಾಸಿಯಾಗಿದ್ದ. ನ್ಯಾಯಶಾಸ್ತ್ರ ಪಾರಂಗತ ವಿಜ್ಞಾನೇಶ್ವರ ಇವನಿಂದ ಪ್ರೋತ್ಸಾಹಿಸಲ್ಪಟ್ಟ.

ವಿಕ್ರಮಾದಿತ್ಯನ ಮರಣಾನಂತರ ಆತನ ಮಗ ತ್ರಿಭುವನಮಲ್ಲ ಮೂರನೆಯ ಸೋಮೇಶ್ವರ ಚಾಲುಕ್ಯ ಸಿಂಹಾಸನವನ್ನೇರಿದ. ಸಾಹಿತ್ಯದಲ್ಲಿ ಈತನು 'ಮಾನಸೋಲ್ಲಾಸ' ಅಥವಾ 'ಅಭಿಲಾಷಿತಾರ್ಥ ಚಿಂತಾಮಣಿ' ಎಂದು ಹೆಸರು ಪಡೆದ ವಿಶ್ವಕೋಶದ ಕರ್ತೃವೆಂದು ಪ್ರಸಿದ್ಧಿ ಪಡೆದಿದ್ದಾನೆ. ಅವನ ಮರಣಾನಂತರ ಅನುಕ್ರಮವಾಗಿ ಎರಡನೆಯ ಜಗದೇಕಮಲ್ಲ, ಮೂರನೆಯ ತೈಲಪ, ನಾಲ್ಕನೆಯ ಸೋಮೇಶ್ವರ ಇವರುಗಳು ರಾಜ್ಯವಾಳಿದರು. ಇವರಲ್ಲಿ ಕೊನೆಯವನಾದ ನಾಲ್ಕನೆಯ ಸೋಮೇಶ್ವರನ ಕಾಲದಲ್ಲಿ ಕಲಚೂರಿ ವಂಶದ ಬಿಜ್ಜಲನು ಪ್ರಾಬಲ್ಯಕ್ಕೆ ಬಂದು ತಾನು ಸ್ವತಂತ್ರನೆಂದು ಘೋಷಿಸಿ, ಚಾಲುಕ್ಯ ಸಿಂಹಾಸನವನ್ನು ಆಕ್ರಮಿಸಿ ಇಪ್ಪತ್ತು ವರ್ಷಗಳ ಕಾಲ ರಾಜ್ಯವಾಳಿದ. ಈತನು ಒಳ್ಳೇ ಪ್ರಬಲನಾಗಿ ಹೊಯ್ಸಳರನ್ನೂ, ಉಚ್ಚಂಗಿಯ ಪಾಂಡ್ಯರನ್ನೂ, ಸೇವುಣರನ್ನೂ, ರಾಜರಾಜ ಮೂರನೆಯ ಚೋಳನನ್ನೂ ಚಾಲುಕ್ಯ ಕುಮಾರಪಾಲನನ್ನೂ ಸೋಲಿಸಿದನು. ಆದರೂ ಕಲಚೂರಿ ಅರಸರ ಈ ಕಾಲಾವಧಿಯು ಕರ್ನಾಟಕ ಮತ್ತು ದಕ್ಷಿಣ ಭಾರತದಲ್ಲಿ ಪ್ರಕಟಗೊಂಡ ಸಾಮಾಜಿಕ ಮತ್ತು ಧಾರ್ಮಿಕ ಆಂದೋಲನಕ್ಕಾಗಿ ಮಹತ್ವದ್ದಾಗಿದೆ. ಈ ಆಂದೋಲನದ ಅಗ್ರ ಪೀಠಸ್ಥನೆಂದರೆ ವೀರಶೈವ ಧರ್ಮದ ಬಸವಣ್ಣನಾಗಿದ್ದರು. ಅವರು ಪ್ರಾರಂಭಿಸಿದ ಈ ಕ್ರಾಂತಿ ಕರ್ನಾಟಕ ಹಾಗೂ ದಕ್ಷಿಣ ಭಾರತದ ಜನಜೀವನದ ಮೇಲೆ ಬಹಳಷ್ಟು ಪ್ರಭಾವ ಬೀರಿತು. ದಕ್ಷಿಣದಲ್ಲಿ ಹೊಯ್ಸಳರು, ಉತ್ತರದಲ್ಲಿಸೇವುಣರು ಪ್ರಬಲರಾಗುತ್ತಿದ್ದಂತೆ ಚಾಲುಕ್ಯರ ನಾಲ್ಕನೆಯ ಸೋಮೇಶ್ವರನು ಬಲಗುಂದುತ್ತಾ ಕ್ರಿ. ಶ. ೧೧೮೯ರಲ್ಲಿ ಕೇವಲ ಮಾಂಡಲಿಕನಾಗಿ ರಾಜ್ಯ ಸಾಗಿಸಿದ. ಹೀಗೆ ಕಲ್ಯಾಣ ಚಾಲುಕ್ಯರು ದಿನೇ ದಿನೇ ಕ್ಷೀಣರಾಗುತ್ತಾ ಹೊಯ್ಸಳ ಹಾಗೂ ಸೇವುಣರ ಪ್ರಾಬಲ್ಯಕ್ಕೆ ದಾರಿ ಮಾಡಿಕೊಟ್ಟರು.

ಕಲ್ಯಾಣ ಚಾಲುಕ್ಯರ ಈ ಯುಗವು ಸಾಂಸ್ಕೃತಿಕ ದೃಷ್ಟಿಯಿಂದ ಇತಿಹಾಸದಲ್ಲಿ ತುಂಬಾ ಮಹತ್ವದ್ದಾಗಿದೆ. ಕರ್ನಾಟಕದ ಸರ್ವತೋಮುಖ ಬೆಳವಣಿಗೆಯನ್ನು ಇಲ್ಲಿ ನೋಡಬಹುದು. ಕಾಶ್ಮೀರದ ಕವಿ ಬಿಲ್ಹಣನು ಇವರುಗಳ ರಾಜ್ಯವನ್ನು 'ರಾಮರಾಜ್ಯ'ವೆಂದು ವರ್ಣಿಸಿದ್ದಾನೆ. ಇದೆಲ್ಲಕ್ಕೂ ಚಾಲುಕ್ಯ ಅರಸರ ದಯಾಪೂರ್ಣವಾದ ಆಳ್ವಿಕೆಯೇ ಕಾರಣವಾಗಿತ್ತು. ಯಾಕೆಂದರೆ ಅವರೆಲ್ಲರೂ ದುಷ್ಟ ನಿಗ್ರಹ, ಶಿಷ್ಟ ಪರಿಪಾಲನ, ಎಂಬ ಸದುದ್ದೇಶದಿಂದ ಪ್ರೇರಿತರಾಗಿದ್ದರು. ಇವರ ಕಾಲದಲ್ಲಿ ಸ್ಥಾನಿಕ ಸ್ವರಾಜ್ಯ ಪದ್ಧತಿ ಸಾಕಷ್ಟು ಪ್ರಚಲಿತವಾಗಿತ್ತು. ರಾಜ್ಯಗಳಲ್ಲಿ ಅಗ್ರಹಾರಗಳು ಮತ್ತು ನಾಡುಗಳು ಹೆಚ್ಚಿದ್ದರ ಮೂಲಕ ಜನಜೀವನ ಸಂತೋಷಭರಿತವಾಗಿತ್ತು. ಆ ಕಾಲದ ಶಾಸನಗಳ ಮೂಲಕ ಗೊತ್ತಾಗುತ್ತಿದ್ದಂತೆ ಆ ರಾಜ್ಯದಲ್ಲಿ ಬಂಗಾರದ ನಾಣ್ಯಗಳು ಪ್ರಚಲಿತವಾಗಿದ್ದವು. ಇದು ಆ ಕಾಲದ ಆರ್ಥಿಕಾಭಿವೃದ್ಧಿಯ ಸುಚಿಹ್ನೆಯಾಗಿದೆ. ಇಡೀ ರಾಜ್ಯದಲ್ಲಿ ಹೆಚ್ಚುತ್ತಿದ್ದ ಧಾರ್ಮಿಕ ಮಠಗಳು, ಅಗ್ರಹಾರಗಳು, ಬ್ರಹ್ಮಪುರಿಗಳು, ಘಟಿಕಗಳು ಶಿಕ್ಷಣ ಪ್ರಸಾರಕ್ಕೆ ಸಾಕಷ್ಟು ಉತ್ತೇಜನ ಒದಗಿಸಿದವು. ಇಷ್ಟೇ ಅಲ್ಲದೆ ಅನೇಕ ಕಾಳಾಮುಖಿ ಮುನಿಗಳು ಶಿಕ್ಷಣ ಪ್ರಸಾರದ ಜವಾಬುದಾರಿಯನ್ನು ಹೊತ್ತು ಕಾರ್ಯನಿರ್ವಹಿಸುತ್ತಿದ್ದರು. ಸಂಸ್ಕೃತ ಮತ್ತು ಕನ್ನಡ ಸಾಹಿತ್ಯಗಳಲ್ಲಿ ಹಿಂದೆಂದೂ ಇಲ್ಲದ ಚಟುವಟಿಕೆ ಈಗ ತಲೆ

ದೋರಿತು. ಪ್ರತಿಭಾವಂತ ಪಂಡಿತ ಕವಿಗಳಾದ ಬಿಲ್ಲಣ, ವಿಜ್ಞಾನೇಶ್ವರ, ವಾದಿರಾಜ, ರನ್ನ, ಎರಡನೆಯ ಚಾಮುಂಡರಾಜ, ಕೀರ್ತಿವರ್ಮ, ದುರ್ಗಸಿಂಹ, ಎರಡನೆಯ ನಾಗವರ್ಮ ಇವರೆಲ್ಲರೂ ಇದೇ ಕಾಲದಲ್ಲಿ ತಮ್ಮ ತಮ್ಮ ಕೃತಿರಚನೆ ಮಾಡಿದರು. ಕನ್ನಡ ವಚನಸಾಹಿತ್ಯವಂತೂ ತನ್ನ ಊರ್ಜಿತಾವಸ್ಥೆಯನ್ನು ಮುಟ್ಟಿತು. ವೀರಶೈವ ಶರಣರಾದ ಬಸವಣ್ಣ, ಅಕ್ಕ ಮಹಾದೇವಿ, ದಾಸಿಮಯ್ಯ ಮತ್ತು ಇತರರು ಇದೇ ವೇಳೆಗೆ ವಚನಗಳನ್ನು ರಚಿಸಿದರು. ಸುಪ್ರಸಿದ್ಧವಾದ 'ಸಂಗೀತ ಸಮಯಸಾರ' ಮತ್ತು 'ಸಂಗೀತ ಚೂಡಾಮಣಿ' ಎಂಬ ಎರಡು ಗ್ರಂಥಗಳು ಇದೇ ಅವಧಿಯಲ್ಲಿ ಬರೆಯಲ್ಪಟ್ಟವು.

ಕಲ್ಯಾಣದ ಚಾಲುಕ್ಯರ ಈ ಕಾಲವು ಕರ್ನಾಟಕದಲ್ಲಿ ಮತ್ತು ಹೊರಪ್ರದೇಶದಲ್ಲಿ ಕಟ್ಟಲ್ಪಟ್ಟ ಅಸಂಖ್ಯ ದೇವಾಲಯಗಳಿಂದಾಗಿ ಅತಿ ಮಹತ್ವವನ್ನು ಪಡೆದಿದೆ. ಈ ಶಿಲ್ಪ ಶೈಲಿಯು ಹೊಯ್ಸಳ ಶಿಲ್ಪಕ್ಕೆ ದಾರಿಮಾಡಿಕೊಟ್ಟಿತು. ಇವರು ಉಪಯೋಗಿಸುತ್ತಿದ್ದ ಸಾಬೂನು ಮೃದು ಕಲ್ಲಿನ ಕಂಬಗಳು, ದ್ವಾರಬಾಗಿಲುಗಳು, ಮದನಿಕೆಯ ಮೂರ್ತಿಗಳು ಈ ಶಿಲ್ಪದ ವೈಶಿಷ್ಟ್ಯವಾಗಿತ್ತು. ಇದಕ್ಕೆ ಸಾಕ್ಷಿ ಎನ್ನುವಂತೆ ಇಟ್ಟಗಿ, ಕುಕನೂರು, ಲಕ್ಕುಂಡಿ, ಗದಗ, ಹಾವೇರಿ, ಬಂಕಾಪೂರ, ಹರಿಹರ ಈ ಊರುಗಳಲ್ಲಿ ಕಟ್ಟಿದ ಪುರಾತನ ದೇವಾಲಯಗಳು ಇಂದಿಗೂ ಈ ಶಿಲ್ಪ ಶೈಲಿಯ ಮಾರ್ದವತೆಯನ್ನು ಎತ್ತಿ ಹೇಳುತ್ತವೆ. ಹೀಗೆ ಕಲ್ಯಾಣ ಚಾಲುಕ್ಯರ ಕಾಲವು ರಾಜಕೀಯವಾಗಿ ಸಾಂಸ್ಕೃತಿಕವಾಗಿ ಇನ್ನೊಂದು ವೈಭವ ಪೂರ್ಣವಾದ ಕಾಲ. ಒಂದು ರೀತಿಯಿಂದ ಬಾದಾಮಿಯ ಚಾಲುಕ್ಯರ ಕಾರ್ಯವನ್ನು ಇವರು ಮುಂದುವರಿಸಿದರೆಂದು ಹೇಳಬಹುದು. ಚೋಳ ಹಾಗೂ ಮತ್ತಿತರ ಅರಸು ಮನೆತನದ ಕಿರುಕುಳದಿಂದ ಕರ್ನಾಟಕವನ್ನು ಮುಕ್ತಗೊಳಿಸಿ ದಕ್ಷಿಣ ಭಾರತದ ನಕಾಶೆಯ ಮೇಲೆ ಅದಕ್ಕೆ ಶಕ್ತಿ ಸಂಪನ್ನ ಸ್ಥಾನವನ್ನು ಕಲ್ಪಿಸಿಕೊಟ್ಟ ಹಿರಿಮೆ ಕಲ್ಯಾಣದ ಚಾಲುಕ್ಯರದೆಂದೇ ಹೇಳಬೇಕು. ಇವರುಗಳು ಹಾಕಿದ ಸುಭದ್ರ ತಳಹದಿಯ ಕಾರಣದಿಂದಲೇ ಬರಲಿರುವ ಹೊಯ್ಸಳ ಅರಸರು ಕರ್ನಾಟಕವನ್ನು ಮತ್ತೊಮ್ಮೆ ವೈಭವಪೂರ್ಣವಾಗಿ ಬೆಳೆಸಿ ಕಟ್ಟುವಂತಾಯಿತು.

# ಹೊಯ್ಸಳರು, ಸೇವುಣರು

ಡಾ. ಸೂರ್ಯನಾಥ ಕಾಮತ್

ಕಲ್ಯಾಣ ಚಾಲುಕ್ಯರ ಸಾಮಂತರಾಗಿ ೧೧ನೆಯ ಶತಮಾನದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಆಳಿದ ಹೊಯ್ಸಳರು ನಂತರದ ಕಾಲದಲ್ಲಿ ಸ್ವತಂತ್ರ ಪ್ರಭುತ್ವ ಸ್ಥಾಪಿಸಿ ರಾಜ್ಯ ವಿಸ್ತರಿಸಿದರು. ತಮಿಳು ನಾಡಿನ ಕೆಲವು ಭಾಗಗಳನ್ನೂ ಆವರಿಸಿದರು. ಕಲ್ಯಾಣ ಚಾಲುಕ್ಯರು ಮತ್ತು ದೇವಗಿರಿಯ ಸೇವುಣರ ರೀತಿಯಲ್ಲೇ ಅವರು ಉತ್ಕರ್ಷಾಪಕರ್ಷಗಳನ್ನು ಅನುಭವಿಸಿದರು. ಹೊಯ್ಸಳರು ಕಟ್ಟಿದ ದೇಗುಲಗಳು ಭವ್ಯ ಶಿಲ್ಪದ ಮಾದರಿಗಳಾಗಿ ಅವರ ಸ್ಮೃತಿಯನ್ನು ಜೀವಂತ ಇಟ್ಟಿವೆ. ಬೇಲೂರು, ಹಳೇಬೀಡು, ಸೋಮನಾಥಪುರ, ಅಮೃತಪುರ ಇಂಥ ಸ್ಥಳಗಳಲ್ಲಿ ಅವರು ಕಟ್ಟಿಸಿದ ದೇಗುಲಗಳು ವಿಜೃಂಭಿಸುತ್ತಿವೆ. ಇವು ಕೆಲವು ಉದಾಹರಣೆಗಳು ಮಾತ್ರ.

ಹೊಯ್ಸಳರು ತಮ್ಮ ವಂಶಾವಳಿಯನ್ನು ದ್ವಾರಕೆಯವರೆಗೆ ಎಳೆಯುತ್ತಾರೆ. ಕ್ರಿ. ಶ. ೧೦೭೮ರಲ್ಲಿ ರಚಿತ ದಾಖಲೆಯ ಮೇರೆಗೆ ಹೊಯ್ಸಳ ದ್ವಾರಾವತಿಪುರದಿಂದ ಆಳ್ದನೆಂದು ಉಲ್ಲೇಖವಿದೆ. ಆದರೆ, ಹೊಯ್ಸಳ ವಂಶದ ಪೂರ್ವಿಕರ ಬಗ್ಗೆ ದೊರಕಿದ ದಾಖಲೆಗಳಲ್ಲಿ ಈ ವಂಶಾವಳಿ ಕಾಣಬರುವುದಿಲ್ಲ. ದಕ್ಷಿಣಾಪಥ ೧೦–೧೧ ಶತಕದ ರಾಜವಂಶಗಳೂ ಪೌರಾಣಿಕ ವಂಶಾವಳಿಗಳಿಗೆ ಜೋಡಿಸಲ್ಪಟ್ಟಿವೆ. ಉದಾಹರಣೆಗೆ ಯಾದವರು, ಪಲ್ಲವರು, ಕದಂಬರು, ಕಳಚೂರ್ಯರು. ಬಿ. ಎಲ್. ರೈಸರು ಹೇಳಿದಂತೆ "ದಕ್ಷಿಣ ಭಾರತದ ಎಲ್ಲ ಪ್ರಮುಖ ಮನೆತನಗಳೂ ತಮ್ಮ ಉಗಮವನ್ನು ತಾವೇ ಸೃಷ್ಟಿಸಿಕೊಂಡು ಕಾಲ್ಪನಿಕ ವಂಶಾವಳಿಗಳನ್ನು ರಚಿಸುವುದರಲ್ಲಿ ತೊಡಗಿದ್ದವು." ಈ ಕಾರಣಗಳ ಮೂಲಕ ಹೊಯ್ಸಳರ ಉತ್ತರ ಭಾರತ ಉಗಮದ ಕಲ್ಪನೆಯನ್ನು ಸ್ವೀಕರಿಸಲಿಕ್ಕಾಗದು. ಮೊದಮೊದಲು ಅವರು ಮಲೆನಾಡಿನಿಂದ ಕಾರಭಾರು ನಡೆಸುತ್ತಿದ್ದರು. ಹೊಯ್ಸಳ ಶಿಲಾಲೇಖಗಳೇ ಹೇಳುವಂತೆ ಅವರ ವಂಶದ ಮೂಲಪುರುಷನು ಶಶಪುರದವನು. ರೈಸ್ ಮತ್ತು ಇತರ ವಿದ್ವಾಂಸರು ಹೇಳಿದಂತೆ ಅವರು ಏತದ್ದೇಶೀಯರು. ಮೂಲತಃ ಸೊಸೆಯೂರವರು. ಈಗ ಮೂಡುಗೆರೆ ತಾಲೂಕಿನಲ್ಲಿ ಇದ್ದ ಅಂಗಡಿ ಊರೇ ಸೊಸೆವೂರು. ಅವರ ಬಿರುದು ಮತ್ತು ಪದವಿ 'ಮಲೆಪರೊಳ್ಗಂಡ'. ಅಂದರೆ ಮಲೆ ಸರದಾರರ ಅಧಿಪತಿ. ಅವರ ತಮಿಳು ದಾಖಲೆಗಳಲ್ಲಿ ಕೂಡ ಕನ್ನಡದಲ್ಲೇ ನಮೂದು ಬರುತ್ತದೆ. ಇದರಿಂದ ಸೂಚಿತವಾಗುವುದೆಂದರೆ ಮೂಲತಃ ಅವರು ಬೆಟ್ಟದ ಸರದಾರ ಮನೆತನದವರು. ತರುವಾಯ ಇಂಥ ಅನೇಕ ಸರದಾರೀ ಘರಾಣೆಗಳ ಆಳ್ದರಾಗಿ ತಮ್ಮನ್ನು 'ಮಲೆಪರೊಳ್ಗಂಡ' ಎಂದು ಅಭಿಮಾನದಿಂದ ಗುರ್ತಿಸತೊಡಗಿದರು.

ಸುಮಾರು ಎಲ್ಲ ಮುಖ್ಯ ಹೊಯ್ಸಳ ದಾಖಲೆಗಳು ವಂಶದ ಮೂಲ ಪುರುಷ ಸಳನ ಕತೆಯನ್ನು ನಮೂದಿಸುತ್ತವೆ. ಶಶಕಪುರದ (ಸೊಸೆವೂರಿನ) ಯುವಕ ಸಳನು ತನ್ನ ಕುಲದೇವತೆ ವಾಸಂತಿಕಾ ದೇವಿಯ ಮಂದಿರಕ್ಕೆ ಪೂಜೆಗೆ ಹೋದಾಗ ಹುಲಿಯೊಂದು ಪ್ರವೇಶಿಸಿತು. ಗುಡಿಯಲ್ಲಿ ವಾಸ ಮಾಡುವ ಜೈನ ಯತಿಗಳು ಅವನಿಗೆ ಮಾಡಿದ ಆಜ್ಞೆ 'ಹೊಯ್ ಸಳ' ಅಂದರೆ, 'ಸಳನೇ ಹೊಡೆ'. ಸಳ ಹುಲಿಯನ್ನು ಹೊಡೆದು ಕೊಂದ. ಹೀಗೆ ಅವನ ವಂಶಕ್ಕೆ ಪೊಯ್ಸಳ (ಹೊಯ್ಸಳ) ಹೆಸರು ಬಂತು. ಸಳ (ಖಡ್ಗದಿಂದ) ಹುಲಿಗೆ ಹೊಡೆಯುವ ಚಿತ್ರ ಆ ವಂಶದ ಕೇಂದ್ರ ಚಿಹ್ನೆಯಾಯಿತು. ಬೇಲೂರಿನ ವಿಷ್ಣುವರ್ಧನನ ಕ್ರಿ.ಶ. ೧೧೭ರ ಶಾಸನದಲ್ಲಿ ಈ ಕತೆ ಮೊದಲ ಬಾರಿ ನಮೂದಿಸಿದೆ.

ಇದಕ್ಕೂ ಪೂರ್ವದ ಈ ವಂಶದ ಚರಿತ್ರೆ ತಿಳಿಯುವುದಿಲ್ಲ. ಸಳನು ನಿಜವಾಗಿ ಐತಿಹಾಸಿಕ ವ್ಯಕ್ತಿಯೇ ಎಂಬುದನ್ನು ಖಚಿತಪಡಿಸುವುದು ಶಕ್ಯವಿಲ್ಲ. ಈ ವಂಶದ ಪ್ರಥಮ ದಾಖಲೆ ಕ್ರಿ.ಶ. ೧೦೦೬ರ ಕಾಮನದು. ಮೊದಲು ಮೊದಲಿಗೆ ಹೊಯ್ಸಳ ವಂಶದವರು ಮಲೆನಾಡಿನ ಗಂಗ ಅರಸರಿಗೆ ಮಾಂಡಲಿಕರಾಗಿದ್ದುಕೊಂಡು ಗಂಗರ ಪತನದ ತರುವಾಯ ಉನ್ನತಿಗೊಂಡ ಸಾಧ್ಯತೆಯೂ ಇದೆ. ಹೊಯ್ಸಳರು ಕರ್ನಾಟಕದ ದಕ್ಷಿಣವಲಯವನ್ನು ಆಕ್ರಮಿಸಿಕೊಂಡಾಗ ಅವರೊಡನೆ ಹೊಯ್ಸಳರು ಭೀಕರವಾಗಿ ಸೆಣಸಬೇಕಾಯಿತು. ಆದಿಮ ಹೊಯ್ಸಳ ಅರಸರು ಚೋಳರನ್ನು ಸೋಲಿಸಿದಾಗ ಸಳ ಹುಲಿಯನ್ನು ಕೊಂದ ಸಾಂಕೇತಿಕ ಕತೆ ಜನಿಸಿರಬಹುದು. ಹುಲಿ ಚೋಳರ ಅರಸೊತ್ತಿಗೆಯ ಚಿಹ್ನೆ.

ಕಾಮ ಅಥವಾ ನೃಪಕಾಮನಿಗೆ 'ಪೆರ್ಮನಾಡಿ' ಎಂಬ ಬಿರುದಿತ್ತು. ಈ ಬಿರುದು ಗಂಗರ ವಂಶದವರ ವಿಶಿಷ್ಟ ಬಿರುದು. ಇದು ಹೊಯ್ಸಳರ ಮತ್ತು ಗಂಗರ ನಡುವಿನ ಸ್ನೇಹ ಬಾಂಧವ್ಯದ ಗುರುತಾಗಿರಬಹುದು ಎಂದು ಪ್ರೊ. ಬಿ. ಎಸ್. ಕೃಷ್ಣಸ್ವಾಮಿ ಅಯ್ಯಂಗಾರರು ಸೂಚಿಸಿದ್ದಾರೆ. ಚೋಳರೊಡನೆ ಯುದ್ಧದಲ್ಲಿ ಕಾಮ ಸೋತನೆಂದು ತೋರುತ್ತದೆ. ಆದಾಗ್ಯೂ ಮಲೆನಾಡಿನಲ್ಲಿ ಅವನ ಅರಸೊತ್ತಿಗೆಯು ಮುಂದುವರಿಯಿತು. ಕಾಮನ ನಂತರ ವಿನಯಾದಿತ್ಯನೆಂಬ ಅವನ ಪುತ್ರ ಸಿಂಹಾಸನಕ್ಕೆ ಬಂದ. ದಾಖಲೆಗಳು ಅವನನ್ನು ಚಾಲುಕ್ಯರ ಮಾಂಡಲಿಕನೆಂದು ವರ್ಣಿಸುತ್ತವೆ.

ಒಂದನೇ ಚಾಲುಕ್ಯ ಸೋಮೇಶ್ವರನ ರಾಣಿ ಹೊಯ್ಸಳಾದೇವಿ ವಿನಯಾದಿತ್ಯನ ತಂಗಿಯೋ ಮಗಳೋ ಆಗಿರಬೇಕು. ಅವನ ಮಗ ಎರೆಯಂಗ ಮಧ್ಯ ಭಾರತಧಾರನ ಮೇಲೆ ಚಾಲುಕ್ಯರು ಮಾಡಿದ ದಾಳಿಯಲ್ಲಿ ಬಹುಮಾನಿತನಾದ ವಿನಯಾದಿತ್ಯನು ಮಲೆನಾಡಿನ, ಆಳ್ವರಾದ ಕೊಂಗಾಳ್ವ, ಚೆಂಗಾಳ್ವ, ಸಂತಾರರನ್ನೂ (ಶಿವಮೊಗ್ಗ ಜಿಲ್ಲೆಯ ಹಮ್ಚ), ಬಯಲುಸೀಮೆಯ (ಪೈನಾರು; ಈಗ ಕೇರಳದ ಭಾಗ) ಕದಂಬರನ್ನೂ ಸೋಲಿಸಿದ. ಅವನ ತರುವಾಯ (ಕ್ರಿ. ಶ. ೧೦೯೮) ಎರೆಯಂಗದೇವನು ಪಟ್ಟಕ್ಕೆ ಬಂದನು. (ವಿನಯಾದಿತ್ಯನ ಆಳ್ವಿಕೆ ೧೦೪೭ರಿಂದ ೧೦೯೮ರ ವರೆಗೆ). ಅವನ ಕಾಲಕ್ಕೆ ಹೊಯ್ಸಳರು ಚಾಲುಕ್ಯರ ಬಲಿಷ್ಟ ಸಾಮಂತರೆಂದು ಗೌರವಕ್ಕೆ ಏರಿದರು. ಎರೆಯಂಗ ದೇವನ ಆಳ್ಕೆ ಚಿಕ್ಕದು. ೧೧೦೨ರ ವರೆಗೆ ಮಾತ್ರ. ಆದರೆ ಯುವರಾಜನಾಗಿ ಅವನು ಮಾಡಿದ ಕಾರ್ಯ ತೇಜಸ್ವಿಯಾದದ್ದು. ಅವನು ರಾಜಧಾನಿಯನ್ನು ಸೊಸೆವೂರಿಂದ ಬೇಲೂರಿಗೆ ಒಯ್ದ. ಅವನ ತರುವಾಯ ಒಂದನೇ ಬಲ್ಲಾಳ ಪಟ್ಟವನ್ನೇರಿದ. ಒಂದನೇ ಬಲ್ಲಾಳ ಚೆಂಗಾಳ್ವರನ್ನು ಹತೋಟಿಗೆ ತರುವುದಲ್ಲದೆ ಜಗದೇವ ಸಂತಾರನನ್ನು ಸೋಲಿಸಿದ. ಅವನ ತಮ್ಮ ವಿಷ್ಣುವರ್ಧನ (ಬಿಟ್ಟಿದೇವ) ೧೧೦೮ರಲ್ಲಿ ಪಟ್ಟಕ್ಕೇರಿದ. ಹೊಯ್ಸಳ ಚಕ್ರವರ್ತಿಗಳಲ್ಲಿ ವಿಷ್ಣುವರ್ಧನ ಶ್ರೇಷ್ಠ.

### ವಿಷ್ಣುವರ್ಧನ (೧೧೦೮–೧೧೫೨)

ಪ್ರೊ. ಕೊಯಲೋ ಹೇಳಿದ್ದಾರೆ, "ವಿಷ್ಣುವರ್ಧನನ ಆಳ್ವಿಕೆ ಓಂ ಪ್ರಥಮದಿಂದ ಕೊನೆಯವರೆಗೆ ವೈಭವಶಾಲಿ ಸೇನಾದಳಗಳಿಂದ ತುಂಬಿಹೋಗಿದೆ. ಚಾಲುಕ್ಯರ ಆಧಿಪತ್ಯದ ನೊಗವನ್ನು ಚಿಮ್ಮುವ ಅವನ ನಿರಂತರ ಯತ್ನ ಸಫಲವಾಗದಿದ್ದರೂ ಕೂಡ, ತನ್ನ ಮಂಡಲವನ್ನು ಒಂದು ರಾಜ್ಯವೆನ್ನಿಸಿಕೊಳ್ಳುವ ಗೌರವಕ್ಕೆ ತಂದ. ದಕ್ಷಿಣ ದೇಶದಲ್ಲಿ ಎಲ್ಲಕ್ಕೂ ಬಲಿಷ್ಟ ಸಾಮ್ರಾಜ್ಯವಾಗಿ ಮಾಡುವ ಅವನ ವಂಶಜರ ಕಾರ್ಯಕ್ಕೆ ಸನ್ನದ್ಧ ಶಕ್ತಿಯನ್ನು ಒದಗಿಸಿದ."

ತನ್ನ ಅಣ್ಣನ ಆಳ್ಕೆಯಲ್ಲಿ ವಿಷ್ಣುವರ್ಧನ ಗಂಗವಾಡಿಯ ಅಧಿಪತಿಯಾಗಿದ್ದ. ಚೋಳರ ವಶಕ್ಕೆ ಹೋಗಿದ್ದ ಗಂಗವಾಡಿಯ ಭೂಭಾಗವನ್ನೆಲ್ಲ ಮುಕ್ತಗೊಳಿಸಲಿಕ್ಕೆ ಯುಕ್ತಕ್ರಮ ತೆಗೆದುಕೊಂಡನು. ೧೧೧೬ರಲ್ಲಿ ತಳಕಾಡು ಮತ್ತು ಕೋಲಾರವನ್ನು ವಶಕ್ಕೆ ತಂದುಕೊಂಡು ತನ್ನ ವಿಜಯದ ದ್ಯೋತಕವಾಗಿ 'ತಳಕಾಡುಗೊಂಡ'ನೆಂದು ಬಿರುದು ಪಡೆದ. ತಳಕಾಡಿನ 'ಕೀರ್ತಿ ನಾರಾಯಣ' ದೇವಸ್ಥಾನವೂ ಬೇಲೂರಿನ 'ವಿಜಯ ನಾರಾಯಣ' ದೇವಾಸ್ಥಾನವೂ ಈ ವಿಜಯದ ಸ್ಮಾರಕಗಳು. ಇದಾದ ನಂತರ ಕೊಂಗಾಳ್ವ ಮತ್ತು ಚೆಂಗಾಳ್ವರನ್ನು ಸೋಲಿಸಿದ. ಚಂದಲಾದೇವಿಯೊಡನೆ ಮದುವೆಯಾಯಿತು. ಚಂದಲಾದೇವಿ ಪ್ರೊ. ಡೆರೆಟ್‌ರವರ ಅಭಿಪ್ರಾಯದ ಮೇರೆಗೆ ಕೊಂಗಾಳ್ವ ರಾಜಪುತ್ರಿ. ನಿಡುಗಲ್ಲಿನ (ತುಮಕೂರು ಜಿಲ್ಲೆ) ಚೋಳರಾಜ ಇರುಂಗೋಳನನ್ನು ಸೋಲಿಸಿ, ನೀಲಗಿರಿಯಲ್ಲಿ ದಾಳಿ ಒಯ್ದು, ಕಾಂಚಿಯ ವರೆಗೆ ಮುಟ್ಟಿದ. ಅವನ ಸೇನಾನಿಗಳು ಹೊನಗುಂದದ ಸಂತಾರರಿಂದಲೂ (ಶಿವಮೊಗ್ಗ ಜಿಲ್ಲೆ) ತುಳುನಾಡಿನ ಅಳುಪರಿಂದಲೂ ಕಪ್ಪಕಾಣಿಕೆ ಎತ್ತಿದರು. ಉಚ್ಚಂಗಿಯ ಪಾಂಡ್ಯರು (ಬಳ್ಳಾರಿ ಜಿಲ್ಲೆ) ನೊಳಂಬವಾಡಿಯ ನೊಳಂಬರ ಸ್ಥಾನ ಆಕ್ರಮಿಸಿದ್ದರು. ಡುಮ್ಮೆಯ ಬಳಿ ಆದ ಕಾಳಗದಲ್ಲಿ ವಿಷ್ಣುವರ್ಧನ ಅವರನ್ನು ಸೋಲಿಸಿ ೧೧೧೭ರಲ್ಲಿ 'ನೊಳಂಬವಾಡಿಗೊಂಡ' ಎಂಬ ಬಿರುದನ್ನು ಗಳಿಸಿದನು.

ಇದೀಗ ತನ್ನ ಚಕ್ರಾಧಿಪತ್ಯದ ನಾಲ್ಕನೆಯ ಚಾಲುಕ್ಯ ವಿಕ್ರಮನ ಮೇಲೆಯೇ ಏರಿ ಹೋಗುವ ಸನ್ನಾಹ ಮಾಡಿಕೊಂಡು ವಿಷ್ಣುವರ್ಧನ ತುಂಗಭದ್ರಾ ನದಿ ದಾಟಿ ಕುಮ್ಮಟಕ್ಕೆ ಬಂದಿಳಿದ. ಹೊಯ್ಸಳ ಸೇನಾನಿ ಗಂಗರಾಜ ೧೧೧೮ರಲ್ಲಿ ಕಣ್ಣೇಗಾಲ ಬಳಿಯ ಯುದ್ಧದಲ್ಲಿ ಚಾಲುಕ್ಯರ ಸೇನೆಯ ಬಲವನ್ನು ಮುರಿದ. ಇದಾದ ಬಳಿಕ ವಿಷ್ಣುವರ್ಧನ ಹಾನಗಲ್ ಕೋಟೆಯನ್ನು ವಶಪಡಿಸಿಕೊಂಡ. ಬನವಾಸಿ ರಾಜ್ಯವನ್ನು ಸಂತಲಿಗೆಯನ್ನು ತನ್ನ ಕೈವಶಮಾಡಿಕೊಂಡನು. ಹಳ್ಳೂರ ಬಳಿ ೧೧೨೦ರಲ್ಲಿಚಾಲುಕ್ಯರ ಸೇನಾನಿ ಬೊಪ್ಪಣನಿಗೆ ಸೋಲು ಉಂಟಾಯಿತು. ಚಾಲುಕ್ಯರ ಸೇನೆಯನ್ನು ಒಟ್ಟುಗೂಡಿಸಿ ಯೆದಂಬರಗೆಯ (ಈಗ ಯೆಲಬುರ್ಗಿ) ಸಿಂಧ ಸರದಾರ ಪೆರ್ಮ ಸೇನಾಪತ್ಯ ವಹಿಸಿ ಹೊಯ್ಸಳರನ್ನು ಬೆನ್ನಟ್ಟಿ ಬಂದು ಅವರ ರಾಜಧಾನಿಯ ವರೆಗೆ ದಾಳಿ ತಂದ. ಕೊನೆಗೆ ವಿಷ್ಣುವರ್ಧನ ಸುಮಾರು ೧೧೨೨ರಲ್ಲಿ ಬಗ್ಗಬೇಕಾಯಿತು.

೬ನೆಯ ವಿಕ್ರಮನ ಮರಣಾನಂತರ ವಿಷ್ಣುವರ್ಧನ ೧೧೪೦–೪೧ರ ಸುಮಾರಿಗೆ ಮರು ದಾಳಿ ಮಾಡಿ ಹಾನಗಲ್, ಉಚ್ಚಂಗಿ, ಬಂಕಾಪುರ, ಬನವಾಸಿಯ ೧೨,೦೦೦ ಪ್ರಾಂತ್ಯವನ್ನು ವಶಪಡಿಸಿಕೊಂಡ. (ಗದುಗಿನ ಬಳಿಯ) ಎಕ್ಕುಂಡಿಯವರೆಗೆ ದಂಡೆತ್ತಿ ಹೋದ. ಪ್ರೊ. ಕೊಯಲೊ ಮತ್ತು ಡಾ. ಡೆರಟ್‌ರ ಮೇರೆಗೆ ವಿಷ್ಣುವರ್ಧನನ ಆಳ್ಕೆ ೧೧೪೨ರಲ್ಲಿ ಮುಗಿಯಿತು. ಆದರೆ, ಪ್ರೊ. ಕೆ. ಎನ್. ಶಾಸ್ತ್ರಿ, ಪ್ರೊ. ಎಸ್. ಕೆ. ಅಯ್ಯಂಗಾರ್, ಮತ್ತು ಡಾ. ದೇಸಾಯಿ ಇವರ ಅಭಿಪ್ರಾಯದಲ್ಲಿ ಅವನು ೧೧೫೨ರ ವರೆಗೆ ಬದುಕಿದ. ೧೧೪೬ರ ದಾಖಲೆಯ ಮೇರೆಗೆ ಬಂಕಾಪುರದಲ್ಲಿ ವಿಷ್ಣುವರ್ಧನ ಬೀಡು ಹೂಡಿ ಅಲ್ಲಿಂದಲೇ ಗಂಗವಾಡಿ, ನೊಳಂಬವಾಡಿ, ಬನವಾಸಿ, ಹಾನಗಲ್ ಮತ್ತು ಹುಲಿಗೆರೆ ಪ್ರಾಂತ್ಯವನ್ನು ಈ ರಾಜಧಾನಿಯಿಂದ ಆಳುತ್ತಿದ್ದನೆಂಬುದು ಸ್ಪಷ್ಟವಾಗುತ್ತದೆ.

ಶ್ರೀ ರಾಮಾನುಜಾಚಾರ್ಯರ ವ್ಯಕ್ತಿತ್ವ ಮತ್ತು ತತ್ವಜ್ಞಾನದಿಂದ ಪ್ರಭಾವಿತನಾಗಿ ವಿಷ್ಣುವರ್ಧನ ಶ್ರೀ ವೈಷ್ಣವ ಮತವನ್ನು ಸ್ವೀಕರಿಸಿದ. ಅವನ ರಾಣಿಯರಲ್ಲಿ ಶಾಂತಲಾದೇವಿ ಸಂಗೀತ ಮತ್ತು ನೃತ್ಯ ಕಲೆಗಳಲ್ಲಿ ಸಂಪನ್ನೆಯಾಗಿದ್ದಳು. ಆದರೆ ಬೇಗ ಮಡಿದಳು. ಅವಳ ನಂತರ ಬೊಮ್ಮಲಾದೇವಿ ಪಟ್ಟದರಸಿಯಾದಳು. ಲಕ್ಷೀದೇವಿಯೆಂಬ ಇನ್ನೊಬ್ಬ ರಾಣಿ ಅವನಿಂದ ರಾಜಪುತ್ರ ನರಸಿಂಹನನ್ನು ಪಡೆದಳು. ಆತನ ಆಳ್ಕೆಯು ಸಾಂಸ್ಕೃತಿಕ ಮತ್ತು ಧಾರ್ಮಿಕ ಚಟುವಟಿಕೆಗಳಿಂದ ತುಂಬಿತ್ತು. 'ಹೊಯ್ಸಳ ವೈಭವದ ನಿಜಜನಕ' ಎಂದು ಪ್ರೊ. ಬಿ. ಎಸ್. ಕೆ. ಅಯ್ಯಂಗಾರ್ ಅವನನ್ನು ಕರೆದಿದ್ದಾರೆ. ಪ್ರೊ. ಎಸ್. ಕೆ. ಅಯ್ಯಂಗಾರ್ 'ಹೊಯ್ಸಳ ರಾಜ್ಯದ ಸಂಸ್ಥಾಪಕ' ಎಂದಿದ್ದಾರೆ.

ವಿಷ್ಣುವರ್ಧನನ ನಂತರ ಪಟ್ಟಕ್ಕೇರಿದ ೧ನೇ ನರಸಿಂಹ ದುರ್ಬಲನೂ ದುಷ್ಟನೂ ಆಗಿದ್ದ. ಅವನ ಆಳ್ಕೆಯಲ್ಲಿ ಅವನ ರಾಜ್ಯ ವಿಸ್ತಾರದಲ್ಲಿ ಕುಗ್ಗಿತು. ಅವನ ಮಗ ೨ನೇ ಬಲ್ಲಾಳ ತಂದೆಯ ವಿರುದ್ಧ ಬಂಡು ಹೂಡಿ ೧೧೭೩ರಲ್ಲಿ ಪಟ್ಟಕ್ಕೆ ಏರಿದ. ನರಸಿಂಹನ ಕಾಲದಲ್ಲಿ ಸುಮನೋಬಾಣ ಮತ್ತು ಹರಿಹರ ಎಂಬ ಆಸ್ಥಾನ ಕವಿಗಳಿದ್ದರು. ನರಸಿಂಹನ ಸೇನಾನಿ ಕೇತಮಲ್ಲ ದೋರಸಮುದ್ರದ (ಹಳೇಬೀಡು) ಹೊಯ್ಸಳೇಶ್ವರ ದೇವಾಲಯವನ್ನು ಕಟ್ಟಿಸಿದ. ವಿಷ್ಟುವರ್ಧನ ಇಲ್ಲಿಗೆ ತನ್ನ ರಾಜಧಾನಿಯನ್ನು ಒಯ್ದಿದ್ದನು.

### ೨ನೆಯ ಬಲ್ಲಾಳ

ಡಾ. ಡೆರಟ್ ಹೇಳಿದಂತೆ '೨ನೇ ಬಲ್ಲಾಳ ಹೊಯ್ಸಳ ಅರಸರಲ್ಲಿ ಎದ್ದು ಕಾಣಿಸುವವನು.' ಪ್ರೊ. ಕೋಯಲೊ ಮೇರೆಗೆ, ವೈಭವದಲ್ಲಿ ಬಲ್ಲಾಳನದು ತನ್ನ ಅಜ್ಜನ ಜೊತೆಗೆ

ಪ್ರಮೋಟಿ. ಅವನ ೪೭ ವರ್ಷದ ದೀರ್ಘ ಸಮರ್ಥ ಆಳಿಕೆಯಲ್ಲಿ ತನ್ನ ಪೂರ್ವಜರು ಆಸೆ ಪಡುತ್ತಿದ್ದ ಸ್ವಾತಂತ್ರ್ಯ ಕೈಗೂಡಿತು.

ನರಸಿಂಹನ ಆದಿಮ ದಾಖಲೆ ೧೧೬೫ರಲ್ಲಿ ಯುವರಾಜನೆಂದಾಗಿ ಅವನ ವಿವಾಹ ಮಹೋತ್ಸವದ್ದು. ಆಗಾಗಲೇ ಅವನಿಗೆ ವಯಸ್ಸು ಬಂದಿತ್ತು. ತಂದೆಯ ಆಳ್ವಿಕೆಯಲ್ಲಿ ರಾಜ್ಯ ಕುಗ್ಗಿದ ಕಾರಣ ತಂದೆಯೊಡನೆ ಮನಸ್ತಾಪವಾಗಿ ೧೧೭೧ರಲ್ಲಿ ಬಂಡೆದ್ದ. ಅವನ ರಾಜ್ಯ ಕ್ರಾಂತಿಗೆ ಚೆಂಗಾಳ್ವ, ಕೊಂಗಾಳ್ವ ಬೆಂಬಲವಿತ್ತು. ಪಟ್ಟಕ್ಕೇರಿದ ಮೇಲೆ ಅವನ ಅಧಿಕಾರವನ್ನು ಪ್ರಶ್ನಿಸಿದ ಚೆಂಗಾಳ್ವ ಮಹಾದೇವ ಮತ್ತು ಅವನ ಪುತ್ರ ಪೆಮ್ಮ ವೀರಪ್ಪನನ್ನು ಬಲ್ಲಾಳ ಹತ್ತಿಕ್ಕಿದ. ೧೧೭೧ರಲ್ಲಿ ಉಚ್ಚಂಗಿಯ ಕೋಟೆಯನ್ನು ಪಾಂಡ್ಯ ಕಾಮದೇವನಿಂದ ಗೆದ್ದುಕೊಂಡದ್ದು ಅವನ ಪ್ರಥಮ ಮುಖ್ಯ ಯಶಸ್ಸೆನ್ನಬಹುದು. ಈ ಕೋಟೆಯನ್ನು ವಿಷ್ಣುವರ್ಧನನೇ ಗೆದ್ದುಕೊಂಡಿದ್ದರೂ ನಂತರ ಕೈಬಿಟ್ಟಿತ್ತು. ಬಲ್ಲಾಳನ ಈ ಉಲ್ಲೇಖನೀಯ ವಿಜಯದ ನಂತರ 'ಗಿರಿದುರ್ಗಮಲ್ಲ' ಮತ್ತು 'ಶನಿವಾರ ಸಿದ್ಧಿ' ಬಿರುದಾವಳಿಗಳು ಬಂದವು. ೧೧೭೮ರಲ್ಲಿಅವನು ಹಾನಗಲ್ಲನ್ನು ವಶಕ್ಕೆ ತೆಗೆದುಕೊಂಡು ಬೆಳ್ವೊಲಗದ (ಅಣ್ಣಿಗೇರಿ) ಮೇಲೆ ದಾಳಿ ಮಾಡಿದ. ಅಲ್ಲಿ ಕಲ್ಯಾಣದ ಕಳಚೂರ್ಯರಿಂದ ಪ್ರಬಲ ವಿರೋಧ ಎದುರಿಸಬೇಕಾಯಿತು. ಮರುವರ್ಷವೇ ಹಾನಗಲ್ ಕೋಟೆ ಕೈಬಿಟ್ಟು ಅವನು ಕಳಚೂರ್ಯರ ಚಕ್ರಾಧಿಪತ್ಯವನ್ನು ಕೆಲಕಾಲ ಸ್ವೀಕರಿಸಬೇಕಾಯಿತು. ಕಲ್ಯಾಣ ಕಳಚೂರ್ಯರ ಸಾಮರ್ಥ್ಯ ಸಡಿಲಾಗಿ, ಕೊನೆಗೆ ಚಾಲುಕ್ಯರ ಆಧಿಪತ್ಯವೇ ಕುಸಿದ ನಂತರ ಹೊಯ್ಸಳರು ತಮ್ಮ ನಾಡಿನಲ್ಲಿ ಪ್ರಭುಗಳಾದರು. ಇದೆಲ್ಲ ನಡೆದದ್ದು ೨ನೆಯ ಬಲ್ಲಾಳನ ಕಾಲದಲ್ಲೇ.

ಇಷ್ಟೇ ಏಕೆ, ಬಲ್ಲಾಳ ೧೧೮೪ರಲ್ಲಿ ಚಾಲುಕ್ಯ ರಾಜ್ಯದ ಫಲವತ್ತಾದ ಬಳ್ಳಿಗಾವೆ ಪ್ರಾಂತ್ಯವನ್ನು ವಶಪಡಿಸಿಕೊಂಡ. ಚಾಲುಕ್ಯರ ಅಳಿಗಾಲದ ಅನಂತರ ಸೇವುಣರ ಜೊತೆ ಸೆಣಸಾಟಕ್ಕೆ ನಿಂತ. ೧೧೮೪ರಲ್ಲಿ ಚಾಲುಕ್ಯ ೪ನೆಯ ಸೋಮೇಶ್ವರನನ್ನು ಬಲ್ಲಾಳ ಸೋಲಿಸಿದ. ಈ ವಿಜಯ ಸೇವುಣರೊಡನೆ ೧೧೯೦ರ ಸೊರಟೂರಿನ (ಗದುಗಿನ ಹತ್ತಿರ) ಭೀಕರ ಕದನದಲ್ಲಿ ಪರ್ಯವಸಾನಗೊಂಡಿತು. ೫ ನೆಯ ಭಿಲ್ಲಮನ ವಿರುದ್ಧ ಬಲ್ಲಾಳ ಪಡೆದ ವಿಜಯ ಬಲ್ಲಾಳನ ಮಹತ್ವದ ಯಶಸ್ಸು. ಸೊರಟೂರ ಕಾಳಗದ ಫಲವಾಗಿ ೨ನೆಯ ಬಲ್ಲಾಳನಿಗೆ ಬೆಳವೊಲದ (ಅಣ್ಣಿಗೇರಿ ಪ್ರದೇಶ) ಫಲವತ್ತಾದ ಪ್ರಾಂತ್ಯ ಕೈಸೇರಿದ ಮೇಲೆ, ಎಕ್ಕುಂಡಿಯಲ್ಲಿ ದೀರ್ಘವಾಗಿ ಬೀಡುಬಿಟ್ಟು ಉತ್ತರಕ್ಕೆ ಮಾನವಿಯವರೆಗೆ ಮುಟ್ಟಿದ. ೧೧೯೬ರ ದಾಖಲೆಯು ಅವನು ಗೆದ್ದುಕೊಂಡ ಬನವಾಸಿ, ಹಾನಗಲ್, ಹಲಸಿ, ಹುಲಿಗೆರೆ, ನೊಳಂಬವಾಡಿ, ಬೆಳ್ವೊಲ, ಬಗಡಿಗೆ, ಏರಂಬರಿಗೆ, ಕಿಸುಕಾಡು, ಅಯ್ಯನ ವಾಡಿ, ಕೇಳವಾಡಿ, ಸಿಂದರಿಗೆ, ಉಚ್ಚಂಗಿ ಮತ್ತು ಬಲ್ಲಕುದರಿ ನಗರಗಳನ್ನು ಉಲ್ಲೇಖಿಸುತ್ತದೆ. ಕೃಷ್ಣಾನದಿಯವರೆಗೆ ಮುಟ್ಟಿದ್ದನೆಂದು ಈ ದಾಖಲೆ ಸೂಚಿಸುತ್ತದೆ. ೧೨೧೨ರ ನಂತರ ೨ನೇ ಸೇವುಣ ಸಿಂಘಣ ಅವನನ್ನು ತುಂಗಭದ್ರಾ ನದಿಯ ಆಚೆಗೆ ದೂಡಿದನೆಂದು ತೋರುತ್ತದೆ. ಬೆಳ್ವೊಲದಲ್ಲಿ ಬಲ್ಲಾಳ ಇಲ್ಲದಿರುವ ಸಂಧಿನೋಡಿ ಬೆಳುಗುಟ್ಟೆ ಮುಖ್ಯಸ್ಥ ಸಿಂಧ ಬಂಡು ಹೂಡಿದ. ರಾಜಧಾನಿಯಲ್ಲಿದ್ದ ರಾಣಿ ಉಮಾದೇವಿ ೧೧೯೯ ರಲ್ಲಿ ಈ ೩ನೇ ಸಿಂಧ ಈಶ್ವರನನ್ನು ಹತೋಟಿಗೆ ತಂದಳು.

ಚೋಳ ರಾಜಪುತ್ರಿ ಮಹಾದೇವಿಯನ್ನು ಬಲ್ಲಾಳನೂ ಬಲ್ಲಾಳನ ಮಗಳು ಸೋಮಲಾದೇವಿಯನ್ನು ಚೋಳ ೩ನೆಯ ಕುಲೋತ್ತುಂಗನೂ ಮದುವೆಯಾಗಿದ್ದರು. ಚೋಳ ರಾಜ್ಯದ ಮೇಲೆ ಪಾಂಡ್ಯರ ದಾಳಿಯಾದಾಗ ಚೋಳ ಕುಲೋತ್ತುಂಗನ ನೆರವಿಗೆ ತನ್ನ ಮಗ ೨ನೆಯ ನರಸಿಂಹನನ್ನು ಬಲ್ಲಾಳ ಕಳಿಸಿಕೊಟ್ಟನು. ಚೋಳರಾಜ ಪ್ರತಿಷ್ಠಾಪಕ ಎಂಬ ಬಿರುದನ್ನು ಬಲ್ಲಾಳ ಇದೇ ಸಂದರ್ಭದಲ್ಲಿ ತಳೆದ. ಇದಲ್ಲದೆ ಈ ವಿಜಯದಿಂದ ಚೋಳ ರಾಜ್ಯದಲ್ಲಿ ಕೆಲವು ಭಾಗಗಳೂ ಬಲ್ಲಾಳನಿಗೆ ದೊರಕಿದವು. ೨ ನೆಯ ಬಲ್ಲಾಳನಿಗೆ 'ಹೊಯ್ಸಳ ಚಕ್ರವರ್ತಿ', 'ದಕ್ಷಿಣ ಚಕ್ರವರ್ತಿ' ಇಂಥ ಬಿರುದುಗಳೂ ಇದ್ದವು. ೧೨೨೦ರಲ್ಲಿ ಅವನು ಮರಣ ಹೊಂದಿದಾಗ ಅವನ ಗರುಡ (ಅಂಗರಕ್ಷಕ) ಲಕ್ಮ ತನ್ನ ಹೆಂಡತಿ ಸುಗ್ಗಲಾದೇವಿ ಮತ್ತು ೧೦೦೦ ಸಂಗಡಿಗರೊಡನೆ ಬಲಿದಾನ ಮಾಡಿಕೊಂಡ. ಹೊಯ್ಸಳ ಅರಸರಲ್ಲೂ ಬಲ್ಲಾಳನೇ ಸರ್ವಶ್ರೇಷ್ಠನು. ಅವನು ಕಳಚೂರ್ಯರ, ಚಾಲುಕ್ಯರ, ಸೇವುಣರ, ಪಾಂಡ್ಯರ ವಿರುದ್ಧ ಪಡೆದ ವಿಜಯಗಳು ಅವನ ಶ್ರೇಷ್ಠತೆಗೆ ಸಾಕ್ಷಿ. ಬಲ್ಲಾಳನ ಆಳ್ವಿಕೆಯು ಸಾಂಸ್ಕೃತಿಕ ಚಟುವಟಿಕೆಗಳ ಉನ್ನತಿಯ ಕಾಲ. ಕನ್ನಡ ಕವಿ ಜನ್ನನಿಗೆ ಅವನು ಆಶ್ರಯದಾತ. ಕವಿ ರುದ್ರಭಟ್ಟ ಅವನ ಸಮಕಾಲೀನ. ಅವನ ಕಾಲದಲ್ಲೇ ಹಳೇಬೀಡಿನ ಕೇದಾರೇಶ್ವರ ದೇಗುಲ ಮತ್ತು ತರೀಕೆರೆಯ ಬಳಿ ಅಮೃತೇಶ್ವರ ದೇಗುಲ ನಿರ್ಮಿತವಾದವು. ಅವನು ದ್ವಾರಸಮುದ್ರದಲ್ಲಿ ಇಲ್ಲದಾಗ ಅವನ ಪಟ್ಟಮಹಿಷಿ ಉಮಾದೇವಿ ರಾಜ್ಯದ ಆಡಳಿತ ನಡೆಸಿದಳು.

೨ನೆಯ ಬಲ್ಲಾಳನ ತರುವಾಯ ಅವನ ಮಗ ೨ನೆಯ ವೀರ ನರಸಿಂಹ ಪಟ್ಟಕ್ಕೇರಿದ. ತಮಿಳುನಾಡಿನ ರಾಜಕೀಯದಲ್ಲಿ ಅವನು ಯಶಸ್ವಿ ಚಂಚುಪ್ರವೇಶ ಮಾಡಿ ಅನೇಕ ಅನುಕೂಲಗಳನ್ನು ಸೃಷ್ಟಿಸಿಕೊಂಡನು. ಈ ಕಾಲದ ರಾಜಕೀಯ ಪರಿಸ್ಥಿತಿಯನ್ನು ವರ್ಣಿಸುತ್ತಾ, ಬಿ. ಎಸ್. ಕೆ. ಅಯ್ಯಂಗಾರರು ಹೀಗೆ ಬರೆದಿದ್ದಾರೆ: "ದಕ್ಷಿಣ ಭಾರತದ ರಾಜಕಾರಣದಲ್ಲಿ ಹೊಯ್ಸಳರದೇ ಸುಮಾರಾಗಿ ನಿರ್ಣಾಯಕ ಪಾತ್ರವೆಂದು ತಿಳಿಯಲಾಗಿತ್ತು. ಪಾಂಡ್ಯರ ಮತ್ತು ಚೋಳರ ಶಕ್ತಿ ಸಾಹಸದ ನಂತರ ಹೊಯ್ಸಳರಿಗೆ ದಕ್ಷಿಣ ಭಾರತದ ನಾಯಕತ್ವ ತಾನಾಗಿ ಒದಗಿತು." ಕಡವರನ್ನೂ, ಪಾಂಡ್ಯರನ್ನೂ ನರಸಿಂಹನು ಸೋಲಿಸಿ ಕಪ್ಪಕಾಣಿಕೆ ಹಿಡಿದ. ಚೋಳರ ೩ನೆಯ ರಾಜರಾಜನಿಗೆ ತನ್ನ ಸ್ಥಾನ ಭದ್ರ ಮಾಡಿಕೊಳ್ಳಲಿಕ್ಕೆ ನೆರವಾದ. ಕದಾಚಿತ್ ಅವನು ನರಸಿಂಹನ ಅಳಿಯನಾಗಿರಲಿಕ್ಕೂ ಸಾಕು. ನರಸಿಂಹ ಕುಪ್ಪಂನಲ್ಲಿ (ಶ್ರೀರಂಗದ ಸಮೀಪ) ಎರಡನೆಯ ರಾಜಧಾನಿಯನ್ನು ಕಟ್ಟಿದನು. ಅವನ ದಾಖಲೆಗಳ ಮೇರೆಗೆ ಅವನು ರಾಮೇಶ್ವರದವರೆಗೂ ದಂಡೆತ್ತಿಹೋಗಿದ್ದ.

ಆದರೆ, ತಮಿಳು ದೇಶದಲ್ಲಿ ಮನಸ್ಸು ತೊಡಗಿಸಿದಾಗ ನರಸಿಂಹನ ರಾಜ್ಯದ ಉತ್ತರ ಸೀಮೆ ದುರ್ಲಕ್ಷ್ಯಕ್ಕೆ ಒಳಗಾಗಿ ಅಲ್ಲಿ ಸೇವುಣರು ನೆಲೆ ಸಾಧಿಸತೊಡಗಿದರು. ಅವನ ನಂತರ ೧೨೩೫ರಲ್ಲಿ ಪಟ್ಟಕ್ಕೆ ಬಂದ ಸೋಮೇಶ್ವರನೂ ಬಹು ಅಂಶ ಕಾಲವನ್ನು ಕಣ್ಣಾನೂರಿನಲ್ಲಿ ಕಳೆದು ತಮಿಳುನಾಡಿನ ರಾಜಕೀಯದಲ್ಲೇ ತೊಡಗಿದ್ದ. ೩ನೆಯ ಚೋಳರಾಜೇಂದ್ರ ತುಸು ಬಲಿಷ್ಠನೆಂದು ಮನಗೊಂಡ ಕೂಡಲೇ ಸೋಮೇಶ್ವರ ಪಾಂಡ್ಯರ ಪಕ್ಷ ವಹಿಸಿದ. ನಂತರ ಪಾಂಡ್ಯರನ್ನೂ ತೊರೆದು ಚೋಳರ ಸ್ನೇಹ ಮಾಡಿದ. ಹೊಯ್ಸಳ ರಾಜರ ಈ ದಕ್ಷಿಣ ರಾಜಕೀಯದ ಪರಿಣಾಮವಾಗಿ ಸೇವುಣ ಕೃಷ್ಣ ತುಂಗಭದ್ರಾ ನದಿಯನ್ನು ದಾಟಿ ಚಿತ್ರದುರ್ಗ ಪ್ರಾಂತ್ಯದವರೆಗೆ ಏರಿಹೋಗುವಂತಾಯಿತು.

ತನ್ನ ಕೊನೆಯ ದಿನಗಳಲ್ಲಿ ಸೋಮೇಶ್ವರ ರಾಜ್ಯವನ್ನು ಇಬ್ಬರು ಮಕ್ಕಳಲ್ಲಿ ಹಂಚಬೇಕಾಯಿತು. ಕಣ್ಣಾನೂರಿನಿಂದ ರಾಮನಾಥನೂ, ದ್ವಾರ ಸಮುದ್ರದಿಂದ ೩ನೇ ನರಸಿಂಹನೂ ಕಾರಭಾರ ನಡೆಸತೊಡಗಿದರು. ಇದಾದದ್ದು ೧೨೫೪ರ ಸುಮಾರಿ

ಗೆ ಎಂದು ತೋರುತ್ತದೆ. ಆದರೆ ಸೋಮೇಶ್ವರ ಮಾತ್ರ ರಾಮನಾಥನ ಜೊತೆಗೆ ಕಣ್ಣಾನೂರಿನಲ್ಲೇ ಉಳಿದುಕೊಂಡ. ನಂತರ ೧೨೬೩ ರಲ್ಲಿ ಪಾಂಡ್ಯರ ಜೊತೆಗೆ ಆದ ಕಾಳಗದಲ್ಲಿ ಆವನಿಗೆ ಮೃತ್ಯುವಾಯಿತು. ೧೨೮೦ರ ಮೊದಲಿಗೇ ಪಾಂಡ್ಯರು ರಾಮನಾಥನನ್ನು ಕಣ್ಣಾನೂರಿನಿಂದ ಉಚ್ಚಾಟಿಸಿದರು. ರಾಮನಾಥನು ಕರ್ನಾಟಕದ ಕುಂದನಿಗೆ ಬಂದ. ತನ್ನ ತಮ್ಮನ ಕರ್ನಾಟಕದ ರಾಜ್ಯದಲ್ಲಿ ಅತಿಕ್ರಮಿಸತೊಡಗಿದನು. ೧೨೯೫ ರಲ್ಲಿ ರಾಮನಾಥ ಮಡಿದು ಅವನ ಮಗ ಪಟ್ಟಕ್ಕೇರಿದ. ೧೩೦೦ ರ ವರೆಗೆ ಆಳಿದ.

೩ನೆಯ ನರಸಿಂಹನು ಸೇವುಣರ ದಾಳಿ ಎದುರಿಸಬೇಕಾಯಿತು. ಆತನ ರಾಜಧಾನಿಯವರೆಗೂ ದಾಳಿ ಮುಟ್ಟಿತ್ತು. ಆದರೆ ಅವರ ದಾಳಿಯನ್ನು ಹಿಮ್ಮೆಟ್ಟಿಲಾಯಿತು. ನರಸಿಂಹನ ನಂತರ ಅವನ ಮಗ ೩ನೆಯ ಬಲ್ಲಾಳನು ೧೨೯೧ ರಲ್ಲಿ ಪಟ್ಟಕ್ಕೆ ಬಂದ.

**೩ನೆಯ ಬಲ್ಲಾಳ** (೧೨೯೧–೧೩೪೩)

ಹೊಯ್ಸಳ ವಂಶದಲ್ಲಿ ೩ನೆಯ ಬಲ್ಲಾಳ ಇನ್ನೊಬ್ಬ ಬಲಿಷ್ಟ ರಾಜ. ಹೊಯ್ಸಳ ರಾಜ್ಯದ ವಿಭಜನೆ ೧೩೦೦ರಲ್ಲಿ ವಿಶ್ವನಾಥನ ಮರಣಾನಂತರ ಕೊನೆಗೊಂಡಿತು. ೩ನೆಯ ಬಲ್ಲಾಳ ಸಂಯುಕ್ತ ರಾಜ್ಯದ ಆಡಳಿತ ವಹಿಸಿಕೊಂಡ. ಆದರೆ ೧೩೦೩ ರಲ್ಲಿ ಸೇವುಣ ಸೇನೆಯ ದಾಳಿ ಎದುರಿಸಬೇಕಾಯಿತು. ಅವರು ಹೊಳಲಕೆರೆಯವರೆಗೆ ಬಂದಿದ್ದರು. ೧೩೦೪ ರಲ್ಲಿ ಬಲ್ಲಾಳ ಅವರನ್ನು ಬೆನ್ನಟ್ಟಿ ಲಕ್ಕುಂಡಿಯವರೆಗೆ ಹೋಗಿ ಅಲ್ಲಿಯ ಕೋಟೆಯನ್ನು ಧ್ವಂಸಗೊಳಿಸಿದ. ಏತನ್ಮಧ್ಯೆ ಬಲ್ಲಾಳ ಹಾನಗಲ್ಲಿನ ಕದಂಬರ ಜೊತೆಗೂ ಹೊನಗುಂದದ ಸಂತಾರರ ಜೊತೆಗೂ ಹೋರಾಡಬೇಕಾಯಿತು.

ಪಾಂಡ್ಯ ರಾಜ್ಯದ ಪಟ್ಟದ ಬಗ್ಗೆ ವ್ಯಾಜ್ಯ ಶುರುವಾಗಿ ವೀರ ಪಾಂಡ್ಯನ ವಿರುದ್ಧ ಸುಂದರ ಪಾಂಡ್ಯನ ಪಕ್ಷ ವಹಿಸಿ ಬಲ್ಲಾಳ ಹೋಗಿದ್ದ. ದಕ್ಷಿಣಕ್ಕೆ ಬಲ್ಲಾಳ ಹೋದಾಗ ಅವನ ರಾಜಧಾನಿಯ ಮೇಲೆ ದಿಲ್ಲಿಯ ಸುಲ್ತಾನ ಅಲ್ಲಾವುದ್ದೀನ ಖಿಲಜಿಯ ಸೇನೆ ದಾಳಿ ಮಾಡಿತು. ದಿಲ್ಲಿಯ ಸೇನಾನಿ ಮಲೀಕ್ ಕಾಫುರ್ ಸೇವುಣರ ರಾಜಧಾನಿ ದೇವಗಿರಿಯನ್ನು ಸುಲಿದ. ನಂತರ ೧೩೧೧ ರಲ್ಲಿ ಅವನು ದ್ವಾರಸಮುದ್ರ (ಹಳೇ ಬೀಡು) ಕ್ಕೆ ಬಂದ. ನಗರವನ್ನು ಸುಲಿದ. ೩ನೇ ಬಲ್ಲಾಳ ದಿಲ್ಲಿ ಸುಲ್ತಾನನ ಸೇನೆಗೆ ತಲೆಬಾಗಿದ. ಆ ಸೇನೆಯ ಜೊತೆಗೆ ತನ್ನ ಸೇನೆಯನ್ನೂ ಕೂಡಿಸಿ ಮಧುರೆಯವರೆಗೆ ಹೋದ. ನಂತರ ಬಲ್ಲಾಳ ತನ್ನ ಮಗ ವೀರ ವಿರೂಪಾಕ್ಷನನ್ನು ಮಲೀಕ ಕಾಫುರನ ಜೊತೆಗೆ ದಿಲ್ಲಿಗೆ ಕಳಿಸಿದ. ೧೩೧೩ ರಲ್ಲಿ ರಾಜಪುತ್ರ ದ್ವಾರಸಮುದ್ರಕ್ಕೆ ಹಿಂತಿರುಗಿದ.

೧೩೧೮ರ ವೇಳೆಗೆ ಸೇವುಣ ಸತ್ತೆ ಪೂರ್ಣ ನಷ್ಟವಾಗಿತ್ತು. ಸೇವುಣರ ಮುಂಚಿನ ಸಾಮಂತ ರಾಜ ಕುಮ್ಮಟದ ಕಂಪಿಲದೇವ ೩ನೆಯ ಬಲ್ಲಾಳನ ಪ್ರತಿಸ್ಪರ್ಧಿಯಾಗಿ ತಲೆ ಎತ್ತಿದ್ದ. ಕಂಪಿಲನ ವಿರುದ್ಧ ಈ ಸೆಣಸಾಟ ಬಲ್ಲಾಳನಿಗೆ ಲಾಭ ತರಲಿಲ್ಲ. ೧೩೨೭ರಲ್ಲಿ ಮಹಮ್ಮದ್ ಬಿನ್ ತುಘಲಕ್ ದಕ್ಷಿಣಕ್ಕೆ ದ್ವಾರಸಮುದ್ರದ ಮೇಲೆ ದಂಡಯಾತ್ರೆ ಕಳಿಸಿದ. ಏಕೆಂದರೆ ಈಗ ಬಲ್ಲಾಳ ದಿಲ್ಲಿ ಸಾಮ್ರಾಟನಿಗೆ ನಿಷ್ಠೆ ಹಿಂತೆಗೆದುಕೊಂಡಿದ್ದ. ನಗರ ಎರಡನೆಯ ಬಾರಿ ಲೂಟಿಗೆ ತುತ್ತಾಯಿತು. ೩ನೆಯ ಬಲ್ಲಾಳ ತಿರುವಣ್ಣಾಮಲೆಗೆ ಕಾಲ್ತೆಗೆದ. ದಿಲ್ಲಿ ಸೈನ್ಯ ಮಧುರೆಯವರೆಗೆ ಏರಿ ಬಂದಿತು. ಪಾಂಡ್ಯ ರಾಜ್ಯವನ್ನೂ ವಶ ಮಾಡಿಕೊಂಡಿತು. ೧೩೩೬ ರ ನಂತರ ಮಧುರೆಯ ಸುಲ್ತಾನೀ ಸತ್ತೆ ಸ್ಥಾಪಿಸಲ್ಪಟ್ಟಿತು. ಬಲ್ಲಾಳ ತಿರುವಣ್ಣಾಮಲೆಯನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ಉತ್ತರದ ದಾಳಿಯ ವಿರುದ್ಧ ದಂಡು ಜಮಾವಣೆಗೆ ಯತ್ನಿಸಿದನು. ಸೇವುಣರು, ಓರಂಗಲ್ಲಿನ ಕಾಕತೀಯರು, ಕಂಪಿಲದ ರಾಜವಂಶ ಮತ್ತು ಪಾಂಡ್ಯ ಸತ್ತೆ, ಎಲ್ಲವೂ ನಷ್ಟಪ್ರಾಯವಾದ ಮೂಲಕ ಹೊಯ್ಸಳ ಬಲ್ಲಾಳನೊಬ್ಬನೇ ಉತ್ತರದ ಇಸ್ಲಾಮೀ ದಾಳಿಗೆ ಎದುರಾಳಿಯಾಗಿ ನಿಲ್ಲಬೇಕಾಗಿತ್ತು. ಹೊಸಪಟ್ಟಣ ಎಂಬ ಉಪ ರಾಜಧಾನಿಯನ್ನು ತುಂಗಭದ್ರಾ ತೀರದಲ್ಲಿ ಕಟ್ಟಿಸಿದವನೂ ಬಲ್ಲಾಳನೇ. ಈ ಸ್ಥಾನವೇ ನಂತರದ ಕಾಲದಲ್ಲಿಯ ವಿಜಯನಗರ ಸಾಮ್ರಾಜ್ಯದ ಕೇಂದ್ರವೆಂದು ಫಾದರ್ ಹೆರಾಸ ಮತ್ತು ಪ್ರೊ. ಕೊಯಿಲೊ ಗುರುತಿಸಿದ್ದಾರೆ.

ಮಧುರೆಯ ಸುಲ್ತಾನನನ್ನು ನಾಶ ಮಾಡುವ ಪ್ರಯತ್ನದಲ್ಲೇ ೧೩೪೩ ರಲ್ಲಿ ಬಲ್ಲಾಳನಿಗೆ ಮರಣ ಬಂತು. ಇಂತು ಒಬ್ಬ ಶ್ರೇಷ್ಠ ಹೊಯ್ಸಳ ಚಕ್ರಾಧಿಪತಿ ಕೊನೆಗೊಂಡ. ಅವನ ಮಗ ವೀರ ವಿರೂಪಾಕ್ಷನೂ ೧೩೪೬ ರಲ್ಲಿ ಮರಣ ಹೊಂದಿದ. ಹೀಗೆ ಹೊಯ್ಸಳ ಸತ್ತೆ ಕೊನೆಗೊಂಡಿತು. ಆದರೆ, ತಾನು ಮುಗಿದು ಹೋದರೂ ಭಾವೀ ವಿಜಯನಗರ ಸಾಮ್ರಾಜ್ಯದ ಉದಯಕ್ಕೆ ದಾರಿ ಹಾಕಿಕೊಟ್ಟಿತು.

೩ನೆಯ ಬಲ್ಲಾಳನ ದೀರ್ಘ ಆಳ್ವಿಕೆಯ ಕಾಲ ತಿಕ್ಕಾಟ ಗೊಂದಲಗಳಿಂದ ಕೂಡಿತ್ತು. ಅವನ ಬಾಳು ಆತುರದ ಎದುರಾಳಿತನದಿಂದ ತುಂಬಿತ್ತು. ಕಾಡಿಗೆ ಕವಿದ ದಕ್ಷಿಣದ ರಾಜಕೀಯದಲ್ಲಿ ಅವನು ಶ್ರೇಷ್ಠ ವೀರನಾಗಿ ನಿಂತುಕೊಂಡನು ಎಂದು ವರ್ಣಿಸಲ್ಪಟ್ಟಿದ್ದಾನೆ.

**ಆಡಳಿತ**

ಹೊಯ್ಸಳರ ಶಿಲಾಲೇಖಗಳು ಅರಸನ ಕರ್ತವ್ಯವನ್ನು "ಶಿಷ್ಟಪರಿಪಾಲನ ಮತ್ತು ದುಷ್ಟ ನಿಗ್ರಹ"ವೆಂದು ವರ್ಣಿಸುತ್ತವೆ. ಆಡಳಿತದಲ್ಲಿ ಅರಸನಿಗೆ ಮಂತ್ರಿಗಳು ಇರುತ್ತಿದ್ದರು. ಪ್ರೊ. ಕೊಯಲೋ ಪ್ರಕಾರ ಇವರ ಸಂಖ್ಯೆ ಐದು. ಡಾ. ಡೆರೆಟ್ ಪ್ರಕಾರ ಇವರ ಸಂಖ್ಯೆ ಇನ್ನಷ್ಟು ದೊಡ್ಡದು. ಅವರು ಹೇಳಿದಂತೆ ೧೩ ನೇ ಶತಮಾನದ ಹೊತ್ತಿಗೆ ಅವರ ಸಂಖ್ಯೆ ವಿಪರೀತ ಬೆಳೆದು ಎಲ್ಲ ವಿಷಯಗಳಲ್ಲೂ ಅವರೆಲ್ಲರ ಜೊತೆ ಮಂತ್ರಾಲೋಚನೆ ಅಸಾಧ್ಯವಾಗಿತ್ತು, ಅವರು ಮಂತ್ರಾಲೋಚನೆ ಕೊಡುತ್ತಿದ್ದರಾದರೂ, ಅರಸರೇ ಕೊನೆಯ ನಿರ್ಣಯವನ್ನು ಕಾರ್ಯಗತಗೊಳಿಸುವುದಕ್ಕೆ ಅವರು ಬದ್ಧರಾಗಿದ್ದರು. 'ಸಂಧಿ ವಿಗ್ರಹಿಯೇ' ವಿದೇಶಿ ಮಂತ್ರಿ. 'ಸರ್ವಾಧಿಕಾರಿ' ಎಂಬುವನು ಎಲ್ಲ ಖಾತೆಗಳ ಮೇಲ್ವಿಚಾರಕ.. 'ಬಾಹತ್ರ ನಿಯೋಗಾಧಿಪತಿ' ಎನ್ನುವವನು ಅರಮನೆಯ ೭ ಬಗೆಯ ಸೇವಾ ಖಾತೆಗಳ ಹಿರಿಯ ಮುಖಂಡ. 'ಮಹಾ ಭಾಂಡಾರಿ' ಹಣಕಾಸು ಲೆಕ್ಕಪತ್ರದ ಮುಖ್ಯಸ್ಥ. ಇವರೆಲ್ಲ ಮಂತ್ರಿಮಂಡಲದ ಸದಸ್ಯರು. ಅರಸರ ಆಪ್ತಸಚಿವನಿಗೆ 'ಪರಮ ವಿಶ್ವಾಸಿ' ಎಂಬ ಹುದ್ದೆ, ಮಹಾಪಸಾಯಿತ ಅರಸನ ಉಡುಪು ತೊಡುಪುಗಳ ವ್ಯವಸ್ಥಾಪಕ. ಇವರೂ ಹಿರಿಯ ಹುದ್ದೇದಾರರು. ಕೆಲ ಸಂದರ್ಭಗಳಲ್ಲಿ ಈ ಅಧಿಕಾರಿಗಳ ಹುದ್ದೆ ವಂಶ ಪಾರಂಪರಿಕ. ಮಂತ್ರಿಗಳಿಗೆ ಸೇನೆಯ ಹುದ್ದೆ ಕೂಡ ಇದ್ದ ಮೂಲಕ ಅವರನ್ನು 'ದಂಡನಾಯಕ'ರೆಂದೂ ಕರೆಯಲಾಗುತ್ತಿತ್ತು

ಪಟ್ಟದರಸಿಯರೂ, ಯುವರಾಜರೂ ಆಡಳಿತದಲ್ಲಿ ಮಹತ್ವದ ಪಾತ್ರವಹಿಸುತ್ತಿದ್ದರು. ಉಮಾದೇವಿ ದ್ವಾರ ಸಮುದ್ರದಿಂದ ತಾನೇ ರಾಜ್ಯಾಡಳಿತ ನಡೆಸಿದಳು. ಗಂಡ ೨ ನೆಯ

ಬಲ್ಲಾಳ ಬೆಳ್ವಲದ ದಂಡಯಾತ್ರೆಗೆ ವರ್ಷಾನುಗಟ್ಟಲೆ ಹೋದಾಗ, ಅರಸರ ಸುತ್ತ ಅಂಗರಕ್ಷಕ ದಳವಿರುತ್ತಿತ್ತು. ಇವರಿಗೆ ಗರುಡರೆನ್ನುತ್ತಿದ್ದರು. ಅರಸ ಸಾಯುವಾಗ ಇವರೂ ಬಲಿದಾನ ಮಾಡಿಕೊಳ್ಳುತ್ತಿದ್ದರು.

ಅರಸನಿಗೆ ನ್ಯಾಯದ ಬಗ್ಗೆ ಸಲಹೆ ಕೊಡುವ ಮಂತ್ರಿಯ ಹುದ್ದೆ 'ಧರ್ಮಾಧಿಕಾರಿ' ಎಂದು. ಇಂಥ ಅಧಿಕಾರಿಗಳು ಪ್ರಾಂತ್ಯಕ್ಕೂ ಇರುತ್ತಿದ್ದರು. 'ಧರ್ಮಾಧಿಕಾರಿ' ಅಪರಾಧಿಕ ಮತ್ತು ತಾಜದಾರೀ ಎರಡು ಬಗೆಯ ನ್ಯಾಯವನ್ನು ಬಗೆಹರಿಸುತ್ತಿದ್ದರು. ವ್ಯಾಜ್ಯದ ಅಂತಿಮ ತೀರ್ಪು ನೀಡುವ ನ್ಯಾಯಮೂರ್ತಿ ದೊರೆಯೇ. ನ್ಯಾಯವಿಚಾರಣೆಯಲ್ಲಿ 'ದಿವ್ಯ' ಎಂಬ ಪರೀಕ್ಷೆಯೂ ನಡೆಯುತ್ತಿತ್ತು. ಜನರಿಗೆ ತಮ್ಮ ಪರವಾಗಿ ಆಣೆ-ಪ್ರಮಾಣವಚನ ತೆಗೆದುಕೊಳ್ಳಲಿಕ್ಕೆ ಹಚ್ಚುವುದಲ್ಲದೆ ಅವರು ಕೈಯಲ್ಲಿ ದೇವರ ಗಂಧ ಪ್ರಸಾದವನ್ನು ಹಿಡಿದು ನೋಡುವ ಪರೀಕ್ಷೆಯೂ ರೂಢಿಯಲ್ಲಿತ್ತು.

ಹೊಯ್ಸಳ ರಾಜ್ಯದ ಪ್ರಾದೇಶಿಕ ವಿಭಾಗ ರೀತಿಯನ್ನು ಗುರುತಿಸುವುದು ಕಠಿಣ. ಶಿಲಾಲೇಖಗಳೇನೋ 'ನಾಡು'ಗಳು, 'ವಿಷಯ'ಗಳು ಎಂದು ಹೇಳುತ್ತವೆ. ಎರಡರಲ್ಲಿ ಯಾವುದರ ವಿಸ್ತಾರ ಹೆಚ್ಚು ಎಂಬುದನ್ನು ಹೇಳಲಾಗದು. ಡಾ. ಡೆಕಿಟ್ ಮೇರೆಗೆ 'ನಾಡು' ದಂಡನಾಯಕನ ರಕ್ಷಣೆಗೆ ಒಳಪಟ್ಟಿತ್ತು. ಇವನು ಸೇನಾಧಿಪತಿ. ಇವನಿಗೆ ಸಹಾಯಕರು ಒಬ್ಬ 'ಮಹಾಪ್ರಧಾನ' ಒಬ್ಬ ಭಂಡಾರಿ (ಕೋಶಾಧ್ಯಕ್ಷ), 'ಸೇನಬೋವ' (ಕಾರಕೂನ) ಅಲ್ಲದೆ ಹಲವಾರು ಕೆಳಗಿನ ಆಡಳಿತಗಾರರಾದ ಹೆಗ್ಗಡೆಗಳು ಬಹುಶಃ 'ನಾಡಿ'ನ ಚಿಕ್ಕಮಟ್ಟ ವಿಭಾಗಗಳ ಆಡಳಿತಾಧಿಕಾರಿಗಳೆಂದು ತೋರುತ್ತದೆ. ಈ ವಿಭಾಗಗಳಲ್ಲಿ 'ಸ್ಥಳ'ಗಳೆಂಬ ಹಲವಾರು ಹಳ್ಳಿಗಳ ಗುಂಪುಗಳಿರುತ್ತಿದ್ದವು. ಮಾಂಡಲಿಕ ರಾಜ ಮನೆತನಗಳಾದ ಚೆಂಗಲವ, ಕೊಂಗಲವ, ಬೆಳಗುಟ್ಟೆಯ ಸಿಂಧರು (ಶಿವಮೊಗ್ಗ ಜಿಲ್ಲೆ), ಸಂತಾರರು, ಆಲೂಪರಂಥವರಿಗೂ ಮುಂದುವರಿಯಲು ಆಸ್ಪದವಿತ್ತು.

ಶಿಲಾಲೇಖಗಳಲ್ಲಿ ಉಲ್ಲೇಖಿಸಲ್ಪಟ್ಟ ನಾಗರ ಮತ್ತು ಗ್ರಾಮೀಣ ಸಂಘಸಂಸ್ಥೆಗಳಾದ 'ಒಕ್ಕಲು', 'ಹಲರು', 'ಸಮುದಾಯ' ಇವುಗಳೂ ಮುಂದುವರಿಯಲಿಕ್ಕೆ ಆಸ್ಪದವಿತ್ತು. ಕೆಲವೊಂದು ಗ್ರಾಮಗಳಿಗೆ 'ಹಿಟ್ಟು' ಮತ್ತು 'ಸಾಮಯ'ರೆಂಬ ಆಡಳಿತ ಅಧಿಕಾರಿಗಳಿರುತ್ತಿದ್ದರು. ಪ್ರತಿಯೊಬ್ಬ 'ಹಿಟ್ಟು' ಗ್ರಾಮದ ಆಯಾ ಜಾತಿಯ ಆಯಾ ಪ್ರತಿನಿಧಿ, ಅವರ ಸಂಖ್ಯೆ ಹೆಚ್ಚು ಕಡಿಮೆ ಇರುತ್ತಿತ್ತು. ಕೆಲವು ಗ್ರಾಮಗಳಲ್ಲಿ ಎಂಟು ಜಾತಿಗಳಿಗೆ ಒಬ್ಬ ಪ್ರಾತಿನಿಧಿಕ 'ಹಿಟ್ಟು'. ಇತರ ಗ್ರಾಮಗಳಲ್ಲಿ ೧೮ ಜಾತಿಗಳಿಗೊಬ್ಬ ಹಿಟ್ಟು. ದಾಖಲೆಗಳು ಗ್ರಾಮದ ಮುಖಂಡನಾದ 'ಗೌಂಡ'ನನ್ನೂ ಉಲ್ಲೇಖಿಸಿವೆ. 'ಅಗ್ರಹಾರ'ಹೆಸರಿನ ಬ್ರಾಹ್ಮಣ ಪಂಡಿತರ ವಸತಿಗಳಲ್ಲಿ ಮನೆಯ ಯಜಮಾನರಾದ 'ಮಹಾಜನರ' ಸಂಸ್ಥೆಗಳಿದ್ದವು. ನಗರಗಳಲ್ಲಿ ವ್ಯಾಪಾರಸ್ಥರ ಶ್ರೇಣಿಗಳಿದ್ದವು. ವ್ಯಾಪಾರಿಗಳ ಶ್ರೇಣಿಗಳ ಅಧ್ಯಕ್ಷರಿಗೆ 'ಮಹಾ ವಡ್ಡಬೇಹಾರಿ' ಎಂದು ಹೆಸರು. ಕಮ್ಮಾರರಂಥ ಕರಕುಶಲ ಕೆಲಸಗಾರರ ಶ್ರೇಣಿಗಳೂ ಇದ್ದವು. ಇವಕ್ಕೆ 'ಪಾಂಚಾಲ' ಎಂದು ಹೆಸರು.

ರಾಜನ ಬೊಕ್ಕಸಕ್ಕೆ ಮುಖ್ಯ ಪ್ರಾಪ್ತಿ ಭೂಮಿ ಕಂದಾಯ. ಮಧ್ಯವರ್ತಿ ಭೂ ದಾಖಲೆಗಳಿಗೆ 'ಕಡಿತ' ಎನ್ನುತ್ತಿದ್ದರು. ಭೂ ಕಂದಾಯಕ್ಕೆ 'ಸಿದ್ಧಾಯ' ಎನ್ನುತ್ತಿದ್ದರು. 'ಕುಲ' ಹೆಸರಿನ ಮೂಲ ಕಂದಾಯವಲ್ಲದೆ ವಿವಿಧ ರೀತಿಯ ಸುಂಕ ತೆರಿಗೆಗಳೂ ಸೇರಿ 'ಸಿದ್ಧಾಯ' ಭೂ ಕಂದಾಯ ಆಗುತ್ತಿತ್ತು. ಈ ಸುಂಕ ತೆರಿಗೆಗಳು 'ಕುಲ'ಕ್ಕೆ ಸಮಪ್ರಮಾಣದಲ್ಲಿಯೇ ವಸೂಲು ಆಗುತ್ತಿದ್ದವು. ಇದಲ್ಲದೆ ವೃತ್ತಿ ತೆರಿಗೆಯೂ ಇತ್ತು. ಲಗ್ನದ ತೆರಿಗೆ (ಮದುವೆ) ಮತ್ತು ಮನೆಯಲ್ಲಿ ಸಾಕಿದ ಪಶು ಸಂಪತ್ತಿನ ಮೇಲೆ ತೆರಿಗೆ 'ಬಲವನ' ಪದ್ಧತಿ ಇತ್ತು. ದಾಖಲೆಗಳಲ್ಲಿ ನಮೂದಾದ ಇತರ ತೆರಿಗೆಗಳೆಂದರೆ ಊರಿಂದ ಊರಿಗೆ ಹೋಗುವ ಮಾಲಿನ ಮೇಲೆ ಹೇರಿದ ಸುಂಕ. ಉದಾ. ರಥಗಳು, ವಾಹನಗಳು, ವೀಳ್ಯದೆಲೆ, ತುಪ್ಪ, ಹಗ್ಗ, ನೂಲು ಇತ್ಯಾದಿಗಳ ಮೇಲೆ ಅಲ್ಲದೆ ಬೆಂಕಿಗೂಡು (ಹೊಗೆದರೆ), ಮನೆ, ಅಂಗಡಿ, ದನಕೊಟ್ಟಿಗೆ, ಕಬ್ಬಿನ ಅಲೆಮನೆ (ಅಲೆದೆರೆ) ಇವುಗಳ ಮೇಲೆ ತೆರಿಗೆ ವಿಧಿಸಲಾಗುತ್ತಿತ್ತು.

ಹೊಯ್ಸಳರು ಬಂಗಾರದ ನಾಣ್ಯಗಳನ್ನು ಬಳಕೆಯಲ್ಲಿ ತಂದರು. ೬೩ ಗುಂಜಿ ತೂಕದ 'ಗದ್ಯಾಣ' ಅಥವಾ 'ಹೊನ್ನು' ದೊಡ್ಡ ನಾಣ್ಯ. ಗದ್ಯಾಣದ ಹತ್ತನೇ ಒಂದು ತೂಕದ ಪಣ ಅಥವಾ ಹಣ. ಪಣದ ಒಂದು ನಾಲ್ಕಂಶ ತೂಕದ ನಾಣ್ಯ 'ಹಾಗ' 'ಹಾಗ'ದ ಒಂದು ನಾಲ್ಕಂಶ ಬೆಲೆಯದು 'ವೀಸ'. ಈ ನಾಣ್ಯಗಳಲ್ಲದೆ 'ಬೆಲೆ' 'ಕಣಿ' ಎಂಬ ನಾಣ್ಯಗಳೂ ಇದ್ದವು.

ಹೊಯ್ಸಳ ರಾಜರು ಸಾಹಿತ್ಯ ಲಲಿತ ಕಲೆಗಳ ಶ್ರೇಷ್ಠ ಆಶ್ರಯದಾತರು. ಅವರು ೫೦೦ಕ್ಕೂ ಹೆಚ್ಚು ವೈಭವಯುತ ಸುಂದರ ಗುಡಿಗಳನ್ನು ಕಟ್ಟಿಸಿದ್ದುದು ಈಗಾಗಲೇ ಹೇಳಲಾಗಿದೆ. ಶ್ರೇಷ್ಠ ಕನ್ನಡ ಕವಿಗಳಾದ ಜನ್ನ, ರುದ್ರಭಟ್ಟ ಹರಿಹರ, ಕೇಶಿರಾಜನಿಗೆ ಅವರು ಆಶ್ರಯ ಕೊಟ್ಟರು. ವಿದ್ಯೆಗೆ ಉತ್ತೇಜನ ಕೊಡುವುದಕ್ಕಾಗಿ ಅವರು ನೂರಾರು ಅಗ್ರಹಾರಗಳನ್ನು ಸ್ಥಾಪಿಸಿದರು.

## ಸೇವುಣರು

ಸೇವುಣರು ಅಥವಾ ದೇವಗಿರಿಯ (ಇಂದಿನ ಮಹಾರಾಷ್ಟ್ರದಲ್ಲಿರುವ ದೌಲತಾಬಾದ) ಯಾದವರು ಮೊದಮೊದಲಿಗೆ ರಾಷ್ಟ್ರಕೂಟರ ಮತ್ತು ಕಲ್ಯಾಣ ಚಾಲುಕ್ಯರ ಮಾಂಡಲಿಕರು. ೧೨ನೆಯ ಶತಮಾನದ ಅಂತ್ಯದಲ್ಲಿ ಅವರು ಸ್ವತಂತ್ರ ಪ್ರಭುತ್ವ ಪಡೆದರು. ೧೪ನೆಯ ಶತಮಾನದ ಆದಿಯವರೆಗೆ ಆಳಿದರು.

'ಚತುರ್ವರ್ಗ ಚಿಂತಾಮಣಿ' ಎಂಬ ಸಂಸ್ಕೃತ ಗ್ರಂಥದ ಕರ್ತೃ ಹೇಮಾದ್ರಿ ಪಂಡಿತನ ಪ್ರಕಾರ ಸೇವುಣರು ಮೂಲತ: ಮಥುರಾದವರು. ಅನಂತರ ದ್ವಾರಕಾದಲ್ಲಿ ನೆಲೆಸಿದರು. ನಂತರ ದಕ್ಷಿಣ ದೇಶಕ್ಕೆ ಬಂದರು. ಅವರ ದಾಖಲೆಗಳು ಅವರನ್ನು 'ದ್ವಾರಾವತೀಪುರವರಾಧೀಶ್ವರ' ಅಥವಾ 'ದ್ವಾರಕಾದ ಒಡೆಯ'ರೆಂದು ಕರೆಯುತ್ತವೆ. ಇವರ ಮೂಲಪುರುಷನಾದ ದೃಢಪ್ರಹರ ದ್ವಾರಕಾದ ಅರಸು ಸುಬಾಹುವಿನ ಎರಡನೆಯ ಸಂತಾನವೆಂದು ಹೇಳಲಾಗಿದೆ. ಹೇಮಾದ್ರಿಯ ಪ್ರಕಾರ ಅವನು ಶ್ರೀ ನಗರದಿಂದ ಆಡಳಿತ ನಡೆಸುತ್ತಿದ್ದ. ಅವನ ಮಗ ಸೇವುಣ ಚಂದ್ರ, ಆ ರಾಜ್ಯಕ್ಕೆ ಸೇವುಣ ದೇಶವೆಂದು ಹೆಸರಿಟ್ಟ. ಡಾ. ಭಾ. ಡಾಕಿಟರ ಅವರ ಅಭಿಪ್ರಾಯದಲ್ಲಿ ಸೇವುಣರು ಏತದ್ದೇಶೀಯ ಮರಾಠಾ ರಾಜಮನೆತನದವರು. ಅವರು ನಾಸಿಕ ಮತ್ತು ಅಹಮದ ನಗರ ಜಿಲ್ಲೆಗಳನ್ನು ಆಳುತ್ತಿದ್ದರು. ಅವರು ಯದುವಂಶದವರೆಂದು ಹೇಳಿಕೊಳ್ಳುತ್ತಿದ್ದುದು ಕಾಲ್ಪನಿಕ. ಇದೇ ಬಗೆಯಿಂದ ಹೊಯ್ಸಳರೂ, ವಿಜಯನಗರ ರಾಜವಂಶದವರೂ. ಮೈಸೂರಿನ ಒಡೆಯರೂ ಯದುವಂಶದವರೆಂದು ಹೇಳಿಕೊಳ್ಳುವುದು ಒಂದು ಉದಾಹರಣೆ.

ಸೇವುಣ ವಂಶದ ಪ್ರಾರಂಭದ ಕಾಲಕ್ಕೆ ನಾಸಿಕ – ಅಹಮದಾಬಾದ್ ಪ್ರದೇಶಗಳು ಕನ್ನಡ ದೇಶವೇ ಆಗಿದ್ದರಿಂದ ಯಾದವರಾಗಲಿ, ಸೇವುಣರಾಗಲೀ ಏತದ್ದೇಶೀಯ ಕನ್ನಡ ಮನೆತನವೆಂದು ನಂಬಲಿಕ್ಕೆ ಆಧಾರವುಂಟು. ಅಲ್ಲದೇ, ಸೇವುಣರ

ಶಾಸನಗಳೂ ಕನ್ನಡ ಭಾಷೆಯಲ್ಲಿಯೇ ಇವೆ. ಕೆಲವು ಶಾಸನಗಳ ಭಾಷೆ ಕನ್ನಡ, ಲಿಪಿ ದೇವನಾಗರೀ. ಅವರ ಅವನತಿಯ ಕಾಲದ ಕೆಲವೇ ಶಾಸನಗಳಲ್ಲಿ ನಾಂದಿ ಪದ್ಯವಷ್ಟೇ ಮರಾಠಿ ಇದ್ದದ್ದು ಕಂಡುಬಂದಿದೆ. ಡಾ. ಓ. ಪಿ. ವರ್ಮಾ ತೋರಿಸಿಕೊಟ್ಟಂತೆ, ಅವರ ಮುಂಚಿನ ನಾಣ್ಯಗಳ ಮುದ್ರಿಕೆಯೂ ಕನ್ನಡ ಭಾಷೆ (ರಾಜಭಾಷೆ) ಇರಬಹುದೆಂದು ತೋರುತ್ತದೆ.

ಸೇವುಣ ರಾಜರ ಹೆಸರುಗಳಾದ ಧಡಿಯಪ್ಪ, ಭಿಲ್ಲಮ, ರಾಜುಗಿ, ವರುಗಿ, ವೇಸುಗಿ ಇವು ಶುದ್ಧ ಕನ್ನಡದವು. ಕಳಚೂರ್ಯರಲ್ಲೂ ಭಿಲ್ಲಮ, ಸಿಂಕಣಿ, ಮಲ್ಲುಗಿ, ಇಂಥ ಹೆಸರಿನ ರಾಜರಿದ್ದಾರೆ. ಅನೇಕ ಸೇವುಣರಿಗೆ ಕನ್ನಡ ಮನೆತನದ ಶರೀರ ಸಂಬಂಧವಾಗಿತ್ತು. ೨ನೆಯ ಭಿಲ್ಲಮ ರಾಷ್ಟ್ರಕೂಟ ಮನೆತನದ ಲಚ್ಚಿಯವ್ವೆಯನ್ನು ಲಗ್ನವಾಗಿದ್ದ. ವೇಸುಗಿ ಮತ್ತು ೩ನೆಯ ಭಿಲ್ಲಮರ ರಾಣಿಯರು ಚಾಲುಕ್ಯರ ಮನೆತನದ ರಾಜಪುತ್ರಿಯರು. ಇವೆಲ್ಲ ಕನ್ನಡನಾಡಿನ ಜೊತೆಗೆ ಸೇವುಣರ ಸಂಬಂಧವನ್ನೂ ಸೂಚಿಸುತ್ತವೆ. ಸೇವುಣ ವಂಶದ ಕೆಲವು ಅಮುಖ್ಯ ಮಾಂಡಲಿಕರು ಕನ್ನಡದ ಒಳನಾಡುಗಳಲ್ಲೂ ಆಳುತ್ತಿದ್ದರು. ಉದಾ: ಮಾಸವಾಡಿ–೧೪೦ನ್ನು (ಧಾರವಾಡ ಜಿಲ್ಲೆಯ ಡಂಬಳ ಮೇಪುಂಡಿ ಭಾಗ) ಆಳುವ ಸೇವುಣರು. ಇದನ್ನು ತೋರಿಸಿದವರು. ಡಾ. ಎ. ವಿ. ನರಸಿಂಹಮೂರ್ತಿಗಳು. ಅವರು ಹೇಳುವಂತೆ, ಯಾದವ ಮನೆತನದ ಒಂದು ಶಾಖೆಯೇ ಸೇವುಣ ಎಂಬ ಹೆಸರಿನಿಂದ ವಿಜಾಪುರ–ಧಾರವಾಡ ಸುತ್ತಲಿನ ಪ್ರದೇಶವನ್ನು ಆಳುತ್ತಿದ್ದಿರಬಹುದು. ಚಕ್ರವರ್ತಿಗಳ ಸಾಮೀಪ್ಯದಲ್ಲಿ ಏಳಿಗೆ ಕಾಣದೆ ಅವರು ಉತ್ತರ ದಿಕ್ಕಿನಲ್ಲಿ ಸ್ಥಳಾಂತರಗೊಂಡಿರಬಹುದು.

ಹೇಮಾದ್ರಿಯ ಗ್ರಂಥ ಕೆಳಗಿನ ಹೆಸರುಗಳನ್ನು ಮೊದಲಿನ ರಾಜರೆಂದು ನಮೂದಿಸುತ್ತದೆ.

೧. ದೃಢ ಪ್ರಹಾರ (ಸು. ೮೨೫–೮೦)
೨. ಸೇವುಣ ಚಂದ್ರ (ಸು. ೮೫೦–೭೫)
೩. ಭಿಲ್ಲಮ ೧ (ಸು. ೮೭೫–೯೦೦)
೪. ಧಡಿಯಪ್ಪ (೯೦೦ – ೯೨೫)
೫. ರಾಜುಗಿ (ಸು. ೯೨೫–೯೫೦)
೬. ವಡುಗಿ – ಅಥವಾ ವಡ್ಡಿಗ (ಸು. ೯೫೦ –೯೭೫)
೭. ಭಿಲ್ಲಮ ೨ (ಕಂಸಿನಲ್ಲಿ ಕೊಟ್ಟ ತಾರೀಖುಗಳು ಹೇಮಾದ್ರಿಯ ಗ್ರಂಥದಲ್ಲಿ ಬಂದುವಲ್ಲ).

ಕೊನೆಗೆ ಹೆಸರಿಸಿದ ೨ನೆಯ ಭಿಲ್ಲಮ ಈ ವಂಶದ ಮೊದಲನೆಯ ದಾಖಲೆಯಾದ ಸಂಗಮನೇರ ಶಿಲಾಲೇಖವನ್ನು ಬಿಟ್ಟು ಹೋಗಿದ್ದಾನೆ. ಇದು ಕ್ರಿ. ಶ. ಸುಮಾರು ೧೦೦೦ದ್ದು. ಕಲ್ಯಾಣ ಚಾಲುಕ್ಯ ವಂಶದ ೨ನೆಯ ತೈಲನ ಸಮಕಾಲೀನನಲ್ಲದೆ ೨ನೆಯ ಭಿಲ್ಲಮ ಪರಮಾರ ಮುಂಜನ ವಿರುದ್ಧ ತೈಲ ಮಾಡಿದ ಯುದ್ಧದಲ್ಲಿ ಸಹಾಯ ಕೂಡ ಮಾಡಿದ. ೨ನೆಯ ಭಿಲ್ಲಮನಿಗೆ 'ಮಹಾಸಾಮಂತ' ಎಂಬ ಬಿರುದು ಇತ್ತು. ಅವನ ಅನಂತರ ಅವನ ಪುತ್ರ ೧ನೆಯ ವೆಸುಗಿ ಪಟ್ಟಕ್ಕೆ ಬಂದ. ವೆಸುಗಿಯ ನಂತರ ಅರ್ಜುನನೆಂಬುವನೊಬ್ಬ ಪಟ್ಟಕ್ಕೆ ಬಂದ. ಅರ್ಜುನ ವೆಸುಗಿಗೆ ಏನಾಗಬೇಕು ಎಂಬುದು ಸ್ಪಷ್ಟವಾಗಿಲ್ಲ. ಅರ್ಜುನನ ಆಳ್ಕೆ ತೀರ ತುಸುಕಾಲದ ಅವಧಿಯದು. ಹೇಮಾದ್ರಿಯೊಬ್ಬನೆ ಅರ್ಜುನನ ಉಲ್ಲೇಖ ಮಾಡುತ್ತಾನೆ. ಡಾ. ರಿತ್ತಿಯವರ ಅಭಿಪ್ರಾಯವೆಂದರೆ ಶಿಲಾಲೇಖಗಳಾವುವೂ ಅರ್ಜುನನ ನಾಮ ನಿರ್ದೇಶ ಮಾಡುವುದಿಲ್ಲವಾದುದರಿಂದ ಅರ್ಜುನ ಕೇವಲ ರಾಜಪ್ರತಿನಿಧಿಯಾಗಿರಬೇಕು. ಸೇವುಣ ರಾಜನಾಗಿರಲಿಕ್ಕಿಲ್ಲ. ೩ನೆಯ ಭಿಲ್ಲಮ (ಸು. ೧೦೨೦–೫೨) ವೆಸುಗಿಯ ಮಗ. ಅವನ ರಾಜಧಾನಿಯ ಹೆಸರು ಸಂದಿನಗರ, ಅಂದರೆ ಈಗಿನ ನಾಸಿಕ ಜಿಲ್ಲೆಯ ಸಿನ್ನರ. ಪರಮಾರ ಭೋಜ ಮತ್ತು ಚಾಲುಕ್ಯ ೧ನೆಯ ಸೋಮೇಶ್ವರರ ನಡುವೆ ಕಾಳಗವಾದಾಗ ೩ನೆಯ ಭಿಲ್ಲಮ ಸೋಮೇಶ್ವರನ ಪಕ್ಷ ವಹಿಸಿ ಅವನು ಪಡೆದ ವಿಜಯಕ್ಕೆ ನೆರವಾದ. ೩ನೆಯ ಭಿಲ್ಲಮನ ತರುವಾಯ ೨ನೆಯ ವೆಡುಗಿ ಪಟ್ಟಕ್ಕೆ ಬಂದ. ಅನಂತರ ೨ನೆಯ ವೆಡುಗಿಯೂ, ಅವನ ಅವಂತರ ೪ನೆಯ ಭಿಲ್ಲಮನೂ (ಸು. ೧೦೬೮) ಪಟ್ಟವೇರಿದ್ದರು. ಈ ಕಾಲವನ್ನು 'ಗದ್ದುಗೆಗಾಗಿ ನಡೆದ ಯಾದವೀ ಕಲಹದ ಕಾಲ'ವೆಂದು ವರ್ಣಿಸಬಹುದು. ೨ನೆಯ ಸೇವುಣ ಚಂದ್ರ ೩ನೆಯ ಭಿಲ್ಲಮನ ಮೊಮ್ಮಗನೂ ೨ನೆಯ ವೆಡುಗಿಯ ಮಗನೂ ಎಂದು ತಿಳಿಯಲಾಗಿದೆ. ವೆಸುಗಿ ೨ನೆಯ ವಡ್ಡಿಗನ ತಮ್ಮ. ೨ನೆಯ ಸೇವುಣ ಚಂದ್ರ ೬ನೆಯ ಚಾಲುಕ್ಯ ವಿಕ್ರಮಾದಿತ್ಯ ತನ್ನ ಅಣ್ಣ ೨ನೆಯ ಸೋಮೇಶ್ವರನ ಜೊತೆ ಕಾಳಗ ಮಾಡಿದಾಗ ಅವನಿಗೆ ನೆರವಾದ. ೨ನೆಯ ಸೇವುಣ ಚಂದ್ರನ ತರುವಾಯ ಅವನ ಇಬ್ಬರು ಮಕ್ಕಳಾದ ಐರಮದೇವ (ಸು. ೧೦೮೫–೧೧೧೫) ಮತ್ತು ಸಿಂಗಣಿ (ಸು. ೧೧೧೫–೧೧೪೫) ರಾಜ್ಯವಾಳಿದರು. ಅನಂತರ ೧೧೪೫–೧೧೫೧ರಲ್ಲಿ ಸೇವುಣ ಮನೆತನದಲ್ಲಿ ಮತ್ತೆ ಪಟ್ಟಕ್ಕಾಗಿ ಅಂತಃಕಲಹ ನಡೆಯಿತು. ಶಾಸನ ಮತ್ತು ಸಾಹಿತ್ಯಕ ಆಧಾರದ ಮೇಲಿಂದ ಹಲವು ಅರಸರನ್ನು ಗುರುತಿಸಲಾಗಿದೆ. ಮುಂದೆ ೫ನೆಯ ಭಿಲ್ಲಮ ಮುಖ್ಯ ಸೇವುಣ ದೊರೆ. ಇವನು ೧೧೭೩ಕ್ಕೆ ಪಟ್ಟಕ್ಕೆ ಬಂದ.

## ೫ನೆಯ ಭಿಲ್ಲಮ

೫ನೆಯ ಭಿಲ್ಲಮನ ಆಗಮನದಿಂದ ಸೇವುಣ ವಂಶದ ಸಾಮ್ರಾಜ್ಯ ವಿಸ್ತಾರದ ಯುಗ ಪ್ರಾರಂಭವಾಯ್ತಿತು. ಅವನನ್ನು ಸೇವುಣ ವಂಶದ 'ನೈಜ ಸಂಸ್ಥಾಪಕ'ನೆಂದು ವರ್ಣಿಸಲಾಗಿದೆ. ಸೇವುಣ ವಂಶವನ್ನು ಪ್ರಮುಖ ರಾಜಮನೆತನವಾಗಿ ಮಾಡಿ ಅವರ ಪ್ರತಿಷ್ಠೆಗೆ ಗಟ್ಟಿ ತಳಹದಿ ನೀಡಿದವನು ಇವನೇ.

೧೧೭೩ರ ಶಾಸನ ಇವನನ್ನು ಕಲ್ಯಾಣದ ಕಳಚುರಿ ಸಂಕಮನ ಸಾಮಂತನೆಂದು ಕರೆದಿದೆ. ಬೇಗನೆ ಇವನು ತನ್ನ ಚಕ್ರಾಧಿಪ ಕಳಚೂರಿನ ಸೋವಿದೇವನನ್ನು ಸೋಲಿಸಿ, ತನ್ನ ಹೆಸರಿನಲ್ಲಿ ನಾಣ್ಯವನ್ನು ಚಲಾವಣೆಗೆ ತಂದ. ಅನಂತರ ಕಲ್ಯಾಣದ ಚಾಲುಕ್ಯರು ಕಳಚೂರಿ ರಾಜ್ಯಾಪಹಾರಿಗಳನ್ನು ಸೋಲಿಸಿ ಬಲ್ಯಾಢರಾದೊಡನೆ ಸೇವುಣರು ಕೆಲಕಾಲ ತೆಪ್ಪಗಿದ್ದರು. ಆದರೆ ಚಾಲುಕ್ಯರ ವಿಜಯ ಅಲ್ಪಕಾಲದ್ದು. ಚಾಲುಕ್ಯರ ರಾಜಧಾನಿ ಕಲ್ಯಾಣ ೫ನೆಯ ಭಿಲ್ಲಮನಿಗೆ ವಶವಾಯಿತು. (ಸು. ೧೧೮೬) ಇದ್ದ ಅಲ್ಪ ಕಾಲದಲ್ಲೇ ಸೇವುಣರು ಹೊಯ್ಸಳರ ಜೊತೆ ಕಾದಾಡಬೇಕಾಯಿತು. ೫ನೆಯ ಭಿಲ್ಲಮ ಉತ್ತರದಲ್ಲಿ ಗುಜರಾಥದ ಪರಮಾರ ಮತ್ತು ಚಾಲುಕ್ಯರ ಜೊತೆಗೆ ಹೋರಾಡಬೇಕಾಯಿತು. ಭಿಲ್ಲಮ ಪರಮಾರ ವಿಧ್ಯವರ್ಮನ್ ಹಾಗೂ ಚಾಲುಕ್ಯರ ೨ನೆಯ ಭೀಮ ಇವರನ್ನು ಸೋಲಿಸಿದುದಲ್ಲದೆ ರಾಜಸ್ಥಾನದ ಚಾಹಮಾನ್ ರಾಜ್ಯಕ್ಕೆ ಮುತ್ತಿಗೆ ಹಾಕಿದ. ಆದರೂ ಚಾಹಮಾಣರು ತಮ್ಮ ರಾಜ್ಯದ ಮೇಲೆ ಭಿಲ್ಲಮ ಮಾಡಿದ ದಾಳಿಯನ್ನು ತಡೆದರು.

ದಕ್ಷಿಣ ದೆಸೆಯಲ್ಲಿ, ಬೆಳ್ವೊಲದ (ಅಣ್ಣಿಗೇರಿ ಪ್ರದೇಶ) ಬಹು ಅಂಶ ಪ್ರದೇಶವನ್ನು ಗೆದ್ದುದಲ್ಲದೆ, ಹೊಯ್ಸಳರ ರಾಜ್ಯದಲ್ಲಿ ಆಳವಾಗಿ ದಂಡೆತ್ತಿ ಹೋದ. ಶ್ರೀರಂಗಪಟ್ಟಣ ಪ್ರದೇಶದವರೆಗೂ ಭಿಲ್ಲಮ ಹೋಗಿದ್ದನೆಂದೂ, ಇಂಗಳಗುಪ್ಪದ ಬಳಿಯ ಕದನದಲ್ಲಿ ೨ನೆಯ ಬಲ್ಲಾಳ ಅವನನ್ನು ಸೋಲಿಸಿದುದಾಗಿಯೂ ಆತನ ಒಂದು ದಾಖಲೆ ತಿಳಿಸುತ್ತದೆ. ಕೊನೆಯ ಶಕ್ತಿ ಪರೀಕ್ಷೆ ಗದಗಿನ ಬಳಿಯ ಸೊರಟೂರ ಕದನದಲ್ಲಿ ೧೧೯೧ರಲ್ಲಿ ಆಗಿ, ೨ನೆಯ ಭಿಲ್ಲಮನನ್ನು ಪೂರ್ಣವಾಗಿ

ಸೋಲಿಸಿದ. ತುಸು ಕಾಲದ ಮೇಲೆ ಭಿಲ್ಲಮ ಮರಣಹೊಂದಿದ (೧೧೯೨)

ಭಿಲ್ಲಮ ದೇವಗಿರಿಯಲ್ಲಿ (ಈಗಿನ ದೌಲತಾಬಾದ್) ಹೊಸ ರಾಜಧಾನಿಯನ್ನು ಕಟ್ಟಿಸಿದ. ಭಿಲ್ಲಮ ಸಮರ್ಥ ರಾಜ. ಸೇವುಣ ಅರಸೊತ್ತಿಗೆಯನ್ನು ಚಕ್ರಾಧಿಪತ್ಯವಾಗಿ ಮಾಡಿದ ಶ್ರೇಯಸ್ಸು ಅವನಿಗೆ ಸಲ್ಲಬೇಕು. ಅವನ ಸಾಮ್ರಾಜ್ಯ ಉತ್ತರಕ್ಕೆ ನರ್ಮದಾ ನದಿಯವರೆಗೂ ದಕ್ಷಿಣಕ್ಕೆ ಕೃಷ್ಣೆಯವರೆಗೂ ಬಿತ್ತರಿಸಿತ್ತು.

ಅವನ ಮರಣಾನಂತರ ಅವನ ಮಗ ಜೈತುಗಿ ೧೧೯೨ ರಲ್ಲಿ ಪಟ್ಟಕ್ಕೇರಿದ. (ಅವನಿಗೆ ಜೈತ್ರಪಾಲನೆಂದೂ ಪರ್ಯಾಯ ನಾಮಗಳುಂಟು). ಜೈತುಗಿ ಪರಮಾರ ಸುಭಟವರ್ಮನನ್ನು ಸೋಲಿಸಿದನಲ್ಲದೆ ಕಾಕತೀಯ ರುದ್ರನನ್ನೂ, ಮಹಾದೇವನನ್ನೂ ಕೊಂದ. ಓರಂಗಲ್ಲಿನಲ್ಲಿ ಕಾಕತೀಯ ಗಣಪತಿಗೆ ಪಟ್ಟಗಟ್ಟಿ 'ತ್ರೈಲಿಂಗ ರಾಜ್ಯಸಂಸ್ಥಾಪಕ'ನೆಂಬ ಬಿರುದನ್ನು ಧರಿಸಿದ. ಸುಪ್ರಸಿದ್ಧ ಗಣಿತ ಪಂಡಿತ ಭಾಸ್ಕರಾಚಾರ್ಯನ ಮಗ ಲಕ್ಷ್ಮೀಧರ ಜೈತುಗಿಯ ಮಂತ್ರಿ.

### ೨ನೆಯ ಸಿಂಘಣ

ಜೈತುಗಿಯ ಅನಂತರ ೧೧೯೯ರಲ್ಲಿ ಪಟ್ಟಕ್ಕೆ ಬಂದ ೨ನೆಯ ಸಿಂಘಣನು ಸೇವುಣ ರಾಜವಂಶದ ಮುಕುಟಮಣಿಯೆಂದು ಹೇಳಬಹುದು. ೧೨೪೭ ರವರೆಗೆ ದೀರ್ಘಾವಧಿ ಇವನ ಆಳ್ವಿಕೆ. ಪರಮಾರರ ಜೊತೆಗೆ ಹೋರಾಟವನ್ನು ಮುಂದುವರಿಸಿ ಸುಭಟವರ್ಮನನ್ನೂ ಅನಂತರ ಪಟ್ಟಕ್ಕೇರಿದ ಆತನ ಮಗ ಅರ್ಜುನವರ್ಮನನ್ನೂ ಇನ್ನೊಂದು ಯುದ್ಧದಲ್ಲೂ ಕೊಂದ. ಚಾಹಮಾನ ಸಿಂಹನೊಡನೆಯೂ ಇವನು ಕಾದಿದ. ಆರಂಭದಲ್ಲಿ ಇವನು ಸೋಲು ಅನುಭವಿಸಿದರೂ ಕೊನೆಗೊಮ್ಮೆ ಸಿಂಹನನ್ನು ಯುದ್ಧದಲ್ಲಿ ಕೊಂದ. ಸಿಂಘಣನ ಸೇನಾಪತಿ ಖೋಳೇಶ್ವರ ಗುಜರಾತದ ಸಮುದ್ರ ತೀರದ ಮೇಲಿರುವ ಭಡೋಚದಲ್ಲಿ ಜಯಸ್ತಂಭ ನಿಲ್ಲಿಸಿದನು.

ಸಿಂಘಣ ಗೋವೆಯ ಕದಂಬರನ್ನೂ, ಹಾನಗಲ್ಲಿನ ಕದಂಬರನ್ನೂ, ಕೊಲ್ಹಾಪುರದ ಶಿಲಾಹಾರರನ್ನೂ ಸೋಲಿಸಿದ. ಹೊಯ್ಸಳರೊಡನೆ ಸೆಣಸಾಟದಲ್ಲಿ ೧೨೧೩ರಲ್ಲಿ ಅವರ ಎರಡನೆಯ ರಾಜಧಾನಿ ಎಕ್ಕುಂಡಿಯನ್ನು ಗೆದ್ದುಕೊಂಡ. ದಕ್ಷಿಣದಲ್ಲಿ ತುಂಗಭದ್ರೆಯವರೆಗೂ ತನ್ನ ಆಧಿಪತ್ಯವನ್ನು ವಿಸ್ತರಿಸಿದ. ಹೊಯ್ಸಳ ೨ನೆಯ ನರಸಿಂಹ ತಮಿಳುನಾಡಿನಲ್ಲಿ ಆಸಕ್ತನಾಗಿದ್ದಾಗ ಉತ್ತರದ ಈ ಶತ್ರುವನ್ನು ಎದುರಿಸುವುದು ಅವನಿಂದ ಆಗಲಿಲ್ಲ. ಸಿಂಘಣ ತೆಲುಗು ಚೋಳರ ಜೊತೆಗೆ ಕಾದಾಡುವಾಗ ಚೋಳ ಟಿಕ್ಕನನಿಂದ ಆತನು ಸೋಲು ಅನುಭವಿಸಬೇಕಾಯಿತು. ಕಾಕತೀಯ ಮತ್ತು ಸೇವುಣರ ನಡುವೆ ಇದ್ದ ಮೈತ್ರಿ ಭಂಗವಾಗಿ ೧೨೩೧ರಲ್ಲಿ ಕಾಕತೀಯ ಗಣಪತಿ ೨ನೆಯ ಸಿಂಘಣನನ್ನು ಸೋಲಿಸಿದ. ಸಿಂಘಣನ ಕೊನೆಯದಿನಗಳಲ್ಲಿ ಕಾಕತೀಯರು ಮತ್ತೆ ಪ್ರಬಲರಾಗಿದ್ದರು.

ಆತನ ಆಳ್ವಿಕೆಯಲ್ಲಿ ಸೇವುಣ ಸಾಮ್ರಾಜ್ಯದ ವಿಸ್ತಾರ ಅತ್ಯಧಿಕಗೊಂಡು ಉತ್ತರಕ್ಕೆ ನರ್ಮದೆಯಿಂದ ದಕ್ಷಿಣಕ್ಕೆ ತುಂಗಭದ್ರೆಯವರೆಗೂ ಹಬ್ಬಿತು. ಪಶ್ಚಿಮದಲ್ಲಿ ಕೊಂಕಣ ಮತ್ತು ದಕ್ಷಿಣ ಗುಜರಾತ್ ಸಮುದ್ರ ತೀರದವರೆಗೂ ಅವರ ಸಾಮ್ರಾಜ್ಯ ಹಬ್ಬಿತ್ತು. ಡಾ. ನರಸಿಂಹಮೂರ್ತಿಗಳ ಮಾತಿನಲ್ಲಿ 'ದಕ್ಷಿಣ ಭಾರತದಲ್ಲಿ ಸೇವುಣ ವಂಶವನ್ನು ಗಣನೀಯ ಶಕ್ತಿಯಾಗಿ ಮಾಡಿದ ಶ್ರೇಯಸ್ಸು ಸಿಂಘಣನಿಗೆ ಸಲ್ಲಬೇಕು'. ವಿದ್ವಾಂಸರಿಗೆ ಸಿಂಘಣ ದೊಡ್ಡ ಆಶ್ರಯದಾತ. ಅವನ ಆಸ್ಥಾನದಲ್ಲಿ ಚಾಂಗದೇವನೂ ಕನ್ನಡ ಕವಿ ಕಮಲಭವನೂ ಇದ್ದರು. ಸಿಂಘಣನ ಅನಂತರ ಅವನ ಮೊಮ್ಮಗ ಕೃಷ್ಣ (ಅಥವಾ ಕನ್ನಡ) ಪಟ್ಟಕ್ಕೆ ಬಂದ. (ಮಗ ಜೈತುಗಿ ತಂದೆ ೨ನೆಯ ಸಿಂಘಣನ ಕಾಲದಲ್ಲೇ ಮಡಿದಿದ್ದ. ಕೃಷ್ಣ ಜೈತುಗಿಯ ಮಗ)

ಪಟ್ಟಕ್ಕೆ ಬಂದ ಅಲ್ಪಕಾಲದಲ್ಲೇ ಕೃಷ್ಣ ಮಾಳವಾದ ರಾಜನನ್ನು ಸೋಲಿಸಿದ. ಅನಂತರ ಗುಜರಾತಿನ ಅರಸು ವಿಶಾಲದೇವನನ್ನು ಸೋಲಿಸಿದ. ಬೆಳಗುಟ್ಟಿಯ ಸಿಂಧರ ರಾಜ್ಯ ಕೃಷ್ಣನ ಸಾಮ್ರಾಜ್ಯದಲ್ಲಿ ಸೇರ್ಪಡೆಯಾಯಿತು. ಕೃಷ್ಣನ ದಾಖಲೆಗಳು ಉತ್ತರದಲ್ಲಿ ಚಂದಾ – ಅಮರಾವತಿ ಜಿಲ್ಲೆಗಳವರೆಗೂ ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆಯವರೆಗೂ ಅಲ್ಲಲ್ಲಿ ಹರಡಿವೆ. ಅವನ ಆಸ್ಥಾನದಲ್ಲಿ ಅಮಲಾನಂದನೂ 'ಸೂಕ್ತಿಮುಕ್ತಾವಲಿ'ಯ ಕರ್ತ ಜಲ್ಹಣನೂ ಇದ್ದರು. ಕೃಷ್ಣನ ತರುವಾಯ ಅವನ ತಮ್ಮ ಮಹಾದೇವ ಪಟ್ಟಕ್ಕೆ ಬಂದ (೧೨೬೧). ಅವನು ಕೊಂಕಣದ ಶಿಲಾಹಾರರ ರಾಜ್ಯವನ್ನೂ ತನ್ನ ರಾಜ್ಯಕ್ಕೆ ಸೇರಿಸಿಕೊಂಡು ಕೊಂಕಣ ಚಕ್ರವರ್ತಿಯೆಂಬ ಬಿರುದು ತಳೆದ. ಹೊಯ್ಸಳರು ಅವನನ್ನು ೧೨೬೧ರಲ್ಲ ಸೋಲಿಸಿದರಾದರೂ ಅವನ ವಶದಲ್ಲಿದ್ದ ಚಿತ್ರದುರ್ಗ ಜಿಲ್ಲೆಗೇನೂ ಬಾಧೆ ಬರಲಿಲ್ಲ. ಅವನ ತರುವಾಯ ಅವನ ಮಗ ಅಮಣ ರಾಜನಾದ. ಆದರೆ ಅವನು ಕೃಷ್ಣನ ಮಗ ರಾಮಚಂದ್ರನಿಂದ ಸಿಂಹಾಸನದಿಂದ ತಳ್ಳಲ್ಪಟ್ಟ. ರಾಮಚಂದ್ರ ಮಾಳವದ ಅರಸರನ್ನು ಗುಜರಾತಿನ ವಾಕೇಲ ಅರ್ಜುನದೇವನನ್ನೂ ಸೋಲಿಸಿದ. ಬಳ್ಳಾರಿ ಜಿಲ್ಲೆಯ ಕುಮ್ಮಟದ ಅರಸು ಸಿಂಗೇಯನನ್ನೂ ಬಗ್ಗುಬಡಿದ. ಅವನ ಸೇನಾನಿ ಡಿಕ್ಕಿಗನು ೧೨೭೬ರಲ್ಲಿ ದ್ವಾರಸಮುದ್ರದ ಮೇಲೆ ದಾಳಿ ಮಾಡಿದ ಫಲವಾಗಿ ಹೊನಗುಂದದ ಸಂತಾರ ಆಳರಸ ಸೇವುಣರ ಸಾಮಂತನಾಗಬೇಕಾಯಿತು.

೧೨೯೬ರಲ್ಲಿ ದೇವಗಿರಿಗೆ ಲಗ್ಗೆಯಿಟ್ಟು ಭಾರಿ ಕೊಳ್ಳೆಹೊಡೆದ. ಆದರೂ ರಾಮಚಂದ್ರ ೩ನೆಯ ಹೊಯ್ಸಳ ಬಲ್ಲಾಳನ ಜೊತೆ ಎರಡು ಬಾರಿ ಸೆಣಸಾಡಿ (೧೩೦೧ ಮತ್ತು ೧೩೦೪ ರಲ್ಲಿ) ತಾನೇ ದುರ್ಬಲನಾದ. ಮಲಿಕ್ ಕಾಫರ್ ೧೩೦೭ರಲ್ಲಿ ದೇವಗಿರಿಯ ಮೇಲೆ ಧಾಳಿ ಮಾಡಿ ರಾಮಚಂದ್ರನನ್ನು ಸೆರೆಹಿಡಿದು ದಿಲ್ಲಿಗೆ ಒಯ್ದ. ಅನಂತರ ದಿಲ್ಲಿಯ ಸುಲ್ತಾನನ ಸಾಮಂತನಾಗಲು ಒಪ್ಪಿಕೊಂಡು ರಾಮಚಂದ್ರ ಬಿಡುಗಡೆಯಾದನು. ಮಲಿಕ್ ಕಾಫುರ್ ವರಂಗಲ್ ಮತ್ತು ದ್ವಾರಸಮುದ್ರದ ಮೇಲೆ ಧಾಳಿ ಮಾಡಿದಾಗ ರಾಮಚಂದ್ರ ಆತನಿಗೆ ನೆರವಾದ. ೧೩೧೨ರಲ್ಲಿ ರಾಮಚಂದ್ರ ಮರಣ ಹೊಂದಿದ. ಅವನ ಆಳ್ವಿಕೆಯಲ್ಲಿ ಸಂತ ಕವಿ ಜ್ಞಾನೇಶ್ವರ ತನ್ನ 'ಜ್ಞಾನೇಶ್ವರಿ' ಕಾವ್ಯವನ್ನು ಮರಾಠಿಯಲ್ಲಿ ರಚಿಸಿದ.

ರಾಮಚಂದ್ರನ ಮಗ ೩ನೆಯ ಸಿಂಘಣ ಕೆಲವು ಕಾಲ ರಾಜ್ಯವಾಳಿದ. ಅನಂತರ ದಿಲ್ಲಿ ಸುಲ್ತಾನನ ಆಧಿಪತ್ಯದಿಂದ ಸ್ವತಂತ್ರನಾಗಲು ಯತ್ನಿಸಿದಾಗ ಮಲಿಕ್ ಕಾಫುರ್ ಅವನನ್ನು ಕೊಲ್ಲಿಸಿದ (೧೩೧೩). ರಾಮಚಂದ್ರನ ಅಳಿಯ ಹರಪಾಲದೇವ ಸೇವುಣ ರಾಜವಂಶದ ಪುನರುತ್ಥಾಪನೆಗೆ ಯತ್ನಿಸಿದ. ಆದರೆ ದಿಲ್ಲಿಯ ಸುಲ್ತಾನನ ಜೊತೆ ಸೆಣಸಾಡುವಾಗ ಯುದ್ಧದಲ್ಲಿ ಕೊಲ್ಲಲ್ಪಟ್ಟ (೧೩೧೮). ಅನಂತರ ದೊರಕುವ ದಾಖಲೆಯೆಂದರೆ, ದಿಲ್ಲಿ ಸುಲ್ತಾನನ ಸಾಮಂತನಾಗಿ ೩ನೆಯ ಮಲ್ಲುಗಿ (೩ನೆಯ ಸಿಂಘಣನ ಮಗ) ೧೩೩೪ರಲ್ಲಿ ಆಳುತ್ತಿದ್ದನೆಂದು. ಇದೇ ಸೇವುಣ ವಂಶದ ಕೊನೆಯ ದಾಖಲೆ.

### ಆಡಳಿತ ವ್ಯವಸ್ಥೆ

ಒಂದು ಕಾಲಕ್ಕೆ ರಾಷ್ಟ್ರಕೂಟರ ಮತ್ತು ಕಲ್ಯಾಣ ಚಾಲುಕ್ಯರ ಮಾಂಡಲಿಕರಾದ ಸೇವುಣರು ತಮ್ಮ ಮೊದಲಿನ ಚಕ್ರಾಧಿ

ಪತಿಗಳ ಆಡಳಿತ ಪರಂಪರೆಯನ್ನೇ ಮುಂದುವರಿಸಿದರು. ಸೇವುಣ ಆಳರಸರು ದೊಡ್ಡ ಮಂತ್ರಿಮಂಡಲವನ್ನು ಇಟ್ಟುಕೊಳ್ಳುತ್ತಿದ್ದರು. ಅನೇಕ ಮಂತ್ರಿಗಳ ಸ್ಥಾನಮಾನ ಆನುವಂಶಿಕವಾದದ್ದುಂಟು. ಉದಾ. ಲಕ್ಷ್ಮೀಧರ ಮತ್ತು ಅವನ ಮಗ ಚಾಂಗದೇವ. ಡಾ. ಅಳಲೇಕರರ ಅಭಿಪ್ರಾಯದ ಪ್ರಕಾರ ಮಹಾಮಾತ್ಯ ಹಣಕಾಸಿನ ಮಂತ್ರಿ. ಸಂಧಿ ವಿಗ್ರಹಿ ಅಥವಾ ವಿದೇಶ ಮಂತ್ರಿ, ಕೋಶಾಧಿಕಾರಿ ಅಂದರೆ ಮುಖ್ಯ ಬೊಕ್ಕಸ ಪಾಲಕ ಇವರು ಮಂತ್ರಿಮಂಡಲದಲ್ಲಿ ಮುಖ್ಯರು. ಅಲ್ಲದೆ ಹಿರಿಯ ಅಧಿಕಾರಿಗಳಾದ ಬಾಹತ್ತರ ನಿಯೋಗಾಧಿಪತಿ (೭೨ ಖಾತೆಗಳ ನಿಯಂತ್ರಕರು), ಸರ್ವಾಧಿಕಾರಿ (ಕದಾಚಿತ್ ಆಡಳಿತ ಅಧ್ಯಕ್ಷ), ಶ್ರೀ ಕರಾಣಧಿಪ (ಬಹುಶಃ ಲೆಕ್ಕ ಅಧಿಕಾರಿ), ರಾಜ್ಯಾಧ್ಯಕ್ಷ (ಅಥವಾ ಮುಖ್ಯ ನ್ಯಾಯಾಧೀಶ) ಇಂಥವರಿಗೆ ಮಂತ್ರಿಮಂಡಲದ ಹುದ್ದೆ ಇದ್ದಿರಬಹುದು. ಹೇಮಾದ್ರಿಯಂಥ ವಿದ್ವಾಂಸ ಶ್ರೀ ಕರಣಾಧಿಪತಿ ಸ್ಥಾನದಲ್ಲಿ ಇದ್ದ. ಅಧಿಕಾರಿಗಳ ಹುದ್ದೆ ಅವರ ಅರ್ಹತೆಯಂತೆ ನಿರ್ಣೀತವಾಗುತ್ತಿತ್ತು. ಕೆಲವು ಆನುವಂಶಿಕ. ಎಲ್ಲ ಜಾತಿಯ ಜನರು ಶೂದ್ರರಿಂದ ಮೊದಲ್ಗೊಂಡು ಬೇರೆ ಬೇರೆ ಹುದ್ದೆಗಳಿಗೆ ಆಯ್ಕೆಯಾದುದು ಕಂಡು ಬರುತ್ತದೆ.

ರಾಜ್ಯವನ್ನು ವಿವಿಧ 'ವಿಷಯ'ಗಳಾಗಿ ವಿಭಾಗಿಸಲಾಗಿತ್ತು. ಡಾ. ನರಸಿಂಹ ಮೂರ್ತಿಯವರ ಅಭಿಪ್ರಾಯದಂತೆ ಸೇವುಣರ ರಾಜ್ಯ ಎಂಟು ವಿಷಯಗಳಾಗಿ ವಿಭಾಗಗೊಂಡಿತ್ತು. ಅವುಗಳಲ್ಲಿ ಕುಂತಳ, ದರ್ತವಾರಿ, ಬನವಾಸಿ, ಕರ್ನಾಟ ಮತ್ತು ನಲವಾಡಿ ಇವೂ ಸೇರಿದ್ದವು. ಸವದತ್ತಿಯ ರಟ್ಟರು, ಯದಂಬರಿಗೆಯ ಸಿಂಧರು, ಮೊರಟ ಮುನ್ನೂರ್ದ ಹೈಹಯರು, ಇಂಥ ಮಹಾಮಂಡಲೇಶ್ವರರು (ಅಂದರೆ ಮಾಂಡಲಿಕರು) ಆನುವಂಶಿಕ ಆಳ್ವಿಕೆ ನಡೆಸಬಹುದಾಗಿತ್ತು. ಅವರ ರಾಜಧಾನಿಯಲ್ಲಿ ಸಾಮ್ರಾಜ್ಯವನ್ನು ಪ್ರತಿನಿಧಿಸುವ 'ಮಹಾಪ್ರಧಾನ' ಎಂಬ ಹುದ್ದೆಯ ಅಧಿಕಾರಿ ಇರುತ್ತಿದ್ದ.

ವಿಷಯಗಳ ಸಣ್ಣ ವಿಭಾಗಗಳೆಂದರೆ ನಾಡುಗಳು. ಇವು ದೊಡ್ಡವು. ಸುಮಾರು ೧೦೦೦ ಗ್ರಾಮಗಳನ್ನು ಒಳಗೊಂಡಿರಬಹುದು. ಇಂಥ ವಿಭಾಗಗಳ ಆಡಳಿತ ನಡೆಸಲು ನಾಡಗೌಡ ಇಲ್ಲವೆ ನಾಡಹೆಗ್ಗಡೆ ಎಂಬ ಅಧಿಕಾರಿಗಳಿದ್ದರು. ತೆರಿಗೆ ಎತ್ತುತ್ತಿದ್ದರು. ನಾಡುಗಳಿಗೆ ಅವರದೇ ಆದ 'ನಾಡು' ಅಥವಾ 'ಮಹಾನಾಡು' ಎಂಬ ಹೆಸರಿನ ಸಾರ್ವಜನಿಕ ಸಂಸ್ಥೆಗಳಿದ್ದವು. 'ಮಹಾನಾಡು' ವ್ಯಾಪಾರಸ್ಥರ ಸಂಸ್ಥೆ. ಅಲ್ಲದೆ ಸಣ್ಣ ಘಟಕಗಳಾದ ನಾಡುಗಳೂ ಇದ್ದವು. ಉದಾ. ಮೂಸವಾಡಿ-೧೪೦ (೧೪೦ ಹಳ್ಳಿಗಳು), ಮೊದಲ ಮುನ್ನೂರ (೩೦೦ ಹಳ್ಳಿಗಳು) ಪಟ್ಟಣಗಳ ಅಧಿಕಾರಿ ಪಟ್ಟಣಸ್ವಾಮಿ. ಅಲ್ಲದೆ ನಾಕರ ಅಥವಾ ನಾಗರ ಎಂಬ ಪೌರಸಂಸ್ಥೆಗಳಿದ್ದವು. ಪಟ್ಟಣಗಳಲ್ಲಿ ಮುಮ್ಮುರಿದಂಡ, ಸೆಟ್ಟಿಗುಟ್ಟ, ನಾನಾದೇಸಿ ಎಂಬ ಹೆಸರಿನ ವ್ಯಾಪಾರಸ್ಥರ ಸಂಸ್ಥೆಗಳಿದ್ದವು.

ಹಳ್ಳಿಗಳ ಆಡಳಿತ ನೋಡಿಕೊಳ್ಳಲು ಗೌಂಡ, ಪ್ರಭು ಅದೂ ಹೆಗ್ಗಡೆ ಎಂಬ ಅಧಿಕಾರಿಗಳಿದ್ದರು. ದೊಡ್ಡ ಹಳ್ಳಿಗಳಿಗೆ ಒಂದಕ್ಕೂ ಹೆಚ್ಚು ಮಂದಿ ಗೌಂಡರಿರುತ್ತಿದ್ದರು. ಅಗ್ರಹಾರ ಹಳ್ಳಿಯ ಮುಖ್ಯಸ್ಥನಿಗೆ ಊರೊಡೆಯ ಎನ್ನುತ್ತಿದ್ದರು. ಪ್ರತಿ ಹಳ್ಳಿಗೂ ಪ್ರಮುಖ ಕುಟುಂಬಗಳ ಮುಖ್ಯಸ್ಥರ ಸಂಸ್ಥೆಯಿದ್ದು ಇದಕ್ಕೆ ಒಕ್ಕಲು ಎನ್ನುತ್ತಿದ್ದರು. ಉದಾ. ಐವತ್ತೊಕ್ಕಲು ಅಥವಾ ಅರವತ್ತೊಕ್ಕಲು ಇತ್ಯಾದಿ.

ಭೂಕಂದಾಯ ನಿಸ್ಸಂಶಯವಾಗಿ ರಾಜಬೊಕ್ಕಸದ ಮುಖ್ಯ ಉತ್ಪನ್ನ. ಭೂ ಘಟಕಗಳಾದ ಮತ್ತರು, ನಿವರ್ತನ, ಕಮ್ಮ ಮುಂತಾದ ಹೆಸರುಗಳು ದಾಖಲೆಗಳಲ್ಲಿವೆ. ಉದ್ಯೋಗದ ಮೇಲೂ ಬಂದು ಹೋಗುವ ವಸ್ತುಗಳ ಮೇಲೆಯೂ ಕರಾಕರಣೆ ಇತ್ತು. ಚಾಲ್ತಿ ನಾಣ್ಯಗಳಾದ ನಿಷ್ಕ, ಚೌಲ, ಹಾಗ ಮತ್ತು ಕಾಣಿಗಳನ್ನು ದಾಖಲೆಗಳಲ್ಲಿ ನಮೂದಿಸಲಾಗಿದೆ. ಖಾಸಗಿ ವ್ಯಕ್ತಿಗಳು ಕೂಡ ಟಂಕೆ ಎಂಬ ಕರ ನೀಡಿ ತಮ್ಮದೇ ಆದ ನಾಣ್ಯಗಳನ್ನು ಚಲಾವಣೆಗೆ ತರುವ ಪದ್ಧತಿಯಿತ್ತು. ಈ ಕಾಲದಲ್ಲಿ ವೀರಶೈವ ಮಹಾನುಭಾವ ಪಂಥಗಳು ಹೊಸದಾಗಿ ಉದಯವಾದವು.

ಸೇವುಣರ ಆಸ್ಥಾನ ಕವಿ ಕಮಲಭವ ಕನ್ನಡದಲ್ಲಿ ಶಾಂತೀಶ್ವರ ಪುರಾಣವೆಂಬ ಜೈನ ಗ್ರಂಥ ಬರೆದ. ಅಚ್ಚಣ ವರ್ಧಮಾನ ಪುರಾಣ ರಚಿಸಿದ. ಸೇವುಣ ರಾಜ್ಯದಲ್ಲಿ ವೀರಶೈವ ಧರ್ಮ ಉಕ್ಕೇರಿತು. ಕನ್ನಡ ಸಾಹಿತ್ಯಕ ಚಟುವಟಿಕೆ ವಚನ ಸಾಹಿತ್ಯ ರೂಪದಲ್ಲಿ ಇದೇ ಕಾಲದ ಚಾಲುಕ್ಯ ರಾಜ್ಯದಲ್ಲಿ ಪ್ರಾರಂಭವಾಯಿತು. ಅಮುಗದೇವನೆಂಬ ವಚನಕಾರ ೨ನೆಯ ಸಂಕಣನ ಸಮಕಾಲೀನ.

ಸೇವುಣ ವಾಸ್ತುಶಿಲ್ಪ ಚಾಲುಕ್ಯರ, ಹೊಯ್ಸಳರ ಮತ್ತು ಮಧ್ಯಭಾರತದ ಸೋಳಂಕಿಯವರವಕ್ಕೆ ಸಮಕಾಲೀನವಾದಂಥವು. ಅಂಬರನಾಥ ಬಲವಣಿ, ಸಿನ್ನಾರ್, ಸೇಡಗಾಂವ, ಸತಗಾಂವ ಲೋಣಾರ್ (ಎಲ್ಲ ಸದ್ಯದ ಮಹಾರಾಷ್ಟ್ರದಲ್ಲಿ ಇವೆ.) ಇಂಥಲ್ಲಿ ಸಿಕ್ಕುವ ದೇಗುಲಗಳು ಇದೇ ಕಾಲದವು: ಇವರ ದೇಗುಲಗಳು ಕಲ್ಯಾಣದ ಚಾಲುಕ್ಯರ ದೇಗುಲಗಳಂತೆ ಏಕಶಿಲಾಸ್ತಂಭಗಳಿಂದ ಕೂಡಿದವು, ಚಿಕ್ಕವು. ಅವರ ಕೆಲವು ಗುಡಿಗಳಲ್ಲಿ ಉತ್ತರಕ್ಕೆ ಶಿಖರಗಳಿದ್ದು ಅವುಗಳ ಮೇಲೆ ಎದ್ದು ತೋರುವ ಸುಳಿವು ಪಟ್ಟಿಗಳು ಉದಗ್ರವಾಗಿರುತ್ತವೆ. ಇವುಗಳ ಹೊರಗೋಡೆಗಳು ತೀರ ಸಾದಾ ಇರುತ್ತವೆ. ಈ ವರ್ಗಕ್ಕೆ ಸೇರಿದ ಗುಡಿಗಳ ಉತ್ತಮ ಉದಾಹರಣೆಗಳೆಂದರೆ ಬೀದರ ಜಿಲ್ಲೆಯಲ್ಲಿರುವ ನೀಲಾಂಗ ದೇವಸ್ಥಾನ ಮತ್ತು ನಾಗಪುರದ ಬಳಿಯ ರಾಮಟೇಕ್ ಗುಡಿ.

**ಕನ್ನಡ ಅನುವಾದ : ಶಂಕರ ಮೊಕಾಶಿ ಪುಣೇಕರ್**

# ವಿಜಯನಗರ ಕಾಲದ ಇತಿಹಾಸ

ಡಾ. ಕೆ. ಜಿ. ವಸಂತ ಮಾಧವ

ಕರ್ನಾಟಕ ಇತಿಹಾಸದ ವಿಜಯನಗರ ಅಧ್ಯಾಯವು ಹೆಚ್ಚಿನ ಇತಿಹಾಸ ವಿದ್ಯಾರ್ಥಿಗಳ ಗಮನ ಸೆಳೆದಿದೆ. ಇದಕ್ಕೆ ಮುಖ್ಯ ಕಾರಣ ವಿಜಯನಗರ ಇತಿಹಾಸದಲ್ಲಿ ನಡೆದ ಸಂಶೋಧನ ಮತ್ತು ಈ ವಿಚಾರ ಅಧ್ಯಯನ ನಡೆಸಲು ಸಿಗುವ ವಿವಿಧ ರೀತಿಯ ವಿಪುಳ ಐತಿಹಾಸಿಕ ಮೂಲಾಕರಗಳು. ವಿದ್ವಾಂಸರುಗಳಾದ ದಿ. ಡಾ. ಭಾಸ್ಕರ ಆನಂದ ಸಾಲೆತ್ತೂರ್, ದಿ. ಫಾದರ್‌ಹೆರಾಸ್, ದಿ. ನೀಲಕಂಠ ಶಾಸ್ತ್ರಿ, ಡಾ. ಮಹಾಲಿಂಗಂ, ವಾಲ್ಟರ್ ಸ್ಪಿಂಕ್, ಡಾ. ಬಿ. ಎಸ್. ಶಾಸ್ತ್ರಿ, ಬರ್ಟನ್ ಸ್ಟೀನ್ ಮತ್ತು ಡಾ. ಬಿ. ಆರ್. ಗೋಪಾಲರು ವಿಜಯನಗರ ಇತಿಹಾಸದಲ್ಲಿ ಸಂಶೋಧನೆ ನಡೆಸಿ, ಅದನ್ನು ಶ್ರೀಮಂತಗೊಳಿಸಿದ್ದಾರೆ. ಇತಿಹಾಸ ಆಕರಗಳಾದ ಶಾಸನಗಳೂ, ಸಾಹಿತ್ಯ ಗ್ರಂಥಗಳೂ, ಸಾವಿರಾರು ನಾಣ್ಯಗಳೂ, ಪರದೇಶೀಯ ಪ್ರವಾಸಿಗಳ ವರದಿಗಳೂ, ಪರ್ಶಿಯನ್, ಪೋರ್ತುಗೀಸ ದಾಖಲೆಗಳೂ ವಿಜಯನಗರ ಇತಿಹಾಸದ ಹಲವಾರು ಮುಖಗಳನ್ನು ಇತಿಹಾಸ ಅಧ್ಯಯನ ನಡೆಸಲು ತೋರಿಸಿಕೊಟ್ಟಿವೆ. ತುಂಗಭದ್ರಾ ನದಿಯ ದಕ್ಷಿಣಕ್ಕಿರುವ ಸಮಗ್ರ ದಕ್ಷಿಣ ಭಾರತ ವಿಜಯನಗರ ಸಾಮ್ರಾಜ್ಯವಾಗಿದ್ದು, ಕನ್ನಡೇತರ ಪ್ರದೇಶಗಳು ಈ ಸಾಮ್ರಾಜ್ಯದಲ್ಲಿ ಅಡಕವಾಗಿದ್ದುವು. ಇದರಿಂದಾಗಿ, ಕನ್ನಡೇತರ ಪ್ರದೇಶಗಳ ಪ್ರಭಾವ ಕನ್ನಡಿಗರ ಮೇಲೂ, ಕನ್ನಡ ಸಂಸ್ಕೃತಿ ಕನ್ನಡೇತರ ಪ್ರದೇಶಗಳಲ್ಲೂ ಬೆಳೆದು ಬಂತು. ಇದರಿಂದಾಗಿಯೇ ವಿಜಯನಗರ ಇತಿಹಾಸವನ್ನು ದಕ್ಷಿಣ ಭಾರತ ಸಂಸ್ಕೃತಿಯ ಏಕೀಕರಣ (ಸಿಂಥೆಸಿಸ್ ಆಫ್ ಸೌತ್ ಇಂಡಿಯನ್ ಕಲ್ಚರ್) ಎಂದು ಇತಿಹಾಸಗಾರರು ಬಣ್ಣಿಸಿದರು.

ವಿಜಯನಗರ ಇತಿಹಾಸ ಅಧ್ಯಯನಕ್ಕೆ ವಿಪುಳ ಐತಿಹಾಸಿಕ ಮೂಲ ಸಾಮಾಗ್ರಿಗಳಿದ್ದರೂ ಈ ಅಧ್ಯಾಯದಲ್ಲಿ ಹಲವಾರು ಕ್ಲಿಷ್ಟ ಸಮಸ್ಯೆಗಳು ಉಳಿದು ಕೊಂಡಿವೆ. ಅವುಗಳಲ್ಲಿ ಮುಖ್ಯವಾಗಿ ವಿಜಯನಗರ ಸ್ಥಾಪಕರು ಕನ್ನಡಿಗರೇ ಅಥವಾ ತೆಲುಗರೇ ಎಂದು, ವಿದ್ಯಾರಣ್ಯರ ಪಾತ್ರ ಮತ್ತು ವಿಜಯನಗರ ಸ್ಥಾಪನೆಯ ಕಾಲದಲ್ಲೂ ಹಲವಾರು ಅಭಿಪ್ರಾಯಗಳಿವೆ. ಮೊದಲನೆಯ ಸಮಸ್ಯೆ ಭಾಷಾರಾಜ್ಯ ಚಳವಳಿಯ ಕಾಲದಲ್ಲಿ (೧೯೨೭–೧೯೫೬) ಹೆಚ್ಚಿನ ಪ್ರಾಮುಖ್ಯತೆ ಗಳಿಸಿತು. ಕೆಲವು ತೆಲುಗು ಸಾಹಿತ್ಯ ಮತ್ತು ಹೇರಳ ಕನ್ನಡ ಶಾಸನಗಳ ವಿಮರ್ಶಾತ್ಮಕ ಅಧ್ಯಯನದ ಫಲವಾಗಿ ವಿಜಯನಗರ ಸ್ಥಾಪಕರಾದ ಹರಿಹರ ಬುಕ್ಕರು ಕನ್ನಡಿಗರೆಂದು ತಿಳಿದು ಬರುತ್ತದೆ. ಹರಿಹರ ಹಾಗೂ ಅವನ ಸಹೋದರರು ಹೊಯ್ಸಳ ಸೇನಾನಿಗಳಾಗಿದ್ದು ಮುಂದೆ ಸ್ವತಂತ್ರ ಸಾಮ್ರಾಜ್ಯ ಕಟ್ಟಿದರೆಂಬ ಕನ್ನಡ ಮೂಲ ವಾದಕ್ಕೆ ಈಗ ಹೆಚ್ಚು ಆಧಾರಗಳು ಸಿಕ್ಕಿವೆ. ಆದರೂ ವಿಜಯನಗರದ ರಾಜಕೀಯ ಇತಿಹಾಸ ತೆಲುಗು ನಾಯಕರ ಸೈನಿಕ ಪರಾಕ್ರಮ ಮತ್ತು ಅವರ ವೈಭವವೇ ಆಗಿದೆ ಎಂದು ಡಾ. ಸ್ಪೀನ್ ಹೇಳಿದ ಅಭಿಪ್ರಾಯವು ಗಮನಾರ್ಹವಾಗಿದೆ.

ವಿದ್ಯಾರಣ್ಯರ ಪಾತ್ರವನ್ನು ಕೆಲವು ಇತಿಹಾಸಗಾರರು ಪ್ರಶ್ನಿಸಿದರೂ ಇವರ ಜೀವನ ಚರಿತ್ರೆ, ಇವರಿಗೂ ಬುಕ್ಕನಿಗೂ ಇರುವ ನಿಕಟ ಸಂಪರ್ಕ ಮತ್ತು ಕೆಲವು ಶಾಸನಗಳಲ್ಲಿ ವಿಜಯನಗರವನ್ನು ವಿದ್ಯಾನಗರ ಎಂದು ಉಲ್ಲೇಖಿಸಿದ್ದು ಇತ್ಯಾದಿಗಳನ್ನು ವಿಮರ್ಶಿಸಿದಾಗ ವಿಜಯನಗರ ಸ್ಥಾಪನೆಯ ಕಾಲದಲ್ಲಿ ವಿದ್ಯಾರಣ್ಯರು ಸ್ಫೂರ್ತಿದಾಯಕ ಶಕ್ತಿಯಾಗಿದ್ದರೆಂಬುದು ಅಸಾಧ್ಯವೆಂದು ಹೇಳುವ ಹಾಗಿಲ್ಲ.

ಇನ್ನು ವಿಜಯನಗರ ಸಾಮ್ರಾಜ್ಯ ೧೩೩೬ರ ಬದಲು ೧೩೪೬ರಲ್ಲಿ ಸ್ಥಾಪನೆಯಾಯಿತೆಂದು ಕೆಲವು ಇತಿಹಾಸಕಾರರು ವಾದಿಸಿದ್ದಾರೆ. ಈ ವಾದವನ್ನು ಒಪ್ಪಿಕೊಳ್ಳುವಾಗ ಒಂದು ವಿಷಯವನ್ನು ಗಮನದಲ್ಲಿ ಇಡಬೇಕು. ಅದೇನೆಂದರೆ ಕ್ರಿ. ಶ. ೧೩೩೬ರಿಂದ ೪೬ರ ವರೆಗಿನ ಕಾಲದಲ್ಲಿ ಹರಿಹರನು ಮಹಾಮಂಡಲೇಶ್ವರನೆಂದು ಸಾರಿಕೊಂಡು ಬಾರಕೂರು ಮತ್ತು ಬಾದಾಮಿ ಸ್ಥಳಗಳಲ್ಲಿ ಕೋಟೆಕಟ್ಟಿಕೊಂಡು ಗುತ್ತಿ, ಚಂದ್ರಗಿರಿ ಪ್ರದೇಶಗಳನ್ನು ಆಳಿಕೊಂಡು ಹೊನ್ನಾವರದ ಸುಲ್ತಾನನಿಂದ ಕಪ್ಪವನ್ನು ತೆಗೆದು ಕೊಂಡು ಮತ್ತು ಶೃಂಗೇರಿ ಮಠವ ಗುರುಗಳೊಡನೆ ನಿಕಟ ಸಂಪರ್ಕವನ್ನಿಟ್ಟು ಕೊಂಡಿದ್ದನೆಂದು ಸಮಕಾಲೀನ ದಾಖಲೆಗಳು ತಿಳಿಸುತ್ತವೆ. ಈ ದಾಖಲೆಗಳ ಅಧ್ಯಯನದಿಂದಾಗಿ ವಿಜಯನಗರ ಸಾಮ್ರಾಜ್ಯ ೧೩೩೬ರಿಂದ ಆರಂಭವಾಗಿ ೧೩೪೬ರಲ್ಲಿ ಪರಿಪೂರ್ಣತೆಯನ್ನು ಪಡೆಯಿತೆಂದು ಹೇಳಬಹುದು. ಉತ್ತರ ಭಾರತದ ಮುಸ್ಲಿಂ ರಾಜಕೀಯ ಶಕ್ತಿಯ ಪ್ರತಿಕ್ರಿಯೆಯಾಗಿ ಉದಯಿಸಿದ ವಿಜಯನಗರ ಸಾಮ್ರಾಜ್ಯದ ಉದ್ದೇಶ ಹಿಂದೂಧರ್ಮದ ಸಂರಕ್ಷಣೆಯಾಗಿತ್ತು. ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವಾದ ಸರ್ವಧರ್ಮ ಸಮನ್ವಯದಲ್ಲಿ ನಂಬುಗೆಯಿಟ್ಟು ಹಿಂದೂ ಧರ್ಮವನ್ನು ರಕ್ಷಿಸಲು ಯತ್ನಿಸಿದರು ವಿಜಯನಗರದ ಅರಸರು. ಹಿಂದೂ ಧರ್ಮದ ಶ್ರೇಷ್ಠತೆ ಮತ್ತು ಉದಾತ್ತಧ್ಯೇಯಗಳನ್ನು ಎತ್ತಿಹಿಡಿಯಲು ಪ್ರಯತ್ನಿಸಿತು ವಿಜಯನಗರ ಸಾಮ್ರಾಜ್ಯ. ಆದರೆ ಹಿಂದೂ ಧರ್ಮದ ವಿಸ್ತಾರ, ಮತ್ತು ಹೊಸ ವಿಷಯಗಳನ್ನೊಳಗೊಂಡು ಈ ಧರ್ಮದ ಬೆಳವಣಿಗೆಯಾಗಲಿಲ್ಲವೆಂದು ಇತಿಹಾಸಗಾರರು ಒಪ್ಪಿಕೊಳ್ಳಬೇಕು. ಒಟ್ಟಿನಲ್ಲಿ ವಿಜಯನಗರದ ಅರಸರು ಹಿಂದೂ ಸಂಪ್ರದಾಯ ಪದ್ಧತಿಗಳನ್ನು ಮುಂದುವರಿ

ಕೊಂಡು ಹೋದರಲ್ಲದೆ ಯಾವ ರೀತಿಯಲ್ಲೂ ಹಿಂದೂ ಧರ್ಮ ಪುರೋಭಿವೃದ್ಧಿಯ ಕಡೆಗೆ ನಡೆಯಲಿಲ್ಲ.

**ರಾಜಕೀಯ ಇತಿಹಾಸ**

ಕ್ರಿ. ಶ. ೧೩೩೬ರಿಂದ ೧೫೬೫ರ ವರೆಗಿನ ಕಾಲ ವಿಜಯನಗರದ ವೈಭವದ ಕಾಲ ಎನ್ನಬಹುದು. ಕ್ರಿ. ಶ ೧೫೬೫ರಿಂದ ೧೬೩೬ರ ವರೆಗೆ ವಿಜಯನಗರ ಅರಸರ ಇಳಿಮುಖಿ ಕಾಲ. ಈ ಸಾಮ್ರಾಜ್ಯದ ವೈಭವ ಕಾಲದಲ್ಲಿ ಮೂರು ಪ್ರತ್ಯೇಕ ಮತ್ತು ಯಾವ ರೀತಿಯ ರಕ್ತ ಸಂಬಂಧವಿಲ್ಲದ ಸಂಗಮ, ಸಾಳುವ, ತುಳುವ ಅರಸು ಮನೆತನಗಳು ಆಳಿ ಮೆರೆದವು. ಸಂಗಮ ವಂಶದವರು ಕನ್ನಡಿಗರಾಗಿದ್ದರೆ, ಸಾಳುವ ಮತ್ತು ತುಳುವ ಅರಸು ಮನೆತನದವರು ಆಂಧ್ರ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿದ್ದರು. ಸಂಗಮ ವಂಶ ವಿಜಯನಗರ ಸಾಮ್ರಾಜ್ಯದ ಬುನಾದಿಯನ್ನು ಹಾಕಿತು. ಈ ಸಾಮ್ರಾಜ್ಯವು ತುಂಗಭದ್ರಾ ನದಿಯ ಉತ್ತರದಲ್ಲಿರುವ ಬಹ್ಮನಿಯ ಅರಸರೊಡನೆ ಅನಿರ್ಧಾತ್ಮಕ ಯುದ್ಧ (ಇನ್‌ಕನ್‌ಕ್ಲೂಸಿವ್) ದಲ್ಲಿ ನಿರತರಾಗಿದ್ದರು. ತುಂಗಾ, ಕೃಷ್ಣಾನದಿಯ ಪ್ರದೇಶ (ರಾಯಚೂರು ದೊಆಬ) ಮುದಗಲ್‌ಕೋಟೆ, ಬಂಕಾಪುರಗಳನ್ನು ಹಿಡಿತದಲ್ಲಿಟ್ಟು ಕೊಳ್ಳುವ ಉದ್ದೇಶದಿಂದ ಬಹ್ಮನಿ ಮತ್ತು ವಿಜಯನಗರದ ಅರಸರು ಅವಿರತವಾಗಿ ಹೋರಾಡಿದರು. ಈ ಪ್ರದೇಶಗಳ ಆಯಕಟ್ಟಿನ ಸ್ಥಾನಗಳ ಪ್ರಾಮುಖ್ಯತೆಯನ್ನು ತಿಳಿದು ಈ ಅರಸರು ಹೋರಾಡಿದ್ದರೆಂದು ನಾವು ಇಲ್ಲಿ ತಿಳಿಯ ಬೇಕಾಗಿದೆ. ಇದರ ಪರಿಣಾಮವಾಗಿ ರಾಯಚೂರು ದೊಆಬ, ಬಂಕಾಪುರ ಮತ್ತು ಮುದಗಲ್ ಪ್ರದೇಶಗಳು ಬ್ರಹ್ಮನಿ ವಿಜಯನಗರ ಸಾಮ್ರಾಜ್ಯಗಳೊಳಗೆ ಅತ್ತಿತ್ತ ಜೋಲಾಡಿತು. ಕೃಷ್ಣ ತುಂಗಭದ್ರ ನದಿಗಳು ಈ ರಾಜ್ಯಗಳ ಗಡಿಗಳಾದವು. ಧಾರ್ಮಿಕ ಭಾವನೆಯನ್ನು ಈ ಎರಡು ದೇಶದ ಅರಸರು ಕೆರಳಿಸಿದರು. ಆದರೂ ವಿಜಯನಗರ ಅರಸರು ಮುಸ್ಲಿಂ ಸೈನ್ಯಬಲ ಮತ್ತು ಗುಜರಾತು ಮತ್ತು ಮಾಳ್ವ ಮುಸ್ಲಿಂ ಅರಸರ ಸಹಾಯದಿಂದಲೂ, ಬಹ್ಮನಿಯವರು ಹಿಂದೂ ರಾಜರುಗಳ ಸಹಾಯವನ್ನು ಪಡೆದೂ ಒಬ್ಬರನ್ನೊಬ್ಬರು ಸೋಲಿಸಲು ಯತ್ನಿಸಿದರು. ಈ ಸೆಣಸಾಟದಲ್ಲಿ ಬಹ್ಮನಿ ಅರಸರ ರಾಜಧಾನಿ ಗುಲ್ಬರ್ಗದಿಂದ ಹೆಚ್ಚು ಸುರಕ್ಷಿತವಾದ ಬೀದರಿಗೆ ವರ್ಗಾಯಿಸಲ್ಪಟ್ಟಿತು. ವಿಜಯನಗರದ ಅರಸನಾದ ಬುಕ್ಕರಾಜನು ಮಧುರೆಯಲ್ಲಿ ಆಳಿಕೊಂಡಿದ್ದ ಸುಲ್ತಾನನ್ನು ಸೋಲಿಸಿ, ಅಲ್ಲಿನ ಮಹಮ್ಮದೀಯರ ಆಳ್ವಿಕೆಯನ್ನು ಕೊನೆಗಾಣುವಂತೆ ಮಾಡಿದನು. ಈ ಘಟನೆ ೧೩೭೦ರಲ್ಲಿ ನಡೆಯಿತು. ಹಿಂದೂಧರ್ಮದ ಸಂರಕ್ಷಣೆಗೆ ಉದಯವಾದ ವಿಜಯನಗರ ಸಾಮ್ರಾಜ್ಯವು ಹೆಚ್ಚಿನ ಸಮಯವನ್ನು ಹಿಂದೂ ಅರಸರನ್ನೇ ಸದೆಬಡಿಯುವುದರಲ್ಲಿ ಕಳೆಯಿತು. ವಿಜಯನಗರ ಅರಸರ ಸೈನಿಕ ಪರಾಕ್ರಮಕ್ಕೆ ಬಲಿಯಾದವರು ಹೆಚ್ಚಾಗಿ ಹಿಂದೂ ರಾಜ್ಯಗಳೇ ಮತ್ತು ಅವರನ್ನು ಸದೆಬಡಿಯಲು ವಿಜಯನಗರ ಅರಸರು ತಮ್ಮ ಮುಸ್ಲಿಂ ಸೈನಿಕರನ್ನು ಉಪಯೋಗಿಸಿದ್ದರು. ಇದು ಒಂದು ವಿಪರ್ಯಾಸವೆಂದು ಡಾ. ಬರ್ಟನ್ ಸ್ಟೀನ್‌ರ ಅಭಿಪ್ರಾಯವಾಗಿದೆ. ವಿಜಯನಗರ ಸಾಮ್ರಾಜ್ಯದ ಅಸ್ತಿತ್ವ ಮತ್ತು ಇದರ ಅರಸರ ಪರಾಕ್ರಮವು ಶ್ರೀಲಂಕಾ, ಪೆರು, ಬರ್ಮ, ಚೀನಾ, ಪರ್ಶಿಯಾ ಮತ್ತು ಅರೇಬಿಯಾಗಳಿಗೆ ತಿಳಿಯಿತು. ಇಟಲಿಯಿಂದ ನಿಕಾಲೊಕೊಂಟೆ ಹಾಗೂ ಪರ್ಶಿಯಾದಿಂದ ಅಬ್ದುಲ್ ರಾಜಾಕ್ ವಿಜಯನಗರದ ಕೀರ್ತಿಯನ್ನು ಕೇಳಿ, ಇಲ್ಲಿಗೆ ಬಂದು, ಇದ್ದು, ಇಲ್ಲಿನ ವೈಭವವನ್ನು ಕಣ್ಣಾರೆಕಂಡು, ಬರೆದಿಟ್ಟಿದ್ದಾರೆ.

ದಶದಿಕ್ಕುಗಳಲ್ಲಿ ತಮ್ಮ ಪರಾಕ್ರಮ, ಕೀರ್ತಿ ಮತ್ತು ವೈಭವಗಳನ್ನು ಹರಡಿಸಿದ ವಿಜಯನಗರದ ಒಂದನೆ ಸಂಗಮ ಮನೆತನ ತಮ್ಮೊಳಗೆ ಪಟ್ಟಕ್ಕೆ ಕಚ್ಚಾಡಿಕೊಂಡು ೧೪೮೫ರಲ್ಲಿ ನಶಿಸಿ ಹೋಯಿತು. ಈ ವಂಶದ ಪತನಕ್ಕೆ ಅದರಲ್ಲಿದ್ದ ಅನೈಕ್ಯತೆಯೇ ಕಾರಣವಾಯಿತೆಂದು ಪ್ರೊ. ಸ್ಟೀಂಕ್‌ರ ಅಭಿಪ್ರಾಯವು ಗಮನಾರ್ಹವಾಗಿದೆ. ಮೂಲತಃ ಕನ್ನಡ ಕರಾವಳಿಯ ಹೊನ್ನಾವರದ ಸಮೀಪದ ಸಾಲ್ವಳ್ಳಿಯವನಾದ ಸಾಳ್ವ ನರಸಿಂಹನು ತೆಲುಗು ಪ್ರಭಾವಕ್ಕೆ ಒಳಗಾಗಿ ವಿಜಯನಗರದ ಅರಸರನ್ನು ಬದಿಗಿರಿಸಿ ರಾಜ್ಯದ ಹಿತದೃಷ್ಟಿಯಿಂದ ಸ್ವತಃ ಆಳಲಾಂಭಿಸಿದ. ಆದರೆ ಈ ವಂಶದ ಅರಸರೂ ಕಚ್ಚಾಟವಾಯಿತು. ಈ ಉತ್ಕೃಷ್ಟ ವ್ಯಕ್ತಿಯೇ ತುಳುವಂಶದ ಕೃಷ್ಣ ಕ್ಕೋಸ್ಕರ ನಡೆದ ಕದನ, ತುಮುಲ, ಒಳಸಂಚು ಮತ್ತು ಕ್ಷೋಭೆ ಕೊನೆಗೆ ಉತ್ಕೃಷ್ಟ ವ್ಯಕ್ತಿಯ ಉದಯದಲ್ಲಿ ಅಂತ್ಯವಾಯಿತು. ಈ ಉತ್ಕೃಷ್ಟ ವ್ಯಕ್ತಿಯೇ ತುಳುವಂಶದ ಕೃಷ್ಣದೇವರಾಯ. ಹಾಳು ಹಂಪೆಯ ಐತಿಹಾಸಿಕ ಸ್ಮಾರಕಗಳು ಕೃಷ್ಣದೇವರಾಯನ ಕ್ರಿಯಾತ್ಮಕ ಆಳ್ವಿಕೆಯನ್ನು ಪ್ರತಿಬಿಂಬಿಸುತ್ತವೆ. ಆಂತರಿಕ ಕಲಹಗಳಿಂದ ಸತ್ವಹೀನವಾಗಿದ್ದ ವಿಜಯನಗರ ರಾಜ್ಯವನ್ನು ಇವನು ಬಲಗೊಳಿಸಿದ. ಚತುರ ಸೇನಾನಿಯಾದ ಕೃಷ್ಣದೇವರಾಯನು ತನ್ನ ಆಳ್ವಿಕೆಯ ಕಾಲದಲ್ಲಿ ಒರಿಯಾದ ಗಜಪತಿ, ಬಹ್ಮನಿಸುಲ್ತಾನ, ಬಿಜಾಪುರದ ಇಸ್ಮಾಯಿಲ್ ಆದಿಲ್ ಖಾನ್, ಇವರನ್ನೆಲ್ಲಾ ಯುದ್ಧದಲ್ಲಿ ಸೋಲಿಸಿ, ಮತ್ತುದಕ್ಷಿಣದಲ್ಲಿ ಬಂಡೆದ್ದ ಶ್ರೀರಂಗಪಟ್ಟಣ ಶಿವನಸಮುದ್ರ ಪ್ರದೇಶಗಳ ಉಮತ್ತೂರು ಮತ್ತು ಕಳಸ-ಕಾರಕಳ ಪಾಳೆಯಗಾರರನ್ನು ಬಗ್ಗು ಬಡೆದು ವಿಜಯನಗರದ ಕೀರ್ತಿಯನ್ನು ನಾಲ್ದೆಸೆಗಳಿಗೂ ಹಬ್ಬಿಸಿದನು. ಪಶ್ಚಿಮ ತೀರ ಪ್ರದೇಶದಲ್ಲಿ ವ್ಯಾಪಾರದಲ್ಲಿ ನಿರತರಾಗಿದ್ದ ಪೋರ್ತುಗೀಸರ ಸ್ನೇಹ ಸಂಪಾದಿಸಿ, ಸೇನಾಬಲವನ್ನು ವೃದ್ಧಿಸಿಕೊಂಡು ಪ್ರಬಲನಾಗಿದ್ದನು. ಪೋರ್ತುಗೀಸ ಪ್ರವಾಸಿ 'ಡಾಯಸ್' ಕೃಷ್ಣದೇವರಾಯನ ಆಸ್ಥಾನವನ್ನು ಸಂದರ್ಶಿಸಿ, "ಈ ಅರಸನು ಅತ್ಯಂತ ಗೌರವಿತನಾದ ಹಾಗೂ ಪರಿಪೂರ್ಣ ದೊರೆ, ಮಹಾನ್ ಆಡಳಿತಗಾರ ಮತ್ತು ನ್ಯಾಯಪರನಾದವ"ನೆಂದು ಅಭಿಪ್ರಾಯ ಪಟ್ಟಿದ್ದಾನೆ.

ಇಪ್ಪತ್ತು ವರ್ಷಗಳ ಕಾಲ ಆಳಿದ ಕೃಷ್ಣದೇವರಾಯನ ನಂತರ ಆತನ ಮಲಸಹೋದರ ಅಚ್ಯುತ ದೇವರಾಯನು ಪಟ್ಟಕ್ಕೆ ಬಂದನು. ಇವನು ತನ್ನ ಆಳ್ವಿಕೆಯ ಬಹು ಕಾಲವನ್ನು ರಾಜಕೀಯ ಚಟುವಟಿಕೆಗಳಲ್ಲಿಯೇ ವ್ಯಯಿಸಿದನು. ಆದರೂ ಸಾಮಂತರಿಂದ ಬಂದ ಕಪ್ಪಕಾಣಿಕೆಗಳ ದೆಸೆಯಿಂದ ಹೇರಳ ಧನವನ್ನು ಸಂಗ್ರಹಿಸಿದ. ಸದಾಶಿವರಾಯನು ಅಚ್ಯುತರಾಯನು ಸತ್ತ ಒಂದು ವರ್ಷದ ನಂತರ ಪಟ್ಟಕ್ಕೆ ಬಂದನು.(೧೫೪೩) ಇವನು ತುಳುವ ವಂಶದ ಕೊನೆಯ ರಾಜ. ಆದರೆ ಇವನು ನಿರ್ಬಲ ರಾಜ ಮತ್ತು ಅಶಕ್ತ. ಇದು ಕೃಷ್ಣದೇವರಾಯನ ಪ್ರಾಬಲ್ಯಕ್ಕೆ ಕಾರಣವಾಯಿತು. ಸದಾಶಿವರಾಯನು ಹೆಸರಿಗೆ ಮಾತ್ರ ಅರಸ. ನಿಜವಾದ ಅಧಿಕಾರ ರಾಮರಾಯನದಾಗಿತ್ತು. ರಾಮರಾಯನು ದಕ್ಷ ಸೇನಾನಿ ಮತ್ತು ನಿಪುಣ ರಾಜತಂತ್ರಜ್ಞ.

ಐದು ಭಾಗಗಳಾಗಿ ಒಡೆದಿದ್ದ ಬಹ್ಮನಿಸುಲ್ತಾನರು ಪರಸ್ಪರ ಕಲಹಗಳಲ್ಲಿ ತೊಡಗುವಂತೆ ಮಾಡಿ ಅವರ ಬಲವನ್ನು ಕುಗ್ಗಿಸಿ, ಅದರ ಲಾಭ ಪಡೆದು ರಾಮರಾಯನು ವಿಜಯನಗರ ಗಡಿಯನ್ನು ವಿಸ್ತರಿಸಿದನು. ಕಲ್ಯಾಣ, ಕೋವಲ ಕೊಂಡ, ಘೂನಾಪುರ, ಯಾದಗೀರ ಇತ್ಯಾದಿ ಆಯ ಕಟ್ಟಿನ ಕೋಟೆಗಳು ವಿಜಯ ನಗರದ ವಶವಾದುವು. ಈತನ ಆಕ್ರಮಣಶೀಲ ನೀತಿ ಕಚ್ಚಾಡಿಕೊಳ್ಳುತ್ತಿದ್ದ ದಖ್ಖನ್ ಸುಲ್ತಾನರನ್ನು ಕೆರಳಿಸಿ ವಿಜಯ ನಗರದ ವಿರುದ್ಧ ಒಂದಾಗುವಂತೆ ಮಾಡಿತು. ಇದು ಕೊನೆಗೆ ರಕ್ಕಸತಂಗಡಿ ಯುದ್ಧಕ್ಕೆ ದಾರಿಮಾಡಿಕೊಟ್ಟಿತು. ಕ್ರಿ. ಶ. ೧೫೬೫ರಲ್ಲಿ ನಡೆದ ರಕ್ಕಸತಂಗಡಿ ಕದನದಲ್ಲಿ ವಿಜಯನಗರವು ಭಾರಿ ಸಿದ್ಧತೆಗಳೊಡನೆ ಶತ್ರುಗಳನ್ನು ಎದುರಿಸಿ

ದರೂ ರಾಮರಾಯನ ಅತಿಯಾದ ಆತ್ಮವಿಶ್ವಾಸ, ಮತ್ತು ಅವನ ಸೇನೆಯಲ್ಲಿದ್ದ ಇಬ್ಬರು ಮುಸಲ್ಮಾನ ದಂಡನಾಯಕರ ವಂಚನೆಯಿಂದಾಗಿ ವಿಜಯನಗರಕ್ಕೆ ಹೇಳಲಾರದಷ್ಟು ಸೋಲಾಯಿತು. ಇದರಿಂದಾಗಿ ವಿಜಯ ನಗರವು ಅಸಹಾಯವಾಯಿತು. ಸಂಪದ್ಭರಿತ ವಿಜಯ ನಗರವನ್ನು ವೈರಿಗಳು ಸುಲಿದರು ಮತ್ತು ಅಲ್ಲಿನ ಕಲೆಗಳ ಸೌಂದರ್ಯವನ್ನು ಭಗ್ನಗೊಳಿಸಿ, ಆ ನಗರವನ್ನು ಹಾಳು ಹಂಪೆಯನ್ನಾಗಿ ಮಾಡಿದರು. ಈ ಘಟನೆಯ ನಂತರ ವಿಜಯನಗರದ ಅರಸರು ೧೬೪೬ರ ವರೆಗೆ ಆಳಿಕೊಂಡಿದ್ದರೂ, ಅವರ ರಾಜ್ಯ ವಿಜಯ ನಗರವನ್ನು ಹೊರತು ಪಡಿಸಿದ ರಾಜ್ಯವಾಗಿತ್ತು.

ರಕ್ಕಸತಂಗಡಿ ಕದನದಿಂದಾಗಿ ದಖ್ಖನದ ಸುಲ್ತಾನರು ದೀರ್ಘಕಾಲದ ಲಾಭವನ್ನೇನೂ ಪಡೆಯಲಿಲ್ಲ. ಸಮಗ್ರ ದಕ್ಷಿಣ ಭಾರತದಲ್ಲಿ ಪ್ರಬಲ ರಾಜಕೀಯ ಶಕ್ತಿಯು ಶೂನ್ಯವಾಗಿ, ಮೊಘಲರು ಮತ್ತು ಮರಾಠರು ಇದನ್ನು ತುಂಬಿಸಲು ಯತ್ನಿಸಿ ವಿಫಲರಾಗಿ, ಕೊನೆಗೆ ಇಂಗ್ಲೀಷರು ಈ ಶಕ್ತಿಶೂನ್ಯತೆಯನ್ನು ಕೊನೆಗಾಣಿಸಿದರು.

**ಸಾಂಸ್ಕೃತಿಕ ಕೊಡುಗೆ**

ವಿಜಯನಗರದ ಚಕ್ರವರ್ತಿಗಳು ಹಿಂದೂ ಧರ್ಮದ ಚೌಕಟ್ಟಿನಲ್ಲಿ ದಕ್ಷ ಆಡಳಿತ ವ್ಯವಸ್ಥೆಯಿಂದ ಸುವ್ಯವಸ್ಥಿತ ಸಮಾಜ ಹಾಗೂ ಆರ್ಥಿಕ ಭದ್ರತೆಯನ್ನು ಸಾಧಿಸುವಲ್ಲಿ ಸಫಲರಾಗಿದ್ದರು. ಸಾಹಿತ್ಯಾಭಿವೃದ್ಧಿ ಮತ್ತು ವಿಶಿಷ್ಟ ಕಲೆಗಳಿಗೆ ಪ್ರೋತ್ಸಾಹ ನೀಡಿ ಅಂದಿನ ಕನ್ನಡ ನಾಡಿನ ಸಂಸ್ಕೃತಿಯನ್ನು ಬೆಳಗಿಸಿದರೆಂದು ಹೆಚ್ಚಿನ ಇತಿಹಾಸ ವಿದ್ವಾಂಸರು ತಿಳಿಸಿದ್ದಾರೆ. ಆದರೆ ಇವರ ಕೆಲವು ಸಾಂಸ್ಕೃತಿಕ ಸಾಧನೆಗಳಲ್ಲಿ ಕೆಲವು ಕುಂದುಕೊರತೆಗಳಿದ್ದುವೆಂದೂ ಅವೇ ವಿಜಯನಗರದ ಪತನಕ್ಕೆ ಕಾರಣವಾಯಿತೆಂದು ಇತಿಹಾಸ ಮೂಲ ದಾಖಲೆಗಳ ಅಧ್ಯಯನದಿಂದ ತಿಳಿದು ಬರುವ ಸತ್ಯವನ್ನು ಹೆಚ್ಚಿನ ವಿದ್ವಾಂಸರು ಮುಚ್ಚಿಟ್ಟಿದ್ದನ್ನು ನಾವು ಇಲ್ಲಿ ಗಮನಿಸುವ ಆವಶ್ಯಕತೆ ಇದೆ. ಸುವ್ಯವಸ್ಥಿತ ಉತ್ತರಾಧಿಕಾರ ಪದ್ಧತಿಯು ಸ್ಥಾಪಿತವಾಗದ ಕಾರಣ ಪಟ್ಟಕ್ಕೋಸ್ಕರ ಕಲಹಗಳು ಆಗಿಂದಾಗ್ಗ ನಡೆದವು. ಇದು ಸೇನಾಧಿಕಾರಿಗಳು ಪ್ರಬಲರಾಗಿ ಬೆಳೆಯಲು ಕಾರಣವಾಯಿತು. ರಾಜ್ಯ ರಕ್ಷಿಸುವ ಹಿನ್ನೆಲೆಯಲ್ಲಿಯೇ ರೂಪಿತಗೊಂಡ ವಿಜಯ ನಗರ ವಿಭಾಗಗಳು ಧನ ಮತ್ತು ಸತತ ಸೈನ್ಯ ಸರಬರಾಜು ಆಗುವಂತೆ ಪ್ರಾಂತ್ಯಾಡಳಿತದ ವ್ಯವಸ್ಥೆಯು ರೂಪುಗೊಂಡಿತ್ತು. ಇದರಿಂದಾಗಿ ವಿವಿಧ ಪ್ರದೇಶಗಳಲ್ಲಿದ್ದ ಪ್ರಾಂತ್ಯಾಧಿಕಾರಿಗಳು ಮತ್ತು ಇತರ ಅಧಿಕಾರಿಗಳು ತಮ್ಮ ಆಡಳಿತ ಪ್ರದೇಶಗಳಲ್ಲಿ ಸುಭದ್ರತೆ ಮತ್ತು ಸೌಕರ್ಯಗಳನ್ನು ಹೆಚ್ಚಿಸುವ ಕಾರ್ಯಕ್ಕಿಂತಲೂ ಹೆಚ್ಚಾಗಿ, ಆ ಪ್ರದೇಶಗಳ ಸಂಪನ್ಮೂಲಗಳನ್ನು ಹೀರಿ, ವೈಭವ ಮತ್ತು ಯುದ್ಧೋದ್ಯಮದಲ್ಲಿ ನಿರತರಾದ ಪ್ರಭುಗಳಿಗೆ ಅವನ್ನು ಸಾಗಿಸುವ ಕೆಲಸದಲ್ಲಿ ನಿರತರಾದರು. ಸಾಮ್ರಾಜ್ಯದ ವಿವಿಧ ಕಡೆಗಳಲ್ಲಿ ನೆಲೆಸಿದ್ದ ತುಂಡರಸುಗಳ ಸ್ಥಾನಮಾನವನ್ನು ವಿಜಯ ನಗರದ ಅರಸರು ಗೌರವಿಸಿ, 'ಪೂರ್ವಮರ್ಯಾದೆ'ಗೆ ಚ್ಯುತಿಬಾರದಂತೆ ಅವರು ನಡೆದು ಕೊಂಡು ಬಂದ ರೀತಿ ಅವರ ರಾಜಕೀಯ ಚಾಣಕ್ಯತೆಯನ್ನು ತೋರಿಸುತ್ತದೆಂದು ಕೆಲವು ಇತಿಹಾಸಗಾರರು ಬಣ್ಣಿಸಿದರು. ಆದರೆ ಈ ತುಂಡರಸರುಗಳೇ ವಿಜಯನಗರದಲ್ಲಿ ಗೊಂದಲವೆದ್ದಾಗ ರಾಜ್ಯದ ಘನತೆ ಮತ್ತು ಭದ್ರತೆಗಳಿಗೆ ಬಹಳ ಧಕ್ಕೆಯನ್ನುಂಟುಮಾಡಿದರೆಂಬುದನ್ನು ನಾವು ಮರೆಯಬಾರದು. ಇವರ ಸೈನ್ಯ ಸಂಖ್ಯಾದೃಷ್ಟಿಯಿಂದ ಬಲವಾಗಿ ತೋರಿದರೂ ಶಿಸ್ತಿನ ಅಭಾವ ಬಹಳವಿದ್ದಿತು. ಇದೇ ವಿಜಯನಗರ ಸಾಮ್ರಾಜ್ಯದ ಸೋಲಿಗೆ ಕಾರಣವಾಯಿತು. ಅಧಿಕಾರಿಗಳು ಮತ್ತು ಪ್ರಜೆಗಳಲ್ಲಿ ಅಂತರ ಬಹಳವಿತ್ತು. ಸಾಮಾಜಿಕ ಸ್ಥಿತಿಯಲ್ಲಿ ವಿಜಯನಗರದ ಅರಸರು ರೂಢಿ ನಿಯಮ, ಪೂರ್ವ ಮರ್ಯಾದೆಯನ್ನು ಕಾಪಾಡಿಕೊಂಡು ಬಂದು ಸುವ್ಯವಸ್ಥಿತ ಸಮಾಜಕ್ಕೆ ತಳಹದಿ ಹಾಕಿದರು. ಜಾತಿ ಯಾವುದೇ ಆದರೂ ಶ್ರಮ ಮತ್ತು ಶೌರ್ಯದಿಂದ ವ್ಯಕ್ತಿಗೆ ಉನ್ನತಸ್ಥಾನ ಗಳಿಸುವ ಅವಕಾಶ ಇದ್ದಿತು. ಸಾಮಾಜಿಕ ಸ್ಥಾನಮಾನಗಳಲ್ಲಿ ಆರ್ಥಿಕ ಅಂಶ ಬಹುಮುಖ್ಯ ಪಾತ್ರವಹಿಸಿತ್ತೆಂದು ಸಮಕಾಲೀನ ಶಾಸನಗಳ ಅಧ್ಯಯನದಿಂದ ತಿಳಿದು ಬರುವ ಸತ್ಯ ವಿಚಾರ. ಆ ಕಾಲದ ದಾನದತ್ತಿಗಳು ಆಗಾಗ್ಗ ಶಿಥಿಲವಾಗುತಿದ್ದುದನ್ನು ನೋಡಿದರೆ ಸಮಾಜದ ಕೆಳವರ್ಗದ ಸಾಮಾನ್ಯ ಜನರಿಗೆ ಈ ದಾನಧರ್ಮಗಳ ಬಗ್ಗ ಗೌರವಾದರಗಳೇನೂ ಹೆಚ್ಚಿನ ಮಟ್ಟಿಗೆ ಇದ್ದಿರಲಾರದೆನ್ನಿಸುತ್ತದೆ. ದತ್ತಿ ಶಾಸನಗಳಲ್ಲಿ ಕಾಣುವ ಅಶ್ಲೀಲ ಶಾಪವಾಕ್ಯಗಳಂತೂ ಅಂದಿನ ಜೀವನ ಮೌಲ್ಯಗಳು ಕೆಳಮಟ್ಟದಲ್ಲಿದ್ದವೆಂದು ಸಾರುತ್ತದೆ. ವಿಜಯನಗರ ಕಾಲದಲ್ಲಿ ಕರ್ನಾಟಕದ ಆರ್ಥಿಕ ಸ್ಥಿತಿ ಉತ್ತಮವಾಗಿತ್ತೆಂದು ಆ ಕಾಲದ ವಿದೇಶಿ ಯಾತ್ರಿಕರ ವರದಿಗಳಿಂದ ತಿಳಿಯುತ್ತದೆ. ಆದರೆ ಈ ಪ್ರವಾಸಿಗಳು ನೋಡಿದ್ದು ಪ್ರಮುಖ ನಗರಗಳನ್ನು ಮಾತ್ರ. ಆ ನಗರಗಳಲ್ಲಿ ಅಧಿಕಾರಿಗಳು, ಶ್ರೀಮಂತ ವರ್ತಕರು ಮತ್ತು ರಾಜ್ಯಾವಲಂಬಿತ ಜನವರ್ಗಗಳು ವಾಸಿಸುತ್ತಿದ್ದರು. ಈ ಜನರನ್ನೇ ನೋಡಿದ, ವರ್ಣಿಸಿದ ವಿದೇಶೀ ಪ್ರವಾಸಿಗರು ವಿಜಯನಗರವು ಸಂಪದ್ಭರಿತವಾಗಿತ್ತೆಂದು ಬಣ್ಣಿಸಿದುದರಲ್ಲಿ ಆಶ್ಚರ್ಯವಿಲ್ಲ. ವ್ಯಾಪಾರ, ವಾಣಿಜ್ಯ ವಿಜಯನಗರ ಕಾಲದಲ್ಲಿ ವಿಸ್ತಾರವಾಯಿತೇನೋ ನಿಜ, ಆದರೆ ಇದರ ಪ್ರಗತಿಗೆ ಮುಖ್ಯ ಕಾರಣರು ತೆಲುಗರು ಮತ್ತು ಅರಬರು, ಇವರ ವರ್ಚಸ್ಸಿಗೊಳಗಾದ ಮಾಪಿಳ್ಳೆಗಳು ಮತ್ತು ಪೋರ್ತುಗೀಸರು. ವ್ಯಾಪಾರಿಗಳಿಗೆ ರಕ್ಷಣೆ ಕೊಡುವ ನೆಪದಿಂದ ಅವರಿಂದ ಅಪಾರ ತೆರಿಗೆ ವಸೂಲಿ ಮಾಡುತ್ತಿದ್ದರು ಎಂಬ ಸತ್ಯ ಸಂಗತಿಯು ಕೆಲವು ಶಾಸನಗಳಿಂದ ತಿಳಿದು ಬರುತ್ತದೆ. ವಿಜಯನಗರ ಅರಸರು ಕೃಷಿಯ ಅಭಿವೃದ್ಧಿ ಕೆಲಸಗಳಾದ ನೀರಾವರಿ, ಹೊಸ ಭೂಮಿಯ ಸಾಗುವಳಿಗೆ ಪ್ರೋತ್ಸಾಹ ನೀಡಿದರು. ಕೃಷಿ ಉತ್ಪನ್ನಗಳು ಸಮೃದ್ಧವಾಗಿದ್ದರೂ ಕೃಷಿಕರ ಸ್ಥಿತಿ ಉತ್ತಮವಾಗಿರಲಿಲ್ಲ ಎಂಬ ಅಂಶ ಶಾಸನಗಳ ಅಧ್ಯಯನದಿಂದ ತಿಳಿದು ಬರುತ್ತದೆ. ಬಿಟ್ಟಿ, ಬೇಗಾರಿಕೆ, ಜೀತಪದ್ಧತಿ ಮತ್ತು ಇನ್ನಿತರ ಶೋಷಣೆಗಳಿಗೆ ಕೃಷಿಕರು ಬಲಿಯಾಗಿದ್ದರು. ಇವುಗಳ ನಿವಾರಣೆಗೆ ಸರಕಾರ ಪ್ರಯತ್ನಿಸಿದಂತೆ ತಿಳಿದು ಬರುವುದಿಲ್ಲ. ಇಷ್ಟಲ್ಲದೆ ರೈತರು ಹೊರಲಾರದಷ್ಟು ಕರವನ್ನು ಸರಕಾರಕ್ಕೆ ಕೊಡಬೇಕಿತ್ತು. ಕೈಗಾರಿಕೆಯ ರಂಗದಲ್ಲೂ ಇದೇ ಪರಿಸ್ಥಿತಿ ಇದ್ದಿತ್ತು. ದೇಶದ ಬೇರೆ ಬೇರೆ ಎಡೆಗಳಲ್ಲಿ ಕಬ್ಬಿಣದ ಸಾಮಾನುಗಳು, ಹತ್ತಿಬಟ್ಟೆ ಮತ್ತು ಚರ್ಮದ ಸಾಮಾನು ತಯಾರಾಗುತಿದ್ದುವು. ಇಷ್ಟಲ್ಲದೆ ಹಲವಾರು ಗುಡಿ ಕೈಗಾರಿಕೆಗಳಿದ್ದುವು. ಇವುಗಳಿಂದಾಗಿ ಉತ್ಪನ್ನ ದೇಶದ ಆವಶ್ಯಕತೆಯನ್ನು ಪೂರೈಸುವಷ್ಟಾದರೂ ಇರುತ್ತಿದ್ದವು. ಆದರೂ ಕೈಗಾರಿಕಾರಂಗದಲ್ಲಿ ನಿರತರಾಗಿದ್ದ ಜನ ಸರಕಾರದಿಂದ ಮತ್ತು ಆಡಳಿತದ ವಿವಿಧ ಘಟ್ಟಗಳಿಂದ ಹೊರಲಾರದ ತೆರಿಗೆಗಳನ್ನು ಕೊಡಬೇಕಿತ್ತು. ಇದರಿಂದಾಗಿ ಈ ವರ್ಗದ ಜನರು ಆರ್ಥಿಕ ಸ್ಥಿತಿಯಲ್ಲಿ ಉತ್ತಮಸ್ಥಾನವನ್ನು ಗಳಿಸಲಿಲ್ಲ. ಒಟ್ಟಿನಲ್ಲಿ, ವಿಜಯನಗರ ಅರಸರ ಆರ್ಥಿಕ ಧೋರಣೆ ದೇಶವನ್ನು ಪ್ರಗತಿಪರ ದಾರಿಯಲ್ಲಿ ಹೆಚ್ಚು ದೂರ ಕೊಂಡೊಯ್ಯುವಲ್ಲಿ ಸಫಲವಾಗಲಿಲ್ಲ. ವಿಜಯನಗರದ ಸ್ಮರಣೆ ಉಳಿದಿದ್ದರೆ ಅದು ಅವರ ಶಿಲ್ಪಕಲೆಯಲ್ಲಿ. ಆದರೂ ವಿಜಯನಗರ ಶಿಲ್ಪಕಲೆಯಲ್ಲಿ ಮೂಲಭೂತತೆ (ಒರಿಜಿನಾಲಿಟಿ) ಇಲ್ಲ ಎನ್ನಬಹುದು.

ನಾಲ್ಕಾರು ಪ್ರಾಚೀನ ಶಿಲ್ಪ ಶೈಲಿಗಳ ಮಿಲನ ಇವರ ಕಲೆಯಲ್ಲಿ ನೋಡಬಹುದು. ಇವರ ಕಲೆ ಮತ್ತು ವಾಸ್ತುಶಿಲ್ಪ ಧಾರ್ಮಿಕ ಅಂಶಗಳ ಆಧಾರದಿಂದ ನಿರ್ಮಿಸಲ್ಪಟ್ಟಿದೆ. ವಾಸ್ತು ಶಿಲ್ಪದ ಭವ್ಯತೆಗೆ ಮತ್ತು ಮಹತ್ತಿಗೆ ಅನುಗುಣವಾದ ಶಿಲ್ಪಗಳನ್ನು ವಿಜಯನಗರ ಶಿಲ್ಪಿಗಳು ನಿರ್ಮಿಸಿದರು. ಸತ್ವಪೂರ್ಣ ಭಾವ ತೋರಿಸುವಲ್ಲಿ ವಿಜಯನಗರ ಶಿಲ್ಪಿಗಳಿಗೆ ಸರಿಸಮಾನರು ಯಾರೂ ಇಲ್ಲ ಎನ್ನಬಹುದು. ಹಂಪೆಯ ಗಣೇಶ, ಕಾರ್ಕಳದ ಗೊಮ್ಮಟ ಮತ್ತು ವಿವಿಧ ದೇವಾಲಯಗಳಲ್ಲಿ ಕೆತ್ತಿಸಿದ ವಿಗ್ರಹಗಳು ವಿಜಯನಗರ ಕಾಲದ ಶಿಲ್ಪಗಳ ಕಲಾಕೌಶಲ್ಯದ ಪ್ರತೀಕಗಳು. ಹಂಪೆಯ ವಿರೂಪಾಕ್ಷ ದೇವಾಲಯದ ಕಲ್ಯಾಣ ಮಂಟಪದ ಚಿತ್ರಕಲೆ ಮತ್ತು ಲೇಪಾಕ್ಷಿ ದೇವಾಲಯಗಳಲ್ಲಿ ಇರುವ ವರ್ಣಚಿತ್ರಗಳು ವಿಜಯನಗರ ಚಿತ್ರಕಲೆಯ ಸಾಧನೆಗೆ ಸಾಕ್ಷಿಗಳು.

ಒಟ್ಟಿನಲ್ಲಿ ವಿಜಯನಗರ ಸಾಮ್ರಾಜ್ಯವು ಇತಿಹಾಸ ವಿದ್ಯಾರ್ಥಿಗಳಿಗೆ ಹಲವಾರು ಪಾಠಗಳನ್ನು ಕಲಿಸಿ, ಕಲೆ, ಸಂಸ್ಕೃತಿಗಳನ್ನು ರಕ್ಷಿಸಿ, ಪೋಷಿಸಿ, ತನ್ನ ಭವ್ಯತೆ ಶ್ರೀಮಂತಿಕೆಗಳಿಂದ ದೇಶ ವಿದೇಶಗಳಿಂದ ಬಂದ ಜನರನ್ನು ದಂಗುಗೊಳಿಸಿ, ಮರೆಯಲಾಗದ ಸಾಮ್ರಾಜ್ಯವಾಗಿ ಮೆರೆಯಿತು.

# ಕರ್ನಾಟಕದ ಇತಿಹಾಸ: ವಿಜಯ ನಗರ ಅರಸರ ಆಳ್ವಿಕೆಯ ಬಳಿಕ

ಡಾ. ಬಿ. ಷೇಕ್ ಆಲಿ

ಭಾರತೀಯ ಸಂಸ್ಕೃತಿಯ ಮುಖ್ಯಪ್ರವಾಹಕ್ಕೆ, ಅದರಲ್ಲೂ ಮುಖ್ಯವಾಗಿ ಕಲೆ, ಶಿಲ್ಪ, ಸಾಹಿತ್ಯ, ಸಂಗೀತ, ಧರ್ಮ ಹಾಗೂ ತತ್ವಶಾಸ್ತ್ರಗಳ ಕ್ಷೇತ್ರಕ್ಕೆ ಕರ್ನಾಟಕದ ಕೊಡುಗೆ ವಿಶಿಷ್ಟವಾದುದು. ಅನೇಕ ರಾಜರ ವಿಶಾಲ ಮನೋಧರ್ಮ, ಈ ಪ್ರದೇಶದ ವಿಶಿಷ್ಟ ಯುದ್ಧತಂತ್ರದ ಪರಿಸ್ಥಿತಿ, ಶ್ರೀಮಂತ ಸಂಪನ್ಮೂಲಗಳು, ಹಿತಕರವಾದ ವಾಯುಗುಣ, ಉತ್ತಮ ಆಳ್ವಿಕೆಯ ಸುದೀರ್ಘ ಪರಂಪರೆ–ಇವೆಲ್ಲವೂ ಒಂದಾಗಿ ಮಧ್ಯಯುಗೀನ ಹಾಗೂ ಆಧುನಿಕ ಭಾರತದ ಇತಿಹಾಸದಲ್ಲಿ ಕರ್ನಾಟಕ ಮಹತ್ತರ ಪಾತ್ರ ವಹಿಸಲು ಕಾರಣವಾದುವು. ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ಅರಸರು– ಈ ಎಲ್ಲಾ ಮನೆತನಗಳಿಂದಾಗಿ ಕರ್ನಾಟಕ ರಾಜಕೀಯ ಹಾಗೂ ಸಾಂಸ್ಕೃತಿಕ ವೈಭವದ ಎತ್ತರಕ್ಕೇರಲು ಕಾರಣವಾಯಿತು. ಮುಂದಿನ ಒಡೆಯರು, ಹೈದರ್ ಅಲಿ, ಟಿಪ್ಪು ಸುಲ್ತಾನ, ಕಮಿಷನರು ಹಾಗೂ ದಿವಾನರು–ಇವರ ಕಾಲದಲ್ಲಿ ಈ ಪರಂಪರೆ ಮುಂದುವರಿದು, ಕರ್ನಾಟಕ ಇಡೀ ದೇಶದಲ್ಲಿ ಮಾದರಿ ರಾಜ್ಯವಾಯಿತು. ಇತಿಹಾಸ ದೇಶದ ಸಂಸ್ಕೃತಿಯ ಪ್ರತಿಬಿಂಬವೆಂದಾದರೆ, ಕರ್ನಾಟಕದ ಇತಿಹಾಸದ ಪುಟಗಳಲ್ಲಿ ನಮ್ಮ ಸಂಸ್ಕೃತಿಯ ಅತ್ಯಂತ ಪ್ರಕಾಶಮಾನ ಬದಿಯನ್ನು ನಾವು ಕಾಣುತ್ತೇವೆ.

ವಿಜಯನಗರದ ಅರಸರ ಆಳ್ವಿಕೆಯ ಬಳಿಕ, ಮೈಸೂರಿನ ಒಡೆಯರು ಈ ಪ್ರದೇಶದಲ್ಲಿ ಅತ್ಯಂತ ಪ್ರಧಾನಶಕ್ತಿಯಾಗಿ ಕಾಣಿಸಿಕೊಂಡರು. ಅವರು ತಮ್ಮ ಪ್ರದೇಶವನ್ನು ವಿಸ್ತರಿಸಿದರು. ತಮ್ಮ ಶಕ್ತಿಯನ್ನು ಸಂಚಯಿಸಿದರು ಮತ್ತು ಮುಂದಿನ ಬೆಳವಣಿಗೆಗಳಿಗೆ ತಳಹದಿಯಾಗಿ ಪರಿಣಮಿಸಿದ ಆಡಳಿತಯಂತ್ರವೊಂದನ್ನು ಕಟ್ಟಿದರು. ದೇಶದ ಪ್ರಾಚೀನ ಪರಂಪರೆಯನ್ನು ಸಂರಕ್ಷಿಸುವ ದೃಷ್ಟಿಯಿಂದ ಕರ್ನಾಟಕವು ವಿಜಯನಗರದ ಉತ್ತರಾಧಿಕಾರಿಯಾಯಿತು. ಒಡೆಯರ್ ಮನೆತನದ ಮೂಲವು ರಹಸ್ಯದ ಮುಸುಕಿನಲ್ಲಿ ಮುಚ್ಚಿಹೋಗಿದೆ. ಈ ಮನೆತನ ಚಂದ್ರವಂಶಕ್ಕೆ ಸೇರಿದ್ದು, ಶ್ರೀಕೃಷ್ಣನ ಮೂಲಸ್ಥಾನವಾದ ದ್ವಾರಕೆಯಲ್ಲಿದ್ದ ಯಾದವರಿಗೂ ಒಡೆಯರ್ ಮನೆತನಕ್ಕೂ ಸಂಬಂಧವಿದೆ ಮುಂತಾದ ಐತಿಹ್ಯಗಳಿವೆ. ವಿಜಯ ಮತ್ತು ಕೃಷ್ಣ ಎಂಬ ಇಬ್ಬರು ಸಹೋದರರು ದಕ್ಷಿಣಕ್ಕೆ ಬಂದು, ನಂಜನಗೂಡಿನ ಹಾಡಿನಾಡು ಎಂಬ ಸಣ್ಣ ಆಶ್ರಿತ ರಾಜ್ಯವೊಂದರಲ್ಲಿ ತೊಂದರೆಗೊಳಗಾಗಿದ್ದ ರಾಜಕುಮಾರಿಯನ್ನು ಕಷ್ಟದಿಂದ ಪಾರುಮಾಡಿ, ಶತ್ರುವನ್ನು ನಾಶಮಾಡಿ ಅವಳನ್ನು ಮದುವೆಯಾಗಿ 'ಒಡೆಯರ್' ಎಂಬ ಬಿರುದನ್ನು ಪಡೆದರು ಎಂದು ಹೇಳಲಾಗಿದೆ. ಇದು ಐತಿಹ್ಯಗಳ ಆಧಾರದಿಂದ ನಿರೂಪಿತವಾದ, ಈ ಮನೆತನದ ಮೂಲವನ್ನು ಹೇಳುವ ಪರಂಪರಾಗತವಾದ ಕತೆ. ಆದರೆ ನಿಜವಾಗಿ ನಡೆದಿರಬಹುದಾದದ್ದು ಅಧಿಕಾರಕ್ಕಾಗಿ ಹೋರಾಟ. ಅನೇಕ ಪಾಳೆಯಗಾರರು ತುಂಡರಸರು ಒಬ್ಬರನ್ನೊಬ್ಬರು ಹತ್ತಿಕ್ಕಲು ಹೋರಾಟ ನಡೆಸಿರಬಹುದು. ಇಂತಹ ಸಾಹಸಕ್ರಮಗಳು ಉತ್ತರಭಾಗದಿಂದಲೇ ಆಗಿರಬೇಕಾಗಿಲ್ಲ. ಸ್ಥಳೀಯ ತುಂಡರಸನೊಬ್ಬ ಇಂತಹ ಹೋರಾಟದಲ್ಲಿ ತನ್ನ ಪರಾಕ್ರಮ ಹಾಗೂ ಅದೃಷ್ಟದ ಬಲದಿಂದ ವಿಜಯಶಾಲಿಯಾಗಿ, ತನ್ನ ಗಡಿಗಳನ್ನು ವಿಸ್ತರಿಸಿ, ಹೊಸ ರಾಜಮನೆತನವೊಂದನ್ನು ಸ್ಥಾಪಿಸುವಲ್ಲಿ ಯಶಸ್ವಿಯಾಗಿರಬೇಕು. ಆದ್ದರಿಂದ ಕನ್ಯೆಯೊಬ್ಬಳನ್ನು ಸಂಕಷ್ಟದಿಂದ ಪಾರುಮಾಡಿದ ಕಥೆ ಒಪ್ಪಿಕೊಳ್ಳಲು ಕಷ್ಟವಾಗಿದೆ. ಹಳೆಯ ಕತೆಗಳ ಸಹಾಯದಿಂದ ವಿಲ್ಕ್ಸ ಮೊದಲು ಇದನ್ನು ಬರೆದ. ರೈಸ್ ಇದನ್ನು ಯಥಾವತ್ತಾಗಿ ಅನುಸರಿಸಿದ. ಉಳಿದ ವಿದ್ವಾಂಸರು ಇದನ್ನೇ ಅಂಗೀಕರಿಸಿದರು. ವಾಸ್ತವಿಕವಾಗಿ, ಈ ರಾಜಮನೆತನದ ಮೂಲಪುರುಷನೊಬ್ಬ ಮಣ್ಣಿನ ಮಗನೊಬ್ಬನೇ ಆಗಿರಬೆಕು ಎಂದು ಭಾವಿಸುವುದು ಸೂಕ್ತ.

### ಮೊದಲ ದೊರೆಗಳು

ಮೊದಲನೆಯ ರಾಜ ವಿಜಯ. ಇವನು ಯದುರಾಜನೆಂಬ ಹೆಸರಿನಲ್ಲಿ ೧೩೯೯ ರಿಂದ ೧೪೨೩ರ ವರೆಗೆ ರಾಜ್ಯವಾಳಿದ. ಅವನ ಉತ್ತರಾಧಿಕಾರಿಗಳೆಂದರೆ ಒಂದನೆಯ ಹಿರೇಬೆಟ್ಟದ ಚಾಮರಾಜ (೧೪೨೩ – ೫೯), ಒಂದನೆಯ ತಿಮ್ಮರಾಜ (೧೪೫೯ – ೭೮) ಮತ್ತು ಎರಡನೆಯ ಹಿರೇ ಚಾಮರಾಜ (೧೪೭೮–೧೫೧೩). ಎರಡನೆಯ ಹಿರೇ ಚಾಮರಾಜನ ಪ್ರತಿ ಕೈಯಲ್ಲಿ ಆರು ಬೆರಳುಗಳಿದ್ದುದರಿಂದ, ಅವನಿಗೆ 'ಆರು ಬೆರಳು' ಎಂಬ ಹೆಸರೂ ಇತ್ತು. ಅನಂತರದ ರಾಜರಲ್ಲಿ ಒಬ್ಬನಾದ ಬೋಳ ಚಾಮರಾಜ (೧೫೭೨–೭೬) ತನ್ನ ನಿವಾಸವನ್ನು ಮೈಸೂರಿಗೆ ವರ್ಗಾಯಿಸಿ, ಅಲ್ಲಿ ಒಂದು ಕೋಟೆಯನ್ನು ಕಟ್ಟಿಸಿದನು. ಅದು ರಾಜ ಒಡೆಯನ ಕಾಲದಲ್ಲಿ (೧೫೭೮–೧೬೧೭) ಪ್ರಸಿದ್ಧಿಗೆ ಬಂದಿತು. ಅವನು ತನ್ನ ರಾಜ್ಯವನ್ನು ವಿಸ್ತರಿಸಿದನು. ವಿಜಯನಗರದ ಪ್ರತಿನಿಧಿಯಾಗಿ ಶ್ರೀರಂಗಪಟ್ಟಣದಲ್ಲಿದ್ದ ತಿರುಮಲನನ್ನು ನಿವಾರಿಸಿದ್ದು

ಮತ್ತು ತನ್ನ ರಾಜಧಾನಿಯನ್ನು ೧೬೧೦ರಲ್ಲಿ ಮೈಸೂರಿನಿಂದ ಶ್ರೀರಂಗಪಟ್ಟಣಕ್ಕೆ ವರ್ಗಾಯಿಸಿದ್ದು ಅವನ ಪ್ರಮುಖ ಸಾಧನೆ. ೧೬೧೦ರಿಂದ ೧೭೯೯ರ ವರೆಗೆ ಶ್ರೀರಂಗಪಟ್ಟಣ ಕೇವಲ ಕರ್ನಾಟಕದ ರಾಜಕೀಯದಲ್ಲಿ ಮಾತ್ರವಲ್ಲ, ಇಡೀ ದೇಶದಲ್ಲೇ ಪ್ರಮುಖಪಾತ್ರ ವಹಿಸಿತು. ವಿಜಯನಗರದ ಚಕ್ರವರ್ತಿ ಎರಡನೆಯ ವೆಂಕಟನಿಂದ 'ಮೈಸೂರಿನ ರಾಜ' ಎಂಬ ಬಿರುದನ್ನು ಪಡೆದುದು, ದಳವಾಯಿಯ ಹುದ್ದೆಯನ್ನು ನಿರ್ಮಿಸಿದುದು, ದಸರಾ ಉತ್ಸವವನ್ನು ಆರಂಭಿಸಿದುದು, ದೇವಾಲಯಗಳಿಗೆ ವಿಶೇಷ ದಾನಗಳನ್ನು ಮಾಡಿದುದು, ಆಡಳಿತವನ್ನು ವ್ಯವಸ್ಥಿತಗೊಳಿಸಿದುದು – ಇವುಗಳಿಂದಾಗಿ ಒಡೆಯರ್ ಮನೆತನದ ಮೊದಲನೆಯ ಪ್ರಮುಖ ಅರಸನಾಗಿ ರಾಜಒಡೆಯರ್ ಹೆಸರು ಪಡೆದ. ಅವನ ಉತ್ತರಾಧಿಕಾರಿಯಾದ ಚಿನ್ನೆಯ ಚಾಮರಾಜನು (೧೬೧೭–೩೭) ಕೂಡಾ ಒಬ್ಬ ಪ್ರಮುಖ ರಾಜನಾಗಿದ್ದ. ಸಾಹಿತ್ಯ ಕಲೆಗಳ ಪೋಷಕನಾಗಿ ಮಾತ್ರವಲ್ಲದೆ, ಸ್ವತಃ ಸಾಹಿತಿಯೂ ಆಗಿದ್ದ ಅವನು ವಾಲ್ಮೀಕಿ ರಾಮಾಯಣದ ಕನ್ನಡ ಗದ್ಯರೂಪವನ್ನು 'ಚಾಮರಾಜ ಕೋಟಿ ವಿಲಾಸ'ವೆಂಬ ಹೆಸರಿನ ಕೃತಿಯಾಗಿ ರಚಿಸಿದ. ಮುಂದಿನ ಅರಸನಾದ ಒಂದನೆಯ ಕಂಠೀರವ ನರಸರಾಜ (೧೬೩೮–೫೯) ಗಮನಾರ್ಹ ರಾಜನಾಗಿದ್ದ. ಅವನು ಮೊಗಲರ ರಾಜ್ಯ ವಿಸ್ತಾರಣದ ಸವಾಲನ್ನು ಪರಾಕ್ರಮದಿಂದ ಎದುರಿಸಿದ. ಔರಂಗಜೇಬ್ ದಕ್ಷಿಣದ ವೈಸರಾಯಿಯಾಗಿ ನೇಮಕಗೊಂಡಾಗ, ಅವನು ಮೊಗಲರ ಪ್ರಭಾವವನ್ನು ಇನ್ನೂ ದಕ್ಷಿಣಕ್ಕೆ ವಿಸ್ತರಿಸಿದ. ಶ್ರೀರಂಗಪಟ್ಟಣವನ್ನು ವಶಪಡಿಸಲು ಬಿಜಾಪುರದ ಸುಲ್ತಾನ ೧೬೩೯ರಲ್ಲಿ ಶಿವಾಜಿಯ ತಂದೆಯಾದ ಶಾಹಜಿಯ ಜೊತೆಗೆ ರಣದೂತ ಖಾನನನ್ನು ಕಳುಹಿಸಿದ. ಆದರೆ ಆ ಪ್ರಯತ್ನ ವಿಫಲವಾಯಿತು. ಅದೇ ರೀತಿ ಮಧುರೆ, ಇಕ್ಕೇರಿ ಮತ್ತು ನಾಗಮಂಗಲದ ನಾಯಕರು ತೊಂದರೆಯನ್ನುಂಟುಮಾಡಲು ಪ್ರಯತ್ನಿಸಿದರು. ಆದರೆ ನರಸರಾಜ ಅವರ ವ್ಯೂಹವನ್ನು ಸೋಲಿಸಲು ಸಮರ್ಥನಾದುದಷ್ಟೇ ಅಲ್ಲ, ಆ ಶತ್ರುಗಳನ್ನು ಹದ್ದುಬಸ್ತಿನಲ್ಲಿಡಲು ಪ್ರತಿದಾಳಿಯನ್ನು ಕೈಗೊಂಡು, ತನ್ನ ರಾಜ್ಯದ ಗಡಿಗಳನ್ನು ವಿಸ್ತರಿಸಿದ. ಅವನು ಕಾವೇರಿಪುರ, ಹಂಪಾಪುರ, ಚೆಟ್ಟದಪುರ, ಪೆರಿಯಾಪಟ್ಟಣ, ಅರಕಲಗೂಡು, ಕುಣಿಗಲ್, ರತ್ನಗಿರಿ, ದಣ್ಣಾಯಕನಕೋಟೆ, ಸತ್ಯಮಂಗಲ, ಹೊಸೂರು ಮತ್ತು ಯಲಹಂಕಗಳನ್ನು ಮಾಗಡಿ ಕೆಂಪೇಗೌಡನಿಂದ ವಶಪಡಿಸಿಕೊಂಡ. ಅವನು ಸಾಹಿತ್ಯ ಕಲೆಗಳ ಪೋಷಕನಾಗಿದ್ದ. ಅವನು ಶ್ರೀರಂಗಪಟ್ಟಣದಲ್ಲಿ ಒಂದು ಟಂಕಸಾಲೆಯನ್ನು ಸ್ಥಾಪಿಸಿದ. ಕೋಟೆಯೊಳಗಡೆ ನರಸಿಂಹಸ್ವಾಮಿ ದೇವಾಲಯವನ್ನು ಕಟ್ಟಿಸಿದ ಹಾಗೂ ಕಾಲುವೆಯೊಂದನ್ನು ತೋಡಿಸಿದ. ಮುಂದಿನ ಅರಸನಾದ ದೊಡ್ಡ ದೇವರಾಜನ ಆಳ್ವಿಕೆಯಲ್ಲಿ (೧೬೫೯–೭೩) ಇನ್ನೂ ಹೆಚ್ಚಿನ ವಿಸ್ತರಣಾ ಕಾರ್ಯಗಳು ನಡೆದುವು. ಚಾಮುಂಡಿ ಬೆಟ್ಟಕ್ಕೆ ಒಂದು ಸಾವಿರ ಮೆಟ್ಟಿಲುಗಳನ್ನು ಕಟ್ಟಿಸಲಾಯಿತು, ಛತ್ರಗಳು, ತಂಗುದಾಣಗಳು, ಕೆರೆಗಳು ನಿರ್ಮಾಣವಾದುವು. ರಾಜನೊಡನೆ ಕರಾರೊಂದನ್ನು ಮಾಡಿಕೊಳ್ಳುವುದಕ್ಕಾಗಿ ಫಾಲ್ಕನ್ ಎಂಬ ಹೆಸರಿನ ಫ್ರೆಂಚ್ ಏಜಂಟನೊಬ್ಬ ತಲಚೇರಿಯಿಂದ ಬಂದು ಮೈಸೂರು ಅರಸನ ಆಸ್ಥಾನವನ್ನು ಸಂದರ್ಶಿಸಿದ. ಆ ರೀತಿ ಸಂದರ್ಶನವಿತ್ತ ಮೊದಲನೆಯ ಐರೋಪ್ಯ ಈತ.

## ಚಿಕ್ಕ ದೇವರಾಜ

ಮೈಸೂರು ರಾಜ್ಯವನ್ನು ದಕ್ಷಿಣಭಾರತದ ಒಂದು ಪ್ರಬಲ ಶಕ್ತಿಯನ್ನಾಗಿ ಮಾಡುವಲ್ಲಿ ಬಹಳ ಮುಖ್ಯನಾದ ಅರಸನೆಂದರೆ ಚಿಕ್ಕದೇವರಾಜ (೧೬೭೩–೧೭೦೪). ಅವನು ಬಿಜಾಪುರ ಮತ್ತು ಗೋಲ್ಕೊಂಡಾದ ಶಾಹಿ ಸಂಸ್ಥಾನಗಳನ್ನಲ್ಲದೆ, ಮೊಗಲರು ಹಾಗೂ ಮರಾಠರನ್ನು ಜೊತೆಯಾಗಿಯೇ ಎದುರಿಸಿದನು. ಆಗ ಮರಾಠರು ಹಾಗೂ ಶಾಹಿ ಸಂಸ್ಥಾನದವರು ಮೈಸೂರನ್ನು ತಮ್ಮ ರಾಜಕೀಯತಂತ್ರದ ಆಡುಂಬೊಲವನ್ನಾಗಿ ಮಾಡಿಕೊಂಡಿದ್ದರು. ಅವರನ್ನು ಸೋಲಿಸುವುದಕ್ಕಾಗಿ ಚಿಕ್ಕದೇವರಾಜ ತನ್ನ ರಾಜನೀತಿಯ ನೈಪುಣ್ಯದಿಂದ ಮೊಗಲರು ತನ್ನ ಸಹಾಯಕ್ಕೆ ಬರುವಂತೆ ಮಾಡುವಲ್ಲಿ ಯಶಸ್ವಿಯಾದ. ಶಾಹಜಿಯ ಜಹಗೀರು ಆಗಿದ್ದ ಬೆಂಗಳೂರಿನ ಸಮೀಪವೇ ಮರಾಠರು ಇರುವುದು ಮೈಸೂರಿಗೆ ದೊಡ್ಡ ಬೆದರಿಕೆಯಾಗಿತ್ತು. ಚಿಕ್ಕದೇವರಾಜ ಮೊದಲಾಗಿ ಚಿಕ್ಕ ರಾಜ್ಯಗಳೊಡನೆ ಯುದ್ಧಮಾಡಿ, ಅವುಗಳನ್ನು ಒಂದೊಂದಾಗಿಯೇ ವಶಪಡಿಸಿಕೊಂಡ. ೧೬೭೫ರಲ್ಲಿ ಶ್ರೀರಂಗಪಟ್ಟಣದ ಮೇಲೆ ದಾಳಿ ಮಾಡಿದ ಶಿವಾಜಿಯನ್ನು ಯಶಸ್ವಿಯಾಗಿ ಎದುರಿಸಿದ. ಅದು ಚಿಕ್ಕದೇವರಾಜನ ಪಾಲಿಗೆ ಬಹು ದೊಡ್ಡ ವಿಜಯವಾಯಿತು. ಏಕೆಂದರೆ ಆತ ತನ್ನ ಕಾಲದ ಅತ್ಯಂತ ಯುದ್ಧ ನಿಪುಣ ವ್ಯಕ್ತಿಯನ್ನು ಸೋಲಿಸಿದ್ದ. ಆ ವಿಜಯವು ಅವನನ್ನು ಎಷ್ಟೊಂದು ಆನಂದಗೊಳಿಸಿತೆಂದರೆ, 'ಅಪ್ರತಿಮ ವೀರ' ಎಂಬ ಬಿರುದನ್ನು ಅವನು ಧರಿಸಿದ. ತನ್ನ ರಾಜ್ಯದ ಭಾಗಗಳನ್ನು ಆಕ್ರಮಿಸುವ ಪ್ರಯತ್ನ ಮಾಡುತ್ತಿದ್ದ ಬಿಜಾಪುರದ ಸುಲ್ತಾನರ ಸಂಚನ್ನು ಅವನು ವಿಫಲಗೊಳಿಸಿದ. ಶಿವಾಜಿಯ ಮರಣದ ಬಳಿಕ ಏಕೋಜಿಯಿಂದ, ೧೬೮೭ರಲ್ಲಿ ಬಹಳ ಚಾತುರ್ಯದಿಂದ ಬೆಂಗಳೂರನ್ನು ತನ್ನ ವಶಮಾಡಿಕೊಂಡನು. ಇದೊಂದು ಜಾಣತನದ ಕೆಲಸವಾಗಿತ್ತು. ಇದರಿಂದಾಗಿ ಮುಂದಿನ ಘಟನೆಗಳ ಗತಿಯೇ ಬದಲಾಯಿತು. ಔರಂಗಜೇಬ್ ಬಿಜಾಪುರದ ಮತ್ತು ಗೋಲ್ಕೊಂಡಾದ ಶಾಹಿಸಂಸ್ಥಾನಗಳು ಹಾಗೂ ಮರಾಠರ ಮೇಲೆ ಪ್ರಬಲ ದಾಳಿಯನ್ನು ಮಾಡಿದಾಗ, ಚಿಕ್ಕದೇವರಾಜ ಮೊಗಲರೊಡನೆ ಘರ್ಷಣೆ ಮಾಡಿಕೊಳ್ಳುವುದರ ಬದಲು ಸಖ್ಯವನ್ನು ಸಂಪಾದಿಸುವ ಜಾಣ ನಿರ್ಧಾರವನ್ನು ಕೈಗೊಂಡ. ೧೬೯೯ರಲ್ಲಿ ಔರಂಗಜೇಬನ ಬಳಿಗೆ ರಾಯಭಾರಿಯೊಬ್ಬನನ್ನು ಕಳುಹಿಸುವ ಪ್ರಮುಖ ಹೆಜ್ಜೆಯನ್ನಿಟ್ಟ. ಇದರಿಂದಾಗಿ ಔರಂಗ್‌ಜೇಬ್ ಇವನಿಗೆ 'ಜಗದೇವ'ನೆಂಬ ಬಿರುದನ್ನು ಕೊಟ್ಟ. ಈ ಬಿರುದನ್ನು ರಾಜಮುದ್ರೆಯಲ್ಲಿ ಕೆತ್ತಿಸಿ, ಎಲ್ಲಾ ರಾಜದಾಖಲೆಗಳಲ್ಲಿ ಬಳಸಲಾಯಿತು. ಇದರ ಹೊರತಾಗಿ ಔರಂಗಜೇಬ್ ಅವನಿಗೆ ದಂತದ ಕಿರೀಟವೊಂದನ್ನು ಕೊಟ್ಟ. ರಾಜನೈಪುಣ್ಯಕ್ಕೆ ಮಾತ್ರವಲ್ಲದೆ ಆಡಳಿತಾತ್ಮಕ ಸಾಮರ್ಥ್ಯಕ್ಕೂ ಚಿಕ್ಕದೇವರಾಜನು ಹೆಸರುವಾಸಿಯಾಗಿದ್ದ. ಅವನು ಅಠಾರ ಕಚೇರಿ ಎಂಬ ಹೆಸರಿನಲ್ಲಿ ಹದಿನೆಂಟು ವಿಭಾಗಗಳನ್ನು ತೆರೆದು, ಸಂಪನ್ಮೂಲಗಳನ್ನು ಜಾಗ್ರತೆಯಾಗಿ ಕ್ರೋಢೀಕರಿಸಿದ. ಈ ಖಜಾನೆಯ ಕಾರಣವಾಗಿಯೇ ಅವನಿಗೆ 'ನವಕೋಟಿ ನಾರಾಯಣ' ಎಂಬ ಹೆಸರು ಬಂತು. ಅವನು ರಾಜ್ಯದಲ್ಲಿ ಭ್ರಷ್ಟಾಚಾರವನ್ನು ಹತ್ತಿಕ್ಕಿದ, ವಾಣಿಜ್ಯ ಉದ್ಯಮಗಳನ್ನು ಪ್ರೋತ್ಸಾಹಿಸಿದ, ತೆರಿಗೆ ಸುಂಕಗಳನ್ನು ನಿಯಮಿತಗೊಳಿಸಿದ, ಈ ಮೂಲಕ ಮೈಸೂರು ಅರಸರ ಪೈಕಿ ಉನ್ನತ ಸ್ಥಾನವನ್ನು ಪಡೆದ.

ಚಿಕ್ಕದೇವರಾಜನ ಉತ್ತರಾಧಿಕಾರಿಗಳು ಅಂತಹ ಸಮರ್ಥರಿರಲಿಲ್ಲ. ಅವ್ಯವಸ್ಥೆ ತಲೆ ಹಾಕಿತು. ದಳವಾಯಿಗಳ ಕೈಗೆ ಅಧಿಕಾರ ಹೋಯಿತು. ಮೊಗಲರು ಈ ಅವಕಾಶದ ದುರುಪಯೋಗ ಮಾಡಿಕೊಂಡು, ೧೭೦೫ರಲ್ಲಿ ಮೈಸೂರಿಗೆ ಆಕ್ರಮಣ ಮಾಡಿದರು. ಆಗಿನ ರಾಜ ಒಪ್ಪಂದ ಮಾಡಿಕೊಳ್ಳುವುದಕ್ಕಾಗಿ ಒಂದೂವರೆ ಕೋಟಿ ರೂಪಾಯಿಗಳನ್ನು ಕೊಡಬೇಕಾಯಿತು. ೧೭೧೪ರಿಂದ ೧೭೬೦ರ ವರೆಗಿನ ಕಾಲವನ್ನು ದಳವಾಯಿಗಳ ರಾಜ್ಯಭಾರವೆಂದು ಕರೆಯಬಹುದು. ಈ ಪರಿಸ್ಥಿತಿ ಬಹುಮಟ್ಟಿಗೆ ಭಾರತದ ಎಲ್ಲ ಕಡೆಗಳಲ್ಲಿಯೂ ಇತ್ತು. ಹೈದರನ ಉದಯದವರೆಗೆ ಮೈಸೂರಿನ ಸ್ಥಿತಿ ಬದಲಾಗಲಿಲ್ಲ.

## ಹೈದರ ಆಲಿ

ಮೊಗಲರು, ಮರಾಠರು ಮತ್ತು ಇಂಗ್ಲೀಷರ ಹಿತಾಸಕ್ತಿಗಳ ನಡುವೆ ಘರ್ಷಣೆ ಇರುವ ಸಂದರ್ಭದಲ್ಲಿ ಹೈದರ್ ಆಲಿ ರಾಜಕೀಯ ರಂಗಕ್ಕೆ ಬಂದ. ಅವನು ಆ ಕಾಲದ ಅಧಿಕಾರ ರಾಜಕೀಯದಲ್ಲಿ ಪ್ರಧಾನವಾದ ಪಾತ್ರ ವಹಿಸಿದ. ಆ ಮೂಲಕ ಚಿಕ್ಕ ರಾಜ್ಯವಾದ ಮೈಸೂರನ್ನು ಪ್ರಬಲ ಶಕ್ತಿಯೊಂದರ ಸ್ಥಾನಕ್ಕೆ ಕೊಂಡೊಯ್ದ. ಅವನು ೧೭೨೧ರಲ್ಲಿ ಕೋಲಾರ ಜಿಲ್ಲೆಯ ಬುದಿಕೋಟೆಯಲ್ಲಿ ಜನಿಸಿದ. ಮೈಸೂರಿನ ದಳವಾಯಿ ನಂಜರಾಜನ ಸೈನ್ಯದಲ್ಲಿ ನಾಯಕನಾದ. ನಂಜರಾಜನ ಆಣತಿಯಂತೆ ಕರ್ನಾಟಕದ ನವಾಬನ ಸಹಾಯಕ್ಕಾಗಿ ತಲಚೇರಿಗೆ ಪ್ರೇಷಿತನಾಗಿ ಚಂದಾಸಾಹೇಬ ಹಾಗೂ ಫ್ರೆಂಚರ ವಿರುದ್ಧ ಹೋರಾಡಿದ. ಈ ಯುದ್ಧಗಳಲ್ಲಿ ಹೈದರ್ ಪ್ರಮುಖ ಪಾತ್ರ ವಹಿಸಿ, ಯೂರೋಪಿಯನ್ ಯುದ್ಧತಂತ್ರಗಳಲ್ಲಿ ಅನುಭವ ಗಳಿಸಿದ. ಚಂದಾ ಸಾಹೇಬನ ಮರಣದ ಬಳಿಕ, ಮೊದಲೇ ಮಾತುಕೊಟ್ಟಂತೆ ತಿರುಚಿನಾಪಳ್ಳಿಯನ್ನು ಒಪ್ಪಿಸಲು ನಂಜರಾಜ ಕೇಳಿದಾಗ, ನವಾಬ ನಿರಾಕರಿಸಿದ. ಇದರಿಂದಾಗಿ ಮದ್ರಾಸು ಮತ್ತು ಮೈಸೂರಿನ ನಡುವೆ ಹಗೆತನ ಆರಂಭವಾಯಿತು. ನಂಜರಾಜ ಫ್ರೆಂಚರ ಜೊತೆಗೆ ಸೇರಿಕೊಂಡು, ಇಂಗ್ಲಿಷರ ವಿರುದ್ಧ ತಿರುಗಿ ಬಿದ್ದ. ಈ ಯುದ್ಧ ೧೭೫೧ರಿಂದ ೧೭೫೪ರವರೆಗೆ ನಾಲ್ಕು ವರ್ಷಗಳ ಕಾಲ ನಡೆಯಿತು. ಹೈದರ್ ಯುದ್ಧದುದ್ದಕ್ಕೂ ಭಾಗವಹಿಸಿದ. ಅವನು ಚಿನ್ನ, ಮದ್ದುಗುಂಡು, ಶಸ್ತ್ರಾಸ್ತ್ರಗಳನ್ನು ಹೊರೆ ಹೊರೆಯಾಗಿ ಗಾಡಿಗಳಲ್ಲಿ ಸಾಗಿಸಿ, ತನ್ನದೇ ಆದ ಸಣ್ಣ ಸೈನ್ಯವೊಂದನ್ನು ಕಟ್ಟಿದ. ಆದರೆ ನಂಜರಾಜನ ಪಾಲಿಗೆ ಈ ಯುದ್ಧ ದೊಡ್ಡ ಹೊಡೆತವನ್ನೇ ಕೊಟ್ಟಿತು; ಅವನ ಸಂಪತ್ತೆಲ್ಲಾ ಕರಗಿತು, ಸೇನೆ ದುರ್ಬಲವಾಯಿತು. ಹೈದರನೇ ನಂಜರಾಜನ ಸಹಾಯಕ್ಕೆ ಬಂದು, ಅವನಿಗೆ ದೊಡ್ಡ ಮೊತ್ತದ ಹಣವನ್ನು ಸಾಲವಾಗಿ ಕೊಡಬೇಕಾಯಿತು. ಇದಕ್ಕೆ ಪ್ರತಿಯಾಗಿ ಹೈದರ್ ಕೆಲವು ತಾಲೂಕುಗಳ ಕಂದಾಯದ ಹಣವನ್ನು ಪಡೆದ. ಮರಾಠರು ಮೈಸೂರಿಗೆ ಆಕ್ರಮಣ ಮಾಡಿದಾಗ, ದೊಡ್ಡ ಮೊತ್ತದ ಹಣವನ್ನು ಕೊಟ್ಟು ಅವರೊಡನೆ ಶಾಂತಿ ಒಪ್ಪಂದ ಮಾಡಿಕೊಳ್ಳುವುದರ ಬದಲು, ಯುದ್ಧರಂಗದಲ್ಲೇ ಅವರನ್ನು ಎದುರಿಸಬೇಕು ಎಂದು ಹೈದರ್ ನಂಜರಾಜನಿಗೆ ಉಪದೇಶಿಸಿದನು. ಈ ಕೆಲಸವನ್ನು ಹೈದರನಿಗೇ ಒಪ್ಪಿಸಲಾಯಿತು. ಅವನು ಅದನ್ನು ಯಶಸ್ವಿಯಾಗಿ ನಿರ್ವಹಿಸಿ, ಮರಾಠರನ್ನು ಹಿಮ್ಮೆಟ್ಟಿಸಿದ. ಅದಕ್ಕೆ ಪ್ರತಿಫಲವಾಗಿ ಇನ್ನೂ ಕೆಲವು ತಾಲೂಕುಗಳ ಕಂದಾಯವನ್ನು ಪಡೆದ. ಇದೇ ಸ್ಥಿತಿ ಅನೇಕ ಬಾರಿ ಪುನರಾವರ್ತನೆಗೊಂಡಿತು. ಕೊನೆಗೆ, ಮೈಸೂರು ರಾಜ್ಯದ ಹೆಚ್ಚಿನ ಭಾಗ ಹೈದರನ ವಶವಾಗಿ, ಆತನೇ ರಾಜ್ಯದ ಒಡೆಯನಂತಾಗಿ, ನಂಜರಾಜ ಹೆಸರಿಗೆ ಮಾತ್ರ ಪಟ್ಟದಲ್ಲಿ ಉಳಿದ. ಹೈದರನ ಕಾರ್ಯದರ್ಶಿ ಖಂಡೇರಾವನನ್ನು ತನ್ನೆಡೆಗೆ ಸೆಳೆದು ಕೊಂಡು, ಹೈದರನನ್ನು ಅಧಿಕಾರದಿಂದ ಕೆಳಗಿಳಿಸುವಲ್ಲಿ ನಂಜರಾಜನು ಒಮ್ಮೆಗೆ ಯಶಸ್ವಿಯಾದ. ಆದರೆ ತನ್ನ ಚಾಣಾಕ್ಷತನ, ಧೈರ್ಯ, ಸಾಹಸಗಳಿಂದ ಹೈದರ್ ಕಳೆದುದೆಲ್ಲವನ್ನೂ ಮತ್ತೆ ಗಳಿಸಿ, ೧೭೬೧ರಲ್ಲಿ ಮೈಸೂರಿನ ಒಡೆಯನಾದ.

ಹೈದರ್ ತನ್ನ ಅಧಿಕಾರವನ್ನು ಭದ್ರಗೊಳಿಸಿ ವಿಸ್ತರಿಸಲು ಹೆಚ್ಚು ಗಮನವಿತ್ತ. ಅವನು ಹೈದರಾಬಾದಿನ ಬಸಾಲತ್‌ಜಂಗನಿಂದ ಶಿರಾದ ನವಾಬಗಿರಿಯ ಸನ್ನದನ್ನು ಪಡೆದು ಹೊಸಕೋಟೆ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಪೆನುಗೊಂಡೆ, ನಂದಿದುರ್ಗ, ರಾಯದುರ್ಗ ಮತ್ತು ಹರಪನಹಳ್ಳಿಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಉತ್ತರದ ಹೊನ್ನಾವರದಿಂದ ದಕ್ಷಿಣದ ಮಂಗಳೂರಿನ ವರೆಗೆ ವ್ಯಾಪಿಸಿದ್ದ, ಸಂಪದ್ಭರಿತವಾಗಿದ್ದ ಬಿದನೂರನ್ನು ೧೭೬೩ರಲ್ಲಿ ಹೈದರ್ ಗೆದ್ದು, ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಈ ವಿಜಯದ ಬೆನ್ನಿಗೇ ೧೭೬೬ರಲ್ಲಿ ಮಲಬಾರನ್ನು ವಶಪಡಿಸಿಕೊಂಡಾಗ, ಮಂಗಳೂರಿನಿಂದ ಕೊಚ್ಚಿಯ ವರೆಗಿನ ಸಂಪೂರ್ಣ ಪ್ರದೇಶ ಹೈದರನ ಅಧಿಕಾರ ವ್ಯಾಪ್ತಿಗೆ ಸೇರಿತು. ಹೈದರನ ಅಧಿಕಾರ ಇಷ್ಟು ಬೇಗನೆ ಈ ರೀತಿ ವಿಸ್ತರಣೆಗೊಂಡದ್ದು ಅವರ ನೆರೆಯವರ–ಅದರಲ್ಲೂ ಮುಖ್ಯವಾಗಿ ಮರಾಠರು, ನಿಜಾಮ ಮತ್ತು ಇಂಗ್ಲಿಷರ–ಮತ್ಸರ ಹೊಗೆಯಾಡಲು ಕಾರಣವಾಯಿತು. ಈ ಮೂರೂ ಶಕ್ತಿಗಳು ಒಟ್ಟುಸೇರಿ ಹೈದರನ ವಿರುದ್ಧ ಮೈತ್ರಿಕೂಟವೊಂದನ್ನು ರಚಿಸಿಕೊಂಡವು. ಇದರ ಪರಿಣಾಮವಾಗಿ ಒಂದನೆಯ ಮೈಸೂರು ಯುದ್ಧ ೧೭೬೭ರಿಂದ ೧೭೬೯ರ ವರೆಗೆ ನಡೆಯಿತು. ಈ ಯುದ್ಧದ ಕಾರಣಗಳು ಅತ್ಯಂತ ವಿಚಿತ್ರವಾಗಿದ್ದು, ಆಗಿನ ಕಾಲದ ದಕ್ಷಿಣಭಾರತದ ಗೊಂದಲಮಯ ರಾಜಕೀಯ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಇಂಗ್ಲಿಷರು ಉತ್ತರದ 'ಸರ್ಕಾರ್'ಗಳನ್ನು ಆಕ್ರಮಿಸಿದಾಗ ಸಮಸ್ಯೆ ಆರಂಭವಾಯಿತು. ಈ 'ಸರ್ಕಾರ್'ಗಳು ನಿಜಾಮನಿಗೆ ಸಂಬಂಧಿಸಿದ್ದ ಕಾರಣ, ಅವನು ಇಂಗ್ಲಿಷರ ವಿರುದ್ಧದ ಹೋರಾಟಕ್ಕಾಗಿ ತನ್ನ ಕೂಟಕ್ಕೆ ಹೈದರನನ್ನು ಆಹ್ವಾನಿಸಿದ. ಆದರೆ ಇದನ್ನು ಮೊದಲೇ ನಿರೀಕ್ಷಿಸಿದ್ದ ಇಂಗ್ಲಿಷರು ಹೈದರಾಬಾದಿಗೆ ರಾಯಭಾರಿಯೊಬ್ಬನನ್ನು ಕಳುಹಿಸಿ ,ಅವನನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವಲ್ಲಿ ಯಶಸ್ವಿಯೊದರು, ಅವನು ಕಳೆದುಕೊಂಡ 'ಸರ್ಕಾರ್'ಗಳ ಬದಲಿಗೆ ಮೈಸೂರಿನ ಒಂದು ಭಾಗವನ್ನು ಅವನಿಗೆ ಕೊಡುವುದಾಗಿ ಭರವಸೆಯಿತ್ತರು. ಇದೇ ವೇಳೆಗೆ ಪೇಶ್ವೆ ಮಾಧವರಾಯನ ನೇತೃತ್ವದಲ್ಲಿ ಮರಾಠರು ಮೈಸೂರಿನ ಮೇಲೆ ದಾಳಿ ಮಾಡಲು ಸಿದ್ಧತೆ ನಡೆಸಿದ್ದರು. ಮೂರು ನೆರೆಯ ರಾಜ್ಯಗಳು ತನ್ನ ಮೇಲೆ ಆಕ್ರಮಣ ಮಾಡುವ ಪರಿಸ್ಥಿತಿಯನ್ನು ಹೈದರ್ ಕಂಡುಕೊಂಡ. ರಾಜನೀತಿಜ್ಞನಾದ ಹೈದರ್ ಮಾಧವರಾಯನೊಡನೆ ಶಾಂತಿ ಒಪ್ಪಂದವೊಂದನ್ನು ಮಾಡಿಕೊಂಡ; ಚಂಚಲಚಿತ್ತನಾದ ನಿಜಾಮನನ್ನು ಮತ್ತೆ ತನ್ನೆಡೆಗೆ ಸೆಳೆದು ಕೊಂಡ; ನಿಜಾಮನೇ ಇಂಗ್ಲಿಷರ ವಿರುದ್ಧ ತಿರುಗಿ ಬೀಳುವಂತೆ ಮಾಡಿದ. ಸ್ವಲ್ಪ ಆಘಾತವನ್ನೇ ತಡೆಯಲಾರದೆ ನಿಜಾಮ ಇಂಗ್ಲಿಷರೊಡನೆ ಒಪ್ಪಂದವನ್ನು ಮಾಡಿಕೊಳ್ಳಬೇಕಾಯಿತು. ಇದರ ಪರಿಣಾಮವಾಗಿ, ಇಂಗ್ಲಿಷರ ವಿರುದ್ಧ ಹೋರಾಡಲು ಹೈದರನೊಬ್ಬನೇ ಉಳಿಯಬೇಕಾಯಿತು. ಸುಮಾರು ಎರಡು ವರ್ಷಗಳ ಕಾಲ ನಡೆದ ಯುದ್ಧ ಅಂತಿಮವಾಗಿ ಹೈದರನಿಗೇ ಪ್ರಯೋಜನಕಾರಿಯಾಯಿತು. ೧೭೬೯ರ ಮಾರ್ಚ್‌ನಲ್ಲಿ ಮದ್ರಾಸಿನಲ್ಲಿ ಇಂಗ್ಲಿಷರ ಹೆಬ್ಬಾಗಿಲನ್ನು ತಟ್ಟಿದ ಹೈದರ್ ತನಗೆ ಅನುಕೂಲವಾದ ಕರಾರಿಗೆ ಇಂಗ್ಲಿಷರು ಒಪ್ಪುವಂತೆ ಮಾಡಿದ. ಪ್ಲಾಸಿ ಕದನದ ಬಳಿಕ, ಭಾರತೀಯ ರಾಜನೊಬ್ಬ ಇಂಗ್ಲಿಷರ ವಿರುದ್ಧ ಮೇಲುಗೈ ಪಡೆದ ಮೊತ್ತಮೊದಲನೆಯ ಸಂದರ್ಭ ಇದು. ಮದ್ರಾಸಿನ ಕರಾರು ಭಾರತೀಯ ಇತಿಹಾಸದ ಮೇಲೆ ವಿಶೇಷವಾದ ಪರಿಣಾಮವನ್ನು ಉಂಟುಮಾಡಿತು. ಇದರಿಂದಾಗಿ ಮರಾಠರ ಮತ್ಸರ ಉಲ್ಬಣಿಸಿತು; ಬ್ರಿಟಿಷ್ ಪಾರ್ಲಿಮೆಂಟು ಈಸ್ಟ್ ಇಂಡಿಯಾ ಕಂಪೆನಿಯ ವ್ಯವಹಾರಗಳಲ್ಲಿ ಮಧ್ಯೆ ಪ್ರವೇಶಿಸಿ, ನಿಯಂತ್ರಕ ಕಾನೂನನ್ನು ಜ್ಯಾರಿಗೊಳಿಸಿತು.

ಎರಡನೆಯ ಮೈಸೂರು ಯುದ್ಧದಲ್ಲಿ (೧೭೮೦–೮೪) ಕೂಡ ಹೈದರ್ ಇಂಗ್ಲಿಷರಿಗೆ ಪ್ರಬಲವಾದ ಹೊಡೆತವನ್ನು ಕೊಟ್ಟ. ಕರ್ನಲ್ ಬೈಲಿಯ ನೇತೃತ್ವದಲ್ಲಿ ಇಡೀ ಮದ್ರಾಸು ಸೇನೆ ಪಾಲಿಲೋರಿನ ಕದನದಲ್ಲಿ ನುಚ್ಚುನೂರಾಯಿತು; ಬೈಲಿಯನ್ನು ಸೆರೆಹಿಡಿಯಲಾಯಿತು. ಬಕ್ಸರ್‌ನ ವೀರನಾದ ಸರ್ ಹೆಕ್ಟರ್ ಮನ್ರೋ ಕಾಂಚೀವರಂನ ಕೆರೆಯಲ್ಲಿ ಕೋವಿಗಳನ್ನು

ಎಸೆದು, ಜೀವದಾಶೆಯಿಂದ ಪಲಾಯನ ಮಾಡಿದ. ವೈಟ್‌ಹಿಲ್‌ನ ಹಿರಿತನದ ಮದ್ರಾಸು ಸರಕಾರವನ್ನು ವಜಾಮಾಡಲಾಯಿತು. ಈ ಯುದ್ಧದ ಪರಿಣಾಮ ಇಂಗ್ಲಿಷರಿಗೆ ಬಹಳ ಆಘಾತಕಾರಿಯಾಯಿತು. ಹೈದರ್ ಈ ಯುದ್ಧದ ನಡುವೆಯೇ ೧೭೮೨ರ ಡಿಸೆಂಬರ್‌ನಲ್ಲಿ ಮರಣವನ್ನಪ್ಪಿದ; ಅವನ ಮಗನಾದ ಟಿಪ್ಪು ಅಧಿಕಾರ ವಹಿಸಿಕೊಂಡ. ಹೈದರ್ ೧೮ನೆಯ ಶತಮಾನದ ಅತ್ಯಂತ ಆಕರ್ಷಕ, ಧೈರ್ಯಶಾಲಿ, ಚಾಣಾಕ್ಷ, ಬುದ್ಧಿವಂತ ರಾಜನಾಗಿದ್ದ. ಅವನಿಗೆ ಓದುಬರಹ ಬಾರದಿದ್ದರೂ, ಅಸಾಮಾನ್ಯವಾದ ಸ್ಮರಣಶಕ್ತಿ ಇತ್ತು. ಅವನು ರಾಜಕೀಯ ಹಾಗೂ ಯುದ್ಧವಿದ್ಯೆಯ ರಂಗಗಳಲ್ಲಿ ಪ್ರವೀಣನಾಗಿದ್ದ. ಅವನ ನಾಯಕತ್ವದಲ್ಲಿ ಮೈಸೂರು ಸೈನ್ಯ ಯುದ್ಧವಿದ್ಯೆಯಲ್ಲಿ ಇಡೀ ಭಾರತಕ್ಕೇ ಪಾಠಶಾಲೆಯಾಯಿತು. ಅಲೆಗ್ಸಾಂಡರ್ ಡೌ ಎಂಬವನು ಹೈದರನ ಬಗ್ಗೆ ಈ ರೀತಿ ಬರೆದಿದ್ದಾನೆ. "ನಮ್ಮ ಗೋಡೆಗಳ ಮೇಲ್ಗಡೆ ಹಾರುವುದಕ್ಕೆ ಅವನ ಕುದುರೆಗಳಿಗೆ ರೆಕ್ಕೆಗಳಿವೆ ಎಂಬ ಭಾವನೆ ನಮಗೆ ಉಂಟಾಗುತ್ತಿತ್ತು". ದಕ್ಷಿಣ ಭಾರತದಲ್ಲಿ ಬ್ರಿಟಿಷರ ವಿಸ್ತರಣೆಯನ್ನು ಯಶಸ್ವಿಯಾಗಿ ತಡೆದದ್ದು ಹಾಗೂ ಒಂದೇ ರಾಜ್ಯದ ಅಡಿಯಲ್ಲಿ ಇಡೀ ಕರ್ನಾಟಕವನ್ನು ಒಂದುಗೂಡಿಸಿದ್ದು ಹೈದರನ ವಿಶೇಷವಾದ ಸಾಧನೆ.

## ಟಿಪ್ಪು ಸುಲ್ತಾನ

ಬ್ರಿಟಿಷರಿಗೆ ಪ್ರಬಲ ಪ್ರತಿರೋಧವನ್ನು ಒಡ್ಡಿದ ದೃಷ್ಟಿಯಿಂದ, ಟಿಪ್ಪು ಸುಲ್ತಾನನ ಆಳ್ವಿಕೆ ಸಂಕ್ಷಿಪ್ತವಾದರೂ, ಪ್ರಮುಖವಾಗಿದೆ. ಬ್ರಿಟಿಷರನ್ನು ತನ್ನ ಪರಮ ಶತ್ರುಗಳು ಎಂದು ತಿಳಿದಿದ್ದ ಅವನು ಅವರನ್ನು ಈ ದೇಶದಿಂದ ಹೊರಗಟ್ಟುವುದೇ ತನ್ನ ಬದುಕಿನ ಕರ್ತವ್ಯವೆಂದು ತಿಳಿದು, ಅದಕ್ಕಾಗಿ ತನ್ನ ಪ್ರಾಣವನ್ನೂ ತ್ಯಾಗಮಾಡಿದ. 'ನರಿಯಾಗಿ ನೂರು ವರ್ಷ ಬದುಕುವುದಕ್ಕಿಂತ ಸಿಂಹದಂತೆ ಒಂದು ದಿನ ಬಾಳುವುದು ಶ್ರೇಯಸ್ಕರ' ಎನ್ನುವುದು ಅವನ ಜೀವನಮಂತ್ರವಾಗಿತ್ತು. ತನ್ನ ರಾಜ್ಯದ ಜನರ ಕಲ್ಯಾಣಕ್ಕಾಗಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವುದು ಅವನ ಬದುಕಿನ ಇನ್ನೊಂದು ಪರಮ ಉದ್ದೇಶವಾಗಿತ್ತು. ಅವನು ವಾಣಿಜ್ಯ ಉದ್ಯಮಗಳನ್ನು, ಕೃಷಿ ಕೈಗಾರಿಕೆಗಳನ್ನು ಪ್ರೋತ್ಸಾಹಿಸಿದ. ಆಡಳಿತವನ್ನು ಸುಧಾರಿಸಿದ. ನಾಣ್ಯ ಹಾಗೂ ಕ್ಯಾಲೆಂಡರನ್ನು ಸುಧಾರಿಸಿದ. ನೌಕಾಪಡೆಯನ್ನು ನಿರ್ಮಿಸಿದನು. ಆ ಮೂಲಕ ಮೈಸೂರನ್ನು ಸಂಪದ್ಭರಿತ ಅಭಿವೃದ್ಧಿಶೀಲ ರಾಜ್ಯವಾಗಿ ಪರಿವರ್ತಿಸಿದ. ಟಿಪ್ಪು ಕೋಲಾರ ಜಿಲ್ಲೆಯ ದೇವನಹಳ್ಳಿಯಲ್ಲಿ ೧೭೫೦ರಲ್ಲಿ ಜನಿಸಿದ. ಅವನು ತನ್ನ ಕಾಲದ ವಿವಿಧ ವಿದ್ಯೆಗಳಲ್ಲಿ ಪಾರಗಂತನಾಗಿದ. ಅವನು ತನ್ನ ತಂದೆಯ ಜೊತೆಗೆ ರಾಜತಾಂತ್ರಿಕ ಸಭೆಗಳಲ್ಲಿ ಭಾಗವಹಿಸುತ್ತಿದ್ದ. ಮೊದಲನೆಯ ಮತ್ತು ಎರಡನೆಯ ಮೈಸೂರು ಯುದ್ಧಗಳಲ್ಲಿ ಟಿಪ್ಪುವು ಭಾಗವಹಿಸಿದ. ಬೈಲಿಗೆ ಹಾಗೂ ಕರ್ನಲ್ ಬ್ರೈಟ್‌ವೈಟ್‌ಗೆ ಪ್ರಬಲವಾದ ಆಘಾತವನ್ನು ಕೊಟ್ಟವನು ಟಿಪ್ಪು. ಹೈದರನ ಮರಣದ ಬಳಿಕ, ಎರಡನೆಯ ಮೈಸೂರು ಯುದ್ಧವನ್ನು ಯಶಸ್ವಿಯಾಗಿ ಮುಂದುವರಿಸಿ, ೧೭೮೪ರಲ್ಲಿ ಇಂಗ್ಲಿಷರ ಜೊತೆಗಿನ 'ಮಂಗಳೂರು ಒಪ್ಪಂದ' ತನಗೆ ಪ್ರಯೋಜನಕಾರಿಯಾಗುವಂತೆ ಮಾಡಿದ ಸಮರ್ಥ ವ್ಯಕ್ತಿ ಟಿಪ್ಪು. ವಾರನ್ ಹೇಸ್ಟಿಂಗ್ಸ್ 'ಅವಮಾನಕಾರಿ ಕರಾರು' ಎಂದು ಕರೆದದ್ದು ಇದೇ ಒಪ್ಪಂದವನ್ನು.

ಎರಡನೆಯ ಮೈಸೂರು ಯುದ್ಧದ ಬಳಿಕ ಟಿಪ್ಪು ೧೭೮೬–೮೭ರಲ್ಲಿ ಮರಾಠರು ಹಾಗೂ ನಿಜಾಮರ ವಿರುದ್ಧ ಹೋರಾಡಬೇಕಾಯಿತು. ಈ ಯುದ್ಧದಲ್ಲಿ ತನ್ನ ಶತ್ರುಬಣಕ್ಕಿಂತ ಟಿಪ್ಪುವಿನ ಕೈ ಸ್ವಲ್ಪ ಮೇಲಾಯಿತು. ಗಜೇಂದ್ರಗಡದ ಒಪ್ಪಂದದ ಮೂಲಕ ಆ ಯುದ್ಧ ಕೊನೆಗೊಂಡಿತು. ಆಗ ಟಿಪ್ಪು ಇಂಗ್ಲಿಷರ ವಿರುದ್ಧ ಒಟ್ಟಾಗಬೇಕೆಂದು ಮರಾಠರು ಹಾಗೂ ನಿಜಾಮನಿಗೆ ತಿಳಿಸಿದ. ಆದರೆ ಈ ಪ್ರಯತ್ನದಲ್ಲಿ ಅವನಿಗೆ ಯಶಸ್ಸು ಸಿಗಲಿಲ್ಲ. ಆಗ ಅವನು ಹೊರಗಿನ ಶಕ್ತಿಗಳಾದ ಫ್ರಾನ್ಸ್, ತುರ್ಕಿ, ಇರಾನ್ ಮತ್ತು ಅಫಘಾನಿಸ್ಥಾನದವರ ಸಹಾಯ ಪಡೆಯಲು ಯತ್ನಿಸಿದ. ಅವನಿಗೆ ಇದ್ದ ಉದ್ದೇಶಗಳು ಎರಡು: ಒಂದು, ಅವರಿಂದ ರಾಜಕೀಯ ಹಾಗೂ ಸೈನಿಕ ಬೆಂಬಲವನ್ನು ಪಡೆಯುವುದು; ಇನ್ನೊಂದು, ಅವರ ಸಹಾಯದಿಂದ ವಾಣಿಜ್ಯ ಉದ್ಯಮಗಳನ್ನು ಅಭಿವೃದ್ಧಿ ಪಡಿಸುವುದು ಹಾಗೂ ಕುಶಲಕರ್ಮಿಗಳನ್ನು ಪಡೆಯುವುದು. ಕರ್ನಾಟಕದಲ್ಲಿ ಕಾಳುಮೆಣಸು, ಏಲಕ್ಕಿ, ಗಂಧ, ದಂತ, ರೇಷ್ಮೆ, ತೆಂಗು, ಹೊಗೆಸೊಪ್ಪು, ಆನೆ ಮುಂತಾದ ಅಮೂಲ್ಯವಾದ ವಾಣಿಜ್ಯ ಸಾಮಗ್ರಿಗಳಿದ್ದುವು. ಇವುಗಳಿಗೆ ವಿದೇಶಿ ಮಾರುಕಟ್ಟೆಯಲ್ಲಿ ವಿಶೇಷವಾದ ಬೇಡಿಕೆ ಇತ್ತು. ಈ ವಸ್ತುಗಳು ಇನ್ನೊಬ್ಬರ ಕೈಗೆ ಸಿಗುವುದರ ಬದಲು, ತಾನೇ ವಾಣಿಜ್ಯ ಸಂಪರ್ಕಗಳನ್ನು ಬೆಳೆಸಬೇಕೆಂದು ಟಿಪ್ಪು ಬಯಸಿದ. ಅವನು ಚೀನಾ, ತುರ್ಕಿ, ಮಸ್ಕತ್, ಪೆಗು, ಆರ್ಮೇನಿಯಾ, ಓಮುಜ್ ಹಾಗೂ ಕಛ್‌ಗಳ ಜೊತೆಗೆ ವ್ಯಾಪಾರಸಂಬಂಧಗಳನ್ನು ಕುದುರಿಸಿದನು. ಟರ್ಕಿಯ ಸುಲ್ತಾನನಿಂದ ರಾಜಕೀಯ ಹಾಗೂ ಸೈನಿಕ ಸಹಾಯ ಪಡೆಯುವುದಕ್ಕಾಗಿ ಟಿಪ್ಪು ೧೭೮೫ರಲ್ಲಿ ಕಾನ್‌ಸ್ಟಂಟಿನೋಪ್‌ಲ್‌ಗೆ ಒಬ್ಬ ರಾಯಭಾರಿಯನ್ನು ಕಳುಹಿಸಿದ. ಆದರೆ ಆ ವೇಳೆಗೆ ತುರ್ಕಿ ಕಷ್ಟದಲ್ಲಿತ್ತು. ಅದರ ಭದ್ರತೆಗೆ ರಶ್ಯಾದಿಂದ ವಿಶೇಷ ಬೆದರಿಕೆ ಇತ್ತು. ಇದಕ್ಕಾಗಿ ಅದು ಬ್ರಿಟಿಷರ ಸಹಾಯ ಬಯಸಿತ್ತು. ಇದರಿಂದಾಗಿ ಬ್ರಿಟಿಷರ ಸ್ನೇಹವಲಯದಿಂದ ಹೊರಬರಲು ತುರ್ಕಿ ಸಿದ್ಧವಿರಲಿಲ್ಲ. ಅಂತೂ ಟಿಪ್ಪುವಿನ ಬಯಕೆ ಈಡೇರಲಿಲ್ಲ. ಅವನು ಸಹಾಯಕ್ಕಾಗಿ ಫ್ರಾನ್ಸ್‌ನ ಕಡೆಗೆ ಮುಖಮಾಡಬೇಕಾಯಿತು. ಅವನು ೧೭೮೭ರಲ್ಲಿ ಒಬ್ಬ ರಾಯಭಾರಿಯನ್ನು ಪ್ಯಾರಿಸ್‌ಗೆ ಕಳುಹಿಸಿದ. ಆದರೆ ಆ ವೇಳೆಗಾಗಲೇ ಆಂತರಿಕ ಆಂದೋಲನಗಳಿಂದಾಗಿ ತೊಂದರೆಗೊಳಗಾಗಿದ್ದ ಫ್ರಾನ್ಸ್ ದೂರದ ರಾಷ್ಟ್ರವೊಂದಕ್ಕೆ ಸೈನಿಕ ಬೆಂಬಲ ಕೊಡಲು ಮುಂದೆ ಬರಲಿಲ್ಲ.

ಟಿಪ್ಪು ಇಂಗ್ಲಿಷರ ಜೊತೆಗೆ ಇನ್ನೊಮ್ಮೆ ಯುದ್ಧ ಮಾಡಬೇಕಾಯಿತು. ಇದು ಮೂರನೆಯ ಮೈಸೂರು ಯುದ್ಧ. ವಿವಾದಾಸ್ಪದ ಪ್ರದೇಶದಲ್ಲಿ ಸಂರಕ್ಷಕ ಗೋಡೆಯನ್ನು ತಿರುವಾಂಕೂರಿನ ರಾಜ ನಿರ್ಮಿಸಿದ ಘಟನೆ ಈ ಯುದ್ಧಕ್ಕೆ ಕಾರಣವಾಗಿತ್ತು. ಆ ಗೋಡೆಯನ್ನು ಕೆಡವಬೇಕೆಂದು ಟಿಪ್ಪುವಿನ ಒತ್ತಾಯ. ಆದರೆ ಇಂಗ್ಲಿಷರ ಮೈತ್ರಿಕೂಟಕ್ಕೆ ಸೇರಿದ್ದ ರಾಜ ಇದಕ್ಕೆ ಸಮ್ಮತಿಸಲಿಲ್ಲ. ಇಂಗ್ಲಿಷರು ರಾಜನ ರಕ್ಷಣೆಗೆ ಬಂದರು. ಈ ಸಂದರ್ಭದಲ್ಲಿ ಮೈಸೂರಿನ ಫಲವತ್ತಾದ ಪ್ರದೇಶಗಳನ್ನು ಪಡೆಯಲು ಆಸೆಯಿಂದ ನಿಜಾಮ ಮತ್ತು ಮರಾಠರು ಇಂಗ್ಲಿಷರ ಜೊತೆಗೂಡಿದರು. ಟಿಪ್ಪುವಿಗೆ ಪ್ರಬಲವಾದ ಹೊಡೆತವನ್ನು ಕೊಡಲು ಇವರು ಮೂರು ದೀರ್ಘ ವರ್ಷಗಳ ಕಾಲ ಹೆಣಗಾಡಬೇಕಾಯಿತು. ಟಿಪ್ಪುವಿನ ವಿರುದ್ಧವಾದ ಒಕ್ಕೂಟದ ಸೇನೆಯ ಮುಂದಾಳುತನವನ್ನು ವಹಿಸಲು ಕಂಪನಿಯ ಗವರ್ನರ್ ಆದ ಲಾರ್ಡ್ ಕಾರ್ನ್‌ವಾಲೀಸನೇ ಕಲ್ಕತ್ತದಿಂದ ದಕ್ಷಿಣಕ್ಕೆ ಇಳಿದು ಬರಬೇಕಾಯಿತು. ಅನೇಕ ಹೋರಾಟಗಳಲ್ಲಿಯೂ ಟಿಪ್ಪುವನ್ನು ಸೋಲಿಸಲು ಸಾಧ್ಯವಾಗದಿದ್ದಾಗ, ಕಾರ್ನ್‌ವಾಲೀಸ್ ೧೭೯೨ರ ಫೆಬ್ರವರಿ ೬ರ ರಾತ್ರಿಯ ವೇಳೆ ಶ್ರೀರಂಗಪಟ್ಟಣ ದ್ವೀಪದ ಮೇಲೆ ಆಕಸ್ಮಿಕ ದಾಳಿ ಮಾಡಿದ. ಟಿಪ್ಪು ಸಂಧಾನಕ್ಕೆ ಮಾತುಕತೆಯನ್ನು ಆರಂಭಿಸುವ ವೇಳೆಗೆ, ಕಾರ್ನ್‌ವಾಲೀಸ್ ಕೋಟೆಯ ಮೇಲೆ ಮುತ್ತಿಗೆ ಹಾಕಲು ಸಿದ್ಧತೆ ನಡೆಸುತ್ತಿದ್ದ. ಆ ಯುದ್ಧದ ಪರಿಣಾಮವಾಗಿ ಶ್ರೀರಂಗಪಟ್ಟಣದ ಒಪ್ಪಂದ ಆಯಿತು. ಅದರ ಪ್ರಕಾರ, ಟಿಪ್ಪು ತನ್ನ ರಾಜ್ಯದ

ಅರ್ಧಭಾಗವನ್ನು ಕಳೆದುಕೊಂಡ; ಮೂರು ಕೋಟಿ ಹಣವನ್ನು ನಷ್ಟ ಪರಿಹಾರವಾಗಿ ಕೊಟ್ಟ, ಒಪ್ಪಂದದ ಅನೇಕ ಷರತ್ತುಗಳನ್ನು ಪೂರೈಸುವವರೆಗೆ ತನ್ನ ಇಬ್ಬರು ಗಂಡುಮಕ್ಕಳನ್ನು ಒತ್ತೆಯಾಳುಗಳಾಗಿ ಅವರಿಗೆ ಒಪ್ಪಿಸಿದ. ಹೈದರ್ ಹಂತಹಂತವಾಗಿ ಕಟ್ಟಿದ ರಾಜ್ಯಕ್ಕೆ ಇದು ಮೊದಲನೆಯ ದೊಡ್ಡ ಹೊಡೆತ.

ಟಿಪ್ಪುವಿನ ಆಳ್ವಿಕೆಯ ಮುಂದಿನ ಏಳು ವರ್ಷಗಳಲ್ಲಿ ಯುದ್ಧದಿಂದಾದ ಹಾನಿಯನ್ನು ಸರಿಪಡಿಸುವ, ತನ್ನ ಅಧಿಕಾರವನ್ನು ಬಲಪಡಿಸುವ ಭದ್ರಪಡಿಸುವ, ಹಾಗೂ ಆ ಮೂಲಕ ನಷ್ಟವನ್ನು ತುಂಬುವ ಪ್ರಯತ್ನಗಳು ನಡೆದುವು. ೧೭೯೨ರ ಬಳಿಕ ರಾಜಕೀಯ ಪರಿಸ್ಥಿತಿ ಬಹಳವಾಗಿ ಬದಲಾಯಿತು. ೧೭೯೫ರ ಕರ್ಡಾ ಯುದ್ಧದಲ್ಲಿ ಮರಾಠರ ಕೈಯಲ್ಲಿ ನಿಜಾಮ ಸೋಲನ್ನು ಅವಮಾನವನ್ನು ಅನುಭವಿಸಬೇಕಾಯಿತು. ಇಂಗ್ಲಿಷರ ಸಹಾಯವನ್ನು ಪಡೆಯಲು ಅವನು ಮಾಡಿದ ಸತತ ಪ್ರಯತ್ನ ಸಂಪೂರ್ಣವಾಗಿ ವಿಫಲವಾದ ಪರಿಣಾಮವಾಗಿ, ಮತ್ತೆ ಟಿಪ್ಪುವಿನ ಮೊರೆ ಹೋಗಬೇಕಾಯಿತು. ಟಿಪ್ಪುವಿನ ಮಾತಿನಂತೆ ಅವನು ಫ್ರೆಂಚ್ ಸಾಹಸಿಯಾದ ರೇಮಂಡ್‌ನನ್ನು ೧೪,೦೦೦ ಸೈನಿಕ ಬಲದೊಡನೆ ಬರಲು ಆಹ್ವಾನಿಸಿದ. ಆ ಕಾಲಕ್ಕೆ ಫ್ರಾನ್ಸ್‌ನಲ್ಲಿ ನೆಪೋಲಿಯನ್ ಅಧಿಕಾರ ವಹಿಸಿದ್ದನು. ಆಗಿನ ಫ್ರೆಂಚ್ ಇಂಗ್ಲಿಷ್ ವೈರ ಭಾರತದಲ್ಲಿ ಫ್ರೆಂಚರ ಸಹಾಯವನ್ನು ಪಡೆಯಲು ಟಿಪ್ಪುವಿನ ಆಸೆಯನ್ನು ಪುನರುಜ್ಜೀವನಗೊಳಿಸಿದುವು. ದೊಡ್ಡ ಪ್ರಮಾಣದ ಫ್ರೆಚ್ ಸೈನ್ಯವೊಂದು ಮೊರಿಷಸ್‌ನಲ್ಲಿ ಬೀಡು ಬಿಟ್ಟಿದ್ದು ಆತನು ಇಚ್ಛಿಸಿದಾಗ ಸಹಾಯಕ್ಕೆ ಬರುತ್ತದೆ ಎಂಬ ಕತೆಯನ್ನು ಟಿಪ್ಪು ನಂಬಿದ. ಈ ಸಹಾಯವನ್ನು ಪಡೆಯಲು ಟಿಪ್ಪು ರಾಯಭಾರಿಯೊಬ್ಬನನ್ನು ಕಳುಹಿಸಿದ. ಆದರೆ ನೆಪೋಲಿಯನ್‌ನ ಜೊತೆಗಿನ ಟಿಪ್ಪುವಿನ ವ್ಯವಹಾರ ಅವನಿಂದ ಪತ್ರವೊಂದನ್ನು ಪಡೆವಷ್ಟಕ್ಕಷ್ಟೆ ಸಫಲವಾಗಿತ್ತು. ಸಿರಿಯಾದ ಅಕ್ರೆಯಲ್ಲಿ ನೆಪೋಲಿಯನ್ನನ ಪರಾಜಯದಿಂದಾಗಿ ಆತ ಪೂರ್ವಕ್ಕೆ ಬರಲು ತಡೆಯುಂಟಾಯಿತು. ಇದರಿಂದಾಗಿ ಟಿಪ್ಪುವಿನೊಡನೆ ಫ್ರೆಂಚ್ ಸಂಪರ್ಕ ಫಲಕಾರಿಯಾಗಲಿಲ್ಲ. ಮೊಗಲರನ್ನು ಮತ್ತೆ ಅಧಿಕಾರಕ್ಕೇರಿಸಲು ಅಫಘಾನಿಸ್ಥಾನದ ಜಮಾನ್ ಶಹಾ ಭಾರತದ ಮೇಲೆ ದಂಡೆತ್ತಿ ಬರುವುದನ್ನು ಟಿಪ್ಪು ನಿರೀಕ್ಷಿಸುತ್ತಿದ್ದ. ಜಮಾನ್ ಶಹಾ ಕಾಬೂಲಿನಿಂದ ಲಾಹೋರ್ ಕಡೆಗೆ ಹೊರಟ ಪ್ರಯಾಣ ಇಂಗ್ಲಿಷರ ರಾಜನೀತಿಜ್ಞತೆಯಿಂದ ನಿಂತುಹೋಯಿತು. ಶಿಯಾ ಮತ್ತು ಸುನ್ನಿ ಪಂಥದ ಪ್ರಬಲ ಶಕ್ತಿಗಳಾದ ಇರಾನ್ ಮತ್ತು ಅಫಘಾನಿಸ್ಥಾನಗಳ ನಡುವಿನ ತೀವ್ರ ದ್ವೇಷದ ವಿಚಾರ ತಿಳಿದಿದ್ದ, ಬೊಂಬಾಯಿಯ ಗವರ್ನರ್ ಡಂಕನ್ ಮೆಹ್ದಿ ಅಲಿಖಾನ್ ಎಂಬ ಶಿಯಾನನ್ನು ಲಕ್ನೋದಿಂದ ಇರಾನಿನ ರಾಜ ಬಾಬಾ ಖಾನನ ಆಸ್ಥಾನಕ್ಕೆ ಕಳುಹಿಸುವಂತೆ ವೆಲ್ಲೆಸ್ಲಿಗೆ ಸೂಚಿಸಿದ. ಜಮಾನ್‌ಖಾನ್‌ನ ಗೈರುಹಾಜರಿಯಲ್ಲಿ ಅಫಘಾನಿಸ್ಥಾನದ ಪಶ್ಚಿಮ ಭಾಗದ ಮೇಲೆ ಆಕ್ರಮಣ ಮಾಡುವುದು ಈ ಸಂಚಿನ ಉದ್ದೇಶವಾಗಿತ್ತು. ಅದೇ ರೀತಿ, ಇರಾನಿಗಳು ಅಫಘಾನಿಸ್ಥಾನದ ಪಶ್ಚಿಮ ಭಾಗಗಳ ಮೇಲೆ ಆಕ್ರಮಣ ಮಾಡಿದಾಗ, ಜಮಾನ್ ಶಾಹ ಅವರನ್ನು ಹಿಮ್ಮೆಟ್ಟಿಸಲು ತನ್ನ ರಾಜ್ಯಕ್ಕೆ ವಾಪಾಸು ಬರಬೇಕಾಯಿತು. ಇದರಿಂದಾಗಿ ಟಿಪ್ಪುವಿನ ಕೊನೆಯ ಆಶಯವೂ ನೆರವೇರಲಿಲ್ಲ. ಇಂಗ್ಲಿಷರು ನಿಜಾಮನ ಜೊತೆಗೆ ಮೈತ್ರಿಕೂಟವೊಂದನ್ನು ಮಾಡಿಕೊಂಡು, ಟಿಪ್ಪುವಿನ ಮೇಲೆ ಬಿದ್ದರು. ಮರಾಠರು ಇದಕ್ಕೆ ಸೇರಲಿಲ್ಲ. ಈ ನಾಲ್ಕನೆಯ ಮೈಸೂರು ಯುದ್ಧದಲ್ಲಿ ಟಿಪ್ಪು ಇಂಗ್ಲಿಷರಿಗೆ ಪ್ರಬಲ ಪ್ರತಿರೋಧವನ್ನು ಒಡ್ಡಿದ. ಆದರೆ ಪರಿಸ್ಥಿತಿ ಅವನಿಗ ಪ್ರತಿಕೂಲವಾಗಿತ್ತು. ತನ್ನ ತಾಯ್ನಾಡಿನ ರಕ್ಷಣೆ ಮಾಡುತ್ತಾ ಒಬ್ಬ ವೀರಯೋಧನಾಗಿ ಟಿಪ್ಪು ಮರಣವನ್ನಪ್ಪಿದ.

### ಮುಮ್ಮಡಿ ಕೃಷ್ಣರಾಜ ಒಡೆಯರ್

ಟಿಪ್ಪುವಿನ ಪತನದ ಬಳಿಕ ಇಂಗ್ಲಿಷರು ಹಳೆಯ ರಾಜಮನೆತನವನ್ನು ಮತ್ತೆ ಮೈಸೂರಿನಲ್ಲಿ ಸ್ಥಾಪಿಸಿ, ೩ನೆಯ ಕೃಷ್ಣರಾಜ ಒಡೆಯರನ್ನು ಮೈಸೂರಿನ ರಾಜನಾಗಿಯೂ, ಪೂರ್ಣಯ್ಯನನ್ನು ದಿವಾನನ್ನಾಗಿಯೂ ಮಾಡಿದರು. ೧೮೧೧ರಲ್ಲಿ ಪೂರ್ಣಯ್ಯ ರಾಜಿನಾಮೆ ಕೊಟ್ಟಾಗ ರಾಜ್ಯಾಡಳಿತದ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿದ. ೧೮೧೧ರಿಂದ ೧೮೩೧ರ ವರೆಗಿನ ೨೦ ವರ್ಷಗಳ ಈತನ ಆಳ್ವಿಕೆ ರಾಜಕೀಯವಾಗಿ ಮಹತ್ವಪೂರ್ಣವಾಗಿಲ್ಲದಿದ್ದರೂ, ಸಾಂಸ್ಕೃತಿಕ ಕ್ಷೇತ್ರದಲ್ಲಿ ಗಮನಾರ್ಹವಾಗಿತ್ತು. ರಾಜನ ಕಾರ್ಯಗಳೆಲ್ಲವನ್ನೂ ಹದ್ದಿನ ಕಣ್ಣುಗಳಿಂದ ನೋಡುವ ರೆಸಿಡೆಂಟನಿದ್ದ. ಜಾಗೀರುದಾರರು ತಮ್ಮ ಅಧಿಕಾರವನ್ನು ಚಲಾಯಿಸಲು ಪ್ರಯತ್ನಿಸುತ್ತಿದ್ದರು. ರಾಜನ ಮಂತ್ರಾಲೋಚಕರ ಅಸಾಮರ್ಥ್ಯ, ರಾಜ್ಯದ ಆಂತರಿಕ ವ್ಯವಹಾರದಲ್ಲಿ ರೆಸಿಡೆಂಟನ ಮಧ್ಯಪ್ರವೇಶ, ಜಾಗೀರುದಾರರ ಮೊಂಡತನ– ಈ ಮೂರು ಅಂಶಗಳು ಒಟ್ಟುಸೇರಿ, ಆಡಳಿತವನ್ನು ವಿಶೇಷವಾಗಿ ಕಲಕಿದುವು. ಇವುಗಳೆಲ್ಲವುಗಳ ಪರಿಣಾಮವಾಗಿ, ೧೮೩೧ರಲ್ಲಿ ಮಹಾರಾಜ ತನ್ನ ರಾಜಕೀಯ ಪ್ರಭುತ್ವವನ್ನು ಸಂಪೂರ್ಣವಾಗಿ ಇಂಗ್ಲಿಷರಿಗೆ ಒಪ್ಪಿಸಬೇಕಾಯಿತು. ಇಂಗ್ಲಿಷರು ಮುಂದಿನ ೫೦ ವರ್ಷಗಳ ಕಾಲ ತಮ್ಮ ಕಮಿಷನರ್‌ಗಳ ಸಹಾಯದಿಂದ ಮೈಸೂರನ್ನು ಆಳಿದರು. ಆದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆ ಸಾಂಸ್ಕೃತಿಕ ರಂಗದಲ್ಲಿ ಗಣನೀಯವಾಗಿತ್ತು. ಅವನು ಸಾಹಿತ್ಯ, ಕಲೆಗಳನ್ನು ವಿಶೇಷವಾಗಿ ಪ್ರೋತ್ಸಾಹಿಸಿದ. ಅವನ ಆಸ್ಥಾನವನ್ನು ಕವಿಗಳು, ವಿದ್ವಾಂಸರು, ಸಂಗೀತಗಾರರು, ಜ್ಯೋತಿಷಿಗಳು ಅಲಂಕರಿಸಿದ್ದರು. ರಾಜನೇ ಸ್ವತಃ ಅನೇಕ ಗ್ರಂಥಗಳನ್ನು ರಚಿಸಿದ್ದ. ಇವನ ಕಾಲದಲ್ಲಿ ಕನ್ನಡ ನಾಟಕರಂಗ ಶ್ರೀಮಂತವಾಗಿತ್ತು. ಕಥೆ ಕಾದಂಬರಿ ಕಾವ್ಯಗಳ ನಿರ್ಮಾಣಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಡಲಾಯಿತು. ಧಾರ್ಮಿಕ ಹಾಗೂ ಶೈಕ್ಷಣಿಕ ಸಂಸ್ಥೆಗಳಿಗೆ ರಾಜ ಧಾರಾಳವಾಗಿ ದಾನವನ್ನು ಕೊಟ್ಟ. ಅವನು ೧೮೩೩ರಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸಕ್ಕಾಗಿ ಒಂದು ಶಾಲೆಯನ್ನು ತೆರೆದ. ೧೮೬೬ರಲ್ಲಿ ಮಹಾರಾಜ ಹೈಸ್ಕೂಲು ಎಂಬ ಹೆಸರಿನ ಇನ್ನೊಂದು ಶಾಲೆಯನ್ನು ತೆರೆದ. ಪಾಶ್ಚಾತ್ಯ ವೈದ್ಯಕೀಯ ಸೌಲಭ್ಯವಿರುವ ಆಸ್ಪತ್ರೆಯೊಂದನ್ನು ಮೈಸೂರಿನಲ್ಲಿ ಸ್ಥಾಪಿಸಿದ. ಶಿವಗಂಗಾ, ಮೇಲುಕೋಟೆ, ನಂಜನಗೂಡುಗಳ ದೇವಾಲಯಗಳಿಗೆ ವಿಶೇಷ ದಾನಧರ್ಮಗಳನ್ನು ಮಾಡಿದ. ಮೂವತ್ತು ವರ್ಷಗಳಿಗೂ ಹೆಚ್ಚು ಕಾಲ ನಿಜವಾದ ರಾಜನಾಗಿದ್ದು, ಸುಮಾರು ೩೮ ವರ್ಷಗಳ ಕಾಲ ಹಕ್ಕಿನ ಆಡಳಿತಗಾರನಾಗಿದ್ದು, ಇತಿಹಾಸದಲ್ಲಿ ಅತಿ ದೀರ್ಘಕಾಲ ಆಳ್ವಿಕೆ ನಡೆಸಿ, ಮುಮ್ಮಡಿ ಕೃಷ್ಣರಾಜ ೧೮೬೮ರಲ್ಲಿ ನಿಧನ ಹೊಂದಿದನು.

### ಕಮಿಷನರುಗಳ ಆಳ್ವಿಕೆ (1831-1881)

ಮುಮ್ಮಡಿ ಕೃಷ್ಣರಾಜನ ಬಳಿಕ ಅಧಿಕಾರ ಕಮಿಷನರುಗಳಿಗೆ ಹಸ್ತಾಂತರಗೊಂಡಿತು (೧೮೩೧–೧೮೮೧). ಆರಂಭದಲ್ಲಿ ಅವರ ಸಂಖ್ಯೆ ಎರಡು ಇದ್ದದ್ದು, ೧೮೩೪ರಲ್ಲಿ ಒಂದಕ್ಕೆ ಇಳಿಯಿತು. ೧೮೩೪ರಿಂದ ೧೮೬೧ರ ವರೆಗೆ ಆಡಳಿತ ನಡೆಸಿದ ಮಾರ್ಕ್ ಕಬ್ಬನ್ ಪ್ರತಿಯೊಂದು ರಂಗದಲ್ಲೂ ಫಲಪ್ರದವಾದ ಸುಧಾರಣೆಗಳನ್ನು ತಂದನು. ಮೇಜರ್ ವಿಲ್ಕ್ ಬಂದ. ಇಂಗ್ಲೆಂಡಿನ ಮಾನ್‌ದ್ವೀಪದಿಂದಲೇ ಬಂದ ಕಬ್ಬನ್ ಒಬ್ಬ ಪಾದ್ರಿಯ ಮಗ. ತನ್ನ ಹದಿನಾರನೆಯ ವರ್ಷದಲ್ಲಿ, ೧೮೦೧ರಲ್ಲಿ ಕಬ್ಬನನು ಭಾರತಕ್ಕೆ ಬಂದು, ಮೈಸೂರು ರೆಸಿಡೆನ್ಸಿಯಲ್ಲಿ ವಿಲ್ಕ್ಸನನ್ನು ಸೇರಿಕೊಂಡ. ರಾಜಕೀಯ ವಿಚಾರಗಳಲ್ಲಿ ಕಬ್ಬನ್ ಸಂಪ್ರದಾಯವಾದಿಯಾಗಿದ್ದ. ಆದರೆ ಸೂಕ್ಷ್ಮ ಬುದ್ಧಿಯ, ಆಡಳಿತಾತ್ಮಕ ಕೌಶಲದ, ಪರಿಶ್ರಮಿ ವ್ಯಕ್ತಿಯಾಗಿದ್ದ. ಅವನು ಆಡ

ಳಿತ ಯಂತ್ರವನ್ನು ಸರಳಗೊಳಿಸಿ ಚುರುಕುಗೊಳಿಸಿದ, ವಾಣಿಜ್ಯ ಉದ್ಯಮಗಳಲ್ಲಿನ ಅಡೆತಡೆಗಳನ್ನು ನಿವಾರಿಸಿದ, ಕಠಿಣ ಅಧಿಕಾರಿಗಳ ಶೋಷಣೆಯಿಂದ ರೈತರನ್ನು ಪಾರುಮಾಡಿದ, ಕಂದಾಯ ಪದ್ಧತಿಯನ್ನು ಪುನಾರೂಪಿಸಿದ, ರೈತವಾರಿ ಭೂಒಡೆತನವನ್ನು ಜಾರಿಗೆ ತಂದ, ರಾಜ್ಯದ ಆರ್ಥಿಕ ಸಂಪನ್ಮೂಲಗಳನ್ನು ಅಭಿವೃದ್ಧಿ ಪಡಿಸಿದ, ಕಾನೂನು ಮತ್ತು ಶಿಸ್ತಿನ ಪರಿಸ್ಥಿತಿಯನ್ನು ಹತೋಟಿಗೆ ತಂದ. ಒಟ್ಟು ಆಡಳಿತ ಸ್ವರೂಪವನ್ನು ಮೇಲ್ಮಟ್ಟಕ್ಕೆ ತಂದ. ಅವನ ಆಡಳಿತದ ಮೊದಲ ೩೧ ವರ್ಷಗಳು (೧೮೩೧–೧೮೬೨) "ನಿಬಂಧನೆ ರಹಿತ (ನಾನ್ ರೆಗ್ಯುಲೇಶನ್) ಪದ್ಧತಿ"ಯಲ್ಲಿ ಬರುತ್ತದೆ. ಅದರ ಬೆನ್ನಿಗೆ ಸಂಕ್ರಮಣ ಕಾಲ (೧೮೬೨–೧೮೬೩) ಮತ್ತು "ನಿಬಂಧನೆ ಪದ್ಧತಿ" (ರೆಗ್ಯುಲೇಶನ್) (೧೮೬೩–೧೮೮೧) ಬರುತ್ತದೆ. ಈ ರೀತಿ ಕಮಿಷನರುಗಳ ಆಳ್ವಿಕೆಯ ಒಟ್ಟು ೫೦ ವರ್ಷಗಳನ್ನು ಮೂರು ಮುಖ್ಯ ಹಂತಗಳಾಗಿ ವಿಭಾಗಿಸುತ್ತಾರೆ. ಸಿದ್ಧತೆಯ ಕಾಲ, ಸಂಕ್ರಮಣ ಕಾಲ ಮತ್ತು ಸುಧಾರಣೆಗಳ ಅನುಷ್ಠಾನದ ಕಾಲ.

"ನಿಬಂಧನೆ ರಹಿತ ಪದ್ಧತಿ"ಯ ಮೊದಲನೆಯ ಹಂತದಲ್ಲಿ, ಮೈಸೂರು ರಾಜ್ಯದ ವ್ಯವಹಾರಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವ ಕಾರ್ಯವನ್ನು ಸ್ವಲ್ಪ ಕಾಲ ಮದ್ರಾಸು ಸರಕಾರಕ್ಕೆ ಒಪ್ಪಿಸಲಾಗಿತ್ತು. ಈ ಮೊದಲನೆಯ ಹಂತವನ್ನು "ಪಿತೃಪ್ರಧಾನ ಪದ್ಧತಿ" ಎಂದೂ ಕರೆಯುತ್ತಾರೆ. ಏಕೆಂದರೆ, ಹೊಸ ಪದ್ಧತಿಯನ್ನು ತರುವುದು ಇದರ ಉದ್ದೇಶವಾಗಿರಲಿಲ್ಲ, ತೊಡಕುಗಳ ನಿವಾರಣೆಯೇ ಮುಖ್ಯವಾಗಿತ್ತು. ಕಬ್ಬನನ ಹೆಚ್ಚಿನ ವೇಳೆ ಭೂಕಂದಾಯ ಪದ್ಧತಿಯ ಸುಧಾರಣೆಗೆ ಮೀಸಲಾಗಿತ್ತು. ಕಂದಾಯ ಪಾವತಿ ಮಾಡುವ ಕ್ರಮವನ್ನು ವಸ್ತುರೂಪದಿಂದ ಹಣದ ರೂಪಕ್ಕೆ ಬದಲಾಯಿಸಲಾಯಿತು. ರೈತವಾರಿ ಪದ್ಧತಿಯನ್ನು ಪ್ರೋತ್ಸಾಹಿಸಲಾಯಿತು. ಭೂಮಿಯ ಸಮಗ್ರವಾದ ಮಾಪನವನ್ನು ಕೈಗೊಳ್ಳಲಾಯಿತು. ಕಬ್ಬಿಣ, ಉಕ್ಕು, ಜಾನುವಾರು, ಅಡಕೆ, ಕಾಳುಮೆಣಸು, ಕಾಫಿ, ಏಲಕ್ಕಿ, ಹೊಗೆಸೊಪ್ಪುಗಳ ಮೇಲಿನ ಸುಂಕವನ್ನು ತೆಗೆದು ಹಾಕಲಾಯಿತು. ನ್ಯಾಯಾಲಯವನ್ನು ಸ್ಥಾಪಿಸಲಾಯಿತು. ಮುಜರಾಯಿ ಇಲಾಖೆಯನ್ನು ಕಬ್ಬನ್ ತನ್ನ ವಶಕ್ಕೆ ತೆಗೆದುಕೊಂಡ. ಕಬ್ಬನ್ ಜಹಗೀರು ಮತ್ತು ಇನಾಂ ಭೂಮಿಗಳ ಬಗ್ಗೆ ವಿಶೇಷ ಸುಧಾರಣೆಗಳನ್ನು ಮಾಡಿದ. ಯುರೋಪಿಯನರು ಕಾಫಿಬೆಳೆಯನ್ನು ಮಾಡಲು ಹಾಗೂ ಅರಣ್ಯೋತ್ಪನ್ನಗಳನ್ನು ಆದಾಯದ ಮುಖ್ಯ ಮೂಲವನ್ನಾಗಿ ಮಾಡಲು ಅವನು ಹೆಚ್ಚಿನ ಪ್ರೋತ್ಸಾಹವಿತ್ತ.

ಸಂಕ್ರಮಣ ಕಾಲದ (೧೮೬೨–೬೩) ಎರಡನೆಯ ಹಂತದಲ್ಲಿ ನ್ಯಾಯಾಂಗ ಕಮಿಷನರ್‌ಗಳ ನೇಮಕವಾಗಿ, ಸಾಮಾನ್ಯ ಕಮಿಷನರ್‌ಗಳ ನ್ಯಾಯಾಂಗದ ಕೆಲವು ಕೆಲಸಗಳು ಕಡಮೆಯಾದವು. ಲೋಕೋಪಯೋಗಿ ಕೆಲಸಗಳಿಗಾಗಿ ಪ್ರತ್ಯೇಕವಾದ ಇಲಾಖೆಯೊಂದನ್ನು ಆರಂಭಿಸಲಾಯಿತು. ಅದೇ ರೀತಿ ಶಿಕ್ಷಣ ಇಲಾಖೆಯೂ ಆರಂಭವಾಯಿತು. ತೆರಿಗೆಗಳನ್ನು ಪರಿಷ್ಕರಿಸಿ, ಆಧುನೀಕರಿಸಲಾಯಿತು. ಆಡಳಿತಾತ್ಮಕ ರಚನೆಯನ್ನು ಬಹಳವಾಗಿ ಬದಲಾಯಿಸಲಾಯಿತು. ರಾಜ್ಯವನ್ನು ಮೂರು ವಿಭಾಗಗಳಾಗಿ ವಿಭಜಿಸಲಾಯಿತು. ಲೆಕ್ಕ ಪತ್ರ ಪರಿಶೋಧನೆಯ ಇಲಾಖೆಯೊಂದು ಆರಂಭವಾಯಿತು. ಕಂದಾಯ ಮತ್ತು ನ್ಯಾಯಾಂಗದ ವಿಚಾರಗಳಿಗೆ ಸಂಬಂಧಿಸಿದಂತೆ ಮಾರ್ಗದರ್ಶಕ ಸೂತ್ರಗಳ ಸಂಪೂರ್ಣ ಕಾಯಿದೆಯೊಂದು ಜಾರಿಗೆ ಬಂದಿತು. ಪೋಲಿಸ್ ಖಾತೆಯನ್ನು ಪುನರ್‌ರೂಪಿಸಲಾಯಿತು. ರಾಜ್ಯದ ಕೃಷಿ, ವ್ಯಾಪಾರ, ವಾಣಿಜ್ಯ, ಹಣಕಾಸು, ಪೋಲೀಸು, ಜೈಲು, ಸಂಪರ್ಕ, ಕೆರೆಗಳು, ಮಾರ್ಗಗಳು – ಇಂತಹ ರಂಗಗಳಲ್ಲಿ ಅಮೋಘವಾದ ಸೇವೆ ಸಲ್ಲಿಸಿ, ಕರ್ನಾಟಕದ ಇತಿಹಾಸದಲ್ಲಿ ಆಡಳಿತದ ದೃಷ್ಟಿಯಿಂದ ಮೈಲಿಗಲ್ಲೊಂದನ್ನು ನೆಟ್ಟ. ಕಬ್ಬನ್ ೧೮೬೧ರಲ್ಲಿ ನಿಧನ ಹೊಂದಿದ.

ನಿಬಂಧನೆಯ ಕಾಲದ (೧೮೬೩–೧೮೮೧) ಮೂರನೆಯ ಹಂತದಲ್ಲಿ, ಎಲ್. ಬಿ. ಬೌರಿಂಗನ (೧೮೬೨–೭೦) ಹೆಸರು ಪ್ರಮುಖವಾಗಿದೆ. ಅವನು ಭೂಹಂಚಿಕೆಯಂತಹ ಅನೇಕ ತೀವ್ರ ಬದಲಾವಣೆಗಳನ್ನು ತಂದನು. ಇದಕ್ಕಾಗಿ ಒಂದು 'ಇನಾಮ್ ಕಮಿಷನ್'ನ್ನು ಸ್ಥಾಪಿಸಿದ, ಶಿಕ್ಷಣಕ್ಕೆ ಪ್ರೋತ್ಸಾಹವೀಯಲಾಯಿತು, ಪುರಸಭೆಗಳನ್ನು ಸ್ಥಾಪಿಸಲಾಯಿತು. ರಾಜಕೀಯ ರಂಗದಲ್ಲಿ ರಾಜ ಕಳೆದುಹೋದ ತನ್ನ ಅಧಿಕಾರವನ್ನು ಮರಳಿ ಪಡೆಯಲು ತೀವ್ರ ಪ್ರಯತ್ನ ಮಾಡುತ್ತಿದ್ದ. ೧೮೫೭ರ ಬಳಿಕ ಬ್ರಿಟಿಷ್ ಸರಕಾರ ದೇಶೀಯ ಸಂಸ್ಥಾನಗಳಿಗೆ ಸಹಾಯಮಾಡುವುದನ್ನು ಅವನು ಅರಿತಿದ್ದ. ೧೮೬೫ರಲ್ಲಿ ರಾಜ ಎರಡು ವರ್ಷ ವಯಸ್ಸಿನ ಚಾಮರಾಜೇಂದ್ರನನ್ನು ತನ್ನ ಉತ್ತರಾಧಿಕಾರಿಯಾಗಿ ದತ್ತಕ್ಕೆ ತೆಗೆದುಕೊಂಡ. ಮೈಸೂರಿನ ಪರವಾಗಿ ವಿನಂತಿಸಿಕೊಳ್ಳಲು ರಾವಲ್‌ಸನ್‌ನನ್ನು ೧೮೬೬ರಲ್ಲಿ ಇಂಗ್ಲೆಂಡಿಗೆ ಕಳುಹಿಸಲಾಯಿತು. ಜಾನ್ ಸ್ಟೂವರ್ಟ್‌ಮಿಲ್ ಕೂಡಾ ಮೈಸೂರು ಅರಸನಿಗೆ ಮತ್ತೆ ಅಧಿಕಾರವನ್ನು ಕೊಡಬೇಕೆಂದು ವಾದಿಸಿದ. ೧೮೬೭ರ ಎಪ್ರಿಲ್‌ನಲ್ಲಿ ಲಾರ್ಡ್ ಕ್ರಾನ್‌ಬಾರ್ನ್ ತನ್ನ ನಿರ್ಧಾರವನ್ನು ಪ್ರಕಟಿಸಿದ–ದತ್ತು ಪುತ್ರನಾದ ಅಪ್ರಾಪ್ತ ಬಾಲಕ ವಯಸ್ಸಿಗೆ ಬಂದಾಗ ಮೈಸೂರಿನ ಅಧಿಕಾರವನ್ನು ಅವನಿಗೆ ಹಸ್ತಾಂತರಿಸಬೇಕೆಂಬ ದಿಲ್ಲಿಯ ಸರಕಾರದ ನಿರ್ಧಾರವನ್ನು ಘೋಷಿಸಿದ. ಅವನು ಅಪ್ರಾಪ್ತ ವಯಸ್ಕನಾಗಿದ್ದಾಗ, ಒಂದು ಕಮಿಷನ್ ಆಳಬೇಕು. ತನ್ನ ದತ್ತು ಪುತ್ರ ವಯಸ್ಸಿಗೆ ಬಂದಾಗಲಾದರೂ ರಾಜ್ಯವಾಳುತ್ತಾನಲ್ಲ ಎನ್ನುವುದು ಮುದುಕ ರಾಜನಿಗೆ ಸಮಾಧಾನದ ಸಂಗತಿಯಾಗಿತ್ತು.

## ಪರಾಧೀನತೆಯ ಬಳಿಕದ ಕರ್ನಾಟಕ (1881–1940)

ಚಾಮರಾಜೇಂದ್ರ ೧೮ ವರ್ಷ ವಯಸ್ಸಿನವನಾದಾಗ, ೧೮೮೧ನೇಯ ಮಾರ್ಚ್ ೨೫ರಂದು ಹಸ್ತಾಂತರದ ಕಾನೂನಿನ ಮೂಲಕ ಬ್ರಿಟಿಷರು ರಾಜ್ಯವನ್ನು ತಮ್ಮ ವಶ ಮಾಡಿಕೊಂಡರು. ಅದರ ಪ್ರಕಾರ ಆ ಕಾಲದ ವರೆಗೆ ಜಾರಿಯಲ್ಲಿದ್ದ ಎಲ್ಲ ಕಾನೂನುಗಳೂ ಮುಂದುವರಿದುವು. ಸರಕಾರದ ಪದ್ಧತಿಯಲ್ಲಿ ಯಾವುದೇ ಬದಲಾವಣೆಗಳನ್ನು ತರಬೇಕಾದರೂ ವೈಸರಾಯಿಯ ಒಪ್ಪಿಗೆಯನ್ನು ಪಡೆಯಬೇಕಿತ್ತು. ಸಿ. ರಂಗಾಚಾರ್ಲು ಮೊದಲನೆಯ ದಿವಾನ ಆಗಿದ್ದ. ಅವನ ಸಹಾಯಕ್ಕೆ ಇಬ್ಬರು ಸದಸ್ಯರಿರುವ ಒಂದು ಕೌನ್ಸಿಲ್ ಇತ್ತು. ರಂಗಾಚಾರ್ಲು ಆ ಹಿಂದೆ ಮದ್ರಾಸು ಸರಕಾರದ ಅಡಿಯಲ್ಲಿ ಸೇವೆ ಸಲ್ಲಿಸಿದ್ದ. ಮಹಾರಾಜನ ಹಳೆಯ ಸಾಲಗಳನ್ನು ತೀರಿಸುವುದಕ್ಕಾಗಿ ಬೌರಿಂಗ ಮ ರಂಗಾಚಾರ್ಲುವನ್ನು ೧೮೬೮ರಲ್ಲಿ ಮೈಸೂರಿಗೆ ಕರೆತಂದ. ಕೌನ್ಸಿಲ್‌ನ ಉಳಿದ ಇಬ್ಬರು ಸದಸ್ಯರೆಂದರೆ ತಂಬು ಚೆಟ್ಟಿ ಮತ್ತು ಪೂರ್ಣ ಕೃಷ್ಣರಾವ್. ರಂಗಾಚಾರ್ಲುವಿನ ಆಡಳಿತದ ಅತ್ಯಂತ ಪ್ರಮುಖವಾದ ಘಟನೆಯೆಂದರೆ, ೧೮೮೧ರ ಆಗಸ್ಟ್‌ನಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನು (ರೆಪ್ರಸೆಂಟೆಟಿವ್ ಅಸೆಂಬ್ಲಿ) ಸ್ಥಾಪಿಸಿದ್ದು. ಇದು ದೇಶೀಯ ಸಂಸ್ಥಾನಗಳಲ್ಲಿ ಮೊತ್ತ ಮೊದಲನೆಯದು. ಸರಕಾರದ ತತ್ವಗಳು ಜನತೆಯ ಒಪ್ಪಿಗೆಯ ಮೂಲಕ ಇಲ್ಲಿ ಅಂಗೀಕಾರವಾಗುತ್ತಿದ್ದುವು. ಭಾರತ ಸ್ವಾತಂತ್ರ್ಯವನ್ನು ಪಡೆಯುವ ತನಕ, ಈ ಅಸೆಂಬ್ಲಿ ಮೈಸೂರು ಆಡಳಿತದ ಶಾಶ್ವತ ಅಂಗವಾಗಿತ್ತು. ಮೈಸೂರಿನಲ್ಲಿ ದಸರಾ ಉತ್ಸವದ ಬಳಿಕ, ರಾಜ್ಯದ ಎಲ್ಲ ಭಾಗಗಳ ಭೂಮಾಲಿಕರ ಹಾಗೂ ವ್ಯಾಪಾರಿಗಳ ಪ್ರತಿನಿಧಿಗಳನ್ನು ಒಳಗೊಂಡ ವಾರ್ಷಿಕ ಸಭೆಯ ರೂಪದಲ್ಲಿ ಅಸೆಂಬ್ಲಿ ಸೇರುತ್ತಿತ್ತು. ಜನರ ಅಭಿಪ್ರಾಯಗಳನ್ನು ಸಂಗ್ರಹಿಸುವುದು ಹಾಗೂ ಅವರ ಸಂಕಷ್ಟಗಳನ್ನು

ನಿವಾರಿಸುವುದು ಈ ಅಸೆಂಬ್ಲಿಯ ಉದ್ದೇಶವಾಗಿತ್ತು. ಆರಂಭದಲ್ಲಿ ಈ ಅಸೆಂಬ್ಲಿಯಲ್ಲಿ ಸರಕಾರದಿಂದ ನೇಮಕಗೊಂಡ ೧೪೪ ಸದಸ್ಯರಿದ್ದರು. ೧೮೮೫ರ ಬಳಿಕ ಸ್ಥಳೀಯ ಸಂಸ್ಥೆ ಮತ್ತು ಪುರಸಭೆಗಳಿಂದ ಸದಸ್ಯರನ್ನು ಚುನಾಯಿಸತೊಡಗಿದರು. ೧೮೯೦ರಿಂದ ಚುನಾವಣೆಯ ಪದ್ಧತಿ ಆರಂಭವಾಯಿತು. ಅಸೆಂಬ್ಲಿಯ ಸದಸ್ಯರ ಸಂಖ್ಯೆ ೧೮೮೧ರಲ್ಲಿ ೧೪೪ ಇದ್ದುದು ೧೮೮೩ರಲ್ಲಿ ೧೫೪ಕ್ಕೆ, ೧೮೮೪ರಲ್ಲಿ ೧೮೩ಕ್ಕೆ, ೧೮೮೫ರಲ್ಲಿ ೧೯೮ಕ್ಕೆ, ೧೮೮೬ರಲ್ಲಿ ೨೬೯ಕ್ಕೆ ಏರಿತು. ಸದಸ್ಯ ಸಂಖ್ಯೆ ಹೆಚ್ಚಿದಂತೆಲ್ಲ ಉದ್ದೇಶಗಳು ಹೆಚ್ಚಾದುವು; ಜನರ ಹಿತಾಸಕ್ತಿಗಳನ್ನು ಈಡೇರಿಸುವುದರ ದೃಷ್ಟಿಯಿಂದ ಸರಕಾರ ಮತ್ತು ಅಸೆಂಬ್ಲಿಗಳ ಉದ್ದೇಶಗಳು ಸಮಾನವಾದುವು. ಆದರೆ ಆವರೆಗೂ ಸರಕಾರ ಜನರೊಡನೆ ಅಧಿಕಾರವನ್ನು ಹಂಚಿಕೊಳ್ಳಲು ಸಿದ್ಧವಿರಲಿಲ್ಲ. ಆದ್ದರಿಂದ ಅಸೆಂಬ್ಲಿ ಆ ಕಾಲದಲ್ಲಿ ಚರ್ಚೆ ನಡೆಸುವ ಸಭೆಯಾಗಿ ಉಳಿದಿತ್ತು.

ರಂಗಾಚಾರ್ಲು ೧೮೮೨ರಲ್ಲಿ ತೀರಿಕೊಂಡಾಗ, ಸರ್. ಕೆ. ಶೇಷಾದ್ರಿ ಅಯ್ಯರ್ ದಿವಾನನಾಗಿ, ೧೮೮೩ರಿಂದ ೧೯೦೧ರ ವರೆಗೆ ೧೮ ವರ್ಷಗಳ ಕಾಲ ಅಧಿಕಾರದಲ್ಲಿದ್ದ. ಪಾಲ್ಘಾಟ್‌ನಿಂದ ಮೂಲತಃ ಬಂದ ಈತ ಬಹಳ ಬುದ್ಧಿವಂತ ವ್ಯಕ್ತಿಯಾಗಿದ್ದ. ಡಬ್ಲೂ ಹಂಟರ್ ಅವನ ಬಗ್ಗೆ ಈ ರೀತಿ ಹೇಳಿದ್ದಾನೆ: "ಶೇಶಾದ್ರಿ ಅಯ್ಯರ್ ತನ್ನ ತಲೆಯನ್ನು ಹರ್ಬರ್ಟ್ ಸ್ಪೆನ್ಸರನಿಗೆ ಹಾಗೂ ಹೃದಯವನ್ನು ಬ್ರಹ್ಮನಿಗೆ ಕೊಟ್ಟ ವ್ಯಕ್ತಿ". ಅವನ ಕಾಲದಲ್ಲಿ ಅನೇಕ ಉಪಯುಕ್ತ ಕಾರ್ಯಗಳು ನಡೆದುವು. ಭೂಕಂದಾಯ ಶಾಸನ, ಐರೋಪ್ಯ ಸೇವೆ, ಸಾಹಿತ್ಯ, ವೈದ್ಯಕೀಯ, ಇಂಜನಿಯರಿಂಗ್‌ಗಳನ್ನು ಒಳಗೊಂಡ ಶೈಕ್ಷಣಿಕ ಚಟುವಟಿಕೆಗಳ ವಿಸ್ತರಣೆ, ರೇಲ್ವೆ, ನೀರಾವರಿ, ಗನಿಗಾರಿಕೆ ಮತ್ತು ಭೂವೈಜ್ಞಾನಿಕ ಮಾಪನ, ನೀರು ಪೂರೈಕೆ ಮತ್ತು ಒಳಚರಂಡಿ ಯೋಜನೆ, ನಗರಸಭೆಗಳು, ಸ್ಥಳೀಯ ಸರಕಾರ, ಕೈಗಾರಿಕೆ ಹಾಗೂ ಕೃಷಿವಸ್ತು ಪ್ರದರ್ಶನ, ವೈದ್ಯಕೀಯ ಸೌಲಭ್ಯಗಳು, ವಿಮಾಪದ್ಧತಿ- ಇವೆಲ್ಲವೂ ಅವನ ಆಡಳಿತದಲ್ಲಿ ವಿಶೇಷ ಗಮನವನ್ನು ಪಡೆದುವು. ಚಾಮರಾಜ ಒಡೆಯರ್ ೧೮೯೪ರಲ್ಲಿ ತೀರಿಕೊಂಡಾಗ, ಅವನ ಮಗ ನಾಲ್ಮಡಿ ಕೃಷ್ಣರಾಜ ಒಡೆಯರ್ (೧೮೯೪–೧೯೪೦) ಪಟ್ಟಕ್ಕೆ ಬಂದರು. ಅವರು ಆಗ ಕೇವಲ ಒಂಬತ್ತು ವರ್ಷದವರಾಗಿದ್ದು ಅಪ್ರಾಪ್ತ ವಯಸ್ಕರಾಗಿದ್ದ ಕಾರಣ, ಅವರ ತಾಯಿಯಾದ ವಾಣಿವಿಲಾಸ ರಾಜಪ್ರತಿನಿಧಿಯಾದಳು. ೧೯೦೨ರಲ್ಲಿ ರಾಜ ಪ್ರಾಪ್ತವಯಸ್ಕನಾದಾಗ, ಆಡಳಿತದ ಸಂಪೂರ್ಣ ಹತೋಟಿಯನ್ನು ಪಡೆದರು. ಸುಸಂಸ್ಕೃತರೂ ಬುದ್ಧಿವಂತರೂ ಆದ ರಾಜರು ತಮ್ಮ ಸಾಮರ್ಥ್ಯದಿಂದ ಮೈಸೂರನ್ನು ಒಂದು ಮಾದರಿ ರಾಜ್ಯವನ್ನಾಗಿ ಮಾಡಿದರು. ೧೯೦೧ರಲ್ಲಿ ಪಿ. ಎನ್. ಕೃಷ್ಣರಾವ್ ದಿವಾನರಾದರು. ಅವರ ಬಳಿಕ ೧೯೦೬ರಲ್ಲಿ ಪೂರ್ಣಯ್ಯನ ವಂಶಜರಾದ ವಿ. ಪಿ. ಮಾಧವರಾವ್ ದಿವಾನರಾದರು. ಅವರು ವಿಧಾನ ಪರಿಷತ್ತನ್ನು ಸ್ಥಾಪಿಸಿದರು. ಸಿವಿಲ್ ಸೇವೆಯಲ್ಲಿ ಸ್ಪರ್ಧಾತ್ಮಕ ಪರೀಕ್ಷೆಗಳ ಆರಂಭ, ಅಮಲ್ದಾರರ ನೇಮಕಾತಿಯ ನಿಯಮಗಳು, ಖಜಾನೆಯ ಕೆಲಸದಲ್ಲಿ ತರಬೇತಿ, ಗ್ರಾಮ ಪಂಚಾಯತಿಯ ಪುನರುಜ್ಜೀವನ ಪರಿಷತ್ತು ಹಾಗೂ ಅಸೆಂಬ್ಲಿಯ ಚರ್ಚೆಗಳಲ್ಲಿ ಕನ್ನಡದ ಬಳಕೆ, ಜಾನುವಾರು ಪ್ರದರ್ಶನ, ಏತನೀರಾವರಿ, ಪಶುವೈದ್ಯಕೀಯ ಇಲಾಖೆಯ ಸ್ಥಾಪನೆ, ಒಂದು ಕೃಷಿಬ್ಯಾಂಕು, ಸಹಕಾರಿ ಸಂಘಗಳು, ಕಾವೇರಿ ವಿದ್ಯುಚ್ಛಕ್ತಿ ಯೋಜನೆ, ಶಿವಮೊಗ್ಗದಲ್ಲಿ ಉಗಿ ಟ್ರಾಮ್ ಬಂಡಿ, ಚಿಕ್ಕಮಗಳೂರಿನಲ್ಲಿ ಲಘು ಉಗಿಬಂಡಿ – ಇಂತಹ ಅನೇಕ ಸುಧಾರಣೆಗಳು ಇವರ ಕಾಲದಲ್ಲಿ ನಡೆದವು. ಮಾಧವರಾವ್ ಬಳಿಕದ ದಿವಾನ ಆನಂದರಾವ್ (೧೯೦೯–೧೯೧೨). ಆದರೆ ಮುಂದಿನ ದಿವಾನರ ಆಳ್ವಿಕೆ ಇತಿಹಾಸದಲ್ಲಿ ಚಿರಸ್ಥಾಯಿಯಾದುದು.

ಮೈಸೂರಿನ ಮುಖ್ಯ ಇಂಜಿನಿಯರ್ ಆಗಿದ್ದ ಸರ್. ಎಂ. ವಿಶ್ವೇಶ್ವರಯ್ಯನವರು (೧೯೧೨–೧೮) ೧೯೧೨ರಲ್ಲಿ ಮೈಸೂರು ರಾಜ್ಯವನ್ನು ಆಧುನೀಕರಣ ಹಾಗೂ ಕೈಗಾರೀಕರಣಕ್ಕೆ ಒಳಗು ಮಾಡಿದ ಮುಖ್ಯ ಶಿಲ್ಪಿ ಎನ್ನಿಸಿಕೊಂಡರು. ಅವರು ಮೈಸೂರು ಅರಸೀಕೆರೆ ನಡುವಿನ ಹೊಸ ರೈಲು ಮಾರ್ಗವನ್ನು ರಚಿಸುವ ಕಾರ್ಯವನ್ನು ಆರಂಭಿಸಿದರು, ತರೀಕೆರೆ–ನರಸಿಂಹರಾಜಪುರಗಳ ನಡುವೆ ಟ್ರಾಮ್ ಕಾರಿನ ಓಡಾಟವನ್ನು ತೊಡಗಿಸಿದರು, ಕೋಲಾರ ಚಿನ್ನದ ಗಣಿ ಕಂಪನಿಯೊಡನೆ ಹೊಸ ಒಪ್ಪಂದವೊಂದನ್ನು ಮಾಡಿಕೊಂಡರು, ಅತ್ಯಾವಶ್ಯಕವಾದ ಕನ್ನಂಬಾಡಿ ಕಟ್ಟೆ ಯೋಜನೆಯನ್ನು ಕಲ್ಪಿಸಿದರು. ಜ್ಯೂರಿಪದ್ಧತಿಯ ಆರಂಭ ಗ್ರಾಮಗಳ ಉದ್ಧಾರಕ್ಕಾಗಿ ತಾಲೂಕು ಹಾಗೂ ಜಿಲ್ಲಾ ಮಟ್ಟದ ಸಮ್ಮೇಳನಗಳು ಮತ್ತು ಆರ್ಥಿಕ ಸಮ್ಮೇಳನಗಳು – ಇವು ಅವರ ಇನ್ನು ಕೆಲವು ಸಾಧನೆಗಳು. ೧೯೧೩ರಲ್ಲಿ ಮೈಸೂರು ಬ್ಯಾಂಕ್ ಸ್ಥಾಪನೆ, ಗಂಧದ ಕಾರ್ಖಾನೆ, ಗಂಧದ ಸಾಬೂನಿನ ಕಾರ್ಖಾನೆ, ವಾಣಿಜ್ಯೋದ್ಯಮ ಮಂಡಲಿ, ಭದ್ರಾವತಿ ಕಬ್ಬಿಣದ ಕಾರ್ಖಾನೆ, ಕೃಷಿ ಶಾಲೆ, ರೇಷ್ಮೆ ಸಂಶೋಧನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಕಬ್ಬು ಹಾಗೂ ಭತ್ತ ಸಂಶೋಧನೆ ಕೇಂದ್ರಗಳು, ರಸ್ತೆ ನಿರ್ಮಾಣದಲ್ಲಿ ಸುಧಾರಣೆ, ನೀರು ಪೂರೈಕೆ, ಒಳಚರಂಡಿ ಯೋಜನೆ, ಮೈಸೂರಿನಲ್ಲೊಂದು ತಾಂತ್ರಿಕ ಸಂಸ್ಥೆ, ಇವೆಲ್ಲವೂ ವಿಶ್ವೇಶ್ವರಯ್ಯನವರ ಯಶಸ್ಸಿನ ಹೆಜ್ಜೆಗುರುತುಗಳು. ೧೯೧೭ರಲ್ಲಿ ಅವರು ಹಿಂದುಳಿದ ಹಾಗೂ ದುರ್ಬಲ ವರ್ಗದವರಿಗೆ ವಿದ್ಯಾರ್ಥಿವೇತನ ಕೊಡುವುದಕ್ಕಾಗಿ ಒಂದು ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿದರು. ಮೈಸೂರು ರಾಜ್ಯದ ಆಡಳಿತದ ಇತಿಹಾಸದಲ್ಲಿ ಇವರ ಕಾಲ ನಿಜವಾಗಿಯೂ ಒಂದು ಸುವರ್ಣಯುಗ.

೧೯೧೮ರಲ್ಲಿ ವಿಶ್ವೇಶ್ವರಯ್ಯನವರು ನಿವೃತ್ತರಾಗಿ, ಕಾಂತರಾಜ ಅರಸ್ ದಿವಾನರಾದರು (೧೯೧೮–೨೪). ಅವರ ಬಳಿಕ ಎರಡು ವರ್ಷಗಳ ಕಾಲ ಸರ್. ಎ. ಆರ್. ಬ್ಯಾನರ್ಜಿ (೧೯೨೪–೨೬). ಅನಂತರದ ದಿವಾನರಾದ ಸರ್. ಮಿರ್ಜಾ ಇಸ್ಮಾಯಿಲ್ (೧೯೨೬–೪೦) ವಿಶ್ವೇಶ್ವರಯ್ಯನವರ ಬಳಿಕದ ಪ್ರಮುಖ ದಿವಾನರೆನ್ನಿಸಿಕೊಂಡರು. ಇವರು ಆಧುನೀಕರಣ ಹಾಗೂ ಕೈಗಾರೀಕರಣಗಳಿಂದ ರಾಜ್ಯವನ್ನು ಪ್ರಗತಿ ಪಥದೆಡೆಗೆ ಕೊಂಡೊಯ್ದರು. ಸರ್ ಮಿರ್ಜಾ ಅವರು ಸೌಂದರ್ಯ ಹಾಗೂ ಮೌಲ್ಯಗಳ ಬಗ್ಗೆ ಸದಭಿರುಚಿ ಇದ್ದ ಸುಸಂಸ್ಕೃತ, ವಿನಯಶೀಲ, ಬುದ್ಧಿವಂತ ವ್ಯಕ್ತಿಯಾಗಿದ್ದರು. ಅವರ ಕಾಲದಲ್ಲಿ ಸಂವಿಧಾನಾತ್ಮಕ ಸುಧಾರಣೆಗಳು, ರಾಜಕೀಯ ಎಚ್ಚರ, ದುಂಡುಮೇಜಿನ ಪರಿಷತ್ತುಗಳು, ಕೃಷಿಯಲ್ಲಿ ಸುಧಾರಣೆ, ವ್ಯಾಪಾರದ ವಿಸ್ತರಣೆಗಳು ನಡೆದುವು. ಅವರ ರಾಜ್ಯದ ಅರ್ಥವ್ಯವಸ್ಥೆಯನ್ನು ಅಭಿವೃದ್ಧಿಪಡಿಸಿದರು; ಕೇಂದ್ರಕ್ಕೆ ರಾಜ್ಯದ ಸಬ್ಸಿಡಿಯನ್ನು ೩೫ ಲಕ್ಷಗಳಿಂದ ೧೦ ೧/೨ ಲಕ್ಷಗಳಿಗೆ ಕಡಿತಗೊಳಿಸಲು ಶಕ್ತರಾದರು, ಲಂಡನ್ನಿನಲ್ಲಿ ವ್ಯಾಪಾರ ಕಮಿಷನ್ ಒಂದನ್ನು ನೇಮಿಸಿದರು, ಚಿನ್ನದ ಗಣಿ ಕಂಪೆನಿಯೊಡನೆ ಹೊಸ ಒಪ್ಪಂದವೊಂದಕ್ಕೆ ಸಹಿಹಾಕಿದರು., ಭದ್ರಾವತಿ ಕಬ್ಬಿಣದ ಕಾರ್ಖಾನೆಯನ್ನು ವಿಸ್ತರಿಸಿದರು. ಇರ್ವಿನ್ (ಈಗ ವಿಶ್ವೇಶ್ವರಯ್ಯ) ನಾಲೆಯನ್ನು ನಿರ್ಮಿಸಿದರು. ಪಟ್ಟಣ ಹಾಗೂ ಹಳ್ಳಿಗಳ ವಿದ್ಯುದೀಕರಣವನ್ನು ದೊಡ್ಡ ಪ್ರಮಾಣದಲ್ಲಿ ಕೈಗೊಂಡರು, ಕೈಮಗ್ಗ, ನೀರಾವರಿ, ರೈಲು ವ್ಯವಸ್ಥೆಗಳನ್ನು ಪ್ರೋತ್ಸಾಹಿಸಿದರು. ಅವರು ಸಕ್ಕರೆ ಕಾರ್ಖಾನೆಯೊಂದನ್ನು ಸ್ಥಾಪಿಸಿದರು, ಭೂ ಹಕ್ಕು ಪತ್ರವನ್ನು ಪುನರ್‌ರೂಪಿಸಿದರು. ಉದ್ಯೋಗ ಯೋಜನೆಗಳು, ಸಾರ್ವಜನಿಕ ಆರೋಗ್ಯ, ಗ್ರಾಮೀಣ ಅಭಿವೃದ್ಧಿಗಳಿಗೆ ವಿಶೇಷ ಗಮನವನ್ನಿತ್ತರು. ಈ ಮೂಲಕ ಬಹಳ ಸಮರ್ಥ ಹಾಗೂ ದೂರದೃಷ್ಟಿಯ ದಿವಾನ್ ಅನ್ನಿಸಿ

ಕೊಂಡರು. ನಾಲ್ವಡಿ ಕೃಷ್ಣರಾಜ ಒಡೆಯರು ಕ್ರಿ. ಶ. ೧೯೪೦ ರಲ್ಲಿ ತೀರಿಕೊಂಡರು. ಕೂಡಲೇ ೧೯೪೧ರಲ್ಲಿ ಮಿರ್ಜಾ ರಾಜೀನಾಮೆ ಇತ್ತರು. ಮಹಾರಾಜರ ಮರಣ ಹಾಗೂ ಮಿರ್ಜಾ ಇಸ್ಮಾಯಿಲರ ರಾಜೀನಾಮೆಯಿಂದ ಮೈಸೂರನ್ನು ಮಾದರಿ ರಾಜ್ಯವನ್ನಾಗಿ ಮಾಡಿದ ವೈಭವಯುತ ಯುಗವೊಂದು ಕೊನೆಗೊಂಡಿತು. ಅನಂತರ ಜಯಚಾಮರಾಜ ಒಡೆಯರು ೧೯೪೭ರ ವರೆಗೂ ಆಳಿದರು.

### ಕರ್ನಾಟಕ ಏಕೀಕರಣ

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಬಹುಮಟ್ಟಿಗೆ ಇಡೀ ಕರ್ನಾಟಕ ಒಂದೇ ರಾಜ್ಯದ ಅಡಿಯಲ್ಲಿ ಒಟ್ಟುಸೇರಿತ್ತು. ಆದರೂ ಆ ಕಾಲದಲ್ಲಿ ಕೆಲವು ಭಾಗಗಳು ಬಹಮನಿ ಸುಲ್ತಾನರ ವಶವಿದ್ದುವು. ವಿಜಯನಗರ ಸಾಮ್ರಾಜ್ಯದ ಪತನದ ಬಳಿಕ, ಸುಮಾರು ೨೦೦ ವರ್ಷಗಳ ಕಾಲ, ಕರ್ನಾಟಕ ತುಂಡರಸರು, ಪಾಳೆಯಗಾರರು, ಮೊಗಲರು ಹಾಗೂ ಮರಾಠರು — ಇವರ ನಡುವೆ ಹರಿಹಂಚಿ ಹೋಗಿತ್ತು. ಹೈದರ್ ಮತ್ತು ಟಿಪ್ಪುವಿನ ಉದಯದ ಬಳಿಕ, ಇಡೀ ಕರ್ನಾಟಕ ಮತ್ತೊಮ್ಮೆ ಒಟ್ಟಾಯಿತು. ಆದರೆ ಇದು ಕೇವಲ ೪೦ ವರ್ಷಗಳ ಕಾಲ ಉಳಿದಿತ್ತು. ಬ್ರಿಟಿಷರು ತಮ್ಮ ರಾಜಕೀಯ, ಆಡಳಿತಾತ್ಮಕ ಹಾಗೂ ಸೇನಾಬಲದ ಉದ್ದೇಶಗಳಿಗಾಗಿ, ಈ ಪ್ರದೇಶವನ್ನು ವಿಭಜಿಸಿದರು. ಅವರು ಭಾಷಾನುಗುಣವಾಗಿ ದಕ್ಷಿಣಭಾರತವನ್ನು ಮುಖ್ಯವಾಗಿ ಮೂರು ವಿಭಾಗಗಳನ್ನಾಗಿ ಮಾಡಿದರು – ಮರಾಠಿ; ತೆಲುಗು ಮತ್ತು ತಮಿಳು ಪ್ರದೇಶಗಳೆಂದು. ಆದರೆ ಕನ್ನಡ ಮಾತಾಡುವವರೆಲ್ಲರೂ ಒಂದೇ ಆಡಳಿತದ ಕೆಳಗೆ ಬರುವುದರ ಮೂಲಕ ತಾವೆಲ್ಲ ಒಂದೇ ಎಂಬ ಭಾವನೆ ಬೆಳೆದು ಪ್ರಗತಿಯನ್ನು ಸಾಧಿಸಬಹುದು ಎಂಬ ಗುರಿಯನ್ನು ೧೯ನೆಯ ಶತಮಾನದ ಕೊನೆಯ ವೇಳೆಗೆ ಬಹಳ ಮಂದಿ ಹೊಂದಿದ್ದರು. ದೇಶವನ್ನು ಭಾಷಿಕ ಆಧಾರದ ಮೇಲೆ ಪುನರ್ ವಿಂಗಡಿಸಬೇಕು ಎಂಬ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಧೋರಣೆಯಿಂದ ಕನ್ನಡಿಗರ ಅಭಿಲಾಷೆಗಳು ಗರಿಗೆದರಿದುವು. ಕೊನೆಗೆ, ರಾಜ್ಯ ಪುನರ್‌ವಿಂಗಡನೆ ಆಯೋಗದ ಸಲಹೆಗೆ ಅನುಗುಣವಾಗಿ ೧೯೫೬ರ ನವೆಂಬರ್ ೧ರಂದು ಕನ್ನಡಿಗರ ಕನಸುಗಳು ನನಸಾದುವು. ಆದರೆ ಇದಕ್ಕಾಗಿ ಸುಮಾರು ಅರ್ಧಶತಮಾನ ಕಾಲ ಕನ್ನಡಿಗರು ಶ್ರಮ, ಬಲಿದಾನಗಳ ಮೂಲಕ ಚಳುವಳಿ ನಡೆಸಬೇಕಾಯಿತು. ಕರ್ನಾಟಕ ಏಕೀಕರಣ ಕನ್ನಡಿಗರ ಅತಿ ದೊಡ್ಡ ವಿಜಯ. ಕೇವಲ ಒಂಬತ್ತು ಜಿಲ್ಲೆಗಳ ಸಣ್ಣ ರಾಜ್ಯವೊಂದು ಹತ್ತೊಂಬತ್ತು ಜಿಲ್ಲೆಗಳ, ಹಿಂದಿನ ಎರಡೂವರೆಯಷ್ಟು ದೊಡ್ಡ ರಾಜ್ಯವಾಯಿತು. ೧೯೭೩ರ ನವೆಂಬರ್‌ನಲ್ಲಿ ಮೈಸೂರು ರಾಜ್ಯಕ್ಕೆ 'ಕರ್ನಾಟಕ'ವೆಂದು ನಾಮಕರಣವಾಯಿತು. ಕರ್ನಾಟಕ ರಾಜ್ಯ ಸದಾ ಪ್ರಗತಿಪಥದಲ್ಲಿದ್ದು ದೇಶದಲ್ಲಿ ಗೌರವದ ಸ್ಥಾನದಲ್ಲಿದೆ.

**ಕನ್ನಡ ಅನುವಾದ: ಡಾ। ಕೆ. ರಾಘವೇಂದ್ರ ರಾವ್**

# ಕರ್ನಾಟಕದಾಚೆ ಪ್ರಭುತ್ವ ಮಾಡಿದ ಕರ್ನಾಟಕ ರಾಜವಂಶಗಳು

ಎಸ್. ಆರ್. ರಾವ್

ಕರ್ನಾಟಕದ ಮೂಲವಂಶಸ್ಥರಾಗಿ ಕರ್ನಾಟಕ ರಾಜ್ಯದ ಆಗಿನ ರಾಜಕೀಯ ಗಡಿಗಳಾಚೆಗಿನ ಪ್ರದೇಶಗಳನ್ನು ಆಳಿದ ರಾಜವಂಶಸ್ಥರು ಜನರ ಪ್ರಾಪಂಚಿಕ ಮತ್ತು ಆಧ್ಯಾತ್ಮಿಕ ಮುನ್ನಡೆಗೆ ಗಣನೀಯ ಕೊಡುಗೆಯನ್ನು ನೀಡಿದರು. ಅವರ ಧಾರ್ಮಿಕ ಸಹನೆ ಇತರರಿಗೆ ಮಾದರಿಯಾಗಿದ್ದು, ಕಲಾವಿದರಿಗೆ, ಸಾಹಿತಿಗಳಿಗೆ, ತತ್ವಶಾಸ್ತ್ರ ವಿದ್ವಾಂಸರಿಗೆ ಮತ್ತು ವಿಜ್ಞಾನಿಗಳಿಗೆ ಅವರಿಂದ ದೊರೆತ ಆಶ್ರಯದಿಂದ ದೇಶದ ಸರ್ವತೋಮುಖ ಬೆಳವಣಿಗೆಯಾಯಿತು. ಗ್ರಾಮವೇ ಮೂಲ ಘಟಕವಾದ ಮೂರು ಅಂತಸ್ತುಗಳ ಆಡಳಿತ ವ್ಯವಸ್ಥೆ ದಕ್ಷವಾಗಿದ್ದು, ಭಾರತೀಯ ಆರ್ಥಿಕ ಪರಿಸ್ಥಿತಿಯ ಮಹತ್ತಾದ ಆಧಾರವಾದ ಕೃಷಿಗೆ ಪ್ರೋತ್ಸಾಹ ದೊರಕಿತು. ಕೃಷಿ ವಿದ್ಯೆಯನ್ನು ಕುರಿತು ವೈಜ್ಞಾನಿಕ ಕೃತಿಗಳು ಮಧ್ಯ ಯುಗದಲ್ಲಿ ರಚಿತವಾದವು. ಕರ್ನಾಟಕ ರಾಜವಂಶಗಳು ಆಳಿದ ರಾಜ್ಯಗಳಲ್ಲಿ ಮಹಾನ್ ಖಗೋಳ ವಿಜ್ಞಾನಿಗಳೂ, ಗಣಿತ ವಿಜ್ಞಾನಿಗಳೂ ಬೆಳಗಿದರು. ಸಾಮಾನ್ಯ ಭಾರತೀಯನ ಆದರ್ಶಗಳನ್ನೂ ಆಕಾಂಕ್ಷೆಗಳನ್ನೂ ಪ್ರತಿಬಿಂಬಿಸುವ ಶಿಲ್ಪಕಲೆ ಶ್ರೇಷ್ಠತೆಯ ಹೊಸ ಶಿಖರಗಳನ್ನು ಮುಟ್ಟಿತು. ಆಸ್ಥಾನ ಕವಿಗಳಷ್ಟೇ ಅಲ್ಲದೆ ವಿವೇಕಿಗಳಾದ ಪ್ರಭುಗಳೂ ಉತ್ತಮ ಸಾಹಿತ್ಯ ಕೃತಿಗಳನ್ನು ರಚಿಸಿದರು.

## ಉತ್ತರ ಕನ್ನಡದಲ್ಲಿ ಕದಂಬರು

ಬನವಾಸಿ (ಉತ್ತರ ಕನ್ನಡ) ಜಿಲ್ಲೆಯ ಕದಂಬರೇ, ಉತ್ತರದಲ್ಲಿ ಕೃಷ್ಣಾನದಿಯಾಚೆ ಮತ್ತು ದಕ್ಷಿಣದಲ್ಲಿ ಕಾವೇರಿಯಾಚೆಗಿನ ಪ್ರದೇಶಗಳನ್ನು ಗೆದ್ದ ಕರ್ನಾಟಕದ ಪ್ರಭುಗಳಲ್ಲಿ ಮೊಟ್ಟಮೊದಲನೆಯವರು. ಚಂದ್ರವಳ್ಳಿ (ಚಿತ್ರದುರ್ಗ ಜಿಲ್ಲೆ)ಯ ತನ್ನ ಶಾಸನದಲ್ಲಿ ಮಯೂರ ಶರ್ಮನು (ಕ್ರಿ.ಶ. ೩೪೫–೩೬೦) ಹೇಳಿಕೊಂಡ ಸಂಗತಿಗಳಿಗೆ ಬೇರೆ ಸಾಕ್ಷ್ಯದ ಆಧಾರ ದೊರೆತಿಲ್ಲ. ಶ್ರೇಷ್ಠ ಯೋಧನೂ ಕವಿಯೂ ಆಗಿದ್ದ ಕಾಕುಸ್ಥವರ್ಮ (ಕ್ರಿ. ಶ. ೪೨೫–೪೪೦) ನೇ ಗುಪ್ತ ಚಕ್ರವರ್ತಿಗಳೊಡನೆ ವಿವಾಹ ಸಂಬಂಧವನ್ನು ಬೆಳೆಸಿ, ಆ ಮೂಲಕ ಮೊದಲ ಕರ್ನಾಟಕ ರಾಜವಂಶದ ಪ್ರಭಾವವನ್ನು ಬೆಳೆಸಿದವನು. ಮೃಗೇಶವರ್ಮನ ಮಗ ಕದಂಬ ರವಿವರ್ಮ (ಕ್ರಿ. ಶ. ೫೦೦–೫೩೮) ನು ಕಂಚಿಯ ಪಲ್ಲವರನ್ನು ಸೋಲಿಸಿ ಕದಂಬರ ಉಚ್ಚಂಗಿ ಶಾಖೆಯನ್ನು ಬನವಾಸಿಯ ಶಾಖೆಯೊಡನೆ ಸೇರಿಸಿಕೊಂಡನಂತರ ಬನವಾಸಿ ರಾಜ್ಯವು ಒಂದು ಕಡೆ ನರ್ಮದಾ ನದಿಯವರೆಗೆ ಮತ್ತೊಂದು ಕಡೆ ಅಜಂತದವರೆಗೆ ವಿಸ್ತರಿಸಿತು. ಕದಂಬರ ಒಂದು ಶಾಖೆ ಗೋವೆಯನ್ನು ಆಳುತ್ತಿತ್ತು. ಆದರೆ ಕರ್ನಾಟಕದಲ್ಲಿ ಅನಂತರ ಬಂದ ಪ್ರಭುಗಳ ಆಶ್ರಯದಲ್ಲೇ ಮುಂದುವರೆಯಿತು.

## ಚಾಳುಕ್ಯರು

ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಮೊದಲ ಕಾಲದ ಚಾಳುಕ್ಯ ಅರಸರು ತಮ್ಮ ರಾಜ್ಯವನ್ನು ಬಹು ದೂರ ವಿಸ್ತರಿಸಿದರು, ಅಲ್ಲದೆ ಪಶ್ಚಿಮದಲ್ಲಿ ಒಂದು ರಾಜ್ಯ ಮತ್ತು ಪೂರ್ವದಲ್ಲಿ ಒಂದು ರಾಜ್ಯ–ಹೀಗೆ ಎರಡು ರಾಜ್ಯಗಳನ್ನು ಸ್ಥಾಪಿಸಿದರು. ಮೊದಲನೆಯ ಕೀರ್ತಿವರ್ಮನ ತಮ್ಮ ಮಂಗಳೇಶನು ಕಲಚೂರಿ ರಾಜ್ಯದ ಶಂಕರಗಣನ ಮಗ ಬುದ್ಧನನ್ನು ಕ್ರಿ. ಶ. ೬೦೨ ರಲ್ಲಿ ಸೋಲಿಸಿ, ಚಾಲುಕ್ಯ ಸಾಮ್ರಾಜ್ಯವನ್ನು ದಕ್ಷಿಣ ಗುಜರಾತಿನ ಕಿಮ್ ನದಿಯವರೆಗೆ ವಿಸ್ತರಿಸಿದ (ಇ. ಪಿ. ೧೩, ಪು. ೫೦); ಪ್ರಾಯಶ: ಮಾಹಿ ನದಿಯವರೆಗೆ ಅವನು ಸಾಗಿ ಹೋದ. ಪಶ್ಚಿಮ ಕರಾವಳಿಯಲ್ಲಿ ಅವನು (ರತ್ನಗಿರಿ ಜಿಲ್ಲೆಯ) ವೆಂಗುರಲದ ದಕ್ಷಿಣಕ್ಕೆ ೧೩ ಮೈಲಿಗಳ ದೂರದ ದ್ವೀಪದ ಕೋಟೆ ರೇವತಿ ದ್ವೀಪವನ್ನು ಗೆದ್ದುಕೊಂಡ. (ದಕ್ಷಿಣ ಗುಜರಾತಿನ) ಲಾಟರ ಮತ್ತು ಮಾಳವದ ಅರಸನನ್ನು ತನ್ನ ಅಂಕೆಯಲ್ಲಿ ತಂದುಕೊಂಡು, ನರ್ಮದಾನದಿಯ ತೀರದಲ್ಲಿ ಹರ್ಷವರ್ಧನನನ್ನು ಸೋಲಿಸಿದ. ಅವನು ಪಲ್ಲವರ ರಾಜ್ಯಕ್ಕೂ ಮುತ್ತಿಗೆ ಹಾಕಿದ. ಚೋಳರೂ ಪಾಂಡ್ಯರೂ ಅವನ ಮಿತ್ರರಾದರು.

## ಪೂರ್ವ ಚಾಳುಕ್ಯರು

ಸತಾರ ಶಾಸನದಂತೆ, ಚಾಳುಕ್ಯ ರಾಜ್ಯದ ಪಶ್ಚಿಮ ಪ್ರಾಂತವನ್ನು ಆಳುತ್ತಿದ್ದ ಮೊದಲನೆಯ ವಿಷ್ಣುವರ್ಧನನನ್ನು ರಾಜ ಪ್ರತಿನಿಧಿಯಾಗಿ ಆಡಳಿತ ನಡೆಸಲು ಪೂರ್ವ ಪ್ರಾಂತದ ವೆಂಗಿಗೆ ಕಳುಹಿಸಲಾಯಿತು. (ಕ್ರಿ. ಶ. ೬೧೬–೬೧೭). ಆದರೆ ಕ್ರಿ. ಶ. ೬೩೨ ರ ಹೊತ್ತಿಗೆ ಅವನು ಸ್ವತಂತ್ರನಾಗಿ, ಪೂರ್ವ ಚಾಳುಕ್ಯ ರಾಜವಂಶದ ಮೂಲಪುರುಷನಾದ. (ಇಂಡಿ. ಆಂಟಿ ೧೯ ಪು. ೧೫) ಈ ಮನೆತನವು ಆಂಧ್ರದಲ್ಲೂ ಸುತ್ತಮುತ್ತಲಿನ ಪ್ರದೇಶಗಳಲ್ಲೂ ಹತ್ತಿರ ಹತ್ತಿರ ಐದು ಶತಮಾನಗಳ

ಕಾಲ ಆಳಿತು, ಸಾಂಸ್ಕೃತಿಕ ಪುನರುಜ್ಜೀವನಕ್ಕೂ ಜನತೆಯ ಪ್ರಾಪಂಚಿಕ ಅಭ್ಯುದಯಕ್ಕೂ ಗಮನಾರ್ಹ ಕೊಡುಗೆಯನ್ನು ನೀಡಿತು.

ಚಾಳುಕ್ಯ–ಚೋಳರು ಮತ್ತು ವೇಮುಲವಾಡದ ಚಾಳುಕ್ಯರು ಎಂಬ ಹೆಸರುಗಳಿಂದ ವೆಂಗಿಯ ಪೂರ್ವ ಚಾಳುಕ್ಯರು ಇನ್ನೆರಡು ಶತಮಾನಗಳ ಕಾಲ ಆಳಿದರು. ಅವರ ನಂತರ ಪೀಠಾಪುರ ಯಲವುಂಬಲಿಯ ಚಾಳುಕ್ಯರು, ಶ್ರೀಕೂರ್ಮತುಂ ಚಾಳುಕ್ಯರು, ವೆಂಗಿಯ ಚಾಳುಕ್ಯರು ಮತ್ತು ನಿರವದ್ಯಪುರದ ಚಾಳುಕ್ಯರು ಆಡಳಿತ ವಹಿಸಿಕೊಂಡು, ಕ್ರಿ. ಶ. ಹದಿನಾರನೆಯ ಶತಮಾನದವರೆಗೆ ಸಣ್ಣ ಸಣ್ಣ ಪ್ರದೇಶಗಳಲ್ಲಿ ಚಾಳುಕ್ಯ ರಾಜವಂಶವನ್ನು ಮುಂದುವರಿಸಿಕೊಂಡು ಹೋದರು. ಚಾಳುಕ್ಯ ಸಾಮ್ರಾಜ್ಯವನ್ನು ಭದ್ರಪಡಿಸಿದ ಮೊದಲನೆಯ ವಿಷ್ಣುವರ್ಧನ (ಕ್ರಿ. ಶ. ೬೨೪–೬೪೧)ನು ವೆಂಗಿಯ ಚಾಳುಕ್ಯ ಸಾಮ್ರಾಟರ ಪಂಕ್ತಿಯಲ್ಲಿ ಮಹಾನ್ ಯೋಧ ಅರಸರಲ್ಲಿ ಒಬ್ಬ. ಅವನ ಮಗ ಮೊದಲನೆಯ ಜಯಸಿಂಹ (ಕ್ರಿ. ಶ. ೬೪೧–೬೭೩) ಪಲ್ಲವ ಮನೆತನದ ಮೊದಲನೆಯ ನರಸಿಂಹನೊಡನೆ ಯುದ್ಧ ಮಾಡಿದನು. ರಾಷ್ಟ್ರಕೂಟ ಮನೆತನದ ದಂತಿದುರ್ಗನು ಬಾದಾಮಿಯ ಚಾಳುಕ್ಯರನ್ನು ಸೋಲಿಸಿದ ನಂತರ ಪೂರ್ವ ಚಾಳುಕ್ಯರು ರಾಷ್ಟ್ರಕೂಟರ ಆಘಾತವನ್ನು ಎದುರಿಸಬೇಕಾಯಿತು. ರಾಷ್ಟ್ರಕೂಟ ರಾಜ್ಯದ ಉತ್ತರಾಧಿಕಾರತ್ವದ ಪ್ರಶ್ನೆಯಲ್ಲಿ ಕೈಹಾಕಿದ ನಾಲ್ಕನೆಯ ವಿಷ್ಣುವರ್ಧನನು (ಕ್ರಿ. ಶ. ೭೭೨–೮೦೮) ಧ್ರುವನ ಸೈನ್ಯವನ್ನು ಎದುರಿಸಬೇಕಾಯಿತು. ಸೋಲನ್ನೂ ಅನುಭವಿಸಬೇಕಾಯಿತು, ಆದರೆ ಅವನು ತನ್ನ ಮಗಳನ್ನು ಧ್ರುವನಿಗೆ ಕೊಟ್ಟು ಮದುವೆ ಮಾಡಿ ತನ್ನ ರಾಜ್ಯದ ಶಾಂತಿಗೆ ಭಂಗಬಾರದೆಂಬುದನ್ನು ಖಚಿತಪಡಿಸಿಕೊಂಡನು. ವೆಂಗಿಯ ಚಾಳುಕ್ಯ ರಾಜ್ಯವು ಮೂರನೆಯ ಗುಣಗ ವಿಜಯಾದಿತ್ಯ (ಕ್ರಿ. ಶ.೮೪೮ – ೮೯೨) ನ ಕಾಲದಲ್ಲಿ ವೈಭವದ ಹೊಸ ಶೃಂಗಗಳನ್ನೇರಿತು. ಅವನು ಸ್ವಲ್ಪ ಕಾಲ ರಾಷ್ಟ್ರಕೂಟ ಅಮೋಘ ವರ್ಷನ ಸಾಮಂತನಾಗಿರಬೇಕಾಗಿ ಬಂದರೂ ಅಮೋಘ ವರ್ಷನ ಮರಣಾನಂತರ ಅವನು ಸ್ವತಂತ್ರನಾಗಿ, ರಾಷ್ಟ್ರಕೂಟರ ಕೃಷ್ಣನನ್ನು ಸೋಲಿಸಿದ. ಅವನನ್ನು ಸಾಮಂತನನ್ನಾಗಿ ಮಾಡಿಕೊಂಡ ಚಾಳುಕ್ಯರ ಮೊದಲಿನ ಭೀಮ (ಕ್ರಿ. ಶ. ೮೯೨–೯೨೧) ನು ಮೊದಲು ರಾಷ್ಟ್ರಕೂಟರ ಎರಡನೆಯ ಕೃಷ್ಣನ ಕೈಯಲ್ಲಿ ಸೋಲನ್ನು ಅನುಭವಿಸಿದರೂ ಅನಂತರ ಅವನನ್ನು ಸೋಲಿಸಿದ. ಮೊದನೆಯ ಭೀಮನ ನಂತರ ಬಂದ ಅರಸರ ಕಾಲದಲ್ಲಿ ಒಳ ಯುದ್ಧದ ಅನಿಷ್ಟ ತಲೆ ಎತ್ತಿತ್ತು. ಒಳ ಕಲಹಗಳನ್ನು ಕೊನೆಗಾಣಿಸಿ ವೆಂಗಿ ರಾಜ್ಯದಿಂದ ರಾಷ್ಟ್ರಕೂಟರನ್ನು ಓಡಿಸುವ ಕೆಲಸವು ಎರಡನೆಯ ಭೀಮ (ಕ್ರಿ. ಶ. ೯೩೪–೯೪೫) ನ ಪಾಲಿಗುಳಿಯಿತು. ಯುದ್ಧದಲ್ಲಿ ಅರಸ ದಾನಾರ್ಣವನು ಸತ್ತ ನಂತರ ತೆಲುಗು ಚೋಡರ ಕಾಲ (ಕ್ರಿ. ಶ. ೯೭೩–೧೦೦೦) ಬಂದಿತು. ಮತ್ತೆ ಚಾಳುಕ್ಯರು ರಾಜ್ಯವನ್ನು ಗೆದ್ದುಕೊಂಡು ೭೩ ವರ್ಷಗಳ ಕಾಲ ಆಳಿದರು. ಆದರೆ ಮತ್ತೆ ಮತ್ತೆ ಚೋಳ ಅರಸರ ನೆರವನ್ನು ಪಡೆಯಬೇಕಾಯಿತು. ಎಂಟನೆ ವಿಜಯಾದಿತ್ಯನೊಂದಿಗೆ ಚಾಳುಕ್ಯ ರಾಜಮನೆತನದ ಕೊನೆಯಾಯಿತು. ಚಾಳುಕ್ಯರು ಆಳುತ್ತಿದ್ದ ಪ್ರದೇಶವನ್ನು ಚೋಳರು ತಮ್ಮ ರಾಜ್ಯದಲ್ಲಿ ಸೇರಿಸಿ ಕೊಂಡರು.

## (ಗುಜರಾತಿನ) ನವಸಾರಿಯ ಚಾಳುಕ್ಯರು

ಬಾದಾಮಿಯ ಚಾಳುಕ್ಯರ ಒಂದು ಶಾಖೆ ದಕ್ಷಿಣ ಗುಜರಾತಿನಲ್ಲಿ ಆಳುತ್ತಿತ್ತು. ಇವರ ರಾಜಧಾನಿ ನವಸಾರಿ. ಸೇಂದ್ರಕರು ಚಾಳುಕ್ಯರ ಆಶ್ರಿತರು. ಸೇಂದ್ರಕರ ಎರಡು ದತ್ತಿಗಳ ವಿಷಯ ಈಚೆಗೆ ಪ್ರಕಟವಾಗಿದ್ದು ಅವುಗಳಲ್ಲಿ ರಾಜವಂಶಾವಳಿ ಇದೆ. ಈ ವಂಶದವರಲ್ಲಿ ನಿಕುಂಭಶಕ್ತಿ (ಕ್ರಿ. ಶ. ೬೫೩–೬೫೫) ಮತ್ತು ಜಯಶಕ್ತಿ (ಕ್ರಿ. ಶ. ೬೮೦) ಪ್ರಸಿದ್ಧರು. ಕಟಚೂರಿಯರ (ಮಧ್ಯಪ್ರದೇಶದ ತ್ರಿಪುರಿಯ ಕಲಚೂರಿಯರು) ಪತನಾನಂತರ ಗುಜರಾತಿನ ತೀರ ಪ್ರದೇಶವು ಚಾಲುಕ್ಯರ ನೇರ ಆಡಳಿತಕ್ಕೆ ಸೇರಿತು. ದೇಶವನ್ನು ಅವರ ಸಾಮಂತರಾದ ಸೇಂದ್ರಕರು ಆಳುತ್ತಿದ್ದರು. ಅರಬರನ್ನು ಸೋಲಿಸಿದ್ದು ನವಸಾರಿಯ ಚೋಳರ ಸಾಧನೆಗಳಲ್ಲಿ ಒಂದು. ಇದರ ಕೀರ್ತಿ ಅವನೀಜನಾಶ್ರಯ ಪುಲಕೇಶಿಗೆ ಸಲ್ಲಬೇಕು.

## ಗುಜರಾತ್, ಮಹಾರಾಷ್ಟ್ರ ಮತ್ತು ಮಾಳವಗಳಲ್ಲಿ ರಾಷ್ಟ್ರಕೂಟರು

ಮಾನ್ಯಖೇಟದ (ಗುಲ್ಬರ್ಗ ಜಿಲ್ಲೆಯ ಮಾಲ್ಖೆಡ್) ರಾಷ್ಟ್ರಕೂಟರು ಅತ್ಯಂತ ಪ್ರಬಲ ಸಾಮ್ರಾಜ್ಯಗಳಲ್ಲಿ ಒಂದನ್ನು ಕಟ್ಟಿದರು. ಇದು ದಕ್ಷಿಣ ಗುಜರಾತ್, ಮಾಳವ ಮತ್ತು ಭಾಗಲ್ ಖಂಡದಿಂದ ಕಾವೇರಿ ನದಿಯವರೆಗೆ ವಿಸ್ತರಿಸಿತ್ತು. ಪ್ರತೀಹಾರ ರಾಜಧಾನಿ ಕನೂಜಕ್ಕೂ ಧಾಳಿ ಇಟ್ಟುದಾಗಿ ಕೆಲವರು ಅರಸರು ಹೇಳಿಕೊಂಡಿದ್ದಾರೆ. ಮಾನ್ಯ ಖೇಟದ ವಲ್ಲಭ ರಾಜನು (ಮಾರ್ಕಿರ್‌ನ ಬಲ್‌ಹಾರ) ಚೀನಾದ ಪ್ರಭು, ಬಾಗ್‌ದಾದಿನ ಖಲೀಫ್ ಮತ್ತು ಕಾನ್‌ಸ್ಟಾಂಟಿನೋಪಲ್‌ನ ಸಾಮ್ರಾಟ ಇವರೊಂದಿಗೆ ಜಗತ್ತಿನ ನಾಲ್ವರು ಪ್ರಭುಗಳಲ್ಲಿ ಒಬ್ಬನೆಂದು ಅರಬ್ ಬರಹಗಾರರು ಹೆಸರಿಸಿದ್ದಾರೆ. ರಾಷ್ಟ್ರಕೂಟ ಮನೆತನದ ಪ್ರಾರಂಭವನ್ನು ಕುರಿತು ವಾದ ವಿವಾದಗಳಿವೆ. ಆದರೆ ರಾಷ್ಟ್ರಕೂಟರ ದಾಖಲೆಯಲ್ಲಿ "ಅವರು (ರಾಷ್ಟ್ರಕೂಟ ದೊರೆಗಳು) ಲಿಟ್ಟಲೂರಿನ (ಇಂದಿನ ಲಟೂರ್ ಮಹಾರಾಷ್ಟ್ರದ ಒಸ್ಮನಾಬಾದ್ ಜಿಲೆಯಲ್ಲಿದೆ) ವಂಶಪಾರಂಪರ್ಯ ಪ್ರಭುಗಳು" ಎನ್ನುವ ಮಾತು ಅವರು ಕನ್ನಡವನ್ನು ಆಡುತ್ತಿದ್ದರು ಎಂದು ಸೂಚಿಸುತ್ತದೆ. ಲಟ್ಟಲೂರು ಎಂಬ ಶಬ್ದದ ಅರ್ಥ. 'ಲಟ್ಟಕ ಊರು' ಎಂದು. ಔರಂಗಬಾದ್ ಜಿಲ್ಲೆಯ ಒಂದು ಊರಿನ ಹೆಸರು 'ಕನ್ನಡ' ಎಂಬುದೂ ಅರ್ಥವತ್ತಾಗಿದೆ. ರಾಷ್ಟ್ರಕೂಟರು, ಮಹಾರಾಷ್ಟ್ರ ನಾಡಿಗೆ ತಮ್ಮ ಹೆಸರನ್ನು ಕೊಟ್ಟ ಕ್ಷತ್ರಿಯ ಕುಲದ ಮುಖ್ಯ ಶಾಖೆಯವರು ಎನ್ನುವುದು ಕೆಲವರು ವಿದ್ವಾಂಸರ ಅಭಿಪ್ರಾಯ. ಚಾಲುಕ್ಯರ ದಾಖಲೆಗಳಲ್ಲಿ ಅವರನ್ನು ಕುಟುಂಬಿನರು (ಕೃಷಿಕರು) ಎಂದು ಹೆಸರಿಸಿದೆ. ಪ್ರಾಯಶ: ಈ ನಾಯಕರು ಚಾಲುಕ್ಯರ ಆಶ್ರಯದಲ್ಲಿ ಪ್ರಾಂತಗಳ ಆಡಳಿತಗಾರರಾಗಿದ್ದು ಕಾಲಕ್ರಮೇಣ ಸ್ವತಂತ್ರರಾಗಿ ಲಟೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದಿರಬೇಕು. ತಮ್ಮ ರಾಜ್ಯವನ್ನು ವಿಸ್ತರಿಸಿದ ನಂತರ ಅವರು ಮಾಲ್‌ಖೇಡಕ್ಕೆ ರಾಜಧಾನಿಯನ್ನು ವರ್ಗಾಯಿಸಿದರು. ರಾಷ್ಟ್ರಕೂಟ ಮನೆತನದ ಮೊದಲ ರಾಜ ದಂತಿದುರ್ಗನು ಮೊದಲನೆಯ ಇಂದ್ರನಿಗೆ ಗುಜರಾತಿನ ರಾಜಕುಮಾರಿಯಲ್ಲಿ ಜನಿಸಿದ ಮಗ. ಇವನು ಬಾದಾಮಿಯ ಇಮ್ಮಡಿ ಚಾಲುಕ್ಯ ಕೀರ್ತಿವರ್ಮನನ್ನು ಕೆಳಕ್ಕಿಳಿಸಿದನು.

ಗುಜರಾತ್ ಅಲ್ಲದೆ ಮಾಳವದ ಒಂದು ಭಾಗವೂ ರಾಷ್ಟ್ರಕೂಟರ ಕೈಸೇರಿತು. ಸುಮಾರು ಕ್ರಿ. ಶ. ೭೫೦ ರಲ್ಲಿ ಮೊದಲನೆಯ ಕೃಷ್ಣನು (ದಕ್ಷಿಣ ಗುಜರಾತಿನ) ಲಾಟವನ್ನು ಧಾಳಿಮಾಡಿ ರಾಷ್ಟ್ರಕೂಟರ ಸಾಮ್ರಾಜ್ಯವನ್ನು ಮಾಹೀ ನದಿಯ ತೀರದವರೆಗೆ ವಿಸ್ತರಿಸಿದ. ಹೀಗೆ ನವಸಾರಿ, ಸೂರತ್, ಬ್ರೋಚ್ ಮತ್ತು ಸ್ವಲ್ಪ ಕಾಲಾನಂತರ, ಕೈರ ಜಿಲ್ಲೆ ಮೊದಲನೆಯ ಕೃಷ್ಣ, ಎರಡನೆಯ ಗೋವಿಂದ ಮತ್ತು ಮೊದಲನೆಯ ಧ್ರುವ ಇವರ ಆಡಳಿತಕ್ಕೊಳಗಾಗಿ ರಾಷ್ಟ್ರಕೂಟರ ಅಂಕೆಗೆ ಬಂದಿತು. ಧ್ರುವನ ಮಗ ಮೂರನೆಯ ಗೋವಿಂದನು ಸುಮಾರು ಕ್ರಿ. ಶ. ೮೦೮ ರಲ್ಲಿ ಲಾಟಮಂಡಳವನ್ನು ತನ್ನ ತಮ್ಮ ಮೂರನೆಯ ಇಂದ್ರನಿಗೆ ಕೊಟ್ಟನು. ೮೮೮ರ ವರೆಗೆ ಲಾಟವು ಗುಜರಾತಿನ ರಾಷ್ಟ್ರಕೂಟರ ಶಾಖೆಯ ಅಧೀನದಲ್ಲಿ ಉಳಿದಿತ್ತು. ಅನಂತರ ಅದು

ರಾಷ್ಟ್ರಕೂಟ ಸಾಮ್ರಾಟರ (ಮಾಳಖೇಡ) ಕೈಗೆ ಹೋಯಿತು. ಕ್ರಿ. ಶ. ಹತ್ತನೆಯ ಶತಮಾನದವರೆಗೆ ಲಾಟ ಮಂಡಲಕ್ಕೆ ಮಧ್ಯ ಗುಜರಾತಿನಲ್ಲಿರುವ ಬೇಟಕ (ಕೈರ) ರಾಜಧಾನಿಯಾಗಿತ್ತು. ಮೂರನೆಯ ಗೋವಿಂದ ದತ್ತಿಯ ರಾಧನಪುರದ ತಾಮ್ರಪತ್ರದ ಪ್ರಕಾರ (ಎ. ಶ. ೭೩೦ ಕ್ರಿ. ಶ. ೮೦೬) ಕಚ್ ಸಹ ರಾಷ್ಟ್ರಕೂಟರ ಆಳ್ವಿಕೆಗೆ ಬಂದಂತೆ ಕಾಣುತ್ತದೆ. ಕೃಷ್ಣನ ಕಿರಿಯ ಮಗನಾದ ಧ್ರುವನು ಕನೌಜದ ಪ್ರತೀಹಾರ ಅರಸನಾದ ವತ್ಸರಾಜನನ್ನು ಸೋಲಿಸಿದ, ಆದರೆ ರಾಷ್ಟ್ರಕೂಟರು ಅಜೇಯರು ಎಂಬುದನ್ನು ತೋರಿಸಿಕೊಟ್ಟವನು ಮೂರನೆ ಗೋವಿಂದ. ಧ್ರುವನ ನಂತರ ಬಂದ ಮೊದಲನೆಯ ಅಮೋಘವರ್ಷನು (ಕ್ರಿ.ಶ. ೮೧೫-೮೭೭) ರಾಜಧಾನಿಯನ್ನು ಮಾನ್ಯಖೇಟಕ್ಕೆ ವರ್ಗಾಯಿಸಿದ. ಪ್ರತೀಹಾರ ಅರಸನಾದ ಭೋಜನ ದಕ್ಷಿಣಾಭಿಮುಖ ಧಾಳಿಯನ್ನು ತಡೆದ. ಆದರೆ ನಿರ್ಣಾಯಕ ಪೆಟ್ಟನ್ನು ಕೊಟ್ಟವನು ಪ್ರತೀಹಾರ ರಾಜನಾದ ಮಹೀಪಾಲನನ್ನು ಸೋಲಿಸಿದ ಮೂರನೆಯ ಇಂದ್ರ. ಮೂರನೆಯ ಇಂದ್ರನ ನಂತರ ಮೂರನೆಯ ಕೃಷ್ಣನು ಅಧಿಕಾರಕ್ಕೆ ಬಂದ ಮೇಲೆ ರಾಷ್ಟ್ರಕೂಟರ ವೈಭವ ಹೆಚ್ಚು ಕಾಲ ಉಳಿಯಲಿಲ್ಲ. ಕೃಷ್ಣನ ಸಾಮಂತನೂ ಬಾದಾಮಿಯ ಚಾಳುಕ್ಯರ ಮನೆತನಕ್ಕೆ ಸೇರಿದವನೂ ಆದ ತೈಲನು ರಾಷ್ಟ್ರಕೂಟ ಮನೆತನವನ್ನು ಸೋಲಿಸಿದ, ಕಲ್ಯಾಣದ (ಕಲ್ಯಾಣಿಯ) ಉತ್ತರ ಕಾಲದ ಚಾಳುಕ್ಯ ಮನೆತನದ ಮೂಲಪುರುಷನಾದ.

### ಗುಜರಾತಿನ ಚಾಳುಕ್ಯರು

ಸೌರಾಷ್ಟ್ರದಲ್ಲಿ ನಮಗೆ ತಿಳಿದಿರುವಂತೆ ಮೊಟ್ಟಮೊದಲನೆಯ ಚಾಳುಕ್ಯ ರಾಜ ಕಲ್ಲ. ಅವನ ನಂತರ ಅವನ ತಮ್ಮ ಮಹಲ್ಲ ರಾಜನಾದ. ಮಹಲ್ಲನ ಉತ್ತರಾಧಿಕಾರಿ ಕಲ್ಲನ ಮಗ, ಆದರೆ ಅವರ ಹೆಸರು ತಿಳಿದಿಲ್ಲ. ಅನಂತರ ರಾಜನಾದವನು ರಾಹುಕಧಾವಳ (ಒಂಬತ್ತನೆಯ ಶತಮಾನದ ಪ್ರಾರಂಭಭಾಗ). ಈತ ಕರ್ನಾಟ ಸೈನ್ಯವನ್ನು ಸೋಲಿಸಿದುದಾಗಿ ಹೇಳಿದ್ದಾನೆ, ಇದು ದಕ್ಷಿಣದ ರಾಷ್ಟ್ರಕೂಟ ಸೈನ್ಯವೇ ಇರಬಹುದು. ರಾಹುಕಧಾವಳನ ನಂತರ ಮೊದಲನೆಯ ಅವನಿವರ್ಮ, ಬಲವರ್ಮನ್ ಮತ್ತು ಎರಡನೆಯ ಅವನಿವರ್ಮರು ಅರಸರಾದರು. ಎರಡನೆಯ ಅವನಿವರ್ಮನು ಈ ಮೊದಲನೆಯ ಪ್ರತೀಹಾರ ಮಹೇಂದ್ರಪಾಲನನ್ನು ಸೋಲಿಸಿದ, ಆದರೆ ಎರಡನೆಯ ಪರಮಾರ ಸೀಯಕನಿಂದ ಸೋಲನ್ನನುಭವಿಸಿದ. ಹತ್ತನೆಯ ಶತಮಾನದ ಉತ್ತರಾರ್ಧದ ಮೊದಲರ್ಧದ ಕಾಲದಲ್ಲಿ ಅಭೀರರು ಸೌರಾಷ್ಟ್ರದಲ್ಲಿ ಚಾಳುಕ್ಯ ಮನೆತನವನ್ನು ಕೊನೆಗಾಣಿಸಿದರು.

### ಚಾಳುಕ್ಯರು

ಚಾಳುಕ್ಯರ ಮೂಲವನ್ನು ಕುರಿತು ಸಾಂಪ್ರದಾಯಿಕವಾಗಿ ಬಂದಿರುವ ನಂಬಿಕೆ ಚಾಳುಕ್ಯರ ಮೂಲದಿಂದ ಭಿನ್ನವೆಂದೇ ಆದರೂ, ಇಬ್ಬರೂ ಕರ್ನಾಟಕದ ಚಾಳುಕ್ಯ ವಂಶಸ್ಥರೆಂದೇ ಸಾಮಾನ್ಯವಾಗಿ ಭಾವಿಸಲಾಗಿದೆ.

ಮೊದಲನೆಯ ಮೂಲರಾಜನು (ಕ್ರಿ. ಶ. ೯೪೧-೯೯೬) ಚಾಳುಕ್ಯ ರಾಜವಂಶದ ಗುಜರಾತು ಶಾಖೆಯ ಮೂಲಪುರುಷ. ಈ ಶಾಖೆಯ ರಾಜಧಾನಿ ಅನಹಿಲಪುರ ಅಥವಾ ಅನಹಿಲಪಟ್ಟಣ. ಆತನು ಸರಸ್ವತೀ ನದೀತೀರದ ಸೌರಾಷ್ಟ್ರ ಮತ್ತು ಸಾರಸ್ವತ ಮಂಡಲವನ್ನು ಗೆದ್ದುಕೊಂಡ. ಇದೇ ಹೆಸರಿನ ನದಿಯೊಂದು ಉತ್ತರ ಗುಜರಾತಿನಲ್ಲೂ ಇದೆ. ಚಾಳುಕ್ಯ ಸಾಮ್ರಾಟ ಇಮ್ಮಡಿ ತೈಲಪನ ಸೈನ್ಯಾಧಿಕಾರಿಯಾಗಿದ್ದ ಬಾರಪ್ಪನು ಮೂಲರಾಜನ ರಾಜ್ಯದ ದಕ್ಷಿಣ ಗಡಿಯಲ್ಲಿ ಧಾಳಿ ನಡೆಸಿದನು. ಚಹಮಣರು ಉತ್ತರದಲ್ಲಿ ಆಕ್ರಮಣ ನಡೆಸಿ ಅವನು ಒಪ್ಪಂದ ಮಾಡಿಕೊಳ್ಳಲೇ ಬೇಕಾದ ಪರಿಸ್ಥಿತಿಯನ್ನು ಉಂಟು ಮಾಡಿದರು. ಮೂಲರಾಜನ ರಾಜ್ಯ ಉತ್ತರದಲ್ಲಿ ಜೋಧಪುರದಿಂದ ದಕ್ಷಿಣದಲ್ಲಿ ಸಾಬರಮತಿ ನದಿಯವರೆಗೆ ವಿಸ್ತರಿಸಿತು. ಮೇರುತುಂಗನ ವಿಚಾರ ಶ್ರೇಣಿಯ ಪ್ರಕಾರ ಆತ ವಿ.ಶ. ೧೦೫೨ (ಕ್ರಿ.ಶ. ೯೯೫) ರಲ್ಲಿ ಸಿಂಹಾಸನತ್ಯಾಗ ಮಾಡಿದ. ಚಾಮುಂಡರಾಜ ಸಿಂಹಾಸನವನ್ನೇರಿದ. ಅವರ ರಾಜ್ಯಭಾರ ಕ್ರಿ. ಶ. ೧೦೦೮ರಲ್ಲಿ ಮುಕ್ತಾಯವಾಯಿತು.

ತೈಲಪನ ಸೈನ್ಯಾಧಿಕಾರಿ ಬಾರಪ್ಪನು ರಾಷ್ಟ್ರಕೂಟರ ಸಾಮಂತರನ್ನು ಸೋಲಿಸಿ ಲಾಟರ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದ, ಲಾಟರ ರಾಜಧಾನಿ ಬ್ರೋಚ್. ಆದರೆ ಬಾರಪ್ಪನು ಹೆಚ್ಚು ಕಾಲ ಸಿಂಹಾಸನದ ಮೇಲೆ ಕೂಡಲಿಲ್ಲ. ಅನಹಿಲಪಟ್ಟಣದ ಯುವರಾಜ ಚಾಮುಂಡರಾಜನೊಡನೆ ನಡೆದ ಕಾಳಗದಲ್ಲಿ ಪ್ರಾಣತೆತ್ತ.

ಕ್ರಿ. ಶ. ೧೦೦೯-೧೦ ರಲ್ಲಿ ಚಾಮುಂಡರಾಜನು ರಾಜ್ಯದ ಆಡಳಿತವನ್ನು ತನ್ನ ಎರಡನೆಯ ಮಗ ದುರ್ಲಭರಾಜನಿಗೆ ವಹಿಸಿಕೊಟ್ಟ. ಕಾಲಕ್ರಮದಲ್ಲಿ ದುರ್ಲಭರಾಜನು ಭೀಮನಿಗೆ ಸಿಂಹಾಸನವನ್ನು ಬಿಟ್ಟುಕೊಟ್ಟ. ಘಜ್ನಿಮಹಮದನು ಸೌರಾಷ್ಟ್ರವನ್ನು ಆಕ್ರಮಿಸಿದಾಗ ಈತನು ಕ್ರಿ. ಶ. ೧೦೨೫ರಲ್ಲಿ ಕಚ್‌ನಲ್ಲಿ ಆಶ್ರಯ ಪಡೆದ, ಅನಂತರ ಹಿಂದಿರುಗಿ ಮೌಂಟ್ ಅಬುವನ್ನು ಪರಮಾರ ಧಾಂಧುಕನಿಂದ ಕಿತ್ತುಕೊಂಡ ಭೀಮನ ಮಗನು ಕರ್ನಾಟಕದ ಚಾಳುಕ್ಯರೊಂದಿಗೆ ಸೇರಿ ಮಾಳವವನ್ನು ಗೆದ್ದ. ಈತನು ಗೋವಾದ ಕದಂಬ ಜಯಕೇಶಿನನ ಮಗಳು ಮಾಯಣಲ್ಲದೇವಿಯನ್ನು ಮದುವೆಯಾದ. ಆತನ ನಂತರ ಅವರ ಕೀರ್ತಿಶಾಲಿ ಮಗ ಜಯಸಿಂಹನು ಕ್ರಿ. ಶ. ೧೦೯೪ ರಲ್ಲಿ ಪಟ್ಟಕ್ಕೆ ಬಂದ. ಸಿದ್ಧಪುರದಲ್ಲಿ ಬಾರ್ಬರರ ದಂಗೆಯನ್ನು ಅಡಗಿಸಿದ ಜಯಸಿಂಹನು ಸಿದ್ಧರಾಜ ಎಂಬ ಬಿರುದನ್ನು ಸೇರಿಸಿಕೊಂಡ. ಸಿದ್ಧರಾಜನು (ರಾಜಸ್ಥಾನದಲ್ಲಿರುವ) ಭಿನ್ನಮಾಲವನ್ನು ರಾಜ್ಯಕ್ಕೆ ಸೇರಿಸಿಕೊಂಡು, ಕಲ್ಯಾಣಿಯ ಚಾಳುಕ್ಯ ವಿಕ್ರಮಾದಿತ್ಯನನ್ನು ಸೋಲಿಸಿದ. ಅವನು ಮಹಾನ್ ವಿಜಯ ಶಾಲಿಯಷ್ಟೇ ಅಲ್ಲ, ಹಿರಿಯ ನಿರ್ಮಾಪಕ ಮತ್ತು ಕಲೆ ಮತ್ತು ಸಾಹಿತ್ಯಗಳಿಗೆ ಆಶ್ರಯದಾತ. ಪ್ರಸಿದ್ಧವಾದ ಸಿದ್ಧಪುರದ ರುದ್ರಮಹಾಲಯವನ್ನು ಹಿಂದೆಂದೂ ಇರದಿದ್ದಷ್ಟು ವಿಸ್ತಾರಕ್ಕೆ ಬೆಳೆಸಿದ ಮತ್ತು ಸಾವಿರಾರು ಚಿತ್ರಗಳಿಂದ ಅದನ್ನು ಅಲಂಕರಿಸಿದ. ಇತರ ಹಲವಾರು ದೇವಾಲಯಗಳನ್ನೂ ವ್ಯವಸಾಯಕ್ಕಾಗಿ ಸಹಸ್ರ ಲಿಂಗ ತಳವೂ ಎಂದು ಪ್ರಸಿದ್ಧವಾದ ಕೆರೆಯನ್ನು ನಿರ್ಮಿಸಿದ ಕೀರ್ತಿಯು ಈತನದು. ಈ ಕೆರೆಯನ್ನು ಕಟ್ಟಿಸಲು ಆತ ಕರ್ನಾಟಕದ ಒಡ್ಡರನ್ನು ನೇಮಿಸಿಕೊಂಡ. ಸರಸ್ವತೀ ನದಿಯ ಒಂದು ಶಾಖೆಯಿಂದ ನೀರು ಪಡೆಯುತ್ತಿದ್ದ ಈ ಅಸಾಧಾರಣ ಕೆರೆಯ ದಂಡೆಯ ಮೇಲೆ ೧೦೦೮ ಸಣ್ಣಗುಡಿಗಳಿದ್ದವು. ಜ್ಯೋತಿಷ್ಯ ಶಾಸ್ತ್ರ ಮತ್ತು ನ್ಯಾಯ ಶಾಸ್ತ್ರಗಳನ್ನು ಕಲಿಸಲು ಸಿದ್ಧರಾಜನು ಶಾಲೆಗಳನ್ನು ಸ್ಥಾಪಿಸಿದ. ಸಿದ್ಧರಾಜನ ನಂತರ ವಿಶಾಲದೇವ, ಸಾರಂಗದೇವ ಮತ್ತಿತರರು ಪಟ್ಟಕ್ಕೆ ಬಂದರು, ಕಡೆಯ ರಾಜ ಕರ್ಣನು ಕ್ರಿ. ಶ. ೧೨೯೭ ರಲ್ಲಿ ಉಲುಘಖಾನ್ ಮತ್ತು ನಾಜ್ರತ್‌ಖಾನರಿಗೆ ಸೋತು ಗುಜರಾತನ್ನು ಕಳೆದುಕೊಂಡನು.

### ದೇವಗಿರಿಯ (ಮಹಾರಾಷ್ಟ್ರದ ಔರಂಗಾಬಾದ್‌ಜಿಲ್ಲೆಯಲ್ಲಿನ ದೌಲತಾಬಾದ್) ಯಾದವರು (ಸೇವುಣರು)

ಸುಮಾರು ಕ್ರಿ. ಶ. ೧೧೯೦ ರಲ್ಲಿ ಉತ್ತರ ಕಾಲದ (ಕಲ್ಯಾಣಿ) ಚಾಳುಕ್ಯರ ಸಾಮ್ರಾಜ್ಯವು ದೇವಗಿರಿಯ ಸೇವುಣರು (ಯಾದವರು) ವಾರಂಗಲ್ಲಿನ ಕಾಕತೀಯರು ಮತ್ತು ದೋರಸಮುದ್ರ

ದ ಹೊಯ್ಸಳರ ರಾಜ್ಯಗಳಾಗಿ ಒಡೆದುಹೋಯಿತು. ಸೇವುಣರು ಧಾರವಾಡ—ಬಿಜಾಪುರ ಪ್ರದೇಶದಲ್ಲಿ ಆಳುತ್ತಿದ್ದ ಯಾದವ ಕುಟುಂಬಗಳಲ್ಲಿ ಒಂದಕ್ಕೆ ಸೇರಿದ ಕನ್ನಡಿಗರು ಎಂದು ಬಹು ಮಂದಿ ವಿದ್ವಾಂಸರು ಒಪ್ಪುವರಾದರೂ, ಅತ್ತೀಕರ ಮತ್ತು ಭಂಡಾರಕರರು, ಸೇವುಣರು (ಯಾದವರು) ಮರಾಠಿ ಮೂಲದವರೆಂದು ಹೇಳುತ್ತಾರೆ. ಸಾಮ್ರಾಜ್ಯದ ಪ್ರಭುತ್ವದಡಿಯಲ್ಲಿ ತಾವು ಪ್ರವರ್ಧಮಾನಕ್ಕೆ ಬರಲು ಸಾಧ್ಯವಿಲ್ಲ ಎಂದು ಕಂಡುಕೊಂಡ ಸೇವುಣರು ತಮ್ಮ ಮೂಲವಾಸಸ್ಥಾನದಿಂದ ಉತ್ತರಕ್ಕೆ ಹೋದರು. ಉತ್ತರ ಕಾಲದ ಚಾಳುಕ್ಯರ ಉತ್ತರಾಧಿಕಾರಿಗಳಾಗಿ ಸೇವುಣರು — ಇವರು ಯಾದವರೆಂದೇ ಜನಪ್ರಿಯರು — ಒಂದು ಪ್ರಬಲ ರಾಜ್ಯವನ್ನು ಸ್ಥಾಪಿಸಿದರು. ಸೇವುಣ ರಾಜವಂಶದಲ್ಲಿ ಚರಿತ್ರೆಗೆ ತಿಳಿದಿರುವ ಮೊದಲ ವ್ಯಕ್ತಿ ದೃಢಪ್ರಹಾರ. ಆದರೆ ರಾಜ್ಯವನ್ನು ಸ್ಥಾಪಿಸಿದವನು ಭಿಲ್ಲಮ. ಅನಂತರ ಅದು ವಿಸ್ತಾರಗೊಂಡಿತು. ಸಿಂಘಣನ ಕಾಲದಲ್ಲಿ ಅದು ತುಂಬಾ ಬಲಿಷ್ಠವಾಯಿತು. ಮತ್ತೆ ಮತ್ತೆ ಯುದ್ಧಗಳಲ್ಲಿ ತೊಡಗಿ ಸೇವುಣರು, ಕಾಕತೀಯರು ಮತ್ತು ಹೊಯ್ಸಳರು ತಮ್ಮ ಶಕ್ತಿಯನ್ನೆಲ್ಲ ವ್ಯಯ ಮಾಡಿಕೊಂಡರು, ದೆಹಲಿಯ ಸುಲ್ತಾನರ ರಾಜ್ಯದಾಹಕ್ಕೆ ಸುಲಭವಾಗಿ ಬಲಿಯಾದರು. ಆಕ್ರಮಣಕಾರಿಗಳ ವಿರುದ್ಧ ರಾಜ್ಯದ ಶಕ್ತ ರಕ್ಷಕರಾಗಿ ನಿಲ್ಲುವುದು ಸಿಂಘಣನ ಉತ್ತರಾಧಿಕಾರಿಗಳಿಗೆ ಸಾಧ್ಯವಾಗಲಿಲ್ಲ. ಇದರ ಪರಿಣಾಮ ಎಂದರೆ ಅಲ್ಲಾಉದ್ದಿನ್ ಖಿಲ್ಜಿಯು ದೇವಗಿರಿಯನ್ನು (ಔರಂಗಾಬಾದ್ ಜಿಲ್ಲೆಯಲ್ಲಿರುವ ದೌಲತಾಬಾದ್) ಮುತ್ತಿ ಅತನ ರಾಮಚಂದ್ರನು ಭಾರಿ ಕಪ್ಪವನ್ನು ಸಲ್ಲಿಸುವಂತೆ ಮಣಿಸಿದುದು. ಕ್ರಿ. ಶ. ೧೩೦೭–೮ರಲ್ಲಿ ಮಲ್ಲಿಕ್—ಕಾಫೂರನು ಯಾದವ ಪ್ರದೇಶವನ್ನು ಮುತ್ತಿ ಕಪ್ಪವನ್ನು ವಸೂಲು ಮಾಡಿ ಅಲ್ಲಾಉದ್ದೀನ್ ಖಿಲ್ಜಿಯ ಕ್ರಮವನ್ನೇ ಪುನರಾವರ್ತನೆ ನಡೆಸಿದ್ದು ಮಾತ್ರವಲ್ಲ ರಾಮಚಂದ್ರನ ಗಂಡುಮಕ್ಕಳೂ, ಅಳಿಯನೂ ಘೋರ ರೀತಿಯಲ್ಲಿ ಕೊಲೆ ಮಾಡಲ್ಪಟ್ಟರು.

**ಧರ್ಮ (ಸಂತರ ಯುಗ)**

ನಿರಂತರ ಯುದ್ಧಗಳ ಮತ್ತು ಕ್ಷೋಭೆಯ ಬೇಸರ ತರಿಸುವ ವಾತಾವರಣಕ್ಕೆ ಹಿರಿಯ ಸಂತರು ಮತ್ತು ಧಾರ್ಮಿಕ ಮಾರ್ಗದರ್ಶಕರ ಉದಯದಿಂದ ಸ್ವಲ್ಪಮಟ್ಟಿಗೆ ಪರಿಹಾರ ದೊರೆಯಿತು. ಒಂದು ರೀತಿಯಲ್ಲಿ, ಮಧ್ಯಯುಗದ ಭಾರತದ ಚರಿತ್ರೆಯು ಸಂತರ ಚರಿತ್ರೆಯೇ. ಚಕ್ರಧರನು 'ಮಹಾನುಭಾವ ಪರಂಪರೆ' ಯನ್ನು ಪ್ರಾರಂಭಿಸಿದ. ಇವನ ಮೊದಲಿನ ಹೆಸರು ಹರಿಪಾಲ, ಇವನು ವಿಶಾಲದೇವ ಮತ್ತು ಮಲ್ಲೇಶರ ಮಗ, 'ಮಹಾನುಭಾವ'ರೆಂದರೆ 'ಮಹಾ ಅನುಭವ ಪಡೆದ ಹಿರಿಯರು'. ಇಪ್ಪತ್ತೈದು ವರ್ಷಗಳ ಕಾಲ ಭೋಗದ ಜೀವನವನ್ನು ನಡೆಸಿದ ನಂತರ ಚಕ್ರಧರನಿಗೆ ಅದು ನಿಸ್ಸತ್ವವಾದದ್ದು ಎಂದು ಅರ್ಥವಾಯಿತು, ಆಗ ಅವನು ಭಗವದ್ಗೀತೆಯಲ್ಲಿ ಉಪದೇಶಿಸಿರುವ ಜ್ಞಾನಮಾರ್ಗವನ್ನು ಆರಿಸಿಕೊಂಡ. ಅವನಿಗೆ ಗೋವಿಂದ ಪ್ರಭುವಿನ ದರ್ಶನವಾಯಿತು ಎಂದು ಹೇಳುತ್ತಾರೆ. ಮಹಾನುಭಾವರ ದೃಷ್ಟಿಯಲ್ಲಿ, ಭಗವತ್ಕೃಪೆಯಿಂದ ಮತ್ತು ಗುರುವಿನ ಅನುಗ್ರಹದಿಂದ ಸುಜ್ಞಾನವನ್ನು ಬೆಳೆಸಿಕೊಳ್ಳುವುದರಿಂದ ಮೋಕ್ಷವನ್ನು ಗಳಿಸಿಕೊಳ್ಳಬಹುದು. ಚಕ್ರಧರನ ಕಾಲಾನಂತರ 'ಮಹಾನುಭಾವರು' ಗುಪ್ತಸಂಘಗಳನ್ನು ಏರ್ಪಡಿಸಿಕೊಂಡರು.

**ವೈಷ್ಣವ ಧರ್ಮ**

ಭಾರತದಲ್ಲಿ ಹುಟ್ಟಿದ ಶ್ರೇಷ್ಠ ಸಂತ ಕವಿಗಳಲ್ಲಿ ಒಬ್ಬನಾದ ಜ್ಞಾನದೇವನು ಯಾದವರ ಕಾಲದಲ್ಲಿದ್ದನು. ಪಂಡರಾಪುರದ ವಿಠಲನ ಭಕ್ತರ ಪಂಥದಲ್ಲಿ ಪರಮಶ್ರೇಷ್ಠನು ಆತ. ಜ್ಞಾನದೇವನು ವಿಠಲನನ್ನು 'ಕನ್ನಡಿ' ಎಂದರೆ ಕನ್ನಡನಾಡಿಗೆ ಸೇರಿದವನು, ಎಂದು ಕರೆಯುತ್ತಾನೆ ಎನ್ನುವುದನ್ನು ಸ್ಮರಿಸಬಹುದು 'ಪರಮಾತ್ಮ' ಮತ್ತು 'ಪರಸ್ಪರ ಪ್ರೇಮ' ಗಳ ಕಲ್ಪನೆಗಳನ್ನು ಆತ ಸೇರಿಸಿಕೊಂಡ. (ಜ್ಞಾನದೇವನ ಕೃತಿ) ಜ್ಞಾನೇಶ್ವರಿಯಲ್ಲಿ ಉನ್ನತ ವೇದಾಂತವಿದೆಯಾದರೂ ಆತನು ಜೀವನದ ನೈತಿಕ ಅಂಶಗಳನ್ನು ಅಷ್ಟೇ ಒತ್ತಿ ಹೇಳುತ್ತಾನೆ. ಭಕ್ತಿಯಲ್ಲಿ ಆತನಿಗೆ ಸಂಪೂರ್ಣ ಶ್ರದ್ಧೆ, ಆದರೆ ಜ್ಞಾನಕ್ಕೂ ಆತ ಅಷ್ಟೇ ಪ್ರಾಧಾನ್ಯ ನೀಡುತ್ತಾನೆ.

**ವೀರಶೈವ ಧರ್ಮ**

ಮಹಾರಾಷ್ಟ್ರದಲ್ಲಿನ ಷೋಲಾಪುರ ಜಿಲ್ಲೆಯ ಸೊನ್ನಲಿಗೆಯಲ್ಲಿ ಹುಟ್ಟಿದ ವೀರಶೈವ ಮಹಾಸಂತ ಸಿದ್ಧರಾಮನ ಮಾರ್ಗದರ್ಶನದಲ್ಲಿ ವೀರಶೈವ ಧರ್ಮಕ್ಕೆ ಹೊಸ ಚೈತನ್ಯ ಬಂದಿತು, ಅದು ಜನಪ್ರಿಯವೂ ಆಯಿತು. 'ಲೀಲಾವತಿ' ಮತ್ತು ಇತರ ಕೃತಿಗಳ ಕರ್ತೃವಾದ ಮಹಾಗಣಿತ ವಿಜ್ಞಾನಿ ಭಾಸ್ಕರಾಚಾರ್ಯನು ಬೆಳಗಿದ್ದು ಈ ಕಾಲದಲ್ಲೇ (ಚಾಲಿಸ್‌ಗವಾನನ ಬಳಿಯ) ಪಟ್ಟಣವನ್ನು ಆತ ತನ್ನ ಅಧ್ಯಯನದ ಪೀಠವನ್ನಾಗಿ ಮಾಡಕೊಂಡ. ಅವನ ಮೊಮ್ಮಗನು ಇಲ್ಲಿ ಖಗೋಳ ವಿಜ್ಞಾನದ ಅಧ್ಯಯನಕ್ಕಾಗಿ ಒಂದು ಕಾಲೇಜನ್ನು ಸ್ಥಾಪಿಸಿದ.

ಎಲ್ಲೋರದಲ್ಲಿ 'ಚಕ್ರಧರನ ಪೀಠ'ವನ್ನು, ಪಟ್ಟಣದಲ್ಲಿ ಪರಂಪರಾಗತವಾಗಿ 'ಭಾಸ್ಕರಾಚಾರ್ಯಗೃಹ' ಎಂದು ಕರೆಯುವ ಕಟ್ಟಡವನ್ನು ಈ ಲೇಖನದ ಲೇಖಕನು ಭೂಶೋಧನೆ ಮಾಡಿ ಬೆಳಕಿಗೆ ತಂದನು. 'ಗೃಹ'ದಲ್ಲಿ ಅಗ್ನಿಕಾರ್ಯದ ಪವಿತ್ರಪೀಠವೂ ಕಂಡು ಬಂದಿತು.

**ಗೋವೆಯ ಕದಂಬರು (ಕ್ರಿ.ಶ. 1008ರಿಂದ 1300)**

ಗೋವೆಯ ಕದಂಬರ ಮೂಲಸ್ಥಾನ ಪ್ರಾರಂಭದ ಕದಂಬರ ಪ್ರಾಚೀನ ರಾಜಧಾನಿಯಾಗಿದ್ದ ಬನವಾಸಿ. ದಕ್ಷಿಣದಲ್ಲಿನ ಕ್ಷುಬ್ಧ ರಾಜಕೀಯ ಪರಿಸ್ಥಿತಿಯ ಲಾಭ ಪಡೆದು ಗೋವೆಯ ಕದಂಬರು ಕ್ರಿ. ಶ. ಹತ್ತನೆಯ ಶತಮಾನದ ಕಡೆಯ ಭಾಗದಲ್ಲಿ ಆಗ 'ಪಲಸಿಗೆ-೧೨೦೦' ಎಂದು ಹೆಸರಾಗಿದ್ದ ಮತ್ತು ಈಗೀಗ ಬೆಳಗಾಂ ಜಿಲ್ಲೆಯ ದಕ್ಷಿಣ ಭಾಗವನ್ನು ಒಳಗೊಂಡಿದ್ದ ಹಲಸಿ ಜಿಲ್ಲೆಯಲ್ಲಿ ನೆಲೆಸಿದಂತೆ ಕಾಣುತ್ತದೆ. ಕೊಂಕಣದಲ್ಲಿ ಅವರು ತಮ್ಮ ರಾಜ್ಯವನ್ನು ವಿಸ್ತರಿಸುತ್ತಿದ್ದ ಕಾಲದಲ್ಲಿ ಭೋಜರ ಪ್ರಾಚೀನ ನಗರ ಚಂದೋರ್ ಅಥವಾ ಚಂದ್ರಪುರ ಪ್ರಾರಂಭದಲ್ಲಿ ಅವರ ರಾಜಧಾನಿಯಾಗಿತ್ತು, ಈ ನಗರ ಪರೋಡ ನದಿಯ ತೀರದಲ್ಲಿದೆ. ಈ ಲೇಖಕನು ೧೯೭೦ರಲ್ಲಿ ಚಂದ್ರಪುರದಲ್ಲಿ ಭೂಶೋಧನೆ ನಡೆಸಿದ ಕಾಲದಲ್ಲಿ ಮೂರರಿಂದ ಆರನೆಯ ಶತಮಾನದ ಅವಧಿಗೆ ಸೇರಿದ ಪ್ರಾರಂಭಕಾಲದ ಇಟ್ಟಿಗೆಯ ದೇವಾಲಯ ಕಂಡುಬಂದಿತು. ತಮ್ಮ ಪ್ರದೇಶಕ್ಕೆ ಸಮುದ್ರದ ಕಡೆಯಿಂದ ಬರಬಹುದಾದ ಧಾಳಿಯನ್ನು ತಡೆಯಲು ವೀರವರ್ಮದೇವನೂ (ಕ್ರಿ. ಶ.೧೦೪೯) ಅನಂತರ ಅವನ ತಮ್ಮ ಜಯಕೇಶಿಯೂ (ಕ್ರಿ. ಶ. ೧೦೫೨) ಪ್ರಬಲವಾದ ನೌಕಾಸೇನೆಯನ್ನು ವ್ಯವಸ್ಥೆ ಮಾಡಿದರು. ಅನಂತರ, ಹಲಸಿಯು (ಖಾನಾಪುರ) ಅವರ ಸಣ್ಣ ರಾಜಧಾನಿಗಳಲ್ಲಿ ಒಂದಾಯಿತು. ಅವರು ತಮ್ಮನ್ನು 'ಬನವಾಸೀಪುರವರಾಧೀಶ್ವರ'ರೆಂದು ಕರೆದುಕೊಂಡರು. ಅವರ ನಾಣ್ಯಗಳ ಮೇಲೆ ಮತ್ತು ಅವರ ತಾಮ್ರಪತ್ರ ದಾಖಲೆಗಳ ಮೊಹರುಗಳಲ್ಲಿ ಅವರ ಸಿಂಹ ಲಾಂಛನ ಕಾಣುತ್ತದೆ.

## ಒರಿಸ್ಸಾದಲ್ಲಿ ರಾಷ್ಟ್ರಕೂಟರು

ಇತ್ತೀಚೆಗೆ ದೊರೆತ ಪರಚಕ್ರಶಿಲ್ಪದ ಬಾರಗರ್ ಲೋಹದ ಫಲಕಗಳು ಹನ್ನೆರಡನೆಯ ಶತಮಾನದಲ್ಲಿ ಒರಿಸ್ಸಾದ ಸಂಬಲ್‌ಪುರ ಜಿಲ್ಲೆಯಲ್ಲಿ ರಾಷ್ಟ್ರಕೂಟ ಮನೆತನವೊಂದು ಆಳುತ್ತಿತ್ತು ಎಂಬುದನ್ನು ತೋರಿಸಿಕೊಡುತ್ತವೆ. ಕ್ರಿ. ಶ. ೧೧೩೧ರಲ್ಲಿ ನೀಡಿರಬಹುದಾದ ಈ ದತ್ತಿಯನ್ನು ಕೊಟ್ಟವನು ರಾಣಕ ಪರಚಕ್ರಶಿಲ್ಪಿ; ಈತನು ಮಹಾಕುಂಡಲೇಶ್ವರ ರಾಣಕ ಚಾಮರವಿಗ್ರಹನ ಮೊಮ್ಮಗ. ಈತನನ್ನು 'ಲಾಟಕೋರವಿನಿರ್ಗತ' ಎಂದು ಕರೆದಿದ್ದಾರೆ. ಇದರಿಂದ ಈತನ ಮನೆತನದ ಮೂಲ ವಾಸಸ್ಥಾನ ಲಾಟಲೋರ, ಎಂದರೆ (ಮುಂದೆ ಮಾನ್ಯಖೇಟಕ್ಕೆ ಹೋದ ರಾಷ್ಟ್ರಕೂಟರ) ಲಟ್ಟಲೂರು ಎಂದು ಸೂಚಿತವಾಗುತ್ತದೆ. ಈತನೂ ಹದಿನೆಂಟು ಗೊಂಡ್ರಾಮಗಳ (ಒರಿಸ್ಸಾದ ಹದಿನೆಂಟು ರಾಜ್ಯಗಳ) ಪ್ರಭು ಎಂದು ಹೇಳಿಕೊಂಡಿದ್ದಾನೆ. ಕ್ರಿ. ಶ. ೫೯೯–೬೦೦ರ ಕನಾಸ ಲೋಹ ಫಲಕಗಳಲ್ಲಿ ಈ ಮೊದಲೇ ಇವುಗಳ ಪ್ರಸ್ತಾಪವಿದೆ. ಉತ್ತರ ಕಾಲದ ಚಾಳುಕ್ಯರ ಆರನೆಯ ವಿಕ್ರಮಾದಿತ್ಯನು ಕ್ರಿ. ಶ. ೧೦೬೮ಕ್ಕೆ ಮೊದಲು ಪೂರ್ವಕ್ಕೆ ವಿಜಯಯಾತ್ರೆ ಹೊರಟಾಗ ಆತನನ್ನನುಸರಿಸಿ ಕರ್ನಾಟಕದ ರಾಷ್ಟ್ರಕೂಟರು ಒರಿಸ್ಸವನ್ನು ಹೊಕ್ಕಂತೆ ಕಾಣುತ್ತದೆ.

ಈ ಸಂದರ್ಭದಲ್ಲಿ ಕ್ರಿ. ಶ. ೧೦೭೭ರಿಂದ ಆರಂಭವಾಗಿ ಆರನೆ ವಿಕ್ರಮಾದಿತ್ಯನ ಹಲವು ಶಾಸನಗಳು ಆತನು ಗುರ್ಜರ, ದಾಹಲ, ಕೊಂಕಣ ಮಾರು, ನೇಪಾಳ, ಬಾರ್ಬರ, ಕಾಶ್ಮೀರ, ಸಿಂಧು, ತುರುಷ್ಕ, ಅಭಿರ, ನಲ್ಲೂರ, ವಿದರ್ಭ ಮತ್ತು ತಂಗಗಳನ್ನು ಗೆದ್ದನೆಂದು ಹೇಳುತ್ತವೆ. ಆತನ ಸಾಮ್ರಾಜ್ಯವು ದಕ್ಷಿಣದಲ್ಲಿ ಕರ್ನಾಟಕದಲ್ಲಿನ ಹಾಸನದಿಂದ ಉತ್ತರದಲ್ಲಿ ನರ್ಮದಾ ನದಿಯವರೆಗೆ, ಪಶ್ಚಿಮದಲ್ಲಿ ಕೊಂಕಣದಿಂದ ಪೂರ್ವದಲ್ಲಿ ಆಂಧ್ರಪ್ರದೇಶದಲ್ಲಿರುವ ಗೋದಾವರಿ ಜಿಲ್ಲೆಯವರೆಗೆ ಹಬ್ಬಿತ್ತು.

'ವಿಕ್ರಮಾಂಕದೇವಚರಿತ'ದ ಕರ್ತೃ ಕಾಶ್ಮೀರದ ಕವಿ ಬಿಲ್ಹಣ ಮತ್ತು 'ಮಿತಾಕ್ಷರ'ದ ಕರ್ತೃ ವಿಜ್ಞಾನೇಶ್ವರ ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ಆಸ್ಥಾನವನ್ನು ಬೆಳಗಿದರು. ಅವನ ಮಗ ಮೂರನೆಯ ಸೋಮೇಶ್ವರನು ಆಂಧ್ರದ ಪ್ರದೇಶವನ್ನು ಕುಲೋತ್ತುಂಗ ಚೋಳನಿಗೆ ಒಪ್ಪಿಸಬೇಕಾಯಿತು.

## ಬಂಗಾಳದ ಸೇಣರು

ಸೇಣರು ತಮ್ಮನ್ನು 'ಕರ್ನಾಟ–ಕ್ಷತ್ರಿಯ', 'ಬ್ರಾಹ್ಮ–ಕ್ಷತ್ರಿಯ' ಮೊದಲಾಗಿ ಬಣ್ಣಿಸಿಕೊಂಡು ದಕ್ಷಿಣಾಪಥದ ಕಾಲ್ಪನಿಕ ವ್ಯಕ್ತಿ ವೀರಸೇನನನ್ನುವವನೂ ಮತ್ತಿತರೂ ತಮ್ಮ ಪೂರ್ವಜರೆಂದು ಹೇಳಿಕೊಳ್ಳುತ್ತಿದ್ದರು. ಪಾಲದೊರೆಗಳು ಕರ್ನಾಟಕವೂ ಸೇರಿದಂತೆ ಹೊರ ರಾಜ್ಯಗಳವರನ್ನು ಅಧಿಕಾರಿಗಳನ್ನಾಗಿ ನೇಮಿಸಿಕೊಳ್ಳುತ್ತಿದ್ದರು. ಆದುದರಿಂದ ಚಾಲುಕ್ಯ ಚಕ್ರವರ್ತಿಯು ಬಂಗಾಲಕ್ಕೆ ದಂಡೆತ್ತಿಹೋದಾಗ ಅವನೊಂದಿಗೆ ಹೋದ ಧಾರವಾಡ ಪ್ರದೇಶದ ಸೇಣನೊಬ್ಬನು ಅಲ್ಲಿ ನೆಲಸಿದ್ದಿರಲೂ ಬಹುದು. ಸೇಣ ಅರಸರಲ್ಲಿ ಸಮಂತಸೇಣ, ಹೇಮಂತಸೇಣ ಮತ್ತು ವಿಜಯಸೇಣನು ಮಿಥಿಲೆಗೆ ಧಾಳಿ ಇಟ್ಟು ಪೂರ್ವ ಬಂಗಾಳವನ್ನೂ ಕಾಮರೂಪವನ್ನೂ ಗೆದ್ದುಕೊಂಡರು. ಆದರೆ ಕ್ರಿ.ಶ. ಹನ್ನೆರಡನೆಯ ಶತಮಾನದ ಕಡೆಯ ವರ್ಷಗಳಲ್ಲಿ ಮಹಮದ್ ಭಖ್ತಿಯಾರ ಖಿಲ್ಜಿಯ ಧಾಳಿಯಿಂದ ಅವನ ರಾಜ್ಯವು ಒಡೆದು ಹೋಯಿತು.

## ಮಿಥಿಲೆಯ ಕರ್ನಾಟ ಮನೆತನ

ಗೌಡದ ಪಾಲರು ಬಹುಕಾಲ ಮಗಧ, ತಿರಭುಕ್ತಿ, ಆಧುನಿಕ ತಿರಹಟ್ (ಇದಕ್ಕೆ ಮಿಥಿಲೆ ಎಂದೂ ಹೆಸರು) ಇವುಗಳ ಮೇಲೆ ಪ್ರಭುತ್ವ ನಡೆಸಿದರು. ಸುಮಾರು ಕ್ರಿ. ಶ. ೧೦೯೭ರಲ್ಲಿ ಕರ್ನಾಟಕ ಮನೆತನದ ನನ್ನದೇವನು ಈ ಪ್ರದೇಶದ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿದ. ಕ್ರಿ.ಶ. ೧೦೬೮ರ ನಂತರ ಅಲ್ಪ ಕಾಲದಲ್ಲಿ ಆರನೆಯ ಚಾಲುಕ್ಯ ವಿಕ್ರಮಾದಿತ್ಯನು ನೇಪಾಳವನ್ನು ಮುತ್ತಿದ ಎಂಬುದು ತಿಳಿದಿರುವ ಸಂಗತಿ. ನನ್ನದೇವನಿಗೆ ಇವನು ನೆರವಾಗಿದ್ದಿರಬಹುದು. ಈ ಪ್ರದೇಶದಲ್ಲಿ ಪಾಲರ ಆಡಳಿತದಲ್ಲಿ ಒಬ್ಬ ಅಧಿಕಾರಿಯಾಗಿದ್ದ ನನ್ನದೇವನು ಪ್ರಾಯಶಃ ಕೈವರ್ತ ಬಂಡಾಯದ ಲಾಭ ಪಡೆದುಕೊಂಡು ತಿರುಭುಕ್ತಿಯಲ್ಲಿ ಒಂದು ರಾಜ್ಯವನ್ನು ಸ್ಥಾಪಿಸಿ ಸಿಮರಾಮಪುರವನ್ನು (ಈಗಿನ ಸಮರಾಸ್) ರಾಜಧಾನಿಯನ್ನಾಗಿ ಮಾಡಿಕೊಂಡ. ನನ್ನದೇವನು ನೇಪಾಳವನ್ನು ಗೆದ್ದ ಎಂದು ಪರಂಪರಾಗತ ನಂಬಿಕೆ. ಇದು ನಿಜವಾಗಿದ್ದಲ್ಲಿ ನೇಪಾಳವನ್ನು ಅವನು ಬಹುಕಾಲವೇನೂ ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಸೇಣ ವಂಶದ ವಿಜಯಸೇನನು ಮಿಥಿಲೆಗೆ ಮುತ್ತಿಗೆ ಹಾಕಿ ವಿಜಯಶಾಲಿಯೊದ. ನನ್ನದೇವನ ನಂತರ ಅವನ ಮಗ ಗಂಗೆಯದೇವನು ರಾಜನಾದ. ಇವನ ಕಾಲದಲ್ಲಿ ಸಂ. ೧೦೭೬ರಲ್ಲಿ ರಾಮಾಯಣದ ಒಂದು ಹಸ್ತಪ್ರತಿಯನ್ನು ತಿರುಭುಕ್ತಿಯಲ್ಲಿ ಪ್ರತಿಮಾಡಲಾಯಿತು. ಅವನ ಮಗ ನರಸಿಂಹನು ೩೧ ವರ್ಷ ಆಳಿದ. ಅವನ ನಂತರ ರಾಣಸಿಂಹನು ಪಟ್ಟಕ್ಕೆ ಬಂದ. ಪ್ರಸಿದ್ಧ ನ್ಯಾಯಶಾಸ್ತ್ರ ತಜ್ಞ ಚಂಡೇಶ್ವರನೂ ಅವನ ತಂದೆ ವೀರೇಶ್ವರನೂ ನರಸಿಂಹನ ಬಳಿ ಉದ್ಯೋಗದಲ್ಲಿದ್ದರು. ಫೆರಿಷ್ಟದ ಪ್ರಕಾರ ಘಯೂಸುದ್ದಿನ್ ತುಘಲಕನು ತಿರಹತ್‌ಗೆ ಮುತ್ತಿಗೆ ಹಾಕಿದಾಗ ರಾಜನು ಶರಣಾಗತನಾದ; ಆದರೆ ಇತರ ಮೂಲಗಳು ಹೇಳುವ ಪ್ರಕಾರ, ಆಕ್ರಮಣಕಾರರನ್ನು ಹಿಂದಟ್ಟಲಾಯಿತು.

# ಚಾಲುಕ್ಯ ಪೂರ್ವ ವಾಸ್ತುಶಿಲ್ಪ

ಸೀತಾರಾಮ ಜಾಗೀರ್‌ದಾರ್

ಯಾವುದೇ ರಾಜ ಮನೆತನದ ಕಾಲದಲ್ಲಿ ಹುಟ್ಟಿದ ವಾಸ್ತುಶಿಲ್ಪವನ್ನು ತಿಳಿದು ಕೊಳ್ಳಬೇಕಾದರೆ ಆಯಾ ರಾಜಮನೆತನದ ರಾಜ್ಯದ ಸೀಮಾರೇಖೆಗಳನ್ನು ಮೊದಲು ಗುರುತಿಸಿಕೊಳ್ಳಬೇಕಾಗುತ್ತದೆ. 'ಚಾಲುಕ್ಯ ಪೂರ್ವ ವಾಸ್ತುಶಿಲ್ಪ' ಎಂದಾಗ ಚಾಲುಕ್ಯ ರಾಜಮನೆತನದ ಪೂರ್ವದಲ್ಲಿ 'ಕರ್ನಾಟಕ' ಎಂದು ಅರ್ಥವಾಗುತ್ತದೆ. ಆ 'ಕರ್ನಾಟಕ' ಪ್ರದೇಶದ ಸೀಮಾರೇಖೆಗಳು ಯಾವುವು? ಅವುಗಳ ವ್ಯಾಪ್ತಿ ಎಷ್ಟು? ಎಂಬ ಪ್ರಶ್ನೆಗಳು ಸಹಜ. ಆದರೆ ಉತ್ತರ ಅಷ್ಟು ಸಹಜವಲ್ಲ. ಕನ್ನಡ ನಾಡಿನ ಗಡಿಗೆರೆಗಳ ಬಗ್ಗೆ 'ಕವಿರಾಜ ಮಾರ್ಗ' ಸದ್ಯ ದೊರೆತ ಮೊದಲ ದಾಖಲೆ. ಅದರಲ್ಲಿ ಹೀಗೆ ವಿವರಿಸಿದೆ:

> ಕಾವೇರಿಯಿಂದಮಾ ಗೋ
> ದಾವರಿ ವರಮಿರ್ದ್ದ ನಾಡದಾ ಕನ್ನಡದೊಳ್
> ಭಾವಿಸಿದ ಜನಪದಂ ವಸು
> ಧಾವಳಯ ವಿಲೀನವಿಶದ ವಿಷಯ ವಿಶೇಷಂ.

ಕನ್ನಡ ನಾಡಿನ ಉತ್ತರದ ಸೀಮಾ ರೇಖೆ ಗೋದಾವರೀ ತೀರ; ಅದರ ದಕ್ಷಿಣದ ಸೀಮಾರೇಖೆ ಕಾವೇರಿ ತೀರ;. ಇವೆರಡೂ ನದಿಗಳು ಎಂಬುದು ಸ್ಪಷ್ಟವಿದ್ದರೂ ಅವು ಸರಿಯಾದ ಉದ್ದಗಲಗಳ ಸ್ಥೂಲ ರೇಖೆಯನ್ನು ಸಹ ಗುರುತಿಸಿಕೊಟ್ಟಿಲ್ಲ. ಸಹ್ಯಪರ್ವತದಲ್ಲಿ ಜನಿಸಿದ ಕಾವೇರಿ ಬಂಗಾಳ ಕೊಲ್ಲಿಯನ್ನು ಸೇರುವವರೆಗ ಬಹು ದೂರ ಹರಿದಿದೆ. ಈ ಉದ್ದಳತೆಯಲ್ಲಿ ಕನ್ನಡ ನಾಡಿನ ಸೀಮೆ ಎಲ್ಲಿಯವರೆಗೆ ಎಂಬುದು ಒಂದು ಪ್ರಶ್ನೆ. ಈ ಪ್ರಶ್ನೆಗೆ ದಂಡಿಯ ಕಾವ್ಯಾದರ್ಶದಲ್ಲಿ ಒಂದು ಉತ್ತರ ಸ್ಥೂಲವಾಗಿ ದೊರೆಯುತ್ತದೆ. 'ದೇಶ ವಿರೋಧಿ' ಎಂಬ ದೋಷವನ್ನು ವಿವರಿಸುತ್ತ ಆತ ಒಂದು ಉದಾಹರಣೆಯನ್ನು ಹೀಗೆ ಕೊಟ್ಟಿದ್ದಾನೆ.

> ಚೋಲಾಃ ಕಾಲಾಗರುಶ್ಯಾಮ ಕಾವೇರೀ ತೀರ ಭೂಮಯಃ
> ಇತಿ ದೇಶ ವಿರೋಧಿನ್ಯಾ ವಾಚಃ ಪ್ರಸ್ಥಾನಮೀದೃತಮ್

ಚೋಳ ರಾಜ್ಯದಲ್ಲಿ ಕಪ್ಪುಗಂಧದ ಮರಗಳಿಂದ ತುಂಬಿದ ಕಾವೇರೀ ತೀರದ ಕಪ್ಪು ಭೂಮಿಗಳಿವೆಯೆಂಬುದು 'ದೇಶ ವಿರೋಧಿ' ಅರ್ಥಾತ್ ಕಾವೇರಿ ತೀರ ಪ್ರದೇಶದಲ್ಲಿ ಕಾಲಾಗರು ತರುಗಳು ಬೆಳೆಯುವ ಪ್ರದೇಶದವರೆಗೂ ಕರ್ನಾಟಕ ಪ್ರದೇಶ (ಕನ್ನಡ ಭಾಷೆಯನ್ನಾಡುವ) ಹಬ್ಬಿತ್ತು. ಇದನ್ನು ಪರಿಗಣಿಸಿದರೆ ಇಂದು ತಮಿಳುನಾಡಿನಲ್ಲಿರುವ ಸ್ವಲ್ಪ ಭಾಗವಾದರೂ ಎಂದರೆ ಸುಮಾರು ಸೇಲಂ ಮತ್ತು ಕೊಯಮತ್ತೂರು ಜಿಲ್ಲೆಗಳವರೆಗೆ ಕನ್ನಡನಾಡು ಹಬ್ಬಿತ್ತು. ಇನ್ನು ಉತ್ತರದಲ್ಲಿ ಗೋದಾವರೀ ತೀರದಲ್ಲಿರುವ ಪೈಠಣ (ಪ್ರತಿಷ್ಠಾನಪುರ) ಸಾತವಾಹನರ ರಾಜಧಾನಿಯಾಗಿದ್ದು ಕನ್ನಡದ ಕೇಂದ್ರವಾಗಿತ್ತೆಂದು ಉದ್ಯೋತನ ಸೂರಿಯ 'ಕುವಲಯಮಾಲಾ' (ಕ್ರಿ.ಶ. ೭೭೭) ಗ್ರಂಥದಿಂದ ತಿಳಿದು ಬರುತ್ತದೆ. ನಾಂದೇಡ ಜಿಲ್ಲೆಯಯಲ್ಲಿ (ಮಹಾರಾಷ್ಟ್ರ) ದೊರೆತ ಶಾಸನಗಳ ಒಂದು ಸಣ್ಣ ಸಂಗ್ರಹ, ಕೆಲಸ ಇನ್ನೂ ಎಷ್ಟಿದೆಯೆಂಬುದರತ್ತ ನಮ್ಮ ಲಕ್ಷ್ಯ ಹರಿಸುತ್ತ 'ಕವಿರಾಜಮಾರ್ಗಕಾರನ'ಮಾತಿಗೆ ಸಾಕ್ಷಿಯಾಗಿ ನಿಂತಿದೆ. ಕಾಕತೀಯರ ಶಾಸನಗಳೂ ಕ್ರಿ.ಶ. ೧೨ನೆಯ ಶತಮಾನದವರೆಗೆ ವಿಶೇಷವಾಗಿ ಕನ್ನಡದಲ್ಲಿಯೇ ಇವೆ. ಅವರು ಆಳಿದ ಭೂ ಭಾಗದಲ್ಲಿ ಪ್ರಾಚೀನ ಶಾಸನಗಳತ್ತ ಕಣ್ಣಾಡಿಸಿದರೆ ಸಾಕು, ಕನ್ನಡ ಆ ನೆಲದಲ್ಲಿ ಒಂದೊಮ್ಮೆ ಜನವಾಣಿಯಾಗಿತ್ತೆಂಬುದು ಸುಸ್ಪಷ್ಟ. ವೆಂಗಿಮಂಡಲದ ಪಶ್ಚಿಮ ಭಾಗದವರೆಗೆ ಕನ್ನಡ ಹಬ್ಬಿತ್ತು. ತ್ರಿಕಲಿಂಗದ ಕೊನೆಯ ಭಾಗ ಕನ್ನಡವೇ ಆಗಿತ್ತು. ಅಲ್ಲಿ ದೊರೆಯುವ ಕನ್ನಡ ಭಾಷೆಯ ಅಸಂಖ್ಯಾತ ಶಾಸನಗಳು ಇದನ್ನು ರುಜುಪಡಿಸುತ್ತವೆ. ಮಹಾರಾಷ್ಟ್ರದಲ್ಲಿ ಅಪರಾಂತದವರೆಗೆ ಅಂದು ಕನ್ನಡವೇ ಜನದ ನುಡಿಯಾಗಿತ್ತು. ಅಲ್ಲಿ ವಿಪುಲ ಸಂಖ್ಯೆಯಲ್ಲಿ ದೊರೆಯುವ ಕನ್ನಡ ಶಾಸನಗಳು ಇದಕ್ಕೆ ಸಾಕ್ಷಿಯಾಗಿದೆ. ಸೇವುಣರು, ಶಿಲಹಾರರು, ಗೋವೆಯ ಕದಂಬರು ಎಲ್ಲರೂ ಸು.೧೨–೧೩ ನೆಯ ಶತಮಾನದ ಕಾಲದವರೆಗೂ ಕನ್ನಡ ಶಾಸನಗಳನ್ನೇ ಬರೆಸಿದ್ದಾರೆ. ಮರಾಠೀ ಭಾಷೆಯ ಚರಿತ್ರೆ ಕೂಡ ಇದನ್ನೆ ಸಾರುತ್ತದೆ. ಅದು ತನ್ನ ಈಗಿನ ಪ್ರದೇಶದಲ್ಲಿ ಅಸ್ತಿತ್ವಕ್ಕೆ ಬಂದದ್ದು ತೀರ ಇತ್ತೀಚೆಗೆ. ಅದರ ಇತಿಹಾಸ ಕ್ರಿ.ಶ. ೧೦ನೆಯ ಶತಮಾನಕ್ಕೂ ಹಿಂದೆ ಹೋಗುವಂಥ ಯಾವ ದಾಖಲೆಯೂ ಇದುವರೆಗೆ ದೊರೆತಿಲ್ಲ. ರಾಯರ ಸೀಮೆಯೇ ರಾಯಲ್ ಸೀಮೆ ಎಂದರೆ ಯಾರೂ ಅಚ್ಚರಿ ಪಡಬೇಕಿಲ್ಲ. ಸಾತವಾಹನರದು ರಾಜಕೀಯ ಸಾಮಾಜಿಕ–ಸಾಂಸ್ಕೃತಿಕ–ಒಂದು ಘಟಕ ಎಂದು ಭಾವಿಸುವುದಾದರೆ ಅವರ ಸಂಬಂಧಪಟ್ಟ, ಮುಂದೆ ಕ್ರಿ. ಶ. ೧೨ನೆಯ ಶತಮಾನದವರೆಗೂ ಕರ್ನಾಟಕವೇ ಆಗಿದ್ದ ಎಲ್ಲ ಪ್ರದೇಶವನ್ನೂ ಚಾಲುಕ್ಯ ಪೂರ್ವಕಾಲದ ವಾಸ್ತು ಶಿಲ್ಪದ ಅಧ್ಯಯನ ಮಾಡುವುದಲ್ಲಿ ಪರಿಶೀಲಿಸಬೇಕಾಗುತ್ತದೆ. ಚರಿತ್ರೆಯ ವಸ್ತು ಸ್ಥಿತಿಯನ್ನು ಅಧ್ಯಯನ ಮಾಡುವುದಕ್ಕೆ ಇದು ಅಗತ್ಯವೇ ವಿನಾ ಮತ್ತೆ ಆ ಪ್ರದೇಶಗಳೆಲ್ಲ ಈಗ ಕರ್ನಾಟಕಕ್ಕೆ ಸೇರಬೇಕೆಂಬ ಹುಚ್ಚು ಹಂಬಲ, ಹವ್ಯಾಸ, ನಮ್ಮದಲ್ಲ. ಅರ್ಥಾತ್ ಆಕುಂಚನಗೊಂ

ಡ ಇಂದಿನ ಕರ್ನಾಟಕವಷ್ಟೇ ಪ್ರಾಚೀನ ಕರ್ನಾಟಕವಲ್ಲ. ಇಂದಿನ ಕರ್ನಾಟಕದಲ್ಲಿಯೂ ಇರುವ ಬನವಾಸಿ ಮತ್ತು ಸನ್ನತಿ ಸ್ಥಳಗಳಲ್ಲಿ ಸಾತವಾಹನರ ಶಾಸನಗಳು ದೊರಕಿದ್ದು ಅವರ ಆಳ್ವಿಕೆಯ ಅಸ್ತಿತ್ವವನ್ನು ವಿದಿತಪಡಿಸುತ್ತವೆ. ಆಂಧ್ರ ಭೃತ್ಯರಾದ ಸಾತವಾಹನರು ಕರ್ನಾಟಕದವರು.

## ಸಮಾಧಿ – ವಸತಿ

ಕರ್ನಾಟಕದ ವಾಸ್ತು ಶಿಲ್ಪ ಭಾರತೀಯ ವಾಸ್ತುಶಿಲ್ಪದ ಒಂದಂಗವೇ ಅದರೂ ಇಲ್ಲಿ ದೊರೆಯುವ ಮೂಲ ಸಾಧನ ಸಂಪತ್ತು ಅದಕ್ಕೊಂದು ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಟ್ಟಿದೆ. ಪಶ್ಚಿಮ ಭಾಗದಲ್ಲಿ ದೊರೆಯುವ ಧಾರವಾಡ ಶಿಲಾಪದರ, ಪೂರ್ವಭಾಗದಲ್ಲಿ ದೊರೆಯುವ ಗಟ್ಟಿಗಲ್ಲು (ಗ್ರಾನೈಟ್), ಕರಿಯಕಲ್ಲು, ಬಳಪದ ಕಲ್ಲು, ಕೆಂಪು ಮರಳು ಶಿಲೆ, ಶಹಬಾದ್ ಶಿಲೆ (ಸುಣ್ಣದ ಕಲ್ಲು) ಮತ್ತು ಕರಾವಳಿಯ ಜಂಬೂ ಕಲ್ಲು–ಎಲ್ಲವೂ ವಾಸ್ತು ನಿರ್ಮಾಪಕರ ಕೈಯಲ್ಲಿ ಅವರ ಅಭಿರುಚಿಗನುಗುಣವಾದಂತೆ ಕಾಲಾನುಕಾಲದಲ್ಲಿ ಬಳಕೆಗೆ ಬಂದು ತಮ್ಮ ಪ್ರಭಾವವನ್ನು ಕಟ್ಟಡಗಳ ನಿರ್ಮಾಣದಲ್ಲಿ ಮೆರೆದಿವೆ. ಕರ್ನಾಟಕದಲ್ಲಿ ಮನುಷ್ಯ, ಪ್ರಾಗೈತಿಹಾಸಿಕ ಕಾಲದಿಂದಲೂ ಇರುವುದು ನಮಗೆ ಕಂಡು ಬರುತ್ತದೆ. ಆರಂಭದಲ್ಲಿ ಮನುಷ್ಯ ನಿಸರ್ಗನಿರ್ಮಿತ ಗುಹೆಗಳಲ್ಲಿ ವಾಸಿಸುತ್ತಿದ್ದಿರಬೇಕು. ಆದರೆ ಮುಂದೆ ಸಂಸ್ಕೃತಿ ಬೆಳೆದಂತೆ, ಜೀವನ ವಿಕಸನಗೊಂಡಂತೆ, ಅವನ ಆವಶ್ಯಕತೆಗಳು ಹೆಚ್ಚಿದಂತೆ ಇರಲು ಒಂದು ಮನೆ ಬೇಕಾದಾಗ, ಅದು ನಿತ್ಯ ಅಗತ್ಯವಾದಾಗ, ವಾಸದ ಆವಶ್ಯಕತೆ ಅಗತ್ಯವೆನಿಸಿ ಭದ್ರತೆಯ ದಾರಿಯಲ್ಲಿ ಕಟ್ಟಡ ನಿರ್ಮಾಣ ಆರಂಭವಾಗಿರಬೇಕು. ಆರಂಭದಲ್ಲಿ ಮರ, ಬೊಂಬು, ಮಣ್ಣು ಮುಂತಾದ ಬೇಗ ನಾಶವಾಗಬಹುದಾದಂತಹ ಸಾಧನಗಳಿಂದ ವಸತಿಗಳನ್ನು ಕಟ್ಟಿಕೊಂಡಿರಬೇಕು. ಸತ್ತವರಿಗಾಗಿ ಸಮಾಧಿಗಳನ್ನು, ಗುಂಪು ನಂಬುವ ದೇವತೆಗಳಿಗೆ ವಾಸಗಳನ್ನು ಮೊದಲು ಕಟ್ಟಿರಬಹುದು. ಆ ಕಟ್ಟಡಗಳೇ ನಮಗೆ ಆರಂಭದ ವಾಸ್ತು ವಿಷಯಗಳು. ತಕ್ಕಲಕೋಟೆ, ಸಂಗನಕಲ್ಲು, ಹಳ್ಳೂರು, ಪಿಕಲಿಹಾಳ, ಮುಂತಾಗಿ ಅನೇಕ ಕಡೆಗೆ ನಡೆದ ಉತ್ಖನನಗಳಲ್ಲಿ ಆರಂಭದ ದೆಸೆಯಲ್ಲಿದ್ದ ವಾಸ್ತುಗಳನ್ನು ಸ್ಥೂಲವಾಗಿ ಹೀಗೆ ಗುರುತಿಸಿದೆ; ನಡುವೆ ಒಂದು ಎತ್ತರವಾದ ಮರದ ಕಂಬ ಅದನ್ನು ಬಳಸಿಕೊಂಡು ದುಂಡಾದ ಇಲ್ಲವೆ ಚೌಕಾಕಾರದ ಮಣ್ಣಿನ ಗೋಡೆಗಳು, ಕಂಬದ ತುದಿಯಿಂದ ಸುತ್ತಲೂ ಇಳಿಜಾರಾಗಿರುವ ಹುಲ್ಲಿನ ಚಾವಣಿ, ಮರದ ಕಂಬದೆಡೆಯಲ್ಲಿ ಸೋರಬಾರದೆಂದು ಒಂದು ಮಡಕೆಯನ್ನು ಮೇಲೆ ಬೋರಲಾಗಿ ಇಡುವುದು. ಈ ಕಾರಣದಿಂದ ಮಳೆಯ ನೀರು ಚಾವಣಿಗುಂಟ ಇಳಿದು ಹೊರಕ್ಕೆ ಹರಿದುಹೋಗುತ್ತಿತ್ತು. ಪರಂಪರೆಯಲ್ಲಿ ಇಂದಿಗೂ ಇಳಿದು ಬಂದಿರುವ ಹಳ್ಳಿಯಲ್ಲಿನ ಗ್ರಾಮ ದೇವತೆಗಳ ದೇವಸ್ಥಾನಗಳು ಪ್ರಾಚೀನ ವಾಸ್ತು ಪದ್ಧತಿಯ ಪಳೆಯುಳಿಕೆಗಳು ಎಂದರೆ ತಪ್ಪಾಗದು, ಬೃಹತ್ ಶಿಲಾಸಮಾಧಿಗಳ ಯುಗದಲ್ಲಿ ಪ್ರಾಯ: ಚೌಕೋನದ ಭದ್ರತೆಯ ಕಲ್ಪನೆ ಹೊಳೆದಿರಬೇಕು. ಈ ಬೃಹತ್ ಶಿಲಾಸಮಾಧಿಗಳು ಭಾರತದಲ್ಲಿ ಅನೇಕ ಕಡೆಗಳಲ್ಲಿವೆ. ಕರ್ನಾಟಕದಲ್ಲೂ ವಿಪುಲವಾಗಿವೆ. ಈ ಬೃಹಚ್ಛಿಲಾ ಗೋರಿಗಳನ್ನು ಕ್ರಿ. ಪೂ. ಕಾಲದಿಂದ ಕ್ರಿ. ಶ. ಸುಮಾರು ಏಳನೆಯ ಶತಮಾನದ ವರೆಗೂ ಕಟ್ಟಿದುದು ಕಂಡು ಬರುತ್ತದೆ. ಮೊದಲು ಹೆಣವನ್ನು ಗುಂಡಿ ತೋಡಿ ಹೂಳಿ ಅನಂತರ ನಾಲ್ಕು ಚಪ್ಪಡಿಗಳನ್ನು ಗೋಡೆಯ ಹಾಗೆ ನಿಲ್ಲಿಸಿ ಮೇಲೆ ಒಂದು ಡಬಾಸಾಗಿ ಹಾಕಿ ಮುಚ್ಚಿಬಿಡುತ್ತಿದ್ದರು. ಇವು ಚೌಕ ಇಲ್ಲವೇ ಕಾಂಚಿತ ಆಯತಾಕಾರದಲ್ಲಿ ಇರದಿದ್ದರೆ ಬಹಳ ದಿನ ನಿಲ್ಲಲಾರವು. ಹೀಗೆ ಸಮಾಧಿಗಳನ್ನು ಕಟ್ಟುವಲ್ಲಿ ಅವರು ಭದ್ರತೆಯ ಬುನಾದಿಯನ್ನು ನಿರ್ಮಿಸಿಕೊಂಡರು. ಚೌಕಾಕಾರದ ಭದ್ರವಾದ ಈ ಯೋಜನೆ ಭಾರತೀಯ ವಾಸ್ತುಶಿಲ್ಪದ ಮೂಲ ತತ್ವವಾಗಿದೆ. ಏಕೆಂದರೆ ಅದು ಸಮಾನ ಸ್ವರೂಪದ–ಸಮಾನ ಶಕ್ತಿಯ–ಹೊಂದಾಣಿಕೆಯೊಗಿರುತ್ತದೆ. ಶಾಸ್ತ್ರಗಳ ಕಾಲದಲ್ಲಿ ಅದು ಮಾನಿತವಾಗಿ ಭದ್ರ ಸ್ಥಾನವನ್ನೇ ಪಡೆಯಿತು. ವಾಸ್ತು ಮಧ್ಯೇತು ಮರ್ಮಾಣಿ ಬ್ರಹ್ಮಾಹೃದಯ ಮುಚ್ಯತೇ— ಎಂಬುದು ಮಯಮತ.

ವಾಸ್ತುಶಾಸ್ತ್ರವನ್ನು ವಸತಿ ನಿರ್ಮಾಣ ಮತ್ತು ದೇವಾಲಯ ನಿರ್ಮಾಣ ಎಂದು ಎರಡು ವಿಭಾಗವಾಗಿ ಮಾಡಿಕೊಂಡು ಅಧ್ಯಯನ ಮಾಡುವುದು ರೂಢಿ. 'ವಾಸ್ತು' ಎಂಬ ಶಬ್ದದ ಅರ್ಥವೇ 'ವಾಸಸ್ಥಾನ' ಅರ್ಥಾತ್ ಮನೆ, ಅದು 'ನಿವೇಶನ' ಹಾಗೂ 'ನಿಕೇತನ' ಎರಡನ್ನೂ ಸೂಚಿಸುತ್ತದೆ. ಕೌಟಿಲ್ಯನ 'ಅರ್ಥಶಾಸ್ತ್ರ' ಗ್ರಂಥವು ಗೃಹ, ಕ್ಷೇತ್ರ, ಉದ್ಯಾನ, ಸೇತುಬಂಧ, ತಾಟಾಕ ನಿರ್ಮಾಣ (ಗೃಹಂ ಕ್ಷೇತ್ರಮಾರಾಮಸ್ಸೇತುಬಂಧಸ್ತಟಾಕಮಾಧಾರೋವಾ ವಾಸ್ತು)–ಇವೆಲ್ಲವನ್ನೂ ವಾಸ್ತುಶಾಸ್ತ್ರದಂಗವಾಗಿಯೇ ಹೇಳಿದೆ. ರಾಜನ ಅರಮನೆ, ರಾಣಿಯರ ಮನೆ, ಯುವರಾಜನ ಮನೆ, ಯುವರಾಜನ ಸೋದರರ ಮನೆ, ಸೇನಾಪತಿಯ ಮನೆ, ಸಚಿವರ ಮನೆ, ಸಾಮಂತರ ಮನೆ, ರಾಜಪುರುಷರ ಮನೆ, ಕಂಚುಕಿಯ ಮನೆ, ವೇಶ್ಯೆಯರ ಮನೆಗಳು, ಕಲಾಕಾರರ ಮನೆಗಳು, ದೂತರ ಮನೆಗಳು, ಜ್ಯೋತಿಷ್ಯ–ವೈದ್ಯ–ಪೌರೋಹಿತ್ಯ ಇತ್ಯಾದಿಗಳನ್ನು ವಿವರಿಸುವವರ ಮನೆಗಳು, ಚಾತುರ್ವರ್ಣದ ಶ್ರೀಸಾಮಾನ್ಯರ ಮನೆಗಳು ಭಾಂಡಾಗಾರ ಮತ್ತು ರತಿ ಭವನ ಇವೆಲ್ಲವುಗಳು ವಸತಿ ನಿರ್ಮಾಣದ ಅಂಗವಾಗಿ ಬರುವ ಕಟ್ಟಡಗಳು. ಈ ದಿಶೆಯಲ್ಲಿ ಬೃಹತ್ ಸಂಹಿತೆ, ಮತ್ಸ್ಯಪುರಾಣ, ವಿಷ್ಣುಧರ್ಮೋತ್ತರ ಪುರಾಣ ಹರ್ಷಚರಿತೆ ಮುಂತಾದ ಕೃತಿಗಳು ಸಾಕಷ್ಟು ಬೆಳಕನ್ನು ಚೆಲ್ಲುತ್ತವೆ. ಪ್ರತಿಯೊಂದು ಕಟ್ಟಡಕ್ಕೂ ಇರುವ ವಿವಿಧ ಬಗೆಯ ಅಳತೆಗಳನ್ನು ಅವು ಸೂಚಿಸಿವೆ. ಚಾಲುಕ್ಯರು ಚರಿತ್ರೆಯೂ ಕಾಶದಲ್ಲಿ ಮೂಡುವ ಸಮಯಕ್ಕಾಗಲೇ ವಾಸ್ತುಶಿಲ್ಪದ ವಿದ್ಯೆಯು ಸಾಕಷ್ಟು ಬೆಳೆದು ಬೆಳವಣಿಗೆಯ ಒಂದು ಉನ್ನತ ಸ್ತರವನ್ನು ಮುಟ್ಟಿತ್ತು. ನಂದರು, ಮೌರ್ಯರು, ಸಾತವಾಹನರು, ಕದಂಬರು, ಸೇಂದ್ರಕರು, ವಾಕಾಟಕರು, ಇಕ್ಷ್ವಾಕುಗಳು, ಬಾಣರು, ಗಂಗರು, ಅಳುಪರು, ರಾಷ್ಟ್ರಕೂಟರು ಮುಂತಾಗಿ ಹಲವು ರಾಜಮನೆತನದ ದೊರೆಗಳು ವಿಸ್ತಾರವಾದ ಕರ್ನಾಟಕದ ಭೂಭಾಗವನ್ನು ಆಳಿದರು. ಕದಂಬ ಮಯೂರಶರ್ಮನ ಚಂದ್ರವಳ್ಳಿ ಶಾಸನ ಆತ ತಟಾಕವನ್ನು ಕಟ್ಟಿಸಿದುದನ್ನೂ ಹಲವು ರಾಜ ಮನೆತನಗಳನ್ನು ಗೆದ್ದುದನ್ನೂ ಸೂಚಿಸಿದೆ:

ಕದಂಬಾಣಂ ಮಯೂರಶಮ್ಮಣಾ ವಿಣಿಮ್ಮಿ ಅಂ
ತಟಕಂ ಕುಟ ತ್ರೇಕೂಟ ಅಭಿರ ಪಲ್ಲವ ಪಾದಿ
ಯೊತ್ರಿಕ ಸಕಸ್ಥಾಣ ಸಯಿನ್ದಕ ಪುಣಾಟ ಮೋಕರಿಣಾ

ಆ ತಟಾಕವಾಗಲಿ, ಸ್ಥಾಣಕುಂದೂರಿನಲ್ಲಿ ಪ್ರಣವೇಶ್ವರ ದೇವಾಲಯದ ಬಳಿ ಕಟ್ಟಿಸಿದ ಕಾಕುಸ್ಥವರ್ಮನ ತಟಾಕವಾಗಲಿ–ಇಂದು ನಮಗೆ ಉಳಿದು ಬಂದಿಲ್ಲ. ಅಂತೆಯೇ ಆಗಿನ ರಾಜರ, ಅಧಿಕಾರಿಗಳ, ಶ್ರೀಸಾಮಾನ್ಯರ ಸದನಗಳೂ ಯಥಾಸ್ಥಿತಿಯಲ್ಲಿ ನಮಗೆ ಉಳಿದು ಬಂದಿಲ್ಲ. ಕಾರಣ ಅವುಗಳ ವಾಸ್ತುವಿನ್ಯಾಸದ ಬಗೆಗೆ ಇದಮಿತ್ಥಂ ಎಂದು ಬರೆಯಲು ಬರುವದಿಲ್ಲ. ಅಂದು ಬಳಕೆಯಲ್ಲಿದ್ದ ವಾಸ್ತು ಶಾಸ್ತ್ರಗಳನ್ನು ಬಳಸಿ ಕಟ್ಟಡಗಳನ್ನು ಕಟ್ಟಿರಬಹುದು. ಶಾಲಾ ಅಲಿಂದ, ಭೂಮಿ, ಭಿತ್ತಿಗಳು, ಬಾಗಿಲು, ವೀಥಿಕೆ (ಮಲನೀರ್‌ಹರಣ

ಸ್ಥಲ) ಇತ್ಯಾದಿಗಳು ಪ್ರತಿಯೊಂದು ಮನೆಗೆ ಇರಲೇ ಬೇಕಾಗಿತ್ತು. ಮನೆಯಲ್ಲಿ ಅಂಕಣಗಳು ಸರಿಯಾದ ಅಳತೆಗಳಲ್ಲಿ ಇರುತ್ತಿದ್ದವು. ಕಂಬಗಳ ಮೇಲೆ, ದೂಲಗಳ ಮೇಲೆ ಮನೆಯೊಡೆಯನ ಶ್ರೀಮಂತಿಕೆಗನುಗುಣವಾಗಿ ಸೌಂದರ್ಯದ ರೂಪುಗಳು ಮೂಡಿ ನಿಲ್ಲುತ್ತಿದ್ದವು. ದುಡ್ಡು ಕೊಟ್ಟಂತೆ ಕುಶಲಕರ್ಮಿಗಳು ಅವುಗಳ ಮೇಲೆ ಚಿತ್ರಗಳನ್ನು ಬಿಡಿಸುತ್ತಿದರು. ಸ್ತಂಭಗಳ ಮೇಲೆ ಪದ್ಮ, ಮಲ್ಲಿ, ಲತಾ, ಕುಂಭ, ಪತ್ರ, ದರ್ಪಣ ಇತ್ಯಾದಿಗಳನ್ನು ಬಿಡಿಸುತ್ತಿದ್ದುದಾಗಿ ಮತ್ಸ್ಯ ಪುರಾಣ ಬರೆದಿದೆ. ಚತುಶ್ಯಾಲಕ, ತ್ರಿಶಾಲಕ, ದ್ವಿಶಾಲಕ ಸದನಗಳು ಇದ್ದುದಾಗಿ ತಿಳಿದು ಬರುತ್ತದೆ. ಕರ್ನಾಟಕ ಕಲಹದ ಉಲ್ಲೇಖವುಳ್ಳ 'ಮೃಚ್ಛಕಟಿಕ' ನಾಟಕದಲ್ಲಿ ಚಾರುದತ್ತ ಚತುಶ್ಯಾಲಾ ಮನೆಯನ್ನು ಹೊಂದಿದ್ದುದಾಗಿ ಬರೆದಿದೆ. ಅಂತಸ್ತಿಗೆ ತಕ್ಕಂತೆ—ಜಾತಿಗೆ ಅನುಗುಣವಾದಂತೆ ಜನತೆ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದರು. ನಿವೇಶನದ ಆರಿಸುವಿಕೆ, ಪದವಿನ್ಯಾಸದ ಸೃಜನೆ, ತಳಪಾಯದ ತೋಡುವಿಕೆ ಹಾಗೂ ಕೆಸರಲ್ಲಿಡುವುದು, ಗೋಡೆ ಕಟ್ಟಲು ಕಲ್ಲು ಇಲ್ಲವೆ ಸುಟ್ಟ ಇಟ್ಟಿಗೆಗಳನ್ನು ಬಳಸುವುದು, ಕಟ್ಟಿದ ಗೋಡೆಗೆ ವಜ್ರಲೇಪ, ವಜ್ರತಲ ಇಲ್ಲವೇ ವಜ್ರ ಸಂಘಾತಗಳ ಮಲ್ಲಮಾಡುವಿಕೆ ಇತ್ಯಾದಿಗಳ ವಿವರಣೆ ಬೃಹತ್ ಸಂಹಿತೆಯಲ್ಲಿ ವಾಸ್ತು ಶಾಸ್ತ್ರ ವಿವರಣೆಯ ವಿಭಾಗದಲ್ಲಿ ಬಂದಿದೆ. ನಾಶಿಕದ ಶಾಸನವೊಂದರಲ್ಲಿ ಚತುಶ್ಯಾಲಾದ ಉಲ್ಲೇಖವಿದೆ. ಅಮರಕೋಶದ ಎರಡನೆಯ ಕಾಂಡದಲ್ಲಿ ರಾಜಮಾರ್ಗ, ರಸ್ತೆ, ಪಟ್ಟಣ, ಊರು, ಅಪಣ (ಅಂಗಡಿ), ಅಂಗಡಿಬೀದಿ, ದೊಡ್ಡ ರಸ್ತೆ, ಸೂಳೆಗೇರಿ, ಕೋಟೆ ಹಲವು ಬಗೆಯ ಗೋಡೆಗಳು, ಮನೆ, ವಾಜಿಶಾಲಾ, ಶಿಲ್ಪಶಾಲಾ, ಪ್ರಪಾಶಾಲಾ, ಮಠ, ಮದಿರಾಗೃಹ, ಮಲಗುವ ಮನೆ, ಹೆರಿಗೆಯ ಮನೆ, ಗವಾಕ್ಷಿ, ಆಸ್ಥಾನ (ಚಾವಡಿ), ಮೇಲಿನ ಮಹಡಿ (ಚಂದ್ರಶಾಲಾ), ಧನಿಕರ ಮನೆ (ಹರ್ಮ್ಯ), ರಾಜ ಗೃಹ ಇತ್ಯಾದಿಗಳನ್ನು ಉಲ್ಲೇಖಿಸಿದೆ. ಇವೆಲ್ಲವೂ ಚಾಲುಕ್ಯರ ಪೂರ್ವದಲ್ಲಿ ಕದಂಬ, ಗುಪ್ತ, ವಾಕಾಟ–ಮನೆತನಗಳಲ್ಲಿ ಕೊಡುಕೊಳ್ಳುವಿಕೆ(ವಿವಾಹ) ಸಂಬಂಧಗಳು ನಡೆದು ಕಾಲಾವಧಿಯಲ್ಲಿ ಇದ್ದವು ಎಂದರೆ ತಪ್ಪಾಗುವುದಿಲ್ಲ. ಅವುಗಳ ಅಳತೆ ಹಾಗೂ ಪ್ರಮಾಣಗಳನ್ನು ಖಚಿತ ಖಚಿತವಾಗಿ ಬೇಕಾದವರು ಆಗಲೇ ಉಲ್ಲೇಖಿಸಿದ ಪುಸ್ತಕಗಳಿಂದ ಅರಿತುಕೊಳ್ಳಬಹುದು. ಬೃಹತ್ ಸಂಹಿತೆಯ ಕಾಲ ಕ್ರಿ. ಶ. ೫೦೫ ಎಂಬುದು ಸುನಿಶ್ಚಿತವಾಗಿರುವುದರಿಂದ ಇಲ್ಲಿ ಅನುಮಾನಕ್ಕೆ ಆಸ್ಪದವಿಲ್ಲ. ರಾಜ ರಾಜರ ವೈರತ್ವದಲ್ಲಿ, ಮಳೆಗಾಳಿ ಮುಂತಾಗಿ ಕಾಲನ ಕೈಯಲ್ಲಿ, ವಸತಿ ನಿರ್ಮಾಣದ ಕುರುಹುಗಳು ನಿಶ್ಶೇಷವಾಗಿವೆ.

**ದೇವಾಲಯಗಳು**

ಇಂದು ಕಣ್ಣ ಮುಂದೆ ಕಾಣಬರುವ ಉಳಿದು ಬಂದ ವಾಸ್ತುಶಿಲ್ಪದ ಅವಶೇಷಗಳೆಂದರೆ ದೇವಾಲಯಗಳು. ಉಪಲಬ್ಧ ಸಾಮಗ್ರಿ ಹಾಗೂ ವಾಯುಗುಣ ವ್ಯತ್ಯಾಸ ಇವು ವಾಸ್ತು ಶೈಲಿಯನ್ನು ರೂಪಿಸುವಲ್ಲಿ ತಮ್ಮ ಪ್ರಭಾವ ಬೀರಿದಂತೆ ಜನತೆ ನಂಬಿನೆಚ್ಚಿದ ಮತಧರ್ಮಗಳು ವಾಸ್ತು ನಿರ್ಮಾಣದಲ್ಲಿ ತಮ್ಮ ಪ್ರಭಾವನ್ನು ಬೀರಿವೆ. ಹಲವು ಧರ್ಮಗಳಿಗೆ ತವರೂ ಆಶ್ರಯಸ್ಥಾನವೂ ಆದ ವಿಸ್ತಾರವಾದ ಕರ್ನಾಟಕದಲ್ಲಿ ಪ್ರತಿಯೊಂದು ಮತದವರೂ ತಮ್ಮ ತಮ್ಮ ದೇವತೆಗಳಿಗೆ ಆಲಯಗಳನ್ನು (ಪ್ರಾಸಾದಗಳನ್ನೂ) ಕಟ್ಟುವಲ್ಲಿ ಒಬ್ಬೊಬ್ಬರಿಗೆ ಇನ್ನೊಂದು ಮತದವರು ಪ್ರಾಯ: ಇನಿತು ಸ್ಪರ್ಧೆಯನ್ನು ಕಟ್ಟಿ ಹುರುಡು ಹೆಚ್ಚಾದಂತೆ ಅಭಿವ್ಯಕ್ತವಾಗುವ ರೀತಿಯಲ್ಲಿ ವಾಸ್ತುಶಿಲ್ಪ ನಿರ್ಮಾಣವಾಗಲು ಕಾರಣರಾಗಿದ್ದಾರೆ. ಕರ್ನಾಟಕದಲ್ಲಿನ ಪ್ರಾಸಾದಗಳನ್ನು ವೈದಿಕ, ಜೈನ, ಬೌದ್ಧ ಮತಗಳಿಗನುಸಾರವಾಗಿ ವಾಸ್ತು ವಿದ್ಯೆಯನ್ನು ಮೂರು ವಿಭಾಗ ಮಾಡಿ ಅಧ್ಯಯನ ಮಾಡಬಹುದು. ಸರ್ವಮತ ಸಹಿಷ್ಣುಗಳಾದ ರಾಜರ ರಾಜಧಾನಿಗಳಲ್ಲಿ ಎಲ್ಲ ಮತಗಳ ವಾಸ್ತುಶಿಲ್ಪಗಳನ್ನು ಕಾಣಲು ಸಾಧ್ಯ. ಉದಾಹರಣೆಗೆ ಬನವಾಸಿಯನ್ನು ಹೇಳಬಹುದು. ಬಾದಾಮಿಯನ್ನು ಹೆಸರಿಸಬಹುದು, ಐಹೊಳೆಯನ್ನು ಉಲ್ಲೇಖಿಸಬಹುದು........ ಇತ್ಯಾದಿ ಇತ್ಯಾದಿಯಾಗಿ ಈ ಪಟ್ಟಿಯು ಬೆಳೆಯಬಹುದು. ಇನ್ನು ಯಾವುದೇ ವಾಸ್ತುವಿದ್ಯೆಯನ್ನು ಮೂರು ವಿಭಾಗಗಳನ್ನಾಗಿ—ಎಂದರೆ ವಾಸ್ತು ಶಾಸ್ತ್ರ, ಶಿಲ್ಪ ಶಾಸ್ತ್ರ ಮತ್ತು ಚಿತ್ರ ಸೂತ್ರ ಎಂಬ ಮೂರು ಅಂಗಗಳಲ್ಲಿ ವಿಭಜಿಸಿಕೊಂಡು ನೋಡಲು ಶಕ್ಯವಿರುತ್ತದೆ.

ವೈದಿಕ ಧರ್ಮ ಕರ್ನಾಟಕದಲ್ಲಿ ಕಾಲಿರಿಸಿ ಸಹಸ್ರಾರು ವರುಷಗಳು ಸಂದಿವೆ. ಅದರ ತೋಳ ತೆಕ್ಕೆಯಲ್ಲಿ ವಿಪುಲ ಜನ ತಮ್ಮ ಜೀವನದ ರೀತಿ ನೀತಿಗಳನ್ನು ಪೂಜೆ ಪುರಸ್ಕಾರಗಳನ್ನು ಸುಭದ್ರವಾಗಿರಿಸಿಕೊಂಡು ಬೆಳೆಯಿಸಿಕೊಂಡು ಆಧುನಿಕ ಯುಗದವರೆಗೆ ನಡೆದುಕೊಂಡು ಬಂದಿದ್ದಾರೆ. ಪ್ರಾಚೀನ ಕರ್ನಾಟಕದ ದೇವಸ್ಥಾನಗಳು ಜನರ ಭಕ್ತಿ ಮತ್ತು ನಿಷ್ಠೆಗಳ ಪ್ರತೀಕವಾಗಿದ್ದವು. ಚಾಲುಕ್ಯ ಪೂರ್ವ ಕಾಲದ ದೇವಸ್ಥಾನಗಳು ವಿಶೇಷವಾಗಿ ಉಳಿದು ಬಂದಿಲ್ಲ. ಉಳಿದು ಬಂದುವುಗಳಲ್ಲಿ ಕೂಡ ಅವುಗಳನ್ನು ಕಟ್ಟಿದ ಕಾಲದ ವಾಸ್ತು ವಿನ್ಯಾಸ, ಯಥಾಸ್ಥಿತಿಯಲ್ಲಿ. ಉಳಿದಿಲ್ಲ ಕಾಲ ಕಾಲಕ್ಕೆ ಆದ ಖಂಡ ಸ್ಫುಟಿತ ಜೀರ್ಣೋದ್ಧಾರ ಕೆಲಸ ವೈದಿಕ ಧರ್ಮದ ದೇವಸ್ಥಾನದ ರೂಪರೇಷೆಗಳಲ್ಲಿ ಹೊಸ ವಿನ್ಯಾಸವನ್ನು ಸೃಷ್ಟಿಸಿದವು. ಹಳೆಯದೆಲ್ಲ ಮಾಯವಾಯಿತು. ಸದ್ಯ ಉಳಿದು ಬಂದಿರುವ ದೇವಸ್ಥಾನಗಳಲ್ಲಿ ತಾಳಗುಂದದ ಪ್ರಣವೇಶ್ವರ ದೇವಸ್ಥಾನ, ಬನವಾಸಿಯ ಮಧುಕೇಶ್ವರ ದೇವಸ್ಥಾನ, ಶ್ರೀ ಶೈಲದ ಮಲ್ಲಿಕಾರ್ಜುನ ದೇವಸ್ಥಾನ, ಪರಳಿಯ ವೈದ್ಯನಾಥೇಶ್ವರ ದೇವಸ್ಥಾನ, ಅಲಂಪೂರಿನ ಬ್ರಹ್ಮೇಶ್ವರ ದೇವಸ್ಥಾನ, ಐಹೊಳೆಯ ದುರ್ಗಾದೇವಸ್ಥಾನ ಇತ್ಯಾದಿಗಳು ಖಚಿತವಾಗಿಯೂ ಚಾಲುಕ್ಯ ಪೂರ್ವಕಾಲದಲ್ಲಿದ್ದುವು. ಆದರೆ ವಾಸ್ತು ಶಿಲ್ಪದ ಅಧ್ಯಯನವನ್ನು ಯಾವುದೂ ಚಾಲುಕ್ಯ ಪೂರ್ವದ್ದೆಂದು ಸಂಪೂರ್ಣ ಅನ್ನಿಸಿಕೊಳ್ಳಲು ಸಾಧ್ಯವಿಲ್ಲ. ಚಾತುರ್ವರ್ಣಕ್ಕೆ ಅನುಗುಣವಾಗಿ ಮೂರ್ತಿಗಳನ್ನು ಈ ಕಾಲದಲ್ಲಿ ಕಟ್ಟಿಗೆಯನ್ನು ಬಳಸಿ ಮಾಡುತ್ತಿದ್ದರು. ಇದಕ್ಕಾಗಿ ದೇವದಾರು, ಶಮಿ (ಜಂಬಿ), ಗಂಧ, ಮಧುಕ, ಅರಿಷ್ಟ, ಅಶ್ವತ್ಥ, ಖಧಿರ, ಬಿಲ್ವ, ಜೀವಕ, ಸಿಂಧುಕ ಸ್ಯಂದನ, ತಿಂಡುಕ (ದಿಂಡಲ್ಲ), ಕೇಸರ, ಸರ್ಜ, ಅರ್ಜುನ, ಆಮ್ರ (ಮಾವು) ಮತ್ತು ಶಾಲ ವೃಕ್ಷಗಳ ಕಾಂಡಗಳನ್ನು ಬಳಸುತ್ತಿದ್ದರು. ಕಾಸ್ಯಪಸಂಹಿತೆಯಲ್ಲಿ ಹೀಗೆ ಬರೆದಿದೆ:

> ಲಿಂಗಂ ವಾ ಪ್ರತಿಮಾ ವಾ
> ದ್ರುಮವತ್ ಸ್ಥಾಪ್ಯಾಯಥಾದಿಶಂ ಯಸ್ಮಾತ್
> ತಸ್ಮಾಚ್ಚಿಹ್ನಯಿತವ್ಯಾ
> ದಿಶೋ ದ್ರುಮಸ್ಯೋರ್ಧ್ವಮಥ ವ್ಯಾಧ:

ಬನವಾಸಿಯ ಮಧುಕೇಶ್ವರ, ಪಟ್ಟದಕಲ್ಲಿನ ಜಂಬುಲಿಂಗ (ಜಂಬಿ-ಶಮಿ) –ಇವು ಒಂದೊಮ್ಮೆ ದ್ರುಮದಿಂದ (ಕಟ್ಟಿಗೆಯಿಂದ) ಮಾಡಿದ ಲಿಂಗಗಳೆನ್ನುವುದರಲ್ಲಿ ಸಂಶಯವಿಲ್ಲ. ಲಿಂಗಗಳನ್ನು ಮತ್ತು ಪ್ರತಿಮೆಗಳನ್ನು ದಾರುಮಯೀ, ಮೃಣ್ಮಯೀ,ಮಣಿಮಯೀ, ಸೌವರ್ಣೀ, ರಜತಮಯೀ, ತಾಮ್ರಮಯೀ ಮತ್ತು ಶೈಲೀ (ಶಿಲೆ) ಎಂಬ ಏಳು ರೀತಿಯಲ್ಲಿ ಮಾಡಬಹುದಾಗಿತ್ತು. ಕಟ್ಟಿಗೆಯ ಆಕೃತಿಗಳು ತೀವ್ರ ಕೆಡುತ್ತಿದ್ದ ಕಾರಣದಿಂದ ನಮ್ಮ ಕಾಲದವರೆಗೆ ಅವು ಉಳಿದು ಬಂದಿಲ್ಲ. ಶಿಲಾ ಪ್ರತಿಮೆಗಳು ಉಳಿದು ಬಂದಿರಲು ಸಾಧ್ಯ. ಪಂಢರಪುರದ ಪಾಂಡುರಂಗನ ಮೂರ್ತಿ ಗುಪ್ತರ ಕಾಲದ್ದೆಂದು ವಿದ್ವಾಂಸ

ರ ಅಭಿಪ್ರಾಯ. ಕೊಂತಪಾಲ (ಹೊನ್ನಾವರ ತಾಲೂಕು) ಗ್ರಾಮದಲ್ಲಿದ್ದ ವಿಷ್ಣುಮೂರ್ತಿ ಸದ್ಯ ಕರ್ನಾಟಕದಲ್ಲಿ ದೊರೆತ ಅತ್ಯಂತ ಪ್ರಾಚೀನ ವಿಷ್ಣು ಶಿಲ್ಪ. ಈ ಮೂರ್ತಿಗೆ ಕೇವಲ ಎರಡೇ ಭುಜಗಳು, ಬಲಗೈಯಲ್ಲಿ ಚಕ್ರ, ಸೊಂಟದ ಮೇಲಿರುವ ಎಡಗೈಯಲ್ಲಿ ಶಂಖ, ಕಿರೀಟಕ್ಕೆ ಪ್ರತಿಯಾಗಿ ಹಣೆಯಲ್ಲಿರುವ ಅಡ್ಡ ಪಟ್ಟಿಕೆಗಳು, ಕರ್ಣಕುಂಡಲಗಳು, ಹರಳಿನ ಕೌಸ್ತುಭ ಮೂರ್ತಿ, ಯಜ್ಞೋಪವೀತ ಮತ್ತು ಕೈಕಡಗಗಳು ಇದ್ದು ಸಮಭಂಗದಲ್ಲಿದೆ.

ಮಾತೃದೇವೀ ಪ್ರಾಯ: ಆರಂಭದಲ್ಲಿ ವೃಕ್ಷವಾಸಿನಿ ಆಗಿರಬಹುದು ಅನಂತರ ನೈಸರ್ಗಿಕ ಗುಹೆಗಳಲ್ಲಿ ತದನಂತರ ದೇವಸ್ಥಾನಗಳಲ್ಲಿ ಪ್ರತಿಷ್ಠೆಗೊಂಡಿರಬಹುದು. ಸಪ್ತ ಮಾತೆಯರ ಪೂಜೆ ಈ ಕಾಲದಲ್ಲಿ ಇದ್ದಿತು. ಲಕ್ಷ್ಮೇಶ್ವರದಲ್ಲಿ ದೊರೆತ ಸಪ್ತ ಮಾತೃಕೆಯರ ಶಿಲಾಪಟ್ಟಿಕೆ ಒಂದು ಅಪೂರ್ವ ಶಿಲ್ಪ. ಇದರಲ್ಲಿ ಬ್ರಾಹ್ಮಿ, ಮಾಹೇಶ್ವರೀ, ಕೌಮಾರೀ ವೈಷ್ಣವೀ, ವಾರಾಹೀ, ಇಂದ್ರಾಣೀ ಮತ್ತು ಚಾಮುಂಡಾ ವಿಗ್ರಹಗಳಿವೆ. ಇದು ಚಾಲುಕ್ಯ ಅಥವಾ ತತ್ಪೂರ್ವದ ಶೈಲಿಯದ್ದಾಗಿರಲು ಸಾಧ್ಯ, ಚಾಮುಂಡಿ ಮತ್ತು ದುರ್ಗಾ ನಾಡಿನ ಆದ್ಯಂತ ಪೂಜಿಸಿಕೊಳ್ಳುವ ದೇವತೆಗಳು, ಅನೇಕ ಕಡೆಗೆ ಇವರ ಮೂರ್ತಿಗಳು, ದೇವಸ್ಥಾನಗಳು ಇವೆ.

ಬಳ್ಳಿಗಾವೆಯಲ್ಲಿ ಮಳೆ ಮಲ್ಲೇಶರ ಇರುವ ಪ್ರದೇಶದಲ್ಲಿ ಚತುರ್ಮುಖ ಲಿಂಗವಿರುವ ಸ್ಥಳದಲ್ಲಿ ಉತ್ಖನನ ಮಾಡಲಾಗಿ ಶಾತವಾಹನ ಕದಂಬರ ಕಾಲದ ಶಿವಾಲಯದ ತಳಭಾಗವು ದೊರಕಿತು. ಈ ಚತುರ್ಮುಖ ಲಿಂಗ ಆ ಕಾಲದ್ದೆನ್ನುವದರಲ್ಲಿ ಸಂಶಯವಿಲ್ಲ. ಈ ಮೂರ್ತಿಯ ಲಕ್ಷಣ, ವೈಶಿಷ್ಟ್ಯಪೂರ್ಣವಾಗಿದೆ. ಜಟಾಮುಕುಟ, ಕರ್ಣ–ಕಂಠಗಳ ಆಭರಣಗಳು, ಮೂರ್ತಿಯ ಮುಖ ಲಕ್ಷಣ (ಕಣ್ಣು, ತುಟಿ, ಮೂಗು) ಇತ್ಯಾದಿಗಳ ಕಂಡರಣೆ ಅಪರೂಪದ್ದಾಗಿವೆ. ವಡಗಾಂವ ಮಾಧವಪುರ ಉತ್ಖನನದಲ್ಲಿ, ತೇರನಜರದಲ್ಲಿ ದೊರೆತ ಅವಶೇಷಗಳು–ಸುಟ್ಟ ಮಣ್ಣಿನ (ಸುಧಾವೆ ಮಣ್ಣಿನ) ವಸ್ತುಗಳು—ಶಿಲ್ಪದ, ಕರಕುಶಲದ ತಿಳುವಳಿಕೆಯನ್ನುಂಟುಮಾಡುತ್ತವೆ.

ಸಾಮಾನ್ಯವಾಗಿ ದೇವಸ್ಥಾನವನ್ನು 'ಪ್ರಾಸಾದ' ಎಂದು ಹೇಳುವುದು ರೂಡಿ. ಮತ್ತೆ 'ಸುರಾಲಯ,' 'ಸುರಭವನ' 'ದೇವಾಲಯ', 'ದೇಗುಲಮಾನ್', 'ದೇವಕುಲ' 'ದೇವಗೃಹ', 'ದೇವಾಗಾರ', 'ದೇಗುಲಮಾನ್' 'ಆಯತನ' ಎಂದು ಮುಂತಾಗಿಯೂ ಹೇಳಲಾಗುತ್ತಿತ್ತು. ಪ್ರತಿಯೊಂದು ದೇವಾಲಯದ ಆಕಾರ, ಭೂಮಿ, ಶಿಖರ–ಇವುಗಳ ವಿನ್ಯಾಸದ ಮೂಲಕ ಆ ದೇವಾಲಯವನ್ನು ಶಾಸ್ತ್ರದಲ್ಲಿ ೧) ಮೇರು, ೨) ಮಂದರ, ೩) ಕೈಲಾಸ, ೪) ವಿಮಾನಚ್ಛಂದ, ೫) ನಂದನ, ೬) ಸಮುದ್ಗ, ೭) ಪದ್ಮ, ೮) ಗರುಡ, ೯) ನಂದಿವರ್ಧನ, ೧೦) ಕುಂಜರ, ೧೧) ಗುಹರಾಜ, ೧೨) ವೃಕ್ಷ, ೧೩) ಹಂಸ, ೧೪) ಸರ್ವತೋಭದ್ರ, ೧೫) ಘಟ, ೧೬) ಸಿಂಹ, ೧೭) ವೃತ್ತ, ೧೮) ಚತುಷ್ಕೋನ, ೧೯) ಷೋಡಶಶ್ರೀ ಮತ್ತು ೨೦) ಅಷ್ಟಶ್ರೀ ಎಂದು ಇಪ್ಪತ್ತು ಬಗೆಯ ಕಟ್ಟಡ ವಿನ್ಯಾಸಗಳಲ್ಲಿ ವಿವರಿಸಲಾಗುತ್ತದೆ. ಕುಂಜರ, ತಾಳಕಾರ, ಗಜಪೃಷ್ಠ ಮಾದರಿಯ ದೇವಸ್ಥಾನಗಳು ಕರ್ನಾಟಕದಲ್ಲಿ ಇದ್ದುದು ಬನವಾಸಿಯ ಅಗೆಲ್, ಐಹೊಳೆಯ ದುರ್ಗದ ಗುಡಿ ಇತ್ಯಾದಿಗಳಲ್ಲಿ ಕಂಡುಬರುತ್ತದೆ. ಸರ್ವತೋಭದ್ರ ಹಾಗೂ ಚತುಷ್ಕೋನಾಕಾರದ ದೇವಾಲಯಗಳು ಸರ್ವೇಸಾಮಾನ್ಯ. ಗರ್ಭಗೃಹ, ಮಂಟಪ ಇವು ಅವುಗಳ ಮುಖ್ಯ ಅಂಶಗಳು. ದೇವಸ್ಥಾನದ ಶಿಖರ, ನಾಗರ, ದ್ರಾವಿಡ ವೇಸರ ಇತ್ಯಾದಿ ಪದ್ಧತಿಗಳನ್ನು ನಿರ್ಣಯಿಸುತ್ತದೆ.

## ಜೈನ ಕಟ್ಟಡಗಳು

ಜೈನ ಧರ್ಮದ ಕಟ್ಟಡಗಳೆಂದರೆ ಬಸದಿ, ಚೈತ್ಯಾಲಯ, ಜಿನಗೃಹ ಎಂದು ಮುಂತಾಗಿ ಕರೆಯಿಸಿಕೊಳ್ಳುವ ಕಟ್ಟಡಗಳು. 'ಬಸದಿ' ಆರಂಭದಲ್ಲಿ ಕೇವಲ ವಸತಿಗಾಗಿ ಕಟ್ಟಿದ್ದು. ಚೈತ್ಯಾಲಯ–ಚಿತೆಯ ಮೇಲೆ ಆರಂಭದಲ್ಲಿ ಕಟ್ಟಲಾದ ಕಟ್ಟಡ. ಜಿನಗೃಹ–ವೀತರಾಗರಾದ ತೀರ್ಥಂಕರರಿಗೂ ಬಾಹು ಬಲಿಗೂ ಕಟ್ಟಲಾಗುತ್ತಿದ್ದ ವಿಶೇಷ ಕಟ್ಟಡಗಳು. ಗುಡ್ನಾಪುರದಲ್ಲಿ ದೊರೆತ ಕದಂಬರ ವಿವರ್ಮನ ಸ್ತಂಭಶಾಸನ ಕಾಮಜಿನಾಲಯವನ್ನು ಮತ್ತು ಪದ್ಮಾವತಿ ಜಿನಾಲಯವನ್ನು ನಿರ್ಮಿಸಿದ ಸಂಗತಿಯನ್ನು ತಿಳಿಸುತ್ತದಲ್ಲದೆ ಅವುಗಳ ರಕ್ಷಣೆ, ಪೂಜೆ ಇತ್ಯಾದಿ ಕೈಂಕರ್ಯಕ್ಕೆ ಬಿಟ್ಟ ದತ್ತಿಗಳನ್ನು ತಿಳಿಸುತ್ತದೆ. ಹಲಸಿಯ ತಾಮ್ರ ಶಾಸನದಲ್ಲಿ ಜಿನಾಲಯಕ್ಕೆ ದತ್ತಿ ಬಿಟ್ಟ ಸಂಗತಿಯು ಬಂದಿದೆ. ಆದರೆ ಆಗಿನ ಕಟ್ಟಡಗಳು ಉಳಿದು ಬಂದಿಲ್ಲವಾದುದರಿಂದ ಚಾಲುಕ್ಯಪೂರ್ವದ ಜೈನ ವಾಸ್ತುಶಿಲ್ಪದ ಬಗ್ಗೆ ವಿಶೇಷವಾಗಿ ಬರೆಯಲು ಸಾಧ್ಯವಿಲ್ಲ. ಅಜಂತಾದಲ್ಲಿರುವ ಜೈನ ಗುಹೆಗಳು ಗಮನಾರ್ಹ.

## ಬೌದ್ಧ ವಾಸ್ತು

ಕರ್ನಾಟಕದಲ್ಲಿ ವಿಶೇಷವಾಗಿ ಉಳಿದು ಬಂದಿರುವ ಚಾಲುಕ್ಯ ಪೂರ್ವಕಾಲದ ಕಟ್ಟಡಗಳೆಂದರೆ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಪಶ್ಚಿಮ ಸಮುದ್ರ ದಂಡೆಯಿಂದ ನಾಗಾರ್ಜುನಕೊಂಡದವರೆಗೆ ಮತ್ತು ನಾಶಿಕ ಬಳಿಯಿಂದ ಚಿತ್ರದುರ್ಗದ ಬ್ರಹ್ಮಗಿರಿಯವರೆಗೆ ಹಬ್ಬಿದ ಚೈತ್ಯಗೃಹಗಳು, ಮೇಣಗಳು, ಮಂಟಪಗಳು, ಧ್ಯಾನ ಗೃಹಗಳು, ಸ್ತೂಪಗಳು ಮತ್ತು ವಿಹಾರಗಳು. ಕಿರಿದರಲ್ಲಿ ಹೇಳುವುದಾದರೆ ಬೌದ್ಧ ಧರ್ಮದ ಸಂಘಾರಾಮಗಳು ಇರುತ್ತಿದ್ದ ಕೇಂದ್ರಗಳು. ಇವುಗಳ ಸಂಖ್ಯೆ ವಿಪುಲ. ಮುಖ್ಯವಾದುವೆಂದರೆ ಎಲೆಫೆಂಟಾ, ಭಾಜಾ, ಬೆಡಸಾ, ಕಾನ್ಹೇರಿ, ಕಾರ್ಲೆ, ಕೊಂಡಾಣೆ, ಅಜಂತಾ, ಸನ್ನತಿ, ಕೊಂಡಾಪುರ, ತೇರ್, ಪಾಣೆಗಿರಿ, ಬನವಾಸಿ, ನಾಗಾರ್ಜುನಕೊಂಡ, ಬ್ರಹ್ಮಗಿರಿ ಇತ್ಯಾದಿ. ಈ ಎಲ್ಲಾ ಸ್ಥಳಗಳ ಕೂಲಂಕಷ ವಿವರಣೆಗಳನ್ನು ಸಣ್ಣ ಲೇಖನದಲ್ಲಿ ಹಿಡಿದಿಡುವುದು ಅಸಾಧ್ಯದ ಮಾತು. ಒಂದೊಂದರ ಸೌಂದರ್ಯವೂ ನೋಡುವ ಪ್ರೇಕ್ಷಕನನ್ನು ಮೂಕವಾಗಿಸುತ್ತದೆ. ಪ್ರಾಚೀನ ಕರ್ನಾಟಕದ ಗಡಿಗೆರೆಗಳನ್ನು ತಿಳಿಯದವರು ಈ ಕಟ್ಟಡಗಳನ್ನು ಉತ್ತರ, ದಕ್ಷಿಣ, ದಕ್ಕನ್, ಪಶ್ಚಿಮ ಭಾರತ ಎಂದು ಮುಂತಾಗಿ ವಿವಿಧ ಕೇತ್ರಗಳಲ್ಲಿ ಇರುವ ಕಟ್ಟಡಗಳೆಂದು ವಿವರಿಸುತ್ತಾರೆ. ಇರಲಿ. ಈ ಬೌದ್ಧ ವಾಸ್ತುಶಿಲ್ಪ ಹೀನಯಾನ ಮತ್ತು ಮಹಾಯಾನ ಪಂಗಡಗಳ ಪರಂಪರೆಗೆ ಸಂಬಂಧಿಸಿದೆ.

ಬೌದ್ಧ ಭಿಕ್ಷುಗಳು ಸಂಘಗಳನ್ನು ಕಟ್ಟಿಕೊಂಡು ಧರ್ಮದ ಪ್ರಚಾರಕ್ಕಾಗಿ ನಿಂತ ನೆಲೆಗಳೆ ಸಂಘಾರಾಮಗಳು–ವಿಹಾರಗಳು, ವಾಸಿಸಲು ಕೊರೆದ ಕಟ್ಟಡ 'ಲೇಣ', ಮೂಲತಃ ಚಿತೆಯ ಮೇಲೆ ಕಟ್ಟಿದ ಕಟ್ಟಡ ಚೈತ್ಯ; ಆದರೆ ಅದು ಮುಂದೆ ಬೌದ್ಧ ದೇವಾಲಯವಾಯಿತು. ಸ್ಥೂಪಗಳು ವಾಸ್ತವದಲ್ಲಿ ಬುದ್ಧನ ಅವಶೇಷಗಳ ಇಲ್ಲವೆ ಆ ಧರ್ಮದ ಭಿಕ್ಷುಗಳ ಅಥವಾ ಭದಂತರ ನೆನಪಿಗಾಗಿ ಕಟ್ಟಿದ ಸ್ಮಾರಕಗಳು. ಮಂಟಪಗಳು ಸಾಮಾನ್ಯವಾಗಿ ಆಯತಾಕಾರ ಇಲ್ಲವೆ ಚೌಕಾಕಾರದಲ್ಲಿ ಇರುತ್ತವೆ. ಚೈತ್ಯಾಲಯಗಳು ವಿಶೇಷವಾಗಿ ಆಯತಾಕಾರದಲ್ಲೇ ಕಟ್ಟಲ್ಪಟ್ಟವೆ. ಅವುಗಳ ಮುಂಭಾಗ, ಒಳಗೆ ಇರುವ ಮಂಟಪ ಅದರಲ್ಲಿ ಕಂಬಗಳು – ಅದರಾಚೆಗೆ ಅರ್ಧಗೋಲಾಕಾರ – ಇಲ್ಲವೇ ಅಂಡಾಕಾರದ ವಿಭಾಗದಲ್ಲಿ ಮಧ್ಯದಲ್ಲಿ ಸ್ತೂಪಗಳು – ವೃತ್ತಾಕಾರ – ಅದರ ಮೇಲೆ ಇರುವ ಹರ್ಮಿಕೆ. ಒಂದೊಂದು ಕಟ್ಟಣೆಗೆಯ ಕೌಶಲವನ್ನು ವ್ಯಕ್ತಪಡಿಸುತ್ತವೆ. ಹರ್ಮಿಕೆಗಳು ಮಗುಚಿದ

ಪಿರಮಿಡ್ ಇದ್ದಂತೆ ಇರುತ್ತವೆ. ದ್ವಾರ, ಅದರ ದೂಲ ಕಂಬಗಳು-ಅಲ್ಲಲ್ಲಿ ಬಿಡಿಸಿದ ವೇದಿಕೆಗಳು ತಮ್ಮ ಕಮನೀಯತ್ವದಿಂದ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ. ಇವುಗಳನ್ನು ನೋಡಿದ ಮೇಲೆ ಭಾರತದಲ್ಲಿ ಶಿಲಾವಾಸ್ತು ಶಿಲ್ಪವಿನ್ಯಾಸ – ಕರಕೌಶಲ – ಗರಿಮೆಯ ತುತ್ತ ತುದಿಯನ್ನು ಮುಟ್ಟಿಲ್ಲವೆಂದು ಹೇಳುವುದು ಯಾರಿಗೂ ಅಸಾಧ್ಯದ ಮಾತು. ಈ ಕಟ್ಟಡಗಳು ಕೆಲವೆಡೆ ಕಟ್ಟಿಗೆಯನ್ನು ಬಳಸಿ ಕಟ್ಟಡ ಕಟ್ಟುವ ಬಡಗಿಗಳಿಂದ ಕಟ್ಟಿದಂತಿವೆ. ಇಷ್ಟೆ ವ್ಯತ್ಯಾಸ-ಕಟ್ಟಿಗೆಯಲ್ಲಿ ಮಾಡುವ ಕೆಲಸವನ್ನು ಬಹಳಕಾಲ ಬಾಳುವ ವಸ್ತುವಾದ ಕಲ್ಲಿನಲ್ಲಿ ಕಂಡರಿಸಿದ್ದಾರೆ. ಅಜಂತೆಯಲ್ಲಿನ ಗುಹೆಗಳನ್ನು ವಿಶೇಷತ: ವಾಟಾಟಕರ ಆಳ್ವಿಕೆಯಲ್ಲಿ ರಚಿಸಲಾಗಿದೆ. ಸನ್ನತಿ, ಬನವಾಸಿ, ನಾಸಿಕ ಕೇಂದ್ರಗಳಲ್ಲಿನ ಅವಶೇಷಗಳು ಸಾತವಾಹನರ ಕಾಲದವು. ಸನ್ನತಿಯ ಸ್ತೂಪದ ಉತ್ಖನನದ ಗುದ್ದಲಿ ಪೂಜೆಯು ಇನ್ನು ಆಗಬೇಕಾಗಿದೆ. ಮೇಲ್ಮೈಯಲ್ಲೇ ದೊರೆತ ಅವಶೇಷಗಳು-ಆಯತ ಕಂಬ-ಅವು ಮಹಾಯಾನ ಬೌದ್ಧ ಪಂಥಕ್ಕೆ ಸಂಬಂಧಿಸಿವೆ ಎಂದು ಕಪಟರಾಳ ಕೃಷ್ಣರಾಯರು ೧೯೫೪ರಲ್ಲೇ ಮೊದಲ ಬಾರಿಗೆ ಗುರುತಿಸಿರುವರು. ಕೆಲವು ಚಪ್ಪಡಿಗಲ್ಲುಗಳಲ್ಲಿ ಸ್ತೂಪಗಳನ್ನು ಕೆಲವು ಚಪ್ಪಡಿಗಲ್ಲುಗಳಲ್ಲಿ ರೆಕ್ಕೆ ಕುದುರೆಗಳನ್ನು ಕೆಲವು ಚಪ್ಪಡಿಗಲ್ಲುಗಳಲ್ಲಿ ಕೋಣ, ಕೆಲವು ಚಪ್ಪಡಿಗಲ್ಲುಗಳಲ್ಲಿ ಶಾತವಾಹನ ಕಾಲದ ಶ್ರೀಮಂತ ಜೀವನ – ಸಾಂಸಾರಿಕ ಜೀವನ ಚಿತ್ರಣ ಇತ್ಯಾದಿಗಳನ್ನು ಕೆತ್ತಿರುವರು. ಆಯಾ ಕಂಬದಲ್ಲಿ ಚಿತ್ರಿಸಲಾದ ಕಂಡರಣೆ ದಂಪತಿಗಳು ಕುಳಿತಿರುವ ಭಂಗಿ, ಗೌರವದ ಠೀವಿ, ಸೇವಕರು, ಅವರ ಕೈಯಲ್ಲಿನ ಪಾನಪಾತ್ರೆ, ಒಂದೊಂದೂ ತುಂಬ ಸ್ಪಷ್ಟ ಸ್ಪಷ್ಟವಾಗಿ ಮೂಡಿ ನಿಂತಿವೆ. ಒಂದು ಚಪ್ಪಡಿಯಲ್ಲಿ ಬುದ್ಧನ ಜೀವನ ಸಂಗತಿಯನ್ನೇ ಕೊರೆಯಲಾಗಿದೆ.

ಬನವಾಸಿಯಲ್ಲಿ ಅಗತದಲ್ಲಿ ಚಾಲುಕ್ಯ ಪೂರ್ವಕಾಲದ ಶಾತವಾಹನ – ಕದಂಬಕಾಲಾವಧಿಯ ಎರಡು ಕುಂಜರಾಕೃತಿಯ ದೇವಾಗಾರದ (?) ತಲವಿನ್ಯಾಸಗಳು ದೊರೆತಿವೆ. ಇಲ್ಲಿ ಬಳಸಿದ ದೊಡ್ಡಳತೆಯ ಇಟ್ಟಿಗೆಗಳು ಶಾತವಾಹನರ ಕಾಲದವು. ಬನವಾಸಿ ಹಾಗೂ ಸನ್ನತಿ ನೈಸರ್ಗಿಕ ಜಲದುರ್ಗಗಳು. ಸನ್ನತಿಯಲ್ಲಿ ಕೋಟೆಯ ಗೋಡೆಯ ಅವಶೇಷ ಇನ್ನೂ ಇದೆ. ಅಂದಿಗೆ ಅದು ಭದ್ರವಾದ ಭಿತ್ತಿಯೆ. ಇಂತಹ ಕೋಟೆ ಬೋದನನ ಕಾಲದಲ್ಲೂ ಇದ್ದಿತು. ಅದರ ಪಳೆಯುಳಿಕೆ ಇನ್ನೂ ಇದೆ. ಕೊಂಡಾಪುರದಲ್ಲಿ ಸುಡವೆ ಮಣ್ಣಿನ ಮೂರ್ತಿಗಳು, ಅಲ್ಲಿನ ಚೈತ್ಯದ ಸುತ್ತ ಮುತ್ತ ದೊರೆತಿವೆ. ಬೋಧಿಸತ್ವನ ಚಿತ್ರಗಳು ಬಹು ಸುಂದರವಾಗಿವೆ. ಪಾಣಿಗಿರಿಯಲ್ಲಿ ಸ್ತೂಪದ ಅವಶೇಷವಿದೆ. ಬ್ರಹ್ಮಗಿರಿಯಲ್ಲಿ ಅಶೋಕನ ಲಘು ಪುಸ್ತಕ ಶಾಸನವಿರುವ ಗಂಡ ಶಿಲೆಯ ಹತ್ತಿರದಲ್ಲೇ ಚೈತ್ಯಾಲಯದಂತಿರುವ ಇಟ್ಟಿಗೆಯ ಕಟ್ಟಡವೊಂದು ದೊರಕಿದ್ದು ಅದು ಸಾತವಾಹನರ ಕಾಲದ್ದಾಗಿದೆಯೆಂದು ವಿದ್ವಾಂಸರು ಬರೆದಿದ್ದಾರೆ. ಬನವಾಸಿಯ ಸುಂದರ ನಾಗಶಿಲ್ಪ ಜಗತ್ಪ್ರಸಿದ್ಧ ಕಲಾಕೃತಿಗಳೊಳಗೊಂದು.

**ವಾಸ್ತು ಶಿಲ್ಪಿ**

ವಾಸ್ತು ಶಿಲ್ಪಿಯನ್ನು ಕುರಿತು ಕೆಲವು ಮಾತುಗಳನ್ನು ಹೇಳಿ ಈ ಲೇಖನವನ್ನು ಮುಗಿಸಬಹುದು. ಸ್ಥಪತಿ, ಸೂತ್ರಗ್ರಾಹಿನ್ ವರ್ಧಕಾನ್ ಮತ್ತು ತಕ್ಷಕ ಎಂದು ಸಮರಾಂಗಣ ಸೂತ್ರಧಾರದಲ್ಲಿ ಇವನ್ನು ನಾಲ್ಕು ರೀತಿಯಲ್ಲಿ ವಿವರಿಸಿದೆ. ಚಾಲುಕ್ಯರ ಕಾಲದ ಪಟ್ಟದ ಶಾಸನಗಳಲ್ಲಿ 'ಸೂತ್ರಧಾರಿ' 'ರೂಪ ವಾಸ್ತುಪಿತಾಮಹನ್' ಎಂದು ಮುಂತಾಗಿ ಪ್ರಯೋಗಗಳು ದೊರೆಯುತ್ತವೆ. ಸಾಂಚೀ ಸ್ತೂಪದ ದಕ್ಷಿಣದ ದ್ವಾರವನ್ನು ಸಿರಿಸಾತಕರ್ಣಿಯ ಶಿಲ್ಪಿಗಳು ಕಟ್ಟಿದರೆಂದು ಅಲ್ಲಿರುವ ಶಾಸನವೊಂದರಿಂದ ತಿಳಿದು ಬರುತ್ತದೆ. ಕೊಂಡಾಣೆ ಬೆಡ್ಸಾ, ಭಾಜಾ, ಅಜಂತಾ ಮುಂತಾದೆಡೆಗಳಲ್ಲಿಯ ವಾಸ್ತುಶಿಲ್ಪನಿರ್ಮಾಣ ಸ್ಥಪತಿಗಳ ಕಟ್ಟಡ ಕಟ್ಟುವ ಅಳತೆ ಪ್ರಮಾಣಗಳ ಅರಿವನ್ನು ಮತ್ತು ಅವರ ತೂಕವತ್ತಾದ ಶಾಸ್ತ್ರಜ್ಞಾನವನ್ನೂ ಅಭಿವ್ಯಕ್ತಪಡಿಸಿದೆ. ಆ ಕಟ್ಟಡಗಳಲ್ಲಿ ಬಳಕೆಗೆ ತಂದಿರುವ ತೊಲೆಗಳ ತೂಕವತ್ತಾದ ಪ್ರಮಾಣಗಳು ಇಂದಿಗೂ ಸಾಕ್ಷಿಯಾಗಿವೆ. ಅವರು

ಜಯಂತಿ ಯಸ್ಯಾವದ ತೋಪಿ ಭಾರತೀ –
ವಿಭೂತಯಸ್ತೀರ್ಥ ಕೃತೋಪಿ ನೃಹ್ರತೇ
ಶಿವಾಯ ಧಾತ್ರೇ ಸುಗತಾಯ ವಿಷ್ಣವೇ
ಜಿನಾಯ ತಸ್ಮೈ ಸಕಳಾತ್ಮನೇ ನಮ:

ಎಂದು ವಾಸ್ತು ಶಿಲ್ಪ ನಿರ್ಮಾಣದಲ್ಲಿ ಕೆಲಸ ಮಾಡಿದ್ದಾರೆ.

# ಚಾಳುಕ್ಯ ವಾಸ್ತುಶಿಲ್ಪ

ಡಾ. ಬಾ.ರಾ. ಗೋಪಾಲ

ಭಾರತದಲ್ಲಿ ಗುಹಾದೇವಾಲಯಗಳನ್ನು ಕೊರೆಯುವ ಸಂಪ್ರದಾಯ ಬಹುಶಃ ಕ್ರಿ. ಪೂ. ೩ನೆಯ ಶತಮಾನದಲ್ಲಿ ಅಶೋಕನ ಕಾಲದಲ್ಲಿ ಆರಂಭವಾಯಿತೆನ್ನಬಹುದು. ಬಿಹಾರದ ಗಯೆಯ ಸಮೀಪದ ನಾಗಾರ್ಜುನ ಹಾಗೂ ಬರಾಬರ್ ಗುಡ್ಡಗಳಲ್ಲಿ ಅಶೋಕ ಮತ್ತು ಅವನ ಮೊಮ್ಮಗ ದಶರಥ ಇವರುಗಳು ಕೊರೆಯಿಸಿದ ೭ ಗುಹೆಗಳಿವೆ. ಇವು ಗಟ್ಟಿಯಾದ ಬೆಣಚು ಕಲ್ಲಿನಂತಹ ಸ್ಫಟಿಕ ಶಿಲೆಗಳಲ್ಲಿ ಕೊರೆದವುಗಳು.

ಈ ಪದ್ಧತಿ ಕ್ರಮೇಣ ದಕ್ಷಿಣ ಭಾರತದಲ್ಲಿ ಕಾಣಿಸಿಕೊಂಡಿತು. ಇವು ಬಹುಮಟ್ಟಿಗೆ ಜೈನಮುನಿಗಳಿಗಾಗಿ ಕೊರೆಯಲ್ಪಟ್ಟವುಗಳು. ಇವುಗಳಲ್ಲಿ ಹಲವಾರು ಕಡೆ ಕಲ್ಲಿನ ಮಂಚಗಳನ್ನು ಕೊರೆದು ಅದೇ ಕಲ್ಲಿನಲ್ಲಿ ತಲೆ ಇಡುವ ಭಾಗದಲ್ಲಿ ಸ್ವಲ್ಪ ಎತ್ತರಿಸಿ ದಿಂಬುಗಳನ್ನು ಸಹ ಕೆತ್ತಲಾಗಿದೆ. ಕ್ರಿ.ಪೂ. ೨ನೆಯ ಶತಮಾನದಿಂದ ಕ್ರಿ.ಶ. ೩ನೆಯ ಶತಮಾನದವರೆಗಿನ ಕಾಲಕ್ಕೆ ಸೇರಬಹುದಾದ ಕೆಲವು ಸಣ್ಣ ಶಾಸನಗಳನ್ನು ಸಹ ಇವುಗಳ ಜೊತೆಯಲ್ಲಿ ಕೆತ್ತಲಾಗಿದ್ದು ಈ ಗುಹೆಗಳ ಕಾಲವನ್ನು ನಿರ್ಧರಿಸುವಲ್ಲಿ ಕೆಲವು ಸಂದರ್ಭಗಳಲ್ಲಿ ಅವು ಸಹಾಯಕವಾಗಿವೆ. ಕ್ರಿ.ಶ. ೩ನೆಯ ಶತಮಾನದ ನಂತರ ಮೂರು–ನಾಲ್ಕು ಶತಮಾನಗಳವರೆಗೆ ಈ ಪದ್ಧತಿ ದಕ್ಷಿಣ ಭಾರತದಲ್ಲಿ ಮುಂದುವರಿಯಲಿಲ್ಲ.

ಉತ್ತರ ಹಾಗೂ ಪಶ್ಚಿಮ ಭಾರತದ ಗುಹಾಲಯಗಳು ಬಹುಮಟ್ಟಿಗೆ ಬೌದ್ಧ, ವಿರಳವಾಗಿ ಜೈನ ಧರ್ಮಗಳಿಗೆ ಸಂಬಂಧಿಸಿದವುಗಳು. ಹಿಂದು ಧರ್ಮದ ಶೈವ ಅಥವಾ ವೈಷ್ಣವ ಗುಹೆಗಳು ಈಗ ಕಾಣಬರುವುದಿಲ್ಲ. ಅಲ್ಲದೆ ಇವು ವಿಶೇಷವಾಗಿ ಪಶ್ಚಿಮತೀರ ಪ್ರದೇಶಗಳಲ್ಲಿ ಕಾಣಿಸಿಕೊಂಡಿವೆ. ಭಾಜ, ಅಜಂತಾ, ಪೀತಲ್‌ಖೋರಾ, ನಾಸಿಕ್, ಕಾರ್ಲೆ, ಕಾನ್ಹೇರಿ, ಜುನ್ನಾರ, ಜೋಗೇಶ್ವರಿ, ಎಲಿಫಾಂಟ ಇತ್ಯಾದಿ ಸ್ಥಳಗಳಲ್ಲಿ ಕ್ರಿ.ಪೂ. ೨ನೆಯ ಶತಮಾನದಿಂದ ಕ್ರಿ.ಶ. ೧ನೆಯ ಶತಮಾನದವರೆಗೆ ಇಂತಹ ಗುಹಾಲಯಗಳು ಕೊರೆಯಲ್ಪಟ್ಟವು. ಇವೆಲ್ಲ ಸಾತವಾಹನರು ಈ ಭಾಗದಲ್ಲಿ ಆಳುತ್ತಿದ್ದ ಕಾಲವಾದರೂ ಇವಕ್ಕೆ ರಾಜಾಶ್ರಯಕ್ಕಿಂತಲೂ ಹೆಚ್ಚಾಗಿ ಜನಾಶ್ರಯ ಲಭಿಸಿತ್ತು. ಇವುಗಳಲ್ಲಿ ಅನೇಕವು ವರ್ತಕರ ಕೊಡುಗೆಗಳಾಗಿದ್ದುವೆಂಬುದು ಶಾಸನಗಳಿಂದ ತಿಳಿದು ಬಂದಿದೆ.

ಹಿಂದು ಗುಹಾಲಯಗಳು ಭಾರತದಲ್ಲಿ ಆರಂಭವಾದುದು ಗುಪ್ತರ ಕಾಲದಲ್ಲಿ. ಸುಮಾರು ೫ನೆಯ ಶತಮಾನದ ಆರಂಭದಲ್ಲಿ ಮಧ್ಯ ಪ್ರದೇಶದಲ್ಲಿಯ ವಿದಿಶಾ ನಗರದ ಸಮೀಪದ ಉದಯಗಿರಿ ಗುಡ್ಡಗಳಲ್ಲಿ ಮರಗಲ್ಲಿನಲ್ಲಿ ಕೊರೆಯಲಾದ ಈ ಗುಹೆಗಳ ಕಾಲವನ್ನು ಅಲ್ಲಿ ದೊರೆತ ಇಮ್ಮಡಿ ಚಂದ್ರಗುಪ್ತನ ಶಾಸನವೊಂದರ ಆಧಾರದ ಮೇಲೆ ನಿರ್ಧರಿಸಬಹುದು. ಶಾಸನದ ಕಾಲ ಕ್ರಿ.ಶ. ೪೦೧. ಹಿಂದು ದೇವಾಲಯಗಳ ಆರಂಭವನ್ನು ಇಲ್ಲಿ ಉಳಿದಿರುವ ಅವಶೇಷಗಳಿಂದ ಮಾತ್ರ ನಾವು ಗುರುತಿಸಬಹುದು. ಇವುಗಳಲ್ಲಿ ಕೆಲವು ಆಯಾಕಾರದ ಚಪ್ಪಟೆಯಾದ ಮಾಳಿಗೆಯುಳ್ಳ ಗರ್ಭಗೃಹಗಳು. ಕೆಲವನ್ನು ಕಲ್ಲುಗಳಲ್ಲಿ ಕೊರೆಯಲಾಗಿದ್ದರೆ ಇನ್ನು ಕೆಲವು ಕಲ್ಲಿನ ಕಟ್ಟಡಗಳು. ಇದೇ ಸ್ಥಳದಲ್ಲಿ ಟಾವಾ ಗುಹೆಯಲ್ಲಿ ಅಖಂಡ ಶಿಲೆಯೊಂದರಲ್ಲಿ ವರ್ತುಲಾಕಾರದ ಒಂದು ದೇವಾಲಯವನ್ನು ಕೊರೆದಿರುವುದನ್ನು ನಾವು ಕಾಣುತ್ತೇವೆ.

ಈ ವಾಸ್ತುಶಿಲ್ಪದ ಮುಂದಿನ ಹೆಜ್ಜೆಯನ್ನು ನಾವು ಕರ್ನಾಟಕದ ಬಾದಾಮಿ ಮತ್ತು ಐಹೊಳೆಗಳಲ್ಲಿ ಕಾಣುತ್ತೇವೆ. ಬಾದಾಮಿಯ ಹಾಗೂ ಐಹೊಳೆಯ ಗುಹಾಲಯಗಳನ್ನು ಹೋಲಿಸಿದಾಗ ನಿಷ್ಕೃಷ್ಟ ರಚನೆಯಿಲ್ಲದ ಐಹೊಳೆಯ ಆಲಯಗಳು ಪ್ರಾಚೀನವೆಂದು ಒಂದು ಅಭಿಪ್ರಾಯವಿರುವುದು ನೆನಪಿಗೆ ಬರುತ್ತದೆ. ಆದರೆ ಇದು ಇನ್ನೂ ಸಂದೇಹಾಸ್ಪದವಾಗಿ ಉಳಿದಿದೆ. ಬಾದಾಮಿಯ ವಿಷ್ಣುಗೃಹವನ್ನು (ವೈಷ್ಣವ ಗುಹೆ) ಚಾಲುಕ್ಯ ಮಂಗಲೇಶ ಕ್ರಿಸ್ತಶಕ ೫೭೮ ರಲ್ಲಿ ಕಟ್ಟಿ ಮುಗಿಸಿದನೆಂಬುದು ಖಚಿತವಾಗಿ ತಿಳಿದಿರುವ ವಿಷಯ. ಐಹೊಳೆಯ ಮೇಗುಡಿಯ ಸಮೀಪದ ಜೈನ ಗುಹೆಯೂ ಸರಿಸುಮಾರು ಅದೇ ಕಾಲದ್ದು ಎನ್ನುವುದಾದರೆ ಬಾದಾಮಿಯ ಗುಹೆಗಳು ಐಹೊಳೆಯ ಗುಹೆಗಳಿಗಿಂತ ಹೆಚ್ಚು ಪ್ರಾಚೀನವೆಂಬ ಅಭಿಪ್ರಾಯಕ್ಕೆ ಬರಬೇಕಾಗುತ್ತದೆ. ಈ ಕುರಿತಾದ ವಾದವಿವಾದಗಳು ಇನ್ನೂ ಮುಗಿದಿಲ್ಲ.

## ಐಹೊಳೆ

ಐಹೊಳೆಯಲ್ಲಿ ಮೂರು ಗುಹಾಲಯಗಳಿವೆ. ಇಲ್ಲಿನ ಗುಡ್ಡದ ಮೇಲಿರುವ ಗುಡಿಯನ್ನು ಮೇಗುಡಿ ಎಂದು ಕರೆಯಲಾಗಿದೆ. ಆಂಗ್ಲರ ಬಾಯಿಗೆ ಬಿದ್ದು ಇದು ಮೇಗುಟಿ ಆಗಿದೆ. ಇದರ ಸಮೀಪದ ಬೃಹತ್ ಶಿಲಾಯುಗದ ಸಮಾಧಿಗಳನ್ನು ದಾಟಿ ಗುಡ್ಡವನ್ನು ಇಳಿಯುವಾಗ, ಮೇಗುಡಿಯ ಆಗ್ನೇಯಕ್ಕೆ ಸುಮಾರು ೪೦೦ ಮೀಟರುಗಳ ದೂರದಲ್ಲಿ, ವಿಸ್ತಾರವಾದ ಬಂಡೆಯೊಂದನ್ನು ಕೊರೆದು ಮಾಡಿದ ಗುಹಾಲಯವೊಂದಿದೆ. ನೈಋತ್ಯಾಭಿಮುಖದ ಈ ಗುಹೆಯಲ್ಲಿ ಸುಮಾರು ೮ ಮೀಟರುಗಳಷ್ಟು ಅಗಲದ ೨ ಮೀಟರುಗಳವರೆಗೂ ಹಬ್ಬಿದ ಪಡಸಾ

ಲೆಯೊಂದಿದೆ. ಪಡಸಾಲೆಯ ಮುಂದೆ ದೊಡ್ಡ ಕಲ್ಲುಗಳಿಂದ ದೊಡ್ಡ ಗೋಡೆಯೊಂದನ್ನು ಎಬ್ಬಿಸಲಾಗಿದೆ. ಇಲ್ಲಿ ಆರು ಕಲ್ಲಿನ ಕಂಬಗಳಿವೆ. ಮೂರು ಮೂರು ಕಂಬಗಳನ್ನು ಕೂಡಿಸುವಂತಹ ದೊಡ್ಡ ಗೋಡೆ. ನಡುವಣ ಭಾಗ ಗುಹೆಯ ದ್ವಾರ. ಪಡಸಾಲೆಯ ಒಳಮಾಳಿಗೆಯಲ್ಲಿ ಸ್ವಸ್ತಿಕದ ಚಿಹ್ನೆಗಳನ್ನೂ ಎಲೆ ಬಳ್ಳಿಗಳನ್ನೂ ಕಮಲಗಳನ್ನೂ ಕೊರೆಯಲಾಗಿದೆ. ಎಡ ಪಾರ್ಶ್ವದಲ್ಲಿ ಕಾಯೋತ್ಸರ್ಗ ಭಂಗಿಯಲ್ಲಿ ಬಾಹುಬಲಿಯ ಆಳೆತ್ತರದ ಉಬ್ಬು ಶಿಲ್ಪವಿದೆ. ಈತನ ಸೋದರಿಯರಾದ ಬ್ರಾಹ್ಮೀ ಮತ್ತು ಸುಂದರಿಯರು ಈತನ ಮೇಲೆ ಬೆಳೆದಿರುವ ಮಾಧವೀ ಲತೆಗಳನ್ನು ಬಿಡಿಸುತ್ತಿರುವಂತೆ ಚಿತ್ರಿಸಿರುವುದು ಈ ಶಿಲ್ಪದ ವೈಶಿಷ್ಟ್ಯ. ಬಲಭಾಗದಲ್ಲಿ ನಿಂತ ಭಂಗಿಯಲ್ಲಿ ಸುಪಾರ್ಶ್ವನಾಥ ತೀರ್ಥಂಕರನ ಶಿಲ್ಪವಿದೆ. ಪಡಸಾಲೆಯ ಹಿಂದೆ ಒಂದು ಅಂಕಣ (ಮಂಟಪ). ಈ ಮಂಟಪಕ್ಕೆ ಹೋಗುವ ದ್ವಾರಕ್ಕೆ ಹೊಂದಿದಂತೆ ಎರಡು ಕಂಬಗಳಿವೆ. ಅಂಕಣದ ಒಳಮಾಳಿಗೆಯಲ್ಲಿ ದೊಡ್ಡದಾದ ಕಮಲದ ಹೂವನ್ನು ಬಿಡಿಸಿದೆ. ಅಲ್ಲದೆ ಮೊಸಳೆಗಳ, ಮತ್ಸ್ಯಗಳ, ಮತ್ಸ್ಯ ಕನ್ಯೆಯರ ಚಿತ್ರಗಳೂ ಇವೆ. ಮಂಟಪದ ಎರಡೂ ಕಡೆ ಕೋಷ್ಠಗಳಿವೆ. ಎಡಭಾಗದ ಕೋಷ್ಠದಲ್ಲಿ ತೀರ್ಥಂಕರನ ವಿಗ್ರಹವಿದೆ. ಜತೆಗೆ ಹಲವು ಪರಿಚಾರಕರ ಚಿತ್ರಗಳೂ ಇವೆ. ಬಹುಶ: ಇವರಲ್ಲಿ ಕೆಲವರು ರಾಜಮನೆತನಕ್ಕೆ ಸೇರಿದವರಾಗಿರಬಹುದು. ಮಂಟಪದ ಹಿಂದಿನ ಗರ್ಭಗುಡಿಯಲ್ಲಿ ಸಿಂಹಾಸನದಲ್ಲಿ ಕುಳಿತ (ಪರ್ಯ್ಯಂಕಾಸನ) ಮಹಾವೀರನ ವಿಗ್ರಹವಿದೆ. ಈತನ ತಲೆಯ ಮೇಲೆ ಮುಕ್ಕೊಡೆ ತಾಬ್ಬಿದೆ. ಬಲಭಾಗದ ಕೋಷ್ಠದಲ್ಲಿ ಯಾವ ವಿಗ್ರಹವೂ ಇಲ್ಲ. ಇದರ ಸಮೀಪದಲ್ಲಿ ಸುಮಾರು ಕ್ರಿಸ್ತ ಶಕ ೭ ನೆಯ ಶತಮಾನದ ಲಿಪಿಯಲ್ಲಿ ಕೆಲವು ವ್ಯಕ್ತಿಗಳ ಹೆಸರುಗಳನ್ನು ಕೊರೆಯಲಾಗಿದೆ. ಇದನ್ನು ಆಧರಿಸಿ ಈ ಗುಹೆ ೭ ನೆಯ ಶತಮಾನಕ್ಕೂ ಹಿಂದಿನದೆಂದು ಊಹಿಸಬಹುದಾಗಿದೆ.

ಈಗ ಹೊಸದಾಗಿ ಕಟ್ಟಲಾಗಿರುವ ಸರ್ಕಾರೀ ವಸತಿಗೃಹದ ಹಿಂದೆ ರಾವಳ ಫಡಿ ಎಂಬ ಅರ್ಧಸಮಾನಕೇಂದ್ರ ವಿನ್ಯಾಸದ, ರಾವಣಫಡಿ ಎಂದೂ ಕರೆಯಲಾದ ಇನ್ನೊಂದು ಗುಹಾಲಯವಿದೆ. ರಾವಳ್ ಎಂದರೆ ಮರಾಠೀ ಭಾಷೆಯಲ್ಲಿ ಕಲ್ಲು ಎಂದು ಅರ್ಥವಾಗುತ್ತದೆ. ಮರಳುಗಲ್ಲಿನಲ್ಲಿ ಕೊರೆದ ಸುಮಾರು ೧೨ ಮೀಟರ್ ಉದ್ದದ ಚಾವಡಿಯುಳ್ಳ ಈ ಗುಹೆ ಸುಮಾರು ೮ ಮೀಟರ್‌ಗಳಷ್ಟು ಆಳವಾಗಿದೆ. ಎತ್ತರ ಸುಮಾರು ೪ ಮೀಟರ್‌ಗಳು. ಗುಹೆಯ ಮುಂಭಾಗದಲ್ಲಿ ಎರಡೂ ಕಡೆ ಕೋಷ್ಠಗಳಲ್ಲಿ ಶಂಖನಿಧಿ, ಪದ್ಮನಿಧಿಗಳ ವಿಗ್ರಹಗಳನ್ನು ಕಾಣಬಹುದು. ಅಲ್ಲದೆ ಎರಡು ಸರಳವಾದ ಕಂಬಗಳು ಎರಡು ಗೋಡೆಗಂಬಗಳು ಹಾಗೂ ಸಿಥಿಯನ್ ವೇಷ ಧರಿಸಿದ ಶೈವ ದ್ವಾರಪಾಲಕರ ವಿಗ್ರಹಗಳನ್ನು ಇಲ್ಲಿ ಅಳವಡಿಸಲಾಗಿದೆ. ಚಾವಡಿಯ ಎರಡೂ ಕಡೆಗಳಲ್ಲಿ ಪುನ: ಒಂದೊಂದು ಚಾವಡಿಯನ್ನು ಕೊರೆದು ಅದರ ಗೋಡೆಯ ಭಾಗದ ಕಲ್ಲಿನಲ್ಲಿ ಶಿಲ್ಪಗಳನ್ನು ಕೆತ್ತಲಾಗಿದೆ. ಇದರಲ್ಲಿನ ಗರ್ಭಗೃಹವನ್ನು ಸ್ತೂಪಗಳಲ್ಲಿದ್ದಂತೆ ಅಸಮ ಪ್ರಮಾಣದಲ್ಲಿ ಚತುರ್ಭುಜಾಕಾರದಲ್ಲಿ ಕೊರೆಯಲಾಗಿದೆ. ಒಳಗಿನ ಲಿಂಗ ಗರ್ಭಗೃಹಕ್ಕೆ ಸರಿಹೊಂದದ ಹಿರಿಯ ಗಾತ್ರದ್ದು. ಬಹುಶ: ಇದನ್ನು ಕೆಲಕಾಲಾನಂತರ ಅಲ್ಲಿ ಸ್ಥಾಪಿಸಿರಬಹುದು. ಗುಹಾಲಯವನ್ನು ಒಳಹೊಕ್ಕಂತೆ ನಾವು ನೋಡುವುದು ಅದ್ಭುತ ರಮ್ಯ ಶಿಲ್ಪಗಳನ್ನು. ಅರ್ಧನಾರೀಶ್ವರ, ಹರಿಹರ, ಮಹಿಷಾಸುರಮರ್ದಿನಿ, ವರಾಹ, ನಟರಾಜ.. ಮುಂತಾದ ದೇವ ದೇವತೆಗಳ ಮೂರ್ತಿಶಿಲ್ಪಗಳಿವೆ. ಇಲ್ಲಿನ ಗಂಗಾಧರ ಮೂರ್ತಿ ಆಗಮಶಾಸ್ತ್ರಗಳಲ್ಲಿ ನೀಡಲಾದ ವರ್ಣನೆಗಿಂತ ಭಿನ್ನನಾಗಿದ್ದಾನೆ. ವಿಗ್ರಹದಲ್ಲಿ ಶಿವನಿಗೆ ಮೂರನೆಯ ಕಣ್ಣನ್ನು ಕಂಡರಿಸಲಾಗಿದೆ. ಜಟಾಮಕುಟಧಾರಿಯಾದ ಈತನ ಕಿರೀಟದ ಮೇಲೆ ಮೂವರು ದೇವತೆಗಳು ಅಂಜಲೀಬದ್ಧರಾಗಿದ್ದಾರೆ. ಇವರು ಗಂಗಾ, ಯಮುನಾ, ಸರಸ್ವತಿಯರೆಂದು ಊಹಿಸಲಾಗಿದೆ. ಸರಸ್ವತಿಯನ್ನು ಇಲ್ಲಿ ಚಿತ್ರಿಸಿರುವುದು ಅಪರೂಪ, ಗಮನಾರ್ಹ. ಗುಹೆಯ ಎಡಭಾಗದ ವಿಸ್ತಾರವಾದ ಗೋಡೆಯಲ್ಲಿ ನಟರಾಜನ ವಿಗ್ರಹವಿದೆ. ನರ್ತಿಸುತ್ತಿರುವ ಶಿವನಲ್ಲದೆ ಸಪ್ತಮಾತೃಕೆಯರನ್ನೂ ಪಾರ್ವತಿ ಮತ್ತು ಗಣೇಶರನ್ನೂ ಈ ಶಿಲ್ಪಗುಚ್ಛದಲ್ಲಿ ಕೆತ್ತಲಾಗಿದೆ. ಶಿವನು ತನ್ನ ಹತ್ತು ಕೈಗಳಲ್ಲಿನ ಮೇಲಿನ ಎಡಬಲ ಕೈಗಳಲ್ಲಿ ಒಂದೊಂದು ಸರ್ಪವನ್ನು ಹಿಡಿದಿದ್ದಾನೆ. ಈತನ ನಡುವಿನಿಂದ ಒಂದು ಸರ್ಪ ಕೆಳಗೆ ಇಳಿಯುತ್ತಿದೆ. ಉಟ್ಟಿರುವ ಉತ್ತರೀಯ ಈತನ ನರ್ತನ ರಭಸಕ್ಕೆ ತೂಗಾಡುತ್ತಿರುವಂತಿದೆ. ಇದೂ ಸಹ ನಾವು ಸಾಮಾನ್ಯವಾಗಿ ನೋಡುವ ನರ್ತನ ಶಿವನ ವಿಗ್ರಹಕ್ಕಿಂತ ಭಿನ್ನವಾಗಿದೆ. ಶಿಲ್ಪದಲ್ಲಿ ಚಲನೆ, ಭಾವತನ್ಮಯತೆಗಳು ಎದ್ದುಕಾಣುತ್ತವೆ. ಇದು ಅತಿಸುಂದರವಾದ, ಅಷ್ಟೇ ಪ್ರಸಿದ್ಧವಾದ ವಿಗ್ರಹ. ಸಾಮಾನ್ಯವಾಗಿ ಈ ಗುಹೆಯನ್ನು ಚಾಲುಕ್ಯರ ಗುಹಾಲಯಗಳ ಸರಣಿಯಲ್ಲಿ ಮೊದಲಿನದೆಂದು ಭಾವಿಸುವವರಿದ್ದಾರೆ. ಇದರ ಕಾಲ ಕ್ರಿಸ್ತಶಕ ೬ ನೆಯ ಶತಮಾನವೆಂದು ಊಹಿಸಿದ್ದಾರೆ. ಆದರೂ ಇದಿನ್ನೂ ವಿವಾದಾಸ್ಪದವಾದ ಅಂಶವಾಗಿದೆ.

ಮೇಗುಡಿಗೆ ಹೋಗುವ ದಾರಿಯಲ್ಲಿ ಎರಡಂತಸ್ತಿನ ಒಂದು ಗುಡಿ ಕಾಣಿಸುತ್ತದೆ. ಇದು ಜೈನ ಗುಡಿ ಎಂದು ಕಸಿನ್ಸ್ ಹೇಳಿದ್ದಾರೆ. ವಾಸ್ತವಿಕವಾಗಿ ಇದೊಂದು ಕೊರೆದ ಗುಹೆಯೂ ಹೌದು, ಕಲ್ಲಿನ ಕಟ್ಟಡವೂ ಹೌದು. ಕೆಳಗಿನ ಅಂತಸ್ತಿನಲ್ಲಿ ನಾಲ್ಕು ಚೌಕಾಕಾರದ ಕಂಬಗಳು ಹಾಗೂ ಎರಡು ಗೋಡೆಗಂಬಗಳ ಒಂದು ವರಾಂಡ ಇದೆ. ಇದಕ್ಕೆ ಹೊಂದಿದಂತಿರುವ ಹಿಂಬದಿಯ ಬಂಡೆಯಲ್ಲಿ ಮೂರು ಗರ್ಭಗೃಹಗಳನ್ನು ಕೊರೆಯಲಾಗಿದೆ. ಆಂಧ್ರ ಪ್ರದೇಶದ ಹಾಗೂ ಪಲ್ಲವರ ಆಳ್ವಿಕೆಗೆ ಸೇರಿದ್ದ ತೊಂಡೈಮಂಡಲಮ್‌ಗಳಲ್ಲಿ ಇಂತಹ ಗುಹಾಲಯಗಳು ಕಂಡುಬಂದಿವೆ. ಈಗ ಗರ್ಭಗೃಹಗಳಲ್ಲಿ ಯಾವ ವಿಗ್ರಹವೂ ಇಲ್ಲ. ವಾಸ್ತವಿಕವಾಗಿ ಅಲ್ಲಿ ವಿಗ್ರಹಗಳನ್ನು ಸ್ಥಾಪಿಸಬೇಕೆಂಬ ಅಭಿಪ್ರಾಯವೇ ಇದ್ದಂತೆ ತೋರುವುದಿಲ್ಲ. ಅದಕ್ಕೆ ಬದಲು ಒರಟಾದ ಕಲ್ಲಿನ ಆಸನಗಳಿವೆ. ಇವುಗಳನ್ನು ಗರ್ಭಗೃಹಗಳೆನ್ನುವ ಬದಲು ಕೋಣೆಗಳೆಂದು ಕರೆಯುವುದೇ ಹೆಚ್ಚು ಸೂಕ್ತ. ಈ ಕೋಣೆಗಳ ದ್ವಾರಬಂಧದ ಕಂಬಗಳಲ್ಲಿ ಕೆತ್ತನೆಯ ಕೆಲಸವನ್ನು ಕಾಣಬಹುದು. ಮಧ್ಯದ ದ್ವಾರಕಂಬದ ಕೆತ್ತನೆ ಹೆಚ್ಚು ವಿಸ್ತಾರವಾಗಿದೆ. ಮೇಲಿನ ಅಂತಸ್ತಿನಲ್ಲಿಯೂ ಒಂದು ವರಾಂಡ ಇದೆ. ಆದರೆ ಕೋಣೆ ಮಾತ್ರ ಒಂದೇ. ಇದನ್ನು ಮೇಲೆ ಚಾಚಿದ್ದ ಬಂಡೆಯಲ್ಲಿ ಕೊರೆಯಲಾಗಿದೆ. ಇದರ ದ್ವಾರಕಂಬದಲ್ಲೂ ಕೆಳಗಡೆ ಮಿಥುನ ಚಿತ್ರ, ಮೇಲೆ ಸುರುಳಿಯ ಚಿತ್ರಾಲಂಕಾರ, ಬಳ್ಳಿಗಳ ಹಾಗೂ ಹಾವುಗಳ ರಚನೆಗಳನ್ನು ಕಾಣಬಹುದು. ಇದರ ಒಳಮಾಳಿಗೆಯಲ್ಲಿ ಮುಕ್ಕೊಡೆಯ ಕೆಳಗೆ ಕುಳಿತಿರುವ ಒಂದು ವಿಗ್ರಹವನ್ನು ಚಿತ್ರಿಸಲಾಗಿದೆ. ಅರಿವೆಯನ್ನು ತೊಟ್ಟಿರುವಂತೆ ತೋರುವ ಇದು ಜೈನ ವಿಗ್ರಹವೆಂದು ಕರೆದಿದ್ದಾರೆ. ಮೂರ್ತಿ ಪದ್ಮಪೀಠದ ಮೇಲೆ ಪರ್ಯಂಕಾಸನ (ಧ್ಯಾನಾಸನ) ದಲ್ಲಿದ್ದು ಅದರ ಮೇಲುಗಡೆ ಮುಕ್ಕೊಡೆಯಿದೆ. ಆದರೆ ಬಲಗೈ ವ್ಯಾಖ್ಯಾನ ಮುದ್ರೆಯಲ್ಲಿದ್ದು ಹಣೆಯಲ್ಲಿ ಎರಡು ಹುಬ್ಬುಗಳ ನಡುವೆ ಊರ್ಣ್ಣವಿದೆ. ಇದು ಬುದ್ಧನಲ್ಲಿ ತೋರಿಸಲಾದ ಮೂವತ್ತೆರಡು ಮಹಾಪುರುಷ ಲಕ್ಷಣಗಳಲ್ಲೊಂದು. ಬಲತೋಳಿನ ಕೆಳಗಿನಿಂದ ಎಡಭುಜದ ಮೇಲೆ ಹೊದೆಯಲಾದ ವಸ್ತ್ರ ಮೊಣಕಾಲಿನವರೆಗೂ ಇಳಿದಿರುವುದು ಇದು ಬೌದ್ಧ ವಿಗ್ರಹವೆನ್ನಲು ಇನ್ನೊಂದು ಆಧಾರವೆನ್ನಲಾಗಿದೆ. ಆಲಯದ ಕಾಲ ಐದನೆಯ ಶತಮಾನವೆಂದು ಕೆಲವರು

ಭಾವಿಸಿದ್ದಾರೆ. ಆದರೆ ಇಲ್ಲಿ ಕಂಡರಿಸಿರುವ ಕಿರುಶಾಸನಗಳು ಸುಮಾರು ೭-೮ನೆಯ ಶತಮಾನಗಳದ್ದು.

## ಬಾದಾಮಿ

ಚಾಲುಕ್ಯರ ಕಾಲದ ಗುಹಾವಾಸ್ತುಶಿಲ್ಪದ ಇನ್ನೊಂದು ಕೇಂದ್ರ ಬಾದಾಮಿ. ಇಲ್ಲಿನ ಮರಳುಗಲ್ಲು ಗುಡ್ಡದ ಮುಖದೊಳಕ್ಕೆ ಕೊರೆಯಲಾದ ಮೇಣಬಸ್ತಿಗಳು ಎಂದು ಕರೆಯಲಾದ ಗುಹೆಗಳಲ್ಲಿ ಒಂದು ಸಾಮಾನ್ಯ ಲಕ್ಷಣವನ್ನು ಕಾಣುತ್ತೇವೆ. ಗರ್ಭಗೃಹ, ಮಹಾಮಂಟಪ, ಮುಖಮಂಟಪ ಮತ್ತು ತೆರೆದ ವರಾಂಡ ಪ್ರತಿ ಗುಹೆಯಲ್ಲೂ ಇವೆ. ಪ್ರತಿ ಗುಹೆಯಲ್ಲೂ ಈ ಒಂದೊಂದನ್ನೂ ವಿಭಜಿಸುವ ಯತ್ನಗಳನ್ನು ಮಾಡಿದೆ. ನಾಜೂಕಾಗಿ ಕೊರೆಯುವ ಕಂಬಗಳು, ಶಿಲ್ಪಾಲಂಕೃತ ಗೋಡೆಗಳು ಮತ್ತು ಚಾವಣಿಗಳು, ಅರೆ ಮತ್ತು ನಿಮ್ನ ಉಬ್ಬು ಶಿಲ್ಪಗಳು. ಕಂಬಗಳ ಮೇಲ್ಭಾಗವನ್ನೂ ಚಾವಣಿಯನ್ನೂ ಆಧರಿಸಿ ನಿಂತ ಚಾಚುವಿಗ್ರಹಗಳು ಈ ಗುಹೆಗಳ ವೈಶಿಷ್ಟ್ಯ. ಗುಡ್ಡದ ಕೆಳಗಿನಿಂದ ಗುಹೆಗಳಿಗೆ ಹೋಗಲು ಮೆಟ್ಟಿಲುಗಳಿವೆ. ಮೊದಲನೆಯ ಗುಹೆ ಎಲ್ಲಕ್ಕಿಂತ ತಗ್ಗಿನಲ್ಲಿದೆ. ಇಲ್ಲಿಂದ ನಾಲ್ಕನೆಯ ಗುಹೆಯ ಆವರಣದ ವರೆಗೂ ಮೆಟ್ಟಿಲುಗಳು ಮುಂದುವರೆದಿವೆ. ಈ ಕೊರೆದ ಗುಹೆಗಳಲ್ಲಿ ಮೊದಲನೆಯದನ್ನು ಶೈವ ಗುಹೆ ಎಂದೂ ೨-೩ ನೆಯ ಗುಹೆಗಳನ್ನು ವೈಷ್ಣವ ಎಂದೂ ನಾಲ್ಕನೆಯದನ್ನು ಜೈನ ಎಂದೂ ಧರ್ಮಗಳನ್ನವಲಂಬಿಸಿ ಹೆಸರಿಸಲಾಗಿದೆ. ವೈಷ್ಣವರ ಗುಹೆಗಳೆರಡರ ನಡುವೆ ಒಂದು ನೈಸರ್ಗಿಕ ಗುಹೆ ಇದ್ದು ಇದರಲ್ಲಿ ಬೋಧಿಸತ್ವ ಪದ್ಮಪಾಣಿಯ ಅರೆ ಉಬ್ಬು ಶಿಲ್ಪವಿದೆ. ಇದರಲ್ಲಿನ ವಾಸ್ತುಶಿಲ್ಪ ಕಾರ್ಯವನ್ನು ಅರ್ಧಕ್ಕೇ ನಿಲ್ಲಿಸಿದಂತೆ ತೋರುತ್ತದೆ.

ಮೊದಲನೆಯ ಗುಹೆಯ ಮುಂದೆ ಎಲ್ ಆಕಾರದ ಇಕ್ಕಟ್ಟಾದ ಜಗುಲಿ ಇದ್ದು ಇದರ ನಿಡಿದಾದ ಭಾಗ ಗುಹೆಯ ಮುಖ್ಯ ಭಾಗವನ್ನಾವರಿಸಿದೆ. ಕಿರಿದಾದ ಭಾಗ ಬಲಗಡೆಯ ಒಂದು ಸಣ್ಣ ಗರ್ಭಗುಡಿಯನ್ನು ಆವರಿಸಿದೆ. ಜಗುಲಿಯ ಮೆಟ್ಟಿಲುಗಳ ಎರಡು ಕಡೆ ನಾನಾಭಂಗಿಗಳಲ್ಲಿರುವ ಸಂಗೀತಕಾರರ, ನರ್ತಕರ, ಇತರ ಕುಬ್ಜಗಣಗಳ ನಿಮ್ನ ಚಿತ್ರಫಲಕವಿದೆ. ಈ ಗುಹೆಯಲ್ಲಿರುವ ಉಬ್ಬು ಶಿಲ್ಪಗಳಲ್ಲಿ ಹದಿನೆಂಟು ಕೈಗಳ ನಟರಾಜ, ಹರಿಹರ, ಅರ್ಧನಾರೀಶ್ವರ, ದ್ವಿಭುಜಗಣೇಶ, ನವಿಲಿನ ಮೇಲೆ ಕುಳಿತ ಕಾರ್ತಿಕೇಯ, ಮಹಿಷಮರ್ದಿನಿ ಮುಂತಾದ ದೇವ ದೇವತೆಗಳ ಕಿರಿಯ, ದೊಡ್ಡ ಉಬ್ಬು ಶಿಲ್ಪಗಳಿವೆ. ಈ ಮೂರ್ತಿ ಶಿಲ್ಪಗಳು ಜೀವಂತವಾಗಿವೆ. ಗರ್ಭಗುಡಿಯಲ್ಲಿ ಕಲ್ಲಿನಿಂದ ಕೊರೆದು ರೂಪಿಸಿದ ಪೀಠದ ಮೇಲೆ ದೊಡ್ಡ ಲಿಂಗವಿದೆ.

ಈ ಗುಹೆಯಿಂದ ಸುಮಾರು ೬೫ ಮೆಟ್ಟಿಲುಗಳನ್ನು ಹತ್ತಿ ಹೋದರೆ ಎರಡನೆಯ ಗುಹೆ ಸಿಗುತ್ತದೆ. ಇದರಲ್ಲಿ ವಿಷ್ಣುವಿನ ಅವತಾರಗಳಿಗೆ ಸಂಬಂಧಿಸಿದ ವಿಗ್ರಹಗಳಿವೆ. ಎಂತಲೇ ಇದನ್ನೂ ಮೂರನೆಯದನ್ನೂ ವೈಷ್ಣವ ಗುಹೆ ಎಂದು ಹೆಸರಿಸಲಾಗಿದೆ. ಜಗುಲಿಯ ಕೆಳಗಿನ ಪಟ್ಟಿಯಲ್ಲಿ ಹಲವಾರು ಭಂಗಿಗಳಲ್ಲಿನ ಗಣಗಳನ್ನು ಸಾಬೂನು ಕಲ್ಲಿನಲ್ಲಿ ಕಂಡರಿಸಿದೆ. ಪಡಸಾಲೆಯ ಮುಂದಿನ ಎರಡೂ ಪಕ್ಕಗಳಲ್ಲಿ ಸಾಲಂಕೃತರೂ ಕಿರೀಟಧಾರಿಗಳೂ ಆದ ದ್ವಾರಪಾಲಕರ ಉಬ್ಬು ಚಿತ್ರಗಳಿವೆ. ಪಡಸಾಲೆಯ ಎರಡೂ ಕಡೆಯ ಗೋಡೆಗಳಲ್ಲಿ ಭೂವರಾಹ ಹಾಗೂ ತ್ರಿವಿಕ್ರಮ ಮೂರ್ತಿಗಳಿವೆ. ಪ್ರತ್ಯಾಲೀಢ ಭಂಗಿಯಲ್ಲಿನ ವರಾಹ ಒಂದು ಕೈಯಲ್ಲಿ ಕಮಲವನ್ನೂ ಹಿಡಿದಿದ್ದು ಆ ಕಮಲದ ಮೇಲೆ ಭೂದೇವಿ ವರಾಹದ ಮುಖಕ್ಕೆ ತಾಗಿದಂತೆ ಬಳುಕಿ ನಿಂತಿದ್ದಾಳೆ. ಎದುರು ಗೋಡೆಯಲ್ಲಿನ ತ್ರಿವಿಕ್ರಮ ಅಷ್ಟಭುಜ ಮೂರ್ತಿ. ಪಡಸಾಲೆಯ ಜಂತಿಯುದ್ದಕ್ಕೂ ಅನಂತಶಯನ, ಬ್ರಹ್ಮ, ವಿಷ್ಣು, ಶಿವ, ಗಜಲಕ್ಷ್ಮಿ, ಸಮುದ್ರಮಂಥನ, ಅಷ್ಟದಿಕ್ಪಾಲಕರು ಮುಂತಾದ ಹಲವಾರು ಸಣ್ಣ ವಿಗ್ರಹಗಳಿವೆ. ಇದಲ್ಲದೆ ಈ ಗುಹೆಯಲ್ಲಿ ವರ್ಣಚಿತ್ರಗಳನ್ನು ಬರೆಯಲಾಗಿದೆ. ಈಗ ಅವು ಬಹುಮಟ್ಟಿಗೆ ಅಳಿಸಿಹೋಗಿವೆಯಾದರೂ ಪ್ರಖರವಾದ ಬೆಳಕಿನ ಸಹಾಯದಿಂದ ಅವುಗಳ ಅವಶೇಷಗಳನ್ನು ಕಾಣಬಹುದು.

ಮೂರನೆಯ ಗುಹೆ ವಿಸ್ತಾರದಲ್ಲಿ ಹಿರಿದು. ಇದರಲ್ಲಿನ ವಿಗ್ರಹಗಳು ಸಹ ಗಾತ್ರದಲ್ಲೂ ರೂಪಿನಲ್ಲೂ ದೊಡ್ಡವು, ಭವ್ಯವಾದವು. ಈ ವಿಷ್ಣುಗೃಹವನ್ನು ಕ್ರಿಸ್ತಶಕ ೫೭೮ ರಲ್ಲಿ ಚಾಲುಕ್ಯರ ದೊರೆಯಾದ ಮಂಗಲೇಶನು ಕಟ್ಟಿಸಿದನೆನ್ನಲು ಶಾಸನಾಧಾರವಿದೆ. ಮೊದಲೆರಡು ಗುಹೆಗಳೂ ಸರಿಸುಮಾರು ಇದೇ ಕಾಲದ್ದು, ಅಥವಾ ಸ್ವಲ್ಪ ಪ್ರಾಚೀನ ಆಗಿದ್ದಿರಬಹುದು. ಈ ಗುಹೆಯ ಜಗಲಿಯ ಎಡಗೋಡೆಯ ಮೇಲೆ ಸುಮಾರು ೧೨ವರೆ ಅಡಿಗಳಷ್ಟು ಎತ್ತರದ ಸಮಪಾದದಲ್ಲಿ ನಿಂತಿರುವ ಅಷ್ಟಭುಜಸ್ವಾಮಿಯೆನಿಸಿದ ವಿಷ್ಣುವಿನ ಭವ್ಯವಾದ ವಿಗ್ರಹವಿದೆ. ಯಾವುದೇಪೀಠದ ಮೇಲೂ ನಿಂತಿರದೆ ಜಗುಲಿಯ ಮಟ್ಟಕ್ಕೆ ಸರಿಯಾಗಿ ನೈಜಭಂಗಿ (ಸಮಪಾದ) ಯಲ್ಲಿ ಎಂಟು ಕೈಗಳನ್ನು ಹೊಂದಿರುವ ಈ ಮೂರ್ತಿಯನ್ನು ಗೋಪಿನಾಥರಾಯರು ವೈಕುಂಠನಾಥನೆಂದು ತಪ್ಪಾಗಿ ಕರೆದಿದ್ದಾರೆ. ಇದರ ಎದುರಿನಲ್ಲಿ ಬಲಗೋಡೆಯ ಮೇಲೆ ಈ ವಿಗ್ರಹಕ್ಕಿಂತಲೂ ಎತ್ತರವಾದ ತ್ರಿವಿಕ್ರಮನ ವಿಗ್ರಹವನ್ನು ಬಿಡಿಸಲಾಗಿದೆ. ಎಲ್ಲೋರದಲ್ಲಿರುವ ಕೈಲಾಸದೇವಾಲಯವನ್ನು ಹೊರತುಪಡಿಸಿ ಬೇರಾವ ಗುಹಾಲಯಗಳಲ್ಲೂ ಈ ಗುಹೆಯೊಳಗಿರುವಷ್ಟು ವಿಸ್ತಾರವಾದ ಕೈಸಾಲೆ ಇಲ್ಲ. ಇಲ್ಲಿ ನಾಲ್ಕು ದೊಡ್ಡ ಉಬ್ಬು ಚಿತ್ರಗಳಿವೆ. ಎಡಪಾರ್ಶ್ವದ ತುದಿಯಲ್ಲಿ ಅನಂತಾಸೀನನಾದ ವಿಷ್ಣುವಿನ ವಿಗ್ರಹದ ತಲೆಯ ಮೇಲೆ ಏಳು ಹೆಡೆಗಳು ಹರಡಿವೆ. ಈ ವಿಗ್ರಹದ ಕುಳಿತ ಭಂಗಿಯನ್ನು ಮಹಾರಾಜಲೀಲಾ ಎಂದು ವರ್ಣಿಸಲಾಗಿದೆ. ಇದರ ಪೀಠದ ಕೆಳಗೆ ವಿವಿಧ ಭಂಗಿಗಳಲ್ಲಿ ೧೭ ಗಣಗಳ ಕಣಫಲಕವಿದೆ. ಅನಂತಾಸೀನನಾದ ವಿಷ್ಣುವಿನ ಈ ವಿಗ್ರಹ ಉತ್ತರ ಭಾರತದಲ್ಲಿ ಕಂಡುಬಂದಿಲ್ಲವೆಂದೇ ಹೇಳಬೇಕು. ದಕ್ಷಿಣದಲ್ಲೂ ಅತಿ ವಿರಳವಾಗಿ ಕಂಡುಬಂದಿದೆ. ಈ ಕೈಸಾಲೆಯಲ್ಲಿ ಪ್ರತ್ಯಾಲೀಢ ಭಂಗಿಯಲ್ಲಿ ವರಾಹಾವತಾರಿ ವಿಷ್ಣುವಿನ, ಸ್ಥಾನಕ ಭಂಗಿಯ ಹರಿಹರನ, ವಿಷ್ಣುವಿನ ನರಸಿಂಹಾವತಾರದ ವಿಗ್ರಹಗಳಿವೆ. ಕೈಸಾಲೆಯ ಮುಂದೆ ಆರು ಕಂಬಗಳೂ ಎರಡು ಗೋಡೆಗಂಬಗಳೂ ಇದ್ದು ಒಂದೊಂದರಲ್ಲೂ ಒಂದೊಂದು, ಶಿವ–ಪಾರ್ವತಿ, ರತಿ–ಮನ್ಮಥ, ಅರ್ಧನಾರೀಶ್ವರ, ನಾಗರಾಜ–ನಾಗರಾಣಿ, ಮುಂತಾದ ಚಾಚು ವಿಗ್ರಹಗಳಿವೆ. ಇಲ್ಲಿಯ ಹಾಗೂ ಒಳ ಮಂಟಪದ ಚಾವಣಿಗಳಲ್ಲಿ ಹಲವಾರು ಉಬ್ಬುಚಿತ್ರಗಳಿವೆ, ಇಲ್ಲಿನ ಹಲವಾರು ವಿಗ್ರಹಗಳಿಗೆ ವರ್ಣಗಳನ್ನು ಬಳೆಯಲಾಗಿತ್ತೆಂದು ತೋರುತ್ತದೆ. ಅಲ್ಲದೆ ಒಳಗಡೆ ನೃತ್ಯ ಪ್ರದರ್ಶನ, ರಾಜಸಭೆ, ಮುಂತಾದ ಕೆಲವು ಚಿತ್ರಗಳಿಗೆ ಕೆಂಪು, ಕಪ್ಪು, ನೀಲಿ, ಹಸಿರು ಮುಂತಾದ ಬಣ್ಣಗಳನ್ನು ಬಳೆಯಲಾಗಿತ್ತೆಂಬುದನ್ನು ಗುರುತಿಸಬಹುದಾದರೂ ಈಗ ಅವೆಲ್ಲ ಬಹಳಮಟ್ಟಿಗೆ ಹಾಳಾಗಿವೆ. ಏಳು ಕಂಡಿಗಳಿರುವ ಗುಹೆಯ ಮುಂಬದಿಯ ಹಿಂಬದಿಯ ಮತ್ತು ಕೊನೆಗಳ ಹಾಸುಗಲ್ಲುಗಳಲ್ಲೂ ಉಬ್ಬು ಚಿತ್ರಗಳಿವೆ. ಮುಂಭಾಗದ ಏಳು ಚಿತ್ರಗಳು ಕೃಷ್ಣ ಚರಿತೆಗೆ ಸಂಬಂಧಿಸಿದವುಗಳು. ಹಿಂಬದಿಯ ಚಿತ್ರಗಳಲ್ಲಿ ಆರು ಸಮುದ್ರಮಂಥನದ ಕತೆಗೆ ಸಂಬಂಧಿಸಿದ್ದು. ಕೊನೆಯದು ಪಾರಿಜಾತ ಪುಷ್ಪಕ್ಕಾಗಿ ಇಂದ್ರ ಮತ್ತು ವಿಷ್ಣು ಇವರ ನಡುವೆ ಆದ ಯುದ್ಧವನ್ನು ನಿರೂಪಿಸುತ್ತದೆ. ದೊಡ್ಡ ಗಾತ್ರದ ಚಾಚು ವಿಗ್ರಹಗಳು, ವಿಕಸನಗೊಂಡ ಚಾವಣಿಗಳು ಮತ್ತು ದ್ವಾರಬಂಧಗಳು, ಮಹಾ ಮಂಟಪದಲ್ಲಿ ಕಂಬ

ಗಳ ಜೋಡಣೆಯ ಕ್ರಮ, ಗರ್ಭಗೃಹದ ಮುಂದೆ ಬಿಡಲಾದ ತೆರೆದ ಸ್ಥಳ ವಾಸ್ತುಶಿಲ್ಪದ ಚೌಕಟ್ಟಿನಲ್ಲಿ ಗಣಗಳ ಜೋಡಣೆ, ಚಿತ್ರಫಲಕಗಳಲ್ಲಿ ಕಂಡುಬರುವ ಉತ್ಕೃಷ್ಟತೆ, ಶಿಲ್ಪಗಳಲ್ಲಿ ಎದ್ದುಕಾಣುವ ಉತ್ಸಾಹ ಭಾವ ಹಾಗೂ ನಾಟಕೀಯ ಅಂಶಗಳ ಪ್ರತಿಫಲನ ಇವು ಈ ಗುಹೆ ಮೊದಲೆರಡು ಗುಹೆಗಳಿಗಿಂತ ಹೆಚ್ಚು ಮುಂದುವರಿದಿದ್ದಾಗಿತ್ತು. ಬಹುಶ: ಆ ಗುಹೆಗಳು ಇದಕ್ಕೂ ಪ್ರಾಚೀನವೆಂಬ ಊಹೆಗೆ ಪೋಷಕವಾಗಿದೆ ಎನಿಸುತ್ತದೆ. ಆದರೆ ಇಲ್ಲೂ ಸಹ ಪಂಡಿತರಲ್ಲಿ ಏಕಾಭಿಪ್ರಾಯವಿಲ್ಲ.

ಬಾದಾಮಿಯಲ್ಲಿ ನಾಲ್ಕನೆಯದು ಜೈನ ಗುಹೆ, ಇದನ್ನು ಒಮ್ಮೆ ಮೇಗಣ ಬಸದಿ ಎಂದು ಕರೆಯುತ್ತಿದ್ದರು, ಎಲ್ಲದಕ್ಕಿಂತ ಮೇಲಿರುವ ಬಸದಿ ಎಂಬರ್ಥದಲ್ಲಿ ನಂತರ ಜನರ ಬಾಯಲ್ಲಿ ಇದು ಬಸದಿಯೂಗಿ, ಕೊನೆಗೆ ಈ ಹೆಸರನ್ನು ಇಲ್ಲಿನ ಎಲ್ಲ ಗುಹೆಗಳಿಗೂ ಅನ್ವಯಿಸಲಾಗುತ್ತಿದೆ. ಶಿಲ್ಪಿ ಕಲ್ಲನ್ನು ಮೇಣದ ಮುದ್ದೆಯಂತೆ ಬಳಸಿದನೆಂಬ ಇನ್ನೊಂದು ವ್ಯಾಖ್ಯಾನವೂ ಇದೆ. ಇದರೊಳಗೆ ಆಯತಾಕಾರದ ಇಕ್ಕಟ್ಟಾದ ಕೈಸಾಲೆ ಮತ್ತು ಗರ್ಭಗೃಹಗಳಿವೆ. ಕೈಸಾಲೆಯ ಮುಂದೆ ಸಿಂಹದ ತಲೆಯ ಮೇಲೆ ನಿಂತಂತೆ ಕಾಣುವ ನಾಲ್ಕು ಕಂಬಗಳಿವೆ. ದ್ವಾರಬಂಧ ಅಲಂಕೃತವಾಗಿದೆ. ಗರ್ಭಗುಡಿಯೊಳಗೆ ಸಿಂಹಾಸನದ ಮೇಲೆ ವರ್ಧಮಾನ ಮಹಾವೀರನು ಮದುವಾದ ದಿಂಬೊಂದನ್ನು ಒರಗಿ ಕುಳಿತಿದ್ದಾನೆ. ಕೈಸಾಲೆಯ ಎಡಭಾಗದಲ್ಲಿ ಪಶ್ಚಿಮದ ಗೋಡೆಯ ಮೇಲೆ ಈ ಪಾರ್ಶ್ವನಾಥನ ಹಾಗೂ ಅದರ ಎದುರಿನ ಗೋಡೆಯಲ್ಲಿ ಬಾಹುಬಲಿಯ ನಿಂತಿರುವ ವಿಗ್ರಹಗಳಿವೆ. ಎರಡನೆಯ ಗುಹೆಯ ಎಡಗಡೆಯಲ್ಲಿ ಸುಮಾರು ೨೫–೩೦ ಅಡಿಗಳ ದೂರದಲ್ಲಿನ ನೈಸರ್ಗಿಕ ಗುಹೆಯಲ್ಲಿ ಬೋಧಿಸತ್ವ ಪದ್ಮಪಾಣಿಯ ವಿಗ್ರಹವನ್ನು ಕೊರೆಯಲಾಗಿದೆ. ಪಾದಗಳವರೆಗೂ ವಸ್ತ್ರ ಹೊದೆದು ಕಿರೀಟ ಧರಿಸಿ, ಬಲಗೈಯಲ್ಲಿ ಪದ್ಮವನ್ನು ಹಿಡಿದು ನಿಂತ ಈ ವಿಗ್ರಹದ ತಲೆಯ ಹಿಂದೆ ಪ್ರಭಾಮಂಡಲವಿದೆ. ಈ ಉಬ್ಬು ಚಿತ್ರದ ಎಡಗಡೆ ಒಂದು ಪುರುಷಾಕೃತಿ ಇದ್ದು ಅದರ ಎರಡೂ ಕಡೆ ಸ್ವಾರಸ್ಯವಾಗಿ ಕಾಣುವ ಹಲವಾರು ಸಣ್ಣ ಮೂರ್ತಿಗಳಿವೆ. ಒಟ್ಟು ಚಿತ್ರ ೫ ಅಡಿ ೮ ಅಂಗುಲ ಎತ್ತರ ಮತ್ತು ೩ ಅಡಿ ೮ ಅಂಗುಲ ಅಗಲದ ಪ್ರದೇಶವನ್ನು ಆಕ್ರಮಿಸಿದೆ.

### ಕರ್ನಾಟಕದ ಪ್ರಭಾವ

ಐಹೊಳೆ ಬಾದಾಮಿಗಳಲ್ಲಿನ ಈ ಗುಹಾಲಯಗಳು ಆಂಧ್ರಪ್ರದೇಶ, ಮಹಾರಾಷ್ಟ್ರಗಳಲ್ಲಿನ ಕೆಲವು ಗುಹಾಲಯಗಳಿಗೆ ಮಾದರಿಯಾಗಿವೆಯೇ ಎಂಬ ಪ್ರಶ್ನೆ ಏಳುತ್ತದೆ. ಈ ಕುರಿತು ಸಹ ಭಿನ್ನಾಭಿಪ್ರಾಯಗಳಿವೆ. ಮಹಾರಾಷ್ಟ್ರದ ಔರಂಗಬಾದ್ ಜಿಲ್ಲೆಯ ಬೊಕರ್ದನ (ಭೋಗವರ್ಧನ) ದಲ್ಲಿರುವ ಗುಹಾಲಯದಲ್ಲಿ ಚಾಲುಕ್ಯರ ಗುಹಾಲಯಗಳಲ್ಲಿದ್ದಂತೆ ಕಂಬಗಳುಳ್ಳ ಮೊಗಸಾಲೆ ಇದ್ದು, ಅದಕ್ಕೆ ಹೊಂದಿಕೊಂಡು ಹಿಂಭಾಗದಲ್ಲಿ ಗರ್ಭಗುಡಿಗಳ ಸಾಲು ಇದ್ದು, ಮೊಗಸಾಲೆಯ ಎಡಬಲಬದಿಗಳಲ್ಲಿ ಅಂತಹುದೇ ಕಕ್ಷೆಗಳಿದ್ದು, ಎಲ್ಲವೂ ಒಂದೇ ಅಂಗಳದಲ್ಲಿದ್ದಂತೆ ತೋರುತ್ತದೆ. ಮುಖಮಂಟಪದ ಪಕ್ಕದ ಗೋಡೆಗಳಲ್ಲಿ ಶೇಷಶಾಯಿ, ಬಲರಾಮ, ಸೂರ್ಯ ಇತ್ಯಾದಿ ದೇವತೆಗಳ ಶಿಲ್ಪಕೆತ್ತನೆಗಳು ಬಾದಾಮಿಯ ಮೂರ್ತಿಗಳನ್ನೇ ಹೋಲುತ್ತವೆ. "ಉತ್ಪತ್ತಿ ಪಿಡುಗು" ಎಂಬ ಬಹುಶ: ಒಂದು ಬಿರುದಾಗಿರಬಹುದಾಗಿದ್ದ ಸಣ್ಣ ಶಾಸನವನ್ನು ಇಲ್ಲಿ ಕಂಡರಿಸಲಾಗಿದೆ. ಇದೇ ಬಿರುದು ಆಂಧ್ರಪ್ರದೇಶದ ವಿಜಯವಾಡದಲ್ಲಿ ಅಕ್ಕನ್ನ–ಮಾದನ್ನ ಗುಹೆಯಲ್ಲಿಯೂ ಉಂಡವಲ್ಲಿ ಮತ್ತು ಭೈರವಕೊಂಡಗಳಲ್ಲಿನ ಗುಹಾಲಯಗಳಲ್ಲೂ ಕಂಡುಬಂದಿದೆ. ಪಲ್ಲವರ ದೊರೆಯಾದ ಮಾಮಲ್ಲ ನರಸಿಂಹವರ್ಮನ ಬಿರುದಿದು ಎಂತಲೇ ಈ ಗುಹಾಲಯಗಳ ಕರ್ತೃ ಮಾಮಲ್ಲ ಎಂದು ಊಹಿಸಲು ಮನಸ್ಸಾಗುತ್ತದೆಯಾದರೂ, ವಾಸ್ತವಿಕವಾಗಿ, ಚಾಲುಕ್ಯರನ್ನು ಸೋಲಿಸಿದ ಬಳಿಕ ಈ ಪ್ರದೇಶಗಳ ಮೇಲೆ ದಂಡೆತ್ತಿ ತನ್ನ ಸಾರ್ವಭೌಮತ್ವದ ಸೂಚಕವಾಗಿ ಮೊದಲೇ ಕೊರೆಯಲಾಗಿದ್ದ ಈ ಗುಹಾಲಯಗಳಲ್ಲಿ ಆತ ತನ್ನ ಈ ಬಿರುದನ್ನು ಕೆತ್ತಿಸಿದ. ಆದುದರಿಂದ ಇವು ಪಲ್ಲವರಿಂದ ಪ್ರಭಾವಿತವಾದವುಗಳಲ್ಲ; ಚಾಲುಕ್ಯ ಶೈಲಿಯಿಂದ ಪ್ರಭಾವಿತವಾದವುಗಳು ಎಂಬುದೊಂದು ವಾದವಿದೆ. ಅಕ್ಕನ್ನ–ಮಾದನ್ನ ಗುಹೆಯ ಮುಂಭಾಗದಲ್ಲಿ ಅಷ್ಟಕೋನಾಕಾರದ ಕಂಬಗಳ ಕೈಸಾಲೆ ಇದ್ದು ಹಿಂದೆ ಮೂರು ಗರ್ಭಗುಡಿಗಳಿವೆ. ಅಲಂಕೃತ ಭಾಗಗಳಾವುವೂ ಇಲ್ಲ. ಮೇಲ್ನೋಟಕ್ಕೆ ಪಲ್ಲವರ ಗುಹೆಗಳೆನಿಸಿದರೂ ಕಂಬಗಳು ಪಲ್ಲವರ ಶೈಲಿಯಲ್ಲಿಲ್ಲ.

ಗುಂಟೂರು ಜಿಲ್ಲೆಯ ಉಂಡವಲ್ಲಿಯಲ್ಲಿರುವ ಮೂರು ಅಂತಸ್ತುಗಳ ಅನಂತಶಯನ ಗುಡಿ ಎಂಬ ಗುಹಾಲಯದ ಮೊದಲ ಅಂತಸ್ತನ್ನು ಬಹುಶಃ ಮೇಲಿನ ಗುಹೆಗಳನ್ನು ಕೊರೆದ ಕೆಲ ಕಾಲಾನಂತರ ಅಸಂಪೂರ್ಣವಾಗಿ ತಳಭಾಗದ ಗುಹೆಯನ್ನು ಕೊರೆದಿರಬಹುದೆಂದು ಊಹಿಸಲಾಗಿದೆ. ಕೆಳ ಅಂತಸ್ತಿನ ಅಲಂಕರಣ ರಹಿತ ಹಜಾರದ ಸ್ಥೂಲವಾದ ಚೌಕಾಕಾರದ ಕಂಬಗಳು ಅದನ್ನು ಅಡ್ಡವಾಗಿ ಏಳು ಅಂಕಣಗಳಾಗಿ ಪ್ರತ್ಯೇಕಿಸಿವೆ. ಮೇಲಿನ ಮೊದಲ ಅಂತಸ್ತಿನ ಮುಂಭಾಗದ ಮೇಲ್ಛಾವಣಿ ಅಲಂಕೃತವಾಗಿದೆ. ಎಂಟುದಿಂಡುಗಳ ತುದಿಯಲ್ಲಿ ಚೌಕಾಕಾರವಾಗಿರುವ ಒರಟು ಕಂಬಗಳ ಮೇಲೆ ತರಂಗಬೋದಿಗೆ, ಅದರ ಮೇಲೆ ಹಂಸಗಳನ್ನು ಕೊರೆದ ಪಟ್ಟಿ, ಅದಕ್ಕೂ ಮೇಲ್ಭಾಗದಲ್ಲಿ ಉರುಳಾಗಿರುವ ಕಪೋತ. ಭಾರತಡೆಗೆ ಕಮಾನಿನ ಚೈತ್ಯಗೂಡುಗಳು, ಒಳಗಿನ ಹಜಾರದ ಹಿಂದಿನ ಗೋಡೆಗೆ ಹೊಂದಿದಂತಿರುವ ಗರ್ಭಗೃಹದಲ್ಲಿ ಲಿಂಗ ಅಥವಾ ಪ್ರತಿಮೆಯ ಸ್ಥಾಪನೆಗಾಗಿ ಕುಳಿಯುಳ್ಳ ಒಂದು ಪೀಠ, ಇದರ ಬಲಭಾಗದಲ್ಲಿ ಒಂದು, ಎಡಭಾಗದಲ್ಲಿ ಮೂರು ಬೇರೆ ಬೇರೆ ಸಣ್ಣ ಗರ್ಭಗೃಹಗಳು, ಅವುಗಳ ಮುಂದೆ ನಾಲ್ಕು ಕಂಬಗಳ ಮಂಟಪ, ಈ ವಿನ್ಯಾಸ ಎಲ್ಲೋರದ ಬೌದ್ಧಗುಹೆಗಳನ್ನು ನೆನಪಿಗೆ ತರುತ್ತದೆ. ಉತ್ತರದ ಗೋಡೆಯ ತುದಿಯಲ್ಲಿ ಪೂರ್ವಪಶ್ಚಿಮಕ್ಕೆ ಬೃಹದಾಕಾರದ ಅನಂತಶಾಯಿಯ ವಿಗ್ರಹವನ್ನು ಕೆತ್ತಲಾಗಿದೆ. ಈ ವಿಗ್ರಹ ಕರ್ನಾಟಕದ ಹಾಗೂ ಡೆಕ್ಕನ್ ಶೈಲಿಯ ಅನುಕರಣೆ ಎಂದು ಕೆಲವರ ಅಭಿಮತ.

ಪ್ರಕಾಶಮ್ ಜಿಲ್ಲೆಯ ಭೈರವಕೊಂಡದಲ್ಲಿರುವ ಎಂಟು ಗುಹಾಲಯಗಳಲ್ಲೊಂದರ ಗರ್ಭಗೃಹದ ಹಿಂಬದಿಯ ಗೋಡೆಯ ಮೇಲೆ ತ್ರಿಮೂರ್ತಿಯ ಚಿತ್ರವನ್ನು ಕೊರೆಯಲಾಗಿದೆ. ಈ ಗುಹಾಲಯಗಳಲ್ಲಿ ಅತ್ಯುತ್ತಮವೆನಿಸಿರುವುದು ಏಳನೆಯ ಗುಡಿ. ಇದರ ಗರ್ಭಗುಡಿಯ ಮುಂದೆ ಎರಡು ಕಂಬಗಳು ಹಾಗೂ ಪಕ್ಕದ ಗೋಡೆಗೆ ಹೊಂದಿದಂತಹ ಎರಡು ಕಂಬಗಳ ಮೊಗಸಾಲೆ. ಕಾಲುಗಳನ್ನು ಊರಿ ಕುಳಿತಿರುವ ಸಿಂಹದ ಮೇಲೆ ಈ ಕಂಬಗಳಿದ್ದವೆ. ಮಧ್ಯದ ಭಾಗ ಅಷ್ಟಕೋನಾಕಾರ. ಮೇಲ್ಭಾಗದಲ್ಲಿ ಕುಣಿಯಾಕಾರದ ಹಾರದ ಮೇಲೆ ಕಳಶ ಮತ್ತು ಕುಂಭಗಳನ್ನು ಚಿತ್ರಿಸಿದೆ. ಮಧ್ಯದಲ್ಲಿ ಕುಳಿತಿರುವ ವ್ಯಾಳಿಯನ್ನುಳ್ಳ ಬೋದಿಗೆ. ಅಡ್ಡತೊಲೆಯ ಮೇಲೆ ಕುಬ್ಜಾಕಾರಗಳನ್ನು ಕೆತ್ತಿರುವ ಪಟ್ಟಿ. ಇವು ಒಂದು ವಿಧದಲ್ಲಿ ಪಲ್ಲವರ ಶೈಲಿಯನ್ನು ಹೋಲುತ್ತದೆಯಾದರೂ ಅನುಕರಣೆ ತುಂಬಾ ಕೀಳ್ಮಟ್ಟದ್ದು. ಚಾಲುಕ್ಯ ಶೈಲಿಯ ಅಂಶಗಳೂ ಇಲ್ಲಿವೆಯಾದ್ದರಿಂದ ಇದು ಮಿಶ್ರಣ ಶೈಲಿ. ಬಳಸಿರುವುದು ಪದರಕಲ್ಲು, ಪಲ್ಲವರು ಬಳಸಿದ ಬೆಣಚು ಕಲ್ಲಲ್ಲ. ಇವುಗಳ ಕಾಲ ೭–೮ನೆಯ ಶತಮಾನಗಳ ಪೂರ್ವಾ

ರ್ಥ. ಬಹುಶಃ ವೆಂಗಿಯ ಚಾಲುಕ್ಯರು ಇವುಗಳ ಕರ್ತೃಗಳು ಎಂಬುದೊಂದು ಅಭಿಪ್ರಾಯವಿದೆ. ಆದರೆ ಇದರ ಕಾಲವನ್ನು ೫ನೆಯ ಶತಮಾನದಷ್ಟು ಹಿಂದಕ್ಕೆ ತಳ್ಳಿ ವಿಷ್ಣುಕುಂಡಿ ಮನೆತನದ ಮೊದಲನೆಯ ಮಾಧವವರ್ಮ ಇದರ ಕರ್ತೃ ಎಂಬ ಊಹೆಯನ್ನು ಮಾಡಲಾಗಿದ್ದರೂ ಈ ವಾದದಲ್ಲಿ ಹೆಚ್ಚಿನ ಹುರುಳಿಲ್ಲವೆನ್ನಬೇಕಾಗುತ್ತದೆ. ಹೇಗೂ ಇವು ಬಾದಾಮಿಯ ಚಾಲುಕ್ಯರ ಶೈಲಿಯಿಂದ ಪ್ರಭಾವಿತವಾದವುಗಳೆಂದು ಹೇಳಬಹುದಾಗಿದೆ.

**ಕಲ್ಲು ಕಟ್ಟಡಗಳು**

ಇವಿಷ್ಟು ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಚಾಲುಕ್ಯ ಅರಸರಿಂದ ಕೊರೆಯಿಸಲ್ಪಟ್ಟ ಅಥವಾ ಅವರಿಂದ ಪ್ರಭಾವಿತವಾದ ಕರ್ನಾಟಕದಲ್ಲೂ ಹೊರಗೂ ಕಂಡುಬರುವ ಗುಹಾಲಯಗಳಿಗೆ ಸಂಬಂಧಿಸಿದ ಸೂಕ್ಷ್ಮ ವಿವರಗಳು. ಆದರೆ ಗುಹಾಲಯಗಳಿಗಿಂತಲೂ ಮಿಗಿಲಾಗಿ ಚಾಲುಕ್ಯರ ಕಾಲದಲ್ಲಿ ಕಲ್ಲಿನ ದೇವಾಲಯಗಳು ಕಟ್ಟಲ್ಪಟ್ಟವು. ಈ ಚಟುವಟಿಕೆ ಈಗಿನ ಕರ್ನಾಟಕದಲ್ಲಿ ಪ್ರಮುಖ ಕೇಂದ್ರಗಳಾಗಿದ್ದ ಐಹೊಳೆ, ಬಾದಾಮಿ, ಪಟ್ಟದಕಲ್ಲು, ಮಹಾಕೂಟ ಮುಂತಾದವುಗಳಿಗಷ್ಟೇ ಸೀಮಿತವಾಗಿರದೆ ಕರ್ನಾಟಕದ ಹೊರಗೆ, ಅಂದು ಕರ್ನಾಟಕದ ಅರಸರ ಅಧೀನಕ್ಕೆ ಒಳಪಟ್ಟಿದ್ದ ಆಂಧ್ರಪ್ರದೇಶದ ಮಹಬೂಬ ನಗರ ಜಿಲ್ಲೆಯ ಅಲಂಪುರ, ಪಾಪನಾಶನ, ಕರ್ನೂಲು ಜಿಲ್ಲೆಯ ಸತ್ಯವಾಲು, ಮಹಾನದಿ, ಪಂಚಲಿಂಗಾಲ, ಬಂಡಿತಾಂಡಪಾಡು ಮುಂತಾದ ಕಡೆಗಳಲ್ಲೂ ಕಾಣಿಸಿ ಕೊಂಡಿತು. ಇವುಗಳನ್ನು ಇಲ್ಲಿ ಆಲೋಚಿಸಬಹುದು. ಇವರ ದೇವಾಲಯಗಳು ನೂರಕ್ಕೂ ಹೆಚ್ಚು ಸಂಖ್ಯೆಯಲ್ಲಿವೆ. ಅವುಗಳಲ್ಲಿ ಬಹುಮಟ್ಟಿನದು ಹಿಂದೂ, ಅದರಲ್ಲೂ ಶೈವ ದೇವಾಲಯಗಳು. ಉಳಿದವು ಜೈನ ಬಸದಿಗಳು, ಬೌದ್ಧ ಚೈತ್ಯಾಲಯಗಳೆಂದು ಒಂದೆರಡನ್ನು ಗುರುತಿಸಲಾಗಿದೆ.

ಈ ಕಾಲದ ಲೌಕಿಕ ವಾಸ್ತುಶಿಲ್ಪದ ದೃಷ್ಟಿಯಿಂದ ನಾವು ಗಮನಿಸಬೇಕಾದುದು ಬಾದಾಮಿ ಮತ್ತು ಐಹೊಳೆಗಳಲ್ಲಿನ ಕೋಟೆಗಳು, ಬಾದಾಮಿಯಲ್ಲಿ ಬಾವನ್ ಬಂಡೆ ಕೋಟೆ ಎಂದು ಕರೆಯಲಾದ ಉತ್ತರ ದಿಕ್ಕಿನ ಕೋಟೆ ಪ್ರಾಚೀನವಾದುದು. ಮೊದಲನೆಯ ಪುಲಕೇಶಿ ಅಭೇದ್ಯವಾದ ಈ ಕೋಟೆಯನ್ನು ಕ್ರಿಸ್ತಶಕ ೫೪೩ರಲ್ಲಿ ಕಟ್ಟಿಸಿದುದಾಗಿ ಅಲ್ಲಿನ ಈತನ ಶಾಸನ ತಿಳಿಸುತ್ತದೆ. ಆದರೆ ಆ ಕಾಲದ್ದೆಂದು ಗುರುತಿಸಬಹುದಾದ ಯಾವ ಅವಶೇಷಗಳೂ ಉಳಿದಿಲ್ಲ. ಐಹೊಳೆಯ ಕೋಟೆಯೂ ಈಗ ಇಲ್ಲವಾದರೂ ಅಳಿದುಳಿದ ಅವಶೇಷಗಳಿಂದ ಅದರ ವಿನ್ಯಾಸದ ಬಗೆಗೆ ಊಹಿಸಬಹುದಾಗಿದೆ. ಯಾವುದೇ ವಿಧವಾದ ಬಂಧಕಗಳನ್ನು ಉಪಯೋಗಿಸದೆ ದೊಡ್ಡ ಕಲ್ಲುಗಳನ್ನು ಒಂದರ ಮೇಲೊಂದು ಜೋಡಿಸಿ ಕಟ್ಟಲಾದ ವೃತ್ತಾಕಾರದ ತಳವಿನ್ಯಾಸದ ಕೋಟೆಯ ಸುತ್ತಲೂ ಕಂದಕವಿದ್ದು ನಾಲ್ಕು ಮಹಾದ್ವಾರಗಳಲ್ಲಿ ಅಲ್ಲಲ್ಲಿ ಚೌಕಾಕಾರದ ಅಟ್ಟಣೆಗಳಿದ್ದಂತೆ ತೋರುತ್ತದೆ.

ಧಾರ್ಮಿಕ ಕಟ್ಟಡಗಳನ್ನು ಗಮನಿಸಿದಾಗ ಈ ಕಾಲದ ವಾಸ್ತುಶಿಲ್ಪ ಶೈಶವಾವಸ್ಥೆಯಲ್ಲಿತ್ತೆಂದು ಕಟ್ಟಡಗಳಿಗೆ ಬಳಸಲಾದ ದಪ್ಪಕಲ್ಲಿನ ಕಂಬಗಳು, ತೊಲೆಗಳು, ದೊಡ್ಡಚಪ್ಪಡಿಗಳ ಚಾವಣಿಗಳು ಸೂಚಿಸುತ್ತವೆ ಎಂಬುದು ಪರಿಣತರ ಅಭಿಪ್ರಾಯ. ಬಳಸಿದ ಸಾಮಗ್ರಿ, ಬಿಜಾಪುರ ಹಾಗೂ ಇತರ ಕಡೆ ದೊರೆತ ನಸುಗೆಂಪು ಅಥವಾ ತಿಳಿಹಳದಿ ಬಣ್ಣದ ಮರಳುಗಲ್ಲು. ಶೈಲಿಯನ್ನು ಗಮನದಲ್ಲಿರಿಸಿ ಬಾದಾಮಿಯ ಚಾಲುಕ್ಯರ ದೇವಾಲಯಗಳನ್ನು ಚಪ್ಪಟೆಯಾದ ಚಾವಣಿಯುಳ್ಳ ಮಂಟಪ ಶೈಲಿಯ ಹಾಗೂ ಗಜಪೃಷ್ಠಾಕಾರದ ಗುಡಿಗಳು, ದಾಕ್ಷಿಣಾತ್ಯ ವಿಮಾನ ಶಿಖರಗಳ ಗುಡಿಗಳು, ರೇಖಾನಾಗರ ಶಿಖರ ಎಂದು ಕರೆಯಲಾದ ಔತ್ತರೇಯ ಶೈಲಿಯ ಶಿಖರಗಳುಳ್ಳ ಪ್ರಾಸಾದಗಳು ಮತ್ತು ಕದಂಬ ನಾಗರಶೈಲಿ ಎಂದು ಕರೆಯಲಾದ ಕ್ರಮೇಣ ಕಿರಿದಾಗುತ್ತಾ ಹೋಗುವ ಸ್ತರಗಳುಳ್ಳ ಮೇಲೆ ಆಮಲಕಗಳನ್ನು ಜೋಡಿಸಿದ ಶಿಖರಗಳ ಗುಡಿಗಳು ಎಂದು ಪ್ರಮುಖವಾಗಿ ವಿಂಗಡಿಸಲಾಗಿದೆ. ಆದರೆ ಗುಡಿಗಳೊಂದೊಂದನ್ನೂ ಪ್ರತ್ಯೇಕವಾಗಿ ಪರೀಕ್ಷಿಸಿದಾಗ, ಇವು ಸಾಮನ್ಯ ಲಕ್ಷಣಗಳಾದರೂ, ಒಂದರ ವಿನ್ಯಾಸದ ಪ್ರಭಾವ ಮತ್ತೊಂದರ ಮೇಲೆ ಆಗಿರುವುದನ್ನು ನಾವು ಕಾಣುತ್ತೇವೆ. ಇವುಗಳಲ್ಲಿ ಅಧಿಷ್ಠಾನ, ಕಂಬಗಳು ಮತ್ತು ದ್ವಾರಬಂಧಗಳಲ್ಲಿ ಹೆಚ್ಚಿನ ವ್ಯತ್ಯಾಸಗಳು ಕಾಣಿಸುವುದಿಲ್ಲ. ಗರ್ಭಗೃಹದ ಸುತ್ತಲೂ ಪ್ರದಕ್ಷಿಣ ಪಥವಿರುವ (ಸಾಂಧಾರ) ಮಂಟಪಗಳ ಅಧಿಷ್ಠಾನ ಮಂಚಬಂಧ ಪದ್ಧತಿಯಲ್ಲಿದ್ದರೆ ಒಳಗಿನ ಗರ್ಭಗುಡಿ ಪದ್ಮಬಂಧದಲ್ಲಿರುತ್ತದೆ. ವಿಮಾನಶಿಖರಗಳ ಅಧಿಷ್ಠಾನಗಳು ಯಾವಾಗಲೂ ಪದ್ಮಬಂಧದಲ್ಲಿದ್ದರೆ ರೇಖಾನಾಗರ ವಿನ್ಯಾಸದ ಗುಡಿಗಳ ಗರ್ಭಗೃಹ ಪದ್ಮಬಂಧದಲ್ಲಿದ್ದು, ಸಭಾಮಂಟಪ ಮುಖಮಂಟಪಗಳು ಮಂಚಬಂಧದಲ್ಲಿರುತ್ತವೆ. ಕಂಬಗಳು ಬಹುಮಟ್ಟಿಗೆ ಚೌಕಾಕಾರದಲ್ಲಿದ್ದು ಅವುಗಳಲ್ಲಿ ಕೆಲವೊಮ್ಮೆ ಅಲಂಕೃತ ಪಟ್ಟಿಕೆಗಳನ್ನು ಕಾಣಬಹುದು. ಮೇಲಿನ ಭಾರವಾದ ಬೋದಿಗೆಗಳು ತರಂಗ ಅಥವಾ ಮುಷ್ಟಿಬಂಧಗಳನ್ನು ಹೊಂದಿರುತ್ತವೆ. ದ್ವಾರಬಂಧಗಳಲ್ಲಿ ಸಾಮಾನ್ಯವಾಗಿ ಮೂರು ಅಥವಾ ಐದು ಶಾಖೆಗಳಿದ್ದು ಅವುಗಳಲ್ಲಿ ವಿಶಿಷ್ಟವಾದ ಕೆತ್ತನೆಯ ಕೆಲಸವನ್ನು ಕಾಣುತ್ತೇವೆ. ಕೆಳಗಡೆ ದ್ವಾರಪಾಲಕರ, ಗಂಗಾಯಮುನೆಯರ, ಅಪ್ಸರದಂಪತಿಗಳ ವಿಗ್ರಹಗಳಿರುತ್ತವೆ. ಶಾಖೆಯಲ್ಲಿ ನಾಗನನ್ನು ಚಿತ್ರಿಸಿದರ ಮೇಲ್ಭಾಗದಲ್ಲಿ ಮಧ್ಯ ಈ ನಾಗರಕ್ಕೆ ಬಾಲಗಳನ್ನು ಹಿಡಿದಿರುವ ಗರುಡನ ವಿಗ್ರಹವಿರುತ್ತದೆ. ಗರುಡನ ವಿಗ್ರಹ ಯಾವುದೇ ಧರ್ಮದ ಪ್ರತೀಕವಾಗಿ ಕೆತ್ತಲಾಗಿರುವುದಿಲ್ಲ.

ಐಹೊಳೆಯನ್ನು ನಾವು ವಾಸ್ತುಶಿಲ್ಪದ ಬಯಲು ಪ್ರದರ್ಶನ ಶಾಲೆ ಎಂದು ಪರಿಗಣಿಸಬಹುದು. ಕಸಿನ್ಸ್ ತನ್ನ ಗ್ರಂಥದಲ್ಲಿ ಇಲ್ಲಿ ೭೦ ದೇವಾಲಯಗಳಿವೆ ಎಂದಿದ್ದರೂ, ಬಹಳಮಟ್ಟಿಗೆ ಇಲ್ಲಿನ (ಹಾಗೂ ಬಾದಾಮಿ, ಪಟ್ಟದಕಲ್ಲು ಮುಂತಾದ ಕಡೆಗಳ) ದೇವಾಲಯಗಳನ್ನು ಕೇಂದ್ರಪುರಾತತ್ವ ಇಲಾಖೆಯವರು ಸ್ವಚ್ಛಗೊಳಿಸಿ, ಜೀರ್ಣೋದ್ಧಾರಮಾಡಿದಾಗ ಒಟ್ಟು ೧೨೫ ಗುಡಿಗಳನ್ನು ಗುರುತಿಸಲಾಗಿದೆ. ಕಾಲಾನುಕ್ರಮದಿಂದ ಇಲ್ಲಿ ಪ್ರಾಚೀನ, ಬಾದಾಮಿ, ಚಾಲುಕ್ಯ ಮತ್ತು ನಂತರದ ಕಾಲದ ಗುಡಿಗಳೂ ಇವೆ. ಧಾರ್ಮಿಕವಾಗಿ ಜೈನ ಹಾಗೂ ಹಿಂದೂ ಸಂಪ್ರದಾಯಗಳಿಗೆ ಸೇರಿದ ಗುಡಿಗಳೆಂದೂ ಇವನ್ನು ವಿಂಗಡಿಸಲಾಗಿದೆ. ಈ ಸಂದರ್ಭದಲ್ಲಿ ಐಹೊಳೆಯ ಗುಡಿಗಳಿಗಿತ್ತಿರುವ ಹೆಸರುಗಳು ಸ್ವಾರಸ್ಯವಾಗಿವೆ ಎಂದು ಹೇಳಬಹುದು. ಇಲ್ಲಿನ ದುರ್ಗಾಗುಡಿಗೂ ದುರ್ಗಾದೇವಿಗೂ ಏನೂ ಸಂಬಂಧವಿಲ್ಲ. ದುರ್ಗ ಎಂದರೆ ಕೋಟೆಯ ಬಾಗಿಲಬಳಿ ಇರುವುದರಿಂದ ಇದಕ್ಕೆ ಆ ಹೆಸರು. ವಾಸ್ತವವಾಗಿ ಇದೊಂದು ವೈಷ್ಣವ ದೇವಾಲಯವಾಗಿದ್ದಿರಬಹುದು. ಬಹುಶಃ ಕೊಂತ–ದೇವರ ಮುಂದೆ ಹಿಡಿಯುವ ಪಂಜು–ಮನೆತನಕ್ಕೆ ಸೇರಿದವನೊಬ್ಬ ಕೊಂತಗುಡಿಗೆ ಸಮೀಪದಲ್ಲಿ ಅಥವಾ ಆ ಗುಡಿಯಲ್ಲಿಯೇ ವಾಸಿಸುತ್ತಿದ್ದಿರಬಹುದಾದ ಕಾರಣ ಕೊಂತಗುಡಿ ಎಂಬ ಹೆಸರು. ಇತ್ತೀಚೆಗೆ ಇದನ್ನು ಕುಂತೀಗುಡಿ ಎಂದು ಕೆಲ ಸಂಶೋಧಕರು ಹೆಸರಿಸಿದ್ದಾರೆ. ಲಾಡಖಾನ್ ಗುಡಿಯಲ್ಲಿ ಈ ಶತಮಾನದ ಆರಂಭದಲ್ಲಿ ಆ ಹೆಸರಿನ ಮಹಮದೀಯನೊಬ್ಬ ವಾಸಿಸುತ್ತಿದ್ದುದರಿಂದ ಅದಕ್ಕೆ ಆ ಹೆಸರು. ಎಣ್ಣೆಯವರು (ಗಾಣಿಗರು) ಕೆಲವು ಗುಡಿಗಳಲ್ಲಿ ಹಿಂದೊಮ್ಮೆ ವಾಸಿಸುತ್ತಿದ್ದು ಆ ಗುಡಿಗಳ ಗುಂಪು ಎಣಿಯಾರ್ ಗುಡಿಗಳಾಗಿವೆ. ಪುರಾತತ್ವ

ಇಲಾಖೆಯವರು ಇಲ್ಲಿನ ದೇವಾಲಯಗಳ ರಕ್ಷಣಾಕಾರ್ಯ ಆರಂಭಿಸುವ ಮುನ್ನ ಈ ಗ್ರಾಮದವರೇ ಇವುಗಳನ್ನು ವೈಯಕ್ತಿಕ ನಿವಾಸಗಳಾಗಿ ಪರಿವರ್ತಿಸಿಕೊಂಡು ಇಲ್ಲಿ ವಾಸಿಸುತ್ತಿದ್ದರು. ಈಗ ಇವುಗಳನ್ನು ಸರ್ಕಾರ ಸ್ವಾಧೀನಪಡಿಸಿಕೊಂಡು ಮನೆಗಳನ್ನು ಕೆಡವಿ ದೇವಾಲಯಗಳನ್ನು ಬೆಳಕಿಗೆ ತಂದು ದುರಸ್ತಿಕಾರ್ಯ ಕೈಗೊಂಡಿದೆ.

ಬಾದಾಮಿಯ ಚಾಲುಕ್ಯರ ಆರಂಭಕಾಲದ ಗುಡಿಗಳು ಹೊರನೋಟಕ್ಕೆ ಗುಡಿಗಳಂತೆಯೇ ಕಾಣಿಸುವುದಿಲ್ಲ. ಆಯಾಕಾರ ಅಥವಾ ಚೌಕಾಕಾರದ ತಳವಿನ್ಯಾಸವಿರುವ ಈ ಗುಡಿಗಳಲ್ಲಿ ಮೂಲತಃ ಕಂಡುಬರುವುದು ಒಂದು ದೊಡ್ಡ ಹಜಾರ ಮಾತ್ರ. ಇದರೊಳಗೆ ಹಿಂಬದಿಯ ಗೋಡೆಗಳಲ್ಲಿ ಗರ್ಭಗೃಹಗಳನ್ನು ಅಳವಡಿಸಲಾಗಿದೆ. ಇವು ದೇವಾಲಯಗಳ ವಿನ್ಯಾಸದಲ್ಲಿ ಪ್ರಯೋಗಾತ್ಮಕ ಆರಂಭಿಕ ಘಟ್ಟಗಳನ್ನು ಸೂಚಿಸುತ್ತವೆ. ಐಹೊಳೆಯ ಲಾಡಖಾನ್ ಗುಡಿ ಮತ್ತು ಕೊಂತಿಗುಡಿಗಳು ಈ ಕಾಲಕ್ಕೆ, ಸುಮಾರು ಐದನೆಯ ಶತಮಾನದ ಮಧ್ಯಭಾಗಕ್ಕೆ ಸೇರಿದವುಗಳು. ಇವೆರಡರಲ್ಲಿ ಲಾಡಖಾನ್ ಗುಡಿ ಪ್ರಾಚೀನತಮವೆಂಬ ಅಭಿಪ್ರಾಯವನ್ನು ಕೆಲವರು ಒಪ್ಪಿಲ್ಲ. ಅಲ್ಲದೆ ಇತ್ತೀಚೆಗೆ ಲಾಡಖಾನ್ ಗುಡಿಯ ಪಕ್ಕದಲ್ಲಿರುವ ಗೌಡರ ಗುಡಿಯ ತಳಪಾಯವು ಉತ್ಖನನದ ಸಂದರ್ಭದಲ್ಲಿ ಲಾಡಖಾನ್‌ಗುಡಿಯ ತಳಪಾಯಕ್ಕಿಂತಲೂ ಕೆಳಗಿದ್ದಂತೆ ಕಂಡುಬಂದುದರಿಂದ ಗೌಡರಗುಡಿಯೇ ಪ್ರಾಚೀನವೆಂಬ ಅಭಿಪ್ರಾಯವನ್ನು ಮುಂದೂಡಲಾಗಿದೆಯಾದರೂ ವಾಸ್ತುಶಿಲ್ಪದ ದೃಷ್ಟಿಯಿಂದ ಗೌಡರಗುಡಿ ನಂತರದ ಕಾಲದ್ದೆಂದು ಹೇಳಲು ಆಧಾರಗಳಿದ್ದಂತಿವೆ.

ಹೊರನೋಟಕ್ಕೆ ಲಾಡಖಾನ್ ಗುಡಿ ಒಂದು ಸಭಾಮಂಟಪವಿದ್ದಂತೆ ತೋರುತ್ತದೆ. ಒಳಬದಿಯಲ್ಲಿ ಚೌಕಾಕಾರದ ಒಂದು ಮಂಟಪ ಹಾಗೂ ಅದರ ಮುಂದೆ ಅಗಲವಾದ ಮುಖಮಂಟಪ ಒಳಗಿನ ಮಂಟಪ (ಅಥವಾ ಹಜಾರ)ದಲ್ಲಿ ಹೊರಗೋಡೆಗಳಿಗೆ ಸಮಾನಂತರವಾಗಿರುವ ನಾಲ್ಕು ಕಂಬಗಳ ಎರಡು ಚೌಕಗಳಿದ್ದು ಇದು ಒಂದೇ ಕೇಂದ್ರದ ಮೂರು ಚೌಕಗಳ ಮಂಟಪದಂತಾಗಿದೆ. ಕಂಬಗಳು ಸದೃಢವೂ ಸ್ಥೂಲವೂ ಆಗಿದ್ದು, ಮೂಲತಃ ಮರದಲ್ಲಿ ಮಾಡಲಾದ ಮಾದರಿಗಳನ್ನು ನೋಡಿಕೊಂಡು ಈ ಕಂಬಗಳನ್ನು ಕಡೆದಂತೆ ತೋರುತ್ತದೆ. ದೇವಾಲಯದ ಗೋಡೆಗಳನ್ನು ಗಮನಿಸಿದರೆ ಮೊದಲು ಅಲ್ಲಿ ಕಂಬಗಳು ಮಾತ್ರ ಇದ್ದು ಬಳಿಕ ಚಪ್ಪಡಿಗಳಿಂದಲೂ ಜಾಲಂದರಗಳಿಂದಲೂ ಗೋಡೆಯನ್ನು ಪೂರ್ಣಗೊಳಿಸಿದಂತೆ ಅನಿಸುತ್ತದೆ. ಹಜಾರದ ಹಿಂಭಾಗದ ಗೋಡೆಗೆ ಸೇರಿದಂತೆ ಚಿಕ್ಕ ಆಯಾಕಾರದ ಗರ್ಭಗುಡಿ ಇದೆ. ಮಂಟಪದ ಮಧ್ಯದ ನಾಲ್ಕುಕಂಬಗಳ ಮೇಲೆ ಬೋದಿಗೆಯ ತೊಲೆಗಳಿವೆ. ಗೋಡೆಗಳ ನಡುವಣ ಜಾಲಂದರಗಳ ಮೂಲಕ ಒಳಹಜಾರಕ್ಕೆ ಬೆಳಕು ಬರುತ್ತದೆ. ಈ ನಡುವಣ ಭಾಗ ಬಿಟ್ಟು ಉಳಿದ ಮಾಳಿಗೆ ಹೊರಭಾಗಕ್ಕೆ ಇಳಿಜಾರಾಗಿದೆ. ಈ ಚಾವಣಿಗೆ ಚಪ್ಪಡಿಗಳನ್ನು ಇಳಿಜಾರಾಗಿರುವಂತೆ ಜೋಡಿಸಿ ಮಧ್ಯದ ಸಂದುಗಳನ್ನು ಮುಚ್ಚಲು ಉದ್ದ ಚಪ್ಪಡಿಗಳನ್ನು ಬಳಸಿದೆ. ಇಂತಹ ಚಾವಣಿಯ ರಚನೆ ಇಲ್ಲಿ ಮೊದಲ ಬಾರಿಗೆ ಕಂಡುಬಂದಿದ್ದು ಕ್ರಮೇಣ ಈ ವಿಧಾನ ಹೆಚ್ಚಾಗಿ ಬಳಕೆಗೆ ಬಂದಿತು. ಕೆಳಗಿನ ಗರ್ಭಗೃಹಕ್ಕೆ ಸರಿಯಾಗಿ ಮೇಲಿನ ಮಾಳಿಗೆಯಲ್ಲೂ ಆಯಾಕಾರದ ಒಂದು ಗರ್ಭಗುಡಿಯಿದ್ದು ಮಾಳಿಗೆಯ ಮೇಲೆ ಹೋಗಲು ಮಂಟಪದ ಎಡಕ್ಕೆ ಕಂಬಗಳು ಮತ್ತು ತೊಲೆಗಳಿಂದ ಪ್ರತ್ಯೇಕಿಸಲ್ಪಟ್ಟ ಭಾಗದಲ್ಲಿ ಕಲ್ಲಿನ ಏಣಿಯನ್ನು ಕಡೆದು ಮೇಲೆ ರಂಧ್ರವನ್ನು ಕೊರೆದಿದೆ. ಮೇಲಿನ ಗರ್ಭಗೃಹವು ಮುಂದೆ ಶಿಖರವಾಗಿ ರೂಪುಗೊಂಡಿತೆಂಬುದೊಂದು ಊಹೆ. ಮೇಲಿನ ಗರ್ಭಗೃಹದ ಹೊರಗೋಡೆಗಳ ಮೇಲೆ ಅರೆಗಂಬಗಳು ಮತ್ತು ಕೆಲವು ಶಿಲ್ಪಾಲಂಕರಣಗಳು ಇವೆ. ಮುಂದಿನ ಮುಖಮಂಟಪದ ಮೂರುಸಾಲುಗಳಲ್ಲಿ ಒಟ್ಟು ೧೨ ಕಂಬಗಳಿವೆ. ಪಕ್ಕಕ್ಕಿರುವ ಕಂಬಗಳನ್ನು ಕೂಡಿಸಿ ಪ್ರಾಕಾರವನ್ನು ಕಟ್ಟಿದೆ. ಕಂಬದ ಹೊರಮುಖದಲ್ಲಿ ಸಮೃದ್ಧಿಸೂಚಕ ಚಿಹ್ನೆಯಾದ ಪೂರ್ಣ ಕುಂಭಗಳನ್ನು ಕೆತ್ತಿದೆ. ಕಂಬಗಳ ಮೇಲೆ ಅನೇಕ ಮಿಥುನ ಶಿಲ್ಪಗಳನ್ನು ಅಳವಡಿಸಲಾಗಿದೆ. ಗರ್ಭಗೃಹದ ಲಲಾಟಬಿಂಬದಲ್ಲಿ ಪುರುಷಾಕಾರದ ಗರುಡ ವಿಗ್ರಹವಿದೆ. ಒಳಗೆ ಶಿವಲಿಂಗ. ನಡುಪಿನ ಚೌಕದಲ್ಲಿ ನಂದಿಯ ವಿಗ್ರಹವೂ ಇರುವುದರಿಂದ ಇದೊಂದು ಶಿವಾಲಯವೆಂದು ತೋರುತ್ತದೆ.

ಕೊಂತಿಗುಡಿ ಮೂರುಗುಡಿಗಳ ಒಂದು ಗುಂಪು. ಪೂರ್ವಪಶ್ಚಿಮಾಭಿಮುಖವಾಗಿರುವ ಒಂದರ ಎದುರು ಇನ್ನೊಂದಿರುವ ಎರಡು ಆಲಯಗಳನ್ನು ಕಂಬಗಳ ಮಾಳಿಗೆ ಕೂಡಿಸಿದೆ. ಪೂರ್ವಾಭಿಮುಖದ ಗುಡಿಗೆ ಹೊಂದಿಕೊಂಡಂತೆ ಮೂರನೆಯ ಗುಡಿಯಿದೆ. ಮೊದಲೆರಡು ಗುಡಿಗಳಲ್ಲಿ ಮುಖಮಂಟಪ, ಸಭಾಮಂಟಪ, ಪ್ರದಕ್ಷಿಣಾಪಥಗಳಿಲ್ಲ. ಪೂರ್ವಾಭಿಮುಖದ ಗುಡಿಯ ಮುಂದಿನ ಗೋಡೆಗೆ ಚೌಕಾಕಾರದ ಆರುಕಂಬಗಳಿವೆ. ಇವುಗಳ ಮೇಲ್ಭಾಗದಲ್ಲಿ ಮುಮ್ಮುಖದ ಬೋದಿಗೆಗಳಿವೆ. ಹಜಾರದಂತಿರುವ ಒಳಭಾಗದಲ್ಲಿ ಮಾಳಿಗೆಯನ್ನು ಆಧರಿಸಿ ನಾಲ್ಕು ಕಂಬಗಳು ಎರಡು ಸಾಲುಗಳಲ್ಲಿ ನಿಂತಿವೆ. ಹಿಂದಿನ ಸಾಲಿನ ಮಧ್ಯದ ಎರಡು ಕಂಬಗಳ ನಡುವೆ ಗರ್ಭಗೃಹವಿದೆ. ಈ ಎರಡು ಕಂಬಗಳಲ್ಲಿ ದ್ವಾರಪಾಲಕರ ವಿಗ್ರಹಗಳಿವೆ. ಇಲ್ಲಿನ ಕಂಬಗಳಲ್ಲಿ ಅನೇಕ ಮೂರ್ತಿಶಿಲ್ಪಗಳು ಹಿರಣ್ಯಕಶಿಪುವನ್ನು ತೊಡೆಯ ಮೇಲೆ ಮಲಗಿಸಿಕೊಂಡು ಹೊಟ್ಟೆಯನ್ನು ಬಗೆಯುತ್ತಿರುವ ನರಸಿಂಹ, ತ್ರಿಪುರಾಂತಕ ಶಿವ, ಅರ್ಧನಾರೀಶ್ವರ, ಗಜಸಂಹಾರಮೂರ್ತಿ ಇತ್ಯಾದಿ ಕೆತ್ತಲ್ಪಟ್ಟಿದೆ. ಗರ್ಭಗೃಹದ ದ್ವಾರಬಂಧದಮೇಲೆ ಗರುಡನ ವಿಗ್ರಹ, ದ್ವಾರಬಂಧದಲ್ಲಿ ಅಲಂಕರಣಗಳು ಹೊರಗೋಡೆಗಳ ಮೂಡುಗಳಲ್ಲಿ ವಿಷ್ಣುವಿನ ನೃತ್ಯ, ಶಿವನ ವಿಗ್ರಹಗಳು, ಗರ್ಭಗೃಹದ ಒಳಮಾಳಿಗೆಯ ದೂಲಗಳ ಮೇಲೆ ಉಮಾಮಹೇಶ್ವರ, ಅನಂತಾಸೀನವಿಷ್ಣು, ಹಾಗೂ ಕಮಲಾಸೀನಬ್ರಹ್ಮನ ವಿಗ್ರಹಗಳನ್ನು ಬಿಡಿಸಲಾಗಿದೆ. ಈ ವಿಗ್ರಹಗಳು ಭವ್ಯವಾಗಿದ್ದರೂ ಅವುಗಳಲ್ಲಿ ಲಾಲಿತ್ಯವಿಲ್ಲ. ಗರ್ಭಗೃಹ ಎತ್ತರವಾಗಿದೆ. ಒಳಗೆ ಈಗ ಯಾವ ವಿಗ್ರಹವೂ ಇಲ್ಲ. ಪಶ್ಚಿಮಾಭಿಮುಖವಾಗಿರುವ ಎರಡನೆಯ ಗುಡಿಯನ್ನು ದ್ವಾರಮಂಟಪವೊಂದು ಮೊದಲನೆಯ ಗುಡಿಯೊಂದಿಗೆ ಸೇರಿಸಿದೆ. ನಾಲ್ಕು ಕಂಬಗಳ ಈ ಮಂಟಪದ ಮೇಲಿನ ನಾಲ್ಕು ತುದಿಗಳಲ್ಲೂ ಮುಂಚಾಚಿದ ಸೂರುಗಳಿವೆ. ಕಂಬದಿಂದ ಹೊರಬಿದ್ದ ಚಾಚುಪೀಠ ಮಂಟಪದ ಮಾಳಿಗಗೆ ಆಸರೆಯಾಗಿದ್ದು ಇಲ್ಲಿ ಸಿಂಹಮುಖದ ಯಾಳಿಯನ್ನು ಕಾಣುತ್ತೇವೆ. ಈ ದೇವಾಲಯದ ಮಂಟಪದ ಮೇಲೆ ಚೌಕಾಕಾರದ ಕಟ್ಟಡವೊಂದು ಎದ್ದಿದೆ. ಬಹುಶಃ ಇದು ನಂತರ ಕಾಣಿಸಿಕೊಳ್ಳುವ ಶಿಖರಗಳ ಆರಂಭದ ಘಟ್ಟ. ಇದರ ನಾಲ್ಕು ಕಡೆಗಳಲ್ಲಿಯೂ ಶೈವ ವೈಷ್ಣವ ಸಂಪ್ರದಾಯದ ವಿಗ್ರಹಗಳನ್ನು ಕೆತ್ತಿದೆ. ಇಲ್ಲಿಗೆ ಬರಲು ದೇವಾಲಯದ ಹೊರಗಡೆ ಉತ್ತರ ಭಾಗದಲ್ಲಿ ಕಲ್ಲಿನ ಏಣಿಯನ್ನು ಕೊರೆದಿದೆ. ಈ ಗುಡಿಯಲ್ಲೂ ಹಲವಾರು ದೇವ ದೇವತೆಗಳ ವಿಷ್ಣು, ಉಮಾಮಹೇಶ್ವರ, ಸೂರ್ಯ ಇತ್ಯಾದಿ ವಿಗ್ರಹಗಳನ್ನು ಬಿಡಿಸಲಾಗಿದೆ. ಗರ್ಭಗುಡಿಯ ದಕ್ಷಿಣದ ಗೋಡೆಗಂಬದಲ್ಲಿ ಮಹಿಷಾಸುರಮರ್ದಿನಿಯ ವಿಗ್ರಹವಿದೆ. ಒಳಮಾಳಿಗೆಯ ಅಂಕಣದಲ್ಲಿ ಅಷ್ಟದಿಕ್ಪಾಲಕರ ವಿಗ್ರಹಗಳನ್ನು ಕೆತ್ತಲಾಗಿದೆ. ಮೂರನೆಯ ಗುಡಿಯ ವಿನ್ಯಾಸದಲ್ಲಿ ಸ್ವಲ್ಪ ಮಟ್ಟಿನ ಮಾರ್ಪಾಡಿದೆ. ಆರು ಕಂಬಗಳ ಹಜಾರವನ್ನು ದಾಟಿ ಒಳಗೆ ಬಂದರೆ ಅಲ್ಲಿ ನಾಲ್ಕು ಜಾಲಂದರಗಳು ಹಾಗೂ ಕಂಬಗಳ ಇನ್ನೊಂದು ಗೋಡೆಯನ್ನು ಕಾಣುತ್ತೇ

ವೆ. ಬಹುಶಃ ಮೂಲತಃ ಈ ಗೋಡೆ ಇರದೆ ಅನಂತರ ಮಾಡಿದ ಯೋಜನೆಯ ಫಲವೆನಿಸುತ್ತದೆ. ಇದರ ಪರಿಣಾಮವಾಗಿ ಗರ್ಭಗೃಹದ ಮುಂದೆ ಸಭಾಮಂಟಪವನ್ನು ಕಟ್ಟುವ ಕಲ್ಪನೆ ಉಂಟಾದಂತೆ ತೋರುತ್ತದೆ. ಈ ಗುಡಿಗಳಲ್ಲಿ ಖಚಿತವಾದ ವಿನ್ಯಾಸವಿಲ್ಲದಿರುವುದು, ಸರಳವಲ್ಲದ ರಚನೆ, ಕುಬ್ಜಾಕಾರದ ಒರಟು ಕಂಬಗಳು ಈ ಗುಡಿಗಳ ಗುಂಪು ಪ್ರಾಚೀನವೆಂಬ ಊಹೆಗೆ ಎಡೆಮಾಡಿದೆ.

ಚಾಲುಕ್ಯ ದೇವಾಲಯಗಳ ವಿನ್ಯಾಸದಲ್ಲಿ ಇನ್ನೊಂದು ಹೆಜ್ಜೆಯನ್ನು ಗೌಡರ ಗುಡಿಯಲ್ಲಿ ಕಾಣುತ್ತೇವೆ. ಇದರಲ್ಲಿ ಗರ್ಭಗುಡಿಯನ್ನು ಸಭಾಮಂಟಪದಿಂದ ಪ್ರತ್ಯೇಕಿಸಲಾಗಿರುವುದಲ್ಲದೆ ಅದಕ್ಕೊಂದು ಪ್ರದಕ್ಷಿಣಾಪಥವನ್ನೂ ಅಳವಡಿಸಲಾಗಿದೆ. ಈ ಗುಡಿಯ ತಳಪಾಯಕ್ಕೂ ಕೆಳಗೆ ಮತ್ತೊಂದು ಕಟ್ಟಡದ ಅವಶೇಷ ಇತ್ತೀಚಿನ ಉತ್ಖನನದಲ್ಲಿ ಕಂಡುಬಂದ ಕಾರಣ ಲಾಡಖಾನ್ ಗುಡಿಗೂ ಪ್ರಾಚೀನವಾದುದೆಂಬ ಹೇಳಿಕೆಯನ್ನು ಪುರಾತತ್ವ ಇಲಾಖೆಯ ಅಧಿಕಾರಿಗಳು ನೀಡಿದ್ದಾರೆ. ಆದರೆ ಹೆಚ್ಚಿನ ವಿವರಗಳು ಲಭ್ಯವಾಗಿಲ್ಲ. ಈ ಆಲಯದ ಇಳಿಜಾರಾದ ಮಾಳಿಗೆಯನ್ನು ಲಾಡಖಾನ ಗುಡಿಯಲ್ಲಿದ್ದಂತೆ ೧೬ ಚೌಕಾಕಾರದ ಘನವಾದ ಕಂಬಗಳು ಆಧರಿಸಿ ನಿಂತಿವೆ. ಸಭಾಮಂಟಪದ ಮಧ್ಯದಲ್ಲಿನ ನಾಲ್ಕು ಕಂಬಗಳು ಸಭಾಮಂಟಪದ ಮಧ್ಯಭಾಗವನ್ನು ಇಕ್ಕೆಲದ ಹಜಾರಗಳಿಂದ ಪ್ರತ್ಯೇಕಗೊಳಿಸಿದಂತಿವೆ. ಗರ್ಭಗೃಹದ ದ್ವಾರ ಚಿತ್ರಮಯವಾಗಿದೆ. ಬಾಗಿಲುವಾಡದ ಹಾಸುಗಲ್ಲಿನಲ್ಲಿ ಮಾನವಾಕಾರದ ಗರುಡನ ವಿಗ್ರಹವಿದೆ. ಬಾಗಿಲ ಎರಡೂ ಪಕ್ಕದ ಗೋಡೆಗಂಬಗಳ ಕಂಠದಲ್ಲಿ ಪೂರ್ಣಕಳಶಗಳಿವೆ. ಇದರ ಮೇಲಿನ ಬೋದಿಗೆಗಳು ದ್ರಾವಿಡಶೈಲಿಯ ಶಿಖರಗಳನ್ನು ಹೊತ್ತಿವೆ. ಇವುಗಳ ಪಡುವಣ ಚೈತ್ಯದಲ್ಲಿ ಮಹಾಲಕ್ಷ್ಮಿಯ ಮೂರ್ತಿಯನ್ನು ಕೆತ್ತಿದೆ. ಕಮಲದ ಮೇಲೆ ಪದ್ಮಾಸನದಲ್ಲಿ ಕುಳಿತ ಈಕೆಯ ಎರಡೂ ಕಡೆಗಳಲ್ಲೂ ಒಂದೊಂದು ಆನೆ ತನ್ನ ಸೊಂಡಿಲಿನಿಂದ ಜಲವನ್ನು ಆಕೆಯ ಮೇಲೆ ಸಿಂಪಡಿಸುತ್ತಿದೆ. ಗರ್ಭಗೃಹದೊಳಗೆ ಈಗ ಯಾವ ವಿಗ್ರಹವೂ ಇಲ್ಲ. ಶೈಲಿಯ ದೃಷ್ಟಿಯಿಂದ ಇದು ಲಾಡ್‌ಖಾನ ಗುಡಿಗಿಂತ ಹೆಚ್ಚು ಪರಿಷ್ಕೃತ ರೀತಿಯದ್ದಾಗಿದ್ದು ಇದು ಅನಂತರದಲ್ಲಿ ಕಟ್ಟಿದ್ದೆನ್ನುವ ಭಾವನೆ ಮೂಡುತ್ತದೆ.

ವಾಸ್ತುಶಿಲ್ಪದ ಬೆಳವಣಿಗೆಯ ದೃಷ್ಟಿಯಿಂದ ತಾರಬಸಪ್ಪನ ಗುಡಿ ಗಮನಾರ್ಹ. ಎತ್ತರದಲ್ಲಿರುವ ಈ ಗುಡಿಯ ಮುಖಮಂಟಪಕ್ಕೆ ಹೋಗಲು ಮೆಟ್ಟಿಲುಗಳಿವೆ. ಮುಖಮಂಟಪವನ್ನು ಆಧರಿಸಿ ನಾಲ್ಕು ಕಂಬಗಳಿವೆ. ಸಭಾಮಂಟಪದ, ಗರ್ಭಗೃಹದ ದ್ವಾರಗಳ ಮೇಲೆ ಗರುಡನ ಚಿತ್ರಗಳಿವೆ. ಸಭಾ ಮಂಟಪದ ಮಾಳಿಗೆಯನ್ನು ಮಧ್ಯದ ನಾಲ್ಕು ಕಂಬಗಳು ಮತ್ತು ಹಿಂಬದಿಯ ಗೋಡೆಗಳಿಗೆ ಹೊಂದಿದ ಎರಡೆರಡು ಗೋಡೆಗಂಬಗಳು ಹೊತ್ತಿವೆ. ಈ ಚೌಕಾಕಾರದ ಕಂಬಗಳಿಗೆ ಪೀಠಗಳಿಲ್ಲ. ಮೇಲ್ಭಾಗದ ಪೀಠಪಂಕ್ತಿಗಳಲ್ಲೂ ಚೈತ್ಯದ ಕಮಾನುಗಳನ್ನು ಕೊರೆದಿದೆ. ಗರ್ಭಗುಡಿಯ ಎರಡೂ ಪಕ್ಕಗಳಲ್ಲಿರುವ ಗೋಡೆಗಂಬಗಳ ಬೋದಿಗೆಗಳಲ್ಲಿನ ಚೈತ್ಯಗಳ ಮೇಲೆ ಆಮಲಕದ ಬೋದಿಗೆಗಳೂ ಮೇಲುತ್ತಿಯಲ್ಲಿ ಕಲಶಾಲಂಕರಣವೂ ಇರುವುದೊಂದು ವಿಶೇಷ. ಆದರೆ ಈ ವರೆಗೆ ಗಮನಿಸಿದ ಗುಡಿಗಳಿಗಿಂತ ಶಿಲ್ಪಿ ಪ್ರಗತಿಯ ಹೆಜ್ಜೆಯೊಂದನ್ನು ಇಲ್ಲಿಟ್ಟಿದ್ದಾನೆ. ಇಲ್ಲಿ ಗರ್ಭಗೃಹ ಸಭಾಮಂಟಪದಿಂದ ಪ್ರತ್ಯೇಕವಾಗಿದೆ. ಇದು ಸುಮಾರು ೬–೭ನೆಯ ಶತಮಾನದ ಕಟ್ಟಡ. ಸಮೀಪದ ಸೂರ್ಯನಾರಾಯಣ ಗುಡಿಯಲ್ಲೂ ಇಂತಹುದೇ ರಚನೆ ಇದ್ದರೂ ಇಲ್ಲಿ ಗರ್ಭಗೃಹದೊಳಗೆ ನಾಲ್ಕು ಕಂಬಗಳಿರುವುದೊಂದು ವೈಶಿಷ್ಟ್ಯ. ಇವು ಗರ್ಭಗೃಹದ ಮಾಳಿಗೆಗೆ ಆಧಾರಗಳು. ಮುಂದಿನ ಕಂಬಗಳ ಕೆಳಭಾಗ ಚೌಕವಾಗಿದ್ದು ಮೇಲುಗಡೆ ಅಷ್ಟಕೋನದ ದಿಂಡುಗಳಿವೆ. ಗರ್ಭಗೃಹದೊಳಗೆ ಹೀಗೆ ಕಂಬಗಳನ್ನು ಐಹೊಳೆಯ ಬೇರೆ ಯಾವ ಸಮಕಾಲೀನ ಅಥವಾ ನಂತರದ ಗುಡಿಗಳಲ್ಲೂ ಕಾಣಲಾಗದು . ಹುಚ್ಚಪ್ಪಯ್ಯನ ಗುಡಿಯ ಹೊರಗೋಡೆಗಳನ್ನು ನೋಡಿದಾಗ ಒಳಗೆ ಶಿಲ್ಪಗಳಿರಬಹುದೆಂಬ ಕಲ್ಪನೆಯೂ ಬರುವುದಿಲ್ಲ. ಬೋಳುಕಲ್ಲುಗಳನ್ನು ಒಂದರ ಮೇಲೊಂದಾಗಿ ಜೋಡಿಸಿಟ್ಟಂತೆ ತೋರುತ್ತದೆ. ದೇವಾಲಯ ಮೂರು ಸ್ತರಗಳಲ್ಲಿರುವ ಅಲಂಕೃತ ಪೀಠದ ಮೇಲಿದೆ. ಗರ್ಭಗೃಹದ ಮೇಲೆ ರೇಖಾನಗರ ಶಿಖರವಿದೆ. ಇದನ್ನು ಅಲಂಕೃತ ಸ್ತರಗಳಾಗಿ ವಿಂಗಡಿಸಿ ಎರಡೆರಡು ಸ್ತರಗಳ ನಡುವೆ ನಾಲ್ಕು ಮೂಲೆಗಳಲ್ಲಿ ನೆಲ್ಲಿಕಾಯಿಯಂತಹ ಆಮಲಕ ಶಿಲೆಗಳನ್ನು ಜೋಡಿಸಲಾಗಿದೆ. ಶಿಖರದ ಮೇಲಿದ್ದಿರಬಹುದಾದ ಆಮಲಕ ಶಿಲೆ ಈಗ ಇಲ್ಲ. ಪಶ್ಚಿಮಾಭಿಮುಖವಾಗಿರುವ ಹುಚ್ಚಿಮಲ್ಲಿ ಗುಡಿಯ ರಚನೆಯಲ್ಲಿ ಮತ್ತೊಂದು ವೈಶಿಷ್ಟ್ಯವನ್ನು ಗಮನಿಸಬಹುದು. ಇದರಲ್ಲಿ ಸಭಾ ಮಂಟಪಕ್ಕೂ ಗರ್ಭಗೃಹಕ್ಕೂ ನಡುವೆ ಒಂದು ಅಂತರಾಳವನ್ನು ಅಳವಡಿಸಲಾಗಿದೆ. ದೇವಾಲಯಕ್ಕೆ ೨ ಅಡಿಗಳ ಎತ್ತರದ ತಳಪಾಯವಿದ್ದು ಅದು ಒಂದು ವೇದಿಕೆಯ ಮೇಲಿದ್ದಂತಿದೆ. ಅಂತರಾಳ ಹಾಗೂ ಗರ್ಭಗೃಹಗಳೂ ಸಹ ಸಭಾಮಂಟಪಕ್ಕಿಂತ ಎತ್ತರವಾಗಿದ್ದು ಅದರ ಸೊಗಸನ್ನು ಇಮ್ಮಡಿಸಿವೆ. ಜಾಲಂಧರಗಳ ಗೋಡೆ ಅಂತರಾಳವನ್ನು ರಂಗಮಂಟಪದಿಂದ ಬೇರ್ಪಡಿಸಿದೆ. ಇದರ ಎರಡು ಪಕ್ಕಗಳಲ್ಲಿರುವ ಬಾಗಿಲುಗಳು ಗರ್ಭಗೃಹದ ಸುತ್ತಲೂ ಪ್ರದಕ್ಷಿಣೆಗೆ ದಾರಿ ಮಾಡಿವೆ. ಗರ್ಭಗೃಹ ಚೌಕಾಕಾರವಾಗಿರುವುದೂ ಗಮನಾರ್ಹವಾದ ಅಂಶವೇ. ಇದರ ಮೇಲೆ ರೇಖಾನಾಗರ ಶಿಖರವಿದೆ. ಶಿಖರದ ಮುಂದಿನ ಚೈತ್ಯದಲ್ಲಿ ತಾಂಡವ ಶಿವನ ವಿಗ್ರಹವಿದೆ. ಸುಮಾರು ೬–೭ನೆಯ ಶತಮಾನಗಳಲ್ಲಿ ಇದು ರಚಿತವಾಗಿರಬಹುದು.

ಸುಮಾರಾಗಿ ಇದೇ ವಿನ್ಯಾಸದ, ಆದರೆ ಶಿಖರವಿಲ್ಲದ, ಹೆಚ್ಚು ವಿಸ್ತಾರವಾದ ಗುಡಿ ಮೇಗುಡಿ ಎಂದು ಪ್ರಸಿದ್ಧವಾದ, ರವಿಕೀರ್ತಿ ಕ್ರಿಸ್ತಶಕ ೬೩೪ರಲ್ಲಿ ಕಟ್ಟಿಸಿದ, ಬಸದಿ. ಇದೂ ಸಹ ಎತ್ತರದ ಜಗುಲಿಯ ಮೇಲಿದ್ದು ಮುಖಮಂಟಪದ ಪಾಗಾರ ಮತ್ತು ಅಡಿಪಾಯಗಳ ನಡುವಣ ಸ್ಥಳದಲ್ಲಿ ಸುತ್ತಲೂ ಅಲಂಕಾರ ಪಟ್ಟಿಯಿದೆ. ಗರ್ಭಗೃಹ, ಸಭಾಮಂಟಪ, ಮುಖಮಂಟಪಗಳೊಂದೊಂದರ ನಡುವೆಯೂ ಗೋಡೆಗಳಿವೆ. ಗರ್ಭಗೃಹದ ಸುತ್ತಲೂ ಪ್ರದಕ್ಷಿಣಾಪಥ ಬರುವ ಹಾಗೆ ಕಲ್ಲಿನ ಗೋಡೆಗಳನ್ನು ಕಟ್ಟಲಾಗಿದೆ. ಆದರೆ ಗರ್ಭಗೃಹದ ಮೂಲೆಗಳ ಗೋಡೆಗಳು ಹೊರಚಾಚಿರುವುದರಿಂದ ಈ ಚಾಚು ಗೋಡೆಗಳು ಹಾದಿಯನ್ನು ತಡೆಹಿಡಿಯುತ್ತವೆ. ಈ ಗರ್ಭಗೃಹದ ಮೇಲೆ ಇದರ ಗೋಡೆಗಳನ್ನೇ ಎಬ್ಬಿಸಿ ಕಟ್ಟಿದಂತೆ ಇನ್ನೊಂದು ಗರ್ಭಗೃಹವಿದೆ. ಮುಖಮಂಟಪದಲ್ಲಿರುವ ಕಲ್ಲಿನ ಏಣಿಯ ಮೂಲಕ ಮಾಳಿಗೆಯನ್ನೇರಿ ಈ ಗರ್ಭಗೃಹಕ್ಕೆ ಹೋಗಬಹುದು. ಕೆಳಗಿನ ಗರ್ಭಗೃಹದಲ್ಲಿ ವರ್ಧಮಾನ ಮಹಾವೀರನ ಮೂರ್ತಿ ಇದೆ.

ಇಲ್ಲಿನ ದೇವಾಲಯಗಳಲ್ಲೆಲ್ಲಾ ವಿಶಿಷ್ಟವಾದುದು ದುರ್ಗಾಗುಡಿ, ಬೌದ್ಧ ಚೈತ್ಯಾಗಾರಗಳಂತೆ ಗಜಪೃಷ್ಠಾಕಾರವನ್ನು ಹೊಂದಿರುವ ಗುಡಿ ಬಹುಶ: ದಕ್ಷಿಣಭಾರತದಲ್ಲೆಲ್ಲಾ ಇದೊಂದೇ ಎನ್ನಬಹುದು. ಮಹಾಕೂಟದಲ್ಲಿನ ಕಿರಿಯ ವಿಸ್ತಾರದ ಅನಲಂಕೃತ ಗುಡಿಯೊಂದು ಇಂತಹುದೇ ವಿನ್ಯಾಸ ಪಡೆದಿದೆ. ಚಾಲುಕ್ಯ ಶಿಲ್ಪಿ ಮೊದಲು ಅಲ್ಲಿ ಇಂತಹ ಪ್ರಯೋಗಮಾಡಿದಂತೆ ತೋರುತ್ತದೆ. ಆ ಗರ್ಭಗೃಹದ ಮುಂದೆ ನಾಲ್ಕು ಮಧ್ಯಕಂಬ

ಗಳುಳ್ಳ ಸಭಾಮಂಟಪ ಮತ್ತು ಮುಖಮಂಟಪಗಳಿವೆ. ಗರ್ಭಗುಡಿಯೊಳಗೆ ವರ್ತುಲಾಕಾರದ ಪೀಠದಲ್ಲಿ ದೊಡ್ಡ ಪ್ರಮಾಣದ ಲಿಂಗವಿದೆ. ದ್ವಾರದ ಅಡ್ಡ ಪಟ್ಟಿ ಪಕ್ಕದ ಉದ್ದಪಟ್ಟಿಗಳನ್ನೂ ಮೀರಿ ಚಾಚಿಕೊಂಡಿದೆ. ಗುಪ್ತರ ಕಾಲದ ದೇವಾಲಯಗಳ ಒಂದು ಲಕ್ಷಣ ಇದು. ಬಾಗಿಲುವಾಡದ ಪಕ್ಕದ ಶಾಖೆಗಳ ಕೆಳಗೆ ವಿಗ್ರಹವಿಲ್ಲ. ಈ ಆಲಯ ಸುಮಾರು ಕ್ರಿ. ಶ. ೫ನೆಯ ಶತಮಾನದ್ದೆನ್ನಲಾಗಿದೆ. ಎತ್ತರದ ಜಗುಲಿಯ ಮೇಲೆಗೋಡೆಗಳನ್ನು ಕಂಬಗಳನ್ನು ಎಬ್ಬಿಸಿದ ಐಹೊಳೆಯ ದುರ್ಗಾ ಗುಡಿಯನ್ನು ಪ್ರವೇಶಿಸಲು ಎರಡೂ ಪಕ್ಕದಲ್ಲಿ ಮೆಟ್ಟಲುಗಳಿವೆ. ಮೇಲೇರಿ ವೇದಿಕೆಗೆ ಬಂದರೆ ಅದಕ್ಕೆ ಹೊಂದಿದಂತೆ ಮುಖಮಂಟಪ, ಪಾಗಾರದ ನಾಲ್ಕು ಕಂಬಗಳನ್ನಾಧರಿಸಿ ನಿಂತಿದೆ. ಸಭಾಮಂಟಪದ ದ್ವಾರದಲ್ಲಿ ಪುಷ್ಪಗಳ, ಬಳ್ಳಿಗಳ, ಪೂರ್ಣ ಕಲಶಗಳ ಚಿತ್ರಗಳನ್ನು ಬಿಡಿಸಲಾಗಿದೆ. ಸಭಾಮಂಟಪವನ್ನು ನಾಲ್ಕು ಕಂಬಗಳು ಹೊರಗಿನ ಸುತ್ತು ಮಂಟಪದಿಂದ ಬೇರ್ಪಡಿಸಿವೆ. ಈ ಮೊಗಸಾಲೆ ಸಭಾಮಂಟಪ ಹಾಗೂ ಗರ್ಭಗೃಹಗಳನ್ನು ಸುತ್ತುವರಿದಿದೆ. ಮೊಗಸಾಲೆಯ ಹೊರಭಾಗಕ್ಕೆ ಹೊರಪಾಗಾರದ ಮೇಲಿನ ೩೨ ಕಂಬಗಳು ಆಸರೆಯಾಗಿವೆ. ಇದರ ಮಾಳಿಗೆ ನೀರು ನಿಲ್ಲದಂತಿರಲು ಇಳಿಜಾರಾಗಿದೆ. ಗರ್ಭಗೃಹದ ಮೇಲೆ ಶಿಖರ ಎದ್ದು ನಿಂತಿದೆ. ಪೀಠಗಳಿಲ್ಲದ ಚೌಕಾಕಾರದ ಕಂಬದ ಬೋದಿಗೆಗಳು ನಾಲ್ಕು ಅಡಿಗಳಷ್ಟು ಎತ್ತರವಾಗಿದ್ದು ಅಲಂಕಾರಪಟ್ಟಿಕೆಗಳಿಂದ ಕೂಡಿದೆ. ಐಹೊಳೆಯ ಗುಡಿಗಳಲ್ಲಿಯ ಅತ್ಯುತ್ತಮ ಮೂರ್ತಿಶಿಲ್ಪಗಳನ್ನು ಈ ಗುಡಿಯಲ್ಲಿ ಕಂಡರಿಸಲಾಗಿದೆ. ಪ್ರಣಯಾಸಕ್ತ ದಂಪತಿಗಳು, ನರಸಿಂಹ, ವೃಷಭವಾಹನ ಶಿವ, ಗರುಡಾಸೀನ ವಿಷ್ಣು, ವರಾಹ, ಹರಿಹರ, ಮಹಿಷಾಸುರಮರ್ದಿನಿಯರ ವಿಗ್ರಹಗಳು ಅಂದಿನ ಶಿಲ್ಪಕಲಾಚಾತುರ್ಯಕ್ಕೆ ಸಾಕ್ಷಿಯಾಗಿದೆ. ಈ ದೇವಾಲಯ ಸುಮಾರು ಕ್ರಿಸ್ತಶಕ ೬೦೦ಕ್ಕೂ ಹಿಂದಿನದೆಂದು ವಿದ್ವಾಂಸರೊಬ್ಬರು ಭಾವಿಸಿದ್ದಾರೆ.

## ವಿಶಿಷ್ಟ ಶೈಲಿ

೫ನೆಯ ಶತಮಾನದಿಂದ ೮ನೆಯ ಶತಮಾನದವರೆಗೆ ಬೆಳೆದು ಬಂದ ಈ ಶೈಲಿ–ಚಾಲುಕ್ಯ ಸಂಪ್ರದಾಯದ ಶೈಲಿ–ಪ್ರಯೋಗಾತ್ಮಕವೆಂದೂ ಐಹೊಳೆಯು ಈ ಸಂಪ್ರದಾಯ ಬೆಳೆದು ಬಂದ ಕೇಂದ್ರ – ತೊಟ್ಟಿಲು – ಎಂದೂ ಭಾವಿಸಲಾಗಿದೆ. ಇಲ್ಲಿನ ಗುಹಾಲಯಗಳಲ್ಲಿ ನಾವು ವಾಸ್ತುಶಿಲ್ಪಕ್ಕಿಂತಲೂ ದೇವದೇವತೆಗಳ ಹಿರಿಯ ಗಾತ್ರಗಳ ಉಬ್ಬುಶಿಲ್ಪಗಳಿಗೆ ಮಿಗಿಲಾದ ಪ್ರಾಶಸ್ತ್ಯ ನೀಡಿರುವುದನ್ನು ಗಮನಿಸುತ್ತೇವೆ. ಆರಂಭದ ವಾಸ್ತುಶಿಲ್ಪದಲ್ಲಿ ಗಾರೆ ಮುಂತಾದ ಯಾವುದೇ ಬಂಧಕ ಸಾಮಗ್ರಿಗಳನ್ನು ಬಳಸದೆ, ದೊಡ್ಡಕಲ್ಲಿನ ಚಪ್ಪಡಿಗಳನ್ನು ಪೇರಿಸಿ ಗೋಡೆಗಳನ್ನೆಬ್ಬಿಸುವ, ಅವನ್ನೇ ಕಂಬಗಳಿಗೂ ತೊಲೆಗಳಿಗೂ, ಚಾವಣಿಗಳಿಗೂ ಬಳಸುವ ತಂತ್ರವನ್ನು ಕಾಣುತ್ತೇವೆ. ಕ್ರಮೇಣ ೬–೭ನೆಯ ಶತಮಾನಗಳಲ್ಲಿ ದೇವಾಲಯಗಳಲ್ಲಿ ಪೂಜಾ ವಿಧಿ ವಿಧಾನಗಳನ್ನು ಶಾಸ್ತ್ರದ ಚೌಕಟ್ಟಿಗೆ ಒಳಪಡಿಸಿದಾಗ ಅದಕ್ಕೆ ಸರಿಹೊಂದುವ ವಾಸ್ತುಶೈಲಿಯನ್ನು ಸಹ ರೂಪಿಸಲಾಯಿತು. ಉತ್ತರ ಹಾಗೂ ದಕ್ಷಿಣಭಾರತಗಳಲ್ಲಿ ಗಮನಾರ್ಹವಾದ ವ್ಯತ್ಯಾಸಗಳೇರ್ಪಟ್ಟವು. ಐಹೊಳೆ, ಬಾದಾಮಿ ಮುಂತಾದೆಡೆಗಳಲ್ಲಿ ವಾಸ್ತುಶಿಲ್ಪದ ದೃಷ್ಟಿಯಿಂದ ನಾವು ಗಮನಿಸಬೇಕಾದ ಅಂಶವೆಂದರೆ ಉತ್ತರ ಹಾಗೂ ದಕ್ಷಿಣ ಭಾರತಗಳ ನಾಗರ ಮತ್ತು ದ್ರಾವಿಡ ವಾಸ್ತುಶೈಲಿಗಳ ಜೊತೆ ಜೊತೆಯಾದ ಬೆಳವಣಿಗೆ. ಇವು ಚಾಲುಕ್ಯಶೈಲಿಯ ಲಕ್ಷಣ. ಎರಡೂ ಶೈಲಿಗಳ ಆಲಯಗಳನ್ನು ಕಟ್ಟಿದುದಲ್ಲದೆ ಅವುಗಳಲ್ಲಿನ ಉತ್ಕೃಷ್ಟವೆನಿಸಿದ ಅಂಶಗಳನ್ನೊಳವಡಿಸಿಕೊಂಡು ತನ್ನದೇ ಆದ ಒಂದು ಶೈಲಿಯನ್ನು ರೂಪಿಸಿಕೊಂಡುದೊಂದು ವಿಶೇಷ ಅಂಶ ಎಂತಲೇ ಚಾಲುಕ್ಯದೇವಾಲಯಗಳು ಅತ್ಯುಚ್ಚಮಟ್ಟದಲ್ಲಿ ದೇವಾಲಯಗಳಿಗೆ ಅವಶ್ಯವಾದ ಎಲ್ಲ ಅಂಶಗಳನ್ನೂ ಹೊಂದಿವೆ. ಸೌಂದರ್ಯ, ಭದ್ರತೆಗಳು ಪ್ರಾಶಸ್ತ್ಯ ಪಡೆದಿವೆ. ಶಿಲ್ಪಿಗಳ ಪ್ರಯೋಗಶೀಲತೆ ಇಲ್ಲಿ ಶ್ರೇಯಸ್ಸನ್ನು ಪಡೆದಿವೆ. ಇಲ್ಲಿ ವಿಭಿನ್ನ ಶೈಲಿಗಳ ಕಲಾತ್ಮಕವಾದ ಸಮ್ಮಿಳನವಿದೆ. ಚಾಲುಕ್ಯರು ಉತ್ತರ ದಕ್ಷಿಣಭಾರತದ ಸಮಕಾಲೀನ ಅರಸರೊಡನೆ ರಾಜಕೀಯವಾದ ಸಂಬಂಧಗಳನ್ನು ಬೆಳೆಸಿದಾಗ ರಾಜಕೀಯವಾದ ಪರಿಣಾಮಗಳೇನೇ ಇದ್ದರೂ, ಸಾಂಸ್ಕೃತಿಕವಾಗಿ ಪರಸ್ಪರ ಕೊಡುವ–ಪಡೆಯುವ ಪ್ರಭಾವಗಳಿಗೆ ಪ್ರೇರಕವಾದವು. ಎಂತಲೇ ವಾಸ್ತುಶಿಲ್ಪದಲ್ಲೂ ಎರಡೂ ದಿಕ್ಕುಗಳಲ್ಲಿನ ಸಂಪ್ರದಾಯಗಳನ್ನು ಕಂಡುಕೊಂಡು ಬಳಿಕ ಅವು ಸಾಂಸ್ಕೃತಿಕವಾಗಿ ಪರಸ್ಪರ ಕೊಡುವ–ಪಡೆಯುವ, ಪ್ರಭಾವಗಳನ್ನು ಸಮೀಕರಿಸುವ, ಒಂದುಗೂಡಿಸುವ ಕಾರ್ಯವೂ ಚಾಲುಕ್ಯರ ನೆಲದಲ್ಲಿ ಆಯಿತು.

ಎರಡು ಭಿನ್ನ ಶೈಲಿಗಳ ಶುದ್ಧರೂಪಗಳಲ್ಲಿ ವಿಶಿಷ್ಟಾಂಶಗಳನ್ನು ನಾವು ಅವುಗಳ ಅಧಿಷ್ಠಾನ (ನೆಲೆಗಟ್ಟು), ಭಿತ್ತಿಗಳಲ್ಲಿ (ಗೋಡೆ). ಕಾಣುವುದಿಲ್ಲ. ಆದರೆ ಗರ್ಭಗೃಹದ ಮೇಲಿನ ಶಿಖರವನ್ನು ಗಮನಿಸಿದಾಗ ವ್ಯತ್ಯಾಸ ಎದ್ದುತೋರುತ್ತದೆ. ದ್ರಾವಿಡ ಶೈಲಿಯ ಶಿಖರ ಮೆಟ್ಟಲು ಮೆಟ್ಟಲಾಗಿ ಮೇಲೆದ್ದಿರುತ್ತದೆ. ಈ ಒಂದೊಂದು ಮೆಟ್ಟಲು (ತಳ) ಕೆಳಗಿನ ತಳದ ಮುಖ್ಯ ಗರ್ಭಗುಡಿಯ ಗೋಡೆಯ ಮಾದರಿಯಲ್ಲೇ ಇರುತ್ತದೆ. ಆದರೆ ಮೇಲೆ ಹೋದಂತೆಲ್ಲಾ ವಿಸ್ತಾರ ಕಿರಿದಾಗುತ್ತದೆ. ಇದನ್ನು ಸ್ತೂಪ ಎನ್ನುತ್ತಾರೆ. ಇದು ಚತುರ್ಭುಜ, ಅಷ್ಟಭುಜ ಅಥವಾ ವರ್ತುಳಾಕಾರವಾಗಿರುತ್ತದೆ. ನಾಗರಶೈಲಿಯಲ್ಲಿ ಶಿಖರ ಮೇಲೇರಿದಂತೆಲ್ಲ ಬಿದುರನ್ನು ಒಳಬಾಗಿಸಿದಂತೆ ಬಾಗುಳ್ಳ ನೇರ ಸಮಾನಾಂತರ ಪಟ್ಟಿಕೆಗಳಿದ್ದು ಒಮ್ಮೊಮ್ಮೆ ತಳಗಳ ಮೂಲೆಗಳಲ್ಲಿ ಚಿಕ್ಕ ಚಿಕ್ಕ ನೆಲ್ಲಿಕಾಯಿ (ಆಮಲಕ)ಯಂತಹ ಅಂಡಾಕಾರದ ಗೋಳಗಳನ್ನು ಸೇರಿಸಿರುತ್ತದೆ. ಇಲ್ಲಿ ನೇರ ಸಮಾನಾಂತರ ಗೆರೆಗಳಿಗೆ ಪ್ರಾಧಾನ್ಯ. ಶಿಖರದ ಮೇಲ್ಭಾಗದಲ್ಲಿ ದೊಡ್ಡ ಕಲ್ಲಿನಲ್ಲಿ ಕಡೆದ ಆಮಲಕವಿರುತ್ತದೆ.

ದ್ರಾವಿಡ ಶೈಲಿಯನ್ನು ಐಹೊಳೆಯ ಒಂದೆರಡು ಸಣ್ಣ ಗುಡಿಗಳಲ್ಲಿ ಕಾಣಬಹುದಾದರೂ ಅದರ ಪ್ರಯೋಗವನ್ನು ಮಹಾಕೂಟೇಶ್ವರಾಲಯದಲ್ಲಿ ಮಾಡಲಾಗಿದೆ. ಇದರ ಕಾಲ ಸುಮಾರು ಕ್ರಿಸ್ತಶಕ ೬೦೦. ಈ ಶೈಲಿಯ ಎಲ್ಲ ವೈಶಿಷ್ಟ್ಯಗಳನ್ನೊಳಗೊಂಡ ದೇವಾಲಯವೆಂದರೆ ಬಾದಾಮಿಯಲ್ಲಿನ ಮಾಲಗಿತ್ತಿ ಶಿವಾಲಯ. ಚೌಕ ಗರ್ಭಗೃಹ, ಸಭಾಮಂಟಪ ಮತ್ತು ಮುಖಮಂಟಪಗಳುಳ್ಳ ಈ ಗುಡಿಯ ಅಧಿಷ್ಠಾನದಲ್ಲೆ ಜಗತಿ, ಉಪಾನ, ಕುಮುದ, ಕೂಡುವರಿ ಎಂದು ಕರೆಯಲಾದ ಅಡ್ಡ ಮಡಿಕೆಗಳನ್ನು ಕಾಣುತ್ತೇವೆ. ಇಲ್ಲಿನ ದಪ್ಪ ಕಂಬಗಳು, ಗೋಡೆಗಳು, ಹೆಚ್ಚು ಅಲಂಕರಣವಿಲ್ಲದ ಹೊರಗೋಡೆಗಳು ಹಾಗೂ ಗರ್ಭಗೃಹದ ಮೇಲೆ ಮೆಟ್ಟಲು ಮೆಟ್ಟಲಾಗಿ ಎದ್ದಿರುವ ಶಿಖರ ದ್ರಾವಿಡ ಶೈಲಿಯ ಅಂಶಗಳನ್ನು ಹೊರಸೂಸುತ್ತವೆ. ಆದರೆ ಪಟ್ಟದಕಲ್ಲಿನ ವಿರೂಪಾಕ್ಷ, ಮಲ್ಲಿಕಾರ್ಜುನ, ಪಾಪನಾಥ, ಸಂಗಮೇಶ್ವರ ಮುಂತಾದ ಗುಡಿಗಳಲ್ಲಿ ಈ ಶೈಲಿ ಪರಾಕಾಷ್ಠತೆಯನ್ನು ಮುಟ್ಟಿತ್ತೆನ್ನಬಹುದು. ಇವುಗಳೆಲ್ಲ ಬಹುಮಟ್ಟಿಗೆ ೭ನೆಯ ಶತಮಾನದ ಅಂತ್ಯಭಾಗದ ಹಾಗೂ ಅನಂತರದ ಕಾಲದ ಗುಡಿಗಳು. ಆವೇಳೆಗೆ ಚಾಲುಕ್ಯ–ಪಲ್ಲವರ ಸಂಬಂಧಗಳ ಪರಿಣಾಮವಾಗಿ ಸಾಂಸ್ಕೃತಿಕ ಕ್ಷೇತ್ರದಲ್ಲೂ ಪರಸ್ಪರ ಪ್ರಭಾವಗಳೇ ಕಾಣಿಸಿಕೊಂಡಿದ್ದವು. ಸಾಮಾನ್ಯವಾಗಿ ಪಲ್ಲವರ ಗುಡಿಗಳಲ್ಲಿ ಗೋಡೆಗಳ ಮೇಲಿನ ಅಲಂಕರಣದ ಕೆತ್ತನೆಗಳನ್ನು ಕಟ್ಟಿದ ಬಳಿಕವೇ ಕೆತ್ತಲಾಗುತ್ತಿತ್ತು. ಎಂತಲೇ ಆ ಕೆತ್ತನೆಗಳು ಒಂದು ಕಲ್ಲಿಗೇ ಸೀಮಿತವಾಗಿರದೆ ಪಕ್ಕದ ಕಲ್ಲುಗಳನ್ನು ಆಕ್ರಮಿಸಿ

ರುತ್ತಿತ್ತು. ಈ ಪದ್ಧತಿಯನ್ನು ಈಗ ಚಾಲುಕ್ಯರ ದ್ರಾವಿಡಶೈಲಿಯ ಗುಡಿಗಳಲ್ಲಿ ಕಾಣುತ್ತೇವೆ. ಆದರೆ ತಮ್ಮದೇ ವೈಶಿಷ್ಟ್ಯಗಳನ್ನೂ ಇವು ರೂಪಿಸಿಕೊಂಡಿವೆ. ಸಭಾಮಂಟಪದ ಗೋಡೆಗಳಿಗೆ ಸೇರಿದಂತೆ ಕಟ್ಟಿದ ಮೂರು ಗುಡಿಗಳು, ಗರ್ಭಗೃಹದ ಹೊರಗೆ ದುರ್ಗೆ ಮತ್ತು ಗಣೇಶರಿಗೆ ಉಪಗುಡಿಗಳ ರಚನೆ, ವಿಮಾನದಲ್ಲಿ ಶುಕನಾಸ ಇವು ಚಾಲುಕ್ಯ ಸ್ಥಪತಿಗಳು ಅಳವಡಿಸಿದ ಹೊಸ ಅಂಶಗಳು. ಪಲ್ಲವ ಶೈಲಿಯಲ್ಲಿ ಕಂಡು ಬರುವ ನಂದಿಮಂಟಪ ಹಾಗೂ ಪರಿವಾರದೇವತೆಗಳಿಗೆ ಉಪಗುಡಿಗಳ ಜೋಡಣೆ ಇವು ಸಹ ಚಾಲುಕ್ಯ ದೇವಾಲಯಗಳಲ್ಲಿ ಕಂಡು ಬರುತ್ತವೆ. ಈ ಶೈಲಿಗೆ ಸೇರಿದ ವಿರೂಪಾಕ್ಷ (ಅಥವಾ ಲೋಕೇಶ್ವರ) ಗುಡಿ ಪಟ್ಟದಕಲ್ಲಿನ ಗುಡಿಗಳಲ್ಲೆಲ್ಲಾ ವಿಸ್ತಾರವಾದದ್ದು. ಮಲ್ಲಿಕಾರ್ಜುನ (ತ್ರೈಲೋಕೇಶ್ವರ) ಗುಡಿ ವಿನ್ಯಾಸದಲ್ಲಿ ಬಹುಮಟ್ಟಿಗೆ ವಿರೂಪಾಕ್ಷ ಗುಡಿಯನ್ನೇ ಹೋಲುತ್ತದೆ. ವಿರೂಪಾಕ್ಷ ದೇವಾಲಯದ ಮೇಲಿನ ಸ್ತೂಪ ದ್ರಾವಿಡ (ಚೌಕೋನ) ವಾಗಿದ್ದರೆ ಮಲ್ಲಿಕಾರ್ಜುನ ಗುಡಿಯ ವಿಮಾನದ ಸ್ತೂಪ ವೃತ್ತಾಕಾರದಲ್ಲಿದೆ. ಇದನ್ನು ವೇಸರ ಎಂದು ಹೆಸರಿಸಿದ. ಆಂಧ್ರಪ್ರದೇಶದ ಮಹಬೂಬನಗರ ಜಿಲ್ಲೆಗೆ ಸೇರಿದ ತುಂಗಭದ್ರೆಯ ತೀರದಲ್ಲಿ ಅಲಂಪುರದಲ್ಲಿರುವ ತಾರಕ ಬ್ರಹ್ಮನ ಗುಡಿ ಅಲ್ಲಿನ ಗುಡಿಗಳಲ್ಲಿ ದ್ರಾವಿಡ ಶೈಲಿಯ ತ್ರಿತಲಗಳ ವಿಮಾನವಿದ್ದ ಏಕೈಕ ನಿದರ್ಶನ. ಪಟ್ಟದಕಲ್ಲಿನ ಪಾಪನಾಥ, ಕಾಶೀವಿಶ್ವೇಶ್ವರ ಹಾಗೂ ಗಳಗನಾಥ ಗುಡಿಗಳು ರೇಖಾಪ್ರಸಾದ ಶೈಲಿಯ ನಿದರ್ಶನಗಳು.

ಅಲಂಪುರದ ಪಥಬ್ರಹ್ಮ, ಸ್ವರ್ಗಬ್ರಹ್ಮ, ಗರುಡಬ್ರಹ್ಮ ಮುಂತಾದ ತಾರಕಬ್ರಹ್ಮನನ್ನು ಹೊರತುಪಡಿಸಿ, ಇತರ ಎಂಟು ಗುಡಿಗಳು ನಾಗರರೇಖಾಪ್ರಸಾದ ಶೈಲಿಯವು. ಸ್ಥೂಲಾಕಾರ, ಪಾರ್ಶ್ವದಿಂದ ಕಾಣುವ ಉನ್ನತಿ, ಗರ್ಭಗೃಹ ಮತ್ತು ಮಂಟಪಗಳ ಸ್ತಂಭಸಾಲು, ಗರ್ಭಗೃಹದ ಮೇಲೆ ವಿಮಾನ ಮತ್ತು ಗೂಢ ಮಂಟಪಗಳನ್ನು ಸಮರೇಖೆಯಲ್ಲಿ ಕೂಡಿಸಿ ಶುಕನಾಸಿಯ ರೂಪ ಕೊಟ್ಟಿರುವಿಕೆ, ಅಲಂಕರಣಕ್ಕೆ ಆಸರೆಯಾಗಿ ಮೂಡಿಬಂದ ಶಿಲ್ಪಗಳ ಅಂತರ್ಭಾವ, ಮೇಲುಪಾಯ, ಗೋಡೆಗಂಬ, ಭಿತ್ತಿಮತ್ತು ಮಾಳಿಗೆಗಳ ರಚನೆಯಲ್ಲಿ ಸಾಮರಸ್ಯವನ್ನುಂಟುಮಾಡಲು ಬಳಸಲಾದ ವಾಸ್ತು ತಂತ್ರಗಳು ಇವುಗಳನ್ನು ಈ ಎಲ್ಲ ಆಲಯಗಳಲ್ಲೂ ಕಾಣಬಹುದು. ಐಹೊಳೆಯ ಗುಡಿಗಳಲ್ಲಿ ವಿಮಾನಗಳ ಶೈಲಿಯಲ್ಲಿ ಇಲ್ಲಿ ಪರಿಣಾಮಕಾರಿಯಾಗಿ ಕಾಣಿಸಿಕೊಂಡು ಪಟ್ಟದಕಲ್ಲಿನ ಪಾಪನಾಥ ಮತ್ತು ಗಳಗನಾಥಾಲಯಗಳನ್ನು ಇವು ಬಹುಮಟ್ಟಿಗೆ ಹೋಲುತ್ತವೆ. ಈ ಪ್ರದೇಶ ಬಾದಾಮಿಯ ಚಾಲುಕ್ಯ ರಾಜ್ಯದ ಭಾಗವಾಗಿತ್ತಲ್ಲದೆ ಆ ಅರಸರಿಂದ ಅವರ ರೂವಾರಿಗಳಿಂದ ಕಟ್ಟಲ್ಪಟ್ಟವುಗಳೆಂಬುದನ್ನು ಮರೆಯುವಂತಿಲ್ಲ.

ಅಲಂಪುರದ ಸಮೀಪದ ಕರ್ನೂಲು ಜಿಲ್ಲೆಯ ಪಾಪನಾಶನದಲ್ಲಿರುವ ಸುಮಾರು ೨೨ ಗುಡಿಗಳಲ್ಲಿ ಬಹುಮಟ್ಟಿನವು ಕದಂಬ ನಾಗರಶೈಲಿಯವು ಎಂದರೆ, ದೇವಾಲಯಗಳ ವಿಮಾನವನ್ನು ಚೌಕಾಕಾರದಲ್ಲಿ ಒಂದರ ಮೇಲೊಂದರಂತೆ ಕಿರಿದುಗೊಳಿಸುತ್ತಾ, ಒಂದೊಂದು ತಲವೂ ಸೇರುವ ಮೇಲ್ಮಟ್ಟದ ಗಂಟುಗಳಲ್ಲಿ ಒಂದೊಂದು ಕಪೋತ ಮತ್ತು ಕಂಠಗಳಿದ್ದು ಅಗ್ರದಲ್ಲಿ ವೃತ್ತಾಕಾರದ ಕಂಠ ಮತ್ತು ಆಮಲಕಗಳನ್ನು ಅಳವಡಿಸಲಾಗುತ್ತದೆ. ರೇಖಾನಾಗರಶೈಲಿಗಿಂತ ಭಿನ್ನವಾದ ಇದನ್ನು ಒರಿಸ್ಸಾ ಮುಂತಾದ ಕಡೆಗಳಲ್ಲಿ ಪೀಡಾದೆ ಉಲ್ ಎಂದು ಕರೆಯುತ್ತಾರೆ.

## ರಾಷ್ಟ್ರಕೂಟರ ಕಾಲದಲ್ಲಿ

ರಾಷ್ಟ್ರಕೂಟರ ಕಾಲದಲ್ಲಿ ಕಲ್ಲುಗುಡ್ಡಗಳನ್ನು ಕೊರೆದು ಆಲಯಗಳನ್ನು ಕಟ್ಟುವ ಸಂಪ್ರದಾಯ ಶ್ರೇಷ್ಠವಾದ ಮಟ್ಟವನ್ನು ಮುಟ್ಟಿತು. ಭವ್ಯತೆ, ಸೃಜನಶೀಲತೆ ಹಾಗೂ ಕಲ್ಪನಾಶಕ್ತಿಗೆ ಏಕಶಿಲೆಯಲ್ಲಿ ಕಡೆದ ಕೈಲಾಸನಾಥ ದೇವಾಲಯ ಜೀವಂತ ನಿದರ್ಶನ. ಅದ್ಭುತ ಸೃಷ್ಟಿ ಎನಿಸಿದ ಇದನ್ನು ದೇವಾಲಯವೆಂದುಹೇಳುವುದು ಸರಿಯಲ್ಲ. ಬೆಟ್ಟದ ಒಂದು ಭಾಗವನ್ನು ಸಂಪೂರ್ಣವಾಗಿ ಗುಡ್ಡದಿಂದ ಬೇರ್ಪಡಿಸಿ ಹೀಗೆ ಬೇರೆಯಾದ ಗುಡ್ಡವನ್ನೇ ಮೇಲಿಂದ ಕೆಳಗಿನವರೆಗೂ ಕೊರೆದು ಮಾಡಿದ ದೇವಾಲಯವಿದು. ರಾಷ್ಟ್ರಕೂಟ ಮೊದಲನೆಯ ಕೃಷ್ಣನ ಅಮೋಘ ಕೊಡುಗೆ. ಇಡೀ ದೇವಾಲಯ ಮುಂದಿನ ಎರಡು ಆನೆಗಳಿಂದ ಎಳೆಯಲ್ಪಟ್ಟ ಒಂದು ರಥದಂತೆ ತೋರುತ್ತದೆ. ಗರ್ಭಗೃಹ, ಮುಖ ಮಂಟಪ ನಂದಿಮಂಟಪ, ಕೈಸಾಲೆ ಮುಂತಾದ ದೇವಾಲಯದ ಸಮಗ್ರ ಭಾಗಗಳೂ ಇದರೊಳಗಿವೆ. ಎತ್ತರವಾದ ತಳಪಾಯದ ಮೇಲಿನ ವೇದಿಕೆಯ ಮಧ್ಯದಲ್ಲಿ ಮುಂಭಾಗ ಮತ್ತು ಕಾಣಿಸುವಂಥ ಆನೆ, ಸಿಂಹ ಮತ್ತು ಇತರ ಪೌರಾಣಿಕ ಪ್ರಾಣಿಗಳನ್ನು ಅಲಂಕೃತ ಪಟ್ಟಿಯಲ್ಲಿ ಕೊರೆದಿರುವುದರಿಂದ ಅವು ಆ ದೇವಾಲಯವನ್ನು ಹೊತ್ತು ನಿಂತಂತಹ ಭಾವನೆಯುಂಟಾಗುತ್ತದೆ. ಮೂರು ತಳಗಳ ವಿಮಾನದ ಮುಂದೆ ಚಾಚಿದ ಅಲಂಕೃತ ಕಮಾನಿನ ಶುಕನಾಸದ ಮೇಲೆ ಅರ್ಧಗೋಳಾಕೃತಿಯ ಶಿಖರ. ಈ ಆಲಯದ ಕುರಿತಂತೆ ಇಲ್ಲಿನ ಒಂದು ಶಾಸನವೇ "ಇದು ಮಾನವಕೃತಿಯಲ್ಲ, ಬ್ರಹ್ಮನದೇ ಸೃಷ್ಟಿ" ಎಂದಿದೆ.

ರಾಷ್ಟ್ರಕೂಟರ ಕಾಲದಲ್ಲಿ ಕಟ್ಟಿದ ದೇವಾಲಯಗಳು ವಿಶೇಷವಾಗಿ ಕಂಡುಬಂದಿಲ್ಲ. ಇತ್ತೀಚೆಗೆ ಗುಲ್ಬರ್ಗ ಜಿಲ್ಲೆಯ ಶಿರವಾಳದಲ್ಲಿ ಮುಮ್ಮಡಿ ಕೃಷ್ಣನ ಕಾಲದ ಕೆಲವು ದೇವಾಲಯಗಳು ಪತ್ತೆಯಾಗಿವೆ. ಮಣ್ಣಿನಲ್ಲಿ ಹೂತುಹೋಗಿ ಬಹುಮಟ್ಟಿಗೆ ಜೀರ್ಣಾವಸ್ಥೆಯಲ್ಲಿರುವ ಸುಮಾರು ೧೫ ಆಲಯಗಳಲ್ಲಿ ಒಂದು ಈಶ್ವರಾಲಯ. ತಗ್ಗಾದ ಪಾಯದ ಮೇಲೆ ಕಟ್ಟಲಾಗಿರುವ ಸರಳ ರಚನೆಯ ಇದರ ಭಾರವಾದ ಚೌಕಂಬಗಳ ನಾಲ್ಕೂ ಕಡೆಗಳಲ್ಲಿ ಕೀರ್ತಿ ಮುಖದ ಅಲಂಕರಣವಿದೆ. ಮಳಖೇಡ, ಪಟ್ಟದಕಲ್ಲು, ಐಹೊಳೆ (ಚರಂತಿಮಠದ ಗುಂಪು), ರೋಣ, ಶ್ರವಣಬೆಳಗೊಳ ಮುಂತಾದ ಕಡೆ ಇವರ ಕಾಲದಜೈನಬಸದಿಗಳಿವೆ. ದ್ವಿಕೂಟಾಚಲ ದೇವಾಲಯಗಳು, ದೇವಾಲಯಗಳಿಗೆ ಸಭಾಮಂಟಪಗಳ ಜೋಡಣೆ, ತ್ರೈಪುರುಷ–ಪಂಚಲಿಂಗ ದೇವಾಲಯಗಳ ನಿರ್ಮಾಣ ದ್ವಿಕೂಟ ತ್ರಿಕೂಟ ಆಲಯಗಳ ವೃದ್ಧಿ, ಜೈನ ಬಸದಿಗಳಲ್ಲಿ ಗರ್ಭಗೃಹಕ್ಕೆ ಧಾನ್ಯದ ಕೋಣೆಗಳನ್ನು ಕೂಡಿಸುವುದು, ಊರಿನ ದ್ವಾರಗಳಲ್ಲಿ ತೋರಣದ ನಿರ್ಮಾಣ, ಅಲಂಕೃತ ವೀರಗಲ್ಲುಗಳ ಕೆತ್ತನೆ–ಈ ಕೆಲವು ಈ ಕಾಲದ ವಾಸ್ತುಶಿಲ್ಪದ ಕೆಲವು ಲಕ್ಷಣಗಳು.

## ಕಲ್ಯಾಣ ಚಾಲುಕ್ಯ

ಕಲ್ಯಾಣದ ಚಾಲುಕ್ಯ ವಾಸ್ತುಶಿಲ್ಪ ಶೈಲಿ ಬಾದಾಮಿಯ ಚಾಲುಕ್ಯರ ವಾಸ್ತು ಶೈಲಿಯನ್ನೇ ಒಂದು ವಿಧದಲ್ಲಿ ಮುಂದುವರಿಸಿಕೊಂಡು ಬಂದರೂ ಕೆಲವು ಮೂಲಭೂತ ಬದಲಾವಣೆಗಳಾದುವು. ಮರಳುಗಲ್ಲಿಗೆ ಬದಲು ಮೃದುವಾದ ಕ್ಲೋರೈಟಿಕ್ ಷಿಸ್ಟ್ ಎಂಬ ಕರಿಯ ಕಲ್ಲು ಬಳಕೆಗೆ ಬಂತು. ಇದು ಹೆಚ್ಚು ಭಾರವನ್ನು ತಾಳಲಾರದ ಕಾರಣ ಮಂಟಪಗಳಲ್ಲಿ ಹೆಚ್ಚಿನ ಕಂಬಗಳನ್ನು ಬಳಸಿ ಅದಕ್ಕನುಗುಣವಾಗಿ ಅವುಗಳ ವಿಸ್ತಾರವನ್ನು ಹೆಚ್ಚಿಸಲಾಯಿತು. ಸಾಮಾನ್ಯವಾಗಿ ಆಯಾಕಾರಗಳಿಂದ ಕೂಡಿದ

ತಳಪಾಯದ ಮೇಲಿನ ಗೋಡೆ ನೇರವಾಗಿದ್ದರೂ, ಅವುಗಳನ್ನು ಅಲ್ಲಲ್ಲೇ ಹಿಂದಕ್ಕೆ ಮುಂದಕ್ಕೆ ಸರಿದಂತೆ ವಿಭಜಿಸಿ ಕುಬ್ಜಾಕಾರದ ಕೊರತೆಯನ್ನು ತುಂಬಲು ಗೋಡೆಗಳ ಮೇಲೆ ಒಂದು ಅಥವಾ ಜೋಡಿ ಅರೆಗಂಬಗಳ ಮೇಲೆ ಶಿಖರಗಳ ಮಾದರಿಯನ್ನು ಕಡೆದಿರುವುದೊಂದು ವಿಶೇಷ. ಅಲಂಕೃತ ಜಾಲಂಧರಗಳ ಮೂಲಕ ಮಂಟಪಗಳಿಗೆ ಬೆಳಕು ಬರುವ ವ್ಯವಸ್ಥೆ ಮಾಡಲಾಗಿದೆ. ಈ ವೇಳೆಗೆ ಆಗಮ ಶಾಸ್ತ್ರಗಳಲ್ಲಿನ ನಿಯಮಗಳನ್ನು ಪಾಲಿಸುವ ಪದ್ಧತಿ ಆರಂಭವಾಗಿ ಸ್ಥಪತಿಯು ಶಿಲ್ಪಗಳನ್ನು ಹೆಚ್ಚು ಪರಿಣಾಮಕಾರಿಯಾಗಿ ಕಡೆದಿದ್ದಾನೆ. ವಿಗ್ರಹಗಳಿಗೆ ಅಲಂಕೃತ ಪ್ರಭಾವಳಿ, ಬಳುಕುವ ಲತೆಗಳ, ಬಳ್ಳಿಗಳ ಕೆತ್ತನೆ, ಶಿಲ್ಪಗಳ ಮೈಮಾಟದಲ್ಲಿ ಮುಗ್ಧತೆ ಇವು ಶಿಲ್ಪಗಳ ವೈಶಿಷ್ಟ್ಯಗಳು. ದೇವಾಲಯಗಳ ಮುಖ್ಯದ್ವಾರಗಳನ್ನು ಈಗ ಪಕ್ಕಗಳಲ್ಲಿ ಅಳವಡಿಸಲಾಯಿತು. ಗರ್ಭಗೃಹ, ಅಂತರಾಳ, ಮುಚ್ಚಿದ ನವರಂಗ, ತೆರೆದ ಮಂಟಪಗಳು, ಸುತ್ತಲೂ ಕುಳಿತುಕೊಳ್ಳಲು ಕಕ್ಷಾಸನಗಳು ಈ ದೇವಾಲಯಗಳ ವಿಸ್ತೀರ್ಣವನ್ನು ಹೆಚ್ಚಿಸಿವೆ. ದೇವಾಲಯಗಳ ನಿರ್ಮಾಣ ಬಹಳ ವೃದ್ಧಿಯಾಯಿತು. ಸಮಾಜದಲ್ಲಿ ಸಾಮಂತರು, ಶ್ರೀಮಂತರು ಗ್ರಾಮಸಭೆಗಳು ಸಹ ದೇವಾಲಯಗಳನ್ನು ಕಟ್ಟಿಸತೊಡಗಿದರು. ಇದಕ್ಕೆ ಆವಶ್ಯಕವಾದ ಆರ್ಥಿಕ ಚೈತನ್ಯ ಜನರಲ್ಲಿತ್ತು ಎಂಬುದನ್ನು ಸೂಚಿಸುತ್ತದೆ. ಈ ಆಲಯಗಳು ಹಿಂದಿನ ಬಾದಾಮಿಯ ಚಾಲುಕ್ಯರ ಹಾಗೂ ಅನಂತರದ ಹೊಯ್ಸಳರ ಶೈಲಿಗಳ ನಡುವಣ ಕೊಂಡಿಯಂತಿತ್ತು. ದ್ರಾವಿಡ ಹಾಗೂ ನಾಗರ ಶೈಲಿಗಳ ವಿಶೇಷವಾದ ಮೇಳವಿಕೆ ಇದ್ದು ಇವನ್ನು ವೇಸರ ಎಂದೋ ಭೂಮಿಜ ಎಂದೋ ಹೆಸರಿಸಲಾಗಿದೆಯಂದು ಹಲವರು ಅಭಿಪ್ರಾಯ ಪಟ್ಟಿದ್ದಾರೆ.

# ಹೊಯ್ಸಳ ವಾಸ್ತುಶಿಲ್ಪ

ಎಚ್. ಎಂ. ನಾಗರಾಜ ರಾವ್

ವಿಖ್ಯಾತ ಬೇಲೂರಿನ ಚೆನ್ನಕೇಶವ ಅಥವಾ ವಿಜಯ ನಾರಾಯಣ, ಹಳೇಬೀಡಿನ ಹೊಯ್ಸಳೇಶ್ವರ–ಶಾಂತಲೇಶ್ವರ ಮತ್ತು ಸೋಮನಾಥಪುರದ ಕೇಶವ ಮೊದಲಾದ ದೇವಾಲಯಗಳನ್ನು ಹಾಗೂ ಅಷ್ಟೊಂದು ಪ್ರಸಿದ್ಧವಾಗದಿದ್ದರೂ ಉತ್ತಮ ವಾಸ್ತುಶಿಲ್ಪ ರಚನೆಗಳಾದ ಇತರ ಹಲವಾರು ದೇವಾಲಯಗಳನ್ನು ನಿರ್ಮಿಸಿದ ಹೊಯ್ಸಳರು ಮಧ್ಯಕಾಲೀನ ಭಾರತೀಯ ವಾಸ್ತುಶಿಲ್ಪ ಕ್ಷೇತ್ರಕ್ಕೆ ಮಹತ್ವದ ಕೊಡುಗೆಯನ್ನಿತ್ತಿದ್ದಾರೆ. ಕ್ರಿ. ಶ. ೧೧ನೆಯ ಶತಮಾನದ ಆದಿಭಾಗದಿಂದ ಕ್ರಿ. ಶ. ೧೪ನೆಯ ಶತಮಾನದ ಪೂರ್ವಾರ್ಧದ ವರೆಗೆ ದಕ್ಷಿಣ ಕರ್ನಾಟಕದ ಭಾಗದಲ್ಲಿ ರಾಜ್ಯವಾಳಿದ ಹೊಯ್ಸಳರು ತಮ್ಮ ಮೊದಮೊದಲ ವಾಸ್ತು ರಚನೆಗಳಲ್ಲಿ ಅವರ ಸಾರ್ವಭೌಮರಾಗಿದ್ದ ಕಲ್ಯಾಣದ ಚಾಲುಕ್ಯರ ವಾಸ್ತು ಶೈಲಿಯನ್ನು ಅನುಸರಿಸಿದರು. ಆದರೆ ಅನತಿಕಾಲದಲ್ಲೇ ಹೊಯ್ಸಳ ವಾಸ್ತುಶಿಲ್ಪಿಗಳು ಪರಂಪರಾಗತ ಸತ್ವಶಕ್ತಿ ಅನುಭವಗಳನ್ನು ಸ್ವೀಕರಿಸಿಯೂ ಅದ್ಭುತ ಕಲ್ಪನಾಶಕ್ತಿ ಮತ್ತು ಅಸಾಧಾರಣ ಪ್ರತಿಭೆ ಕೌಶಲಗಳಿಂದ ಅಪೂರ್ವ ಪ್ರಯೋಗಪರರಾಗಿ ತಮ್ಮದೇ ಆದ ವಿಶಿಷ್ಟ ಶೈಲಿಯೊಂದನ್ನು ರೂಪಿಸಿಕೊಂಡರು.

ಹೊಯ್ಸಳರ ಕಾಲದಲ್ಲಿನ ನಗರಗಳು, ವಾಸಗೃಹಗಳು ರಾಜಭವನಗಳು ಹಾಗೂ ಇತರ ನಿರ್ಮಾಣಗಳ ಬಗ್ಗೆ ಏನೂ ತಿಳಿದುಬಂದಿಲ್ಲ; ಹೆಚ್ಚಿನ ಪರಿಶೋಧನೆ, ಉತ್ಖನನಗಳಿಂದ ಈ ಬಗ್ಗೆ ಕೆಲವು ಕುರುಹುಗಳು ದೊರೆಯುವ ಸಾಧ್ಯತೆ ಇದೆ. ಅದುವರೆಗೆ ಹೊಯ್ಸಳ ವಾಸ್ತುಶೈಲಿ ಎಂದರೆ ದೇವಾಲಯ ವಾಸ್ತುಶೈಲಿಯೇ.

ಹೊಯ್ಸಳ ಶೈಲಿಯಲ್ಲಿ ದ್ರಾವಿಡ ಶೈಲಿಯ ಪ್ರಭಾವ ಹೆಚ್ಚು. ಔತ್ತರೇಯ ಶೈಲಿಯ ಲಕ್ಷಣಗಳೂ ಇವೆ, ಆದರೆ ಅವು ವಿರಳ. ಈ ಶೈಲಿಯಲ್ಲಿ ದಕ್ಷಿಣ ಭಾರತದ ಚೋಳ–ಪಾಂಡ್ಯ ವಾಸ್ತುಶೈಲಿ, ಕಲ್ಯಾಣದ ಚಾಲುಕ್ಯ ವಾಸ್ತುಶೈಲಿ ಮತ್ತು ದಕ್ಷಿಣ ಕರ್ನಾಟಕದಲ್ಲಿದ್ದ ಗಂಗ–ನೊಳಂಬ ವಾಸ್ತುಶೈಲಿಗಳ ಪ್ರೇರಣೆ ಪ್ರಭಾವ ಕಂಡುಬರುತ್ತದೆ. ವೀಕ್ಷಕರನ್ನು ತನ್ಮಯಗೊಳಿಸುವ, ಮರೆಯಲಾಗದಂಥ ದೃಶ್ಯಗಳ ಅದ್ಭುತ ಮಾಯಾಲೋಕವನ್ನು ಅವರ ಕಣ್ಮುಂದೆ ವಾಸ್ತವಗೊಳಿಸುವ ವಿಶಿಷ್ಟ ಗುಣಲಕ್ಷಣಗಳಿಂದಾಗಿ ಹೊಯ್ಸಳ ಶೈಲಿ ಗಮನಾರ್ಹ ಸ್ಥಾನ ಪಡೆದಿದೆ. ಈ ಕಾಲಕ್ಕೂ ಹಿಂದಿನ ಭುವನೇಶ್ವರದ ರಾಜರಾಣಿ ಮಂದಿರದ ಸೊಬಗು, ಖಜುರಾಹೋದ ಕಂದಾರಿಯ ಮಹಾದೇವ ದೇಗುಲದಲ್ಲಿ ಕಾಣಬರುವ ಅಂತಸ್ಸತ್ವ ಹಾಗೂ ಎಲ್ಲೋರದ ಕೈಲಾಸ ದೇವಾಲಯದ ಭವ್ಯತೆ ಇವೆಲ್ಲ ಅಂಶಗಳನ್ನೂ ಸಮನ್ವಯಗೊಳಿಸಿಕೊಂಡ ವಾಸ್ತು ಮತ್ತು ಶಿಲ್ಪಗಳ ಸುಮಧುರ ಸಂಗಮ ಈ ಶೈಲಿಯ ರಚನೆಗಳಲ್ಲಿದೆ. ಹೊಯ್ಸಳ ರಚನೆಗಳು ಕಲೆಯ ಬಲೆ; ಕಲ್ಲಿನಲ್ಲಿ ಕೆತ್ತಿದ ರಸಕಾವ್ಯವೆನಿಸಿವೆ.

**ಹೊಸ ಅಂಶಗಳು**

ಫರ್ಗ್ಯುಸನ್, ವಿನ್ಸೆಂಟ್ ಸ್ಮಿತ್ ಮೊದಲಾದ ಕೆಲವು ಕಲಾ ಇತಿಹಾಸಕಾರರು ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳ ಶೈಲಿಗಳು ಅಭಿನ್ನವೆಂದು ಅಭಿಪ್ರಾಯಪಡುತ್ತಾರೆ. ಬಹುಮಟ್ಟಿಗೆ ಪರ್ಸಿ ಬ್ರೌನ್ ಅವರದೂ ಇದೇ ಅಭಿಪ್ರಾಯ. ಈ ಅಭಿಪ್ರಾಯ ಭಾಗಶಃ ಸತ್ಯವಾದರೂ ಹೊಯ್ಸಳ ಶೈಲಿಯಲ್ಲಿ ಕೆಲವಾರು ಮೂಲಭೂತ ಹೊಸ ಅಂಶಗಳು ಸೇರಿ, ಅದನ್ನು ಒಂದು ಪ್ರತ್ಯೇಕ ಶೈಲಿ ಎಂದು ಪರಿಗಣಿಸಲು ಸಹಾಯಕವಾಗಿವೆ. ಕಲ್ಯಾಣದ ಚಾಲುಕ್ಯ ಮತ್ತು ದ್ವಾರ ಸಮುದ್ರದ ಹೊಯ್ಸಳರ ಸಂಬಂಧ ರಾಜಕೀಯವಾಗಿಯೂ ಸಾಂಸ್ಕೃತಿಕವಾಗಿಯೂ ಇದ್ದುದರ ಫಲವಾಗಿ ಚಾಲುಕ್ಯ–ಹೊಯ್ಸಳರ ವಾಸ್ತುಶೈಲಿಗಳಲ್ಲಿ ಕೆಲವು ಸಾಮ್ಯಗಳು ಕಂಡುಬರುವುದು ಸ್ವಾಭಾವಿಕ. ಉದಾಹರಣೆಗೆ, ಅಲಂಕೃತ ಬಾಗಿಲುವಾಡ, ಕಡೆತ ಯಂತ್ರದಿಂದ ಸಿದ್ಧಪಡಿಸಿದ ಕಂಬಗಳು, ಜಾಲಂಧ್ರಗಳು ಇತ್ಯಾದಿ.

ನಸುಹಸಿರು ಅಥವಾ ಕಪ್ಪುಮಿಶ್ರಿತ ನೀಲಿ ಛಾಯೆಯ ಬಳಪದ ಕಲ್ಲನ್ನು (ಕ್ಲೊರಿಟಿಕ್ಸ್ ಸಿಸ್ಟ್) ತಮ್ಮ ರಚನೆಗಳಿಗೆ ಬಳಸಿದುದು ಹೊಯ್ಸಳರು ಹೊಸ ಶೈಲಿಯ ನಿರ್ಮಾಣದತ್ತ ಇಟ್ಟ ಮೊದಲ ದಿಟ್ಟ ಹೆಜ್ಜೆ. ಈವರೆಗೆ ಗ್ರಾನೈಟ್ ಶಿಲೆಯನ್ನು ಬಳಸಲಾಗುತ್ತಿತ್ತು. ಸೂಕ್ಷ್ಮ ಕಣಗಳಿಂದ ಕೂಡಿ ಹೆಚ್ಚು ಸಾಂದ್ರವಾಗಿರುವ ಈ ಬಳಪದ ಕಲ್ಲು ನಯವಾದ ಹಾಗೂ ಸೂಕ್ಷ್ಮವಾದ ಕೆತ್ತನೆಗೆ ಅನುಕೂಲವಾಗಿ ಪರಿಣಮಿಸಿತು. ಆದ್ದರಿಂದ, ಶ್ರೀಗಂಧ ಮತ್ತು ದಂತದ ಕೆತ್ತನೆಗಾರರ ನಯಗಾರಿಕೆಯನ್ನು, ಅಕ್ಕಸಾಲಿಗರ ಸೂಕ್ಷ್ಮ ಕುಸುರಿ ಕೆಲಸವನ್ನು ಮತ್ತು ಚಿತ್ರಗಾರರ ಭಾವ–ನಿರೂಪಣಾ ಕೌಶಲವನ್ನು ತಮ್ಮ ರಚನೆಗಳಲ್ಲಿ ಪ್ರತಿಬಿಂಬಿಸಲು ಬೃಹತ್ ಕಟ್ಟಡಗಳನ್ನು ಕಟ್ಟದ, ಹೊಯ್ಸಳ ಶಿಲ್ಪಿಗಳಿಗೆ ಈ ಮಾಧ್ಯಮ ಅನುವುಮಾಡಿಕೊಟ್ಟಿತು. ಹೀಗಾಗಿ ಇವರ ರಚನೆಗಳಲ್ಲಿ ವಾಸ್ತುಶಿಲ್ಪಿ ಹಿನ್ನೆಲೆಯಲ್ಲಿ ಉಳಿದು, ಮೂರ್ತಿಶಿಲ್ಪಿ ಮೆರೆಯುತ್ತಾನೆ.

ದೇವಾಲಯದ ಹೊರಭಿತ್ತಿಯ ಸರಳ ನಿರಾಡಂಬರತೆಯ ಬದಲು ಶಿಲ್ಪವಿನ್ಯಾಸಗಳಿಂದ, ಸೂಕ್ಷ್ಮ ಅಲಂಕರಣಗಳಿಂದ ತುಂಬಿದವು.

ಹೊಯ್ಸಳ ದೇಗುಲಗಳು ಸರ್ವಸಾಮಾನ್ಯವಾಗಿ ನಕ್ಷತ್ರಾಕಾರದ ತಲವಿನ್ಯಾಸ ಹೊಂದಿರುತ್ತವೆ. ಇದನ್ನು ಅಷ್ಟಭದ್ರ ವಿನ್ಯಾಸವೆಂದೂ ಕರೆಯಲಾಗಿದೆ. ಒಂದೇ ಕೇಂದ್ರವುಳ್ಳ ಸಮಚೌಕೋನಗಳನ್ನು ಒಂದು ಅಕ್ಷದ ಮೇಲೆ ತಿರುಗಿಸುತ್ತ ಬಂದರೆ, ಬೇರೆ ಬೇರೆ ದಿಕ್ಕುಗಳಿಗೆ ಸರಿಹೊಂದುವಂತೆ ಉಂಟಾಗುವ ಕೋನಗಳು ಈ ನಕ್ಷತ್ರಾಕೃತಿಯ ಬಾಹುಗಳಾಗಿರುತ್ತವೆ. ಈ ರೀತಿಯ ಜೋಡಣೆಯಿಂದ ಎಂಟು, ಹನ್ನೆರಡು, ಹದಿನಾರು ಹೀಗೆ ಎಷ್ಟು ಕೋನಗಳನ್ನು ಬೇಕಾದರೂ ನಿರ್ಮಿಸಿಕೊಳ್ಳಲು ಸಾಧ್ಯವಿರುತ್ತದೆ. ಈ ನಕ್ಷತ್ರಾಕಾರದ ತಲವಿನ್ಯಾಸ ಜಗತಿಯಿಂದ ಶಿಖರದ ಮೇಲಿನ ಕಲಶದ ವರೆಗೂ ಸಾಗಿರುತ್ತದೆ. ತಾಂತ್ರಿಕವಾಗಿ ಅಷ್ಟೇನೂ ವ್ಯತ್ಯಾಸವಿರದ, ನಕ್ಷತ್ರಾಕಾರದ ತಲವಿನ್ಯಾಸವಿರುವ, ಹೊಯ್ಸಳ ಪೂರ್ವಕಾಲದ ದೇವಾಲಯಗಳು ಮಹಾರಾಷ್ಟ್ರ, ಗುಜರಾತ್, ರಾಜಸ್ಥಾನ ಹಾಗೂ ಮಧ್ಯಪ್ರದೇಶದ ಕೆಲವೆಡೆಗಳಲ್ಲಿ ಕಾಣಸಿಗುತ್ತದೆ. ಆದರೆ ಈ ವಿನ್ಯಾಸವನ್ನು ತಮ್ಮ ರಚನೆಗಳಲ್ಲಿ ವಿಶೇಷವಾಗಿ ಅಳವಡಿಸಿಕೊಂಡವರು ಹೊಯ್ಸಳರೇ. ಹೊಯ್ಸಳರ ಎಲ್ಲ ದೇವಾಲಯಗಳಲ್ಲೂ ಅವುಗಳ ಒಟ್ಟು ತಳಪಾಯದಲ್ಲಿ ನಕ್ಷತ್ರಾಕಾರ ವಿನ್ಯಾಸವನ್ನು ಗುರುತಿಸುವುದು ಕಷ್ಟ. ಸಾಮಾನ್ಯವಾಗಿ ಗರ್ಭಗೃಹವನ್ನು ನಕ್ಷತ್ರಾಕಾರದ ತಲವಿನ್ಯಾಸದ ಮೇಲೂ, ನವರಂಗ, ಮುಖಮಂಟಪ ಮುಂತಾದ ಅಂಗಭಾಗಗಳನ್ನು 'ಮುಂಚಾಚಿ-ಹಿಂಚಾಚಿ'ಗಳಿಂದ ಉಂಟಾದ ಚತುರಸ್ರಾಕಾರದ ತಲವಿನ್ಯಾಸದ ಮೇಲೂ ಕಟ್ಟಿರುವುದನ್ನು ಗಮನಿಸಬಹುದು.

ನಕ್ಷತ್ರಾಕಾರದ ತಲವಿನ್ಯಾಸದ ಮೂಲೆಗಳನ್ನೇ ಅನುಸರಿಸಿದ, ಭೂಮಟ್ಟದಿಂದ ಸುಮಾರು ನಾಲ್ಕೈದು ಅಡಿ ಎತ್ತರದಲ್ಲಿರುವ ಜಗತಿಯ ಮೇಲೆ ಹೊಯ್ಸಳ ದೇಗುಲಗಳು ನಿಂತಿರುತ್ತವೆ. ಅಷ್ಟು ಎತ್ತರವಿಲ್ಲದ ಕಟ್ಟಡಗಳಿಗೆ ಈ ಜಗತಿ ಭವ್ಯತೆಯನ್ನು, ಔನ್ನತ್ಯವನ್ನು ಒದಗಿಸಿಕೊಡುವಲ್ಲಿ ಸಹಾಯಕವಾಗುತ್ತದೆ. ಹೊಯ್ಸಳ ದೇಗುಲಗಳು ಜನಿರಂಧಾರ ರಚನೆಗಳಾಗಿರುವುದರಿಂದ ಎಂದರೆ ಒಳಭಾಗದಲ್ಲಿ ಪ್ರತ್ಯೇಕ ಪ್ರದಕ್ಷಿಣಾಪಥ ಇಲ್ಲದಿರುವುದರಿಂದ ಈ ಜಗತಿಯೇ ಪ್ರದಕ್ಷಿಣಾಪಥವಾಗಿಯೂ ಪರಿಣಮಿಸಿದೆ. ಭಕ್ತರಿಗೆ ಪ್ರದಕ್ಷಿಣೆ ಬರಲು, ಕಲಾಪ್ರೇಮಿಗಳಿಗೆ ಶಿಲ್ಪ ಸೊಬಗನ್ನು ಸನಿಹದಿಂದ ನೋಡಲು ಇದು ಅವಕಾಶ ಮಾಡಿಕೊಡುತ್ತದೆ. ಜಗತಿಯ ಮೂಲೆಗಳನ್ನು ಆನೆ ಸಿಂಹ ಮುಂತಾದ ಪಾಣಿಶಿಲ್ಪ ಹೊತ್ತಿರುವಂತೆ ತೋರಿಸಲಾಗಿರುತ್ತದೆ.

ದೇವಾಲಯದ ಹೊರಗೋಡೆಗಳ ಕೆಳಅರ್ಧಭಾಗವನ್ನು ಒಂದರ ಮೇಲೊಂದರಂತೆ ಬರುವ ಸಮಾಂತರ ಪಟ್ಟಿಕೆಗಳನ್ನಾಗಿ ವಿಂಗಡಿಸಲಾಗಿರುತ್ತದೆ. ಈ ಪಟ್ಟಿಕೆಗಳಲ್ಲಿ ಬಗೆಬಗೆಯ ಆನೆ, ಕುದುರೆ ಸವಾರರು, ಹೂಬಳ್ಳಿ, ವಿವಿಧ ಪ್ರಾಣಿಪಕ್ಷಿಗಳು, ಹಾಡುತ್ತಿರುವ, ನರ್ತಿಸುತ್ತಿರುವ ಮತ್ತು ವಾದ್ಯ ನುಡಿಸುತ್ತಿರುವ ಸ್ತ್ರೀಪುರುಷರು ಮುಂತಾದ ಶಿಲ್ಪಸಾಲುಗಳ ನಯವಾದ ಚಿತ್ರಣವಿರುತ್ತದೆ. ಕೆಲವೆಡೆ ರಾಮಾಯಣ, ಮಹಾಭಾರತ, ಭಾಗವತ ಮತ್ತು ಇತರ ಪುರಾಣ ಕಥೆಗಳಿಗೆ ಸಂಬಂಧಿಸಿದ ದೃಶ್ಯಾವಳಿಗಳೂ ಇರುತ್ತವೆ. ಆ ಕಾಲದ ಸಾಮಾಜಿಕ-ಧಾರ್ಮಿಕ ಜೀವನವನ್ನು ಪ್ರತಿಬಿಂಬಿಸುವ ಶಿಲ್ಪಗಳೂ ಇರುವುದುಂಟು. ಮೇಲೆ ಹಂಸ-ಮಕರ ಶಿಲ್ಪಶ್ರೇಣಿ ಇರುತ್ತದೆ. ಎಲ್ಲ ದೇವಾಲಯಗಳಲ್ಲೂ ಪಟ್ಟಿಕೆಗಳ ಮೇಲಿನ ಶಿಲ್ಪಸಾಲು ಒಂದೇ ಅನುಕ್ರಮದಲ್ಲಿರುವುದಿಲ್ಲ. ಈ ಶಿಲ್ಪಸಾಲುಗಳಿಂದಾಗಿ ದೇವಾಲಯದ ಸೊಬಗು ಹೆಚ್ಚುವುದಷ್ಟೇ ಅಲ್ಲ, ದೇವಾಲಯದ ಉದ್ದವೂ ಹೆಚ್ಚಿದಂತೆ ಭಾಸವಾಗುವುದು.

ನವರಂಗ ಮತ್ತು ಮುಖಮಂಟಪದ ಹೊರಗೋಡೆಗಳ ಮೇಲಿನ ಭಾಗದಲ್ಲಿ ಶಿಲ್ಪಪಟ್ಟಿಕೆಗಳು ಹಾಗೂ ಜಾಲಂಧ್ರಗಳಿರುತ್ತವೆ. ಕಲ್ಲುಚಪ್ಪಡಿಗಳಿಂದ ಸಿದ್ಧಪಡಿಸಿದ ಈ ಜಾಲಂಧ್ರಗಳ ಮೇಲೆ ಬಗೆಬಗೆಯ ಜ್ಯಾಮಿತಿಕ ವಿನ್ಯಾಸಗಳು, ಹೂಬಳ್ಳಿಗಳು ಶಿಲ್ಪಿತವಾಗಿರುತ್ತವೆ. ರಾಜಾಸ್ಥಾನಕ್ಕೆ ಸಂಬಂಧಿಸಿದ ಮತ್ತು ಪೌರಾಣಿಕ ಘಟನೆಗಳನ್ನು ನಿರೂಪಿಸುವ ಚಿತ್ರಫಲಕಗಳು ಅಥವಾ ದೇವದೇವತೆಗಳ ಶಿಲ್ಪಗಳು ಈ ಭಾಗದಲ್ಲಿರುತ್ತವೆ. ಗರ್ಭಗೃಹ ಮತ್ತು ಸುಕನಾಸಿಯ ಹೊರಗೋಡೆಗಳ ಮೇಲೆ ಎರಡು-ಮೂರು ಅಡಿ ಎತ್ತರದ ಮೂರ್ತಿಗಳನ್ನು ಕೆತ್ತಲಾಗಿರುತ್ತದೆ. ಕೆಲವು ಪ್ರಮುಖ ಮೂರ್ತಿಗಳಿಗೆ ಗೂಡು, ಪ್ರಭಾವಳಿ, ಲತಾತೋರಣ ಮುಂತಾದವೂ ಇರುತ್ತವೆ. ಈ ಶಿಲ್ಪಶ್ರೇಣಿಯ ಮೇಲಿನ ಭಾಗದಲ್ಲಿ ಅರೆಗಂಬ, ಕಲಶ ಹಾಗೂ ಶಿಖರಗಳ ವಿನ್ಯಾಸವನ್ನು ಕೆತ್ತಲಾಗಿರುತ್ತದೆ. ಇವುಗಳಲ್ಲಿ ವೈವಿಧ್ಯ ಕಂಡುಬರುತ್ತದೆ.

ಮುಂದೆ ಚಾಚಿ ಹಿಂದೆ ಸರಿದಂತಿರುವ ನಕ್ಷತ್ರಾಕಾರದ ಗೋಡೆಯ ರಚನೆಯಿಂದಾಗಿ ಈ ಶಿಲ್ಪಗಳ ಮೇಲೆ ಬೆಳಕು ನೆರಳಿನ ವಿನ್ಯಾಸದ ಫಲ ಸ್ಫುಟವಾಗಿ ಗೋಚರವಾಗುತ್ತದೆ. ಮೂರ್ತಿಗಳ ಸರಸ ಸೌಮ್ಯ ಅಥವಾ ರೌದ್ರ ಭೀಕರ ಭಾವಗಳನ್ನು ಈ ಬೆಳಕು ನೆರಳಿನ ಚಲ್ಲಾಟ ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಳಿಸುತ್ತದೆ. ಈ ವ್ಯವಸ್ಥೆ ಹೊಯ್ಸಳ ಶಿಲ್ಪಿಗಳ ಕಲ್ಪನಾಶಕ್ತಿಗೆ ಸಾಕ್ಷಿಯಾಗಿವೆ.

ಹೊಯ್ಸಳರು ದೇವಾಲಯದ ನಿರ್ಮಾಣಕ್ಕೆ ಬಳಸಿದ ಶಿಲಾಮಾಧ್ಯಮದಿಂದಾಗಿ, ಬಹುತೇಕ ದೇವಾಲಯಗಳಲ್ಲಿ ಶಿಖರಗಳು ನಾಶವಾಗಿವೆ. ದೊಡ್ಡಗದ್ದವಳ್ಳಿ, ಸೋಮನಾಥಪುರ, ಭದ್ರಾವತಿ, ನುಗ್ಗೇಹಳ್ಳಿ ಮುಂತಾದ ಸ್ಥಳಗಳಲ್ಲಿ ಇರುವ ದೇಗುಲಗಳಲ್ಲಿ ಉಳಿದುಬಂದಿರುವ ಶಿಖರಗಳ ಅಧ್ಯಯನದಿಂದ ಹೊಯ್ಸಳ ಕಾಲದ ಶಿಖರಗಳ ಆಕಾರ ವಿನ್ಯಾಸಗಳನ್ನು ತಿಳಿಯಲು ಸಾಧ್ಯವಾಗಿದೆ.

ನಕ್ಷತ್ರಾಕಾರದ ತಲವಿನ್ಯಾಸವನ್ನೇ ಅನುಸರಿಸಿ ಗರ್ಭಗೃಹದ ಮೇಲೆ ಶಿಖರ ಅದೇ ನಕ್ಷತ್ರಾಕಾರವಾಗಿ, ಮಟ್ಟಿಲು ಮಟ್ಟಿಲಾಗಿ, ಮೇಲ್ಮುಖವಾಗಿ ಸಾಗುತ್ತದೆ. ಮೇಲೆ ಹೋದಂತೆ ಮಟ್ಟಿಲುಗಳು ಸಣ್ಣದಾಗುತ್ತ ಛತ್ರಾಕಾರದ ಕಲ್ಲಿನಲ್ಲಿ ಕೊನೆಗೊಳ್ಳುತ್ತದೆ. ಶಿಖರದ ಪ್ರತಿ ಮಟ್ಟಿಲಲ್ಲೂ ಕೀರ್ತಿಮುಖ, ದೇವತಾವಿಗ್ರಹ, ಲತಾಪಟ್ಟಿಕೆಗಳನ್ನು ಬಿಡಿಸಲಾಗಿರುತ್ತದೆ. ಮೇಲಿರುವ ಛತ್ರಾಕಾರದ ಮೇಲೆ ಕಲಶ ಶಲಾಕ ಮತ್ತು ಪ್ರಾಸಾದ ಪುರುಷ ವಿಗ್ರಹಗಳಿರುತ್ತವೆ. ಶಿಖರಗಳು ಮಟ್ಟಸವಾಗಿರುವುದರಿಂದ ಎದ್ದುಕಾಣುವುದಿಲ್ಲವಾದರೂ ಶಿಲ್ಪಶ್ರೀಮಂತಿಕೆಯಿಂದ, ವಿನ್ಯಾಸ ಭವ್ಯತೆಯಿಂದ ಆಕರ್ಷಿಸುತ್ತವೆ. ಸುಕನಾಸಿಯ ಛಾವಣಿಯ ಮೇಲಕ್ಕೆ ಹರಡಿರುವ ಶಿಖರದ ಮುಂಚಾಚಿನ ಮೇಲೆ ಹೊಯ್ಸಳ ಲಾಂಛನವಾದ ಹುಲಿಯನ್ನು ಕೊಲ್ಲುತ್ತಿರುವ ಸಳನ ಶಿಲ್ಪವಿರುತ್ತದೆ.

ಹೊಯ್ಸಳ ಕಂಬ ದ್ರಾವಿಡ ಶೈಲಿಯ ಚತುರಸ್ರಾಕಾರದ ಕಂಬ ಬೋದಿಗೆಗಳ ಅನುಕರಣೆಯಾಗಿದ್ದರೂ ಚಾಲುಕ್ಯ ಶೈಲಿಯ ಕಂಬಗಳಂತೆ ಹೊಳಪಿನಿಂದ ಹಾಗೂ ಸೂಕ್ಷ್ಮ ವಿನ್ಯಾಸ ಮಣಿಕೆಲಸಗಳಿಂದ ಕೂಡಿದ್ದಾಗಿರುತ್ತದೆ. ಬಳಪದ ಕಲ್ಲಿನ ದಿಮ್ಮಿಯನ್ನು ಸ್ಥೂಲವಾಗಿ ಕೆತ್ತಿ, ಅದನ್ನು ಕಡೆತ ಚಕ್ರದ

ಮೇಲಿಟ್ಟು, ಅದು ತಿರುಗುತ್ತಿರುವಾಗ ಉಳಿಗಳ ನೆರವಿನಿಂದ ದಿಮ್ಮಿಯ ಮೇಲೆ ಉಂಗುರಾಕಾರ ಮತ್ತು ಇತರ ಉಬ್ಬುತಗ್ಗು ವಿನ್ಯಾಸಗಳನ್ನು ಬಿಡಿಸಲಾಗುತ್ತಿತ್ತು. ಈ ಬಗೆಯ ಕಂಬದ ಏಣುಗಳು ಚಾಕುವಿನ ಅಲಗಿನಂತೆ ತೆಳುವಾಗಿಯೂ ಹರಿತವಾಗಿಯೂ ಇರುತ್ತವೆ. ಕಂಬದಲ್ಲಿನ ಕೆತ್ತದ ಭಾಗ ಸಹ ಬೆಳಕನ್ನು ಪ್ರತಿಫಲಿಸುವಷ್ಟು ಅತಿ ಹೊಳಪಿನಿಂದ ಕೂಡಿರುತ್ತದೆ. ಕಂಬವು ತಳಭಾಗದಲ್ಲಿ ಚತುರಸ್ರಾಕಾರದಲ್ಲಿದ್ದು, ನಡುವಣ ಭಾಗ ತಲೆಕೆಳಗಾದ ಘಂಟೆಯಾಕಾರದ ಅಥವಾ ಕಮಲದ ಆಕಾರದಲ್ಲಿರುತ್ತದೆ. ಕಂಬದ ಗ್ರೀವದ ಮೇಲಣ ಭಾಗ ಚಕ್ರಾಕೃತಿಯಲ್ಲಿರುತ್ತದೆ. ಇದರ ಮೇಲೆ ವಿವಿಧ ಅಲಂಕರಣಗಳಿಂದ ಕೂಡಿದ ಬೋದಿಗೆಗಳು ಛಾವಣಿಯ ದೂಲಗಳನ್ನು ಹೊತ್ತಿರುತ್ತವೆ. ಬೋದಿಗೆ ಮತ್ತು ದೂಲಗಳ ನಡುವೆ ಮುಂಬಾಗಿದಂತೆ, ಅವೆರಡೂ ಭಾಗಗಳನ್ನು ಸಂಬಂಧಿಸುವಂತೆ, ಮದನಿಕೆ ಅಥವಾ ಸಾಲಭಂಜಿಕೆ ಶಿಲ್ಪಗಳಿರುವುದುಂಟು.

ನವರಂಗದ ಮಧ್ಯಭಾಗದ ನಾಲ್ಕು ಕಂಬಗಳು ಛಾವಣಿಯ ಭುವನೇಶ್ವರಿಗೆ ಆಧಾರವಾಗಿರುತ್ತವೆ. ಭುವನೇಶ್ವರಿಯ ಎಂಟು ಮೂಲೆಗಳಲ್ಲಿ ಅಷ್ಟದಿಕ್ಪಾಲಕ ಶಿಲ್ಪಗಳಿರುತ್ತವೆ. ಮಧ್ಯದ ಅಂಕಣದ ಛಾವಣಿ ಮಗುಚಿಹಾಕಿದ ಕಮಲಾಕೃತಿಯಲ್ಲಿರುತ್ತದೆ. ಅದರ ದಳಗಳ ಮೇಲೆ ದೇವದೇವತೆಯರ ಪೌರಾಣಿಕ ಕಥಾ ದೃಶ್ಯಗಳ ಶಿಲ್ಪಗಳಿರುತ್ತವೆ. ಪುಷ್ಪದ ಕೇಸರ ತೂಗಾಡುವ ತುಂಡುಕಂಬವನ್ನು ಹೋಲುತ್ತಿದ್ದು ಅದರ ತುದಿಭಾಗದಲ್ಲಿಯೂ ಶಿಲ್ಪ ಕೆತ್ತನೆಗಳಿರುತ್ತವೆ. ನವರಂಗದ ಮಧ್ಯಭಾಗದಿಂದ ನೆಲಮಟ್ಟದಿಂದ ತುಸು ಎತ್ತರವಿರುವ ವೃತ್ತಾಕಾರದ ವೇದಿಕೆಯನ್ನು ಸಂಗೀತ ನಾಟ್ಯಾದಿ ಸೇವೆಗಳಿಗೆ ಬಳಸುತ್ತಿದ್ದರು. ನವರಂಗಕ್ಕೂ ಗರ್ಭಗೃಹಕ್ಕೂ ಇರುವ ನಡುವಣ ಭಾಗವೆ ಸುಕನಾಸಿ. ಇಲ್ಲಿ ಉತ್ಸವ ಮೂರ್ತಿಗಳನ್ನು ಇಡುತ್ತಿದ್ದರು. ಸುಕನಾಸಿಯ ಬಾಗಿಲುವಾಡದ ಮೇಲೆ ಗಜಲಕ್ಷ್ಮಿ ಫಲಕ ಅಥವಾ ಇತರ ವಿಗ್ರಹಗಳು, ಎಡಬಲಗಳಲ್ಲಿ ದ್ವಾರಪಾಲಕ ಮೂರ್ತಿಗಳು ಹಾಗೂ ಲತಾಪಟ್ಟಿಕೆ ಶಿಲ್ಪಗಳು ಇರುತ್ತವೆ. ಗರ್ಭಗೃಹ ಚತುರಸ್ರಾಕೃತಿಯೂಗಿದ್ದು ಅದರ ಮಧ್ಯದಲ್ಲಿ ಮೂಲ ವಿಗ್ರಹ ಪ್ರತಿಷ್ಠಾಪಿತವಾಗಿರುತ್ತದೆ. ಅಭಿಷೇಕ ಜಲ ಎಡ ಭಾಗದಿಂದ ಹೊರ ಹರಿದು ಅಂಗಳದಲ್ಲಿರುವ ತೀರ್ಥದ ಹೊಂಡವನ್ನು ಸೇರುವ ವ್ಯವಸ್ಥೆ ಇರುತ್ತದೆ.

ದೇವಾಲಯದ ಹೊರಗಿನ ಅಂಗಳದಲ್ಲಿ ಬಲಿಪೀಠ, ಗರುಡ ಅಥವಾ ನಂದಿಪೀಠ, ಧ್ವಜಸ್ತಂಭ ಮುಂತಾದವು ಇರುತ್ತವೆ. ದೇವಾಲಯಗಳ ವಿಸ್ತಾರ ಹೆಚ್ಚುತ್ತ ಹೋದಂತೆ, ಅಂಗಳದಲ್ಲಿ ಅನೇಕ ಗುಡಿ, ಮಂಟಪಗಳು, ಕಲ್ಯಾಣಿ ಮುಂತಾದವುಗಳ ಸೇರ್ಪಡೆಯಾಯಿತು.

ಒಟ್ಟಿನಲ್ಲಿ ನಕ್ಷತ್ರಾಕಾರದ ತಲವಿನ್ಯಾಸ, ಎತ್ತರವಾದ ಜಗತಿ, ಭಿತ್ತಿಪಟ್ಟಿಕೆ, ಶಿಲ್ಪ, ಬಾಗಿದ ಕಪೋತ, ವೇಸರ ಶೈಲಿಯ ಶಿಖರ, ಸುಕನಾಸಿಯ ಮೇಲಿನ ಹೊಯ್ಸಳ ಲಾಂಛನ, ಅಲಂಕಾರಿಕ ಬಾಗಿಲುವಾಡ, ಮಕರತೋರಣ, ವೈವಿಧ್ಯಮಯ ಸ್ತಂಭ ಸಮುದಾಯ, ಗೋಳಾಕಾರದ ಆಳವಾದ ಭುವನೇಶ್ವರಿ, ಜಾಲಂಧ್ರ, ಮದನಿಕೆ ಮೂರ್ತಿಗಳು, ಶಿಲ್ಪಿಗಳ ಹಸ್ತಾಕ್ಷರ ಇತ್ಯಾದಿ ಗುಣಲಕ್ಷಣಗಳು ಹೊಯ್ಸಳ ಶೈಲಿಯಲ್ಲಿ ಪ್ರಮುಖವಾಗಿ ಕಂಡುಬರುತ್ತವೆ.

ಹೊಯ್ಸಳ ಶೈಲಿಯ ಪರಿಪೂರ್ಣ ದೇಗುಲವು ನಕ್ಷತ್ರಾಕಾರದ ಜಗತಿಯ ಮೇಲಿದ್ದು ಗರ್ಭಗೃಹ, ಸುಕನಾಸಿ, ನವರಂಗ ಹಾಗೂ ಮುಖಮಂಟಪಗಳಿಂದ ಕೂಡಿರುತ್ತದೆ. ಒಂದು. ಎರಡು, ಮೂರು, ನಾಲ್ಕು ಹಾಗೂ ಐದು ಗರ್ಭಗೃಹಗಳು, ಒಂದೇ ರಚನೆಯಲ್ಲಿರುವ ನಿದರ್ಶನಗಳು ನಮಗೆ ಲಭ್ಯವಾಗಿವೆ. ಇವನ್ನು ಏಕಕೂಟ, ದ್ವಿಕೂಟ, ತ್ರಿಕೂಟ, ಚತುಷ್ಕೂಟ ಹಾಗೂ ಪಂಚಕೂಟ ಆಲಯಗಳೆಂದು ಕರೆಯಲಾಗಿದೆ. ಏಕಕೂಟ ಮತ್ತು ದ್ವಿಕೂಟ ರಚನೆಗಳಲ್ಲಿ ಒಂದೇ ನವರಂಗದೊಡನೆ ಸುಕನಾಸಿಗಳು ಸಂಪರ್ಕ ಕಲ್ಪಿಸುತ್ತವೆ. ಕೆಲವು ದ್ವಿಕೂಟಾಚಲಗಳಲ್ಲಿ ಪ್ರತ್ಯೇಕ ನವರಂಗ ಭುವನೇಶ್ವರಿಗಳಿರುತ್ತವೆ. ಚತುಷ್ಕೂಟ ಮತ್ತು ಪಂಚಕೂಟ ಮಂದಿರಗಳಲ್ಲಿ ಒಂದಕ್ಕಿಂತ ಹೆಚ್ಚು ನವರಂಗಗಳಿರುತ್ತವೆ.

**ಕೆಲವು ದೇಗುಲಗಳು**

ಬೇಲೂರಿನ ಚೆನ್ನಕೇಶವ ದೇಗುಲ ಏಕಕೂಟ ರಚನೆಗೆ ಒಂದು ಉದಾಹರಣೆ. ಕೋರಮಂಗಲ, ಅಮೃತಾಪುರ, ಅರಸೀಕೆರೆ, ನುಗ್ಗೇಹಳ್ಳಿ, ತುರುವೇಕೆರೆಯ ದೇಗುಲಗಳು ಹಾಗೂ ಜಿನನಾಥಪುರದ ಬಸದಿ ಇವು ಈ ಕಾಲದ ಕೆಲವು ಗಮನಾರ್ಹ ಏಕಕೂಟ ರಚನೆಗಳು. ಎಲ್ಲ ಏಕಕೂಟ ದೇಗುಲಗಳಲ್ಲಿಯೂ ಪ್ರವೇಶದ್ವಾರದ ದಿಕ್ಕು, ಹೊರಗೋಡೆಗಳಲ್ಲಿನ ಗೂಡು ಮತ್ತಿತರ ವಿವರಗಳಲ್ಲಿ ಏಕರೂಪತೆ ಕಂಡುಬರುವುದಿಲ್ಲ. ಮುಖ್ಯ ದ್ವಿಕೂಟಾಚಲಗಳು ಹಳೇಬೀಡು, ಹರಿಹರ, ಅಗ್ರಹಾರಬೆಳಗುಲಿ, ಕಲ್ಕೆರೆ ಮುಂತಾದ ಕಡೆಗಳಲ್ಲಿವೆ. ಹೊಯ್ಸಳ ದೇವಾಲಯಗಳಲ್ಲಿ ತ್ರಿಕೂಟಾಚಲಗಳೇ ಹೆಚ್ಚು. ಇವುಗಳಲ್ಲಿ ವಿಷ್ಣುವಿಗೆ, ಶಿವನಿಗೆ ಹಾಗೂ ಶಿವವಿಷ್ಣುಗಳಿಗೆ ಜೊತೆಯಾಗಿ ಕಟ್ಟಿಸಿದ ಆಲಯಗಳಿವೆ. ವಿಷ್ಣುವಿಗೆ ಕಟ್ಟಿದ ದೇವಾಲಯಗಳಲ್ಲಿ ಅತ್ಯಂತ ಪ್ರಸಿದ್ಧವಾದುದು ಸೋಮನಾಥಪುರದ ಕೇಶವ ದೇವಾಲಯ. ಇತರವೈಷ್ಣವ ತ್ರಿಕೂಟಾಚಲಗಳು ಅಡಗೂರು, ಆನೇಕನ್ನಂಬಾಡಿ, ನಾಗಮಂಗಲ, ಹರಿಹರಪುರ, ಅರಕೆರೆ, ನೊಣಕೆರೆ, ಬೆಳವಾಡಿ, ಹೊಸಹೊಳಲು, ನುಗ್ಗೇಹಳ್ಳಿ, ಹೊಳೇನರಸೀಪುರ, ಹಾರನಹಳ್ಳಿ, ಸೆಟ್ಟಿಕೆರೆ, ಜಾವಕಲ್ಲು, ಭದ್ರಾವತಿ, ಬೆಳ್ಳೂರು ಹಾಗೂ ವಿಘ್ನಸಂತೆಗಳಲ್ಲಿವೆ. ಗೊರೂರು, ಅಸಂದಿ, ಕೆರೆಸಂತೆ, ಅಘಲಯ ಮುಂತಾದ ಕಡೆಗಳಲ್ಲಿ ಶೈವ ತ್ರಿಕೂಟಾಚಲಗಳಿವೆ. ಶಿವವಿಷ್ಣುಗಳಿಬ್ಬರೂ ಪ್ರತಿಷ್ಠಾಪಿತರಾಗಿರುವ ತ್ರಿಕೂಟ ಮಂದಿರಗಳನ್ನು ಉಂಡಿಗನಾಳು, ಚಟಚಟ್ಟನಹಳ್ಳಿ, ಬಸರಾಳು, ಬೆಳ್ಳೂರು, ಸುತ್ತೂರು, ಕೆರೆಸಂತೆ, ಕಬಳಿ ಹಾಗೂ ಮೊಸಳೆ ಹೊಸಹಳ್ಳಿ ಮುಂತಾದ ಸ್ಥಳಗಳಲ್ಲಿ ಕಾಣಬಹುದು. ಯಲ್ಲಾದಹಳ್ಳಿ ಹಾಗೂ ಚಿಕ್ಕಹನಸೋಗೆಯಲ್ಲಿ ತ್ರಿಕೂಟ ಜಿನಾಲಯಗಳಿವೆ. ಚತುಷ್ಕೂಟ ರಚನೆಗೆ ಇರುವ ಏಕೈಕ ನಿದರ್ಶನವೆಂದರೆ ದೊಡ್ಡಗದ್ದವಳ್ಳಿಯಲ್ಲಿರುವ ಲಕ್ಷ್ಮೀ ದೇವಾಲಯ ಶೈವರಲ್ಲಿ ಜನಪ್ರಿಯವಾದ ಪಂಚಕೂಟ ಕಟ್ಟಡಗಳಲ್ಲಿ ಉಳಿದುಬಂದಿರುವುದು ಗೋವಿಂದನಹಳ್ಳಿಯಲ್ಲಿ ಮಾತ್ರ. ಸೋಮನಾಥಪುರದ ಪಂಚಕೂಟ ದೇಗುಲ ಭಾಗಶಃ ಉಳಿದಿದೆ. ಹೊಯ್ಸಳ ಶಾಸನಗಳಿಂದ ಗೋವಿಂದನಹಳ್ಳಿ, ಸೋಮನಾಥಪುರ, ಹಳೇಬೀಡು, ಬಾಳಗಂಚಿ, ನಾಗಮಂಗಲ, ಚಿತ್ರದುರ್ಗ, ಕುಂದೂರು, ಬೊಗ್ಗವಳ್ಳಿ ಮುಂತಾದೆಡೆಗಳಲ್ಲಿ ಪಂಚಕೂಟ ದೇಗುಲಗಳಿದ್ದವೆಂದು ತಿಳಿದುಬರುತ್ತದೆ. ಕಂಬದಹಳ್ಳಿ ಹಾಗೂ ಮರ್ಕುಲಿಯ ಬಸದಿಗಳನ್ನು ಪಂಚಕೂಟವೆಂದು ಪರಿಗಣಿಸಲಾಗಿದೆ. ಹೊಯ್ಸಳ ಶೈಲಿಯಲ್ಲಿ ಕಟ್ಟಿದ ಅವಳಿ ದೇವಾಲಯಗಳು ಮರಲೆ ಮತ್ತು ಮೊಸಲೆಗಳಲ್ಲಿ ಲಭ್ಯವಾಗಿವೆ.

ಉಳಿದು ಬಂದಿರುವ ಸುಮಾರು ನೂರೈವತ್ತಕ್ಕೂ ಹೆಚ್ಚು ಹೊಯ್ಸಳ ದೇವಾಲಯಗಳಲ್ಲದೆ, ಶಾಸನಾಧಾರಗಳಿಂದ

ಇನ್ನೂ ಹಲವಾರು ದೇವಾಲಯಗಳನ್ನು ಕಟ್ಟಲಾಯಿತೆಂದು ತಿಳಿದುಬರುವುದು. ಹೊಯ್ಸಳ ಅರಸ ಅರಸಿಯರು, ಅಧಿಕಾರಿಗಳು ಮತ್ತು ಅವರ ಪತ್ನಿಯರು, ಸಂಘ ಸಂಸ್ಥೆಗಳು ಹಾಗೂ ಆ ಕಾಲದ ಜನಸಾಮಾನ್ಯರು ದೇವಾಲಯ ಜಿನಾಲಯಗಳನ್ನು ಕಟ್ಟಿಸಿ ಪೂಜೆ ಪುರಸ್ಕಾರಗಳನ್ನು ದಾನದತ್ತಿಗಳನ್ನಿತ್ತ ಸಂಗತಿ ಅನೇಕ ಶಾಸನಗಳಲ್ಲಿ ನಿರೂಪಿತವಾಗಿದೆ.

ತೊಣಚಿಯ ಬಸವೇಶ್ವರ (ಕ್ರಿ. ಶ. ೧೦೪೭), ಅಂಗಡಿಯ ಜಿನಾಲಯ (೧೦೫೦) ಬಳ್ಳಿಗಾವೆಯ ಕೇದಾರೇಶ್ವರ (ಕ್ರಿ. ಶ. ೧೧ನೆಯ ಶತಮಾನ) ಮತ್ತು ಹನಸೋಗೆಯ ಜಿನಾಲಯಗಳು ಹೊಯ್ಸಳ ಶೈಲಿಯ ಮೊದಮೊದಲ ಕಟ್ಟಡಗಳಲ್ಲಿ ಗಮನಾರ್ಹವೆನಿಸಿವೆ. ವಿಷ್ಣುವರ್ಧನನ ಕಾಲದಲ್ಲಿ ನಿರ್ಮಾಣಗೊಂಡ ಮುಖ್ಯ ದೇವಾಲಯಗಳೆಂದರೆ ದೊಡ್ಡಗದ್ದವಳ್ಳಿಯ ಲಕ್ಷ್ಮಿದೇವಾಲಯ (೧೧೧೩), ಬೇಲೂರಿನ ಚೆನ್ನಕೇಶವ (ಕ್ರಿ. ಶ. ೧೧೧೭), ಕಪ್ಪೆಚೆನ್ನಿಗರಾಯ (೧೧೧೭), ತಲಕಾಡಿನ ಕೀರ್ತಿನಾರಾಯಣ (೧೧೧೭), ಹಳೇಬೀಡಿನ ವಿಜಯ ಪಾರ್ಶ್ವನಾಥ (೧೧೩೩) ಮುಂತಾದವು. ಅವನ ಮಗ ಒಂದನೆಯ ನರಸಿಂಹನ ಕಾಲದ ದೇವಾಲಯಗಳಲ್ಲಿ ಹಳೇಬೀಡಿನ ಹೊಯ್ಸಳೇಶ್ವರ–ಶಾಂತಲೇಶ್ವರ (ಕ್ರಿ. ಶ. ೧೧೨೧ರಲ್ಲಿ ಆರಂಭಗೊಂಡು ನರಸಿಂಹ ಬಲ್ಲಾಳರ ಕಾಲದಲ್ಲಿ ಪೂರ್ಣಗೊಂಡಿತು), ಆನಕೊಂಡದ ಈಶ್ವರ (ಕ್ರಿ. ಶ. ೧೧೬೦), ಕೋರಮಂಗಲದ ಭೂಜೇಶ್ವರ (ಕ್ರಿ. ಶ.೧೧೭೩) ಇವು ಉಲ್ಲೇಖನೀಯ. ಅಮೃತಾಪುರದ ಅಮೃತೇಶ್ವರ (೧೧೯೬ ಹಳೇಬೀಡಿನ ಕೇದಾರೇಶ್ವರ (೧೨೧೯), ಅರಸೀಕೆರೆಯ ಈಶ್ವರ (೧೨–೧೩ನೆಯ ಶತಮಾನ) ಚಟಚಟ್ಟನ ಹಳ್ಳಿಯ ಚಟ್ಟೇಶ್ವರ (ಸು. ೧೨೦೦), ಮೊಸಳೆ ಹಳ್ಳಿಯ ಮಹಾಲಿಂಗೇಶ್ವರ (೧೩ನೆ ಶತಮಾನ) ಇವು ಇಮ್ಮಡಿ ಬಲ್ಲಾಳನ ಕಾಲದ ಹೊಯ್ಸಳ ಕಟ್ಟಡಗಳಲ್ಲಿ ಮುಖ್ಯವಾದವು. ಬಲ್ಲಾಳನ ಮಗ ಇಮ್ಮಡಿ ನರಸಿಂಹನ ಕಾಲದ ಪ್ರಧಾನ ದೇವಾಲಯಗಳೆಂದರೆ ಹಾರನಹಳ್ಳಿಯ ಸೋಮೇಶ್ವರ (೧೨೩೪), ಬಸರಾಳಿನ ಮಲ್ಲಿಕಾರ್ಜುನ (೧೨೩೪), ಹೆಗ್ಗರೆಯ ಮತ್ತು ಕಲ್ಲೇಶ್ವರ (೧೩ನೆ ಶತಮಾನ) ಹಾಗೂ ಈ ಕಾಲದಲ್ಲಿ ಜೀರ್ಣೋದ್ಧಾರಗೊಂಡ ಹರಿಹರದ ಹರಿಹರೇಶ್ವರ. ನುಗ್ಗೇಹಳ್ಳಿಯ ಲಕ್ಷ್ಮೀನಾರಾಯಣ (೧೨೪೬), ಸದಾಶಿವ (೧೨೪೯) ಮತ್ತು ಗೋವಿಂದನ ಹಳ್ಳಿಯ ಪಂಚಲಿಂಗೇಶ್ವರ (೧೩ನೆ ಶತಮಾನ) ಸೂಮೇಶ್ವರನ ಕಾಲದ ಪ್ರಧಾನ ಹೊಯ್ಸಳ ರಚನೆಗಳು. ಮುಮ್ಮಡಿ ನರಸಿಂಹನ ಕಾಲದಲ್ಲಿ ನಿರ್ಮಿತವಾದ ದೇವಾಲಯಗಳಲ್ಲಿ ತುರುವೇಕೆರೆಯ ಕೇಶವ ಮತ್ತು ಮೂಲೆ ಶಂಕರೇಶ್ವರ (೧೨೬೦), ಸಟ್ಟೆಕೆರೆಯ ಯೋಗ ಮಾಧವ (೧೨೬೧) ಹಾಗೂ ಸೋಮನಾಥಪುರದ ಪ್ರಸಿದ್ಧ ಕೇಶವ ದೇವಾಲಯ (೧೨೬೮) ಮುಖ್ಯವಾದವು. ಮೂರನೆಯ ಬಲ್ಲಾಳನ ಆಳ್ವಿಕೆಯ ಕಾಲದಲ್ಲಿ ಹೆಡತಲೆಯ ಲಕ್ಷ್ಮೀಕಾಂತ ದೇವಾಲಯ (೧೩ನೆಯ ಶತಮಾನ) ನಿರ್ಮಿತವಾಯಿತು.

ಹೊಯ್ಸಳ ಶೈಲಿ ಎಂದು ಸಂಪೂರ್ಣವಾಗಿ ಕರೆಯಬಹುದಾದ ಎಲ್ಲ ಗುಣಲಕ್ಷಣಗಳಿಂದ ಕೂಡಿದ ಸುಮಾರು ಅರುವತ್ತು ದೇವಾಲಯಗಳು ಹಾಸನ, ಚಿಕ್ಕಮಗಳೂರು, ಶಿವಮೊಗ್ಗ ಚಿತ್ರದುರ್ಗ, ತುಮಕೂರು, ಮಂಡ್ಯ ಹಾಗೂ ಮೈಸೂರು ಜಿಲ್ಲೆಗಳಲ್ಲಿ ಉಳಿದುಬಂದಿವೆ. ಇವುಗಳಲ್ಲಿ ಅತಿ ಪ್ರಾಚೀನವಾದುದು ಬೇಲೂರಿನ ಚೆನ್ನಕೇಶವ ದೇವಾಲಯ (೧೧೧೭). ಇದಕ್ಕೂ ಹಿಂದಿನ ದೊಡ್ಡಗದ್ದವಳ್ಳಿಯ ಲಕ್ಷ್ಮೀ ದೇವಾಲಯದಲ್ಲಿ (೧೦೧೩) ಈ ಶೈಲಿಯ ಉಗಮದ ಸೂಚನೆ ಕಂಡುಬಂದರೂ ಪೂರ್ಣರೂಪವಣೆ ಇಲ್ಲ. ಹಳೇಬೀಡು, ಸೋಮನಾಥಪುರ, ಬಸರಾಳು, ನಾಗಮಂಗಲ, ಅರಸೀಕೆರೆ, ಹರಿಹರ, ನಂದಿತಾವರೆ, ಅರಳಗುಪ್ಪೆ, ರಾಮನಾಥಪುರ, ಮರಲೆ, ಬೆಳ್ಳೂರು, ನಾಗಲಾಪುರ, ನೊಣವಿನಕೆರೆ, ವಿಘ್ನಸಂತೆ, ನುಗ್ಗೇಹಳ್ಳಿ, ಹೊಸಹೊಳಲು, ಹಾರನಹಳ್ಳಿ, ಹುಲ್ಲೇಕೆರೆ, ಜಾವಗಲ್ಲು, ಬೆಳವಾಡಿ, ತುರುವೇಕೆರೆ, ಭದ್ರಾವತಿ, ಜಿನನಾಥಪುರ ಮುಂತಾದ ಸ್ಥಳಗಳಲ್ಲಿನ ದೇಗುಲಗಳು ಈ ವರ್ಗಕ್ಕೆ ಸೇರುತ್ತವೆ. ವಿಘ್ನಸಂತೆಯ ಲಕ್ಷ್ಮೀ ನರಸಿಂಹ ದೇವಾಲಯ (ಕ್ರಿ. ಶ. ೧೨೮೬) ಪ್ರಾಯಃ ಈ ವರ್ಗದ ಕೊನೆಯ ರಚನೆ.

ಹೊಯ್ಸಳ ಶೈಲಿಯ ಪೂರ್ಣ ಅಭಿವ್ಯಕ್ತಿ ಇರದೆ ಹಳೆಯ ಚಾಲುಕ್ಯ ಹಾಗೂ ದ್ರಾವಿಡ ಶೈಲಿಯಲ್ಲಿ ಕಟ್ಟಿದ ಹೊಯ್ಸಳ ರಚನೆಗಳು ಚತುರಸ್ರಾಕಾರದ ತಲವಿನ್ಯಾಸ, ಅಲ್ಲಲ್ಲಿ ಮುಂಚಾಚು, ಹಿಂಜರಿತಗಳಿಂದಷ್ಟೇ ಕೂಡಿರುತ್ತವೆ. ಹೆಚ್ಚು ಅರೆಗಂಬಗಳು ಮತ್ತು ಕುಡ್ಯ ಅಲಂಕರಣ ಭಿತ್ತಿಗಳಿರುವ ದೇವಾಲಯಗಳು ಹಾಸನ, ತುಮಕೂರು, ಚಿಕ್ಕಮಗಳೂರು, ಮಂಡ್ಯ ಹಾಗೂ ಮೈಸೂರು ಜಿಲ್ಲೆಗಳಲ್ಲಿ ವಿರಳವಾಗಿ ಲಭ್ಯವಾಗಿವೆ. ಇವುಗಳಲ್ಲಿ ಜಗತಿ, ನಕ್ಷತ್ರಾಕಾರದ ತಲವಿನ್ಯಾಸ, ಅಲಂಕರಣ, ಶಿಲ್ಪಸಂಪತ್ತು ಇರುವುದಿಲ್ಲ. ಕೆಲವು ದೇವಾಲಯಗಳಲ್ಲಿ ಚಾಲುಕ್ಯ ಹೊಯ್ಸಳ ಮಿಶ್ರಶೈಲಿ ಕಂಡುಬರುತ್ತದೆ. ಆನಕೊಂಡ, ಅಗ್ರಹಾರಬೆಳಗುಲಿ, ಅಘಲಯ, ಶಾಂತಿಗ್ರಾಮ, ಗೋವಿಂದನಹಳ್ಳಿ, ಅಮೃತಾಪುರ, ಬಳ್ಳಿಗಾವೆ ಹಾಗೂ ಹಳೇಬೀಡು ಈ ಸ್ಥಳಗಳಲ್ಲಿನ ರಚನೆಗಳು ಈ ಮಿಶ್ರಶೈಲಿಯ ಕೆಲವು ಉದಾಹರಣೆಗಳು.

ಹಿಂದೆ ಚೋಳ ರಾಜ್ಯಕ್ಕೆ ಸೇರಿದ್ದು ಅನಂತರ ಹೊಯ್ಸಳ ಕೈವಶವಾದ ಮೈಸೂರು, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳ ಭಾಗಗಳಲ್ಲಿನ ದೇಗುಲಗಳಲ್ಲಿ ಹಳೆಯ ದ್ರಾವಿಡ ಶೈಲಿಯ ಮುಂದುವರಿಕೆಯೂ ಕಂಡುಬರುತ್ತದೆ. ಗ್ರಾನೈಟ್ ಶಿಲೆಯಲ್ಲಿ ನಿರ್ಮಿಸಿದ ಜಗತಿ ಭಿತ್ತಿಯ ಮೇಲೆ ಸರಳ ಅಲಂಕರಣದ ಈ ಶೈಲಿಗೆ ತಲಕಾಡಿನ ಕೀರ್ತಿನಾರಾಯಣ, ಬೆಳಗೊಳದ ಜನಾರ್ಧನ, ಶ್ರವಣಬೆಳಗೊಳದ ಕೆಲವು ಜಿನಾಲಯಗಳು ಹಾಗೂ ರಾಘವಾಪುರ, ಮೂರಹಳ್ಳಿಯ ಆಲಯಗಳನ್ನು ಉಲ್ಲೇಖಿಸಬಹುದು.

## ಶಿಲ್ಪ

ಹೊಯ್ಸಳ ದೇವಾಲಯಗಳು ವಾಸ್ತು ನಿರ್ಮಾಣಗಳೆನ್ನುವುದಕ್ಕಿಂತ ಪ್ರಯೋಗಾತ್ಮಕ ಕಲಾಮಂದಿರಗಳೆಂದು ಕಲಾವಿಮರ್ಶಕ ಪರ್ಸಿಬ್ರೌನ್ ಹೇಳುತ್ತಾರೆ. ಆದರೆ ಹೊಯ್ಸಳ ರಚನೆಗಳಲ್ಲಿ ವಾಸ್ತು ಹಿನ್ನೆಲೆಯಲ್ಲಿದೆ, ಗುಪ್ತವಾಗಿದೆ. ಶಿಲ್ಪ ಮೇಲ್ನೋಟಕ್ಕೆ ಆಕರ್ಷಿಸುತ್ತದೆ. ವ್ಯಕ್ತವಾಗಿದೆ. ಶಿಲ್ಪಗಳ ಕುಸುರಿ ಕೆಲಸ ಶ್ರೀಗಂಧ ಮತ್ತು ದಂತದ ಕುಶಲ ಕೆಲಸವನ್ನು ಹೋಲುತ್ತದೆ. ಗೋಡೆಯ ತುದಿಯಿಂದ ಇಳಿಬಿದ್ದ ಕೊಂಡಿಕೊಂಡಿಯೂ ಪ್ರತ್ಯೇಕವಾಗಿರುವಂಥ ಸರಪಳಿಗಳು ಮತ್ತು ಸೂರುಗಳ ತಳಭಾಗದಲ್ಲಿ ತಿರುಪುಮೊಳೆ, ತಿರುಪುಗಟ್ಟಿಗಳನ್ನು ಹೋಲುವ ಕೆತ್ತನೆಗಳು ಲೋಹಕರ್ಮಿಯ ಕೆಲಸಕ್ಕೆ ಸಾಟಿಯಾಗುವಂತದು, ಮತ್ತು ಮೂರ್ತಿಯ ಅಡಿಯಿಂದ ಮುಡಿಯವರೆಗೆ ಕೆತ್ತಿದ ಆಭರಣ ಅಲಂಕರಣಗಳು ಅಕ್ಕಸಾಲಿಗನ ಚಿಕಣಿ ಕೆಲಸವನ್ನು ಪ್ರತಿನಿಧಿಸುತ್ತವೆ.

ಹೊಯ್ಸಳ ಶಿಲ್ಪಗಳ ಒಂದು ಪ್ರಧಾನ ಗುಣಲಕ್ಷಣವೆಂದರೆ ಅಲಂಕರಣಕ್ಕೆ ಅವರು ನೀಡಿದ ವಿಶೇಷ ಗಮನ ಹಾಗೂ

ಅದ್ಭುತ. ದೇವಮಾನುಷ ಶಿಲ್ಪಗಳ ಉಡಿಗೆತೊಡಿಗೆ ಆಭರಣ ಮುಂತಾದವನ್ನು ಅತಿ ನವುರಾಗಿ, ಸವಿವರವಾಗಿ, ಅತಿ ಹೆಚ್ಚಾಗಿ ಅಳವಡಿಸುವ ಈ ಪ್ರವೃತ್ತಿಯಿಂದಾಗಿ ಶಿಲ್ಪಗಳ ಅಂಗಾಂಗ ನಿರೂಪಣೆಯಲ್ಲಿ ಸಹಜತೆಯಾಗಲೀ ಭಾವಾಭಿವ್ಯಕ್ತಿಯಾಗಲೀ ಕಂಡುಬರುವುದಿಲ್ಲ. ಆದ್ದರಿಂದ ಇವುಗಳಲ್ಲಿ ಕಲಾಸಿದ್ಧಿಗಿಂತ ಉತ್ತಮ ಕಲಾಕರ್ಮಿಗಳ ಕುಶಲ ಕೆಲಸ ವ್ಯಕ್ತವಾಗಿದೆ ಎಂದು ಕೆಲವು ವಿದ್ವಾಂಸರು ಭಾವಿಸುತ್ತಾರೆ. ಆದರೆ ಪಶುಪಕ್ಷಿ, ವೈವಿಧ್ಯಮಯ ಹೂಬಳ್ಳಿ, ಜ್ಯಾಮಿತಿಕ ವಿನ್ಯಾಸ ಇವುಗಳ ಕೆತ್ತನೆಗಳ ಸಾಲುಗಳು ನೋಟಕರನ್ನು ಚಕಿತಗೊಳಿಸಿ ತಲೆದೂಗುವಂತೆ ಮಾಡುತ್ತವೆ. ಆನೆ ಶಿಲ್ಪ ಸಾಲಿನಲ್ಲಿರುವ ಒಂದೊಂದು ಆನೆಯೂ ಇನ್ನೊಂದರಿಂದ ಬೇರೆಯಾದರೂ, ಅವುಗಳ ಭಂಗಿ ಹೊಯ್ಸಳ ಶಿಲ್ಪಿಗಳಿಗೆ ಆನೆಗಳ ಬಗ್ಗೆ ನಿಕಟ ಪರಿಚಯವಿತ್ತೆನ್ನುವುದನ್ನು ಸಾಬೀತುಗೊಳಿಸುತ್ತವೆ. ಆದರೆ ಇದೇ ಮಾತನ್ನು ಕುದುರೆ ಶಿಲ್ಪ ಸಾಲಿನ ಬಗ್ಗೆ ಹೇಳಲಾಗುವುದಿಲ್ಲ. ದೇವಾಲಯಗಳ ಹೊರಗೋಡೆಗಳ ಮೇಲಿನ ದೇವ ಮತ್ತು ದೇವಮಾನುಷ ಉಬ್ಬುಶಿಲ್ಪಗಳು ಮನೋಹರವಾಗಿರುತ್ತವೆ. ಸಾಮಾನ್ಯ ನೋಡುಗನಿಗೂ ತಿಳಿಯುವಂಥ, ಕೈಲಾಸವನ್ನು ಎತ್ತುತ್ತಿರುವ ರಾವಣ, ಮತ್ಸ್ಯಯಂತ್ರ ಭೇದಿಸುತ್ತಿರುವ ಅರ್ಜುನ, ಗಜೇಂದ್ರಮೋಕ್ಷ ಮುಂತಾದವನ್ನು ಒಂದೇ ಶಿಲ್ಪದಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿರುವುದನ್ನು ಗಮನಿಸಬಹುದು. ಪ್ರತಿಷ್ಠಾಪಿತ ವಿಗ್ರಹಗಳೂ ದ್ವಾರಪಾಲಕ ವಿಗ್ರಹಗಳೂ ಮಾನವಾಕಾರದಲ್ಲಿದ್ದು ಸುಂದರವಾಗಿರುತ್ತವೆ. ಭುವನೇಶ್ವರಿಯ ಸೂಕ್ಷ್ಮ ಕೆತ್ತನೆ, ಕಂಬಗಳಲ್ಲಿನ ನಯಗಾರಿಕೆ, ಹೊಳಪು, ಮಣಿಕೆಲಸ, ವೈವಿಧ್ಯ ಇವು ನೋಟಕರ ದೃಷ್ಟಿಗೆಬೀಳದಿರದು. ಬೇಲೂರು ಚೆನ್ನಕೇಶವ ದೇವಾಲಯದ ಭುವನೇಶ್ವರಿ, ಕಂಬಗಳು, ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದ ಮಕರ ತೋರಣಗಳು, ಪಾರ್ಶ್ವನಾಥ ಬಸದಿಯ ನಿಮ್ನೋನ್ನತ ಹಾಗೂ ವೈವಿಧ್ಯಮಯ ಪ್ರತಿಫಲನಗಳನ್ನು ನೀಡುವ ಕಂಬಗಳು ಉಲ್ಲೇಖಾರ್ಹ. ಹೊಯ್ಸಳ ಶಿಲ್ಪಿಗಳು ಸರಳ ಸೌಂದರ್ಯದ ಕಡೆಗೆ ಗಮನ ಹರಿಸದೆ ಅಲಂಕಾರಿಕ ಕುಸುರು ಕೆಲಸಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟರೆನ್ನುವುದು ಸ್ವಲ್ಪ ಮಟ್ಟಿಗೆ ಸತ್ಯ.

ಸಾಲಭಂಜಿಕೆ, ಶಿಲಾಬಾಲಿಕೆ, ಪುತ್ತಳಿ ಎಂಬ ಹೆಸರುಗಳನ್ನು ಹೊಂದಿದ ಮದನಿಕೆ ಮೂರ್ತಿಗಳು ಹೊಯ್ಸಳ ಶಿಲ್ಪಿಗಳ ಅನುಪಮ ಕೃತಿಗಳೆಂದು ಕಲಾ ಇತಿಹಾಸಕಾರರಿಂದ ಪ್ರಶಂಸಿಸಲ್ಪಟ್ಟಿವೆ. ಯಾವುದೇ ಕಾಲದ, ಯಾವುದೇ ದೇಶದ ಶಿಲ್ಪಗಳ ಜೊತೆಯಲ್ಲಿಟ್ಟರೂ ಇವು ಸ್ವಂತಿಕೆಯನ್ನೂ ಅಮರತ್ವವನ್ನೂ ಮೆರೆಯಬಲ್ಲವು. ಬೋದಿಗೆ ಮತ್ತು ಛಾವಣಿಗಳ ನಡುವೆ ಅಡ್ಡದೂಲಗಳಿಗೆ ಆಧಾರವಾಗಿ, ಮುಂಬಾಗಿ ನಿಂತಿರುವ ಈ ಮೂರ್ತಿಗಳು ಭೂಮಟ್ಟದಿಂದ ಹದಿನೈದಿಪ್ಪತ್ತು ಅಡಿಗಳ ಎತ್ತರದಲ್ಲಿ ಸುಮಾರು ಮೂವತ್ತು ಡಿಗ್ರಿ ಕೋನದಲ್ಲಿ ಇರುತ್ತವೆ. ಅತಿ ಅಲಂಕರಣ ಆಭರಣಗಳಿಂದ ಕೂಡಿದ ಈ ಅರೆನಗ್ನ ಸ್ತ್ರೀಮೂರ್ತಿಗಳ ಅಂಗಸೌಷ್ಠವ ಎದ್ದು ಕಾಣುತ್ತದೆ. ಆದರೆ ಹೊಯ್ಸಳ ದೇವಾಲಯಗಳ ಪೈಕಿ ಕೇವಲ ಎಂಟು ಹತ್ತು ದೇಗುಲಗಳಲ್ಲಿ ಮಾತ್ರ ಈ ಮೂರ್ತಿಗಳು ಇದ್ದಂತೆ ತೋರುತ್ತದೆ. ಉಂಡಿಗನಾಳಿನ ಚಾಮುಂಡೇಶ್ವರಿ, ಮರಲೆಯ ಕೇಶವ, ಹಳೇಬೀಡಿನ ಹೊಯ್ಸಳೇಶ್ವರ, ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯಗಳಲ್ಲಿ ಕೆಲವು ಮದನಿಕೆ ವಿಗ್ರಹಗಳು ಉಳಿದುಬಂದಿವೆ. ಬೇಲೂರಿನ ಚೆನ್ನಕೇಶವ ದೇವಾಲಯದಲ್ಲಿ ಮೂಲತಃ ಇದ್ದಿರಬಹುದಾದ ನಲವತ್ತೆರಡು ಮೂರ್ತಿಗಳಲ್ಲಿ ನಾಲ್ಕು ಕಣ್ಮರೆಯಾಗಿವೆ.

ಮದನಿಕೆ ಶಿಲ್ಪಗಳು ಬಹುಮಟ್ಟಿಗೆ ಸ್ತ್ರೀಮೂರ್ತಿಗಳು, ಬೇಲೂರಿನ ದೇವಾಲಯದ ಒಂದೆರಡು ಮೂರ್ತಿಗಳು ಪುರುಷ ಮೂರ್ತಿಗಳಂತೆ ಕಂಡುಬಂದರೂ ಅವು ಪುರುಷ ವೇಷಧಾರಿ ಶಿಲ್ಪಗಳೆಂದು ಪರಿಗಣಿಸಲಾಗಿದೆ. ಭೈರವಿ, ಸರಸ್ವತಿ, ವೇಣುಧಾರಿ ಮುಂತಾದ ದೇವತಾ ರೂಪ ಧರಿಸಿದ ಸ್ತ್ರೀಮೂರ್ತಿಗಳೂ ಇಲ್ಲಿವೆ. ಅತಿಭಂಗ, ತ್ರಿಭಂಗ ಮುದ್ರೆಗಳಲ್ಲಿ ಹಲವಿಧ ವ್ಯಾಪಾರಗಳಲ್ಲಿ ನಿರತರಾಗಿರುವ ಮದನಿಕೆಯರು, ಫಲಕಗಳ ಕೆಳಭಾಗದಲ್ಲಿ ಮದನಿಕೆಯರ ವಿವಿಧ ಚಟುವಟಿಕೆಗಳಿಗೆ ಸಹಾಯಕರಾಗಿರುವ ಸಣ್ಣ ಪ್ರಮಾಣದಲ್ಲಿ ಕಡೆಯಲಾದ ಪರಿಚಾರಕವರ್ಗ, ಮದನಿಕೆಯರ ತಲೆಯ ಮೇಲೆ ಕಮಾನಿನಂತೆ, ಲತಾತೋರಣಗಳಂತೆ, ಅವರ ದೈವೀನಟನೆಗೆ ಪೂರಕವಾದ ಪ್ರಭಾವಳಿಗಳಂತೆ ಕಾಣುವ ವೃಕ್ಷಶಾಖೆಗಳು– ಹೀಗೆ ಈ ವಿಗ್ರಹಗಳ ಫಲಕ ಭಾಗಗಳನ್ನು ಕಾಣಬಹುದು.

ಮದನಿಕೆ ಶಿಲ್ಪಗಳು ನವರಸಭರಿತವಾಗಿದ್ದರೂ ಶೃಂಗಾರರಸಪ್ರಧಾನವಾಗಿವೆ. ಬೇಲೂರಿನ ಮದನಿಕೆ ಮೂರ್ತಿಗಳ ಪೈಕಿ ಕನ್ನಡಿಯಲ್ಲಿ ತನ್ನ ಸೌಂದರ್ಯವನ್ನು ನೋಡಿಕೊಳ್ಳುತ್ತಿರುವ, ಅಲಂಕಾರ ಮಾಡಿಕೊಳ್ಳುತ್ತಿರುವ, ನರ್ತನ ಮಾಡುತ್ತಿರುವ, ವಾದ್ಯಗಳನ್ನು ನುಡಿಸುತ್ತಿರುವ, ಹಾಡುತ್ತಿರುವ, ಬೇಟೆಯಾಡುತ್ತಿರುವ, ವಸ್ತ್ರದಲ್ಲಿ ಸೇರಿದ್ದ ಚೇಳನ್ನು ಕೊಡವುತ್ತಿರುವ ಭಂಗಿಗಳಲ್ಲಿರುವ ಸ್ತ್ರೀ ಶಿಲ್ಪಗಳಿವೆ. ಮದನಿಕೆ ಮೂರ್ತಿಗಳು ಯಾವುದೇ ಭಂಗಿಯಲ್ಲಿದ್ದರೂ ನೈಸರ್ಗಿಕವಾಗಿವೆ. ಅನುಪಮ ಲಾವಣ್ಯದ ಅಮರ ಸೌಂದರ್ಯದ ಈ ಮೂರ್ತಿಗಳನ್ನು ಕುರಿತು ಕನ್ನಡದ ಖ್ಯಾತ ಸಾಹಿತಿ ದಿವಂಗತ ಡಿ. ವಿ. ಗುಂಡಪ್ಪನವರು "ಅಂತಃಪುರಗೀತೆಗಳು" ಎಂಬ ಕೃತಿಯನ್ನು ರಚಿಸಿದ್ದಾರೆ.

ಅನೇಕ ಹೊಯ್ಸಳ ಶಿಲ್ಪಗಳು ದೇಶವಿದೇಶಗಳ ವಸ್ತುಸಂಗ್ರಹಾಲಯಗಳನ್ನು ಸೇರಿವೆ. ಕೋಪನಹೇಗನ್ನಿನ ಡೆನ್ಮಾರ್ಕ್ ರಾಷ್ಟ್ರೀಯ ವಸ್ತು ಸಂಗ್ರಹಾಲಯದಲ್ಲಿರುವ ಹೊಯ್ಸಳ ಶಿಲ್ಪಗಳಲ್ಲಿ ಹಲವು ಹಾಸನ ಜಿಲ್ಲೆಯವು. ಕ್ರಿ.ಶ. ೧೮೫೪–೧೯೦೦ರ ನಡುವಣ ಕಾಲದಲ್ಲಿ, ಭಾರತದಲ್ಲಿ ಡೇನಿಷ್ ಮಿಷನರಿಯಾಗಿದ್ದ ಎಡ್ವರ್ಡ್ ಲೊವೆಂಥಾಲ್ ಎಂಬಾತನ ಈ ಸಂಗ್ರಹದಲ್ಲಿ 'ಎರಡು ರೂಪಾಯಿ ಹಾಗೂ ಒಂದು ತಂಪು ಕನ್ನಡಕಕ್ಕೆ ಕೊಂಡ' ಹೊಯ್ಸಳ ಶಿಲ್ಪವೊಂದೂ ಸೇರಿದೆ. ಅಮೇರಿಕದ ನ್ಯೂಯಾರ್ಕಿನ ಮೆಟ್ರೊಪಾಲಿಟನ್ ವಸ್ತು ಸಂಗ್ರಹಾಲಯದಲ್ಲಿ ಬಳ್ಳಿಗಾವೆಯ ದಾಸೋಜನ ಹೆಸರಿರುವ, ಸುಮಾರು ನಾಲ್ಕು ಅಡಿ ಎತ್ತರದ ಮನೋಹರ ಕೇಶವ ವಿಗ್ರಹವಿದೆ. ಇದು ಕಿಕ್ಕೇರಿಯ ದೇವಾಲಯಕ್ಕೆ ಸೇರಿದುದು.

ವಾಸ್ತುವಿನ್ಯಾಸದ ಸೂಕ್ಷ್ಮತೆ, ಶಿಲ್ಪ ವಿವರಗಳ ಸಂಕೀರ್ಣತೆಗಳೇನೇ ಇರಲಿ, ಹೊಯ್ಸಳ ದೇವಾಲಯದ ನೋಡುಗನ ಮನ ಮುಟ್ಟುವುದು ಕೆತ್ತನೆಯ ಅನಂತ ವೈವಿಧ್ಯ. ಶಿಲೆಯ ಅಂಗುಲ ಅಂಗುಲವೂ ಹೊಯ್ಸಳ ಕಲಾಕಾರನ ಸೂಕ್ಷ್ಮ ಗಮನಕ್ಕೆ ಪಾತ್ರವಾಗಿದೆ. ನಿರ್ಜೀವ ವಸ್ತುರಾಶಿಯನ್ನು ಜೀವಂತ ಕಲಾಸಿರಿಯಾಗಿ ಪರಿವರ್ತಿಸುವುದರಲ್ಲಿ ಹೊಯ್ಸಳ ಶಿಲ್ಪಿ ಸಫಲನಾಗಿದ್ದಾನೆ.

ಭಾರತೀಯ ಶಿಲ್ಪಕಲೆಯ ಬಹುಭಾಗ ನಮಗೆ ತಿಳಿಯದ ರೂವಾರಿಗಳ ಕೆತ್ತನೆ ಕೆಲಸವಾಗಿದೆ. ಆದರೆ ಹೊಯ್ಸಳ ಶಿಲ್ಪಕಲೆ ಇದಕ್ಕೊಂದು ಅಪವಾದವಾಗಿ ನಿಲ್ಲುವುದು ಒಂದು ವೈಶಿಷ್ಟ್ಯ. ಅನೇಕ ಶಿಲ್ಪಗಳು ರೂವಾರಿಗಳ ಹಸ್ತಾಕ್ಷರಗಳನ್ನು ಹೊಂದಿವೆ. ಕೆಲವು ಶಿಲ್ಪಶಾಸನಗಳಲ್ಲಿ ಶಿಲ್ಪಿ ಎಂದು ಹೆಸರಿನ ಜೊತೆಗೆ ಅವನ ತಂದೆಯ ಹೆಸರು, ಊರು ಹಾಗೂ ಬಿರುದುಗಳನ್ನು ಕೂಡ ಹೇಳಿದೆ. ಬಳ್ಳಿಗಾವೆಯ ದಾಸೋಜ,

ಆತನ ಮಗ ಚಾವಣ, ಚಿಕ್ಕಹಂಪ, ಮಲ್ಲಿಯಣ್ಣ, ಕೆಂಚ ಮಲ್ಲಿಯಣ್ಣ, ಕೇದಾರೋಜ, ಪದರಿಮಲ್ಲೋಜ, ಕಾಳಿದಾಸಿ, ಗದುಗಿನ ನಾಗೋಜ, ಮಾಬ, ಕೇತಣ, ರೇವೋಜ, ಮಲ್ಲಿತಮ್ಮ, ಪುಸಣಿತಮ್ಮ, ನಂದಿಯ ಬೈಜೋಜ, ಚಿಕ್ಕ ಮಲ್ಲಿತಮ್ಮ, ಚೌಡಯ, ಬಮಯ, ಲೋಹಿತ, ಯಲಮಸಯ, ಜಕ್ಕಣ, ಹೊನ್ನೋಜ, ಮಯಿಣ, ಕೇಶವದೇವ, ಲೊಕ್ಕಿಗುಂಡಿಯ ಕಲಿಯುಗ ವಿಶ್ವಕರ್ಮ, ಬಲ್ಲಣ್ಣ, ಬೋಚಣ, ಚವುಗ,ದೇವೋಜ, ಒಡೆಯಗಿರಿಯ ಹರಿಷ, ತಾಣಗುಂದೂರಿನ ಹರಿಷ- ಹೀಗೆ ಹಲವು ಶಿಲ್ಪಿಗಳು ಉಲ್ಲೇಖಿತರಾಗಿದ್ದಾರೆ. ಒಬ್ಬನೇ ಶಿಲ್ಪಿ ಹಲವು ದೇವಾಲಯಗಳಲ್ಲಿ ಉಲ್ಲೇಖಗೊಂಡಿರುವ ನಿದರ್ಶನಗಳೂ ಇವೆ. ಈ ಕಾಲದ ಪ್ರಸಿದ್ಧ ರೂವಾರಿ ಮಲ್ಲಿತಮ್ಮ. ಈತ ೧೧೯೬ರಿಂದ ೧೨೬೮ರ ವರೆಗೆ ಅಮೃತಾಪುರ, ಹಾರನಹಳ್ಳಿ, ನುಗ್ಗೇಹಳ್ಳಿ, ಗೋವಿಂದನಹಳ್ಳಿ, ಜಾವಗಲ್ಲು ಹಾಗೂ ಸೋಮನಾಥಪುರದ ದೇವಾಲಯಗಳಲ್ಲಿಯ ಹತ್ತಾರು ಶಿಲ್ಪಗಳನ್ನು ತನ್ನ ಅಂಕಿತದೊಡನೆ ಕೆತ್ತಿದ್ದಾನೆ.

# ವಿಜಯ ನಗರ ವಾಸ್ತುಶಿಲ್ಪ

ಎಂ. ವಿ. ಶ್ರೀನಿವಾಸ್

ಹದಿನಾಲ್ಕನೆಯ ಶತಮಾನದಲ್ಲಿ ಮುಸ್ಲಿಂ ಆಕ್ರಮಣವನ್ನು ತಡೆಗಟ್ಟುವುದಕ್ಕಾಗಿ ಸ್ಥಾಪನೆಗೊಂಡ ಬಲಿಷ್ಠ ಹಾಗೂ ಯುದ್ಧೋತ್ಸಾಹಿ ವಿಜಯನಗರ ಸಾಮ್ರಾಜ್ಯ ವಾಸ್ತುಶಿಲ್ಪಕ್ಕೆ ಅದರಲ್ಲಿಯೂ ಮುಖ್ಯವಾಗಿ ದೇವಾಲಯ ವಾಸ್ತುಶಿಲ್ಪಕ್ಕೆ ಪ್ರಬಲವಾದ ಉತ್ತೇಜನವನ್ನು ಕೊಟ್ಟಿತು. ಈ ಕಾಲದ ಶಿಲ್ಪಿಗಳು ಧರ್ಮ, ನಗರ ಮತ್ತು ಸೈನ್ಯ ವಾಸ್ತುಶಿಲ್ಪಕ್ಕೆ ಅಸಾಮಾನ್ಯವಾದ ಕೊಡುಗೆ ಸಲ್ಲಿಸಿರುತ್ತಾರೆ. ಅಲಂಕಾರಿಕ ಕಲ್ಪನೆಯ ಹಿರಿಮೆಯಲ್ಲಿ ವಿಜಯನಗರ ಶೈಲಿಯ ವಾಸ್ತುಶಿಲ್ಪವನ್ನು ಮೀರಿಸುವಂತಹದು ಭಾರತದಲ್ಲಿಯೇ ಇಲ್ಲ. ವಿಜಯನಗರದ ರಾಜಾಶ್ರಯದಲ್ಲಿ ನಗರಗಳ ದೇವಾಲಯಗಳು ಅದ್ಭುತವಾಗಿ ಬೆಳೆದವು. ಇದರಿಂದ ದೇವಾಲಯಗಳು ನಗರಜೀವನದಲ್ಲಿ ಪ್ರಧಾನ ಪಾತ್ರವನ್ನು ಬಿಂಬಿಸಿದವು.

**ಮಹಾ ಪ್ರಭಾವಗಳು**

ಹದಿನಾಲ್ಕನೆಯ ಶತಮಾನದಲ್ಲಿ ಪ್ರಾರಂಭವಾಗಿ ಹದಿನಾರನೆಯ ಶತಮಾನದಲ್ಲಿ ಉನ್ನತಿಯ ಪರಾಕಾಷ್ಠೆಯನ್ನು ಮುಟ್ಟಿದ ಈ ವಿಜಯನಗರ ಮಹಾ ವಾಸ್ತುಶಿಲ್ಪ ಶೈಲಿ ಇತರ ಬೇರೆ ಬೇರೆ ವಾಸ್ತುಶಿಲ್ಪ ಶೈಲಿಗಳಿಂದ ಪ್ರಭಾವಿತವಾಗಿದೆ. ದೇವಾಲಯಗಳ ನಿರ್ಮಾಣದಲ್ಲಿ ಪೂರ್ವಕಾಲದ ಶೈಲಿಗಳ ಪ್ರಭಾವ ಸ್ಪಷ್ಟವಾಗಿ ಕಾಣುತ್ತದೆ. ಮೊದಮೊದಲು ನಿರ್ಮಾಣವಾದ ದೇವಾಲಯಗಳಲ್ಲಿ ಹೊಯ್ಸಳ, ಕದಂಬ ಶೈಲಿಯ ಮೂಲಾಂಶಗಳೇ ಪ್ರಮುಖವಾಗಿದ್ದವು. ಆದರೆ, ಆಮೇಲೆ ವಿಜಯನಗರದ ನೈಜಶೈಲಿಯೇ ವಿಕಾಸಗೊಂಡು ತನ್ನ ರೂಪವನ್ನು ತಾಳಿತು. ವಿಜಯನಗರದ ವಾಸ್ತುಶಿಲ್ಪ ಕಲೆಯನ್ನು "ದ್ರಾವಿಡ ಶೈಲಿಯ ಭಾವನಾತ್ಮಕ ವಿಕಸನದ ಪರಾಕಾಷ್ಠೆ" ಎಂದು ವರ್ಣಿಸಲಾಗಿದೆ. ವಿಜಯನಗರದ ರಾಜರು ತಮ್ಮ ಸಾಮ್ರಾಜ್ಯದ ಉತ್ತರ ಭಾಗದಲ್ಲಿ ತಮ್ಮ ಕಾಲದ ವರೆಗೆ ಪರಂಪರವಿಡಿದು ಬಂದ ಚಾಲುಕ್ಯ, ಕಾಕತೀಯ ಮತ್ತು ಹೊಯ್ಸಳ ಸಂಪ್ರದಾಯಗಳನ್ನು ಅಳವಡಿಸಿಕೊಂಡರು. ತಮ್ಮ ಸಾಮ್ರಾಜ್ಯದ ದಕ್ಷಿಣ ಪ್ರಾಂತಗಳಲ್ಲಿ ದಕ್ಷಿಣದ ಪಾಂಡ್ಯರಲ್ಲಿ ಈಚೆಯ ವರೆಗಿನ ಬೆಳೆದುಬಂದ ಸಂಪ್ರದಾಯವನ್ನು ಅಳವಡಿಸಿಕೊಂಡರು. ಹೀಗೆ, ದಕ್ಷಿಣ, ಆಂಧ್ರ ಮತ್ತು ಕರ್ನಾಟಕ ಪ್ರದೇಶದಲ್ಲಿಯ ಅವರ ದೇವಾಲಯಗಳು ಚಾಲುಕ್ಯ, ಹೊಯ್ಸಳ, ಕಾಕತೀಯ ಸ್ಫೂರ್ತಿಯನ್ನು ಉಳಿಸಿಕೊಂಡಿದ್ದರೆ, ತಮಿಳುನಾಡಿನ ದೇವಾಲಯಗಳು ಪಲ್ಲವ, ಚೋಳ, ಪಾಂಡ್ಯ ಶಿಲ್ಪಶಾಸ್ತ್ರವನ್ನು ಮುಂದುವರಿಸಿದೆ. ವಿಜಯನಗರದ ಶಿಲ್ಪಿಗಳು ಚಾಲುಕ್ಯ ಶೈಲಿಯ ದೇವಕೋಷ್ಟವನ್ನು ಅಳವಡಿಸಿದರು. ಎತ್ತರದ ತಳಪಾಯ ಹಾಗೂ ಅಲಂಕರಣಗಳು ಚಾಲುಕ್ಯ ಹೊಯ್ಸಳ ಶೈಲಿಯ ಪ್ರಭಾವವನ್ನು ವ್ಯಕ್ತಪಡಿಸುತ್ತವೆ. ಗೋಪುರ ಮತ್ತು ವಿಶಾಲ ಸಭಾಂಗಣ ಚೋಳ ಸಂಪ್ರದಾಯದ ಪ್ರಭಾವವನ್ನು ಎತ್ತಿ ತೋರಿಸುತ್ತವೆ. ಹೊಯ್ಸಳ ಶೈಲಿಯ ಹೂಗಳ ಕೆತ್ತನೆ ವಿಜಯನಗರದ ವಾಸ್ತುಶಿಲ್ಪಗಳಿಂದ ಅತಿಶಯವಾಗಿ ಅಭಿವೃದ್ಧಿಗೊಂಡಿತು.

ಪ್ರಾಚೀನ ಪವಿತ್ರ ಮಂದಿರಗಳನ್ನು ವಿಸ್ತಾರಗೊಳಿಸುವ ಇಚ್ಛೆಯಿಂದ ಅವಕ್ಕೆ ಅನಂತರ ಹಲವು ಗೋಡೆಗಳನ್ನೂ ದ್ವಾರಗಳನ್ನೂ ಸೇರಿಸಿ ದೇವಾಲಯ ನಿರ್ಮಾಣದ ನೀತಿಯನ್ನು ರೂಪಿಸಲಾಯಿತು. ಅಂತಹ ಕಲಾತ್ಮಕತೆಯೇನೂ ಇಲ್ಲದ ಹೇಮಕೂಟ ದೇವಾಲಯದಿಂದ (ಕ್ರಿ. ಶ. ೧೩೪೬) ಪ್ರಾರಂಭ ಮಾಡಿಕೊಂಡು ವಿಜಯನಗರದ ವಾಸ್ತುಶಿಲ್ಪಿಗಳು ಅಲಂಕಾರಮಯವೂ, ಭವ್ಯವೂ ಆದ ಕಟ್ಟಡಗಳನ್ನು ನಿರ್ಮಾಣ ಮಾಡಿದರು. ಈ ನಿರ್ಮಾಣಗಳಿಗೆ ಅವರು ಸ್ಥಳೀಕ ಬೆಣಚುಗಲ್ಲನ್ನು ಸಾಮಗ್ರಿಯಾಗಿ ಉಪಯೋಗಿಸಿದರು. ಇದು ಅವರ ಕಟ್ಟಡಗಳ ಬಲವನ್ನೂ, ಬಾಳಿಕೆಯನ್ನೂ ಹೆಚ್ಚಿಸಿತು. ಈ ಮಾಧ್ಯಮ ವಿಜಯ ನಗರದ ರಾಜರ ದಾರ್ಢ್ಯಮಯ ಸ್ವಭಾವದ ಸಂಕೇತವೂ ಆಗಿತ್ತು. ಹೊಯ್ಸಳರು ಉಪಯೋಗಿಸಿದ್ದ ಸಾಬೂನು ಕಲ್ಲುಗಳ ಬಳಕೆಯನ್ನು ಇವರು ತ್ಯಜಿಸಿದ್ದರೂ ಒಂದೊಂದೆಡೆ ಯಥೋಚಿತವಾಗಿ ನೀಲಿಗಲ್ಲನ್ನು ತಮ್ಮ ನಿರ್ಮಾಣಕ್ಕೆ ಉಪಯೋಗಿಸಿಕೊಂಡರು. ದೇವಾಲಯವನ್ನು ಅದರ ಮುಚ್ಚಿಗೆಯ ವರೆಗೆ ಕಲ್ಲಿನಿಂದಲೂ ಅದರ ಮೇಲುಗಡೆಯನ್ನು ಇಟ್ಟಿಗೆಯಿಂದಲೂ ಗಾರೆಯಿಂದಲೂ ಕಟ್ಟಲಾಯಿತು. ಹಾಗೆಯೇ ವಿಜಯನಗರದ ವಾಸ್ತುಶಿಲ್ಪಿಗಳು ಕಟ್ಟಡಗಳ ಸ್ಥಳ ನಕ್ಷೆಯನ್ನು ಮಾರ್ಪಡಿಸಿಕೊಂಡರು. ಗರ್ಭ ಗೃಹವನ್ನು ನೆಟ್ಟನೆ ಚೌಕಾಕಾರ ಮಾಡಿಕೊಂಡರು. ವಿಜಯನಗರದ ಶೈಲಿಯ ಇನ್ನೊಂದು ಪ್ರಮುಖವಾದ ಮಾರ್ಪಾಡೆಂದರೆ, ಉನ್ನತ ಸ್ಥಳದ ಮೇಲೆ ದೇವಾಲಯ ನಿರ್ಮಾಣ. ವಿವಿಧ ಅಲಂಕಾರಿಕ ಅಂಶಗಳನ್ನು ಸೇರಿಸಿ ಪ್ರತಿಮಾ ರೂಪಗೊಳಿಸಿರುವುದು ಪೂರ್ವ ಸಂಪ್ರದಾಯದಿಂದ ಮಾರ್ಪಾಡಾದುದರ ಗುರುತಾಗಿದೆ.

ಕೆಲವು ದೇವಾಲಯಗಳಲ್ಲಿ ಪೋರ್ಚುಗೀಸ್ ನಾವಿಕರು ತಮ್ಮ ಕುದುರೆಗಳನ್ನು ನಡೆಸುವ ಕೆತ್ತನೆಗಳನ್ನು ನಾವು ಕಾಣುತ್ತೇವೆ. ಆರ್. ಎನ್. ಸಾಲೆತೂರೆಯವರು ಹೇಳುವಂತೆ, "ವಿಜಯನಗರ ವಾಸ್ತುಶಿಲ್ಪಿಗಳು ಅಂಧಾನುಕರಣೆಯವರಲ್ಲ,

ಅವರು ಪರಮ ಸಹಿಷ್ಣುಗಳೂ ಆಗಿದ್ದರು". ಅವರು ಸಾಂಪ್ರದಾಯಿಕ ಮಾದರಿಗಳನ್ನು ಅನುಸರಿಸಿದುದು ನಿಜ. ಆದರೆ, ಪೂರ್ವಪದ್ಧತಿಯ ಹಲವಾರು ಮೂಲಾಂಶಗಳನ್ನು ಸ್ವೀಕರಿಸಿಕೊಂಡು ಒಂದು ಸಂಕೀರ್ಣ ಕಲೆಯನ್ನು ಸೃಷ್ಟಿಸಿಕೊಂಡರು. ದೇವಾಲಯಗಳ ವಿಮಾನದ ಎದುರುಗಡೆ ಸುಖನಾಸಿಕೆ, ಬಾಗಿಲ್ವಾಡದಲ್ಲಿ ಗಂಗೆಯ ಕೆತ್ತನೆ, ಅಥವಾ ತಾಡಪತ್ರಿಯ ದೇವಾಲಯದಲ್ಲಿ ಇರುವ ಹಾಗೆ ನಯವಾದ ಕಲ್ಲಿನ ಕೆತ್ತನೆಗಳನ್ನು ಬೆಣಚುಗಲ್ಲಿನ ಬಾಗಿಲ ಚೌಕಟ್ಟುಗಳಿಗೆ ಹೊಂದಿಸಿ ಅಲಂಕಾರಗೊಳಿಸಿರುವುದು– ವಿಜಯನಗರದ ದೇವಾಲಯಗಳ ಕೆಲವು ಸಾಮಾನ್ಯ ಲಕ್ಷಣಗಳಾಗಿವೆ. ಕಂಬಗಳಲ್ಲಿ ಕೌಶಲಪೂರ್ಣವಾದ ಕೆತ್ತನೆಗಳು ಈ ಶೈಲಿಯ ಅತ್ಯಂತ ಮಹತ್ವದ ಲಕ್ಷಣವಾಗಿದೆ. ಸಮಗ್ರ ದೇವಾಲಯ ನಿರ್ಮಾಣದ ಕಲೆಯಲ್ಲಿ ಇವು ವಾಸ್ತುಶಿಲ್ಪದ ಮುಖ್ಯ ಅಂಶಗಳಾಗಿರುತ್ತವೆ.

ವಾಸ್ತುಶಿಲ್ಪಿಗಳು ದೇವಾಲಯ ನಿರ್ಮಾಣಕ್ಕೆ ಗೋಲಕಂಬ, ಜೋಡಿಕಂಬ, ದೀಪಕಂಬ, ಗುಂಪುಕಂಬಗಳನ್ನು ಉಪಯೋಗಿಸಿದ್ದಾರೆ. ದೀಪಗಂಬ ಈ ಶೈಲಿಯ ಒಂದು ವಿಶಿಷ್ಟ ಲಕ್ಷಣ. ಗುಂಪು ಪ್ರತಿಮೆಗಳ ಆಧಾರಸ್ತಂಭ ಮಧ್ಯಭಾಗದಲ್ಲಿ ಇಲ್ಲವೆ ಹಿಂಬದಿಯಲ್ಲಿರುವುದು ಸರ್ವಸಾಮಾನ್ಯ ರೂಪರೇಖೆಯಾಗಿದೆ. ಇನ್ನೊಂದು ಬಗೆಯ ಕಂಬ ಹಲವು ಸೂಕ್ಷ್ಮ ಕೆತ್ತನೆಯುಳ್ಳ ಒಂದರ ಮೇಲೊಂದರಂತಿರುವ ಸುರುಳಿಗಳಿಂದ ಕೂಡಿರುತ್ತದೆ. ಇದನ್ನು "ಚಿತ್ರಖಂಡ ಸ್ತಂಭ"ವೆನ್ನುತ್ತಾರೆ. ಇವರಲ್ಲಿ ಇನ್ನೊಂದು ಬಗೆಯದಾಗಿ ಹಲವು ಸಣ್ಣ ಕಂಬವಿರುತ್ತದೆ. ಈ ಸಣ್ಣಕಂಬಗಳನ್ನು ನಾದಕಂಬಗಳೆನ್ನುತ್ತಾರೆ. ಏಕೆಂದರೆ ಇವುಗಳಿಂದ ಸಂಗೀತದ ಸಪ್ತಸ್ವರಗಳು ಹೊರಡುತ್ತವೆ. ಹೆಚ್ಚಿನ ಕಂಬಗಳಲ್ಲಿಯೂ ಯಾಳಿಗಳು, ಕುದುರೆಗಳು, ರೆಕ್ಕೆಕುದುರೆಗಳು– ಇವುಗಳ ಆಕೃತಿಗಳ ಮೇಲೆ ಸವಾರಿ ಮಾಡಿಕೊಂಡು ಹೋರಾಡುವವರ ಕೆತ್ತನೆಗಳಿವೆ. ಪರ್ಸಿಬ್ರೌನ್ ಎಂಬಾತ ಹೇಳುವಂತೆ, ಕಂಬಗಳಿಗೂ, ಕಮಾನುಗಳಿಗೂ ಕೊಟ್ಟಿರುವ ಪ್ರಾಧಾನ್ಯ, ಗಹನವಾದ ಮತ್ತು ಸೂಕ್ಷ್ಮವಾದ ಕೆಲಸ, ತೊಡಕಾದ ಜೋಡಣೆ– ಇವು ವಿಜಯನಗರದ ದೇವಾಲಯವನ್ನು ಒಂದು ಶಿಲಾನಾಟಕವೆಂಬಂತೆ ಮಾಡಿವೆ. ಕಂಬಗಳ ವೈವಿಧ್ಯಮಯ ಮತ್ತು ಜಟಿಲ ರಚನೆ ವಿಜಯನಗರ ಶೈಲಿಯಲ್ಲಿ ಪ್ರಾಯಶಃ ಅತಿಯಾಗಿ ಎದ್ದುಕಾಣುವ ಲಕ್ಷಣ– ಎಂದು ಪ್ರೊ. ನೀಲಕಂಠ ಶಾಸ್ತ್ರಿಯವರು ಭಾವಿಸಿರುತ್ತಾರೆ. ದೇವಾಲಯದಲ್ಲಿ ಕಾಣುವ ಮದನಕೈಗಳು ಕೂಡ ಕಂಬಗಳಂತೆಯೇ ಬಹಳ ಅಲಂಕಾರಮಯವಾಗಿವೆ. ಸಾಮಾನ್ಯವಾಗಿ ಈ ಮದನಕೈಗಳು ವಿಸ್ತೃತವಾಗಿ ಸುರುಳಿ ಸುತ್ತಿಕೊಂಡು ತಾವರೆ ಮೊಗ್ಗಿನಲ್ಲಿ ಅಂತ್ಯಗೊಳ್ಳುತ್ತವೆ. ಕಲಾ ಇತಿಹಾಸಕಾರರಲ್ಲಿ ಅನೇಕರು ಈ ತಾವರೆಯ ಸಂಕೇತ ಪಾಂಡ್ಯರ ಕಲೆಯಿಂದ ಬಂದುದಾಗಿ ಭಾವಿಸುತ್ತಾರೆ. ವಿಜಯನಗರ ದೇವಾಲಯದ ಎತ್ತರವಾದ ಹೆಬ್ಬಾಗಿಲಿನ ಮೇಲುಗಡೆ ಉದ್ದವಾದ ಗೋಪುರವಿದೆ. ಹೆಬ್ಬಾಗಿಲು ನಿರ್ಮಿತವಾದರೂ ಗೋಪುರ ಇಟ್ಟಿಗೆ ಗಾರೆಗಳಿಂದ ನಿರ್ಮಿತವಾಗಿ ಸಜೀವವೆಂಬಂತೆ ಕಾಣಿಸುವ ದೇವತೆಗಳ ಮತ್ತು ಮನುಷ್ಯರ ಪ್ರತಿಮೆಗಳಿಂದ ಕೂಡಿವೆ. ತಾಡಪತ್ರಿಯ ಗೋಪುರ ಇದಕ್ಕೊಂದು ನಿದರ್ಶನ. ಈ ಗೋಪುರದ ಉದ್ದಕ್ಕೂ ಅತ್ಯಂತ ವಿಸ್ತೃತವಾದ ಶಿಲ್ಪಗಳ ಕೆತ್ತನೆಯಿದೆ. ಇದು ಅತಿಶಯ ಕೌಶಲ, ನಿರ್ದಿಷ್ಟತೆಗಳುಳ್ಳದ್ದು, ವಿಶೇಷಾಭಿರುಚಿಯ ಶ್ರೀಮಂತ ಹಾಗೂ ಅಸಾಧಾರಣ ಪ್ರಭಾವವನ್ನು ಬೀರುತ್ತದೆ. ಕೃಷ್ಣದೇವರಾಯ ಕಾಂಚೀಪುರದಲ್ಲಿ ಕಟ್ಟಿಸಿದ ೧೮೮ ಅಡಿ ಎತ್ತರದ ಏಕಾಂಬರನಾಥ ದೇವಾಲಯದ ಗೋಪುರ ಇದಕ್ಕೊಂದು ಒಳ್ಳೆಯ ಉದಾಹರಣೆ. ಇದು 'ರಾಯಗೋಪುರಂ' ಎಂಬ ಅಭಿಧಾನವನ್ನು ಪಡೆದಿದೆ. ಇಂತಹ ಅಚ್ಚರಿಯ ಗೋಪುರಗಳು ಶ್ರೀರಂಗಂ , ಶ್ರೀಶೈಲ ಮತ್ತು ಬೇಲೂರು ದೇವಾಲಯಗಳಲ್ಲಿವೆ.

ವಿಜಯನಗರ ರಾಜರು ತಮ್ಮ ಅಧಿಕಾರದ ಉಚ್ಛ್ರಾಯ ಕಾಲದಲ್ಲಿ ತಮ್ಮ ಸಾಮ್ರಾಜ್ಯದಲ್ಲಿದ್ದ ದೇವಾಲಯಗಳನ್ನು ಬೃಹತ್ಪ್ರಮಾಣದಲ್ಲಿ ಊರ್ಜಿತಗೊಳಿಸಿದರು. ದೇವಾಲಯಗಳಲ್ಲಿ ವ್ಯಾಪಕ ಸಮಾರಂಭಗಳು ಹೆಚ್ಚುಹೆಚ್ಚಾದವು. ಇದಕ್ಕೆ ಅನುಗುಣವಾಗಿ ದೇವಾಲಯ ಪದ್ಧತಿಯೂ ವಿಸ್ತೃತಗೊಂಡಿತು. ಇವುಗಳಿಂದ ದೇವಾಲಯದೊಳಗಣ ಕಟ್ಟಡಗಳೂ ಹೆಚ್ಚಾದವು. ಇದು ಜನತೆಯ ಮನೋಭಾವದ ಮಾರ್ಪಾಡಿಗೆ ಸಹಾಯಕವಾಯಿತು. ದೇವಾಲಯ ನಿರ್ಮಾಣದಲ್ಲಿ ಮುಖ್ಯವೆನಿಸುವ ಹೊಸ ರಚನೆಯೆಂದರೆ, 'ಕಲ್ಯಾಣ ಮಂಟಪ' ಅಥವಾ 'ವಸಂತ ಮಂಟಪ' ಈ ಸಭಾಂಗಣಗಳಿಗೆ ಶ್ರೀಮಂತವೆನಿಸುವ ಕೆತ್ತನೆಯ ಕಂಬಗಳುಳ್ಳ ಚಾವಣಿಗಳು. ಈ ಮಂಟಪಗಳು ನಾಲ್ಕು ಅಥವಾ ಐದು ಅಡಿ ಎತ್ತರದ, ನಾಲ್ಕು ಮೂಲೆಗಳ ಅಥವಾ ಬಹುಮೂಲೆಗಳ ಮೇಲುಪಾಯದಲ್ಲಿ ನಿಂತಿವೆ. ಇವಕ್ಕೆ ಸಾಮಾನ್ಯವಾಗಿ ನಾಲ್ಕೂ ಬದಿಗಳಲ್ಲಿ ಅಗಲ ಕಿರಿದಾದ ಮೆಟ್ಟಿಲುಗಳಿವೆ. ಮಂಟಪದ ಚಾವಣಿಯ ಒಳಭಾಗದಲ್ಲಿ ಕೆತ್ತನೆಯಲ್ಲದೆ, ನಡುವಿನಲ್ಲಿ ಮಾತ್ರ ಒಂದು ಜೋತಾಡುವ ಚಪ್ಪಟೆಯ ಕಮಲವಿದೆ. ಮಂಟಪಗಳ ತುದಿಯಲ್ಲಿ ಇಟ್ಟಿಗೆ ಗಾರೆಗಳಿಂದ ರಚಿತವಾದ ದೇವಕೋಷ್ಟಗಳಿವೆ.

ದೇವಾಲಯದ ಗೋಡೆಗಳ ಅಲಂಕರಣದಲ್ಲಿಯೂ ಪಾಂಡ್ಯ, ಚೋಳ, ಹೊಯ್ಸಳರ ಕಲೆಯ ಅನುಕರಣೆಯನ್ನು ಕಾಣಬಹುದು. ಗುಡಿಗಳ ನಿರ್ಮಾಪಕರು ಗೋಡೆಗಳನ್ನು ಅಲಕ್ಷ್ಯ ಮಾಡಲಿಲ್ಲ. ಅವು ರಾಮಾಯಣ, ಮಹಾಭಾರತ ಮತ್ತು ಇತರ ಪುರಾಣಗಳ ದೃಶ್ಯಗಳ ಕೆತ್ತುವಿಕೆಗಳಿಂದ ಅಲಂಕೃತವಾಗಿವೆ. ಶಿಲಾಮುದ್ರಿಕೆಗಳು, ನಾಗಬಂಧ – ಇವು ವಿಜಯನಗರದ ಶೈಲಿಯ ಮಹತ್ವದ ಲಕ್ಷಣಗಳಾಗಿವೆ. ವಿಪುಲವಾಗಿ ಗಾಳಿ ಬೆಳಕುಗಳಿಗೆ ತೆರವು ಮಾಡಿರುವ ಅವುಗಳ ರೂಪ ವಿಜಯನಗರದ ದೇವಾಲಯ ಶಿಲ್ಪದ ಇನ್ನೊಂದು ಮಹತ್ವಪೂರ್ಣ ಲಕ್ಷಣ. ವಿಜಯನಗರದ ಜೈನ ಬಸದಿಗಳು ಪಿರಮಿಡ್ಡುಗಳಂತಿವೆ. ಅವುಗಳ ಶಿಖರಗಳು ಇತರ ಹಿಂದೂ ದೇವಾಲಯಗಳವಕ್ಕಿಂತ ಭಿನ್ನವಾಗಿಲ್ಲ. ಆದರೆ ಗೋಡೆಗಳು ಮಾತ್ರ ಕೆತ್ತನೆಗಳಿಲ್ಲದಿವೆ. ಈ ಜೈನ ಬಸದಿಗಳ ಇನ್ನೊಂದು ಮುಖ್ಯ ಲಕ್ಷಣವಾಗಿ ಮಾನಸ್ತಂಭವಿದೆ. ಅನೇಕ ದೇವಾಲಯಗಳ ಕಪೋತ ಕೋಶಿದೆಗಳಲ್ಲಿ ಒಂದೇ ಕಲ್ಲಿನಲ್ಲಿ ಕೆತ್ತಿದ ತೂಗಾಡುವ ಕಲ್ಲ ಸಂಕಲೆಗಳಿವೆ.

### ಕೆಲವು ಪ್ರಸಿದ್ಧ ದೇವಾಲಯಗಳು

ವಿಜಯನಗರ ಕಾಲದ ದೇವಾಲಯಗಳಲ್ಲಿ ಶೃಂಗೇರಿಯ ವಿದ್ಯಾಶಂಕರ ದೇವಾಲಯ ಅನನ್ಯ ಮಹತ್ತರ ಸ್ಥಾನ ಹೊಂದಿದೆ. ಹದಿನೈದನೆಯ ಶತಮಾನದಲ್ಲಿ ನಿರ್ಮಾಣಗೊಂಡ ಈ ಸಂಕೀರ್ಣ ದೇವಾಲಯ ಹಲವು ವೈಶಿಷ್ಟ್ಯಗಳಿಂದ ಕೂಡಿದೆ. ವಿಜಯನಗರ ಶಿಲ್ಪ ಪ್ರಾರಂಭವಾಗಿ ಪ್ರಬುದ್ಧಾವಸ್ಥೆಯನ್ನು ತಲುಪುವ ಮೊದಲೇ ಇದು ನಿರ್ಮಾಣವಾಗಿತ್ತು. ಆದುದರಿಂದ ಇದರ ನಿರ್ಮಾಣದಲ್ಲಿ ಹೊಯ್ಸಳ ಶೈಲಿಯ ಲಕ್ಷಣಗಳನ್ನು ಗುರುತಿಸಬಹುದು. ಈ ದೇವಾಲಯದ ನವರಂಗ ಅಲಂಕಾರಮಯವಾದ ೧೨ ಕಂಬಗಳಿಂದ ಕೂಡಿದೆ. ಈ ಕಂಬಗಳ ಮೇಲುಭಾಗಗಳು ಗೋಡೆಗಳಲ್ಲಿ ಸೇರಿದ್ದ ಸಾಲುಗೋಪುರಗಳಿಂದ ಕೂಡಿವೆ. ಈ ಸಾಲು ಗೋಪುರಗಳು ದೊಡ್ಡ ಪ್ರತಿಮೆಗಳಿಗೆ

ಆಶ್ರಯಗಳಾಗಿವೆ. ಶುಕನಾಸಿ ಗರ್ಭಗುಡಿಗಳ ಸುತ್ತಲೂ ಅಗಲ ಕಿರಿದಾದ ಪ್ರದಕ್ಷಿಣ ಪಥವಿದೆ. ಗೋಡೆಗಳಲ್ಲಿ ಕುದುರೆ ಸವಾರರನ್ನು ಕೆತ್ತಿರುವ ಪಟ್ಟಿಗಳಿವೆ. ದೇವಾಲಯ ಐದು ಅಡಿ ಎತ್ತರದ ತಳಪಾಯದ ಮೇಲೆ ಎಂಟಡಿ ಎತ್ತರದ ಕಪೋಲದಿಂದ (ಚಾಚುಭಾಗ) ಕೂಡಿದೆ.

ವಿಜಯನಗರದ ಪಂಪಾಪತಿ ದೇವಾಲಯ ಅತಿ ಪುರಾತನವಾದುದು. ಅತ್ಯಂತ ಪವಿತ್ರವೆಂದು ಪರಿಗಣಿಸಲಾದುದು. ಲಾಂಗ್‌ಹರ್ಸ್ಟ್‌ನ್ ಅಭಿಪ್ರಾಯದಂತೆ ಇದನ್ನು ಒಂದನೆಯ ಹರಿಹರ ಶ್ರೀ ವಿದ್ಯಾರಣ್ಯರ ಉಪಯೋಗಕ್ಕೆಂದು ಕಟ್ಟಿಸಿದ. ಇದೊಂದು ವಿಶಾಲವಾದ ಸಂಕೀರ್ಣ ದೇವಾಲಯ. ಉತ್ತರ ಕಾಲದ ಚಾಲುಕ್ಯ ದೇವಾಲಯ ಕೇಂದ್ರದ ಸುತ್ತ ವಿಸ್ತೃತಗೊಂಡುದು. ಇದು ಕೃಷ್ಣದೇವಾರಾಯನಿಂದ ಮತ್ತು ಆತನ ಅನಂತರದವರಿಂದ ವಿಸ್ತಾರಗೊಳಿಸಲ್ಪಟ್ಟಿತು. ಇದಕ್ಕೆ ಮುಖ ಮಂಟಪವನ್ನೂ, ರಂಗಮಂಟಪವನ್ನೂ ಕಟ್ಟಿಸಿ ಸೇರಿಸಲಾಯಿತು. ಈ ರಂಗಮಂಟಪ ಕೆತ್ತನೆ ಕೆಲಸಗಳ ಕಂಬಗಳಿಂದ ಮತ್ತು ಸಮಕಾಲೀನ ಚಾವಣಿ ಬಣ್ಣಗಾರಿಕೆಗಳಿಂದ ಪ್ರಸಿದ್ಧವಾಗಿದೆ. ಈ ದೇವಾಲಯದ ಪೂರ್ವಗೋಪುರ ಹೊರ ಚಾಚುಗಲ್ಲುಗಳ ಮಾದರಿಯಲ್ಲಿ ಕಟ್ಟಲಾಗಿದ್ದು, ವಿಜಯನಗರದ ಗೋಪುರಗಳಲ್ಲಿ ಬಲು ದೊಡ್ಡದಾಗಿದೆ. ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ಕಟ್ಟಲಾದ ವಿಠಲಸ್ವಾಮಿ ದೇವಾಲಯ ಮತ್ತು ಹಜಾರ ರಾಮ ದೇವಾಲಯ ಎಂಬಿವೆರಡೂ ವಿಜಯನಗರ ಸಾಮ್ರಾಜ್ಯದ ಪರಿಷ್ಕೃತ ಮಾದರಿಗಳಾಗಿವೆ. ವಿಠಲಸ್ವಾಮಿ ದೇವಾಲಯ ವಿಜಯನಗರದ ಅತ್ಯಂತ ಅಲಂಕೃತ ಮತ್ತು ಸುಂದರ ದೇವಾಲಯ. ಈ ದೇವಾಲಯದ ನಿರ್ಮಾಣ ಎರಡನೆಯ ದೇವರಾಯನ ಆಳ್ವಿಕೆಯಲ್ಲಿ ಪ್ರಾರಂಭವಾಯಿತು. ನಿರ್ಮಾಣ ಕಾರ್ಯ ಕೃಷ್ಣದೇವರಾಯ, ಅಚ್ಯುತರಾಯ ಮತ್ತು ಸದಾಶಿವರಾಯನ ಕಾಲದವರೆಗೂ ಮುಂದುವರಿಯಿತು. ಇದು ೫೩೮ ಅಡಿ, ಮತ್ತು ೩೧೦ ಅಡಿ ವಿಸ್ತಾರದ ಸ್ಥಳದಲ್ಲಿ ನಿರ್ಮಾಣಗೊಂಡಿದೆ.

ಇದು ಆರು ಮಂಟಪಗಳಿಂದ ಕೂಡಿದೆ. ಪೂರ್ವ, ಉತ್ತರ, ದಕ್ಷಿಣ, ದಿಕ್ಕುಗಳಲ್ಲಿ ಮೂರು ಹೆಬ್ಬಾಗಿಲುಗಳುಳ್ಳದ್ದಾಗಿದೆ. ೫೫ ಅಡಿ ಉದ್ದದ ನವರಂಗ ಸುಂದರವಾಗಿ ಕೆತ್ತಿದ ಕೆತ್ತನೆಯುಳ್ಳ ೧೫ ಕಂಬಗಳಿಂದ ಕೂಡಿವೆ. ಸುಂದರವಾಗಿ ಕೆತ್ತಿದ ೪೮ ಕಂಬಗಳಿರುವ ಕಲ್ಯಾಣ ಮಂಟಪ ಅತ್ಯಂತ ಆಕರ್ಷಕವಾದ ಸಭಾಭವನವಾಗಿರುತ್ತದೆ. ಹಜಾರರಾಮ ದೇವಾಲಯ ವಿಜಯನಗರ ಶೈಲಿಯ ಆದರ್ಶಭೂತ ಉದಾಹರಣೆಯಾಗಿದೆ. ಅದು ೨೦೦ ಅಡಿ ಉದ್ದವೂ ೧೦೦ಅಡಿ ಅಗಲವೂ ಆಗಿದೆ. ಅದರಲ್ಲಿ ಪ್ರತ್ಯೇಕವಾಗಿ ಅಮ್ಮನವರ ಗರ್ಭಗೃಹ ಒಂದು ನವರಂಗ, ಮುಖಮಂಟಪ, ಕಲ್ಯಾಣಮಂಟಪ ಮತ್ತು ವಿಶಾಲವಾದ ಪ್ರಾಕಾರಗಳಿವೆ. ಪ್ರತಿಯೊಂದು ಗರ್ಭಗೃಹದಲ್ಲಿಯೂ ದ್ರಾವಿಡ ಶೈಲಿಯ ವಿಮಾನವಿದೆ. ಅರಮನೆಯ ಹೊರಭಾಗದಲ್ಲಿ ರಾಜಕುಟುಂಬದ ಖಾಸಗಿ ಪೂಜಾ ಸ್ಥಳದಲ್ಲಿ ದೇವಾಲಯವಿದೆ. ಅನಂತಶಾಯಿ ಗುಡಿಯ ಅನಂತಶಾಯಿ ದೇವಾಲಯ ವಿಸ್ತಾರವಾದ ಮತ್ತು ಉದ್ದವಾಗಿರುವ ವಿಮಾನಕ್ಕೆ ಉದಾಹರಣೆಯಾಗಿದ್ದು ಇಟ್ಟಿಗೆ ಕೆಲಸದ ಮೇಲ್ಮಟ್ಟದ ರಚನೆಯಾಗಿದೆ. ಇದು ದೊಡ್ಡ ಸಾಲಶಿಖರದಿಂದ ಕೂಡಿದೆ. ಲೇಪಾಕ್ಷಿಯ ಪಾಪನಾಶೇಶ್ವರ ದೇವಾಲಯ, ತಾಡಪತ್ರಿಯ ಚಿಂಕಲರಾಯ ದೇವಾಲಯ, ಕಂಚಿಯ ಕಾಮಾಕ್ಷಿ ದೇವಾಲಯ– ಇವು ಆ ಕಾಲದ ಪ್ರಮುಖ ದೇವಾಲಯಗಳು. ಶ್ರೀರಂಗಂ ದೇವಸ್ಥಾನವನ್ನು ವಿಜಯನಗರದ ರಾಜರು ವಿಸ್ತಾರಗೊಳಿಸಿದರು. ಅದು ಮೂರು ಹೊರ ಅಂಗಣಗಳಿಂದಲೂ ಗೋಪುರಗಳಿಂದಲೂ ಬಯಲು ಕಂಬಗಳಿಂದಲೂ ಕೃತಕ ಸರೋವರಗಳಿಂದಲೂ ಯುಕ್ತವಾಗಿದೆ. ಚಿದಂಬರಂ ಪೆನುಕೊಂಡ, ವೆಲ್ಲೂರು, ಪುಷ್ಪಗಿರಿ, ಕುಂಭಕೋಣಂ– ಇವು ಈ ಶೈಲಿಯ ಉತ್ತಮ ಉದಾಹರಣೆಗಳು. ಹೂವಿನ ಹಡಗಲಿಯ ಪಾಪನಾಶೇಶ್ವರ, ಕುರುವಟ್ಟಿಯ ಶಿವಾಲಯ ಇವು ಕೂಡಾ ಈ ಕಾಲದ ಪ್ರಮುಖ ಸ್ಮಾರಕಗಳು. ವಿಜಯನಗರದ ಸಾಮಂತರು ವಿಜಯನಗರದ ದೇವಾಲಯಗಳ ಮಾದರಿಯಲ್ಲಿ ಹಲವು ದೇವಾಲಯಗಳನ್ನು ಕಟ್ಟಿಸಿದರು. ಕೆಳದಿಯ ಅಘೋರೇಶ್ವರ ಮತ್ತು ವೀರಭದ್ರ ದೇವಾಲಯಗಳು, ಚಿತ್ರದುರ್ಗದ, ಸಮೀಪದ ನಿರ್ತಾಡಿಯ ರಂಗನಾಥ ದೇವಾಲಯ ಈ ಶೈಲಿಗೆ ಪ್ರಮುಖ ಉದಾಹರಣೆಗಳಾಗಿವೆ.

## ಜೈನ ವಾಸ್ತು ಶಿಲ್ಪ

ಈ ಕಾಲದಲ್ಲಿಯೇ ಜೈನ ವಾಸ್ತುಶಿಲ್ಪ ಕೂಡ ಅಭಿವೃದ್ಧಿಗೊಂಡಿತು. ವಿಜಯನಗರದ ರಾಜರು, ಅವರ ಅಧಿಕಾರಿಗಳು, ಕಾರ್ಕಳ ಮತ್ತು ಗೆರಸೊಪ್ಪೆಯ ಪಾಳೆಯಗಾರರು ಜೈನ ವಾಸ್ತುಶಿಲ್ಪಕ್ಕೆ ಪ್ರೋತ್ಸಾಹವಿತ್ತರು. ಎರಡನೇ ಹರಿಹರನ ದಂಡನಾಯಕನಾದ ಇರುಗುಪ್ಪ ೧೫ನೆಯ ಶತಮಾನದಲ್ಲಿ ಗಣಿಗಿತ್ತಿ ಜಿನಾಲಯವನ್ನು ಕಟ್ಟಿಸಿದ.

ಇದರಲ್ಲಿ ಒಂದು ಚಚ್ಚೌಕದ ಗರ್ಭಗೃಹ, ಒಂದು ಆಳವಾದ ಅಂತರಾಳದ ಅರ್ಧಮಂಟಪ ಮತ್ತು ಮಾನಸ್ತಂಭ– ಇದ್ದವು. ಮೂಡಬಿದರೆಯ ತ್ರಿಭುವನ ತಿಲಕ ಚೂಡಾಮಣಿ ಬಸದಿ ಈ ಕಾಲದ ಪ್ರಸಿದ್ಧಜಿನಾಲಯ. ಇಲ್ಲಿಯ ಸಾಲಂಕೃತ ಕಂಬಗಳು ಮಹತ್ವಪೂರ್ಣ ವೈವಿಧ್ಯವನ್ನು ಪ್ರಕಟಿಸುತ್ತವೆ. ಪ್ರತಿಯೊಂದು ಕಂಬವೂ ತನ್ನದೇ ಆದ ವೈಶಿಷ್ಟ್ಯವನ್ನುಳ್ಳದ್ದು. ಈ ಬಸದಿಯಲ್ಲಿ ಆಕರ್ಷಕವಾಗಿ ಇರುವುವು ಈ ಕಂಬಗಳು. ತಿರುಪ್ಪರುತ್ತಿಕ್ಕುರಂ ಎಂಬಲ್ಲಿರುವ ವರ್ಧಮಾನ ಜಿನಾಲಯ ವಿಜಯನಗರ ಕಾಲದ ಇನ್ನೊಂದು ಪ್ರಮುಖ ದೇವಮಂದಿರ.

## ಮೂರ್ತಿ ಶಿಲ್ಪ

ವಿಜಯನಗರದ ಮೂರ್ತಿ ಶಿಲ್ಪ ರಚನೆಗಳು ದೃಢ ಚೇತನದ ಮೃದು ಭಾವನೆಯ ವೈಶಿಷ್ಟ್ಯವುಳ್ಳವು. ಗಂಭೀರತೆ, ಸರಳತೆಗಳೆರಡಕ್ಕೂ ಹೆಸರಾದವು. ಪ್ರಾಚೀನ ಕರ್ನಾಟಕದ ಸರಳತೆ ನಿಸ್ಪೃಹತೆಗಳು ವಿಜಯನಗರದ ಮೂರ್ತಿ ಶಿಲ್ಪದಲ್ಲಿ ಪ್ರತಿಬಿಂಬಿತವಾಗಿವೆ. ಈ ಕ್ಷೇತ್ರದಲ್ಲಿ ಕೂಡ ವಿಜಯನಗರದ ಶಿಲ್ಪಗಳು ಚೋಳ, ಹೊಯ್ಸಳ, ಪಲ್ಲವ ಕಲಾ ಪರಂಪರೆಯಿಂದ ಪ್ರಭಾವಿತರಾಗಿದ್ದಾರೆ. ಅವರ ಮೂರ್ತಿ ಶಿಲ್ಪ ವಿಶಿಷ್ಟ ಶೈಲಿಯಲ್ಲಿ ಅಭಿವೃದ್ಧಿಗೊಂಡಿದೆಯಲ್ಲದೆ ಪರಿಪೂರ್ಣತೆಯನ್ನೂ ಶ್ರೀಮಂತ ಅಭಿವ್ಯಕ್ತಿಯನ್ನೂ ಪಡೆದಿದೆ. ಕೆಲವರು ವಿದ್ವಾಂಸರು ವಿಜಯನಗರ ಮೂರ್ತಿಶಿಲ್ಪವನ್ನು ಶೈವ, ವೈಷ್ಣವ ಎಂದು ಎರಡು ವಿಧವಾಗಿ ವರ್ಗೀಕರಣ ಮಾಡುತ್ತಾರೆ. ಈ ಕಾಲದ ದೇವಾಲಯಗಳಲ್ಲಿರುವ ಬಹು ಸಂಖ್ಯೆಯ ಪ್ರತಿಮೆಗಳಲ್ಲದೆ ಎಷ್ಟೋ ವೀರಗಲ್ಲುಗಳು, ಮಾಸ್ತಿಕಲ್ಲುಗಳು ಕೂಡ ಇದೇ ಕಾಲದ ಮೂರ್ತಿಶಿಲ್ಪದ ಬೆಳವಣಿಗೆಯನ್ನು ದೃಢಪಡಿಸುತ್ತವೆ.

ಶೈವ ದೇವತೆಗಳನ್ನು ಕೆತ್ತುವ ಮೂರ್ತಿ ಶಿಲ್ಪಿಗಳಿಗೆ 'ಗಿರಿಜಾ ಕಲ್ಯಾಣ' ಪ್ರಿಯವಾದ ವಸ್ತು. ಮಧುರೆಯ ಪುದು ಮಂಟಪದಲ್ಲಿ ಈ ಗಿರಿಜಾ ಕಲ್ಯಾಣದ ದೃಶ್ಯ ಚೆಲುವಾಗಿ ಚಿತ್ರಿತವಾಗಿದೆ. ಶಿವ ಬೇಡನಾಗಿ ಬೇಟೆಯಾಡುವ ದೃಶ್ಯವನ್ನು ಶ್ರೀಶೈಲ ದೇವಾಲಯದಲ್ಲಿಯೂ ಬಲು ಚೆನ್ನಾಗಿ ಕೆತ್ತಲಾಗಿದೆ. ಕಮಲಾಪುರದಲ್ಲಿ ಅಗೆದು ತೆಗೆಯಲಾದ ಮಕರ ತೋರಣ

ದಲ್ಲಿ ನಾಟ್ಯವಾಡುವ ನಟರಾಜ, ಗಜೇಂದ್ರ ಮತ್ತು ಇತರ ಪ್ರತಿಮಾ ಚಿತ್ರಗಳಿವೆ. ಹಂಪೆ ಭವ್ಯವಾದ ಮೂರ್ತಿಶಿಲ್ಪ ಸಂಪತ್ತನ್ನು ಪ್ರದರ್ಶಿಸುತ್ತದೆ. ವಿಜಯನಗರದ ತಾರಕೇಶ್ವರ ದೇವಾಲಯ ಗಣೇಶ ಸ್ಕಂದರೊಂದಿಗಿರುವ ಶಿವನ ಸುಂದರ ಪ್ರತಿಮೆಯಿಂದ ಕೂಡಿದೆ. ಮಹಿಷಾಸುರಮರ್ದಿನಿ ವಿಜಯನಗರ ಮೂರ್ತಿಶಿಲ್ಪದಲ್ಲಿ ಇನ್ನೊಂದು ಜನಪ್ರಿಯ ವಸ್ತು. ವಿಜಯನಗರದ ಸರಸ್ವತೀ ದೇವಾಲಯ, ಶ್ರೀಶೈಲ ದೇವಾಲಯ ಇವು ಸುಂದರವಾದ ಮಹಿಷಮರ್ದಿನಿ ಪ್ರತಿಮೆಗಳುಳ್ಳವು. ಕಲ್ಲಿನಲ್ಲಿ ಕೆತ್ತಿದ ಶಿವ ಚಂದ್ರಾವತೀ ಪರಿಣಯದ ದೃಶ್ಯ ಇದೇ (ಮಲ್ಲಿಕಾರ್ಜುನ) ದೇವಾಲಯದಲ್ಲಿದೆ. ಲೇಪಾಕ್ಷಿಯಲ್ಲಿ ವೀರಣ್ಣ ಕಟ್ಟಿಸಿರುವ ವೀರೇಶ್ವರ ದೇವಾಲಯ ನಟರಾಜ, ಗಂಗಾಧರ, ಅರ್ಧನಾರೀಶ್ವರ, ಕಲ್ಯಾಣ ಸುಂದರ, ವೀರಭದ್ರ, ಮಹಿಷಾಸುರ ಮರ್ದಿನಿ–ಮುಂತಾದ ಸುಂದರ ಮೂರ್ತಿಗಳಿಂದೊಪ್ಪುತ್ತವೆ. ಅಲ್ಲಿಯ ಕಂಬಗಳಲ್ಲಿ ಅಷ್ಟ ದಿಕ್ಪಾಲಕರ ಮತ್ತು ಸಪ್ತ ಋಷಿಗಳ ಪ್ರತಿಮೆಗಳನ್ನು ಕೆತ್ತಲಾಗಿದೆ. ಹಿಂದೂಸ್ಥಾನದಲ್ಲಿಯೇ ಬಲು ದೊಡ್ಡದಾದ ನಂದಿಯನ್ನು ಕೆತ್ತಿರುವುದು ಇಲ್ಲಿಯೇ. ಕೃಷ್ಣಸ್ವಾಮಿ ದೇವಾಲಯದ ಗಂಗಾ ಪ್ರತಿಮೆ, ಹಂಪಿಯ ವೀರಭದ್ರ, ಕಾಳಿ ಮತ್ತು ಭೈರವ–ಇವು ವಿಜಯನಗರದ ಮೂರ್ತಿಶಿಲ್ಪದ ಪ್ರಮುಖ ಅಂಶಗಳಾಗಿವೆ.

ಅಚ್ಯುತರಾಯ ದೇವಾಲಯದ ಹೆಬ್ಬಾಗಿಲಿನ ಗದ್ದಿಗೆ ಕಲ್ಲಿನಲ್ಲಿರುವ ದಶಾವತಾರ ಕಥಾವಸ್ತುವುಳ್ಳ ಕೆತ್ತನೆ ಕೂಡ ಅತ್ಯುತ್ತಮ ಉದಾಹರಣೆ. ಹಜಾರ ರಾಮಸ್ವಾಮಿ ದೇವಾಲಯದ ಹೊರಗೋಡೆಗಳ ಪಟ್ಟಿಗಳಲ್ಲಿ ತುದಿಯಿಂದ ಬುಡದವರೆಗೆ ಹಿಂದೂ ಧರ್ಮವನ್ನು ಪ್ರಾಸಬದ್ಧ ವಾಕ್ಯಗಳಲ್ಲಿ ಕೆತ್ತಲಾಗಿದೆ. ತಾಡಪತ್ರಿ ದೇವಾಲಯವೂ ವೈಷ್ಣವ ದೇವತೆಗಳ ಅನೇಕ ಮೂರ್ತಿಗಳ ನಿಧಿಯಾಗಿದೆ. ಫರ್ಗುಸನ್ ಅಭಿಪ್ರಾಯ ಪಟ್ಟಿರುವಂತೆ, ಈ ಕೆತ್ತನೆಗಳು ಈ ಶೈಲಿಯಲ್ಲಿರುವ ಇತರ ಎಲ್ಲದಕ್ಕಿಂತಲೂ ಉತ್ತಮ ಅಭಿರುಚಿಯವಾಗಿವೆ. ಹಜಾರ ರಾಮಸ್ವಾಮಿ ದೇವಾಲಯದಲ್ಲಿ ಅನೇಕ ಕಡೆ ರಾಮಾಯಣದ ದೃಶ್ಯಗಳನ್ನು ಕೆತ್ತಲಾಗಿದೆ. ಅವು ಅಗಾಧವಾಗಿ ಸಜೀವತೆಯನ್ನೂ, ಚೈತನ್ಯವನ್ನೂ ತೋರಿಸುತ್ತವೆ. ವಿಜಯನಗರದ ವಿಠಲ ಸ್ವಾಮಿ ಮತ್ತಿತರ ವೈಷ್ಣವ ದೇವಾಲಯಗಳಲ್ಲಿ ಭಾಗವತದ ದೃಶ್ಯಗಳಲ್ಲಿ ಕೆತ್ತಲಾಗಿದೆ. ತ್ರಿವಿಕ್ರಮ, ನರಸಿಂಹ, ಸಾಸುವೆ ಕಾಳು ಗಣಪತಿ, ಕಡಲೆ ಕಾಳು ಗಣಪತಿಗಳು ವಿಜಯನಗರ ಮೂರ್ತಿಶಿಲ್ಪದಲ್ಲಿ ಎದ್ದುಕಾಣುವ ಸಾಧನೆಗಳಾಗಿವೆ. ವಿಜಯನಗರ ದೇವಾಲಯಗಳಲ್ಲಿ ಸೂರ್ಯನಾರಾಯಣ, ಮಾಧವ, ಶ್ರೀದೇವಿ, ಕಾಳಿಯ ದಮನ ಮೂರ್ತಿಗಳು ಸುಂದರವಾಗಿವೆ. ಲೇಪಾಕ್ಷಿ ದೇವಾಲಯದಲ್ಲಿ ಕೆತ್ತಲಾದ ಮಾನವರ ಮತ್ತು ಪ್ರಾಣಿಗಳ ಸ್ವರೂಪಗಳು ಅತ್ಯಂತ ನೈಜರೂಪದಲ್ಲಿವೆ. ಒಂದು ಆನೆಮರಿ ಬಳ್ಳಿಯನ್ನು ಜಗ್ಗುತ್ತ ಬಿಕ್ಕಟ್ಟನ್ನು ಅಭಿವ್ಯಕ್ತ ಮಾಡುವ ಅಸಾಮಾನ್ಯ ಭಂಗಿ ಈ ಶಿಲ್ಪಿಗಳ ಉಲ್ಲೇಖಾರ್ಹ ಮಹತ್ಸಾಧನೆಗಳಲ್ಲಿ ಒಂದಾಗಿದೆ.

ಶೃಂಗೇರಿಯ ವಿದ್ಯಾಶಂಕರ ದೇವಾಲಯದ ಗೋಡೆಯ ಗೂಡುಗಳಲ್ಲಿ ಗಣೇಶ, ಬ್ರಹ್ಮ, ವಿಷ್ಣು, ವೆಂಕಟೇಶ್ವರ, ಮಹೇಶ್ವರ, ದುರ್ಗೆ ಇವರ ಸುಂದರ ಮೂರ್ತಿಗಳಿವೆ. ಶ್ರೀರಂಗದ ಅಶ್ವಶಾಲೆಯಲ್ಲಿ ಭಯಂಕರವಾಗಿ ಕಾದಾಡುವ ನಿಲುವುಳ್ಳ ಪ್ರತಿಯೊಂದು ಒಂಭತ್ತು ಅಡಿಯಷ್ಟು ಎತ್ತರಕ್ಕೆ ಎಗರುವ ಕುದುರೆಗಳ ಕೆತ್ತನೆಯಿದೆ. ಇವುಗಳ ರಚನೆಯ ತಂತ್ರ ನೋಡುವವರಿಗೆ 'ಕಲ್ಲಿನದಲ್ಲ ಗಟ್ಟಿಯಾದ ಉಕ್ಕಿನದು' ಎಂದು ತೋರುವಷ್ಟು ಖಡಾ ಖಂಡಿತವಾಗಿದೆ.

ವಿಠಲಸ್ವಾಮಿ ದೇವಾಲಯ, ಕೃಷ್ಣಸ್ವಾಮಿ ದೇವಾಲಯಗಳ ಬಾಗಿಲ ಹಲಗೆಗಳಲ್ಲಿ ನೃತ್ಯಭಂಗಿಯ ಗಂಗೆಯೂ, ಕೋಲಾಟ ಕುಣಿತದ ಆಕರ್ಷಕ ಪ್ರೌಢಿಮೆಗಳೂ ಇವೆ. ಅಚ್ಯುತರಾಯ ದೇವಾಲಯದ ಸುತ್ತಲಿನ ಮಂಟಪಗಳಲ್ಲಿ ಕೆತ್ತಿರುವ ಆನೆಗಳು, ಕುದುರೆಗಳು, ವಿದೇಶೀಯರ ಆಕೃತಿಗಳು ಅತ್ಯಂತ ನೈಜತೆಯಿಂದ ಒಪ್ಪುತ್ತದೆ. ಹಜಾರ ರಾಮಸ್ವಾಮಿ ದೇವಾಲಯದಲ್ಲಿ ಬಹುಸಂಖ್ಯೆಯ ವೈಷ್ಣವ ಮೂರ್ತಿಗಳಿವೆ. ಆದರೆ, ಅವುಗಳ ಕಲೆ ವಿಠಲಸ್ವಾಮಿ ಮತ್ತು ಕೃಷ್ಣಸ್ವಾಮಿ ದೇವಾಲಯಗಳ ಶಿಲ್ಪದಷ್ಟು ಚೆನ್ನಾಗಿಲ್ಲ. ಹಂಪಿಯ ಅನೇಕ ದೇವಾಲಯಗಳಲ್ಲಿ ಕೃಷ್ಣದೇವರಾಯನ ಮತ್ತು ವಿದ್ಯಾರಣ್ಯರ ಪ್ರತಿಮೆಗಳನ್ನು ಕೆತ್ತಲಾಗಿದೆ.

ಮಹಾನವಮಿ ದಿಬ್ಬ ಅಸಾಧಾರಣ ರೀತಿಯಲ್ಲಿ ಕೆತ್ತಲಾದ ಶಿಲ್ಪಾಕೃತಿಗಳನ್ನು ಪ್ರದರ್ಶಿಸುತ್ತವೆ. ಕೃಷ್ಣದೇವರಾಯ ಕಟ್ಟಿಸಿದ ಈ ಸ್ಮಾರಕ ಬೇಟೆಯ, ನೃತ್ಯದ ಮತ್ತು ಹೋಳಿ ಹಬ್ಬದ ದೃಶ್ಯಗಳೇ ಮುಂತಾದ ಮನಸ್ಸಂತೋಷಕರವಾದ ಕೆತ್ತನೆಗಳನ್ನು ಒಳಗೊಂಡಿದೆ. ಈ ಶಿಲ್ಪ ರಚನೆಗಳು ವಿಜಯನಗರ ಕಾಲದ ಸಾಮಾಜಿಕ ಜೀವನವನ್ನು ಚಿತ್ರಿಸುತ್ತವೆ. ಅಲ್ಲದೆ ವಿಜಯನಗರಕ್ಕೆ ಬಂದ ವಿದೇಶ ಯಾತ್ರಿಕರ ನೈಜ ಚಿತ್ರವನ್ನೂ ಕೊಡುತ್ತದೆ.

ಈ ದೇವಾಲಯಗಳಲ್ಲದೆ ಸಾಮ್ರಾಜ್ಯದ ಎಲ್ಲೆಡೆ ಹರಡಿಕೊಂಡಿರುವ ಬಹುಸಂಖ್ಯೆಯ ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ಆ ಕಾಲದ ಜನತೆಯ ಸಾಮಾಜಿಕ ಜೀವನವನ್ನು ಅಧ್ಯಯನ ಮಾಡಲು ಸಹಾಯಕವಾಗಿವೆ. ಈ ಮೂರ್ತಿ ಶಿಲ್ಪಗಳಿಂದ ಸಮಾಜದಲ್ಲಿ ಮಹಿಳೆಯರಿಗೆ ಇದ್ದ ಸ್ಥಾನವನ್ನು ಉಡಿಗೆ ತೊಡಿಗೆಗಳ ವಿಧಾನವನ್ನು, ಆಭರಣಗಳ ಹಾಗೂ ಮತ್ತಿತರ ಸಾಮಾಜಿಕ ಜೀವನ ವಿವರಗಳನ್ನು ಅರಿಯಬಹುದು.

## ಪೌರ ವಾಸ್ತು ಶಿಲ್ಪ

ವಿಜಯನಗರದ ಶಿಲ್ಪಿಗಳು ದೇವಾಲಯ, ಬಸದಿ ಮುಂತಾದ ಧಾರ್ಮಿಕ ರಚನೆಗಳನ್ನಲ್ಲದೆ ಅನೇಕ ಪೌರ ನಿರ್ಮಾಣಗಳನ್ನೂ ಮಾಡಿದ್ದಾರೆ. ವಿಜಯನಗರ ಪೌರ ವಾಸ್ತು ಶಿಲ್ಪವನ್ನು ವಿದೇಶೀ ಪ್ರವಾಸಿಗಳು ಶ್ಲಾಘಿಸಿದ್ದಾರೆ. ವಿಜಯನಗರದ ನಗರ ನಿರ್ಮಾಣ ಈ ಶಿಲ್ಪಿಗಳ ಯಾಂತ್ರಿಕ ಕೌಶಲವನ್ನು ಪ್ರಕಟಪಡಿಸುತ್ತದೆ. ಮಾನಸಾರದಲ್ಲಿ ಹೇಳಿರುವಂತೆ ಪಟ್ಟಣ ಒಂದರಿಂದ ಹನ್ನೆರಡರವರೆಗೆ ಬೀದಿಗಳಿಂದ ಕೂಡಿರಬೇಕು. ಅದು ಚಟ್ಟದ ಮೇಲೆ ಕಟ್ಟಿದುದಾಗಿರಬೇಕು. ವ್ಯಾಪಾರ ಸೌಕರ್ಯವುಳ್ಳದಾಗಿರಬೇಕು. ಮತ್ತು ವಿದೇಶೀಯರ ಸಂಪರ್ಕವನ್ನು ಹೊಂದಿರಬೇಕು. ಅದರಲ್ಲಿ ಬಾವಿಗಳು, ಚರಂಡಿಗಳು, ಅತಿಥಿ ಗೃಹಗಳು ಮುಂತಾದುವಿರಬೇಕು. "ವಿಶ್ವದಲ್ಲಿಯೇ ವಿಜಯನಗರದಂತಹ ನಗರವನ್ನು ಕಣ್ಣು ಕಂಡಿಲ್ಲ, ಕಿವಿ ಕೇಳಿಲ್ಲ" ಎಂದು ಅಬ್ದುಲ್ ರಜಾಕ್ ಹೇಳಿದ್ದಾನೆ. ಇದೇ ನಗರವನ್ನು ಪಾಯಸ್ ಎಂಬಾತನೂ ವರ್ಣಿಸಿದ್ದಾನೆ. ಅವನು "ಎಲ್ಲ ಬೀದಿಗಳೂ, ಮನೆಗಳ ಸಾಲುಗಳೂ ಅನೇಕ ಪ್ರತಿಮೆಗಳಿಂದಲೂ ಅಲಂಕಾರಗಳಿಂದಲೂ ನೇತ್ರಾನಂದಕರವಾಗಿವೆ" ಎಂದಿದ್ದಾನೆ. ಅಲ್ಲದೆ, ಕ್ರಮಬದ್ಧವಾಗಿ ಸುಂದರವಾಗಿ ಕಟ್ಟಿದ ಕಟ್ಟಡಗಳ ಸಾಲುಗಳು ಅಲ್ಲಿ ಇರುವುದಾಗಿ ಹೇಳಿದ್ದಾನೆ. ಇನ್ನೊಬ್ಬ ವಿದೇಶೀಯ ಪ್ರವಾಸಿಕನಾದ ಬಾರ್ಬೋಸನ್ ಪ್ರಕಾರ ಮನೆಗಳು ತುಂಬ ಚೆನ್ನಾಗಿ ಕಟ್ಟಲ್ಪಟ್ಟಿದ್ದವು. ಬೀದಿಗಳು, ಅಗಲವೂ ಅಸಂಖ್ಯವೂ ಆಗಿದ್ದವು. ಬೀದಿಯ ನಿರ್ಮಾಣ ಶಿಲ್ಪಕ್ಕೆ ಹಂಪಿಯ ಪೇಟೆ ಉತ್ತಮ ಉದಾಹರಣೆ. ವಿದೇಶೀ ಸಂದರ್ಶಕರು ಇಲ್ಲಿಯ ಮನೆಗಳ ಪ್ರಮಾಣಗಳನ್ನು ಹೇಳಿದ್ದಾರೆ.

ಅವುಗಳಲ್ಲಿ ಹಲವು ಆರು ಮೊಳ ಅಗಲ ಮತ್ತು ಇಪ್ಪತ್ತು ಮೊಳ ಉದ್ದವಾಗಿದ್ದವು. ಅವುಗಳಲ್ಲಿ ಹಲವಕ್ಕೆ ಸಿಮೆಂಟಿನ ಚಾವಣಿಯಿದ್ದಿತು. ಪಾಯಸ್ ದೃಢೀಕರಿಸುವಂತೆ, ನಗರದಲ್ಲಿ ಮನೆಯ ಒಳಗಿನ ಭಾಗ ಬಹಳ ಸುಂದರವಾಗಿತ್ತು. ನಾಗಲಪುರದ ಹೊಸ ನಗರದಲ್ಲಿ ಚಪ್ಪಟೆ ಚಾವಣಿಗಳ ಹಲವು ಅಂತಸ್ತುಗಳಿದ್ದವು. ಆಯಾ ಮನೆಯಲ್ಲಿ ನೆಲಸಿರುವವರ ಘನತೆಗೆ ತಕ್ಕಂತೆ ಅವು ಗುಣಮಟ್ಟವುಳ್ಳವಾಗಿ, ಸುಂದರವಾಗಿ, ಸುಸಜ್ಜಿತವಾಗಿದ್ದವು. ವೇಶ್ಯೆಯರಿಗೆ ಮುಖಮಂಟಪವುಳ್ಳ ಸುಂದರ ಗೃಹಗಳಿರುತ್ತಿದ್ದವು. ಅವರ ಮನೆಯ ಎದುರುಗಡೆ ಅತ್ಯುತ್ತಮ ಶಿಲೆಗಳಿಂದ ಕಟ್ಟಿದ ಎತ್ತರವಾದ ಪೀಠಗಳಿದ್ದುವು. ವಿದೇಶೀಯ ಸಂದರ್ಶಕರು ಕೂಡ ತಾವು ನೋಡಿದ ಅರಮನೆಗಳನ್ನು ವರ್ಣಿಸಿದ್ದಾರೆ. ಅರಮನೆಯನ್ನು ಬೃಹದಾಕಾರವಾಗಿ ಕಟ್ಟಿದ್ದರು. ಅವುಗಳಿಗೆ ಹೊರಗೋಡೆಗಳಿದ್ದವು. ಅರಮನೆಯೊಳಗಡೆ ಮನೆಗಳ ಅನೇಕ ಸಾಲುಗಳಿದ್ದವು. ರಾಮರಾಯನ ಅರಮನೆಯನ್ನು ಚಂದ್ರಕಾಂತ ಶಿಲೆಯಿಂದ ಮತ್ತು ಗಾರೆಯಿಂದ ಕಟ್ಟಲಾಗಿದ್ದು ನೋಡಲು ಅದು ಹಿಂದೂ ದೇವಾಲಯದಂತಿತ್ತು. ಅರಮನೆಯಲ್ಲಿ ಅನೇಕ ಕೋಣೆಗಳಿದ್ದವು. ಅವು ಶಿಲ್ಪಮಯವಾದ ಕಲ್ಲುಕಂಬಗಳಿಂದ ಕೂಡಿದ್ದವು. ಪಾಯಸ್ ತಾನು "ಪೂರ್ಣ ದಂತಮಯವಾದ ಒಂದು ಕಂಬ"ವನ್ನು ಕಂಡಿರುವುದಾಗಿ ಹೇಳಿದ್ದಾನೆ. ವಿಸ್ತಾರವಾಗಿದ್ದ ಮತ್ತು ವಿಶಾಲ ಕೊಠಡಿಗಳಿಂದ ಕೂಡಿದ್ದ ಅಚ್ಯುತರಾಯನ ಅರಮನೆಯನ್ನು ನ್ಯೂನಿಜ್ ವರ್ಣಿಸಿದ್ದಾನೆ. ಕೃಷ್ಣದೇವರಾಯನ ಅರಮನೆ ಒಂದು ಅತಿ ಬಲಿಷ್ಟವಾದ ಗೋಡೆಯಿಂದ ಆವೃತವಾಗಿದ್ದಿತು. ರಾಜಕುಟುಂಬಕ್ಕಾಗಿ ಮುಖ್ಯ ಅರಮನೆಯ ಹೊರತು ಅಲ್ಲಿ ಅನೇಕ ಬೇರೆ ಅರಮನೆಗಳಿದ್ದವು. ಪಾಳೆಯಗಾರರು ಮತ್ತು ಅಧೀನ ರಾಜರು ಕೂಡ ವಿಜಯನಗರದ ಮಾದರಿಯನ್ನು ಅನುಸರಿಸಿ ಅಂತಹದೆ ರೀತಿಯಲ್ಲಿ ಅರಮನೆಗಳನ್ನೂ, ಕೋಟೆಗಳನ್ನೂ ಇತರ ಕಟ್ಟಡಗಳನ್ನೂ ಕಟ್ಟಿಸಿದರು. ಇಟಲಿ ಪ್ರವಾಸಿಕ ಪೆಟ್ರೊಡೆಲ್ಲವೆಲ್ಲೆ ಎಂಬಾತನು ಇಕ್ಕೇರಿಯನ್ನು ಸಂದರ್ಶಿಸಿ, ವೆಂಕಟಪ್ಪ ನಾಯಕನ ಅರಮನೆಯನ್ನು ವರ್ಣಿಸಿದ್ದಾನೆ.

ವಿಜಯನಗರದ ರಾಜರು ಕೆರೆಗಳನ್ನು, ಅಣೆಕಟ್ಟುಗಳನ್ನು ಮತ್ತು ನೀರಾವರಿ ವ್ಯವಸ್ಥೆಗಳನ್ನು ಕೂಡ ರಚಿಸಿದ್ದಾರೆ. ನದಿಯಿಂದ ರಾಜಧಾನಿಗೆ ನೀರು ಬರುವಂತೆ ಅನೇಕ ನಾಲೆಗಳನ್ನು ನಿರ್ಮಿಸಿದ್ದರು. ಬುಕ್ಕನ ಮಗನಾದ ಭಾಸ್ಕರ ಭವದೂರ ಐದು ಸಾವಿರ ರೇಖಾ ಖಂಡ ಉದ್ದದ, ಐದು ರೇಖಾ ಖಂಡ ಅಗಲದ ಏಳು ರೇಖಾಖಂಡ ಎತ್ತರವುಳ್ಳ ಕೆರೆಯನ್ನು ಕಟ್ಟಿಸಿದ. ಈ ಕೆರೆಯನ್ನು ಕಟ್ಟಲು ನೂರು ಮಂದಿ ಕೆಲಸಗಾರರಿಗೆ ಎರಡು ವರ್ಷ ಬೇಕಾಯಿತು. ಕೃಷ್ಣದೇವರಾಯ ಕೂಡ ವಿಜಯ ನಗರದ ಒಳಗಡೆ ಒಂದು ದೊಡ್ಡ ಕೆರೆಯನ್ನು ತೋಡಿಸಿದ. ಬಹುಮಟ್ಟಿಗೆ ಎಲ್ಲ ರಾಜರೂ ಕೆರೆಗಳನ್ನೂ, ಕಟ್ಟೆಗಳನ್ನೂ, ನೀರಾವರಿ ಕಾಲುವೆಗಳನ್ನೂ ಮಾಡಿಸಿದ್ದಾರೆ. ಆ ಕೆರೆಗಳನ್ನು ಉಪಯೋಗಿಸುವವರು ಆಗಾಗ ಅವನ್ನು ಜೀರ್ಣೋದ್ಧಾರಗೊಳಿಸಿ ಒಳ್ಳೆಯ ಸ್ಥಿತಿಯಲ್ಲಿ ಇಟ್ಟುಕೊಳ್ಳಬೇಕಾಗಿತ್ತು.

**ಕೋಟೆಗಳು ಮತ್ತು ನಗರಗಳು**

ವಿಜಯನಗರ ಶಿಲ್ಪಿಗಳು ದೇವಾಲಯಗಳನ್ನು ಹಾಗೂ ಪೌರನಿರ್ಮಾಣಗಳನ್ನು ಕಟ್ಟುವುದರಲ್ಲಿ ಪ್ರವೀಣರಾಗಿದ್ದರಲ್ಲದೆ ಕೋಟೆಗಳನ್ನೂ ರಕ್ಷಣಾ ವ್ಯವಸ್ಥೆಗಳನ್ನು ಕಟ್ಟುವುದರಲ್ಲಿ ಚತುರರಾಗಿದ್ದರು. ಈ ಶಿಲ್ಪಿಗಳು ಮಧ್ಯಕಾಲೀನ ಯೋಜನಾ ಘಟಕಗಳು ನಿರೂಪಿಸಿದ ಮತ್ತು ಪ್ರಸಿದ್ಧ ಹಿಂದೂ ಗ್ರಂಥಗಳಾದ ಅರ್ಥಶಾಸ್ತ್ರ, ಮಾನಸಾರ, ಶುಕ್ರನೀತಿ ಸಾರಗಳಲ್ಲಿ ವಿವರಿಸಲಾದ ತತ್ವಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು, ದೊಡ್ಡ ನಗರಗಳನ್ನು ನಿರ್ಮಾಣ ಮಾಡಿದರು. ವಿಜಯನಗರ ಸಾಮ್ರಾಜ್ಯದ ಮೊದಲ ರಾಜಧಾನಿ ಆನೆಗೊಂದಿ. ವಿಜಯನಗರ ಶುಕ್ರನೀತಿ ಸಾರದ ತತ್ವಕ್ಕನುಸಾರವಾಗಿ ನಿರ್ಮಾಣವಾಯಿತು. ಈ ಗ್ರಂಥ ನಿರ್ದೇಶಿಸುವಂತೆ, ರಾಜಧಾನಿಗೆ ಸೇರಿದಂತೆ ಒಂದು ಕಾಡು ಇರಬೇಕು, ಪೊದರುಗಳೂ ಇರಬೇಕು. ಪ್ರಾಕೃತಿಕವಾಗಿ ತಡೆಗಳಾದ ಗುಡ್ಡಗಳಿಂದ ಅದು ದೂರವಾಗಿರಬಾರದು. ಅದು ನದೀ ತೀರದಲ್ಲಿರಬೇಕಲ್ಲದೆ, ಸಮುದ್ರಕ್ಕೆ ಹೋಗಲು ಅನುಕೂಲವಾಗುವಂತಿರಬೇಕು. ರಾಜಧಾನಿ ವೃತ್ತಾಕಾರದಲ್ಲಿರಬೇಕು. ಯಾವಾಗಲೂ ಲಕ್ಷ್ಮೀನಿವಾಸವಾಗಿರುವ ತಾವರೆಯಂತೆ ರಾಜಧಾನಿಯಿರಬೇಕೆಂದು ಹೇಳಲಾಗಿದೆ. ವಿಜಯನಗರವನ್ನು ಸಂದರ್ಶಿಸಿದ ವಿದೇಶಿಯರು ಈ ನಗರವನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ.

ಅಬ್ದುರ್ ರಜಾಕನು ವರ್ಣಿಸಿರುವಂತೆ, ವಿಜಯನಗರದ ರಕ್ಷಣೆಯ ಪ್ರಥಮ ರೇಖೆಯಂತಿದ್ದ ಕೋಟೆ ಗೋಡೆ ಬಲಿಷ್ಠವಾದ ಮಹಾದ್ವಾರಗಳಿಂದ ಕೂಡಿ ಕಲ್ಲುಗಳಿಂದಲೂ ಗಾರೆಯಿಂದಲೂ ಕಟ್ಟಲಾಗಿತ್ತು. ರಾಜಧಾನಿಗೆ ಏಳು ಬಗೆಯ ದುರ್ಗಗಳಿದ್ದವು. ಕೆಲವು ವಿದೇಶೀಯ ಸಂದರ್ಶಕರು ತಮ್ಮ ಸಂದರ್ಶನದ ಕಾಲದಲ್ಲಿ ೫ ದುರ್ಗಗಳು ಮಾತ್ರ ಉಳಿದಿದ್ದವೆಂದೂ, ಇತರವೆಲ್ಲ ಮುರಿದಿದ್ದವೆಂದೂ ಹೇಳಿದ್ದಾರೆ. ನ್ಯೂನಿಜ್ ವಿಜಯನಗರ ರಾಜಧಾನಿಯ ಗೋಡೆಗಳಿಗೆ ಸುಣ್ಣಗಾರೆಯ ಬಳಕೆ ಇರಲಿಲ್ಲವೆಂದೂ ಮಣ್ಣಿನಿಂದ ಸಂದು ಸೇರಿಸಿ ಭಾರವಾದ ಕಲ್ಲುಗಳಸದಿಂದ ನಿರ್ಮಿಸಿದ ಬಲಿಷ್ಟವಾದ ಗೋಡೆಗಳಿದ್ದವೆಂದೂ ದೃಢಪಡಿಸಿದ್ದಾನೆ.

ಪ್ರಾಂತೀಯ ಕೋಟೆಗಳು ವಿಜಯನಗರದ ಕೋಟೆಗಳ ಮಾದರಿಯಲ್ಲಿಯೇ ರಚಿತವಾಗಿದ್ದವು. ಈ ಕಾಲದ ವೈಶಿಷ್ಟ್ಯಪೂರ್ಣವಾದ ಕೋಟೆಗಳಲ್ಲಿ ಇಕ್ಕೇರಿಯದು ಒಂದಾಗಿದ್ದಿತು. ಇಟಲಿಯಿಂದ ಬಂದ ಪೆಟ್ರೊಡೆಲ್ಲವೆಲ್ಲೆ ಎಂಬ ಸಂದರ್ಶಕ ಇಕ್ಕೇರಿ ನಗರದ ಕೋಟೆಯನ್ನು ಹೀಗೆ ವರ್ಣಿಸಿದ್ದಾನೆ. "ಈ ನಗರ ಉತ್ತಮ ಸ್ಥಳದಲ್ಲಿ ಅಧಿಷ್ಠಿತವಾಗಿದೆ. ನಾವು ಈ ನಗರವನ್ನು ಪ್ರವೇಶಿಸಿದೊಡನೆ ಮೂರು ಸಣ್ಣ ಕೋಟೆಗಳ, ಮೂರು ಹೆಬ್ಬಾಗಿಲುಗಳ ಮೂಲಕ ದಾಟಿ ಹೋದೆವು, ಆ ಮೂರು ಪ್ರಾಕಾರಗಳಲ್ಲಿ ಮೊದಲಿನವೆರಡು ಗೋಡೆಗಳೇ ಅಲ್ಲ. ಅವು ಭಾರತದಲ್ಲಿ ಬಹಳ ಎತ್ತರಕ್ಕೆ ಬೆಳೆಯುವ ಬೆತ್ತಗಳು. ಅವನ್ನು ಹತ್ತಿರ ಹತ್ತಿರವಾಗಿ ನೆಡಲಾಗಿತ್ತು. ಅವು ಮುರಿಯದಷ್ಟು ಗಟ್ಟಿ ಮತ್ತು ಬೆಂಕಿಯ ಭಯವಿಲ್ಲದವು. ಇನ್ನೊಂದು ಆವರಣ ಮಾತ್ರ ಕೃಶ ಮತ್ತು ನಗಣ್ಯ". ಅರಮನೆಯುಳ್ಳ ಇಕ್ಕೇರಿ ಕೋಟೆಯೊಳಗೆ ಇನ್ನೂ ಕೆಲವು ಬಗೆಯ ಕೋಟೆಗಳಿದ್ದವೆಂದು ಹೇಳುತ್ತಾರೆ.

ಹಾಗೇ ಪೆನುಗೊಂಡ ಕೋಟೆಯೂ ವಿಜಯನಗರದ ಪರಂಪರೆಗೆ ಅನುಗುಣವಾಗಿ ಕಟ್ಟಿದುದಾಗಿತ್ತು. ಒಂದು ಶಾಸನದಲ್ಲಿ ನಿರೂಪಿತವಾಗಿರುವಂತೆ, ಈ ದೈವದತ್ತ ನಗರದ ದುರ್ಗಗಳನ್ನು ಯಾವ ಮರ್ತ್ಯನೂ ವಶಪಡಿಸಿಕೊಳ್ಳಲಾರ". ಚಿತ್ರದುರ್ಗ, ಭಟ್ಕಳ, ಚಂದ್ರಗಿರಿ, ವೆಲ್ಲೂರು, ಜಿಂಜೀ ಮತ್ತು ಇತರ ಸ್ಥಳಗಳ ಕೋಟೆಗಳು ಕೂಡಾ ಈ ಕಾಲದ ಸೇನಾ ಶಿಲ್ಪವನ್ನು ನಿರೂಪಿಸುತ್ತವೆ. ಪ್ರಾಂತೀಯ ರಾಜರ ಅರಮನೆಗಳು ಹೆಬ್ಬಾಗಿಲಿನಿಂದಲೂ ಬುರುಜುಗಳಿಂದಲೂ ಕೂಡಿದ ಗಟ್ಟಿಯಾದ ಕಲ್ಲುಗೋಡೆಗಳಿಂದ ಆವೃತವಾಗಿದ್ದವು. ಹೊರಗಿನ ಕೋಟೆಗೆ ನೀರು ತುಂಬಿದ ಕಂದಕವಿರುತ್ತಿತ್ತು. ಇದರಿಂ

ದಾಗಿ ಗೋಡೆಯ ಕಡೆಗೆ ಬರಲು ಯಾರಿಗೂ ಅಸಾಧ್ಯವಾಗಿತ್ತು. ಲೌಕಿಕ (ಧರ್ಮನಿರಪೇಕ್ಷ) ವಾಸ್ತುಶಿಲ್ಪ ಇಸ್ಲಾಂನ ಸಂಪರ್ಕದಿಂದ ಬೆಳೆದು ಬಂದ ಕಟ್ಟಡ ಪದ್ಧತಿಗಳನ್ನು ಒಳಗೊಂಡಿದೆ. ಇಂತಹ ವಾಸ್ತುಶಿಲ್ಪ ಹೆಚ್ಚಾಗಿ ಅರವೀಡು ರಾಜವಂಶದ ಆಳ್ವಿಕೆಯ ವೇಳೆಯಲ್ಲಿ ಕಾಣಿಸಿದೆ. ವಿಜಯನಗರ, ಚಂದ್ರಗಿರಿ, ಜಿಂಜೀ, ತಂಜಾವೂರು ಮತ್ತು ಮಧುರೆಯ ಭವ್ಯವಾದ ಹಲವು ಕಟ್ಟಡಗಳು ಇಂಡೋ ಸಾರ್ಸೆನಿಕ್ ವರ್ಗದವೆಂದು ಗಣಿಸಲಾಗಿದೆ. ವಿಜಯನಗರದ ಕಮಲ ಮಹಲಿನ ಕೂಡಲೆಗಳ ಕಲೆ ಈ ಕಲೆಗೆ ಉತ್ತಮ ಉದಾಹರಣೆ. ಅಲ್ಲಿ ಎರಡು ಅಂತಸ್ತಿನ ಚಚ್ಚೌಕ ಕ್ರೀಡಾ ಮಂಟಪವಿದ್ದು ಅದರ ಬದಿಗಳಲ್ಲಿ ಎರಡು ಕಿರು ಚೌಕಿ ಕೋಣೆಗಳಿವೆ. ಆನೆಗೊಂದಿಯ ಹೆಬ್ಬಾಗಿಲುಗಳಲ್ಲಿ ಕೆಲವೆಡೆ ಚೂಪಾದ ಕಮಾನುಗಳಿವೆ. ಇಲ್ಲಿ ಗಜಶಾಲೆಗಳೆಂದು ಊಹಿಸಲಾದ ಕಟ್ಟಡಗಳು ಈಚೆಗೆ ಕಂಡುಹಿಡಿದಿರುವಂತೆ ಗಜಶಾಲೆಗಳಲ್ಲ. ಅವು ವಿಜಯನಗರದ ರಾಜರು ಮುಸ್ಲಿಮ್ ಯೋಧರಿಗಾಗಿ ಕಟ್ಟಿಸಿದ ಮಸೀದಿಗಳೆಂದು ಗುರುತಿಸಲಾಗಿದೆ.

ವಿಜಯನಗರದ ವಾಸ್ತುಶಿಲ್ಪದ, ಅದರಲ್ಲಿಯೂ ಮುಖ್ಯವಾಗಿ ದೇವಾಲಯ ವಾಸ್ತುಶಿಲ್ಪದ ಬೆಳವಣಿಗೆ ೧೭ನೇ ಶತಮಾನದ ವರೆಗೆ ಮುಂದುವರಿಯಿತು. ಅನಂತರ ಸಾಂಸ್ಕೃತಿಕ ಅವನತಿಯ ಕಾಲ ಪ್ರಾರಂಭವಾಯಿತು. ಪ್ರಾಂತೀಯ ಪಾಳೆಯಗಾರರ ಆಶ್ರಯದಲ್ಲಿದ್ದ ಅನೇಕ ದೇವಾಲಯ ಮತ್ತು ಇತರ ಕಟ್ಟಡಗಳು ನಿರ್ಮಾಣವಾದವು. ಆದರೆ ಲಲಿತಕಲೆಗಳಲ್ಲಿ ಮತ್ತು ಮುಖ್ಯವಾಗಿ ವಾಸ್ತುಶಿಲ್ಪದಲ್ಲಿ ಅವನತಿ ಉಂಟಾಯಿತು.

**ಕನ್ನಡ ಅನುವಾದ: ಟಿ. ಕೇಶವ ಭಟ್ಟ**

# ಮುಸ್ಲಿಂ ವಾಸ್ತುಶಿಲ್ಪ

ಜಿ. ಆರ್. ರಂಗಸ್ವಾಮಯ್ಯ

ಮುಸ್ಲಿಮರು ಕಟ್ಟಿಸಿದ ಕಟ್ಟಡಗಳನ್ನು ಮುಸ್ಲಿಂ ವಾಸ್ತುಶಿಲ್ಪ ಎಂಬ ಹೆಸರಿನಿಂದ ಕರೆಯಲಾಗಿದೆ. ಈ ನಮೂನೆಯ ಕಟ್ಟಡಗಳು ಸ್ವಲ್ಪ ಮಟ್ಟಿಗೆ ಹಿಂದೂ ವಾಸ್ತುಶಿಲ್ಪದಿಂದ ಪ್ರಭಾವಗೊಂಡಿದ್ದಾಗ್ಯೂ ತಮ್ಮದೇ ಆದ ಲಕ್ಷಣಗಳನ್ನೂ ಹೊಂದಿವೆ. ಮುಸ್ಲಿಂ ಶೈಲಿಯ ಕಟ್ಟಡಗಳನ್ನು ಧಾರ್ಮಿಕ ದೃಷ್ಟಿಯಿಂದ ನಿರ್ಮಿಸಿದ ಮಸೀದಿಗಳು ಮತ್ತು ಗೋರಿಗಳೆಂದು ಹಾಗೂ ವೈಭವ ವಿಲಾಸಕ್ಕೆ ಹೆಸರಾದ ಅರಮನೆ, ಬೃಹತ್ ಕಮಾನಿನ ಹೆಬ್ಬಾಗಿಲು, ಉದ್ಯಾನ ಮತ್ತು ಕೋಟೆ ಕೊತ್ತಲಗಳೆಂದು ಮುಖ್ಯವಾಗಿ ಎರಡು ಭಾಗಗಳಾಗಿ ವಿಂಗಡಿಸಲಾಗಿದೆ. ಮಸೀದಿ ಅಥವಾ ಪ್ರಾರ್ಥನಾ ಮಂದಿರ ಮಕ್ಕಾ ದಿಕ್ಕಿಗೆ ಅಭಿಮುಖವಾಗಿದ್ದು ಅನೇಕ ಕಂಬಿಗಳನ್ನು ಹೊಂದಿದ್ದು ಹೊರ ಅಂಗಳ ಮತ್ತು ವಿಶಾಲವಾದ ಒಳ ಅಂಗಳದಿಂದ ಕೂಡಿದ್ದು ಹಿಂಭಾಗಕ್ಕೆ ಮಾತ್ರ ಗೋಡೆ ಹೊಂದಿರುತ್ತದೆ. ಈ ಗೋಡೆಯಲ್ಲಿ ಮೆಹ್ರಬ್ ಎಂದು ಕರೆಯಲಾಗಿರುವ ಕಮಾನಿನಾಕಾರ ನಿರ್ಮಿಸಲಾಗಿರುತ್ತದೆ. ಅದರ ಬಲ ಬದಿಗೆ ಎತ್ತರವಾದ ಕಂಬದಾಕೃತಿಯ ಮಿನಾರ್ ಇರುತ್ತದೆ. ಸಾಮಾನ್ಯವಾಗಿ ಇದು ಮತಬಂಧುಗಳನ್ನು ಪ್ರಾರ್ಥನೆಗೆ ಆಹ್ವಾನಿಸಲು ಏರ್ಪಡಿಸಿದ ವ್ಯವಸ್ಥೆ. ಗರ್ಭಾಂಕಣದ ಮೇಲೆ ಸುಂದರವಾದ ವರ್ತುಳಾಕಾರದ ಗುಮ್ಮಟವನ್ನು ನಿರ್ಮಿಸಲಾಗಿದೆ. ಸಮಾಧಿ ಅಥವಾ ಗೋರಿ ಸಾಮಾನ್ಯವಾಗಿ ಭವ್ಯ ಕಟ್ಟಡ. ಇದಕ್ಕೆ ಕಂಬಗಳೂ ವಿಶಾಲ ಅಂಗಳವೂ ಇರುತ್ತವೆ. ಮೇಲ್ಗಡೆ, ಮಧ್ಯದಲ್ಲಿ ಅತ್ಯಂತ ದೊಡ್ಡದಾದ ಗುಮ್ಮಟವಿರುತ್ತದೆ. ಕೆಳಗಡೆ ಕಟ್ಟಡದ ಮಧ್ಯಭಾಗದಲ್ಲಿ ದೊಡ್ಡ ಗುಮ್ಮಟದ ಕೇಂದ್ರ ಸ್ಥಾನದಲ್ಲಿ ಸಮಾಧಿಯನ್ನು ನಿರ್ಮಿಸಲಾಗಿರುತ್ತದೆ. ಹಲವು ವೇಳೆ ದೊಡ್ಡ ಸಮಾಧಿಯ ಬಳಿಯಲ್ಲಿ ಪ್ರತ್ಯೇಕವಾದ ಪ್ರಾರ್ಥನಾ ಮಂದಿರಗಳನ್ನು ನಿರ್ಮಿಸಿರುವುದುಂಟು. ಗೋರಿ ಮತ್ತು ಪ್ರಾರ್ಥನಾ ಮಂದಿರ ಸಾಮಾನ್ಯವಾಗಿ ಒಂದೇ ಆವರಣದಲ್ಲಿ ಇರುತ್ತವೆ. ಅದನ್ನು ರೋಜ ಎಂದು ಕರೆಯುತ್ತಾರೆ. ಗೋರಿಗಳನ್ನು ದರಗ ಎಂದು ಹಲವು ವೇಳೆ ಕರೆಯಲಾಗಿದೆ. ಎರಡನೆಯ ವರ್ಗದ ಅರಮನೆಗಳು, ಕೋಟೆಗಳು, ಹೆಬ್ಬಾಗಿಲುಗಳು, ಸಾರ್ವಜನಿಕ ಕಟ್ಟಡಗಳು ಹಾಗೂ ಶಿಕ್ಷಣ ಸಂಸ್ಥೆಗಳು ಸಹ ಭವ್ಯ ನಿರ್ಮಾಣಗಳಾಗಿವೆ. ಕರ್ನಾಟಕದಲ್ಲಿ ಈ ಎರಡು ಬಗೆಯ ಕಟ್ಟಡಗಳನ್ನೂ ಕಾಣಬಹುದು. ಒಟ್ಟಿನಲ್ಲಿ ಕರ್ನಾಟಕದಲ್ಲಿ ಮುಸ್ಲಿಂ ವಾಸ್ತುಶಿಲ್ಪವು ಉತ್ತರ ಭಾಗದಲ್ಲಿ ಹೆಚ್ಚು ಮಟ್ಟಿಗೆ ಗುಲ್ಬರ್ಗ, ಬೀದರ್, ಬಿಜಾಪುರ ಪ್ರದೇಶಗಳಲ್ಲೂ ದಕ್ಷಿಣ ಭಾಗದಲ್ಲಿ ಹೆಚ್ಚಾಗಿ ಶ್ರೀರಂಗಪಟ್ಟಣದಲ್ಲೂ ಕೇಂದ್ರೀಕೃತವಾಗಿದೆ.

ಉತ್ತರ ಭಾರತದಲ್ಲಿ ತುಗಲಕ್ ಸಂತತಿ ಆಳ್ವಿಕೆಯನ್ನು ನಡೆಸುತ್ತಿದ್ದ ಕಾಲದಲ್ಲಿ ಪ್ರಪ್ರಥಮವಾಗಿ ಕರ್ನಾಟಕದಲ್ಲಿ ಮುಸ್ಲಿಮರ ಆಳ್ವಿಕೆ ಮೊದಲಾಯಿತು. ಗುಲ್ಬರ್ಗದಲ್ಲಿ ಸ್ಥಾಪನೆಯಾಗಿ ಅನಂತರ ಬಿದರೆಗೆ ರಾಜಧಾನಿಯನ್ನು ಸ್ಥಳಾಂತರಿಸಲಾಯಿತು. ಅಲ್ಲಾವುದ್ದೀನ್ ಬಹುಮನ್‌ಷಾನಿಂದ ಸ್ಥಾಪಿತವಾಗಿ ಬಹುಮನಿ ರಾಜ್ಯವೆಂದೇ ಅದು ಪ್ರಸಿದ್ಧಿಗೆ ಬಂತು. ಅನಂತರ ಬಹುಮನಿ ರಾಜ್ಯವು ಒಡೆದು ಹೋಗಿ ಸ್ಥಾಪನೆಯಾದ ಐದು ಷಾಹಿ ರಾಜ್ಯಗಳಲ್ಲಿ ಎರಡಾದ ಬರೀದ್ ಷಾಹಿ ಮತ್ತು ಆದಿಲ್ ಷಾಹಿ ಮನೆತನಗಳು ಬೀದರ್ ಮತ್ತು ಬಿಜಾಪುರಗಳನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದವು. ಮೇಲ್ಕಂಡ ಸಂತತಿಗಳ ಆಳ್ವಿಕೆಯ ಕಾಲದಲ್ಲಿ ಈ ಸ್ಥಳಗಳಲ್ಲಿ ಅನೇಕ ಭವ್ಯ ಕಟ್ಟಡಗಳೂ ಕೋಟೆಗಳೂ ನಿರ್ಮಾಣವಾದವು. ಪ್ರಾರಂಭದಲ್ಲಿ ಶಿಲ್ಪಿಗಳು ತುಗಲಕ್ ಸಂತತಿಯ ಕಟ್ಟಡಗಳ ವಿನ್ಯಾಸದಲ್ಲಿ ಇಲ್ಲಿ ಕಟ್ಟಡಗಳನ್ನು ನಿರ್ಮಿಸಿದರು. ಕ್ರಮೇಣ ಪರ್ಷಿಯಾದಿಂದ ಹಾಗೂ ಅರೇಬಿಯಾದಿಂದ ಶಿಲ್ಪಿಗಳನ್ನು ಕರೆಸಿ ಕಟ್ಟಡಗಳನ್ನು ಕಟ್ಟಿಸಿದರು. ಆದುದರಿಂದ ಮೇಲ್ಕಂಡ ಸ್ಥಳಗಳಲ್ಲಿ ಕಟ್ಟಲಾದ ಕಟ್ಟಡಗಳಲ್ಲಿ ಭಾರತೀಯ, ಪರ್ಷಿಯನ್, ಅರಬೀ ಹಾಗೂ ಪಾಶ್ಚಿಮಾತ್ಯ ಶೈಲಿಗಳ ಮಿಲನ ಗುರುತಿಸಲಾಗಿದೆ. ವಿಂಧ್ಯ ಪರ್ವತಗಳ ದಕ್ಷಿಣದಲ್ಲಿ ಹೆಚ್ಚು ಮಟ್ಟಿಗೆ ಕೆಲವು ಶತಮಾನಗಳ ಕಾಲ ಈ ಪ್ರದೇಶವೇ ಮುಸ್ಲಿಂ ಆಳ್ವಿಕೆಯ ಕೇಂದ್ರವಾಗಿದ್ದುದರಿಂದ ಮೇಲ್ಕಂಡ ಸ್ಥಳಗಳಲ್ಲಿ ಹೆಚ್ಚು ಸಂಖ್ಯೆಯ ಕಟ್ಟಡಗಳನ್ನೂ, ಸ್ಮಾರಕಗಳನ್ನೂ ನೋಡಬಹುದು.

## ಗುಲ್ಬರ್ಗ

ಬಹುಮನಿ ರಾಜ್ಯದ ಮೊದಲ ರಾಜಧಾನಿಯಾಗಿದ್ದ ಗುಲ್ಬರ್ಗ ನಗರದಲ್ಲಿ ಪ್ರಾರಂಭದ ಮುಸ್ಲಿಂ ಸ್ಮಾರಕಗಳೆಲ್ಲವೂ ಸೀಮಿತವಾಗಿವೆ. ಅಲ್ಲಿಯ ಕೋಟೆ ಕಲ್ಲಿನಿಂದ ಕಟ್ಟಿದ ಬೃಹತ್ ಕಟ್ಟಡ. ಅದರಲ್ಲಿ ೧೫ ಬುರುಜುಗಳೂ ೨೦ ತುಪಾಕಿ ಗೋಪುರಗಳೂ ಇವೆ. ಅದು ನಗರವನ್ನು ಸುತ್ತುವರಿದಿದೆ. ಅದು ಬಹಮಾನ್‌ಷಾನ ಕಾಲದಲ್ಲಿ (೧೩೪೭–೧೩೫೮) ಕಟ್ಟಲಾದುದೆಂದು ತಿಳಿದುಬಂದಿದೆ. ಕೋಟೆಗೆ ಅರ್ಧ ಕಿಲೋಮೀಟರ್ ದೂರದಲ್ಲಿ ಎರಡು ಗುಂಪುಗಳಿಂದ ಕೂಡಿರುವ ಸುಲ್ತಾನರ ಗೋರಿಗಳು ಮತ್ತು ಹಲವು ಮಸೀದಿಗಳು ಇವೆ. ಇವು ಸರ್ವೇಸಾಮಾನ್ಯವಾಗಿ ಸಮಕಾಲೀನ ಉತ್ತರ ಭಾರತದ ಮುಸ್ಲಿಂ ಕಟ್ಟಡಗಳನ್ನು ಹೋಲುತ್ತವೆ. ಒಂದು ಗುಂಪಿನಲ್ಲಿ

ರುವ ಮೂರು ಗೋರಿಗಳನ್ನು ಮೊದಲಿನ ಮೂರು ಮಂದಿ ಸುಲ್ತಾನರಾದ ಅಲ್ಲಾವುದ್ದೀನ್ ಹಸನ್, ಒಂದನೆಯ ಮಹಮ್ಮದ್‌ಷಾ, ಎರಡನೆಯ ಮಹಮ್ಮದ್‌ಷಾ ಇವರು ಕಟ್ಟಿಸಿದರೆಂದು ನಂಬಲಾಗಿದೆ. ಚಚ್ಚೌಕಾಕಾರದ ಅಂಗಳ, ಕಮಾನಿನಾಕೃತಿಯ ಚಜ್ಜ, ಸರಳವಾದ ಕಂಬಗಳು ಹಾಗೂ ತೀರ ಸರಳವಾದ ಗುಮ್ಮಟ–ಇವು ಈ ಗೋರಿಗಳ ಪ್ರಮುಖ ಲಕ್ಷಣಗಳು. ಅಲ್ಲಿ ಗೊಂಬಸ್ ಎಂಬ ಏಳು ಸಮಾಧಿಗಳ ಸಮೂಹ, ಬಂದೇನವಾಜ್ ದರ್ಗ ಮತ್ತು ೧೫ನೆಯ ಶತಮಾನದಲ್ಲಿ ಕಟ್ಟಲಾದ ಖಲಂದರ್ ಖಾನನ ಮಸೀದಿ ಇವು ಇತರ ಗಮನಾರ್ಹ ಕಟ್ಟಡಗಳು.

ಗುಲ್ಬರ್ಗದ ಷಾ ಬಜಾರ್ ಪ್ರದೇಶದಲ್ಲಿರುವ ಮಸೀದಿ ಇನ್ನೊಂದು ಮುಖ್ಯವಾದ ಕಟ್ಟಡ. ಇದನ್ನು ಒಂದನೆಯ ಮಹಮ್ಮದ್‌ಷಾ ಕಟ್ಟಿಸಿದನು. ಇದು ವಿಶಾಲವಾದ ಪ್ರಾರ್ಥನಾ ಹಜಾರವನ್ನು ಹೊಂದಿದೆ. ಈ ಕಟ್ಟಡದ ಕಂಬಗಳೂ, ಕಮಾನುಗಳೂ, ಗುಮ್ಮಟವೂ, ಮುಂಭಾಗದಲ್ಲಿ ಎರಡು ಪಾರ್ಶ್ವಗಳಲ್ಲೂ ನಿಲ್ಲಿಸಿರುವ ಮಿನಾರುಗಳೂ ತುಂಬಾ ಆಕರ್ಷಕವಾಗಿವೆ. ಗುಲ್ಬರ್ಗ ಕೋಟೆಯೊಳಗಿರುವ, ಕೋಟೆ ದೊಡ್ಡ ಮಸೀದಿ ಎಂಬ ಹೆಸರಿನಿಂದ ಕರೆಯಲ್ಪಡುವ ಮಂದಿರ ಅಲ್ಲಿನ ಕಟ್ಟಡಗಳಲ್ಲೆಲ್ಲ ಭವ್ಯವಾದುದು. ಅದು ೬೫.೮ ಮೀ. ಉದ್ದ. ೫೩.೬ ಮೀ. ಅಗಲವಾಗಿದ್ದು ವಾಸ್ತುಶಿಲ್ಪದ ದೃಷ್ಟಿಯಿಂದಲೂ ಅದ್ವಿತೀಯವಾಗಿದೆ. ಇದನ್ನು ಒಂದನೆಯ ಮಹಮದ್‌ಷಾನ ಆಳ್ವಿಕೆಯಲ್ಲಿ ಕಟ್ಟಲಾಯಿತು. ಪರ್ಷಿಯದ ಕ್ವಾಸ್ವಿನ್ ನಿವಾಸಿ ರಫಿ ಎಂಬವನು ಈ ಮಸೀದಿಯನ್ನು ನಿರ್ಮಿಸಿದ ಶಿಲ್ಪಿ ಎಂದು ಒಂದು ಶಾಸನದಿಂದ ತಿಳಿದು ಬಂದಿದೆ. ಅಲ್ಲದೆ ಈ ಮಸೀದಿ ವಿನ್ಯಾಸದಲ್ಲಿ ಸ್ಪೈನಿನ ಕಾರ್ಡೋವದ ಸುಪ್ರಸಿದ್ಧ ಮಸೀದಿಯನ್ನು ಹೋಲುತ್ತದೆ ಎಂದು ಹೇಳಲಾಗಿದೆ. ಮಸೀದಿಯ ಒಳಭಾಗ ಆಕರ್ಷಕವಾಗಿದೆ. ಮೇಲ್ಛಾವಣಿಯಲ್ಲಿ ೬೫ ಚಿಕ್ಕ ಗುಮ್ಮಟಗಳಿವೆ. ಮಧ್ಯದಲ್ಲಿ ಒಂದು ದೊಡ್ಡ ಗುಮ್ಮಟವೂ, ಅದರ ಸುತ್ತಲೂ ೪ ಕಿರಿ ಗುಮ್ಮಟಗಳೂ ಇವೆ. ಇವೆಲ್ಲವನ್ನೂ ಪ್ರಾರ್ಥನಾ ಹಜಾರದ ಚಾವಣಿಯ ಮೇಲೆ ನಿರ್ಮಿಸಲಾಗಿದೆ. ನಾಲ್ಕು ಮೂಲೆಯಲ್ಲೂ ದೊಡ್ಡ ಗುಮ್ಮಟಗಳಿಂದ ಕೂಡಿರುವ ಈ ಕಟ್ಟಡ ದಖನ್ ಪ್ರದೇಶದ ಮುಸ್ಲಿಂ ವಾಸ್ತುಶಿಲ್ಪದ ಪ್ರಮುಖ ಕಟ್ಟಡಗಳಲ್ಲೊಂದೆಂದು ಪರಿಗಣಿತವಾಗಿದೆ.

### ಬಿದರೆ

ಬಿದರೆ ಅಥವಾ ಬೀದರ್ ನಗರ ಮುಸ್ಲಿಂ ವಾಸ್ತುಶಿಲ್ಪದ ಇನ್ನೊಂದು ಕೇಂದ್ರ. ಕ್ರಿ. ಶ. ೧೪೨೪ರಲ್ಲಿ ಬಹಮನಿ ರಾಜ್ಯದ ರಾಜಧಾನಿಯನ್ನು ಗುಲ್ಬರ್ಗದಿಂದ ಬಿದರೆಗೆ ವರ್ಗಾಯಿಸಲಾಯಿತು. ಅನಂತರ ಒಂದು ವಿಶಾಲ ರಾಜ್ಯದ ರಾಜಧಾನಿಯಾಗಿ ಬಿದರೆ ವಾಣಿಜ್ಯ ಮತ್ತು ಕಲೆಯ ಕೇಂದ್ರವಾಯಿತು. ಅಲ್ಲಿ ಅಳಿದುಳಿದಿರುವ ಕಟ್ಟಡಗಳು ಆ ಕಾಲದಲ್ಲಿ ಈ ನಗರವು ಹೊಂದಿದ್ದ ಭವ್ಯತೆಗೆ ಸಾಕ್ಷಿಗಳಾಗಿವೆ. ಅಲ್ಲಿಯ ಕೋಟೆಯ ನಿರ್ಮಾಣ ಕಾರ್ಯ ೧೪೨೯ರಲ್ಲಿ ಪ್ರಾರಂಭವಾಗಿ ಅನೇಕ ವರ್ಷಗಳ ಕಾಲ ಮುಂದುವರಿಯಿತು. ಅದರಲ್ಲಿ ಅನೇಕ ಹೆಬ್ಬಾಗಿಲುಗಳೂ ಬುರುಜುಗಳೂ ಇವೆ. ಅದರ ಸುತ್ತಲೂ ಹುಟ್ಟು ಬಂಡೆಯಲ್ಲಿ ಕೊರೆದ ಆಳವಾದ ಮತ್ತು ಅಗಲವಾದ ಕಂದಕವಿದೆ. ಅಲ್ಲಿ ಅನೇಕ ಅರಮನೆಗಳ ಅವಶೇಷಗಳು, ಮಸೀದಿಗಳು, ಸಮಾಧಿಗಳು, ಹೆಬ್ಬಾಗಿಲುಗಳು ಮೊದಲಾಗಿ ಅನೇಕ ಕಟ್ಟಡಗಳಿವೆ.

ಮುಸ್ಲಿಂ ರಾಜರು ಕಟ್ಟಿಸಿದ ತಖ್ತ್ ಮಹಲ್, ದಿವಾನ್-ಇ-ಆಮ್, ರಂಗಿನ್ ಮಹಲ್, ಗಾಗನ್ ಮಹಲ್, ಕರ್ಮಷ್ ಮಹಲ್ ಮತ್ತು ಇತರ ಅರಮನೆಗಳು ಜೀರ್ಣಾವಸ್ಥೆಯಲ್ಲಿವೆ. ತಖ್ತ್ ಮಹಲ್ ಅರಮನೆಯು ಉನ್ನತವಾದ ಜಗತಿ, ಎತ್ತರವಾದ ಕಮಾನುಗಳು, ಮಧ್ಯದಲ್ಲಿ ವಿಶಾಲವಾದ ಹಜಾರ, ಹಿಂದೆ ಸುಲ್ತಾನನ ವಾಸದ ಕೊಠಡಿ ಅದರ ಮೇಲಿದ್ದ ಎತ್ತರವಾದ ಗುಮ್ಮಟಗಳಿಂದ ಕೂಡಿದ ಸೌಂದರ್ಯ ಭವನವಾಗಿತ್ತು. ಮುಂಭಾಗದಲ್ಲಿ ವಿಶಾಲವಾದ ಸಭಾಂಗಣವಿತ್ತು. ಅದು ಬಣ್ಣ ಬಣ್ಣ ಹಾಗೂ ಆಕರ್ಷಕ ಚಿತ್ರಗಳಿಂದ ಕೂಡಿದ ಬಿಲ್ಲೆಗಳಿಂದ ಜೋಡಿಸಲ್ಪಟ್ಟಿದ್ದು ಮನಮೋಹಕವಾಗಿತ್ತು. ಗುಮ್ಮಟದ ಒಳಭಾಗದಲ್ಲಿ ಬಳ್ಳಿಗಳು, ತೋರಣಗಳು ಹಾಗೂ ರೇಖಾಕೃತಿಯ ಕೆತ್ತನೆಗಳಿಂದ ಕೂಡಿತ್ತು. ಸುಲ್ತಾನರ ರಾಜ ಚಿಹ್ನೆಯಾದ ಹುಲಿ ಮತ್ತು ಮೂಡುತ್ತಿರುವ ಸೂರ್ಯ ಚಿಹ್ನೆಯನ್ನು ಮೋಹಕವಾಗಿ ಮೂಡಿಸಲಾಗಿತ್ತು. ಬಿದರೆಯ ಜಾಮಿಅ ಮಸೀದಿ ಹಾಗೂ ಸೋಲಾ ಕಂಬಾ ಮಸೀದಿಗಳು ಸಹ ಇದೇ ಕಾಲದಲ್ಲಿ ನಿರ್ಮಾಣವಾದ ವೈಭವಪೂರ್ಣ ಕಟ್ಟಡಗಳು.

ಬಿದರೆಗೆ ಹೊಂದಿಕೊಂಡಿರುವ ಅಷ್ಟೂರಿನಲ್ಲಿ ೧೨ ಮಂದಿ ರಾಜಮನೆತನಗಳ ಗೋರಿಗಳಿವೆ. ಇವುಗಳಲ್ಲಿ ಅಹಮದ್ ಷಾ, ಅಲ್ಲಾವುದ್ದೀನ್ ಹಾಗೂ ಹಜರತ್ ಖಲೀವುಲ್ಲ ಇವರ ಗೋರಿಗಳು ಭವ್ಯವಾಗಿವೆ. ಇವುಗಳಲ್ಲಿ ಬಗೆ ಬಗೆಯ ಹೂಬಳ್ಳಿಗಳು, ರೇಖಾ ಚಿತ್ರಗಳು, ಬಣ್ಣದ ಚಿತ್ರಗಳಿಂದ ಕೂಡಿದ ಬಿಲ್ಲೆಗಳು ಮತ್ತು ಸುಂದರವಾದ ಕಮಾನುಗಳನ್ನು ನೋಡಬಹುದು. ಅಲ್ಲಿರುವ ಇತರ ಗೋರಿಗಳನ್ನು ಸಾಮಾನ್ಯವಾಗಿ ಮೇಲಿನ ಗೋರಿಗಳ ರೀತಿಯಲ್ಲಿಯೇ ಕಟ್ಟಲಾಗಿದೆ.

ಬಿದರೆ ಪಟ್ಟಣದಲ್ಲಿ ಕ್ರಿ.ಶ. ೧೪೭೨ರಲ್ಲಿ ಕಟ್ಟಲಾದ ಮಹಮದ್ ಗವಾನನ ಮದರಸ ಮತ್ತೊಂದು ಸುಪ್ರಸಿದ್ಧ ಕಟ್ಟಡ. ಈ ಕಟ್ಟಡವನ್ನು ಪರ್ಷಿಯಾ ವಾಸ್ತು ಶೈಲಿಯಲ್ಲಿ ನಿರ್ಮಿಸಲಾಗಿದ್ದು ಪೂರ್ವ ಪಶ್ಚಿಮವಾಗಿ ೬೫.೮ ಮೀಟರುಗಳು ಉತ್ತರ ದಕ್ಷಿಣವಾಗಿ ೬೭ ಮೀಟರುಗಳು ಉದ್ದಗಲವಾಗಿದ್ದು ೧೭ ಮೀಟರುಗಳಷ್ಟು ಎತ್ತರವಾಗಿದೆ. ಈ ವಿಶಾಲವಾದ ಕಟ್ಟಡವು ಮೂರು ಅಂತಸ್ತುಗಳನ್ನು ಹೊಂದಿದ್ದು ಮಧ್ಯಭಾಗದಲ್ಲಿ ವಿಶಾಲವಾದ ಸಭಾಭವನ, ಸುತ್ತಲೂ ತರಗತಿಯ ಕೊಠಡಿಗಳು, ಪ್ರಾರ್ಥನೆಯ ಅಂಗಳ, ಪುಸ್ತಕ ಭಂಡಾರ, ಪ್ರಾಧ್ಯಾಪಕರ ಕೊಠಡಿಗಳು, ವಿದ್ಯಾರ್ಥಿಗಳ ಕೊಠಡಿಗಳಿಂದ ಕೂಡಿದ್ದು ಎರಡು ಕಡೆಯಲ್ಲಿ ಮಿನಾರುಗಳು ಇವೆ. ಇದು ಒಂದು ವಿಶಿಷ್ಟ ರೀತಿಯ ಶಾಲಾ ಕಟ್ಟಡವಾಗಿತ್ತು. ಈಗ ಶಿಥಿಲವಾಗಿದೆ.

ಬಹಮನೀ ರಾಜ್ಯವು ಒಡೆದು ಹೋದ ನಂತರ ಬಿದರೆ ನಗರವು ಬರೀದ್‌ಷಾಹಿ ಸಂತತಿಯ ರಾಜಧಾನಿಯಾಗಿ ಮುಂದುವರಿಯಿತು. ಆ ಕಾಲದ ವಾಸ್ತುಶಿಲ್ಪದಲ್ಲಿ ಸ್ವಲ್ಪ ಮಾರ್ಪಾಡುಗಳನ್ನು ಕಾಣಬಹುದು. ಬರೀದ್‌ಷಾಹಿ ಆಳ್ವಿಕೆಯಲ್ಲಿ ಕೋಟೆಯನ್ನೂ ರಂಗಿನ್ ಮಹಲ್ ಹಾಗೂ ಕರ್ಮಷ್ ಮಹಲ್ ಮೊದಲಾದ ಕಟ್ಟಡಗಳನ್ನು ವಿಸ್ತರಿಸಿ ಪುನರ್ ನಿರ್ಮಾಣ ಮಾಡಲಾಯಿತು. ಬಣ್ಣ ಬಣ್ಣದ ಬಿಲ್ಲೆಗಳಿಂದ ಈ ಮಹಲನ್ನು ಅಲಂಕರಿಸಿದುದರಿಂದ ಅದಕ್ಕೆ ರಂಗಿನ್ ಮಹಲ್ ಎಂದು ಹೆಸರಾಯಿತು. ಅದರಲ್ಲಿ ಅಳವಡಿಸಿದ ಮರದ ಕಂಬಗಳು ಸುಂದರವಾದ ಮತ್ತು ನಯವಾದ ಕೆತ್ತನೆಗಳಿಂದ ಕೂಡಿದ್ದು ಚಿತ್ರಗಳು ಮುತ್ತಿನ ಚಿಪ್ಪುಗಳಿಂದ ಅಲಂಕೃತವಾಗಿವೆ. ಅಲ್ಲಿನ ಜಾಮೀ ಮಸೀದಿ ಬರೀದ್‌ಷಾಹಿ ಕಾಲದ ಮತ್ತೊಂದು ಉನ್ನತ ಕಟ್ಟಡ. ಇದು ವಿಶಾಲವಾದ ಪ್ರಾರ್ಥನಾ ಪ್ರಾಂಗಣವನ್ನು ಹೊಂದಿದ್ದು ೭ ಕಮಾನುಗಳಿಂದ ಕೂಡಿದೆ. ಮಧ್ಯದ ಕಮಾನು ದೊಡ್ಡದಾಗಿದೆ. ಪ್ರಾರ್ಥನಾ ಅಂಗಳದ ಮಧ್ಯಭಾಗದ ಮೇಲೆ ಗುಮ್ಮಟವಿದೆ. ಒಟ್ಟಿನಲ್ಲಿ ಈ ಕಟ್ಟಡ ಸರಳವಾಗಿದ್ದರೂ ನೋಡಲು

ಸುಂದರವಾಗಿದೆ. ಅಲ್ಲಿನ ಕುಲಿ ಮಸೀದಿ ಮತ್ತೊಂದು ಸುಂದರ ಕಟ್ಟಡ. ಬಿದರ ಆದಿಲ್‌ಷಾಹಿಗಳ ವಶವಾದ ಮೇಲೆ ಅಲ್ಲಿ ಉನ್ನತವಾದ ಕಟ್ಟಡಗಳು ನಿರ್ಮಾಣವಾಗಲಿಲ್ಲ. ಆದರೆ ಹಲವು ಗೋರಿಗಳನ್ನೂ ಸಣ್ಣ ಪುಟ್ಟ ಮಸೀದಿಗಳನ್ನೂ ಕಟ್ಟಿಸಲಾಯಿತು.

**ಬಿಜಾಪುರ**

ಬಿಜಾಪುರ ಮುಸ್ಲಿಂ ವಾಸ್ತುಶಿಲ್ಪದ ಮತ್ತೊಂದು ಸುಪ್ರಸಿದ್ಧ ಕೇಂದ್ರ. ಇಲ್ಲಿ ಆಳ್ವಿಕೆ ನಡೆಸಿದ ಆದಿಲ್‌ಷಾಹಿ ಸಂತತಿ ಸುಲ್ತಾನರು ವಾಸ್ತುಶಿಲ್ಪ ವೈಭವಕ್ಕೆ ಗಣನೀಯ ಕಾಣಿಕೆ ನೀಡಿದ್ದಾರೆ. ಅತ್ಯಂತ ಭವ್ಯವಾದ ಕಲಾ ವೈಭವದಿಂದ ಕೂಡಿದ ಸ್ಮಾರಕಗಳನ್ನು ಹೊಂದಿರುವ ಭಾರತದ ಕೆಲವೇ ನಗರಗಳಲ್ಲಿ ಬಿಜಾಪುರ ಪ್ರಮುಖವಾಗಿದೆ. ಈ ನಗರದಲ್ಲಿ ಸುಮಾರು ೫೦ ಮಸೀದಿಗಳು ೨೦ ದರ್ಗಾಗಳು ಹಾಗೂ ಅಷ್ಟೇ ಸಂಖ್ಯೆಯ ಅರಮನೆಗಳು ಆ ಕಾಲದಲ್ಲಿ ನಿರ್ಮಾಣವಾದವು. ಇವು ಸಂಖ್ಯೆಯಲ್ಲಿ ಮಾತ್ರವಲ್ಲದೆ ಗಾತ್ರ, ಅಲಂಕಾರ, ವಾಸ್ತುಶಿಲ್ಪ ಮತ್ತು ಕುಶಲತೆಗೆ ಪ್ರಸಿದ್ಧಿಯಾಗಿವೆ. ಕಟ್ಟಡಗಳ ರಚನಾ ಕಾರ್ಯ ೧೬ನೆಯ ಶತಮಾನದಲ್ಲಿ ಪ್ರಾರಂಭವಾಗಿ ಅದು ಮೊಗಲರ ವಶವಾಗುವವರೆಗೂ ಏಕಪ್ರಕಾರವಾಗಿ ಮುಂದುವರಿಯಿತು. ಇಲ್ಲಿರುವ ಎಲ್ಲಾ ಕಟ್ಟಡಗಳು ಈ ನಗರವನ್ನು ಸುತ್ತಿರುವ ಭವ್ಯಕೋಟೆಯ ಒಳಗಡೆಯೇ ಇವೆ. ಭಾರತದ ಬೃಹತ್ ಕೋಟೆಗಳಲ್ಲೊಂದೆನಿಸಿರುವ ಬಿಜಾಪುರದ ಕೋಟೆಯ ಸುತ್ತಳತೆ ಸುಮಾರು ೧೦½ ಕಿ. ಮೀ. ಸುಮಾರು ೬ ಮೀ. ಎತ್ತರವಾಗಿರುವ ಈ ಕೋಟೆ ದಪ್ಪ ಕಲ್ಲುಗಳಿಂದ ೧೫ ಮೀ. ದಪ್ಪವಾಗಿ ಕಟ್ಟಲ್ಪಟ್ಟು ೯೬ ಬತ್ತು ಅಟ್ಟಾಲಕಗಳಿಂದ ಕೂಡಿದೆ. ಕೋಟೆಯ ಸುತ್ತಲೂ ಸುಮಾರು ೧೨–೧೫ ಮೀ. ಅಗಲದ ಕಂದಕವಿದೆ. ಕೋಟೆ ೫ ಮುಖ್ಯ ದ್ವಾರಗಳಿಂದ ಕೂಡಿತ್ತು. ದ್ವಾರಗಳೆಲ್ಲ ಬಹು ಭದ್ರವಾಗಿದ್ದು ಬಿಜಾಪುರದ ದ್ವಾರಗಳನ್ನಾಗಲೀ ಕೋಟೆಯನ್ನಾಗಲಿ ಯಾವ ಶತ್ರುವೂ ಭೇದಿಸಿ ಒಳ ಹೋಗಲಿಲ್ಲ.

ಬಿಜಾಪುರ ವಾಸ್ತುಶಿಲ್ಪ ಲಕ್ಷಣಗಳಲ್ಲಿ ಹಳೆಯ ಪರ್ಷಿಯನ್ ಮತ್ತು ಆಟೋಮನ್ ವಾಸ್ತುಶಿಲ್ಪಗಳ ಸಂಪರ್ಕದ ಪ್ರಭಾವ ಗೋಚರವಾಗುತ್ತದೆ. ಇಲ್ಲಿಯ ವಾಸ್ತುಶಿಲ್ಪದ ಮುಖ್ಯ ಲಕ್ಷಣಗಳೆಂದರೆ ಮೊದಲನೆಯದಾಗಿ ಗುಮ್ಮಟ ಸಾಮಾನ್ಯವಾಗಿ ವರ್ತುಲಾಕಾರವಾಗಿದ್ದು ಭೂಮಟ್ಟದಲ್ಲಿ ಹೂವಿನ ದಳಗಳೋಪಾದಿಯ ಸಮೂಹದಿಂದ ಕೂಡಿದ್ದು ಕ್ರಮೇಣ ಮೇಲೇಳುತ್ತದೆ. ಕಟ್ಟಡಗಳ ಮೇಲ್ಭಾಗಗಳು ಚಿಕ್ಕ ಗುಮ್ಮಟಗಳಿಂದ ಅಲಂಕೃತವಾಗಿವೆ. ಎರಡನೆಯದಾಗಿ ಬಿಜಾಪುರದ ಕಮಾನಿನ ಆಕಾರ ವೈಶಿಷ್ಟ್ಯಪೂರ್ಣವಾಗಿದೆ. ಅದರ ಗೆರೆಗಳು ಹಿಂದಿನ ಕೋನದ ಮುಖಾಂತರ ನಯವಾಗಿ ಬಾಗಿ ಮುಂದುವರಿಯುತ್ತವೆ. ಕಮಾನುಗಳು ಚತುಷ್ಕೇಂದ್ರಗಳಿಂದ ಕೂಡಿವೆ. ಮೂರನೆಯದಾಗಿ ಬಿಜಾಪುರದ ವಾಸ್ತುಶಿಲ್ಪದಲ್ಲಿ ಕಂಬಗಳಿರುವುದಿಲ್ಲ. ಕಂಬಗಳಿಗೆ ಬದಲಾಗಿ ಆಯಾಕಾರದ ಭೇದ ವಿನ್ಯಾಸದ ದಪ್ಪ ಗೋಡೆಗಳಿರುತ್ತವೆ. ನಾಲ್ಕನೆಯದಾಗಿ ಗೋಡೆಯ ಮೇಲಿನ ಚಾಚು ಭಾಗ ಅಥವ ಚಜ್ಜವು ಕಟ್ಟಡಗಳಿಗೆ ಅಲಂಕರಣ ರೂಪದಲ್ಲಿ ಎಲ್ಲೆಡೆಯೂ ಕಂಡು ಬರುತ್ತದೆ. ಕೊನೆಯದಾಗಿ ಇಲ್ಲಿಯ ಅಲಂಕಾರ ವಿನ್ಯಾಸಗಳು ಹೊಸ ರೀತಿಯಲ್ಲಿದ್ದು ವೈಶಿಷ್ಟ್ಯದಿಂದ ಕೂಡಿವೆ. ಗುಲಾಬಿ ಹೂವಿನಾಕಾರ, ತೂಗುದೀಪ, ನಿರಂತರವಾದ ಅಂಚು ಮೊದಲಾದುವನ್ನು ಇಲ್ಲಿ ಕಾಣಬಹುದು. ಬಿಜಾಪುರದ ಮುಖ್ಯ ಕಟ್ಟಡಗಳಾದ ಆಸಾರ್ ಮಹಲ್, ಗಗನ ಮಹಲ್, ಮಹತರ್ ಮಹಲ್, ಚೀನೀಮಹಲ್, ಆನಂದ್ ಮಹಲ್, ಜಲಮಂಜಿಲ್, ಜಹಾಜ್ ಮಹಲ್, ಇಬ್ರಾಹಿಂ ರೋಜಾ, ಜಾಮೀ ಮಸೀದಿ ಮತ್ತು ಗೋಳ ಗುಮ್ಮಟ ಇವುಗಳಲ್ಲಿ ಮೇಲ್ಕಂಡ ವಾಸ್ತುಶೈಲಿಯನ್ನು ನೋಡಬಹುದಾಗಿದೆ.

ಜಾಮೀ ಮಸೀದಿ ಒಂದನೆಯ ಆದಿಲ್‌ಷಾನಿಂದ ನಿರ್ಮಿತವಾಯಿತು. ಇದು ೪೫೦'×೨೨೮' ಭವ್ಯ ಕಟ್ಟಡ. ಇದರ ತೆರೆದ ಅಂಗಳ ೧೫೦ ಅಡಿಗಳಷ್ಟು ಅಗಲವಾಗಿದೆ. ಏಳು ಕಮಾನುಗಳ ಸಾಲುಗಳಿಂದ ಅಲಂಕೃತವಾಗಿದೆ. ಪ್ರಾರ್ಥನಾ ಹಜಾರ ವಿಸ್ತಾರದ ದೃಷ್ಟಿಯಿಂದ ಭವ್ಯವಾದುದು. ಒಟ್ಟು ೨೨೮೬ ಮಂದಿ ಏಕಕಾಲದಲ್ಲಿ ನಿಂತು ಪ್ರಾರ್ಥನೆ ಸಲ್ಲಿಸಬಹುದಾಗಿತ್ತು. ಸರಳತೆ ಮತ್ತು ಗಾಂಭೀರ್ಯಕ್ಕೂ ಭವ್ಯತೆ ಮತ್ತು ವೈಶಾಲ್ಯಕ್ಕೂ ಈ ಮಸೀದಿ ಪ್ರಸಿದ್ಧವಾಗಿದೆ. ಅಲ್ಲದೆ ಬಿಜಾಪುರದಲ್ಲಿರುವ ಕರೀಮುದ್ದೀನನ ಮಸೀದಿ, ಚಿಂಚನ ದಿಡ್ಡಿ ಮಸೀದಿ, ನವ ಗುಂಬಸ್ ಮಸೀದಿ ಮೊದಲಾದ ಪ್ರಾರ್ಥನಾ ಮಂದಿರಗಳು ವಾಸ್ತುಶಿಲ್ಪದ ದೃಷ್ಟಿಯಿಂದ ತಮ್ಮದೇ ಆದ ವೈಶಿಷ್ಟ್ಯಗಳಿಂದ ಕೂಡಿವೆ.

ಬಿಜಾಪುರದಲ್ಲಿ ಅನೇಕ ಸುಂದರವಾದ ಅರಮನೆಗಳ ಅವಶೇಷಗಳಿವೆ. ಅವುಗಳಲ್ಲಿ ಆನಂದ ಮಹಲ್, ಗಗನ್ ಮಹಲ್, ಆಸಾರ್ ಮಹಲ್, ಜಲಮಂಜಿಲ್, ಚೀನಾ ಮಹಲ್ ಮೊದಲಾದವು ಪ್ರಸಿದ್ಧವಾದವು. ಅಲ್ಲದೆ ಇಲ್ಲಿ ಹೆಚ್ಚು ಸಂಖ್ಯೆಯಲ್ಲಿ ಸಮಾಧಿ ಭವನಗಳಿವೆ. ಇವುಗಳಲ್ಲಿ ಇಬ್ರಾಹಿಂ ರೋಜಾವನ್ನು ಎರಡನೇ ಇಬ್ರಾಹಿಂ ಆದಿಲ್‌ಷಾನು ತನ್ನ ಸಮಾಧಿ ಮಂದಿರವನ್ನಾಗಿ ಕಟ್ಟಿಸಿಕೊಂಡನು. ಇದರಲ್ಲಿ ಎರಡು ಮುಖ್ಯ ಕಟ್ಟಡಗಳಿವೆ. ಒಂದು ಸಮಾಧಿ, ಇನ್ನೊಂದು ಮಸೀದಿ. ಇಬ್ರಾಹಿಂ ರೋಜಾ ವಿನ್ಯಾಸದಲ್ಲಿ ಎಣೆಯಿಲ್ಲದ್ದಾಗಿದ್ದು ಕಪಿಲ ವರ್ಣದ ಕಲ್ಲಿನಿಂದ ನಿರ್ಮಿಸಲಾಗಿದೆ. ಕಟ್ಟಡ ಗಾತ್ರದಲ್ಲಿ ದೊಡ್ಡದಲ್ಲದಿದ್ದಾಗ್ಯೂ ರಚನೆ, ತಂತ್ರ, ಅಲಂಕಾರ ಹಾಗೂ ಪರಿಪೂರ್ಣತೆಯಲ್ಲಿ ಎಣೆಯಿಲ್ಲದ್ದಾಗಿದೆ. ಇದನ್ನು ಒಂದು ವೇಳೆ ಅಮೃತ ಶಿಲೆಯಲ್ಲಿ ಕಟ್ಟಿದ್ದ ಪಕ್ಷದಲ್ಲಿ ಸೌಂದರ್ಯದಲ್ಲಿ ತಾಜಮಹಲನ್ನು ಮೀರಿಸುತ್ತಿತ್ತು ಎಂಬುದಾಗಿ ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಇಬ್ರಾಹಿಂ ರೋಜಾ ಬಿಜಾಪುರದ ಕಟ್ಟಡ ರಚನಾ ಚಾತುರ್ಯದ ಉತ್ತಮ ಸಾಧನೆಯೆಂದು ಪರಿಗಣಿತವಾಗಿದೆ.

ಬಿಜಾಪುರದ ಜಗತ್ಪ್ರಸಿದ್ಧ ಗೋಳಗುಮ್ಮಟ ಆದಿಲ್ ಷಾಹಿ ಪ್ರಭುಗಳ ಆಳ್ವಿಕೆಯ ಮಹತ್ವದ ನಿರ್ಮಾಣವಾಗಿದೆ. ಇದು ಭಾರತ ಮತ್ತು ಪ್ರಪಂಚದ ಅದ್ಭುತ ನಿರ್ಮಾಣಗಳಲ್ಲೊಂದೆನಿಸಿದೆ. ಇದು ಮಹಮ್ಮದ್ ಆದಿಲ್‌ಷಾನ ಗೋರಿ. ಈ ದೈತ್ಯಾಕಾರದ ಕಟ್ಟಡದ ಅಗಲ ೨೦೫ ಅಡಿ, ಉದ್ದ ೨೦೫ ಅಡಿ, ಎತ್ತರ ೧೯೮½ ಅಡಿ. ಪ್ರಪಂಚದಲ್ಲೇ ಅತಿ ದೊಡ್ಡ ಗುಮ್ಮಟಾಚ್ಛಾದಿತ ಹಜಾರ ಗೋಳಗುಮ್ಮಟದಲ್ಲಿದೆ. ವಿಶಿಷ್ಟ ತಂತ್ರಜ್ಞಾನವನ್ನು ಅಳವಡಿಸಿ ಪರಸ್ಪರ ಭೇದಿಸುವ ಎಂಟು ಕಮಾನುಗಳನ್ನು ರಚಿಸಿ ನೆಲದಿಂದ ಸುಮಾರು ೧೦೦ ಅಡಿ ಎತ್ತರದಲ್ಲಿ ಒಂದು ಅಷ್ಟಕೋನವನ್ನು ನಿರ್ಮಿಸಿ ಅದರ ಮೇಲೆ ಗುಮ್ಮಟವನ್ನು ನಿರ್ಮಾಣ ಮಾಡಲಾಗಿದೆ. ಗುಮ್ಮಟದ ವ್ಯಾಸ ೧೨೪½ ಅಡಿಗಳು. ಇದು ಪ್ರಪಂಚದಲ್ಲೇ ಎರಡನೆಯ ದೊಡ್ಡ ಗುಮ್ಮಟ. ಗುಮ್ಮಟದ ಬುಡದಲ್ಲಿ ಅದರ ಒಳಗೋಡೆಗೆ ಹೊಂದಿಕೊಂಡಂತೆ ೧೧½ ಅಡಿ ಅಗಲದ ವರ್ತುಲಾಕಾರವಾಗಿರುವ ಒಂದು ಚಾಚು ಗ್ಯಾಲರಿ ಇದೆ. ಇಲ್ಲಿ ವಿಶಾಲವಾದ ಆಚ್ಛಾದನಾ ಗುಮ್ಮಟದಿಂದ ಶಬ್ದ ತರಂಗಗಳು ಪ್ರತಿಧ್ವನಿಸಿ ವಿಶಿಷ್ಟ ಪರಿಣಾಮ ಉಂಟುಮಾಡುತ್ತವೆ. ಮಾತು, ಚಪ್ಪಾಳೆ

ಅಥವಾ ಯಾವುದೇ ಶಬ್ದವನ್ನು ಇಲ್ಲಿ ಉಂಟು ಮಾಡಿದರೆ ಅದು ಸುಮಾರು ಹತ್ತಕ್ಕೂ ಹೆಚ್ಚು ಬಾರಿ ಪ್ರತಿಫಲಿಸಿ ಸ್ಪಷ್ಟವಾಗಿ ಕೇಳಿಸುತ್ತದೆ. ಈ ಆಶ್ಚರ್ಯಕರ ವೈಶಿಷ್ಟ್ಯದಿಂದಾಗಿ ಇದು ಪಿಸುಗುಟ್ಟುವ ಗ್ಯಾಲರಿ ಎಂದು ಪ್ರಸಿದ್ಧವಾಗಿದೆ. ಗೋಳ ಗುಮ್ಮಟ ತನ್ನ ಬೃಹದಾಕಾರ, ಮಿತ ಅಲಂಕರಣ, ಚತುರ ರಚನಾ ತಂತ್ರ, ವೈಶಿಷ್ಟ್ಯಪೂರ್ಣವಾದ ವಾಸ್ತುಶಿಲ್ಪ ವಿನ್ಯಾಸ ಇವುಗಳಿಂದ ಭಾರತೀಯ ವಾಸ್ತುಶಿಲ್ಪದ ಇತಿಹಾಸದಲ್ಲಿ ಒಂದು ಎಣೆಯಿಲ್ಲದ ಕೃತಿಯಾಗಿ ಪರಿಣಮಿಸಿದೆ.

ಮೊದಲೇ ಹೇಳಿದಂತೆ ಬಿಜಾಪುರ ಅನೇಕ ಕಲಾಕೃತಿಗಳ ಕೇಂದ್ರ. ಆದಿಲ್‌ಷಾಹಿ ವಾಸ್ತುರೀತಿಯ ಕಟ್ಟಡಗಳು ಬಿಜಾಪುರ ತಾಲೂಕಿನ ಇತರ ಸ್ಥಳಗಳಲ್ಲೂ ಇವೆ. ಚಾಂದ್ ಬೀಬಿಯ ಕಾಲದಲ್ಲಿ ಕಟ್ಟಲಾದ ಹೀರಾಪುರ ಮಸೀದಿ, ಶಹಪುರ ತಾಲ್ಲೂಕಿನ ಕಡಚೂರ್, ಯಾದಗಿರಿ ತಾಲ್ಲೂಕಿನ ದೋರನ ಹಳ್ಳಿ ಮೊದಲಾದ ಕಡೆಯಲ್ಲಿ ಕಟ್ಟಿಸಲಾದ ಮಸೀದಿಗಳು ಗಾತ್ರದಲ್ಲಿ ಚಿಕ್ಕದಾದರೂ ವಾಸ್ತುಶಿಲ್ಪ ದೃಷ್ಟಿಯಿಂದ ಮುಖ್ಯವಾಗಿವೆ. ಬಿಜಾಪುರ ಮೊಗಲರ ವಶವಾದ ಮೇಲೆ ಅಲ್ಲಿ ಹೆಚ್ಚು ಕಟ್ಟಡಗಳು ನಿರ್ಮಾಣವಾಗಲಿಲ್ಲ.

**ಹಳೆಯ ಮೈಸೂರು ರಾಜ್ಯದಲ್ಲಿ**

ಕ್ರಿ. ಶ. ೧೬೮೭ರಲ್ಲಿ ಸಿರಾ ಪ್ರದೇಶ ಔರಂಗಜೇಬನ ವಶವಾದ ಮೇಲೆ ಅದು ಮೊಗಲ್ ಪ್ರಾಂತದ ರಾಜಧಾನಿಯಾಯಿತು. ಅನಂತರ ಅಲ್ಲಿರುವ ಜುಮ್ಮಾ ಮಸೀದಿ ಮತ್ತು ಅನೇಕ ಸಮಾಧಿಗಳು ನಿರ್ಮಿತವಾದವು. ಅಲ್ಲಿಯ ಗುಮ್ಮಟಗಳು ಅಷ್ಟು ದೊಡ್ಡವಲ್ಲದಿದ್ದರೂ ಸರಳವಾಗಿಯೂ, ಸುಂದರವಾಗಿಯೂ ಇವೆ. ಕ್ರಿ.ಶ. ೧೮ನೆಯ ಶತಮಾನದ ಕೊನೆಯಲ್ಲಿ ಹೈದರ್ ಮತ್ತು ಟಿಪ್ಪು ಇವರ ಕಾಲದಲ್ಲಿ ಶ್ರೀರಂಗ ಪಟ್ಟಣ ಮತ್ತು ಇತರ ಕಡೆಗಳಲ್ಲಿ ಕೋಟೆಗಳೂ, ಮಸೀದಿಗಳೂ ನಿರ್ಮಿತವಾದವು. ಅವುಗಳ ಪೈಕಿ ಮಂಜರಾಬಾದ್ (ಈಗಿನ ಸಕಲೇಶಪುರದ) ಕೋಟೆಯೂ ಕೋಲಾರದಲ್ಲಿ ಹೈದರನ ಪೂರ್ವಿಕರಿಗಾಗಿ ನಿರ್ಮಿಸಲಾದ ಗೋರಿಗಳೂ ಮುಖ್ಯವಾದವು. ಶ್ರೀರಂಗ ಪಟ್ಟಣದಲ್ಲಿ ಟಿಪ್ಪುವಿನಿಂದ ರಚಿತವಾದ ಪ್ರಸಿದ್ಧ ಕಲಾಕೃತಿಗಳಿವೆ. ಅವನ ಅರಮನೆ ಭವ್ಯ ಕಟ್ಟಡವಾಗಿತ್ತೆಂದು ಸಮಕಾಲೀನ ಆಧಾರಗಳಿಂದ ತಿಳಿದುಬರುತ್ತದೆ. ಆದರೆ ಅದು ನಾಮಾವಶೇಷವಾಗಿದೆ. ಈಗ ಮುಸ್ಲಿಂ ವಾಸ್ತುಶೈಲಿಯಲ್ಲಿ ಅಲ್ಲಿರುವ ಹೈದರ್ ಮತ್ತು ಟಿಪ್ಪುವಿನ ಗೋರಿಗಳಮೇಲೆ ಕಟ್ಟಿರುವ ಸಮಾಧಿ ಮಂದಿರ, ಜಾಮಿಯಾ ಮಸೀದಿ ಮತ್ತು ದರಿಯಾ ದೌಲತ್ ಬಾಗ್ ಅರಮನೆ ಇವು ಮುಖ್ಯವಾದವು.

ನದಿಯ ದಂಡೆಯಲ್ಲಿ ಪ್ರಶಾಂತ ವಾತಾವರಣದಲ್ಲಿ ಲಾಲ್‌ಬಾಗ್ ತೋಟದ ಮಧ್ಯದಲ್ಲಿ ಹೈದರ್ ಮತ್ತು ಟಿಪ್ಪುವಿನ ಗೋರಿಗಳಿವೆ. ಇಲ್ಲಿಯ ಗುಂಬಸ್ ಎಂದು ಕರೆಯಲಾಗುವ ಗೊಮ್ಮಟವನ್ನು ಟಿಪ್ಪು ಕಟ್ಟಿಸಿದನು. ಇದು ಬೃಹದಾಕಾರವಾಗಿದೆ. ಇದರಲ್ಲಿರುವ ಕರಿ ಕಲ್ಲಿನ ಕಂಬಗಳಿಗೆ ವಿಶೇಷ ಹೊಳಪನ್ನು ಕೊಡಲಾಗಿದೆ. ಇದರ ವಾಸ್ತು ವಿನ್ಯಾಸವು ಮೊಗಲರ ವಾಸ್ತು ಶೈಲಿಯನ್ನು ಹೋಲುತ್ತದೆ. ಅದರಲ್ಲೂ ಹೆಚ್ಚು ಮಟ್ಟಿಗೆ ಸಿಕಂದರದ ಅಕ್ಬರನ ಸಮಾಧಿಯನ್ನು ಹೋಲುವುದೆಂಬುದಾಗಿ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಇಲ್ಲಿಯ ಕುಸುರಿ ಕೆತ್ತನೆಗಳು ಹಿಂದೂ ಸಂಪ್ರದಾಯದಲ್ಲಿ ರಚಿತವಾಗಿವೆ. ಕೋಟೆಯ ಒಳಭಾಗದಲ್ಲಿರುವ, ಟಿಪ್ಪು ಕಟ್ಟಿಸಿದ ಜಾಮಿಯ ಮಸೀದಿಯ ವಿನ್ಯಾಸ, ಆಕಾರ ಮತ್ತು ವಾಸ್ತು ದೃಷ್ಟಿಯಿಂದ ಅದ್ಭುತವಾದುದು. ಮುಖ್ಯವಾದ ಪ್ರಾರ್ಥನಾ ಹಜಾರ ಮೊದಲನೆಯ ಹಂತದ ಮೇಲೆ ಇದೆ. ಎರಡು ಕಡೆಯಿಂದಲೂ ಅಲ್ಲಿಗೆ ತಲುಪಲು ಮೆಟ್ಟಿಲುಗಳಿವೆ. ಇದು ಅಲಂಕಾರದಿಂದ ಕೂಡಿರುವ ಕಮಾನುಗಳಿಂದಾವೃತವಾಗಿದೆ. ಇದರ ಎರಡು ಕಡೆಯೂ ಇರುವ ದೊಡ್ಡ ಸುಂದರವಾದ ಮಿನಾರುಗಳು ಈ ಕಟ್ಟಡದ ಮುಖ್ಯ ಆಕರ್ಷಣೆಯಾಗಿವೆ. ಅವುಗಳ ಮೇಲಕ್ಕೆ ಏರಿ ಹೋಗಲು ಮಿನಾರುಗಳ ಒಳಗಡೆ ಮೆಟ್ಟಿಲುಗಳಿವೆ.

ಶ್ರೀರಂಗಪಟ್ಟಣದ ಕೋಟೆಯ ಹೊರಗಡೆ ಕಾವೇರಿ ನದಿಯ ದಂಡೆಗೆ ಹೊಂದಿಕೊಂಡಂತೆ ಒಂದು ವಿಶಾಲ ತೋಟದ ಮಧ್ಯೆ ಇರುವ ದರಿಯಾ ದೌಲತ್ ಅರಮನೆ ಮತ್ತೊಂದು ಸುಪ್ರಸಿದ್ಧ ಕಟ್ಟಡ. ಇದು ಟಿಪ್ಪು ಸುಲ್ತಾನನ ಬೇಸಿಗೆಯ ಅರಮನೆಯಾಗಿತ್ತು. ಎರಡು ಅಂತಸ್ತುಗಳಿಂದ ಕೂಡಿರುವ ಈ ಕಟ್ಟಡ ಚಿತ್ರಕಲೆಯ ಆಗರವಾಗಿದೆ. ಎರಡನೆಯ ಅಂತಸ್ತಿನಲ್ಲಿರುವ ದರ್ಬಾರ್ ಹಜಾರ ವಿಶಾಲವಾಗಿದ್ದು ಉನ್ನತ ಚಿತ್ರಕಲೆಯಿಂದಾವೃತವಾಗಿದೆ. ಇಲ್ಲಿಯ ಕಂಬಗಳು ಅತ್ಯಂತ ಆಕರ್ಷಕವಾಗಿವೆ. ಈ ಅರಮನೆಯನ್ನು ಕುರಿತು ಮೊದಲಿಂದ ಕೊನೆಯವರೆಗೂ ತುದಿಯಿಂದ ಬುಡದವರೆಗೂ ಪ್ರತಿ ಅಂಗುಲ ಗೋಡೆಯಲ್ಲೂ ಮೂಡಿಸಿರುವ ಭಿತ್ತಿ ಚಿತ್ರಗಳು ಇಸ್ಫಹಾನ್ ಅರಮನೆಗಳನ್ನು ನೆನಪಿಗೆ ತರುತ್ತವೆ ಹಾಗೂ ಭಾರತದಲ್ಲಿ ನನಗೆ ಗೊತ್ತಿರುವ ಯಾವ ಕಟ್ಟಡವೂ ಇದಕ್ಕೆ ಹೋಲಿಕೆಯಲ್ಲ ಎಂಬುದಾಗಿ ಒಬ್ಬ ಪ್ರವಾಸಿಯು ಹೇಳಿದ್ದಾನೆ. ಸುಲ್ತಾನನ ಆಸ್ಥಾನ, ಆಗಿನ ಕಾಲದ ರಾಜಕೀಯ ಪರಿಸ್ಥಿತಿ ಹಾಗೂ ಯುದ್ಧರಂಗ ಮುಂತಾಗಿ ಅನೇಕ ಐತಿಹಾಸಿಕ ಚಿತ್ರಗಳನ್ನು ಸಜೀವವಾಗಿ ಮೂಡಿಸಲಾಗಿದೆ. ಟಿಪ್ಪುವಿನ ಕಾಲದಲ್ಲಿ ಕನ್ನಡ ನಾಡಿನಲ್ಲಿ ಮಾತ್ರವಲ್ಲದೆ ಅವನು ವಶಪಡಿಸಿಕೊಂಡಿದ್ದ ಇತರ ಪ್ರದೇಶಗಳಲ್ಲೂ ಮಹಮ್ಮದೀಯ ಶೈಲಿಯ ಕಟ್ಟಡಗಳನ್ನು ಕಟ್ಟಲಾಯಿತು.

ಮುಸ್ಲಿಂ ವಾಸ್ತುಶಿಲ್ಪ ಕರ್ನಾಟಕಕ್ಕೆ ಬಹಮನಿ ರಾಜ್ಯದ ಸ್ಥಾಪನೆಯೊಡನೆ ಪದಾರ್ಪಣ ಮಾಡಿತು. ದಕ್ಷಿಣ ಭಾರತದಲ್ಲಿ ಮುಸ್ಲಿಮರು ಹೆಚ್ಚು ಕಾಲ ಈ ಪ್ರದೇಶವನ್ನೇ ನೆಲೆಯಾಗಿ ಮಾಡಿಕೊಂಡಿದ್ದರು. ಆದ್ದರಿಂದ ಮುಸ್ಲಿಂ ವಾಸ್ತುಶಿಲ್ಪ ಕರ್ನಾಟಕದ ಗುಲ್ಬರ್ಗ, ಬಿದರೆ ಮತ್ತು ಬಿಜಾಪುರಗಳಲ್ಲಿ ಕೇಂದ್ರೀಕೃತವಾಗಿ ಬೆಳೆದು ವಿಕಾಸ ಹೊಂದಿತು. ಹೈದರ್ ಮತ್ತು ಟಿಪ್ಪು ಇವರ ಅಭ್ಯುದಯದೊಡನೆ ಹಿಂದಿನ ಮೈಸೂರು ಸಂಸ್ಥಾನದಲ್ಲೂ ಪ್ರಸರಿಸಿ, ಮುಖ್ಯವಾಗಿ ಶ್ರೀರಂಗಪಟ್ಟಣದ ಮಸೀದಿ, ಗುಂಬಸ್ ಹಾಗೂ ದರಿಯಾ ದೌಲತ್‌ಗಳಲ್ಲಿ ಪ್ರತಿಬಿಂಬಿತವಾಗಿದೆ. ಅದು ಪರಂಪರಾನುಗತವಾದ ಹಿಂದೂ ವಾಸ್ತು ಶೈಲಿಯ ಜೊತೆಗೆ ವಿದೇಶೀಯ ಶೈಲಿಯನ್ನೂ ಅಳವಡಿಸಿಕೊಂಡು ಭಾರತೀಯವಾಗಿ ಮೈವೆತ್ತು ಕರ್ನಾಟಕದ ಕಲೆಯನ್ನು ತನ್ನ ಕಾಣಿಕೆಯಿಂದ ಶ್ರೀಮಂತಗೊಳಿಸಿದೆ.

# ಐರೋಪ್ಯ ವಾಸ್ತುಶಿಲ್ಪ

ಡಾ. ಎಚ್.ಆರ್. ರಘುನಾಥ ಭಟ್

ಕರ್ನಾಟಕದಲ್ಲಿ ವಾಸ್ತುಕಲೆ ಮೂಲಭೂತವಾಗಿ ಧಾರ್ಮಿಕ ತಳಹದಿಯ ಮೇಲೆ ಬೆಳೆದು ಬಂದದ್ದು ವಿದಿತವಷ್ಟೆ. ಐರೋಪ್ಯರು ಈ ನಾಡಿನಲ್ಲಿ ತಮ್ಮ ಧರ್ಮವನ್ನು ಪ್ರಸಾರ ಮಾಡುವ ಕಾಲಕ್ಕೆ ಹಲವು ಧಾರ್ಮಿಕ ಕಟ್ಟಡಗಳನ್ನು ಕಟ್ಟಿದರು. ಇವು ಸಮಕಾಲೀನ ಧರ್ಮ ಸಂಸ್ಕೃತಿಗಳಿಗೆ ಅನುಗುಣವಾಗಿದ್ದವು. ಕ್ರೈಸ್ತ ಮಿಶನರಿಗಳ ಹಾಗೂ ಅಧಿಕಾರಾರೂಢ ಆಡಳಿತಗಾರರ ಕಲಾಭಿರುಚಿ, ಸಂಪ್ರದಾಯಗಳನ್ನವಲಂಬಿಸಿದ್ದುವು. ಮೊದಮೊದಲು ಗ್ರೀಕೋರೋಮನ್, ಬೆಸಲಿಕನ್, ರೋಮನಸ್ಕ್, ಶೈಲಿಯ ಚರ್ಚುಗಳು ತಲೆಯೆತ್ತಿದವು. ಕಾಲಾನುಕ್ರಮದಲ್ಲಿ ಐರೋಪ್ಯ ಪ್ರದೇಶದಲ್ಲಿ ಜನಪ್ರಿಯವಾಗಿದ್ದ ಗಾಥಿಕ್ ಶೈಲಿಯ ಕಟ್ಟಡಗಳೇ ಹೆಚ್ಚಾಗಿ ನಿರ್ಮಾಣವಾಗತೊಡಗಿದುವು. ಈ ಶೈಲಿಯ ಅನುಕರಣ ರೂಪವಾದ ರೆನೆಸಾನ್ಸ್ ಅಥವಾ ಪುನರುಜ್ಜೀವನ ಶೈಲಿಯ ವಾಸ್ತುಕೃತಿಗಳೂ ಸಾಕಷ್ಟಾದುವು. ಅನಂತರ ಬರೋಕ್, ವಸಾಹತು, ಅಮೆರಿಕನ್ ಕಟ್ಟಡಗಳೂ ಕಾಣಿಸತೊಡದುವು. ಜಗತ್ತಿನ ಹಲವು ಶೈಲಿಗಳನ್ನು ಸಮನ್ವಯಿಸಿ ನವ್ಯ ಶೈಲಿಯೊಂದು ರೂಪುದಳೆಯಿತು.

ಐರೋಪ್ಯ ಶೈಲಿಯ ಚರ್ಚ್ ವಾಸ್ತುಶಿಲ್ಪದಲ್ಲಿ ವಿಶಾಲವಾದ ಒಳಸಭಾಂಗಣ, ಮಧ್ಯಾಂಗಣ ಹಾಗೂ ಇಕ್ಕೆಲದ ಹಜಾರಗಳನ್ನು ಒಳಗೊಂಡಿರುತ್ತದೆ. ಸಭಾಂಗಣ ಪ್ರವೇಶಿಸಿ ಒಳಕ್ಕೆ ಹೋದರೆ ಮಧ್ಯದ ಗೋಳ, ಅದರ ಆಚೀಚಿನ ಬಾಹುಗಳು ಕಂಡುಬರುತ್ತವೆ. ಇವುಗಳಲ್ಲಿ ಮಧ್ಯಂಕಣದ ಹಿಂಬದಿಗೆ "ಚಾನ್ಸೆಲ್" ಎಂಬ ಪೂರ್ವ ಭಾಗವೂ ಅದರ ಹಿಂಬದಿಗೆ "ಆ್ಯಪ್ಸ್" ಎಂಬ ಗಜಪೃಷ್ಠಾಕಾರ ಭಾಗವೂ ಇರುತ್ತವೆ. ಇವನ್ನೆಲ್ಲ ಒಳಗೊಂಡ ಚರ್ಚಿನ ತಲವಿನ್ಯಾಸ ಕ್ರೈಸ್ತ ಶಿಲುಬೆಯಾಕಾರದಲ್ಲಿರುತ್ತದೆ. ಇದಕ್ಕೆ ಕ್ರೈಸ್ತ ಧರ್ಮದಲ್ಲಿ ಸಾಂಕೇತಿಕ ಮಹತ್ವವಿದೆ ಅಲ್ಲದೆ ವಾಸ್ತುತಂತ್ರದ ದೃಷ್ಟಿಯಿಂದಲೂ ಇದು ಮೌಲಿಕವಾಗಿದೆ. (ಚಿತ್ರ). ಶಿಲುಬೆಯಾಕಾರದಲ್ಲಿ ಕಟ್ಟಿದ ಚರ್ಚುಗಳಲ್ಲಿರುವ "ವೇದಿಕೆ" ಒಳಾಂಗಣದಲ್ಲಿರುವ ಭಕ್ತರೆಲ್ಲರಿಗೂ ಗೋಚರಿಸುತ್ತದೆ. ದೇವಕೋಷ್ಠಗಳಲ್ಲಿಟ್ಟಿರುವ ಕ್ರೈಸ್ತ ಪ್ರತಿಮೆಗಳು ದೂರದಿಂದ ಕಾಣಿಸುವಂತಿರುತ್ತವೆ. ಟ್ರಾನ್ಸೆಪ್ಟಿನ ಮಧ್ಯಾಂಕಣದ ಚಾವಣಿ ಗೋಳಾಕಾರವಾಗಿದ್ದು ಅದಕ್ಕೆ ಬಣ್ಣಬಣ್ಣದ ಗಾಜುಗಳನ್ನು ಜೋಡಿಸಲಾಗುತ್ತದೆ. ಈ ಗಾಜುಗಳ ಮೇಲೆ ಧಾರ್ಮಿಕ ಚಿತ್ರಗಳನ್ನು ಬಿಡಿಸಿರುವುದುಂಟು. ಈ ಬಗೆಯ ವರ್ಣ ಚಿತ್ರವುಳ್ಳ ಗಾಜುಗಳನ್ನು ದೇವಕೋಷ್ಠದ ಹಾಗೂ ಒಳಾಂಗಣದ ಕಿಟಕಿಗಳಲ್ಲೂ ನೋಡಬಹುದು. ಪೋರ್ಚುಗೀಸ್ ಶೈಲಿಯ ಕೆಲವು ಚರ್ಚುಗಳಲ್ಲಿ ಒಳವೇದಿಕೆ ಅಲಂಕೃತವಾಗಿರುತ್ತದೆ. ಅನೇಕ ಚರ್ಚುಗಳು ಹೊರನೋಟಕ್ಕೆ ಸರಳವಾಗಿದ್ದರೂ ಒಳ ಅಲಂಕರಣೆಗಳು ದಂಗುಬಡಿಸುವಂತಿರುವುದುಂಟು. ಐರೋಪ್ಯ ಶೈಲಿಯ ಪೀಠೋಪಕರಣ, ಪೂಜಾವಸ್ತುಗಳು, ಶಿಲ್ಪ, ಚಿತ್ರ, ಮುಂತಾದವು ಅಮೋಘವಾಗಿರುತ್ತವೆ. ಮಂಗಳೂರಿನ ಸ್ಟೆಂಟ್ ಅಲೋಶಿಯಸ್ ಕಾಲೇಜಿನ "ಚ್ಯಾಪಲ್" ಇದಕ್ಕೊಂದು ಉತ್ತಮ ಉದಾಹರಣೆ.

ಐರೋಪ್ಯ ಶೈಲಿಯ ಚರ್ಚು ಹೊರನೋಟಕ್ಕೆ ಎತ್ತರ ಸಿಲುವಿನ ಸುಂದರ ಕಟ್ಟಡ, ಪ್ರವೇಶ ದ್ವಾರದ ಮೇಲುಗಡೆ. ಆಚೀಚೆ ಎತ್ತರದ ಗಾಥಿಕ್ ಶೈಲಿಯ ಮೊನಚು ಶಿಖರಗಳಿರುತ್ತವೆ. ಮೈಸೂರಿನ ಸ್ಟೆಂಟ್ ಜೋಸೆಫ್ ಕತೀಡ್ರಲ್ ಇದಕ್ಕೊಂದು ಸ್ವಾರಸ್ಯವಾದ ಉದಾಹರಣೆ. ಶಿಖರಗಳಿಗೆ ಸರಿದಂತೆ ಎಲೆ ಮೊನಚು ಕಮಾನುಗಳನ್ನೊ ದುಂಡು ಕಮಾನುಗಳನ್ನೊ ಸ್ವಾರಸ್ಯವಾಗಿ ಹೊಂದಿಸಿರುವುದುಂಟು. ಇದರಿಂದ ಕಟ್ಟಡಕ್ಕೆ ವಿಶೇಷ ಚೆಲುವು, ಮೆರುಗು ಬರುತ್ತವೆ. ಈ ಬಗೆಯ ಚರ್ಚ್ ವಾಸ್ತುಶಿಲ್ಪದಲ್ಲಿ ಉಪಯುಕ್ತತೆ, ದಾರ್ಢ್ಯ ಹಾಗೂ ಲಾಲಿತ್ಯ ಎದ್ದು ಕಾಣುತ್ತವೆ. ಒಳಾಂಗಣದಲ್ಲಿ ಸಾಕಷ್ಟು ಗಾಳಿ, ಬೆಳಕು ಇರುವಂತೆ ಯೋಜಿಸಲಾಗಿರುತ್ತದೆ.

ಕರ್ನಾಟಕ ಚರ್ಚು ವಾಸ್ತುಶಿಲ್ಪವನ್ನು ೧೬ನೆಯ ಶತಮಾನದಷ್ಟು ಹಿಂದಕ್ಕೆ ಒಯ್ಯಬಹುದಾದರೂ ಹಲವು ಪ್ರಮುಖ ವಾಸ್ತುಕೃತಿಗಳು ತಲೆಯೆತ್ತಿದ್ದು ೧೯–೨೦ನೆಯ ಶತಮಾನಗಳಲ್ಲಿ. ಸುಮಾರು ೧೫೨೬ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯನ್ನು ಪ್ರವೇಶಿಸಿದರೆಂದು ಹೇಳಲಾದ ಫ್ರಾನ್ಸಿಸ್ಕನ ಮಿಶನರಿಗಳು ಉಳ್ಳಾಲ, ಪರಂಗಿಪೇಟೆ, ಮಂಗಳೂರು ಮುಂತಾದೆಡೆಗಳಲ್ಲಿ ಕ್ರೈಸ್ತ ದೇಗುಲಗಳನ್ನು ನಿರ್ಮಿಸಿದರು. ೧೫೬೮ರಲ್ಲಿ ಬೋಳಾರದ ರೋಸರಿ ಚರ್ಚು ನಿರ್ಮಾಣವಾಯಿತು. ೧೫೭೦ರಲ್ಲಿ ಜೆಸುಯಿಟ್ ಸನ್ಯಾಸಿಗಳು ಬಸರೂರಿನಲ್ಲಿ ಕ್ರೈಸ್ತ ದೇವಾಲಯ ನಿರ್ಮಿಸಿದರು. ೧೬೦೬ರಲ್ಲಿ ಬೆಳಗಾವಿ ಬಳಿ ಖಾನಾಪುರದಲ್ಲೂ ೧೭೨೯ರಲ್ಲಿ ಕಾರವಾರದ ಬಳಿ ಸುಂಕೇರಿಯಲ್ಲೂ ಕ್ರೈಸ್ತ ಧರ್ಮಪ್ರಚಾರಕ ಸಂಸ್ಥೆಗಳು ತಲೆಯೆತ್ತಿದವು. ೧೭೮೫ರ ಹೊತ್ತಿಗೆ ಉತ್ತರ ಕನ್ನಡ ಹಾಗೂ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸುಮಾರು ೨೭ ಕ್ರೈಸ್ತ ದೇಗುಲಗಳಿದ್ದುವಂತೆ ಬಳ್ಳಾರಿಯ ಕೆಳಕೋಟೆ ಪ್ರದೇಶದಲ್ಲಿ ೧೮೧೧ರಲ್ಲಿ ಟ್ರಿನಿಟಿ ನಿರ್ಮಾಣವಾಯಿತು. ಪೋರ್ಚುಗೀಜ್ ಪಾದ್ರಿ, ಟರ್ನರ್ ೧೮೫೧ರಲ್ಲಿ, ಬೆಂಗಳೂರು ಕೋಟೆಯಲ್ಲಿ ಸ್ಟೆಂಟ್ ಫ್ರಾನ್ಸಿಸ್ ಜೇವಿಯರ್

ಕತೀಡ್ರಲ್ ಕಟ್ಟಿಸಿದನೆಂದು ಹೇಳಲಾಗಿದೆ. ತರಗುಪೇಟೆಯ ಸೈಂಟ್ ಜೋಸೆಫ್ ಚರ್ಚು ವಿಶಾಲವಾಗಿದೆ. ಇದರ ಶಿಲುಬೆಯಾಕಾರದ ತಲವಿನ್ಯಾಸ, ಗಾಥಿಕ್ ಶೈಲಿಯ ಶಿಖರ ಮನೋಹರವಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಬಲ್ಮಠದಲ್ಲಿ ೧೮೬೨ರಲ್ಲಿ ಚರ್ಚನ್ನು ಕಟ್ಟಲಾಗಿದ್ದು ಇದು ಸ್ವಿಟ್ಜರ್‌ಲೆಂಡಿನ ಬಾಸೆಲ್ ಮಿಷನ್ ಹೌಸಿನ ಮಾದರಿಯಲ್ಲಿದೆ. ಇದಕ್ಕೆ ೭ ವರ್ಷ ಹಿಂದೆ ೧೮೫೫ರಲ್ಲಿ ಮಡಿಕೇರಿಯಲ್ಲಿ ಆಂಗ್ಲೀಕನ್ ಶೈಲಿಯ ಅದರಲ್ಲೂ ಗಾಥಿಕ್ ಶೈಲಿಯ ಇಗರ್ಜಿಯೊಂದನ್ನು ಕಟ್ಟಲಾಯಿತು. ಅದೊಂದು ಪುಟ್ಟ ಹಾಗೂ ಸುಂದರ ವಾಸ್ತುಕೃತಿ. ೧೮೮೫ರಲ್ಲಿ ಕೆ. ಜೋಸೆಫ್‌ವಿಲ್ ಕಟ್ಟಿಸಿದನೆಂದು ಹೇಳಲಾದ ಮಂಗಳೂರಿನ ಅಲೋಶಿಯಸ್ ಚ್ಯಾಪಲ್ ಅಮೋಘವಾಗಿದೆ. ಇದು ರೋಮಿನ ಸೈಂಟ್ ಫಿಲಿಪ್ ನೇರಿ ಚರ್ಚಿನ ಮಾದರಿಯಲ್ಲಿದೆ. ಇದರೊಳಗೆ, ಅದರಲ್ಲೂ ಒಳಭಿತ್ತಿ ಹಾಗೂ ಚಾವಣಿಗಳ ಮೇಲೆ, ಸಾವಿರದ ಒಂಭೈನೂರ ಎರಡು ಮತ್ತು ನಾಲ್ಕರಅವಧಿಯಲ್ಲಿ ಇಟಲಿಯ ಕಲಾವಿದ ಮೊಷನಿ ರಚಿಸಿದ ಸುಂದರವಾದ ವರ್ಣಚಿತ್ರಗಳಿವೆ. ಇವುಗಳ ವರ್ಣವಿನ್ಯಾಸ, ಕ್ರೈಸ್ತಮತೀಯ ಕಥಾವಸ್ತು, ನಿರೂಪಣಾ ಶೈಲಿ, ತುಂಬ ಆಕರ್ಷಕ.

ಕರ್ನಾಟಕದ ಗ್ರಾಮಾಂತರ ಪ್ರದೇಶಗಳಲ್ಲಿರುವ ಕ್ರೈಸ್ತ ಚರ್ಚುಗಳಲ್ಲಿ ಐರೋಪ್ಯ ಶೈಲಿಯ ಶುದ್ಧರೂಪವಾಗಲಿ, ವೈಭವವಾಗಲಿ ಕಂಡುಬರುವುದಿಲ್ಲ. ಅವು ಸರಳವಾದ ಪ್ರಾದೇಶಿಕ ಶೈಲಿಯ ಕಟ್ಟಡಗಳು. ವಾಸ್ತುಶಿಲ್ಪದ ದೃಷ್ಟಿಯಿಂದ ಹೇಳಿಕೊಳ್ಳುವಷ್ಟು ಒಳ್ಳೆಯ ವಾಸ್ತುಕೃತಿಗಳಲ್ಲ. ಕ್ರೈಸ್ತ ಸಮಾಧಿಗಳೂ, ಸ್ಮಾರಕಶಿಲೆಗಳೂ ಶೈಲಿಯ ದೃಷ್ಟಿಯಿಂದ ಸ್ವಾರಸ್ಯವಾಗಿವೆ. ಕಾರವಾರದ ಸಮೀಪದ ಅಂಜದಿವ್‌ದಲ್ಲಿ ಸಿಕ್ಕ ಶಿಲುಬೆ ಕಲ್ಲುಗಳನ್ನಿಲ್ಲಿ ಹೆಸರಿಸಬೇಕು. ಕರ್ನಾಟಕದ ಪರಂಪರಾಗತ ವಾಸ್ತುಶಿಲ್ಪದ ಹಿನ್ನೆಲೆಯಲ್ಲಿ ಇವೆಲ್ಲ ನಿರ್ಜೀವ ಅನುಕರಣೆಗಳಂತೆ ಕಂಡುಬಂದರೂ ವೈವಿಧ್ಯ ದೃಷ್ಟಿಯಿಂದ ಗಮನಾರ್ಹ ಕೃತಿಗಳು. ಐರೋಪ್ಯ ಶೈಲಿಯ ಚರ್ಚ್ ವಾಸ್ತುಶಿಲ್ಪದ ಪ್ರಭಾವ ಇತರ ಲೌಕಿಕ ವಾಸ್ತು ಕೃತಿಗಳ ಮೇಲೆ ಸಾಕಷ್ಟಿವೆ.

### ಸೈನಿಕ ಕಟ್ಟಡಗಳು

ಬ್ರಿಟಿಷ್ ಕಾಲದ ಕರ್ನಾಟಕದ ಐರೋಪ್ಯ ಶೈಲಿಯ ಕೋಟೆ ಕೊತ್ತಲಗಳು ಹಾಗೂ ಅರಮನೆಗಳು ಹೇಳಿಕೊಳ್ಳುವಷ್ಟಿಲ್ಲ. ಕಾರವಾರದ ಬಳಿ ಅಂಜದೀವದಲ್ಲಿ ಪೋರ್ಚುಗೀಜರು ದುರ್ಗವೊಂದನ್ನು ರಚಿಸಿದರೆಂದು ಹೇಳಲಾಗಿದೆ. ಬೆಂಗಳೂರಿನ ದಂಡುಪ್ರದೇಶದ ರೈಲ್ವೆನಿಲ್ದಾಣದ ಬಳಿಯಿರುವ ಅರಮನೆ ಐರೋಪ್ಯ ಶೈಲಿಯ ಕ್ಷಾತ್ರವಾಸ್ತುಶಿಲ್ಪಕ್ಕೊಂದು ಉತ್ತಮ ಉದಾಹರಣೆ. ಇಂಗ್ಲೆಂಡ್ ನಾರ್ಮಂಡಿಗಳ ಮಧ್ಯಯುಗೀನ ಸಂಕೀರ್ಣ ದುರ್ಗವನ್ನು ಇದು ಹೋಲುತ್ತದೆ. ವಿಂಡ್ಸರ್ ಅರಮನೆಯ ಮಾದರಿಯಲ್ಲಿ ಇದನ್ನು ನಿರ್ಮಿಸಿರುವುದು ಸ್ವಾರಸ್ಯವಾಗಿದೆ. ಈ ಭವ್ಯ ಕಟ್ಟಡದ ಬುರುಜುಗಳಲ್ಲಿ, ಕಮಾನುಗಳಲ್ಲಿ ವಾಸ್ತುಶಿಲ್ಪವಿಲಾಸ ಮೆರೆದಿದೆ.

ಮೈಸೂರು ಅರಮನೆಯ ಬಳಿಯಿರುವ 'ಗನ್‌ಹೌಸ್' ಐರೋಪ್ಯ ಶೈಲಿಯ ಸುಂದರವಾದ ಇನ್ನೊಂದು ಸೈನಿಕ ಕಟ್ಟಡ. ಅರಮನೆಯ ಸುತ್ತಲಿರುವ ಕಣಶಿಲೆಯ ಕೋಟೆ ಮತ್ತು ಅದರ ತುದಿಭಾಗದ ವಿನ್ಯಾಸ ವಿದೇಶಿ ಶೈಲಿಯಲ್ಲಿವೆ.

ಬ್ರಿಟಿಷ್ ಸೈನಿಕ ನೆಲೆವೀಡುಗಳಲ್ಲಿ ಐರೋಪ್ಯ ಶೈಲಿಯ ವಾಸ್ತುಶಿಲ್ಪ ಕಲೆ ಸೈನಿಕರ ಬ್ಯಾರಕ್ಸ್, ಕ್ಲಬ್ಬು, ಪೆವಿಲಿಯನ್, ಸೈನಿಕರ ವಸತಿ ಗೃಹಗಳಲ್ಲಿ ಪಡಿಮೂಡಿದೆ. ಬೆಂಗಳೂರಿನ ದಂಡು ಪ್ರದೇಶ ವಿಶಾಲವಾಗಿದೆ. ಅದರಲ್ಲೇ ಆಟದ ಮೈದಾನ, ರಸ್ತೆ, ಅಂಗಡಿ, ಕ್ಲಬ್ ಮುಂತಾದ ಸಕಲ ಸೌಕರ್ಯಗಳನ್ನೂ ನಿರ್ಮಿಸಿಕೊಂಡಿದ್ದರು. ಶ್ರೀರಂಗಪಟ್ಟಣದ ದರಿಯಾದೌಲತ್ ಭಿತ್ತಿಚಿತ್ರಗಳಲ್ಲಿ ಐರೋಪ್ಯ ಶೈಲಿಯ ಕ್ಷಾತ್ರ ವಾಸ್ತುಶಿಲ್ಪ ಹಾಗೂ ಸೈನಿಕ ಜೀವನ ಸ್ವಾರಸ್ಯವಾಗಿ ಚಿತ್ರಿತವಾಗಿವೆ. ಅವರ ಕಾಲದ ಫಿರಂಗಿಗಳು, ಬಂದೂಕು, ಶಿರಸ್ತ್ರಾಣಗಳು ಕ್ಷಾತ್ರ ವಾಸ್ತುಶೈಲಿಯ ಹಿನ್ನೆಲೆಯಲ್ಲಿ ವೈಶಿಷ್ಟ್ಯಪೂರ್ಣವಾಗಿ ಕಾಣುತ್ತದೆ.

### ಸಾರ್ವಜನಿಕ ಕಛೇರಿ ಕಟ್ಟಡಗಳು

ಐರೋಪ್ಯ ವಾಸ್ತುಶೈಲಿಯ ಸ್ವಾರಸ್ಯವನ್ನು ತಿಳಿಯುವಲ್ಲಿ ಆ ಕಾಲದ ಸಾರ್ವಜನಿಕ ಕಛೇರಿ ಕಟ್ಟಡಗಳತ್ತ ನಮ್ಮ ಕಣ್ಣು ಹಾಯಿಸಬೇಕು. ಹತ್ತೊಂಬತ್ತನೆಯ ಶತಮಾನದಲ್ಲಿ ಮರಾಮತ್ ಇಲಾಖೆಯನ್ನು ಆರಂಭಿಸಿದ ಮೇಲೆ ನಾಡಿನ ಹಲವೆಡೆ, ಅದರಲ್ಲೂ ಮುಖ್ಯವಾಗಿ ಹಳೆ ಮೈಸೂರು ಸಂಸ್ಥಾನದಲ್ಲಿ, ಐರೋಪ್ಯ ಶೈಲಿ ಜನಪ್ರಿಯವಾಯಿತು. ಇದರಿಂದ ನಾಡಿನ ವಾಸ್ತುಶಿಲ್ಪಕ್ಕೆ ಹೊಸ ಆಯಾಮ ಸೇರಿಕೊಂಡಿತೆಂದರೂ ತಪ್ಪಲ್ಲ. ಐರೋಪ್ಯ ಇಂಜಿನಿಯರುಗಳು ತಮಗೆ ಪರಿಚಿತವಾದ ಅಯೋನಿಕ್, ಡೋರಿಕ್, ಕೊರಿಂತಿಯನ್, ಗಾಥಿಕ್, ರಿನೇಸಾನ್ಸ್, ಅಮೆರಿಕನ್ ಮುಂತಾದ ವಿವಿಧ ವಿದೇಶಿ ಶೈಲಿಗಳನ್ನು ಈ ನಾಡಿಗೆ ಎರವಲು ತಂದರು. ಐರೋಪ್ಯ ವಾಸ್ತುಶೈಲಿಯಲ್ಲೇ "ಗಂಡುಶೈಲಿ" ಎಂದು ಹೆಸರಾದ ಡೋರಿಕ್ ಮಾದರಿಯ ಕಂಬ ಸಾಲುಗಳನ್ನು ಸೊಗಸಾಗಿ ಅಳವಡಿಸಲಾಯಿತು. ಇದರಲ್ಲಿ ವಾಸ್ತವವಾಗಿ ಅಲಂಕರಣ ಪ್ರಮಾಣ ಕಡಿಮೆಯಾದರೂ ನೋಟಕ್ಕೆ ಸೊಗಸಾಗಿರುತ್ತದೆ. ಒಂದೇ ಕಲ್ಲಿನಲ್ಲಿ ಕೆತ್ತಿದಂತೆ ಕಾಣುವ ಇಟ್ಟಿಗೆ ಗಾರೆಕಂಬಗಳು ಬುಡದಲ್ಲಿ ದಪ್ಪಗಿದ್ದು ಮೇಲೆ ಹೋದಂತೆ ತೆಳುವಾಗಿರುತ್ತವೆ. ದೂರದ ನೋಟಕ್ಕೆ ಈ ಸ್ತಂಭ ಮಾದರಿ ಅದ್ಭುತವಾಗಿರುತ್ತದೆ. ಮೈಸೂರಿನ ಕ್ರಾಫರ್ಡ್ ಭವನದ ಮುಖಮಂಟಪ, ರಂಗಾಚಾರ್ಲು ಪುರಭವನದ ಮುಖಮಂಟಪ ಮುಂತಾದವುಗಳಲ್ಲಿ ಈ ಬಗೆಯ ಅನುಕರಣೆಯ ಸ್ತಂಭ ಸಾಲುಗಳನ್ನು ನೋಡಬಹುದಾಗಿದೆ. ಶುದ್ಧ ಗ್ರೀಕ್ ಶೈಲಿಯ ಕುಸುರಿ ಕೆಲಸದ ನವಿರುತನವಿಲ್ಲವಾದರೂ ಸ್ಥಳೀಯ ಸ್ಥಪತಿಗಳ ಅನುಕರಣೆಯ ಕಲಾಕೌಶಲವಿದೆ; ಪರಿಶ್ರಮವಿದೆ.

ನಮ್ಮ ನಾಡಿನ ಐರೋಪ್ಯ ಶೈಲಿಯ ಕಟ್ಟಡಗಳಲ್ಲಿ ರೋಮನ್ ಕಮಾನುಗಳೂ ಕಮಾನು ಸರಣಿಗಳೂ ಗುಮ್ಮಟ ಮಾದರಿಗಳೂ ಪದೇ ಪದೇ ಕಂಡುಬರುತ್ತವೆ. ಇವುಗಳಲ್ಲಿ ಇಟ್ಟಿಗೆ, ಜಲ್ಲಿಕಲ್ಲಿನ ಗಾರೆ ಇವುಗಳ ಬಳಕೆ ಗಣನೀಯ. ಕಾಲಕ್ರಮದಲ್ಲಿ ಸಿಮೆಂಟ್, ಕಾಂಕ್ರೀಟು, ಕಬ್ಬಿಣ ಸರಳುಗಳನ್ನು ಬಳಸಿದ್ದು ಕಂಡುಬರುತ್ತದೆ. ಕಟ್ಟಡಗಳ ಹೊರಮೈ ನಾಜೂಕಾಗತೊಡಗಿತು; ನಯಗಾರೆ ಕೆಲಸ ಪ್ರಾಶಸ್ತ್ಯ ಪಡೆಯಿತು. ಕಟ್ಟಡದ ಮುಂಭಾಗಗಳಲ್ಲಿ ಎಲೆಮೊನಚಿನಾಕಾರದ ಇಲ್ಲವೆ ದುಂಡನೆಯ ಕಮಾನುಗಳನ್ನೂ ಧಾರಾಳವಾಗಿ ಬಳಸಲಾಯಿತು. ಕಟ್ಟಡಗಳು ಹೊರನೋಟಕ್ಕೆ ವೈಭವೋಪೇತವಾಗಿ, ಅನುಕೂಲಕರವಾಗಿದ್ದಂತೆ ಭಾಸವಾಗುತ್ತದೆ. ಆದರೆ ಶುದ್ಧ ಐರೋಪ್ಯ ಶೈಲಿಯ ಸೂಕ್ಷ್ಮ ಸೌಂದರ್ಯಾಭಿರುಚಿ, ನವುರುತನ ನಿರೀಕ್ಷಿಸುವಷ್ಟೇನೂ ಮೂಡಿಬಂದಿಲ್ಲ. ಅನುಕರಣಶೀಲತೆ ಮಾತ್ರ ಎದ್ದು ಕಾಣುತ್ತದೆ. ಕೆಲವೊಮ್ಮೆ ಬಿಜಾಂಟಿನ್ ಶೈಲಿಯ ಬಣ್ಣಗಾರಿಕೆ ಮೆರೆಯುವುದುಂಟು.

ಮೈಸೂರು, ಬೆಂಗಳೂರು, ಧಾರವಾಡ ಮುಂತಾದ ನಗರಗಳಲ್ಲಿರುವ ಸಾರ್ವಜನಿಕ ಕಟ್ಟಡಗಳಲ್ಲಿ ಕಂಬ ಸಾಲುಗಳ ಮೇಲೆ, ಕಿಟಿಕಿ ಬಾಗಿಲುವಾಡಗಳ ಮೇಲೆ ಅರ

ದಾರಾ ದುಂಡು ಕಮಾನುಗಳಿಂದ ಕೂಡಿದ ರೋಮನೆಸ್ಕ್ ಶೈಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಮಾನಸಗಂಗೋತ್ರಿಯಲ್ಲಿರುವ ಈಗಿನ ಆಡಳಿತ ಕಚೇರಿ, ಲಲಿತ ಮಹಲ್ ಮುಂತಾದ ಕಟ್ಟಡಗಳಲ್ಲಿ ನೋಡುವಂತೆ ಕಂಬ ಸಾಲುಗಳು ನೆಲದ ಮೇಲಿರುವಷ್ಟು ಎತ್ತರವಾದ ಮಹಡಿಯ ಕಂಬ ಸಾಲುಗಳಿರುವುದಿಲ್ಲ. ಅವು ಚಿಕ್ಕವಾಗಿರುತ್ತವೆ.

ಐರೋಪ್ಯ ಶೈಲಿಯಲ್ಲೇ ಅತ್ಯಂತ ಪ್ರಮುಖವಾದ ಗಾಥಿಕ್ ಶೈಲಿಯ ಅನುಕರಣೆ ನಮ್ಮ ನಾಡಿನ ಕೋರ್ಟು ಕಛೇರಿಗಳಂಥ ಸಾರ್ವಜನಿಕ ಕಟ್ಟಡಗಳಲ್ಲಿ ಮೆರೆದಾಡಿದೆ. ಈ ಶೈಲಿಯಲ್ಲಿ ಎತ್ತರವಾಗಿ ಬೆಳೆದು ನಿಂತ ಉಪ್ಪರಿಗೆ ಕಟ್ಟಡಗಳನ್ನೂ ದೊಡ್ಡ ದೊಡ್ಡ ಮಹಲುಗಳನ್ನೂ ಬೆಂಗಳೂರು ಮೈಸೂರು ನಗರಗಳಲ್ಲಿ ನೋಡಬಹುದು. ಬೆಂಗಳೂರಿನ ಹಳೆ ಸೆಂಟ್ರಲ್ ಕಾಲೇಜು ಕಟ್ಟಡ, ಅರಮನೆ, ಕೇಂದ್ರ ವಾಚನಾಲಯ, ನ್ಯಾಯಾಲಯ ಮುಂತಾದೆಡೆ ಈ ಶೈಲಿಯ ಲಾಸ್ಯವನ್ನು ನೋಡಬಹುದು. ಕಿಟಕಿ, ಬಾಗಿಲುಗಳ ಮೇಲೆ ಎಲೆ ಮೊನಚಿನಂತಹ ಚೂಪಾದ ಕಮಾನುಗಳನ್ನು ಅಳವಡಿಸಲಾಗಿದೆ. ವಾಸ್ತು ತಂತ್ರ ದೃಷ್ಟಿಯಿಂದಲೂ ದುಂಡು ಕಮಾನಿಗಿಂತ ಕೋನ ಕಮಾನು ಸುಲಭ, ಇವಲ್ಲದೆ ಎತ್ತರದ ಮಹಡಿ, ಚೂಪುತುದಿ ಗೋಪುರ, ಹೆಚ್ಚಿನ ಚಿತ್ತಾರಗೆಲಸ, ಜ್ಯಾಮಿತಿ ವಿನ್ಯಾಸದ ಅಲಂಕರಣೆ, ಬಣ್ಣದ ಬಳಕೆ ಮುಂತಾದವು ಗಾಥಿಕ್ ಶೈಲಿಯ ಇತರ ಲಕ್ಷಣಗಳು. ಇವನ್ನು ಕೆಲವು ಕಟ್ಟಡಗಳಲ್ಲಿ ನೋಡಬಹುದು.

ಪುನರುಜ್ಜೀವನ ಶೈಲಿಯ ಪ್ರಭಾವವೂ ಕೆಲವೆಡೆ ಕಂಡುಬರುತ್ತದೆ. ಈ ಕಟ್ಟಡದ ಒಟ್ಟು ರಚನೆಗಿಂತ ಅದರ ಮುಖಭಾಗ ಹಾಗೂ ಒಳಾಂಗಣದಲ್ಲಿ ಹೆಚ್ಚಿನ ಕುಸುರಿ ಕೆಲಸವಿರುತ್ತದೆ. ಇದರಲ್ಲಿ ಅತ್ಯಲಂಕರಣೆಯ 'ಬಾರೋಕ್' ಹಾಗೂ ನವಿರು ಶೈಲಿಯ 'ರೊಕೊಕೊ' ಪ್ರಧಾನ ಪಾತ್ರ ವಹಿಸಿವೆ. ಜಾರ್ಜಿಯನ್ ಹಾಗೂ ರೀಜೆನ್ಸಿ ಶೈಲಿಗಳು ನಾಡಿನಲ್ಲಿ ಆಳಿದ ಬ್ರಿಟಿಷರ ಕೊನೆಗಾಲದಲ್ಲಿ ಅಲ್ಲಲ್ಲಿ ಕಂಡುಬಂದವು. ಕೈಗಾರೀಕರಣ, ನಗರೀಕರಣ ಹೆಚ್ಚಾದಂತೆ ಈ ಶೈಲಿಯ ಮನೆಗಳು ನಗರ ಪ್ರದೇಶಗಳಲ್ಲಿ ಹೆಚ್ಚಾದವು. ಇವುಗಳ ಬಾಹ್ಯಾಲಂಕರಣೆ ಅಭಿಜಾತ ಮಾದರಿಯಾದರೂ ಬಾಗಿಲು ಕಿಟಕಿಗಳು ಗ್ರೀಕೊರೋಮನ್ ಶೈಲಿಯಲ್ಲಿರುವುದುಂಟು. ಈ ಶೈಲಿಯ ಬಹುಮಾಳಿಗೆ ಕಟ್ಟಡಗಳೂ, ಸಾರ್ವಜನಿಕ ಉದ್ಯಾನಗಳೂ, ಮೈದಾನ ಪ್ರದೇಶಗಳೂ ನಗರ ಸಾಂದರ್ಯವನ್ನು ಹೆಚ್ಚಿಸಿದವು. ವಾಸ್ತುಶಿಲ್ಪದಲ್ಲಿ ಉಪಯುಕ್ತತೆ, ಚೆಲುವು ಪ್ರಧಾನ ಲಕ್ಷಣಗಳಾದವು. ಸಮತಳ, ಲಂಬ, ವಕ್ರ ರೇಖೆಗಳ ಬಗೆಬಗೆಯ ಆವರ್ತನೆ ಅಥವಾ ಮರುಕಳಿಕೆ, ಅವುಗಳಲ್ಲೊಂದು ಲಯಬದ್ಧತೆ, ರೇಖಾಲಾಲಿತ್ಯ, ಸ್ತಂಭ, ಭಿತ್ತಿಗಳ ಅಲಂಕರಣೆ, ಕಿಟಕಿ, ಬಾಗಿಲು, ಸ್ತಂಭಗಳ ನಡುವಿನ ಹಿತಮಿತವಾದ ತೆರಪು ಮುಂತಾದವೆಲ್ಲ ಕಂಡುಬರತೊಡಗಿದವು. ಒಟ್ಟಾರೆ ವಾಸ್ತುಶಿಲ್ಪದಲ್ಲಿ ಚೆಲುವೂ ಬೇಕು, ಪ್ರಯೋಜನವೂ ಇರಬೇಕೆಂಬುದರೆಡೆಗೆ ಗಮನ ಹೆಚ್ಚಾಯಿತು.

ಕರ್ನಾಟಕದಲ್ಲಿ ಇದುವರೆಗೆ ಕಾಣಸಿಗುವ ಐರೋಪ್ಯ ಶೈಲಿಯ ಕಟ್ಟಡಗಳಿಗೆ ಬಳಸಿದ ಬಿಡಿಬಿಡಿ ವಾಸ್ತು ಭಾಗಗಳ ಆಕೃತಿ, ಸ್ವಭಾವ, ಗುಣಗಳಂತೆ ಐರೋಪ್ಯ ಶೈಲಿಯ ಶುದ್ಧ ರೂಪದ ಅಳವಡಿಕೆ, ಜೋಡಿಸುವ ವಿಧಾನವನ್ನು ಆಧರಿಸಿ ವಾಸ್ತು ಸೌಂದರ್ಯ ನಿರ್ಧಾರಿತವಾಗುತ್ತದೆ. ಈ ಶೈಲಿಯ ಕಟ್ಟಡಗಳಲ್ಲಿ ಒಂದು ಕಂಬದಿಂದ ಇನ್ನೊಂದು ಕಂಬದ ನಡುವಿನ ಅಂತರ. ಗೋಡೆ ಗೋಡೆಗಳ ನಡುವಿನ ದೂರವನ್ನು ದುಂಡು ಇಲ್ಲವೆ ಮೊನಚು ಕಮಾನುಗಳು ಹಾದು ಒಂದುಗೂಡಿಸುವ ವಿಧಾನ, ಕಂಬ, ಗೋಡೆಗಳಿಗೆ ಕಾರಣೆ ಮಾಡಿ, ಅವುಗಳ ಮೇಲೆ ಅಲ್ಲಲ್ಲಿ ಉಬ್ಬಿದ ದಂಡೆ, ಹಿಂಜರಿಕೆ, ಮುಂಜರಿಕೆ, ಹೂಬಳ್ಳಿ, ಜ್ಯಾಮಿತಿ ವಿನ್ಯಾಸಗಳನ್ನು ಗಾರೆಯಲ್ಲೇ ರೂಪಿಸಿ ಅವುಗಳ ಚೆಲುವನ್ನು ಹೆಚ್ಚಿಸುವ ವಿಧಾನ, ಗೋಡೆ ಬುಡಭಾಗದಲ್ಲಿ, ನೆಲಕ್ಕೆ ಚೀನೀ ಮಣ್ಣಿನ ಚಿತ್ತಾರದ ಫಲಕಗಳನ್ನು ಸಂಯೋಜಿಸುವುದು, ಗೋಳಾಕಾರದ ಛಾವಣಿ ಬಣ್ಣ ಬಣ್ಣದ ಗಾಜುಗಳನ್ನು ಅಳವಡಿಸುವುದು ಮುಂತಾದವೆಲ್ಲ ವಾಸ್ತು ಲಾವಣ್ಯ, ಸೊಬಗನ್ನು ಹೆಚ್ಚಿಸುವಲ್ಲಿ ಗಣನೀಯ ಪಾತ್ರ ವಹಿಸುತ್ತವೆ. ಅಂತೆಯೇ ಬ್ರಿಟಿಷ್ ಕಾಲದಲ್ಲಿ ಅದರಲ್ಲೂ ಮೈಸೂರು ಮಹಾರಾಜರ ಆಡಳಿತದಲ್ಲಿ ಐರೋಪ್ಯ ಶೈಲಿಯ ಸೊಬಗನ್ನೂ ಸ್ವತಃ ಮನಗಂಡು ಅನುಕರಿಸಲಾಗುವಂತೆ ಇಂಗ್ಲೆಂಡ್, ಫ್ರಾನ್ಸ್ ಮುಂತಾದ ದೇಶಗಳಿಗೆ ಪ್ರವಾಸ ಹೋಗಲು ಕೆಲವು ಪ್ರತಿಷ್ಠಿತ ಸ್ಥಪತಿಗಳಿಗೆ ಅವಕಾಶವಿತ್ತು. ಮೈಸೂರಿನ ಲಲಿತ ಮಹಲನ್ನು ಕಟ್ಟಿದ ಸ್ಥಪತಿಗೆ ಈ ಬಗೆಯ ಸದವಕಾಶ ಸಿಕ್ಕಿದ್ದುಂಟು. ಶ್ರೀರಂಗಪಟ್ಟಣದ ದರಿಯಾದೌಲತ್‌ನ ಒಳಬಾಗಿಲುವಾಡವನ್ನು ದಂತದ ಇನ್‌ಲೇ ಇರುವ ಎಬೊನಿ ಮರದಿಂದ ಮಾಡಿಸಿ ಲಾರ್ಡ್ ಡಾಲ್‌ಹೌಸಿ ಕಾಣಿಕೆಯಾಗಿ ನೀಡಿದ. ಐರೋಪ್ಯರು ಈ ನಾಡಿನಲ್ಲಿ ಬೇರೂರಿದ ಮೇಲೆ ಹಾಗೂ ಅವರ ವಾಸ್ತುಶೈಲಿ ಜನಪ್ರಿಯತೆ ಗಳಿಸಿಕೊಂಡ ಮೇಲೆ ನಮ್ಮ ನಗರ ಪ್ರದೇಶದ ಪ್ರತಿಷ್ಠಿತರು, ಅನುಕೂಲಸ್ಥರು ಈ ಶೈಲಿಗೆ ಮಾರುಹೋದರು. ಅಂಧಾನುಕರಣೆ ಒಂದೆಡೆಯಾದರೆ, ಅರ್ಧ ದೇಶೀಯ ಅರ್ಧ ಐರೋಪ್ಯ ಶೈಲಿಗಳ ಹೊಸ ಮಿಶ್ರಶೈಲಿ ಇನ್ನೊಂದೆಡೆ ಕಾಣಿಸತೊಡಗಿದವು. ಐರೋಪ್ಯ ಶೈಲಿ ಸಮಕಾಲೀನ ಜೀವನದ ಫ್ಯಾಶನ್ ಆಯಿತು. ಸಾರ್ವಜನಿಕ ಇಲಾಖೆ ಸರ್ವಸ್ವಾಮ್ಯ ಪಡೆದ ಮೇಲೆ ಹಲವು ಆಡಳಿತ ಕಛೇರಿ ಕಟ್ಟಡಗಳು, ನ್ಯಾಯಾಲಯ, ವಾಚನಾಲಯ, ಶಾಲಾಕಾಲೇಜು ಕಟ್ಟಡಗಳು, ಪ್ರವಾಸಿಮಂದಿರಗಳು ಹೆದ್ದಾರಿ, ಬಂಗಲೆಗಳು, ಐರೋಪ್ಯ ಶೈಲಿಯನ್ನನುಕರಿಸಲಾರಂಭಿಸಿದವು. ಸರ್ ರಿಚಾರ್ಡ್ ಕರ್ನಲ್ ಸಾಂಕಿಯಷ ಐರೋಪ್ಯ ಇಂಜಿನಿಯರುಗಳು ತಮ್ಮ ಕಚೇರಿಗಳಲ್ಲಿ ಕುಳಿತು, ಐರೋಪ್ಯಶೈಲಿಯ ವಿವಿಧ ವಿನ್ಯಾಸಗಳನ್ನು ಹಾಕಿಕೊಂಡು ಸ್ಥಳೀಯ ಸ್ಥಾಪತಿ ಕೆಲಸಗಾರರ ಸಹಾಯದಿಂದ ಆಡಳಿತದ ಅನುಕೂಲ ಪ್ರಯೋಜನ ದೃಷ್ಟಿಯಿಂದ ಎಷ್ಟು ಬೇಕೋ ಅಷ್ಟಕ್ಕೆ ವಾಸ್ತು ನಿರ್ಮಾಣಮಾಡಿದರು. ಇದಕ್ಕಾಗಿ ಹಣ ಪೋಲು ಮಾಡಿಲ್ಲ. ಒಂದರ್ಥದಲ್ಲಿ ಐರೋಪ್ಯ ಶೈಲಿಯ ತೊಡಿಗೆಯನ್ನು ನಮ್ಮ ಕಟ್ಟಡಗಳಿಗೆ ತೊಡಿಸಿ ತಮ್ಮ ನಾಡಿನ ವಾತಾವರಣ ಕಲ್ಪಿಸಿಕೊಳ್ಳಲು ಪ್ರಯತ್ನಿಸಿದರು. ನಮ್ಮ ನಾಡಿನ ಸ್ಥಳೀಯ ಸ್ಥಪತಿ ಶಿಲ್ಪಿಗಳಿಗೆ ತಮ್ಮ ಸ್ವಂತ ಪ್ರತಿಭೆ, ಸ್ವಾತಂತ್ರ್ಯವನ್ನು ಪ್ರದರ್ಶಿಸಲವಕಾಶವಿಲ್ಲದೆ ಮೇಲನವರು ಹಾಕಿಕೊಟ್ಟ ಮಾದರಿಯನ್ನು ಪರಿಶ್ರಮದಿಂದ ಅನುಕರಿಸಲು ಹೆಣಗಬೇಕಾಯಿತು. ಕೇವಲ ಅನುಕರಣೆಯಿಂದ ತಾಂತ್ರಿಕವಾಗಿ ಕೆಲಸಮಾಡಿ ಹಣ ಸಂಪಾದನೆ ಮಾಡುವ ಗಾರೆಕೆಲಸಗಾರನಾಗಬೇಕಾಯಿತು. ನಮ್ಮ ಆಡಳಿತಗಾರರೂ ಐರೋಪ್ಯ ಶೈಲಿಗೆ ಮಾರುಹೋಗಿದ್ದರಿಂದ ಅದರ ಅನುಕರಣೆಗಾಗಿ ಹೆಣಗಿದರು. ಈ ಶೈಲಿ ನಮ್ಮ ನೆಲಗುಣ, ಹವಾಗುಣ ಪರಿಸರಕ್ಕೆ ಸರಿಯಾಗಿ ಹೊಂದಿಕೊಂಡು ಸಮಂಜಸವಾಗುತ್ತದೆಯೆ, ಇಲ್ಲವೆ ಎಂಬ ವಿಮರ್ಶೆ ಮಾಡದೆ ಅಂಧಾನುಕರಣೆ ಆರಂಭವಾಯಿತು. ಅಳವಡಿಕೆಗಿಂತ ಅನುಕರಣೆಯದೆ ಮೇಲುಗೈಯಾಯಿತು. ಪರಿಣಾಮವಾಗಿ ಮೈಸೂರು ಬೆಂಗಳೂರು ನಗರಗಳಲ್ಲಿ ಹಲವು ಸಾರ್ವಜನಿಕ ಕಟ್ಟಡಗಳು ಆಗಿನ ಕಾಲದಲ್ಲಿ ಅದ್ಭುತ ರೀತಿಯಲ್ಲಿ ತಲೆಯೆತ್ತಿದವು. ಇವುಗಳಲ್ಲಿ ಐರೋಪ್ಯ ಶೈಲಿಯ ಸ್ವೋಪಜ್ಞತೆ, ಸೊಬಗು ಎಷ್ಟು

ಆಧಾರಪೂರ್ಣವಾಗಿ ಖಚಿತವಾಗಿ ರೂಪು ತಾಳಿದೆಯೆಂಬುದನ್ನು ಮೂಲ ಯೂರೋಪಿನ ಕಟ್ಟಡಗಳೊಟ್ಟಿಗೆ ಹೋಲಿಸಿದರೆ ತಿಳಿದೀತು. ಇವು ಐರೋಪ್ಯ ಶೈಲಿಯ ವಾಸ್ತು ಕಲಾಕೃತಿಗಳಾಗದೆ ಸಾರ್ವಜನಿಕ ಇಲಾಖೆಯ ಕಟ್ಟಡಗಳಾಗಿ ಉಳಿದಿವೆ. ಸಿದ್ಧ ಮಾದರಿಯ ಅಂಧಾನುಕರಣೆಯಾಗಿ ಕರ್ನಾಟಕ ವಾಸ್ತುಶಿಲ್ಪದಲ್ಲಿ ನಿಜವಾದ ಐರೋಪ್ಯಕರಣವಾಗಿಲ್ಲವೆಂದೇ ಹೇಳಬಹುದು. ಅಲ್ಲದೆ ಯೂರೋಪಿಯನ್ ಇಂಜಿನಿಯರುಗಳ ಸಾರ್ವಜನಿಕ ಇಲಾಖಾ ನೀತಿಯಿಂದಾಗಿ ಅನುಕರಣೆ ಮುಂದೆ ಹೋಗಿ ನಾಡಿನ ಪರಂಪರಾಗತ ವಾಸ್ತುಶೈಲಿ ಹಿಂದೆ ಬಿತ್ತು. ಆಳಿದ ಮೈಸೂರು ಅರಸರು, ಆಡಳಿತಗಾರರು, ಬುದ್ಧಿಜೀವಿಗಳು, ಐರೋಪ್ಯ ಶೈಲಿಯನ್ನು ಫ್ಯಾಶನ್ನಾಗಿ ಅನುಕರಿಸಿದ್ದರ ಪರಿಣಾಮವಾಗಿ ಹತ್ತೊಂಬತ್ತನೆಯ ಹಾಗೂ ಇಪ್ಪತ್ತನೆಯ ಶತಮಾನಗಳಲ್ಲಿ ಮೇಲೆದ್ದ ನೂರಾರು ಕಟ್ಟಡಗಳನ್ನಿಲ್ಲಿ ಉದಾಹರಿಸಬಹುದು. ಅವುಗಳಲ್ಲಿ ಮುಖ್ಯವಾಗಿ ಬೆಂಗಳೂರಿನ ಜಿಲ್ಲಾ ಕಛೇರಿ ಕಟ್ಟಡ, ಸಾರ್ವಜನಿಕ ಕಛೇರಿ, ಸರ್ಕಾರಿ ವಸ್ತು ಸಂಗ್ರಹಾಲಯ, ಗ್ಲಾಸ್ ಹೌಸ್ ಮುಂತಾದವುಗಳಾದರೆ, ರಿನೈಸಾನ್ ಶೈಲಿಯ ಜ್ಯುಬಿಲಿ ಕಟ್ಟಡ, ಫ್ರೆಂಚ್ ಶೈಲಿಯ ಚಾಟೂನಂತಿರುವ ಹಾರ್ಡ್‌ವಿಕ್ ಸ್ಕೂಲ್ ಮೊದಲನೆಯ ಮಹಾರಾಜ ಕುಮಾರಿ ಮಹಲು ಮುಂತಾದವು ಮೈಸೂರಿನಲ್ಲಿವೆ. ಬೆಂಗಳೂರಿನ ವಿಕ್ಟೋರಿಯ ಆಸ್ಪತ್ರೆ ಮತ್ತು ಹೊಸ ಸಾರ್ವಜನಿಕ ಕಟ್ಟಡಗಳನ್ನೂ ಇಲ್ಲಿ ಉದಾಹರಿಸಬೇಕು. ಆಧುನಿಕ ಅಮೆರಿಕನ್ ಪುನರುಜ್ಜೀವನ ಶೈಲಿಯ ಕಟ್ಟಡಗಳಲ್ಲಿ ಮೈಸೂರಿನ ಸರ್ಕಾರಿ ಅತಿಥಿಗೃಹ, ಕೃಷ್ಣರಾಜೇಂದ್ರ ಆಸ್ಪತ್ರೆ ಕಟ್ಟಡ, ಕ್ರಾಫರ್ಡ್ ಹಾಲ್, ಮೈಸೂರು ವಿಶ್ವವಿದ್ಯಾನಿಲಯದ ಕಾರ್ಯ ಸೌಧ, ಯೂನಿಯನ್ ಕಟ್ಟಡ, ಮಹಾರಾಜ ಕಾಲೇಜಿನ ಜ್ಯೂನಿಯರ್, ಸೀನಿಯರ್ ಬಿ.ಎ. ಹಾಲ್, ಪ್ರಾಚ್ಯ ವಿದ್ಯಾ ಸಂಶೋಧನ ಸಂಸ್ಥೆ. ಲಲಿತ ಮಹಲು ಈ ಶೈಲಿಯಲ್ಲೇ ಒಂದು ಅಮೋಘವಾದ ನಿದರ್ಶನ. ಹಳೆ ಮೈಸೂರು ಸಂಸ್ಥಾನದ ಹಲವೆಡೆಗಳಲ್ಲಿ ಈ ಬಗೆಯ ಮಹಲುಗಳನ್ನು ನೋಡಬಹುದಾದರೆ, ನಾಡಿನ ಉಳಿದೆಡೆ, ಆದರಲ್ಲೂ ಉತ್ತರ ಕರ್ನಾಟಕದಲ್ಲಿ ಭಾರಿ ಪ್ರಮಾಣದಲ್ಲಿ ಕಂಡುಬರುವುದಿಲ್ಲ. ಉತ್ತರ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ, ಧಾರವಾಡ ಜಿಲ್ಲೆಯಲ್ಲಿ ಅಲ್ಲಲ್ಲಿ ಐರೋಪ್ಯ ಶೈಲಿಯ ಸರಳ ಕಟ್ಟಡಗಳಿವೆ. ಆದರೆ ನಾಡಿನ ಹಲವೆಡೆಗಳಲ್ಲಿರುವ ಪ್ರವಾಸಿ ಮಂದಿರ, ಹೆದ್ದಾರಿಗಳಲ್ಲಿರುವ ಇನ್ಸ್‌ಪೆಕ್ಷನ್ ಬಂಗಲೆ, ಕೆಲವೆಡೆಗಳಲ್ಲಿರುವ, ಗಿರಿಧಾಮಗಳಲ್ಲಿರುವ ಕಟ್ಟಡಗಳು ವಿದೇಶಿ ಶೈಲಿಯನ್ನು ಅಳವಡಿಸಿಕೊಂಡಿವೆ. ಕರ್ನಲ್ ಹಿಲ್‌ನ "ಗ್ಲೆನ್ ಟೆಲ್ಟ" ಮಾರ್ಕ್ ಕಬ್ಬನ್‌ನ "ಕಬ್ಬನ್ ಹೌಸ್", ಕ್ಯಾಪ್ಟನ್ ಕನ್ನಿಂಗ್ ಹ್ಯಾಂನ 'ಓಕ್‌ಲ್ಯಾಂಡ್' ಮುಂತಾದ ಪ್ರತಿಷ್ಠಿತ ಅಧಿಕಾರಿ ಕಟ್ಟಡಗಳೂ, ಅತಿಥಿಗೃಹಗಳೂ ಕೆಲವು ಖಾಸಗಿ ಕಟ್ಟಡಗಳೂ ಇಲ್ಲಿ ಉಲ್ಲೇಖನೀಯ. ಯುರೋಪಿಯನ್ನರ ಬಂಗಲೆಗಳು ಸಾಕಷ್ಟು ವಿಶಾಲವಾಗಿದ್ದು ಎತ್ತರದ ಮುಚ್ಚಿಗೆ, ವರಾಂಡ, ಇಂಗ್ಲೀಷ್ ಮಾದರಿಯ ಹೂದೋಟಗಳಿಂದ ಕೂಡಿರುತ್ತವೆ. ಆಫೀಸರ್ ಕ್ಲಬ್ಬುಗಳಲ್ಲಿ ವೈಶಾಲ್ಯ, ಪ್ರಯೋಜನ ದೃಷ್ಟಿ ಎದ್ದು ಕಾಣುತ್ತವೆ. ಇಲ್ಲೆಲ್ಲ ಐರೋಪ್ಯ ಶೈಲಿಯ ಪೀಠೋಪಕರಣ ಮತ್ತು ಅಲಂಕೃತ ವಸ್ತುಗಳು ಇದ್ದು ಐರೋಪ್ಯ ಸಂಸ್ಕೃತಿಯ ವಾತಾವರಣವನ್ನು ಮೂಡಿಸುವಂತಿರುತ್ತವೆ. ಐರೋಪ್ಯ ಅಧಿಕಾರಿಗಳಂತೆ ವ್ಯಾಪಾರಸ್ಥರೂ, ತಮ್ಮ ವ್ಯಾಪಾರ ಮಳಿಗೆಗಳನ್ನು ನಿರ್ಮಿಸುವಲ್ಲಿ ಗ್ರೀಕೋ ರೋಮನ್ ಶೈಲಿಗಳ ಅನುಕರಣೆ ಮಾಡಿದ್ದುಂಟು. ಐರೋಪ್ಯ ವಾಸ್ತು ಶಾಸ್ತ್ರವನ್ನರಿತು, ಮೂಲಭೂತವಾಗಿ ವಾಸ್ತುಶಿಲ್ಪವನ್ನು ಈ ನಾಡಿನಲ್ಲಿ ಸೃಷ್ಟಿಸಬೇಕೆಂದು ಮಾಡಿದ ಪ್ರಯತ್ನಗಳಂತೆ ಇವು ಕಾಣುವುದಿಲ್ಲ. ಡೋರಿಕ್ ಸ್ತಂಭಮಾದರಿ, ರೋಮನ್ ಪ್ಯಾಂಥಿಯನ್ ಗೋಳ ಮಾದರಿ, ಗಾಥಿಕ್ ಕಮಾನು ಮಾದರಿ ಮುಂತಾದವು ಮೊದಮೊದಲು ಹೊಸದಾಗಿದ್ದುದರಿಂದ ದಂಗು ಬಡಿದು, ಚೆಂದವಾಗಿ ತೋರಿತು, ಐರೋಪ್ಯರ ರಾಜವೈಭವ ಸೂಚಕವಾಗಿ ಕಂಡಿತು. ಈ ಶೈಲಿಯ ವಾಸ್ತು ನಿರ್ಮಾಣ ಉನ್ನತ ಸ್ಥಾನದ ಚಿಹ್ನೆ ಆಯಿತು. ಅನೇಕ ಶ್ರೀಮಂತರು ಅನುಕರಣಶೀಲರಾದರು. ಐರೋಪ್ಯ ಪೀಠೋಪಕರಣ, ಶಿಲ್ಪ, ಚಿತ್ರ, ಅಲಂಕಾರಿಕ ವಸ್ತು ಒಡವೆಗಳು ಆಕರ್ಷಣೀಯವಾದವು. ಸಮಕಾಲೀನ ಸಾಹಿತ್ಯದಲ್ಲಿ ನೋಡುವಂತೆ, ಸಾಂಸ್ಕೃತಿಕ ಜೀವನದಲ್ಲೂ ಐರೋಪ್ಯ ಶೈಲಿ ಹೆಚ್ಚಾಗಿ ನಗರ ಪ್ರದೇಶಗಳಲ್ಲಿ ಅನುಕರಣೀಯವಾಯಿತು. ಆದರೆ ಈ ಶೈಲಿಯ ಅನುಕರಣೆಯ ಹುಚ್ಚು ನಾಡಿನ ಗ್ರಾಮಾಂತರ ಪ್ರದೇಶಗಳತ್ತ ಹರಿದಿರಲಿಲ್ಲ ಎಂಬುದು ಇಲ್ಲಿ ಗಮನಾರ್ಹ.

### ಮೂರ್ತಿ ಶಿಲ್ಪ

ಬ್ರಿಟಿಷ್ ಕಾಲದ ವಾಸ್ತುಕಲೆಯಲ್ಲಿ ನೋಡುವಂಥ ಅನುಕರಣಶೀಲತೆಯನ್ನು ಶಿಲ್ಪಕಲೆಯಲ್ಲಿ ಕನ್ನಡ ನಾಡು ಕಂಡಿಲ್ಲವೆನ್ನಬಹುದು. ಹೀಗಾಗಿ ಐರೋಪ್ಯ ಶೈಲಿಯ ಶಿಲ್ಪಗಳು ಈ ನಾಡಿನಲ್ಲಿ ಹೇಳಿಕೊಳ್ಳುವಷ್ಟಿಲ್ಲ. ಕ್ರೈಸ್ತ ಚರ್ಚುಗಳಲ್ಲಿ, ಪಾದ್ರಿಗಳ ವಸತಿಗೃಹಗಳಲ್ಲಿ, ಪ್ರತಿಷ್ಠಿತ ಕ್ರಿಶ್ಚಿಯನ್ನರ ಮನೆಗಳಲ್ಲಿ ಕಾಣುವ ಧಾರ್ಮಿಕ ಮೂರ್ತಿ ಶಿಲ್ಪ ಕೃತಿಗಳನ್ನು ಮೊದಲು ಹೆಸರಿಸಬಹುದಾದರೂ ಈ ಶೈಲಿಯ ಶಿಲ್ಪಗಳು ನಾಡನ್ನು ಪ್ರವೇಶಿಸುವುದಕ್ಕಿಂತ ಬಹಳ ಹಿಂದೆಯೇ, ಅಂದರೆ ಕ್ರಿಸ್ತಶಕಾರಂಭದಲ್ಲಿ ಕೆಲವೆಡೆ ಸಿಕ್ಕ ರೋಮನ್ ನಾಣ್ಯ ಪದಕಗಳ ಮೇಲೆ ಕಂಡುಬರುವ ಮಟಾಣಿ ಚಿತ್ರ ಶಿಲ್ಪಗಳನ್ನೂ ಮರೆಯುವಂತಿಲ್ಲ. ಆ ಕಾಲದ ರೋಮನ್, ಆಂಪೋರಾ, ಥಾಲಿ, ಮಡಿಕೆಗಳನ್ನು ಹೆಸರಿಸಬಹುದು. ಇವುಗಳ ಪ್ರಭಾವ ಸಮಕಾಲೀನ ಚುಟು ಶಾತವಾಹನ ಕಲೆಯಲ್ಲಿ ತುಸು ಕಂಡುಬರುವುದಾದರೂ ಹೇಳಿಕೊಳ್ಳುವಷ್ಟಿಲ್ಲ.

ಬ್ರಿಟಿಷ್ ಕಾಲದ ಕರ್ನಾಟಕದಲ್ಲಿದ್ದ ಐರೋಪ್ಯಶೈಲಿಯ ಕಟ್ಟಡಗಳಲ್ಲಿ ಮುಖ್ಯವಾಗಿ ಕಂಬದ ತುದಿ, ಗೋಡೆಯ ದಿಂಡುಗಳ ಮೇಲೆ ಗಾರೆಯಲ್ಲಿ ಚಿತ್ರಿಸಿರುವ ಹೂಬಳ್ಳಿ, ಜ್ಯಾಮಿತಿ ವಿನ್ಯಾಸಗಳು ಐರೋಪ್ಯ ಶೈಲಿಯ ಪರಿಶುದ್ಧತೆಯನ್ನಾಗಲೀ, ಸೊಬಗನ್ನಾಗಲೀ, ಮರೆಯುವುದಿಲ್ಲ. ಈ ಶಿಲ್ಪಾನುಕರಣೆಗಳನ್ನು ನಮ್ಮ ಸ್ಥಳೀಯ ಶಿಲ್ಪಿಗಳೂ, ಗಾರೆ ಕೆಲಸದವರೂ ಅನುಕರಿಸಿದ್ದರಷ್ಟೇ. ಮೈಸೂರಿನ ಕೃಷ್ಣರಾಜೇಂದ್ರ ಆಸ್ಪತ್ರೆ ಕಟ್ಟಡದಲ್ಲಿ ಶಿಲ್ಪಿಸಿರುವ ರೆಕ್ಕೆಗಳಿರುವ ಸ್ತ್ರೀ ವಿಗ್ರಹಗಳನ್ನಿಲ್ಲಿ ಉದಾಹರಿಸಬಹುದು. ಅವುಗಳ ಶೈಲಿಯಲ್ಲಿ ದೇಶೀಯ ಸೊಗಸು ಕಾಣದಿರದು. ಕರ್ನಾಟಕದಲ್ಲಿರುವ ಕೆಲವು ಸಮಕಾಲೀನ ಬೃಹತ್ ಶಿಲ್ಪಗಳನ್ನು, ಯುರೋಪಿಯನ್ ಶಿಲ್ಪಿಗಳೇ ಕಡರಿಸಿದ್ದು ಕಂಡುಬರುತ್ತದೆ. ಅವುಗಳಲ್ಲಿ ಮಾತ್ರ ಐರೋಪ್ಯ ಶೈಲಿ ಸಹಜವಾಗಿದೆ. ಬ್ರಿಟಿಷ್ ಕಮಿಷನರ್ ಆಗಿದ್ದ ಮಾರ್ಕ್ ಕಬ್ಬನ್‌ನ ಅಶ್ವಾರೋಹಿ ಕಂಚಿನ ಪ್ರತಿಮೆ (ಬೆಂಗಳೂರು), ಮೈಸೂರಿನಲ್ಲಿ ರೆಸಿಡೆಂಟ್ ಆಗಿದ್ದ ಜೇಮ್ಸ್ ಡೇವಿಡ್ಸನ್ ಗೋರ್ಡನ್ನನ ಪ್ರತಿಮೆ (ಅಠಾರಾ ಕಛೇರಿಯ ಮುಂಗಡ ಇದೆ.) ಉಲ್ಲೇಖನೀಯ. ಮೈಸೂರಿನ ಸ್ಟ್ಯಾಚ್ಯೂ ಚೌಕದ ಚಾಮರಾಜ ಒಡೆಯರ ಪ್ರತಿಮೆಯನ್ನು ಖ್ಯಾತ ಇಂಗ್ಲಿಷ್ ಶಿಲ್ಪಿ ಅನ್‌ಸ್ಲೋಫೋರ್ಡ್ ಶಿಲ್ಪಿಸಿದ್ದು ಐರೋಪ್ಯ ಶೈಲಿಯ ಶಿಲ್ಪಕಲೆಗೆ ಒಳ್ಳೆಯ ಉದಾಹರಣೆಯಾಗಿದೆ. ಮೈಸೂರಿನ ಅರಮನೆ, ಜಗನ್ಮೋಹನ ಚಿತ್ರಶಾಲೆ, ಬೆಂಗಳೂರು ವಸ್ತು ಸಂಗ್ರಹಾಲಯ

ಮುಂತಾದೆಡಗಳಲ್ಲಿರುವ ಕೆಲವು ಐರೋಪ್ಯ ಶೈಲಿಯ ಶಿಲ್ಪ, ಕಲಾಕೃತಿಗಳನ್ನು ನೋಡಬಹುದು. ಕೆತ್ತನೆಯಲ್ಲಿ ನಯಗಾರಿಕೆ, ಬೌದ್ಧಿಕ ಸೌಂದರ್ಯ, ವಸ್ತ್ರ ಒಡವೆಗಳ ಕೆತ್ತನೆಯಲ್ಲಿ ಸಹಜತೆ ಮುಂತಾದ ಲಕ್ಷಣಗಳನ್ನಿಲ್ಲಿ ಗಮನಿಸಬೇಕು. ಇವುಗಳ ಪ್ರಭಾವವನ್ನು ಸಮಕಾಲೀನ ಶಿಲ್ಪಕಲೆಯ ಮೇಲೆ ಗುರುತಿಸಬಹುದು.

## ಸ್ವಾತಂತ್ರ್ಯಾನಂತರ

ಸ್ವಾತಂತ್ರ್ಯಾನಂತರ ಭಾರತೀಯ ವಾಸ್ತುಶೈಲಿಯಲ್ಲಂತೂ ಹಾಗೆ ಕರ್ನಾಟಕದ ವಾಸ್ತುಶಿಲ್ಪದಲ್ಲಿ 'ಕರ್ನಾಟಕತ್ವ'ದ ಮೆರುಗು ಎದ್ದು ಕಾಣುವಂತಿರಬೇಕು. ಹಿಂದಿನ ಅಲಂಕರಣೆ, ಆಡಂಬರಗಳು ನಿರರ್ಥಕವೆಂಬುದನ್ನರಿತು, ಭದ್ರವಾದ ಸಿಮೆಂಟ್ ಕಾಂಕ್ರೀಟ್, ಸ್ಟೀಲ್, ಪ್ಲಾಸ್ಟಿಕ್, ಗ್ಲಾಸ್‌ಗಳ ಬಳಕೆಯಿಂದ ವಾಸ್ತುಶೈಲಿಯನ್ನೂ ಗಣನೀಯವಾಗಿ ಮಾರ್ಪಾಡುಗೊಳಿಸಬೇಕಾಗಿದೆ. ಭಾರ ಹೊರುವ ದಪ್ಪ ಗೋಡೆಗಳ ಬದಲು ಭದ್ರ ಕಾಂಕ್ರೀಟ್‌ನ ತೆಳು ಕಂಬಗಳು, ಅದರದೆ ತೊಲೆ, ಒಪ್ಪಾಗಿರುವ ಸೂರುಗಳು, ಚಜ್ಜಗಳು, ಅಗತ್ಯವಾದ ಕ್ಯಾಂಟಿಲಿವರ್, ಬಾಲ್ಕನಿ, ಕಮಾನುರಹಿತ ವಿಶಾಲವಾದ ಕಿಟಕಿ ಬಾಗಿಲುಗಳು, ಅಲಂಕರಣ ರಹಿತ ಮಟ್ಟಸ ಮುಚ್ಚಿಗೆ ಮುಂತಾದವು ಇಂದು ಆಕರ್ಷಣೀಯವಾಗಿವೆ. ನಿವೇಶನಗಳ ಅನುಕೂಲ ಅನಾನುಕೂಲ, ಅಗತ್ಯ, ಉದ್ದೇಶ, ವಾಯುಗುಣ, ಪರಿಸರಗಳನ್ನು ನೋಡಿಕೊಂಡು ಈ ದಶಕದ ತಾಂತ್ರಿಕ ಕಲಾತ್ಮಕ ವಿಧಾನಗಳನ್ನೆಲ್ಲಾ ಬಳಸಿಕೊಂಡು, ಇಂದಿನ ಜೀವನ ಸಂಕೀರ್ಣತೆಯನ್ನೂ ಪ್ರತಿಬಿಂಬಿಸುವಂತೆ ವಾಸ್ತುನಿರ್ಮಾಣ ಮಾಡುವ ಉದ್ಯಮ ಆರಂಭವಾಗಿದೆ. ವಾಸ್ತುಕೃತಿಯ ವರ್ಣ ವಿನ್ಯಾಸ, ಗೆರೆ ಗಾತ್ರಗಳತ್ತ ಗಮನ ಹರಿದಿದೆ. ಅಮೂರ್ತ ವಿಧಾನವೂ ಅಲ್ಲಲ್ಲಿ ಕಂಡುಬರುತ್ತಿದೆ. ಪದಾರ್ಥ ಚಿತ್ರಣಕ್ಕಿಂತ ಭಾವ ಚಿತ್ರಣಕ್ಕೆ ಪ್ರಾಶಸ್ತ್ಯ ನೀಡಲಾಗುತ್ತಿದೆ. ಪ್ರಕೃತಿ ಸಹಜ ಭಾವಕ್ಕಿಂತ ಅತಿ ನಾಗರಿಕತೆಯ ಭಾವಾತಿರೇಕಗಳು ಸೂಚಿತವಾಗುತ್ತಿವೆ. ಕೆಲವೊಮ್ಮೆ ಸ್ವೇಚ್ಛಾ ಸಂಕೇತ ವಿಧಾನವೂ ಇಣುಕು ಹಾಕುತ್ತಿದೆ. ಈಚೆಗೆ ಪರಿಸರ ವಾಸ್ತುಶಿಲ್ಪಕಲೆ ಪರಿಸರದ ಬೆಟ್ಟಗುಡ್ಡ, ಹಳ್ಳದಿಣ್ಣೆ, ಕಾಡುಮೇಡುಗಳಿರುವ ವಿನ್ಯಾಸಕ್ಕನುಗುಣವಾಗಿ ಬೆಳೆಯತೊಡಗಿದ್ದುಂಟು. ಅಂತೂ ಹೊಸ ಹೊಸ ಆವಿಷ್ಕಾರಗಳು, ಪ್ರಯೋಗಗಳು ನಡೆಯುತ್ತಿವೆ. ಒಂದೆಡೆ ಸಮಕಾಲೀನ ವಿಚಾರ, ಆದರ್ಶ, ಬುದ್ಧಿಭಾವಗಳ ಪ್ರತಿಬಿಂಬ ವಾಸ್ತುಕಲೆಯಲ್ಲಿ ವ್ಯಕ್ತಪಡಿಸಬೇಕೆಂಬ ಹಂಬಲ, ಇನ್ನೊಂದೆಡೆ ನಮ್ಮ ನಾಡಿನ ಪರಂಪರೆಯನ್ನೂ, ಪ್ರತಿನಿಧೀಕರಿಸುವ ನಮ್ಮದೇ ಆದ ಶೈಲಿಯನ್ನೂ ಸೃಷ್ಟಿಸಿಕೊಳ್ಳಬೇಕೆಂಬ ಕಾತರ ಒಟ್ಟೊಟ್ಟಿಗೆ ಸಾಗಿದೆ. "ಕರ್ನಾಟಕ ಶೈಲಿ" ಎಂದು ಹೆಸರಾದ ಹೊಯ್ಸಳ ಶೈಲಿಯ ಕುಸುರಿ ಕೆಲಸದ ಸೊಬಗು ಇಂದಿಗೂ ಮಲೆನಾಡ ಗುಡಿಕಾರರ ಕಲೆಯಲ್ಲಿ ಜೀವಂತವಾಗಿ ಮುನ್ನಡೆದಿದೆ. ಅದೇ ರೀತಿಯಾಗಿ ಆಳಿದ ಮಹಾರಾಜರು ಈಗಿನ ಮೈಸೂರು ಅರಮನೆಯನ್ನು ನಿರ್ಮಿಸುವಾಗ ಜಗತ್ತಿನ ವಾಸ್ತುಶೈಲಿಗಳ ಉತ್ತಮ ಅಂಶಗಳನ್ನೂ ಹೊಂದಿಸಿಕೊಂಡು ರಮಣೀಯವಾಗಿ ಕಟ್ಟಿಸಿದರು. ಕೆ. ಹನುಮಂತಯ್ಯನವರು ಈ ಬಗೆಯ ಪ್ರಯತ್ನವನ್ನು, ವಿಧಾನ ಸೌಧದ ನಿರ್ಮಾಣದಲ್ಲಿ ಮಾಡಿದರು. ಹಲವು ಶೈಲಿಗಳ ಸಮನ್ವಯವನ್ನಲ್ಲಿ ನೋಡಬಹುದು. ಇದೇ ರೀತಿಯ ಪ್ರಯತ್ನಗಳನ್ನು ಕೆಲವು ಖಾಸಗಿ ಮನೆಗಳ ವಾಸ್ತುಶಿಲ್ಪದಲ್ಲೂ ನೋಡಬಹುದಾಗಿದೆ. ಬೆಂಗಳೂರಿನ ಜಯನಗರದಲ್ಲಿರುವ ಡಾಕ್ಟರ್ ಎಸ್. ಆರ್. ರಾವ್‌ರವರ ಮನೆಯ ಹೊರಾವರಣವನ್ನು ಪ್ರಾಚೀನ ಕರ್ನಾಟಕದ ವಾಸ್ತುಶೈಲಿಗಳನ್ನು, ಅದರಲ್ಲೂ ಬಾದಾಮಿ, ಚಾಲುಕ್ಯ ಶೈಲಿಯನ್ನು ಅಳವಡಿಸಿ ಕೆಂಪು ಕಲ್ಲಿನಿಂದ ಕಟ್ಟಲಾಗಿದೆ. ಇದೇ ರೀತಿ ಮಹಾಬೋಧಿ ಸೊಸೈಟಿ ಕಟ್ಟಡ, ಚೌಡಯ್ಯ ಸ್ಮಾರಕ ಭವನ ಮುಂತಾದ ಕಟ್ಟಡಗಳಲ್ಲಿ ದೇಶೀಯ ಶೈಲಿಯ ಸೊಗಡು ಕಾಣುತ್ತದೆ: ವಾಸ್ತುಶಿಲ್ಪ ಅಲಂಕರಣೆಯಲ್ಲಿ ನಮ್ಮ ನೆಲದ ಜಾನಪದ ಕಲೆ, ಹಾಗೂ ಕರಕುಶಲ ಕಲೆಗಳಲ್ಲಿ ಕಾಣುವ ವಿನ್ಯಾಸ ಮೂಡತೊಡಗಿದೆ. ಇದು ಶುಭ ಸೂಚನೆ. ಇದು ಸಾಕಷ್ಟು ಪ್ರಮಾಣದಲ್ಲಿ ಬೆಳೆಯಬೇಕು. ಮುಂದುವರಿದ ತಂತ್ರಜ್ಞಾನದ, ಇಂದಿನ ಮಾನವತಾ ಆದರ್ಶಗಳೇ ಮುಂತಾದ ಹೊಸ ಶೈಲಿಯನ್ನು ಸೃಷ್ಟಿಸುವಂಥ ಪ್ರತಿಭಾವಂತ ಸ್ಥಪತಿಗಳಿಗೆ ಈ ನಾಡಿನಲ್ಲಿ ಕೊರತೆಯಿಲ್ಲ. ಸದವಕಾಶ, ಪ್ರೋತ್ಸಾಹದ ಅಗತ್ಯವಿದೆ. ನಮ್ಮ ಕಲಾ ಭವನಗಳು, ಪ್ರವಾಸಿ ಮಂದಿರಗಳು, ಸರ್ಕಾರಿ ಕಟ್ಟಡಗಳು, ವಿಶ್ವವಿದ್ಯಾನಿಲಯಗಳು, ಶಾಲಾ ಕಾಲೇಜುಗಳು, ಹೋಟೇಲುಗಳು, ಮುಂತಾದವು ಈ ಆಶೋತ್ತರಗಳನ್ನು ಮೈಗೂಡಿಸಿಕೊಂಡು ಈ ನಾಡಿನ ಭವ್ಯ ವಾಸ್ತುಕೃತಿಗಳಾಗಿ ತಲೆಯೆತ್ತಿ ಮೆರೆಯುವ ಕಾಲ ದೂರವಿಲ್ಲ.

# ಕರ್ನಾಟಕದ ಕೋಟೆಗಳು

ಡಾ. ಎಸ್. ಕೆ. ಜೋಶಿ

ಕ್ರಿ.ಶ. ೨ನೆಯ ಶತಮಾನದಿಂದ ೧೮ನೆಯ ಶತಮಾನದ ವರೆಗಿನ ಸುದೀರ್ಘ ಕಾಲದಲ್ಲಿ ಕನ್ನಡ ನೆಲದಲ್ಲಿ, ಶಾತವಾಹನ ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಕಲ್ಯಾಣ ಚಾಲುಕ್ಯ, ಗಂಗ, ವಿಜಯನಗರ, ಬರೀದಶಾಹಿ ಬಹುಮನಿ, ಆದಿಲ್‌ಶಾಹಿ, ಹೈದರ್ – ಟಿಪ್ಪು ಮೊದಲಾದ ಅರಸು ಮನೆತನಗಳು ಆಳಿವೆ.

ಕನ್ನಡ ನೆಲದ ಜನ ಶಾಕ್ತರು, ಶಕ್ತಿಆರಾಧಕರು, ಅಸಾಮಾನ್ಯ ಯೋಧರು. "ಶೂರಭಟಾಃ ಕರ್ನಾಟಾಃ", ಎಂದು ಉತ್ತರ ಭಾರತದಲ್ಲಿ ಮೌರ್ಯರ ಕಾಲದಿಂದಲೂ ಪ್ರಸಿದ್ಧಿ ಪಡೆದ ವಿವರ ಪ್ರಾಚೀನ ಮಿಥಿಲಾ ಸಾಹಿತ್ಯದಲ್ಲಿ ಕಾಣಸಿಗುತ್ತದೆ. ಕ್ಷತ್ರಿಯರಿಂದ ಅವಮಾನಿತನಾದ ಮಯೂರಶರ್ಮ, ತನ್ನ ಬ್ರಾಹ್ಮಣ ವೃತ್ತಿಯನ್ನು ತ್ಯಜಿಸಿ, ಕದಂಬ ಕುಲವನ್ನು ಸ್ಥಾಪಿಸಿದನೆಂದು 'ತಾಳಗುಂದ' ಶಾಸನ ಹೇಳುತ್ತದೆ. ಹುಯನ್‌ತ್ಸಾಂಗನೂ ಕನ್ನಡಿಗರನ್ನು ಹೊಗಳುತ್ತ, ಅವರಿಗೆ ಅಪಮಾನವಾದರೆ, ಪ್ರಾಣಹೋದರೂ ಸರಿಯೇ, ಸೇಡನ್ನು ತೀರಿಸಿಕೊಳ್ಳದೆ ಬಿಡರೆಂದೂ, ಶತ್ರುವಿಗೆ ಎಚ್ಚರಿಕೆ ಕೊಟ್ಟು ಇರಿಯುವರೆಂದೂ, ಸೋತು ಬಂದ ದಳಪತಿಗೆ ಸ್ತ್ರೀಯರ ವೇಷಭೂಷಣಗಳನ್ನು ಹಾಕಿ, ಅವನು ಅಪಮಾನದಿಂದ ಸಾಯುವಂತೆ ಮಾಡುತ್ತಾರೆ ಎಂದೂ ಹೇಳುತ್ತಾನೆ. ಪುಲಕೇಶಿಯ ಯುದ್ಧಾಶ್ವಗಳು, ನರ್ಮದೆಯ ಶೀತಲ ಜಲವನ್ನು ಕುಡಿದು ಬಂದಿವೆ. ರಾಷ್ಟ್ರಕೂಟರ ಯೋಧರು ಗಂಗಾತಟಾಕದಲ್ಲಿ ಯುದ್ಧ ಶಿಬಿರ ಬಿಟ್ಟ ವಿಷಯವೂ ವಿದಿತವಾಗಿದೆ. ಬಂಗಾಲದ ದೊರೆಗಳು ಕರ್ನಾಟಕದ ಸೈನಿಕರನ್ನು ಕರೆಯಿಸಿಕೊಂಡು, ತಮ್ಮ ಸೈನ್ಯವನ್ನು ಬಲಯುತವನ್ನಾಗಿ ಮಾಡುತ್ತಿದ್ದರು. ರಾಜಶೇಖರ ತನ್ನ "ವಿದ್ಧಶಾಲ ಭಂಜಿಕಾ"ದಲ್ಲಿ ಕನ್ನಡಿಗರನ್ನು ಹೀಗೆ ವರ್ಣಿಸಿದ್ದಾನೆ:

"ಸಮರ ಕರ್ಮಾಣಿ ನಿಸರ್ಗೋದ್ಭಟಾಃ ಏವ ಕರ್ನಾಟಾಃ" ೧

ಬಾದಾಮಿಯ ವೀರ ಯೋಧ ಪುಲಕೇಶಿಯನ್ನು ಸ್ಮರಿಸಿ (ಕ್ರಿ. ಶ. ೮ನೆಯ ಶತಮಾನ) ಕಪ್ಪೆ ಅರಭಟ್ಟನು

"ಸಾಧುಗೆ ಸಾಧು ಮಾ
ಧುರ್ಯಂಗೆ ಮಾಧುರ್ಯಂ
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್" ೨

ಎಂದು ಅವನ ಧೀರೋದಾತ್ತ ಗುಣವನ್ನು ಎತ್ತಿ ತೋರಿಸಿದ್ದಾನೆ. ಅಂತಾಗಿ ಕನ್ನಡಿಗರು "ಚಾಗದ ಭೋಗದ ಮಾನಸರ್" ಆಗಿದ್ದಾರೆ. ಶಕ್ತಿ ಪೂಜಕರಾದ ಕನ್ನಡಿಗರು, ಅದಾಗಿ, ದುರ್ಗಹೀನರಾಗದೆ, ದುರ್ಗಗಳನ್ನು ಕಟ್ಟಿ, ಅವುಗಳಿಗೆ ಶಕ್ತಿರೂಪಿಣಿಯಾದ 'ದುರ್ಗ' ಎಂದೂ ಕರೆದರು. ಸಾಮ್ರಾಜ್ಯ ಕಟ್ಟುವ ಹೊಣೆಯು ಹೆಗಲೇರಿದಾಗ, ಅವುಗಳ ಸೀಮೆಗಳ ಒಳ ಹಾಗೂ ಹೊರ ಪ್ರದೇಶಗಳಲ್ಲಿ ಕೋಟೆಗಳನ್ನು ಕಟ್ಟುವ ಭಾರ ಕನ್ನಡನಾಡ ಪ್ರಜಾಪತಿಗಳ ಮೇಲೆ ಬಿದ್ದಿತು.

ಸುತ್ತಲಿನ ಭೌಗೋಲಿಕ ಪರಿಸರ, ಮಾನವನ ನಾಗರಿಕತೆ ಹಾಗೂ ಸಂಸ್ಕೃತಿಗಳ ಮೇಲೆ ಸಾಕಷ್ಟು ಪರಿಣಾಮ ಬೀರುತ್ತದೆಂಬುದು ಸರ್ವವಿದಿತ. ಭೌಗೋಳಿಕವಾಗಿ, ಕರ್ನಾಟಕ ಪಶ್ಚಿಮದ ಕಡಲತೀರದಿಂದ, ಪೂರ್ವಕ್ಕೆ ಏರುತ್ತ ಹೋದ ಎತ್ತರದ ಸಹ್ಯಾದ್ರಿಯನ್ನು ಕ್ರಮಿಸಿ, ನಂತರ ಬೆಳವಲದ ಬಯಲಲ್ಲಿ ವಿಸ್ತಾರಗೊಂಡಿದೆ. ಹೀಗಾಗಿ ಪ್ರಾಕೃತಿಕವಾಗಿ ಮೂರು ಪಟ್ಟಿಗಳನ್ನು ಹೊಂದಿದ ಕರ್ನಾಟಕದಲ್ಲಿ, 'ಜಲದುರ್ಗ', ಗಿರಿದುರ್ಗ. ವನದುರ್ಗ ಹಾಗೂ ಸ್ಥಲದುರ್ಗಗಳೆಂಬ ಚತುರ್ವಿಧಕೋಟೆಗಳನ್ನು ಕಾಣಬಹುದು. ಪಶ್ಚಿಮದ ಕರಾವಳಿ ಜಲದುರ್ಗಗಳಿಗೆ ಸ್ಥಾನವಾದರೆ, ಸಹ್ಯಾದ್ರಿಯ ಬೆಟ್ಟಗಳಲ್ಲಿ ಗಿರಿದುರ್ಗ ಹಾಗೂ ವನದುರ್ಗಗಳಿಗೆ ಅವಕಾಶ. ಪೂರ್ವದ ಬೆಳವಲನಾಡು ಸ್ಥಲದುರ್ಗಗಳ ಎಡೆ. ಹೀಗಾಗಿ ಕನ್ನಡದ ಅರಸರು, ಕೋಟೆಗಳ ನಿರ್ಮಾಣದ ಸ್ಥಳಗಳ ಆಯ್ಕೆಯಲ್ಲಿ ದುರ್ಗ ಅಭಿಯಾಂತ್ರಿಕತೆಯ ನಿಯಮಗಳಂತೆ, ಕೌಟಿಲ್ಯನ 'ಅರ್ಥಶಾಸ್ತ್ರ'ದಲ್ಲಿ ನಮೂದಿಸಿದಂತೆ, ಅನೂಚಾನವಾಗಿ, ನೀತಿಗಳನ್ನು ಅನುಸರಿಸುತ್ತ ಬಂದಿದ್ದಾರೆ. ಅಲ್ಲದೇ, 'ಶುಕ್ರನೀತಿ' ಸಾರ ಹೇಳುವಂತೆ, "ಅನೇಕ ರೀತಿಯ ಗಿಡಮರಗಳ ಪೊದರುಗಳಿಂದ ಕೂಡಿದ, ದನಕರುಗಳು, ಹಕ್ಕಿಗಳು, ಇತರ ಪ್ರಾಣಿಗಳಿಂದ ಸಮೃದ್ಧವಾಗಿರುವ, ಒಳ್ಳೆಯ ಜಲಾಶಯಗಳಿರುವ, ಧಾನ್ಯ ಸಮೃದ್ಧಿಯಿರುವ, ಬೆಟ್ಟ ನೀರುಗಳಿಂದ ಆವೃತವಾಗಿರುವ ಪ್ರದೇಶದಲ್ಲಿ ಕೋಟೆಗಳನ್ನು ಕಟ್ಟಬೇಕು," ಎಂಬ ನಿಯಮಕ್ಕನುಸಾರವಾಗಿ, ಕರ್ನಾಟಕದ ಕೋಟೆಗಳೂ ಕಟ್ಟಲ್ಪಟ್ಟಿವೆ.

ಪ್ರಪ್ರಥಮವಾಗಿ, ಕನ್ನಡ ನೆಲದಲ್ಲಿ, ಕೋಟೆ ನಿರ್ಮಾಣ ಕಾರ್ಯ ಶಾತವಾಹನರಿಂದ ಕ್ರಿ. ಶ. ೨ನೆಯ ಶತಮಾನದಿಂದ ೩–೪ನೆಯ ಶತಮಾನಗಳ ವರೆಗೆ ಪ್ರಾರಂಭವಾಗಿರಬೇಕು. ಅವರ ರಕ್ಷಣಾ ವಾಸ್ತುಶಿಲ್ಪದಲ್ಲಿ ನಿರ್ದಿಷ್ಟಪಡಿಸಿದ ಆಕಾರದ ಇಟ್ಟಿಗೆಗಳು (೫೦ ಸೆ. ಮೀ.×೧೦ ಸೆ. ಮೀ.) ಕೋಟೆ ನಿರ್ಮಾ

೧. ಡಾ. ಎಂ. ಚಿದಾನಂದ ಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ. ಪುಟ ೨೪೫.

೨. ಕಪ್ಪೆ ಅರಭಟ್ಟನ ಬಾದಾಮಿಯ ಶಿಲಾಶಾಸನ, ಕರ್ನಾಟಕ ಇನ್‌ಸ್ಕ್ರಿಪ್ಶನ್ಸ್, ಧಾರವಾಡ.

ಣದ ಸಾಧನಗಳಾದವು. ಗೋದಾವರಿ ದಡದ ಪ್ರತಿಷ್ಠಾನಪುರ (ಪೈಠಣ), ಮಂಗಳವೀಡು, (ಇವೆರಡೂ ಈಗ ಮಹಾರಾಷ್ಟ್ರದಲ್ಲಿವೆ) ಸನ್ನತಿ, ಮಾನ್ಯಖೇಟ, ಆರ್ಯಪುರ (ಐಹೊಳೆ), ಬನವಾಸಿ, ವಡಗಾಂವ್–ಮಾಧವಪುರ, ಚಂದ್ರವಳ್ಳಿ ಬ್ರಹ್ಮಗಿರಿ, ಮುಂತಾದ ಶಾತವಾಹನರ ಕರ್ಮಭೂಮಿಗಳಲ್ಲಿ ಅವರಾಗಿಯೇ ಪೂರ್ತಿಯಾಗಿ ನಿರ್ಮಿಸಿದ ಕೋಟೆಗಳು ಇದ್ದುವೆಂದು ಯಾವ ಆಧಾರಗಳೂ ದೊರೆಯದಿದ್ದರೂ, ಮುಂಚೂಣಿ ಸ್ಥಳಗಳಲ್ಲಿ ರಕ್ಷಕ ಗೋಡೆಗಳು ಇದ್ದಿರಬಹುದು ಎಂದು ಇತ್ತಿತ್ತಲಾಗಿ ಕಾಣಸಿಗುವ ಬಡಕಲು ಗೋಡೆ (ಚಂಕ್ಸ್ ಆಫ್ ಪೋರ್ಟ್‌ವಾಲ್) ಗಳ ಸ್ತರಗಳ ಅವಶೇಷಗಳಿಂದ ತರ್ಕಿಸಬಹುದು. ೩.

ಕರ್ನಾಟಕದ ಕೋಟೆಗಳ ನಿರ್ಮಾಣದ ಕಾಲದ ಎರಡನೆಯ ಹಂತವನ್ನು ಕದಂಬರ ಕಾಲಕ್ಕೆ ಜೋಡಿಸಬಹುದು. ಮಯೂರಶರ್ಮನಿಂದ ಸ್ಥಾಪಿತವಾದ ಕದಂಬ ಕನ್ನಡಿಗ ಪ್ರಥಮ ಸಾಮ್ರಾಜ್ಯ ವನಪ್ರದೇಶವಾದ ಪಶ್ಚಿಮ ಘಟ್ಟದ ಮಲೆನಾಡು ಪ್ರದೇಶದಲ್ಲಿ ವನದುರ್ಗ, ಗಿರಿದುರ್ಗ ಹಾಗೂ ಜಲದುರ್ಗಗಳ ನಿರ್ಮಾಣಕ್ಕೆ ಎಡೆಗೊಟ್ಟಿತು. ಬನವಾಸಿ, ಸ್ವಾದಿ, ಶಿರಸಿ, ಹಾನಗಲ್, ತಿಳವಳ್ಳಿ, ಬಮ್ಮನಹಳ್ಳಿ, ಬೀಳಗಿ, ಭಟ್ಕಳ್, ಗೆರಸೊಪ್ಪ, ಹಳಿಯಾಳ್, ಬಂಕಾಪುರ, ಮಂಗಳೂರು, ತಾಳಗುಂದ, ಸೊರಬ, ಸದಾಶಿವಗಡ, ಮೀರ್‌ಜಾನ್‌ಕೋಟೆ, ಚಾಂದೂರ್ (ಗೋವಾ) ಬೆಲಗ್ರಾಮ್, ಇಕ್ಕೇರಿ, ರತ್ನಗಿರಿ ಮೊದಲಾದ ಕದಂಬ ನಾಡಿನ ಕೋಟೆಗಳನ್ನು ಹೆಸರಿಸಬಹುದು. ಇವುಗಳಲ್ಲಿ, ರಕ್ಷಣಾವಾಸ್ತುಶಿಲ್ಪದಲ್ಲಿ, ತದನಂತರ ಬಂದ ಶತಮಾನಗಳಲ್ಲಿ ವೃದ್ಧಿಗೊಂಡ ರಕ್ಷಣಾಕ್ರಮಗಳ ಪ್ರಕಾರವಾಗಿ, ಮೂಲವನ್ನು ಮಸುಕಿಸುವಂಥ ಮಾರ್ಪಾಡುಗಳಾಗಿವೆ. ಪಶ್ಚಿಮ ಘಟ್ಟದ ಪ್ರದೇಶದಲ್ಲಿ ದೊರೆಯುವ ಕೆಂಗರಸುಗಲ್ಲುಗಳು ಗೋಡೆಗಳ, ಪುಲಿಮೊಗಗಳ. ಆಳ್ವೇರಿಗಳ, ಮೇಲಟ್ಟಣೆಗಳ, ಅಗಳುಗಳ ಸ್ತರಗಳಲ್ಲಿ ಸಾಧನ ಸಲಕರಣೆಗಳಾಗಿ ಉಪಯೋಗಿಸಲ್ಪಟ್ಟಿವೆ. ಅರಣ್ಯಗಳಲ್ಲಿ ದೊರೆಯುವ ಮರಗಳ ದಿಮ್ಮಿಗಳು, ಮಣ್ಣಿನ ಎತ್ತರವಾದ ದಿಬ್ಬಗಳು, ಅವುಗಳ ಮೇಲೆ ಬೆಳೆಸಿದ ಅಭೇದ್ಯವಾದ ಗಗನಚುಂಬೀ ವೃಕ್ಷಗಳು, ರಕ್ಷಕಗೋಡೆಗಳಲ್ಲಿ ಮಹತ್ತರ ಪಾತ್ರವಹಿಸಿದ್ದುವು. ಸಾಧನ ಸಲಕರಣೆಗಳ ಪಾರ್ಶ್ವದಲ್ಲಿ, ಇಂಥ ಈ ಕೋಟೆಗಳಿಗೆ 'ಮೃದ್‌ದುರ್ಗ' (ಮಡ್‌ಫೋರ್ಟ್ಸ್)ಗಳೆಂದು ಹೆಸರಿಸಲಾಗಿದೆ. ದಕ್ಷಿಣ ಭಾರತದ 'ಮೃದ್‌ದುರ್ಗ'ಗಳಲ್ಲಿ ಬನವಾಸಿಯ ಕದಂಬ ನಿರ್ಮಿತ ಕೋಟೆಯದು ಪ್ರಪ್ರಥಮ ಶ್ರೇಣಿ.

ತದನಂತರ ಕನ್ನಡನಾಡಿನ ಕೋಟೆಗಳಲ್ಲಿ ಅತಿ ಪ್ರಾಚೀನವಾಗಿದ್ದು, ಶಿಲಾಶಾಸನಗಳ ಮೂಲಕ ಕಾಲ ನಿರ್ಧರಿಸಲ್ಪಟ್ಟ ಕೋಟೆ ಎಂದರೆ ಬಾದಾಮಿಯ ಮೊದಲನೆಯ ಪುಲಕೇಶಿಯದು. ಕ್ರಿ. ಶ. ೫೪೩.

ಸ್ವಸ್ತಿ ಶಕವರ್ಷೇಷು ಚತುಶ್ಶತೇಷು ಪಂಚ
ಷಷ್ಟಿಯುತೇಷು'
ಹಿರಣ್ಯಗರ್ಭ ಸಂಭೂತಶ್ಚಲಿಕ್ಯೋ ವಲ್ಲಭೇಶ್ವರಃ
ಧರಾಧರೇಂದ್ರ ವಾತಾಪಿಮಜೇಯಂ ಭೂತಯೇ
ಭುವಃ
ಅಧಸ್ತಾತುಪರಿಷ್ಟಾಚ್ಚ ದುರ್ಗಮೇತದ ಚೀಕರತ್ಳ

ಕೋಟೆಯ ಕರ್ತೃ ಪುಲಕೇಶಿಯೇ ಹೇಳುವಂತೆ ಅದನ್ನು ಕಟ್ಟಿಲು ಗುಡ್ಡದ ಮಧ್ಯಭಾಗದ ಸ್ಥಳದಲ್ಲಿ ಆಯ್ಕೆ ಮಾಡಿ ನಡುಪಟ್ಟಿಯಂತೆ ಕಟ್ಟಲಾಯಿತೆಂದು ಸ್ಪಷ್ಟ ಪಡಿಸಲಾಗಿದೆ. ಇಂಥ ನಡುಪಟ್ಟಿಯಂತೆ ಇರುವ ತೂಗು ಕೋಟೆಗಳು ಬಹಳ ವಿರಳ. ಸಾಮ್ರಾಜ್ಯದ ಕಲ್ಪನೆಯ ಅರುಣೋದಯದಲ್ಲಿ, ರಾಜಕೀಯ ಅಪಕ್ವತೆಯ ಕಾಲದಲ್ಲಿ, ಬಾದಾಮಿಯ ಚಾಲುಕ್ಯರು (ಕ್ರಿ. ಶ. ಸುಮಾರು ೫೪೦ರಿಂದ ೭೫೦ರ ವರೆಗೆ), ಈ ತರಹದ ಅಜೇಯವಾದ ಹಾಗೂ ಅಭೇದ್ಯವಾದ ಕೋಟೆಯನ್ನು ನಿರ್ಮಿಸಿದರು. ಕಲ್ಲಿನಿಂದ ನಿರ್ಮಾಣವಾದ ಈ ಕೋಟೆಯು ಮಾನಸಾರನ 'ಖರ್ವಟ' ಕೋಟೆಯ ವಿನ್ಯಾಸವುಳ್ಳದ್ದಾಗಿದೆ. ಬಯಲು ನಾಡಿನಲ್ಲಿ ಇದೊಂದು ಅಮೂಲ್ಯ ಗಿರಿದುರ್ಗ. ಐಹೊಳೆ, ಪಟ್ಟದಕಲ್ಲು, ಬಾದಾಮಿಗಳ ಹೊರತಾಗಿ, ಬಾದಾಮಿ ಚಾಲುಕ್ಯರವು ಎಂದು ನಿರ್ದಿಷ್ಟವಾಗಿ ಹೇಳಬಹುದಾದ ಕೋಟೆಗಳು ಮತ್ತೆಲ್ಲೂ ಕಾಣಸಿಗವು. ಇದಕ್ಕೆ ಎರಡು ಸ್ಪಷ್ಟ ಕಾರಣಗಳನ್ನು ಕೊಡಬಹುದು: ೧ ದಕ್ಷಿಣದ ಪಲ್ಲವರೊಡನೆ ನಡೆಸಿದ ಅವಿಶ್ರಾಂತ ಹೋರಾಟದಲ್ಲಿ ನಾಡರಕ್ಷಣೆಗಾಗಿ, ಕೋಟೆಗಳ ನಿರ್ಮಾಣ ದೃಷ್ಟಿಯಿಂದ, ಅಲಕ್ಷ್ಯ. ೨. ಬಯಲು ಸೀಮೆಯಲ್ಲಿ ರಕ್ಷಣಾ ಅಭಿಯಾಂತ್ರಿಕತೆಗೆ ಅಗತ್ಯವಾದ ಸಾಧನ ಸೌಕರ್ಯಗಳ ಅಭಾವ.

ಕರ್ನಾಟಕದ ಕೋಟೆಗಳ ನಿರ್ಮಾಣದ ನಾಲ್ಕನೆಯ ಹಂತವನ್ನು ಗಂಗ, ರಾಷ್ಟ್ರಕೂಟ, ಕಲ್ಯಾಣಚಾಲುಕ್ಯ, ಹೊಯ್ಸಳರ ಕಾಲಗಳಲ್ಲಿ ಅಂದರೆ ೮ನೆಯ ಶತಮಾನದಿಂದ ೧೨ನೆಯ ಶತಮಾನದ ವರೆಗೆ ಕಾಣಬಹುದು. ಈ ಸಮಯದಲ್ಲಿ, ದೊರೆಯುವ ಕೋಟೆಗಳ ಸಂಖ್ಯೆ ಹೆಚ್ಚು. ತಲಕಾಡು, ಮಾನ್ಯಖೇಟ, ಮಂಗಳವೇಢೆ, ಸೊನ್ನಲಾಪುರ (ಮಹಾರಾಷ್ಟ್ರದಲ್ಲಿ ಈಗ), ಕಲ್ಯಾಣ, ಬೀದರ, ಕಲಬುರ್ಗಿ, ರಾಯಚೂರು, ದೇವದುರ್ಗ, ಜಲದುರ್ಗ, ನೊಳಂಬವಾಡಿ, ದ್ವಾರಸಮುದ್ರ, ಶಹಪುರ, ಯಾದಗಿರಿ, ಕೊಪ್ಪಳ, ಮುದಗಲ್ಲ, ಬಾಗೆವಾಡಿ, ಮುತ್ತಗಿ, ಕುಕನೂರು, ಮುಸುಂಡಿ, (ಮಸ್ಕಿ), ಸಿಂದನೂರು, ಮಾನ್ವಿ, ಕೆಂಭಾವಿ, ಮೇಡಕ್, ಕಳ್ಳೂರ, ಹಳ್ಳಿಗುಡಿ, ಲಿಂಗನೂರು, ಕೋಡೇಕಲ್, ಅಣ್ಣಿಗೇರಿ, ಹುಬ್ಬಳ್ಳಿ, ಉಣಕಲ್, ಧಾರವಾಡ, ನರಗುಂದ, ನವಲಗುಂದ, ಮುಂಡರಗಿ, ಡಂಬಳ, ಲಕ್ಕುಂಡಿ ಬೇಲೂರು, ಅರಸೀಕೆರೆ, ಬೆಳವಡಿ, ಹಳೆಬೀಡು, ಬೇಲೂರು, ಹುಲಿಕೆರೆ, ಕೊರಮಂಗಲ, ನುಗ್ಗಿಹಳ್ಳಿ,ಚನ್ನರಾಯ ಪಟ್ಟಣ. ಶ್ರವಣ ಬೆಳಗೊಳ, ಮೊಸಳೆ, ಹೊಳೆನರಸಿಪುರ, ಮುಳ್ಳೂರು, ಕಂಬದಹಳ್ಳಿ, ನಾಗಮಂಡಲ, ಬಸರೊಳೆ, ಮೇಲ್‌ಕೋಟೆ, ಹೊಸಹೊಳಲು, ತೊಣ್ಣೂರು, ಶ್ರೀರಂಗ ಪಟ್ಟಣ, ಸೋಮನಾಥಪುರ, ಕೊಳ್ಳೆಗಾಲ, ನರಸಿಮಂಗಲ, ಗುಂಡ್ಲುಪೇಟೆ, ನಂಜನಗೂಡು, ಬೆಟ್ಟದಪುರ, ಮಡಿಕೇರಿ, ದೊಡ್ಡಮಲತೆ, ಬೆಳತಂಗಡಿ, ಬಂಟವಾಳ್, ಮೂಡಬಿದ್ರೆ, ಮುಲ್ಕಿ, ಕಾರ್ಕಳ, ಹಿರಿಯಂಗಡಿ, ಬರ್ಕಾಪುರ, ಚಿಕ್ಕಮಗಳೂರು, ಹಿರೇಮಗಳೂರು, ಶೃಂಗೇರಿ, ಮಳಗಿ, ನರಸರಾಜಪುರ, ಅಮೃತಾಪುರ, ಕೂಡ್ಲಿ, ಚನ್ನಗಿರಿ, ಹೊದಿಗೆರೆ, ಸಂತೆಬೆನ್ನೂರು, ಹೊನ್ನಾಳಿ, ಕವಲೇದುರ್ಗ, ನಗರ, ಬಸವನಬಾನೆ, ಹುಮಚಾ, ಇಕ್ಕೇರಿ, ಕೆಳದಿ, ನಾಡಕಳಸಿ, ಬೇಡಕಣಿ, ಕುಪ್ಪಗಡ್ಡೆ, ತಾಳಗುಪ್ಪ, ಬೆಳವಿಗಿ, ಮಳವಳ್ಳಿ, ಚಂದಳಿಕೆ, ಚಂದ್ರಗುತ್ತಿ, ತುಬಟ್ಟೂರು, ಚಿತ್ರದುರ್ಗ, ಕುರುವತ್ತಿ, ನೀಲಗುಂದ, ಮಾಗಲ, ರಂಗಾಪುರ, ಬಾಗಳಿ, ಹಿರೇಹಡಗಲಿ, ಹೂವಿನಹಡಗಲಿ, ಹಲವಾಗಲು, ಮೊಳಕಾಲ್ಮೂರು, ಬಳ್ಳಾರಿ, ರಾಯಚೂರು, ಇಟಗಿ, ಮಧುಗಿರಿ.

೩. ಡಾ. ಎಸ್. ಕೆ. ಜೋಶಿ, ಡಿಫನ್ಸ್ ಆರ್ಕಿಟೆಕ್ಚರ್ ಇನ್ ಅರ್ಲಿ ನಾರ್ತ್ ಕರ್ನಾಟಕ. ಡಾಕ್ಟರೇಟ್ ಮಹಾಪ್ರಬಂಧ. ಪುಟ ೨೯.

೪. ಡಾ. ಆರ್. ಎಸ್. ಪಂಚಮುಖಿ. ಡೈಜೆಸ್ಟ್ ಆಫ್ ಆನ್ಯುಅಲ್ ರಿಪೋರ್ಟ್ ಆನ್ ಕನ್ನಡ ರಿಸರ್ಚ್. ೧೯೪೦–೪೧.

ನಾಗಲಾಪುರ, ಮಾಗಡಿ, ಸಾವನದುರ್ಗ, ಹೊಸಕೋಟೆ, ದೇವನಹಳ್ಳಿ, ಕೋಲಾರ, ಆವಣಿ, ಬುದಿಕೋಟೆ, ಮುಳಬಾಗಿಲು, ಮುಂತಾದವುಗಳ ಕೋಟೆಗಳು ಈ ಹಂತದವು. ಈ ಹಂತದ ವರೆಗೆ ರಚನಾಕ್ರಮ, ವಿನ್ಯಾಸ, ಹಾಗೂ ಆವಶ್ಯಕತೆಗಳಲ್ಲಿ ಹಿಂದೂ ರೀತಿಯಾಗಿದ್ದು ಇವನ್ನು ಹಿಂದೂವಾಸ್ತುವಿನ ಕೋಟೆಗಳೆಂದು (ಫೋರ್ಟ್ಸ್ ಆಫ್ ಹಿಂದೂ ಆರ್ಡರ್) ಕರೆಯಬಹುದು. ಈ ಪ್ರಾಚೀನಯುಗದ ಕೊನೆ ಹಾಗೂ ಮಧ್ಯಯುಗದ ಆರಂಭದ ಸಂಧಿಕಾಲದಲ್ಲಿ, ಯುದ್ಧಕಲೆಯಲ್ಲಿ ಪ್ರಗತಿ ಹಾಗೂ ಪ್ರೌಢಿಮೆಗಳು ಬೆಳೆದು, ಶಸ್ತ್ರಾಸ್ತ್ರಗಳಲ್ಲಿ ಮಾರ್ಪಾಡಾಗಿ, ಕೋಟೆಗಳ ನಿರ್ಮಾಣ ವಿಧಿಯಲ್ಲೂ ಬದಲಾವಣೆಯಾದುದು ಕಂಡುಬರುವುದು. ಸಬಳ, ಶಲ್ಯ, ಭಲ್ಯ, ಶೂಲ, ಕೋತ, ಕಾರ್ಕಡೆ, ಕಣೆಯ, ಪರಿಘ, ಮುಸಲ, ತೀರಿಕೆ, ಜಟ್ಟಿಕೆ, ಭಂಡಿವಾಳ, ಈಟಿ, ಪಂಚಾಯುಧ, ಓಡಿಕುತ್ತು, ತೋಮರ, ಮುಸುಂಡೀ (೫) ಮೊದಲಾದ ತೀವ್ರವಾಗಿ ದೂರದ ವರೆಗೆ ಚಲಿಸುವ ಆಯುಧಗಳು ಬಳಕೆಯಲ್ಲಿ ವಿಪುಲವಾಗಿ ಬಂದುದರಿಂದ ದುರ್ಗವಿನ್ಯಾಸದಲ್ಲಿ ಗೋಡೆಗಳ ಎತ್ತರ ಬೆಳೆಯಿತು. ಮೇಲಿಟ್ಟಣೆಗಳು, ತೆನೆಗಳು, ಗೋಪುರ ಹಾಗೂ ಕಾವಲುಕಟ್ಟೆಗಳ ಎತ್ತರ ಹೆಚ್ಚಾಯಿತು. ಅಗಳಗಳ ಆಳ ಮತ್ತು ಅಗಲಳತೆ ಹಾಗೂ ವಿಸ್ತಾರಗಳು ಬೆಳೆದವು; ಮತ್ತು ಅವುಗಳಲ್ಲಿ ವಿಷಾರಿ ಜಲಚರ ಪ್ರಾಣಿಗಳನ್ನೂ, ನೀರ್‌ಬಳ್ಳಿಗಳನ್ನೂ ಬೆಳೆಸಲಾಯಿತು. "ವೀರಸೇತು" ಎಂಬ ವೀರನ ಆತ್ಮಬಲಿಯ ಸೇತುಗಳೂ ನಿರ್ಮಾಣವಾದವು; ಇಂಥವು ಮಹಾದ್ವಾರಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ.

ಕೊನೆಯ ಹಂತದ ಕರ್ನಾಟಕದ ಕೋಟೆಗಳು ೧೩ನೆಯ ಶತಮಾನದ ಮಧ್ಯಯುಗದಲ್ಲಿ ಹಾಯ್ದು, ೧೮ನೆಯ ಶತಮಾನದ ಆಧುನಿಕ ಯುಗದ ವರೆಗೂ ಹಮ್ಮಿಕೊಂಡವುಗಳಾಗಿವೆ. ಇವುಗಳ ಮೇಲೆ ಪರ್ಶಿಯನರ, ಫ್ರೆಂಚರ ಹಾಗೂ ಬ್ರಿಟಿಷರ ದುರ್ಗಗಳ ರಚನಾ ಶಾಸ್ತ್ರಗಳ ಪ್ರಭಾವ ಬಹಳೇ ಬಿದ್ದಿದೆ. ಮೊಘಲರ ಭಾರತದ ಪ್ರವೇಶದಿಂದ, ಬಾಬರನ ಕಾಲದಲ್ಲಿ, ಸಿಡಿಮದ್ದಿನ ಆಯುಧಗಳಾದ ಶತಘ್ನಿ, ಫಿರಂಗಿ, ಗುಂಡುಗೋವಿ ಮೊದಲಾದವು ಯುದ್ಧಕಲೆಯಲ್ಲಿ ಸೇರಿ ಕೋಟೆಗಳ ರಚನಾಕ್ರಮ, ಆ ಆಯುಧಗಳನ್ನು ಮೀಂಟಲು, ಪರಿವರ್ತನೆಗೊಂಡಿತು. ಅದಾಗಿ ಕೋಟೆಯ ಹೊರಗಡೆ, ವಿಸ್ತಾರವಾದ ಮೂರು ಅಗಳಗಳು, ದುಂಡನೆಯ ಎತ್ತರದ ಬುರುಜುಗಳು, ಎರಡು ಅಥವಾ ಮೂರು ಪಾತಳಿಗಳಲ್ಲಿ ಏರಿಸಿದ ಗೋಡೆಗಳು, ಗೋಡೆಯಲ್ಲಿ ಹಾಗೂ ತೆನೆಗಳಲ್ಲಿ ಕೋವಿಯ ತೂತುಗಳು, ಬಿಸಿಎಣ್ಣೆ ಸುರುವಲು ಮೋಸಗಿಂಡಿಗಳು, ಮೂರು-ನಾಲ್ಕು ಸುತ್ತು ಹೊಡೆವ ಪುಲಿಮೊಗಗಳು ಅಳವಡಿಸಲ್ಪಟ್ಟವು. ಬಾಗಿಲು ಹಾಗೂ ಕಂದಕಗಳನ್ನು ಜೋಡಿಸುವ "ಮರಡು ಸೇತುವೆ" (ಡ್ರಾಪ್ ಬ್ರಿಜ್) ಬಹುಸಂಖ್ಯೆಗಳಲ್ಲಿ ಅಳವಡಿಸಲ್ಪಟ್ಟವು. ಇಂಥ ಕೋಟೆಗಳು, ಕನ್ನಡನೆಲದಲ್ಲಿ, ವಿಜಯನಗರ, ಬಹಮನಿ, ಆದಿಲಶಾಹಿ, ಮರಾಠಾ, ಮೈಸೂರಿನ ಹೈದರ-ಟಿಪ್ಪುರವರ ಕಾಲದಲ್ಲಿ ನಿರ್ಮಾಣಗೊಂಡುದನ್ನು ಕಾಣಬಹುದು. ಹಂಪಿ, ಗುಲಬರ್ಗಾ, ಗೋಗಿ, ರಾಯಚೂರ, ಬಿಜಾಪುರ, ಬಿದರ, ಬೆಳಗಾಂವ್, ಸೊಲ್ಲಾಪುರ, ಮುದಗಲ್ಲ, ಮಲ್ಕಾಬಾದ, ಕೊಪ್ಪಳ, ದೇವದುರ್ಗ, ಬಳ್ಳಾರಿ, ಬಂಕಾಪುರ, ಕಿತ್ತೂರು, ಚಿತ್ರದುರ್ಗ; ರಾಮದುರ್ಗ, ಶ್ರೀರಂಗಪಟ್ಟಣ, ಬೆಂಗಳೂರು, ಮೈಸೂರು, ಈ ಕೊನೆಯ ಹಂತದಲ್ಲಿ ಬರುವ ಕೋಟೆಗಳು. ರಾಜರ ವೈಭವೋಪೇತವಾದ ಜೀವನ ಸ್ಥಿರತೆ ಹಾಗೂ ಸಮೃದ್ಧಿಯನ್ನು ಸಾಧಿಸಿದಾಗ, ಕೋಟೆಗಳ ವಿನ್ಯಾಸದಲ್ಲಿ ಸುಂದರತೆ ಅಳವಡಿಸಲ್ಪಟ್ಟಿತು. ಗೃಹವಾಸ್ತುಗಳಿಗೆ ಸಂಬಂಧಿಸಿದಂತೆ, ಅಂತಃಪುರ, ರಾಣಿಯರ ಸ್ನಾನಗೃಹ, ಅರಮನೆ, ಮಂತ್ರಾಲಯ, ಸಭಾಭವನ, ಆನೆಕುದುರೆಗಳ ಲಾಯ, ಆಟದ ಅಂಗಣ, ಕಾವಲುಗಾರರ ವಸತಿಗಳು, ಮಂದಿರ, ಮಸೀದೆ, ಚರ್ಚುಗಳು, ಬಜಾರಗಳು ಬೆಳೆದು ಸಿರಿವಂತಿಕೆಯ ಲೌಕಿಕ ಹಿರಿಮೆಯ ನಿದರ್ಶನಗಳಾದವು.

ಹೀಗೆ ಕನ್ನಡ ನೆಲದ ಕೋಟೆಗಳು, ತಮ್ಮ ಸುಮಾರು ಎರಡು ಸಾವಿರ ವರುಷಗಳ ಸುದೀರ್ಘ ಅಸ್ತಿತ್ವದಲ್ಲಿ, ಯುರೋಪ್ ಹಾಗೂ ಉತ್ತರ ಪೂರ್ವ ಏಶಿಯಾ ಖಂಡಗಳ ಕೋಟೆಗಳಿಗಿಂತ ಯಾವುದೇ ರೀತಿಯಲ್ಲಿ ಕಡಿಮೆಯಿಲ್ಲ. ಅವು ಕೆಲವು ಪ್ರಥಮಗಳನ್ನು ಗಳಿಸಿವೆ. ಪ್ರಥಮ ಕನ್ನಡ ಸಾಮ್ರಾಜ್ಯವಾದ ಕದಂಬರ ರಾಜಧಾನಿ ಬನವಾಸಿ ಪ್ರಥಮ ಶ್ರೇಣಿಯ ವನ ದುರ್ಗ ಹಾಗೂ ಜಲದುರ್ಗಗಳೆರಡರ ಪ್ರತೀಕವಾದರೆ, ಕಾಲ ನಿರ್ಧರಿಸಿಕೊಂಡು ನೇತಾಡುವ ರಕ್ಷಕ ಗೋಡೆ ಹೊಂದಿದಂಥ ಪ್ರಥಮ ಕಲ್ಲಿನಕೋಟೆ ಬಾದಾಮಿಯ ಪ್ರಥಮ ಪುಲಕೇಶಿಯದಾಗಿಯೂ, ಪ್ರಾಸ್ಸಿನ ಇಂಥ ಸಾಮ್ರಾಜ್ಯ ಕೋಟೆಯ ಕಲ್ಲುಗಳಿಗೆ ಗಾತ್ರದಲ್ಲಿ, ೨೦೦ (ಎರಡು ನೂರು) ಟನ್ ಭಾರದಲ್ಲಿ ಸರಿಗಟ್ಟುವ ವಾಸ್ತುಶಿಲೆಹೊಂದಿದ ಪ್ರಥಮ ಕೋಟೆ ರಾಯಚೂರಿನದು. ಉದ್ದಳತೆಯಲ್ಲಿ ಚೀನದ ಗೋಡೆಯನ್ನು ಬಿಟ್ಟರೆ, ಪ್ರಥಮವಾಗಿ ಏಳು ಸುತ್ತುಗಳಲ್ಲಿ ಹಮ್ಮಿಕೊಂಡದ್ದು (೫೦೦ ಕಿ. ಮೀ.) ವಿಜಯನಗರದ ಕೋಟೆ. ಕಡಿದಾದ ಕಲ್ಲುಕತ್ತನೆಯೊಂದಿಗೆ ದೈತ್ಯಾಕಾರದ ಪ್ರಥಮ ಶ್ರೇಣಿಯ ಗಿರಿದುರ್ಗ ಚಿತ್ರದುರ್ಗಕೋಟೆ. ಪಶ್ಚಿಮ ಯುರೋಪಿನ ಜಲದುರ್ಗಗಳಿಗೆ ಸಮಾಂತರವಾಗಿ ನಿಲ್ಲಬಲ್ಲ ಪ್ರಥಮ ದ್ವೀಪಕೋಟೆ (ಐಲೇಂಡ್ ಫೋರ್ಟ್) ಶ್ರೀರಂಗಪಟ್ಟಣದ್ದು. ಹೀಗೆ ಕನ್ನಡದ ಕೋಟೆಗಳು ಗತಕಾಲದ ಕನ್ನಡಿಗರ ವೈಭವದ, ಶೌರ್ಯದ, ಕ್ರೌರ್ಯದ, ಒಲುವಿನ, ನಲಿವಿನ, ಆನಂದದ ದುಃಖದ, ಅಳುವಿನ, ನಗುವಿನ, ತ್ಯಾಗದ, ಭೋಗದ, ಬಲಿದಾನದ, ಸ್ವಾಮಿಸಿಷ್ಠೆಯ, ಸಾವಿನ, ನೋವಿನ, ಸತ್ಯದ, ಸೌಂದರ್ಯದ ತರತರದ ಭಾವನೆಗಳ ಕತೆ ಹೇಳುತ್ತಿವೆ, ಸಾರುತ್ತಿವೆ.

೫. ಡಾ. ಬೆಟಗೇರಿ ಕೃಷ್ಣಶರ್ಮ – ಕರ್ನಾಟಕ ಜನಜೀವನ "ಕೋಟೆ ಕಾಳಗ". ಪುಟ ೫೦.

# ಕರ್ನಾಟಕದ ಮೂರ್ತಿಶಿಲ್ಪ

ಡಾ. ಬಾ. ರಾ. ಗೋಪಾಲ್

ಚರಿತ್ರಪೂರ್ವ ಯುಗದಿಂದಲೂ ಕರ್ನಾಟಕದಲ್ಲಿ ಮೂರ್ತಿಶಿಲ್ಪಕ್ಕೆ ಒಂದು ಅವಿಚ್ಛಿನ್ನವಾದ ಇತಿಹಾಸವಿದೆ. ಪ್ರಾಚೀನ ಶಿಲಾಯುಗದ ಜನರು ತಾವು ವಾಸಿಸುತ್ತಿದ್ದ ಗುಹೆಗಳ ಮೇಲೋ, ಸುತ್ತಲಿನ ಬಂಡೆಗಳ ಮೇಲೋ ತಮ್ಮ ಪರಿಸರದಲ್ಲಿ ಕಂಡುಬಂದ ಮೃಗಗಳ, ಪಕ್ಷಿಗಳ ಹಾಗೂ ಮಾನವರ ವರ್ಣರೇಖಾ ಚಿತ್ರಗಳನ್ನು ಬಿಡಿಸುವುದು ಕಂಡುಬಂದಿದೆ. ನವ ಶಿಲಾಯುಗ ಮತ್ತು ಬೃಹತ್ ಶಿಲಾಯುಗದ ಕಾಲದಲ್ಲೂ ಇಂತಹ ವರ್ಣಚಿತ್ರಗಳನ್ನು ಬಿಡಿಸಿರುವರು. ಮಸ್ಕಿ, ತಕ್ಕಲಕೋಟೆ, ಹಿಕ್ಲಿಹಾಳ ಮುಂತಾದ ಕಡೆ ಇಂತಹ ರೇಖಾ ಚಿತ್ರಗಳನ್ನು ಕಾಣಬಹುದಾಗಿದೆ. ಇವುಗಳಲ್ಲಿ ಪ್ರಮುಖವಾಗಿ ಕಾಣಿಸಿಕೊಳ್ಳುವುದು ಗೂಳಿಯ ಚಿತ್ರ. ನೀಳ ಕೊಂಬುಗಳು, ಉಬ್ಬಿದ ಡುಬ್ಬ, ಇಳಿಬಿದ್ದ ಗಂಗೆದೊಗಲುಗಳನ್ನು ಈ ಚಿತ್ರಗಳಲ್ಲಿ ನೋಡಬಹುದು. ಚಂದ್ರವಳ್ಳಿಯಲ್ಲಿ ಬಂಡೆಯೊಂದರ ಮೇಲೆ ಪಟ್ಟೆ ಹುಲಿಯ ಚಿತ್ರವನ್ನು ಗೆರೆಗಳ ಮೂಲಕ ಬಿಡಿಸಲಾಗಿದೆ. ಜಿಂಕೆ ಕಾಡುಕೋಣಗಳನ್ನೂ ಈ ಚಿತ್ರಗಳಲ್ಲಿ ರೂಪಿಸಲಾಗಿದೆ. ಬಾದಾಮಿಯ ಉತ್ತರ ಗುಡ್ಡದ ಸಮೀಪದಲ್ಲಿ ವಿಶಾಲ ಬಯಲಿನ ಆಚೆ ಬದಿಗಿನ ಇನ್ನೊಂದು ಗುಡ್ಡದ ಸಾಲಿನಲ್ಲಿರುವ ನಾಲ್ಕು ಗವಿಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಎರಡು ಗವಿಗಳಿವೆ. ಅವುಗಳಲ್ಲಿನ ರೇಖಾಚಿತ್ರಗಳಲ್ಲಿ ಒಂದು ಮನುಷ್ಯನದು, ಇನ್ನೊಂದು ಭೂತ ಸ್ವರೂಪದ ವಿಚಿತ್ರ ಪ್ರಾಣಿಯದು. ಬಿಳಿ ಮತ್ತು ಅಚ್ಚ ಕಪ್ಪು ಬಣ್ಣಗಳನ್ನು ಇವುಗಳಿಗೆ ಬಳಸಲಾಗಿದೆ. ಶಿಡ್ಲಫಡಿ ಎಂಬ ಹೆಸರಿನ ಒಂದು ಗುಹೆಯಲ್ಲೂ ಆನೆ, ಪಕ್ಷಿ ಮುಂತಾದವುಗಳನ್ನು ರೇಖಿಸಲಾಗಿದೆ.

### ಸಾತವಾಹನ

ಚಾರಿತ್ರಿಕ ಯುಗಕ್ಕೆ ಬಂದರೆ ಕರ್ನಾಟಕದಲ್ಲಿ ಮೊದಲು ಆಳಿದ ಸಾತವಾಹನರ ಕಾಲದ ಕೆಲವು ಶಿಲ್ಪಗಳನ್ನು ಪರಿಗಣಿಸಬಹುದು. ಇವರ ಕಾಲದ ವಾಸ್ತುಶಿಲ್ಪದ ಯಾವ ಅವಶೇಷಗಳೂ ಉಳಿದು ಬಂದಿಲ್ಲವಾದರೂ ಮೂರ್ತಿಶಿಲ್ಪದ ಬಗೆಗೆ ಸ್ವಲ್ಪ ಮಟ್ಟಿನ ವಿವರಗಳು ದೊರೆತಿವೆ. ಕರ್ನಾಟಕದಲ್ಲಿ ಬನವಾಸಿ ಇವರ ಒಂದು ಕೇಂದ್ರ. ಇಲ್ಲಿ ದೊರೆತಿರುವ ನಾಗರ ಶಿಲ್ಪ ಈ ಕಾಲದ ಮೂರ್ತಿಶಿಲ್ಪಗಳಲ್ಲೊಂದು ಮಾದರಿ. ತೆರೆದ ಎರಡು ಹೆಡೆಗಳ ಈ ನಾಗನನ್ನು ಅರೆಯುಬ್ಬು ಶಿಲ್ಪದಲ್ಲಿ ಬಿಡಿಸಿದ ರೂವಾರಿ ಬನವಾಸಿಯ ಇಂದ್ರಮಯೂರಕನ ಶಿಷ್ಯನಾದ ನಟಕ (ನರ್ತಕ). ಇದರ ಕಾಲ ಕ್ರಿ. ಶ. ೩ನೆಯ ಶತಮಾನ. ಗುಲ್ಬರ್ಗ ಜಿಲ್ಲೆಯ ಚಿತ್ತಾಪುರ ತಾಲೂಕಿನ ಗ್ರಾಮವಾದ ಸನ್ನತಿ ಕರ್ನಾಟಕದ ಇನ್ನೊಂದು ಪ್ರಾಚೀನ ಬೌದ್ಧ ಕೇಂದ್ರ. ಸಾತವಾಹನರ ಕಾಲದ ಮಣ್ಣಿನ ಮೂರ್ತಿಗಳು ಚಲ್ಲಾಪಿಲ್ಲಿಯಾಗಿ ಬಿದ್ದಿದ್ದು ಇವುಗಳಲ್ಲಿ ಹಲವನ್ನು ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ, ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಇಲಾಖೆಯ ಸಂಗ್ರಹಾಲಯಗಳಲ್ಲಿ ಸಂಗ್ರಹಿಸಿಡಲಾಗಿದೆ. ಅಚ್ಚಿನ ಮೂಲಕ ತಯಾರಿಸಿದ ಈ ಮೂರ್ತಿಗಳು ಟೊಳ್ಳು. ಆದರೆ ಸಣ್ಣ ಸಣ್ಣ ಈ ಮೂರ್ತಿಗಳಲ್ಲಿ ಯಕ್ಷ ಯಕ್ಷಿಯರು, ಸ್ತ್ರೀಪುರುಷರು, ಆನೆ, ಗೂಳಿ, ಸಿಂಹ ಮುಂತಾದ ಪ್ರಾಣಿಗಳೂ ಸೇರಿವೆ. ಸೂಕ್ಷ್ಮವಾಗಿ ಬಿಡಿಸಿದ ಅಂಗಾಂಗಗಳುಳ್ಳ ಇವು ಬಹುಮಟ್ಟಿಗೆ ಆಟದ ಸಾಮಗ್ರಿಗಳು. ಹಿಂದೊಮ್ಮೆ ಇಲ್ಲಿದ್ದ ಸ್ತೂಪದ ಕಲ್ಲುಗಳನ್ನು ಇಲ್ಲಿನ ಜನರು ಕಟ್ಟಡಗಳಿಗೆ ಬಳಸಿದ್ದಾರೆ. ದುರ್ಗಿ ಗುಡಿಯೊಂದಕ್ಕೆ ಅಳವಡಿಸಿರುವ ಕಲ್ಲುಗಳೆಲ್ಲ ಆ ಸ್ತೂಪದ ಭಾಗಗಳೇ. ಶಿಲ್ಪಗಳುಳ್ಳ ಕೆಲವು ಕಲ್ಲುಗಳು ಸ್ತೂಪವಿದ್ದಿರಬಹುದಾದ ಸ್ಥಳದಲ್ಲಿಯೇ ಉಳಿದಿವೆ. ಹೊಲವೊಂದರಲ್ಲಿ ದೊರೆತ ಆಯತ ಸ್ತಂಭದಲ್ಲಿ ಸುಖಾಸೀನರಾಗಿ ಕುಳಿತ ದಂಪತಿಗಳ ಶಿಲ್ಪವೊಂದಿದೆ. ಸುಖಾಸೀನವಾಗಿ ಕುಳಿತ ಪುರುಷ ಕೈಯಲ್ಲಿ ಪಾನಪಾತ್ರೆ ಹಿಡಿದಿದ್ದಾನೆ. ದಂಪತಿಗಳ ಪರಿಚಾರಿಕೆಗಾಗಿ ಸೇವಕ ಸೇವಕಿಯರು ಸಿದ್ಧರಾಗಿ ನಿಂತಿದ್ದಾರೆ. ಶಿಲ್ಪಗಳಲ್ಲಿನ ಅಂಗಸೌಷ್ಟವ, ಮಂದಹಾಸ ಹಾಗೂ ತೃಪ್ತಭಾವಗಳು ಮೂರ್ತಿಗಳನ್ನು ಜೀವಂತಗೊಳಿಸಿವೆ. ಕೆಲವು ಶಿಲ್ಪಗಳಲ್ಲಿ ಶ್ರೀಮಂತಿಕೆ, ರಸಿಕತೆಗಳು ಎದ್ದು ಕಾಣುತ್ತವೆ. ಹಸುರು ಬೆರೆತ ಬಿಳಿಯ ಸುಣ್ಣ ಕಲ್ಲಿನ ಈ ಫಟಿಕಗಳ ಮೇಲೆ ಬುದ್ಧನ ಜಾತಕ ಕಥೆಗಳನ್ನೂ ಸಾಂಸಾರಿಕ ಚಿತ್ರಣಗಳನ್ನೂ ಬಿಡಿಸಿದೆ. ಈ ಸಾತವಾಹನರ ಕಾಲದ ಶಿಲ್ಪಗಳು ಅಮರಾವತಿಯ ಶಿಲ್ಪಗಳನ್ನು ಹೋಲುತ್ತವೆ. ಶಿಲ್ಪಗಳಲ್ಲಿ ಕಥೆಗಳನ್ನು ನಿರೂಪಿಸುವ ತಂತ್ರದ ಆರಂಭವನ್ನು ಕರ್ನಾಟಕದ ಈ ಶಿಲ್ಪಗಳಲ್ಲಿ ಗುರುತಿಸಬಹುದಾಗಿದೆ.

### ಕದಂಬ

ಬನವಾಸಿಯ ಆದಿ ಕದಂಬರ ಕಾಲದ ಶಿಲ್ಪಗಳು ಕಂಡುಬಂದಿಲ್ಲ. ಗುಡ್ನಾಪುರದ ಶಾಸನದಲ್ಲಿ ರವಿವರ್ಮ ಮನ್ಮಥನಿಗಾಗಿ ಜಿನಾಲಯವೊಂದನ್ನು ಕಟ್ಟಿದ ಪ್ರಸ್ತಾಪವಿದೆ. ಆದರೆ ಆ ಆಲಯದ ಅವಶೇಷಗಳು ಉಳಿದಿಲ್ಲ. ಅಲ್ಲಿ ಕೆಲವು ವಿಗ್ರಹಗಳು ದೊರೆತಿವೆ. ಯೋಗಾಸನದಲ್ಲಿರುವ ಜಿನಮೂರ್ತಿಯೊಂದರ ಶಿರ ಮತ್ತು ಬಾಹುಗಳು ಭಿನ್ನವಾಗಿವೆ. ಪುರುಷ

ವಿಗ್ರಹವೊಂದು ಅಲಂಕೃತ ಕಿರೀಟವನ್ನೂ ಹಾರವನ್ನೂ ಧರಿಸಿದೆ. ಅಲ್ಲಿನ ಇನ್ನೊಂದು ಸ್ತ್ರೀ ವಿಗ್ರಹ ಭೋಗಾಸನದಲ್ಲಿದ್ದು ಅದರ ತಲೆಯ ಹಿಂದಿನ ಪ್ರಭಾಮಂಡಲದ ಹಿಂದೆ ಸಿಂಹ ಮುಖವಿದೆ. ಅದರ ಬಾಯಿಂದ ಐದು ಎಳೆಗಳ ಮಣಿಸರ ಇಳಿಯ ಬಿದ್ದಿದೆ. ಇವೆರಡೂ ಶಾಸನದಲ್ಲಿ ಹೇಳಲಾದ ಮನ್ಮಥ-ರತಿಯರ ವಿಗ್ರಹಗಳೆಂದು ಊಹಿಸಲಾಗಿದೆ. ಆದರೆ ಈ ಕಾಲ ನಿರ್ಣಯ ಇನ್ನೂ ಸಂದೇಹಾಸ್ಪದವಾಗಿದೆ. ಅಲ್ಲಿಯೇ ಕಂಡುಬಂದ ಕುಬ್ಜನೊಬ್ಬನ ವಿಗ್ರಹ ಕುತೂಹಲಕಾರಿಯಾಗಿದೆ. ಕಚ್ಚೆ ಹಾಕಿ ಧೋತರ ಉಟ್ಟು ಹಲವು ಎಳೆಗಳ ಹಾರಗಳನ್ನೂ ಧರಿಸಿರುವ ಈ ವಿಗ್ರಹದ ಕುತ್ತಿಗೆ ಕಾಣಿಸದಷ್ಟು ದೇಹಕ್ಕೆ ಅಂಟಿಕೊಂಡಿರುವ ತಲೆ, ಉಬ್ಬಿದ, ಮೊಣಕಾಲುಗಳವರೆಗೂ ಜೋತುಬಿದ್ದು ಕಾಲುಗಳೇ ಕಾಣಿಸದಂತಹ ಹೊಟ್ಟೆ, ಬಹುಶಃ ಬೌದ್ಧ ಯಕ್ಷನೊಬ್ಬನನ್ನು ಪ್ರತಿನಿಧಿಸುತ್ತದೆ ಎನ್ನಲಾಗಿದೆ. ಇದು ಸುಮಾರು ೩-೪ನೆಯ ಶತಮಾನದ ವಿಗ್ರಹವೆಂಬುದೂ ಖಚಿತವಲ್ಲದ ಊಹೆ. ಒಂದೇ ಕಲ್ಲಿನಲ್ಲಿ ಕಡೆದ ರತಿ-ಮನ್ಮಥರ ವಿಗ್ರಹವೂ ಅಲ್ಲಿ ದೊರೆತಿದ್ದು ಮನ್ಮಥನ ಕೈಯಲ್ಲಿ ಕಬ್ಬಿನ ಜಲ್ಲೆ, ರತಿಯ ಕೈಯಲ್ಲಿ ಕಮಲದ ದಂಟು ಕಾಣಿಸುತ್ತದೆ. ಇದು ೧೧-೧೨ನೆಯ ಶತಮಾನದ ವಿಗ್ರಹ. ಶಿವಮೊಗ್ಗ ಜಿಲ್ಲೆಯ ಜಂಬೇ ಹಳ್ಳಿಯ ಆಲಯ ಮೂಲತಃ ಶಾಂತಿವರ್ಮನ ಕಾಲದ ಕಟ್ಟಡವಾಗಿರಬಹುದು. ಈಗ ನಮಗೆ ಕಾಣಿಸುವುದು ದುರ್ಗಾ ವಿಗ್ರಹ ಮಾತ್ರ. ಚತುರ್ಭುಜದ ಈಕೆ ಮಹಿಷಾಕೃತಿಯ ಅಸುರನನ್ನೂ, ಅದರ ಬಾಲವನ್ನೂ ಹಿಡಿದೆತ್ತಿ ದೇಹವನ್ನು ಮೆಟ್ಟಿ ಕೊಲ್ಲುತ್ತಿದ್ದಾಳೆ. ಈ ವಿಗ್ರಹದಲ್ಲಿನ ನಿರಾಯಾಸ ಭಾವ ಸ್ಫುಟವಾಗಿದ್ದು ಇದೊಂದು ಉತ್ತಮ ಶಿಲ್ಪವೆನಿಸಿದೆ. ಇದು ಅಲ್ಲಿನ ದೇವಿ ಆಲಯದ ಮೂಲ ವಿಗ್ರವಾಗಿರಬಹುದೆಂದು ಹೇಳಲಾಗಿದೆ.

## ಬಾದಾಮಿಯ ಚಾಲುಕ್ಯ

ಆರನೆಯ ಶತಮಾನದಿಂದ ಇನ್ನೂರೈವತ್ತು ವರ್ಷಗಳ ಕಾಲ ಆಳಿದ ಬಾದಾಮಿಯ ಚಾಲುಕ್ಯರ ಕಾಲದಲ್ಲಿ ಶಿಲ್ಪಕಲೆಗೆ ವಿಶೇಷ ಪ್ರೋತ್ಸಾಹ ದೊರಕಿತು. ಆದರೆ ಇಲ್ಲಿ ನಾವು ಗಮನಿಸಬೇಕಾದ ಒಂದು ಅಂಶವೆಂದರೆ ಈ ಕಾಲದ ಶಿಲ್ಪಗಳೆಲ್ಲ ಬಹುಮಟ್ಟಿಗೆ ವಾಸ್ತುಶಿಲ್ಪಗಳಿಗೆ ಪೋಷಕವಾಗಿ, ದೇವಾಲಯಗಳ ಛಾವಣಿ ಮತ್ತು ಕಂಬಗಳ ಮೇಲೆ, ಹೊರಗೋಡೆಗಳಲ್ಲಿ, ಕೋಷ್ಠಗಳಲ್ಲಿ ಕಂಡರಿಸಲಾದ ನಿಮ್ನ, ಉಬ್ಬು ಅಥವಾ ಅರೆಯುಬ್ಬು ಶಿಲ್ಪಗಳು. ಅಧಿಕ ಸಂಖ್ಯೆಯವು ಧಾರ್ಮಿಕ ಶಿಲ್ಪಗಳು. ದೇವರುಗಳ ಅವತಾರಗಳ, ಲೀಲಾ ಮೂರ್ತಿಗಳ, ಇತರ ದೇವತೆಗಳ ಮೂರ್ತಿಗಳು. ಲೌಕಿಕ ಶಿಲ್ಪಗಳು ಬಹಳ ಕಡಿಮೆ. ಜೊತೆಗೆ ಅವೆಲ್ಲ ಸ್ವತಂತ್ರವಾದ, ಒಂದಕ್ಕೊಂದಕ್ಕೆ ಸಂಬಂಧವಿಲ್ಲದ ಶಿಲ್ಪಗಳು. ಮಹಾ ಕಾವ್ಯಗಳ, ಪುರಾಣಗಳ, ಇತರ ಕಥೆಗಳ ನಿರೂಪಣೆಯ ಚಿತ್ರಗಳ ಪಟ್ಟಿಕೆಗಳೂ ಇದ್ದು ಅವುಗಳಲ್ಲಿ ಕಥೆಯ ಓಟ ಕುಂದದಂತೆ ಘಟನೆಗಳ ಅನುಕ್ರಮ ನಿರೂಪಣೆಯನ್ನೂ ಕಾಣಬಹುದು. ಆದರೆ ಅಂಥವು ಕಡಿಮೆ.

ಗಾತ್ರದಲ್ಲಿಯೂ ಈ ಶಿಲ್ಪಗಳು ವಿಶಿಷ್ಟವಾಗಿದೆ. ಬಾದಾಮಿ, ಐಹೊಳೆಗಳ ಗುಹಾಲಯಗಳಲ್ಲಿನ ವಿಗ್ರಹಗಳು ಕಣ್ಮನ ಸೆಳೆಯುತ್ತವೆ. ಐಹೊಳೆಯ ರಾವಳಫಡಿ, ಜೈನ ಗುಹೆ ಹಾಗೂ ಬೌದ್ಧ ವಿಹಾರವೆಂದು ಕೆಲವರು ಅಭಿಪ್ರಾಯಪಟ್ಟಿರುವ ನೈಸರ್ಗಿಕ ಗುಹೆಗಳು ಮೂರು. ಇಲ್ಲಿನ ಗುಹೆಗಳು ಬಾದಾಮಿಯ ಗುಹೆಗಳಿಗಿಂತ ಪ್ರಾಚೀನವೆನ್ನುವವರೂ ಇದ್ದಾರೆ. ರಾವಳಫಡಿ ಮರಳುಗಲ್ಲು ಬಂಡೆಯಲ್ಲಿ ಕೊರೆಯಲಾದ ಶೈವಗುಹೆ. ಇದರ ಮುಂಬದಿಯ ಎರಡೂಕಡೆಗಳ ಕೋಷ್ಠಗಳಲ್ಲಿ ಶಂಖನಿಧಿ, ಪದ್ಮನಿಧಿಗಳ, ದ್ವಾರಪಾಲಕರ ವಿಗ್ರಹಗಳಿವೆ. ಗುಹೆಯೊಳಗಿನ ಗೋಡೆಗಳ ಒಳಗಿನ ಅಂತರಾಳದ ಪಕ್ಕಗಳಲ್ಲಿ, ಹರಿಹರ, ಗಂಗಾಧರ, ಅರ್ಧನಾರೀಶ್ವರ, ವರಾಹ, ಮಹಿಷಮರ್ದಿನಿ ಹಾಗೂ ನಟರಾಜರ ಭವ್ಯವಾದ ಶಿಲ್ಪಗಳಿವೆ. ನಟರಾಜನಿಗೆ ದಶಬಾಹುಗಳು. ಆತನ ಮೈ ನೃತ್ಯದ ಭಂಗಿಗೆ ಅನುಗುಣವಾಗಿ ಬಾಗುಗಳಲ್ಲಿದೆ. ತನ್ಮಯತೆ ಮುಖದಲ್ಲಿ ಕಂಡುಬರುವ ಭಾವ. ನಟರಾಜನ ಉತ್ತರೀಯ ಸಹ ನರ್ತನದ ರಭಸಕ್ಕೆ ತೂಗಾಡುತ್ತಿರುವಂತಿದೆ ಈ ವಿಗ್ರಹದ ಅಕ್ಕಪಕ್ಕಗಳಲ್ಲಿ ಕೋಮಲವಾಗಿರುವ ಸಪ್ತಮಾತೃಕೆಯರ, ಪಾರ್ವತೀ ಹಾಗೂ ಗಣೇಶರ ವಿಗ್ರಹಗಳಿವೆ. ಇವುಗಳ ನಿಲ್ದನಿಲುವು, ದೇಹದ ಮಾಟ ಮತ್ತು ಕೋಮಲ ಲಾಸ್ಯ ಎಂತಹವರನ್ನೂ ಆಕರ್ಷಿಸುತ್ತದೆ. ಇಲ್ಲಿನ ಗಂಗಾಧರ ಮೂರ್ತಿ ಆಗಮ ಶಾಸ್ತ್ರಗಳಲ್ಲಿನ ವಿವರಣೆಗಳಿಗಿಂತ ಭಿನ್ನವಾಗಿದೆ. ಜಟಾಮಕುಟಧಾರಿಯಾದ ಶಿವನ ಮೂರನೆಯ ಕಣ್ಣು ಸ್ಪಷ್ಟವಾಗಿದೆ. ಕಿರೀಟದ ಮೇಲೆ ಬಹುಶಃ ಗಂಗಾ, ಯಮುನಾ ಮತ್ತು ಸರಸ್ವತಿಯರು ಅಂಜಲಿಬದ್ಧರಾಗಿದ್ದಾರೆ. ಇಲ್ಲಿ ಕಂಡರಿಸಿರುವ ಸರಸ್ವತಿಯ ಶಿಲ್ಪ ಈ ಪರಿಸರದಲ್ಲಿ ಅಪರೂಪವಾಗಿ ಕಾಣಿಸಿಕೊಂಡಿರುವಂತಹದು.

ರಾವಳಫಡಿಗಿಂತಲೂ ಬೌದ್ಧಗುಹೆ, ಬಹುಶಃ ಅದು ಸರಳ ರೀತಿಯ ಕಟ್ಟಡವೆಂಬ ಕಾರಣದಿಂದ, ಪ್ರಾಚೀನ ಎಂಬ ಅಭಿಪ್ರಾಯವಿದ್ದು ಇದು ಸುಮಾರು ಐದನೆಯ ಶತಮಾನದ್ದೆನ್ನಲಾಗಿದೆ. ಮುಂಬದಿಗೆ ಎರಡಂತಸ್ತಿನ ಕಟ್ಟಡವಿರುವ ಇದರ ಒಳಭಾಗ ಒಂದು ನೈಸರ್ಗಿಕ ಗುಹೆ. ಇಲ್ಲಿನ ಶಿಲ್ಪ ಪದ್ಮಾಸನಸ್ಥನಾದ ಬುದ್ಧನೆಂದೂ ಕೆಳ ಅಂತಸ್ತಿನಲ್ಲಿರುವ ಅಂತಹುದೇ ಶಿಲ್ಪವನ್ನು ಮೇಲಂತಸ್ತಿನ ಛಾವಣಿಯಲ್ಲೂ ಕೆತ್ತಲಾಗಿದ್ದು ಅದೂ ಸಹ ಬುದ್ಧಮೂರ್ತಿ ಎಂದೂ ಹೇಳಿ ಇದನ್ನು ಬೌದ್ಧಾಲಯ ಅಥವಾ ವಿಹಾರವೆಂದು ಇತ್ತೀಚೆಗೆ ಗುರುತಿಸಿದ್ದಾರೆ. ಛಾವಣಿಯಲ್ಲಿರುವ ವಿಗ್ರಹದ ಮೇಲೆ ಮುಕ್ಕೊಡೆ ಇದೆ. ವಿಗ್ರಹದ ಬಲಗೈ ವ್ಯಾಖ್ಯಾನ ಮುದ್ರೆಯಲ್ಲಿದೆ. ಬಲ ಅಂಗೈ ಎದೆಯ ಮೇಲೆ ಹೊರಮುಖವಾಗಿದೆ. ಹೆಬ್ಬೆರಳು ಹಾಗೂ ತೋರು ಬೆರಳುಗಳು ಕೂಡಿಕೊಂಡು ಕಿರುಬೆರಳ ಮೇಲುಗಡೆ ಇದೆ. ಹಣೆಯಲ್ಲಿ ಎರಡು ಹುಬ್ಬುಗಳ ನಡುವೆ ಊರ್ಣ್ಣ ಇದೆ. ಇದು ಬುದ್ಧನಲ್ಲಿ ಕಂಡುಬಂದಂತಹ ಪುರುಷ ಲಕ್ಷಣಗಳಲ್ಲೊಂದು. ಶಿಲ್ಪದ ಹಸ್ತಮುದ್ರೆ ಸಹ ಬುದ್ಧನಿಗೆ ಸಂಬಂಧಿಸಿದಂತಹುದೇ. ಅಲ್ಲದೆ ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಈ ಮೂರ್ತಿ ವಸ್ತ್ರ ಹೊದೆದಿರುವುದನ್ನೂ ಕಾಣಬಹುದು. ಮೊಣಕಾಲ ವರೆಗಿನ ಈ ವಸ್ತ್ರವನ್ನು ಮೇಲ್ಭಾಗದಲ್ಲಿ ಬಲತೋಳಿನ ಕೆಳಗಿನಿಂದ ಎಡಭುಜದ ಮೇಲೆ ಹೊದೆದಂತೆ ತೋರಿಸಿದೆ. ಆದುದರಿಂದ ಇದು ಬೌದ್ಧವಿಗ್ರಹವೆಂಬುದು ವಾದದ ತಿರುಳು. ಆದರೆ ಈ ಎರಡೂ ವಸ್ತ್ರಧಾರಿ ಜಿನವಿಗ್ರಹಗಳೆಂಬ ಮೊದಲಿನ ಅಭಿಪ್ರಾಯವನ್ನೇ ಕೆಲವರು ಎತ್ತಿ ಹಿಡಿದಿದ್ದಾರೆ.

ಮೇಗುಟಿ ಗುಡಿಯ ಆಚೆ ಬೃಹತ್ ಶಿಲಾಯುಗದ ಸಮಾಧಿಗಳನ್ನು ದಾಟಿದರೆ ವಿಸ್ತಾರವಾದ ಬಂಡೆಯೊಂದನ್ನು ಕೊರೆದು ಮಾಡಿದ ಜೈನ ಗುಹೆ ಕಾಣಿಸುತ್ತದೆ. ಇದರಲ್ಲೂ ಉತ್ತಮವಾದ ಶಿಲ್ಪಗಳಿವೆ. ಪಡಸಾಲೆಯ ಒಳಮಾಳಿಗೆಯಲ್ಲಿ ಮೊಸಳೆಯೊಂದು ತನ್ನ ಕೋರೆ ಹಲ್ಲುಗಳಿಂದ ಮನುಷ್ಯನೊಬ್ಬನನ್ನು ಹಿಡಿದು ನುಂಗುವಂತೆ ಹಾಗೂ ಅದರ ಹಲ್ಲುಗಳನ್ನು ಮೀಟಿಕೊಂಡು ಆತ ಹೊರಗೆ ಬರಲು ಯತ್ನಿಸುತ್ತಿರುವಂತೆ ರೂಪಿಸಲಾದ ಶಿಲ್ಪವೊಂದಿದೆ. ಮೊಸಳೆಯ ಕ್ರೌರ್ಯ ಮತ್ತು ಮನುಷ್ಯನ ಛಲದ ನಿರೂಪಣೆ ನಮ್ಮ ದೃಷ್ಟಿ

ಯನ್ನು ಸೆಳೆಯುತ್ತದೆ. ಎಡಗಡೆ ಆಳೆತ್ತರದ ಬಾಹುಬಲಿಯ ಕಾಯೋತ್ಸರ್ಗ ಭಂಗಿಯ ಶಿಲ್ಪವಿದೆ. ಇದರ ಎದುರಿನ ಗೋಡೆಯಲ್ಲಿ ಸುಪಾರ್ಶ್ವನಾಥನ ವಿಗ್ರಹ. ಗರ್ಭಗುಡಿಯಲ್ಲಿ ಮಹಾವೀರನ ವಿಗ್ರಹ. ಈ ಜೈನ ಶಿಲ್ಪಗಳು ಕರ್ನಾಟಕದಲ್ಲಿ ಗುಡ್ನಾಪುರದ ವಿಗ್ರಹಗಳನ್ನು ಹಾಗೆ ಭಾವಿಸದಿದ್ದಲ್ಲಿ, ಅತಿ ಪ್ರಾಚೀನವಾದವುಗಳೆನ್ನಬಹುದು.

ಬಾದಾಮಿಯಲ್ಲಿ ಮೇಣ ಬಸ್ತಿ ಎಂದು ಕರೆಯಲಾದ ನಾಲ್ಕು ಗುಹಾಲಯಗಳಿವೆ. ಅವುಗಳಲ್ಲಿ ಒಂದು ಶೈವ, ಎರಡು ವೈಷ್ಣವ, ಒಂದು ಜೈನ. ಮೊದಲನೆಯ ವೈಷ್ಣವ ಗುಹೆಯ ಬಲಭಾಗಕ್ಕೆ ಒಂದು ನೈಸರ್ಗಿಕ ಗುಹೆ ಇದೆ. ಈ ಗುಹೆಗಳನ್ನು ಶಿಲ್ಪಗಳ ಸಂಗ್ರಹಾಲಯಗಳೆಂದೇ ವರ್ಣಿಸಬಹುದು. ಆಯತಾಕಾರದ ಮೊಗಸಾಲೆ, ಒಳಗಡೆ ಮಂಟಪ ಹಾಗೂ ಮಧ್ಯದಲ್ಲಿ ಗರ್ಭಗುಡಿ, ಇವು ಶೈವ–ವೈಷ್ಣವ ಗುಹೆಗಳ ವಿನ್ಯಾಸ. ಮೊದಲನೆಯ ಶೈವ ಗುಹೆಯಲ್ಲಿ ಎಡಬದಿಗೆ ಹದಿನೆಂಟು ಕೈಗಳ, ಭವ್ಯವಾದ ನಟರಾಜನ ಮೂರ್ತಿ ಇದೆ. ಹಾವು, ಡಮರು, ತಂತಿವಾದ್ಯ, ತ್ರಿಶೂಲ, ಪರಶು ಮುಂತಾದವುಗಳನ್ನು ಒಂದೊಂದು ಕೈಯಲ್ಲಿ ಹಿಡಿದಿರುವ ಈತ ಪೀಠದ ಮೇಲೆ ಬಲಗಾಲನ್ನು ಊರಿ, ಎಡಗಾಲಿನ ಹಿಮ್ಮಡವನ್ನು ಮೇಲೆತ್ತಿ ಮೈಮಣಿಸಿ ನರ್ತಿಸುತ್ತಿದ್ದಾನೆ. ಈತನ ಎಡಗಡೆ ಗಣಪತಿ ಸಂತೋಷದಿಂದ ಕುಣಿಯುತ್ತಿರುವಂತಿದೆ. ಗಣಪತಿಯ ಹಿಂದೆ ಒಬ್ಬ ಮೃದಂಗ ಬಾರಿಸುತ್ತಿದ್ದಾನೆ. ಆದರೆ ನಟರಾಜನ ಕೈಯಲ್ಲಿ ಸಾಮರಸ್ಯವಿಲ್ಲದಿರುವುದೊಂದು ಈ ಶಿಲ್ಪದ ಕುಂದು. ಗಣಪತಿ ಹಾಗೂ ವಾದ್ಯಗಾರರ ಶಿಲ್ಪಗಳು ಗಾತ್ರದಲ್ಲಿ ಚಿಕ್ಕವು. ದೇವರ ಸಾಮರ್ಥ್ಯ ಔನ್ನತ್ಯಗಳ ಜೊತೆಗೆ ದೇವ ಸಾರ್ವಭೌಮತ್ವದ ಪ್ರದರ್ಶನ ಇಲ್ಲಿ ಸೂಚಿತವಾದಂತಿದೆ. ಗುಹೆಯ ಒಳಗಿನ ಕೈಸಾಲೆಯ ಪಕ್ಕದ ಗೋಡೆಗಳ ತುಂಬಾ ಉಬ್ಬು ಚಿತ್ರಗಳಿವೆ. ಎಡಗೋಡೆಯ ಆಧಾರ ಪೀಠದ ಮುಂದೆ ತಗ್ಗು ಅಂಕಣಗಳಲ್ಲಿ ನರ್ತಿಸುವ, ಹಾರುವ, ಕಹಳೆ, ಶಂಖ, ಮದ್ದಳೆ, ಕೊಳಲು, ಝಲ್ಲರಿ ಮುಂತಾದ ವಾದ್ಯಗಳನ್ನು ನುಡಿಸುವ ಭಂಗಿಗಳಲ್ಲಿ ಶಿವಗಣಗಳಿವೆ. ಆಧಾರ ಪೀಠದ ಮೇಲೆ ಸುಂದರವಾದ ಹರಿಹರನ ನಿಂತಿರುವ ವಿಗ್ರಹವಿದೆ. ಇದು ಶಿವ ಮತ್ತು ವಿಷ್ಣುವಿನ ಸಂಯೋಗ ಮೂರ್ತಿ. ಬಲಭಾಗ ಶಿವ, ಎಡಭಾಗ ವಿಷ್ಣು. ಶಿವನ ಭಾಗವನ್ನು ಸರ್ಪಗಳನ್ನು ಹಿಡಿದ ಕೈಗಳಿಂದಲೂ ತ್ರಿಶೂಲಧಾರಿಯಾದ ನಿಂತಿರುವ ನಂದಿಯ ಮೂಲಕವೂ ಗುರುತಿಸಬಹುದು. ವಿಷ್ಣು ಶಂಖವನ್ನು ಹಿಡಿದಿದ್ದಾನೆ. ಅವನ ಪಾದಗಳ ಬಳಿ ಅವನ ವಾಹನನಾದ ಗರುಡ ತನ್ನ ಎರಡೂ ಕೈಗಳನ್ನೂ ಎದೆಯ ಮೇಲಿರಿಸಿಕೊಂಡು ನಿಂತಿದ್ದಾನೆ. ಶಿವ ಜಟಾಧಾರಿ, ವಿಷ್ಣು ಮಕುಟಧಾರಿ. ಬಲಗೋಡೆಯ ಮೇಲೆ ಸುಮಾರು ೮ ಅಡಿಗಳ ಎತ್ತರದ ಅರ್ಧನಾರೀಶ್ವರನ ವಿಗ್ರಹ. ಇದು ಪುರುಷ ಸ್ತ್ರೀಯರ, ಶಿವ–ಪಾರ್ವತಿಯರ ಸಂಯೋಗ ಮೂರ್ತಿ. ವಿಗ್ರಹದ ಬಲಭಾಗ ಶಿವನದು, ಎಡಭಾಗ ಪಾರ್ವತಿಯದು. ಕೈಸಾಲೆಯ ಮುಂಬದಿಯ ಮೇಲಿನ ತೊಲೆಯ ಒಳಪಕ್ಕದಲ್ಲಿ ಒಂದು ಚಿತ್ರ ಪಂಕ್ತಿ ಇದ್ದು, ಅದು ಶಿವ ಪಾರ್ವತಿಯರ ಕಲ್ಯಾಣಕ್ಕೆ ಸಂಬಂಧಿಸಿದಂತೆ, ಶಿವನು ಮುದುಕನ ವೇಷ ಧರಿಸಿ ಬಂದನೆನ್ನಲಾದ ವರಾಹ ಪುರಾಣದಲ್ಲಿನ ಕಥೆಯ ಚಿತ್ರ ನಿರೂಪಣೆಯಾಗಿದೆ. ವೈಷ್ಣವ ಗುಹೆಯಲ್ಲಿ ಪ್ರತ್ಯಾಲೀಢ ಭಂಗಿಯಲ್ಲಿ ವರಾಹಾವತಾರದ ನಿರೂಪಣೆಯ ವಿಗ್ರಹವಿದೆ. ಇದೂ ಒಂದು ಭವ್ಯ ವಿಗ್ರಹವೇ. ವರಾಹದ ಎಡಗೈಯ ಪದ್ಮದ ಮೇಲೆ ಭೂದೇವಿ ವರಾಹನ ಮುಖಕ್ಕೆ ಒರಗಿ ನಿಂತಿದ್ದಾಳೆ. ವರಾಹದ ಒಂದು ಕೋರೆಹಲ್ಲು ಎದ್ದು ತೋರುತ್ತದೆ. ನಮಗೆ ಕಾಣಿಸುವುದು ಒಂದೇ ಕಿವಿ. ತಲೆಯ ಮೇಲೆ ಆಭರಣ ಖಚಿತ ಕಿರೀಟ. ಇದರ ಎದುರು ಗೋಡೆಯಲ್ಲಿ ವಾಮನಾವತಾರದ ನಿರೂಪಣೆ ಇದೆ. ಇದೊಂದು ದೊಡ್ಡ ಚಿತ್ರ ಪಂಕ್ತಿ. ಎಡಭಾಗಕ್ಕೆ ಛತ್ರಿಯನ್ನು ಹಿಡಿದ ವಾಮನ. ಅವನ ಮುಂದೆ ಅರ್ಘ್ಯ ಪಾತ್ರೆ ಹಿಡಿದಿರುವ ಬಲಿ ಚಕ್ರವರ್ತಿ. ಈತನ ಹಿಂದೆ ಪತ್ನಿ ವಿಂಧ್ಯಾವಳಿ. ಮುಂದಿನ ಭಾಗದಲ್ಲಿ ರೂಪಾಂತರ ಹೊಂದಿದ ತ್ರಿವಿಕ್ರಮನ ದೈವತ್ವದ ಅಸಮ ಬಲದ ಪ್ರತೀಕದಂತೆ ಭವ್ಯವಾಗಿ, ಎಡಗಾಲಿನಿಂದ ಭೂಮಿಯನ್ನೂ ಬಲಗಾಲಿನಿಂದ ಅಂತರಿಕ್ಷವನ್ನೂ ವ್ಯಾಪಿಸುವಂತೆ ಮೇಲಕ್ಕೆತ್ತಿದ ಕಾಲಿನ ಭವ್ಯ ವಿಗ್ರಹ. ಈತನ ಎಂಟು ಕೈಗಳಲ್ಲಿ ಬಲಗೈಗಳು ಸುದರ್ಶನ ಚಕ್ರ, ವಿದ್ಯಾಧರ ಖಡ್ಗ, ಕೌಮೋದಕೀ ಗದೆ ಹಾಗೂ ಬಿಲ್ಲನ್ನು ಹಿಡಿದಿದ್ದರೆ ಎಡಗೈಗಳಲ್ಲಿ ಶಾರ್ಙ್ಗ, ಧನುಸ್ಸು ಹಾಗೂ ಶಂಖಗಳಿವೆ. ಒಂದು ಎಡಗೈ ರಾಹುವಿನ ತಲೆಯ ಕಡೆ ಚಾಚಿದೆ. ಕಿರೀಟಧಾರಿಯಾದ ಬಲಿಚಕ್ರವರ್ತಿ ತ್ರಿವಿಕ್ರಮನ ಬಲಗಾಲನ್ನು ಎರಡೂ ಕೈಗಳಿಂದ ತಬ್ಬಿ ಹಿಡಿದಿದ್ದಾನೆ. ಈತನ ಹಿಂದೆ ಕತ್ತಿ ಹಿಡಿದು ದಾಳಿ ಮಾಡುತ್ತಿರುವ ಪುರುಷಾಕೃತಿಯೊಂದಿದೆ. ಕೈಸಾಲೆಯ ಮುಂಭಾಗದ ಹಾಗೂ ಹಿಂಬದಿಯ ಕಂಬಗಳು ಮತ್ತು ಗೋಡೆಗಂಬಗಳ ಮೇಲೆ ಹತ್ತು ಹಾಸುಗಲ್ಲುಗಳಿದ್ದು ಒಂದೊಂದರಲ್ಲೂ ನಿಮ್ನ ಫಲಕದಲ್ಲಿ, ಅಮೃತ ಮಂಥನ, ಮಹಿಷಾಸುರ ಮರ್ದನ, ಶ್ರೀ ಕೃಷ್ಣ ಜನನದಿಂದ ಕಂಸಾಸುರ ವಧೆಯ ವರೆಗಿನ ಪೌರಾಣಿಕ ಕಥೆಗಳನ್ನು ನಿರೂಪಿಸುವ ಚಿತ್ರ ಪಟ್ಟಿಕೆಗಳಿವೆ. ಕೈಸಾಲೆಯ ಛಾವಣಿಯ ಮಧ್ಯದ ಅಂಕಣದಲ್ಲಿ ಹದಿನಾರು ಮೀನುಗಳ ರೂಪದ ಅರೆಗಳ ಒಂದು ಚಕ್ರವಿದ್ದು ದೊಡ್ಡದೊಂದು ಕಮಲದ ಹೂವು ಅದರ ಗುಂಭವಾಗಿದೆ. ಮೂರನೆಯ ವೈಷ್ಣವ ಗುಹೆಯನ್ನು ಚಾಲುಕ್ಯರ ಮಂಗಲೇಶ ಕ್ರಿ. ಶ. ೫೭೮ರಲ್ಲಿ ಕೊರೆಯಿಸಿದನೆಂಬುದು ಶಾಸನದಿಂದ ತಿಳಿದ ವಿಷಯ. ಇದನ್ನೂ ಶಾಸನದಲ್ಲಿ ಮಹಾ ವಿಷ್ಣು ಗೃಹವೆಂದು ಕರೆದಿದೆ. ಇದರ ಜಗುಲಿಯ ಎಡಗೋಡೆಯಲ್ಲಿ ೧೨ ಅಡಿಗಳಿಗೂ ಮೀರಿದ ಎತ್ತರದ ಅಷ್ಟಭುಜ ಸ್ವಾಮಿಯ ವಿಗ್ರಹವಿದೆ. ವಿಗ್ರಹದ ಅಗಲ ಐದೂವರೆ ಅಡಿಗಳು. ಇದು ಯಾವ ಆಧಾರ ಪೀಠದ ಮೇಲೂ ನಿಂತಿರದೆ ಜಗುಲಿಯ ಮಟ್ಟಕ್ಕೆ ಸಮಪಾದ ಭಂಗಿಯಲ್ಲಿ ನಿಂತಿದೆ.ಇದರ ಎದುರು ಗೋಡೆಯ ಮೇಲೆ ಇನ್ನೂ ವಿಸ್ತಾರವಾದ ತ್ರಿವಿಕ್ರಮನ ವಿಗ್ರಹವಿದೆ. ಕೈಸಾಲೆಯೊಳಗೆ ಅನಂತಾಸೀನ ವಿಷ್ಣು, ನರಸಿಂಹ, ಭೂವರಾಹ ಮತ್ತು ಹರಿಹರ ವಿಗ್ರಹಗಳಿವೆ. ನರಸಿಂಹನ ತಲೆ ಸಿಂಹದಾಕಾರದಲ್ಲಿದ್ದು ಕೇಸರದ ಮಧ್ಯಕ್ಕೆ ಬೈತಲೆ ತೆಗೆದಿದೆ. ತಲೆಯ ಮೇಲೊಂದು ಕಮಲ. ಎಡಗಾಲನ್ನು ಸ್ವಲ್ಪ ಎಡಕ್ಕೆ ಚಾಚಿ ನಿಂತಿರುವ ಈ ವಿಗ್ರಹಕ್ಕೆ ನಾಲ್ಕು ಕೈಗಳು. ಎಡಭಾಗದ ಕೆಳಗೈ ಗದೆಯ ಮೇಲೆ ಊರಿದ್ದು ಗದೆ ನೆಲದ ಕೊನೆಯನ್ನು ಮುಟ್ಟಿದೆ. ಕೈಸಾಲೆಯ ಕಂಬ, ಗೋಡೆಗಂಬಗಳ ಆಸರೆಯ ಸ್ಥಳಗಳಲ್ಲಿ ವಿಸ್ತಾರವಾಗಿ ಬಿಡಿಸಿದ ಹದಿನಾರು ಉಬ್ಬು ಚಿತ್ರಗಳಿವೆ. ಕೈಸಾಲೆಯ ಹಾಗೂ ಮಂಟಪದ ಛಾವಣಿಗಳಲ್ಲೂ ಅನೇಕ ದೃಶ್ಯಗಳಿವೆ. ಜೈನ ಗುಹೆಯ ಗರ್ಭಗುಡಿಯಲ್ಲಿ ಹಿಂದಿನ ಗೋಡೆಯ ಮೇಲೆಯೇ ಕೆತ್ತಿದ ಸಿಂಹಪೀಠದ ಮೇಲೆ ಕುಳಿತ ಮಹಾವೀರನ ವಿಗ್ರಹವಿದೆ. ಗಂಧರ್ವರು ಈತನಿಗೆ ಚಾಮರಗಳಿಂದ ಬೀಸುತ್ತಿದ್ದಾರೆ. ತೀರ್ಥಂಕರನ ಮೇಲೆ ಮುಕ್ಕೊಡೆ. ಆದರೆ ಎಲ್ಲಾ ತೀರ್ಥಂಕರರೂ ಐಹಿಕ ಸುಖಗಳನ್ನು ತ್ಯಜಿಸಿದವರಾದ ಕಾರಣ ಮಹಾವೀರನು ದಿಂಬಿಗೆ ಒರಗಿ ಕುಳಿತಂತೆ ತೋರಿಸಿರುವುದು ವಿಪರ್ಯಾಸವಾಗಿ ಕಾಣುತ್ತದೆ. ಇದು ಜಿನ ಭಕ್ತನಾದ ಶಿಲ್ಪಿಯ ಊಹೆಯ ಪರಿಣಾಮವೆನ್ನಬಹುದು. ಮೊಗಸಾಲೆಯ ಬದಿಗೆ ಸುಪಾರ್ಶ್ವನಾಥ ಹಾಗೂ ಬಾಹುಬಲಿಗಳ ವಿಗ್ರಹಗಳಿವೆ. ಇವುಗಳ ಬದಿಗೆ ಮತ್ತು ಕಂಬಗಳ ಮೇಲೆ ತೀರ್ಥಂಕರರನ್ನೂ ಜಿನ ಮೂರ್ತಿಗಳನ್ನೂ ಕಂಡರಿಸಲಾಗಿದೆ. ಇವು ಗುಹಾಲಯಗಳಲ್ಲಿನ ಶಿಲ್ಪಗಳ ಸೂಕ್ಷ್ಮ ಪರಿಚಯ.

ಕಟ್ಟಿದ ಗುಡಿಗಳಲ್ಲೂ ಸಹ ಅನೇಕ ಶಿಲ್ಪಗಳನ್ನು ಕಾಣಬಹುದು. ಬಾದಾಮಿಯ ಉತ್ತರದ ಗುಡ್ಡದ ಮೇಲಿನ ಮಾಲಗಿತ್ತಿ ದೇವಾಲಯದ ಹೊರಗೋಡೆಗಳಲ್ಲಿ ಶಿವ ಹಾಗೂ ವಿಷ್ಣು ಮೂರ್ತಿಗಳು, ಕುಬ್ಜಾಕಾರದ ವಿಚಿತ್ರ ಭಂಗಿಗಳಲ್ಲಿನ ಮೂರ್ತಿಗಳು ಉಲ್ಲೇಖಾರ್ಹ. ಗರ್ಭಗುಡಿಯ ಬಲಭಾಗದಲ್ಲಿ ಕೆಳಭಾಗ ಕುದುರೆ ಮೇಲ್ಭಾಗ ಹೆಣ್ಣಿನ ಆಕೃತಿಯ ಕಿನ್ನರಿಯೊಬ್ಬಳ ತಲೆಗೂದಲನ್ನು ಹಿಡಿದು ಬೆನ್ನನ್ನು ತನ್ನ ಎಡಗಾಲಿನಿಂದ ತುಳಿಯುತ್ತಿರುವ ಒಂದು ಮೂರ್ತಿ ಇದೆ. ಸೂರ್ಯನು ಛಾಯಾದೇವಿಯನ್ನು ಛಡಿಸುತ್ತಿರುವ ಚಿತ್ರವಿದೆಂದು ಕೆಲವರು ಊಹಿಸಿದ್ದಾರೆ. ಈ ಶಿವಾಲಯದ ಕಾಲ ಸುಮಾರು ೭–೮ನೆಯ ಶತಮಾನ. ಇದಕ್ಕೂ ಪ್ರಾಚೀನವಾದ ಅಧಿಷ್ಠಾನದಲ್ಲಿ ರಾಮಾಯಣ ಮತ್ತು ಕೃಷ್ಣಲೀಲೆಯ ಕೆಲವು ಕಥಾಪ್ರಸಂಗಗಳನ್ನು ಚಿತ್ರಿಸಲಾಗಿದೆ. ಇವೆಲ್ಲಾ ಉಬ್ಬು ಶಿಲ್ಪಗಳಾಗಿವೆ. ದೇವ ಕೋಷ್ಠಗಳಲ್ಲಿ ಗೋವರ್ಧನ ಕೃಷ್ಣ, ಕಾಳಿಂಗಮರ್ದನ ಮತ್ತು ಆರು ಕೈಗಳ ಉಗ್ರ ನರಸಿಂಹನ ಚೆಲುವಾದ ಮೂರ್ತಿಗಳಿವೆ. ಕೆಳಗಿನ ಶಿವಾಲಯದಲ್ಲಿ ಈಗ ಉಳಿದಿರುವುದು ಗರ್ಭಗುಡಿ ಮಾತ್ರ. ಇದರ ಸೂರಿಯ ಮೂಲೆಗಳಲ್ಲಿ ದೇವತೆಗಳ ಶಿಲ್ಪಗಳಿರುವುದೊಂದು ಅಪರೂಪದ ಅಂಶ.

ಐಹೊಳೆಯ ಗುಡಿಗಳನ್ನು ಒಟ್ಟಾರೆ ಕಂಡಾಗ ವಾಸ್ತು ಶಿಲ್ಪದ ಬಯಲು ಪ್ರದರ್ಶನದ ಶಾಲೆಯೇನೋ ಎನಿಸುತ್ತದೆ. ಇದು ಅಂದು ಹೆಸರಾಂತ ಕಲಾ ಕೇಂದ್ರವಾಗಿತ್ತು. ಇಲ್ಲಿ ಸುಮಾರು ೧೨೫ಕ್ಕೂ ಮೀರಿದ ಗುಡಿಗಳಿವೆ. ಇಲ್ಲಿನ ಲಾಡಖಾನ್, ಕೊಂತಿಗುಡಿ ಮತ್ತು ಹುಚ್ಚಮಲ್ಲಿ ಗುಡಿಗಳ ಶಿಲ್ಪಗಳು ಅಂದಿನ ಶಿಲ್ಪಕಲೆಯ ಮೊದಲ ಘಟ್ಟಕ್ಕೆ ಮಾದರಿಗಳಾಗಿವೆ. ಲಾಡಖಾನ್ ಗುಡಿಯ ಮುಖಮಂಟಪದ ಕಂಬಗಳ ಮೇಲೆ ಮೂರ್ತಿಗಳನ್ನು ಕೆತ್ತಲಾಗಿದೆ. ಒಂದರಲ್ಲಿ ಆಮೆಯ ಮೇಲೆ ಕಾಲನ್ನೂರಿರುವ ಯಮುನಾ ದೇವತೆಯ ಹಾಗೂ ಇನ್ನೊಂದರಲ್ಲಿ ಮಕರದ ಮೇಲೆ ಕಾಲಿಟ್ಟಿರುವ ಗಂಗೆಯ ಚಿತ್ರಗಳಿವೆ. ಸಭಾಮಂಟಪದ ಜಾಲಂದರಗಳು ವೃತ್ತಾಕಾರವಾಗಿದ್ದು ಚಕ್ರದ ಅರೆಗಳಲ್ಲಿ ಮೀನಿನ ಚಿತ್ರಗಳನ್ನು ಬಿಡಿಸಲಾಗಿದೆ. ಕಂಬದಮೇಲೆ ಪ್ರಣಯಾಸಕ್ತ ದಂಪತಿಗಳ ವಿಗ್ರಹಗಳನ್ನು ಕೊರೆಯಲಾಗಿದೆ. ಒಂದು ಕಂಬದ ಮೇಲೆ ಬ್ರಹ್ಮಚಾರಿಯೊಬ್ಬನನ್ನು ಓರ್ವ ತರುಣಿ ಕೆಣಕುತ್ತಿರುವ ಚಿತ್ರವಿದೆ. ಆಕೆಯ ಆಕ್ರಮಣವನ್ನು ತಡೆಯಲು ಆತ ತನ್ನ ಕಮಂಡಲುವನ್ನು ಬಳಸಿದ್ದಾನೆ. ಆದರೆ ಮೇಲೆತ್ತಿದ ಆತನ ಕೈಯನ್ನು ಆಕೆ ಹಿಡಿದಿದ್ದಾಳೆ. ಬ್ರಹ್ಮಚಾರಿಯ ಈ ನಿರಾಕರಣೆಗೆ ಕಾರಣ ಸರ್ವಾಂಗ ಸುಂದರಿಯಾಗಿರುವ ಆಕೆಯ ಗಾರ್ದಭ ಮುಖ! ಇನ್ನೊಂದು ಕಂಬದ ಕಂಬದ ಫಲಕದಲ್ಲಿ ಚಾಲುಕ್ಯ ಲಾಂಛನವಾದ ವರಾಹವನ್ನು ಕೆತ್ತಿದೆ. ಇದರ ಮುಂದೆ ದೀಪದ ಕಂಬ, ಚಕ್ರ ಹಾಗೂ ಶಂಖಗಳಿವೆ. ಕೊಂತಿಗುಡಿಯ ಕಂಬಗಳಲ್ಲೂ ಅನೇಕ ಮೂರ್ತಿ ಶಿಲ್ಪಗಳನ್ನು ಕಾಣಬಹುದು. ನರಸಿಂಹಾವತಾರದ ವಿಷ್ಣು ನಿಲುವಿನ ಭಂಗಿಯಲ್ಲಿ ತೊಡೆಗಳ ಮೇಲೆ ಹಿರಣ್ಯಕಶಿಪುವನ್ನು ಮಲಗಿಸಿಕೊಂಡು ಅವನ ಹೊಟ್ಟೆಯನ್ನು ತನ್ನ ನಖಗಳಿಂದ ಬಗೆಯುತ್ತಿದ್ದಾನೆ. ಇತರ ಕಂಬಗಳಲ್ಲಿ ತ್ರಿಪುರಾಂತಕ ಶಿವ, ಅರ್ಧನಾರೀಶ್ವರ, ಗಜಸಂಹಾರ ಮೂರ್ತಿ ಮುಂತಾದ ವಿಗ್ರಹಗಳಿವೆ. ಗರ್ಭಗೃಹದ ಹೊರಗೋಡೆಗಳ ಮಾಡುಗಳಲ್ಲಿ ವಿಷ್ಣುವಿನ ಹಾಗೂ ನರ್ತನ ಶಿವನ ವಿಗ್ರಹಗಳಿವೆ. ಒಳಮಾಳಿಗೆಯಲ್ಲಿ ಅಡ್ಡಮಾಲಗಳ ಮೇಲೆ ಮೂರು ಬೃಹತ್ ಶಿಲೆಗಳಲ್ಲಿ ಬ್ರಹ್ಮ, ಉಮಾ ಮಹೇಶ್ವರನ ಹಾಗೂ ಅನಂತಶಯನ ವಿಷ್ಣುವಿನ ಮೂರ್ತಿಗಳನ್ನು ಬಿಡಿಸಿದೆ. ಇವು ನೋಡಲು ಭವ್ಯವಾಗಿದ್ದರೂ ನಂತರದ ಕಾಲದ ವಿಗ್ರಹಗಳಲ್ಲಿ ಕಾಣುವ ಲಾಲಿತ್ಯ ಇವುಗಳಲ್ಲಿಲ್ಲ. ಕೊಂತಿಗುಡಿಗಳ ಗುಂಪಿನ ಎರಡನೆಯ ಒಳ ಮಾಳಿಗೆಯ ಅಂಕಣದಲ್ಲಿ ಅಷ್ಟದಿಕ್ಪಾಲಕರ ವಿಗ್ರಹಗಳನ್ನು ಕೆತ್ತಲಾಗಿದೆ. ಇವರಲ್ಲಿ ಅಗ್ನಿ, ಕುಬೇರ, ಇಂದ್ರ ಈಶಾನರ ವಿಗ್ರಹಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಇನ್ನೂ ಮೂವರು ದಿಕ್ಪಾಲಕರ ವಿಗ್ರಹಗಳು ಭಿನ್ನವಾಗಿವೆ. ಶಿಲ್ಪ ಶಾಸ್ತ್ರದಲ್ಲಿ ಈ ದೇವತೆಗಳ ನಿಗದಿಗೊಳಿಸಿದ ಸ್ಥಾನಗಳಿವೆ. ಆದರೆ ಇಲ್ಲಿ ಆ ಸ್ಥಾನಗಳು ಪಲ್ಲಟಗೊಂಡಿವೆ. ಮಧ್ಯದಲ್ಲಿ ಶಿವ ಅಥವಾ ವಿಷ್ಣು ಇರಬೇಕು ಆದರೆ ಇಲ್ಲಿ ಬ್ರಹ್ಮನ ವಿಗ್ರಹವಿದೆ. ಕುಬೇರನ ಸ್ಥಾನದಲ್ಲಿ ಯಮನನ್ನು ಯಮನ ಸ್ಥಾನದಲ್ಲಿ ಅಗ್ನಿಯನ್ನು, ಅಗ್ನಿಯ ಸ್ಥಾನದಲ್ಲಿ ಈಶಾನ ಹಾಗೂ ಈಶಾನನ ಸ್ಥಾನದಲ್ಲಿ ಕುಬೇರನನ್ನು ಚಿತ್ರಿಸಲಾಗಿದೆ. ಇದರಿಂದ ಈ ಭಿತ್ತಿಯನ್ನು ಕೊರೆಯುವ ವೇಳೆಗೆ ಶಾಸ್ತ್ರ ಸಂಪ್ರದಾಯಗಳು ಸ್ಪಷ್ಟವಾಗಿ ಬೇರೂರಿರಲಿಲ್ಲವೆಂಬ ಊಹೆಯನ್ನು ಮಾಡಬೇಕಾಗುತ್ತದೆ. ಹುಚ್ಚಮಲ್ಲಿ ಗುಡಿಯ ಮುಖ ಮಂಟಪದ ಮಾಳಿಗೆಯಲ್ಲಿ ಕೆತ್ತಲಾದ ಕಾರ್ತಿಕೇಯ ವಿಗ್ರಹ ಸಮಕಾಲೀನ ಶಿಲ್ಪಗಳ ಅತ್ಯುತ್ತಮ ಮಾದರಿ. ಸರಳವಾಗಿರುವ ಈ ಮೂರ್ತಿಯಲ್ಲಿ ದೇಹ ಶಕ್ತಿಗಿಂತ ದೈವೀ ಶಕ್ತಿ ಮತ್ತು ಕಳೆ ಎದ್ದು ಕಾಣುತ್ತದೆ. ಸಮತೋಲನವನ್ನು ಕಾದುಕೊಳ್ಳಲು ಇದಕ್ಕೆ ಗಂಧರ್ವ ಶಿಲ್ಪಗಳನ್ನು ಜೋಡಿಸಲಾಗಿದ್ದು ಮೂಲ ವಿಗ್ರಹದ ಗಾತ್ರದಷ್ಟೇ ಇವೂ ಇರುವುದರಿಂದ ಇದು ಮುಂದೆ ಶಿಲ್ಪದಲ್ಲಿ ಬೆಳೆದ ತಂತ್ರ ಇನ್ನೂ ಸ್ಥಿರವಾಗಿಲ್ಲದಿದ್ದ ಕಾಲವನ್ನು ಸೂಚಿಸುತ್ತದೆ ಎಂದು ಅಭಿಪ್ರಾಯ ಪಡಲಾಗಿದೆ. ನವಿಲಿನ ಮೇಲೆ ಆಕಾಶದಲ್ಲಿ ಅನಾಯಾಸವಾಗಿ ಹಾರುತ್ತಿರುವ ದೇವ ಗಂಧರ್ವಾದಿಗಳು ಕೆಳಗೆ ಮೌನವಾಗಿ ನಿಶ್ಚಲನಾಗಿ ಜಡವಾಗಿ ಬಿದ್ದಿರುವ ರಾಕ್ಷಸ, ಇವುಗಳ ಪರಸ್ಪರ ವಿರೋಧ ಭಾವಗಳನ್ನು ಪರಿಣಾಮಕಾರಿಯಾಗಿ ಒಂದೆಡೆಯೇ ಮೂಡಿಸಿರುವುದು ಶಿಲ್ಪಿಯ ಜಾಣ್ಮೆಯನ್ನು ತೋರಿಸುತ್ತದೆ. ದೈವತ್ವದ ಜಯ, ಆಸುರೀಬಲದ ಅವಸಾನಗಳನ್ನು ಇದಕ್ಕಿಂತ ಚೆನ್ನಾಗಿ ಶಿಲ್ಪದಲ್ಲಿ ತೋರಿಸಲಾಗದೆಂಬಷ್ಟರ ಮಟ್ಟಿಗೆ ಈ ಶಿಲ್ಪ ಯಶಸ್ವಿಯಾಗಿದೆ ಎಂದು ಅಭಿಪ್ರಾಯ ಪಡಲಾಗಿದೆ. ಐಹೊಳೆಯಲ್ಲಿಯೇ ಅತ್ಯುತ್ತಮವಾದ ಹಲವಾರು ಮೂರ್ತಿಶಿಲ್ಪಗಳನ್ನು ನಾವು ದುರ್ಗ ಗುಡಿಯಲ್ಲಿ ಕಾಣಬಹುದು. ಮುಂಭಾಗದ ಕಂಬಗಳಲ್ಲಿ ಹಲವಾರು ಪ್ರಣಯಾಸಕ್ತ ದಂಪತಿಗಳ ಚಿತ್ರಗಳಿವೆ. ಎದುರುಗಡೆಯ ಮೊದಲ ಕಂಬದಲ್ಲಿ ಸ್ತ್ರೀಯೊಬ್ಬಳು ಪುರುಷನ ತಲೆಗೂದಲನ್ನು ಹಿಡಿದೆಳೆಯುತ್ತಿದ್ದಾಳೆ. ಆ ಕಂಬದ ಇನ್ನೊಂದು ಕಡೆಯ ಶಿಲ್ಪದಲ್ಲಿ ಪುರುಷನೊಬ್ಬ ಹೆಂಗಸನ್ನು ಹೊಡೆಯುತ್ತಿರುವಂತೆ ತೋರಿಸಿದೆ. ಇಲ್ಲಿನ ವಿಗ್ರಹಗಳಲ್ಲಿ ಅಂದಿನ ಶಿಲ್ಪಿಯು ಶಿಲ್ಪದಲ್ಲಿ ಭಾವಗಳನ್ನು ಮೂರ್ತ ಸ್ವರೂಪದಲ್ಲಿ ಕಾಣಿಸುವ ಕಲೆಯಲ್ಲಿ ಕಂಡ ಯಶಸ್ಸನ್ನು ನಾವು ಗುರುತಿಸಬಹುದು. ಮುಖಮಂಟಪದ ಕಂಬಗಳಲ್ಲಿ ದೇವತಾ ವಿಗ್ರಹಗಳನ್ನು ಕಡೆಯಲಾಗಿದೆ. ಹಿರಣ್ಯಕಶಿಪುವಿನ ಹೊಟ್ಟೆಯನ್ನು ಬಗೆಯುತ್ತಿರುವ ನರಸಿಂಹ, ಅರ್ಧನಾರೀಶ್ವರನ ಮೂರ್ತಿಗಳನ್ನು ಕಾಣಬಹುದು. ಇನ್ನೊಂದು ಕಂಬದಲ್ಲಿ ಪಾನಮತ್ತಳಾಗಿರುವ ಸ್ತ್ರೀಯನ್ನು ಪುರುಷನೊಬ್ಬ ಆಸರೆಕೊಟ್ಟು ಹಿಡಿಯುವುದನ್ನು ಕಾಣುತ್ತೇವೆ. ಹುಚ್ಚಪ್ಪಯ್ಯನ ಗುಡಿಯ ಹೊರಗೋಡೆಗಳನ್ನು ನೋಡಿದಾಗ ಒಳಗೆ ಶಿಲ್ಪಗಳಿರಬಹುದೆಂಬ ಕಲ್ಪನೆಯೂ ಬರುವುದಿಲ್ಲ. ಆದರೆ ಒಳಗಿನ ಸಭಾಮಂಟಪದಲ್ಲಿ ಶೈವ ಸಂಪ್ರದಾಯಕ್ಕೆ ಸೇರಿದ ಅನೇಕ ದೇವತಾ ಮೂರ್ತಿಗಳಿವೆ. ಎರಡೂ ಕಡೆಯ ಗೋಡೆಗಂಬಗಳಲ್ಲಿ ದ್ವಾರಪಾಲಕನಂತೆ ನಿಂತಿರುವ ಶಿವನ ವಿಗ್ರಹಗಳಿವೆ. ಬಲಭಾಗದ ಶಿವನು ಎಡಗಾಲೂರಿ ನಿಂತಿದ್ದಾನೆ. ಆತನ ಬಲಗಾಲು ಗದೆಯನ್ನು

ಸುತ್ತುವರಿದಿದೆ. ಎಡಭಾಗದ ವಿಗ್ರಹ ಬಲಗಾಲನ್ನೂರಿದ್ದು ಎಡಗಾಲು ಬಲಗಾಲಿನ ಹಿಂದೆ ಸರಿದಿದೆ. ಮುಖಮಂಟಪದ ಮಾಳಿಗೆಯಲ್ಲಿ ಅಷ್ಟ ಭುಜಗಳ ಆಕೃತಿಭಂಗ ಮುದ್ರೆಯಲ್ಲಿ ನರ್ತಿಸುತ್ತಿರುವ ಶಿವನ ವಿಗ್ರಹವನ್ನು ಕೆತ್ತಿದೆ. ಬಲಗಾಲು ಮೊಣಕಾಲಿನ ವರೆಗೂ ಬಾಗಿ ನರ್ತನಪಾದವನ್ನಿಡುವಂತೆ ತೋರುತ್ತದೆ. ನರ್ತನ ಭಂಗಿಯಲ್ಲಿ ಚಲನೆಯನ್ನು ಕಾಣಬಹುದು. ಮುಖದಲ್ಲಿ ಜೀವಕಳೆ ತುಂಬಿರುವ ಶಿವನ ಅಂಗಾಂಗಗಳು ಪ್ರಮಾಣಬದ್ಧವಾಗಿದ್ದು ಲಾಲಿತ್ಯ ಮೈವೆತ್ತಂತಿದೆ. ಈತನ ಎಡಕ್ಕೆ ಪಾರ್ವತಿ ಮುಗ್ಧಳಾಗಿ ವೀಕ್ಷಿಸುತ್ತಾ ನಿಂತಿದ್ದಾಳೆ. ಸೊಂಟದಲ್ಲಿ ಮಗುವೊಂದು (ಪ್ರಾಯಶಃ ಕುಮಾರ) ಇದೆ. ಗಣೇಶ ಮೇಲ್ಭಾಗದಲ್ಲಿ ನಿಂತಿದ್ದಾನೆ. ಸಭಾಮಂಟಪದಲ್ಲಿನ ಬೋದಿಗೆಗಳಲ್ಲಿ ಸಣ್ಣ ಸಣ್ಣ ವಿಗ್ರಹಗಳು, ಹೂವಿನಿಂದ, ಬಳ್ಳಿಗಳಿಂದ, ರೇಖಾ ವಿನ್ಯಾಸಗಳಿಂದ ಕೂಡಿದ ಚಿತ್ರಗಳು ಕೆತ್ತಲ್ಪಟ್ಟಿವೆ. ಗರ್ಭಗೃಹದ ಹೊರಗೋಡೆಯ ಮಾಡುಗಳೆರಡರಲ್ಲಿ ನರಸಿಂಹ ಹಾಗೂ ಗಜಾಸುರವಧ ಮೂರ್ತಿಯ ವಿಗ್ರಹಗಳಿವೆ. ಮೂರನೆಯದರಲ್ಲಿ ಈಗ ಯಾವ ವಿಗ್ರಹವೂ ಇಲ್ಲ.

ಪಟ್ಟದಕಲ್ಲು ಚಾಲುಕ್ಯ ವಾಸ್ತುಶೈಲಿಗೆ ಹೆಸರಾದ ಮೂರನೆಯ ಕೇಂದ್ರ. ಇಲ್ಲಿನ ದೇವಾಲಯಗಳಲ್ಲೂ ಮೂರ್ತಿಶಿಲ್ಪಗಳು ಅನೇಕವಿವೆ. ಸಂಗಮೇಶ್ವರಾಲಯದಲ್ಲಿ ಶಿವನಿಗೆ ಸಂಬಂಧಿಸಿದ ಉಬ್ಬು ಚಿತ್ರಗಳು ಅಧಿಕವಾಗಿವೆ. ಗಜಾಸುರ ಅಂಧಕಾಸುರ ವಧೆಗಳಿಗೆ ಸಂಬಂಧಿಸಿದವು ಹೆಚ್ಚು. ವಿರೂಪಾಕ್ಷ (ಲೋಕೇಶ್ವರ) ದೇವಾಲಯದ ನಂದಿ ಮಂಟಪದಲ್ಲಿ ಎತ್ತರವಾದ ನಂದಿಯ ಭವ್ಯ ವಿಗ್ರಹವಿದೆ. ಈ ವಿಗ್ರಹವಿರುವ ಕಟ್ಟೆಯ ಬದಿಯಲ್ಲಿ ಆನೆಗಳ, ಕುಬ್ಜರ ಕಿರುಗಾತ್ರದ ವಿಗ್ರಹಗಳಿದ್ದು ಅವು ಈ ಮಂಟಪವನ್ನು ಹೊತ್ತು ನಿಂತಂತೆ ಭಾಸವಾಗುತ್ತದೆ. ಗೋಡೆಗಳ ಮೇಲೆ ಪ್ರಣಯಾಸಕ್ತ ದಂಪತಿಗಳ, ಸ್ತ್ರೀಯರ, ಮೇಲ್ಭಾಗ ಮಾತ್ರ ಮಾನವಾಕೃತಿಯಲ್ಲಿದ್ದು ಕೆಳಭಾಗದಲ್ಲಿ ಪ್ರಾಣಿ ಅಥವಾ ಹೂ ಬಳ್ಳಿಯನ್ನು ತೋರಿಸಲಾದ ಕಿನ್ನರರ ಚಿತ್ರಗಳಿವೆ. ವಿವಿಧ ಭಂಗಿಗಳಲ್ಲಿನ ಈ ಸ್ತ್ರೀಯರ ಕೇಶಾಲಂಕಾರ, ಹಾವಭಾವಗಳು ಆಕರ್ಷಕವಾಗಿವೆ. ಈ ಆಲಯದ ಮೂರು ಮುಖಮಂಟಪಗಳಲ್ಲೂ ಕಂಬದ ಮೇಲೆ ಪ್ರಣಯಾಸಕ್ತ ದಂಪತಿಗಳ ವಿಗ್ರಹಗಳಿವೆ. ಒಂದರ ಛಾವಣಿಯಲ್ಲಿ ಪಾದರಕ್ಷೆ ಧರಿಸಿ, ಕಮಲಗಳನ್ನು ಹಿಡಿದು ರಥದಲ್ಲಿ ನಿಂತ ಸೂರ್ಯನ ವಿಗ್ರಹವಿದೆ. ಎರಡೂ ಕಡೆ ಉಷೆ ಮತ್ತು ಪ್ರತ್ಯೂಷೆಯರು ಬಿಲ್ಲುಬಾಣಗಳನ್ನು ಹಿಡಿದು ನಿಂತಿದ್ದಾರೆ. ಏಳು ಕುದುರೆಗಳ, ಅರುಣನ ಸಾರಥ್ಯದ ರಥಮೋಡಗಳಲ್ಲಿ ಚಲಿಸುತ್ತಿರುವಂತೆ ಸುತ್ತಲೂ ಅಲೆಗಳನ್ನು ಶಿಲ್ಪದಲ್ಲಿ ಸೂಚಿಸಲಾಗಿದೆ. ದಕ್ಷಿಣದ ಮುಖಮಂಟಪದಲ್ಲಿ ಕೈಲಾಸವನ್ನೆತ್ತುತ್ತಿರುವ ರಾವಣನ ದೃಶ್ಯವಿದೆ. ರಾವಣನ ಒಂದು ಪಾದ ಭಾರ ತಾಳದೆ ನೆಲದಲ್ಲಿ ಹೂತಿದೆ. ಬೆಟ್ಟದಲ್ಲಿನ ಪ್ರಾಣಿಗಳು– ಸಿಂಹ, ಹಂದಿ, ಜಿಂಕೆ, ಹಾವು, ಚೇಳು ಇತ್ಯಾದಿ– ಭಯಭೀತವಾಗಿ ಓಡುತ್ತಿವೆ. ಶಿವಗಣಗಳು ರಾವಣನತ್ತ ಕಲ್ಲುಗಳನ್ನು ಬೀಸಿ, ಬಾಣಗಳನ್ನು ಬಿಡುತ್ತಿದ್ದಾರೆ. ಪಾರ್ವತಿ ಸಹ ಹೆದರಿ ಶಿವನನ್ನು ತಬ್ಬಿಕೊಂಡಿದ್ದಾಳೆ. ಆದರೆ ಶಿವ ಮಾತ್ರ ಅಚಲನಾಗಿ, ಹಸನ್ಮುಖಿಯಾಗಿ ಕುಳಿತಿದ್ದಾನೆ. ಇದೊಂದು ಭಾವಪೂರಿತ ಶಿಲ್ಪಚಿತ್ರ. ಮಾನವನ ಅಲ್ಪತೆ, ದೈವದ ಹಿರಿಮೆಗಳ ರಸವತ್ತಾದ ನಿರೂಪಣೆ. ಅದರಂತೆಯೇ ಉತ್ತರದ ಮುಖಮಂಟಪದಲ್ಲಿ ಗರುಡವಾಹನನಾದ ವಿಷ್ಣು, ಮೊಸಳೆಯ ಬಾಯಿಗೆ ಸಿಕ್ಕಿದ ಗಜೇಂದ್ರನನ್ನು ರಕ್ಷಿಸಲು ಧಾವಿಸಿ ಬಂದು ಸುದರ್ಶನದಿಂದ ಮೊಸಳೆಯ ಕುತ್ತಿಗೆಯನ್ನು ಕತ್ತರಿಸುತ್ತಿರುವ ದೃಶ್ಯಾವಳಿ ಇದೆ. ಕಂಬಗಳ ಮೇಲೆ ರಾಮಾಯಣ, ಮಹಾಭಾರತ, ಪುರಾಣಗಳು, ಹರಿವಂಶ, ಪಂಚತಂತ್ರಗಳ ಕಥಾಭಾಗಗಳನ್ನು, ಸಾಮಾಜಿಕ ಸನ್ನಿವೇಶಗಳನ್ನು, ರೇಖಾವಿನ್ಯಾಸಗಳನ್ನು ಹೂಬಳ್ಳಿಗಳನ್ನು ಚಿತ್ರಿಸಲಾಗಿದೆ. ಪಾಪನಾಥ ದೇವಾಲಯದಲ್ಲಿನ ಒಂದು ಅರೆಗಂಬದಲ್ಲಿನ ಚಿತ್ರಪಟ್ಟಿಕೆಯಲ್ಲಿ ಬಹುಶಃ ರಾಜನ ಆಸ್ಥಾನವೆನ್ನಬಹುದಾದ ಒಂದು ವಿಸ್ತೃತ ಚಿತ್ರವಿದೆ. ಸಿಂಹಾಸನದಲ್ಲಿ ಕುಳಿತ ಅರಸನ ಬದಿಗೆ ನಿಂತ ಇಬ್ಬರು ಅರಸಿಯರು (?) ಎಡಭಾಗದಲ್ಲಿ ಕೆಳಗಡೆ ಕುಳಿತಿರುವ ಸಾಮಂತ ಅರಸರು ಕಾಣಿಸಿಕೊಂಡಿದ್ದಾರೆ. ಇದು ಬಹುಮಟ್ಟಿಗೆ ಇಮ್ಮಡಿ ವಿಕ್ರಮಾದಿತ್ಯನ ಮತ್ತು ಆತನ ಇಬ್ಬರು ಅರಸಿಯರಾದ ಲೋಕಮಹಾದೇವಿ ಮತ್ತು ತ್ರೈಲೋಕ್ಯ ಮಹಾದೇವಿಯರು ಮತ್ತು ಅವರ ಸಾಮಂತರರನ್ನು ಪ್ರತಿನಿಧಿಸುತ್ತದೆ ಎಂದು ಅಭಿಪ್ರಾಯಪಡಲಾಗಿದೆ. ಆದರೆ ಮಿಕ್ಕೆಲ್ಲರೂ ಕುಳಿತಿರುವಾಗ ಇಬ್ಬರು ಅರಸಿಯರು ಮಾತ್ರ ನಿಂತಿರುವುದರ ಔಚಿತ್ಯವೇನು ಎಂಬುದು ತಿಳಿಯದು. ಮುಖಮಂಟಪದ ಅಧಿಷ್ಠಾನದಲ್ಲಿ ಸಿಂಹ ಮತ್ತು ಆನೆ ಸವಾರರ ಚಿತ್ರಗಳಿವೆ. ಗೋಡೆಯ ಮೇಲೆ ಉದ್ದಕ್ಕೂ ಚಿತ್ರ ಫಲಕಗಳಿದ್ದು ಅವುಗಳಲ್ಲಿ ರಾಮಾಯಣದ ಮುಖ್ಯ ಘಟನೆಗಳನ್ನು ಚಿತ್ರಿಸಲಾಗಿದೆ. ಇಲ್ಲಿನ ಒಂದು ವೈಶಿಷ್ಟ್ಯವೆಂದರೆ ಈ ಚಿತ್ರಗಳಿಗೆ ಕೆಳಭಾಗದಲ್ಲಿ ಅದರ ವಿವರಣೆಯೆಂಬಂತೆ ಸಣ್ಣ ಸಣ್ಣ ಶಾಸನಗಳಲ್ಲಿ ಸಂಬಂಧಿಸಿದ ನಾಯಕರ ಹೆಸರುಗಳನ್ನು ಅಲ್ಲಲ್ಲಿ ಸೂಚಿಸಿರುವುದು, (ಲಕ್ಕಣ, ಸುಪ್ಪನಕಿ, ರಭಣ, ಬಾಲಿ, ಅಣುಮ, ಕುಂಭಕರ್ಣನ್, ರಾಮನ್ ಇತ್ಯಾದಿ). ಗರ್ಭಗುಡಿಯ ಇತರ ಗೋಡೆಗಳ ಮೇಲೂ ಇಂತಹ ಚಿತ್ರಗಳಿವೆ. ಅವು ಶೈವ ಧರ್ಮಕ್ಕೆ ಸೇರಿದ ಮೂರ್ತಿಗಳು. ಶೈವ ಪುರಾಣಗಳಿಂದ ಆಯ್ದ ಕೆಲವು ಕತೆಗಳ ನಿರೂಪಣೆ. ಮಧ್ಯೆ ಮಧ್ಯೆ ವಿಷ್ಣುವಿನ ಅವತಾರ ಮೂರ್ತಿಗಳನ್ನೂ ಕಂಡರಿಸಲಾಗಿದೆ. ಜೊತೆಗೆ ಈ ಚಿತ್ರಗಳಲ್ಲಿ ಹಲವಾರಕ್ಕೆ ರೂವಾರಿಯ ಹೆಸರನ್ನೂ ಕಂಡರಿಸಲಾಗಿದೆ– ಸರ್ವಸಿದ್ಧಿ ಆಚಾರಿ (ಆದಿತ್ಯ ಶ್ರೀಪಾದ ದೇವನ ಮಗ), ದುಗ್ಗಿ ಆಚಾರಿಯ ಮಗ ಬಲದೇವ, ಚಜ್ಗಮ್ಮ, ಮಲ್ಲಪ್ಪ, ರೇವಡಿ ಓಜ (ಸರ್ವಸಿದ್ಧಿ ಆಚಾರಿಯ ಮಗ) ಇತ್ಯಾದಿ.

ಚಾಲುಕ್ಯ ಶಿಲ್ಪಗಳ ಕೆಲವು ವಿಶಿಷ್ಟ ಲಕ್ಷಣಗಳನ್ನು ಗಮನಿಸಬಹುದು. ಸಾಮಾನ್ಯವಾಗಿ ಇವು ತುಂಬಿದ ಗಲ್ಲಗಳ ದುಂಡುಮುಖ, ಮೀನಿನ ಕಣ್ಣು, ಮುಗುಳ್ನಗೆ ಸೂಸುವ ದಪ್ಪ ತುಟಿಗಳು, ವಿಶಾಲವಾದ ಎದೆಗಳನ್ನುಳ್ಳವುಗಳು. ಅಲಂಕರಣ ಬಹಳ ಕಡಿಮೆ. ಆದರೆ ಶಿಲ್ಪಗಳಲ್ಲಿ ಭಾವಪ್ರದರ್ಶನ ಆಕರ್ಷಕ. ಪ್ರಣಯಾಸಕ್ತ ದಂಪತಿಗಳ ಶಿಲ್ಪಗಳಲ್ಲಿ ಹೆಣ್ಣಿನ ಸಹಜ ಸ್ನಿಗ್ಧ ಸೌಂದರ್ಯ, ನಾಚಿಕೆ, ಕೊಂಕು, ಬಳುಕು, ಬೆಡಗುಗಳು ಗಮನಾರ್ಹ. ಇವುಗಳಲ್ಲಿ ಭಿನ್ನತೆಗಳಿಲ್ಲದಿಲ್ಲ. ಸಮಕಾಲೀನ ದ್ರಾವಿಡ ಹಾಗೂ ಉತ್ತರ ಭಾರತದ ಅರಸುಮನೆತನಗಳೊಡನಾದ ಸಂಪರ್ಕಗಳ ಪರಿಣಾಮವಾಗಿ ಅಲ್ಲಿನ ವಾಸ್ತು ಹಾಗೂ ಮೂರ್ತಿಗಳ ಶಿಲ್ಪಗಳ ಪ್ರಭಾವವೂ ಇವುಗಳ ಮೇಲೆ ಆಗಿವೆ. ಜೊತೆಗೆ ಹಲವಾರು ಕಲ್ಪನೆ, ಜಾಣ್ಮೆಗಳೂ ಸಹ ಭಿನ್ನತೆಗಳಿಗೆ ಕಾರಣಗಳು. ಈ ಶಿಲ್ಪಗಳಲ್ಲಿ ಗುಪ್ತರ ಶೈಲಿಯ ಪ್ರಭಾವ ಹೆಚ್ಚಾಗಿದೆ. ಗುಹೆಗಳಲ್ಲಿನ ಉಬ್ಬು ಶಿಲ್ಪಗಳ ಬೃಹತ್ಪ್ರಮಾಣಗಳು ಶಿಲ್ಪಿಯ ಸಾಮರ್ಥ್ಯಕ್ಕೆ ಆಹ್ವಾನಗಳಂತಿದ್ದು ಅವುಗಳನ್ನು ರೂವಾರಿಗಳು ಯಶಸ್ವಿಯಾಗಿ ಎದುರಿಸಿದ್ದಾರೆ. ಮೂಲವಿಗ್ರಹದ ಪ್ರಮಾಣಕ್ಕೆ ಹೋಲಿಸಿದರೆ ಅದರ ಪಕ್ಕಗಳಲ್ಲಿನ ಇತರ ದೇವತೆಗಳು ಅಲ್ಪವಾಗಿ ತೋರುತ್ತವೆ, ಆದರೆ ಅವುಗಳಲ್ಲಿಯೂ ಸರಳತೆ, ಸೌಖ್ಯ, ಸಂತೋಷ,

ಹಾಸ್ಯಗಳು ಹೊಮ್ಮಿವೆ. ಮೂರ್ತಿಗಳ ಚಲನ ರೂವಾರಿಗಳ ಜಾಣ್ಮೆಯ ಸಂಕೇತ.

## ರಾಷ್ಟ್ರಕೂಟ

ರಾಜಕೀಯವಾಗಿ ರಾಷ್ಟ್ರಕೂಟರು ಚಾಲುಕ್ಯರ ಉತ್ತರಾಧಿಕಾರಿಗಳು. ಆದರೆ ಕರ್ನಾಟಕದಲ್ಲಿ ಇವರ ದೇವಾಲಯಗಳು, ಮೂರ್ತಿಶಿಲ್ಪಗಳು ಅತಿ ವಿರಳವಾಗಿರುವುದು ಆಶ್ಚರ್ಯದ ಸಂಗತಿ. ಮಹಾರಾಷ್ಟ್ರದ ಎಲ್ಲೋರ, ಎಲಿಫಾಂಟಗಳಲ್ಲಿ ಇವರ ಕಾಲದ ಶಿಲ್ಪಗಳಿವೆ. ಅವುಗಳನ್ನು ಕಂಡಾಗ ಚಾಲುಕ್ಯರ ಸಂಪ್ರದಾಯವನ್ನೇ ಅವರು ಮುಂದುವರಿಸಿಕೊಂಡು ಹೋದುದು ಸ್ಪಷ್ಟವಾಗುತ್ತದೆ. ಅದರಲ್ಲೂ ಬೃಹತ್ಪ್ರಮಾಣದ ಶಿಲ್ಪಗಳು ಈ ಕಾಲದಲ್ಲಿ ಅವುಗಳ ಪರಾಕಾಷ್ಠೆಯನ್ನು ಮುಟ್ಟಿದ್ದುವು. ಕೈಲಾಸ ದೇವಾಲಯದಲ್ಲಿ ಗರ್ಭಗುಡಿಯ ವರೆಗೂ ಹೊರ ಮತ್ತು ಒಳಗೋಡೆಗಳಲ್ಲಿ, ಶೈವ ಮೂರ್ತಿಗಳನ್ನು, ರಾಮಾಯಣ–ಮಹಾಭಾರತಗಳ, ಹರಿವಂಶದ ಘಟನೆಗಳನ್ನು ನಿರೂಪಿಸುವ ಶಿಲ್ಪಗಳ ಸಾಲುಗಳನ್ನು ಕಾಣುತ್ತೇವೆ. ತನ್ನ ಒಂದೊಂದೇ ತಲೆಯನ್ನು ಶಿವನಿಗೆ ಅರ್ಪಿಸುತ್ತಿರುವ ರಾವಣ, ಗಂಗೆ ಯಮುನೆ ಹಾಗೂ ಸರಸ್ವತಿಯರು, ಅಸುರರನ್ನು ಬೆನ್ನಟ್ಟಿರುವ ಸಿಂಹವಾಹಿನಿಯಾದ ದುರ್ಗೆ ಮುಂತಾದ ಶಿಲ್ಪಗಳಿವೆ. ಛೋಟಾ ಕೈಲಾಸದಲ್ಲಿ ಇಂದ್ರ ಮತ್ತು ಇಂದ್ರಾಣಿಯರ ವಿಗ್ರಹಗಳಿವೆ. ಆನೆಯ ಮೇಲೆ ಕುಳಿತ ಇಂದ್ರನು ಅಮರಾವತಿಯಲ್ಲಿ ತನ್ನ ಸಭೆಯನ್ನು ಅಲಂಕರಿಸಿ ಕುಳಿತಂತೆ ಒಂದು ವಿಗ್ರಹದಲ್ಲಿ ಭಾಸವಾಗುತ್ತದೆ. ಎಲಿಫೆಂಟಾದ ಮಹಾದೇವನ ಮೂರ್ತಿಯಂತೂ ವಿಶ್ವವಿಖ್ಯಾತವೆನ್ನಬಹುದಾದ ಶಿಲ್ಪಕೃತಿ. ಇದಲ್ಲದೆ ನಟರಾಜ, ಗಜಾಸುರ ಸಂಹಾರಿ, ಗಂಗಾಧರ ಮುಂತಾದ ಶೈವದೇವತೆಗಳ ವಿಗ್ರಹಗಳೂ ಇಲ್ಲಿವೆ. ರಾಷ್ಟ್ರಕೂಟರ ಶಿಲ್ಪಕ್ಕೆ ವಿಶಿಷ್ಟವಾದ ಉದಾಹರಣೆಗಳನ್ನು ಆ ಕಾಲದಲ್ಲಿ ಗ್ರಾಮಗಳ ನಗರಗಳ ಪ್ರವೇಶದ್ವಾರಗಳಲ್ಲಿ ನಿಲ್ಲಿಸಲಾದ ತೋರಣಕಂಬಗಳಲ್ಲಿ ಹಾಗೂ ನೂರಾರು ವೀರಗಲ್ಲುಗಳಲ್ಲಿ ಕಾಣಬಹುದಾಗಿದೆ. ತೋರಣಗಳು ಅಲಂಕೃತವಾಗಿದ್ದು ಅವುಗಳಲ್ಲಿ ಮಂಗಳಪ್ರದವೆನಿಸುವ ಕಳಶ, ಕನ್ನಡಿ, ಮೀನದ್ವಯಗಳನ್ನು ಗಜಲಕ್ಷ್ಮಿಯ ವಿಗ್ರಹವನ್ನು ಕೆತ್ತಿದೆ. ಇವರ ಕಾಲದ ವೀರಗಲ್ಲುಗಳು ಎತ್ತರದ ನಿಲುವಿನವು. ೧೩-೧೪ ಅಡಿಗಳಷ್ಟು ಎತ್ತರದ ವೀರಗಲ್ಲುಗಳೂ ಬೆಟಗೇರಿಯಲ್ಲಿವೆ. ಹೆಚ್ಚಿನ ಅಲಂಕರಣವಿಲ್ಲದಿದ್ದರೂ ವೀರನ ಮುಖದಲ್ಲಿ ಶೌರ್ಯ ಗಾಂಭೀರ್ಯಗಳು ಹೊಮ್ಮಿವೆ. ವೀರರನ್ನು ಸ್ವರ್ಗಕ್ಕೆ ಕೊಂಡೊಯ್ಯುವ ದೃಶ್ಯವನ್ನು ಮೋಡಗಳ ಸಂಕೇತಗಳ ಮೂಲಕ ತೋರಿಸಲಾಗಿದೆ. ಅಪ್ಸರೆಯರು, ಗಂಧರ್ವರು ಹಾಡಿ ಹೊಗಳುವ ಚಿತ್ರಗಳನ್ನು ಇವುಗಳಲ್ಲಿ ಕಾಣಬಹುದು. ಇವರ ವೀರಗಲ್ಲುಗಳಲ್ಲಿ ಕೆಲವು ಕಡೆ ಹಾಗೂ ಮಧ್ಯೆ ಚೌಕಾಕಾರದಲ್ಲಿದ್ದು ಮೇಲೆ ಶಿವಲಿಂಗಾಕಾರದಂತಿರುವ ಕೆಲವು ಕಲ್ಲುಗಳಲ್ಲಿ ನೇಗಿಲಿನ ಚಿತ್ರವನ್ನು ಚೆನ್ನಾಗಿ ಕಂಡರಿಸಿರುವುದೂ ಗಮನಾರ್ಹವೇ.

## ಗಂಗ

ಸಮಕಾಲೀನವಾಗಿ ದಕ್ಷಿಣ ಕರ್ನಾಟಕದಲ್ಲಿ ಗಂಗವಾಡಿ ಎನಿಸಿದ ಪ್ರದೇಶದಲ್ಲಿ ಗಂಗರು ಕಟ್ಟಿದ ದೇವಾಲಯಗಳು ಉಳಿದು ಬಂದಿಲ್ಲವಾದರೂ ಅವುಗಳ ಪ್ರಸ್ತಾಪ ಶಾಸನಗಳಲ್ಲಿವೆ. ಆ ಕಾಲದ ಹಲವಾರು ಆಲಯಗಳು ನಂತರ ಜೀರ್ಣೋದ್ಧಾರಗೊಂಡಿವೆ. ಅವಶೇಷಗಳಾಗಿ ಕೆಲವು ಮೂರ್ತಿಶಿಲ್ಪಗಳೂ ಕಂಬಗಳೂ ಉಳಿದು ಬಂದಿವೆ. ಪಲ್ಲವ ಚಾಲುಕ್ಯ ರಾಜ್ಯಗಳ ನಡುವಣ ಈ ಪ್ರದೇಶದಲ್ಲಿ ಎರಡೂ ಸಂಪ್ರದಾಯಗಳ ಪ್ರಭಾವ ಕಲೆಯ ಮೇಲೂ ಕಾಣಿಸಿಕೊಂಡಿದೆ. ಮೈಸೂರು ಜಿಲ್ಲೆಯ ನರಸಮಂಗಲದ ರಾಮಲಿಂಗೇಶ್ವರಾಲಯ ಈ ಪ್ರಾದೇಶಿಕ ಶೈಲಿಯ ಪ್ರಾಚೀನ ಮಾದರಿ. ಸುಮಾರು ೮ನೆಯ ಶತಮಾನದ ಈ ಆಲಯದ ಕೋಷ್ಠಗಳಲ್ಲಿ ಯಕ್ಷರ ಹಾಗೂ ಅಪ್ಸರೆಯರ ಅಲಂಕೃತ ವಿಗ್ರಹಗಳಿವೆ. ಒಳಗಡೆ ತಾಂಡವೇಶ್ವರ, ದಕ್ಷಿಣಾಮೂರ್ತಿ, ಉಗ್ರನರಸಿಂಹ, ಬ್ರಹ್ಮ, ಭೈರವಿಗಳ ವಿಗ್ರಹಗಳೂ ಇವೆ. ವಿಶಾಲವಾದ ಎದೆ, ಕೃಶವಾದ ಕಟಿ, ನೀಳವಾದ ಕೈಗಳು ಗಾರೆಯಲ್ಲಿ ಮಾಡಲಾದ ಈ ವಿಗ್ರಹಗಳ ಲಕ್ಷಣಗಳು. ಒಳಗಿನ ಛಾವಣಿಯಲ್ಲಿ ಅಷ್ಟಭುಜಗಳ ನರ್ತನ ಶಿವನ ಸುತ್ತಲೂ ಅಷ್ಟ ದಿಕ್ಪಾಲರುಗಳನ್ನು ಕಂಡರಿಸಿದೆ. ಇಂತಹುದೇ ಮೂರ್ತಿ ಅರಳುಗುಪ್ಪೆಯ ಹತ್ತನೆಯ ಶತಮಾನದ ಕಲ್ಲೇಶ್ವರ ದೇವಾಲಯದಲ್ಲೂ ಇದೆ. ತಾಂಡವನ ಪ್ರಳಯಕಾಲದ ವೀರ್ಯವತ್ತಾದ ನೃತ್ಯದ ಭಾವಗಳು ಆಕರ್ಷಕವಾಗಿವೆ. ಸುತ್ತಲಿನ ಕೊಳಲು, ತ್ರಿಪಟೆ ಹಾಗೂ ತಾಳಗಳ ವಾದ್ಯಗಾರರ ವಾದ್ಯಗಳಿಗೆ ಲಯಬದ್ಧವಾಗಿ ಈತನ ಅಂಗಾಂಗಗಳು ಚಲಿಸುತ್ತಿದ್ದಂತೆ ತೋರಿಸಲಾಗಿದೆ. ಇಲ್ಲಿನ ಉಮಾಮಹೇಶ್ವರ ಮೂರ್ತಿಯೂ ಚಿತ್ತಾಕರ್ಷಕವಾಗಿದೆ. ಮಹೇಶ್ವರ ಸುಖಾಸನದಲ್ಲಿ ಕುಳಿತಿದ್ದಾನೆ. ಆತನ ಎಡಕ್ಕೆ ಉಮೆ. ದೇಹಗಳ ಬಾಹ್ಯಾಕಾರದ ಸೊಬಗು, ಪ್ರಮಾಣಬದ್ಧತೆ, ಶಾಂತಿಯ ಭಂಗಿ ಆಶ್ಚರ್ಯಕರವಾಗಿದೆ. ದಿಕ್ಪಾಲಕರು ತಮ್ಮ ಅಂಗನೆಯರನ್ನಪ್ಪಿ ವಾಹನಾರೂಢರಾಗಿದ್ದಾರೆ. ಮೈಸೂರು ಜಿಲ್ಲೆಯ ಕತ್ತೂರಿನ ಕಾಮೇಶ್ವರಾಲಯದಲ್ಲಿ ಪಲ್ಲವ ಶೈಲಿಯ ಸಿಂಹಪೀಠದ ಕಂಬಗಳು, ಸುಂದರವಾದ ದ್ವಾರಪಾಲಕರ, ರೌದ್ರಾಕಾರದ ಮಹಿಷಮರ್ದಿನಿಯ ವಿಗ್ರಹಗಳೂ ಇವೆ. ವರುಣ ಗ್ರಾಮದ ಭೂತೇಶ್ವರಾಲಯದ ಹೊರಗೋಡೆಯ ಮೇಲೆ, ಕಪೋತದ ಕೆಳಗೆ ಪುರಾಣಗಳ, ರಾಮಾಯಣದ ಕತೆಗಳ ಶಿಲ್ಪ ಪಟ್ಟಿಕೆಗಳಿವೆ. ಕೋಲಾರ ಜಿಲ್ಲೆಯ ನಂದಿ ಗ್ರಾಮದ ಭೋಗ ನಂದೀಶ್ವರಾಲಯದಲ್ಲಿ ಹೊರ ಗೋಡೆಯ ಬುಡದ ದಿಂಡುಗಳ ಮೇಲೆ ಮಕರ, ಆನೆ, ಸಿಂಹ ಮತ್ತು ಕುಬ್ಜ ಗಣಗಳು, ಜಾಲಂದರಗಳಲ್ಲಿ ಬಳ್ಳಿಗಳ ಸುರುಳಿಗಳಲ್ಲಿ ನೃತ್ಯಗೀತ ವಾದ್ಯಗಳಲ್ಲಿ ತನ್ಮಯರಾದ ಕುಬ್ಜರು. ಮೇಲಿನ ಕಮಾನುಗಳ ಕೆಳಗೆ ಶಿವಲೀಲೆಗಳಿಗೆ ಸಂಬಂಧಿಸಿದ ವಿವಿಧ ಭಂಗಿಗಳ ವಿಗ್ರಹಗಳಿವೆ. ನವರಂಗದ ಕಂಬದ ಮೇಲೂ ತೆಳುವಾಗಿ ಮೂರ್ತಿಗಳನ್ನು ಕಂಡರಿಸಿದೆ. ಮೂರು ಸ್ತರಗಳ ಗೋಪುರದ ಒಂದೊಂದು ಸ್ತರದಲ್ಲೂ ಕೋಷ್ಠಗಳಲ್ಲಿ ತ್ರಿಪುರ ದಹನ, ತಾಂಡವೇಶ್ವರ, ಲಕ್ಷ್ಮೀನಾರಾಯಣ, ಕುಮಾರಸ್ವಾಮಿ ಮೊದಲಾದ ದೇವತೆಗಳ ಆಕರ್ಷಕ ಮೂರ್ತಿಗಳಿವೆ. ಇದು ಗಂಗರ ಶೈಲಿಯ ಉನ್ನತಿಯ ಕಾಲದ ಸರ್ವಾಲಂಕಾರ ಭೂಷಿತ ಆಲಯ. ಪಲ್ಲವ ಶೈಲಿಯ ಗಾಢವಾದ ಪ್ರಭಾವ ಇದರ ಮೇಲಾಗಿದೆ. ಶ್ರವಣಬೆಳಗೊಳದ ಚಾಮುಂಡರಾಯನ ಬಸದಿಯ ಕೀರ್ತಿ ಮುಖದ ಕಮಾನು ಗೂಡುಗಳಲ್ಲಿ ಕುಳಿತಿರುವ ಜನ ಹಾಗೂ ಇತರ ಜೈನ ಮೂರ್ತಿಗಳಿವೆ. ನವರಂಗದ ದ್ವಾರದಲ್ಲಿ ಹೂಗಳನ್ನು ಹಿಡಿದಿರುವ ಸ್ತ್ರೀ ವಿಗ್ರಹಗಳು ಲಜ್ಜಾಸ್ಪದ ಮುಗುಳ್ನಗೆಯನ್ನು ಸೂಚಿಸುತ್ತಾ ವಿನಯವೇ ಮೂರ್ತಿವತ್ತಂತಿವೆ. ಆ ಕಾಲದ ವೀರಗಲ್ಲುಗಳಿಗೆ ಬಹುಮಟ್ಟಿಗೆ ಗ್ರಾನೈಟ್ ಶಿಲೆಯನ್ನೇ ಬಳಸಲಾಗಿದೆ. ವಿಗ್ರಹಗಳನ್ನು ಕೆತ್ತಿರುವ ಮುಖಭಾಗಗಳನ್ನು ನಯಗೊಳಿಸಿರುವುದಿಲ್ಲ. ಇವುಗಳಲ್ಲಿ ಚಿತ್ರಿತವಾದ ದಷ್ಟಪುಷ್ಟ ಶರೀರದ ಸೈನಿಕರು ತಲೆಗೂದಲನ್ನು ಮೇಲಕ್ಕೆತ್ತಿ ಗಂಟು ಕಟ್ಟಿ ಕತ್ತಿ ಗುರಾಣಿಗಳನ್ನು ಹಿಡಿದಂತೆ ಕಾಣಿಸಿಕೊಂಡಿದ್ದಾರೆ. ವೀರಗಚ್ಚೆ ಹಾಕಿದ ಇವರು ಸೊಂಟ ಪಟ್ಟಿಯಲ್ಲಿ ಚಾಕುವನ್ನು ಸಿಕ್ಕಿಸಿರು

ವುದೂ ಉಂಟು. ಸಂಸ್ಕರಣಕ್ಕೊಳಪಡದ ಮೂರ್ತಿಗಳೆನಿಸಿದರೂ ಅವರಲ್ಲಿ ಕಾಣುವ ದೃಢ ನಿರ್ಧಾರ ಭಾವ ಪ್ರಶಂಸಾರ್ಹ. ಬೆಂಗಳೂರಿನ ವಸ್ತು ಸಂಗ್ರಹಲಯದಲ್ಲಿರುವ ಬೇಗೂರು ಹಾಗೂ ದೊಡ್ಡಹುಂಡಿ ಗ್ರಾಮಗಳ ವೀರಗಲ್ಲುಗಳು ಉತ್ತಮ ನಿದರ್ಶನಗಳಾಗಿವೆ. ಆದರೆ ಎಲ್ಲವುಗಳಿಗಿಂತ ಮಿಗಿಲಾದುದು, ವಿಶ್ವವಿಖ್ಯಾತಿಯನ್ನು ಪಡೆದಿರುವುದು ಶ್ರವಣಬೆಳಗೊಳದ ಗೊಮ್ಮಟ ವಿಗ್ರಹ. ವಿಶ್ವದ ಶಿಲ್ಪಕಲೆಗೆ ಅನುಪಮ ಕಾಣಿಕೆ. ೫೭ ಅಡಿಗಳಷ್ಟು ಎತ್ತರದ ಈ ವಿಗ್ರಹ ಬೃಹತ್ತು, ಮಹತ್ತುಗಳಿಗೆ ಹೆಸರಾದುದು. ಕಾಯೋತ್ಸರ್ಗ ಭಂಗಿಯಲ್ಲಿ ಕಮಲ ಪೀಠದ ಮೇಲೆ ನಿಂತಿರುವ ಈ ಮೂರ್ತಿಯ ಪಾದಗಳ ಬಳಿ ಹುತ್ತ ಬೆಳೆದಿದೆ. ಅದರ ಬಾಯಿಂದ ಸರ್ಪಗಳು ಸರಿದಾಡುತ್ತಿವೆ. ಬಳ್ಳಿಗಳು ಕಾಲಿನಿಂದ ಹಬ್ಬಿ ಎರಡೂ ಕೈಗಳನ್ನು ಸುತ್ತುವರಿದು ಭುಜಗಳಲ್ಲಿ ಮುಗಿದಿವೆ. ಗುಂಗುರು ತಲೆಗೂದಲು. ಮುಖದಲ್ಲಿ ತನ್ಮಯತೆ ಹಾಗೂ ಧ್ಯಾನಮಗ್ನ ಗಾಂಭೀರ್ಯ. ಆದರೂ ಮಂದಸ್ಮಿತವದನ. ಮುಖದ ಸೌಂದರ್ಯ, ಗಾಂಭೀರ್ಯ ವರ್ಣನಾತೀತ. ಗಂಗರ ಮಂತ್ರಿಯೊದ ಚಾವುಂಡರಾಯ ಕೆತ್ತಿಸಿದ. ಕ್ರಿ.ಶ. ೯೮೩ರಲ್ಲಿ ಕವಿ ವರ್ಣಿಸಿರುವಂತೆ ಉತ್ತುಂಗತೆ, ಸೌಂದರ್ಯ, ಔನ್ನತ್ಯ, ಅತಿಶಯಗಳು ಹದವಾಗಿ ಮೇಳೈಸಿವೆ. ಇದರ ಶಿಲ್ಪಿ ಮಾತ್ರ ಅನಾಮಿಕನಾಗುಳಿದಿದ್ದಾನೆ.

## ನೊಳಂಬ

ಗಂಗರಂತೆಯೇ ನೊಳಂಬರು ಸಹ ೮-೧೦ನೆಯ ಶತಮಾನಗಳಲ್ಲಿ ಸಾಮಂತರಾಗಿ ಆಳಿದವರು. ಮೂಲತಃ ಪಲ್ಲವ ಕುಲಕ್ಕೆ ಸೇರಿದ ಇವರು ಚಾಲುಕ್ಯ, ಗಂಗ ಶೈಲಿಗಳನ್ನು ಪಲ್ಲವ ಶೈಲಿಗೆ ಅಳವಡಿಸಿ ತಮ್ಮದೇ ಆದ ನೊಳಂಬ ಶೈಲಿಯನ್ನು ರೂಪಿಸಿದರು. ಇದೂ ಒಂದು ಪ್ರಾದೇಶಿಕ ಶೈಲಿಯೇ. ಅನಂತಪುರ ಜಿಲ್ಲೆಯ ಹೇಮಾವತಿ ಇವರ ರಾಜಧಾನಿ. ಕೋಲಾರ ಜಿಲ್ಲೆಯ ಆವನಿ, ನಂದಿ ಇವರ ಇತರ ಪ್ರಮುಖ ಕೇಂದ್ರಗಳು. ಆವನಿಯ ಲಕ್ಷ್ಮಣೇಶ್ವರ ಗುಡಿಯ ಹೊರಗೋಡೆಗಳಲ್ಲಿ ಆನೆ, ಸಿಂಹ, ಯಾಳಿ, ಮಕರಗಳಿಂದ ಲಾಳದಾಕೃತಿಯ ಕಮಾನುಗಳಿಂದ ಕೂಡಿದ ಅಲಂಕೃತ ಪಟ್ಟಿಕೆಗಳಿದ್ದು ಮೇಲೆ ದೇವತೆಗಳ ಮೂರ್ತಿಗಳಿವೆ. ಅರೆಗಂಬಗಳ ಮಧ್ಯದ ಎಡೆಯಲ್ಲಿ ಮಹಿಷಮರ್ದಿನಿ, ನಟರಾಜ, ಸೂರ್ಯರ ವಿಗ್ರಹಗಳಿವೆ. ನವರಂಗದ ಭಾವಣಿಗಳಲ್ಲಿ ಉಮಾ ಮಹೇಶ್ವರ. ಸುತ್ತಲೂ ಅಷ್ಟದಿಕ್ಪಾಲಕರ ವಿಗ್ರಹಗಳು. ಚಾಲುಕ್ಯ ಪಲ್ಲವರ ಶಿಲ್ಪಗಳಲ್ಲಿ ಕಾಣುವುದಕ್ಕಿಂತಲೂ ಸ್ವಲ್ಪ ಹೆಚ್ಚಿನ ಆಭರಣಗಳ ಅಲಂಕರಣವನ್ನು ಇವರ ಶಿಲ್ಪಗಳಲ್ಲಿ ಕಾಣಬಹುದು. ಇದರಿಂದ ಶಿಲ್ಪಗಳು ಮತ್ತಷ್ಟು ರಮ್ಯವಾಗಿ ಕಾಣುತ್ತವೆ. ಆಯುಧಗಳನ್ನು ದೇವತೆಗಳು ಹಿಡಿದಿರುವುದು ಹಲವಾರು ಮೂರ್ತಿಗಳಲ್ಲಿ ಕೃತಕವಾಗಿ ಕಾಣುತ್ತದೆ. ಕಾಳಿ, ಮಹಿಷಮರ್ದಿನಿ, ಸಪ್ತ ಮಾತೃಕೆಯರ ಶಿಲ್ಪಗಳು ಸಾಮಾನ್ಯ. ಜಟಾಮಕುಟ, ಕಪಾಲ ಮಾಲೆ, ನಾಗ ಕುಚಬಂಧ, ತೋಳ್ಬಂಧಗಳನ್ನು ತೊಟ್ಟ ಕಾಳಿಯ ಮೈಕಟ್ಟು ದೃಢವಾಗಿದೆ. ಅನಿರೀಕ್ಷಿತವೆನ್ನಬಹುದಾದ ಕಟ್ಟಡದ ಭಾಗಗಳಲ್ಲಿ–ಬಾಗಿಲುವಾಡಗಳು, ಜಾಲಂದರ, ಕಂಬಗಳು ಇತ್ಯಾದಿ–ಮಹಿಷಮರ್ದಿನಿಯ ಶಿಲ್ಪಗಳು ಕಾಣಿಸಿಕೊಂಡಿವೆ. ನಂದಿಯ ವಿಗ್ರಹಗಳು ಅನೇಕವಿವೆ. ಮುಂಗಾಲೊಂದನ್ನು ಮಡಚಿ, ಮತ್ತೊಂದನ್ನು ಮುಂಚಾಚಿ ಸಹಜವಾಗಿ ಕುಳಿತಂತೆ ಕಾಣುವ, ಘಂಟೆ–ಗೆಜ್ಜೆಗಳ ಹಾರಗಳನ್ನು ಧರಿಸಿದ ನಂದಿಗಳ ಗಂಗೆದೊಗಲು ಅಲೆ ಅಲೆಯಾಗಿ ಇಳಿದು ಬಿದ್ದಿರುತ್ತದೆ. ಈ ಶೈಲಿಯ ಇನ್ನೊಂದು ಗಮನಾರ್ಹ ಲಕ್ಷಣ ಇದರ ಜಾಲಂದರಗಳು. ದೂರಕ್ಕೆ ಬಾಗಿಲುವಾಡದಂತೆ ಕಾಣಿಸುವ ಇವು ದ್ವಾರಬಂಧಗಳನ್ನು ಹೊಂದಿದ್ದು ಇವುಗಳ ಮಧ್ಯೆ ಗಂಗೆ, ಬ್ರಹ್ಮ, ಕಾರ್ತಿಕೇಯ, ವಿಷ್ಣು ಮುಂತಾದ ವಿಗ್ರಹಗಳನ್ನು ಅಳವಡಿಸಲಾಗಿರುತ್ತದೆ. ಬಾಗಿಲುವಾಡಗಳು ಸಹ ಅಲಂಕೃತವಾದ ಮೂರು–ನಾಲ್ಕು ಪಟ್ಟಿಗಳುಳ್ಳವು.

## ಕಲ್ಯಾಣ ಚಾಲುಕ್ಯ

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ (೧೦–೧೨ನೆಯ ಶತಮಾನಗಳು) ದೇವಾಲಯಗಳಲ್ಲಿ ಮೂರ್ತಿಶಿಲ್ಪದ ಬಳಕೆ ಹೆಚ್ಚಾಯಿತು. ಈ ವೇಳೆಗೆ ಆಗಮಶಾಸ್ತ್ರಗಳು ಅಂತಿಮ ಸ್ವರೂಪ ಪಡೆದ ಶಿಲ್ಪಿಯ ಸ್ವೇಚ್ಛೆಗೆ ಕಡಿವಾಣಗಳನ್ನು ಹಾಕಿದಂತಾಗಿತ್ತು. ವಿಗ್ರಹಗಳು ಕೇವಲ ಕಲಾತ್ಮಕವಾಗುವುದರ ಬದಲು ಶಾಸ್ತ್ರಗಳಲ್ಲಿ ವರ್ಣಿತವಾದಂತೆ ಧಾರ್ಮಿಕ ದೇವತೆಗಳ ಮೂರ್ತಿಗಳನ್ನು ಕಡೆಯಬೇಕಿತ್ತು. ಒಂದೊಂದು ಮೂರ್ತಿಗೂ ಒಂದೊಂದು ಧ್ಯಾನಶ್ಲೋಕ. ಅದರಂತೆ ಮೂರ್ತಿಯ ಲಕ್ಷಣಗಳನ್ನು ಮೂಡಿಸಬೇಕಿತ್ತು. ಸರಳತೆ ಹಾಗೂ ಕಸುವಿಗೆ ಬದಲು ಅಲಂಕರಣ ಮತ್ತು ಗಡಸುತನಗಳಿಗೆ ಪ್ರಾಧಾನ್ಯ ದೊರೆಯಿತು. ತಾಲಮಾನಗಳಿಗನುವಾಗಿ ಶಿಲ್ಪಗಳನ್ನು ಕಡೆದುದರಿಂದ ಸಮಪ್ರಮಾಣ ಸಾಧಿತವಾದರೂ ಮೊದಲು ಅವುಗಳಲ್ಲಿದ್ದ ತೇಜೋವಂತ ಚೈತನ್ಯ ಕಡಿಮೆಯಾಯಿತು. ಹಾಗೆಂದು ಇವುಗಳಲ್ಲಿ ಸೌಂದರ್ಯಕ್ಕೆ ಕೊರತೆ ಏನೂ ಉಂಟಾಗಲಿಲ್ಲ. ಮಾನವ ದೇಹದ ಸೊಗಸು, ಮುಖದಲ್ಲಿ ಪ್ರಸನ್ನತೆ, ಸ್ತ್ರೀ ರೂಪದ ಬಾಗುಗಳಲ್ಲಿ ಅಭಿವ್ಯಕ್ತವಾಗುವ ಲೋಲುಪತೆ– ಇವುಗಳು ಈ ಕಾಲದ ವಿಗ್ರಹಗಳಲ್ಲಿ ಮೂಡಿಬಂದಿವೆ. ಶಿಲ್ಪಿ ಉಪಯೋಗಿಸಿದ ಮಾಧ್ಯಮ ಸಹ ಇದಕ್ಕೆ ನೆರವು ನೀಡಿತು. ಮೊದಲಿನ ಕೆಂಪು ಛಾಯೆಯ ಮರಳುಗಲ್ಲಿಗೆ ಬದಲು ತಿಳಿ ಹಸುರು ಅಥವಾ ನೀಲಿ ಮಿಶ್ರಿತ ಕಪ್ಪು ಪದರ ಶಿಲೆ ಈಗ ಬಳಕೆಗೆ ಬಂತು. ಇದು ರೂವಾರಿಯ ಉಳಿಗೆ ಸುಲಭವಾಗಿ ಸಾಗುತ್ತಿದ್ದು ಸೂಕ್ಷ್ಮ ಕೆತ್ತನೆಗೆ ಉಪಯುಕ್ತವಾಗಿತ್ತು. ಕಲ್ಲುಗಳನ್ನು ಸಣ್ಣ ಸಣ್ಣ ದಿಮ್ಮಿಗಳಾಗಿ ಬಂಡೆಗಳಿಂದ ಕತ್ತರಿಸಿಕೊಳ್ಳಬಹುದಾಗಿದ್ದ ಕಾರಣ ಏಕಶಿಲೆಯ ಸ್ತಂಭಗಳನ್ನು, ವಿಗ್ರಹಗಳನ್ನು ಪಡೆಯುವುದು ಸಾಧ್ಯವಾಗಿತ್ತು. ಆದರೆ ಬಂಡೆಗಳ ಮೃದುತ್ವ ಹೆಚ್ಚಿನ ಹೊರೆ ತಾಳಲು ಅಡ್ಡಿಯುಂಟುಮಾಡಿದ ಕಾರಣ ದೇವಾಲಯಗಳ, (ವಿಗ್ರಹಗಳ) ಎತ್ತರ ಬಹುಮಟ್ಟಿಗೆ ಕಡಿಮೆಯಾಯಿತು. ಬಾದಾಮಿ ಚಾಲುಕ್ಯರ ಕಾಲದ ಬೃಹತ್ಪ್ರಮಾಣದ ಶಿಲ್ಪಗಳು ಈಗ ಕಾಣಸಿಗುವುದಿಲ್ಲ. ಆದರೆ ಹಿಂದೆಂದೂ ಇರದಷ್ಟು ಗಹನವಾದ ಕಲಾತ್ಮಕ ಸಂಸ್ಕರಣವನ್ನು ಈಗ ನಾವು ನೋಡುತ್ತೇವೆ. ಈ ಕಾಲದ ವಿಗ್ರಹಗಳನ್ನು ಅತ್ಯುಬ್ಬು, ಉಬ್ಬು ಮತ್ತು ಅರೆಉಬ್ಬು (ಚಿತ್ರ, ಅರ್ಧ ಚಿತ್ರ ಮತ್ತು ಚಿತ್ರಾಭಾಸ)ಗಳೆಂದು ವಿಂಗಡಿಸಬಹುದು. ಮೂರ್ತಿಯ ಹಿಂಭಾಗದಲ್ಲಿ ವಿಶಾಲವಾದ ಫಲಕವನ್ನು ಬಿಟ್ಟು ಮೂರ್ತಿಯನ್ನು ಉಬ್ಬು ಶಿಲ್ಪವಾಗಿ ರೂಪಿಸುವುದು ಅಥವಾ ಪ್ರಭಾವಳಿಯನ್ನು ಕೆತ್ತುವುದರ ಮೂಲಕ ಪೂರ್ಣ ಶಿಲ್ಪಗಳು ಅತ್ಯುಬ್ಬು ಶಿಲ್ಪಗಳೆಂದು ಭಾಸವಾಗುವಂತೆ ಮಾಡುವುದು ಎರಡು ತಂತ್ರಗಳು. ಇವು ಕಲ್ಯಾಣ ಚಾಲುಕ್ಯ ಶಿಲ್ಪಿಯ ಕೆಲವು ಲಕ್ಷಣಗಳು. ಶಿವನಿಗೆ ಸಂಬಂಧಿಸಿದ ವಿಗ್ರಹಗಳು ಹೇರಳ. ಬಳ್ಳಿಗಾವೆಯ ತ್ರಿಪುರಾಂತಕಾಲಯದಲ್ಲಿ ಪಂಚತಂತ್ರದ ಕತೆಗಳ ಪಟ್ಟಿಕೆಗಳಿದ್ದು ಅವುಗಳಲ್ಲಿ ಆಮೆ ಮತ್ತು ಹಂಸಗಳು. ಟಗರಿನ ಕಾಳಗ ಮತ್ತು ನರಿ, ಮೊಸಳೆ, ಕೋತಿ ಮುಂತಾದ ಪ್ರಾಣಿಗಳನ್ನು ಸುಂದರವಾಗಿ ಕೆತ್ತಲಾಗಿವೆ. ನಾಗನಾಗಿಣಿಯರು ಹೆಣೆದುಕೊಂಡ ಜಾಲಂದರದ ನಾಗಬಂಧ ಬಾಗಿಲುವಾಡಗಳ ಮೇಲೆ

ಗಜಾಸುರನನ್ನು ಸಂಹರಿಸಿ ನರ್ತಿಸುತ್ತಿರುವ ಶಿವ, ಬ್ರಹ್ಮ, ಕುಮಾರ ಮತ್ತು ಗಣೇಶ, ಇನ್ನೊಂದು ಕಡೆ, ಕೇಶವ ಗರುಡ, ಪರಿವಾರ ದೇವತೆಗಳು, ಅಷ್ಟದಿಕ್ಪಾಲಕರುಗಳಿಂದ ಕೂಡಿದ ಸೂಕ್ಷ್ಮವಾದ ಕೆತ್ತನೆಯನ್ನು ಕಾಣುತ್ತೇವೆ. ಇನ್ನೊಂದು ಜಾಲಂದರ ಲತಾವಿನ್ಯಾಸದಲ್ಲಿದ್ದು, ಒಂದೊಂದು ಲತಾವರ್ತದ ಮಧ್ಯೆಯೂ ಒಬ್ಬೊಬ್ಬ ನರ್ತಕ ವಿವಿಧ ಭಂಗಿಗಳಲ್ಲಿ ನರ್ತಿಸುತ್ತಿರುವುದನ್ನು ಸುಂದರವಾಗಿ, ಕಲಾತ್ಮವಾಗಿ ಕೆತ್ತಿದೆ. ಬಾದಾಮಿಯ ಚಾಲುಕ್ಯರ ಕಾಲದಂತೆ ಮರಳುಗಲ್ಲಿನಲ್ಲಿಯೇ ಕಟ್ಟಲಾದ ಕಲ್ಯಾಣ ಚಾಲುಕ್ಯ ಶೈಲಿಯ ಆರಂಭ ದೆಸೆಯ ಕುಕ್ಕನೂರಿನ ಕಲ್ಲೇಶ್ವರಾಲಯದ ಹೊರಗೋಡೆಗಳಲ್ಲಿ ಶಿಲ್ಪಗಳಿಲ್ಲ. ಆದರೆ ಒಳಗೆ ಸ್ವಲ್ಪ ಹೆಚ್ಚು ಅಲಂಕೃತವಾದ ಶಿವ ಮತ್ತು ಬ್ರಹ್ಮನ ಮೂರ್ತಿಗಳಿವೆ. ಲಕ್ಕುಂಡಿಯ ಬ್ರಹ್ಮ ಜಿನಾಲಯದಲ್ಲಿ ಕಲಾಪೂರ್ಣವಾದ ದ್ವಾರಗಳು, ಮಹಾವೀರನ ಪಕ್ಕದಲ್ಲಿ ಚೌರಿಯನ್ನು ಹೊತ್ತ ಸೇವಕರ ವಿಗಹಗಳು ಹೆಸರಿಸತಕ್ಕವು. ಚಾಲುಕ್ಯ ಶೈಲಿಯ ಕೊನೆಯ ಘಟ್ಟಕ್ಕೆ ಸೇರಿದುದೆನ್ನಲಾದ ಹಾವೇರಿಯ ಸಿದ್ಧೇಶ್ವರ ಗುಡಿಯೊಳಗೆ ಉಮಾಮಹೇಶ್ವರ, ಶಿವಲಿಂಗವನ್ನು ಹಿಡಿದಿರುವ ವಿಷ್ಣು, ಮಹಾಲಕ್ಷ್ಮಿ, ಸೂರ್ಯ, ನಾಗನಾಗಿಣಿಯರ ವಿಗ್ರಹಗಳು, ಛಾವಣಿಯಲ್ಲಿ ನೃತ್ಯಭಂಗಿಯಲ್ಲಿರುವ ..ಅಷ್ಟಮಾತೃಕೆಯರ ವಿಗ್ರಹ ಉತ್ತಮವಾದ ಮಾದರಿಗಳು. ವೈಷ್ಣವ ದೇವತೆಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವುದು ಕೇಶವನ ವಿಗ್ರಹ. ಗುಲ್ಬರ್ಗ ಜಿಲ್ಲೆಯ ಹಿರವಣ್ಣೂರಿನಲ್ಲಿ ಸಮಭಾಗದಲ್ಲಿ ನಿಂತಿರುವ ಕಿರೀಟ, ಹಾರ, ಕಡಗ, ಮತ್ತು ಕಟಿಬಂಧಗಳಷ್ಟರಿಂದ ಮಾತ್ರ ಅಲಂಕೃತವಾದ ಕೇಶವ ವಿಗ್ರಹದ ಅಂಗಾಂಗಗಳಲ್ಲಿ ಸಹಜ ಪ್ರಮಾಣಗಳಿದ್ದರೂ ಮುಖಮಾತ್ರ ಭಾವಶೂನ್ಯ. ಸುಂದರ ಕಾಯದ ಯುವಕನಂತೆ ತೋರುವ ವಿಗ್ರಹದಲ್ಲಿ ಆಯುಧಗಳನ್ನು ಶಂಖಚಕ್ರಗದಾಪದ್ಮ – ಅಸಹಜ ರೀತಿಯಲ್ಲಿ ಹಿಡಿದಂತೆ ತೋರಿಸಲಾಗಿದೆ. ಮೂಲ ವಿಗ್ರಹಕ್ಕಿಂತ ಪ್ರಭಾವಳಿಗೇ ಹೆಚ್ಚಿನ ಪ್ರಾಶಸ್ತ್ಯ ದೊರಕಿದೆ. ಆಭರಣಗಳ ಕುಸುರಿ ಕೆಲಸ ಕಲಾಕೌಶಲ್ಯಕ್ಕೆ ಸಾಕ್ಷಿ. ಬಸವಕಲ್ಯಾಣದಲ್ಲಿರುವ ಶೇಷಶಾಯಿ ವಿಗ್ರಹದಲ್ಲಿ ಮೇಲುಗಡೆ ಸಾಲಾಗಿ ದಶಾವತಾರ ಮೂರ್ತಿಗಳನ್ನು ಕೆತ್ತಿರುವುದೊಂದು ಸ್ವಾರಸ್ಯದ ಸಂಗತಿ. ಈ ಕಾಲದ ಬಾಗಿಲುವಾಡಗಳ ಪಕ್ಕಗಳಲ್ಲಿ ಮೊದಲಿನಂತೆ ಒಂದೆರಡು ಶಾಖೆಗಳ ಬದಲಾಗಿ ಹತ್ತು ಹನ್ನೆರಡು ಶಾಖೆಗಳನ್ನು ಸೂಕ್ಷ್ಮ ಉಪಕರಣದಿಂದ ಕೆತ್ತಲಾಗುತ್ತಿತ್ತು. ಲಕ್ಕುಂಡಿಯ ಕಾಶೀ ವಿಶ್ವೇಶ್ವರಾಲಯದ ದಕ್ಷಿಣ ದ್ವಾರದ ಬಾಗಿಲುವಾಡ ಒಂದು ಉತ್ತಮ ಮಾದರಿ. ಇದರಲ್ಲಿ ಒಂದೊಂದು ಕಡೆಯೂ ಹತ್ತು ಶಾಖೆಗಳಿವೆ. ಒಂದೊಂದು ಶಾಖೆಯಲ್ಲೂ ಮೇಲಿನ ಅಡ್ಡಪಟ್ಟಿಗಳಲ್ಲೂ ಸಣ್ಣ ಸಣ್ಣ ಶಿಲ್ಪಗಳನ್ನು ಬಿಡಿಸಲಾಗಿದೆ. ಕುರುವತ್ತಿಯ ಮಲ್ಲಿಕಾರ್ಜುನ ಗುಡಿಯ ನವರಂಗದ ಅರೆಗಂಬಗಳ ಮೇಲೆ ಸುಂದರವಾಗ ಮದನಿಕೆ ವಿಗ್ರಹಗಳನ್ನು ನವುರಾಗಿ ಪೂರ್ಣವಾಗಿ ಕೆತ್ತಲಾಗಿದೆ. ಬೀದರ್ ಜಿಲ್ಲೆಯ ಜಲಸಂಗ್ವಿಯಲ್ಲಿ ಫಲಕವೊಂದರಲ್ಲಿ ವಿಕ್ರಮಾದಿತ್ಯನ ವರ್ಣನೆಯನ್ನು ಬರಹದ ಮೂಲಕ ನಿರೂಪಿಸುತ್ತಿರುವ ಪ್ರೌಢೆಯೊಬ್ಬಳ ಶಿಲ್ಪದಲ್ಲಿ ಪ್ರಿಯಕರನ ಬಗೆಗಿನ ಅಭಿಮಾನ, ತನ್ನದೇ ಜೀವನದ ಸಾಫಲ್ಯಗಳು ಯಶಸ್ವಿಯಾಗಿ ಚಿತ್ರಿತವಾಗಿವೆ. ಈ ಕಾಲದ ಉತ್ತಮ ಚಿತ್ರಗಳನ್ನು ವೀರಗಲ್ಲುಗಳಲ್ಲೂ ಕಾಣಬಹುದು. ಈಗ ಶಿವಮೊಗ್ಗೆಯ ವಸ್ತುಸಂಗ್ರಹಾಲಯದಲ್ಲಿರುವ ಸಿಡಿತಲೆಯನ್ನು ನಿರೂಪಿಸುವ ವೀರಗಲ್ಲು ಒಂದು ಉತ್ತಮ ನಿದರ್ಶನ. ಬಳ್ಳಿಗಾವೆಯಲ್ಲಿ ಹಂದಿ ಬೇಟೆಯನ್ನು ನಿರೂಪಿಸುವ ಶಿಲ್ಪಪಟ್ಟಿಕೆಯೊಂದಿದೆ. ಒಂದು ಬೇಟೆ ನಾಯಿಯನ್ನು ಕೆಳಗೆ ತಳ್ಳಿರುವ ಹಂದಿಯ ಮೇಲೆ ಇನ್ನೆರಡು ನಾಯಿಗಳು ನುಗ್ಗುತ್ತಿರುವಾಗಲೇ ವೀರನೊಬ್ಬ ತನ್ನ ಈಟಿಯನ್ನು ಹಂದಿಯ ದೇಹದೊಳಗೆ ಆಳವಾಗಿ ಇರಿದಿದ್ದಾನೆ. ಸುತ್ತಲಿನ ಜನ ಈ ದೃಶ್ಯವನ್ನು ನೋಡಲಾಗದೆ ತಮ್ಮ ಮುಖಗಳನ್ನು ಬೇರೆಕಡೆ ತಿರುವಿದ್ದಾರೆ. ಈ ಚಿತ್ರದಲ್ಲಿ ಚಲನೆಯನ್ನು ಹೃದಯಂಗಮವಾಗಿ ಕಂಡರಿಸಲಾಗಿದೆ. ವಿವಿಧ ಭಂಗಿಗಳಲ್ಲಿ ಕಾಮಕೇಳಿ ನಿರತ ಪ್ರಣಯ ದಂಪತಿಗಳ ವಿಗ್ರಹಗಳು ಸುಮಾರು ಆ ಕಾಲದಲ್ಲಿ ವಿಶೇಷವಾಗಿ ಕಾಣಿಸಿಕೊಂಡುವು. ಇಂತಹ ಶಿಲ್ಪಗಳನ್ನು ಕಂಡರಿಸಿರುವುದಕ್ಕೆ ನೀಡಲಾಗಿರುವ ವಿವಿಧ ಕಾರಣಗಳೇನೇ ಇರಲಿ ಇವು ಮಣ್ಣಿನ ವಾಸನೆಯನ್ನು ಹೊತ್ತ ಐಹಿಕ ಸಂಬಂಧದ ವಿಗ್ರಹಗಳೆಂಬುದು ನಿಜ.

### ಹೊಯ್ಸಳ

ಹನ್ನೆರಡನೆಯ ಶತಮಾನದ ಅಂತ್ಯದ ವೇಳೆಗೆ ವೀರಶೈವ ಧರ್ಮ ಉತ್ತರ ಕರ್ನಾಟಕದಲ್ಲಿ ಸತ್ವಯುಕ್ತವಾಗಿ ಬೆಳೆದುದರ ಪರಿಣಾಮವಾಗಿ ದೇವಾಲಯಗಳಿಗಿದ್ದ ಸಾಮಾಜಿಕ ಸಾಂಸ್ಕೃತಿಕ ಸ್ಥಾನಮಾನ ಕಡಿಮೆಯಾಯಿತು. ಅಲ್ಲದೆ ಆ ಪ್ರದೇಶದಲ್ಲಿ ಸೇಉಣರು ತಮ್ಮ ಹಿಡಿತವನ್ನು ಬಿಗಿಗೊಳಿಸಿ ಆಳಿದರು. ಅವರು ಚಾಲುಕ್ಯ ಶೈಲಿಯನ್ನೇ ಮುಂದುವರಿಸಿದರಾದರೂ, ಅವರ ಕಾಲದ ಆಲಯಗಳು ಹೆಚ್ಚಾಗಿ ಈಗಿನ ಮಹಾರಾಷ್ಟ್ರದ ನಾಸಿಕ್, ಅಂಬರನಾಥ್, ಸಾತಗಾಂವ್ ಮುಂತಾದ ಕಡೆಗಳಿಗೆ ಸೀಮಿತವಾಗಿವೆ. ಇದು ಹದಿನಾಲ್ಕನೆಯ ಶತಮಾನದ ವರೆಗೆ. ಆ ಬಳಿಕ ಉತ್ತರ ಕರ್ನಾಟಕದ ಬಹುತೇಕ ಭಾಗಗಳು ಮಹಮದೀಯರ ವಶವಾದುದು ತಿಳಿದ ವಿಷಯ. ತುಂಗಭದ್ರೆಯ ಕೆಳಗೆ ಸಮಕಾಲೀನರಾಗಿ ಹೊಯ್ಸಳರು ಆಳಿದರು. ಚಾಲುಕ್ಯ ಶೈಲಿಗೆ ಹೊಸ ರೂಪ ಕೊಟ್ಟ ಇವರು ತಮ್ಮದೇ ಆದ, ಹೊಯ್ಸಳ ಶೈಲಿ ಎಂದು ಇತ್ತೀಚೆಗೆ ಹೆಸರಿಸಲಾದ, ಶೈಲಿಯೊಂದನ್ನು ರೂಪಿಸಿದರು. ಇದನ್ನು ಪ್ರಾದೇಶಿಕ ಶೈಲಿ ಎಂದೇ ಕರೆಯಬಹುದು. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಬಳಸಲಾದ ಕರಿಯ ಬಳಪದ ಕಲ್ಲನ್ನು ಇವರೂ ಉಪಯೋಗಿಸಿದರಾದರೂ ಅದರ ಮೃದುತ್ವದ ಪೂರ್ಣ ಉಪಯೋಗ ಪಡೆದರು. ಒಂದು ದೃಷ್ಟಿಯಲ್ಲಿ ಇವರ ದೇವಾಲಯಗಳಲ್ಲಿ ವಾಸ್ತುಶಿಲ್ಪಕ್ಕಿಂತಲೂ ಹೆಚ್ಚಿನ ಪ್ರಾಧಾನ್ಯ ಮೂರ್ತಿಶಿಲ್ಪಕ್ಕೇ ದೊರೆತಿತು. ನಕ್ಷತ್ರಾಕಾರದ ತಲವಿನ್ಯಾಸ ಚಾಲುಕ್ಯ ಶೈಲಿಯ ಅಂತಿಮ ಹಂತಗಳಲ್ಲಿ ಆರಂಭವಾಗಿದ್ದು ಈಗ ಅದು ಇವರ ವಾಸ್ತುಶಿಲ್ಪದ ವೈಶಿಷ್ಟ್ಯವಾಯಿತು. ಗೋಡೆಗಳ ಹಿಂಜರಿತ, ಮುಂಜರಿತಗಳಿಂದ ದೇವಾಲಯದ ಕಟ್ಟಡಗಳ ಸುಭದ್ರತೆಯನ್ನು ಹೆಚ್ಚಿಸಿದುದಲ್ಲದೆ ಒಂದೇ ಉದ್ದದ ಗೋಡೆಯಿಂದ ಉಂಟಾಗುವ ಒಂದು ನೀರಸ ಮನೋಭಾವವನ್ನು ಹೋಗಲಾಡಿಸಲಾಯಿತು. ಅಧಿಷ್ಠಾನದಿಂದ ಶಿಖರದ ವರೆಗೆ ಮೇಲೇರುತ್ತಾ ಹೋಗುವ ಸರಿತಗಳಿಂದ ನಕ್ಷತ್ರದಂತೆ ಕಾಣಿಸುವ ಕಟ್ಟಡದಲ್ಲಿ ಬೆಳಕು–ನೆರಳುಗಳ ಸಮರ್ಥ ಸಂಯೋಜನೆಯನ್ನು ಮಾಡಿ ತನ್ಮೂಲಕ ವಿಗ್ರಹಗಳ ಮೇಲೂ ಕೆತ್ತನೆಯ ಕೆಲಸಗಳ ಮೇಲೂ ವಿಶೇಷ ಪರಿಣಾಮ ಉಂಟಾಗುವಂತೆ ಮಾಡಲಾಯಿತು. ಕಟ್ಟಡಗಳು ಕುಬ್ಜವಾದ ಕಾರಣ ನೆಲದಿಂದ ನಾಲ್ಕೈದು ಅಡಿಗಳ ಎತ್ತರದ ಜಗುಲಿಯನ್ನು ಕಟ್ಟಿ ಅದರ ಮೇಲೆ ದೇವಾಲಯದ ಕಟ್ಟಡವನ್ನೆಬ್ಬಿಸುವ ಸಂಪ್ರದಾಯವನ್ನು ರೂಪಿಸಲಾಯಿತು. ದೇವಾಲಯದ ಗೋಡೆಗಳ ತುಂಬಾ ಈಗ ಶಿಲ್ಪಗಳನ್ನು ಕೆತ್ತಿದುದರಿಂದ ಅವುಗಳನ್ನು ಸಾವಕಾಶವಾಗಿ ನೋಡಲು, ದೇವಾಲಯದ ಸುತ್ತಲೂ ಪ್ರದಕ್ಷಿಣೆ ಹೋಗಿ ಬರಲೆಂದೂ ಸಹ ಈ ಜಗುಲಿಗಳ ಆಲಯದ ಕಟ್ಟಡಗಳಿಗಿಂತ ೪–೫ ಅಡಿಗಳಿ ಹೆಚ್ಚು ವಿಸ್ತಾರವಾದ ಜಾಗ

ವನ್ನು ಪಡೆದಿತ್ತು. ಹೊರಗೋಡೆಗಳ ಕೆಳಗಿನ ಅರ್ಧ ಭಾಗದಲ್ಲಿ ಒಂದರ ಮೇಲೊಂದರಂತೆ ಸಮತಲದ ಪಟ್ಟಿಗಳ ಸಾಲುಗಳಿದ್ದು ಅವುಗಳಲ್ಲಿ ಸೂಕ್ಷ್ಮವಾಗಿ ಕೆತ್ತಿದ ಕುದುರೆಗಳ, ವಾದ್ಯಗಳನ್ನು ನುಡಿಸಿ ನರ್ತಿಸುತ್ತಿರುವ ಸ್ತ್ರೀಪುರುಷರ ಪುಷ್ಪಲತಾವಿತಾನಗಳ, ಮೃಗ-ಪಕ್ಷಿಗಳ ಸಣ್ಣ ಪ್ರಮಾಣದ ಮೂರ್ತಿಗಳನ್ನು ಕಡೆಯಲಾಗಿತ್ತು. ಈ ಅಲಂಕಾರ ಪಟ್ಟಿಗಳಲ್ಲಿ ರಾಮಯಣ, ಮಹಾಭಾರತ, ಭಾಗವತಗಳಲ್ಲಿನ ಕತೆಗಳನ್ನು ನಿರೂಪಣಾತ್ಮಕವಾಗಿ ಚಿತ್ರಿಸಲಾಗಿತ್ತು. ಸಾಮಾಜಿಕ ಜೀವನದ ಚಿತ್ರಣಗಳೂ ಅಲ್ಲಲ್ಲಿ ಕಾಣಿಸಿಕೊಳ್ಳುತ್ತಿದ್ದುವು. ನವರಂಗ, ಮುಖಮಂಟಪಗಳಲ್ಲೂ ಶಿಲ್ಪಗಳ ಅಂಕಣಗಳು. ಸುಖನಾಸಿ, ಗರ್ಭಗೃಹಗಳ ಹೊರಗೋಡೆಗಳ ಮಧ್ಯದಲ್ಲಿ ೨-೩ ಅಡಿಗಳ ಎತ್ತರದ ದೇವಾದಿ ದೇವತೆಗಳ ಪೌರಾಣಿಕ ವೀರರ ಶಿಲ್ಪಗಳು, ಇಲ್ಲಿನ ಅಂಕಣಗಳಲ್ಲಿ ರಾವಣನು ಕೈಲಾಸವನ್ನೆತ್ತುವ, ಅರ್ಜುನನು ಶಿವಧನುಸ್ಸಿನಿಂದ ಮೀನನ್ನು ಹೊಡೆಯುವ ದೃಶ್ಯಾವಳಿಗಳು. ಒಳಗಿನ ಕಂಬಗಳಲ್ಲಿ ಬೋದಿಗೆ ಹಾಗೂ ಮೇಲ್ಛಾವಣಿಗಳನ್ನು ಸೇರಿದಂತೆ ಅತಿ ಸುಂದರವಾದ ಮದನಿಕೆ ವಿಗ್ರಹಗಳು. ಇವು ೧೫ ಡಿಗ್ರಿಗಳ ಕೋನದಲ್ಲಿ ಬಾಗಿದಂತಿದ್ದುವು. ಮದನಿಕೆಗಳು ಹೊಯ್ಸಳ ಶಿಲ್ಪಕಲೆಯ ಸರ್ವಾಂಗೀಣ ಸುಂದರ ಕೊಡುಗೆಗಳು. ಗಾಯನ, ನೃತ್ಯ, ವಾದ್ಯಗಳಲ್ಲಿ, ಬೇಟೆಗಳಲ್ಲಿ, ಅಲಂಕರಣಗಳಲ್ಲಿ ನಿರತರಾದಂತೆ ಈ ಮದನಿಕೆಗಳನ್ನು ರೂಪಿಸಲಾಗಿದೆ. ಸಭಾಮಂಟಪದ ಮಧ್ಯದ ವಿಶಾಲವಾದ ಛಾವಣಿಯ ಅಂಕಣವನ್ನು ನಾಲ್ಕು ಕಂಬಗಳು ಹೊತ್ತಿದ್ದು ಅವುಗಳ ಮೇಲಿನ ಚಪ್ಪಟೆಯ ತೊಲೆಗಳನ್ನು ಅಂಕಣವನ್ನು ಎಂಟು ಭಾಗಗಳಾಗಿ ವಿಭಜಿಸಿರುತ್ತಾರೆ. ಮಧ್ಯದಲ್ಲಿ ದೊಡ್ಡದೊಂದು ಕಮಲ ದಳಗಳು ಹೊರಮುಖವಾಗಿರುವಂತೆ ತಲೆಕೆಳಗಾಗಿ ಒಳಛಾವಣಿಯನ್ನು ಅಲಂಕರಿಸಿರುತ್ತದೆ. ಇದರ ಎಂಟು ಮೂಲೆಗಳಲ್ಲೂ ಅಷ್ಟದಿಕ್ಪಾಲಕರ ವಿಗ್ರಹಗಳು. ದಳಗಳ ಸುತ್ತಲೂ ದಶಾವತಾರಗಳ, ಇತರ ದೇವತೆಗಳ ವಿಗ್ರಹಗಳನ್ನು ಕಂಡರಿಸಲಾಗಿರುತ್ತದೆ. ಭುವನೇಶ್ವರಿ ಎನಿಸಿದ ಈ ಅಲಂಕೃತ ಛಾವಣಿಯ ಮಧ್ಯೆ ನರಸಿಂಹ ಅಥವಾ ನಟರಾಜನ ವಿಗ್ರಹ. ಒಟ್ಟಿನಲ್ಲಿ ಹೊಯ್ಸಳ ದೇವಾಲಯಗಳನ್ನು ಮೂರ್ತಿಶಿಲ್ಪಗಳ ಬಯಲು ಪ್ರದರ್ಶನಾಲಯವೆಂದು ಕರೆಯಬಹುದು. ಮೂರ್ತಿಶಿಲ್ಪದ ಪರಿಪೂರ್ಣತೆಯನ್ನು ಇವುಗಳಲ್ಲಿ ಕಾಣಬಹುದಾದರೂ ವಾಸ್ತುಶಿಲ್ಪ ಪ್ರತ್ಯೇಕವಾದ ಅನನ್ಯತೆಯನ್ನು ಕಳೆದುಕೊಂಡಿತು. ಹೊಯ್ಸಳ ದೇವಾಲಯಗಳು ವಾಸ್ತುಶಿಲ್ಪಿಯ ನಿರ್ಮಾಣಗಳಾಗಿರದೆ ರೂವಾರಿಯ ನಿರ್ಮಾಣಗಳು ಎನಿಸುವಷ್ಟರ ಮಟ್ಟಿಗೆ ಅಲಂಕರಣಕ್ಕೆ ಪ್ರಾಮುಖ್ಯ ದೊರೆತು ಇದನ್ನು ಕಲೆ ಎನ್ನುವುದಕ್ಕಿಂತಲೂ ಕುಶಲಕರ್ಮ ಎನ್ನುವುದೇ ಉಚಿತವೆನಿಸುತ್ತದೆ. ನೋಟಕನನ್ನು ಆಕರ್ಷಿಸಲು ಗೋಡೆಯಲ್ಲಿ ಲಭ್ಯವಿದ್ದಲ್ಲೆಲ್ಲಾ ಸೂಕ್ಷ್ಮ, ಸಹಜ, ಮೋಹಕವಾದ ಲತೆ, ಬಳ್ಳಿ, ಪುಷ್ಪವಿನ್ಯಾಸಗಳು, ಪ್ರಾಣಿಪಕ್ಷಿ ಹಾಗೂ ಕ್ರಿಮಿಕೀಟಾದಿಗಳು ಮನುಷ್ಯನ ಹಾಗೂ ದೇವತೆಗಳ ಮೂರ್ತಿಗಳು ತುಂಬಿವೆ. ಉಬ್ಬು ಚಿತ್ರಗಳಲ್ಲಿ ಕಾಣಿಸಿಕೊಳ್ಳುವ ದೇವರುಗಳ, ಗಜೇಂದ್ರ ಮೋಕ್ಷ, ಗಜಾಸುರ ಮರ್ದನ, ಕಾಲಿಯ ಮರ್ದನ, ತ್ರಿವಿಕ್ರಮ, ಶಿವ-ಪಾರ್ವತಿ, ಬ್ರಹ್ಮ-ಸರಸ್ವತಿ, ಮನ್ಮಥರತಿ ಇತ್ಯಾದಿ ದೃಶ್ಯಗಳ ನಿರೂಪಣೆಗಳ, ವಿಗ್ರಹಗಳನ್ನು ಕಂಡಾಗ ಪ್ರೇಕ್ಷಕ ಆಶ್ಚರ್ಯಚಕಿತನಾಗುತ್ತಾನೆ. ಅವುಗಳ ಅದ್ಭುತ-ರಮ್ಯತೆಗೆ ಮಾರುಹೋಗುತ್ತಾನೆ. ಮದನಿಕೆಗಳಲ್ಲಿ ತನ್ಮಯನಾಗುತ್ತಾನೆ, ತಲ್ಲೀನನಾಗುತ್ತಾನೆ. ಮದನಿಕೆಯರನ್ನು ಎಲ್ಲಾ ಹೊಯ್ಸಳ ದೇವಾಲಯಗಳಲ್ಲೂ ಅಳವಡಿಸಿಲ್ಲ. ಅಳವಡಿಸಿದ್ದ ಕೆಲವು ದೇವಾಲಯಗಳು ಈಗ ಅವುಗಳನ್ನು ಕಳೆದುಕೊಂಡಿವೆ. ಬಳ್ಳಿಗಾವೆ, ನಾಗಲಾಪುರ, ಉಂಡಿನ ಹಾಳ, ಕಿಕ್ಕೇರಿ, ಹಳೇಬೀಡುಗಳನ್ನು ಇಲ್ಲಿ ಹೆಸರಿಸಬಹುದು. ಬೇಲೂರಿನಲ್ಲಿ ಸದ್ಯ ೩೮ ವಿಗ್ರಹಗಳಿವೆ. ಎಲ್ಲವೂ ಸ್ತ್ರೀಮೂರ್ತಿಗಳೇ. ಏಕತಾನತೆ ಇವುಗಳಲ್ಲಿನ ಕುಂದು. ಮನುಷ್ಯ ಪ್ರಮಾಣಕ್ಕಿಂತಲೂ ಕಿರಿದಾದ ಮೂರ್ತಿಗಳು. ಗುಂಡುಮುಖ, ಕೈ ಕಾಲುಗಳು, ತುಂಬಿದ ಗಲ್ಲಗಳು. ಆದರೆ ಸ್ತಬ್ಧಭಂಗಿ. ಯಾವುದರಲ್ಲೂ ಚಾಲನೆ, ಜೀವಂತಿಕೆ, ಸ್ವಾಭಾವಿಕತೆ ಕಾಣಿಸುವುದಿಲ್ಲ. ದೇಹಗಳು ಸ್ಥೂಲ. ಒಂದು ದೃಷ್ಟಿಯಲ್ಲಿ ಹೆಚ್ಚಿನ ಅಲಂಕರಣ ಚಾಲನೆಗೆ ತೊಡಕುಂಟುಮಾಡಿದೆ ಎನ್ನಬಹುದು. ಮೂರಡಿ ಎತ್ತರದ ಕಲ್ಲಿನ ಫಲಕಗಳ ಮೇಲಿರುವ ಇವು ಅಡಿಯಿಂದ ಮುಡಿಯವರೆಗೆ ಅಲಂಕೃತ. ಸುಮಾರು ೧೪-೧೫ ಅಡಿಗಳ ಎತ್ತರದಲ್ಲಿ ೩೦ ಡಿಗ್ರಿಗಳ ಕೋನದಲ್ಲಿ ಬಾಗಿಸಿ ಅಳವಡಿಸಿರುವ ಇವುಗಳ ಸುತ್ತಲೂ ಪ್ರಭಾವಳಿಯಂತೆ ರೂಪಿಸಲಾದ ಬಳ್ಳಿಗಳ, ಲತೆಗಳ ವಿನ್ಯಾಸ, ನಡುವೆ ಅಲ್ಲಲ್ಲಿ ಕಾಣಿಸಿಕೊಳ್ಳುವ ಕಿರಿಯ ಪ್ರಮಾಣದ ವಿಗ್ರಹಗಳು, ಕಾಲಿನ ಬಳಿ, ಪೀಠದ ಮೇಲೆ ವಾದ್ಯಗಾರರ, ಪರಿಚಾರಕ-ಪರಿಚಾರಿಕೆಯರ ವಿಗ್ರಹಗಳು, ಪ್ರಾಣಿಗಳ ವಿಗ್ರಹಗಳು ಮುದ್ದಾಗಿ ಆಕರ್ಷಕವಾಗಿವೆ. ಒಂದು ಶಿಲ್ಪದಲ್ಲಿ ಕೋತಿಯೊಂದು ಯುವತಿಯ ಸೀರೆಯನ್ನು ಸೆಳೆಯುವಂತಿದೆ. ಅದನ್ನು ಓಡಿಸುವಲ್ಲಿನ ಯುವತಿಯ ದೇಹದ ಬಳುಕು-ಭಂಗಿಗಳು ಮೋಹಕ. ಇನ್ನೊಂದರಲ್ಲಿ ಸೀರೆಯಲ್ಲಿ ಸೇರಿಕೊಂಡ ಚೇಳನ್ನು ಕೊಡಹುವುದರಲ್ಲಿ ಮಗ್ನಳಾದ ತತ್ಫಲವಾಗಿ ತನಗರಿವಿಲ್ಲದೆಯೇ ನಗ್ನಳಾಗುತ್ತಿರುವ ಸುಂದರಿ ಕೆಳಗೆ ಬಿದ್ದ ಚೇಳನ್ನು ಭಯವಿಹ್ವಲಿತಳಾಗಿ ನೋಡುತ್ತಿದ್ದಾಳೆ. ನವರಂಗದಲ್ಲಿರುವ ಮದನಿಕೆಯೋರ್ವಳು ತೋಳ ಮೇಲೆ ಕುಳಿತ ಗಿಣಿ ಕಂಠಹಾರವನ್ನು ಕಸಿಯಲೆತ್ನಿಸಿದಾಗ ಅದಕ್ಕೆ ಹಣ್ಣನ್ನಿತ್ತು ಅದರ ಗಮನ ಬೇರೆಡೆ ಸೆಳೆದು ಹಾರವನ್ನು ಹಿಂದಕ್ಕೆ ಪಡೆದಿದ್ದಾಳೆ. ಮದನಿಕೆಯರ ಕೈಬಳೆ ಆಡುವಂತೆ ಬಿಡಿಸಿರುವುದು. ಮಣಿಹಾರ ಬೇರೆಯಾಗಿ ನೇತಾಡುವುದು ರೂವಾರಿಯ ಕೌಶಲಕ್ಕೆ ಸಾಕ್ಷಿ. ಸೂಕ್ಷ್ಮ ವಿವರಗಳನ್ನು ಶಿಲ್ಪಿ ಗಮನಿಸಿ ಕಡೆದಿದ್ದಾನೆ. ಹಣ್ಣಿನ ಮೇಲೆ ಕುಳಿತ ನೊಣವನ್ನು ನುಂಗಲು ದೇಹ ಬಗ್ಗಿಸಿ, ಬಾಲವನ್ನು ಸುತ್ತಿ ಹಾರಲು ಸಿದ್ಧವಿರುವ ಹಲ್ಲಿಯ ಚಿತ್ರಣ ವಿಗ್ರಕ್ಕೆ ಶ್ರೀಮಂತಿಕೆಯನ್ನೊದಗಿಸಿದೆ. ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯ ಈ ಶೈಲಿಯ ಆಲಯಗಳಲ್ಲಿ ಅತಿ ದೊಡ್ಡದು. ೭೦೦ ಅಡಿಗಳಿಗೂ ಮೀರಿದ ಒಟ್ಟು ಉದ್ದದ ಭಿತ್ತಿಯಲ್ಲಿನ ಪಟ್ಟಿಕೆಗಳಲ್ಲಿರುವ ಆನೆಗಳೇ ಎರಡು ಸಾವಿರಕ್ಕೂ ಅಧಿಕ. ಅವುಗಳ ಭಂಗಿಗಳೂ ವೈವಿಧ್ಯಮಯ. ಸರ್ವಾಲಂಕಾರಭೂಷಿತವಾಗಿ ಮಾವುತರಿಂದ ಮಾರ್ಗದರ್ಶನ ಮಾಡಲ್ಪಟ್ಟು ಶಿಸ್ತಿಗಿ ಮುಂದುವರೆಯುವ, ಹಿಂದಿನ ಆನೆ ತಿವಿದಾಗ ರೋಷದಿಂದ ಹಿಂತಿರುಗಿ ದುರುಗುಟ್ಟುವ, ಚೆಲ್ಲಾಟವಾಡುವ ಆನೆಗಳ ದೃಶ್ಯಾವಳಿ ರಮ್ಯ. ಈ ದೇವಾಲಯದ ಶಿಲ್ಪಕಲೆ ಈ ಮಾದರಿಯ ಇತರ ಕಡೆಗಳಲ್ಲೆಲ್ಲೂ ಇಷ್ಟು ಭವ್ಯವಾಗಿಲ್ಲ. ಬೇಲೂರಿನ ಚೆನ್ನಕೇಶವಾಲಯವನ್ನು ನಿರ್ಮಿಸಿದ ರೂವಾರಿಗಳು ಈ ದೇವಾಲಯದ ರೂವಾರಿಗಳಿಗಿಂತ ಭಿನ್ನರಾಗಿದ್ದು ಅವರ ನಡುವೆ ಒಂದು ವಿಧದ ಕಲಾಸ್ಪರ್ಧೆ ಇದ್ದಂತೆ ತೋರುತ್ತದೆ ದಾಸೋಜ, ಹರಿಷ, ಮನ, ಕೇವಣ, ಬಿಲ್ಲಣ, ರೇವೋಜ, ಹಪುಗ, ಮಾಣುಬಲಕಿ ಮುಂತಾದವರು ಹಳೇಬೀಡಿನ ಶಿಲ್ಪಿಗಳು. ಚಿಕ್ಕಹಂಪ, ಬಳ್ಳಿಗಾಮೆಯ ದಾಸೋಜ (ಮೇಲಿನ ದಾಸೋಜನಿಗಿಂತ ಭಿನ್ನ), ಅವನ ಮಗ ಚಾವಣ, ಗದಗಿನ ನಾಗೋಜ ಮುಂತಾದವರು ಬೇಲೂರಿನ ಚೆನ್ನಕೇಶವ ದೇವಸ್ಥಾನದ ರೂವಾರಿಗಳು. ಈ ದೇವಸ್ಥಾನದ ವಿಗ್ರಹ ವಿಜಯ ನಾರಾಯಣನೆಂದು

ಕರೆಯಲಾದ ಕೇಶವನದು. ೯ ಅಡಿಗಳ ಎತ್ತರದ ದಿವ್ಯಾಭರಣ ಭೂಷಿತ ಮುಕುಟಧಾರಿಯಾದ ಈ ವಿಗ್ರಹದ ಎಡಬಲಗಳಲ್ಲಿ ಶ್ರೀದೇವಿ ಭೂದೇವಿಯರು ನಿಂತಿದ್ದಾರೆ. ಈ ವಿಗ್ರಹವನ್ನು ವಿಷ್ಣುವರ್ಧನ ಪ್ರತಿಷ್ಠಾಪಿಸಿದ. ಸೋಮನಾಥಪುರದ ಕೇಶವಾಲಯದ ಗರ್ಭಗುಡಿಯ ಹೊರಬದಿಯಲ್ಲಿ ಸುತ್ತಲೂ ೧೯೪ ದೊಡ್ಡ ಶಿಲ್ಪಗಳಿವೆ. ಇವುಗಳಲ್ಲಿ ಹಯಗ್ರೀವನದು ಸ್ವಲ್ಪ ಅಪರೂಪದ ವಿಗ್ರಹ, ಗಜಾರೂಢ ಇಂದ್ರ, ನೃತ್ಯ ಗಣಪತಿ, ವರಾಹ, ಸರಸ್ವತಿ, ಸೂರ್ಯ ಮುಂತಾದ ವಿಗ್ರಹಗಳು ಭವ್ಯವಾಗಿವೆ. ಮಲ್ಲಿತಮ್ಮ, ಚೌಡಯ್ಯ, ಚಾಲುಕ್ಯ ಲೋಹಿತ, ಮಸಣಿತಮ್ಮ ಮುಂತಾದವರು ಇದರ ರೂವಾರಿಗಳು. ಇದರ ಸ್ಥಾಪನೆಯ ಕಾಲ ೧೩ನೆಯ ಶತಮಾನದ ಮಧ್ಯಭಾಗ (ಸು. ೧೨೬೮). ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯ ಒಂದು ತ್ರಿಕೂಟಾಚಲ. ಇದರ ಭಿತ್ತಿಗಳಲ್ಲಿ ಭಾಗವತರ ಕಥೆಯನ್ನು ಮಾತ್ರ ನಿರೂಪಿಸಲಾದ ಶಿಲ್ಪ ಪಟ್ಟಿಕೆಗಳಿವೆ. ರೂವಾರಿಗಳಲ್ಲೊಬ್ಬ ಮಲ್ಲಿತಮ್ಮ. ಇನ್ನೊಬ್ಬ ಪ್ರಮುಖ ನಂದಿಯ ಬೈಚೋಜ. ೧೧೭೧ರಲ್ಲಿ ಬಮ್ಮರೆ ನಾಯಕಿ ಕಟ್ಟಿಸಿದ ಕಿಕ್ಕೇರಿಯ ಬ್ರಹ್ಮೇಶ್ವರಾಲಯದಲ್ಲಿ ಸಹ ಮದನಿಕೆ ವಿಗ್ರಹಗಳು ಕೆಲವಿವೆ.. ಇವು ಬೇಲೂರಿನ ಮೂರ್ತಿಗಳನ್ನು ಹೋಲುತ್ತವೆ. ಬಸರಾಳಿನ ಮಲ್ಲಿಕಾರ್ಜುನ ದೇವಾಲಯ (೧೨೩೪)ದಲ್ಲಿನ ಸಪ್ತ ಮಾತೃಕೆಯರ ಶಿಲ್ಪ ಸಮೂಹ ನಮ್ಮ ಗಮನವನ್ನು ಸೆಳೆಯುತ್ತದೆ. ದೊಡ್ಡಗದ್ದವಳ್ಳಿಯ ಮಹಾಲಕ್ಷ್ಮೀ ದೇವಾಲಯ (೧೧೧೭) ಬೇಲೂರಿನ ಕೇಶವಾಲಯಕ್ಕಿಂತ ಸ್ವಲ್ಪ ಪ್ರಾಚೀನವಾದುದು. ಹೊಯ್ಸಳ ಶೈಲಿಯ ಆರಂಭದೆಶೆಗಳನ್ನು ಇಲ್ಲಿ ಕಾಣಬಹುದು. ಚತುಷ್ಕೂಟದ ಈ ಆಲಯದಲ್ಲಿ ಏಳು ಭುವನೇಶ್ವರಿಗಳಿವೆ. ಅವುಗಳಲ್ಲಿ ಅಷ್ಟದಿಕ್ಪಾಲಕರ, ತಾಂಡವೇಶ್ವರರ ಸುಂದರ ಶಿಲ್ಪಗಳಿವೆ. ಮಲ್ಲೋಜ (ನ ಮಗ?) ಮಣಿಯೋಜ ಇದರ ರೂವಾರಿ. ಹೊಸಹೊಳಲಿನ ಲಕ್ಷ್ಮೀನಾರಾಯಣ ಗುಡಿ (೧೩ನೆಯ ಶತಮಾನ)ಯಲ್ಲಿ ಲಕ್ಷ್ಮೀನಾರಾಯಣ ಮತ್ತು ಲಕ್ಷ್ಮೀನರಸಿಂಹ ಸುಂದರವಾದ ಮೂರ್ತಿಗಳಿವೆ. ಯೋಗಮಾಧವ ಪರವಾಸುದೇವರ ಅಪರೂಪದ ವಿಗ್ರಹಗಳೂ ಇಲ್ಲಿವೆ. ಅರಸೀಕೆರೆಯ ಈಶ್ವರ ದೇವಾಲಯದ ಹೊರಗೋಡೆಯ ಮೇಲೆ ಒಂದು ಸಾಲು ಮಾತ್ರ ಮೂರ್ತಿಶಿಲ್ಪಗಳಿವೆ. ಅರಳುಗುಪ್ಪೆಯ ಚೆನ್ನಕೇಶವಾಲಯದ ಗರ್ಭಗೃಹದ ದ್ವಾರದ ಎರಡೂ ಕಡೆ ಮೋಹಕವಾದ ಗಣಪತಿ ಹಾಗೂ ಮಹಿಷಾಸುರಮರ್ದಿನಿಯರ ವಿಗ್ರಹಗಳಿವೆ.

### ವಿಜಯ ನಗರ

ಹದಿನಾಲ್ಕನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಮಹತ್ತರವಾದ ರಾಜಕೀಯ ಬದಲಾವಣೆಗಳಾದುವು. ಹೊಯ್ಸಳ, ಸೇವುಣ ಮನೆತನಗಳು ಅಳಿದುವು. ಮಹಮದೀಯರು ದಂಡೆತ್ತಿ ಬಂದರು. ಮೊದಲ ದಶಕಗಳಲ್ಲಿ ಅಲಕ್ಷ್ಯದಿಂದಿದ್ದ, ನಂತರ ಎಚ್ಚೆತ್ತ ಕನ್ನಡ ಜನ, ಸಂಪತ್ತಿನ ಸೂರೆಗಿಂತ 'ಮಿಗಿಲಾಗಿ ಧರ್ಮಕ್ಕೇ ಚ್ಯುತಿಯುಂಟಾಗಬಹುದಾಗಿದ್ದ ಅಪಾಯವನ್ನು ಅರಿತರು. ಪರರಾಜ್ಯ, ಪರಧರ್ಮ, ಪರಸಂಸ್ಕೃತಿಗಳು ಸ್ವರಾಜ್ಯ, ಸ್ವಧರ್ಮ, ಸ್ವಸಂಸ್ಕೃತಿಗಳಿಗೆ ಗಂಡಾಂತರವನ್ನುಂಟುಮಾಡಿದ ಸಂದರ್ಭದಲ್ಲಿ ಸ್ವಶಕ್ತಿಯನ್ನು ಸಂವರ್ಧಿಸಿ ಹಿಂದೂ ಧರ್ಮವನ್ನು, ಭಾರತೀಯ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸುವ ವಿಶಿಷ್ಟ ಧ್ಯೇಯದಿಂದ ವಿಜಯನಗರ ಸಾಮ್ರಾಜ್ಯ ತಲೆ ಎತ್ತಿತು. ಧರ್ಮ ಪ್ರಚಾರಕ್ಕಾಗಿ ದೇವಾಲಯಗಳನ್ನು ಮಾಧ್ಯಮಗಳಾಗಿ ಉಪಯೋಗಿಸಿಕೊಳ್ಳಲಾಯಿತು. ತದನುಗುಣವಾಗಿ ವಾಸ್ತುಶಿಲ್ಪ-ಮೂರ್ತಿಶಿಲ್ಪಗಳಲ್ಲೂ ಬದಲಾವಣೆಗಳಾದುವು. ಹಿರಿದಾದ ಗಾತ್ರ, ವೈಭವೋಪೇತವಾದ ಪೌರುಷತ್ವ, ಅತಿಶಯ ಅಲಂಕರಣಗಳು ಇವುಗಳ ವೈಶಿಷ್ಟ್ಯಗಳಾದುವು. ಈ ಸಾಮ್ರಾಜ್ಯ ದಕ್ಷಿಣ ಭಾರತವನ್ನೆಲ್ಲಾ ಆಕ್ರಮಿಸಿದ ಕಾರಣ ಭಿನ್ನ ಭಿನ್ನ ಪ್ರದೇಶಗಳಲ್ಲಿ ರೂಢಿಯಲ್ಲಿದ್ದ ಶೈಲಿಗಳಲ್ಲಿ ಸಹ ಈಗ ಏಕರೂಪತೆಯನ್ನು ಸಾಧಿಸಲು ಯತ್ನಿಸಲಾಯಿತು. ಆದರೆ ಪ್ರಾದೇಶಿಕ ಶೈಲಿಗಳ ಲಕ್ಷಣಗಳನ್ನು ಕಡೆಗಾಣಿಸಲಿಲ್ಲ. ಇವರು ಉಪಯೋಗಿಸಿದ ಶಿಲೆ ಹೆಚ್ಚು ಭಾರವನ್ನು ಹೊರಬಲ್ಲ ಗ್ರಾನೇಟ್. ಹೊಯ್ಸಳ ಶೈಲಿಯ ಕುಸುರಿ ಕೆಲಸದ ಕೆತ್ತನೆ ಇಂತಹ ಕಲ್ಲುಗಳಲ್ಲಿ ಸಾಧ್ಯವಿರಲಿಲ್ಲ. ಆದುದರಿಂದ ಮೂರ್ತಿಶಿಲ್ಪಗಳು ಸಹ ಆಕಾರದಲ್ಲಿ ದೊಡ್ಡವಾದುವು. ಈ ಹಿರಿಯ ಗಾತ್ರದ ಶಿಲ್ಪಗಳು ಅನೇಕ ಸಂದರ್ಭಗಳಲ್ಲಿ ಏಕಶಿಲೆಯಲ್ಲಿ ಮಾಡಲ್ಪಟ್ಟ ಅಸಾಮಾನ್ಯ ಮೂರ್ತಿಗಳು. ಹಂಪೆಯಲ್ಲಿರುವ ಸುಮಾರು ಆರೂವರೆ ಮೀಟರ್ ಎತ್ತರದ ಉಗ್ರ ನರಸಿಂಹನ ವಿಗ್ರಹ ಇವುಗಳಲ್ಲೊಂದು. ವಿಗ್ರಹದ ಸುತ್ತಲೂ ಪ್ರಾಕಾರ ಗೋಡೆ ಎಬ್ಬಿಸಿದ್ದು. ಇದು ಒಂದು ಗುಡಿ ಎನಿಸಿಕೊಂಡಿದೆ. ನಾಲ್ಕು ಕೈಗಳ ಈ ವಿಗ್ರಹದ ತಲೆಯ ಮೇಲೆ ಏಳು ಹೆಡೆಗಳ ನಾಗ ಇದೆ. ಮೂರ್ತಿಯ ಬೆನ್ನ ಹಿಂದೆ ಅದನ್ನು ತಬ್ಬಿಹಿಡಿದಂತೆ ತೋರುವ ಒಂದು ಸ್ತ್ರೀ ಹಸ್ತವನ್ನು ನೋಡಿದಾಗ ಮೂಲತಃ ಮೂರ್ತಿಯ ತೊಡೆಯ ಮೇಲೆ ಲಕ್ಷ್ಮಿ ಕುಳಿತಿದ್ದಂತೆ ತೋರುತ್ತದೆ. ಆದುದರಿಂದ ಇದನ್ನು ಲಕ್ಷ್ಮೀನರಸಿಂಹನ ಮೂರ್ತಿ ಎಂದು ಗುರುತಿಸಬಹುದೇನೋ? ವಿಗ್ರಹದ ಎರಡೂಕಡೆ ಕಂಬಗಳಿಂದ ಮಕರತೋರಣ ಎದ್ದಿದೆ. ಕೃಷ್ಣದೇವರಾಯನ ಅಪ್ಪಣೆಯಂತೆ ಆಯನ ಕೃಷ್ಣ ಭಟ್ಟ ಇದನ್ನು ಕ್ರಿ.ಶ. ೧೫೨೮ರಲ್ಲಿ ಪ್ರತಿಷ್ಠೆ ಮಾಡಿದನೆಂದು ಇಲ್ಲಿನ ಶಾಸನಗಳಲ್ಲಿ ಹೇಳಿದೆ. ಇದರ ಪಕ್ಕ ಸುಮಾರು ಮೂರು ಮೀಟರ್ ಎತ್ತರದ ಬೃಹದಾಕಾರದ ಶಿವಲಿಂಗವಿದೆ. ಇದಕ್ಕೆ ಸುತ್ತಲೂ ಒಂದು ಪ್ರಾಕಾರ ಕಟ್ಟಿದೆ. ಶಿವಲಿಂಗದ ಬುಡ ಪಕ್ಕದಲ್ಲಿ ಹರಿಯುವ ಕಾಲುವೆಯ ನೀರಿನಿಂದ ಸದಾ ಆವೃತವಾಗಿರುತ್ತದೆ. ಇದನ್ನು ಬಡವಿ ಲಿಂಗ ಎಂದು ಕರೆಯುತ್ತಾರೆ. ವೀರಭದ್ರನ ಗುಡಿಯಲ್ಲಿರುವ ಉದ್ದಾನ ವೀರಭದ್ರನ ವಿಗ್ರಹ ಸುಮಾರು ಮೂರುವರೆ ಅಡಿ ಎತ್ತರವಿದೆ. ನಾಲ್ಕು ಕೈಗಳಲ್ಲಿ ಒಂದೊಂದರಲ್ಲಿ ಕ್ರಮವಾಗಿ ಬಿಲ್ಲು, ಖಡ್ಗ, ಬಾಣ ಮತ್ತು ಗುರಾಣಿಗಳಿವೆ. ವಿಗ್ರಹದ ಬಲ ಭಾಗದಲ್ಲಿ ದಕ್ಷನ ಒಂದು ಸಣ್ಣ ವಿಗ್ರಹವಿದೆ. ಕ್ರಮವಾಗಿ ಎಂಟು ಹಾಗೂ ಹದಿನಾರು ಅಡಿಗಳ ಎತ್ತರದ, ಸಾಸಿವೆ ಕಾಳು ಮತ್ತು ಕಡಲೇ ಕಾಳು ಗಣೇಶರೆಂದು ಕರೆಯಲ್ಪಡುವ ಎರಡು ಬೃಹದ್ವಿಗ್ರಹಗಳು ಗಮನಾರ್ಹ. ಸಾಸಿವೆ ಕಾಳು ಗಣೇಶನ ಗುಡಿಯ ಮುಂದೆ ಕಂಬಗಳ ತೆರೆದ ಮಂಟಪವಿದೆ. ಈ ಕಂಬಗಳು ನಾಜೂಕಾಗಿ ಕೆತ್ತಲ್ಪಟ್ಟು ಮೇಲೆ ಹೂವಿನ ಬೋದಿಗೆಗಳಿವೆ. ಕಡಲೇ ಕಾಳು ಗಣೇಶನ ಮಂಟಪದ ಕಂಬಗಳು ಒರಟಾಗಿವೆ. ಈ ಬೃಹದಾಕಾರದ ವಿಗ್ರಹಗಳು ಎಂತಹ ಕ್ಲೇಶಗಳು ಬಂದರೂ ವಿರೋಧಿಸುವ ಅದಮ್ಯ ಶಕ್ತಿಯ ಅಜೇಯತ್ವದ ಪ್ರತೀಕಗಳಾಗಿವೆ. ವಿರೂಪಾಕ್ಷ ದೇವಾಲಯದ, ಕೃಷ್ಣದೇವರಾಯನು ೧೫೧೦ರಲ್ಲಿ ಕಟ್ಟಿಸಿದ ರಂಗಮಂಟಪದ ಮಧ್ಯದ ಆಯದಲ್ಲಿ ಹದಿನಾರು ಕಂಬಗಳಿವೆ. ಮುಂಗಾಲುಗಳನ್ನು ಮೇಲೆತ್ತಿ ಆಕ್ರಮಣ ಮಾಡುವಂತೆ ಹಿಂಗಾಲುಗಳ ಮೇಲೆ ನಿಂತಿರುವ ಸಿಂಹ(ಯಾಳಿ)ಗಳನ್ನು ಈ ಕಂಬಗಳಲ್ಲಿ ಕೆತ್ತಿದೆ. ಅವುಗಳಮೇಲೆ ಸವಾರರು. ಕಾಲಿನ ಕೆಳಗೆ ಮಕರ, ಬಾಯಿಂದ ತೂಗು ಬಿದ್ದಿರುವ ಸರಪಳಿಗಳು. ದೇವಾಲಯದ ಮುಂದಿನ ರಾಜಬೀದಿಯಿಂದ ಮುಂದಕ್ಕೆ ಎಡಭಾಗದ ಕಾಲುದಾರಿಯಲ್ಲಿ ಹೋದಂತೆ ನದೀ ತೀರದ ಮೇಲಿನ ಕೋದಂಡರಾಯನ ಆಲಯದಲ್ಲಿ ಒಳಗಡೆ ಹಿರಿದಾದ ಬಂಡೆಯಲ್ಲಿ

ರಾಮ, ಸೀತೆ ಮತ್ತು ಲಕ್ಷ್ಮಣರ ಉಬ್ಬು ಚಿತ್ರಗಳನ್ನು ಕೊರೆದಿದೆ. ಸಮೀಪದಲ್ಲಿಯೇ ಸೂರ್ಯನಾರಾಯಣ ದೇವಾಲಯವೆಂದು ಕರೆಯಲಾದ ಗುಡಿಯಲ್ಲಿ ಪುರುಷಾಕಾರದ ಹದಿನಾರು ಕೈಗಳಿರುವ ಸುದರ್ಶನ ವಿಗ್ರಹವಿದೆ. ಸುತ್ತಲಿನ ಬಂಡೆಗಳಲ್ಲಿ ಅಲ್ಲಲ್ಲಿ ಅನಂತಶಯನನ ಅರೆ ಉಬ್ಬು ಚಿತ್ರಗಳನ್ನು ಕೊರೆದಿದೆ. ಅಚ್ಯುತರಾಯನ ದೇವಾಲಯದಲ್ಲಿ ಚಿತ್ರ ಪಟ್ಟಿಕೆಗಳಲ್ಲಿ ಆನೆಗಳು, ಕುದುರೆಗಳು, ಅರಬ್ ವರ್ತಕರು, ಇತರ ಪರದೇಶಿಯರ ಚಿತ್ರಗಳನ್ನು ವಾಸ್ತವಿಕವಾಗಿ ಮೂಡಿಸಲಾಗಿದೆ. ದೇವಾಲಯದ ಬಾಗಿಲುವಾಡದ ಪೀಠದ ಮೇಲೆ ಮತ್ತು ಅಕ್ಕಪಕ್ಕಗಳಲ್ಲಿ ದಶಾವತಾರದ ವಿಗ್ರಹಗಳು, ಮಕರವಾಹನಾಸೀನಳಾದ ಗಂಗೆಯ ಸುಂದರ ಮೂರ್ತಿ ಇವು ಭಾವಪೂರ್ಣವಾಗಿವೆ. ಮಂಟಪಗಳ ಪಡಸಾಲೆಗಳ ಮೇಲೆ, ಗೋಡೆಗಳ ಮೇಲೆ ಕೃಷ್ಣನ ಲೀಲೆಗಳನ್ನು ನಿರೂಪಿಸುವ ಚಿತ್ರಗಳಿವೆ. ವಿಠಲ ದೇವಾಲಯವನ್ನು ಈ ಆಲಯ ಅನುಕರಿಸಿದರೂ ಅದರಲ್ಲಿನ ಸೊಗಸು–ಸೌಂದರ್ಯಗಳು ಇದರಲ್ಲಿಲ್ಲ. ವಿಜಯನಗರದ ವಾಸ್ತುಕಲೆಯ ಪರಾಕಾಷ್ಠತೆಯನ್ನು ವಿಠಲ ದೇವಾಲಯದಲ್ಲಿ ನೋಡಬಹುದು. ಇದರ ಗೋಪುರಗಳು ಅಲಂಕೃತವಾದುವು. ಇಲ್ಲಿನ ಮಂಟಪಗಳ ಸಂಯುಕ್ತ ಕಂಬಗಳ ಮೇಲೆ ಅನೇಕ ಪ್ರಾಣಿಗಳ, ಪಕ್ಷಿಗಳ, ಬಳ್ಳಿಗಳ ಚಿತ್ರಗಳನ್ನು ಬಿಡಿಸಿದ್ದಾರೆ. ಅಡಿಪಾಯದ ಅಡ್ಡಪಟ್ಟಿಕೆಗಳ ಮೇಲೂ ಅಂತಹುದೇ ಕೆತ್ತನೆ ಕೆಲಸವಿದೆ. ಮಧ್ಯದ ಸಣ್ಣ ಗೂಡುಗಳಲ್ಲಿ ದೇವತೆಗಳ ಉಬ್ಬುವಿಗ್ರಹಗಳು, ಕಾರ್ನಿಸಿನ ಅಂಗವಾಗಿ ಸಿಂಹ, ಕೊಕ್ಕರೆ, ಚಾತಕ ಮುಂತಾದ ನೀರು ಹಕ್ಕಿಗಳ ಚಿತ್ರಗಳಿವೆ. ಕಲ್ಯಾಣ ಮಂಟಪದ ಮೆಟ್ಟಲಿನ ಪಕ್ಕಗಳೆಲ್ಲ ತುಂಬು ಅಲಂಕಾರವಿಲ್ಲದ ಆನೆಗಳು, ಮಕರಗಳು, ಸಾಲುಗಂಬಗಳಲ್ಲಿ ಕುಪ್ಪಳಿಸುವ ಯಾಳಿಗಳು, ಅವುಗಳ ಮೇಲೆ ರಾವುತರು, ಕೆಲವೊಮ್ಮೆ ದೇವತೆಗಳು, ನೃತ್ಯಕೂಟಗಳು ಮೂಡಿ ಬಂದಿವೆ. ಚತುಷ್ಕೋನಾಕಾರದ ಕಂಬಗಳ ಮೇಲೆ ಪ್ರತಿ ಮುಖದಲ್ಲೂ ಮೂರು ಹಂತಗಳಲ್ಲಿ ಸಣ್ಣ ಉಬ್ಬು ಚಿತ್ರಗಳಲ್ಲಿ ಮೋಹಕ ಭಂಗಿಗಳಲ್ಲಿ ದಶಾವತಾರಗಳು, ನರ್ತನ ಭಂಗಿಗಳು, ಬಹು ಸುಂದರವಾದ ಹರ್ಷ ಭಂಗಿಗಳು, ಮೂರು ಮುಖದ ಅಥವಾ ಐದು ಮುಖದ ವಿಚಿತ್ರ ವೇಣುಗೋಪಾಲಕರು–ಇವರನ್ನು ಕೆತ್ತಲಾಗಿದೆ. ಕೃಷ್ಣಸ್ವಾಮಿ ಆಲಯದ ಕೃಷ್ಣ ವಿಗ್ರಹ ಈಗ ಮದರಾಸಿನ ವಸ್ತು ಸಂಗ್ರಹಾಲಯದಲ್ಲಿದೆ. ಇಲ್ಲಿನ ಏಕಶಿಲೆಯ ಜೋಡು ಕಂಬಗಳ ಮೇಲೆ ಕೃಷ್ಣನ ಬಾಲಲೀಲೆಗಳಿಗೆ ಸಂಬಂಧಿಸಿದ ಚಿತ್ರಗಳಿವೆ. ಆಲಯದೊಳಗಿನ ಸಣ್ಣ ಗುಡಿಯೊಂದರಲ್ಲಿ ಸುಬ್ರಹ್ಮಣ್ಯನ ಹಲವಾರು ಗಾರೆಯ ಶಿಲ್ಪಗಳಿವೆ. ಪೂರ್ವ ದಿಕ್ಕಿನಲ್ಲಿ ಪಶ್ಚಿಮಾಭಿಮುಖವಾಗಿರುವ ಗೋಪುರದಲ್ಲಿ ಗಾರೆಯಲ್ಲಿ (ಗಚ್ಚಿನಲ್ಲಿ) ಮೂಡಿದ, ಉನ್ಮತ್ತ ಕುದುರೆಗಳ, ಆನೆಗಳ, ಗುರಾಣಿಗಳನ್ನು ಹಿಡಿದ ಸೈನಿಕರ ಶಿಲ್ಪಗಳನ್ನು ಅಳವಡಿಸಲಾಗಿದೆ. ಹಜಾರ ರಾಮಸ್ವಾಮಿ ದೇವಾಲಯದ (೧೫೧೩) ಅರ್ಧ ಮಂಟಪದ ಮಧ್ಯೆ ನುಣುಪಾದ ನಾಜೂಕಾಗಿ ಕೆತ್ತಲ್ಪಟ್ಟ ಕಪ್ಪು ಶಿಲೆಯ ನಾಲ್ಕು ಕಂಬಗಳಲ್ಲಿ ಗಣೇಶ, ಮಹಿಷಮರ್ದಿನಿ, ಹನುಮಂತ ಮತ್ತು ವಿಷ್ಣುವಿನ ಅವತಾರಗಳ ಉಬ್ಬು ಶಿಲ್ಪಗಳಿವೆ. ಕಲ್ಕಿಯ ಅವತಾರವನ್ನು ನಿರೂಪಿಸುವುದು ವಿಶಿಷ್ಟವಾಗಿದೆ. ನಾಲ್ಕು ಕೈಗಳುಳ್ಳ ವಿಷ್ಣು ಶಂಖ, ಚಕ್ರ, ಕತ್ತಿ, ಗುರಾಣಿಗಳನ್ನು ಹಿಡಿದು ಕುದುರೆಯ ಮೇಲೆ ಕುಳಿತಂತೆ ಕಲ್ಕಿಯನ್ನು ರೂಪಿಸಲಾಗಿದೆ. ಹೊರಗೋಡೆಗಳ ಮೇಲೆ ಸಮಾನಾಂತರದಲ್ಲಿರುವ ಅಂಕಣಗಳಲ್ಲಿ ರಾಮಾಯಣ, ಕೃಷ್ಣಲೀಲೆಗಳ ಆಯ್ದ ಕಥಾಪ್ರಸಂಗಗಳನ್ನು ಉಬ್ಬು ಚಿತ್ರಗಳಲ್ಲಿ ಕಂಡರಿಸಲಾಗಿದೆ. ಋಷ್ಯಶೃಂಗನು ಪುತ್ರಕಾಮೇಷ್ಟಿಯನ್ನು ಮಾಡುವ, ಸೀತಾ ಸ್ವಯಂವರದಲ್ಲಿ ಶಿವಧನುಸ್ಸನ್ನು ಹಲವಾರು ಜನ ಸಭೆಗೆ ಹೊತ್ತುಕೊಂಡು ಬರುತ್ತಿರುವ, ರಾಮನು ಸಪ್ತ ಸಾಲಗಳನ್ನು ಒಂದೇ ಬಾಣದಿಂದ ತುಂಡರಿಸುವ ಚಿತ್ರ ಪಟ್ಟಿಕೆಗಳು ಮನಸ್ಸೆಳೆಯುತ್ತವೆ. ಎಲ್ಲ ಹಿಂದೂ ದೇವತೆಗಳೂ ಇಲ್ಲಿ ಕಾಣಿಸಿಕೊಂಡಿದ್ದಾರೆ. ಬೌದ್ಧಾವತಾರಿ ವಿಷ್ಣುವಿನ ಎರಡು ಸಣ್ಣ ಅರೆಯುಬ್ಬು ಚಿತ್ರಗಳು ಸಹ ಗರ್ಭಗೃಹದ ಗೋಡೆಯ ಮೇಲಿದೆ. ಇದನ್ನೊಂದು ಬಯಲು ಚಿತ್ರಶಾಲೆ ಎಂದು ಕರೆಯಬಹುದಾಗಿದೆ. ಮಹಾನವಮಿ ದಿಬ್ಬದಲ್ಲಿ ಉಬ್ಬು ಶಿಲ್ಪಗಳಲ್ಲಿ ಬೇಟೆಯ ದೃಶ್ಯಗಳು, ನೃತ್ಯ ಭಂಗಿಗಳು, ಆನೆ ಕುದುರೆಗಳ ಮೆರವಣಿಗೆಗಳು, ಕೋಲಾಟ, ವಾದ್ಯಮೇಳ ಮುಂತಾದವುಗಳನ್ನು ನೋಡಬಹುದು. ಇವುಗಳು ಸತ್ವಯುಕ್ತವಾಗಿ ಚಲಿಸುತ್ತಿರುವಂತಿವೆ.

### ಮೈಸೂರು

ಒಡೆಯರ ಆಳ್ವಿಕೆಯ ಕಾಲದಲ್ಲಿ ಮೂರ್ತಿಶಿಲ್ಪಕ್ಕೆ ಪ್ರೋತ್ಸಾಹ ದೊರೆತರೂ ಶಿಲ್ಪಶಾಸ್ತ್ರ ಆಗಮ ಶಾಸ್ತ್ರಗಳಲ್ಲಿ ನಿರೂಪಿತವಾದ ಲಕ್ಷಣಗಳಿಗನುಸಾರವಾಗಿ ಪ್ರತಿಮೆಗಳನ್ನು ಕಲ್ಲಿನಲ್ಲಿ, ಗಾರೆಯಲ್ಲಿ, ಕಂಚಿನಲ್ಲಿ ರೂಪಿಸುವುದನ್ನು ಹೆಚ್ಚು ಕಟ್ಟುನಿಟ್ಟಾಗಿ ಅನುಸರಿಸಿದ ಕಾರಣ ಶಿಲ್ಪಿಯ ಸ್ವಾತಂತ್ರ್ಯ ಮೊಟಕಾಗಿ ವಿಗ್ರಹಗಳು ಕೃತಕವೆಂಬಂತೆ ಕಾಣುತ್ತವೆ. ನಂಜನಗೂಡಿನ ನಂಜುಂಡೇಶ್ವರ, ಚಾಮರಾಜನಗರದ ಚಾಮರಾಜೇಶ್ವರ ದೇವಾಲಯಗಳ ಮೂರ್ತಿಗಳು ಈ ಕಾಲದ ಶಿಲ್ಪಕಲೆಗೆ ಉತ್ತಮ ನಿದರ್ಶನಗಳು. ಆದರೂ ಶಿಲ್ಪಕಲೆ ಈಗ ಅವನತಿಯ ಹಾದಿ ಹಿಡಿದಿತ್ತೆನ್ನಬೇಕು.

# ಕರ್ನಾಟಕದ ಶಾಸನಗಳು ಮತ್ತು ನಾಣ್ಯಗಳು

ಡಾ. ಕೆ. ವಿ. ರಮೇಶ

ಕರ್ನಾಟಕದ ಗತಕಾಲದ ಇತಿಹಾಸವನ್ನು ಪುನಾರಚಿಸುವಲ್ಲಿ ಸಹಾಯಕವಾಗಿರುವ ಐತಿಹಾಸಿಕ ಮೂಲ ಸಾಮಗ್ರಿಗಳ ಪೈಕಿ ಶಾಸನಗಳಿಗೂ ನಾಣ್ಯಗಳಿಗೂ ಮಹತ್ವದ ಸ್ಥಾನವಿದೆ. ಭಾರತದ ಮಟ್ಟಿಗೆ ದೇಶದ ಮೂಲೆ ಮೂಲೆಗಳಲ್ಲಿ ದೊರೆತಿರುವ ಸಹಸ್ರಾರು ಸಂಖ್ಯೆಯ ನಾಣ್ಯಗಳು ಹೆಚ್ಚಿನ ಮಹತ್ವದ ಮೂಲ ಸಾಮಗ್ರಿಗಳೇ ಆಗಿರುವವೇ ಆದರೂ ಕರ್ನಾಟಕದ ಮಟ್ಟಿಗೆ ಇಲ್ಲಿಯ ವರೆಗೆ ದೊರೆತಿರುವ ನಾಣ್ಯಗಳು ಅಷ್ಟೊಂದು ಸಹಾಯಕವಾಗಿಲ್ಲವೆಂದೇ ಹೇಳಬೇಕು. ಶಾಸನಗಳಾದರೆ ಕ್ರಿ. ಪೂ. ೪ನೆಯ ಶತಮಾನದಿಂದ ಹಿಡಿದು ೧೭ನೆಯ ಶತಮಾನದ ಕೊನೆಯ ವರೆಗಿನ ಇಪ್ಪತ್ತು ಶತಮಾನಗಳ ಅವಧಿಗೆ ಸಂಬಂಧಿಸಿದಂತೆ ಸಹಸ್ರಾರು ಸಂಖ್ಯೆಯಲ್ಲಿ ದೊರೆತಿದ್ದು ಕನ್ನಡನಾಡಿನ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಆರ್ಥಿಕ ಇತಿಹಾಸದ ಪುನಾರಚನೆಗೆ ಅತ್ಯಮೂಲ್ಯ ಹಾಗೂ ಮಹತ್ತಮ ಮೂಲ ಸಾಮಗ್ರಿಗಳಾಗಿ ಪರಿಣಮಿಸಿದೆ.

**ಕರ್ನಾಟಕದ ಶಾಸನಗಳು**

ಕನ್ನಡನಾಡಿನ ಶಾಸನಗಳಲ್ಲಿ ಬಳಸಲಾಗಿರುವ ಭಾಷೆಗಳ ದೃಷ್ಟಿಯಿಂದ ಕರ್ನಾಟಕದ ಶಾಸನದ ಇತಿಹಾಸವನ್ನು ಕ್ರಿ. ಪೂ. ೩ನೆಯ ಶತಮಾನದಿಂದ ಕ್ರಿ. ಶ. ೪ನೆಯ ಶತಮಾನದ ಮಧ್ಯಭಾಗದ ವರೆಗಿನ 'ಪ್ರಾಕೃತಯುಗ' ಕ್ರಿ. ಶ. ೪ನೆ ಯ ಶತಮಾನದ ಮಧ್ಯಭಾಗದಿಂದ ಕ್ರಿ. ಶ. ೬–೭ನೆಯ ಶತಮಾನಗಳ ವರೆಗಿನ 'ಸಂಸ್ಕೃತ ಯುಗ' ಮತ್ತು ಅಲ್ಲಿಂದೀಚಿನ ಸುದೀರ್ಘ ಅವಧಿಯನ್ನು 'ಕನ್ನಡ ಸಂಸ್ಕೃತ ಯುಗ'ವೆಂದು ವಿಂಗಡಿಸಬಹುದಾಗಿದೆ.

**ಪ್ರಾಕೃತಯುಗ**

ಕರ್ನಾಟಕದಲ್ಲಿ ದೊರೆತಿರುವ ಪ್ರಾಚೀನತಮ ಶಾಸನಗಳು ವಿಖ್ಯಾತ ಮೌರ್ಯ ಸಮ್ರಾಟ ದೇವಾನಾಂಪ್ರಿಯ ಅಶೋಕನ ಆಳ್ವಿಕೆಯವಾಗಿವೆ. ಈ ಮೊದಲೇ ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟಿಂಗ–ರಾಮೇಶ್ವರ ಮತ್ತು ಸಿದ್ಧಾಪುರ ಹಾಗೂ ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಗವಿಮಠ–ಪಾಲ್ಕಿಗುಂಡು ಎಂಬ ಸ್ಥಳಗಳಲ್ಲಿ ಅಶೋಕನ ಲಘು ಶಿಲಾ ಲಿಪಿಗಳು ದೊರೆತಿದ್ದು ಇತ್ತೀಚೆಗೆ ಬಳ್ಳಾರಿ ಜಿಲ್ಲೆಯ ನಿಟ್ಟೂರು ಮತ್ತು ಅದರ ಸಮೀಪದ ಉಡೆಗೊಳಂ ಎಂಬಲ್ಲಿ ಇನ್ನೂ ನಾಲ್ಕು ಹೊಸ ಲಘು ಶಿಲಾಲಿಪಿಗಳು ಬೆಳಕಿಗೆ ಬಂದಿವೆ. ಈ ನಾಲ್ಕು ಶಾಸನಗಳ ಪೈಕಿ ಉಡೆಗೊಳಂನ ಎರಡು ಶಾಸನಗಳಲ್ಲೊಂದು ಅಲ್ಲಿಯ ನಿವಾಸಿಗಳ ಅಜಾಗರೂಕತೆಯಿಂದ ಸಂಪೂರ್ಣ ನಷ್ಟವಾಗಿ ಹೋದುದು ದೇಶದ ಇತಿಹಾಸದ ದೃಷ್ಟಿಯಿಂದ ತುಂಬಲಾರದ ನಷ್ಟವೇ ಹೌದು. ಕರ್ನಾಟಕದ ಪ್ರಾಕೃತ ಯುಗಕ್ಕೆ ಸಂಬಂಧಿಸಿದಂತೆ ಸಾತವಾಹನರ ಒಂದೆರಡು ಶಾಸನಗಳೂ ದೊರೆತಿದ್ದು ನಮ್ಮಲ್ಲಿಯ ಪ್ರಾಕೃತ ಶಾಸನಗಳ ಪೈಕಿ ಕದಂಬ ಮಯೂರಶರ್ಮನ ಚಂದ್ರವಳ್ಳಿಯ ಶಾಸನವನ್ನು, ಅದು ಲಿಪಿ ಶಾಸ್ತ್ರ ದೃಷ್ಟಿಯಿಂದ ಕ್ರಿ.ಶ. ೪ನೆಯ ಶತಮಾನದ ಮಧ್ಯಭಾಗಕ್ಕೆ ಸೇರಿದ್ದು, ಇಲ್ಲಿಯವರೆಗೆ ದೊರೆತಿರುವ ಅತ್ಯಂತ ಕೊನೆಯ ಪ್ರಾಕೃತ ಶಾಸನವೆಂದು ಪರಿಗಣಿಸಬಹುದಾಗಿದೆ.

ಪ್ರಾಕೃತ ಯುಗಕ್ಕೆ ಸೇರಿದ ಕನ್ನಡ ಶಾಸನಗಳಾವುವೂ ಇಲ್ಲಿಯವರೆಗೆ ದೊರೆತಿಲ್ಲವಾದರೂ ಅಶೋಕನ ಒಂದು ಶಾಸನದಲ್ಲಿ ಉಕ್ತವಾಗಿರುವ ಇಸಿಲಾ ಎಂಬ ಸ್ಥಳನಾಮವು ಪ್ರಾಚೀನ ಕನ್ನಡ ಶಬ್ದವೆಂದು ನಂಬಲಾಗಿದೆ.

**ಸಂಸ್ಕೃತ –ಕನ್ನಡ ಯುಗ**

ಕ್ರಿ. ಶ. ೪ನೆಯ ಶತಮಾನದ ಪೂರ್ವಾರ್ಧದಲ್ಲಿ ಉತ್ತರ ಭಾರತದಲ್ಲಿ ಗುಪ್ತರ ಆಳ್ವಿಕೆಯಲ್ಲಿ ಮಗಧ ಸಾಮ್ರಾಜ್ಯ ಪ್ರಾಬಲ್ಯಕ್ಕೆ ಬರುವುದರ ಜೊತೆಗೆ ವೈದಿಕೋತ್ತರ ಬ್ರಾಹ್ಮಣ ಸಂಸ್ಕೃತಿಗೂ ಸಂಸ್ಕೃತ ಭಾಷೆಯ ಅದೃಷ್ಟಪೂರ್ವ ಪ್ರಮಾಣದಲ್ಲಿ ಪ್ರೋತ್ಸಾಹ ದೊರೆಯಿತು. ಸಂಸ್ಕೃತ ಭಾಷೆಯ ಈ ಪುನರುಜ್ಜೀವನವು ಕೇವಲ ಮಗಧ ಸಾಮ್ರಾಜ್ಯಕ್ಕಷ್ಟೇ ಸೀಮಿತವಾಗಿರದೆ ಭಾರತದ ಎಲ್ಲೆಡೆಗಳಲ್ಲೂ ಗೋಚರಿಸುತ್ತದೆ. ಅಂತೆಯೇ ಕರ್ನಾಟಕದಲ್ಲೂ ಕ್ರಿ. ಶ. ೪ನೆಯ ಶತಮಾನದ ಉತ್ತರಾರ್ಧದಲ್ಲಿ ಪ್ರಬಲರಾದ ಬನವಾಸಿಯ ಕದಂಬರು ಹಾಗೂ ತಲಕಾಡಿನ ಗಂಗರ ಆಶ್ರಯದಲ್ಲಿ ಸಂಸ್ಕೃತ ಭಾಷೆಯು ಪ್ರಾಕೃತವನ್ನು ಬದಿಗೊತ್ತರಿಸಿ ಪ್ರಥಮ ಶಾಸನ ಭಾಷೆಯಾಗಿ ಬೆಳಕಿಗೆ ಬಂದಿತು. ಕರ್ನಾಟಕದ ಇಂತಹ ಪ್ರಾಚೀನ ಸಂಸ್ಕೃತ ಶಾಸನಗಳಲ್ಲಿ ಹೆಚ್ಚಿನವು ಕದಂಬ ಗಂಗರ ಕಾಲದ ತಾಮ್ರ ಶಾಸನಗಳೇ ಆಗಿರುವವಾದರೂ, ಅಂದಿನ ಶಿಲಾಶಾಸನಗಳಿಗೆ ಸೇರಿದ ತಾಲಗುಂದದ ಕದಂಬ ಕಾಕುಸ್ಥವರ್ಮನ ಸ್ತಂಭಶಾಸನ, ಬಾದಾಮಿಯಲ್ಲಿರುವ ಚಾಲುಕ್ಯ ೧ನೆಯ ಪುಲಿಕೇಶಿಯ ಬಂಡೆಗಲ್ಲು ಶಾಸನ ಮತ್ತು ಆಸ್ಥಾನ ಕವಿ. ರವಿಕೀರ್ತಿಯಿಂದ ರಚಿತವಾದ

ಐಹೊಳೆಯ ೨ನೆಯ ಪುಲಿಕೇಶಿಯ ಶಿಲಾಪ್ರಶಸ್ತಿ, ಇವು ಅವುಗಳಲ್ಲಿಯ ಲಿಪಿ ಮತ್ತು ಕಾವ್ಯ ಮೌಲ್ಯದ ದೃಷ್ಟಿಯಿಂದ ಹಾಗೂ ಇತಿಹಾಸಕಾರರಿಗೆ ನೀಡುವ ಅತ್ಯಮೂಲ್ಯ ಮಾಹಿತಿಗಳ ದೃಷ್ಟಿಯಿಂದ ಸುಪ್ರಸಿದ್ಧವಾಗಿವೆ.

ಪ್ರಾಕೃತ ಯುಗದ ಕರ್ನಾಟಕದ ಪ್ರಾಕೃತ ಶಾಸನಗಳಿಂದ ನಾಡಿನ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಆರ್ಥಿಕ ಇತಿಹಾಸದ ಬಗೆಗೆ ಕಾಲಾನುಕ್ರಮ ರೀತ್ಯಾ ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಆದರೆ ಸಂಸ್ಕೃತ ಯುಗದ ತಾಮ್ರ ಮತ್ತು ಶಿಲಾಶಾಸನಗಳಿಂದ ಅಂದಿನ ಕರ್ನಾಟಕದ ಐತಿಹಾಸಿಕ ಆಗುಹೋಗುಗಳ ಬಗೆಗೆ ಸಾಕಷ್ಟು ಪ್ರಮಾಣದಲ್ಲಿ ಸತ್ಯಾಂಶಗಳು ನಮಗೆ ದೊರೆಯುತ್ತವೆ. ಉದಾಹರಣೆಗೆ ಅಂದಿನ ಶಾಸನಗಳ ಅಧ್ಯಯನದಿಂದ ಕರ್ನಾಟಕದ ಸಮಾಜವು ಚತುರ್ವರ್ಣಾಶ್ರಮದ ರೀತಿನೀತಿಗಳಿಗನುಗುಣವಾಗಿ ರಚನೆಗೊಂಡಿತ್ತೆಂದೂ ಅಂದಿನ ಆಳರಸರು ಸನಾತನ ಧರ್ಮವನ್ನೇ ಅಷ್ಟೇ ಅಲ್ಲದೆ ಬೌದ್ಧ ಜೈನ ಧರ್ಮಗಳನ್ನೂ ಬೆಳೆಸಿಕೊಂಡು ಬಂದಿದ್ದರೆಂದೂ ಸಮಾಜದ ಜಾತೀಯ ವಿಂಗಡಣೆಯೂ ಯಾವುದೇ ಪ್ರಜೆಯ ಹುಟ್ಟಿಗಿಂತಲೂ ಅವಸಧ್ಯೇಯ ಧೋರಣೆ ಚಟುವಟಿಕೆಗಳನ್ನು ಅನುಸರಿಸಿತ್ತೆಂದೂ ವಿಶದವಾಗಿ ತಿಳಿದುಬರುತ್ತದೆ. ಈ ಸಂದರ್ಭದಲ್ಲಿ ಕದಂಬ ರಾಜ್ಯವನ್ನು ಸ್ಥಾಪಿಸಿದ ಮಯೂರಶರ್ಮನು ಹುಟ್ಟಿನಿಂದ ವೈದಿಕ ಬ್ರಾಹ್ಮಣರ ಮನೆತನದವನಾಗಿದ್ದರೂ ಕ್ಷತ್ರಿಯ ವೃತ್ತಿಯನ್ನು ಕೈಗೊಂಡು ರಾಜ್ಯವನ್ನು ಸ್ಥಾಪಿಸಿ ಮಯೂರವರ್ಮನೆಂದು ಕ್ಷತ್ರಿಯ ನಾಮವನ್ನು ಧರಿಸಿ ರಾಜ್ಯವಾಳಿದುದನ್ನು ಸ್ಮರಿಸಬಹುದಾಗಿದೆ.

ಈ ಸಂಸ್ಕೃತ ಯುಗ ಕನ್ನಡಿಗನ ಹಾಗೂ ಕನ್ನಡ ನುಡಿಯ ಮಟ್ಟಿಗೆ ಅತ್ಯಂತ ಮಹತ್ವದ್ದು. ಅಂದಿನ ಕರ್ನಾಟಕದ ತಾಮ್ರಶಾಸನಗಳೆಲ್ಲವೂ ಸಂಸ್ಕೃತ ಭಾಷೆಯಲ್ಲಿಯೇ ಇರುವುದಾದರೂ ಅವುಗಳಲ್ಲಿಯ ದಾನಭಾಗಗಳಲ್ಲಿ ದಾನವಾಗಿ ನೀಡಲಾದ ಭೂಮಿಯ ಮೇರೆಗಳನ್ನು ವಿವರಿಸುವ ಸಂದರ್ಭಗಳಲ್ಲಿ ಹಲವಾರು ದೇಶೀ ಅಥವಾ ಪ್ರಾಚೀನ ಕನ್ನಡ ಸ್ಥಳನಾಮಗಳು, ಪದಗಳು ಪ್ರಯುಕ್ತವಾಗಿವೆ.ಇನ್ನೊಂದು ಮಹತ್ವದ ಸಂಗತಿಯೆಂದರೆ ಹಾಸನ ಜಿಲ್ಲೆಯ ಹಲ್ಮಿಡಿಯಲ್ಲಿ ದೊರೆತಿರುವ ಕ್ರಿ. ಶ. ೫ನೆಯ ಶತಮಾನದ ಮಧ್ಯಭಾಗಕ್ಕೆ ಸೇರಿದ ಕದಂಬ ಕಾಕುಸ್ಥವರ್ಮನ ಶಿಲಾಶಾಸನವೊಂದರ ಪಾಠವು ಕನ್ನಡವೇ ಆಗಿದ್ದು ಅದು ಇಲ್ಲಿಯ ವರೆಗೆ ದೊರೆತಿರುವ ಕನ್ನಡ ಶಾಸನಗಳ ಪೈಕಿ ಪ್ರಾಚೀನತಮದ್ದಾಗಿದೆ. ಹೀಗಾಗಿ ಕರ್ನಾಟಕದ ಸಂಸ್ಕೃತ–ಕನ್ನಡ ಯುಗದ ಆಳರಸರು ಸಂಸ್ಕೃತ ಭಾಷೆಯನ್ನು ಪ್ರೋತ್ಸಾಹಿಸುವುದರ ಜೊತೆಗೆ ಕನ್ನಡ ನುಡಿಯ ಬೆಳವಣಿಗೆಗೂ ನಾಂದಿ ಎರೆದಿದ್ದರೆಂದು ಖಚಿತವಾಗಿ ಹೇಳಬಹುದುದಾಗಿದೆ.

## ಕನ್ನಡ-ಸಂಸ್ಕೃತ ಯುಗ

ಹೀಗೆ ಕ್ರಿ. ಪೂ. ೪–೫ನೇ ಶತಮಾನಗಳಲ್ಲಿ ಕರ್ನಾಟಕದ ಶಾಸನಗಳಲ್ಲಿ ಪ್ರಥಮ ಭಾಷೆಯಾಗಿ ಕಾಣಿಸಿಕೊಳ್ಳುವ ಸಂಸ್ಕೃತ ಭಾಷೆಯು ಶತಮಾನಗಳುದ್ದಕ್ಕೂ ಮುಖ್ಯವಾದ ಶಾಸನ ಭಾಷೆಯಾಗಿಯೇ ಉಳಿದು ಬಂದಿತ್ತಾದರೂ ಕ್ರಿ. ಶ. ೬ನೆಯ ಶತಮಾನದ ಉತ್ತರಾರ್ಧದಲ್ಲಿ ಪಟ್ಟಕ್ಕೆ ಬಂದ ಚಾಲುಕ್ಯ ಚಕ್ರವರ್ತಿ ಮಂಗಲೇಶನ ಕಾಲದಿಂದ ಹಿಡಿದು, ಮುಖ್ಯವಾಗಿ ಶಿಲಾಶಾಸನಗಳಲ್ಲಿ ಕನ್ನಡವು ಹೆಚ್ಚು ಹೆಚ್ಚಾಗಿ ಬಳಕೆಗೆ ಬರಲಾರಂಭಿಸಿತು. ಹೀಗೆ ಕನ್ನಡವನ್ನು ಹೆಚ್ಚು ಹೆಚ್ಚಿನ ಪ್ರಾಬಲ್ಯಕ್ಕೆ ತರುವಲ್ಲಿ ಶ್ರವಣಬೆಳ್ಗೊಳದ ಜೈನರು ವಹಿಸಿದ್ದ ಪಾತ್ರವು ಮಹತ್ವದ್ದಾಗಿದೆ. ಕನ್ನಡ–ಸಂಸ್ಕೃತ ಯುಗದ ಪ್ರಾರಂಭ ಕಾಲಕ್ಕೆ ಸೇರಿದ ಶ್ರವಣ ಬೆಳಗೊಳದ ಕೆಲವು ಪ್ರಾಚೀನ ಕನ್ನಡ ಶಾಸನಗಳು ಆ ವೇಳೆಗಾಗಲೇ ಕನ್ನಡ ನುಡಿಯು ಸಾಹಿತ್ಯಕ ಭಾಷೆಯಾಗಿ ಬೆಳೆದಿತ್ತೆಂಬುದನ್ನು ನಿರೂಪಿಸುವಂತಹವಾಗಿದೆ.

ಕರ್ನಾಟಕವನ್ನು ಕಾಲಾನುಕ್ರಮವಾಗಿ ಆಳಿದ ಅರಸು ಮನೆತನಗಳ ಪೈಕಿ ಕನ್ನಡ ನಾಡನ್ನೇ ಕೇಂದ್ರವಾಗಿರಿಸಿ ಮೊತ್ತ ಮೊದಲನೆಯ ಸಾಮ್ರಾಜ್ಯವನ್ನು ಸ್ಥಾಪಿಸಿದ ಕೀರ್ತಿ ವಾತಾಪಿಯ ಚಾಲುಕ್ಯರದ್ದು. ಚಾಲುಕ್ಯ ಸಾಮ್ರಾಜ್ಯವು ಕರ್ನಾಟಕವನ್ನಷ್ಟೇ ಒಳಗೊಂಡಿರದೆ ಗುಜರಾತ್ ಮಹಾರಾಷ್ಟ್ರ ಮತ್ತು ಆಂಧ್ರ ಪ್ರದೇಶದ ಭಾಗಗಳನ್ನೂ ಗಣನೀಯ ಪ್ರಮಾಣದಲ್ಲಿ ಒಳಗೊಂಡಿತ್ತು. ಹೀಗಾಗಿ ಚಾಲುಕ್ಯರ ಕಾಲದ ಕನ್ನಡ ಶಾಸನಗಳು ಕರ್ನಾಟಕದ ಹೊರಗಿನ ಪ್ರದೇಶಗಳಲ್ಲೂ, ಅದರಲ್ಲೂ ಮುಖ್ಯವಾಗಿ ಆಂಧ್ರ ಪ್ರದೇಶದಲ್ಲೂ ದೊರೆತಿರುತ್ತವೆ. ಹೀಗೆ ಕರ್ನಾಟಕದ ಹೊರಗಡೆ ಪ್ರಾಚೀನ ಕನ್ನಡ ಶಾಸನಗಳು ದೊರೆತಿರುವ ಸ್ಥಳಗಳ ಪೈಕಿ ಮಹಬೂಬನಗರ ಜಿಲ್ಲೆಯ ಅಲಂಪುರವು ಪ್ರಸ್ತಾಪಾರ್ಹವಾಗಿದೆ. ಅಲ್ಲದೆ ೮ನೆಯ ಶತಮಾನದ ಪೂರ್ವಾರ್ಧದಲ್ಲಿ ರಾಜ್ಯವಾಳಿದ ಚಾಲುಕ್ಯ ಚಕ್ರವರ್ತಿ ೨ನೆಯ ವಿಕ್ರಮಾದಿತ್ಯನು ಪಲ್ಲವರ ರಾಜಧಾನಿಯಾದ ಕಾಂಚೀಪುರವನ್ನು ಗೆದ್ದು ವಶಪಡಿಸಿಕೊಂಡು ಅಲ್ಲಿಯ ರಾಜ ಸಿಂಘೇಶ್ವರ ದೇವಸ್ಥಾನದ ಸಿರಿ ಸಂಪತ್ತು ಆಭರಣಗಳನ್ನು ವೀಕ್ಷಿಸಿ ಪುನಃ ಅವುಗಳನ್ನು ಆ ದೇವರಿಗೇ ಅರ್ಪಿಸಿದನೆಂದು ಹೇಳುವ ಕನ್ನಡ ಶಿಲಾ ಶಾಸನವು ಇಂದಿಗೂ ಕಾಂಚೀಪುರದ ಕೈಲಾಸನಾಥ ದೇವಾಲಯದಲ್ಲಿ ಕಾಣಸಿಗುತ್ತದೆ.

ಕ್ರಿ. ಶ. ೬–೮ನೆಯ ಶತಮಾನಗಳ ಅವಧಿಯ ಚಾಲುಕ್ಯರ ಕಾಲದ ಕನ್ನಡ ಶಾಸನಗಳು ಭಾಷೆಯ ಬೆಳವಣಿಗೆಯ ಅಧ್ಯಯನಕ್ಕೆ ಅತ್ಯಂತ ಸಹಾಯಕವಾಗಿವೆ. ಅಂದಿನ ಕನ್ನಡ ಶಾಸನಗಳ ಪಾಠಗಳನ್ನು ರಚಿಸುವಲ್ಲಿ ಬಳಸಲಾಗಿರುವ ಪ್ರಾಕೃತ, ಸಂಸ್ಕೃತ ಶಬ್ದಗಳ ತತ್ಸಮ, ತದ್ಭವ, ಪ್ರಯೋಗಗಳು ಅಧ್ಯಯನಕಾರರ ಮಟ್ಟಿಗೆ ಕುತೂಹಲಕಾರಿಯೇ ಆಗಿವೆ. ಅಲ್ಲದೆ ಚಾಲುಕ್ಯರ ಮುಖ್ಯ ಕೇಂದ್ರಗಳಾಗಿದ್ದ ಬಾದಾಮಿ, ಪಟ್ಟದಕಲ್ಲು, ಐಹೊಳೆ, ಮಹಾಕೂಟ ಮುಂತಾದ ಸ್ಥಳಗಳಲ್ಲಿ ನೂರಾರು ಸಂಖ್ಯೆಯಲ್ಲಿ ದೊರೆತಿರುವ ಕನ್ನಡ ಮತ್ತು ಸಂಸ್ಕೃತ ಶಾಸನಗಳ ಸಹಾಯದಿಂದ ಕನ್ನಡ ನುಡಿಯದಷ್ಟೇ ಅಲ್ಲದೆ ಲಿಪಿಯ ಹಂತಹಂತದ ಬೆಳವಣಿಗೆಗಳನ್ನೂ ನಾವು ತಿಳಿಯುವುದು ಸಾಧ್ಯವಾಗಿದೆ.

ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದಂತೆ ಹಲವು ಕನ್ನಡ ಶಿಲಾಸಾಸನಗಳು ದೊರೆತಿರುತ್ತವೆಯಾದರೂ ಅವರ ತಾಮ್ರ ಶಾಸನಗಳೆಲ್ಲವೂ ಹಿಂದಿನಂತೆಯೇ ಸಂಸ್ಕೃತ ಭಾಷೆಯವೇ ಆಗಿವೆ. ಆದರೆ ಅವುಗಳನ್ನು ಬರೆಯುವಲ್ಲಿ ಬಳಸಲಾಗಿರುವ ಲಿಪಿ ಮಾತ್ರ ಪ್ರಾಚೀನ ಕನ್ನಡದ್ದು. ಚಾಲುಕ್ಯರ ನಂತರ ಕರ್ನಾಟಕ ಸಾಮ್ರಾಜ್ಯಕ್ಕೆ ಅಧಿಪತಿಗಳಾದ ರಾಷ್ಟ್ರಕೂಟರಾದರೆ ತಾಮ್ರ ಶಾಸನಗಳ ಪಾಠಗಳ ರಚನೆಗೆ ಸಂಸ್ಕೃತ ಭಾಷೆಯನ್ನೇ ಬಳಸಿದುದರ ಜೊತೆಗೆ ಹೆಚ್ಚಿನಂಶ ಕನ್ನಡ ಲಿಪಿಯ ಬದಲು ನಾಗರೀ ಲಿಪಿಯನ್ನು ಆರಿಸಿಕೊಂಡಿದ್ದರು. ಆದರೂ ರಾಷ್ಟ್ರಕೂಟರ ಶಿಲಾಶಾಸನಗಳ ಪೈಕಿ ಹೆಚ್ಚಿನವು ಕನ್ನಡ ಭಾಷೆಯವೇ ಆಗಿವೆ.

ಚಾಲುಕ್ಯರಂತೆಯೇ ರಾಷ್ಟ್ರಕೂಟರೂ ಸಹ ತಮ್ಮ ಸಾಮ್ರಾಜ್ಯಶಾಹೀ ಆಧಿಪತ್ಯವನ್ನು ಗುಜರಾತ್, ಮಹಾರಾಷ್ಟ್ರ, ಮಧ್ಯಪ್ರದೇಶ, ಆಂಧ್ರಪ್ರದೇಶ ಮತ್ತು ತಮಿಳುನಾಡಿನ

ಪ್ರಾಂತಗಳಲ್ಲಿ ಬಿತ್ತರಿಸಿದ್ದರು. ಕರ್ನಾಟಕದ ಹೊರಗಡೆ ದೊರೆತಿರುವ ರಾಷ್ಟ್ರಕೂಟರ ಕನ್ನಡ ಶಾಸನಗಳಲ್ಲಿ ಮಧ್ಯ ಪ್ರದೇಶದ ಸಾತ್ನಾ ಜಿಲ್ಲೆಯ ಜುರಾ ಎಂಬಲ್ಲಿ ದೊರೆತಿರುವ ೩ನೆಯ ಕೃಷ್ಣನ ಪ್ರಶಸ್ತಿಯು ಪ್ರಸ್ತಾಪಾರ್ಹವಾಗಿದೆ. 'ನೃಪತುಂಗ' ಎಂಬ ಬಿರುದನ್ನು ಮೊದಲ ಬಾರಿಗೆ ೩ನೆಯ ಕೃಷ್ಣನಿಗೆ ನೀಡುವ ಈ ಶಾಸನವು ಅವನು ಚೋಳರನ್ನು ಸದೆಬಡಿದ ವಿಷಯವನ್ನು ಪ್ರಸ್ತಾಪಿಸಿ ಅವನು ಕಾಂಚೀಪುರವನ್ನು ಗೆದ್ದವನಾದುದರಿಂದ ಅವನಿಗೆ 'ಕಚ್ಚೆಗಂ' ಎಂಬ ಬಿರುದನ್ನು ಪಾಲಿಸುತ್ತದೆ.

ಇಲ್ಲಿ ಹೊರನಾಡಿನ ಕನ್ನಡ ಶಾಸನಗಳ ಪೈಕಿ ಎಲ್ಲ ಕನ್ನಡ ವಿದ್ವಾಂಸರುಗಳ ಕುತೂಹಲವನ್ನೂ ಕೆರಳಿಸುವ ಒಂದು ಶಾಸನವೆಂದರೆ ಆಂಧ್ರ ಪ್ರದೇಶದ ಕರೀಂನಗರ ಜಿಲ್ಲೆಯ ಕುರಿಕ್ಯಾಲ್ ಬಳಿಯ ಬೊಮ್ಮಲಗುಟ್ಟವೆಂಬ ಗುಡ್ಡದ ಬಂಡೆಯ ಮೇಲೆ ಕೊರೆಯಲಾಗಿರುವ ತ್ರಿಭಾಷಾ ಶಾಸನ. ಇದರ ಲಿಪಿಯು ಕ್ರಿ. ಶ. ೯–೧೦ನೆಯ ಶತಮಾನದ ಕನ್ನಡ ಲಿಪಿಯಾಗಿದ್ದು ಶಾಸನ ಪಾಠವು ಸಂಸ್ಕೃತ, ಕನ್ನಡ, ತೆಲುಗು ಭಾಷೆಗಳ ಮೂರು ಭಾಗಗಳಿಂದ ಕೂಡಿದೆ. ಪ್ರಖ್ಯಾತ ಕನ್ನಡ ಕವಿಯೂ ಜಿನವಲ್ಲಭನ ಸಹೋದರನೂ ಆದ ಪಂಪನು ವೇಮುಲವಾಡದ ಚಾಳುಕ್ಯ ಅರಸು ಅರಿಕೇಸರಿಯಿಂದ ಧರ್ಮಪುರವೆಂಬ ಗ್ರಾಮವನ್ನು ಕೀರ್ತಿಶಾಸನವಾಗಿ ಪಡೆದನೆಂದು ಈ ಶಾಸನದಿಂದ ತಿಳಿಯುತ್ತೇವೆ.

ಅದೇ ಕರೀಂನಗರ ಜಿಲ್ಲೆಯಲ್ಲಿ ದೊರೆತಿರುವ ಕ್ರಿ. ಶ. ೯೪೬ರ ಅರಿಕೇಸರಿಯ ಮತ್ತೊಂದು ಕನ್ನಡ ಶಾಸನದಲ್ಲಿ ಪಂಪ ಮಹಾಕವಿಯ ವಿಕ್ರಮಾರ್ಜುನ ವಿಜಯದ ಐದು ಪದ್ಯಗಳನ್ನು ಉದ್ಧರಿಸುವುದು ಗಮನಾರ್ಹ.

ದಕ್ಷಿಣ ಭಾರತದ ಮಟ್ಟಿಗೆ ಕ್ಷೇತ್ರದ ದೃಷ್ಟಿಯಿಂದ ಹೇಳುವುದಾದರೆ ಕರ್ನಾಟಕದಲ್ಲಿ ದೊರೆತಿರುವಷ್ಟು ಸಂಖ್ಯೆಯಲ್ಲಿ ಇನ್ನಾವ ಕ್ಷೇತ್ರದಲ್ಲೂ ವೀರಗಲ್ಲುಗಳು ಮತ್ತು ಇತರ ಸ್ಮಾರಕ ಶಾಸನಗಳು ದೊರೆತಿಲ್ಲ. ಗುಲ್ಬರ್ಗ ಜಿಲ್ಲೆಯ ಬಿಳ್ವಾಡಿ ಎಂಬಲ್ಲಿ ದೊರೆತಿರುವ ಕ್ರಿ. ಶ. ೨–೩ನೆಯ ಶತಮಾನಕ್ಕೆ ಸೇರಿದ ಒಂದು ಪಂಕ್ತಿಯ ಪ್ರಾಕೃತ ಶಾಸನವು ಕರ್ನಾಟಕದ ಸ್ಮಾರಕ ಶಾಸನಗಳಲ್ಲಿ ಪ್ರಾಚೀನತಯದ್ದು. ಪ್ರಾಚೀತನತಮ ಕನ್ನಡ ಶಾಸನವೆನಿಸಿಕೊಂಡಿರುವ ಹಲ್ಮಿಡಿಯ ಶಾಸನವೂ ಸಹ ವೀರಗಲ್ಲುಗಳ ಜಾತಿಗೇ ಸೇರಿದ್ದು. ವಾತಾಪಿ ಚಾಲುಕ್ಯರ ಕಾಲಕ್ಕೆ ಸೇರಿದ ವೀರಗಲ್ಲುಗಳೂ ದೊರೆತಿವೆಯಾದರೂ ರಾಷ್ಟ್ರಕೂಟರ ಕಾಲದಲ್ಲಿ ಅವರ ಹಾಗೂ ಅಂದಿನ ಕರ್ನಾಟಕದ ಎಲ್ಲ ಅರಸು ಮನೆತನಗಳ ಆಳ್ವಿಕೆಗೆ ಸೇರಿದ ವೀರಗಲ್ಲುಗಳೂ ಸ್ಮಾರಕ ಶಾಸನಗಳೂ ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿರುತ್ತವೆ. ಇವುಗಳ ಪೈಕಿ ರಾಷ್ಟ್ರಕೂಟ–ಗಂಗರ ಆಳ್ವಿಕೆಗೆ ಸೇರಿದ ಕ್ರಿ. ಶ. ೯೪೯–೫೦ರಲ್ಲಿ ಹುಟ್ಟಿದ ಮಂಡ್ಯ ಜಿಲ್ಲೆಯ ಆತಕೂರಿನಲ್ಲಿ ದೊರೆತಿರುವ ಸ್ಮಾರಕ ಶಾಸನವೊಂದನ್ನು ಇಲ್ಲಿ ಪ್ರಸ್ತಾಪಿಸಲೇಬೇಕು. ಗಂಗರ ಅರಸು ೨ನೆಯ ಭೂತುಗನು ಮಣಲರನೆಂಬ ತನ್ನ ಅನುಚರನಿಗೆ ಕಾಳಿಯೆಂಬ ತನ್ನ ಅಚ್ಚುಮೆಚ್ಚಿನ ಬೇಟೆ ನಾಯಿಯನ್ನು ಪಾರಿತೋಷಕವಾಗಿ ನೀಡಿದ್ದನೆಂದೂ ಆ ನಾಯಿಗೂ ಕಾಡು ಹಂದಿಯೊಂದಕ್ಕೂ ನಡೆದ ಹೋರಾಟದಲ್ಲಿ ಎರಡೂ ಪ್ರಾಣಿಗಳೂ ಸತ್ತುಬಿದ್ದು. ಆ ನಾಯಿಯ ಸ್ಮರಣಾರ್ಥ ಶಾಸನ ಹೊತ್ತಕಲ್ಲನ್ನು ನಡಲಾಯಿತೆಂದೂ ಆತಕೂರಿನ ಈ ಶಾಸನವು ತಿಳಿಸುತ್ತದೆ.

ಈ ಕಾಲದ ವೀರಗಲ್ಲುಗಳಿಂದ ತಿಳಿದುಬರುವ ಒಂದು ಮಹತ್ವದ ಸಂಗತಿಯೆಂದರೆ ಅಂದಿನ ಆಳರಸರ ಬಗೆಗೆ ಅವರುಗಳ ನಿಕಟ ಅನುಯಾಯಿಗಳು ತಾಳಿದ್ದ ಅನುಪಮ ಸ್ವಾಮಿ ನಿಷ್ಠೆ. ಅಂತಹ ಅಂಗಸೇವಕರಲ್ಲನೇಕರು ತಮ್ಮ ಪ್ರಭುಗಳು ಅಸುನೀಗಿದ ನಂತರ ತಾವು ಬದುಕಿರುವುದಿಲ್ಲವೆಂದು ಪಣತೊಡುತ್ತಿದ್ದರು. ಇನ್ನೂ ಕೆಲವರು ತಮ್ಮ ಸ್ವಾಮಿಯ ಮೃತ ದೇಹವನ್ನು ಮಣ್ಣುಮುಟ್ಟಗೊಡೆವೆಂದು ಪ್ರತಿಜ್ಞೆ ಮಾಡಿದ್ದರು. ಅಂತಹವರು ಅರಸನ ಸಾವಿನ ಸುದ್ದಿ ತಿಳಿದೊಡನೆ ಆತ್ಮಾರ್ಪಣೆಗೈದು ಅವರ ಮೃತ ದೇಹದ ಮೇಲೆ ಸ್ವಾಮಿಯ ಮೃತದೇಹವನ್ನಿರಿಸಿ ಹೂಳುತ್ತಿದ್ದು, ಅಂತಹ ನಿಷ್ಠ ಸೇವಕರನ್ನು 'ಕಿಳ್ಗುಂಡೆ' ಎಂದು ಕರೆಯುತ್ತಿದ್ದರು.

ರಾಷ್ಟ್ರಕೂಟರ ನಂತರ ಕ್ರಿ. ಶ. ೧೦ನೆಯ ಶತಮಾನದ ಉತ್ತರಾರ್ಧದಲ್ಲಿ ಕರ್ನಾಟಕ ಸಾಮ್ರಾಜ್ಯದ ಒಡೆತನವನ್ನು ಗಳಿಸಿಕೊಂಡು ಸುಮಾರು ೭ ಶತಮಾನಗಳ ಕಾಲ ರಾಜ್ಯವಾಳಿದ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಕನ್ನಡ ಭಾಷೆ, ಲಿಪಿ ಮತ್ತು ಸಂಸ್ಕೃತಿ ಆಧುನಿಕತೆಯ ದಾರಿ ಹಿಡಿಯಿತೆನ್ನಬಹುದು. ಚಾಳುಕ್ಯರ ತಾಮ್ರಶಾಸನಗಳಲ್ಲಿ, ಅವು ಸಂಖ್ಯೆಯಲ್ಲಿ ಕಡಿಮೆಯೇ ಆಗಿದ್ದು, ಹೆಚ್ಚಿನವು ಸಂಸ್ಕೃತ ಭಾಷೆ ಮತ್ತು ನಾಗರೀ ಲಿಪಿಯಲ್ಲಿವೆ. ಆದರೆ ಸಾಕಷ್ಟು ಸಂಖ್ಯೆಯಲ್ಲಿ ದೊರೆತಿರುವ ಅವರ ಶಿಲಾಶಾಸನಗಳಲ್ಲಿ ಹೆಚ್ಚಿನವು ಸಂಕ್ಷಿಪ್ತ ಪಾಠಗಳಿಂದ ಕೂಡಿದ್ದು ಅವುಗಳಿಂದ ಸಾಂಸ್ಕೃತಿಕ, ಧಾರ್ಮಿಕ ಸಾಮಾಜಿಕ ಮತ್ತು ಆರ್ಥಿಕ ಇತಿಹಾಸದ ಬಗೆಗೆ ಸಾಕೆನಿಸುವಷ್ಟು ಮಾಹಿತಿ ದೊರೆಯುವುದಿಲ್ಲ. ಚಾಳುಕ್ಯರ ಕಾಲದ ಕನ್ನಡ ಶಾಸನಗಳಲ್ಲಾದರೆ ಅವುಗಳಲ್ಲಿ ಹೆಚ್ಚಿನವುಗಳ ಪಾಠಗಳು ಸುವಿಸ್ತೃತವಾಗಿದ್ದು ಅಂದಿನ ಕರ್ನಾಟಕದ ರಾಜಕೀಯ ಇತಿಹಾಸದ ಮಟ್ಟಿಗೇ ಅಲ್ಲದೇ, ಸಾಮ್ರಾಜ್ಯಶಾಹಿ ಮತ್ತು ಸಾಮಂತ ಅರಸು ಮನೆತನಗಳ, ಅಧಿಕಾರಿ ವರ್ಗದವರ, ಸಂಘ ಸಂಸ್ಥೆಗಳ, ಧಾರ್ಮಿಕ ವ್ಯಕ್ತಿಗಳ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಪರಿಸ್ಥಿತಿಗಳ ಕುರಿತು ಐತಿಹಾಸಿಕ ವಿವರಗಳು ತೃಪ್ತಿದಾಯಕ ಪ್ರಮಾಣದಲ್ಲಿ ದೊರೆಯುತ್ತವೆ. ಜೊತೆಗೆ ಅಂದಿನ ಕನ್ನಡ ಶಾಸನಗಳ ಪಾಠಗಳು ಹೆಚ್ಚಿನಂಶ ಗದ್ಯಪದ್ಯ ಮಿಶ್ರಿತವಾದ ಚಂಪೂ ರೂಪದವಾಗಿದ್ದು ಕನ್ನಡ ಸಾಹಿತ್ಯದ ಬೆಳವಣಿಗೆಯ ಅಧ್ಯಯನಕ್ಕೂ ಸಹಾಯಕವಾಗಿವೆ.

ಕ್ರಿ. ಶ. ೧೩ನೆಯ ಶತಮಾನದ ಪ್ರಾರಂಭದಲ್ಲಿ ಕಲ್ಯಾಣದ ಚಾಳುಕ್ಯರು ಮತ್ತು ಕಲಚುರಿಗಳು ಪದಚ್ಯುತಗೊಂಡ ನಂತರ ಕರ್ನಾಟಕ ಸಾಮ್ರಾಜ್ಯವು ಇಬ್ಭಾಗವಾಗಿ ಉತ್ತರಾರ್ಧಕ್ಕೆ ಸೇವುಣರೂ ದಕ್ಷಿಣಾರ್ಧಕ್ಕೆ ಹೊಯ್ಸಳರೂ ದೊರೆಗಳಾದರು. ಸೇವುಣ ಅರಸುಗಳು ತಮ್ಮ ಉತ್ತರಗಡಿಯ ರಾಜ್ಯಗಳ ಜೊತೆಗೆ ಹೆಚ್ಚು ಸಂಪರ್ಕ ಬೆಳೆಸಿದ್ದರಾಗಿ ಆ ಪ್ರಾಂತ್ಯದ ಕನ್ನಡ ಭಾಷೆಯು ಮರಾಠಿಯ ಪ್ರಭಾವಕ್ಕೆ ಒಳಗಾಗಲಾರಂಭಿಸಿತು. ದಕ್ಷಿಣದ ಹೊಯ್ಸಳರು ತೆಂಕಣಗಡಿಯ ತಮಿಳುನಾಡಿನ ರಾಜ್ಯಗಳ ಜೊತೆಗೆ ನಿಕಟ ಸಂಪರ್ಕ ವಿಟ್ಟುಕೊಂಡಿದ್ದುದರಿಂದ ಆ ಪ್ರಾಂತ್ಯದ ಕನ್ನಡವು ಹೆಚ್ಚು ದ್ರಾವಿಡೀ ಅಂಶಗಳನ್ನೇ ಉಳಿಸಿಕೊಂಡು ಬಂದಿತು. ಕನ್ನಡ ಲಿಪಿಯ ಸುಧಾರಣೆ ಮತ್ತು ಭಾಷೆಯ ಬೆಳವಣಿಗೆಯ ಬಗ್ಗೆ ಹೊಯ್ಸಳರು ಬೀರಿದ ಮಹತ್ವದ ಪ್ರಭಾವವನ್ನು ಅವರುಗಳು ಬಿಟ್ಟುಹೋಗಿರುವ ಶಾಸನಗಳ ವೀಕ್ಷಣೆ ಮತ್ತು ಪರಿಶೀಲನೆಗಳಿಂದ ಸುಲಭವಾಗಿಯೇ ತಿಳಿದುಕೊಳ್ಳಬಹುದಾಗಿದೆ.

ಕ್ರಿ. ಶ. ೧೪ನೆಯ ಶತಮಾನದ ಪೂರ್ವಾರ್ಧದ ಕೊನೆಯ ವೇಳೆಗೆ ವಿಜಯನಗರ ಸಾಮ್ರಾಜ್ಯವು ಸ್ಥಾಪಿತಗೊಂಡು ದಕ್ಷಿಣ ಭಾರತದ ಇತಿಹಾಸದಲ್ಲೇ ಅದೃಷ್ಟಪೂರ್ವ ಪ್ರಮಾಣದಲ್ಲೇ ಸುವಿಸ್ತಾರವಾಗಿ ಬೆಳೆಯತೊಡಗಿತು. ವಿಜಯನಗರ ಕಾಲದ ಕರ್ನಾಟಕದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ತಾಮ್ರ ಮತ್ತು ಶಿಲಾಶಾಸನಗಳು ಹುಟ್ಟಿಕೊಂಡವಾದರೂ ಆ ಕಾಲಕ್ಕೆ ಸಂಬಂಧಿಸಿದಂತೆ ಹಲವು ಬಗೆಯ ಶಾಸನೇತರ ಐತಿಹಾಸಿಕ ಮೂಲ ಸಾಮಗ್ರಿಗಳೂ ದೊರೆಯುತ್ತವೆಯಾದ ಕಾರಣ ಇತಿಹಾಸ ಪುನಾರಚನೆಯ ಮಟ್ಟಿಗೆ ಶಾಸನ ಸಾಮಗ್ರಿಯು ತನ್ನ ಅಗ್ರಿಮ ಸ್ಥಾನವನ್ನು ಕಳೆದುಕೊಳ್ಳುವಂತಾಯಿತು. ಜೊತೆಗೆ ಅಧಿಕೃತ ದಾಖಲೆಗಳನ್ನು ಬರೆದಿಡುವಲ್ಲಿ ತಾಮ್ರಪಟ್ಟಿಗಳ ಜೊತೆಗೆ ಇನ್ನಿತರ ವಸ್ತುಗಳೂ ಲಭ್ಯವಾದುದರಿಂದ ಶಿಲಾಶಾಸನಗಳನ್ನು ಬರೆದಿಡುವುದು ಕೇವಲ ಒಂದು ಸಾಂಕೇತಿಕ ಪರಂಪರೆಯಾಗಿ ಮಾತ್ರ ಉಳಿಯಿತಾಗಿ ಆ ಕಾಲದ ಶಿಲಾಶಾಸನಗಳ ಬರವಣಿಗೆಯಲ್ಲಿ ಒಂದು ರೀತಿಯ ಆಲಸ್ಯ, ಅಲಕ್ಷ್ಯ, ಎದ್ದು ಕಾಣುತ್ತದೆ. ಆದರೂ ಅಂದಿನ ಇತಿಹಾಸಕ್ಕೆ ಸಂಬಂಧಿಸಿದಂತೆ ದೊರೆಯುವ ಶಾಸನೇತರ ಸಾಮಗ್ರಿಗಳ ಹೇಳಿಕೆಗಳ ಒಪ್ಪುತಪ್ಪುಗಳನ್ನು ತಿಳಿದುಕೊಳ್ಳುವಲ್ಲಿ ವಿಜಯನಗರ ಕಾಲದ ಕರ್ನಾಟಕದ ಶಾಸನಗಳು ಹೆಚ್ಚು ಸಹಕಾರಿಯಾಗಿವೆ. ಇಂತಹ ಸೀಮಿತ ಸಹಾಯವನ್ನು ಕ್ರಿ. ಶ. ಸುಮಾರು ೧೭ನೆಯ ಶತಮಾನದ ಕೊನೆಯ ವರೆಗೂ ನಾವು ಕರ್ನಾಟಕದ ಶಾಸನಗಳಿಂದ ಪಡೆಯಬಹುದಾಗಿದೆ.

**ಕರ್ನಾಟಕದ ನಾಣ್ಯಗಳು**

ಈ ಮೊದಲೇ ಹೇಳಿರುವಂತೆ ಕರ್ನಾಟಕದ ಇತಿಹಾಸವನ್ನು ಪುನಾರಚಿಸುವಲ್ಲಿ ಶಾಸನಗಳಿಂದ ದೊರೆಯುವಷ್ಟು ಸಹಾಯ ನಾಣ್ಯಗಳಿಂದ ದೊರೆಯುವುದಿಲ್ಲ. ಆದರೂ ಇತರ ಮೂಲ ಸಾಮಗ್ರಿಗಳಿಂದ ತಿಳಿದುಬರುವ ಐತಿಹಾಸಿಕ ಅಂಶಗಳನ್ನು ಪುಷ್ಟೀಕರಿಸುವಲ್ಲಿ ಕರ್ನಾಟಕದ ಗತ ಕಾಲದ ನಾಣ್ಯಗಳು ಸಹಾಯಕವಾಗಿವೆ.

ಕರ್ನಾಟಕದ ನಾಣ್ಯಗಳ ಅಧ್ಯಯನಕ್ಕೆ ಎರಡು ಮುಖಗಳಿವೆ. ಒಂದು, ಗತಕಾಲದಲ್ಲಿ ಚಲಾವಣೆಯಲ್ಲಿದ್ದು ಇಂದು ನಮ್ಮ ಕೈಸೇರಿರುವ ನಾಣ್ಯಗಳ ನೇರ ಅಧ್ಯಯನ, ಎರಡನೆಯದು ಕರ್ನಾಟಕದ ಶಾಸನಗಳಲ್ಲಿ ಉಕ್ತವಾಗಿರುವ ನಾಣ್ಯಗಳ ಹೆಸರುಗಳ ಮತ್ತು ಅಂತಹ ಬೇರೆ ಬೇರೆ ಮೌಲ್ಯದ ತುಲನಾತ್ಮಕ ಅಧ್ಯಯನ.

ಕರ್ನಾಟಕದ ನಾಣ್ಯಗಳ ಇತಿಹಾಸವು ಪ್ರಾರಂಭವಾಗುವುದು ಕ್ರಿ. ಪೂ. ೪–೩ನೆಯ ಶತಮಾನಗಳಲ್ಲಿ ಮಗಧದ ಮೌರ್ಯರ ಆಳ್ವಿಕೆಯ ಕಾಲದಲ್ಲಿ. ಆ ಕಾಲಕ್ಕೆ ಸಂಬಂಧಿಸಿದಂತೆ ಕರ್ನಾಟಕದ ಕೆಲವೆಡೆಗಳಲ್ಲಿ ಮುದ್ರೆಯೊತ್ತಿದ ನಾಣ್ಯಗಳು ದೊರೆತಿರುತ್ತವೆ.

ಮೌರ್ಯರ ಪತನದ ನಂತರ ಆಂಧ್ರದ ಶಾತವಾಹನರು ಕರ್ನಾಟಕದ ರಾಜಕೀಯ ವಿದ್ಯಮಾನಗಳ ಮೇಲೆ ನಿಖರ ಪ್ರಭಾವ ಬೀರಿದರು. ಕರ್ನಾಟಕದ ಹೊರಗಡೆ ಶಾತವಾಹನರ ನಾಣ್ಯಗಳು ಹೇರಳವಾಗಿ ದೊರೆತಿವೆಯಾದರೂ ಕರ್ನಾಟಕದಲ್ಲಿಯ ಅವುಗಳ ಸಂಖ್ಯೆ ಕಡಿಮೆಯಷ್ಟೆ. ಕರ್ನಾಟಕದಲ್ಲೇ ದೊರೆತಿರುವ ಶಾತವಾಹನರ ನಾಣ್ಯಗಳು ಗೌತಮೀ ಪುತ್ರ ಸಾತಕರ್ಣಿ, ವಾಸಿಷ್ಠೀಪುತ್ರ ಪುಳುಮಾವಿ ಮತ್ತು ಯಜ್ಞಶ್ರೀ ಸಾತಕರ್ಣಿಯವರ ಆಳ್ವಿಕೆಗೆ ಸೇರಿದ್ದಾಗಿದೆ. ಶಾತವಾಹನರು ಪ್ರಬಲರಾಗಿದ್ದಾಗ ಕರ್ನಾಟಕದಲ್ಲಿ ಅವರ ಸಮಕಾಲೀನರಾಗಿ ಕೆಲಭಾಗಗಳನ್ನು ಆಳುತ್ತಿದ್ದ ಮಹಾರಟಿ ಕುಲದ ಚುಟು ಕುಲದ ಅರಸುಗಳ ಕೆಲವು ನಾಣ್ಯಗಳು ಕರ್ನಾಟಕದಲ್ಲೇ ದೊರೆತಿವೆ. ಈ ನಾಣ್ಯಗಳಲ್ಲಿ, ಶಾತವಾಹನರ ನಾಣ್ಯಗಳಂತೆಯೇ ಬ್ರಾಹ್ಮೀ ಲಿಪಿಯ ಪ್ರಾಕೃತ ಭಾಷೆಯ ಅಭಿಲೇಖನಗಳಿವೆ.

ಕ್ರಿ. ಶ. ೪ನೆಯ ಶತಮಾನದ ಮಧ್ಯಭಾಗದಲ್ಲಿ ಬನವಾಸಿಯ ಕದಂಬರು ಮತ್ತು ತಲಕಾಡಿನ ಗಂಗರು ಅಧಿಕಾರಕ್ಕೆ ಬರುವುದರ ಜೊತೆಗೆ ಕರ್ನಾಟಕದಲ್ಲಿ ಮೊದಲ ಬಾರಿಗೆ ಕನ್ನಡಿಗರದ್ದೇ ರಾಜ್ಯ ಸ್ಥಾಪನೆಯಾಯಿತು. ಬನವಾಸಿಯ ಕದಂಬರಿಂದ ಹೊರಡಿಸಲಾದುವೆಂದು ಖಚಿತವಾಗಿ ಗುರುತಿಸಬಲ್ಲ ನಾಣ್ಯಗಳು ದೊರೆತಿಲ್ಲವಾದರೂ ಆ ವಂಶದ ಅರಸುಗಳು ಪದ್ಮಟಂಕವೆಂಬ ಚಿನ್ನದ ನಾಣ್ಯಗಳನ್ನು ಚಲಾವಣೆಗೆ ತಂದಿದ್ದರೆಂಬುದು ವಿದ್ವಾಂಸರ ಅಭಿಪ್ರಾಯ. ಅದರಂತೆಯೇ ಆನೆಯು ಗಂಗರ ಲಾಂಛನವಾಗಿರುವುದರಿಂದ ಆನೆಯ ಚಿತ್ರಣವಿರುವ, ಕರ್ನಾಟಕದಲ್ಲಿ ದೊರೆತ ಕೆಲವು ಪ್ರಾಚೀನ ನಾಣ್ಯಗಳು ತಲಕಾಡಿನ ಗಂಗರಿಂದ ಹೊರಡಿಸಲ್ಪಟ್ಟಿರಬಹುದು.

ಕ್ರಿ. ಶ. ೬ನೆಯ ಶತಮಾನದಲ್ಲಿ ವಾತಾಪಿಯ ಚಾಲುಕ್ಯರು ಪ್ರಾಬಲ್ಯಕ್ಕೆ ಬರುವ ತನಕ ಕರ್ನಾಟಕದಲ್ಲಿ ನಾಣ್ಯಗಳ ಚಲಾವಣೆ ತೀರಾ ಸೀಮಿತವಾಗಿದ್ದು ವಾಣಿಜ್ಯ ಕ್ಷೇತ್ರಗಳಲ್ಲಿ ಹಾಗೂ ಜನಸಾಮಾನ್ಯರ ದೈನಂದಿನ ಜೀವನದಲ್ಲಿ ವಸ್ತುವಿನಿಮಯ ಪದ್ಧತಿಯೇ ಜಾರಿಯಲ್ಲಿತ್ತೆಂದು ನಂಬಲಾಗಿದೆ.

ವಾತಾಪಿಯ ಚಾಲುಕ್ಯರು ಅಧಿಕಾರಕ್ಕೆ ಬಂದ ಮೇಲೆ ಕರ್ನಾಟಕದಲ್ಲಿ ನಾಣ್ಯಗಳ ಚಲಾವಣೆಯು ಹೆಚ್ಚಿರಬಹುದೆಂದು ಊಹಿಸಲು ಆಧಾರಗಳಿವೆ. ಕರ್ನಾಟಕದ ಇತಿಹಾಸದುದ್ದಕ್ಕೂ ಶಾಸನಗಳಲ್ಲಿ ವರಹ ಅಥವಾ ವರಾಹ ಎಂಬ ನಾಣ್ಯಗಳ ಪ್ರಸ್ತಾಪ ಮೇಲಿಂದ ಮೇಲೆ ಕಂಡುಬರುತ್ತದೆ. ವರಾಹವು ಚಾಲುಕ್ಯರ ಲಾಂಛನವಾಗಿದ್ದುದರಿಂದ ಆ ಹೆಸರಿನ ನಾಣ್ಯಗಳನ್ನು ಆ ಮನೆತನದವರೇ ಕರ್ನಾಟಕದಲ್ಲಿ ಪ್ರಸಿದ್ಧಗೊಳಿಸಿರಬೇಕು. ಇಷ್ಟಾದರೂ ಚಾಲುಕ್ಯರ ಮಟ್ಟಿಗೆ ಇಲ್ಲಿಯವರೆಗೆ ದೊರೆತಿರುವಂತೆ ಅಭಿಲೇಖವಿರುವ ಒಂದೇ ಒಂದು ನಾಣ್ಯ ಮಾತ್ರ ಬೆಳಕಿಗೆ ಬಂದಿದೆ. ಆ ನಾಣ್ಯದ ಒಂದು ಮುಖದ ಮೇಲೆ ಕ್ರಿ. ಶ. ಸುಮಾರು ೭ನೆಯ ಶತಮಾನದ ಪ್ರಾಚೀನ ಕನ್ನಡ ಲಿಪಿಯಲ್ಲಿ ಶ್ರೀ ವಿಕ್ರಮರಾಜ ಎಂಬ ಅಭಿಲೇಖವಿದ್ದು ಅದು ಕ್ರಿ. ಶ. ೬೫೫–೬೮೦ರಲ್ಲಿ ಪಟ್ಟಕ್ಕೆ ಬಂದ ೧ನೆಯ ವಿಕ್ರಮಾದಿತ್ಯನ ನಾಣ್ಯವಿರಬಹುದೆಂದು ವಿದ್ವಾಂಸರ ಅಭಿಪ್ರಾಯ.

ಚಾಲುಕ್ಯರ ನಂತರ ರಾಜ್ಯವಾಳಿದ ಮಾನ್ಯಖೇಟದ ರಾಷ್ಟ್ರಕೂಟರು ಅಂದಿನ ಭಾರತದ ಪ್ರಭು ಸಾಮ್ರಾಜ್ಯವಾಹೀ ಮನೆತನದವರಿದ್ದು ಅವರಿಂದ ಹೊರಡಿಸಲಾದುದೆಂದು ಖಚಿತವಾಗಿ ಗುರುತಿಸಬಲ್ಲ ಒಂದೇ ಒಂದು ನಾಣ್ಯವೂ ಇಲ್ಲಿಯವರೆಗೆ ಕರ್ನಾಟಕದಲ್ಲಿ ದೊರೆಯದಿರುವುದು ಅಚ್ಚರಿಯ ಸಂಗತಿಯೇ ಹೌದು. ಇಷ್ಟಾಗಿ ರಾಷ್ಟ್ರಕೂಟರ ಶಾಸನಗಳಲ್ಲಿ ದ್ರಮ್ಮ, ಸುವರ್ಣ, ಗದ್ಯಾಣ ಮುಂತಾದ ನಾಣ್ಯಗಳೇನೋ ಉಕ್ತವಾಗಿವೆ.

ರಾಷ್ಟ್ರಕೂಟರ ತರುವಾಯ ಅಧಿಕಾರಕ್ಕೆ ಬಂದ ಕಲ್ಯಾಣದ ಚಾಳುಕ್ಯರು ಹಲವು ತರದ ನಾಣ್ಯಗಳನ್ನು ಹೊರಡಿಸಿದ್ದರೆಂಬುದಕ್ಕೆ ಶಾಸನದ ಆಧಾರ ಸಾಕಷ್ಟು ಇವೆ. ಉದಾಹರಣೆಗೆ ಅವರ ಶಾಸನಗಳಲ್ಲಿ ದ್ರಮ, ಗದ್ಯಾಣ, ಪಣ ಹೊನ್ನು, ಹಾಗ, ಕಾಗಿಣಿ, ವೀಳು, ಗುಳಿಕೆ, ಬೇಳೆ ಮುಂತಾದ

ನಾಣ್ಯಗಳ ಪ್ರಸ್ತಾಪವಿರುವುದು. ಅಷ್ಟೇ ಅಲ್ಲ ಅವರುಗಳ ಶಾಸನಗಳಲ್ಲಿ ಕಮ್ಮತ ಆಣಿ, ಉಂಡಿಗೆ, ಅಚ್ಚು, ಅಚ್ಚಿನ ಕಾಣ, ಅಚ್ಚಿನ ಮೊಳೆ ಮುಂತಾದ ನಾಣ್ಯಗಳ ತಯಾರಿಕೆಗೆ ಬೇಕಾದ ಸಲಕರಣೆಗಳೂ ಉಕ್ತವಾಗಿವೆ. ರಾಜಧಾನಿ (ಕಟಕ) ಕಲ್ಯಾಣಪುರದ ಟಂಕಸಾಲೆಯಲ್ಲಿ ತಯಾರಾಗುತ್ತಿದ್ದ ನಾಣ್ಯಗಳನ್ನು 'ಕಟಕಗದ್ಯಾಣ'ವೆಂದೂ, ಆ ನಾಣ್ಯಗಳಲ್ಲಿ ಬಂಗಾರದ ಅಂಶವು ಹೆಚ್ಚಿದ್ದ ಪಕ್ಷ 'ಕಟಕಪ್ರಿಯಗದ್ಯಾಣ'ವೆಂದೂ ಕರೆಯುತ್ತಿದ್ದರು. ಲೊಕ್ಕಿಗುಂಡಿ (ಇಂದಿನ ಲಕ್ಕುಂಡಿ)ಯ ಟಂಕಸಾಲೆಯಿಂದ ಹೊರಬೀಳುತ್ತಿದ್ದ ನಾಣ್ಯಗಳಿಗೆ 'ಲೊಕ್ಕಿ ಗದ್ಯಾಣ' 'ಲೊಕ್ಕಿಯಚ್ಚಿದ ಗದ್ಯಾಣ', ಲೊಕ್ಕಿ ಶ್ರಾಯಿಯ ಗದ್ಯಾಣ ಮುಂತಾದ ಹೆಸರುಗಳಿದ್ದುವು. ಅದೇ ಲೊಕ್ಕಿಗುಂಡಿ ಗದ್ಯಾಣ ಮುಂತಾದ ಟಂಕಸಾಲೆಯಲ್ಲಿ ವರ್ತಕ ಸಂಘಗಳವರೂ ತಮ್ಮ ನಾಣ್ಯಗಳನ್ನು ತಯಾರಿಸುತ್ತಿದ್ದರಾಗಿ ಆ ನಾಣ್ಯಗಳಿಗೆ ವರ್ತಕಲೊಕ್ಕಿ ಗದ್ಯಾಣವೆಂಬ ಹೆಸರಿತ್ತು. ಒಂದು ಮುಖದ ಮೇಲೆ ನವಿಲಿನ ಚಿತ್ರಣವನ್ನು ಹೊತ್ತಿದ್ದ ಚಿನ್ನದ ನಾಣ್ಯಗಳನ್ನು "ನವಿಲಚ್ಚಿನಪೊನ್" ಎಂದು ಕರೆಯುತ್ತಿದ್ದರು. ಹೀಗೆ ಚಾಲುಕ್ಯರ ಕಾಲದ ಶಾಸನಗಳಲ್ಲಿ ನಾನಾ ರೀತಿಯ ನಾಣ್ಯಗಳ ಪ್ರಸ್ತಾಪಗಳಿದ್ದರೂ ಆ ಹೆಸರುಗಳಿಗೆ ಹೋಲುವಂತೆ ದೊರೆತಿರುವ ನಾಣ್ಯಗಳು ತೀರ ವಿರಳ. ಆಂಧ್ರಪ್ರದೇಶದ ನೆಲ್ಲೂರು ಜಿಲ್ಲೆಯ ಕೊಡೂರು ಎಂಬ ಗ್ರಾಮದಲ್ಲಿ ಕೆಲವು ದಶಕಗಳ ಹಿಂದೆ ತಾಮ್ರ ಮತ್ತು ಮಣ್ಣಿನ ಗಡಿಗೆಗಳಲ್ಲಿ ಹದಿನೈದು ಸಾವಿರಕ್ಕೂ ಹೆಚ್ಚಿನ ಕಲ್ಯಾಣ ಚಾಲುಕ್ಯರ ಚಿನ್ನದ ನಾಣ್ಯಗಳು ದೊರೆತವು. ಇವುಗಳ ಒಂದು ಮುಖದ ಮೇಲೆ ಮೇಲಿಂದ ಮೇಲೆ ಬೇರೆ ಬೇರೆ ಚಿಹ್ನೆಯ ಮುದ್ರೆಗಳನ್ನು ಒತ್ತಿರುವ ಕಾರಣ ಅವುಗಳು ಬಟ್ಟಲಾಕಾರವನ್ನು ತಾಳಿವೆ. ಆ ನಾಣ್ಯಗಳಲ್ಲಿ ಕೆಲವದರ ಮೇಲೆ "ಜಗದೇಕಮಲ್ಲ" "ತ್ರೈಲೋಕ ಮಲ್ಲ" ಮತ್ತು "ಭುವನ"ವೆಂಬ ಅಭಿಲೇಖಗಳು ಕಂಡುಬಂದು ಆ ಹೆಸರುಗಳು ಕಲ್ಯಾಣ ಚಾಲುಕ್ಯ ಅರಸುಗಳ ಕಟ್ಟನಾಮಗಳೇ ಆಗಿರುವುದರಿಂದ ಅವು ಆ ಅರಸು ಮನೆತನಕ್ಕೆ ಸೇರಿದವೆಂಬುದರಲ್ಲಿ ಸಂಶಯಕ್ಕೆಡೆಯಿಲ್ಲ.

ಚಾಲುಕ್ಯ ಅರಸುಗಳಿಗಷ್ಟೇ ಅಲ್ಲದೆ ಅವರ ಕೆಲವು ಸಾಮಂತರೂ ನಾಣ್ಯಗಳನ್ನು ಹೊರಡಿಸಿದ್ದರು. "ರಾಯಗಜಕೇಸರಿ" ಮತ್ತು "ನಿಗಳಂಕಮಲ್ಲ ದಂಡಿಬ ಗೋವ" ಎಂಬ ಅಭಿಲೇಖನಗಳನ್ನು ಹೊತ್ತ ಚಿನ್ನದ ನಾಣ್ಯಗಳು ಈ ಬಗೆಯವು.

ಚಾಲುಕ್ಯರ ನಂತರ ಕರ್ನಾಟಕದ ದೊರೆಗಳಾಗಿ ಮೆರೆದ ದಕ್ಷಿಣದ ಹೊಯ್ಸಳರ ಮತ್ತು ಉತ್ತರದ ಸೇವುಣರ ಆಳಿಕೆಗೆ ಸಂಬಂಧಿಸಿದಂತೆ ದೊರೆತಿರುವ ನಾಣ್ಯಗಳೂ ತೀರಾ ವಿರಳವೇ ಆಗಿವೆ. ಆದರೆ ಇವರ ಶಾಸನಗಳಲ್ಲೂ ಹಲವು ರೀತಿಯ ನಾಣ್ಯಗಳ ಪ್ರಸ್ತಾಪಗಳಿರುವುದರಿಂದ ಹಿಂದಿನವರಂತೆಯೇ ಇವರುಗಳು ಹೊರಡಿಸಿರುವ ನಾಣ್ಯಗಳೂ ಕಾಲಕ್ರಮದಲ್ಲಿ ಕರಗಿಸಲ್ಪಟ್ಟಿರಬೇಕು. ಹೊಯ್ಸಳ ಅರಸುಗಳ ಪೈಕಿ ವಿನಯಾದಿತ್ಯ, ವಿಷ್ಣುವರ್ಧನ, ೧ನೆಯ ನರಸಿಂಹ ಅಭಿಲಿಖಿತ ನಾಣ್ಯಗಳು ದೊರೆತಿವೆ. ತಲಕಾಡು ಮತ್ತು ನೊಣಂಬವಾಡಿಗಳನ್ನು ಗೆದ್ದಿದ್ದ ವಿಷ್ಣುವರ್ಧನನು ತನ್ನ ನಾಣ್ಯಗಳ ಮೇಲೆ "ತಲಕಾಡುಗೊಂಡ" "ನೊಣಂಬವಾಡಿಗೊಂಡ" ಎಂಬೀ ಅಭಿಲೇಖಗಳನ್ನು ಪ್ರಯೋಗಿಸಿದ್ದಾನೆ. ಸೇವುಣರ ಪೈಕಿ ಎರಡನೆಯ ಸಂಪಣ, ೫ನೆಯ ಭಿಲ್ಲಮ, ಕೃಷ್ಣ, ಮಹಾದೇವ ಮತ್ತು ರಾಮಚಂದ್ರರ ಅಭಿಲಿಖಿತ ನಾಣ್ಯಗಳು ಕೆಲವು ದೊರೆತಿವೆ.

ವಿಜಯನಗರ ಪೂರ್ವಕಾಲದ ಕರ್ನಾಟಕದ ಕೆಲವು ಸಾಮಂತ ಅರಸು ಮನೆತನಗಳು ಹೊರಡಿಸಿದ್ದ ನಾಣ್ಯಗಳೂ ಬೆಳಕಿಗೆ ಬಂದಿವೆ. ಅಂತಹ ಅರಸು ಮನೆತನಗಳಲ್ಲಿ ಗೋವೆಯ ಕದಂಬ ವಂಶವೂ ಒಂದು. ಈ ಮನೆತನದ ಅರಸುಗಳಲ್ಲಿ ಒಂದನೆಯ ಜಯಕೇಶಿ (ಕ್ರಿ.ಶ.೧೦೫೦–೭೮), ಎರಡನೆಯ ಜಯಕೇಶಿ (ಕ್ರಿ.ಶ.೧೧೨೫–೪೭), ಶಿವಚಿತ್ತ ಪೆರ್ಮಾಡಿ (ಕ್ರಿ.ಶ. ೧೧೪೭), ಮೂರನೆಯ ಜಯಕೇಶಿ (ಕ್ರಿ.ಶ ೧೧೮೭–೧೨೧೬) ಮತ್ತು ತ್ರಿಭುವನ ಮಲ್ಲ ಸೋವಿದೇವ (ಕ್ರಿ.ಶ. ೧೨೧೬–೪೬) ಇವರುಗಳ ನಾಣ್ಯಗಳು ದೊರೆತಿವೆ. ಈ ಅರಸುಗಳ ಪೈಕಿ ೧ನೆಯ ಜಯಕೇಶಿಯು ಮಲವರನ್ನು ಸೋಲಿಸಿ "ಮಲವರ ಮಾರಿ" ಮತ್ತು ಮಲೆಗಳ ಭೈರವ" ಎಂಬ ಬಿರುದುಗಳನ್ನು ಸ್ವೀಕರಿಸಿದನು. ಗೋವೆಯ ಕದಂಬರು ಸಪ್ತಕೋಟೀಶ್ವರ ದೇವರ ಪರಮಭಕ್ತರಾಗಿದ್ದರು. ಹೀಗಾಗಿ ಒಂದನೆಯ ಜಯಕೇಶಿಯ ನಾಣ್ಯಗಳ ಹಿಮ್ಮುಖದಲ್ಲಿ "ಶ್ರೀ ಸಪ್ತಕೋಟೀಶ್ವರಲಬ್ಧವರ ವೀರಜಯಕೇಶಿದೇವ ಮಲವರ ಮಾರಿ" ಎಂಬ ನಾಗರೀ ಅಭಿಲೇಖವು ಕಂಡುಬರುತ್ತದೆ. ಒಂದನೆಯ ಜಯಕೇಶಿಯ ತರುವಾಯ ಗೋವೆಯ ಕದಂಬರೆಲ್ಲರೂ "ಮಲವರ ಮಾರಿ" ಎಂಬ ಬಿರುದನ್ನು ತಾವೂ ಸ್ವೀಕರಿಸಿದ್ದರೆಂಬುದು ಅವರುಗಳ ನಾಣ್ಯಗಳ ಮೇಲಿನ ಅಭಿಲೇಖನಗಳಿಂದ ತಿಳಿದುಬರುತ್ತದೆ.

ಇನ್ನು ಕಡಲ ತೀರದ ಕನ್ನಡ ಪ್ರಾಂತ್ಯವನ್ನು ಆಳುತ್ತಿದ್ದ ಆಳುಪ ಮನೆತನದವರ ನಾಣ್ಯಗಳೂ ಬೆಳಕಿಗೆ ಬಂದಿವೆ. ಪ್ರಾಚೀನ ಆಳುಪ ಅರಸುಗಳ ಪೈಕಿ ಒಬ್ಬನೂ ಕ್ರಿ.ಶ. ೭ನೆಯ ಶತಮಾನದಲ್ಲಿ ರಾಜ್ಯವಾಳಿದವನೂ ಆದ ಒಂದನೆಯ ಆಳುಪರಸನ ಶಾಸನವೊಂದರಲ್ಲಿ "ಕೀಲಿಂಚು" ಎಂಬ ನಾಣ್ಯದ ಪ್ರಸ್ತಾಪವಿದೆ. ಆದರೆ ನಮಗೆ ದೊರೆತಿರುವುದು ಮಧ್ಯಯುಗದ ಆಳುಪ ಅರಸುಗಳ ನಾಣ್ಯಗಳು ಮಾತ್ರ. ಹೀಗೆ ದೊರೆತ ನಾಣ್ಯಗಳ ಹಿಮ್ಮುಖದಲ್ಲಿ "ಶ್ರೀ ಪಾಂಡ್ಯಧನಂಜಯ" ಎಂಬ ಅಭಿಲೇಖವು ನಾಗರೀ ಅಥವಾ ಕನ್ನಡ ಲಿಪಿಯಲ್ಲಿ ಬರೆಯಲ್ಪಟ್ಟಿವೆ. ಆಳುಪರು ತಮ್ಮನ್ನು ಪಾಂಡ್ಯ ಕುಲದವರೆಂದು ಹೇಳಿಕೊಂಡಿರುವುದು ಸುವಿದಿತ.

ಕ್ರಿ. ಶ. ೧೪ನೆಯ ಶತಮಾನದ ಮಧ್ಯಭಾಗದಲ್ಲಿ ವಿಜಯನಗರ ಸಾಮ್ರಾಜ್ಯವು ಸ್ಥಾಪಿತಗೊಂಡಾಗಿನಿಂದೀಚೆಗೆ ನಾಣ್ಯಗಳ ಚಲಾವಣೆಯು ಅದೃಷ್ಟಪೂರ್ವ ಪ್ರಮಾಣದಲ್ಲಿ ಬೆಳೆಯಿತು. ಸಾಮ್ರಾಜ್ಯದ ಟಂಕಸಾಲೆಗಳಲ್ಲಿ ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ಹೇರಳವಾಗಿ ತಯಾರಾಗುತ್ತಿದ್ದವು. ಆ ಕಾಲದ ಶಾಸನಗಳಲ್ಲಿ ಚಕ್ರ ಗದ್ಯಾಣ, ಕಾಚಿ ಗದ್ಯಾಣ, ಪ್ರತಾಪ ಗದ್ಯಾಣ ಮುಂತಾದ ವಿವಿಧ ಗದ್ಯಾಣಗಳ, ಗಜ್ಜವರಹ, ದೊಡ್ಡವರಹ, ಶುದ್ಧವರಹ, ಚಕ್ರವರಹ ನಿಜಗಜ್ಜವರಹ, ಮುಂತಾದ ವರಹಗಳ ಪ್ರಸ್ತಾಪಗಳು ಕಾಣಸಿಗುತ್ತವೆ. ವಿಜಯನಗರ ಸಾಮ್ರಾಜ್ಯದ ನಾಣ್ಯಗಳ ಮುಮ್ಮುಖದ ಮೇಲೆ ಹನುಮಂತ, ಗರುಡ, ವೃಷಭ, ಆನೆ, ಉಮಾಮಹೇಶ್ವರ, ಸಿಂಹ, ವೆಂಕಟೇಶ್ವರ, ಬಾಲಕೃಷ್ಣ, ಗಂಡಭೇರುಂಡ, ಲಕ್ಷ್ಮೀನಾರಾಯಣ, ದುರ್ಗಾ, ಶಂಖಚಕ್ರ, ವರಾಹ ಮುಂತಾದವುಗಳಲ್ಲಿ ಒಂದಲ್ಲ ಒಂದು ಚಿತ್ರಣವನ್ನು ಕಾಣುತ್ತೇವೆ. ಆ ಕಾಲದ ನಾಣ್ಯಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿದ್ದು ಹೆಚ್ಚು ಕಡಿಮೆ ಎಲ್ಲ ಅರಸುಗಳಿಂದಲೂ ಹೊರಡಿಸಲಾದ ನಾಣ್ಯಗಳು ನಮಗೆ ದೊರೆತಿವೆ.

ವಿಜಯನಗರದವರ ಸಮಕಾಲೀನರಾಗಿ ಕಲ್ಬುರ್ಗಿಯಲ್ಲಿ ರಾಜ್ಯವಾಳಿದ ಬಹಮನಿ ಸುಲ್ತಾನರ ಚಿನ್ನ, ಬೆಳ್ಳಿ, ಮತ್ತು ತಾಮ್ರದ ನಾಣ್ಯಗಳು ಕರ್ನಾಟಕದಲ್ಲಿ ದೊರೆತಿವೆ. ಸಾಮಾನ್ಯವಾಗಿ ವರ್ತುಲಾಕಾರದಲ್ಲಿರುವ ಈ ನಾಣ್ಯಗಳ ಎರಡೂ ಮುಖಗಳ ಮೇಲಿನ ಅಭಿಲೇಖಗಳು ಕುರಾನಿನ ಪಾಠ,

ನಾಣ್ಯವನ್ನು ಹೊರಡಿಸಿದ ಸುಲ್ತಾನನ ಹೆಸರು ಮತ್ತು ಬಿರುದುಗಳು, ಟಂಕಸಾಲೆಯ ಹೆಸರು ಮತ್ತು ನಾಣ್ಯವನ್ನು ಹೊರಡಿಸಿದ ವರ್ಷ—ಈ ವಿವರಗಳನ್ನೊಳಗೊಂಡಿರುತ್ತದೆ.

ಕ್ರಿ.ಶ. ೧೫ನೆಯ ಶತಮಾನದ ಕೊನೆಯ ವೇಳೆಗೆ ಬಿಜಾಪುರವನ್ನು ರಾಜಧಾನಿಯಾಗಿಟ್ಟುಕೊಂಡು ರಾಜ್ಯವಾಳಿದ ಆದಿಲ್‌ಶಾಹಿ ಮನೆತನದ ಸುಲ್ತಾನರ ಮತ್ತು ಬೀದರನ್ನು ರಾಜಧಾನಿಯಾಗಿಟ್ಟುಕೊಂಡು ರಾಜ್ಯವಾಳಿದ ಬರೀದ್‌ಶಾಹಿ ಸುಲ್ತಾನರ ನಾಣ್ಯಗಳೂ ಸಾಕಷ್ಟು ಸಂಖ್ಯೆಯಲ್ಲಿ ದೊರೆತಿವೆ.

ವಿಜಯನಗರದ ಅರಸುಗಳ ಸಾಮಂತರಾಗಿ ಕ್ರಿ.ಶ. ೧೬ನೆಯ ಶತಮಾನದಲ್ಲಿ ರಾಜ್ಯವಾಳಲು ಆರಂಭಿಸಿದ ಕೆಳದಿಯ ನಾಯಕರುಗಳ ನಾಣ್ಯಗಳೂ ದೊರೆತಿದ್ದು ಅವುಗಳ ಪೈಕಿ ಸದಾಶಿವ ನಾಯಕನು ಹೊರಡಿಸಿದ್ದ ಇಕ್ಕೇರಿ ವರಹವು ಸಾಕಷ್ಟು ಚಲಾವಣೆಗೂ ಬಂದಿತ್ತು.

ಮೇಲಿನ ಪ್ರಬಲ ಮನೆತನಗಳಿಗಷ್ಟೇ ಅಲ್ಲದೆ ಚಿತ್ರದುರ್ಗದ ನಾಯಕರು, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ ಮತ್ತು ಕೋಡಿಕೊಂಡದ ಪಾಳ್ಯಗಾರರೂ, ನಗಿರೆ ಮತ್ತು ಹಾಡುವಳ್ಳಿ ರಾಜ್ಯಗಳ ಅರಸುಗಳೂ ಮತ್ತು ಬೆಂಗಳೂರಿನ ಕೆಂಪೇಗೌಡ ಇವರುಗಳು ಹೊರಡಿಸಿದ ನಾಣ್ಯಗಳೂ ನಮಗೆ ದೊರೆತಿವೆ.

ಆಧುನಿಕ ಯುಗಕ್ಕೆ ಸಂಬಂಧಿಸಿದಂತೆ ಮೈಸೂರಿನ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಹೊರಡಿಸಿದ ನಾಣ್ಯಗಳೂ ಸಾಕಷ್ಟು ಸಂಖ್ಯೆಯಲ್ಲಿ ದೊರೆತಿವೆ. ಅವುಗಳಲ್ಲಿ ಟಿಪ್ಪು ಸುಲ್ತಾನನ ನಾಣ್ಯಗಳಲ್ಲಿ ಕಂಡುಬರುವ ವೈವಿಧ್ಯವು ನಾಣ್ಯಶಾಸ್ತ್ರಜ್ಞರನ್ನು ಬೆರಗುಗೊಳಿಸುವಂತಹದು. ಅವನ ಆಳ್ವಿಕೆಯ ಕಾಲದಲ್ಲಿ ಹದಿಮೂರಕ್ಕೂ ಹೆಚ್ಚಿನ ಟಂಕಸಾಲೆಗಳನ್ನು ಅವನು ತನ್ನ ರಾಜ್ಯದ ಬೇರೆ ಬೇರೆ ಎಡೆಗಳಲ್ಲಿ ಸ್ಥಾಪಿಸಿದನು. ಅವುಗಳಲ್ಲಿ ತಯಾರಾಗುತ್ತಿದ್ದ ನಾಣ್ಯಗಳ ರೂಪ, ಅವುಗಳ ಮೇಲಿನ ಅಭಿಲೇಖಗಳ ಲಿಪಿ ಸೌಂದರ್ಯ ಉತ್ತಮ ಮಟ್ಟದ್ದಾಗಿದೆ.

ಹೈದರಾಲಿಯ ನಾಣ್ಯಗಳು ಕೆಳದಿಯ ಸದಾಶಿವ ನಾಯಕನ ನಾಣ್ಯಗಳ ಮಾದರಿಯಲ್ಲಿದ್ದು ಅವುಗಳ ಮುಮ್ಮುಖದಲ್ಲಿ ಹಿಂದೂ ದೇವತೆಗಳ ಚಿತ್ರಣವು ಕಂಡುಬರುತ್ತದೆ. ಅದರಂತೆಯೇ ಟಿಪ್ಪು ಸುಲ್ತಾನನ ಕೆಲವು ನಾಣ್ಯಗಳಲ್ಲಿ ಕನ್ನಡ ಲಿಪಿಯಲ್ಲಿ ಅಂಕೆಗಳನ್ನು ಬರೆಯಲಾಗಿದೆ.

ಮೈಸೂರಿನ ಒಡೆಯರು ಹೊರಡಿಸಿದ ನಾಣ್ಯಗಳು ಕರ್ನಾಟಕದ ಗತಕಾಲಕ್ಕೂ ಆಧುನಿಕ ಯುಗಕ್ಕೂ ನಡುವಣ ಸೇತುವೆಯಂತೆ. ಅವರ ನಾಣ್ಯಗಳು ಮಾದರಿಯಲ್ಲಷ್ಟೇ ಅಲ್ಲದೆ ತೂಕದಲ್ಲೂ ವಿಜಯನಗರ ಸಾಮ್ರಾಜ್ಯದ ನಾಣ್ಯಗಳನ್ನು ಹೋಲುತ್ತವೆ. ಅವರ ಮೊದಲ ಟಂಕಸಾಲೆಯು ಶ್ರೀರಂಗಪಟ್ಟಣದಲ್ಲಿದ್ದು ಮೂರನೆಯ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರಿನಲ್ಲಿ ಸ್ಥಾಪಿತವಾದ ಟಂಕಸಾಲೆಯನ್ನು ಕ್ರಿ.ಶ. ೧೮೩೩ರಲ್ಲಿ ಬೆಂಗಳೂರಿಗೆ ವರ್ಗಾಯಿಸಲಾಯಿತು. ಕ್ರಿ.ಶ. ೧೮೪೩ರಲ್ಲಿ ಬೆಂಗಳೂರಿನ ಟಂಕಸಾಲೆಯನ್ನು ಮುಚ್ಚುವುದರ ಜೊತೆಗೆ ಮೈಸೂರು ಒಡೆಯರ ನಾಣ್ಯಗಳು ಹೊರಬೀಳುವುದೂ ನಿಂತು ಹೋಯಿತು. ಆದರೂ ಅವರುಗಳು ಆ ಮೊದಲೇ ಹೊರಡಿಸಿದ್ದ ನಾಣ್ಯಗಳು ನಂತರ ೪ ದಶಕಗಳ ಕಾಲ ಚಲಾವಣೆಯಲ್ಲಿದ್ದವು.

# ಕರ್ನಾಟಕದಲ್ಲಿ ಧರ್ಮವಿಕಾಸ

ಸುರೇಂದ್ರ ದಾನಿ

ಯಂ ಶೈವಾ ಸಮುಪಾಸತೇ ಶಿವ ಇತಿ
ಬ್ರಹ್ಮೇತಿ ವೇದಾಂತಿನೋ :
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ
ಕರ್ತೇತಿ ನೈಯ್ಯಾಯಿಕಾ:
ಅರ್ಹಂಶ್ಚೇತಿಹ ಜೈನ ಶಾಸನ ಮತಿ:
ಕರ್ಮೇವ ಮೀಮಾಂಸಕಾ:
ಸೋಯಂ ವೋ ವಿದಧಾತು ವಾಂಛಿತಫಲಂ
ಶ್ರೀಕೇಶವ: ಸರ್ವದಾ.

ಬೇಲೂರು ಚೆನ್ನಕೇಶವ ದೇವಾಲಯದಲ್ಲಿಯ ಒಂದು ಶಾಸನದಲ್ಲಿ ಕೆತ್ತಲಾದ ಈ ಪದ್ಯ ಸಾಕಷ್ಟು ಪ್ರಸಿದ್ಧವಾಗಿದೆ. ಪಶ್ಚಿಮ ರಾಷ್ಟ್ರಗಳು ಧರ್ಮಯುದ್ಧಗಳಲ್ಲಿ ಮಗ್ನವಾದ ಕಾಲದಲ್ಲಿ ಭಾರತದಲ್ಲಿ ಯಾವ ಭಾವನೆ ನೆಲಗೊಂಡಿತ್ತು ಎಂಬುದಕ್ಕೆ ಇದು ಸಾಕ್ಷಿ. ಅದರಲ್ಲೂ ಇದು ಕನ್ನಡ ನಾಡಿನಲ್ಲಿ ಕಂಡುಬಂದಿದೆ ಎಂಬುದು ಹೆಚ್ಚಿನ ವೈಶಿಷ್ಟ್ಯ. ಕನ್ನಡ ಜನ ಎಂದಿನಿಂದಲೂ ಯಾವ ಹಿನ್ನೆಲೆಯಲ್ಲಿ ಎಂಥ ಮನೋಭೂಮಿಕೆಯಲ್ಲಿ ಬೆಳೆದು ಬಂದವರೆಂಬುದನ್ನು ಇದರಿಂದ ಊಹಿಸಬಹುದು. ಕನ್ನಡ ಜನತೆ ಎಲ್ಲ ಧರ್ಮಗಳನ್ನೂ ಸ್ವಾಗತಿಸಿದ್ದಾರೆ; ಅಂಗೀಕರಿಸಿದ್ದಾರೆ; ಅವುಗಳ ಮಂಥನದಿಂದ ಹೊಸ ಧರ್ಮಗಳಿಗೆ ಜನ್ಮವನ್ನೂ ನೀಡಿದ್ದಾರೆ. ಎಲ್ಲವನ್ನೂ ಸಹನೆ, ಸಹಿಷ್ಣುತೆಗಳಿಂದ ಸ್ವೀಕಾರ ಮಾಡಿದ್ದಾರೆ. ಅನಿವಾರ್ಯವೆನಿಸಿದಾಗ ಧರ್ಮರಕ್ಷಣೆಗಾಗಿ ಕತ್ತಿಯನ್ನು ಹಿಡಿದಿದ್ದಾರೆ. ರಾಜ್ಯ ಸಾಮ್ರಾಜ್ಯಗಳನ್ನು ಕಟ್ಟಿದ್ದಾರೆ.

ಕರ್ನಾಟಕದಲ್ಲಿಯ ಧರ್ಮಗಳ ಚರಿತ್ರೆಯನ್ನು ಬರೆಯ ಹೊರಟರೆ ಅದನ್ನು ಎಲ್ಲಿಂದ ಪ್ರಾರಂಭಿಸಬೇಕೆಂಬುದೇ ಪ್ರಶ್ನೆ. ಪ್ರಾಗೈತಿಹಾಸಿಕ ಕಾಲದಲ್ಲೂ ಕರ್ನಾಟಕ ಮಾನವನ ನೆಲೆಯಾಗಿತ್ತೆಂಬುದು ಇತ್ತೀಚಿನ ಸಂಶೋಧನೆಗಳಿಂದ ಸಿದ್ಧವಾಗತೊಡಗಿದೆ. ಆರ್ಯ ಅಥವಾ ವೈದಿಕಪೂರ್ವ ಸಂಸ್ಕೃತಿ ಹರಪ್ಪ ಮೊಹೆಂಜದಾರೋ ಲೋಥಾಲಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ದಕ್ಷಿಣದಲ್ಲಿ, ಅದರಲ್ಲೂ ವಿಶೇಷತ: ಕರ್ನಾಟಕದಲ್ಲಿ ಸಹ ಅದು ಇತ್ತೆಂಬುದನ್ನು ಊಹಿಸಲು ತಕ್ಕ ಸಾಕ್ಷ್ಯಾಧಾರಗಳು ಇತ್ತೀಚೆಗೆ ದೊರೆಯತೊಡಗಿವೆ. ಕೃಷ್ಣಾ ಮಲಪ್ರಭಾ ಮತ್ತು ಘಟಪ್ರಭಾ ನದಿಗಳ ದಡಗಳಲ್ಲಿ ನೂತನ ಶಿಲಾಯುಗದ ಮಾನವನ ನೆಲೆಯ ಕುರುಹುಗಳು ಕಂಡುಬಂದಿವೆ. ಈ ಮಾನವನೇ ಉತ್ತರಕ್ಕೆ ಸಿಂಧು ನರ್ಮದಾ ನದಿಗಳ ತೀರಕ್ಕೆ ಹೋಗಿರುವ ಸಂಭವವಿದೆ. ಸಿಂಧು ಗಂಗಾ ನದಿಗಳ ನಡುವಿನ ಮೆಕ್ಕಲು ಮಣ್ಣಿನ ಪ್ರದೇಶ ತಲೆಯತ್ತುವುದಕ್ಕಿಂತ ಲಕ್ಷಾಂತರ ವರ್ಷ ಪೂರ್ವದಲ್ಲೇ ದಕ್ಷಿಣ ಭಾರತದ ಅಗ್ನಿಶಿಲಾ ಪ್ರಸ್ಥಭೂಮಿ ಅಸ್ತಿತ್ವದಲ್ಲಿ ಇತ್ತಲ್ಲವೇ? ಈ ಈ ಬಗ್ಗೆ ಬಹಳಷ್ಟು ಸಂಶೋಧನೆ ನಡೆಯ ಬೇಕಾಗಿದೆ.

ಆದರೆ ವೈದಿಕಪೂರ್ವ ಸಂಸ್ಕೃತಿ ಮತ್ತು ಧರ್ಮಗಳು ಇದ್ದುವಾದರೆ ಅವು ಕರ್ನಾಟಕದಲ್ಲಿಯೇ ಇದ್ದವೆಂಬುದರಲ್ಲಿ ಸಂದೇಹವಿಲ್ಲ. ಅವೆರಡರ ಸುಂದರ ಸಮನ್ವಯದ ಉದಾಹರಣೆಗಳು ಇಲ್ಲಿ ಸಾಕಷ್ಟು ದೊರೆಯುತ್ತವೆ. ಇಷ್ಟೇ ಅಲ್ಲ ನಂತರದ ಇತಿಹಾಸದಲ್ಲಿ ಸಹ ಕರ್ನಾಟಕವು ದಕ್ಷಿಣ ಮತ್ತು ಉತ್ತರಗಳ ಸುಂದರ ಸಂಗಮಸ್ಥಾನವಾಗಿ ಪರಿಣಮಿಸಿದೆ. ರಾಮಾಯಣದಲ್ಲಿ ಉತ್ತರದ ಸಂಸ್ಕೃತಿಯನ್ನು ದಕ್ಷಿಣದ ತುದಿಗೆ ಒಯ್ಯಲು ಕರ್ನಾಟಕದಲ್ಲಿಯ ವಾನರ ಜನಾಂಗ ಎಂಥ ಪಾತ್ರ ವಹಿಸಿತೆಂಬುದು ಸ್ಪಷ್ಟವಾಗಿ ನಿರೂಪಿತವಾಗಿದೆ. ಹರಿಹರ, ಶಂಕರನಾರಾಯಣ, ಅನಂತೇಶ್ವರ ಮೊದಲಾದ ಹೆಸರುಗಳು ಸೂಚಿಸುವ ಶೈವ–ವೈಷ್ಣವ ಸಮನ್ವಯ ಸಂಸ್ಕೃತಿಯನ್ನು ಕರ್ನಾಟಕವು ಸ್ವೀಕರಿಸಿದಷ್ಟು ಸ್ಫುಟವಾಗಿ ಭಾರತದ ಬೇರೆ ಯಾವ ಭಾಗವೂ ಸ್ವೀಕರಿಸಿದಂತಿಲ್ಲ. ಇಲ್ಲಿಯ ಜನ ಜಾತಿ ಮತಗಳ ಹೆಸರಿನಲ್ಲಿ ಕಚ್ಚಾಡಿಲ್ಲವೆಂದಲ್ಲ. ಆದರೆ ಅಂಥ ಸಂದರ್ಭಗಳಲ್ಲಿ ಅಧಿಕಾರದಲ್ಲಿರುವವರು ಮತ್ತು ಸಮಾಜದ ಮುಖಂಡ ಸ್ಥಾನದಲ್ಲಿರುವವರು ಹೇಗೆ ವರ್ತಿಸಿದರೆಂಬುದು ಮುಖ್ಯ.

ಸೌಂದತ್ತಿಯ ರಟ್ಟರು ಪರಧರ್ಮ ಸಹಿಷ್ಣುತೆಗೆ ಆದರ್ಶಪ್ರಾಯ ವರ್ತನೆ ಇಟ್ಟುಕೊಂಡಿದ್ದರೆಂದು ಇತಿಹಾಸ ಹೇಳುತ್ತದೆ. ಇವರು ಜೈನ ವೈದಿಕ ಧರ್ಮಗಳೆರಡನ್ನೂ ಸಮಾನ ದೃಷ್ಟಿಯಿಂದ ನೋಡುತ್ತಿದ್ದರು. ನಾಗರಖಂಡದ ಐದು ಅಗ್ರಹಾರಗಳ ಬ್ರಾಹ್ಮಣರು, ಅಧಿಕಾರಿಗಳು, ಮಹಾಜನರು, ನಾಗರಿಕ ಪ್ರತಿನಿಧಿಗಳು ಒಕ್ಕಲಿಗರು ಎಲ್ಲರೂ ಕೂಡಿ ಬದನಿಕೆಯ ಶಾಂತಿನಾಥ ದೇವರ ಪೂಜೆಗಾಗಿ ದತ್ತಿಯನ್ನು ಬಿಟ್ಟರೆಂದು ಶಿಕಾರಿಪುರದ ಶಾಸನವೊಂದರಲ್ಲಿ ಉಲ್ಲೇಖಿಸಲಾಗಿದೆ. ಕ್ರಿ. ಶ. ೧೩೬೮ರಲ್ಲಿ ವೈಷ್ಣವರಿಗೂ ಜೈನರಿಗೂ ಜಗಳ ಉಂಟಾದಾಗ ವಿಜಯನಗರದ ಮೊದಲನೆಯ ವೀರಬುಕ್ಕರಾಯನು "ವೈಷ್ಣವ ದರ್ಶನಕ್ಕೆಯೂ ಜೈನ ದರ್ಶನಕ್ಕೆಯೂ ಭೇದವಿಲ್ಲೆಂದು ವೈಷ್ಣವರ ಕೈಯಲ್ಲಿ ಜೈನರ ಕೈವಿಡಿದು ಕೊಟ್ಟು ಈ ಜೈನ ದರ್ಶನಕ್ಕೆ ಪೂರ್ವ ಮರ್ಯಾದೆಯು ಪಂಚ ಮಹಾಶಬ್ದಗಳು ಕಲಶಗಳು ಸಲ್ಲುವುದು. ಜೈನದರ್ಶನಕ್ಕೆ ಭಕ್ತರ ದೆಶೆ

ಯಿಂದ ಹಾನಿ ವೃದ್ಧಿಯಾದರೂ ವೈಷ್ಣವರ ಹಾನಿ ವೃದ್ಧಿಯಾಗಿ ಪಾಲಿಸುವರು. ಈ ಮರ್ಯಾದೆಯು ಎಲ್ಲಾ ರಾಜ್ಯದೊಳಗುಳ್ಳಂತಹ ಬಸ್ತಿಗಳಿಗೆ ಶ್ರೀವೈಷ್ಣವರು ಶಾಸನವಟ್ಟು ಪಾಲಿಸುವರು" ಎಂದು ವಿಧಿಸಿದ ಉಲ್ಲೇಖವಿದೆ. ೧

ಹಳೇಬೀಡಿನ ಗುಡಿಯೊಂದರಲ್ಲಿರುವ ಕ್ರಿ. ಶ. ೧೬೩೮ರ ಶಾಸನದಲ್ಲಿ "ಈ ಜಿನಧರ್ಮಕ್ಕೆ ಆವನಾನ್ ಓರ್ವನು ವಿಘ್ನವ ಮಾಡಿದರೆ ಆತನು ಮಹಾ ಮತ್ತಪದವ ಕೂಡಿದವನು ಅಲ್ಲ. ಶಿವದ್ರೋಹಿ, ಜಂಗಮದ್ರೋಹಿ, ವಿಭೂತಿ ರುದ್ರಾಕ್ಷ್ಯೆಗೆ ತಪ್ಪಿದವನು, ಕಾಶಿ ರಾಮೇಶ್ವರಾದಿ ತೀರ್ಥಗಳ ಲಿಂಗಕ್ಕೆ ತಪ್ಪಿದರು. ಈ ಮಹಾಮತ್ತನ ವ್ರತ" ಎಂದಿದೆ. ೨

ಹಸನ ಜಾಫರಖಾನನೆಂಬುವನು ೧೩೪೭ರಲ್ಲಿ ಸ್ಥಾಪಿಸಿದ ತನ್ನ ರಾಜ್ಯಕ್ಕೆ ತನ್ನ ಒಡೆಯನಾದ ಗಂಗೂಬ್ರಾಹ್ಮಣನಿಗೆ ಕೃತಜ್ಞತೆ ಸಲ್ಲಿಸುವ ದ್ಯೋತಕವೆಂದು ಬಹಮನಿ ರಾಜ್ಯವೆಂದೂ ತನ್ನ ವಂಶ ಬಹುಮನಿ ವಂಶವೆಂದೂ ಹೆಸರಿಟ್ಟುಕೊಂಡನು.

ಬಿಜಾಪುರದ ಸುಲ್ತಾನ ಆದಿಲಶಹನು ಹಿಂದೂ ಧರ್ಮದ ಬಗ್ಗೆ ತೋರಿಸುತ್ತಿದ್ದ ಸಹಿಷ್ಣುತೆಗಾಗಿ ಜಗದ್ಗುರು ಎಂದು ಸಂಬೋಧಿಸಲ್ಪಡುತ್ತಿದ್ದನು.

ಕರ್ನಾಟಕದಲ್ಲಿಯ ವಿವಿಧ ಧರ್ಮಗಳ ಉಗಮ, ಬೆಳವಣಿಗೆ ಮತ್ತು ಅಸ್ತಿತ್ವಗಳನ್ನು ನಾವು ಈ ಹಿನ್ನೆಲೆಯಲ್ಲಿ ಅರಿತುಕೊಳ್ಳಬೇಕು.

### ಹಿಂದೂ ಧರ್ಮ

ಹಿಂದೂ ಧರ್ಮದ ವ್ಯಾಖ್ಯೆ ಮತ್ತು ವ್ಯಾಪ್ತಿ ಬಹಳ ವಿಸ್ತಾರವಾದುದು. ಅದು ಕಾಲಾತೀತವೂ ಹೌದು. ಇದನ್ನು ಎಂದು ಯಾರು ಸ್ಥಾಪಿಸಿದರು ಎಂದು ಹೇಳುವದಿರಲಿ, ಹುಡುಕುವದೂ ಸಾಧ್ಯವಿಲ್ಲ. ಸಂಸ್ಕೃತ ಅಥವಾ ಅದರ ಸಹೋದರ (ಅರ್ಧಮಾಗಧಿ, ಪಾಲಿ ಇತ್ಯಾದಿ) ಭಾಷೆಗಳಲ್ಲಿ ಗ್ರಂಥಗಳನ್ನು ರಚಿಸಿಕೊಂಡು ವೈದಿಕ ವಿಚಾರ ಪ್ರಣಾಲಿಯೊಡನೆ ಸಮಾನ ವೇದಿಕೆಯ ಮೇಲ್ ಸೆಣಸಾಟಕ್ಕೆ ನಿಂತ ಧರ್ಮ ಅಥವಾ ಮತಗಳೆಲ್ಲ ಇದರಲ್ಲಿ ಸೇರಿಕೊಂಡಂತೆ ತೋರುತ್ತದೆ. ಇಲ್ಲದೆ ಹೋದರೆ ವೇದೋಪನಿಷತ್ತುಗಳ ವಾದ ಸರಣಿಯನ್ನೇ ನಿರಾಕರಿಸುವ ಚಾರ್ವಾಕ, ಜೈನ, ಬೌದ್ಧ ಮೊದಲಾದ ಮತಗಳು ಹಿಂದೂ ಧರ್ಮದ ಅಳವಿನಲ್ಲಿ ಬರುತ್ತಿರಲಿಲ್ಲ. ಕ್ರೈಸ್ತ ಮತ್ತು ಇಸ್ಲಾಂ ಧರ್ಮಗಳು ಭಾರತವನ್ನು ಸಾಕಷ್ಟು ಹಿಂದೆಯೇ ಪ್ರವೇಶಿಸಿದವಾದರೂ ಅವು ವಾದ ಸಂವಾದಗಳ ವೇದಿಕೆಗೆ, ಪಾಂಡಿತ್ಯದ ಸೋಲು ಗೆಲವುಗಳ ಮೋಹಕ್ಕೆ ಬೀಳಲಿಲ್ಲ. ಆದ್ದರಿಂದ ಅವು ಹಿಂದೂ ಧರ್ಮದ ಅಪ್ಪುಗೆಯ ಹೊರಗೇ ಉಳಿದಿರಬೇಕು. ಇಸ್ಲಾಂ ಮತ್ತು ಕ್ರಿಶ್ಚನ್ ಧರ್ಮಗಳಿಗೆ ಭಾರತದಲ್ಲಿ ರಾಜಾಶ್ರಯ ದೊರೆತ ಮೇಲೆ ಸಹ ಈ ದಿಶೆಯಲ್ಲಿ ವಿಧಾಯಕ ಪ್ರಯತ್ನಗಳು ವಿಶೇಷ ರೀತಿಯಲ್ಲಿ ನಡೆಯಲಿಲ್ಲ. ಹಾಗೆ ನೋಡಿದರೆ ಭಾರತದಲ್ಲಿಯ ರಾಜಕೀಯ ಅಧಿಕಾರ ಮುಸಲ್ಮಾನರ ಕೈಗೆ ಸೇರತೊಡಗಿದ ಕಾಲದಿಂದಲೇ ಹಿಂದೂ ಧರ್ಮವು ತನ್ನ ಜೀರ್ಣಶಕ್ತಿಯನ್ನು ಕಳೆದುಕೊಳ್ಳಲಾರಂಭಿಸಿದಂತೆ ತೋರುತ್ತದೆ. ಇತ್ತೀಚೆಗಂತೂ ವೈದಿಕಧರ್ಮವೊಂದೇ ಹಿಂದೂ ಧರ್ಮವೆಂದು ಭಾವಿಸುವ ಮಟ್ಟಕ್ಕೆ ನಾವು ಬಂದಿದ್ದೇವೆ.

ವೈದಿಕ ಧರ್ಮವು ಭಾರತದ ನೆಲದಲ್ಲೇ ರೂಪುಗೊಂಡಿತೋ ಇಲ್ಲವೆ ಹೊರಗಿನಿಂದ ಆಗಮಿಸಿತೋ ಎಂಬ ವಿಷಯದ ಬಗ್ಗೆ ಪಂಡಿತರಲ್ಲಿ ಏಕಾಭಿಪ್ರಾಯವಿಲ್ಲ. ಚರ್ಚೆ ಏನೇ ಇದ್ದರೂ ಇದಕ್ಕೂ ಮೊದಲು ಇಲ್ಲಿ ವಾಸಿಸುತ್ತಿದ್ದ ಜನ ವೈದಿಕವಲ್ಲದ ಅಥವಾ ಅವೈದಿಕ ಮತವೊಂದನ್ನು ಪಾಲಿಸುತ್ತಿದ್ದರೆಂಬುದು ಸ್ಪಷ್ಟ. ೩ ಅದೇ ಆಗಮಿಕ ಅಥವಾ ತಾಂತ್ರಿಕ ಮತವೆಂದು ಹಿಂದೂ ಧರ್ಮ ಶಾಸ್ತ್ರದಲ್ಲಿ ಸ್ಥಾನ ಪಡೆಯಿತು. ಮೊಹಂಜೋದಾರೋ, ಹರಪ್ಪ ಉತ್ಖನನಗಳಲ್ಲಿ ಹೇರಳವಾಗಿ ದೊರೆತಿರುವ ಪಶುಪತಿಯ ಚಿತ್ರಗಳು ಪಾಶುಪತ ಧರ್ಮದ ಅಸ್ತಿತ್ವದ ಸಂಕೇತಗಳೆಂದು ಹೇಳಲಾಗುತ್ತದೆ. ನಂತರ ಕಂಡುಬರುವ ನಾನಾ ಶೈವ ಪಂಥಗಳಿಗೆ ಈ ಪಾಶುಪತ ಧರ್ಮವೇ ಮೂಲವೆಂದೇ ಭಾವಿಸಲಾಗಿದೆ. ೪

### ಶೈವ ಪಂಥ

ಬಹುಶಃ ಎಲ್ಲ ಶೈವ ಪಂಥಗಳು ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದ್ದವೆಂದು ಹೇಳುವದಕ್ಕೆ ವಿಶೇಷ ಪರಿಶ್ರಮವೇನೂ ಬೇಕಾಗಿಲ್ಲ. ರಾವಣನು ಈಶ್ವರನ ಪ್ರಾಣಲಿಂಗವನ್ನು ತಂದು ಗೋಕರ್ಣದಲ್ಲಿ ಸ್ಥಾಪಿಸಿದನೆಂದು ಪುರಾಣದಲ್ಲಿ ಹೇಳಲಾಗಿದೆ. ರಾಮಾಯಣದಲ್ಲಿ ಬರುವ ಲಿಂಗ ಸ್ಥಾಪನೆಯ ಎರಡು ಸಂದರ್ಭಗಳಲ್ಲಿ (ರಾಮನು ರಾಮೇಶ್ವರದಲ್ಲಿ ಸ್ಥಾಪಿಸಿದ ಮಳಲ ಲಿಂಗ ಇನ್ನೊಂದು) ಗೋಕರ್ಣದ ಈ ಜ್ಯೋತಿರ್ಲಿಂಗವೇ ಹಿಂದಿನದು ಮತ್ತು ಮಹತ್ವದ್ದು. ಇದು ಕರ್ನಾಟಕಕ್ಕೂ ಶೈವ ಮತಕ್ಕೂ ಇರುವ ಸಂಬಂಧವನ್ನೂ ಪ್ರಾಚೀನತೆಯನ್ನೂ ಸಿದ್ಧಮಾಡುತ್ತದೆ.

ಶೈವರು ಪಾಶುಪತಮತಕ್ಕೆ ವ್ಯತಿರಿಕ್ತವಾಗಿ ವೇದ ಪ್ರಾಮಾಣ್ಯವನ್ನು ಒಪ್ಪುತ್ತಾರೆ. ದೇವಾಲಯಗಳಲ್ಲಿ ಸಾಮಾನ್ಯವಾಗಿ ವೇದ ಮಂತ್ರ ಘೋಷ, ಉತ್ಸವ, ಸಂಗೀತ, ನೃತ್ಯ ಮೊದಲಾದವುಗಳಿಂದ ಕೂಡಿದ ಸಾರ್ವಜನಿಕ ಪೂಜೆಯ ಪರಂಪರೆಯನ್ನು ಪ್ರಾರಂಭಿಸಿದ ಶ್ರೇಯಸ್ಸು ಶೈವರಿಗೆ ಸೇರುತ್ತದೆ. ದಕ್ಷಿಣದಲ್ಲಿ ಚೋಳರಾಜರು ಇದಕ್ಕೆ ಆಶ್ರಯ ಇತ್ತಿದ್ದರು. ಕರ್ನಾಟಕದಲ್ಲಿ ಸಹ ಹೊಯ್ಸಳ, ರಾಷ್ಟ್ರಕೂಟ, ಚಾಲುಕ್ಯ ದೊರೆಗಳು ಏಕ ಪ್ರಕಾರವಾಗಿ ಅಲ್ಲದಿದ್ದರೂ ಕಾಲ ಕಾಲಕ್ಕೆ ಈ ಮತಕ್ಕೆ ರಾಜಾಶ್ರಯ ನೀಡಿದ್ದುಂಟು. ದಕ್ಷಿಣದಲ್ಲಿ ಶೈವ ಧರ್ಮವನ್ನು ಹಬ್ಬಿಸಲು ಮುಖ್ಯ ಕಾರಣವಾದವರು ೬೩ ಮಂದಿ ಪುರಾತನರು. ಇವರಲ್ಲಿ ಹೆಚ್ಚು ಜನರು ತಮಿಳುನಾಡಿನವರು. ಇವರೆಲ್ಲರು ಭಕ್ತಿಪಾರಮ್ಯವನ್ನೇ ಪ್ರತಿಪಾದಿಸಿದರು.

ಶೈವರು ಪತಿ, ಪಶು ಮತ್ತು ಪಾಶಗಳೆಂದು ಮೂರು ಪದಾರ್ಥಗಳನ್ನು ಒಪ್ಪುತ್ತಾರೆ. ಶಿವನೇ ಪತಿ, ಜೀವಾತ್ಮನೇ ಪಶು ಮತ್ತು ಜಗತ್ತು ಅಥವಾ ಸಂಸಾರವೇ ಪಾಶ. ಇವು ಮೂರೂ ನಿತ್ಯವಾದವುಗಳು.

ಕರ್ನಾಟಕದಲ್ಲಿಯ ಶೈವ ಮತಾನುಯಾಯಿಗಳಲ್ಲಿ ಬಹುಸಂಖ್ಯರು ನಂತರದ ವೀರಶೈವ ಮತದಲ್ಲಿ ಪರಿವರ್ತನೆ ಹೊಂದಿರಬಹುದೆಂದು ಊಹಿಸಲಾಗುತ್ತಿದೆ.

"ಶೈವ ಧರ್ಮದಲ್ಲಿ ಅನೇಕ ಅವಾಂತರ ಭೇದಗಳಿವೆ. ಶಿವನು ಸರ್ವಪ್ರಾಣಿಗಳಿಗೆ ಒಡೆಯನಾದುದರಿಂದ ಸರ್ವವರ್ಗದ ಜನರು ಇವನನ್ನು ತಮ್ಮ ಇಷ್ಟಾನುಸಾರ ಪೂಜಿಸು

---

೧. ಎಪಿಗ್ರಾಫಿಕಾ ಕರ್ನಾಟಿಕಾ II ಶ್ರವಣಬೆಳಗೊಳ ೩೩೪.

೨. ಎಪಿಗ್ರಾಫಿಕಾ ಕರ್ನಾಟಿಕಾ V ಬೇಲೂರು ೧೨೮.

೩. ತಂತ್ರಾಸ್ – ಎ. ಜನರಲ್ ಸ್ಟಡೀ – ಮನೋರಂಜನ್ ಬಸು ಪುಟ ೫.

೪. ಕರ್ನಾಟಕದ ಪರಂಪರೆ – ಡಾ. ಎಸ್. ಸಿ. ನಂದೀಮಠ. ಪುಟ ೧೮೦.

ವರು. ಕೆಲವು ಪಂಥದವರು ಶುದ್ಧ ಮತ್ತು ಶಿಷ್ಟ ಸಮ್ಮತರಿರುವವರು ಮತ್ತೆ ಕೆಲ ಪಂಥದವರು ಘೋರ ಮತ್ತು ಹೇಯವಾದ ಆಚರಣೆಗಳುಳ್ಳವರು. ನಮಗೆ ಗೊತ್ತಿದ್ದ ಮಟ್ಟಿಗೆ ಪಾಶುಪತ ಮತ ಬಹಳ ಹಳೆಯದೂ ಮಹತ್ವವಾದುದೂ ಆಗಿರುವುದು. ಈ ಮತ ಕರ್ನಾಟಕದಲ್ಲಿ ಪ್ರಬಲವಾದ ಮತಗಳಲ್ಲಿ ಒಂದಾಗಿತ್ತು.

**ಪಾಶುಪತ ಮತ**

ಶೈವ ಪಂಥಗಳಲ್ಲಿ ಲಕುಲೀಶಪಾಶುಪತ ದರ್ಶನವೇ ತೀರ ಹಳೆಯದು ಮತ್ತು ತನ್ನದೇ ಆದ ತತ್ವ ವಿಚಾರಗಳನ್ನೊಳಗೊಂಡದ್ದಾಗಿರುತ್ತದೆ. ಈ ಮತಸ್ಥಾಪಕರಾದ ಭಟ್ಟಾರಕ ಲಕುಲೀಶನ ಉಲ್ಲೇಖ ವಾಯು ಪುರಾಣ, ಲಿಂಗಪುರಾಣ ಮತ್ತು ಸೂತ ಸಂಹಿತೆಗಳಲ್ಲಿ ಬರುತ್ತದೆ. ಇವನನ್ನು ರುದ್ರನ ಒಂದು ಅವತಾರವೆಂದು ನಂಬಲಾಗಿದೆ. ಲಕುಲೀಶ ಪಂಥವು ಕರ್ನಾಟಕದಲ್ಲಿ ಬಹುಕಾಲದ ವರೆಗೆ ಸಾಕಷ್ಟು ಪ್ರಚಾರದಲ್ಲಿತ್ತು. ಮಹಾಕೂಟದಲ್ಲಿ ಲಕುಲೀಶನಿಗೆ ಒಂದು ದೇವಾಲಯವಿದೆ. ಪಟ್ಟದಕಲ್ಲಿನ ಎಂಟನೇ ಶತಮಾನದ ದೇವಾಸ್ಥಾನಗಳ ಗೋಡೆಗಳ ಮೇಲೆ ಲಕುಲೀಶನ ಮೂರ್ತಿಗಳಿವೆ. ಬಾದಾಮಿಯ ಚಾಲುಕ್ಯರಿಂದ ಹಿಡಿದು ವಿಜಯನಗರದ ಅರಸರವರೆಗೂ ಎಲ್ಲಾ ರಾಜವಂಶಗಳ ದೊರೆಗಳು ಈ ಪಂಥದ ಆಚಾರ್ಯರುಗಳನ್ನು ಗೌರವಿಸಿ ಆಶ್ರಯ ನೀಡುತ್ತಿದ್ದರು.

ಲಕುಲೀಶ ಶೈವರನ್ನು ಮಹೇಶ್ವರರೆಂದು ಕರೆಯುತ್ತಿದ್ದರು. ಅವರಿಗೆ ತಮ್ಮದೇ ಆದ ತತ್ವಶಾಸ್ತ್ರವಿತ್ತು. ಆ ತತ್ವಗಳನ್ನು ಭಟ್ಟಾರಕ ಲಕುಲೀಶನು ಪಾಶುಪತ ಸೂತ್ರಗಳಲ್ಲಿ ಸಂಗ್ರಹಿಸಿ ನಿರೂಪಿಸಿದ್ದಾನೆ. ಪಶುಪತಿ ಎಂಬ ಹೆಸರಿನ ಶಿವ ಇವರ ಆರಾಧ್ಯ ದೇವತೆ. ೧) ಕಾರ್ಯ ೨) ಕಾರಣ ೩) ವಿಧಿ ೪) ಯೋಗ ೫) ದುಃಖಾಂತ ಎಂಬ ಐದು ಪದಾರ್ಥಗಳನ್ನು ಇವರು ಅಂಗೀಕರಿಸುತ್ತಾರೆ. ೩ ಅಥವಾ ೪ನೇ ಶತಮಾನಕ್ಕೆ ಸೇರಿದವನೆಂದು ಹೇಳಲಾದ ಕೌಂಡಿನ್ಯನು ಈ ಸೂತ್ರಗಳಿಗೆ ಬರೆದ ವ್ಯಾಖ್ಯಾನದಲ್ಲಿ ಅಹಿಂಸೆ, ಬ್ರಹ್ಮಚರ್ಯ, ಸತ್ಯ, ಅಸಂವ್ಯವಹಾರ, ಶೌಚ, ಆಹಾರ, ಲಾಘವ ಮತ್ತು ಅಪ್ರಮಾದ ಎಂದು ಆತ್ಮಸಂಯಮದ ರೂಪಗಳಿಗೆ ವಿಶೇಷ ಪ್ರಾಶಸ್ತ್ಯ ಕೊಡಲಾಗಿದೆ.

**ವೀರಶೈವ ಅಥವಾ ಲಿಂಗವಂತ ಮತ**

ಕರ್ನಾಟಕದಲ್ಲಿ ಗಣನೀಯ ಸಂಖ್ಯೆಯಲ್ಲಿ ಅನುಯಾಯಿಗಳನ್ನು ಹೊಂದಿರುವ ಮತಗಳಲ್ಲಿ ಇದೊಂದು. ಇದರ ಉಗಮ ಎಂದು ಮತ್ತು ಎಲ್ಲಿ ಎಂಬುದು ಖಚಿತವಾಗಿ ತಿಳಿಯುವದಿಲ್ಲ. ಪರಮೇಶ್ವರನ ಪಂಚಮುಖಗಳಿಂದ ಉದ್ಭವಿಸಿದ ಪಂಚಗಣಾಧೀಶ್ವರರೇ ಭೂಮಿಗೆ ಅವತರಿಸಿ ಬಂದು ಈ ಧರ್ಮವನ್ನು ಸ್ಥಾಪಿಸಿದರೆಂದು ನಂಬುಗೆ ಇದೆ. ಸುಮಾರು ೧೧ ಅಥವಾ ೧೨ನೆಯ ಶತಮಾನದಿಂದೀಚೆಗೆ ಈ ಮತದ ಗ್ರಂಥ ಮತ್ತು ಚರಿತ್ರೆಗಳು ಲಭ್ಯವಿವೆ. ೧೨ನೆಯ ಶತಮಾನದ ಆದಿಯಲ್ಲಿ ಬಾಗೇವಾಡಿಯಲ್ಲಿ ಹುಟ್ಟಿ, ಸಂಗಮದಲ್ಲಿ ಬೆಳೆದು ಕಲ್ಯಾಣದಲ್ಲಿ ಕೀರ್ತಿಯನ್ನು ಬೆಳಗಿದ ಬಸವಣ್ಣ ಈ ಮತದ ಪುನರುತ್ಥಾನಕ್ಕೆ ನೀಡಿದ ಕಾಣಿಕೆ ಅದ್ಭುತವಾದುದೆಂಬುದಲ್ಲಿ ಸಂದೇಹವಿಲ್ಲ.

“ಬಸವಣ್ಣನವರಿಂದಲೇ ವೀರಶೈವ ಮತಸ್ಥಾಪನೆ ಆಯಿತೆಂದು ಕೆಲವರ ಗ್ರಹಿಕೆ. ಇದು ಸರಿಯಲ್ಲ. ಬಸವಣ್ಣನವರ ಚರಿತ್ರೆಯನ್ನು ವಿವರಿಸಿರುವ ಗ್ರಂಥಗಳ ಮೇಲಿಂದ ಅವರು ಮತಸ್ಥಾಪಕರಿದ್ದಂತೆ ತೋರುವುದಿಲ್ಲ. ಭೀಮ ಕವಿಯಂತೂ ಅವರು ವೀರಶೈವ ದೀಕ್ಷೆಯನ್ನು ಪಡೆದವರೆಂದು ಹೇಳಿರುವನು. ಬಸವಣ್ಣನವರಿಗೂ ಮೊದಲು ಹಲವರು ಈ ಮತಪ್ರಸಾರಕ್ಕಾಗಿ ಹೆಣಗಾಡಿದಂತೆ ಆಧಾರಗಳು ದೊರೆಯುತ್ತವೆ. ಏಸುಕ್ರಿಸ್ತ ಮತ್ತು ಮಹಮ್ಮದರು ಕ್ರೈಸ್ತ ಮಹಮ್ಮದೀಯ ಧರ್ಮಗಳ ಸ್ಥಾಪಕರಿರುವಂತೆ ಬಸವಣ್ಣನವರು ವೀರಶೈವ ಮತದ ಸ್ಥಾಪಕರಲ್ಲವೆಂದು ಒಪ್ಪಬೇಕಾಗುವುದು”. ೧

ಬಸವಣ್ಣ ಧಾರ್ಮಿಕ ಕ್ರಾಂತಿಯ ಜ್ಯೋತಿಯನ್ನು ಹೊತ್ತಿಸಿದ ಕಾಲ ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ತೀರ ದುರ್ಬಲ ಕಾಲ. ಚಾಲುಕ್ಯ, ರಾಷ್ಟ್ರಕೂಟರು ಶಕ್ತಿಹೀನರಾಗಿದ್ದರು. ಯಾದವ, ಹೊಯ್ಸಳರು ಹತಪ್ರಭರಾಗಿದ್ದರು. ೧೪ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಆಗುವವರೆಗೆ ಅದು ರಾಜಾಶ್ರಯವಿಲ್ಲದೆ ಅಲೆಯಬೇಕಾಯಿತು. ಆದರೆ ಕಲ್ಯಾಣದಲ್ಲಿ ತಯಾರಾದ ಶರಣರು ಮತ್ತು ಜಂಗಮರು ಈ ಅವಧಿಯಲ್ಲಿ ನಾಡಿನ ತುಂಬೆಲ್ಲ ಪಸರಿಸಿ ಬಡ ಮತ್ತು ಸಾಮಾನ್ಯ ಜನತೆಯಲ್ಲೆಲ್ಲ ಲಿಂಗವಂತ ಧರ್ಮವನ್ನು ಪ್ರಸಾರ ಮಾಡಿದರು. ವಿಜಯನಗರದ ಅರಸರೂ ನಂತರ ಮೈಸೂರು ಅರಸರೂ ಈ ಧರ್ಮಕ್ಕೆ ಮನ್ನಣೆ ಮತ್ತು ಪ್ರೋತ್ಸಾಹಗಳನ್ನಿತ್ತರಲ್ಲದೆ ಈ ಅರಸರ ಅನೇಕ ಮಾಂಡಲೀಕರೂ, ಪಾಳೇಗಾರರೂ ಲಿಂಗವಂತಮತಕ್ಕೆ ಸೇರಿದವರಾಗಿದ್ದರು.

ಬಸವಣ್ಣನವರದು ಹೆಚ್ಚಾಗಿ ಭಕ್ತಿಮಾರ್ಗ. ವಚನಶಾಸ್ತ್ರವು ಯಜ್ಞ ಮತ್ತು ಕರ್ಮಕಾಂಡಗಳನ್ನು ಖಂಡಿಸುತ್ತದೆ. ವೀರಶೈವರಿಗೆ ಕರ್ಮವೆಂದರೆ ಪ್ರತಿದಿವಸ ಅಗತ್ಯವಾಗಿ ಮಾಡತಕ್ಕ ಇಷ್ಟಲಿಂಗ ಪೂಜಾವಿಧಿ. ಯಾವಾಗಲೂ ಶರೀರದ ಮೇಲೆ ಧರಿಸಿರುವ ಲಿಂಗದ ಸಂಪರ್ಕದಿಂದ ಶರೀರ ಶುದ್ಧವಾಗಿರುವದೆಂದೂ ಶರೀರ ಶುದ್ಧಿಗೆ ಕರ್ಮಾದಿಗಳ ಅಗತ್ಯವಿಲ್ಲವೆಂದೂ ವೀರಶೈವರ ನಂಬುಗೆ. ಅಷ್ಟಾವರಣಗಳ ಆಚರಣೆ ವೀರಶೈವರಿಗೆ ಬಹುಮುಖ್ಯ. ಅವು ಹೀಗಿವೆ. ೧) ಗುರು (೨) ಲಿಂಗ, (೩) ಜಂಗಮ, (೪) ಪಾದೋದಕ, (೫) ಪ್ರಸಾದ, (೬) ವಿಭೂತಿ, (೭) ರುದ್ರಾಕ್ಷ, (೮) ಮಂತ್ರ. ವೀರಶೈವ ಸಿದ್ಧಾಂತಕ್ಕೆ ಷಟ್‌ಸ್ಥಳ ಸಿದ್ಧಾಂತವೆಂದೂ ಹೆಸರು. (೧) ಭಕ್ತ, (೨) ಮಹೇಶ, (೩) ಪ್ರಸಾದ, (೪) ಪ್ರಾಣಲಿಂಗ, (೫) ಶರಣ (೬) ಐಕ್ಯ–ಇವೇ ಆ ಷಟ್‌ಸ್ಥಲಗಳು.

ಅಲ್ಲಮ ಪ್ರಭು, ಬಸವಣ್ಣ, ಚೆನ್ನಬಸವಣ್ಣ, ಸಂಗನಬಸವಣ್ಣ ಮೊದಲಾದವರಿಂದ ಪ್ರಾರಂಭವಾದ ಈ ಮತದ ಪ್ರಸಾರ ಕೆಲಕಾಲ ಸುಪ್ತವಾಗಿದ್ದರೂ ಅನೇಕ ಕಡೆಗಳಲ್ಲಿ ವಿರಕ್ತ ಮತ್ತು ಜಂಗಮ ಗುರು ಪೀಠಗಳು ಸ್ಥಾಪನೆಯಾಗಿ ತಮ್ಮ ದಿನಕ್ಕಾಗಿ ಕಾಯುತ್ತಿದ್ದವು. ೧೫ನೇ ಶತಮಾನದ ತೋಂಟದ ಸಿದ್ಧಲಿಂಗ ಶಿವಯೋಗಿಗಳೆಂಬವರು ನಾಡಿನಲ್ಲೆಲ್ಲ ಸುತ್ತಾಡಿ ವೀರಶೈವ ಮತಕ್ಕೆ ಹೊಸ ಚೈತನ್ಯವನ್ನು ನೀಡಿದರು. ಇಂದು ನಾವು ಕರ್ನಾಟಕದಲ್ಲಿ ಕಾಣುವ ಪ್ರತಿಯೊಂದು ವೀರಶೈವ ಮಠವೂ ನೇರವಾಗಿ ಅಲ್ಲಮ ಪ್ರಭುವಿನ ಶಿಷ್ಯರಿಂದ ಸ್ಥಾಪಿಸಲ್ಪಟ್ಟಿದ್ದರೂ ಸಹ ತೋಂಟದ ಸಿದ್ಧಲಿಂಗ ಶಿವಯೋಗಿಗಳಿಂದ ಪುನಶ್ಚೇತನ್ಯ ಪಡೆದ ಮಠಗಳ ಉದಾಹರಣೆಗಳಿಗೂ ಕೊರತೆ ಇಲ್ಲ. ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿ, ಸರ್ವಜ್ಞ, ಮೊದಲಾದವರು ಈ ಮತ ಪ್ರಸಾರಕ್ಕೆ ಕಾರಣರಾದವರಲ್ಲಿ ಕೆಲ ಪ್ರಮುಖರು.

---

೧. ಕನ್ನಡನಾಡಿನ ಚರಿತ್ರೆ–ಡಾ. ಎಸ್. ಸಿ. ನಂದೀಮಠ ಪುಟ ೨೦೦–೨೦೧.

ಸಂಸಾರದಿಂದ ಮುಕ್ತಿ ಹೊಂದುವ ಅಧ್ಯಾತ್ಮ ತತ್ವ ಜ್ಞಾನವನ್ನು ಜನತೆಯ ಆಡು ಭಾಷೆಯಾದ ಕನ್ನಡ ಭಾಷೆಯಲ್ಲೇ ಹೇಳಿದ್ದು, ಜಾತಿ ಪಂಗಡಗಳನ್ನು ಗಮನಿಸದೇ ಗಂಡು ಹೆಣ್ಣೆಂಬ ಭೇದವನ್ನೂ ಲಕ್ಷಿಸದೇ ಎಲ್ಲರಿಗೂ ಏಕಪ್ರಕಾರವಾಗಿ ಧರ್ಮಾಚರಣೆಯ ಸಂದೇಶವನ್ನು ಬೀರಿದ್ದು ವೀರಶೈವ ಮತದ ವೈಶಿಷ್ಟ್ಯವೆನಿಸಿತು.

ಶಾಕ್ತ, ಗಾಣಪತ್ಯ, ಸ್ಕಂದ ಮತ್ತು ಸೌರ ಇತ್ಯಾದಿ ಇನ್ನೂ ಕೆಲ ಶೈವ ಮತಗಳು ಹಿಂದಿನ ಕಾಲದಲ್ಲಿ ಸಣ್ಣ ಪ್ರಮಾಣದಲ್ಲಿ ರೂಢಿಯಲ್ಲಿದ್ದರೂ ಅವು ಕ್ರಮೇಣ ಪ್ರತ್ಯೇಕ ಅಸ್ತಿತ್ವವನ್ನು ಕಳೆದುಕೊಂಡಿವೆ.

### ವೈದಿಕ ದರ್ಶನಗಳು

ವೇದಗಳ ಸಂದೇಶ ಉಪನಿಷತ್ತು, ಬ್ರಹ್ಮಸೂತ್ರ ಮತ್ತು ಪುರಾಣಗಳ ಮೂಲಕ ವಿಸ್ತಾರವಾಗುತ್ತ ನಡೆದಂತೆ ಅದರಲ್ಲಿಯ ಅರ್ಥ ವಿಶ್ಲೇಷಣೆ ಸೂಕ್ಷ್ಮವಾಗುತ್ತ ನಡೆಯಿತು. ಇಂಥ ವಿಶೇಷ ಅಥವಾ ಭಿನ್ನ ಭಿನ್ನ ಕೋನಗಳಿಂದ ವೇದ ವಾಙ್ಮಯವನ್ನು ಕಂಡವರು ಅದು ತಮ್ಮ ತಮ್ಮ ದರ್ಶನವೆಂದೇ ಕರೆದರು. ಇವು ಪಂಡಿತರಲ್ಲಿ ನಡೆಯುವ ಚರ್ಚೆಗೆ ವಿಶೇಷ ಮಹತ್ವದವೆನಿಸಿದ್ದವೇ ಹೊರತು ಸಾಮಾನ್ಯ ಜನರ ನಿತ್ಯಜೀವನದಲ್ಲಿ ಪ್ರಾಶಸ್ತ್ಯಗಳಿಸಲಿಲ್ಲ. ಸಾಯಣ ಮಾಧವಾಚಾರ್ಯರು ೧೪ನೇ ಶತಮಾನದಲ್ಲಿ ಸರ್ವದರ್ಶನ ಸಂಗ್ರಹ ಎಂಬ ಗ್ರಂಥವನ್ನು ಬರೆದದ್ದೇ ಇದಕ್ಕೆ ಸಾಕ್ಷಿ. ಅವರು ಸ್ವತಃ ಒಂದು ದರ್ಶನಕ್ಕೆ ಹೊಂದಿಕೊಂಡವರಾದರೂ ಅವರು ಬರೆದ ಗ್ರಂಥ ಎಲ್ಲ ದರ್ಶನಗಳವರಿಗೆ ಇಂದಿಗೂ ಆಧಾರ ಭೂತವೆನಿಸಿದೆ. ಅವರು ಈ ವಿವಿಧ ದೃಷ್ಟಿಕೋನಗಳನ್ನು ದರ್ಶನಗಳೆಂದು ಕರೆದರೇ ಹೊರತು ಮತಗಳೆಂದು ಕರೆಯಲಿಲ್ಲ. ಆದರೆ ಕೆಲವು ದರ್ಶನಕಾರರು ತಮ್ಮ ಅನುಯಾಯಿಗಳನ್ನು ಹೆಚ್ಚಿಸಿಕೊಳ್ಳುವ ಉತ್ಸಾಹದಲ್ಲಿ ಅವರಿಗೆ ಕೆಲ ವಿಶಿಷ್ಟ ಲಾಂಛನಗಳನ್ನೂ, ನಿತ್ಯನೈಮಿತ್ತಿಕ ಅನುಷ್ಠಾನಗಳಲ್ಲಿ ಕೆಲವು ವ್ಯತ್ಯಾಸಗಳನ್ನೂ ವಿಧಿಸಿದಾಗ ಅವು ಮತಗಳಾಗಿ ಪರಿವರ್ತನೆ ಹೊಂದಿರಬೇಕು. ಅದು ಕ್ರಮೇಣ ಮತಾಂಧತೆಗೂ ಪರಮತದ್ವೇಷಕ್ಕೂ ಎಡೆಕೊಟ್ಟಿರುವದನ್ನು ಸಹ ನಾವು ಕಾಣುತ್ತೇವೆ.

### ಅದ್ವೈತ ವೇದಾಂತ

ಎಂಟನೆಯ ಶತಮಾನದಲ್ಲಿ ಕೇರಳದಲ್ಲಿ ಹುಟ್ಟಿ ಭಾರತದಾದ್ಯಂತ ಸಂಚರಿಸಿ ವೈದಿಕ ಧರ್ಮದ ಪುನರುತ್ಥಾನಕ್ಕೆ ಕಾರಣರಾದ ಆದಿ ಶಂಕರಾಚಾರ್ಯರು ಅದ್ವೈತ ಮತಸ್ಥಾಪನೆ ಮತ್ತು ಪ್ರಚಾರಗಳನ್ನೇ ತಮ್ಮ ಜೀವನದ ಧ್ಯೇಯವನ್ನಾಗಿ ಹೊಂದಿದ್ದರೆಂದು ಹೇಳಿದರೆ ಅನ್ಯಾಯವಾದೀತು. ಅವೈದಿಕಗಳಾದ ಬೌದ್ಧ ಜೈನ ಧರ್ಮಗಳ ಪೆಟ್ಟಿನಿಂದ ಜರ್ಜರಿತವಾಗಿದ್ದ ವೈದಿಕ ಧರ್ಮಕ್ಕೆ ಹೊಸ ಜೀವಕಳೆಯನ್ನೂ ಚೈತನ್ಯವನ್ನೂ ತುಂಬುವುದೇ ಅವರ ಮುಖ್ಯ ಕಾರ್ಯವಾಗಿತ್ತು. ಆ ಘರ್ಷಣೆಯಲ್ಲಿ ಅದ್ವೈತ ವೇದಾಂತಕ್ಕೆ ಒತ್ತು ಕೊಟ್ಟು ಪ್ರತಿಪಾದಿಸುವುದು ಅನಿವಾರ್ಯವಾಗಿರಬೇಕು.

ಅದ್ವೈತ ವೇದಾಂತದ ಮೂಲ ಸ್ಥಾಪಕರೇ ಶಂಕರಾಚಾರ್ಯರಲ್ಲ. ಅವರ ಗುರುಗಳಾದ ಗೋವಿಂದ ಭಗವತ್ಪಾದರು ಮತ್ತು ಪರಮಗುರುಗಳಾದ ಗೌಡಪಾದರು ಇನ್ನೂ ಮೊದಲೇ ಅದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿದರು. "ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" ಎಂಬುದು ಅದ್ವೈತ ಸಿದ್ಧಾಂತದ ಮೂಲ ಸೂತ್ರ. ಸಚ್ಚಿತ್ ಸ್ವರೂಪವಾದ ಪರಮಾತ್ಮ ಅಥವಾ ಬ್ರಹ್ಮದ ಅಸ್ತಿತ್ವದ ಬಗ್ಗೆ ವೇದವೇ ಪರಮ ಪ್ರಮಾಣ. ಬ್ರಹ್ಮನು ಜ್ಞಾನಕ್ಕೆ ವಿಷಯವಲ್ಲ. ಅದು ಜ್ಞಾನ ಸ್ವರೂಪವೇ ಆಗಿದೆ. ಬ್ರಹ್ಮವನ್ನು ತಿಳಿದುಕೊಳ್ಳಲಾಗದು. ಬ್ರಹ್ಮವೇ ನಾವಾಗಬಹುದು. ಜ್ಞಾನವೇ ಮೋಕ್ಷಕ್ಕೆ ಕಾರಣವಾಗಿದೆ. ಭಕ್ತಿ ಹಾಗೂ ಕರ್ಮಗಳು ಜ್ಞಾನದ ಸಾಧನಗಳು. ಜೀವನಿಗೆ ಬ್ರಹ್ಮಜ್ಞಾನವಾಯಿತೆಂದರೆ ಅವನು ಬ್ರಹ್ಮಸ್ವರೂಪನೇ ಆಗಿಬಿಡುತ್ತಾನೆ. ಮೋಕ್ಷದಲ್ಲಿ ಎರಡು ಪ್ರಕಾರಗಳು. ಜೀವನ್ಮುಕ್ತಿ ಮತ್ತು ವಿದೇಹ ಮುಕ್ತಿ. ಜೀವನ್ಮುಕ್ತಿಯು ಅದ್ವೈತದ ವೈಶಿಷ್ಟ್ಯ. ಬ್ರಹ್ಮಜ್ಞಾನವಾಯಿತೆಂದರೆ ಈಗಲೇ, ಇಲ್ಲಿಯೇ ಮುಕ್ತಿಯು ದೊರೆತು ಬಿಡುತ್ತದೆ.

ಶಂಕರಾಚಾರ್ಯರು ದೇಶದ ನಾಲ್ಕು ಪೀಠಗಳನ್ನು ಸ್ಥಾಪಿಸಿ ವೈದಿಕ ಧರ್ಮದ ಪುನರುತ್ಥಾನಕ್ಕೆ ಭದ್ರಬುನಾದಿ ಹಾಕಿದರು. ಅವುಗಳಲ್ಲಿ ಮೊದಲನೆಯದಾದ ಶೃಂಗೇರಿ ಪೀಠ ಕರ್ನಾಟಕದಲ್ಲೇ ಇದೆ. ಈ ಪೀಠಕ್ಕೆ ಕರ್ನಾಟಕದ ಎಲ್ಲ ರಾಜಮನೆತನಗಳು ಏಕಪ್ರಕಾರವಾದ ಗೌರವ ಕೊಡುತ್ತ ಬಂದಿವೆ. ವಿಧರ್ಮೀಯರಾದ ಹೈದರಅಲಿ, ಟಿಪ್ಪು ಸುಲ್ತಾನರು ಸಹ ಈ ಪೀಠದೆದುರು ತಲೆಬಾಗಿದ್ದುಂಟು. ಈ ದೇಶದಲ್ಲಿ ಮಾತ್ರವಲ್ಲ, ವಿದೇಶಗಳಲ್ಲಿ ಸಹ ಇಂದು ಭಾರತೀಯ ತತ್ವಜ್ಞಾನವೆಂದರೆ ಶಂಕರರ ಅದ್ವೈತವೇ ಎಂದು ನಂಬುವಷ್ಟರ ಮಟ್ಟಿಗೆ ಇದು ವೈದಿಕ ಧರ್ಮದ ಮೇಲೆ ಪ್ರಭಾವ ಬೀರಿದೆ.

### ರಾಮಾನುಜ ದರ್ಶನ

ವೈದಿಕ ವಾಙ್ಮಯದ ಸಾರವನ್ನೊಳಗೊಂಡಿರುವ ಕಾರಣದಿಂದ ಪ್ರಸ್ಥಾನತ್ರಯೀ ಎಂದು ಹೆಸರಾದ ಉಪನಿಷತ್ತು, ಬ್ರಹ್ಮಸೂತ್ರಗಳು ಮತ್ತು ಭಗವದ್ಗೀತೆಗಳು ಶುದ್ಧ ಅದ್ವೈತವನ್ನು ಹೇಳದೆ ಒಂದು ವಿಶಿಷ್ಟ ಅದ್ವೈತವನ್ನು ಹೇಳುತ್ತವೆಂದು ತಿದ್ದುಪಡಿ ಮಾಡಿದವರು ಹನ್ನೊಂದನೇ ಶತಮಾನದ ರಾಮಾನುಜಾಚಾರ್ಯರು. ತಮಿಳುನಾಡಿನಲ್ಲಿ ಅದಕ್ಕೂ ಪೂರ್ವದಿಂದಲೇ ಆಳ್ವಾರರುಗಳು ಬೆಳೆಸಿಕೊಂಡು ಬಂದ ಶ್ರೀ ವೈಷ್ಣವ ಮತಕ್ಕೆ ರಾಮಾನುಜಾಚಾರ್ಯರು ತಮ್ಮ ವಿಶಿಷ್ಟಾದ್ವೈತ ಸಿದ್ಧಾಂತದ ನೆಲೆಯನ್ನು ಒದಗಿಸಿದರು. ಇದಕ್ಕೂ ಮೊದಲು ನಾಥಮುನಿ ಮತ್ತು ಯಾಮುನಾಚಾರ್ಯರೆಂಬುವರು ಈ ಮತವನ್ನು ಎತ್ತಿ ಹಿಡಿದಿದ್ದರು. ರಾಮಾನುಜಾಚಾರ್ಯರು ಅವರನ್ನು ಗುರುಗಳೆಂದೇ ಬಗೆದು ಅವರ ಧ್ಯೇಯವನ್ನೇ ತಾವು ಪೂರ್ತಿಗೊಳಿಸುತ್ತಿರುವದಾಗಿ ಹೇಳಿದರು. ರಾಮಾನುಜಾಚಾರ್ಯರು ತಮ್ಮ ಮತಪ್ರಸಾರಕ್ಕೆ ಮಾಡಿಕೊಂಡಿದ್ದ ಕೇಂದ್ರ ಶ್ರೀರಂಗಂ. ಅದು ಚೋಳ ರಾಜನ ಅಧೀನಕ್ಕೆ ಸೇರಿತ್ತು. ಅವನು ಉಗ್ರ ಶೈವ ಪಕ್ಷಪಾತಿ. ತನ್ನ ರಾಜ್ಯದಲ್ಲಿ ಪರಮತಸ್ಥರಿಗೆ ಸ್ಥಳವನ್ನೇ ಕೊಡಬಾರದೆಂದು ಹಟ ಅವನಿಗೆ. ಅವನ ಕಾಟವನ್ನು ತಾಳಲಾರದೆ ರಾಮಾನುಜರು ವೇಷ ಮರೆಸಿಕೊಂಡು ಹೊಯ್ಸಳ ರಾಜ್ಯಕ್ಕೆ ಬಂದು ನೆಲೆಸಿದರು. ಮೊದಲು ಸಾಲಿಗ್ರಾಮದಲ್ಲಿ, ಆಮೇಲೆ ತೊಂಡನೂರು ಮತ್ತು ನಂತರ ಮೇಲುಕೋಟೆಗಳನ್ನು ಅವರು ತಮ್ಮ ಮತಪ್ರಸಾರದ ಕೇಂದ್ರಗಳನ್ನಾಗಿಸಿಕೊಂಡರು. ಹೊಯ್ಸಳ ರಾಜ ಬಿಟ್ಟಿದೇವ ರಾಮಾನುಜರನ್ನು ಒಳ್ಳೆ ಗೌರವದಿಂದ ಕಂಡ. ಅವರ ಮತವನ್ನು ಸ್ವೀಕರಿಸಿದ. ಸುಮಾರು ಎರಡು ದಶಕಗಳ ಕಾಲ ಅವರು ಕನ್ನಡ ನಾಡಿನಲ್ಲಿ ನಿಂತು ಕೊಂಡೇ ತಮ್ಮ ಮತ ಪ್ರಸಾರ ನಡೆಸಿದರು. ಮೇಲುಕೋಟೆ ಶ್ರೀ ವೈಷ್ಣವರ ಪ್ರಮುಖ ಕೇಂದ್ರವೆನಿಸಿತು. ಮೇಲು ಕೀಳೆಂಬ ಇಲ್ಲವೇ ಗಂಡು ಹೆಣ್ಣೆಂಬ ಭೇದಭಾವವಿಲ್ಲದೆ ಎಲ್ಲ ಜಾತಿ ವರ್ಗದವರಿಗೂ ತಮ್ಮ ಮತಪ್ರವೇಶದ ದ್ವಾರವನ್ನು ತೆರೆದದ್ದು ರಾಮಾನುಜಾಚಾರ್ಯರ ವೈಶಿಷ್ಟ್ಯ. ಅವರ ಸಿದ್ಧಾಂತದ ಸಾರ ಈ ರೀತಿ ಇದೆ:

"ದೇವರು ಸಗುಣವೆನಿಸುವ ಪರವಸ್ತು. ದುಷ್ಟವಾದುವು ದೈವಿಕವಲ್ಲ. ಪರಮಾತ್ಮ ಜೀವಾತ್ಮರುಗಳ ಸಂಬಂಧದಲ್ಲಿ ಸ್ವಾಮಿಯನ್ನು ಜೀವನ ಸಮೀಪಕ್ಕೆ ಕರೆತರುವ ಅತ್ಯಂತ ಗಣ್ಯಗುಣವೆಂದರೆ ಆತನ ಕರುಣೆ. ಅವನು ಜಗತ್ತಿನ ಆತ್ಮ, ಆತ್ಮರುಗಳ ಆತ್ಮ. ಸಕಲ ಜೀವಾತ್ಮರು ಪರಮಾತ್ಮನಂತೆಯೇ ನಿತ್ಯರು. ಆದರೆ ಪರಮಾತ್ಮನು ನಿತ್ಯದಲ್ಲಿ ನಿತ್ಯ. ಜೀವಾತ್ಮರ ಚೈತನ್ಯ. ಆದರೂ ಅವರೆಲ್ಲರಿಂದಲೂ ಬೇರೆಯಾದವನು. ರಾಮಾನುಜರ ದೃಷ್ಟಿಯಲ್ಲಿ ಮೋಹವೆಂದರೆ ಜೀವಾತ್ಮನು ಪರಮಾತ್ಮನಲ್ಲಿ ಐಕ್ಯವಾಗುವದು ಇಲ್ಲವೇ ಇಲ್ಲದಂತಾಗುವದಲ್ಲ. ಮೋಹವೆಂದರೆ ಭಗವಂತನೊಡನ ಪಡೆದ ಸಖ್ಯ. ಆತ್ಮಾವಿಷ್ಕಾರ". ೧

ರಾಮಾನುಜಾಚಾರ್ಯರಿಂದ ಪ್ರತಿಪಾದಿತವಾದ ವೇದಾಂತ ತತ್ತ್ವಗಳು (೧) ತತ್ತ್ವ (೨) ಹಿತ ಮತ್ತು (೩) ಪುರುಷಾರ್ಥ ಎಂದು ಮೂರು ಭಾಗಗಳಾಗಿ ವಿಂಗಡಿಸಲ್ಪಟ್ಟಿವೆ. ಜೀವ ಜಗತ್ತು ಮತ್ತು ಬ್ರಹ್ಮಗಳ ವೇದಾಂತ ಜ್ಞಾನವೇ ತತ್ತ್ವ. ಜೀವನದ ಅಂತ್ಯ ಗುರಿಯನ್ನು ಸಾಧಿಸಲು ಸಹಾಯಕವಾಗುವ ಕೈಂಕರ್ಯವೇ (ಸ್ವಾಮಿಗೆ ಮೀಸಲಾಗಿಡಲ್ಪಟ್ಟ ಕರ್ಮ, ಭಕ್ತಿ ಪ್ರಪತ್ತಿ) ಹಿತ. ಜೀವನು ಸಾಧಿಸಬೇಕಾದ ಅಂತಿಮ ಗುರಿಯೇ ಪುರುಷಾರ್ಥ.

ರಾಮಾನುಜಾಚಾರ್ಯರು ಹೊಯ್ಸಳ ಬಿಟ್ಟಿದೇವನ ನೆರವಿನಿಂದ ಕಟ್ಟಿಸಿದ ೧) ಬೇಲೂರಿನ ವಿಜಯ ನಾರಾಯಣ (ಚೆನ್ನಕೇಶವ), ೨) ತೊಂಡನೂರಿನ ನಂಬಿ ನಾರಾಯಣ, ೩) ತಲಕಾಡಿನ ಕೀರ್ತಿನಾರಾಯಣ (೪) ಗದುಗಿನ ವೀರನಾರಾಯಣ (೫) ಮೇಲುಕೋಟೆಯ ಚೆಲುವ ನಾರಾಯಣ ಎಂಬ ಪಂಚನಾರಾಯಣ ದೇವಸ್ಥಾನಗಳೆಲ್ಲ ಕರ್ನಾಟಕದಲ್ಲೇ ಇವೆ.

**ಪೂರ್ಣಪ್ರಜ್ಞ ದರ್ಶನ**

ದ್ವೈತ ಅಥವಾ ಮಾಧ್ವ ಮತವೆಂದು ಹೆಸರಾಗಿರುವ ಸಿದ್ಧಾಂತವನ್ನು ಸರ್ವದರ್ಶನ ಸಂಗ್ರಹಕಾರರಾದ ಮಾಧವಾಚಾರ್ಯರು ಪೂರ್ಣಪ್ರಜ್ಞ ದರ್ಶನವೆಂದು ಕರೆದಿದ್ದಾರೆ. ಇದು ಪೂರ್ಣಬ್ರಹ್ಮವಾದವನ್ನು ಪ್ರತಿಪಾದಿಸುವದೇ ಇದಕ್ಕೆ ಕಾರಣ. ವೀರಶೈವ ಮತದಂತೆ ದ್ವೈತ ಮತವೂ ಶುದ್ಧ ಕನ್ನಡ ನೆಲದ ಕೊಡುಗೆ. ಉಡುಪಿಯ ಹತ್ತಿರ ಪಾಜಕವೆಂಬ ಗ್ರಾಮದಲ್ಲಿ ೧೩ನೇ ಶತಮಾನದಲ್ಲಿ ಜನ್ಮವೆತ್ತಿದ ವಾಸುದೇವ ಭಟ್ಟನು ಮಧ್ವಾಚಾರ್ಯರಾಗಿ ಬೆಳೆದು ಆನಂದತೀರ್ಥರಾಗಿ ವೈದಿಕ ವಾಙ್ಮಯಕ್ಕೆ ಭಕ್ತಿಮಾರ್ಗ ಪ್ರಧಾನವಾದ ಹೊಸ ಅರ್ಥವನ್ನು ಪ್ರತಿಪಾದಿಸಿದರು. ಭಾರತಾದ್ಯಂತ ತಮ್ಮ ಮತಪ್ರಸಾರಕ್ಕಾಗಿ ಸುತ್ತಾಡಿ ಬಂದರೂ ಉಡುಪಿಯನ್ನೇ ತಮ್ಮ ಕೇಂದ್ರವನ್ನಾಗಿಸಿಕೊಂಡರು. ಅವರು ಸ್ಥಾಪಿಸಿದ ಅಷ್ಟ ಮಠಗಳಿಗೆ ಇಂದಿಗೂ ಅದೇ ಕೇಂದ್ರವಾಗಿದೆ. ಮಧ್ವಾಚಾರ್ಯರು ೩೭ ಗ್ರಂಥಗಳನ್ನು ರಚಿಸಿದ್ದು ಅವು ದ್ವೈತ ಮತ ಪ್ರತಿಪಾದನೆಯ ಮೂಲ ಆಕರಗಳೆನಿಸಿವೆ.

ಸಕಲ ಶಾಸ್ತ್ರಗಳು ವಿಷ್ಣುವಿನ ಸರ್ವೋತ್ಕೃಷ್ಟತೆಯನ್ನು ಪ್ರತಿಪಾದಿಸುತ್ತವೆ. ಆತನಲ್ಲಿ ಅಚಲ ಭಕ್ತಿಯನ್ನಿಟ್ಟು ಬ್ರಹ್ಮಜ್ಞಾನವನ್ನು ಸಾಧಿಸುವುದೇ ಪರಮ ಪುರುಷಾರ್ಥ ಎಂಬುದು ಮಧ್ವಾಚಾರ್ಯರ ಉಪದೇಶದ ಮೂಲಸೂತ್ರ. ಈ ಮತದಲ್ಲಿ ಭೇದಗಳು ಅನಂತ. ಅವೆಲ್ಲವುಗಳನ್ನೂ ಐದು ಗುಂಪುಗಳಾಗಿ ವಿಭಾಗಿಸುವರು. (೧) ಜೀವ ಜೀವೇಶ್ವರ ಭೇದ. (೨) ಪರಸ್ಪರ ಜೀವಭೇದ, (೩) ಜಡೇಶ್ವರ ಭೇದ. (೪) ಜಡಜೀವ ಭೇದ, (೫) ಪರಸ್ಪರ ಜಡಭೇದ. ಇವಕ್ಕೆ ಪಂಚಭೇದಗಳೆಂದು ಹೆಸರು.

ಈ ಮತದಲ್ಲಿ ಬಂಧ ಮತ್ತು ಮೋಕ್ಷ ಎರಡೂ ಈಶ್ವರನ ಅಧೀನ. ಮುಕ್ತಿಯು (೧) ಸಾಲೋಕ್ಯ, (೨) ಸಾಮೀಪ್ಯ, (೩) ಸಾರೂಪ್ಯ, (೪) ಸಾಯುಜ್ಯ ಎಂದು ನಾಲ್ಕು ವಿಧ. ಸ್ವರ್ಗಾದಿ ಲೋಕಗಳಲ್ಲಿ ಭಗವಂತನ ದರ್ಶನದಿಂದ ಸುಖವನ್ನನುಭವಿಸುವದು ಸಾಲೋಕ್ಯ ಮುಕ್ತಿ. ಭಗವಂತನ ಸಮೀಪದದಲ್ಲಿಯೇ ಯಥೇಚ್ಛ ಭೋಗವನ್ನನುಭವಿಸುವದು ಸಾಮೀಪ್ಯ ಮುಕ್ತಿ. ರೂಪದಲ್ಲಿ ಭಗವಂತನಂತೆಯೇ ನಾಲ್ಕು ಭುಜಗಳುಳ್ಳವರೂ, ಶಾಂತಿಯುತರೂ ಆಗಿರುವುದು ಸಾರೂಪ್ಯ ಮುಕ್ತಿ. ಭಗವಂತನ ಶರೀರವನ್ನು ಸೇರಿ ಆತನ ಶರೀರದಿಂದಲೇ ಭೋಗವನ್ನನುಭವಿಸುವದು ಸಾಯುಜ್ಯ ಮುಕ್ತಿ.

ಮಧ್ವಮತದ ಮುಖ್ಯ ತತ್ವಗಳನ್ನು ವ್ಯಾಸರಾಯ ಸ್ವಾಮಿಗಳು ಈ ರೀತಿ ಸಂಗ್ರಹಿಸಿದ್ದಾರೆ.

> ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ
> ಜಗತ್ತತ್ವತೋ.
> ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚ
> ಭಾವಂಗತಾಃ
> ಮುಕ್ತಿ ನೈಜಸುಖಾನುಭೂತಿರಮಲಾ ಭಕ್ತಿಶ್ಚತತ್ಸಾಧನಂ
> ಹ್ಯಕ್ಷಾರಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕ
> ವೇದ್ಯೋ ಹರಿಃ

ಹರಿಯೇ ಪರಬ್ರಹ್ಮ. ಜಗತ್ತು ಸತ್ಯ. ನಿಜವಾಗಿ ಭೇದವಿದೆ. ಜೀವಾತ್ಮರುಗಳೆಲ್ಲ ಪರಮಾತ್ಮನ ಸೇವಕರು. ಅವರಲ್ಲಿ ಉಚ್ಚ ನೀಚ ಭಾವವಿದೆ. ಸ್ವಾಭಾವಿಕ ಸ್ವರೂಪ ಸುಖದ ಅನುಭವವೇ ಮುಕ್ತಿ. ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಸಾಧನ. ಪ್ರತ್ಯಕ್ಷ, ಅನುಮಾನ, ಆಗಮಗಳೆಂದು ಮೂರೇ ಪ್ರಮಾಣಗಳು. ಎಲ್ಲ ವೇದಗಳಲ್ಲಿ ಪ್ರತಿಪಾದ್ಯನಾದ ಮುಖ್ಯ ದೇವತೆ ಶ್ರೀಹರಿ.

ಇವುಗಳಿಗೆ ಮಧ್ವಮತದ ನವರತ್ನಗಳೆನ್ನುವರು.

ಮಧ್ವಾಚಾರ್ಯರು ತಮ್ಮ ಮತದ ಮೂಲಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿದರೂ ನಂತರ ಅವರ ಮತ ಪ್ರಸಾರವನ್ನು ಕೈಗೊಂಡವರು ಜನತೆಯ ಭಾಷೆಯಾದ ಕನ್ನಡದಲ್ಲಿ ವಿಪುಲ ಸಾಹಿತ್ಯವನ್ನು ನಿರ್ಮಿಸಿದರು. ಇವರನ್ನು ವ್ಯಾಸಕೂಟ ದಾಸಕೂಟ ಎಂದು ವಿಂಗಡಿಸಲಾಗುತ್ತದೆ. ಪುರಂದರ, ಕನಕ, ಜಗನ್ನಾಥ, ಮಹಿಪ, ವಿಜಯ ಮೊದಲಾದ ದಾಸರು ಅಸಂಖ್ಯ ಉಗಾಭೋಗ, ಸುಳಾದಿಗಳನ್ನೂ, ನೀತಿಪರ ಪದಗಳನ್ನೂ ರಚಿಸಿ ಸಮಾಜದಲ್ಲಿ ಆಸ್ತಿಕ ಭಾವವೂ, ನೈತಿಕ ಪ್ರಜ್ಞೆಯೂ ಜಾಗೃತವಾಗುವಂತೆ ಕಾರ್ಯ ಮಾಡಿದರು.

ರಾಮಾನುಜ ಮತ್ತು ಮಾಧ್ವ ಮತಗಳೆರಡೂ ಉತ್ತರ ಭಾರತದಲ್ಲಿ ಸಹ ಸಾಕಷ್ಟು ಅನುಯಾಯಿಗಳನ್ನು ಹೊಂದಿವೆ.

**ಜೈನ ಧರ್ಮ**

ವೈದಿಕ ಧರ್ಮದಿಂದ ಪ್ರತ್ಯೇಕವಾಗಿ ಸ್ವತಂತ್ರ ತಳಹದಿಯ ಮೇಲೆ ಭಾರತದಲ್ಲಿ ತಲೆಯೆತ್ತಿದ ಮೊದಲ ಧರ್ಮವೆಂದರೆ ಜೈನಧರ್ಮ. ಇದು ಉತ್ತರ ಭಾರತದಲ್ಲಿ ತಲೆಯೆತ್ತಿದರೂ ದಕ್ಷಿಣ ಭಾರತಕ್ಕೆ ಬಂದು ಕರ್ನಾಟಕದಲ್ಲಿ ಭದ್ರವಾಗಿ ನೆಲೆಯೂರಿತು. ಕ್ರಿಸ್ತ ಶಕ ಪ್ರಾರಂಭದಿಂದ ಹತ್ತು ಹನ್ನೆರಡನೇ ಶತಮಾನದವರೆಗೆ ಕನ್ನಡನಾಡಿನ ಸಾಮಾಜಿಕ ಆರ್ಥಿಕ, ಸಾಹಿತ್ಯಕ ಮತ್ತು ರಾಜಕೀಯ ಜೀವನದ ಮೇಲೆ ಜೈನ ಧರ್ಮ ಅಚ್ಚಳಿಯದ ಪ್ರಭಾವ ಬೀರಿದೆ. ೧೫ನೇ ಶತ

---

೧. ಕರ್ನಾಟಕ ಪರಂಪರೆ – ಎಂ. ಯಾಮುನಾಚಾರ್ಯ. ಪುಟ ೫೦೪.

ಮಾನದ ಶಾಸನವೊಂದರಲ್ಲಿ “ಜಿನಧರ್ಮಾವಾಸಮಾದತ್ತು.... ಚಾರುಕರ್ಣಾಟದೇಶಂ..” ಎಂದು ಬಣ್ಣಿಸಿದ್ದನ್ನು ನೋಡಿದರೆ ಅಂದಿನವರೆಗೂ ಜೈನ ಧರ್ಮೀಯರು ಗಣನೀಯ ಸಂಖ್ಯೆಯಲ್ಲಿ ಇದ್ದರೆಂದು ನಂಬಬೇಕಾಗುತ್ತದೆ. ಶ್ರವಣ ಬೆಳ್ಗೊಳದ ಶಾಸನವೊಂದರಲ್ಲಿ ಭದ್ರಬಾಹು ಎಂಬ ಜೈನ ಸ್ವಾಮಿಗಳು ಉತ್ತರ ಭಾರತದಲ್ಲಿಯ ಹನ್ನೆರಡು ವರುಷಗಳ ಕ್ಷಾಮವನ್ನು ಮುಂಗಂಡು ತಮ್ಮ ಅನುಯಾಯಿಗಳೊಡನೆ ಅಲ್ಲಿಗೆ ಬಂದು ಚಂದ್ರಗಿರಿ ಬೆಟ್ಟದಲ್ಲಿ ಸಲ್ಲೇಖನ ವ್ರತದಿಂದ ಸಮಾಧಿ ಹೊಂದಿದರೆಂದು ಹೇಳಲಾಗಿದೆ. ಚಂದ್ರಗುಪ್ತ ಮೌರ್ಯನೂ ಅವರೊಡನೆ ಬಂದಿದ್ದನೆಂಬುದನ್ನು ಇತಿಹಾಸಕಾರರು ಒಪ್ಪುತ್ತಾರೆ. ಕ್ರಿ. ಪೂ. ೨೯೭ರ ಈ ಘಟನೆಯೇ ಕರ್ನಾಟಕದಲ್ಲಿ ಜೈನ ಧರ್ಮ ಪ್ರವೇಶದ ಪ್ರಥಮ ಉಲ್ಲೇಖ. ನಂತರ ತಳಕಾಡಿನ ಗಂಗರೂ ಮಳಖೇಡದ ರಾಷ್ಟ್ರಕೂಟರೂ ಹಳೆಬೀಡಿನ ಹೊಯ್ಸಳರೂ ಜೈನಧರ್ಮಕ್ಕೆ ಉದಾರ ರಾಜಾಶ್ರಯ ನೀಡಿದರು. ಪ್ರಾಚೀನ ಕನ್ನಡ ಸಾಹಿತ್ಯದ ಆಧಾರಸ್ತಂಭರೆನಿಸಿದ ಪಂಪ, ರನ್ನ ನಾಗವರ್ಮ ಮೊದಲಾದವರೆಲ್ಲ ಜೈನರೇ. ಮೂರ್ತಿಶಿಲ್ಪ, ದೇವಸ್ಥಾನ ರಚನೆಗೂ ಜೈನ ಧರ್ಮೀಯರ ಕೊಡುಗೆ ಸ್ಮರಣೀಯವಾಗಿದೆ.

ಕ್ರಿ. ಪೂ. ೬ನೇ ಶತಮಾನದಲ್ಲಿ ಆಗಿಹೋದ ಮಹಾವೀರ ತೀರ್ಥಂಕರರು ಐತಿಹಾಸಿಕವಾಗಿ ಜೈನಧರ್ಮದ ಮೂಲ ಪುರುಷರು. ಆದರೆ ಜೈನಧರ್ಮಗ್ರಂಥಗಳ ಹಾಗೂ ನಂಬುಗೆಗಳ ಪ್ರಕಾರ ಮಹಾವೀರರು ೨೪ನೆಯ ಹಾಗೂ ಕೊನೆಯ ತೀರ್ಥಂಕರರು. ಅದಕ್ಕೂ ಮೊದಲು ಆಗಿಹೋದ ೨೩ ತೀರ್ಥಂಕರರು ಜೈನಧರ್ಮವನ್ನು ಪ್ರತಿಪಾದಿಸಿದರೆಂದೂ ೨೨ನೇ ತೀರ್ಥಂಕರರಾದ ನೇಮಿನಾಥರು ಭಾಗವತದ ಶ್ರೀಕೃಷ್ಣನ ಸಮಕಾಲೀನರೆಂದೂ ಹೇಳಲಾಗುತ್ತದೆ. ರಾಜಪುತ್ರರಾಗಿ ಜನಿಸಿದ ಮಹಾವೀರರು ಆ ವೈಭವಗಳನ್ನೆಲ್ಲಾ ತ್ಯಜಿಸಿ ತೀರ್ಥಂಕರರಾದದ್ದು ಒಂದು ಅದ್ಭುತ ತ್ಯಾಗದ ಕತೆ.

“ಜೈನಧರ್ಮವು ಸ್ವಯಂಪ್ರೇರಣೆಯ ಪ್ರಯತ್ನವನ್ನು ಎತ್ತಿ ಹೇಳುತ್ತದೆ. ವ್ಯಕ್ತಿ ತನ್ನ ಮೋಕ್ಷಕ್ಕೆ ತಾನೇ ಹೊಣೆ. ಸ್ವರ್ಗದಲ್ಲಿರುವ ಯಾವ ದೇವ ದೇವತೆಗಳಾಗಲೀ ನಮ್ಮನ್ನು ಉದ್ಧರಿಸಿ ಮೋಕ್ಷವನ್ನು ಒದಗಿಸಲಾರರು. ತಾನೇ ಮೋಕ್ಷವನ್ನು ಹೊಂದಬೇಕು. ಅನುಗ್ರಹವೆಂಬುದಕ್ಕೆ ಜೈನ ಧರ್ಮದಲ್ಲಿ ಸ್ಥಾನವಿಲ್ಲ.

ಜೈನ ಸಿದ್ಧಾಂತಕ್ಕೆ ಸ್ಯಾದವಾದ, ಅನೇಕಾಂತವಾದ ಎಂದೂ ಹೇಳುತ್ತಾರೆ. ಯಾವದೊಂದು ವಸ್ತುವಿನ ಇರುವಿಕೆ ಅಥವಾ ಇಲ್ಲದಿರುವಿಕೆಯನ್ನು ವಾದಿಸುತ್ತ ಹೊರಟರೆ ಕೊನೆ ಇರಬಹುದು ಅಥವಾ ಇರಲಿಕ್ಕಿಲ್ಲ ಎಂಬ ನಿರ್ಣಯಕ್ಕೆ ಬರಬೇಕಾಗುತ್ತದೆ. ಆದ್ದರಿಂದಲೇ ಇದಕ್ಕೆ ಅನೇಕಾಂತವಾದ ಎಂದೂ ಹೆಸರು.

ಒಂದು ವಸ್ತುವನ್ನು ಮತ್ತು ಅದರ ಗುಣಸ್ವಭಾವವನ್ನು ಎಣಿಸುವಲ್ಲಿ ಏಳುರೀತಿಗಳಿದ್ದು ಸಪ್ತ ಭಂಗಿನಯಗಳೆಂದು ಹೆಸರಾಗಿವೆ.

ಜೀವ ಅಥವಾ ಆತ್ಮನು ಕರ್ಮಬದ್ಧನು. ಅವನು ದೇಹದಿಂದ ಭಿನ್ನನಾದರೂ ದೇಹಯುಕ್ತನಾಗಿ ಕರ್ಮಗಳನ್ನು ಮಾಡುತ್ತಾನೆ. ದೇಹ ಪರಿಪೂರ್ಣನಿರುವದಿಲ್ಲ. ಆದರೆ ಪರಿಪೂರ್ಣನಾಗಬಲ್ಲ. ಮುಕ್ತರಾದ ಜೀವರುಗಳಲ್ಲಿ ದೇಹಯುತ, ದೇಹರಹಿತ ಎಂದು ಎರಡು ವಿಧ. ದೇಹರಹಿತ ಜೀವಿಗಳು ನಿರ್ವಾಣಾವಸ್ಥೆಯಲ್ಲಿ ಅನಂತ ಸುಖಿಗಳಾಗುವರು. ರತ್ನತ್ರಯಗಳೆನಿಸಿರುವ ಸಮ್ಯಕ್‌ದರ್ಶನ, ಸಮ್ಯಕ್ ಜ್ಞಾನ ಮತ್ತು ಸಮ್ಯಕ್ ಚಾರಿತ್ರ್ಯಗಳು ಜೀವನಿಗೆ ಮೋಕ್ಷವನ್ನು ಒದಗಿಸಿಕೊಡುವಲ್ಲಿ ಉಪಯುಕ್ತವಾಗುವುವು.

ವೈಯಕ್ತಿಕ ಜೀವನಕ್ಕೆ ಭದ್ರವಾದ ನೈತಿಕ ಚೌಕಟ್ಟು ಒದಗಿಸಿ ಅಹಿಂಸೆಗೆ ಪರಮಧರ್ಮದ ಪಟ್ಟವನ್ನು ಕಟ್ಟಿದ ಶ್ರೇಯಸ್ಸು ಜೈನಧರ್ಮಕ್ಕೆ ಸಲ್ಲುತ್ತದೆ.

## ಬೌದ್ಧ ಧರ್ಮ

ಜೈನ ಧರ್ಮ ತಲೆಯೆತ್ತಿದ ಸುಮಾರು ಒಂದು ಶತಮಾನದ ನಂತರ ಪ್ರಾರಂಭವಾದ ಬೌದ್ಧಧರ್ಮ ಇಂದು ಭಾರತಕ್ಕಿಂತ ವಿದೇಶಗಳಲ್ಲಿಯೇ ಹೆಚ್ಚಾಗಿ ವ್ಯಾಪಿಸಿ ಜಗತ್ತಿನ ಪ್ರಮುಖ ಧರ್ಮಗಳಲ್ಲೊಂದೆಂದು ಹೆಸರು ಪಡೆದಿದೆ. ಈ ಧರ್ಮದ ಮೂಲ ಭಾರತವೇ ಆದರೂ ಚೀನ, ಜಪಾನ್, ಟಿಬೆಟ್, ಬ್ರಹ್ಮದೇಶ, ಥಾಯ್ಲೆಂಡ್, ಶ್ರೀಲಂಕಾ ಮೊದಲಾದ ದೇಶಗಳೇ ಇಂದು ಬೌದ್ಧರ ನೆಲೆಗಳೆನಿಸಿವೆ. ಆದರೆ ಇದು ವಿದೇಶಗಳಿಗೆ ಹೋಗುವ ಮೊದಲು ಭಾರತದಲ್ಲಿ ಸಾಕಷ್ಟು ಪ್ರಸಾರದಲ್ಲಿತ್ತೆಂಬುದಕ್ಕೆ ವಿಪುಲ ಸಾಕ್ಷ್ಯಾಧಾರಗಳಿವೆ. ಕ್ರಿ.ಶ. ಪೂರ್ವ ೩ನೇ ಶತಮಾನದಲ್ಲಿ ಮೌರ್ಯ ದೊರೆ ಅಶೋಕನು ಭಿಕ್ಷು ಮಹಾದೇವನನ್ನು ಮಹಿಷ ಮಂಡಲಕ್ಕೂ (ಈಗಿನ ಮೈಸೂರು) ರಕ್ಷಿತನನ್ನು ಬನವಾಸಿಗೂ ಕಳಿಸಿದನೆಂಬ ಉಲ್ಲೇಖವೇ ಕರ್ನಾಟಕಕ್ಕೆ ಬೌದ್ಧಧರ್ಮ ಪ್ರವೇಶದ ಪ್ರಥಮ ದಾಖಲೆ. ಕ್ರಿ.ಶ. ೬೪೦ರಲ್ಲಿ ದಕ್ಷಿಣ ಭಾರತದಲ್ಲಿ ಪ್ರವಾಸ ಮಾಡಿದ ಚೀನಿ ಪ್ರವಾಸಿ ಹುಯನ್‌ತ್ಸಾಂಗನು ಬೌದ್ಧ ಧರ್ಮದ ಮಹಾಯಾನ ಪಂಥವು ಕರ್ನಾಟಕ ಭಾಗದಲ್ಲಿ ಉಚ್ಛ್ರಾಯಸ್ಥಿತಿಯಲ್ಲಿದ್ದಿತೆಂದು ಬರೆದಿದ್ದಾನೆ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಬೌದ್ಧಧರ್ಮದ ಅಸ್ತಿತ್ವವನ್ನು ತೋರಿಸುವ ಅನೇಕ ಅವಶೇಷಗಳು ಸಿಗುತ್ತವೆ. ಆದರೆ ಬೌದ್ಧ ಧರ್ಮಕ್ಕಿಂತ ಮೊದಲೇ ಕರ್ನಾಟಕವನ್ನು ಪ್ರವೇಶಿಸಿದ ಜೈನ ಧರ್ಮ ಮತ್ತು ೯ನೇ ಶತಮಾನದ ಕಾಲಕ್ಕೆ ಪ್ರಾರಂಭವಾದ ವೈದಿಕ ಪುನರುತ್ಥಾನದ ಪ್ರಯತ್ನ ಇವುಗಳ ದಾಳಿಯನ್ನು ತಾಳದೆ ಬೌದ್ಧಧರ್ಮ ಕರ್ನಾಟಕದಿಂದ ೧೫ನೇ ಶತಮಾನದ ಹೊತ್ತಿಗೆ ಕಣ್ಮರೆಯಾದಂತೆ ತೋರುತ್ತದೆ.

ತೀರ್ಥಂಕರ ಮಹಾವೀರನಂತೆ ಭಗವಾನ್ ಬುದ್ಧ ಸಹ ಜನರಾಡುವ ಮಾತುಗಳಲ್ಲೇ ಧರ್ಮೋಪದೇಶ ಮಾಡಿದನು. ಬುದ್ಧ ನಿರ್ವಾಣದ ನಂತರ ಅವನ ಉಪದೇಶಗಳನ್ನು ಶಿಷ್ಯರು ಸಂಗ್ರಹಿಸಿ (೧) ವಿನಯ ಪಿಟಕ, (೨) ಸುತ್ತಪಿಟಕ, ಮತ್ತು (೩) ಅಭಿದಮ್ಮ ಪಿಟಕ ಎಂದು ಮೂರು ಗುಂಪುಗಳಲ್ಲಿ ವರ್ಗೀಕರಿಸಿ ಇಟ್ಟಿರುವರು. ಇವು ತ್ರಿಪಿಟಕಗಳೆಂದೇ ಹೆಸರಾಗಿವೆ. ಬುದ್ಧನಿಗೆ ಜೀವಾತ್ಮ, ಪರಮಾತ್ಮ, ಜಗತ್ತು ಇವು ಮಹತ್ವವೆನಿಸಲಿಲ್ಲ. ದುಃಖಮಯವಾದ ಈ ಪ್ರಪಂಚದಿಂದ ಹೇಗೆ ಪಾರಾಗಬೇಕೆಂಬುದೊಂದೇ ಪ್ರಶ್ನೆ ಆತನಿಗೆ ಮುಖ್ಯವಾಗಿತ್ತು. ಶಾಶ್ವತವಾದ ವಸ್ತುವೊಂದೂ ಜಗತ್ತಿನಲ್ಲಿ ಇಲ್ಲ. ಎಲ್ಲವೂ ನಶ್ವರ, ಕ್ಷಣಿಕ. ಪ್ರಾಣಿ ಜೀವಿಸಿದಾಗ ಮಾಡಿದ ಕರ್ಮ ಪುನರ್ಜನ್ಮಕ್ಕೆ ಕಾರಣವಾಗುತ್ತದೆ. ತೃಷ್ಣೆ ಇಲ್ಲದೆ ಮಾಡಿದ ಕರ್ಮ ಫಲವನ್ನು ಕೊಡುವುದಿಲ್ಲ. ಕರ್ಮವನ್ನು, ಅದರಿಂದುಂಟಾದ ದುಃಖವನ್ನು ನೀಗಿದ ಅರಹಂತನು ನಂದಿಹೋದ ದೀಪದಂತೆ ಇರುವನು. ಇದೇ ನಿರ್ವಾಣ. ಬುದ್ಧನಂತೆ ಜೀವಿಸಿರುವಾಗ ನಿರ್ವಾಣವನ್ನು ಪಡೆಯುವದು ಮಾನವನಿಗೆ ಸಾಧ್ಯವಿದೆ.

ಬುದ್ಧನ ನಂತರದ ಬೌದ್ಧ ಪಂಡಿತರು ಬುದ್ಧನ ಉಪದೇಶಗಳನ್ನು ಅನೇಕ ವಿಧವಾಗಿ ವಿಸ್ತರಿಸಿದರು. ಹೀನಯಾನ (ಹಳೆಯ ಮಾರ್ಗ), ಮಹಾಯಾನ (ದೊಡ್ಡ ಮಾರ್ಗ) ಎಂಬ ಎರಡು ಮುಖ್ಯ ಪಂಥಗಳೂ ತಲೆಯೆತ್ತಿದವು. ಶ್ರೀಲಂಕಾ, ಬ್ರಹ್ಮದೇಶ, ಸಯಾಮ ಮೊದಲಾದ ದೇಶಗಳಲ್ಲಿ ಇಂದಿಗೂ ಹೀನಯಾನ ಪಂಥವೇ ಪ್ರಚಾರದಲ್ಲಿದೆ.

ಬೌದ್ಧಧರ್ಮದ ಮೇಲೆ ಹಿಂದೂ ಧರ್ಮದ ಪ್ರಭಾವ ಉಂಟಾದುದರ ಪ್ರತೀಕವೇ ಮಹಾಯಾನ ಎಂದು ಹೇಳಲಾಗುತ್ತಿದೆ. ವೈದಿಕ ದೇವತೆಗಳ ಮಾದರಿಯಲ್ಲಿ ಬೌದ್ಧ ದೇವತೆಗಳ ಉಪಾಸನೆ ಇದರಲ್ಲಿ ಸೇರಿದೆ. ಇದೇ ಮುಂದೆ ಭಾರತದಲ್ಲಿಯ ಬೌದ್ಧ ಧರ್ಮ ವೈದಿಕ ಧರ್ಮದಲ್ಲಿ ವಿಲಯನ ಹೊಂದಲು ಕಾರಣವಾಯಿತೆಂದು ತೋರುತ್ತದೆ.

### ಇಸ್ಲಾಂ ಧರ್ಮ

ಭಾರತದಲ್ಲಿ ಬಿರುಗಾಳಿಯಂತೆ ಬಂದು ಇಲ್ಲಿಯ ಧಾರ್ಮಿಕ ಮಾತ್ರವಲ್ಲದೆ ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರದಲ್ಲೂ ಸಾಕಷ್ಟು ಕೋಲಾಹಲವನ್ನು ಉಂಟುಮಾಡಿದ ಧರ್ಮವೆಂದರೆ ಇಸ್ಲಾಂ. ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡೇ ಈ ನೆಲದ ಮೇಲೆ ಕಾಲಿರಿಸಿದ ಮುಸಲ್ಮಾನರು ಇಂದಿಗೂ ಕೆಲವರ ಕನಸಿನಲ್ಲಿ ಬೆಂಕಿಯ ಉಂಡಿಯಾಗಿಯೇ ಇದ್ದಾರೆ. ೧೪ನೇ ಶತಮಾನದ ಆದಿ ಭಾಗದಲ್ಲಿ ಅಲ್ಲಾಉದ್ದೀನ್ ಖಿಲಜಿ ಮತ್ತು ಅವನ ಸೇನಾಪತಿ ಮಲಿಕ್‌ಕಾಫರ್‌ರು ನಡೆಸಿದ ದಾಳಿಗಳು ಮೊದಲ ಬಾರಿಗೆ ದಕ್ಷಿಣ ಭಾರತಕ್ಕೆ ಮುಸಲ್ಮಾನರ ಮುಖವನ್ನು ತೋರಿರಿಸಿದವು. ಮುಂದೆ ಸ್ವಲ್ಪವೇ ದಿನಗಳಲ್ಲಿ ಸ್ಥಾಪಿತವಾದ ಬಹಮನಿ ರಾಜ್ಯ ಮತ್ತು ಕ್ರಮೇಣ ಅವರ ಪ್ರಭುತ್ವವನ್ನು ಕಿತ್ತೊಗೆದು ತಲೆಯತ್ತಿದ್ದ ಹೈದರ್ ಮತ್ತು ಟಿಪ್ಪು ಅವರ ಆಡಳಿತ ಕರ್ನಾಟಕದಲ್ಲಿ ಮುಸಲ್ಮಾನ ಧರ್ಮ ಕಲೆ ಸಂಸ್ಕೃತಿ ಇತ್ಯಾದಿಗಳು ನೆಲೆಗೊಳ್ಳುವದಕ್ಕೆ ಕಾರಣವಾದವು. ಈ ಅವಧಿಯಲ್ಲಿ ಮುಸಲ್ಮಾನ ದೊರೆಗಳು ಹಿಂದುಗಳನ್ನೂ, ಹಿಂದು ಅರಸರು ಮುಸಲ್ಮಾನರನ್ನು ಸಹನೆ ಮತ್ತು ಸಹಕಾರ ಮನೋಭಾವದಿಂದ ನೋಡಿದ, ನಡೆಸಿಕೊಂಡ ಸಂದರ್ಭಗಳು ಅನೇಕ. ಅದರ ಪರಿಣಾಮವಾಗಿ ಎರಡೂ ಧರ್ಮಗಳು ಪರಸ್ಪರ ಪ್ರಭಾವಕ್ಕೊಳಗಾದವು. ಶಿಲ್ಪ ಸಂಸ್ಕೃತಿಗಳೂ ಮಿಶ್ರಣಗೊಂಡವು. ಅನೇಕ ಕಡೆಗಳಲ್ಲಿ ಸ್ಥಳೀಯ ನಡವಳಿಕೆಗಳೂ, ಹಬ್ಬ ಹರಿದಿನಗಳೂ ಜಾತ್ರೆ ಉತ್ಸವಗಳೂ ಸಮ್ಮಿಶ್ರಸ್ವರೂಪವನ್ನು ಪಡೆದವು. ಇಂದು ಕರ್ನಾಟಕದಲ್ಲಿ ಹಿಂದೂಗಳನ್ನು ಬಿಟ್ಟರೆ ಮುಸಲ್ಮಾನರೇ ಅತಿ ಹೆಚ್ಚು ಸಂಖ್ಯೆಯವರೆಂದು ಹೇಳಬಹುದು. ಮುಸಲ್ಮಾನರ ವಸತಿ ಮತ್ತು ಅವರ ಪೂಜಾಸ್ಥಾನವಾದ ಮಸೀದಿಗಳಿಲ್ಲದ ಹಳ್ಳಿಗಳೇ ಇಲ್ಲವೆಂದರೂ ಅತಿಶಯೋಕ್ತಿಯಲ್ಲ.

ಇಸ್ಲಾಂ ಧರ್ಮಸ್ಥಾಪಕ ಮಹಮ್ಮದ್ ಪೈಗಂಬರ್ ಹುಟ್ಟಿದ್ದು ಅರಬಸ್ಥಾನದಲ್ಲಿ. ಏಳನೇ ಶತಮಾನದಲ್ಲಿ ಅಲ್ಲಿ ರೂಢಿಯಲ್ಲಿದ್ದ ಕಾಡು ಪದ್ಧತಿಗಳನ್ನೂ ವಿವಿಧ ಪಂಗಡಗಳನ್ನೂ ಒಟ್ಟುಗೂಡಿಸಿ ಮಹಮ್ಮದ ಪೈಗಂಬರ್‌ರು ಹೊಸ ಧರ್ಮಾಚರಣೆಯನ್ನು ನೀಡಿದರು. ಪ್ರಾರಂಭಕ್ಕೆ ಅಲ್ಲಿಯ ಜನರು ಈ ಹೊಸಧರ್ಮಕ್ಕೆ ಮತ್ತು ಪ್ರಚಾರಕರಿಗೆ ಸಾಕಷ್ಟು ತೊಂದರೆಗಳನ್ನು ಕೊಟ್ಟರೂ ಮಹಮ್ಮದರು ಅವುಗಳನ್ನೆಲ್ಲಾ ಯಶಸ್ವಿಯಾಗಿ ಎದುರಿಸಿ ತಮ್ಮ ಧರ್ಮವನ್ನು ಬೆಳೆಸಿದರು. ಇಸ್ಲಾಂ ಏಕೇಶ್ವರೀ ಪಂಥ. ದೇವರು ಒಬ್ಬನೇ. ಅವನ ಹೆಸರು ಅಲ್ಲಾ. ಹಜರತ್ ಮಹಮ್ಮದರು ದೇವರ ಅಜ್ಞೆಗಳನ್ನು ಭೂಮಿಯಲ್ಲಿ ಸಾರಿದರು. ಕುರಾನ್ ಎಂಬುದು ಇಸ್ಲಾಂ ಧರ್ಮದ ಪವಿತ್ರ ಗ್ರಂಥ. ಇದನ್ನು ಸಾಕ್ಷಾತ್ ದೇವರ ವಾಕ್ಯವೆಂದು ಮುಸಲ್ಮಾನರು ನಂಬುತ್ತಾರೆ. ಮೂರ್ತಿ ಪೂಜೆಯಾಗಲೀ, ಮನುಷ್ಯರನ್ನು ದೇವರೆಂದು ಭಾವಿಸುವದಾಗಲೀ ನಿಷೇಧಿಸಲ್ಪಟ್ಟಿದೆ. ಮುಸಲ್ಮಾನರು ಪುನರ್ಜನ್ಮವನ್ನು ಒಪ್ಪುವುದಿಲ್ಲ. ಇಲ್ಲಿ ಮರಣ ಹೊಂದಿದವರು ಕಡೆಯ ದಿವಸ ನ್ಯಾಯ ನಿರ್ಣಯ ಆಗುವವರೆಗೆ ತಮ್ಮ ಕರ್ಮ ಫಲಗಳಿಗೆ ಅನುಸರಿಸಿ ಉಂಟಾದ ಸ್ಥಿತಿಯಲ್ಲಿ ಇರುವರು. ಪ್ರಾರ್ಥನೆ, ಉಪವಾಸ, ದಾನ, ತೀರ್ಥಯಾತ್ರೆ, ಪರಸ್ಪರ ಬಾಂಧವ್ಯ, ತಾಯ್ತಂದೆಗಳಲ್ಲಿ ಗೌರವ, ಮೊದಲಾದವುಗಳ ಆಚರಣೆಗೆ ಈ ಧರ್ಮದಲ್ಲಿ ಪ್ರಾಶಸ್ತ್ಯ ಇದೆ. ಇಸ್ಲಾಂ ಇದರ ಅರ್ಥವೇ ಶಾಂತಿ.

### ಕ್ರೈಸ್ತ ಧರ್ಮ

ಜಗತ್ತಿನಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ಅನುಯಾಯಿಗಳನ್ನು ಹೊಂದಿರುವ ಧರ್ಮ ಕ್ರೈಸ್ತ ಧರ್ಮ, ಅಥವಾ ಕ್ರಿಶ್ಚನ್ ಧರ್ಮ. ಕ್ರೈಸ್ತರ ಒಂದು ಸಂಪ್ರದಾಯದಂತೆ ಯೇಸುವಿನ ಹನ್ನೆರಡು ಜನ ಶಿಷ್ಯರಲ್ಲಿ ಒಬ್ಬನಾದ ಸಂತ ಥಾಮಸನು ಕ್ರಿ.ಶ. ೫೨ ರಲ್ಲೇ ಭಾರತಕ್ಕೆ ಬಂದು ಮಲಬಾರ್ ಕರಾವಳಿಯಲ್ಲಿ ಚರ್ಚುಗಳನ್ನು ಸ್ಥಾಪಿಸಿದನು. ೧೫ ಮತ್ತು ೧೬ನೇ ಶತಮಾನದಲ್ಲಿ ಪೋರ್ಚುಗೀಸರು, ಡಚ್ಚರು, ಇಂಗ್ಲೀಷರು ಮತ್ತು ಫ್ರೆಂಚರು ಈ ದೇಶದಲ್ಲಿ ವ್ಯಾಪಾರಕ್ಕೆಂದು ಬಂದು ರಾಜಕೀಯದಲ್ಲಿ ಚಂಚು ಪ್ರವೇಶ ಮಾಡತೊಡಗಿದಾಗ ಅಲ್ಲಲ್ಲಿ ಕ್ರೈಸ್ತರು ಕಾಣಿಸಿಕೊಂಡರಾದರೂ ಅವರು ಕರ್ನಾಟಕದಲ್ಲಿ ಗಮನಾರ್ಹ ರೀತಿಯಲ್ಲಿ ಕಾಣಿಸಿಕೊಂಡದ್ದು ೧೯ನೇ ಶತಮಾನದ ಆದಿ ಭಾಗದಲ್ಲೇ. ಅವರು ತಮ್ಮ ಮತ ಪ್ರಸಾರಕ್ಕಾಗಿ ಇಲ್ಲಿಯ ಭಾಷೆ ಮತ್ತು ಸಾಹಿತ್ಯಗಳನ್ನು ಅಭ್ಯಸಿಸುವ ಯತ್ನದಲ್ಲಿ ಕನ್ನಡ ಸಾಹಿತ್ಯದ ನವೋದಯಕ್ಕೆ ಶ್ರೀಕಾರ ಹಾಕಿದ್ದನ್ನು ಮರೆಯುವಂತಿಲ್ಲ. ಕಾಲ್ಡವೆಲ್, ಕಿಟೆಲ್, ರೈಸ್, ಝಿಗ್ಲರ್ ಮೊದಲಾದವರು ಕನ್ನಡ ಭಾಷೆಯನ್ನು ಕಲಿತು ಕನ್ನಡಕ್ಕೆ ಸಂಬಂಧಿಸಿದ ಅಪೂರ್ವ ಗ್ರಂಥಗಳನ್ನು ಬರೆದು ಬಹಳ ಉಪಕಾರ ಮಾಡಿದ್ದಾರೆ. ಮಲಬಾರ್ ಮತ್ತು ಗೋವೆಗಳ ನಡುವಿನ ಕರಾವಳಿ ಪಟ್ಟಿಯಲ್ಲಿಯೇ ಇಂದಿಗೂ ಕ್ರಿಶ್ಚಿಯನರ ವಸತಿ ವಿಶೇಷವಾಗಿದೆ.

ಪೆಲೆಸ್ಟೈನಿನ ಬೆತ್ಲೆಹೇಮಿನಲ್ಲಿ ಮೇರಿ ಎಂಬುವಳ ಕನ್ಯಾಪುತ್ರನಾಗಿ ಜನಿಸಿದ ಯೇಸು ಕೇವಲ ದಯಾಂತಃಕರಣಗಳ ಜೀವನ ನಡೆಸಿದನು. ಅದೇ ಮಾತುಗಳನ್ನೇ ಉಪದೇಶಿಸಿದನು. ಈ ಭೂಮಿಯ ಮೇಲೆ ದೇವರ ರಾಜ್ಯ ಬರಲಿದೆಯೆಂದು ಹೇಳಿದ್ದನ್ನೇ ಅವನ ದೊಡ್ಡ ಅಪರಾಧವೆಂದು ನಿರ್ಣಯಿಸಿ ಅಲ್ಲಿಯ ಆಳರಸರು ಆತನನ್ನು ಶಿಲುಬೆಗೇರಿಸಿ ಕೊಂದರು. ಆದರೂ ಆತನು ಕೊನೆಯ ಗಳಿಗೆಯಲ್ಲಿ "ದೇವರೇ ಅವರಿಗೆ ತಾವೇನು ಮಾಡುತ್ತಿದ್ದೇವೆಂಬುದರ ಅರಿವು ಇಲ್ಲ. ಅವರನ್ನು ಕ್ಷಮಿಸು" ಎಂದು ಹೇಳಿದನಂತೆ. ಶಿಲುಬೆಗೇರಿಸಿದ ನಂತರ ಮೂರನೇ ದಿವಸ ಆತನು ಬೇರೆಡೆಯಲ್ಲಿ ತನ್ನ ಶಿಷ್ಯರಿಗೆ ಕಾಣಿಸಿಕೊಂಡು ಕೊನೆಯ ಸಂದೇಶವನ್ನು ಹೇಳಿದನೆಂಬುದಕ್ಕೆ ಯೇಸುವಿನ ಪುನರುತ್ಥಾನ ಎಂದು ಕರೆದು ಕ್ರೈಸ್ತಧರ್ಮದಲ್ಲಿ ಬಹಳ ಮಹತ್ವ ಕೊಡಲಾಗುತ್ತಿದೆ. ಯೇಸು ಮರಣ ಹೊಂದಿದ ದಿನದಿಂದ ಆತನ ಶಿಷ್ಯರು ವರ್ಷಗಳನ್ನೆಣಿಸಲು ಆರಂಭಿಸಿದ್ದೇ ಕ್ರಿಸ್ತಶಕ.

ಬೈಬಲ್ ಎಂಬುದು ಕ್ರೈಸ್ತ ಧರ್ಮೀಯರ ಪವಿತ್ರ ಗ್ರಂಥ. ಅದು ಯೇಸುವಿನ ಉಪದೇಶಗಳನ್ನು ಒಳಗೊಂಡಿದೆ. ಕ್ರೈಸ್ತರು ದೇವರು, ದೇವರ ಮಗ, ಪವಿತ್ರಾತ್ಮ ಎಂದು ಮೂವರನ್ನು ನಂಬುವರು. ಸೃಷ್ಟಿಗೆ ದೇವರ ಪ್ರೇಮವೇ ಕಾರಣ. ತನ್ನಲ್ಲಿರುವ ಪರಿಪೂರ್ಣತೆಯನ್ನು ತಾನು ಮಾಡಿದ ಸೃಷ್ಟಿಯಲ್ಲಿ ಉಂಟುಮಾಡುವದು ಅವನ ಉದ್ದೇಶ. ಕ್ರೈಸ್ತ ಧರ್ಮದಲ್ಲಿ ಭಕ್ತಿ ಮತ್ತು ನೈತಿಕ ಆಚರಣೆಗಳಿಗೆ ಬಹಳ ಮಹತ್ವ. ಆತ್ಮ ಅಮರ, ಈರ್ಷ್ಯೆ, ಅಸೂಯೆ, ನಿಂದೆ, ಅಹಮ್ಮನ್ಯತೆ ಮೊದಲಾದವು ಪಾಪಕೃತಿಗಳು. ಪಾಪದಿಂದ ದೂರ ಇದ್ದವನು ದೇವರಿಗೆ ಪ್ರಿಯನಾಗಿರುವನು. ಮನುಷ್ಯನು ಎಂಥ ಪಾಪ ಮಾಡಿದರೂ ದೇವರು ಕರುಣಿಸಿ ಕ್ಷಮಿಸಬಲ್ಲನು. ಆದ್ದ

ರಿಂದ ಕ್ರೈಸ್ತ ಮತಾನುಯಾಯಿಗಳಲ್ಲಿ ತಪ್ಪೊಪ್ಪಿಗೆಗೆ ಮಹತ್ವದ ಸ್ಥಾನವಿದೆ.

ಸಿಖ್ ಪಂಥವೊಂದು ಮಾತ್ರ ಕರ್ನಾಟಕದಲ್ಲಿ ಕಾಲಿರಿಸಿದಂತಿಲ್ಲ. ಅದರ ಅನುಯಾಯಿಗಳು ಅಲ್ಲಲ್ಲಿ ಎಂದಿನಿಂದಲೂ ಕಾಣಸಿಗುತ್ತಾರೆ. ಆದರೆ ಅವರು ಇಲ್ಲಿ ಧರ್ಮ ಪ್ರಸಾರ ಕಾರ್ಯ ಕೈಗೊಂಡಿಲ್ಲ.

ಇಪ್ಪತ್ತನೇ ಶತಮಾನದ ಆದಿಯಲ್ಲಿ ತಲೆಯೆತ್ತಿದ ಬ್ರಹ್ಮೋಸಮಾಜ, ಆರ್ಯಸಮಾಜ ಮೊದಲಾದವುಗಳೂ ಕರ್ನಾಟಕದಲ್ಲಿ ಕಾಲಿರಿಸಿವೆ. ಆದರೆ ಅವು ಬದಲಾದ ಪರಿಸ್ಥಿತಿಯಲ್ಲಿ ಹಿಂದಿನಂಥ ಧರ್ಮ ಪಂಥಗಳ ಸ್ವರೂಪ ಪಡೆಯದೆ ಹೋದವು. ಅರವಿಂದ ಮಹರ್ಷಿಗಳ 'ಪೂರ್ಣಯೋಗ'ವೂ ಹಿಂದಿನ ಕಾಲದಲ್ಲಾಗಿದ್ದರೆ ಒಂದು ಪ್ರತ್ಯೇಕ ಮತವೆಂದೇ ನೆಲೆಗೊಳ್ಳುತ್ತಿತ್ತೋ ಏನೋ.

ಕರ್ನಾಟಕವು ಕಾಲಮಾನ ಪರಿಸ್ಥಿತಿಗೆ ತಕ್ಕಂತೆ ಎಲ್ಲ ವಿಚಾರ ಪ್ರಣಾಲಿಗಳಿಗೂ ಮತ ಸಿದ್ಧಾಂತಗಳಿಗೂ ಅವಕಾಶ ಆಸರೆಗಳನ್ನು ನೀಡಿದೆ. ಅವುಗಳಿಗೆ ತನ್ನ ನೆಲ ನೀರುಗಳ ಶಕ್ತಿಯನ್ನು ನೀಡಿದೆ. ಅವುಗಳಿಂದ ತನ್ನ ಜನ ಜೀವನವನ್ನು ಸಮೃದ್ಧಗೊಳಿಸಿಕೊಂಡಿದೆ.

# ಕರ್ನಾಟಕದಲ್ಲಿ ಬೌದ್ಧಧರ್ಮ

ಎಚ್. ವಿ. ಶ್ರೀರಂಗರಾಜು

ಕಪಿಲವಸ್ತು ಅರಮನೆಯನ್ನು ತೊರೆದ ಮೇಲೆ ಸಿದ್ಧಾರ್ಥ ರಾಜಕುಮಾರ ಏಳು ವರ್ಷಗಳ ನಿರಂತರ ಸಾಧನೆಯಿಂದ ಗಯಾ ಪಟ್ಟಣದ ಹತ್ತಿರ ಬೋಧಿಯನ್ನು ಪಡೆದ. ಬುದ್ಧನಾದ ಎರಡು ತಿಂಗಳಾದ ಮೇಲೆ ವಾರಣಾಸಿಯ ಹತ್ತಿರದ ಸಾರಾನಾಥದಲ್ಲಿ ತನ್ನ ಮೊದಲನೆಯ ಪ್ರವಚನವನ್ನು ಮಾಡಿದ. ಸಾರಾನಾಥದ ಪಂಚವರ್ಗೀಯ ಭಿಕ್ಷುಗಳಿಗೆ ಮಾಡಿದ ಪ್ರವಚನವು "ಧಮ್ಮಚಕ್ಕಪವತ್ತನ ಸುತ್ತ" ಎಂದು ಪ್ರಸಿದ್ಧವಾಗಿದೆ. ಮುಂದೆ ಬುದ್ಧನಿಂದ ಆದ ಎಲ್ಲ ಪ್ರವಚನಗಳಿಗೂ ಆತನ ನಂತರ ಬೆಳೆದ ವಿಪುಲವಾದ ಪಾಲಿ ಸಾಹಿತ್ಯಕ್ಕೂ ಧಮ್ಮಚಕ್ಕ ಪವತ್ತನ ಸುತ್ತವೇ ಆಧಾರವಾಗಿದೆ. ಸಾರನಾಥದ ಪ್ರವಚನ ಆದ ಮೇಲೆ ಸುಮಾರು ನಲವತ್ತೈದು ವರ್ಷಗಳ ವರೆಗೆ ಬುದ್ಧ ಕಾಲ್ನಡಿಗೆಯಲ್ಲೇ ಗ್ರಾಮಗಳಿಗೆ, ಪಟ್ಟಣಗಳಿಗೆ, ನಗರಗಳಿಗೆ ಹೋಗಿ ಅರಮನೆಗಳಲ್ಲಿ, ಅಗ್ರಹಾರಗಳಲ್ಲಿ, ಗುಡಿಸಲುಗಳಲ್ಲಿ ಆದಿಯಲ್ಲೂ, ಮಧ್ಯದಲ್ಲೂ, ಅಂತ್ಯದಲ್ಲೂ ಕಲ್ಯಾಣವನ್ನುಂಟುಮಾಡುವ ಧರ್ಮವನ್ನು ಬೋಧಿಸಿದ. ಬುದ್ಧನಂತೆಯೇ ಆತ ಕಟ್ಟಿದ ಸಂಘದ ಪ್ರತಿಯೊಬ್ಬ ಭಿಕ್ಷುವೂ ಧರ್ಮವನ್ನು ಬೇರೆ ಬೇರೆ ಜನಪದಗಳಲ್ಲಿ ಬಿತ್ತರಿಸಿದರು. ರಾಜ ಮಹಾರಾಜರಿಂದ ಹಿಡಿದು ಕಸಗುಡಿಸುವ ಜಲಗಾರನ ವರೆಗೆ ಈ ಸಂದೇಶ ಮುಟ್ಟಿತು. ಇಷ್ಟಾದರೂ, ಬುದ್ಧನ ಕಾಲದಲ್ಲಿ ಧರ್ಮವು ಮಗಧ, ಕೋಸಲ ರಾಜ್ಯಗಳನ್ನೂ ಲಿಚ್ಛವಿ, ವಜ್ಜಿ, ಶಾಕ್ಯ ಮುಂತಾದ ಜನಪದಗಳನ್ನೂ ದಾಟಿರಲಿಲ್ಲ. ಅಂದರೆ, ಇಂದಿನ ಬಿಹಾರದ ಪಶ್ಚಿಮ ಭಾಗ, ಉತ್ತರ ಪ್ರದೇಶದ ಪೂರ್ವ, ಉತ್ತರ ಭಾಗಗಳು ನೇಪಾಲದ ಭಾಗ ಇವುಗಳಲ್ಲಿ ಮಾತ್ರ ಬುದ್ಧ ಧರ್ಮ ಪ್ರಚಾರದಲ್ಲಿತ್ತು.

ಧಮ್ಮಚಕ್ಕ ಪವತ್ತನ ಸುತ್ತವು ಧರ್ಮದ ತಿರುಳಾದ ಚತ್ತಾರಿ ಅರಿಯ ಸಚ್ಚಗಳನ್ನು, ನಾಲ್ಕು ಆರ್ಯಸತ್ಯಗಳನ್ನು ಒಳಗೊಂಡಿದೆ. ಈ ಸತ್ಯಗಳ ಪ್ರಕಾರ, ಇರವಿನಲ್ಲಿ ದುಃಖವಿದೆ. ಈ ದುಃಖಕ್ಕೆ ಜೀವಿಯೇ ಕಾರಣ. ಇರವಿನಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿರುವ ದುಃಖವನ್ನು ನಿರೋಧಿಸುವುದು ಸಾಧ್ಯ ಮತ್ತು ಅರಿಯ ಅಟ್ಠಂಗ ಮಗ್ಗ ಅಥವಾ ಆರ್ಯ ಅಷ್ಟಾಂಗ ಮಾರ್ಗದ ಮೂಲಕ ಮಾತ್ರ ದುಃಖ ನಿರೋಧ ಸಾಧ್ಯ. ನಾಲ್ಕು ಆರ್ಯ ಸತ್ಯಗಳ ವಿವರಣೆ ಅನೇಕಾನೇಕ ಸುತ್ತಗಳಲ್ಲಿ ಬರುತ್ತವೆ. ಇವೆಲ್ಲ ತಿಪಿಟಕಗಳಲ್ಲಿವೆ. ತಿಪಿಟಕಗಳಿರುವುದೆಲ್ಲವೂ ಬುದ್ಧನಿಂದಲೇ ಆಗಿವೆಯೆಂದು ಶ್ರದ್ಧಾವಂತರು ನಂಬಿದ್ದಾರೆ. ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಜನರಿಗೆ ಮಾಡಿದ ಬೋಧನೆ ಉಪದೇಶಗಳೇ ಈ ವಿವರಣೆಯಾಗಿವೆ. ಈ ಸುತ್ತಗಳ ಪ್ರಕಾರ ಅರಿಯ ಅಟ್ಠಾಂಗ ಮಗ್ಗದಲ್ಲಿರುವ ಎಂಟು ಅಂಶಗಳನ್ನು ಮೂರು ಗುಂಪುಗಳನ್ನಾಗಿ ಮಾಡಬಹುದು. ಶೀಲ, ಸಮಾಧಿ ಮತ್ತು ಪ್ರಜ್ಞೆ– ಇವೇ ಆ ಮೂರು ಗುಂಪುಗಳು. 'ಶೀಲ'ವೆಂದರೆ ಪ್ರತಿಯೊಬ್ಬನೂ ತನ್ನ ಜೀವನದಲ್ಲಿ ತೃಪ್ತಿ ಸಮಾಧಾನಗಳನ್ನು ಪಡೆದು ಬೇರೆಯವರಿಗೆ ಹಿತವನ್ನುಂಟುಮಾಡಲು ತನ್ನ ಜೀವನದಲ್ಲಿ ಅನುಸರಿಸಬೇಕಾದ ಕ್ರಮ. ಸಮಾಧಿ ಪ್ರಜ್ಞೆಗಳಿಂದ ಪರಮ ಸತ್ಯವನ್ನು ಅರಿತು ದುಃಖ ಸಾಗರವನ್ನು ದಾಟಿ ನಿಬ್ಬಾಣವನ್ನು ಸೇರಬಹುದು. ಪ್ರಜ್ಞೆಯಿಂದ ಇರವಿನ ನಿಜವಾದ ಅರ್ಥವನ್ನು ಗ್ರಹಿಸಲು ಸಾಧ್ಯ. ಇರವು ಮೂರು ಲಕ್ಷಣಗಳಿಂದ ಕೂಡಿದೆ. ದುಃಖ, ಅನಿಚ್ಚ (ಅನಿತ್ಯ) ಮತ್ತು ಅನತ್ತಾ (ಅನಾತ್ಮ)– ಇವೇ ಮೂರು ಲಕ್ಷಣಗಳು. ಜೀವಿಯೊಂದು ಅನುಭವಿಸುವ ನೋವು, ಅತೃಪ್ತಿ, ತಳಮಳ, ರೋಗ, ಜರೆ, ಮರಣ ಮುಂತಾದುವೆಲ್ಲ ದುಃಖದ ಪ್ರಕಾರಗಳು. ಯಾವುದನ್ನು ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೋ ಅದೆಲ್ಲವೂ ದುಃಖವೇ. ದುಃಖವಿಲ್ಲದೆ ಇರವಿಲ್ಲದಿರುವುದು ಸಾಧ್ಯವೇ ಇಲ್ಲ. ಇದರಂತೆಯೇ ಅನಿಚ್ಚ ಅನತ್ತಾಗಳೂ ಇರವಿನ ಲಕ್ಷಣಗಳಿವೆ. ಇರವಿನಲ್ಲಿ ಪರಿಣಾಮ ಹೊಂದುತ್ತಿರುವ ಮತ್ತು ಅನಿತ್ಯವಾಗಿರುವ ಈ ಇರವಿನಲ್ಲಿ ಗಟ್ಟಿಯಾದುದು ಯಾವುದು ಇಲ್ಲ. ಎಲ್ಲವೂ ಬರೀ ಟೊಳ್ಳು, ಬರಿದೋ ಬರಿದು. ಈ ಗುಣವೇ ಅನತ್ತಾ. ಇರವಿನ ಈ ಲಕ್ಷಣಗಳನ್ನು ಧ್ಯಾನದ ಮೂಲಕ ಯಾವನು ಸಂಪೂರ್ಣ ಅರ್ಥಮಾಡಿಕೊಳ್ಳುತ್ತಾನೋ ಅವನು ಅರಹಂತನಾಗುತ್ತಾನೆ. ಎಲ್ಲ ಬಂಧನಗಳಿಂದ ಬಿಡುಗಡೆ ಹೊಂದುತ್ತಾನೆ. ಅವನಿಗೆ ಜನನ ಮರಣವಿಲ್ಲ, ದುಃಖವಿಲ್ಲ. ಅನುಭವವೇದ್ಯ ಮಾತ್ರವಾದ ನಿಬ್ಬಾಣವನ್ನು ಅವನು ಪಡೆಯುತ್ತಾನೆ.

ಪಾಲಿ ಸಾಹಿತ್ಯದಲ್ಲಿ ಅನತ್ತಾಕ್ಕೆ ಪರ್ಯಾಯವಾಗಿ 'ಸುಞ್ಞ' ಎಂಬ ಪದವು ಬರುತ್ತದೆ. ಲೋಕ ಮತ್ತು ಆತ್ಮವೂ ಶೂನ್ಯವೇ. ಅದೇ ಪರಮ ಸತ್ಯ. ಸುತ್ತಪಿಟಕದ ಬಿಂದು ಒಂದು ಸೂತ್ರದಂತೆ. "ಸುಞ್ಞಂ ಅತ್ತೇನ ವಾ ಅತ್ತನಿಯೇನ" ಆತ್ಮವಾಗಲೀ ಅಥವಾ ಅದಕ್ಕೆ ಸಂಬಂಧಿಸಿದುದಾಗಲೀ ಶೂನ್ಯವೇ ಆಗಿದೆ. ಅರಹಂತನಾದವನು ಈ ಪರಮ ಸತ್ಯವನ್ನು ಸಾಕ್ಷಾತ್ಕಾರ ಮಾಡಿಕೊಂಡಿರುತ್ತಾನೆ. ಬುದ್ಧನ ಪ್ರವಚನಗಳಿರುವ ಪಾಲಿ ತಿಪಿಟಕಗಳೇ ಬುದ್ಧ ಧರ್ಮದ ಅತಿ ಪುರಾತನ ಗ್ರಂಥಗಳು. ಈ ಪಾಲಿ ಸಾಹಿತ್ಯದಲ್ಲಿರುವ ಬೋಧನೆಯು "ಥೇರವಾದ" ಎಂದು ಪ್ರಸಿದ್ಧವಾಗಿದೆ.

## ಅಶೋಕ ಮತ್ತು ಧರ್ಮ ಪ್ರಸಾರ

ಭಾರತದ ಕೇವಲ ಈಶಾನ್ಯ ಭಾಗದಲ್ಲಿ ಮಾತ್ರ ಪ್ರಚುರದಲ್ಲಿದ್ದ ಧರ್ಮವು ಭಾರತದ ಬೇರೆ ಬೇರೆ ಭಾಗಗಳಲ್ಲಿಯೂ ಪ್ರಸರಿಸುವಂತೆ ಮಾಡಿದವನು ಅಶೋಕ ಚಕ್ರವರ್ತಿ. ಕಳಿಂಗ ದೇಶದ ಮೇಲೆ ಅತ್ಯದ್ಭುತ ಜಯವನ್ನು ಸಾಧಿಸಿದ ಈ ಮಹಾಶೂರ ಯುದ್ಧದಲ್ಲಿ ಅಡಗಿರುವ ಹಿಂಸೆ, ಸಾವು, ಸಂಕಟಗಳನ್ನು ನೋಡಿ ಮನನೊಂದ. "ಧರ್ಮ" ಜೀವನವನ್ನು ನಡೆಸಿದರೆ ಮಾತ್ರ ತಾನು ಕಳವಳದಿಂದ ಪಾರಾಗಬಲ್ಲನೆಂಬುದನ್ನು ಅರಿತುಕೊಂಡ. ದಂಡವನ್ನು ಕೆಳಗಿರಿಸಿ ಧರ್ಮ ಚಕ್ರವರ್ತಿಯಾದ. ತನ್ನ ರಾಜ್ಯದ ಮತ್ತು ಪ್ರಪಂಚದ ಜನ ಶಾಂತಿಯನ್ನು ಕಾಣಬೇಕಾದರೆ ಸುಖದಿಂದಿರಬೇಕಾದರೆ ಅವರು ತನ್ನಂತೆಯೇ ಧಾರ್ಮಿಕ ಜೀವನವನ್ನು ನಡೆಸಿದರೆ ಮಾತ್ರ ಸಾಧ್ಯ ಎಂಬುದು ಅವನಿಗೆ ಖಚಿತವಾಯಿತು. ಆದುದರಿಂದ ತನ್ನ ಆಧಿಪತ್ಯದ ಎಲ್ಲ ಜನರೂ ಸುಖವಾಗಿರಬೇಕೆಂಬ ಉದ್ದೇಶದಿಂದ ತಾನು ಪಾಲಿಸುತ್ತಿದ್ದ ಧರ್ಮವು ಬೇರೆ ಕಡೆ ಹರಡಲು ಎಲ್ಲ ಕಾರ್ಯಕ್ರಮಗಳನ್ನು ತೆಗೆದುಕೊಂಡ. ಅಶೋಕ ಚಕ್ರವರ್ತಿ ಮಾಡಿದ ಧರ್ಮ ಪ್ರಸಾರ ಕಾರ್ಯ ಅವನೇ ಬರೆಸಿದ ಶಾಸನಗಳಿಂದಲೂ, ಮುಂದೆ ರಚಿತವಾದ ಸಾಹಿತ್ಯದಿಂದಲೂ ವ್ಯಕ್ತವಾಗುತ್ತದೆ. ಅಶೋಕ ಚಕ್ರವರ್ತಿಯ ಶಾಸನಗಳೆಲ್ಲಾ ಪ್ರಾಕೃತ ಭಾಷೆಯಲ್ಲಿವೆ. ತಿಪಿಟಕದ ಪಾಲಿಯನ್ನು ಬಹುಮಟ್ಟಿಗೆ ಹೋಲುತ್ತದೆ. 'ಮಹಾವಂತ' ಮತ್ತು 'ದೀಪವಂತ' ಎಂಬ ಸಿಂಹಳದಲ್ಲಿ ರಚಿತವಾದ ಪಾಲಿ ಗ್ರಂಥದಲ್ಲಿಯೂ ಅಶೋಕ ಚಕ್ರವರ್ತಿ ಮಾಡಿದ ಧರ್ಮ ಪ್ರಸಾರ ಕಾರ್ಯದ ವಿವರಣೆ ಇದೆ.

ಭಾರತದ ಪ್ರಥಮ ಚಕ್ರವರ್ತಿಯಾದ ಅಶೋಕ ತನ್ನ ಚಕ್ರಾಧಿಪತ್ಯದ ಎಲ್ಲ ಭಾಗಗಳಿಗೂ ಸಮರ್ಥರಾದ ಮತ್ತು ನಿಷ್ಠರಾದ ಧರ್ಮ ಪ್ರಚಾರಕರನ್ನು ಕಳಿಸಿದ. ಸಿಂಹಳಕ್ಕೆ ತನ್ನ ಸ್ವಂತ ಮಕ್ಕಳಾದ ಮಹಂದನನ್ನೂ ಮಗಳಾದ ಸಂಗಮಿತ್ರೆಯನ್ನೂ ಕಳಿಸಿದ. ಹೀಗೆ ಧರ್ಮಕ್ಕಾಗಿ ಕೆಲಸ ಮಾಡಿದವರಲ್ಲಿ ಮಹಾದೇವನೂ, ರಕ್ಷಿತನೂ ಇದ್ದರು. ಇವರಿಬ್ಬರೂ ಕರ್ನಾಟಕದಲ್ಲಿ ಕೆಲಸ ಮಾಡಿದರು. ಮಹಾದೇವನು ಮಹಿಷಮಂಡಲದಲ್ಲಿಯೂ, ರಕ್ಷಿತ ಅಥವಾ ರಕ್ಷಿತನು ಬನವಾಸಿಯಲ್ಲೂ ಧರ್ಮಪ್ರಸಾರ ಕಾರ್ಯ ಮಾಡಿದರು. ಮಹಿಷ ಮಂಡಲವೆಂದರೆ ಹೆಚ್ಚು ಕಡಿಮೆ ಹಳೇ ಮೈಸೂರು ಭಾಗ. ಬನವಾಸಿ ಕನ್ನಡ ನಾಡಿನ ಮಲೆನಾಡಿನ ಭಾಗ. ರಕ್ಷಿತನು ಗ್ರೀಕ್ ದೇಶದವನು. ಮಹಾದೇವನು ಕರ್ನಾಟಕದವನಿದ್ದರೂ ಇರಬಹುದು. "ಮಹಾವಂಸ"ದಲ್ಲಿ ಇವರಿಬ್ಬರ ಹೆಸರು ಬರುತ್ತದೆ. ಹೀಗೆ ಅಶೋಕ ಚಕ್ರವರ್ತಿಯ ಕಾಲದಲ್ಲಿಯೇ ಬುದ್ಧ ಧರ್ಮ ಕರ್ನಾಟಕವನ್ನು ಪ್ರವೇಶಿಸಿತು.

ರಕ್ಷಿತ ಮತ್ತು ಮಹಾದೇವರು ಕರ್ನಾಟಕದ ನೈರುತ್ಯ ಮತ್ತು ದಕ್ಷಿಣ ಭಾಗಗಳಲ್ಲಿ ಕೆಲಸ ಮಾಡಿದರು; ನಿಜ. ಆದರೆ ಬುದ್ಧ ಧರ್ಮವು ಈ ಭಾಗಗಳಲ್ಲಿ ಮಾತ್ರ ಪ್ರಸಾರದಲ್ಲಿತ್ತು ಎಂದು ಅರ್ಥವಲ್ಲ. ಇದು ಕರ್ನಾಟಕದ ಇತರ ಭಾಗಗಳಲ್ಲಿಯೂ ಪ್ರಸಾರದಲ್ಲಿದ್ದಿತು ಎನ್ನುವುದಕ್ಕೆ ಆಧಾರಗಳಿವೆ. ಕರ್ನಾಟಕದ ಪೂರ್ವ, ಮಧ್ಯ ಭಾಗವಾದ ಬಳ್ಳಾರಿ, ರಾಯಚೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಅಶೋಕನ ಶಾಸನಗಳಿವೆ. ಈ ಶಾಸನಗಳು ಅಶೋಕನ ರಾಜ್ಯದ ವಿಸ್ತಾರವನ್ನೂ, ಅವನು ಪ್ರಸಾರ ಮಾಡಿದ ಧರ್ಮ ಪ್ರಸಾರವನ್ನೂ ಸೂಚಿಸುತ್ತವೆ. ಬಂಡೆಗಳ ಮೇಲೆ ಕೆತ್ತಿರುವ ಈ ಶಾಸನಗಳು ಧರ್ಮದ ಸಾರವು ಜನರ ಮನಸ್ಸಿನಲ್ಲಿ ಬಹುಕಾಲ ನಿಲ್ಲುವಂತೆ ಮಾಡಿದವು. ಬಹು ಜನರು ವಾಸವಾಗಿದ್ದ ಮತ್ತು ಹೋಗಿಬರುತ್ತಿದ್ದ ಮಾರ್ಗಗಳಲ್ಲಿ ಈ ಶಾಸನಗಳಿದ್ದು ಜನರಲ್ಲಿ ಜಾಗೃತಿಯನ್ನುಂಟುಮಾಡುತ್ತಿದ್ದುವು. ಇಷ್ಟೇ ಅಲ್ಲ ಕರ್ನಾಟಕದಲ್ಲಿ ಉತ್ತರ ಭಾಗದಲ್ಲಿಯೂ ದಕ್ಷಿಣ ಭಾಗದಲ್ಲಿಯೂ ಆ ಕಾಲದಲ್ಲಿ ಧರ್ಮ ಪ್ರಸಾರವಾಗಿರಬೇಕು. ಈಗ ಕರ್ನಾಟಕದ ಉತ್ತರದ ಗಡಿಯಾದ ಬಿದರೆಗೆ ಅಷ್ಟೇನೂ ದೂರವಲ್ಲದ ಅಮರಾವತಿಯು ಅಶೋಕನ ಕಾಲದಲ್ಲಿಯೇ ಧರ್ಮಕ್ಕೆ ಪ್ರಸಿದ್ಧ ಕೇಂದ್ರವಾಗಿತ್ತು. ಅಶೋಕನ ರಾಜಧಾನಿಯಿದ್ದ ಪಾಟಲೀಪುತ್ರಕ್ಕೂ ಅವನ ಧಾರ್ಮಿಕ ಪ್ರಭಾವಕ್ಕೆ ಒಳಗಾದ ಸಿಂಹಳಕ್ಕೂ ಹೆಚ್ಚು ಕಡಿಮೆ ಮಧ್ಯದಲ್ಲಿ ಗೋದಾವರಿ, ಕೃಷ್ಣ ನದಿಗಳ ನಡುವಿನ ಪ್ರದೇಶವಿದೆ. ಅಮರಾವತಿಯು ಇರುವುದು ಇಲ್ಲಿಯೇ. ಸಿಂಹಳಕ್ಕೂ ಭಾರತದ ಈ ಪ್ರದೇಶಕ್ಕೂ ಸಮುದ್ರದ ಮೂಲಕ ವ್ಯಾಪಾರ ನಡೆಯುತ್ತಿತ್ತು. ಧರ್ಮಕಾರ್ಯಕ್ಕಾಗಿ ಮಗಧದಿಂದ ಸಿಂಹಳಕ್ಕೆ ಹೋಗಬೇಕಾದವರು ಮತ್ತು ಪುಣ್ಯಕ್ಷೇತ್ರಗಳನ್ನು ನೋಡಲು ಸಿಂಹಳದಿಂದ ಭಾರತಕ್ಕೆ ಬರಬೇಕಾದವರು ಈ ಪ್ರದೇಶದ ಮೂಲಕ ಹಾದು ಹೋಗುತ್ತಿದ್ದರು. ಹೀಗಾಗಿ ಧರ್ಮ ಈ ಭಾಗದಲ್ಲಿ ಸಾಕಷ್ಟು ಪ್ರಭಾವಶಾಲಿಯಾಗಿತ್ತು. ಆದುದರಿಂದ ಈ ಧಾರ್ಮಿಕ ಕೇಂದ್ರಗಳಿಗೆ ತೀರಾ ಹತ್ತಿರದಲ್ಲಿರುವ ಕರ್ನಾಟಕದ ಇಂದಿನ ಭಾಗಗಳಾದ ಗುಲ್ಬರ್ಗ ಮತ್ತು ಬಿದರೆ ಜಿಲ್ಲೆಯ ಭಾಗಗಳಲ್ಲೂ ಬುದ್ಧ ಧರ್ಮಪ್ರಸಾರದಲ್ಲಿತ್ತು. ಇತ್ತೀಚೆಗೆ ನಡೆದಿರುವ ಭೂ ಶೋಧನೆಯ ಪ್ರಕಾರ ಗುಲ್ಬರ್ಗ ಜಿಲ್ಲೆಯ ಚಿತ್ತಾಪುರ ತಾಲೋಕಿನಲ್ಲಿರುವ ಸುನತ್ತ ಎಂಬುದು ಬೌದ್ಧ ಕೇಂದ್ರವಾಗಿತ್ತೆಂದು ಗೊತ್ತಾಗಿದೆ. ಒಟ್ಟಿನಲ್ಲಿ ರಾಯಚೂರು, ಗುಲ್ಬರ್ಗಾ, ಬಿದರೆ, ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಅಶೋಕನ ಕಾಲದಲ್ಲಿ ಬುದ್ಧ ಧರ್ಮ ಪ್ರಚಾರದಲ್ಲಿತ್ತೆಂದು ಖಚಿತವಾಗಿ ಹೇಳಬಹುದು.

ಅಶೋಕ ಚಕ್ರವರ್ತಿಯ ಉದ್ದೇಶ ಜನ ಸಾಮಾನ್ಯರಲ್ಲಿ ಧರ್ಮ ಜಾಗೃತಿಯನ್ನುಂಟುಮಾಡಿ ಅವರು ಸಂತೃಪ್ತಿಯಿಂದ ಜೀವನ ನಡೆಸುವಂತೆ ಮಾಡುವುದಾಗಿತ್ತಷ್ಟೆ. ಆದುದರಿಂದ ಸಾಮಾನ್ಯರಿಗೆ ಅವಶ್ಯಕವಾಗಿ ಬೇಕಾದ ಅಂಶಗಳನ್ನು ಮಾತ್ರ ಆತ ಬಂಡೆಗಳ ಮೇಲೆ ಕೊರೆಯಿಸಿದ. ಧರ್ಮದ "ಶೀಲ" ವರ್ಗವು ದೈನಂದಿನ ಜೀವನಕ್ಕೆ ಅಮೂಲ್ಯವಾದುದೂ, ಅಗತ್ಯವಾದುದೂ ಆಗಿವೆ. ಇತರ ಎರಡು ಗುಂಪುಗಳಾದ ಸಮಾಧಿ ಮತ್ತು ಪ್ರಜ್ಞೆಗಳು ಧರ್ಮಕ್ಕಾಗಿ ಜೀವನವನ್ನು ಮುಡುಪಾಗಿಟ್ಟಿರುವ ಸಾಧಕನಿಗೆ ಉಪಕಾರಿಯಾಗುತ್ತವೆ. ಆದುದರಿಂದ ಶಾಸನಗಳಲ್ಲಿ ಇವೆರಡನ್ನು ಪ್ರಸ್ತಾಪಿಸದಿರುವುದು ಆಶ್ಚರ್ಯವೇನಲ್ಲ. ಕರ್ನಾಟಕದಲ್ಲಿರುವ ಒಂದು ಶಾಸನದ ಭಾಗ ಹೀಗಿದೆ: ತಾಯಿ, ತಂದೆ ಮತ್ತು ಹಿರಿಯರ ಆಜ್ಞೆಯನ್ನು ಪಾಲಿಸಬೇಕು. ಪ್ರಾಣಿಗಳಲ್ಲಿ ದಯೆಯನ್ನು ತೋರಿಸಬೇಕು. ಸತ್ಯ ನುಡಿಯಬೇಕು. ಇಂಥ ಧರ್ಮ ಗುಣಗಳನ್ನು ಆಚರಿಸಬೇಕು. ಅದರಂತೆ ಶಿಷ್ಯನು ಆಚಾರ್ಯರಿಗೆ ಗೌರವವನ್ನು ತೋರಿಸಬೇಕು. ಮತ್ತು ಆಪ್ತೇಷ್ಟರೊಡನೆ ಯೋಗ್ಯ ರೀತಿಯಿಂದ ನಡೆದುಕೊಳ್ಳಬೇಕು. ಇದು ಪುರಾತನ ನಿಯಮವಿದ್ದು ದೀರ್ಘಾಯುಷ್ಯ ಪಡೆಯಲು ಸಹಕಾರಿಯಾಗಿದೆ. ಎಲ್ಲರೂ ನಡೆದುಕೊಳ್ಳಬೇಕಾದ ರೀತಿಯಿದು.

ದೀಘನಿಕಾಯದ 'ಸಿಗಲೋಲಾದ ಸುತ್ತ'ದ ಸಾರವೇ ಈ ಶಾಸನದಲ್ಲಿ ಬಂದಿದೆ. ಬಾಳಿನಲ್ಲಿ ನೆಮ್ಮದಿ ಪಡೆಯಬೇಕಾದರೆ ಗೃಹಸ್ಥನಾದವನು ತನ್ನವರೊಂದಿಗೆ ಸಾಮರಸ್ಯದಿಂದಿರಬೇಕು ಎಂಬುದನ್ನು ಒತ್ತಿ ಹೇಳುತ್ತದೆ ಈ ಶಾಸನ.

ಕೆಲವು ಶಾಸನಗಳಲ್ಲಿ ಅಶೋಕನು ಪರಮತಗಳಲ್ಲಿಟ್ಟಿದ್ದ ಭಕ್ತಿ-ಗೌರವಗಳ ಉಲ್ಲೇಖವಿದೆ. ಆತ್ಮಮತ

ಪ್ರಶಂಸೆ ಮತ್ತು ಪರಮತ ದೂಷಣೆ ಎರಡೂ ಅಕುಶಲವಾದವು ಎಂಬುದನ್ನು ಕೆಲವು ಶಾಸನಗಳಲ್ಲಿ ಕಾಣಬಹುದು.

ಇತ್ತೀಚೆಗೆ ತಮಿಳುನಾಡಿನ ದಕ್ಷಿಣ ಆರ್ಕಾಟಿನಲ್ಲಿ ಅಶೋಕನ ಶಾಸನ ಒಂದು ಸಿಕ್ಕಿದೆ. ಆ ಶಾಸನದ ಪ್ರಕಾರ ತಮಿಳುನಾಡಿನ ಈ ಭಾಗವು ಅಶೋಕನ ಕಾಲದಲ್ಲಿ ನೆರೆಯ ರಾಜ್ಯವಾಗಿತ್ತು. ಅಲ್ಲಿ ಆಳುತ್ತಿದ್ದವನು 'ಸತಿಯಪುತ್ತೋ ಅಡಿಯನ್ ನೆಡುಮಾನ್'. ಅಶೋಕನ ಶಾಸನವು ನೆರೆಯ ರಾಜ್ಯದ ಮಧ್ಯ ಭಾಗದಲ್ಲಿರುವುದು ಶಕ್ಯವಿಲ್ಲ. ಪ್ರಾಯಶಃ ಈ ಶಾಸನ ಅವನ ದಕ್ಷಿಣದ ಗಡಿಯನ್ನು ತೋರಿಸುವ ಗಡಿಕಲ್ಲು ಆಗಿರಬಹುದು. ಅಂದರೆ ಇಡೀ ಕರ್ನಾಟಕವೇ ಅವನ ಚಕ್ರಾಧಿಪತ್ಯಕ್ಕೆ ಒಳಪಟ್ಟಿರಬೇಕು. ಇದು ಏನೇ ಇರಲಿ, ಅಶೋಕನ ಪ್ರಭಾವ ತುಂಗಭದ್ರಾ ನದಿಯ ಉತ್ತರಕ್ಕೇ ಸೀಮಿತವಾಗಿರದೆ ದಕ್ಷಿಣ ಕಡಲೂರಿನ ವರೆಗೂ ಹಬ್ಬಿತ್ತು. ಅಂದಮೇಲೆ ಕೃಷ್ಣ ಕಾವೇರಿಗಳ ನಡುವಿನ ಕನ್ನಡ ನಾಡಿನಲ್ಲಿ ಅಶೋಕನ ಪ್ರಚಾರಕಾರ್ಯ ನಡೆದಿದ್ದಿರಬಹುದು ಎಂದಾಯಿತು.

ಅಶೋಕನ ಧರ್ಮ ಪ್ರಸಾರಕಾರ್ಯ ಸಾಮಾನ್ಯ ಜನರ ಜೀವನವನ್ನು ಹಸನು ಮಾಡಿ ಅವರಿಗೆ ತೃಪ್ತಿ ಸಮಾಧಾನಗಳನ್ನು ತಂದಿರಬೇಕು. ಇಲ್ಲದಿದ್ದಲ್ಲಿ ಅವನು ಜೀವನಪರ್ಯಂತ ದಂಡವಿಲ್ಲದೆ ವಿಸ್ತಾರವಾದ ಚಕ್ರಾಧಿಪತ್ಯವನ್ನು ಆಳುವುದಕ್ಕೆ ಸಾಧ್ಯವಾಗುತ್ತಿರಲಿಲ್ಲ. ಕನ್ನಡ ಜನವೂ ಈ ಸಮೃದ್ಧಿಯಿಂದ ವಂಚಿತರಾಗಿರಲಿಲ್ಲ.

### ಮಹಾಯಾನ– ಕರ್ನಾಟಕದಲ್ಲಿ ಅದರ ಪ್ರಸಾರ

ತ್ರಿಪಿಟಿಕದಲ್ಲಿ ವಿವರಿಸಿರುವ ಧರ್ಮ ಕಾಲಭೇದ ದೇಶಭೇದಗಳಿಂದಾಗಿ ರೂಪಾಂತರವನ್ನು ಹೊಂದಿತು. ಅಶೋಕನ ಕಾಲಕ್ಕೇ ಅದರ ೧೮ ಪ್ರಕಾರಗಳಿದ್ದುವೆಂದು ತಿಳಿದುಬಂದಿದೆ. ಬುದ್ಧನ ಪರಿನಿರ್ವಾಣದ ನಾಲ್ಕುನೂರು ವರ್ಷಗಳ ಹೊತ್ತಿಗೆ ರೂಪಾಂತರಗೊಂಡು ಆಚರಣೆಯಲ್ಲಿದ್ದ ಪ್ರಕಾರಗಳಲ್ಲಿ ಮಹಾಯಾನ ಪ್ರಕಾರವು ಬಹಳಷ್ಟು ಪ್ರಭಾವಶಾಲಿಯಾಗಿತ್ತು. ಅದು ಸಾಕಷ್ಟು ಬೆಳೆಯಲು ಕಾರಣನಾದವನು ಪ್ರಕಾಂಡ ಪಂಡಿತ ನಾಗಾರ್ಜುನ. ಅವನಂಥ ದಾರ್ಶನಿಕ ಈ ದೇಶದಲ್ಲಿ ಇನ್ನೊಬ್ಬನಿಲ್ಲವೆಂದು ಹಲವರು ಹೇಳುತ್ತಾರೆ. ಅದು ಏನೇ ಇರಲಿ, ಪೌರ್ವಾತ್ಯ ಪಾಶ್ಚಾತ್ಯ ಪಂಡಿತರೆಲ್ಲರ ಮನ್ನಣೆ ಗಳಿಸಿರುವ ಭಾರತೀಯ ದಾರ್ಶನಿಕರಲ್ಲಿ ಅವನು ಅದ್ವಿತೀಯ. ಅವನಿಂದ ಪ್ರಣೀತವಾಗಿರುವ ಶೂನ್ಯ ವಾದದ ಅಧ್ಯಯನ ಅನೇಕ ಕಡೆ ನಡೆಯುತ್ತಿದೆ. ಅವನ ದರ್ಶನವನ್ನು ಪ್ರಸಿದ್ಧ ಪಾಶ್ಚಾತ್ಯ ದಾರ್ಶನಿಕರಾದ ಕ್ಯಾಂಟ್, ಬ್ರಾಡ್ಸ್ ಮುಂತಾದವರು ಪ್ರತಿಪಾದಿಸಿರುವ ದಾರ್ಶನಿಕ ಪದ್ಧತಿಗಳೊಂದಿಗೆ ತುಲನೆ ಮಾಡುತ್ತಿದ್ದಾರೆ.

ನಾಗಾರ್ಜುನನ ತಪೋಭೂಮಿ ಕೃಷ್ಣ ನದಿಯ ದಂಡೆಯ ಮೇಲಿನ ಇಂದಿನ ಹೈದರಾಬಾದಿಗೆ ಹತ್ತಿರದ ಪ್ರದೇಶವಾಗಿತ್ತು. ಅವನು ವಾಸಿಸುತ್ತ ಇದ್ದನೆಂದು ಹೇಳಲಾದ ಗುಡ್ಡಕ್ಕೆ ಅವನ ಹೆಸರನ್ನೇ ಕೊಟ್ಟಿದ್ದಾರೆ. ಅದು ನಾಗಾರ್ಜುನ ಕೊಂಡವಾಗಿದೆ. ಇತ್ತೀಚಿನ ವರ್ಷಗಳಲ್ಲಿ ಕೃಷ್ಣಾ ನದಿಗೆ ಅಡ್ಡವಾಗಿ ಕಟ್ಟಿರುವ ಜಲಾಶಯಕ್ಕೆ ಅವನ ಹೆಸರೇ ಕೊಟ್ಟಿದ್ದು ನಾಗಾರ್ಜುನ ಸಾಗರವೆಂದು ಪ್ರಸಿದ್ಧವಾಗಿದೆ. ಕರ್ನಾಟಕದ ಉತ್ತರ ಸರಹದ್ದು ನಾಗಾರ್ಜುನ ಸಾಗರಕ್ಕೆ ಸುಮಾರು ನೂರೈವತ್ತು ಮೈಲಿಯೊಳಗಿದೆ.

ಮಹಾಯಾನಕ್ಕೂ ಪಾಲಿ ಸಂಪ್ರದಾಯಕ್ಕೂ ಮುಖ್ಯ ವ್ಯತ್ಯಾಸವಿದೆ. ಬೋಧಿಸತ್ವನ ಆರಾಧನೆ ಮಹಾಯಾನ ಪಂಥದಲ್ಲಿ ಪ್ರಾಮುಖ್ಯತೆ ಪಡೆಯಿತು. ಪಾಲಿ ಸಂಪ್ರದಾಯದಂತೆ ಅರಹಂತ ಸ್ಥಿತಿ ಅತ್ಯುನ್ನತ ಸ್ಥಿತಿ. ಅರಹಂತನಾದವನು ದುಃಖ, ಅನಿತ್ಯ, ಅನಾತ್ಮದ ಪರಮ ಸತ್ಯವನ್ನು ತನ್ನ ಪ್ರಜ್ಞೆಯಿಂದಲೇ ತಿಳಿದು ಭವಚಕ್ರದಿಂದ ಪಾರಾದವನು. ಅವನು ಪೂಜನೀಯನಾದವನು.

ಮಹಾಯಾನದಲ್ಲಿ ಅರಹಂತನಿಗಿಂತ ಬೋಧಿಸತ್ವನೇ ಶ್ರೇಷ್ಠನಾಗುತ್ತಾನೆ. ಜನ್ಮಜನ್ಮಾಂತರಗಳ ತಪಸ್ಸಿನಿಂದ ಎಲ್ಲಾ ಕ್ಲೇಶಗಳನ್ನೂ ಮತ್ತು ಎಲ್ಲಾ ಅಜ್ಞಾನವನ್ನೂ ಕಳೆದುಕೊಳ್ಳುತ್ತಿರುವವನೇ ಬೋಧಿಸತ್ವ. ಅವನೇ ಮುಂದೆ ಬುದ್ಧನಾಗುತ್ತಾನೆ. ಬೇರೆಯವರ ಉದ್ಧಾರಕ್ಕಾಗಿ ಜನ್ಮಜನ್ಮಾಂತರಗಳನ್ನೆತ್ತಿ ಎಲ್ಲವನ್ನೂ ತ್ಯಾಗ ಮಾಡಿ ಸಾಧನೆ ಮಾಡುತ್ತಿರುತ್ತಾನೆ ಬೋಧಿಸತ್ವ. ಅಂಥ ಬೋಧಿಸತ್ವನೇ ಮಹಾಯಾನವನ್ನು ಅನುಸರಿಸುವವರ ಪರಮಪೂಜ್ಯ ಆಗಿದ್ದಾನೆ.

ಮೂರ್ತಿ ಪೂಜೆಯೂ ಮಹಾಯಾನ ಸಂಪ್ರದಾಯದಲ್ಲಿ ಸಾಕಷ್ಟು ಪ್ರಾಮುಖ್ಯತೆಯನ್ನು ಪಡೆಯಿತು. ಅಲೆಗ್ಸಾಂಡರನೊಂದಿಗೆ ಈ ದೇಶಕ್ಕೆ ಬಂದ ಗ್ರೀಕರಲ್ಲಿ ಕೆಲವರು ಇಲ್ಲಿಯೇ ನಿಂತರಷ್ಟೆ. ಅವರಲ್ಲಿ ಅನೇಕರು ಪ್ರತಿಷ್ಠಿತರು; ಚಕ್ರವರ್ತಿಯ ಅಧಿಕಾರಿಗಳಾಗಿದ್ದರು. ಅವರು ಉತ್ತರ ಭಾರತದಲ್ಲಿ ನೆಲಸುವ ಹೊತ್ತಿಗೆ ಬುದ್ಧ ಧರ್ಮ ಮಗಧ ಕೋಸಲ ದೇಶಗಳನ್ನು ದಾಟಿ ಪಶ್ಚಿಮದ ಕಡೆಗೆ ವ್ಯಾಪಿಸಿತ್ತು. ಗ್ರೀಕರು ಈ ಧರ್ಮದಲ್ಲಿ ಎಲ್ಲೂ ಇಲ್ಲದ ವಿಶೇಷತೆಯನ್ನು ಕಂಡರು. ಅದನ್ನು ಅನುಸರಿಸಲು ನಿಶ್ಚಯಿಸಿದರು. ಈ ಪ್ರಯತ್ನದಲ್ಲಿ ತಾವು ಪೂಜಿಸುತ್ತಿದ್ದ ದೇವ ದೇವತೆಗಳನ್ನು ಸಂಪೂರ್ಣವಾಗಿ ಮರೆಯಲು ಇಷ್ಟಪಡಲಿಲ್ಲ. ತಮ್ಮ ದೇವತೆಗಳನ್ನು ಭಾರತೀಯರನ್ನಾಗಿ ಮಾಡಿ ಬೇರೆ ಹೆಸರಿನಲ್ಲಿ ಪೂಜಿಸಲು ಆರಂಭಿಸಿದರು. ವೇಷಾಂತರ ಹೊಂದಿದ ಈ ಗ್ರೀಕ್ ದೇವತೆಗಳು ಮಹಾಯಾನದ ದೇವತೆಗಳೇ ಆದರು; ಅವಲೋಕಿತೇಶ್ವರ, ಮಂಜುಶ್ರೀ, ಪ್ರಜ್ಞಾಪಾರಿಮಿತ, ತಾರಾಭಗವತಿ ಇಂಥ ದೇವದೇವತೆಗಳು.

ಬೋಧಿಸತ್ವ ತತ್ವವೂ, ಗ್ರೀಕರಲ್ಲಿದ್ದ ಬಹುದೇವತಾ ಪೂಜೆಯೂ ಈ ದೇವತೆಗಳ ಆರಾಧನೆಯಲ್ಲಿ ಸೇರಿಕೊಂಡಿದೆ. ಮಹಾಯಾನದ ಸಿದ್ಧಾಂತವಾದ "ಶೂನ್ಯವಾದ"ವು ಪಾಲ ಧರ್ಮದಲ್ಲಿ ಕಾಣುವ "ಅನತ್ತಾ" ತತ್ವದ ವಿಸ್ತಾರ ರೂಪವಾಗಿದೆ. ತ್ರಿಪಿಟಿಕಗಳಲ್ಲಿ ಅಲ್ಲಲ್ಲಿ ಅನತ್ತಾಕ್ಕೆ ಪರ್ಯಾಯವಾಗಿ ಬರುವ ಸುಞ್ಞ ನಾಗಾರ್ಜುನ ಪಂಡಿತನಿಂದ ಬಹುಶಕ್ತಿಯುತವಾದ ಪದವಾಗಿ ಇಡೀ ಒಂದು ಪ್ರಖ್ಯಾತ ದರ್ಶನಕ್ಕೆ ಮೂಲ ಪದವಾಯಿತು. ಇಷ್ಟೇ ಅಲ್ಲ, "ಶೂನ್ಯವೇ ಪರಮ ಸತ್ಯ, ಅದರ ಯಥಾರ್ಥ ಜ್ಞಾನವೇ ಸಾಧಕನ ಗುರಿ" ಎಂಬುದು ಮಹಾಯಾನದ ನಂಬಿಕೆಯಾಯಿತು. ಪಾಲಿ ಸಂಪ್ರದಾಯದಲ್ಲೂ ಅನತ್ತಾ ತತ್ವಕ್ಕೆ ಅಗ್ರಸ್ಥಾನವಿದೆ. ಈ ತತ್ವವನ್ನು ಸಂಪೂರ್ಣವಾಗಿ ಅರಿಯದವನು ಬುದ್ಧ ಧರ್ಮವನ್ನೇ ಅರಿಯಲಾರರು ಎಂಬುದನ್ನು ಹಿಂದಿನ ಮತ್ತು ಇಂದಿನ ಸಾಧಕ ಪಂಡಿತರ ಅಭಿಪ್ರಾಯವಾಗಿದೆ.

ಕ್ರಿ.ಶ. ಸುಮಾರು ನಾಲ್ಕನೆಯ ಶತಮಾನದ ಹೊತ್ತಿಗೆ ಇಡೀ ದೇಶದಲ್ಲಿ ಮಹಾಯಾನ ತುಂಬ ಜನಪ್ರಿಯವಾದ ಮತ್ತು ಪ್ರಮುಖವಾದ ಧರ್ಮವಾಗಿ ಬಿಟ್ಟಿತು. ಯಾತ್ರಾರ್ಥಿಯಾಗಿ ಭಾರತಕ್ಕೆ ಬಂದಿದ್ದ ಚೀಣ ದೇಶದ ಭಿಕ್ಷು ಫಾಹಿಯಾನನ ಬರವಣಿಗೆಗಳಿಂದ ಇದು ವ್ಯಕ್ತವಾಗುತ್ತದೆ. ಆದರೆ ಫಾಹಿಯಾನನು ದಕ್ಷಿಣ ದೇಶಕ್ಕೆ ಬಂದಿರಲಿಲ್ಲ. ಆದುದರಿಂದ ಕರ್ನಾಟಕದಲ್ಲಿ

ಆಗ ಯಾವ ಪ್ರಕಾರದ ಬೌದ್ಧ ಧರ್ಮವಿತ್ತು ಎಂದು ಖಚಿತವಾಗಿ ಹೇಳುವುದು ಕಷ್ಟ. ಆದರೆ ಮುಂದೆ ೨೫೦ ವರ್ಷಗಳಾದ ಮೇಲೆ ಬಂದ ಹುಯನ್‌ತ್ಸಾಂಗನ ಬರವಣಿಗೆಗಳಿಂದ ಕರ್ನಾಟಕದ ಬನವಾಸಿಯಲ್ಲಿ ಮಹಾಯಾನ ಸಾಕಷ್ಟು ಪ್ರಭಾವಯುತವಾಗಿತ್ತು ಎಂದು ಗೊತ್ತಾಗುತ್ತದೆ. ಅಲ್ಲಿ ನಾನೂರು ಬೌದ್ಧ ಸಂಘಾರಾಮಗಳೂ ಹತ್ತು ಸಾವಿರಕ್ಕೂ ಹೆಚ್ಚು ಬೌದ್ಧ ಅನುಯಾಯಿಗಳು ಇದ್ದರೆಂದೂ, ಅದರ ಹತ್ತಿರವೇ ಇದ್ದ ಮತ್ತೊಂದು ವಿಹಾರದಲ್ಲಿ ಮೈತ್ರೇಯ (ಮಹಾಯಾನದ ಒಬ್ಬ ದೇವತೆ)ನ ವಿಗ್ರಹವಿತ್ತೆಂದೂ ಅದಕ್ಕೆ ಅಲೌಕಿಕ ಶಕ್ತಿ ಇತ್ತೆಂದೂ ಬರೆದಿದ್ದಾನೆ. ರಾಜನ ಅರಮನೆಯ ಹತ್ತಿರವೇ ಇದ್ದ ಮತ್ತೊಂದು ವಿಹಾರದಲ್ಲಿ ಒಂದು ದೊಡ್ಡ ಸಂಘಾರಾಮದಲ್ಲಿ ಮುನ್ನೂರು ಭಿಕ್ಷುಗಳಿದ್ದಾರೆಂದೂ ಅವರೆಲ್ಲರೂ ಖ್ಯಾತ ಪ್ರತಿಭಾವಂತರೆಂದೂ ಹೂಯೆನ್‌ತ್ಸಾಂಗ ಹೇಳುತ್ತಾನೆ.

ಮಹಾಯಾನ ಧರ್ಮ ಕೇವಲ ಬನವಾಸಿ ನಾಡಿನಲ್ಲೇ ಅಲ್ಲದೆ, ಕನ್ನಡ ನಾಡಿನ ಈಶಾನ್ಯ ಭಾಗದಲ್ಲಿಯೂ ಪ್ರಚಲಿತವಿತ್ತೆಂದು ಊಹಿಸಬಹುದು. ಹಿಂದೆ ಹೇಳಿದಂತೆ ನಾಗಾರ್ಜುನ ಕರ್ನಾಟಕದ ಈಶಾನ್ಯ ಭಾಗದಲ್ಲಿಯೇ ಇದ್ದವನು. ಇವನು ಕನ್ನಡಿಗನೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅತ್ಯಂತ ಪ್ರಭಾವಶಾಲಿ ವ್ಯಕ್ತಿತ್ವವನ್ನು ಪಡೆದಿದ್ದ ನಾಗಾರ್ಜುನ ತನ್ನ ಹತ್ತಿರದ ಜನರಿಂದಲೂ ಸಾಕಷ್ಟು ಗೌರವ ಮನ್ನಣೆಗಳನ್ನು ಪಡೆಯುತ್ತಿದ್ದಿರಬೇಕು. ಆದುದರಿಂದ ಇವನ ಕಾಲದಲ್ಲಿ ಇಂದಿನ ಗುಲ್ಬರ್ಗಾ, ಬಿದರೆ ಜಿಲ್ಲೆಗಳಲ್ಲಿ ಮಹಾಯಾನ ಬೌದ್ಧ ಧರ್ಮ ಆಚರಣೆಯಲ್ಲಿತ್ತು ಎಂದು ಊಹಿಸಬಹುದು. ಬರೀ ಊಹೆಗೆ ಒಳಗಾದ ಈ ಪ್ರದೇಶವನ್ನು ಬಿಟ್ಟರೂ ಕರ್ನಾಟಕದ ಮಧ್ಯಭಾಗದಲ್ಲಿ ಸುಮಾರು ಹನ್ನೊಂದನೆಯ ಶತಮಾನದವರೆಗೂ ಬೌದ್ಧ ಧರ್ಮ ಗುಟುಕು ಜೀವವನ್ನಿಟ್ಟುಕೊಂಡಿತ್ತು ಎನ್ನುವುದಕ್ಕೆ ಆಧಾರಗಳಿವೆ. ಬಳ್ಳಾರಿಯ ಶಾಸನದಂತೆ ಅದು ೧೦೬೫ರಲ್ಲಿ ಬರೆದ ಶಾಸನ. ಅದರ ಹತ್ತಿರ ಸಾಕಷ್ಟು ಪ್ರಖ್ಯಾತವಾದ ಮಹಾಯಾನ ವಿಹಾರವಿತ್ತು. ಅಲ್ಲಿ ಮಹಾಯಾನ ದೇವ ದೇವತೆಗಳಾದ ಲೋಕಿತೇಶ್ವರ ಮತ್ತು ತಾರಾಭಗವತಿಯರಿಗೆ ಪೂಜೆ ನಡೆಯುತ್ತಿತ್ತು. ಅದೇ ಊರಿಗೆ ಮತ್ತು ಕಾಲಕ್ಕೆ ಸೇರಿದ ನಾಗಿಯಕ್ಕನೆಂಬ ಬುದ್ಧ ಭಕ್ತೆ ತಾರಾದೇವಿಯ ವಿಗ್ರಹವನ್ನು ಮಾಡಿಸಿದಳು. ಧಾರವಾಡ ಜಿಲ್ಲೆಯ ಕೋಳಿವಾಡ ಮತ್ತು ಡಂಬಳಗಳಲ್ಲಿ ತಾರಾದೇವಿಯ ದೇವಾಲಯಗಳಿದ್ದವು. ಇವು ೧೧ನೆಯ ಶತಮಾನದಲ್ಲಿ ನಿರ್ಮಾಣವಾದವುಗಳೇ. ಬಿಜಾಪುರ ಜಿಲ್ಲೆಯ ಲೋಕಾಪುರದಲ್ಲಿನ ದೇವಸ್ಥಾನವು ಬೌದ್ಧ ದೇವಾಲಯವಾಗಿತ್ತೆಂದು ಊಹಿಸಲಾಗಿದೆ. ಇಂದೂ ಆ ಭಾಗದಲ್ಲಿ ಲೋಕಯ್ಯ, ಬುದ್ಧಯ್ಯ ಎಂಬ ಹೆಸರುಗಳು ಸಾಮಾನ್ಯ ಜನರಲ್ಲಿ ಪ್ರಚಲಿತವಾಗಿದೆ. ಮಕ್ಕಳಿಗೆ ಬೌದ್ಧ ದೇವತೆಗಳ ಹೆಸರನ್ನಿಡುವ ಈ ಪದ್ಧತಿ ಮೇಲಿನ ಊಹೆಗೆ ಮತ್ತಷ್ಟು ಪುಷ್ಟಿಯನ್ನು ಕೊಡುತ್ತದೆ.

ಡಂಬಳ, ಕೋಳಿವಾಡ ಮತ್ತು ಲೋಕಾಪುರದ ದೇವಾಲಯಗಳಂತೆ ಕರಾವಳಿ ಮಲೆನಾಡು ಪ್ರದೇಶಗಳಲ್ಲಿರುವ ಕದರಿ ದೇವಸ್ಥಾನ, ಧರ್ಮಸ್ಥಳ ದೇವಾಲಯ, ಕೊಲ್ಲೂರು ದೇವಾಲಯಗಳು ಹಿಂದೆ ಬೌದ್ಧ ದೇವಾಲಯಗಳಾಗಿದ್ದವು. ಇವೆಲ್ಲವೂ ಈಗ ಅದೃಶ್ಯವಾದ ಬೌದ್ಧ ಧರ್ಮದ ಸಂಕೇತಗಳಾಗಿವೆ. ಇವಿಷ್ಟೇ ಅಲ್ಲದೆ, ಶೃಂಗೇರಿಯ ಶಾರದಾ ದೇವಾಲಯವೂ ಹಿಂದೆ ಪ್ರಜ್ಞಾ ಪಾರಮಿತ ದೇವಾಲಯವಾಗಿತ್ತೆಂದೂ ಕೆಲವರು ಹೇಳುತ್ತಾರೆ. ಕನ್ನಡ ನಾಡಿನ ಅಂಚಿನಲ್ಲಿಯೇ ಇರುವ ಕಾಂಚೀಪುರವು ಪ್ರಸಿದ್ಧ ಬೌದ್ಧ ಕೇಂದ್ರವಾಗಿತ್ತು. ಇಂದಿಗೂ ಕನ್ನಡದ ಅನೇಕ ಜನರಿಗೆ ಪುಣ್ಯ ಕ್ಷೇತ್ರವಾದ ತಿರುಪತಿ ಹಿಂದೆ ಮಂಜುಶ್ರೀ ದೇವಾಲಯವಾಗಿತ್ತೆಂದು ಕೆಲವರು ಹೇಳುತ್ತಾರೆ. ಸರಹದ್ದಿನಲ್ಲಿರುವ ಈ ಕ್ಷೇತ್ರಗಳಿಂದ ಅವುಗಳ ಹತ್ತಿರದ ಕರ್ನಾಟಕದ ಪ್ರದೇಶಗಳು ಬೌದ್ಧ ಧರ್ಮದ ಪ್ರಭಾವಕ್ಕೆ ಒಳಗಾಗಿದ್ದಿರಬಹುದು. ಏನೇ ಆದರೂ, ಕರ್ನಾಟಕದಲ್ಲಿ ನಲಂದ, ಸಾಂಚಿ, ಅಜಂತ, ಅಮರಾವತಿ, ನಾಗಾರ್ಜುನಕೊಂಡ ಮುಂತಾದ ಕಡೆ ಸಿಕ್ಕಿರುವಂಥ ಪ್ರಮುಖ ಬೌದ್ಧ ವಿಹಾರಗಳೂ, ದೇವಾಲಯಗಳೂ ಸಿಕ್ಕಿಲ್ಲ. ಆದುದರಿಂದ ದೇಶದ ಆ ಭಾಗಗಳಲ್ಲಿದ್ದಷ್ಟು ಪ್ರಬಲವಾಗಿ ಬೌದ್ಧ ಧರ್ಮ ಇಲ್ಲಿರಲಿಲ್ಲವೆಂದು ಹೇಳಬೇಕಾಗುತ್ತದೆ.

ಹೀಗೆ ಬೌದ್ಧ ಧರ್ಮ ಕರ್ನಾಟಕದಲ್ಲಿ ಯಾವುದೊಂದು ಭಾಗದಲ್ಲಿಯಾದರೂ ಯಾವ ಕಾಲದಲ್ಲಿಯಾದರೂ ಜನಸಾಮಾನ್ಯರು ಅನುಸರಿಸುತ್ತಿದ್ದ ಧರ್ಮವಾಗಿತ್ತೆಂದು ಹೇಳಲು ಸಾಕಷ್ಟು ಆಧಾರಗಳಿಲ್ಲ.

ಆದರೂ ಈ ಧರ್ಮದ ಎರಡು ಪ್ರಮುಖಾಂಶಗಳು ಇಂದಿಗೂ ಜೀವಂತವಾಗಿವೆ. ದೇಶದ ಇನ್ನಾವ ಭಾಗದಲ್ಲಿಯೂ ಇಷ್ಟು ಜೀವಂತವಾಗಿಲ್ಲವೆಂದು ಹೇಳಬಹುದು. ಬೌದ್ಧ ಧರ್ಮದ ವೈಶಿಷ್ಟ್ಯಗಳಾದ ಈ ಎರಡು ಅಂಶಗಳೆಂದರೆ ಶೂನ್ಯವಾದ (ಇದೇ ಹಿಂದೆ "ಅನತ್ತಾ" ವಾದವಾಗಿತ್ತು) ಮತ್ತು ಜಾತಿಯ ಖಂಡನೆ. ಶೂನ್ಯವಾದವನ್ನು ಸ್ಥೂಲವಾಗಿ ಹಿಂದಿನ ಪುಟಗಳಲ್ಲಿ ಪರಿಚಯಿಸಲಾಗಿದೆ. ಬೌದ್ಧ ಧರ್ಮದ ಪ್ರಕಾರ ಜಾತಿ ಪದ್ಧತಿಯು ನೈಸರ್ಗಿಕವಾದುದೂ ಅಲ್ಲ, ಅಪೌರುಷೇಯ ಶಕ್ತಿಯಿಂದ ವಿಧಿಸಲ್ಪಟ್ಟ ನಿಯಮವೂ ಅಲ್ಲ. ಮಾನವನ ಅಹಂಕಾರವೇ ಜಾತಿ ಪದ್ಧತಿಗೆ ಕಾರಣ. ತಿಪಿಟಕಗಳ ಅನೇಕ ಸುತ್ತಗಳಲ್ಲಿ ಈ ದುಷ್ಟ ಪದ್ಧತಿಯನ್ನು, ಖಂಡನೆಯನ್ನು ಕಾಣುತ್ತೇವೆ. ಬುದ್ಧನು ಅನೇಕ ಜನ ಬ್ರಾಹ್ಮಣ ಶಿಷ್ಯರಿಗೆ ಜಾತಿ ಪದ್ಧತಿಯ ಹಿಂದೆ ಅಡಗಿರುವ ಮೌಢ್ಯವನ್ನೂ ಅದಕ್ಕೆ ಮೂಲ ಕಾರಣವಾದ ಅಹಂಕಾರವನ್ನೂ ತೋರಿಸಿಕೊಟ್ಟಿದ್ದಾನೆ. ಸುತ್ತ ತಿಪಿಟಕದ ಎರಡು ಗಾಥಗಳನ್ನು ಮಾದರಿಗಾಗಿ ಇಲ್ಲಿ ಉದಾಹರಿಸಲಾಗಿದೆ.

ಏಕಜಂ ವಾ ದ್ವಿಜಂ ಯೋಧ ಪಾಣಂ ವಿಹಿಂಸತಿ
ಯಸ್ಸ ಪಾಣೇ ದಯಾ ನತ್ಥಿ ತಂ ಜಞ್ಞಾ ವಸಲೋತಿ
(ವಸಲ ಸುತ್ತ)

ಪಕ್ಷಿ ಅಥವಾ ಪ್ರಾಣಿಗಳಲ್ಲಿ ದಯೆಯಿಲ್ಲದೆ ಅವುಗಳನ್ನು ಹಿಂಸಿಸುತ್ತಾನೋ ಅವನೇ ಅಸ್ಪೃಶ್ಯ.

ನಿಧಾಯ ದಂಡಂ ಭೂತೇಸು
ತಸೇಸು ಥಾವರೇಸು ಚ
ಯೊ ನ ಹಂತಿ ನ ಘಾತೇತಿ
ತಮಹಂ ಬ್ರೂಮಿ ಬ್ರಾಹ್ಮಣಂ
(ದಮ್ಮಪದ–೪೦೫)

ಬಲವಾದವುಗಳಾಗಲೀ ನಿರ್ಬಲವಾದವುಗಳಾಗಲೀ ಯಾವ ಪ್ರಾಣಿಯ ಮೇಲೂ ದಂಡವನ್ನು ಪ್ರಯೋಗಿಸದೆ, ಹಿಂಸಿಸದೆ ಕೊಲ್ಲದೆ, ಇರುವವನು ಯಾವನೋ ಅವನನ್ನು ಬ್ರಾಹ್ಮಣನೆಂದು ಕರೆಯುತ್ತಾರೆ.

ಈ ದೇಶದಲ್ಲಿ ಹುಟ್ಟಿಕೊಂಡ ಮತ್ತಾವ ಸಮಣ ಪಂಥದಲ್ಲಿಯಾಗಲೀ ಹಿಂದಿನಿಂದಿದ್ದ ವೈದಿಕ ಮತದಲ್ಲಿಯಾಗಲೀ ಈ ಎರಡು ಅಂಶಗಳನ್ನು ಕಾಣುವುದಿಲ್ಲ. ಆತ್ಮದ ಶಾಶ್ವತತೆ

ಯನ್ನು ಎಲ್ಲ ಮತಗಳೂ ಒಪ್ಪಿಕೊಳ್ಳುತ್ತವೆ.೧ ಯಾವ ಮತವೂ ಜಾತಿ ಪದ್ಧತಿಯನ್ನು ಸ್ಪಷ್ಟವಾದ ಮಾತುಗಳಲ್ಲಿ ಖಂಡಿಸುವುದಿಲ್ಲ.

ಹನ್ನೆರಡನೆಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿ ಆಂದೋಲನವನ್ನುಂಟುಮಾಡಿ ಜನಸಾಮಾನ್ಯರ ಜೀವನವನ್ನು ಹಸನು ಮಾಡಿದ ವೀರಶೈವ ಧರ್ಮದಲ್ಲಿ ಈ ಎರಡು ಅಂಶಗಳನ್ನು ಕಾಣುತ್ತೇವೆ. ವಚನ ಸಾಹಿತ್ಯದಲ್ಲಿ ಕಾಣುವ "ಶೂನ್ಯ" ತತ್ವಕ್ಕೂ ಬೌದ್ಧ ಧರ್ಮದಲ್ಲಿ ಕಂಡುಬರುವ ಶೂನ್ಯ ತತ್ವಕ್ಕೂ ಸಾಮ್ಯತೆ ಇದೆ.

"ತನು ಬಯಲು ನಿರವಯದೊಳಡಗಿತ್ತು, ಮನ ಬಯಲು ನಿರವಯದೊಳಡಗಿತ್ತು ಭಾವ ಬಯಲು ನಿರಯವದೊಳಡಗಿತ್ತು, ಬಯಲು ಬಯಲ ಬೆರೆಸಿ ಬಯಲೆಯಾಯಿತ್ತು,
ಕೂಡಲ ಚೆನ್ನಸಂಗಯ್ಯನೆಂಬ ನುಡಿಯಡಗಿತ್ತು"
(ಶಿವಗಣ ಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆ ೯೪೨)

ಶರಣನ ಪರಮ ಗುರಿ ಎಂದರೆ ಶೂನ್ಯವನ್ನು ಸಂಪಾದಿಸುವುದು, ಉಪಾಸನೆ ಮಾಡಿದ ಸಾಧಕನಿಗೆ ಸಾಧನೆಯ ಅಂತ್ಯದಲ್ಲಿ ಒದಗುವ ಬ್ರಹ್ಮ ಸಾಕ್ಷಾತ್ಕಾರವೇ ಶೂನ್ಯ.೨

"ಶೂನ್ಯ ಶಬ್ದದಲ್ಲಿ ಪ್ರಭು ದೇವರ ಪರಮಾನುಭವದ ಗರ್ಭಿತಾರ್ಥವಿದೆ. ಪ್ರಭು ದೇವರ ಅಭಿಪ್ರಾಯದಲ್ಲಿ "ಶೂನ್ಯ"ವೇ ಮಾನವನ ಪರಮ ಪುರುಷಾರ್ಥ.೩

ಅರಹಂತನ ಸ್ಥಿತಿಯಾದರು ಇದೇ ಎಂಬುದನ್ನೂ ನೋಡಿದ್ದೇವಷ್ಟೇ.

ಜಾತಿ ಪದ್ಧತಿಯನ್ನು ನಿರ್ಮೂಲ ಮಾಡಲು ಬಸವಣ್ಣ ಮಾಡಿದ ಕ್ರಾಂತಿ ಭಾರತೀಯ ಇತಿಹಾಸದಲ್ಲಿ ಅಸಾಮಾನ್ಯವಾದ ಘಟನೆ. ಆದರೂ ಹಿಂದೆ ಉದಾಹರಿಸಿದ ಸುತ್ತ ಪಿಟಕದ ಎರಡು ಗಾಥೆಗಳನ್ನು ಹೋಲುವ ವಚನವೊಂದನ್ನು ಹೇಳ ಬೇಕೆನ್ನಿಸುತ್ತದೆ.

ಕೊಲ್ಲುವವನೇ ಮಾದಿಗ,
ಹೊಲಸು ತಿಂಬುವವನೇ ಹೊಲೆಯ
ಕುಲವೇನೋ ಅವಂದಿರ ಕುಲವೇನೋ;
ಸಕಲ ಜೀವಾತ್ಮರಿಗೆ ಲೇಸನೆ ಬಯಸುವ
ನಮ್ಮ ಕೂಡಲಸಂಗಮನ ಶರಣರೆಲ್ಲ ಕುಲಜರು.

ಭಾರತದ ಮತ್ತಾವ ಧರ್ಮದಲ್ಲಿಯಾಗಲಿ, ಸಂಪ್ರದಾಯದಲ್ಲಾಗಲಿ ಕಾಣದ ಈ ಶೂನ್ಯ ತತ್ವ ಮತ್ತು ಜಾತಿ ಪದ್ಧತಿಯ ಖಂಡನೆ ಬೌದ್ಧ ಧರ್ಮ ಮತ್ತು ವೀರಶೈವ ಧರ್ಮಗಳಲ್ಲೇ ತೋರುವುದು ಕೇವಲ ಆಕಸ್ಮಿಕ ಎನ್ನಿಸುವುದಿಲ್ಲ.

ಹನ್ನೊಂದನೆಯ ಶತಮಾನದಲ್ಲಿ ಉತ್ತರ ಕರ್ನಾಟಕದ ಕೆಲವೆಡೆಯಲ್ಲಿ ಹಾಗೂ ಹೀಗೂ ಗುಟುಕು ಜೀವದಿಂದಿದ್ದ ಮಹಾಯಾನದ ಕೆಲವಂಶಗಳು ಕೆಲವರ ಮನಸ್ಸಿನಲ್ಲಿಯಾದರೂ ಬೀಜ ರೂಪದಲ್ಲಿದ್ದಿರಬೇಕು. ಶರಣರ ಹೃದಯದಲ್ಲಿ ಇವು ಬೆಳೆದು ಫಲ ಕೊಟ್ಟವು, ನವಚೈತನ್ಯವನ್ನು ಪಡೆದವು.

ಬೌದ್ಧ ಧರ್ಮಕ್ಕೂ, ವೀರಶೈವ ಧರ್ಮಕ್ಕೂ ಮೂಲಭೂತವಾದ ವ್ಯತ್ಯಾಸಗಳಿವೆ. ಇವೆರಡು ಧರ್ಮಗಳ, ಅದರಲ್ಲಿಯೂ ಮಹಾಯಾನ ದರ್ಶನ ಮತ್ತು ವಚನ ಸಾಹಿತ್ಯದ ತುಲನಾತ್ಮಕ ಅಧ್ಯಯನದ ಕರ್ನಾಟಕದ ಧಾರ್ಮಿಕ ಆಧ್ಯಾತ್ಮಿಕ ಇತಿಹಾಸದ ಮೇಲೆ ಹೊಸ ಬೆಳಕನ್ನು ಹರಿಸೀತು.

## ಇಂದಿನ ಸ್ಥಿತಿ

ಪ್ರಪಂಚದ ಬೇರೆ ಬೇರೆ ಕಡೆ ಬೌದ್ಧ ಧರ್ಮದ ಆಳ ವ್ಯಾಸಂಗ ನಡೆಯುತ್ತಿದೆ. ಇಂಥ ಒಂದು ವ್ಯಾಸಂಗ ಕರ್ನಾಟಕದಲ್ಲಿ ನಡೆಯುತ್ತಿದೆ ಎಂದು ಹೇಳುವ ಹಾಗಿಲ್ಲ. ಜನಸಾಮಾನ್ಯರಲ್ಲೂ ಹಿಂದಿನ ಥೇರಾದವರಾಗಲಿ, ಆಮೇಲೆ ಬಂದ ಮಹಾಯಾನ ಪಂಥದವರಾಗಲಿ ಆಚರಣೆಯಲ್ಲಿಲ್ಲ. ಬೌದ್ಧ ಧರ್ಮವನ್ನು ಪರಿಚಯ ಮಾಡಿಕೊಂಡ ಹಲವು ವಿದ್ಯಾವಂತರು ಆ ಧರ್ಮಕ್ಕೆ ಮಾರುಹೋಗಿ ಬುದ್ಧನ ಬೋಧನೆಯನ್ನು ವಿದ್ಯಾವಂತರಲ್ಲಿ ಪ್ರಸಾರ ಮಾಡಲು ಪ್ರಯತ್ನಪಟ್ಟರು. ಅಂಥವರಲ್ಲಿ ಹಿಂದೆ ಮೈಸೂರು ಹೈಕೋರ್ಟಿನ ನ್ಯಾಯಮೂರ್ತಿಗಳಾಗಿದ್ದ ಎ. ಎಸ್. ಆರ್. ಚಾರಿಯವರು ಅಗ್ರಗಣ್ಯರು. ಸುಮಾರು ೫೦ ವರ್ಷಗಳ ಹಿಂದೆ "ಯೂನಿವರ್ಸಲ್ ಬುದ್ಧ ಸೊಸೈಟಿ"ಯ ಮೂಲಕ ಧರ್ಮವನ್ನು ಪರಿಚಯ ಮಾಡಿಕೊಡಲು ಶ್ರಮಿಸಿದರು. ಏಕೋ ಏನೋ ಆ ಸಂಸ್ಥೆ ಮುಚ್ಚಿ ಹೋಯಿತು. ೧೯೪೦ರಲ್ಲಿ ಶ್ರೀ ಲಂಕೆಯ ಮಹಾಬೋಧಿ ಸೊಸೈಟಿ ಬೆಂಗಳೂರಿನಲ್ಲಿ ಒಂದು ಶಾಖೆಯನ್ನು ತೆರೆಯಿತು. ಆದರೆ ೧೯೫೭ರವರೆಗೆ ಅದು ಯಾವ ಕೆಲಸವನ್ನೂ ಮಾಡಲಿಲ್ಲ. ಆಗ ನಲಂದದಿಂದ ಬಂದ ಆಚಾರ್ಯ ಭಿಕ್ಷು ಬುದ್ಧ ರಕ್ಷಿತರು ಈ ಸೊಸೈಟಿಯನ್ನು ಸಚೇತನಗೊಳಿಸಿದರು. ಮಹಾಬೋಧಿ ಸೊಸೈಟಿ ಇಂದೂ ಅವರ ನೇತೃತ್ವದಲ್ಲಿ ಜನಸಾಮಾನ್ಯರಲ್ಲಿ ಶೀಲ ಸಂವರ್ಧನೆಯನ್ನು ಉಂಟು ಮಾಡಲು ಶ್ರಮಿಸುತ್ತಿದೆ.

ಮಹಾಬೋಧಿ ಸೊಸೈಟಿಯ ಸೋದರ ಸಂಸ್ಥೆಯಾದ ಬುದ್ಧ ವಚನ ಟ್ರಸ್ಟ ಪಾಲಿ ಗ್ರಂಥಗಳನ್ನು ಕನ್ನಡದಲ್ಲಿ ತರುವ ಮಹಾ ಯೋಜನೆಯನ್ನಿಟ್ಟುಕೊಂಡಿದೆ. ಇದರಿಂದ ಕನ್ನಡ ಜನ ಬುದ್ಧ ಧರ್ಮವನ್ನು ಶುದ್ಧ ರೂಪದಲ್ಲಿ ಅರಿಯಲು ಸಹಾಯಕವಾಗುತ್ತದೆ. ಅದು ಈಗಾಗಲೇ ಹಲವಾರು ಪುಸ್ತಕಗಳನ್ನು ಇಂಗ್ಲೀಷು, ಕನ್ನಡ ಭಾಷೆಗಳಲ್ಲಿ ಪ್ರಕಟಿಸಿ ಧರ್ಮವನ್ನು ಪರಿಚಯ ಮಾಡಿಕೊಡುತ್ತದೆ.

"ಮಹಾಬೋಧಿ ಮೈತ್ರಿ ಮಂಡಲ"ವು ಮಹಾಬೋಧಿ ಸೊಸೈಟಿಯ ಒಂದು ಅಂಗ ಸಂಸ್ಥೆ. ಬುದ್ಧ ತನ್ನ ಶಿಷ್ಯರಿಗೆ ಕೊಟ್ಟ "ಬಹು ಜನ ಹಿತಾಯ, ಬಹು ಜನ ಹಿತಾಯ" ಆದೇಶಕ್ಕೆ ಅನುಗುಣವಾಗಿ ಈ ಸಂಸ್ಥೆಯು ರೋಗಿಗಳ ಸೇವೆಯನ್ನು ತನ್ನ ಮುಖ್ಯ ಕಾರ್ಯಕ್ರಮವನ್ನಾಗಿ ಇಟ್ಟುಕೊಂಡಿದೆ. "ಆರೋಗ್ಯ ಪ್ರತಿಷ್ಠಾನ"ದ ಮೂಲಕ ಮಾನವನ ಸರ್ವಾಂಗೀಣ ಆರೋಗ್ಯ (ಟೋಟಲ್ ಹೆಲ್ತ)ವನ್ನು ಬೆಳೆಸುವುದನ್ನು ಧ್ಯೇಯವಾಗಿಟ್ಟುಕೊಂಡಿದೆ.

ಉತ್ತರ ಕರ್ನಾಟಕದ ಬಿದರೆ, ಗುಲ್ಬರ್ಗಾ ಮತ್ತು ಬಿಜಾಪುರದ ಜಿಲ್ಲೆಗಳಲ್ಲಿ ಕೆಲವರು ಬೌದ್ಧ ಧರ್ಮವನ್ನು ಅನುಷ್ಠಾನಕ್ಕೆ ತಂದುಕೊಂಡಿದ್ದಾರೆ. ಹುಬ್ಬಳ್ಳಿಯಲ್ಲೂ ಕೋಲಾರದ ಚಿನ್ನದ ಗಣಿ ಪ್ರದೇಶದಲ್ಲಿಯೂ ಬೌದ್ಧ ಕೇಂದ್ರಗಳಿವೆ.

---

೧. ಚಾರ್ವಾಕ ಮತ ಮಾತ್ರ ಇದಕ್ಕೆ ಅಪವಾದವಾಗಿದೆ. ಆದರೆ ಅದು ಯಾವ ಉತ್ತಮವಾದ ಜೀವನ ಮೌಲ್ಯವನ್ನೂ ಒಪ್ಪಿಕೊಳ್ಳುವುದಿಲ್ಲ. ಅದರ ಪ್ರಕಾರ, ಸಾಲ ಮಾಡಿ ತುಪ್ಪ ತಿನ್ನುವುದು ಸರಿಯಾದುದು.

೨. ಶೂನ್ಯ ಸಂಪಾದನೆಯನ್ನು ಕುರಿತು ಡಾ. ಎಂ. ಚಿದಾನಂದ ಮೂರ್ತಿ – ಪು. ೨೯.

೩. ಶೂನ್ಯ ಸಂಪಾದನೆಯ ಪರಾಮರ್ಶೆಯ ಸಂಗ್ರಹ. ಪು. ೩೮–ಸಂ. ಶಿ. ಭೂಸನೂರುಮಠ.

ಬೌದ್ಧ ಧರ್ಮವನ್ನು ಜನರಿಗೆ ಪರಿಚಯ ಮಾಡಿಸಿ, ಅವರಿಗೆ ಶಾಂತಿ, ಸಮಾಧಾನ, ತೃಪ್ತಿ, ಸುಖಗಳು ದೊರೆಯುವಂತೆ ಮಾಡಲು ಪ್ರಯತ್ನಗಳಾಗುತ್ತಿದ್ದರೂ ಗಣನೀಯವಾದದ್ದು ಏನೂ ನಡೆದಿಲ್ಲ.

ಪ್ರಸಿದ್ಧ ದಾರ್ಶನಿಕ ನಾಗಾರ್ಜುನನ ಮಾಧ್ಯಮಿಕ ಸೂತ್ರಗಳ ಮೂಲ ಉಪಲಬ್ಧವಿಲ್ಲ. ಸಂಸ್ಕೃತದಲ್ಲಿದ್ದ ಆ ಗ್ರಂಥ ಎಂದೋ ಈ ದೇಶದಿಂದ ಮಾಯವಾಯಿತು. ಇಂದು ಅದು ದೊರೆಯುವುದು ಚೀಣಿ ಭಾಷೆಯಲ್ಲಿ. ಕನ್ನಡಿಗರಾದ ಡಾ. ಕೆ. ವೆಂಕಟರಮಣನ್ ಅವರು ಚೀಣಾ ದೇಶಕ್ಕೆ ಹೋಗಿ ಆ ಭಾಷೆಯನ್ನು ಕಲಿತು ನಾಗಾರ್ಜುನನ ಗ್ರಂಥಗಳನ್ನು ಅಭ್ಯಾಸ ಮಾಡಿ ಇಂದು ವಿಶ್ವಭಾರತಿ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿ ಅಧ್ಯಯನ ಅಧ್ಯಾಪನಗಳನ್ನು ನಡೆಸುತ್ತಿದ್ದಾರೆ. ಇಡೀ ಭರತ ಖಂಡದಲ್ಲಿ ಮಹಾಯಾನ ಪಂಥದ ದರ್ಶನವಾದ ಮಾಧ್ಯಮಿಕ ಸಿದ್ಧಾಂತದ ಬಗೆಗೆ ಅಧಿಕಾರಯುತವಾಗಿ ಮಾತನಾಡಬಲ್ಲವರು ಇವರೊಬ್ಬರೇ.

ಕರ್ನಾಟಕದಲ್ಲಿ ಇರುವ ವಿಶ್ವವಿದ್ಯಾನಿಲಯಗಳಲ್ಲಿ ಒಂದಾದರೂ ಬೌದ್ಧ ದರ್ಶನಕ್ಕೆ ಪ್ರೋತ್ಸಾಹ ಕೊಟ್ಟರೆ ಹೆಚ್ಚಿನ ಫಲ ದೊರೆತೀತು.

# ಕರ್ನಾಟಕದಲ್ಲಿ ಜೈನಧರ್ಮ

ಕಮಲಾ ಹಂಪನಾ

ಕರ್ನಾಟಕದ ಪ್ರಾಚೀನತಮ ಧರ್ಮಗಳಲ್ಲಿ ಅಹಿಂಸಾ ಪ್ರಧಾನವಾದ ಜೈನಧರ್ಮ ಪ್ರಮುಖವಾಗಿದೆ. ಕನ್ನಡ ನಾಡಿಗೂ ಜೈನ ಧರ್ಮಕ್ಕೂ ಇರುವ ಸಂಬಂಧ ತುಂಬ ನಿಕಟವಾದುದು, ನಿರಂತರವಾದುದು. ಕರ್ನಾಟಕದ ಇತಿಹಾಸವೆಂದರೆ ಅದು ಜೈನ ಧರ್ಮದ ಇತಿಹಾಸ ಕೂಡ. ಜೈನ ಧರ್ಮ ಹಲವು ಶತಮಾನಗಳ ವರೆಗೆ ಕರ್ನಾಟಕದ ರಾಷ್ಟ್ರೀಯ ಧರ್ಮವಾಗಿತ್ತು. ಶಾಸನ ಕವಿಯೊಬ್ಬ 'ಕರ್ನಾಟ ದೇಶ'ವನ್ನು ಹೀಗೆ ಪರಿಚಯಿಸಿದ್ದಾನೆ.

ಜಿನಧರ್ಮಾವಾಸಮಾದತ್ತಮಳ ವಿನಯದಾಗಾರ
ಮಾದತ್ತು ಪದ್ಮಾ
ಸನನಿರ್ಪಾ ಸದ್ಮಮಾದತ್ತತಿ ವಿಶದ ಯಶೋಧಾಮ
ಮಾದತ್ತು ವಿದ್ಯಾ
ಧನಜನ್ಮಸ್ಥಾನಮಾದತ್ತಸಮ ತರಳ ಗಂಭೀರ
ಸದ್ಗೇಹಮಾದ
ತ್ತೆನಿಸಲ್ಕಿಂತುಳ್ಳ ನಾನಾ ಮಹಿಮೆಯೊಳೆಸಗುಂ ಚಾರು
ಕರ್ನಾಟದೇಶಂ

(ಸಾರಾಂಶ: ಚೆಲುವಾದ ಕನ್ನಡನಾಡು ಅನೇಕ ಮಹಿಮೆಗಳಿಂದ ಕೂಡಿ ಕಂಗೊಳಿಸುತ್ತಿದೆ; ಅದು ಜೈನ ಧರ್ಮಕ್ಕೆ ಆವಾಸವಾಗಿದೆ. ಅಮಲವಾದ ವಿನಯಕ್ಕೆ ಆಗರವಾಗಿದೆ. ಬ್ರಹ್ಮನಿರುವ ಮನೆಯಾಗಿದೆ, ತುಂಬ ದೊಡ್ಡ ಕೀರ್ತಿಯ ಮನೆಯಾಗಿದೆ, ವಿದ್ಯೆಯ ನಿಧಿಗೆ ಜನ್ಮಸ್ಥಾನವಾಗಿದೆ, ಸಾಟಿಯಿಲ್ಲದ ಹೊಳೆಯುವ ಗಂಭೀರ ಶ್ರೇಷ್ಠ ಗೃಹವಾಗಿದೆ– ಹೀಗಿವೆ ಅದರ ನಾನಾ ಮಹಿಮೆಗಳು).

ಕ್ರಿ. ಪೂ. ಐದನೆಯ ಶತಮಾನದಲ್ಲಿ ಮೌರ್ಯ ವಂಶದ ಚಕ್ರವರ್ತಿ ಚಂದ್ರಗುಪ್ತ ಮತ್ತು ಆತನ ರಾಜಗುರು ಭದ್ರಬಾಹು ಹಾಗೂ ಹನ್ನೆರಡು ಸಾವಿರ ಜಿನಮುನಿಗಳು ಉತ್ತರದಲ್ಲಿ ಕ್ಷಾಮ ತಲೆದೋರಿದ ಕಾರಣ ದಕ್ಷಿಣಕ್ಕೆ, ಕರ್ನಾಟಕಕ್ಕೆ ಆಗಮಿಸಿ ಈಗಿನ ಶ್ರವಣ ಬೆಳಗೊಳದಲ್ಲಿ ತಪಸ್ಸು ಮಾಡಿದರೆಂಬುದಾಗಿ ತಿಳಿದುಬರುತ್ತದೆ. ಇಂದಿಗೂ ಶ್ರವಣಬೆಳಗೊಳದಲ್ಲಿ ಬಸದಿ, ಭದ್ರಬಾಹು ಗುಹೆ ಇವೆ. ಕರ್ನಾಟಕದಲ್ಲಿ ಜೈನಧರ್ಮ ಅದಕ್ಕೂ ಮೊದಲು ಇದ್ದಿರಬಹುದು. ಆದರೆ ಅಲ್ಲಿಂದೀಚೆಗೆ ಅದರ ಇತಿಹಾಸ ಅಖಂಡವಾಗಿದೆ. ಎರಡು ಸಾವಿರ ವರ್ಷಗಳ ಹಿಂದಿನಿಂದಲೂ ಜೈನ ಧರ್ಮ ಕರ್ನಾಟಕದಲ್ಲಿ ಜೀವಂತವಾಗಿ ಪ್ರಭಾವಶಾಲಿಯಾಗಿ ಉಳಿದುಬಂದಿರುವುದರಿಂದ ಇಲ್ಲಿನ ಚರಿತ್ರೆ ಅದರ ತಳಹದಿಯ ಮೇಲೆ ನಿಂತಿದೆ.

ಜೈನಧರ್ಮ ನೆಲೆಗೊಳಿಸಿದ ಮೂಲಪುರುಷರಾದ ಪ್ರಸಾರಕರಾದ ತೀರ್ಥಂಕರರೆಲ್ಲ ಉತ್ತರ ಭಾರತದವರು. ಆದರೆ ಜೈನಧರ್ಮ ಪ್ರಚಾರಕರು, ವ್ಯಾಖ್ಯಾನಕಾರರು, ಆಚಾರ್ಯರು ಬಹುವಾಗಿ ಕರ್ನಾಟಕದವರೆಂಬುದು ಒಂದು ವೈಶಿಷ್ಟ್ಯವಾಗಿದೆ. ಆಚಾರ್ಯ ಶ್ರೇಷ್ಠರಾದ ಕುಂದಕುಂದ, ಸಮಂತಭದ್ರ, ಪೂಜ್ಯಪಾದ, ಕವಿಪರಮೇಷ್ಠಿ, ಅಕಳಂಕ ವೀರಸೇನ, ಜಿನಸೇನ, ಗುಣಭದ್ರ, ಅಜಿತಸೇನ, ಶ್ರುತಕೀರ್ತಿ, ದಿವಾಕರಣಂದಿ, ಮಲ್ಲಿಷೇಣ, ಚಾರುಕೀರ್ತಿ ಪಂಡಿತಾಚಾರ್ಯ, ಮೇಘಣಂದಿ– ಮೊದಲಾದವರು ಕರ್ನಾಟಕದವರು. ಕಾವ್ಯಗಳೂ ಶಾಸನಗಳೂ ಜೈನಯತಿಗಳ ಪಾಂಡಿತ್ಯ ತ್ಯಾಗ ಸಂಯಮಗಳಿಂದ ಕೂಡಿದ ವರ್ಚಸ್ವಿಯಾದ ವ್ಯಕ್ತಿತ್ವವನ್ನು ಹಲವು ರೀತಿಯಲ್ಲಿ ಹಾಡಿ ಹೊಗಳಿವೆ. ಧವಳ, ಜಯಧವಳ ಮಹಾಧವಳ, ಎಂಬುವು ಜೈನಧರ್ಮದ ಮೂಲವಾಗಿರುವ ಆಗಮ ಗ್ರಂಥಗಳು. ಇವು ರಚಿತವಾದದ್ದೂ, ಸಂರಕ್ಷಿತವಾದದ್ದೂ ಕರ್ನಾಟಕದಲ್ಲೇ ಎಂಬುದು ಒಂದು ವಿಶೇಷ. ಪೂರ್ವ ಪುರಾಣ ಮತ್ತು ಉತ್ತರ ಪುರಾಣ ಎಂಬ ಎರಡು ಭಾಗಗಳಲ್ಲಿರುವ ಮಹಾಪುರಾಣ ಸಂಸ್ಕೃತ ಭಾಷೆಯ ಒಂದು ಮಹತ್ಕೃತಿ. ರಾಮಾಯಣ ಮಹಾಭಾರತಗಳಿಗೆ ಹೊಯ್‌ಕಯ್ಯಾದ ಮಹಾಕಾವ್ಯ. ಜೈನಧರ್ಮದ ಸಾರವಾಗಿರುವ ಈ ಮಹಾಪುರಾಣ ಕರ್ನಾಟಕದ ಕೊಡುಗೆಯೆಂಬುದು ಹೆಮ್ಮೆ ಹಾಗೂ ಅಭಿಮಾನದ ಸಂಗತಿಯಾಗಿದೆ. ಹತ್ತನೆಯ ಶತಮಾನದ ಕರ್ನಾಟಕದ ಸಾಂಸ್ಕೃತಿಕ ಜೀವನಕ್ಕೆ ರನ್ನಗನ್ನಡಿಯಂತಿರುವ ಸೋಮದೇವಸೂರಿಯ 'ಯಶಸ್ತಿಲಕ ಚಂಪೂ' ಕೃತಿಯೂ ಭಾರತೀಯ ವಾಙ್ಮಯಕ್ಕೆ ಕನ್ನಡ ನಾಡಿನ ಹಾಗೂ ಜೈನ ಧರ್ಮದ ಕಾಣಿಕೆಯಾಗಿದೆ. ಹೀಗೆ ಜೈನಧರ್ಮ ಪ್ರಸಾರಕರಾದ ಅನೇಕ ಶ್ರೇಷ್ಠ ಆಚಾರ್ಯರಿಗೆ ಜನ್ಮಕೊಟ್ಟ ಹಿರಿಮೆ ಕನ್ನಡನಾಡಿನದು.

ಜೈನಧರ್ಮದ ಪ್ರಧಾನ ಪಂಥಗಳು ಮೂರು; ಶ್ವೇತಾಂಬರ, ದಿಗಂಬರ ಮತ್ತು ಯಾಪನೀಯ. ಈ ಮೂರು ಪಂಗಡಗಳಲ್ಲಿ ಕರ್ನಾಟಕ ಎರಡನ್ನು ಮಾತ್ರ ವಿಶೇಷವಾಗಿ ಪೋಷಿಸಿತು. ಶ್ವೇತಾಂಬರ ಪಂಥದ ಪ್ರಾಬಲ್ಯ ಹಾಗೂ ಸರ್ವತೋಮುಖವಾದ ವಿಕಾಸ ಉತ್ತರ ಭಾರತಕ್ಕೆ ಹೋಲಿಸಿದರೆ ಕನ್ನಡನಾಡಿನಲ್ಲಿ ಸಾಧ್ಯವಾಗಲಿಲ್ಲ. ದಿಗಂಬರ ಮತ್ತು ಯಾಪನೀಯ ಪಂಥದ ಪ್ರಸಾರ ಮಾತ್ರ ವ್ಯಾಪಕವಾಗಿ ಬಲವಾಗಿ ಆಯಿತು. ಕರ್ನಾಟಕದಲ್ಲಿ ಸಿಗುವ ಎರಡು ಸಾವಿರ ವರ್ಷಗಳ ಜೈನಧರ್ಮದ ಮಾಹಿತಿಯ ಬಹುಪಾಲು ದಿಗಂ

ಬರ ಶಾಖೆಗೆ ಸೇರಿದ್ದಾಗಿದೆ. ಇಲ್ಲಿನ ಶಿಲ್ಪ, ಸಾಹಿತ್ಯ, ಚಿತ್ರ, ವಾಸ್ತು ಎಲ್ಲವೂ ದಿಗಂಬರ ಆಮ್ನಾಯಕ್ಕೆ ಒಳಪಟ್ಟಿವೆ. ಎಂಟರಿಂದ ೧೧ನೆಯ ಶತಮಾನದ ವರೆಗೆ ಸುಮಾರು ಮುನ್ನೂರು ವರ್ಷ ಕಾಲ ಜನಪ್ರಿಯತೆ ಗಳಿಸಿದ್ದ ಜೈನಧರ್ಮದ ಶಾಖೆಯಾದ ಯಾಪನೀಯ ಪಂಥ ಹುಟ್ಟಿದ್ದು ಬೆಳೆದದ್ದು ಮತ್ತು ಬಿದ್ದದ್ದು ಎಲ್ಲವೂ ಕರ್ನಾಟಕದಲ್ಲೇ ಎಂಬುದು ಉಲ್ಲೇಖನೀಯವಾಗಿದೆ.

ಕನ್ನಡ ಭಾಷೆಯ ಹುಟ್ಟು ಬೆಳವಣಿಗೆಯಲ್ಲಿ ಜೈನರ ಪಾತ್ರ ಗಣನೀಯವಾದುದು. ಕನ್ನಡದ ಶೈಶವಾವಸ್ಥೆಯಲ್ಲಿ ಅದಕ್ಕೆ ತುಷ್ಟಿ ಪುಷ್ಟಿ ತುಂಬಿಕೊಟ್ಟವರು ಜೈನರು. ಜೈನಧರ್ಮದ ಮೂಲವಾದ ಸಿದ್ಧಾಂತ ಗ್ರಂಥಗಳು ಪ್ರಾಕೃತ ಸಂಸ್ಕೃತದಲ್ಲಿವೆ. ಮಹಾವೀರ ತೀರ್ಥಂಕರರ ಕಾಲದಿಂದಲೂ ಜೈನರು ಜನಪರವಾದ ಧೋರಣೆಯಿಂದ ಹೊರಟರು. ತಮ್ಮ ಧರ್ಮಪ್ರಸಾರಕ್ಕೆ ಜನಭಾಷೆಗಳನ್ನು ಒಪ್ಪಿಕೊಂಡರು. ಸರ್ವ ಭಾಷಾಮಯೀ ಸರಸ್ವತೀ ಎಂದು ಕರೆದರು. ಅವರ ಈ ಧೋರಣೆಯಿಂದಾಗಿ ಕನ್ನಡಕ್ಕೆ ಲಾಭವಾಯಿತು. ಕನ್ನಡ ಭಾಷೆಯ ಆರಂಭಕಾಲದ ಕೃಷಿಕರೆಲ್ಲ ಜೈನರು. ಆಗತಾನೆ ಕೈಕಾಲು ಮುಖ ಮೈ ಪಡೆದು ತನ್ನ ಸ್ವತಂತ್ರ ಅಸ್ತಿತ್ವವನ್ನು ಸ್ಥಾಪಿಸಿಕೊಂಡಿದ್ದ ಕನ್ನಡ ಭಾಷೆಗೆ ಸತ್ವ ತೇಜಸ್ಸು ಬರುವಂತೆ ಮಾಡಿ ಉಳಿದ ಮುಂದುವರಿದ ಸಾಹಿತ್ಯಿಕ ಭಾಷೆಗಳ ಸಮಕ್ಕೆ ತಲೆಯೆತ್ತಿ ನಿಲ್ಲುವಂತೆ ಜೈನ ಕವಿಗಳು ಶ್ರಮಿಸಿದರು. ಇದು ಕನ್ನಡಕ್ಕೆ ಜೈನರ ದೊಡ್ಡ ಕೊಡುಗೆಯಾಗಿರುವಂತೆ ಭಾರತಕ್ಕೆ, ಜೈನಧರ್ಮಕ್ಕೆ ಕರ್ನಾಟಕದ ಕೊಡುಗೆಯೂ ಹೌದು. ಇವರ ಕಾಲದಲ್ಲಿ, ವಿಶೇಷವಾಗಿ ಐದರಿಂದ ಹತ್ತನೆಯ ಶತಮಾನದ ವರೆಗೆ ಸಂಸ್ಕೃತ ಪ್ರಾಕೃತ ಭಾಷೆಗಳ ತತ್ಸಮ ತದ್ಭವ ರೂಪಗಳಿಂದ ಕೂಡಿದ ಭಾಷಾ ಸಂಪತ್ತು ಬೆಳೆಯಿತು, ಕನ್ನಡ ಭಾಷೆ ಎಲ್ಲ ಶಾಖೆಗಳ ವಾಹಕವಾಗಲು ಬೇಕಾದ ಬಿಗಿ ಬನಿ ಪಡೆಯಿತು.

ಮೌರ್ಯರ ಕಾಲದಲ್ಲಿ ಕ್ರಿಸ್ತಪೂರ್ವದ ಕಡೆಯ ಶತಮಾನಗಳಲ್ಲಿ, ಕರ್ನಾಟಕಕ್ಕೆ ಕಾಲಿರಿಸಿದ ಜೈನಧರ್ಮ ಬಹುಬೇಗ ಪ್ರಜಾಧರ್ಮವಾಗಿ ಪ್ರಸಾರ ಪಡೆಯಿತು. ಕದಂಬರು, ಗಂಗರು, ರಾಷ್ಟ್ರಕೂಟರು, ಚಾಲುಕ್ಯರು, ಹೊಯ್ಸಳರು, ವಿಜಯ ನಗರದವರು, ಶಾಂತರರು, ಚೆಂಗಾಳ್ವರು, ಸೌಂದತ್ತಿರಟ್ಟರು, ಚೌಟರು, ನಗಿರೆಯವರು, ಸಾಳುವರು ಮೊದಲಾದ ದೊಡ್ಡ ಸಣ್ಣ ರಾಜಮನೆತನಗಳವರು ಕರ್ನಾಟಕದಲ್ಲಿ ಜೈನಧರ್ಮ ಹಬ್ಬಲು ನೆರವಾದರು. ಒಂದು ಕಡೆ ವಿಪುಲವಾದ ರಾಜಾಶ್ರಯ, ಇನ್ನೊಂದುಕಡೆ ಬಹುವಾದ ಪ್ರಜಾನುರಾಗ ದೊರೆತು ಜೈನಧರ್ಮ ಉಚ್ಛ್ರಾಯಸ್ಥಿತಿಗೇರಲು ಸಾಧ್ಯವಾಯಿತು. ಅನೇಕ ರಾಜರಿಗೆ ಜೈನಾಚಾರ್ಯರು ರಾಜಗುರುಗಳಾಗಿದ್ದರು. ಗಂಗ ವಂಶದ ರಾಜಧರ್ಮವೇ ಜಿನಧರ್ಮವಾಗಿತ್ತು. ಸಿಂಹನಂದಿ ಎಂಬ ಜೈನಗುರು ಈ ವಂಶದ ಸ್ಥಾಪನಗೆ ಆಶೀರ್ವದಿಸಿ ಹೇಳಿದ ನೀತಿಮಾತುಗಳು ಎಲ್ಲ ಕಾಲಕ್ಕೂ ಮೆಲುಕು ಹಾಕುವಂತಿವೆ; ಯಾವುದೇ ಧರ್ಮಕ್ಕೆ, ವ್ಯಕ್ತಿಗೆ ಅನ್ವಯಿಸುವಂತಿವೆ.

ನುಡಿದುದನಾರೊಳಂ ನುಡಿದು ತಪ್ಪಿದೊಡಂ
ಜಿನಶಾಸನಕ್ಕೊಡಂ
ಬಡದಡಮನ್ಯನಾರಿಗೆರೆದಟ್ಟಿದೊಡಂ ಮಧು ಮಾಂಸ
ಸೇವೆಗೆ
ಯ್ದಡಮಕುಲೀನರಪ್ಪವರ
ಕೊಳ್ಕೊಡೆಯಾದಡಮರ್ಥಿಗರ್ಥಮಂ
ಕುಡದೊಡಮಾಹವಾಂಗಣದೊಳೋಡಿದಡಂ ಕಿಡುಗುಂ
ಕುಲಕ್ರಮಂ

(ಸಾರಾಂಶ: ಯಾರಲ್ಲಿಯೇ ಆಗಲಿ ಕೊಟ್ಟ ಮಾತನ್ನು ತಪ್ಪಿದರೆ, ಅಹಿಂಸಾಧರ್ಮಕ್ಕೆ ಒಪ್ಪದೆ ಹೋದರೆ, ಬೇರೆಯವರ ಹೆಂಗಸಿಗೆ ಆಸೆಪಟ್ಟರೆ, ಮಧುಮಾಂಸ ತಿಂದರೆ, ಬೇಡಿದ ಜನರಿಗೆ ನೀಡದೆ ಹೋದರೆ, ರಣರಂಗದಿಂದ ಹೆದರಿ ಹೇಡಿಯಂತೆ ಓಡಿಹೋದರೆ ಆಗ ಪರಂಪರೆಯಿಂದ ಬಂದ ಕುಲಗೌರವ ಹಾಳಾದೀತು).

ಅವಿನೀತ, ಮಾರಸಿಂಹ, ರಾಚಮಲ್ಲ ಮೊದಲಾದ ಗಂಗ ದೊರೆಗಳ ಆಶ್ರಯ ಕರ್ನಾಟಕದಲ್ಲಿ ಜೈನಧರ್ಮ ನೆಲೆಯೂರಲು ಕಾರಣವಾಯಿತು. ಇದೇ ರೀತಿಯಾಗಿ ಹೊಯ್ಸಳ ರಾಜವಂಶವೂ ಸುದತ್ತಾಚಾರ್ಯರೆಂಬ ಒಬ್ಬ ಜಿನಮುನಿಯ ಅನುಗ್ರಹದಿಂದ ಆರಂಭವಾಯಿತೆಂದು ತಿಳಿದುಬರುತ್ತದೆ. ವಿನಯಾದಿತ್ಯ, ಎರೆಯಂಗ, ಬಿಟ್ಟಿದೇವ, ವೀರ ಬಲ್ಲಾಳ ಮುಂತಾದ ಹೊಯ್ಸಳ ರಾಜರು ಜಿನಧರ್ಮಕ್ಕೆ ಶ್ರೀರಕ್ಷೆಯಾಗಿದ್ದರು. ಇವರ ಕಾಲದಲ್ಲಿ ಹುಳ್ಳನೆಂಬ ಮಹಾಕೋಶಾಧಿಕಾರಿ, ಗಂಗರಾಜನೆಂಬ ಮಹಾಸೇನಾನಿ ಕನ್ನಡ ನಾಡಿನಲ್ಲಿ ಜೈನಧರ್ಮ ಆಚಂದ್ರಾರ್ಕಸ್ಥಾಯಿಯಾಗಿ ಬೇರೂರಿ ನಿಲ್ಲಲು ಬೇಕಾದ ಬುನಾದಿ ಹಾಕಿದರು. ಪ್ರಚಂಡ ದಂಡನಾಯಕ ಹಾಗೂ ವಿಷ್ಣುವರ್ಧನನ ಮಂತ್ರಿಯಾಗಿದ್ದ ಈ ಗಂಗರಾಜನ ಮನೆತನವೇ ಜಿನಧರ್ಮಕ್ಕೆ ನಡೆಮಡಿ ಹಾಸಿತ್ತು. ಆತನ ಹೆಂಡತಿ ಲಕ್ಷ್ಮಿ, ತಾಯಿ ಪೋಚಿಕಬ್ಬೆ, ಮೈದುನ ಬೈಚಣ್ಣ (ಬೂಚಣ್ಣ), ಗುರು ಶುಭಚಂದ್ರ, ಮಗ ಬೊಪ್ಪ, ಕಿರಿಯ ಪಣಿಶಮಯ್ಯ, ಅಣ್ಣ ಬೊಮ್ಮಚಮೂಪ–ಇವರೆಲ್ಲ ದಾನಶೂರರು, ಅಹಿಂಸೆಯ ಪಾಲಕರು, ಪ್ರಸಿದ್ಧರು.

ಆರನೆಯ ಶತಮಾನದಿಂದ ಹನ್ನೆರಡನೆಯ ಶತಮಾನದ ವರೆಗೆ ಜೈನಧರ್ಮ ಕನ್ನಡನಾಡಿನ ರಾಜಧರ್ಮವಾಗಿ ವೈಭವದಲ್ಲಿ ಹಬ್ಬಿತು. ಗುಡಿಸಲಿನಿಂದ ಅರಮನೆಯ ವರೆಗೆ ಅನುಯಾಯಿಗಳಿದ್ದರು. ಹನಸೋಗೆ (ಸಾಲಿಗ್ರಾಮದ ಬಳಿ, ಮೈಸೂರು ಜಿಲ್ಲೆ), ಸೋದೆ (ಸ್ವಾದಿ, ಸೋಂದ, ಉತ್ತರ ಕನ್ನಡ ಜಿಲ್ಲೆ), ಶ್ರವಣಬೆಳುಗೊಳ, ಹುಂಚ, ಮೂಡಬಿದ್ರಿ, ಕಾರ್ಕಳ, ನರಸಿಂಹರಾಜಪುರ, ಸಿಂಗನಗದ್ದೆ, (ಚಿಕ್ಕಮಗಳೂರು ಜಿಲ್ಲೆ)– ಮುಂತಾದ ಕಡೆ ಜೈನಮಠಗಳು, ಜೈನಪೀಠಗಳು ಶಾಂತಿಯ ಸಂದೇಶ ಬೀರುವ ಅಹಿಂಸಾ ಕೇಂದ್ರಗಳಾಗಿದ್ದುವು. ರಾಯಚೂರು ಜಿಲ್ಲೆಯ ಕೊಪ್ಪಳ ಇಂದು ಜೈನಧರ್ಮದ ಕುರುಹುಗಳನ್ನು ಕಳೆದುಕೊಂಡಿದ್ದರೂ ೧೪ನೆಯ ಶತಮಾನದ ವರೆಗೂ ಅದು ಈಗಿನ ಶ್ರವಣಬೆಳುಗೊಳಕ್ಕೆ ಸಮಾನವಾದ ಜೈನಕೇಂದ್ರವಾಗಿತ್ತು. ಯಾತ್ರಾಸ್ಥಳವಾಗಿತ್ತು. ಐಹೊಳೆ, ಪಟ್ಟದಕಲ್ಲು, ಬಾದಾಮಿ ಮೊದಲಾದುವು ಜೈನಧರ್ಮದ ಸಾಂಸ್ಕೃತಿಕ ವೈಭವವನ್ನು ಇಂದಿಗೂ ಪ್ರಸಾರ ಮಾಡುತ್ತಿವೆ.

ಜೈನಧರ್ಮ ತುಂಬ ಸೂಕ್ಷ್ಮವೂ ವೈಜ್ಞಾನಿಕವೂ ಆದ ಸಿದ್ಧಾಂತಗಳನ್ನು ಒಳಗೊಂಡಿದೆ. ಅದು ಆತ್ಮದ ಅಮರತ್ವವನ್ನು, ಕರ್ಮದ ಸಿದ್ಧಾಂತವನ್ನು ಪ್ರತಿಪಾದಿಸಿದೆ. ಕರ್ಮದ ಕಾಳಿಕೆಯನ್ನು ಕಳೆದುಕೊಂಡು ತನ್ನ ಸಹಜ ಸ್ಥಿತಿಯನ್ನು ಆತ್ಮನು ಪಡೆದುಕೊಳ್ಳಲು ಸಮ್ಯಕ್‌ದರ್ಶನ, ಜ್ಞಾನ, ಚಾರಿತ್ರ್ಯಗಳೆಂಬ ರತ್ನತ್ರಯವನ್ನು ಬದುಕಿಗೆ ಅಳವಡಿಸಿಕೊಂಡು ಆ ಮೆಟ್ಟಿಲುಗಳಿಂದ ಸುಲಭವಾಗಿ ಮುಕ್ತಿಗೇರಬಹುದೆಂಬುದು ಜಿನಧರ್ಮದ ತಿರುಳು. ಪುರುಷ ಪ್ರಯತ್ನಕ್ಕೇ ಇಲ್ಲಿ ಪ್ರಾಧಾನ್ಯ. ಮೂರ್ತಿಪೂಜೆಗೆ ಗೌಣಸ್ಥಾನವಿದ್ದರೂ ಕ್ರಮೇಣ

ಸಗುಣೋಪಾಸನೆ ವಿಶೇಷ ಸ್ಥಾನ ಪಡೆದುಕೊಂಡಿತು. ಜೈನ ಸ್ಥಪತಿಗಳು, ಜೈನ ವಾಸ್ತುಶಾಸ್ತ್ರ, ಜೈನ ಶಿಲ್ಪಶಾಸ್ತ್ರ ಏರ್ಪಟ್ಟು ಜೈನತೆಯೂ ಬೆಳೆಯಿತು. ಆರಂಭದಲ್ಲಿ ಜೈನ ದೇವಾಲಯಗಳಿಗೆ, ಜೈನ ಆಚಾರ್ಯರ ತಪಸ್ಸಿಗೆ ಬೆಟ್ಟ ಗುಡ್ಡ ಮುಂತಾದ ಎತ್ತರದ ಪ್ರದೇಶಗಳನ್ನು ಆರಿಸಿಕೊಳ್ಳಲಾಯಿತು; ಶ್ರವಣಬೆಳಗೊಳದ ಚಿಕ್ಕಬೆಟ್ಟ, ದೊಡ್ಡಬೆಟ್ಟ, ಕುಂದಾದ್ರಿ, ಬದಾಮಿ ಮೊದಲಾದ ಸ್ಥಳಗಳನ್ನು ಉದಾಹರಿಸಬಹುದು.. ಜೈನ ದೇವತಾ ಮೂರ್ತಿಗಳಲ್ಲಿ ಸರಳತೆಗೇ ಆದ್ಯತೆ. ತ್ಯಾಗ ಸಂಯಮ, ಪ್ರಶಾಂತತೆ ಇವು ಜೈನ ವಿಗ್ರಹಗಳ ಮುಖ್ಯ ಲಕ್ಷಣಗಳು. ನಗ್ನ ಮೂರ್ತಿಗಳಲ್ಲಿ ಪಾರ್ಶ್ವನಾಥ ತೀರ್ಥಂಕರ ವಿಗ್ರಹ ಬಿಟ್ಟರೆ, ವೈವಿಧ್ಯ ಕಡಿಮೆ. ಶಿಲ್ಪಿಗೆ ಕೆಲಸವೂ ಕಡಿಮೆ. ಯಕ್ಷ ಯಕ್ಷಿಯರ ಮೂರ್ತಿ ನಿರ್ಮಾಣದಲ್ಲಿ ಕುಸುರಿ ಕೆತ್ತನೆ ಕೆಲಸಕ್ಕೆ ಅವಕಾಶವಿರುತ್ತದೆ. ಮೊದಲಲ್ಲಿ ಮರದ ಮೂರ್ತಿಗಳಿಂದ ಆರಂಭವಾಗಿ, ಲೋಹಗಳನ್ನೂ ಶಿಲೆಯನ್ನೂ ಬಳಸಿಕೊಳ್ಳಲಾಯಿತು.

ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆಗೆ ಜೈನ ಧರ್ಮದ ಕಾಣಿಕೆ ವಿಪುಲವಾಗಿದೆ. ಈ ನಾಡಿನ ಎಲ್ಲ ಭಾಗಗಳಲ್ಲೂ ಜೈನಕಲೆಯ ವೈಭವದ ಪ್ರಸಾರ ಕಾಣಬಹುದಾಗಿದೆ. ಕನ್ನಡ ರಾಜರ ನಿರ್ಮಾಣವಾದ ಅಜಂತ, ಎಲ್ಲೋರ ಈಗ ಕರ್ನಾಟಕದ ಹೊರಗಡೆ ಇದ್ದರೂ ಇಲ್ಲಿಯೂ ಜೈನ ಧರ್ಮದ ಪ್ರಾಚೀನ ಮೂರ್ತಿಕಲೆಗೆ ನಿದರ್ಶನಗಳಿರುವುದನ್ನು ನೆನಪಿನಲ್ಲಿಡಬೇಕಾಗುತ್ತದೆ. ಬಾದಾಮಿ, ಐಹೊಳೆ ಪಟ್ಟದಕಲ್ಲು ಮೊದಲಾದುವನ್ನು ಬಿಟ್ಟರೆ ಕದಂಬದೊರೆ ಮೃಗೇಶವರ್ಮ ಕಟ್ಟಿಸಿಕೊಟ್ಟ ಹಲಸಿ(ಗೆ)ಯ (ಬೆಳಗಾವಿ ಜಿಲ್ಲೆ) ಬಸದಿಗೆ ಕಾಲದ ಮಾನದಂಡದಿಂದಾಗಿ ಮಹತ್ವವಿದೆ. ಬೆಳಗಾವಿಯ ಕಮಲ ಬಸದಿ, ಹುಂಚದ ಪಂಚಬಸ್ತಿ, ಮೂಡಬಿದಿರೆಯ ಸಿದ್ಧಾಂತ ಮತ್ತು ಸಾವಿರ ಕಂಬದ ಬಸದಿ, ಕಾರ್ಕಳದ ಚತುರ್ಮುಖ ಬಸದಿ, ಹಳೇಬೀಡು, ಜಿನನಾಥಪುರ, ಕಂಬದ ಹಳ್ಳಿಯ ಬಸದಿಗಳು, ಗೇರಸೊಪ್ಪೆಯ ಚತುರ್ಮುಖ ಬಸದಿ, ವರಾಂಗದ ಬಸದಿ, ಲಕ್ಷ್ಮೇಶ್ವರದ ಶಂಖ ಬಸದಿ–ಮೊದಲಾದ ಜೈನಮಂದಿರಗಳು ಅಲ್ಲಿರುವ ಮೂರ್ತಿಗಳು ಕರ್ನಾಟಕಕ್ಕೆ ಜೈನ ವಾಸ್ತುಶಿಲ್ಪದ ಕೊಡುಗೆಯ ಕುರುಹುಗಳಾಗಿವೆ. ವೇಸರ, ಸಾಗರ, ದ್ರಾವಿಡ ಶೈಲಿಗಳೆಲ್ಲ ಮೇಳೈಸಿಕೊಂಡು ಜೈನ ದೇವಾಲಯಗಳು ತಮ್ಮದೇ ಆದ ಸಮನ್ವಯ ಶೈಲಿಯನ್ನು ಪಡೆದುಕೊಂಡಿವೆ.

ಜೈನಮೂರ್ತಿಗಳು ಎರಡು ಭಂಗಿಗಳಲ್ಲಿರುತ್ತವೆ. ಒಂದು ಖಡ್ಗಾಸನ, ಇನ್ನೊಂದು ಪದ್ಮಾಸನ. ಎರಡು ಕೈಗಳನ್ನು ನೇರವಾಗಿ ಕೆಳಕ್ಕೆ ಬಿಟ್ಟು ನೆಟ್ಟಗೆ ಕಾಲ ಮೇಲೆ ನಿಂತಿರುವ ಭಂಗಿಯೇ ಖಡ್ಗಾಸನ. ಇದಕ್ಕೆ ಕಾಯೋತ್ಸರ್ಗವೆಂದೂ ಪ್ರತಿಮಾಯೋಗವೆಂದೂ ಬೇರೆ ಹೆಸರುಗಳಿವೆ. ಗೊಮ್ಮಟ ಮೂರ್ತಿಗಳೆಲ್ಲ ಇರುವುದು ಈ ಖಡ್ಗಾಸನ ಸ್ಥಿತಿಯಲ್ಲೇ. ಕರ್ನಾಟಕಕ್ಕೆ ಅಲ್ಲದೆ ಸಮಗ್ರ ಭಾರತದ ಶಿಲ್ಪಕಲೆಗೆ ಜೈನ ಧರ್ಮದ ವಿಶಿಷ್ಟ ಹಾಗೂ ವಿಶೇಷ ಕೊಡುಗೆಯೆಂದರೆ ಬಾಹುಬಲಿ ಮೂರ್ತಿ. ಸಾಮಾನ್ಯವಾಗಿ ಗೊಮ್ಮಟ (ಗೋಮಟೇಶ್ವರ ಗೋಮಟ, ಗೊಮ್ಮಟೇಶ) ಎಂಬ ಜನಪ್ರಿಯ ಹೆಸರಿರುವ ಬಾಹುಬಲಿ ಜೈನರ ಮೊದಲನೆಯ ತೀರ್ಥಂಕರನ ಮಗ. ಆತ ತಪಸ್ಸಿಗೆ ನಿಂತ ಸಂದರ್ಭದಲ್ಲಿ ಅವನ ಕಾಲುಗಳ ಬಳಿ ಹುತ್ತ ಬೆಳೆದು ಹಾವುಗಳು ಸುತ್ತ ಇರುವುದನ್ನೂ, ಮಾಧವೀ ಬಳ್ಳಿ ಬೆಳೆದು ಕೈಗಳವರೆಗೆ ಸುತ್ತಿಕೊಂಡಿರುವುದನ್ನೂ ಈ ಸರಳ ಸುಂದರ ಶಿಲ್ಪದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿ ತೋರಿಸಲಾಗಿದೆ. ಸ್ವತಂತ್ರವೂ ಸರ್ವಾಂಗ ಸುಂದರವೂ ಜೈನ ಧರ್ಮಕ್ಕೇ ವಿಶಿಷ್ಟವೂ ಆದ ವಿಶೇಷ ಶೈಲಿಯೊಂದನ್ನು ಈ ಗೊಮ್ಮಟ ಮೂರ್ತಿಶಿಲ್ಪದಲ್ಲಿ ಕಾಣುತ್ತೇವೆ.

ಬಾದಾಮಿಯ ಗುಹೆಯಲ್ಲಿ, ಐಹೊಳೆಯ ಮೇಣ ಬಸದಿಯಲ್ಲಿ ಇರುವ ಗೊಮ್ಮಟ ಮೂರ್ತಿಗಳು ಏಳು ಎಂಟನೆಯ ಶತಮಾನಕ್ಕೆ ಸೇರುತ್ತವೆ. ಇವು ತುಂಬ ಹಳೆಯ ಕಾಲಕ್ಕೆ ಸೇರಿದೆಯೆಂಬುದಲ್ಲದೆ ಕೆಲವು ಸೂಕ್ಷ್ಮ ವಿವರಗಳಿಂದ ನೋಡಿದಾಗ ಗೊಮ್ಮಟ ಶಿಲ್ಪದಲ್ಲಿ ಬೇರೆ ಸಂಪ್ರದಾಯಕ್ಕೆ ಇವು ಸೇರಿವೆ. ಈಗ ನಮಗೆ ಗೊಮ್ಮಟ ಮೂರ್ತಿಯ ಹೆಸರು ಕೇಳಿದ ತಕ್ಷಣ ನೆನಪಿಗೆ ಬರುವ ಮೂರ್ತಿಯೆಂದರೆ ಶ್ರವಣ ಬೆಳಗೊಳದ ದೊಡ್ಡಬೆಟ್ಟದ ಮೇಲಿರುವ ಮಹಾಚೆಲುವ ಗೊಮ್ಮಟೇಶ್ವರ. ಒಂದು ಸಾವಿರ ವರ್ಷದ ಹಿಂದೆ, ಹತ್ತನೆಯ ಶತಮಾನದ ಕಡೆಯ ಭಾಗದಲ್ಲಿ, ಬಹುಶಃ ೯೮೧ರಲ್ಲಿ ಗಂಗ ವಂಶದ ದೊರೆ ರಾಚಮಲ್ಲನ ಮಹಾಮಂತ್ರಿ ಮತ್ತು ಮಹಾಸೇನಾನಿ ಚಾವುಂಡರಾಯನು ಈ ಬಾಹುಬಲಿ ಮೂರ್ತಿಯನ್ನು ಮಾಡಿಸಿದ್ದು. ೫೮ ಅಡಿಗಳ ಅಖಂಡ ಶಿಲೆಯಲ್ಲಿರುವ ಈ ನಗ್ನ ಮೂರ್ತಿಯ ರೂಪ ಕಣ್ಮನಗಳನ್ನು ಸೆಳೆಯುತ್ತದೆ, ತಣಿಸುತ್ತದೆ. ಬೊಪ್ಪಣ ಪಂಡಿತನೆಂಬ ಕವಿ ಈ ಬಾಹುಬಲಿ ಮೂರ್ತಿಯನ್ನು ಬಗೆಬಗೆಯಾಗಿ ವರ್ಣಿಸಿ ಹಾಡಿ ಆನಂದಿಸಿದ್ದಾನೆ. ಬೊಪ್ಪಣ ಪಂಡಿತ ಕವಿಯ ಗೊಮ್ಮಟ ಸ್ತುತಿಯಿಂದ ಇಲ್ಲಿ ಒಂದು ಪದ್ಯವನ್ನು ಉದಾಹರಿಸಬಹುದು:

ಅತಿ ತುಂಗಾಕೃತಿಯಾದೊಡಾಗದದರೊಳ್ ಸೌಂದರ್ಯ
ಮೌನ್ನತ್ಯಮುಂ
ನುತ ಸೌಂದರ್ಯಮುಮಾಗೆ ಮತ್ತತಿಶಯಂ ತಾನಾಗ
ದೌನ್ನತ್ಯಮುಂ
ನುತ ಸೌಂದರ್ಯಮುಮೂರ್ಜಿತಾತಿಶಯಮುಂ ತನ್ನಲ್ಲಿ
ನಿಂದಿರ್ದುವೇಂ
ಅತಿಸಂಪೂಜ್ಯಮೊ ಗೋಮಟೇಶ್ವರ ಜಿನಶ್ರೀರೂಪ
ಮಾತ್ಮೋಪಮಂ॥

(ಕೇವಲ ಒಂದು ವಿಗ್ರಹ ತುಂಬ ಎತ್ತರವಾಗಿದ್ದ ಮಾತ್ರಕ್ಕೆ ಅದರಲ್ಲಿ ಸೌಂದರ್ಯವಿರುವುದಿಲ್ಲ. ಎತ್ತರವೂ ಸುಂದರವೂ ಇದ್ದಲ್ಲಿ ಅದಕ್ಕೊಂದು ಅತಿಶಯತೆ ಇರುವುದಿಲ್ಲ. ಆದರೆ ಔನ್ನತ್ಯ, ಹೊಗಳಿಕೆಗೆ ಪಾತ್ರವಾದ ಸೌಂದರ್ಯ, ಏಳಿಗೆಯನ್ನು ಪಡೆದ ಅತಿಶಯ–ಈ ಮೂರೂ ಹಿರಿಮೆ ಗೊಮ್ಮಟ ಮೂರ್ತಿಯಲ್ಲಿದೆ. ಅದರಿಂದಲೇ ಈ ಮೂರ್ತಿಗೆ ಸಮನಾದದ್ದು ಈ ಮೂರ್ತಿಯೇ ಹೊರತು ಬೇರೊಂದಿಲ್ಲ.)

ಶ್ರವಣಬೆಳಗೊಳದ ಗೊಮ್ಮಟ ಮೂರ್ತಿಗೆ ಒಂದು ಸಾವಿರ ವರ್ಷದ ಮಹಾಮಸ್ತಕಾಭಿಷೇಕ ಪೂಜೆಯನ್ನು ೧೯೮೧ರಲ್ಲಿ ನೆರವೇರಿಸಲಾಯಿತು. ಬಾದಾಮಿ, ಐಹೊಳೆ, ಶ್ರವಣಬೆಳಗೊಳ, ಕಾರ್ಕಳ, ವೇಣೂರು, ಗೊಮ್ಮಟಗಿರಿ, ಅರತಿಪ್ಪೂರು, ಧರ್ಮಸ್ಥಳ ಮೊದಲಾದ ಸ್ಥಳಗಳಲ್ಲಿ ಬಾಹುಬಲಿಯ ಮೂರ್ತಿಗಳಿವೆ. ತ್ಯಾಗದ ಸಂದೇಶಗಳನ್ನು ತಿಳಿಸುತ್ತಿವೆ.

ಶಿವ ದೇವಾಲಯಗಳ ಮುಂದೆ ಹೊರಗಡೆ ಬಸವನ ಮೂರ್ತಿಯಿರುತ್ತದೆ. ಹಿಂದೂ ದೇವಾಲಯಗಳ ಮುಂಭಾಗದಲ್ಲಿ ಗರುಡಗಂಭ (ಧ್ವಜಸ್ತಂಭ)ವಿರುತ್ತದೆ. ಜೈನ ದೇವಾಲಯಗಳ ಮುಂದೆ ತುಂಬ ಎತ್ತರವಾದ ಮಾನಸ್ತಂಭವಿರುತ್ತದೆ. ಶ್ರವಣಬೆಳಗೊಳದ ಚಿಕ್ಕ ಬೆಟ್ಟದ ಮೇಲೆ ಇರುವ ಮಾನಸ್ತಂಭ, ದೊಡ್ಡ ಬೆಟ್ಟದ ಮೇಲಿರುವ ಮಾನಸ್ತಂಭ ಮತ್ತು ಊರೊಳಗೆ ಭಂಡಾರ ಬಸದಿಯ ಮುಂದಿರುವ ಮಾನಸ್ತಂಭ ಮನಸೆಳೆಯುತ್ತವೆ. ನಾಗಮಂಗಲ ತಾಲೂಕಿನ

ಕಂಬದ ಹಳ್ಳಿಯಲ್ಲಿರುವ ಮಾನಸ್ತಂಭ ಮತ್ತು ಕಾರ್ಕಳ ಸಮೀಪದ ಹಿರಿಯಂಗಡಿಯಲ್ಲಿರುವ ಬೃಹತ್ ಮಾನಸ್ತಂಭ ನಯನ ಮನೋಹರವಾಗಿದೆ. ಜೈನ ಶಿಲ್ಪದ ಕೊಡುಗೆಯಾಗಿ ಮಾನಸ್ತಂಭವನ್ನೂ ಪರಿಗಣಿಸಬೇಕಾಗುತ್ತದೆ. ಮಾನಸ್ತಂಭದ ತುತ್ತತುದಿಯಲ್ಲಿ ಚೌಕಾಕಾರದ ಒಂದು ಸಣ್ಣ ಮಂಟಪವನ್ನು ಕೂಡಿಸುತ್ತಾರೆ. ಅದರಲ್ಲಿ ಸಾಮಾನ್ಯವಾಗಿ ಬ್ರಹ್ಮ ಯಕ್ಷನ ಮೂರ್ತಿಯಿರುತ್ತದೆ. ಜೈನ ಚಿತ್ರಕಲೆಯೂ ಸ್ಮರಣೀಯವಾದುದು. ಶ್ರವಣಬೆಳಗೊಳ, ಮೂಡಬಿದಿರೆ, ಕಾರ್ಕಳ, ಹುಂಚ ಮೊದಲಾದ ಕಡೆಗಳಲ್ಲಿರುವ ಜೈನ ಮಠಗಳಲ್ಲಿ ಇರುವ ಭಿತ್ತಿ ಚಿತ್ರಗಳು ಜೈನ ಚಿತ್ರಕಲೆಗೆ ಸಾಕ್ಷಿ ಹೇಳುತ್ತವೆ. ಇವಲ್ಲದೆ ಅನೇಕ ಓಲೆ ಗರಿಗಳಲ್ಲೂ, ಓಲೆ ಗ್ರಂಥಗಳಿಗೆ ಎರಡೂ ಕಡೆ ಹಾಕುತ್ತಿದ್ದ ಮರದ ಕಟ್ಟುಗಳ ಮೇಲೂ ಚಿತ್ರಗಳೂ ರೇಖಾ ವಿನ್ಯಾಸಗಳೂ ಕಂಡುಬಂದಿವೆ. ಜೈನ ಸಿದ್ಧಾಂತದ ಪ್ರತಿಪಾದನೆ ಹಾಗೂ ಶುಭ ಅಶುಭ ಸ್ವಪ್ನ ದರ್ಶನ ಮೊದಲಾದುವನ್ನು ತೋರಿಸುವ ಜೈನ ಧರ್ಮಕ್ಕೆ ನಿಶಿಷ್ಟವಾದ ಚಿತ್ರಗಳು ಹತ್ತಾರಿವೆ.

ಕರ್ನಾಟಕದಲ್ಲಿ ಜೈನ ಧರ್ಮ ತೋರಿದ ಹಿರಿಮೆ ಹಾಗೂ ತೆರೆದ ಹೊಸ ಅಧ್ಯಾಯಗಳಲ್ಲಿ ನಿಸದಿಗಲ್ಲುಗಳನ್ನು ನಿಲ್ಲಿಸುವುದೂ ಮಹತ್ವದ್ದಾಗಿದೆ. ಮರಣವನ್ನು ಕುರಿತು ಒಂದೊಂದು ಧರ್ಮ ಒಂದೊಂದು ರೀತಿಯಲ್ಲಿ ವಿಶ್ಲೇಷಿಸಿ ವಿವರಿಸಿದೆ. ಕೆಲವು ಮುಸ್ಲಿಂ ದೊರೆಗಳು ತಮ್ಮ ಸಮಾಧಿಗಳನ್ನು ತಾವು ಬದುಕಿರುವಾಗಲೇ ಕಟ್ಟಿಸಿಬಿಡುತ್ತಿದ್ದರು. ಹಿಂದೂ ಧರ್ಮದಲ್ಲಿ ಸತ್ತವರನ್ನು ಹೂಳುವುದು, ಸುಡುವುದು ಎರಡೂ ಉಂಟು. ಜೈನರು ಮೃತರನ್ನು ಸುಡುತ್ತಾರೆ. ಸಾಮಾನ್ಯವಾಗಿ ಸಹಜವಾಗಿ ಬರುವ ಸಾವಲ್ಲದೆ ಮನುಷ್ಯ ಇನ್ನೆರಡು ರೀತಿಯಲ್ಲೂ ಸಾಯಬಹುದು. ನೀರಿಗೆ ಬೀಳುವುದು, ಬೆಂಕಿ ಹಚ್ಚಿಕೊಳ್ಳುವುದು, ಬೆಂಕಿಗೆ ಬೀಳುವುದು; ನೇಣು ಹಾಕಿಕೊಳ್ಳುವುದು, ವಿಷಪ್ರಾಶನ ಮೊದಲಾದುವು ಉತ್ತಮವೆನ್ನಿಸಿಕೊಳ್ಳದ ಮರಣವಾಗುತ್ತದೆ. ಇದನ್ನು ಆತ್ಮಹತ್ಯೆ ಹಾಗೂ ಬಾಲಮರಣವೆಂದು ಕರೆಯಲಾಗಿದೆ. ಇದಕ್ಕೆ ಪ್ರಾಶಸ್ತ್ಯವಿಲ್ಲ. ಎಲ್ಲ ರೀತಿಯಿಂದಲೂ ಮಹತ್ವ ಪಡೆಯುವ ಮರಣವೆಂದರೆ ಸಮಾಧಿ ಮರಣ. ಈ ಆದರ್ಶ ಮರಣವನ್ನು ಜೈನ ಧರ್ಮದಲ್ಲಿ ಪಂಡಿತ ಮರಣವೆನ್ನಲಾಗಿದೆ. ಇನ್ನೂ ಜೀವಿಸಲು ಅವಕಾಶವಿದ್ದರೂ ಸಾವನ್ನು ಸಂತೋಷದಿಂದ ಸ್ವಾಗತಿಸುವುದು ಸಮಾಧಿ ಮರಣ. ಇದಕ್ಕೆ ತುಂಬ ಆತ್ಮಶಕ್ತಿ ಇರಬೇಕು. ಸಲ್ಲೇಖನ ವ್ರತವೆಂದೂ ಇದಕ್ಕೆ ಹೆಸರಿದೆ. ಈ ಬಗೆಯ ಶ್ರೇಷ್ಠ ಮರಣವನ್ನು ಪಡೆದ ಮಹಾತ್ಮರ ನೆನಪಿಗಾಗಿ ನಿಲ್ಲಿಸುವ ಕಲ್ಲನ್ನು ನಿಸದಿಗೆ ಎಂದು ಕರೆಯುತ್ತಾರೆ. ಶ್ರವಣಬೆಳಗೊಳದಲ್ಲಿ ಹತ್ತಾರು ನಿಸದಿಗೆಗಳಿವೆ. ವೀರಗಲ್ಲು, ಮಾಸ್ತಿ ಕಲ್ಲು ನಿರ್ಮಿಸುವ ಹಾಗೂ ಬೃಂದಾವನ ಕಟ್ಟಿಸುವ ಪದ್ಧತಿಯ ಮೇಲೆ ಜೈನ ಸಮಾಧಿ ಮರಣದ ಪ್ರಭಾವವಿದೆ. ಜೈನ ಯತಿಗಳು ಮರಣಿಸಿದಾಗ ಅವರ ಚರಣಗಳ ಗುರುತನ್ನು ಶಿಲೆಯಲ್ಲಿ ಕೆತ್ತಿ ಪಾದಪೂಜೆ ಮಾಡುವುದೂ ಉಂಟು.

ಕರ್ನಾಟಕದಲ್ಲಿ ಜೈನ ಧರ್ಮ ಅಮರವಾಗಿರುವುದು ತನ್ನ ಸಾಹಿತ್ಯದ ಮೂಲಕ. ಕನ್ನಡ ಸಾಹಿತ್ಯಕ್ಕೆ ಮೊದಲು ಕೃಷಿ ಮಾಡಿದವರೆಲ್ಲ ಜೈನರು. ಗದ್ಯ, ಪದ್ಯ ಎರಡರಲ್ಲೂ ಅವರು ಆದ್ಯರು. ವಡ್ಡಾರಾಧನೆ, ಚಾವುಂಡರಾಯ ಪುರಾಣ, ನೋಂಪಿಯ ಕಥೆಗಳು ಕನ್ನಡ ಗದ್ಯದ ಎಲ್ಲ ನಡಿಗೆಯನ್ನೂ ವಿಲಾಸವನ್ನೂ ತೋರಿಸುತ್ತವೆ. ಚಂಪೂ ಸಾಹಿತ್ಯದಲ್ಲಿ ಜೈನ ಕವಿಗಳು ಸೀಮಾ ಪುರುಷರು. ಆದಿಕವಿ ಪಂಪ ಇಂದಿಗೂ ಅನನ್ಯ ಮಹಾಕವಿಯಾಗಿದ್ದಾನೆ. ಆತನ ವಿಕ್ರಮಾರ್ಜುನ ವಿಜಯ-ಆದಿಪುರಾಣ ಶ್ರೇಷ್ಠ ಮಹಾಕಾವ್ಯಗಳು. ಒಂದು ಲೌಕಿಕ ಕಾವ್ಯವನ್ನೂ ಮತ್ತೊಂದು ಆಗಮಿಕ ಕಾವ್ಯವನ್ನೂ ಬರೆದು ಅವನು ಹಾಕಿಕೊಟ್ಟ ಹೆದ್ದಾರಿಯಲ್ಲಿ ಪೊನ್ನ, ರನ್ನ, ಜನ್ನ. ನಾಗಚಂದ್ರ, ನೇಮಿಚಂದ್ರ ಮೊದಲಾದ ಕವಿಗಳು ರಚಿಸಿರುವ ಕೃತಿಗಳು ಕನ್ನಡಕ್ಕೆ ಕೊಟ್ಟ ಕಾವ್ಯ ಕಾಣಿಕೆಯಾಗಿದೆ. ವಿಕೃತ ಕಾಮದ ವಿಶ್ಲೇಷಣೆಯಾಗಿರುವ ಜನ್ನನ ಯಶೋಧರ ಚರಿತೆ ಕನ್ನಡದ ಮಹತ್ವದ ಕೃತಿಗಳಲ್ಲೊಂದು. ವೀರರಸ ಹೆಪ್ಪುಗಟ್ಟಿರುವ ಸಾಹಸ ಭೀಮ ವಿಜಯ ರನ್ನನ ಕೃತಿರತ್ನ. ಶೃಂಗಾರ ರಸಕ್ಕೆ ಕಾವ್ಯದ ರೂಪು ಕೊಟ್ಟು ನೇಮಿಚಂದ್ರ ಬರೆದಿರುವ ಲೀಲಾವತಿ, ಅರ್ಧನೇಮಿ ಪುರಾಣ ಅಪೂರ್ವ. ಕುಮುದೇಂದು, ಮಂಗರಸ, ಸಾಳ್ವ ಕವಿ ಮೊದಲಾದಕವಿಗಳು ಷಟ್ಪದಿ, ಛಂದಸ್ಸಿನಲ್ಲಿ ಉತ್ತಮ ಕಾವ್ಯಗಳನ್ನು ಬರೆದಿದ್ದಾರೆ. ಸಾಂಗತ್ಯದಲ್ಲಿ ಮೇರು ಕೃತಿಯಾದ ಭರತೇಶ ವೈಭವವನ್ನು ಬರೆದ ರತ್ನಾಕರವರ್ಣಿ ನೂರಾರು ಹಾಡುಗಳನ್ನೂ ಮೂರು ಶತಕಗಳನ್ನೂ ರಚಿಸಿದ್ದಾನೆ. ಚಂದನಾಂಬಿಕೆಯ ಕಥೆ ತ್ರಿಪದಿಯಲ್ಲಿ ಪೂರ್ಣವಾಗಿ ಬರೆದ ಅಪರೂಪದ ಪುಟ್ಟ ಕೃತಿ. ಜೈನ ಯಕ್ಷಗಾನಗಳೂ ಇವೆ. ಕನ್ನಡಕ್ಕೆ ಎಲ್ಲ ಬಗೆಯ ಶಾಸ್ತ್ರ ಕೃತಿಗಳನ್ನೂ ಜೈನ ಕವಿಗಳು ಸಿದ್ಧಪಡಿಸಿಕೊಟ್ಟಿದ್ದಾರೆ. ನಾಗವರ್ಮ, ಕೇಶಿರಾಜ, ..ಭಟ್ಟಾಕಳಂಕ ವ್ಯಾಕರಣ ಬರೆದಿದ್ದಾರೆ. ಕೆಲವರು ಪ್ರಾಕೃತ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಅಲಂಕಾರ ಶಾಸ್ತ್ರ ಗ್ರಂಥಗಳನ್ನೂ ಜ್ಯೋತಿಷ್ಯ, ಛಂದಸ್ಸು, ಅಶ್ವಶಾಸ್ತ್ರ, ಗಜಶಾಸ್ತ್ರ, ಮಳೆಶಾಸ್ತ್ರ, ವೈದ್ಯಶಾಸ್ತ್ರ, ಅಡಿಗೆಕಲೆ-ಹೀಗೆ ಹತ್ತಾರು ವಿಷಯಗಳಿಗೆ ಸೇರಿದ ಗ್ರಂಥಗಳೂ ಜೈನ ಕವಿಗಳ ಕಾಣಿಕೆಯಾಗಿ ಹೊರಬಂದಿವೆ. ಕನ್ನಡದಲ್ಲಿ ಸಿಗುವ ಮೊಟ್ಟಮೊದಲನೆಯ ಕೃತಿಯಾದ ಕವಿರಾಜಮಾರ್ಗ ಜೈನ ಕವಿಯೊಬ್ಬನ ಕೃತಿಯಾಗಿದೆ. ಅಷ್ಟಾದಶ ವರ್ಣನೆಗೆ ಸಂಬಂಧಿಸಿದ ಉತ್ತಮ ಪದ್ಯಗಳನ್ನು ಜೈನ ಕವಿ ಮಲ್ಲಿಕಾರ್ಜುನನು "ಸೂಕ್ತಿ ಸುಧಾರ್ಣವ" ಎಂಬ ಹೆಸರಿನಿಂದ ಸಂಕಲನ ಮಾಡಿದ್ದಾನೆ.

ಒಟ್ಟಿನಲ್ಲಿ ಹೇಳುವುದಾದರೆ ಜೈನ ಕವಿಗಳು ಕನ್ನಡ ಭಾಷೆಗೆ ಸತ್ವ ತುಂಬಿದಂತೆ ಕನ್ನಡ ಸಾಹಿತ್ಯಕ್ಕೂ ವಿಸ್ತಾರ ವೈಭವ ಹಾಗೂ ವೈವಿಧ್ಯವನ್ನು ತಂದುಕೊಟ್ಟರು. ಸಂಸ್ಕೃತ ಪ್ರಾಕೃತ ಭಾಷೆಗಳ ಉತ್ತಮ ಕೃತಿಗಳನ್ನೂ ಕಥೆಗಳನ್ನೂ ಕನ್ನಡಕ್ಕೆ ಪರಿವರ್ತಿಸಿದರು. ಕರ್ನಾಟಕದ ವಾಸ್ತುಕಲೆಗೆ ಶಿಲ್ಪಕಲೆಗೆ, ಚಿತ್ರಕಲೆಗೆ ಜೈನ ಧರ್ಮ ಕೊಟ್ಟ ಕೊಡುಗೆಯೂ ಮಹತ್ವವಾದುದು. ಸತ್ಯ, ಅಪರಿಗ್ರಹ, ಅಹಿಂಸೆ, ಅಚೌರ್ಯ, ಜೀವದಯೆ ಮೊದಲಾದ ಸಾತ್ವಿಕವಾದ ಆದರ್ಶ ಭಾವನೆಗಳ ಪ್ರಸಾರದಿಂದ ಮಾನವೀಯ ಮೌಲ್ಯಗಳನ್ನು ನೆಲೆಗೊಳಿಸಿದರು. ನೀನೂ ಜೀವಿಸು, ಇತರರನ್ನೂ ಜೀವಿಸಲು ಬಿಡು ಎಂಬ ಉದಾತ್ತ ವಿಶ್ವತತ್ವವನ್ನು ಜೈನ ಧರ್ಮ ಕರ್ನಾಟಕದಲ್ಲಿ ಬಿತ್ತರಿಸಿತು. ಅನ್ಯ ಧರ್ಮಗಳೊಡನೆ ಸಹನೆ, ಸೌಹಾರ್ದಗಳಿಂದ ಎರಡು ಸಾವಿರ ವರ್ಷ ಇಲ್ಲಿ ಜೈನ ಧರ್ಮ ಬಾಳುತ್ತಾ ಬಂದಿದೆ. ಅದಕ್ಕೆ ಹತ್ತನೆಯ ಶತಮಾನದ ಊರ್ಜಿತಾವಸ್ಥೆ ಇಂದು ಇಲ್ಲಿ ಇಲ್ಲದಿರಬಹುದು. ಆದರೆ ಅದು ಏರುಗಾಲವೂ ಅಲ್ಲದ ಇಳಿಗಾಲವೂ ಅಲ್ಲದ ಒಂದು ಸಮ ಸ್ಥಿತಿಯಲ್ಲಿ ಕರ್ನಾಟಕದ ಸಮಷ್ಟಿ ರಚನೆಯಲ್ಲಿ ಸಾಮರಸ್ಯಗೊಂಡಿದೆ. ಇಲ್ಲಿನ ಜನತೆಯ ಪ್ರಶಂಸೆ, ಪ್ರೀತಿಗೆ ಪಾತ್ರವಾಗಿದೆ. ಸರ್ವಜ್ಞ ಹೇಳುವ ಮಾತು, ಕರ್ನಾಟಕ ಜೈನ ಧರ್ಮವನ್ನು ಹೇಗೆ ಕಂಡಿದೆ ಎಂಬುದಕ್ಕೆ ತಕ್ಕ ಅಭಿವ್ಯಕ್ತಿಯಾಗಿದೆ.

ಕೊಲುವ ಧರ್ಮವನೊಯ್ದು ಒಲೆಯೊಳಗೆ ಇಕ್ಕುವ
ಕೊಲಲಾಗದೆಂಬ ಜೈನನ ಮತವನ್ನೆ
ತಲೆಯ ಮೇಲಿರಲಿ ಸರ್ವಜ್ಞ.

# ಕರ್ನಾಟಕದಲ್ಲಿ ಅದ್ವೈತ

ಡಾ. ಕೆ. ಕೃಷ್ಣಮೂರ್ತಿ

ಅದ್ವೈತ ಎಂಬುದು ಋಷಿಗಳು ನಿರ್ಮಿಸಿದ ಅತ್ಯಂತ ಪ್ರಾಚೀನತಮ ದಾಖಲೆಗಳು ಎನಿಸಿದ ಉಪನಿಷತ್ತುಗಳ ವಿಚಾರಕ್ಕೆ ಕೊಟ್ಟ ಹೆಸರು. ಈ ಋಷಿಗಳು ಜ್ಞಾನ ಪಥವನ್ನು ಅನುಸರಿಸುತ್ತಾ ಸಾಮಾನ್ಯ ಮಾನವ ಸಂಸಾರ ಜಾಲದಿಂದ ಅತೀತರಾಗಿ ಅಮರತ್ವ ಅಥವಾ ಆತ್ಮ ಸಾಕ್ಷಾತ್ಕಾರವನ್ನು ಪಡೆವವರು. ಇವರ ಜ್ಞಾನಪಥ ಜನಪ್ರಿಯತೆಯಿಂದ ರೂಢಿಗತವಾಗಿದ್ದ ಉಪಾಸನಾ ಮಾರ್ಗಗಳಿಗಾಗಲೀ ಇಲ್ಲವೇ ನೈತಿಕ, ಸಾಂಪ್ರದಾಯಿಕ ಮತ್ತು ಲೋಕಹಿತಾರ್ಥಪರ ಶಾಸ್ತ್ರೋಕ್ತ ಕರ್ಮಾನುಸರಣೆಗಾಗಲೀ ಎಷ್ಟೂ ವಿರೋಧವಾಗಿರಲಿಲ್ಲ. ಈ ಜ್ಞಾನಪಥವು ತನ್ನ ವಿಶ್ವವ್ಯಾಪ್ತಿಯಿಂದ ಇವೆಲ್ಲವುಗಳನ್ನು ಒಳಗೊಂಡುದಾಗಿತ್ತು.

ಅದ್ವೈತ ಕೇವಲ ಒಂದು ಜೀವನ ಪಥವಲ್ಲ. ಅದು ತತ್ವಜ್ಞಾನದ ಅತ್ಯುಚ್ಚ ಸಾಧನೀಯ ಶಿಖರವೂ ಆಗಿದೆ. ಅದು ಮಾನವ ಕಲ್ಪನೆಯ ಧಾರ್ಮಿಕ ಆಚಾರ – ವಿಚಾರಗಳ ಪ್ರತಿಯೊಂದು ಛಾಯೆಯನ್ನು ತಾರ್ಕಿಕವಾಗಿ ವಿವರಿಸಿ ಅದಕ್ಕೆ ತನ್ನೊಳಗೆ ಇಂಬುಗೊಡುತ್ತದೆ. ಅದು ಕ್ರಮಬದ್ಧ ವಿಶ್ವದ ಒಗಟನ್ನು ಬಿಡಿಸುತ್ತದೆ. ಅದನ್ನು ಬಿಡಿಸುವುದು ಬುದ್ಧಿ ಚಮತ್ಕಾರದ ಚಾಕಚಕ್ಯತೆಯಿಂದಾಗಲೀ, ಯಾವುದೇ ಭಾವೋದ್ರೇಕದಿಂದಾಗಲೀ ಅಲ್ಲ; ಆದರೆ ವಿಲಕ್ಷಣ ಅಂತಃಸ್ಫುರಣೆಯ ಅಂತರ್ ದೃಷ್ಟಿಯಿಂದ ಆತ್ಮದ ಆಳದಲ್ಲಿಳಿದು ಸಮಸ್ಯೆಯ ಪರಿಹಾರವನ್ನು ಕಂಡುಹಿಡಿಯಲಾಗುತ್ತದೆ. ಹಾಗೆ ಮಾಡುವಲ್ಲಿ ಆತ್ಮದ ಆಳದಲ್ಲಿದ್ದು ಎಲ್ಲವನ್ನೂ ಅನುಭವಿಸುವ 'ನಾನು' ಎಂಬುದು ವಿಸ್ತಾರಗೊಳ್ಳುತ್ತ 'ಕೇವಲ' ಎನಿಸುವ ವಿಶಾಲ ಪರಿಧಿಯ ಪರಾತ್ಪರ ವಸ್ತುವಿನ ಅಥವಾ ಪರಿಪೂರ್ಣ ದೇವತ್ವದ ಆಯಾಮಗಳ ವರೆಗೆ ಹಿಗ್ಗುವುದು. ತಾನು ಸಂಸಾರದಲ್ಲಿ ಪಡುವ ಎಲ್ಲಾ ಕಷ್ಟ ಕ್ಲೇಶಗಳು ಒಂದು ಬಗೆಯ ಭ್ರಾಂತಿ, ಸ್ವಯಂ ನಿರ್ಮಿತ ಮಾಯಾಜಾಲ ಎಂಬುದನ್ನು ಪರಿಮಿತ ಆತ್ಮ ಕಂಡುಕೊಳ್ಳುತ್ತದೆ. ಬೆನ್ನು ಹತ್ತಿರುವ ಈ ಘನಘೋರ ಸ್ವಪ್ನ ಪಿಶಾಚಿಯ ಪೊಳ್ಳುತನದ ಅರಿವಾದ ತಕ್ಷಣವೇ ಅದು ಇಂದ್ರಜಾಲದ ಕಣ್ಕಟ್ಟು – ಮಾಟಗಳಂತೆ ಮಾಯವಾಗಿ ಬಿಡುತ್ತದೆ. ಆಗ ಆತ್ಮ ಸಚ್ಚಿದಾನಂದದ ಅಪರಿಮಿತ ನೆಲೆಯಲ್ಲಿ ಬಿಡುಗಡೆ ಹೊಂದುತ್ತದೆ. ಈ ಅಪರೋಕ್ಷಾನುಭೂತಿ ಅಥವಾ ದಿವ್ಯಾನುಭವ ಎಂದರೆ ತಾನು, ನಿಜದಲ್ಲಿ ಅನಂತನೂ, ಕೇವಲನೂ ಆಗಿರುವ ಬ್ರಹ್ಮಸ್ವರೂಪನೆಂದೇ ಭಾವಿಸುವ ಅನುಭವ ಅದ್ವೈತಾನುಭವವೇ ಆಗಿದೆ.

## ಉಗಮ

ಅದ್ವೈತ ಸಂಪ್ರದಾಯ ಬ್ರಹ್ಮದೇವರಿಂದಲೇ ಆರಂಭವಾದುದು. ಇದರ ಪ್ರಾಚೀನತಮ ಗುರು ಪರಂಪರೆಯಲಿ ವಸಿಷ್ಠ–ವಾಮದೇವರಂಥ ಪೌರಾಣಿಕ ಋಷಿಗಳಿದ್ದಾರೆ. ಉಪನಿಷತ್ತುಗಳ ತತ್ವಜ್ಞಾನ ಬ್ರಹ್ಮವಿದ್ಯೆಯೆಂದು ಗಣಿಸಲ್ಪಡುತ್ತಿದ್ದು, ಇದನ್ನು ಆಯ್ಕೆ ಹೊಂದಿದ ಕೆಲವರಿಗೆ ಮಾತ್ರ ಕಲಿಸಿಕೊಡುತ್ತಿದ್ದರು. ಅತ್ಯುಚ್ಚ ಜ್ಞಾನಾನ್ವೇಷಣೆಯೂ, ಭಕ್ತಿ ಮತ್ತು ತಪಸ್ಸಾಧನಗಳ ಅಭ್ಯಾಸವುಳ್ಳವರೇ ಈ ಬ್ರಹ್ಮವಿದ್ಯೆಗೆ ಅರ್ಹರೆನಿಸುತ್ತಿದ್ದರು.

"ನಾನು ಕೇವಲ ಬ್ರಹ್ಮಸ್ವರೂಪವೇ ಆಗಿದ್ದೇನೆ" (ಅಹಂ ಬ್ರಹ್ಮಾಸ್ಮಿ) ಎಂಬುದೇ ಅದ್ವೈತ ತತ್ವದ ಸಂವಾದಿ ವಾಕ್ಯ. ತಾತ್ವಿಕ ಮನೋವೃತ್ತಿಯಿಲ್ಲದವರು ಇದನ್ನು ಬಹುಸುಲಭವಾಗಿ ಅಪಾರ್ಥ ಮಾಡಿಕೊಳ್ಳುವರು. ಈ ಗೂಢಸಿದ್ಧಾಂತ ತೀಕ್ಷ್ಣ ಆತ್ಮಾನ್ವೇಷಣಾ ಯುಗದ ಅತ್ಯುಚ್ಚ ಸಿದ್ಧಿಯ ಪ್ರತೀಕ. ಈ ಯುಗ "ಬ್ರಾಹ್ಮಣ" ಗಳೆಂಬ ಮೂಲಗ್ರಂಥಗಳಲ್ಲಿ ಉಕ್ತವಾಗಿರುವ ರಹಸ್ಯಮಯ ಮಂತ್ರ–ತಂತ್ರ–ವಿಧಿವಿಧಾನಗಳಿಂದ ಕೂಡಿದ ಯಜ್ಞ–ಯಾಗಾದಿಗಳ ಸೂಕ್ಷ್ಮ ವಿಶ್ಲೇಷಣೆಯ ಜಾಗೃತಾವಸ್ಥೆಯ ಅನಂತರ ಬಂದುದು. ವೇದ ಮಂತ್ರಗಳಲ್ಲಿಯೇ ಇವರಡು ಪ್ರವೃತ್ತಿಗಳ ಬೀಜಗಳು ಹುದುಗಿ ಕೊಂಡಿದ್ದವು ಮತ್ತು ತತ್ವಜ್ಞಾನದ ಪ್ರವೃತ್ತಿ ಕರ್ಮಕಾಂಡದ ಅಥವಾ ವೈದಿಕ ಮತಾಚರಣೆಯ ಕುಂದು ಕೊರತೆಗಳನ್ನು ಎತ್ತಿ ತೋರಿಸುತ್ತ ಉಪನಿಷತ್ತುಗಳಲ್ಲಿ ತನ್ನ ಪರಾಕಾಷ್ಠೆಯನ್ನು ಕಂಡಿದೆ. ಬೌದ್ಧಮತ ಇದೇ ವೈದಿಕ ಮತಾಚರಣೆಯ ವಿರುದ್ಧವಾಗಿ ಎದ್ದ ಮತ್ತೊಂದು ಪ್ರತಿಕ್ರಿಯೆ. ಆದರೆ ವೈದಿಕ ಮತಾಚರಣೆಯನ್ನು ಕಟುವಾಗಿ ಟೀಕಿಸುವಲ್ಲಿ ಬೌದ್ಧಮತ ಅದಕ್ಕೆ ಸರಿಸಮವೆನಿಸುವ ಮತ್ತಾವ ತೇಜಸ್ವಿ ಪರಿಹಾರವನ್ನೊದಗಿಸಲಿಲ್ಲ. ತಾತ್ವಿಕ ವಾದ–ವಿವಾದಗಳಿಂದ ವೈದಿಕ ಮತಧರ್ಮದ ಅಭದ್ರತೆಯನ್ನು ಎತ್ತಿ ತೋರಿಸಿದರೂ ಅದಕ್ಕೆ ಪ್ರತಿಯಾಗಿ ಯಾವುದನ್ನೂ ಸ್ಥಾಪಿಸದೆ ಎಲ್ಲವೂ ಬರಿದು (ಸರ್ವಂ ಶೂನ್ಯಂ) ಎಂಬ ಸಿದ್ಧಾಂತದಲ್ಲೆ ಅದು ಕೊನೆಗೊಂಡಿತು. ಆದರೆ ಅದ್ವೈತವೊ, ವೈದಿಕ ಧರ್ಮ ಹಾಗೂ ವಿಚಾರಗಳೊಳಗಿಂದಲೇ ಹೊಮ್ಮಿದ ಅವುಗಳ ಪರಿಷ್ಕೃತ ತತ್ವವಾಗಿದೆ.

ಪುರಾಣೇತಿಹಾಸಗಳ ಕಾಲದಲ್ಲಿ ಅದ್ವೈತ ಬಹುಮಟ್ಟಿಗೆ ಒಪ್ಪಿಕೊಳ್ಳಬಹುದಾದ ಲೋಕಪ್ರಿಯ ರೂಪವನ್ನು ತಳೆಯಿತು. ಕಾಲ್ಪನಿಕ ಪುರಾಣ ಪುರುಷನೆನಿಸಿದ ವ್ಯಾಸಮುನಿಗಳು ಕರ್ಮ–

ಭಕ್ತಿಗಳಿಗೆ ಸಂಬಂಧಿಸಿದಂತೆ ತತ್ವವಿಚಾರವನ್ನು ಸುಲಭ ಭಾಷೆಯಲ್ಲಿ ವಿವರಿಸುತ್ತಾ, ಭಗವದ್ಗೀತೆಯಲ್ಲಿ ಅದ್ವೈತ ತತ್ವಕ್ಕೆ ವ್ಯವಸ್ಥಿತ ರೂಪ ಕೊಟ್ಟರು. ಮೋಕ್ಷವೇ ಪರಮಗುರಿಯೆಂದು ಸುಸ್ಪಷ್ಟವಾಗಿ ಸ್ಥಾಪಿಸಲಾಯಿತು. ಈ ಪರಮೋಚ್ಚ ಗುರಿಯನ್ನು ಸಾಧಿಸಲು ಹಲವಾರು ಯೋಗಗಳನ್ನು ಅಥವಾ ಸಾಧನಾ ಪಥಗಳನ್ನು ಮಂಡಿಸಲಾಯಿತು. ವ್ಯಾಸರ ಸಮನ್ವಯ ದೃಷ್ಟಿ ನಿಜವಾಗಿಯೂ ದಿಗ್ಭ್ರಮೆಗೊಳಿಸುವ ಮಟ್ಟಿಗೆ ವಿಶ್ವವ್ಯಾಪಕ. ಧರ್ಮದ ದೇವತಾರೂಪ ಇಲ್ಲಿ ವಿಶ್ವರೂಪವಾಗಿ ಅರ್ಜುನನಿಗೆ ಪ್ರಕಟವಾಗುವುದಲ್ಲದೆ ಈ ಅನಂತ ದರ್ಶನ ಪಡೆಯಲು ದಿವ್ಯದೃಷ್ಟಿಯನ್ನು ದಯಪಾಲಿಸುತ್ತದೆ. ಮಾನವನ ಪರಮೋಚ್ಚ ಗುರಿ ಅಥವಾ "ಪರಮ ಪುರುಷಾರ್ಥ" ಮೋಕ್ಷಕ್ಕಿಂತ ಎಷ್ಟೂ ಕಡಿಮೆಯದಲ್ಲ. ಅದು ಜೀವನದ ಕರ್ತವ್ಯ ಕರ್ಮಗಳಿಂದ ವಿಮುಖಗೊಳಿಸದೆ ಮಾನವನನ್ನು ಘೋರತಮ ಕರ್ತವ್ಯದತ್ತ ಸ್ಥಿತಪ್ರಜ್ಞನ ರೀತಿಯಲ್ಲಿ ಅಚಲ ನಿರ್ಧಾರದಿಂದ ಅಣಿಯಾಗಲು ಒಪ್ಪಿಸುತ್ತದೆ.

ಶ್ರುತಿ (ವೇದಗಳ ದಿವ್ಯದರ್ಶನ) ಮತ್ತು ಸ್ಮೃತಿ (ಪುರಾಣೇತಿಹಾಸ) ವಿಶದವಾಗಿ ನಿರೂಪಿಸಿದ ಮೂಲಭೂತ ಸಿದ್ಧಾಂತಗಳನ್ನು ಸೂಕ್ಷ್ಮ ತರ್ಕಬದ್ಧ ರೀತಿಯಲ್ಲಿ ಮಂಡಿಸಿದ್ದು ಅದ್ವೈತದ ಮೂರನೆಯ ಹಂತ.

ಇದು ಸೂತ್ರಗಳ ಕಾಲದ ಸಿದ್ಧಿ; ಮತ್ತು ಬಾದರಾಯಣರು ಬ್ರಹ್ಮಸೂತ್ರಗಳ ಸುವಿಖ್ಯಾತ ಲೇಖಕರು. ಸೂತ್ರಕಾರರು ಉಪನಿಷತ್ತುಗಳ ತತ್ವಗಳಲ್ಲಿ ಶ್ರೇಷ್ಠ ಹೂಗಳನ್ನಾಯ್ದು ಚೆಲುವಾದ ಮಾಲೆಗಳನ್ನು ಕಟ್ಟುತ್ತಾರೆ. ಎಲ್ಲ ಮೂಲ ಪಾಠಗಳನ್ನು ಶುದ್ಧ ತಾತ್ವಿಕದೃಷ್ಟಿಯಿಂದ ಅರ್ಥೈಸುತ್ತಾ ಅಲ್ಲಿಯ ತೋರಿಕೆಯ ಪಾಠಕ್ಲೇಶಗಳನ್ನೂ, ಸಂಗತಿಗಳನ್ನೂ ಅವರು ನಿವಾರಿಸುತ್ತಾರೆ.

ಎಲ್ಲಾ ಭಾರತೀಯ ತತ್ವಜ್ಞಾನಕ್ಕೆ ಅಥವಾ ವೇದಾಂತಕ್ಕೆ ಈ ಮೂರು ಪರಂಪರೆಗಳು ಮೂಲಭೂತ ಆಕರ ಗ್ರಂಥಗಳನ್ನು ಒದಗಿಸಿಕೊಟ್ಟಿವೆ ಮತ್ತು ಇವೆಲ್ಲವೂ ಎಷ್ಟು ಮಟ್ಟಿಗೆ ಬಿಗಿ ಹಾಗೂ ಸೂತ್ರಬದ್ಧವಾಗಿವೆಯೆಂದರೆ ವಿವರಣಾತ್ಮಕ ಗ್ರಂಥಗಳ ನೆರವಿಲ್ಲದೆ ಇವುಗಳನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಿಲ್ಲ. ಉಪನಿಷತ್ತುಗಳ ಮತ್ತು ಸೂತ್ರಗಳ ಕೆಲಭಾಗಗಳನ್ನು ಕುರಿತು ಬರೆದ ಭಾಷ್ಯಕಾರರಲ್ಲಿ ಉಪವರ್ಷ, ಬೋಧಾಯನ, ಟಂಕ, ದ್ರಮಿಡ, ಭಾರುಚಿ, ಭರ್ತೃಮಿತ್ರ, ಬ್ರಹ್ಮನಂದಿ ಮೊದಲಾದವರ ಹೆಸರುಗಳು ಕೇಳಿ ಬರುತ್ತವೆ. ಇವರಲ್ಲಿ ಅನೇಕರು ಶಂಕರಾಚಾರ್ಯರಿಗಿಂತ ಮತ್ತು ಅವರ ಗುರುಗಳಾಗಿದ್ದ ಗೌಡಪಾದರಿಗಿಂತ ಮುಂಚೆ ಇದ್ದವರು. ಆದರೆ ಅವರ ಭಾಷ್ಯಗ್ರಂಥಗಳೆಲ್ಲ ನಾಶವಾಗಿ ಹೋಗಿವೆ. ಅವುಗಳಲ್ಲಿ ಬಹುಪಾಲಿನ ಗ್ರಂಥಗಳು ಬಹುದೊಡ್ಡ ಅದ್ವೈತಾಚಾರ್ಯರಿಂದ ಖಂಡಿಸಲ್ಪಟ್ಟಿವೆ.

ಶಂಕರಾಚಾರ್ಯರಿಗಿಂತ ಮೊದಲು ರಚಿತವಾದ ಏಕೈಕ ಉಪಲಬ್ಧ ಗ್ರಂಥವೆಂದರೆ ಮಾಂಡೂಕ್ಯ ಉಪನಿಷತ್ತನ್ನು ಕುರಿತು ಗೌಡಪಾದರ "ಕಾರಿಕಾ" ಅಥವಾ ಶ್ಲೋಕರೂಪದ ಭಾಷ್ಯ. ಬೌದ್ಧ ಮಾಧ್ಯಮಿಕರಿಂದ ಚರ್ಚಿಸಲ್ಪಟ್ಟ "ಮಾಯಾ" ವಿಚಾರವನ್ನು ದೃಢಾಭಿಪ್ರಾಯದ ತಿರುವಿನೊಂದಿಗೆ ಸಂಯೋಜಿಸಿ ಪೂರ್ಣಗೊಳಿಸಲಾಗಿದೆ. ಕಾರ್ಯಕಾರಣ ತತ್ವ ಅಥವಾ ಉತ್ಪತ್ತಿವಾದ ಎಂಬುದು ಮನಸ್ಸಿನ ಕಟ್ಟುಕಥೆ ಅಥವಾ ಹುರುಳಿಲ್ಲದ ಕಲ್ಪನೆಯಾಗಿದೆಯೆಂದು ಇಲ್ಲಿ ತೋರಿಸಲಾಗಿದೆ. ಗೌಡಪಾದರು ಪ್ರಚ್ಛನ್ನಬುದ್ಧರಲ್ಲ; ಏಕೆಂದರೆ "ಪ್ರತಿಯೊಂದು ಪದಾರ್ಥವೂ ಏಕೈಕ ಪರವಸ್ತು ಅಥವಾ ಬ್ರಹ್ಮತತ್ವದಿಂದ ಅಭಿನ್ನವಾದುದೆಂಬ ಅವರ ವಾದ ನಿಸ್ಸಂದಿಗ್ಧವಾದುದು."



ಆದ್ದರಿಂದ ಅದ್ವೈತದ ನಿಜವಾದ ಚರಿತ್ರೆ ಆರಂಭವಾಗುವುದು ಜಗದ್ಗುರು ಶಂಕರಾಚಾರ್ಯ (ಕ್ರಿ.ಶ.೭೮೮–೮೨೦) ರಿಂದಲೇ. ಮೇಲೆ ಸಮೀಕ್ಷಿಸಿದ ಎಲ್ಲಾ ಮೂಲಭೂತ ಆಕರ ಗ್ರಂಥಗಳನ್ನು ಕುರಿತು ಅಧಿಕಾರಯುಕ್ತ ಭಾಷ್ಯಗ್ರಂಥಗಳನ್ನು ಅವರು ರಚಿಸಿದರು. ಕೇರಳದಲ್ಲಿ ಜನ್ಮ ತಳೆದು ಭಾರತದ ಉದ್ದಗಲಗಳೆಲ್ಲೆಲ್ಲಾ ಹಲವಾರು ಬಾರಿ ಸುತ್ತಾಡಿ ಭಾರತದ ನಾಲ್ಕೂ ದಿಕ್ಕುಗಳಲ್ಲಿ ಅಧ್ಯಾತ್ಮ ವಿದ್ಯಾಪೀಠಗಳನ್ನು ಸ್ಥಾಪಿಸಿದರು. ಇಷ್ಟೆಲ್ಲವನ್ನೂ ಅವರು ಮಾಡಿದ್ದು ತಮ್ಮ ಕೇವಲ ಮೂವತ್ತೆರಡು ವರ್ಷಗಳ ಅಲ್ಪಾಯುಷ್ಯದಲ್ಲಿ ಮಾತ್ರ.

ತಾತ್ವಿಕವಾದ ವಿವಾದಗಳಲ್ಲಿ ಪ್ರಚಂಡ ವಾಗ್ಮಿಗಳಾಗಿದ್ದ ಅವರು ದೇವಾಸ್ತಿಕ್ಯ ಪಂಥಗಳ ಈಶ್ವರವಾದಿಗಳನ್ನೂ ತಮ್ಮ ವಿರೋಧೀ ಪಂಥಗಳ ಪ್ರತಿದ್ವಂದ್ವಿಗಳನ್ನೂ ಸೋಲಿಸಿದರು. ಅವರಲ್ಲಿ ತಾರ್ಕಿಕ ವಾದಕೌಶಲದ ತೇಜಸ್ಸೂ ಆಧ್ಯಾತ್ಮಿಕ ಅನುಭಾವದಿಂದ ಉದ್ಭವಿಸಿದ ದೃಢ ನಂಬಿಕೆಯೂ ಸಮ್ಮಿಲಿತವಾಗಿದ್ದವು. ಅವರ ದೃಷ್ಟಿಯ ಅಗಲ ಹಾಗೂ ಬುದ್ಧಿಯ ಆಳ ಇವು ವೇದಾಂತದ ಚರಿತ್ರೆಯಲ್ಲಿ ಇಂದಿಗೂ ಅಸಮಾನವೆನಿಸಿವೆ. ಮತ್ತು ಅವರ ಕೃತಿಗಳು ಶೈಲಿಯಲ್ಲಿ ಸುಲಲಿತ, ಹಾಗೆಯೇ ವಿಚಾರದಲ್ಲಿ ಗಂಭೀರ.

ಅವರ ಜೀವನದ ಧ್ಯೇಯ ಮುಂದಿನ ಪೀಳಿಗೆಗಾಗಿ ಸದಾ ಪ್ರಜ್ವಲಿಸುವ ಜ್ಞಾನ ದೀಪ್ತಿಯನ್ನು ಬಿಟ್ಟು ಹೋಗುವುದಾಗಿತ್ತು; ಇದರ ಜೊತೆಗೆ ಅದ್ವೈತ ಸಂಪ್ರದಾಯವನ್ನು ವಿಧಿವಿಧಾನಗಳಲ್ಲಿ ಮತ್ತು ಆಚರಣೆ–ಅನುಷ್ಠಾನಗಳಲ್ಲಿ ಎಂದೆಂದಿಗೂ ಜೀವಂತವಾಗಿರಲು ಯೋಗ್ಯ ಮಠಗಳನ್ನು ಸ್ಥಾಪಿಸುವುದೂ ಆಗಿತ್ತು. ದ್ವಾರಕಾಪುರಿ, ಬದರೀನಾಥ, ಕಂಚಿ ಇತ್ಯಾದಿ ಕ್ಷೇತ್ರಗಳಲ್ಲಿ ಅವರು ಮಠಗಳನ್ನು ಸ್ಥಾಪಿಸಿದ್ದೇನೋ ನಿಜ; ಆದರೆ ಕರ್ನಾಟಕದಲ್ಲಿ ಅವರು ಸ್ಥಾಪಿಸಿದ ಶೃಂಗೇರಿ ಮಠವು ಇವೆಲ್ಲವುಗಳಿಗೂ ಕೇಂದ್ರಪೀಠವೆನಿಸಿತು. ಅವರ ಶಿಷ್ಯರೂ ಉದ್ದಾಮ ಪಂಡಿತರೂ ಆಗಿದ್ದ ಸುರೇಶ್ವರ ಪ್ರಥಮ ಪೀಠಾಧೀಶರಾಗಿ ಶಂಕರಾಚಾರ್ಯರಿಂದಲೇ ಆಯ್ಕೆಗೊಂಡು ಗದ್ದುಗೆಯೇರಿದ್ದು ಇಲ್ಲಿಯೇ. ಅಂದಿನ ಪ್ರಕ್ಷುಬ್ಧ ದಿನಗಳಲ್ಲಿ ಇಂಥದೊಂದು ಘನವಾದ ಧರ್ಮಪೀಠ ಸ್ಥಾಪನೆಗೆ ಅಭೂತಪೂರ್ವ ಆಶ್ರಯ ನೀಡಿದುದಲ್ಲದೆ ಶತಶತಮಾನಗಳಿಂದ ಇಂದಿನವರೆಗೂ ಈ ಮಠವನ್ನು ಪೋಷಿಸಿಕೊಂಡು ಬಂದುದೂ ಕರ್ನಾಟಕಕ್ಕೆ ಒಂದು ಹೆಮ್ಮೆಯ ವಿಷಯವಾಗಿದೆ.

ಶಂಕರಾಚಾರ್ಯರ ವಿಭೂತಿ ಮತ್ವದಲ್ಲಿ ಎರಡು ಮುಖಗಳಿವೆ. ಒಂದನೆಯದಾಗಿ ತರ್ಕಶಾಸ್ತ್ರವನ್ನು ಹರಿತ ಶಸ್ತ್ರದಂತೆ ಪ್ರಯೋಗಿಸಿ ಪರಾತ್ಪರ ವಸ್ತುವಿನ ನಿತ್ಯರಹಸ್ಯವನ್ನು ಬಹಿರಂಗ ಪಡಿಸಲು ತರ್ಕಶಾಸ್ತ್ರವೇ ಹೇಗೆ ದುರ್ಬಲಸಾಧನವಾಗಿದೆಯೆಂಬುದನ್ನು ಸಿದ್ಧಪಡಿಸುವಲ್ಲಿ ಅವರದು ಎಂದಿಗೂ ಸೋಲದ ಬುದ್ಧಿ. ಎರಡನೆಯದಾಗಿ, ಭಗವಂತನ ಅಸಂಖ್ಯ ರೂಪಗಳಲ್ಲಿ ಯಾವುದೊಂದನ್ನು ಕುರಿತಾಗಲೂ ಅವರಲ್ಲಿ ಹುಟ್ಟುತ್ತಿದ್ದ ಸರ್ವಾರ್ಪಣಾಭಾವದ ಭಕ್ತಿಯ ತೆರೆಗಳಿಂದ ಪುಲಕಿತಗೊಳ್ಳುವ ಅವರ ಕರುಣಾಪೂರ್ಣವಾದ ಹಾಗೂ ಉದಾತ್ತ ಹೃದಯ. ಅವರ ಭಾಷ್ಯಗಳು, ಬುದ್ಧಿಯ ಮೃಷ್ಟಾನ್ನ, ಅವರ ಸ್ತೋತ್ರಗಳು ಆತ್ಮದ ಹೊನಲು. ವಿಷ್ಣು,ಶಿವ, ದೇವಿ, ಗಣಪತಿ ಮುಂತಾದ ಹಲವಾರು ದೇವರುಗಳ ನಾಮ–ರೂಪಗಳನ್ನು ಕುರಿತ ಅವರ ಭಕ್ತಿಯ ಬುಗ್ಗೆಗಳು ಪರಿಶುದ್ಧವಾದ ಕಾವ್ಯದ ರಸಚಿಲುಮೆಗಳಾಗಿವೆ. ಅವು ಸಂಪದ್ಭರಿತ ಇಂದ್ರಚಾಪದ ವರ್ಣವೈಖರಿಯನ್ನು ತಳೆದಿವೆ. ಅವರ 'ಸೌಂದರ್ಯಲಹರಿ' ಮತ್ತು ದಕ್ಷಿಣಾಮೂರ್ತಿ ಸ್ತೋತ್ರ,

ಮುಂತಾದ ಸ್ತೋತ್ರ ಕೃತಿಗಳು ಸಂಸ್ಕೃತ ಸಾಹಿತ್ಯದಲ್ಲಿ ಭಕ್ತಿಕಾವ್ಯಕ್ಕೆ ಮಾದರಿಗಳಾಗಿವೆ. ಅವುಗಳಲ್ಲಿಯ ಸಹಜತೆ ಮತ್ತು ಲಾಲಿತ್ಯಗಳು ಅನ್ಯಾದೃಶ. ಹಲವಾರು ತಲೆಮಾರುಗಳಿಂದ ಜನರು ಈ ಸ್ತೋತ್ರಗಳನ್ನು ಹಾಡಿ ಹಾಡಿ ಇವುಗಳ ಗಮಕತ್ವಕ್ಕೆ ಉದ್ಧಾರಕ ಮಂತ್ರಮೌಲ್ಯವನ್ನು ತಂದುಕೊಟ್ಟಿದ್ದು ಅಚ್ಚರಿಯ ಮಾತೇನಲ್ಲ.

ಶಂಕರರು ಮಹಾ ತತ್ವಜ್ಞಾನಿಗಳು, ವೇದಸಂಪ್ರದಾಯದ ಪರಿಪೂರ್ಣಭಾಷ್ಯಕಾರರು, "ಪರವಸ್ತು" ಕೇವಲವಿರುವುದಾದ್ದರಿಂದ ಅದು ದೇಶ-ಕಾಲಾದಿ ಉಪಾಧಿರಹಿತವೂ ಇತರ ಯಾವುದೇ ವಸ್ತುವಿನಿಂದ ಹಾಗೂ ತನ್ನದೇ ಆದ ಯಾವೊಂದು ಅಂಶದಿಂದ ಅಭಿನ್ನವಾದುದೂ ಆಗಿದೆಯೆಂದು ನಿಸ್ಸಂದಿಗ್ಧವಾಗಿ ಸ್ಥಾಪಿಸಿದರು. ಎಲ್ಲವೂ ಬ್ರಹ್ಮವೇ, ಇದಕ್ಕೆ ಅನುಸಿದ್ಧಾಂತವಾಗಿ, ವಿಷಯ-ವಿಷಯಿ, ಮನಸ್ಸು-ಜಡವಸ್ತು, ನಿದ್ದೆ-ಎಚ್ಚರ, ಇವೆಲ್ಲಾ ಮೂಲತಃ ನಿಜಾಂಶಗಳಲ್ಲ, ಎಂದರೆ ಇವು ಮಾಯೆ. ಆದರೆ ಈ ಲೋಕದ ಎಲ್ಲಾ ವ್ಯವಹಾರದ ದೃಷ್ಟಿಯಿಂದ ಇವು ಸತ್ಯ. ಈ ಮೂಲಭೂತ ಅಜ್ಞಾನ ಆಭಾಸ ಅಥವಾ ಅವಿದ್ಯೆ ಇಲ್ಲವೆ ಮಾಯೆಯಾಗಿದೆ. ಏಕೆಂದರೆ ಇದರಿಂದ ಯಾವ ಮಾನವನೂ ಮುಕ್ತನಲ್ಲ ಮತ್ತು ಹುಟ್ಟು-ಸಾವುಗಳ ಚಕ್ರಗತಿಗೆ ದಾರಿ ಮಾಡಿಕೊಡುವ ಎಲ್ಲಾ ಕಾಮನೆಗಳ ಮತ್ತು ಲೌಕಿಕ ಕರ್ಮಗಳ ಮೂಲಕಾರಣವೂ ಇದೇ. ಗುರುಕೃಪೆ, ವೇದಾಂತ ತತ್ವ ಚಿಂತನ ಇವುಗಳ ಪರಿಣಾಮವಾಗಿ ಅಹಂಕಾರ ನಿರ್ಲಿಪ್ತತೆಯುಂಟಾಗಿ ಗುಹ್ಯವಾದ ಬ್ರಹ್ಮಾನುಭೂತಿ ಸ್ಫುರಣಗೊಂಡು ಮಾನವನಲ್ಲಿ ಜೀವನ್ಮುಕ್ತ ಸ್ಥಿತಿ ಒದಗಿಬರುತ್ತದೆ.

ಅದ್ವೈತಾನುಭವದ ಇಂಥ ದಿಗ್ಭ್ರಮೆಗೊಳಿಸುವ ಔನ್ನತ್ಯ ಹಲವರ ಅಳವಿಗೆ ಎಟುಕುವಂಥಾದ್ದು ಅಲ್ಲವೆಂಬುದು ಶಂಕರರಿಗೆ ಚೆನ್ನಾಗಿ ಗೊತ್ತಿತ್ತು. ಅಂಥವರ ಹಿತಕ್ಕಾಗಿ ಅವರು ವ್ಯಾವಹಾರಿಕ ಮಾರ್ಗವೊಂದನ್ನು ಎಂದರೆ "ಶ್ರೀ ವಿದ್ಯಾತಂತ್ರ"ವನ್ನು ಸಿದ್ಧಪಡಿಸಿ ಮಂಡಿಸಿದರು. ಇಲ್ಲಿ ಗುರು ಆಧ್ಯಾತ್ಮ ಸತ್ತ್ವ ಭರಿತವಾದ ಪವಿತ್ರ ಸೂತ್ರವೊಂದನ್ನು ಶಿಷ್ಯನಿಗೆ ನೀಡುತ್ತಾನೆ. ಆ ಪವಿತ್ರ ಮಂತ್ರವನ್ನು ಜಪಿಸುತ್ತಾ, 'ಶ್ರೀಚಕ್ರ'ದ ಆಕೃತಿಯನ್ನು ಏಕಾಗ್ರತೆಯಿಂದ ಧ್ಯಾನಿಸುತ್ತಿರುವಾಗ ಶಿಷ್ಯನ ಇಡಿಯ ದೇಹ ದಿವ್ಯತೆ ಪಡೆಯುತ್ತದೆ. ಇದು ವ್ಯಾವಹಾರಿಕ ಯೋಗ ಮತ್ತು ತಾತ್ವಿಕ ಜ್ಞಾನ ಇವೆರಡನ್ನೂ ಒಂದುಗೂಡಿಸಿ ಮಾಡಿದ ಸಮನ್ವಯ ಮಂತ್ರಯೋಗವಾಗಿದೆ. ಶಂಕರರು ಇಂಥ 'ಚಕ್ರ'ಗಳನ್ನು ಶೃಂಗೇರಿಯ ಶಾರದಾಂಬಾ ದೇವಾಲಯದಲ್ಲಷ್ಟೇ ಅಲ್ಲದೆ, ದಕ್ಷಿಣ ಕನ್ನಡ ಜಿಲ್ಲೆಯ ಕೊಲ್ಲೂರು ಮೂಕಾಂಬಿಕಾ ದೇವಾಲಯದಲ್ಲೂ, ಕೊಲ್ಹಾಪುರದ ಮಹಾಲಕ್ಷ್ಮೀ ದೇವಾಲಯದಲ್ಲೂ ಸ್ಥಾಪಿಸಿದ್ದಾರೆ. ಕರ್ನಾಟಕದಲ್ಲಿ ಅಂದಿನಿಂದ ಇಂದಿನವರೆಗೂ ನಡೆದು ಬಂದ ಗುರು ಪರಂಪರೆಯ ಪ್ರಭಾವದಿಂದ ಈ ಉಪಾಸನಾ ಸಂಪ್ರದಾಯ ಇಂದಿಗೂ ಜೀವಂತವಾಗಿದೆ.

## ಸುರೇಶ್ವರ

ಇದಲ್ಲದೆ, ಶಂಕರಾಚಾರ್ಯರ ತರುವಾಯದ ವೇದಾಂತ ಗ್ರಂಥರಾಶಿಯಲ್ಲಿಯ ಬಹುಪಾಲಿನ ಗ್ರಂಥರಚನೆ ಸುರೇಶ್ವರರಿಂದ ಮತ್ತು ಅವರ ಅನಂತರ ಬಂದವರಿಂದ ಆಗಿದೆಯೆಂಬುದು ಕರ್ನಾಟಕಕ್ಕೆ ವಿಶಿಷ್ಟ ಗೌರವ ತಂದ ವಿಷಯ.

ಶಂಕರರು ಸ್ಥಾಪಿಸಿದ ಇನ್ನಿತರ ಯಾವುದೇ ಮಠದ ಗುರುಪರಂಪರೆಯಲ್ಲೂ ಇಷ್ಟೊಂದು ಗ್ರಂಥರಚನಾ ಕಾರ್ಯ ಜರುಗಿಲ್ಲ. ಬೃಹದಾರಣ್ಯಕ ಉಪನಿಷದ್ಭಾಷ್ಯವನ್ನು ಕುರಿತು ಮತ್ತು ನೈಷ್ಕರ್ಮ್ಯಸಿದ್ಧಿಯಂಥ ಪ್ರಮಾಣ ಗ್ರಂಥವನ್ನು ಕುರಿತು ರಚಿತವಾದ ಬೃಹತ್ ಪ್ರಮಾಣದ 'ವಾರ್ತಿಕ' ಗ್ರಂಥದ ಕರ್ತೃ ಸುರೇಶ್ವರರೇ. ಅಜ್ಞಾನಿ ಜೀವ ಮತ್ತು ಪರಿಪೂರ್ಣ ಬ್ರಹ್ಮ ಇವರ ನಡುವೆ ಇರುವ ತಾತ್ವಿಕ ಸಂಬಂಧವನ್ನು ಕುರಿತ ಸಿದ್ಧಾಂತ ಸೂತ್ರಗಳು ಬಹು ಸೂಕ್ಷ್ಮ ಹಾಗೂ ಜಟಿಲವಾಗಿವೆ. ಈ ಬಗ್ಗೆ ಬೇರೆ ಬೇರೆ ಆಚಾರ್ಯರು ಬೇರೆ ಬೇರೆ ಸಾದೃಶ್ಯಗಳನ್ನು ಮಂಡಿಸಿ ವಿವರಿಸಿದ್ದಾರೆ. ಸುರೇಶ್ವರರು ಕನ್ನಡಿಯ ಪ್ರತಿಬಿಂಬದ ಸಾದೃಶ್ಯವನ್ನು ಕೊಡುತ್ತಾರೆ, ಪ್ರತಿಬಿಂಬ ತಿರುಳಿಲ್ಲದ ಬರಿ ನೆರಳು. ಹಾಗೇ ಸಾಮಾನ್ಯ ಜೀವ ಬರಿ ಆಭಾಸ ಅಥವಾ ಮನದಲ್ಲಿ ಹೊಳೆಯುವ ಬ್ರಹ್ಮನ ಪ್ರತಿಬಿಂಬ. 'ಅವಿದ್ಯಾ' ಎಂಬುದು ಆಭಾಸವಲ್ಲ. ಅದು ಗೋಚರಿಸುವಂಥದು. ಏಕೆಂದರೆ ನಾವು ಹೆಚ್ಚು ವಿವೇಚನೆಯ ಗೋಜಿಗೆ ಹೋಗುವುದಿಲ್ಲ. (ಅದು 'ಅವಿಚಾರಿತ ಸಿದ್ಧ') ಸೂಕ್ಷ್ಮ ವಿವೇಚನೆ ಅದನ್ನು ನಿಶ್ಶೇಷವಾಗಿ ನಾಶಪಡಿಸುವುದು.

## ಪದ್ಮಪಾದ ಮತ್ತು ವಿದ್ಯಾರಣ್ಯ

ಸುರೇಶ್ವರರ ತರುವಾಯ ಶೃಂಗೇರಿಯ ಶಂಕರ ಪೀಠದ ಗುರುಪರಂಪರೆಯ ಸ್ವಾಮಿಗಳು ಮತ್ತು ಅವರ ಶಿಷ್ಯ ವರ್ಗದವರು ತಮ್ಮ ಪ್ರಖ್ಯಾತ ಗ್ರಂಥಗಳಿಂದ ಅದ್ವೈತ ವಾಙ್ಮಯವನ್ನು ಶ್ರೀಮಂತಗೊಳಿಸಿದ್ದಾರೆ. ಪದ್ಮಪಾದರು ತಮ್ಮ 'ಪಂಚಪಾದಿಕಾ' ಗ್ರಂಥದಿಂದ 'ವಿವರಣಾ' ಪಂಥವೆಂಬ ಹೊಸ ಸಂಪ್ರದಾಯದ ಸಂಸ್ಥಾಪಕರಾದರು. ಈ ಸಂಪ್ರದಾಯಕ್ಕೆ ಈ ಹೆಸರು ಬಂದುದು ಪ್ರಕಾಶಾತ್ಮರು ಪಂಚಪಾದಿಕಾ ಗ್ರಂಥಕ್ಕೆ ಬರೆದ 'ವಿವರಣ' ಎಂಬ ಟೀಕಾ ಗ್ರಂಥದಿಂದ ಮತ್ತು ಮಹಾ ವಿಭೂತಿ ಪುರುಷರೆನಿಸಿದ ವಿದ್ಯಾರಣ್ಯರು ತಮ್ಮ 'ವಿವರಣ ಪ್ರಮೇಯ ಸಂಗ್ರಹ'ವೆಂಬ ಗ್ರಂಥದ ಮೂಲಕ ಈ ಟೀಕಾಗ್ರಂಥದ ಪ್ರಚಾರ ಮಾಡಿದ್ದರಿಂದ. ವಿದ್ಯಾರಣ್ಯರೂ ಕೂಡ 'ಪಂಚದಶಿ' ಮತ್ತು 'ಜೀವನ್ಮುಕ್ತಿ ವಿವೇಕ' ಎಂಬ ಲೋಕಪ್ರಿಯ ಗ್ರಂಥಗಳನ್ನು ರಚಿಸಿದರು. ಪ್ರಪಂಚ ಎಂಬ ಹೆಸರು ಜಗತ್ತಿಗೆ ಬಂದುದು ಅದರ ಈ ಪಂಚಲಕ್ಷಣಗಳಿಂದ ಎಂದು ಹೇಳುತ್ತಾರೆ.

(೧) ಇರುವಿಕೆ (ಅಸ್ತಿ), (೨) ಪ್ರಕಟಣೆ (ಭಾತಿ), (೩) ಪ್ರೀತ್ಯಾಸ್ಪದತ್ವ (ಪ್ರಿಯಂ), (೪) ಹೆಸರು (ನಾಮ), (೫) ಆಕಾರ (ರೂಪ), ಇವುಗಳಲ್ಲಿ ಕೊನೆಯ ಎರಡು ವ್ಯಕ್ತಿ-ವ್ಯಕ್ತಿಗಳ ದೃಷ್ಟಿಯಲ್ಲಿ ವ್ಯತ್ಯಾಸಗೊಳ್ಳುತ್ತವೆ. ಅವು ಮಾಯೆಯ ಸೃಷ್ಟಿ. ಆದರೆ ಮೊದಲ ಮೂರು ಬ್ರಹ್ಮನ ಲಕ್ಷಣಗಳಾಗಿವೆ. ಜಾಣರು ಅವುಗಳನ್ನು ಬಲ್ಲರು. ಆದರೆ ದಡ್ಡರು ಕೊನೆಯವೆರಡನ್ನೇ ನೋಡುತ್ತಾರೆ. ಸುರೇಶ್ವರ ಮತ್ತು ವಿದ್ಯಾರಣ್ಯರ ನಡುವಿನ ಕಾಲಾವಧಿಯಲ್ಲಿ ಅದ್ವೈತ ಸಿದ್ಧಾಂತದ ಸ್ವತಂತ್ರ ನಿರೂಪಣೆಯನ್ನು ನೀಡಿದ ಗುರು ಪರಂಪರೆಯ ಬಹು ದೊಡ್ಡ ಶ್ರೇಣಿಯಿದೆ.

ಆದರೆ ವಿದ್ಯಾರಣ್ಯರು (ಕ್ರಿ. ಶ. ೧೪ನೇ ಶತಕ) ಅದ್ವೈತ ತತ್ವಬೋಧಕ ತಾರಾಪಥದಲ್ಲಿ ಬಹು ಪ್ರಮುಖವಾಗಿ ಥಳಥಳಿಸುವ ನಕ್ಷತ್ರ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ವಿಚಾರದಲ್ಲಿ ಅವರು ಬಹುದೊಡ್ಡ ಪ್ರೇರಕ ಶಕ್ತಿಯಾಗಿದ್ದರು. ಹಾಗೆಯೇ ತತ್ವಜ್ಞಾನದ ಜೊತೆಗೆ ವೈದಿಕ ಧರ್ಮದ ಪುನರುಜ್ಜೀವನಕ್ಕೆ ಸಂಸ್ಕೃತಿ-ಲಲಿತ ಕಲೆಗಳ ಅಭಿವೃದ್ಧಿಗೆ ಮತ್ತು ಸಂಸ್ಕೃತ, ಕನ್ನಡ ಹಾಗೂ ತೆಲುಗು ಭಾಷಾ ಸಾಹಿತ್ಯಗಳಿಗೆ ಈ ಸಾಮ್ರಾಜ್ಯ ನೀಡುತ್ತಿದ್ದ ಪೋಷಣೆಯ ವಿಚಾರದಲ್ಲೂ ಅವರ ಪ್ರಭಾವವಿತ್ತು. ವಿಜಯನಗರದ ಅರಸರು ಎರಡು ಶತಮಾನಗಳ ಕಾಲ (ಕ್ರಿ. ಶ. ೧೩೪೬-೧೫೬೫) ದಕ್ಷಿಣ ಭಾರತದಲ್ಲಿ ಬಹುಭಾಗಕ್ಕೆ ನಿರ್ವಿವಾದಾತ್ಮಕ ಅಧಿಪತಿಗಳಾಗಿದ್ದರಲ್ಲದೆ, ಮುಸಲ್ಮಾನರ ದಾಳಿಗಳನ್ನೆದುರಿಸುವ ಅಭೇದ್ಯ ಕೋಟೆಗಳ

ವಾಗಿದ್ದರು. ಹಂಪೆಯಲ್ಲಿ ಜರುಗಿದ ಒಂದು ರಥೋತ್ಸವ ಸಂದರ್ಭದಲ್ಲಿ ವಿದ್ಯಾರಣ್ಯರ ಸನ್ನಿಧಿಯಿತ್ತೆಂದು "ವಿರೂಪಾಕ್ಷ ವಸಂತೋತ್ಸವ ಚಂಪು" ಎಂಬ ಸಂಸ್ಕೃತ ಕಾವ್ಯದಲ್ಲಿ ಅಹೋಬಲ ಕವಿ ಹೇಳಿದ್ದಾನೆ.

### ವಿಜಯ ನಗರದ ಸಾಧನೆ

ವಿಜಯನಗರದ ಅರಸರ ಮಹತ್ತಮ ಸಾಧನೆಯೆಂದರೆ, ಆ ಕಾಲದ ಎಲ್ಲಾ ವೈದಿಕ ಪಂಡಿತರನ್ನು ಮಂತ್ರಿ–ಸಹೋದರರಾದ ಸಾಯಣ ಮಾಧವರ ಸಮರ್ಥ ನೇತೃತ್ವದಲ್ಲಿ ಒಟ್ಟಿಗೆ ಸೇರುವಂತೆ ಮಾಡಿ, ವೈದಿಕ ವಾಙ್ಮಯದ ವಿಶಾಲ ಗ್ರಂಥಭಾಂಡಾರದ ಎಲ್ಲಾ ಶಾಖೆಗಳನ್ನು ಕುರಿತು ಅಧಿಕಾರಯುತ ಟೀಕಾ ಗ್ರಂಥಗಳನ್ನು ಬರೆಯುವಂತೆ ಪ್ರೇರೇಪಿಸಿದ್ದು. ಋಗ್ವೇದವನ್ನು ಕುರಿತ ಸಾಯಣಭಾಷ್ಯವನ್ನು ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಜಗದ್ವಿಖ್ಯಾತ ಪೌರಸ್ತ್ಯ ಭಾಷಾ ಸಾಹಿತ್ಯ ತಜ್ಞರಾಗಿದ್ದ ಎಫ್. ಮ್ಯಾಕ್ಸ್‌ಮುಲ್ಲರ್ ಅವರು ೧೯ನೆಯ ಶತಕದ ಕೊನೆಯಲ್ಲಿ ಮತ್ತು ಈ ಶತಕದ ಆರಂಭದಲ್ಲಿ ಪ್ರಪ್ರಥಮವಾಗಿ ಪ್ರಕಟಿಸಿದರು. ಸಾಯಣರ ಇತರ ಭಾಷ್ಯ ಗ್ರಂಥಗಳೂ ಅಂತಾರಾಷ್ಟ್ರೀಯ ವಿದ್ವಾಂಸರಿಗೆ ವ್ಯಾಸಂಗ ಯೋಗ್ಯಕೃತಿಗಳಾಗಿವೆ. ಸಾಂಪ್ರದಾಯಿಕ ಪರಂಪರೆಯಲ್ಲಿ ವೈದಿಕ ಗ್ರಂಥಗಳನ್ನು ಕುರಿತು ಭಾಷ್ಯ ಗ್ರಂಥಗಳ ಈ ಪ್ರಪ್ರಥಮ ಹಾಗೂ ಚಿರಸ್ಥಾಯೀ ಪ್ರಕಟಣೆಗಾಗಿ ಕರ್ನಾಟಕ ಹೆಮ್ಮೆ ಪಡಬಹುದಾಗಿದೆ.

ಇದೇ ರೀತಿಯಲ್ಲಿ ಸಕಲ ಶಾಸ್ತ್ರಗಳನ್ನು ಇಲ್ಲವೆ ಹುರುಳುಳ್ಳ ಸುಭಾಷಿತಗಳನ್ನು ಒಳಗೊಂಡ ವಿಷಯಗಳನ್ನು ಅಡಕವಾಗಿ ಸೇರಿಸಿದ ಸಂಕಲನಗಳು ಅಥವಾ 'ಸುಧಾನಿಧಿ'ಗಳು ಈ ವಿದ್ವಾಂಸ ಸಹೋದರರಿಂದ ರಚಿತವಾಗಿದೆ. ಇವುಗಳಲ್ಲಿ ಕೆಲವು ಯಜ್ಞತಂತ್ರ, ಪುರುಷಾರ್ಥ, ಅಲಂಕಾರ ಶಾಸ್ತ್ರ ಇತ್ಯಾದಿಗಳನ್ನು ಕುರಿತವಾಗಿವೆ. ಸಾಯಣರ ಮೊಮ್ಮಗ ಬರೆದ 'ಸರ್ವದರ್ಶನ ಸಂಗ್ರಹ' ಭಾರತೀಯ ತತ್ವ ವಿಚಾರದ ಎಲ್ಲಾ ಛಾಯೆಗಳ ಅದ್ಭುತ ಸಂಗ್ರಹ. ಇದರಲ್ಲಿ ಆಸ್ತಿಕ ಮತ್ತು ನಾಸ್ತಿಕ ವಿಚಾರಗಳೂ ಸಮಾವೇಶಗೊಂಡಿದ್ದು, ಅತ್ಯಂತ ಸುಲಲಿತ ಮತ್ತು ಕ್ರಮಬದ್ಧ ಶೈಲಿಯಲ್ಲಿ ಅದ್ವೈತ ತತ್ವದ ತುತ್ತತುದಿಯತ್ತ ಇದು ಸಾಗಿದೆ. ಇತರ ತತ್ವಗಳೆಲ್ಲವೂ ಅದ್ವೈತಸಿದ್ಧಾಂತದ ಶ್ರೇಣಿಯಲ್ಲಿ ಕೆಳಹಂತದ ಮೆಟ್ಟಿಲುಗಳಾಗಿ ಪರಿಗಣಿತವಾಗಿದೆ.

ಭೌತದ್ರವ್ಯ ವಾಸ್ತವತಾವಾದವೂ ಈ ಗ್ರಂಥಕ್ಕೆ ಹೊರತಾಗಿಲ್ಲ. ಹಾಗೆಯೇ 'ಬ್ರಹ್ಮಸೂತ್ರವೃತ್ತಿ'ಯನ್ನು ಇಮ್ಮಡಿ ದೇವರಾಯ ರಚಿಸಿದರೆ, 'ಪ್ರಬೋಧ ಚಂದ್ರೋದಯ' ಎಂಬ ಸಂಸ್ಕೃತದ ಪ್ರಥಮ ರೂಪಕ ಕಥಾ ನಾಟಕವನ್ನು ಕುರಿತ ಟೀಕೆಯನ್ನು ನದಿಂದ್ಲಗೋಪ ರಚಿಸಿದ್ದಾನೆ.

### ಅಪ್ಪಯ್ಯ ದೀಕ್ಷಿತ

ವಿಜಯನಗರ ಸಾಮ್ರಾಜ್ಯದ ಪತನಾನಂತರ ಸಾಹಿತ್ಯ–ಸಂಸ್ಕೃತಿಗಳ ಆಶ್ರಯ ಕೇಂದ್ರ ಒಡೆಯರ ಆಳ್ವಿಕೆಗೊಳಪಟ್ಟ ಮೈಸೂರಿಗೆ ಮತ್ತು ನಾಯಕರ ಕೈ ಕೆಳಗಿದ್ದ ಇಕ್ಕೇರಿಗೆ ಸ್ಥಳಾಂತರಗೊಂಡಿತು. ಈ ಕಾಲ ಸೃಷ್ಟಿಶೀಲತೆಯ ಪ್ರಗತಿಗಿಂತ ಹೆಚ್ಚಾಗಿ ಕ್ರೋಢೀಕರಣದ ಯುಗವಾಗಿತ್ತು. ಅದ್ವೈತದ ಪರವಾಗಿ ಅನೇಕ ಭಾಷ್ಯಗಳು ರಚಿತವಾದವು. ಈ ಸಿದ್ಧಾಂತದ ವಿರುದ್ಧವಾಗಿ ಈಶ್ವರವಾದಿಗಳು ಎನಿಸಿದ ರಾಮಾನುಜ–ಮಧ್ವರಂಥ ಆಚಾರ್ಯರು ಮತ್ತು ಅವರ ಅನುಯಾಯಿ ವರ್ಗದವರು ಎತ್ತಿದ ಆಕ್ಷೇಪಗಳಿಗೆ ಉತ್ತರ ಕೊಡುವ ಉದ್ದೇಶ ಇವುಗಳದಾಗಿತ್ತು. ದ್ವೈತ, ವಿಶಿಷ್ಟಾದ್ವೈತ ಮತ್ತು ಅದ್ವೈತ ದರ್ಶನ ಪದ್ಧತಿಗಳ ಅನುಯಾಯಿಗಳಲ್ಲಿ ನಡೆದ ಖಂಡನೆ-ಮಂಡನಾದಿ ವಾಗ್ಯುದ್ಧಗಳ ಚರಿತ್ರೆ ಸಾಮಾನ್ಯ ಜನತೆಯ ದೃಷ್ಟಿಯಿಂದ ಅಷ್ಟೊಂದು ಸ್ವಾರಸ್ಯಕರವಾಗಿರದೆ ತಜ್ಞರ ಜಿಜ್ಞಾಸೆಗೆ ಪ್ರೇರಕವಾಗಿದೆ.

ಈ ಭಾಷ್ಯಕಾರರಲ್ಲೆಲ್ಲಾ ಸರ್ವಶ್ರೇಷ್ಠ ವಿದ್ವಾಂಸರೆಂದರೆ ಅಪ್ಪಯ್ಯ ದೀಕ್ಷಿತ (೧೬ನೆ ಶತಕದ ಕೊನೆ). ಆ ಕಾಲದ ಅನೇಕ ಪಾಳೆಯಗಾರರು ಇವರಿಗೆ ಆಶ್ರಯ ನೀಡಿದ್ದರು. ಇವರು ಒಂದು ನೂರಕ್ಕಿಂತ ಹೆಚ್ಚು ಗ್ರಂಥಗಳನ್ನು ಬರೆದಿದ್ದಾರೆಂದು ಹೇಳಲಾಗಿದೆ. ಅದ್ವೈತ ಸಿದ್ಧಾಂತದಲ್ಲಿ ಘನಪಂಡಿತರೆನಿಸಿದ್ದ ಇವರ 'ಸಿದ್ಧಾಂತ ಲೇಶ ಸಂಗ್ರಹ'ವೆಂಬ ಗ್ರಂಥ ಶಂಕರರ ತರುವಾಯ ಹುಟ್ಟಿದ ಬಹು ಉಪಯುಕ್ತ ಕೃತಿ. ಅದ್ವೈತ ಸಿದ್ಧಾಂತದ ಹಲವಾರು ವಿಚಾರ ಪಂಥಗಳ ಪ್ರಸ್ಫುಟವಾದ ಕೈಪಿಡಿಯಿದು. ಇವರು ಶ್ರೀಕಂಠಕೃತ 'ಶಿವಾದ್ವೈತ ಭಾಷ್ಯ'ಕ್ಕೆ ಒಂದು ಟೀಕೆಯನ್ನು ರಚಿಸಿದ್ದಾರೆ.

### ಕನ್ನಡ ವಾಙ್ಮಯ

ಹೀಗೆ ಅವ್ಯಾಹತವಾಗಿ ನಡೆದು ಬಂದ ಅದ್ವೈತ ವಾಙ್ಮಯ ಪರಂಪರೆ ಕನ್ನಡ ವಾಙ್ಮಯದಲ್ಲೂ ಪ್ರತಿಫಲಿಸಿ ನಿಜಗುಣ ಶಿವಯೋಗಿಯ 'ವಿವೇಕ ಚಿಂತಾಮಣಿ' (ಕ್ರಿ. ಶ. ೧೫೦೦) ಮತ್ತು ಮಹಲಿಂಗ ರಂಗನ 'ಅನುಭವಾಮೃತ' (ಕ್ರಿ. ಶ. ೧೬೦೦) ಇವೆರಡು ಕೃತಿಗಳನ್ನು ಮಾತ್ರ ಇಲ್ಲಿ ಉಲ್ಲೇಖಿಸಬಹುದಾಗಿದೆ. ಅದ್ವೈತದಂಥ ಅತಿಗಹನ ಹಾಗೂ ಗಂಭೀರ ವಿಚಾರದ ಅಭಿವ್ಯಕ್ತಿಗೆ ಕನ್ನಡ ಮೊದಲ ಬಾರಿ ಸಂವಾಹಕವಾಗಿರುವುದನ್ನು ಗಮನಿಸಿದಲ್ಲಿ ಈ ಭಾಷೆಯ ಅಂತಸ್ತು ಹಾಗೂ ಪ್ರತಿಷ್ಠೆ ಅತ್ಯುನ್ನತಗೊಂಡಿವೆಯೆಂದು 'ಅನುಭವಾಮೃತ'ಕಾರ ಉದ್ಘೋಷಿಸಿದ್ದಾನೆ.

ಈ ಪರಂಪರೆ ೧೯ನೆಯ ಶತಕದಲ್ಲೂ ಮುಂದುವರಿಯಿತು. ಆಗ ಸದಾಶಿವ ಬ್ರಹ್ಮೇಂದ್ರನಂಥ ಮಹಾಸಂತರ ಉದಯವಾಗಿತ್ತು. ಇತ್ತೀಚೆಗೆ ಅವತರಿಸಿ ಹೋದ ಅರುಣಾಚಲದ ಭಗವಾನ್ ರಮಣ ಮಹರ್ಷಿಗಳು ಅದ್ವೈತ ಮಾದರಿಯ ಜೀವನ್ಮುಕ್ತ ಮಹಾ ವಿಭೂತಿ ಪುರುಷರು. ಕರ್ನಾಟಕದಲ್ಲಿಯೂ ಇವರ ಅಭಿಮಾನೀ ಭಕ್ತವೃಂದ ಅಸಂಖ್ಯಾತವಾಗಿದೆ. ಹಾಗೆಯೇ ನಿಂಬಾಳದ ಪ್ರೊ. ಆರ್. ಡಿ. ರಾನಡೆಯವರೂ ಇದೇ ಮಹಾ ಪರಂಪರೆಯ ಸಾಧಕರಾಗಿದ್ದ ಸಂಗತಿ ಜನಜನಿತವಾಗಿದೆ.

ಇತರ ಅನೇಕ ಈಶ್ವರವಾದೀ ಪಂಥಗಳ ಮಠಗಳಿದ್ದರೂ ಶೃಂಗೇರಿ ಪೀಠ ಇಂದಿಗೂ ಬಹುದೊಡ್ಡ ಸಂಖ್ಯೆಯ ಭಕ್ತವೃಂದವನ್ನು ಆಕರ್ಷಿಸುತ್ತಿದೆ. ಈ ಭಕ್ತಸಮುದಾಯ ಕರ್ನಾಟಕಕ್ಕೆ ಮಾತ್ರ ಸೀಮಿತವಾಗಿರದೆ ಅದರಲ್ಲಿ ಭಾರತದ ಎಲ್ಲಾ ಭಾಗಗಳಿಂದ ಬಂದವರಿರುತ್ತಾರೆ. ವಿಶೇಷವಾಗಿ ರಾಜ್ಯಗಳಾದ ಮಹಾರಾಷ್ಟ್ರ, ತಮಿಳುನಾಡು, ಆಂಧ್ರಪ್ರದೇಶ ಮತ್ತು ಕೇರಳಗಳಿಂದ ಬಂದವರಿರುತ್ತಾರೆ. ಶಂಕರ ಜಯಂತಿ ಮತ್ತು ನವರಾತ್ರಿಗಳಂಥ ವಿಶೇಷ ಉತ್ಸವ ಸಂದರ್ಭಗಳಲ್ಲಿ ಇಂಥ ಯಾತ್ರಾರ್ಥಿಗಳ ಸಂಖ್ಯೆ ಬಹುದೊಡ್ಡ ಪ್ರಮಾಣದ್ದು. ಕರ್ನಾಟಕದ ಇನ್ನಿತರ ಅದ್ವೈತ ಮಠಗಳು ಕೂಡಲಿ, ಶಿವಗಂಗಾ, ಶಿರ್ಸಿ ಮುಂತಾದ ಕ್ಷೇತ್ರಗಳಲ್ಲಿವೆ. ಶೃಂಗೇರಿ ಮಠಕ್ಕೇ ಸಂಬಂದಪಟ್ಟ ಕೆಲವು ಶಾಖೆಗಳು ಮೈಸೂರು ಮತ್ತು ಬೆಂಗಳೂರುಗಳಲ್ಲಿದ್ದು ಅವು ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಕಲಾಪಗಳನ್ನು ನಡೆಸಿಕೊಂಡು ಹೋಗುತ್ತಿವೆ. ಆಂಗ್ಲಭಾಷೆಯ 'ತತ್ತ್ವಾಲೋಕ'ದಂಥ ಅದ್ವೈತಕ್ಕೇ ಮೀಸಲಾಗಿರುವ ಪತ್ರಿಕೆಗಳು ದೊಡ್ಡ ಪ್ರಮಾಣದ ಪ್ರಸರಣ ಹೊಂದಿವೆ.

ಈ ಶತಕದಲ್ಲಿ ಶಂಕರರ ಎಲ್ಲಾ ಗ್ರಂಥಗಳನ್ನು ಹೊಳೆನರಸೀಪುರದ ಅಧ್ಯಾತ್ಮ ಪ್ರಕಾಶನ ಕಾರ್ಯಾಲಯದ ಶ್ರೀ ಸಚ್ಚಿದಾನಂದೇಂದ್ರ ಸರಸ್ವತಿಯವರು ಸೂಕ್ಷ್ಮ ವಿವರಗಳಲ್ಲಿ ತುಂಬ ಎಚ್ಚರ ವಹಿಸಿ ಕೂಲಂಕಷವಾಗಿ ಕನ್ನಡದಲ್ಲಿ ಅನುವಾದ ಮಾಡಿದ್ದಾರೆ. ಈ ವಿಚಾರದಲ್ಲಿ ಮೈಸೂರು ಅರಮನೆಯವರು ನೀಡಿದ ಪ್ರೇರಣೆ ಮತ್ತು ಪೋಷಣೆಗಳನ್ನು ಕೃತಜ್ಞತೆಯಿಂದ ನೆನೆಯಲೇಬೇಕು. ಹಾಗೇ ವಿದ್ಯಾರಣ್ಯರ ಗ್ರಂಥಗಳೂ ಕನ್ನಡದಲ್ಲಿ ಉಪಲಬ್ಧವಿವೆ. ಈ ಶತಮಾನದಲ್ಲಿ ಅದ್ವೈತ ವೇದಾಂತವನ್ನು ಕುರಿತ ಸಾಹಿತ್ಯ ಕನ್ನಡದಲ್ಲಿ ನಿಜವಾಗಿಯೂ ಗುಣ ಹಾಗೂ ಗಾತ್ರ ಎರಡರಲ್ಲೂ ಎದ್ದು ಕಾಣುವಂಥದು.

ಈ ಸಿದ್ಧಾಂತದ ದೃಷ್ಟಿವೈಶಾಲ್ಯ, ತಾತ್ವಿಕವಾದ ವಿವಾದಕ್ಕಿಂತ ಅನುಭವಕ್ಕೆ ಕೊಡುವ ಪ್ರಾಶಸ್ತ್ಯ, ಚಿತ್ತಪರಿಶುದ್ಧಿಗೆ ಸಾಧಕವೆನಿಸುವ ಧಾರ್ಮಿಕ ವಿಧಿ–ವಿಧಾನಗಳ ಅನುಷ್ಠಾನದ ವಿಚಾರದಲ್ಲಿ ಕಟ್ಟುನಿಟ್ಟಿಲ್ಲದ ಉದಾರ ಹಾಗೂ ಸ್ವತಂತ್ರ ಧೋರಣೆ, ಸಕಲರಲ್ಲಿ ಸಮಭಾವ, ಆಧುನಿಕ ವಿಜ್ಞಾನ ಮತ್ತು ಪ್ರಾಪಂಚಿಕ ವಾಸ್ತವಗಳ ಸವಾಲುಗಳನ್ನು ನಿರ್ಲಿಪ್ತತೆಯಿಂದ ಎದುರಿಸುವ ಸಾಮರ್ಥ್ಯ ಮತ್ತು ವಿವೇಕಾನಂದ ಹಾಗೂ ಭಗವಾನ್ ರಮಣರಂಥ ಆಧುನಿಕ ಸಾಧುಸಂತರು ಈ ಸಿದ್ಧಾಂತಕ್ಕೆ ನೀಡುವ ಪೂರ್ಣ ಬೆಂಬಲ–ಇವೆಲ್ಲವೂ ಒಟ್ಟಿಗೆ ಸೇರಿ ಅದ್ವೈತಕ್ಕೆ ಭೂತಕಾಲದಂತೆ ಭವಿಷ್ಯವೂ ಉಜ್ವಲವಾಗಿದೆಯೆಂದು ಸೂಚಿಸುತ್ತವೆ.

ಕಳೆದ ಶತಕದಲ್ಲಿ ಅದ್ವೈತ ತತ್ವ ವಿಚಾರ ಪಡುವಣಸೀಮೆಯನ್ನು ಸೋಂಕಿದಾಗ ಕವಿಗಳಲ್ಲಿ ಶೆಲ್ಲಿ, ತತ್ವ ಚಿಂತಕರಲ್ಲಿ ಎಮರ್ಸನ್ ಮತ್ತು ಶೋಪನಹಾರ, ಶಿಕ್ಷಣ ತಜ್ಞರಲ್ಲಿ ಪಾಲಡ್ಯೂಸನ್ ಮುಂತಾದ ಮಹಾವ್ಯಕ್ತಿಗಳಿಂದ ಅದು ಪ್ರಶಸ್ತಿಯ ಉದ್ಘೋಷಕ್ಕೆ ಪಾತ್ರವಾಯಿತು. ಅದ್ವೈತಕ್ಕೆ ಅಂತರಾಷ್ಟ್ರೀಯ ಗೌರವ ತಂದುಕೊಟ್ಟ ಪ್ರೊ. ಎಸ್. ರಾಧಾಕೃಷ್ಣನ್ ಅವರು ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಕೆಲಕಾಲ ತತ್ವಜ್ಞಾನ ವಿಷಯದ ಪ್ರಾಧ್ಯಾಪಕರಾಗಿದ್ದರು. ಹಾಗೆಯೇ ಅವರ ಸಹೋದ್ಯೋಗಿ ಪ್ರೊ. ಎಂ. ಹಿರಿಯಣ್ಣನವರೂ ಅಲ್ಲಿಯೇ ಇದ್ದರು. ಹಿರಿಯಣ್ಣನವರ ಅದ್ವೈತ ಸಿದ್ಧಾಂತದ ನಿರೂಪಣೆ ಇಂದಿಗೂ ಪ್ರಸ್ಫುಟವೂ ಅಧಿಕಾರಯುತವೂ ಆಗಿದ್ದು, ಜಗತ್ತಿನ ಎಲ್ಲಾ ವಿಶ್ವವಿದ್ಯಾಲಯಗಳಲ್ಲೂ ಅದು ಪಠ್ಯವಾಗಿ ಅಭ್ಯಸಿಸಲ್ಪಡುತ್ತಿದೆ.

**ಕನ್ನಡ ಅನುವಾದ: ಎಸ್. ಆರ್. ಮಳಗಿ**

# ಕರ್ನಾಟಕದಲ್ಲಿ ವಿಶಿಷ್ಟಾದ್ವೈತ

ಡಾ. ಪು. ತಿ. ನರಸಿಂಹಾಚಾರ್

ಕರ್ನಾಟಕದ ಸಾಂಸ್ಕೃತಿಕ ವೈಭವಕ್ಕೆ ವಿಶಿಷ್ಟಾದ್ವೈತ ದರ್ಶನವೂ ತನ್ನ ವಿಶಿಷ್ಟವಾದ ಕೊಡುಗೆಯನ್ನು ಕೊಟ್ಟಿದೆ. ಈ ದರ್ಶನದ ಪರಮಾಚಾರ್ಯರಾದ ಭಗವದ್‌ರಾಮಾನುಜ ಯತಿಗಳಿಗೆ (ಕ್ರಿ. ಶ. ೧೧೩೭) ಅವರು ಹುಟ್ಟಿದ ನಾಡಿನಲ್ಲಿ ಆಸರೆ ಕಡಿಮೆಯಾದಾಗ ಕನ್ನಡನಾಡು ಅವರನ್ನು ಆಕರ್ಷಿಸಿತು. ಅವರು ಆಗಮಿಸುವುದಕ್ಕೆ ಮುಂಚೆಯೇ ಈ ನಾಡಿನಲ್ಲಿ ಶ್ರೀವೈಷ್ಣವರ ವಸತಿಗಳಿದ್ದವು. ಪಾಂಡ್ಯ, ಚೋಳ, ಚೇರ ದೇಶಗಳಲ್ಲಿ ಕ್ರಿ.ಶ. ಏಳನೆಯ ಶತಮಾನದಿಂದ ಒಂಭತ್ತನೆಯ ಶತಮಾನದವರೆಗಿನ ಅವಧಿಯಲ್ಲಿ ಆಳ್ವಾರುಗಳೆಂಬ ಭಗವದ್ಭಕ್ತರು ಜನಿಸಿ ತಮ್ಮ ಅಮೋಘವಾದ ಪಾಶುರಗಳನ್ನು ಹಾಡಿಯೇ, ಅನ್ಯಾಕ್ರಾಂತವಾಗಿದ್ದ ಜನರ ಮನಸ್ಸನ್ನು ತಮ್ಮೆಡೆಗೆ ಸೆಳೆದುಕೊಂಡು ಸನಾತನ ವೈದಿಕ ಧರ್ಮವನ್ನು ಪುನಃ ಪ್ರತಿಷ್ಠಾಪಿಸಿದ್ದರು. ಆ ಪಾಶುರಗಳು ಕನ್ನಡ ಸೀಮೆಯಲ್ಲೂ ಹರಡಿದ್ದವು. ರಾಜರ ಹೋರಾಟಗಳಲ್ಲಿ ಅವರವರ ಸೀಮೆಗಳು ವಿಸ್ತಾರ ಸಂಕೋಚಗಳನ್ನು ಹೊಂದುತ್ತಲೇ ಇರುತ್ತವೆ. ಆದರೆ ಸಾಮಾನ್ಯ ಜನರು ಊರಿಂದೂರಿಗೆ ಹೋಗಿ ತಮ್ಮ ವ್ಯವಹಾರಗಳನ್ನು ನಡೆಸುವುದರಲ್ಲಿ ಅಷ್ಟೊಂದು ಅಡೆತಡೆಗಳಿರುವುದಿಲ್ಲ. ಯಾತ್ರಿಕರನ್ನೂ ಅಕಿಂಚನರಾದ ಸಾಧುಸಂತರನ್ನೂ ಯಾರೂ ಹಿಂಸಿಸರು. ಭಾರತೀಯ ಸಂಸ್ಕೃತಿಯಲ್ಲಿನ ವಿಶಿಷ್ಟ ಗುಣ ಇದು. ಈ ಸೀಮೆಯಿಂದ ಹೋದ ಯಾತ್ರಿಕರೊಬ್ಬರು ಕುಂಭಕೋಣಂ ದೇವಸ್ಥಾನದಲ್ಲಿ ನಮ್ಮಾಳ್ವಾರ್ ಅವರಿಂದ ರಚಿತವಾದ ಹತ್ತು ಪಾಶುರಗಳನ್ನು ಹಾಡಿದರಂತೆ. ವಿಶಿಷ್ಟಾದ್ವೈತದ ಆಚಾರ್ಯರುಗಳಲ್ಲಿ ಪ್ರಥಮರಾದ ನಾಥಮುನಿಗಳು ಅವನ್ನು ಕೇಳಿ ಅವುಗಳ ಸೌಂದರ್ಯಕ್ಕೆ ಬೆರಗಾದರಂತೆ. ರಾಮಾನುಜ ಯತಿಗಳು ತಮ್ಮ ಉಳಿವಿಗೊಂದಕ್ಕೇ ಅಲ್ಲದೆ ಮತಪ್ರಚಾರಕ್ಕೂ ಕರ್ನಾಟಕ ಸುಕರವಾಗಿರುವುದನ್ನು ಕಂಡು ಕೊಂಡುದರಲ್ಲಿ ಆಶ್ಚರ್ಯವೇನಿಲ್ಲ.

## ವಿಶಿಷ್ಟಾದ್ವೈತ

ಈಗ, ವಿಶಿಷ್ಟಾದ್ವೈತವೆಂದರೇನು ಎಂಬ ವಿಷಯದಲ್ಲಿ ಒಂದೆರಡು ಮಾತುಗಳು ಅವಶ್ಯಕವೆನಿಸುತ್ತವೆ. ಇದೊಂದು ವೈದಿಕದರ್ಶನ, ಉಪನಿಷತ್ತುಗಳು, ಬ್ರಹ್ಮಸೂತ್ರ ಮತ್ತು ಭಗವದ್ಗೀತೆಗಳಿಂದ ಉದ್ಧೃತವಾದದ್ದು, ತತ್ವಹಿತ, ಪುರುಷಾರ್ಥಗಳ ಮೇಲೆ ಮಹಾಮತಿಗಳು ಬೀರಿರುವ ಒಂದು ನೋಟ, ತೋರಿರುವ ಒಂದು ಮಾರ್ಗ, ನಿರ್ದಿಷ್ಟಗೊಳಿಸಿರುವ ಒಂದು ಗುರಿ ಈ ದರ್ಶನದಲ್ಲಿ ಗೋಚರಿಸುತ್ತದೆ. ಜಗತ್ತು ಜೀವ ಮತ್ತು ಈಶ್ವರ ಇವರ ಸ್ವರೂಪಗಳನ್ನೂ ಸಂಬಂಧಗಳನ್ನೂ ಕುರಿತು ತಲಸ್ಪರ್ಶಿಯಾದ ಆಲೋಚನಾಲಹರಿ ಇಲ್ಲಿ ಮಡುಗಟ್ಟಿದೆ. ಚಿದಚಿದ್ವಿಶಿಷ್ಟ ಪರಬ್ರಹ್ಮತತ್ವವೇ ಪರಮಸತ್ಯವೆಂದು ಈ ಮತ ಸ್ಥಾಪಿಸುತ್ತದೆ. ಜಗತ್ತೂ ಜೀವಾತ್ಮರುಗಳೂ ಈ ಪರಬ್ರಹ್ಮಸ್ವರೂಪನಾದ ಶ್ರೀಮನ್ನಾರಾಯಣನ ಶರೀರಗಳು, ವಿಶೇಷಣಗಳು, ಅಂಶಗಳು, ವಿಭೂತಿಗಳು, ಆತನಂತೆಯೇ ಇವೂ ಅನಾದಿ. ಇವೆರಡು ತತ್ವಗಳನ್ನೂ ವ್ಯಾಪಿಸಿ ಅವನ್ನು ಮೀರಿ ನಿಂತಿರುವ ಸಕಲ ಕಲ್ಯಾಣಗುಣ ಪೂರ್ಣನಾದ ಈ ಪರಮಪುರುಷನಿಗೆ ನಾವು ಅಭಿಮುಖರಾಗಬೇಕು, ಸಾಕ್ಷಾತ್ಕರಿಸಿಕೊಳ್ಳಬೇಕು, ಪೂಜಿಸ ಬೇಕು, ದಾಸಭೂತರಾಗಬೇಕು, ಇಹಪರಗಳೆರಡರಲ್ಲೂ ಆತನ ಕೈಂಕರ್ಯದಲ್ಲಿ ನಿರತರಾಗಿ ಕೃತಾರ್ಥರಾಗಬೇಕು, ಜೀವನವೂ ಪ್ರಕೃತಿಯೂ ಪರಮಾತ್ಮನಿಗೆ ಒಟ್ಟಿಯೇ ಇರುತ್ತವೆ. ಅವಕ್ಕೆ ಪ್ರತ್ಯೇಕವಾದ ಅಸ್ತಿತ್ವವೇ ಇಲ್ಲ. ಭಗವಚ್ಛೇಷತ್ವವೇ ಅವುಗಳ ಪರಧರ್ಮ. ಪರಮಾತ್ಮನು ಪರಮ ವಿಭವಶಾಲಿಯಾದರೂ ಪ್ರೇಮಮಯನೂ ಪರಮ ಸುಂದರನೂ, ಕೃಪಾಳುವೂ, ಸುಹೃತ್ತೂ ಆಗಿದ್ದಾನೆ. ಆತನ ಸಾನ್ನಿಧ್ಯ ಕೈಂಕರ್ಯಗಳಿಗಿಂತ ಸುಖತರವಾದ ಇರವು ಜೀವಾತ್ಮನಿಗಿಲ್ಲ. ಇದನ್ನು ಸಾಧ್ಯವಾಗಿಸಿಕೊಳ್ಳುವುದೇ ಪರಮ ಪುರುಷಾರ್ಥ ಭಗವಂತನ ಕರುಣೆ ನಮಗೆ ಕರಣ ಕಳೇಬರಯೋಗವನ್ನು ಪರಿಕಲ್ಪಿಸಿರುವುದು ನಮ್ಮ ಉದ್ಧಾರಕ್ಕೇ ಹೊರತು ವಂಚಿಸುವುದಕ್ಕಲ್ಲ. ಎಲ್ಲ ಅನುಭವಗಳೂ ನಮಗೆ ಸತ್ಯದ ಸ್ಪರ್ಶವನ್ನೀಕೊಡುತ್ತವೆ. ಭ್ರಮೆ ಮೋಹಾದಿ ದೋಷಗಳು ನಮಗೆ ಅಲ್ಪ ಹಾಗೂ ಅಸಮಗ್ರಜ್ಞಾನದಿಂದ ಉಂಟಾಗುತ್ತದೆ. ಇವನ್ನು ಶಾಸ್ತ್ರ ನಿರ್ದಿಷ್ಟವೂ ಫಲನಿರಪೇಕ್ಷವೂ ಆದ ಕರ್ಮಾನುಷ್ಠಾನದಿಂದಲೂ, ಇದರಿಂದ ಪ್ರಾಪ್ತವಾದ ಶುದ್ಧಾಂತಃಕರಣದಿಂದ ಸದ್ಗುರುವಿನ ಆಶ್ರಯದಲ್ಲಿ ತಾನು ಪಡೆದ ಅಧ್ಯಾತ್ಮಿಕ ಶಾಸ್ತ್ರಗಳ ಅಧ್ಯಯನದಿಂದಲೂ ಹೋಗಲಾಡಿಸಿಕೊಂಡು ದಿವ್ಯಜ್ಞಾನವನ್ನು ಪಡೆಯುವುದು ನಮ್ಮ ಕರ್ತವ್ಯ. ಸಾಧಕನಲ್ಲಿ ಈ ಜ್ಞಾನವೇ ಭಕ್ತಿಯಾಗಿ ಪರಿಣಮಿಸುತ್ತದೆ. ವಿಷಯ ಲೋಲುಪವಾದ ಚಂಚಲಮನಸ್ಸನ್ನು ಅಭ್ಯಾಸದಿಂದಲೂ ವೈರಾಗ್ಯದಿಂದಲೂ ಹಿಡಿದು ನಿಲ್ಲಿಸಿ ಭಗವಂತನಲ್ಲಿ ಮಡುಗೊಳಿಸಬೇಕು. ಸ್ವಾರ್ಥಾಂಧತೆಯಿಂದ ಎಲ್ಲ ಕೇಡುಗಳೂ ಮನುಷ್ಯನಿಗೆ ಪ್ರಾಪ್ತವಾಗುತ್ತವೆ. ಈ ಕುರುಡನ್ನು ಕಳೆದುಕೊಳ್ಳಲು ಕರ್ಮಯೋಗ ಸಮೀಚೀನವಾದ ಉಪಾಯವಾಗಿದೆ. ನಾನು ಮಾಡುವುದಲ್ಲ ಭಗವಂತನ ಊರ್ಜೆಯ ಪ್ರವೃತ್ತಿ

ಯಿಂದಲೇ, ಫಲವೂ ಆತನದೇ–ಎಂಬ ನಿಷ್ಠೆಯೇ ಕರ್ಮ ಅಥವಾ ಅನಾಸಕ್ತಿಯೋಗ. ಇದರ ಆಚರಣೆಯಿಂದ ಜೀವಾತ್ಮನಿಗೆ ತಾನು ಭಗವಂತನ ಶೇಷ ಎಂದರೆ ಊಳಿಗದವನೆಂಬ ತಿಳಿವಳಿಕೆ ಮೂಡಿ ದೃಢಗೊಂಡು ತಾನು ಇಲ್ಲದವನಾಗಿ ಭಗವಂತನೇ ಎಲ್ಲವಾಗಿ ಈತ ಜ್ಞಾನಯೋಗಿಯಾಗುತ್ತಾನೆ. ಈಗ ಈತ ಭಗವದೂರ್ಜಾಪ್ಲಾವಿತ. ಆದುದರಿಂದಲೇ ನಿಷ್ಕಳಂಕ, ನಿರ್ಲಿಪ್ತ, ಸದಾನಂದಿ. ಭಗವಂತನಿಂದ ವ್ಯಾಪ್ತನಾಗಿದ್ದೇನೆ ಎಂಬ ಅನುಭವವೇ ಭಕ್ತಿಯೋಗದ ಚರಮಸಿದ್ಧಿ. ಸ್ವಾರ್ಥ ನಿಶ್ಶೇಷವಾಗಿ ತೊಲಗಿರುವುದರಿಂದ ಈತನ ಕಾರ್ಯಗಳೆಲ್ಲವೂ ಲೋಕಸಂಗ್ರಹಾರ್ಥವಾಗಿಯೇ ಪ್ರವೃತ್ತವಾಗಿ ಜ್ಞಾನಾನಂದಗಳನ್ನು ಲೋಕದಲ್ಲಿ ಹರಡುತ್ತವೆ. ಮುಕ್ತನಾದ ಮೇಲೆ ಕೈವಲ್ಯದಲ್ಲೂ ಕೈಂಕರ್ಯದಲ್ಲೇ ತನ್ನ ಪರಮಪುರುಷಾರ್ಥವನ್ನು ಈತ ಪಡೆದುಕೊಳ್ಳುತ್ತಾನೆ.

ಈ ತಾಂತ್ರಿಕ ಸಿದ್ಧಾಂತಕ್ಕೆ ರಾಮಾನುಜ ದರ್ಶನವೆಂದು ಹೆಸರಿದ್ದರೂ, ಇದು ಅವರೊಬ್ಬರಿಂದಲೇ ಪ್ರವೃತ್ತವಾದುದಲ್ಲ. ರಾಮಾನುಜರು ತಮ್ಮ ಬ್ರಹ್ಮಸೂತ್ರ ಭಾಷ್ಯವನ್ನು ಪ್ರಾಚೀನರಾದ ಬೋಧಾಯನ ಋಷಿಗಳ ಸೂತ್ರವೃತ್ತಿಯನ್ನು ಅನುಸರಿಸಿ ಟಂಕ ದ್ರಮಿಡ, ಗುಹದೇವ ನಾಥಮುನಿ ಯಾಮುನಾಚಾರ್ಯರಾದಿ ಪೂರ್ವಜರು ಬರೆದಿರುವ ಗ್ರಂಥಗಳನ್ನು ಅವಲೋಕಿಸಿ ಆಳ್ವಾರ್ ಪ್ರಬಂಧಗಳ ಇಂಬನ್ನೂ ಕೊಂಡು ರಚಿಸಿದ್ದಾರೆ.

ವಿಶಿಷ್ಟಾದ್ವೈತಕ್ಕೆ ಆಳ್ವಾರ್ ಅವರುಗಳ ಕೊಡುಗೆಯೂ ಮಹತ್ತರವಾದುದ್ದು. ಶರಣಾಗತಿ ತತ್ವವೇ ಈ ಕೊಡುಗೆ. ಜ್ಞಾನಯೋಗಿಗಳಿಂದಲೂ ಕರ್ಮಯೋಗಿಗಳಿಂದಲೂ ರಚಿತವಾದ ಚಿದ್ ವಾತಾವರಣದಲ್ಲಿ ಕುಶಲ ಸಂವೇದಿಗಳ ಮನಸ್ಸು ಭಗವಂತನತ್ತ ತಿರುಗುತ್ತದೆ. ಆತನನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂಬ ಇಚ್ಛೆಯನ್ನು ಇವರು ತಳೆಯುತ್ತಾರೆ. ಕೊನೆಗೆ ತಮ್ಮ ಅಹಂಕಾರವನ್ನು ಸಂಪೂರ್ಣವಾಗಿ ಅಡಗಿಸಿಕೊಂಡು ತಮ್ಮೆಲ್ಲರ ಹೊರೆಯನ್ನೂ ಶ್ರೀಮನ್ನಾರಾಯಣನಿಗೆ ಒಪ್ಪಿಸಿ ನಿಶ್ಚಿಂತರೂ ಸದಾನಂದಿಗಳೂ ಆಗುತ್ತಾರೆ. ತಾನು ಭಗವಂತನ ಸ್ವತ್ತು, ತನ್ನದೆನ್ನುವುದು ಏನೂ ಇಲ್ಲ, ಆತ ಇರಿಸಿದಂತೆ ಇರುವವನು, ನಡೆಸಿದಂತೆ ನಡೆಯುವವನು ತಾನು, ಆತ ಎಂದೂ ತನ್ನ ಕೈಬಿಡಲಾರ, ಉದ್ಧರಿಸಿ ಲಾಲಿಸುತ್ತಾನೆ, ಆತನ ಸಾನ್ನಿಧ್ಯ ಕೈಂಕರ್ಯಗಳೇ ತನ್ನ ಚರಿತಾರ್ಥ: ಈ ಅಚಲ ವಿಶ್ವಾಸವೇ ಶರಣಾಗತಿಯ ತಿರುಳು, ಕರ್ಮಜ್ಞಾನಗಳ ಕಠಿನ ಮಾರ್ಗವನ್ನು ಪ್ರಪನ್ನ ಅನುಸರಿಸಬೇಕಾಗಿಲ್ಲ. ಅದು ಷಡ್ರಸಪೂರ್ಣವಾದ ಮೃಷ್ಟಾನ್ನ ಭೋಜನದ ಮಾರ್ಗ, ಕುಶಲಜೀರ್ಣಾಂಗವುಳ್ಳವರಿಗೆ ಇದು ಹಾಲು, ಜೇನು, ಸುಧೆಗಳ ಭೋಗಮಾರ್ಗ, ಎರಡರಲ್ಲೂ ಜೀವಾತ್ಮನಿಗೆ ಲಭಿಸುವುದು ಭಗವಂತನ ಸಾನ್ನಿಧ್ಯದಿಂದಲೂ ಸೇವೆಯಿಂದಲೂ ದೊರೆಯುವ ಜ್ಞಾನಾನಂದ ಸ್ಥಿತಿ. ಕರ್ಮಜ್ಞಾನಗಳಿಂದ ಮೂಡಿದ ಭಕ್ತಿಯೂ ಗಾಢಶ್ರದ್ಧೆಯಿಂದ ಪ್ರಾಪ್ತವಾದ ಪ್ರಪತ್ತಿಯೂ ಒಂದು ಮತ್ತೊಂದಕ್ಕೆ ಇಂಬು, ಒಂದಿಲ್ಲದೆ ಮತ್ತೊಂದು ನೀರಸವೂ ಆಗಬಹುದು.

ವಿಶಿಷ್ಟಾದ್ವೈತಿಗಳಿಗೆ ಉಭಯವೇದಾಂತ ಪ್ರವರ್ತಕರು ಎಂಬ ಬಿರುದುಂಟು. ಇವರನ್ನು ಶ್ರೀ ವೈಷ್ಣವರೆಂದು ಕರೆಯುತ್ತಾರೆ. ಇವರ ಮತ್ತೊಂದು ವೈಶಿಷ್ಟ್ಯವೇನೆಂದರೆ, ಉಪನಿಷತ್ ಬ್ರಹ್ಮಸೂತ್ರ ಭಗವದ್ಗೀತಾದಿ ಪ್ರಸ್ಥಾನಗ್ರಂಥಗಳ ಜತೆಗೆ ಅವಕ್ಕೆ ಸರಿಸಮಾನವಾದ ಪ್ರಾಧಾನ್ಯ ಪ್ರಾಶಸ್ತ್ಯಗಳನ್ನು ಆಳ್ವಾರ್ ಅವರುಗಳ ತಮಿಳುಭಾಷೆಯಲ್ಲಿ ರಚಿತವಾದ ಪಾಶುರಗಳಿಗೂ ಕೊಟ್ಟು ಪುರಸ್ಕರಿಸುತ್ತಿರುವುದು.

### ಕನ್ನಡನಾಡಿನಲ್ಲಿ

ವಿಶಿಷ್ಟಾದ್ವೈತ ಈ ಪ್ರಕಾರವಾಗಿ ದ್ರಾವಿಡ ಪ್ರಬಂಧಗಳಿಂದಲೂ ಆರ್ಷಪ್ರಸ್ಥಾನ ಗ್ರಂಥಗಳಿಂದಲೂ ತನ್ನ ಸ್ರೋತೋವಾಹಿನಿಗಳನ್ನು ಪಡೆದು ಪ್ರವಹಿಸುತ್ತಿರುವ ದಾರ್ಶನಿಕ ಪುಣ್ಯನದಿ. ಕನ್ನಡನಾಡಿನಲ್ಲಿ ಮೊದಮೊದಲು ಅಲ್ಲಲ್ಲಿ ಹಳ್ಳವಾಗಿ ಹರಿಯುತ್ತಿದ್ದ ಈ ಧರ್ಮ ಭಗವದ್ರಾಮಾನುಜ ಮುನಿಗಳಿಂದ ನೆರೆಗೊಂಡು ಭೋರ್ಗರೆದು ಪ್ರವಹಿಸಿತು. ಯತಿರಾಜರಿಗೆ ಆಸರೆಯಿತ್ತು ಈ ಧರ್ಮವನ್ನು ಬೆಳಸಿ ಹರಡಿದ ಕೀರ್ತಿ ಹೊಯಿಸಳ ರಾಜ ವಿಷ್ಣುವರ್ಧನ ಅಥವಾ ಬಿಟ್ಟಿದೇವನಿಗೆ (ಕ್ರಿ. ಶ. ೧೧೦೮–೧೧೫೧) ಸಲ್ಲುತ್ತದೆ. ಸಮರ್ಥನಾದ ಈ ಅರಸನ ನೆರವು ಶ್ರೀರಾಮಾನುಜರಿಗೆ ಅಯಾಚಿತವಾಗಿ ದೊರೆಯಿತು. ಯತಿವರ್ಯರದು ಅಸಾಧಾರಣವಾದ ವ್ಯಕ್ತಿತ್ವ ಹೃಷ್ಟವೂ ಪುಷ್ಟವೂ ಅದೀನವೂ ತೇಜಃಪುಂಜವೂ ಆದ ಮೂರ್ತಿ. ಪ್ರಸನ್ನವೂ ಪ್ರತಿಭಾಪ್ರಸೃತವೂ ಆದ ಮಾತು. ಈ ಮಹಾವ್ಯಕ್ತಿಯ ಸಂಸರ್ಗದಿಂದ ದೊರೆಯ ಕುಟುಂಬದಲ್ಲಿ ತಲೆದೋರಿದ್ದ ಆಧಿಗಳು ನಿವಾರಣೆಯಾಗಿ ಆತ ಇವರನ್ನು ಗುರುವಾಗಿ ಸ್ವೀಕರಿಸಿ ಇವರಿಂದ ಪ್ರಚಲಿತವಾದ ಧರ್ಮಕ್ಕೆ ಅನುಪಮವಾದ ಸಹಕಾರವನ್ನು ನೀಡಿದನು. ಶ್ರೀಭಾಷ್ಯಕಾರರು ಮೇಲ್ಮೊಗವಾಗಿ ಕಾವೇರಿಯ ಜಾಡನ್ನೇ ಹಿಡಿದು ಕರ್ನಾಟಕಕ್ಕೆ ಸತ್ಯಮಲಗಲದ ಮೂಲಕ ಪ್ರವೇಶಿಸಿದರು. ಅಲ್ಲಿಂದ ಒಳದಾರಿಯಲ್ಲಿ ಕಾವೇರಿ ತೀರದ ರಾಮನಾಥಪುರಕ್ಕೆ ಬಂದು ಅಲ್ಲಿಂದ ಮಿರಲ್ ಸಾಲಿಗ್ರಾಮಗಳ ಮೂಲಕ ಮೇಲುಕೋಟೆಯ ಮಾರ್ಗದಲ್ಲಿದ್ದ ತೊಂಡನೂರಿಗೆ ಬಂದರು. ಇದು ಹೊಯಿಸಳ ರಾಜರ ಉತ್ತರ ಗಡಿಯ ರಾಜಧಾನಿಯಾಗಿತ್ತು. ಅಲ್ಲಿ ಇವರು ವಿಷ್ಣುವರ್ಧನನ್ನು ಸಂಧಿಸಿ, ಆತನ ಮಗಳ ಮನೋವ್ಯಾಧಿಯನ್ನು ತಣಿಸಿ ಆತನನ್ನು ಶಿಷ್ಯನಾಗಿ ಪರಿಗ್ರಹಿಸಿ ಮೇಲುಕೋಟೆಗೆ ತೆರಳಿದರು. ಅಲ್ಲಿ ಶಿಥಿಲವಾಗಿದ್ದ ಚೆಲುವರಾಯಸ್ವಾಮಿ ಎಂಬ ಉತ್ಸವ ವಿಗ್ರಹವನ್ನು ಹರಿಜನರ ಸಹಾಯದಿಂದ ತಂದು ಹನ್ನೆರಡು ವರ್ಷಗಳ ಕಾಲ ಭಾಷ್ಯದ ಉಪದೇಶವನ್ನು ಮಾಡುತ್ತಾ, ದೇವಸ್ಥಾನದಲ್ಲಿ ಪೂಜಾರಿಗಳು ಪಂಚರಾತ್ರಾಗಮದ ರೀತಿಯಲ್ಲಿ ತಮ್ಮ ಮನೋಭೀಷ್ಟದಂತೆ ನಡೆಯಲು ವ್ಯವಸ್ಥೆಪಡಿಸಿ, ಉಪಪತ್ತಿಗಳನ್ನು ಕಲ್ಪಿಸಿ ಐವತ್ತಾರು ಶಿಷ್ಯರಿಗೆ ವಹಿಸಿಕೊಟ್ಟು ಅಲ್ಲಿಂದ ತೆರಳಿದರು. ಅಂದಿನಿಂದ ಮೇಲುಕೋಟೆ ಶ್ರೀವೈಷ್ಣವರಿಗೆ ಶ್ರೀರಂಗ, ಕಾಂಚೀಪುರ, ತಿರುಪತಿಗಳ ಜತೆಗೆ ನಿತ್ಯಸ್ಮರಣೀಯವಾದ ದಿವ್ಯ ಕ್ಷೇತ್ರವಾಗಿ ಪರಿಣಮಿಸಿದೆ. ಭಗವದ್ರಾಮಾನುಜರು ಹೊಯಿಸಳ ರಾಜ್ಯದಲ್ಲಿ ಸುಮಾರು ಇಪ್ಪತ್ತು ವರ್ಷಗಳ ಕಾಲ ಸಂಚರಿಸಿದರು. ಆ ಕಾಲದಲ್ಲಿಯೇ ಜೈನಧರ್ಮವು ಚೋಳಪಾಂಡ್ಯ ರಾಜ್ಯಗಳಲ್ಲಿ ತನ್ನ ಅಂತಃಸತ್ವವನ್ನು ಕಳೆದುಕೊಂಡು ಪ್ರಭಾವಗುಂದಿತ್ತು. ಭಾಷ್ಯಕಾರರು ಉಪದೇಶಿಸುತ್ತಿದ್ದ ಭಕ್ತಿಮಾರ್ಗವೋ ಜೈನವರದಷ್ಟು ಕ್ಲೇಶದಾಯಕವಾಗಿರದೆ, ಸಮಾಧಾನವನ್ನೂ, ಸಂತೋಷವನ್ನೂ ಎಲ್ಲರಿಗೂ ಜಾತಿಕುಲ ಭೇದವನ್ನು ಗಣಿಸದೆ ಕೊಡುವಂಥಾದ್ದಾಗಿತ್ತು. ರಾಜನ ಪರಿವರ್ತನೆಯಿಂದ ಜೈನರಿಗೆ ಅಷ್ಟೇನೂ ಹಾನಿಯಾದಂತೆ ತೋರಲಿಲ್ಲ. ಜೈನ ಮುನಿಗಳ ಕೇಂದ್ರವಾಗಿದ್ದ ಶ್ರವಣಬೆಳಗೊಳದಲ್ಲಿ ಆ ಜನರು ಸ್ವಲ್ಪ ಕಿರಿಕಿರಿ ಪಟ್ಟಿರಬಹುದು. ಬಿಟ್ಟಿದೇವ ಶ್ರೀ ವೈಷ್ಣವ ಮತಾಭಿಮಾನಿಯಾಗಿದ್ದರೂ ಆತನ ರಾಣಿ ಶಾಂತಲೆಯೂ, ಮಗಳು ಹರಿಯಾಳೆಯೂ, ಮಹಾಪ್ರಭಾವಶಾಲಿಗಳಾಗಿದ್ದ ಆತನ ಸೇನಾಧಿಪತಿ ಗಂಗರಾಜಾದಿಗಳೂ ಜೈನರಾಗಿಯೇ ಉಳಿದು ಅನೇಕ ಜಿನಾಲಯಗಳನ್ನು ಕಟ್ಟಿಸಿ ಪೋಷಿಸುತ್ತಿದ್ದರು. ಶೈವರೂ ರಾಜಪೋಷಣೆಯಿಂದ ವಂಚಿತರಾಗಲಿಲ್ಲವೆಂದು ಅನೇಕ ಶಾಸನಗಳು ತಿಳಿಸುತ್ತವೆ. ರಾಜನೊಲಿದಿದ್ದುದರಿಂದ ರಾಮಾನುಜಯತಿ

ಗಳು ತಮ್ಮ ದರ್ಶನವನ್ನು ಪ್ರಚಾರಗೊಳಿಸಲೂ, ವೈಷ್ಣವ ದೇವಾಲಯಗಳನ್ನು ನಿರ್ಮಿಸಲೂ ಅಡ್ಡಿತಡಗಳಿಲ್ಲದ ಅವಕಾಶ ದೊರೆಯಿತು. ಅದ್ವಿತೀಯವಾದ ಬೇಲೂರಿನ ಚೆನ್ನಕೇಶವ ದೇವಾಲಯದ ಜತೆಗೆ (ಕ್ರಿ.ಶ.೧೧೧೭) ದೇಶಾದ್ಯಂತ ಹರಡಿರುವ ಕೇಶವ-ಜನಾರ್ದನ ಗುಡಿಗಳು ಸಾಕ್ಷಿಗಳಾಗಿ ನಿಂತಿವೆ.

ಬಿಟ್ಟಿದೇವನಿಂದ ಅಂದು ಮೊದಲಾದ ರಾಜಾಶ್ರಯ ಶ್ರೀವೈಷ್ಣವ ಧರ್ಮಕ್ಕೆ ಇಂದಿನವರೆಗೂ ಸಮೃದ್ಧವಾಗಿ ದೊರೆತಿದೆ. ಹೊಯಿಸಳ ವಂಶದ ನರಸಿಂಹ ೧, ಎರಡನೆಯ ಬಲ್ಲಾಳ, ಮೂರನೆಯ ಬಲ್ಲಾಳ (ಕ್ರಿ. ಶ. ೧೨೯೧–೧೩೪೨) ಇವರಿಂದಲೂ ಇವರ ಮಾಂಡಲಿಕರಿಂದಲೂ ಅಮೋಘವಾದ ಸೇವೆ ಈ ಧರ್ಮಕ್ಕೆ ಸಂದಿದೆ.

ಮೂರನೆಯ ಬಲ್ಲಾಳನ ಕಾಲದಲ್ಲಿ ಉತ್ತರದಿಂದ ಬಂದ ಮುಸಲ್ಮಾನರ ಧಾಳಿಯಿಂದ ಉತ್ತರ ದೇಶಗಳಂತೆ ದಕ್ಷಿಣ ರಾಜ್ಯಗಳೂ ಕಂಗೆಟ್ಟವು. ವಾರಂಗಲ್ಲಿನ ಯಾದವರೂ ಕಾಕತೀಯರೂ ದ್ವಾರಸಮುದ್ರದಲ್ಲಿ ಹೊಯಿಸಳರೂ ಉಧ್ವಸ್ತರಾದರು, ಹೊಯಿಸಳರ ವಂಶ ಕೊನೆಗೊಂಡಿತು. ಬಲ್ಲಾಳನ ಮಾಂಡಲಿಕನಾದ ಸಂಗಮನ ಪುತ್ರ ಹರಿಹರನ ಪರಾಕ್ರಮದಿಂದ ವಿಜಯನಗರ ಸಾಮ್ರಾಜ್ಯ ಆಸ್ತಿಭಾರ ಪಡೆಯಿತು. ಹೊಯಿಸಳ ರಾಜ್ಯವೆಲ್ಲ ಹರಿಹರನ ಕೈಸೇರಿ ಸನಾತನಧರ್ಮ ಸುರಕ್ಷಿತವಾಯಿತು. ಆತನ ತಮ್ಮ ಬುಕ್ಕರಾಯನ ಕಾಲದಲ್ಲಿ (೧೩೫೬–೧೩೭೭) ಆತನ ಸೇನಾನಿ ಕಂಪಣ್ಣನಿಂದ ಶ್ರೀವೈಷ್ಣವ ಧರ್ಮ ತನಗೆ ಪರಕೀಯರಿಂದ ಒದಗಿದ್ದ ವಿಪತ್ತನ್ನು ಕಳೆದುಕೊಂಡಿತು. ಶ್ರೀರಂಗ ಕಾಂಚಿ–ತಿರುಪತಿಗಳು, ಮೇಲುಕೋಟೆಯ ಜತೆಗೆ, ವಿಜಯನಗರದ ರಕ್ಷೆಗೆ ಸಂದು ಅಭಿವೃದ್ಧಿಗೆ ಬಂದವು. ಶ್ರೀರಂಗವು ಮುಸಲ್ಮಾನರ ದಾಳಿಗೆ ಈಡಾಗಿದ್ದ ಕಾಲದಲ್ಲಿ ಶ್ರೀವೈಷ್ಣವ ಧರ್ಮದ ಪ್ರಮುಖ ಆಚಾರ್ಯರಾಗಿದ್ದ ಕವಿತಾರ್ಕಿಕಸಿಂಹರೆಂದು ಬಿರುದಾಂಕಿತರಾದ ಶ್ರೀವೇದಾಂತ ದೇಶಿಕರು ಕರ್ನಾಟಕಕ್ಕೆ ಬಂದು ಮೇಲುಕೋಟೆಯಲ್ಲಿ ನೆಮ್ಮದಿಯನ್ನು ಕಂಡು ಅದರ ಐಶ್ವರ್ಯ ಎಂದಿಗೂ ಕುಂದದಿರಲೆಂದು ಮಂಗಳಶಾಸನ ಮಾಡಿದ್ದಾರೆ. ವಿಜಯನಗರದ ಸಂಗಮ–ಸಾಳುವ–ತುಳು–ಅರವೀಡು ವಂಶಗಳ ರಾಜರೆಲ್ಲರೂ ಶೈವ, ವೀರಶೈವ, ವೈಷ್ಣವ, ಜೈನ ಪಂಥೀಯರೊಂದಿಗೆ ಶ್ರೀವೈಷ್ಣವ ಧರ್ಮವನ್ನೂ ವಿಶೇಷವಾಗಿ ಪೋಷಿಸಿದರು. ಆ ಅವಧಿಯಲ್ಲಿ ಸಾಯಣ, ಮಾಧವ, ವಿದ್ಯಾರಣ್ಯ, ವ್ಯಾಸರಾಯ, ತಾತಾಚಾರ್ಯ ಕಾಶೀವಿಲಾಸಕ್ರಿಯಾಶಕ್ತಿ ಮಹಾಪುರುಷರು ರಾಜಪುರಸ್ಕೃತರಾಗಿ ಆ ರಾಜ್ಯದ ಸಾಂಸ್ಕೃತಿಕ ವೈಭವಕ್ಕೆ ಮೂಲಾಧಾರವಾಗಿದ್ದರು. ವಿಜಯನಗರದ ಪ್ರಸಿದ್ಧ ಚಕ್ರವರ್ತಿಯಾಗಿದ್ದ ಕೃಷ್ಣದೇವರಾಯನು (ಕ್ರಿ. ಶ. ೧೫೦೯–೧೫೩೦) ತಾತಾಚಾರ್ಯರನ್ನು ಶ್ರೀ ವೈಷ್ಣವ ಧರ್ಮದ ಆಚಾರ್ಯಪೀಠಕ್ಕೇರಿಸಿ ಆ ಧರ್ಮವನ್ನು ಅಧಿಕವಾಗಿ ಪೋಷಿಸಿದನು. ಆತನಿಂದ ಪ್ರಣೀತವಾದ ಆಮುಕ್ತಮಾಲ್ಯದ ಎಂಬ ತೆಲುಗು ಕಾವ್ಯ ಗೋದಾದೇವಿಯನ್ನು ಕೊಂಡಾಡುತ್ತದೆ. ವಿಜಯವಿಠಲ ಮಂದಿರದ ಕಲ್ಯಾಣಮಂಟಪದ ಒಂದು ಕಂಬದಲ್ಲಿ ಶ್ರೀ ಕೃಷ್ಣ ಹರೆಯನ್ನು ಬಾರಿಸುವ ದೃಶ್ಯವಿದೆ. ಅದರಲ್ಲಿ ಶ್ರೀ ರಾಮಾನುಜ ಹಾಗೂ ಆಂಡಾಳ್ ದೇವಿಯರ ವಿಗ್ರಹಗಳೂ ಕೆತ್ತಿವೆ. ಕೃಷ್ಣದೇವರಾಯ–ಅಚ್ಯುತರಾಯರ ಕಾಲದಿಂದ ವಿಶೇಷ ಪ್ರಮಾಣದಲ್ಲಿ ವೃದ್ಧಿಂಗತವಾಗುತ್ತಿದ್ದ ಶ್ರೀವೈಷ್ಣವ ಮತದ ಪ್ರಸಾರವೂ ತಿರುಪತಿ ಶ್ರೀ ವೆಂಕಟೇಶ ಭಕ್ತಿಯೂ ಶ್ರೀವೆಂಕಟಪತಿ ದೇವರಾಯನ (ಕ್ರಿ. ಶ. ೧೫೮೬–೧೬೧೪) ಆಳ್ವಿಕೆಯಲ್ಲಿ ಪರಮಾವಧಿಯನ್ನು ಹೊಂದಿದವು. ಸ್ವತಃ ರಾಯನಿಂದಲೂ ಮಧುರೆ ಜಿಂಜಿ ಮೊದಲಾದ ಮಾಂಡಲಿಕ ಅರಸರಿಂದಲೂ ಇವುಗಳು ಪ್ರೋತ್ಸಾಹ ಪೋಷಣೆಗಳನ್ನು ಪಡೆದವು. ರಾಯನು ಉಜ್ವಲ ಶ್ರೀವೈಷ್ಣವ ಮತನಿಷ್ಠನೂ ವಿಷ್ಣುಭಕ್ತನೂ ಆಗಿದ್ದನು. ಆದರೂ ಆತನ ಉದಾರವಾದ ಧರ್ಮಭಾವನೆಯ ಮೂಲಕ ಮಾಧ್ವ, ಶಂಕರ, ವೀರಶೈವ, ಜೈನ, ಕ್ರೈಸ್ತ ಮೊದಲಾದ ಅನ್ಯ ಧರ್ಮಗಳೂ ಆತನ ರಾಜ್ಯದಲ್ಲಿ ಪೋಷಣೆಯನ್ನು ಪಡೆದು ಸುಖವಾಗಿ ಉಳಿದವು ಎಂಬುದಾಗಿ ಶ್ರೀ ಪಾಂಡುರಂಗ ದೇಸಾಯಿಯವರು ತಮ್ಮ "ವಿಜಯನಗರ ಸಾಮ್ರಾಜ್ಯ"ದಲ್ಲಿ ಉಲ್ಲೇಖಿಸಿದ್ದಾರೆ. ಈ ಶ್ರೀವೈಷ್ಣವ ಭಕ್ತಿ ಮತ್ತು ಧರ್ಮ ಪೋಷಣೆ ವಿಜಯನಗರದ ಅರಸನಾದ ಶ್ರೀರಂಗರಾಯನ (ಕ್ರಿ. ಶ. ೧೬೫೬–೧೬೮೧)ವರೆಗೂ ನಡೆದುಕೊಂಡು ಬಂದಿತು.

ವಿಜಯನಗರ ಸಾಮ್ರಾಜ್ಯ ಆಳಿದ ಮೇಲೆ ಅದರ ಮಾಂಡಲಿಕರು ಸ್ವತಂತ್ರರಾಗಿ ತಮ್ಮ ರಾಜ್ಯಗಳನ್ನು ಕಟ್ಟಿಕೊಂಡರು. ಕರ್ನಾಟಕದಲ್ಲಿ ಮೈಸೂರು ಒಡೆಯರೂ ಇಕ್ಕೇರಿ ಕೆಳದಿ ನಾಯಕರೂ ಮಾಗಡಿ ಕೆಂಪೇಗೌಡನ ವಂಶೀಕರೂ ಸನಾತನ ಧರ್ಮದ ಈ ವೈಷ್ಣವ ಶಾಖೆಗೂ ಆಸರೆಯಾದರು. ಶ್ರೀ ವೈಷ್ಣವಧರ್ಮಕ್ಕೆ ಮೈಸೂರು ಒಡೆಯರ ನೆರವು ಅಸಾಧಾರಣವಾದದ್ದು. ವಿಜಯನಗರದ ರಾಮದೇವರಾಯನು ತನ್ನ ರಾಜ್ಯವನ್ನು ಮೂರು ಭಾಗವಾಗಿ ವಿಂಗಡಿಸಿ, ಕರ್ನಾಟಕದ ಭಾಗವನ್ನು ತನ್ನ ಮಗ ತಿರುಮಲರಾಯನಿಗೆ ವಹಿಸಿದ್ದನಷ್ಟೆ. ಈತ ದುರ್ಬಲ. ಈತನ ಸಾಮಂತರಾಗಿದ್ದ ರಾಜಒಡೆಯರ್ (ಕ್ರಿ.ಶ.೧೫೭೮-೧೬೧೭) ಅವರು ಮೈಸೂರಿನಲ್ಲಿ ತಮ್ಮ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿ ಯಶಸ್ವಿಯಾದರು, ವಿಜಯನಗರದ ಶ್ರೀವೈಷ್ಣವ ಕೇಂದ್ರವಾಗಿದ್ದ ಮೇಲುಕೋಟೆಯನ್ನು ತುಂಬ ಅಭಿವೃದ್ಧಿಗೆ ತಂದರು. ದೊಡ್ಡ ದೊಡ್ಡ ಮಂಟಪಗಳನ್ನು ಕಟ್ಟಿಸಿದರು. ಚೆಲುವರಾಯ ಸ್ವಾಮಿಗೆ ಅನರ್ಘ್ಯ ಆಭರಣಗಳನ್ನಿತ್ತು ಉತ್ಸವಾದಿಗಳನ್ನು ಏರ್ಪಡಿಸಿದರು. ನವರಂಗದ ಕಂಬವೊಂದರಲ್ಲಿ ಕೆತ್ತಿರುವ ಇವರ ವಿಗ್ರಹಕ್ಕೆ ಈಗಲೂ ಪ್ರತಿದಿನವೂ ರಾಜಮರ್ಯಾದೆ ಸಲ್ಲುತ್ತಿದೆ. ಇವರ ತರುವಾಯ ಬಂದ ಕಂಠೀರವ ನರಸರಾಜ ಒಡೆಯರ್ (೧೬೩೮–೫೯), ಚಿಕ್ಕದೇವರಾಯ ಒಡೆಯರ್ (೧೬೭೨–೧೭೦೪), ಇವರಿಂದ ಶ್ರೀವೈಷ್ಣವಧರ್ಮ ಮೈಸೂರು ಪ್ರಾಂತ್ಯದಲ್ಲಿ ಅತ್ಯುಚ್ಛ್ರಾಯ ಪಡೆಯಿತು. "ಚಿಕ್ಕದೇವರಾಯ ಬಿನ್ನಪಂ" ಎಂಬ ಶ್ರೀವೈಷ್ಣವ ಮತ ಪ್ರಕ್ರಿಯೆಯ ಕಾವ್ಯವು ಆ ದೊರೆಯಿಂದ ನಿರ್ಮಿತವಾಗಿ ಯದುಗಿರಿಯ ಚೆಲುವರಾಯಸ್ವಾಮಿಗೆ ಸಮರ್ಪಿತವಾಗಿದೆ. ಈ ಕಾಲದಲ್ಲಿನ ಕವಿಗಳಾದ ತಿರುಮಲಾರ್ಯ (ಈತ ಪ್ರಧಾನಿಯೂ ಆಗಿದ್ದ) ನಿಂದ ಗೀತಗೋಪಾಲವೆಂಬ ಸುಂದರ ಗೀತ ಮಾಲಿಕೆಯೂ, ಚಿಕುಪಾಧ್ಯಾಯನಿಂದ ಮಿತ್ರವಿಂದಾಗೋವಿಂದ ಎಂಬ ಪ್ರಥಮ ಕನ್ನಡ ನಾಟಕದೊಂದಿಗೆ ಅನೇಕ ಮಹಾತ್ಮ್ಯ ಗ್ರಂಥಗಳೂ ರಚಿತವಾಗಿದೆ. ಈ ರಾಜಪರಂಪರೆಯಿಂದ ಸತತವಾಗಿ ಪೋಷಣೆಗೊಂಡ ಶ್ರೀವೈಷ್ಣವ ಧರ್ಮ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ (೧೭೯೪–೧೮೬೮) ಮತ್ತೊಮ್ಮೆ ಮಹಾಪೂರವನ್ನು ಪಡೆಯಿತು. ಈತ ಮೇಲುಕೋಟೆಯ ಶ್ರೀ ವೈಷ್ಣವ ಕ್ಷೇತ್ರವನ್ನು ತುಂಬ ಸಮೃದ್ಧಿಗೊಳಿಸಿದನು. ಕೃಷ್ಣರಾಜಮುಡಿ ಎಂಬ ರತ್ನಕಿರೀಟ, ಪಚ್ಚೆಯ ಹಾರಾದಿಗಳಲ್ಲದೆ ಅನೇಕ ಆಭರಣಗಳನ್ನು ದೇವರಿಗೆ ಸಮರ್ಪಿಸಿ ಒಂದು ಬ್ರಹ್ಮೋತ್ಸವವನ್ನು ತನ್ನ ಜನ್ಮದಿನದ ಅಂಕಿತದಲ್ಲಿ ಏರ್ಪಡಿಸಿದ್ದಾನೆ. ಅದು ಈಗಲೂ ನಡೆದುಬರುತ್ತಿದೆ. ಈತನ ವಿಗ್ರಹ ನಾಲ್ವರು ಅರಸಿಯರೊಂದಿಗೆ ದೇವಸ್ಥಾನದಲ್ಲಿ ಮರ್ಯಾದೆಗೊಳ್ಳುತ್ತಿದೆ. ಇದೇ ಪ್ರೋತ್ಸಾಹ ಚಾಮರಾಜ ಒಡೆಯರ ಹಾಗೂ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲೂ ಮುಂದುವರಿಯಿತು. ಸ್ವಾತಂತ್ರ್ಯ ಪ್ರಾಪ್ತವಾಗಿ ಮೈಸೂರಿನ ಅರಸೊತ್ತಿಗೆ ಕೊನೆಗೊಂಡ ಬಳಿಕ ಆರ್ಷ ಸನಾತನ ಧರ್ಮಕ್ಕೆ ಹೇಗೋ ಹಾಗೆ ಶ್ರೀವೈಷ್ಣವ ಧರ್ಮಕ್ಕೆ ಪೋಷಣೆ ತಪ್ಪಿ ಗುಡಿಗಳೂ, ಮಠಗಳೂ, ಪಾಠಶಾಲೆಗಳೂ,

ಆಚಾರ್ಯಪುರುಷರ ತಿರುಮಾಳಿಗೆಗಳೂ ಸೊರಗುತ್ತಿವೆ. ಕಾಲಗತಿಯ ಎದುರು ಭಗವಂತನ ಕರುಣೆ ಮಾತ್ರ ನಿಲ್ಲಬಲ್ಲುದು.

ವಿಜಯನಗರದ ಅರಸರ ಕಾಲದಲ್ಲಿ ತಾತಾಚಾರ್ಯರ ಪ್ರಭಾವ ಹೇಗೆ ಶ್ರೀವೈಷ್ಣವಧರ್ಮದ ವೈಭವಕ್ಕೆ ಕಾರಣವಾಯಿತೋ ಹಾಗೆಯೇ ಮೈಸೂರು ಒಡೆಯರ ಕಾಲದಲ್ಲಿ ಇದರ ಪ್ರವೃದ್ಧಿಗೂ ಶ್ರೀಮಂತಜೀವನಕ್ಕೂ ರಾಜಗುರುಗಳಾದ ಶ್ರೀ ಬ್ರಹ್ಮತಂತ್ರ ಸ್ವತಂತ್ರ ಪರಕಾಲಮಠದ ಯತಿಗಳು ಕಾರಣರಾಗಿದ್ದಾರೆ. ಈ ಮಠಕ್ಕೂ, ಮೈಸೂರು ಅರಸರಿಗೂ ಯದುರಾಯನ ಕಾಲದಿಂದಲೂ ಸಂಬಂಧವುಂಟು. ಆಗ ಇದರ ಕೇಂದ್ರ ತಿರುಪತಿಯಲ್ಲಿತ್ತು. ದೊಡ್ಡಪರಕಾಲಸ್ವಾಮಿಗಳ ಕಾಲದಲ್ಲಿ (೧೬೭೬–೧೭೦೦) ಇದು ಶ್ರೀರಂಗಪಟ್ಟಣಕ್ಕೆ ಬಂದಿತು. ಶ್ರೀರಂಗಪಟ್ಟಣದ ಪತನಾನಂತರ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರಿನಲ್ಲಿ ಪ್ರತಿಷ್ಠಿತವಾಯಿತು. ಈ ಯತಿ ಪರಂಪರೆಯಲ್ಲಿ ಶ್ರೀಶ್ರೀನಿವಾಸಬ್ರಹ್ಮತಂತ್ರ ಪರಕಾಲಸ್ವಾಮಿಗಳು, ಶ್ರೀಘಂಟಾವತಾರಪರಕಾಲಸ್ವಾಮಿಗಳು, ಶ್ರೀಕೃಷ್ಣಬ್ರಹ್ಮತಂತ್ರ ಪರಕಾಲಸ್ವಾಮಿಗಳು ಹಾಗೂ ಶ್ರೀಅಭಿನವರಂಗನಾಥ ಬ್ರಹ್ಮತಂತ್ರ ಸ್ವಾಮಿಗಳು ಇವರು ಮಹಾ ಸಂಯಮಿಗಳೂ ಶಾಸ್ತ್ರನಿಷ್ಣಾತರೂ, ಆಗಿದ್ದು ತಾವೇ ಅನೇಕ ಗ್ರಂಥಗಳನ್ನು ರಚಿಸಿರುವುದಲ್ಲದೆ ಅನೇಕ ಪಂಡಿತರಿಗೂ ಆಶ್ರಯಭೂತರಾಗಿದ್ದರು. ಶ್ರೀವೈಷ್ಣವಮತದ ಆಂಧ್ರದ ಅಹೋಬಲ, ತಮಿಳುನಾಡಿನ ವಾನಮಾಮಲೈ, ಮೇಲುಕೋಟೆಯ ಯತಿರಾಜ ಮುಂತಾದ ಪ್ರಮುಖ ಮಠಗಳೂ ಆಚಾರ್ಯಪುರುಷರೂ, ಪಂಡಿತರೂ ಕರ್ನಾಟಕದಲ್ಲಿ ಯಾವ ಕೊರತೆಯೂ ಕೊರಗೂ ಇಲ್ಲದೆ ಸಂಚರಿಸುತ್ತಾ, ಶಾಖೆಗಳನ್ನೂ ಶಿಷ್ಯವೃಂದವನ್ನೂ ಬೆಳೆಸುತ್ತಾ ಧರ್ಮಧಾರಕರಾಗಿದ್ದಾರೆ.

ಕೆಲವು ವರ್ಷಗಳ ಹಿಂದೆ ಶತಮಾನೋತ್ಸವವನ್ನು ಆಚರಿಸಿದ ವೇದವೇದಾಂತಬೋಧಿನೀ ಸಂಸ್ಕೃತ ಮಹಾಪಾಠಶಾಲೆಯ ಜೊತೆಗೆ ಇತ್ತೀಚೆಗೆ ವಿಶಿಷ್ಟಾದ್ವೈತದ ಅಧ್ಯಯನಕ್ಕೆಂದೆ ಒಂದು ಅಕಾಡೆಮಿ ಮೇಲುಕೋಟೆಯಲ್ಲಿ ಸ್ಥಾಪಿತವಾಗಿ ಕಾರ್ಯಪ್ರವೃತ್ತವಾಗಿದೆ.

ಹೀಗೆ ಅವಿಚ್ಛಿನ್ನವಾದ ರಾಜಾಶ್ರಯವನ್ನೂ ಜನರ ವಿಶ್ವಾಸವನ್ನೂ ಪಡೆದು ಕರ್ನಾಟಕದಲ್ಲಿ ಬಾಳುತ್ತಿರುವ ಶ್ರೀವೈಷ್ಣವಧರ್ಮದಿಂದ ನಾಡಿಗಾದ ಪ್ರಯೋಜನವೇನು? ಶ್ರೀರಂಗ, ಕಂಚಿ, ತಿರುಪತಿಗಳಿಗೆ ಸಮಾನವಾದ ಅಖಿಲ ಭಾರತ ವ್ಯಾಪ್ತಿಯುಳ್ಳ ಒಂದು ದಿವ್ಯಕ್ಷೇತ್ರ, ಅಖಿಲಶಕ್ತಿಧರನೂ, ಅಖಿಲಲೋಕಾಧಾರನೂ ಆದ ಭಗವಂತನಿಗೆ ತಮ್ಮನ್ನು ನಿಶ್ಶೇಷವಾಗಿ ಒಪ್ಪಿಸಿಕೊಂಡು ಆತನ ಭಕ್ತಿಯಿಂದಲೇ ಪ್ರಭಾವಿತರಾಗಿ ಲೋಕಸಂಗ್ರಹತತ್ಪರರಾಗಬೇಕೆಂಬ ಧ್ಯೇಯವನ್ನು ಪ್ರಸರಿಸುವ ದರ್ಶನ, ಬೇಲೂರು, ನುಗ್ಗೇಹಳ್ಳಿ, ಹೊಸಹೊಳಲು, ಜಾವಗಲ್, ಸೋಮನಾಥಪುರ (ಕೇಶವ) ಅರಳುಗುಪ್ಪೆ ಮೊದಲಾದ ಸ್ಥಳಗಳಲ್ಲಿರುವ ಸುಂದರ ಕಲಾಮಯವಾದ ಗುಡಿಗಳು ಅಲ್ಲದೆ ಕನಕದಾಸ, ಲಕ್ಷ್ಮೀಶ, ತಿರುಮಲಾರ್ಯ, ಚಿಕ್ಕದೇವರಾಯ, ಚಿಕುಪಾಧ್ಯಾಯ ಮೊದಲಾದ ಶ್ರೇಷ್ಠ ಕವಿಗಳ ಪ್ರಸ್ತುತಿಗೆ ಮೂಲಕಾರಣವಾಗಿದೆ. ಈ ಧರ್ಮವನ್ನು ಆಶ್ರಯಿಸಿರುವ ಅನೇಕ ಪ್ರತಿಭಾ ಶಾಲಿಗಳಿಂದ ಕನ್ನಡ ಸಾಹಿತ್ಯ ಶ್ರೀಮಂತವಾಗಿದೆ, ಈಗಲೂ ಆಗುತ್ತಿದೆ.

ಆದರೆ ಈ ಕಾಲದಲ್ಲಿ ಈ ಧರ್ಮ ಊರ್ಜಿತವಾಗಬೇಕಾದರೆ ಗುಡಿ, ಮಠ, ಆಚಾರ್ಯಪುರುಷರ ತಿರುಮಾಳಿಗೆಗಳು ಸಾಲವು. ವಿಶ್ವವಿದ್ಯಾನಿಲಯಗಳೂ ಅದರಲ್ಲಿ ವಿಶ್ವವಿದ್ಯಾಶಿಕ್ಷಣವನ್ನು ಪಡೆಯುತ್ತಿರುವ ಶ್ರದ್ಧಾವಂತ ಮಹಾಮತಿಗಳೂ ಇದಕ್ಕೆ ಪರಸಂಸ್ಕೃತಿಯಿಂದಲೂ ಮತಗಳಿಂದಲೂ ಒದಗುತ್ತಿರುವ ಆಘಾತವನ್ನು ತಪ್ಪಿಸಿ ಕಾಪಾಡಬೇಕು. ಸತತವಾದ ಎಚ್ಚರಿಕೆ, ಹೋರಾಟಗಳಿಲ್ಲದೆ ಯಾವುದೂ ಬದುಕಲಾರದು.

# ಕರ್ನಾಟಕದಲ್ಲಿ ದ್ವೈತ

ಬನ್ನಂಜೆ ಗೋವಿಂದಾಚಾರ್ಯ

ಕರ್ನಾಟಕ ಎಲ್ಲ ಪಂಥಗಳಿಗೆ ಇಂಬಿತ್ತ ನಾಡು; ಎಲ್ಲ ಅನುಭಾವಿಗಳಿಗೆ, ಬುದ್ಧಿಜೀವಿಗಳಿಗೆ ನೆರಳಿತ್ತು ಸಲಹಿದ ನಾಡು; ಮಹಾನ್‌ಚಿಂತಕರನ್ನು, ಮಹಾಪುರುಷರನ್ನು ಜಗತ್ತಿಗೆ ನೀಡಿದ ನಾಡು.

ಮತತ್ರಯಗಳ ಆಚಾರ್ಯರನ್ನೇ ನೋಡೋಣ. ಆಚಾರ್ಯ ಶಂಕರರು ಕೇರಳದವರು. ಅವರ ಪ್ರಧಾನ ಪೀಠಗಳಲ್ಲೊಂದಾದ ಶೃಂಗೇರಿ ಕರ್ನಾಟಕದಲ್ಲಿದೆ. ಆಚಾರ್ಯ ರಾಮಾನುಜರು ತಮಿಳು ನಾಡಿನವರು. ಅವರ ಪ್ರೀತಿಯ ಮೇಲುಕೋಟೆ ಕರ್ನಾಟಕದಲ್ಲಿದೆ. ಆಚಾರ್ಯ ಮಧ್ವರಂತು ಕರ್ನಾಟಕದ ಸುಪುತ್ರ. ವಿಶ್ವದ ತತ್ವಜ್ಞಾನ ಪ್ರಪಂಚಕ್ಕೆ ಕರ್ನಾಟಕದ ಹೆಮ್ಮೆಯ ಕೊಡುಗೆ.

ಕರ್ನಾಟಕ ರಾಜ್ಯದಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಜಿಲ್ಲೆಯಲ್ಲಿ ಉಡುಪಿ ತಾಲೂಕು, ತಾಲೂಕಿನಲ್ಲಿ ಕಡಗೋಲು ಕೃಷ್ಣನ ಉಡುಪಿ ನಗರ ಯಾರಿಗೆ ಗೊತ್ತಿಲ್ಲ? ಉಡುಪಿಯಿಂದ ದಕ್ಷಿಣಕ್ಕೆ ಸುಮಾರು ೮ ಕಿ. ಮೀ. ದೂರದ ಒಂದು ಗ್ರಾಮ ಬೆಳ್ಳೆ. ಈ ಗ್ರಾಮದಲ್ಲಿ ಬಂಡೆ ಬೆಟ್ಟಗಳಿಂದ ಸುತ್ತುವರಿದ ಸುಂದರವಾದ ಪುಟ್ಟ ಹಳ್ಳಿ 'ಪಾಜಕ'. ಆಚಾರ್ಯ ಮಧ್ವರು ಜನಿಸಿದ್ದು ಈ ಅಜ್ಞಾತ ಹಳ್ಳಿಯಲ್ಲಿ. ಆಚಾರ್ಯರ ಜನನದಿಂದ ಈ ಹಳ್ಳಿಯ ಕೊಂಪೆ ಪವಿತ್ರ ಯಾತ್ರಾ ಕ್ಷೇತ್ರವಾಗಿ ವಿಖ್ಯಾತವಾಯಿತು; 'ಪಾಜಕಕ್ಷೇತ್ರ' ಎಂದು ಹೆಸರಾಯಿತು.

೭೫೦ ವರ್ಷಗಳ ಹಿಂದಿನ ಮಾತು. ಕಲಿಯುಗ ಪ್ರಾರಂಭವಾಗಿ ೪೩೩೮ ವರ್ಷಗಳು ಸಂದು ೩೯ನೆಯ ವರ್ಷ ನಡೆದಿದೆ. ವಿಲಂಬಿ ಸಂವತ್ಸರದ (ಕ್ರಿ. ಶ. ೧೨೩೮) ಅಶ್ವಯುಜ ಮಾಸ, ಶುಕ್ಲಪಕ್ಷ, ನವರಾತ್ರಿ ಕಳೆದು ವಿಜಯದಶಮಿಯ ಸಂಭ್ರಮದ ದಿನ. ಅಂದು ಮಧ್ಯಾಹ್ನದ ಹೊತ್ತು, ಕರ್ನಾಟಕದ ಈ ಪುಟ್ಟ ಹಳ್ಳಿಯಲ್ಲಿ ಆಚಾರ್ಯ ಮಧ್ವರ ಜನನವಾಯಿತು. ಮಗುವಿಗೆ ತಂದೆಯಿಟ್ಟ ಹೆಸರು "ವಾಸುದೇವ".

ಆಚಾರ್ಯರ ತಂದೆ 'ನಡಿಲ್ಲಾಯ' ಮನೆತನದವರು. ಆಚಾರ್ಯರ ಜೀವನ ಚರಿತ್ರೆಯನ್ನು ಬರೆದಿಟ್ಟ ನಾರಾಯಣ ಪಂಡಿತಾಚಾರ್ಯರು. ಅವರ ತಂದೆ ತಾಯ ಹೆಸರನ್ನು ಉಲ್ಲೇಖಿಸಿಲ್ಲ. ಕೆಲವರ ನಂಬಿಕೆಯಂತೆ ತಂದೆಯ ಹೆಸರು ನಡಿಲ್ಲಾಯ ನಾರಾಯಣ ಭಟ್ಟ; ತಾಯಿಯ ಹೆಸರು ವೇದವತಿ.

**ಪೂರ್ಣಪ್ರಜ್ಞ –ಆನಂದತೀರ್ಥ –ಮಧ್ವ**

ವಟು ವಾಸುದೇವನಿಗೆ ಬಾಲ್ಯದಲ್ಲೇ ಅಧ್ಯಾತ್ಮದತ್ತ ಒಲವು. ವಿರಕ್ತಿ ಮಾರ್ಗದ ಸೆಳೆತ. ಜತೆಗೆ ಅತಿಮಾನುಷವಾದ ಪ್ರತಿಭಾಶಕ್ತಿ. ತಂದೆ–ತಾಯಿ ತನ್ನ ಮಗ ಸಂಸಾರಿಯಾಗಬೇಕೆಂದು ಬಯಸಿದರೆ ಜಗತ್ತೇ ತನ್ನ ಸಂಸಾರ ಎಂದು ವಾಸುದೇವ ಮನೆಯಿಂದ ದೂರ ನಡೆದ. ಹನ್ನೊಂದರ ಎಳೆವರೆಯದಲ್ಲೇ, ಸೌಮ್ಯ ಸಂವತ್ಸರದಲ್ಲಿ (ಕ್ರಿ. ಶ. ೧೨೪೯) ಉಡುಪಿಯ ಪರಿಸರದಲ್ಲಿ ಆಗ ವಿಖ್ಯಾತರಾಗಿದ್ದ 'ಅಚ್ಯುತಪ್ರಜ್ಞ' ಯತಿಗಳಿಂದ ಸನ್ಯಾಸದೀಕ್ಷೆ ಪಡೆದ. ಗುರು ಅಚ್ಯುತಪ್ರಜ್ಞರು ವಟು ವಾಸುದೇವನಿಗೆ ಆಶ್ರಮ ಕಾಲದಲ್ಲಿ "ಪೂರ್ಣಪ್ರಜ್ಞ" ಎಂದು ನಾಮಕರಣ ಮಾಡಿದರು.

ಆಶ್ರಮ ಸ್ವೀಕಾರವಾಗಿ ಬರಿಯ ೪೦ ದಿನಗಳಷ್ಟೇ ಸಂದಿದೆ, ಆಗ ಒಂದು ಮಹತ್ವದ ಘಟನೆ ನಡೆಯಿತು. ವಾಸುದೇವ ಪಂಡಿತ ಮುಂತಾದ ದೇಶವಿಖ್ಯಾತ ತರ್ಕ ವಿದ್ವಾಂಸರು ತಮ್ಮನ್ನು ವಾದದಲ್ಲಿ ಗೆದೆಯಬಲ್ಲ ಪಂಡಿತನನ್ನರಸುತ್ತ ಉಡುಪಿಗೆ ಬಂದಿದ್ದರು. ಎಲ್ಲೆಡೆಯೂ ಜಯಭೇರಿ ಬಾರಿಸಿ ಬಂದಿದ್ದ ಈ ಸೊಕ್ಕಿನ ವಿದ್ವಾಂಸರನ್ನು ಹನ್ನೊಂದರ ಪುಟ್ಟ ಯತಿ ಪೂರ್ಣಪ್ರಜ್ಞರು ತರ್ಕದಲ್ಲಿ ಸೋಲಿಸಿದರು.

ಪುಟ್ಟ ಯತಿಯ ಈ ಅಲೌಕಿಕ ಪ್ರತಿಭೆಯಿಂದ ಸಂತಸಗೊಂಡ ಗುರು ಅಚ್ಯುತಪ್ರಜ್ಞರು ವೇದಾಂತ ಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕಗೈದು 'ಆನಂದತೀರ್ಥ' ಎಂದು ಹೆಸರಿಟ್ಟರು.

ಇನ್ನೊಮ್ಮೆ ಬುದ್ಧಿಸಾಗರನೆಂಬ ಬೌದ್ಧ ವಿದ್ವಾಂಸ ಅಚ್ಯುತಪ್ರಜ್ಞರ ಮಠಕ್ಕೆ ಬಂದಿದ್ದ. ಮೊದಲು ವೈದಿಕ ಧರ್ಮಾವಲಂಬಿಯಾಗಿದ್ದು, ಅನಂತರ ಬುದ್ಧಿಸಾಗರನ ಜತೆ ವಾದದಲ್ಲಿ ಸೋತು ಅವನ ಶಿಷ್ಯನಾಗಿ ಬೌದ್ಧಧರ್ಮವನ್ನು ಸ್ವೀಕರಿಸಿದ್ದ ವಾದಿಸಿಂಹನೆಂಬ ವಿದ್ವಾಂಸನೂ ಅವನ ಜತೆಗಿದ್ದ. ದೇಶದ ಎಲ್ಲೆಡೆ ಸಂಚರಿಸಿ ವಾದದಲ್ಲಿ ಜಯಪತ್ರ ಪಡೆದು ಬಂದ ಈ ಬೌದ್ಧಿಕ ವಿದ್ವಾಂಸರನ್ನು ಪೂರ್ಣಪ್ರಜ್ಞರು ನಿರುತ್ತರಗೊಳಿಸಿದರು. ಅಚ್ಯುತಪ್ರಜ್ಞರಿಗೆ ಆದ ಆನಂದಕ್ಕೆ ಪಾರವೇ ಇಲ್ಲ. ಅವರು ಪಟ್ಟಾಭಿಷೇಕ ಕಾಲದಲ್ಲಿ 'ಪೂರ್ಣಪ್ರಜ್ಞ'ರನ್ನು 'ಆನಂದತೀರ್ಥ' ಎಂದು ಕರೆದಿದ್ದು ಸಾರ್ಥಕವಾಯಿತು.

ಹೀಗೆ ಆಚಾರ್ಯರ ಸನ್ಯಾಸದ ನಾಮ 'ಪೂರ್ಣಪ್ರಜ್ಞ' ಪಟ್ಟಾಭಿಷೇಕದ ನಾಮ 'ಆನಂದತೀರ್ಥ' ಆಚಾರ್ಯರು ತಾವೇ ಮೆಚ್ಚಿ ಇರಿಸಿಕೊಂಡ ವೈದಿಕವಾದ 'ಕಾವ್ಯನಾಮ' ಮಧ್ವ. ವೇದಗಳಲ್ಲಿ ಉಲ್ಲೇಖಗೊಂಡ ಆಚಾರ್ಯರಿಗೆ ಪ್ರಿಯವಾದ ಈ ಹೆಸರಿನಿಂದಲೇ ಅವರು ಮುಂದೆ ವಿಖ್ಯಾತರಾದರು.

### ದಕ್ಷಿಣದ ಯಾತ್ರೆ

ಆಚಾರ್ಯರು ತನ್ನ ಹದಿಹರೆಯದಲ್ಲೇ ದಕ್ಷಿಣ ಭಾರತದ ಸಂಚಾರವನ್ನು ಕೈಗೊಂಡರು. ಅನಂತಶಯನ, ಕನ್ಯಾಕುಮಾರಿ, ರಾಮೇಶ್ವರ, ಶ್ರೀರಂಗದಂಥ ಪ್ರಮುಖ ಕ್ಷೇತ್ರಗಳನ್ನು ಸಂದರ್ಶಿಸಿದರು. ಹೋದೆಡೆಯಲ್ಲೆಲ್ಲಾ ಪ್ರವಚನಗಳನ್ನು ನಡೆಸಿ ತನ್ನ ತತ್ತ್ವವಾದದ ಸಂದೇಶವನ್ನು ತಲುಪಿಸಿದರು. ಇದರಿಂದ ಇಡಿಯ ಭಾರತದ ವಿದ್ವಾಂಸರಲ್ಲಿ ಹೊಸ ಚರ್ಚೆಗೆ ನಾಂದಿಯಾಯಿತು. ಕೆಲವು ನಂಬಿಕೆಗಳನ್ನೂ ಆಚಾರ್ಯರು ಸ್ಪಷ್ಟವಾಣಿಯಿಂದ ಖಂಡಿಸಿದರು. ಅಧ್ಯಾತ್ಮವನ್ನು ಮೂಢನಂಬಿಕೆಗಳ ಜತೆ ಬೆರೆಸಕೂಡದು ಎಂದರು. ಪರಿಣಾಮವಾಗಿ ಕೆಲವು ಸಂಪ್ರದಾಯವಾದಿಗಳಿಂದ ಉಗ್ರ ವಿರೋಧವೂ ಬಂದುದುಂಟು. ಆದರೆ ಯಾವ ಕ್ಷುದ್ರ ಬೆದರಿಕೆಗಳಿಗೂ ಸೊಪ್ಪು ಹಾಕದೆ ಎಲ್ಲವನ್ನೂ ಆಚಾರ್ಯರು ದಿಟ್ಟತನದಿಂದಲೇ ಎದುರಿಸಿದರು.

ಆಚಾರ್ಯ ಮಧ್ವರ ಬಗೆಯೊಳಗಿನಲ್ಲಿ ಬಹುಕಾಲದಿಂದ ಹುದುಗಿದ್ದ ಬಯಕೆ ಈ ಸಂಚಾರದಿಂದ ದೃಢನಿರ್ಧಾರವಾಗಿ ರೂಪುಗೊಂಡಿತು. "ಈ ತತ್ತ್ವಜ್ಞಾನದ ಮಾರ್ಗದಲ್ಲಿ ಮೂಢನಂಬಿಕೆಗಳನ್ನು ತೊಡೆದುಹಾಕಬೇಕು. ನಿಜತತ್ತ್ವದ ಪ್ರಸಾರಕ್ಕಾಗಿ ಇಡಿಯ ಬದುಕನ್ನು ಮುಡುಪಾಗಿಡಬೇಕು."

ನಿರ್ಧಾರತೊಟ್ಟು ಉಡುಪಿಗೆ ಮರಳಿದ ಆಚಾರ್ಯರು ಮೊದಲು ಮಾಡಿದ ಕೆಲಸ: ಭಗವದ್ಗೀತೆಗೆ ಭಾಷ್ಯರಚನೆ.

### ಬದರಿಯ ಸೆಳೆತ

ಮುಂದೆ ಉತ್ತರ ಭಾರತದ ಎಲ್ಲೆಡೆ ಸಂಚರಿಸಿ ವೇದಧರ್ಮದ ಸಂದೇಶವನ್ನು ಮುಟ್ಟಿಸಬೇಕು ಎಂದು ಆಚಾರ್ಯರು ಬಯಸಿದರು. ಆಚಾರ್ಯರಿಗೆ ಬದರಿಯ ಆಕರ್ಷಣೆ. ಹಿಮಾಲಯದ ಕಂದರದಲ್ಲಿ ನರ–ನಾರಾಯಣರ ನೆಲೆ– ವ್ಯಾಸಾಶ್ರಮ ಇವನ್ನೆಲ್ಲ ಕಾಣಬೇಕು; ತಾನು ಬರೆದ ಗೀತಾಭಾಷ್ಯವನ್ನು ವೇದವ್ಯಾಸರಿಗೆ ಕಾಣಿಕೆಯಾಗಿ ಅರ್ಪಿಸಬೇಕು ಎಂಬ ಬಯಕೆ ಹೊತ್ತು ಆಚಾರ್ಯರು ನೇರ ಬದರಿಯತ್ತ ತೆರಳಿದರು. ಅಲ್ಲಿ ೪೭ ದಿನಗಳ ಕಾಷ್ಠಮೌನ, ಶೀತಲ ಗಂಗಾಸ್ನಾನ, ಅನಂತರ ವ್ಯಾಸ ಬದರಿಗೆ ಏಕಾಕಿಯಾಗಿ ಪಯಣ.

ಅಲ್ಲಿಂದ ಮರಳಿದ ಮೇಲೆ ಬ್ರಹ್ಮಸೂತ್ರಗಳಿಗೆ ಭಾಷ್ಯರಚನೆ. ಆಚಾರ್ಯರು ಯಾವ ಗ್ರಂಥವನ್ನೂ ತಾನು ಕೈಯಿಂದ ಬರೆದವರಲ್ಲ. ಅವರು ಹೇಳುತ್ತ ಹೋಗಬೇಕು; ಶಿಷ್ಯರು ಬರೆದಿಡಬೇಕು. ಪ್ರವಚನದಂತೆಯೇ ಗ್ರಂಥರಚನೆಯೂ ನಿರರ್ಗಳ. ಆಚಾರ್ಯರು ಅನುಸ್ಮೃತ್ಯ ಹೋದಂತೆ ಸತ್ಯತೀರ್ಥರೆಂಬ ಯತಿಗಳು ಭಾಷ್ಯವನ್ನು ತಾಡವಾಲೆಯಲ್ಲಿ ಲಿಪಿ ಬದ್ಧಗೊಳಿಸಿದರು.

ಇಷ್ಟರಲ್ಲೇ ಆಚಾರ್ಯರ ಪ್ರಭಾವ ದೇಶಾದ್ಯಂತ ವ್ಯಾಪಿಸಿತ್ತು. ಈ ತನಕ ಕಂಡು ಕೇಳಿ ಅರಿಯದ ಈ ಪ್ರತಿಭೆಗೆ ದೇಶದ ವಿದ್ವಾಂಸರೆಲ್ಲ ನಿಬ್ಬೆರಗಾದರು. ಶಿಷ್ಯರ ತಂಡ ಬೆಳೆಯುತ್ತಾ ನಡೆಯಿತು. ಕೆಲವರು ವಿರಕ್ತರು ಅವರಿಂದ ದೀಕ್ಷೆ ಪಡೆದು ಸನ್ಯಾಸಿಗಳೂ ಆದರು.

ಒಮ್ಮೆ ಆಚಾರ್ಯರು ಬದರಿಯಿಂದ ಮರಳುವ ದಾರಿಯಲ್ಲಿ, ಗೋದಾವರೀ ನದೀ ತೀರದಲ್ಲಿ ಒಂದು ಕ್ಷೇತ್ರದಲ್ಲಿ ತಂಗಿದ್ದರು. ಪ್ರಕಾಂಡ ಪಂಡಿತರಾದ ಶೋಭನ ಭಟ್ಟ ಎಂಬುವರು ಅಲ್ಲಿ ಆಚಾರ್ಯರನ್ನು ಭೇಟಿಯಾದರು. ಭಟ್ಟರು ಆ ಪರಿಸರದಲ್ಲೆಲ್ಲ ಸಾಟಿಯಿಲ್ಲದ ಪಂಡಿತ ಎಂದು ಹೆಸರಾದವರು. ಆ ಭೇಟಿ ಅವರ ಬದುಕಿನ ಗತಿಯನ್ನೇ ಬದಲಿಸಿತು. ಆಚಾರ್ಯರ ಅಸಾಧಾರಣ ವ್ಯಕ್ತಿತ್ವವನ್ನು ಕಂಡು ಅದ್ಭುತ ಪ್ರವಚನವನ್ನು ಕೇಳಿ ಪ್ರಭಾವಿತರಾದ ಅವರು ಆಚಾರ್ಯರ ಶಿಷ್ಯರಾಗಿ ಅವರ ಜತೆ ನಡೆದುಬಿಟ್ಟರು.

ದಿಗ್ವಿಜಯಿಯಾಗಿ, ನಾನಾ ದೇಶದ ಶಿಷ್ಯ ಸಂಪತ್ತಿನೊಡನೆ ಮರಳಿಬಂದ ಆಚಾರ್ಯ ಮಧ್ವರನ್ನು ಕಂಡು ಅಚ್ಯುತಪ್ರಜ್ಞರಿಗೆ ಆನಂದವೇ ಆನಂದ. ಆಚಾರ್ಯರ ತತ್ತ್ವವಾದದ ಬಗ್ಗೆ ಸಂಶಯದಿಂದಲೇ ಕಾಣುತ್ತಿದ್ದ ಅವರೂ ಈಗ ಪೂರ್ಣ ಮನಸ್ಸಿನಿಂದ ಆಚಾರ್ಯರ ಸಿದ್ಧಾಂತದ ಅನುಯಾಯಿಯಾದರು.

### ಕೃಷ್ಣ ಪ್ರತಿಷ್ಠೆ - ಮರಳಿ ಬದರಿಗೆ

ಮತ್ತೆ ಕೆಲವು ಕಾಲ ಉಡುಪಿಯ ಪರಿಸರದಲ್ಲೇ ಇದ್ದ ಆಚಾರ್ಯರು ಹತ್ತು ಉಪನಿಷತ್ತುಗಳಿಗೂ ಭಾಷ್ಯ ರಚಿಸಿದರು. ಋಗ್ವೇದದ ೪೦ ಸೂಕ್ತಗಳಿಗೆ ಭಾಷ್ಯ ರಚಿಸಿ ವೇದದ ಅಧ್ಯಾತ್ಮ ಮುಖವನ್ನು ತೆರೆದು ತೋರಿಸಿದರು. ಪುರಾಣಗಳ ಮರ್ಮವನ್ನು ತಿಳಿಸುವ 'ಭಾಗವತ ತಾತ್ಪರ್ಯ'ವನ್ನು ರಚಿಸಿದರು. ಹತ್ತು ಹಲವು ಸಂದರ್ಭಗಳಲ್ಲಿ ಆಯಾ ಸಂದರ್ಭಕ್ಕೆ ಉಚಿತವಾಗಿ ಅನೇಕ ಸಣ್ಣ ಪುಟ್ಟ ಗ್ರಂಥಗಳನ್ನು ರಚಿಸಿದರು. ಶಿಷ್ಯರ ಜತೆ ಪ್ರಯಾಣಕಾಲದಲ್ಲಿ ಹಾಡಲು ಅನುಕೂಲವಾಗುವಂತೆ ಅನೇಕ ಹಾಡುಗಬ್ಬಗಳನ್ನು ರಚಿಸಿದರು.

ಇದೇ ಅವಧಿಯಲ್ಲಿ, ಉಡುಪಿಯ ತೀರದ ಪಶ್ಚಿಮ ಸಮುದ್ರದಲ್ಲಿ ದೊರಕಿದ ಶ್ರೀಕೃಷ್ಣನ ಪ್ರತಿಮೆಯನ್ನು ಆಚಾರ್ಯರು ಉಡುಪಿಯ ತಮ್ಮ ಮಠದಲ್ಲಿ ಪ್ರತಿಷ್ಠಾಪಿಸಿದರು. ಅನಂತರ ಕೆಲವು ಶಿಷ್ಯರನ್ನು ಶ್ರೀಕೃಷ್ಣನ ಪೂಜೆಗಾಗಿ ಇಲ್ಲೇ ಬಿಟ್ಟು ಎರಡನೆಯ ಬಾರಿ ಬದರಿಗೆ ತೆರಳಿದರು.

ಒಮ್ಮೆ ದಾರಿಯಲ್ಲಿ ಗಂಗಾನದಿ ದಾಟುವ ಪ್ರಸಂಗ. ನದಿಯ ಆಚೆಯ ದಂಡೆ ಮುಸ್ಲಿಂ ಆಡಳಿತಕ್ಕೆ ಸೇರಿತ್ತು. ಆ ಕಡೆಯಿಂದ ಮುಸ್ಲಿಂ ಸೈನಿಕರು ತಡೆದರೂ ನಿರ್ಭಯವಾಗಿ ನದಿ ದಾಟಿದ ಆಚಾರ್ಯರು ಆಚೆಯ ದಡ ಸೇರಿದರು. ಸನ್ಯಾಸಿಯೊಬ್ಬನ ಸಾಹಸಕ್ಕೆ ಅಚ್ಚರಿಗೊಂಡ ಮುಸ್ಲಿಂ ದೊರೆಯ ಬಳಿ ನಡೆದ ಆಚಾರ್ಯರು ನುಡಿದರು. 'ಜಗತ್ತನ್ನು ಬೆಳಗುವ ಆ ತಂದೆಯನ್ನು ನಾನು ಪೂಜಿಸುತ್ತೇನೆ. ನೀನೂ ಪೂಜಿಸುವೆ. ನಾವೆಲ್ಲ ಒಬ್ಬನೇ ದೇವರ ಮಕ್ಕಳಲ್ಲವೆ? ಮತ್ತೆ ನಿನ್ನ ಸೈನಿಕರಿಗಾಗಲಿ ನಾನೇಕೆ ಹೆದರಬೇಕು?'

ಒಬ್ಬ ಹಿಂದೂ ಸನ್ಯಾಸಿಯ ಬಾಯಿಂದ ಮೊದಲ ಬಾರಿ ಇಂಥ ಮಾತನ್ನು ಕೇಳಿದ ಮುಸ್ಲಿಂ ದೊರೆ ಬೆರಗಾದ. ಈ ಅಪೂರ್ವ ಸನ್ಯಾಸಿಯ ಬಗ್ಗೆ ಗೌರವ ಮೂಡಿತು. ಆತ ಆಚಾರ್ಯರಿಗೆ ಬೇಕಷ್ಟು ಜಹಗೀರು ದತ್ತಿ ಕೊಡುವುದಾಗಿ ಹೇಳಿ ತನ್ನ ರಾಜ್ಯದಲ್ಲೇ ಇರುವಂತೆ ಕೇಳಿಕೊಂಡ. ಆದರೆ ನಿಸ್ಪೃಹರಾದ ಆಚಾರ್ಯರು ಆ ಕೊಡುಗೆಯನ್ನು ನಿರಾಕರಿಸಿ ದಂಡಪಾಣಿಗಳಾಗಿ ಬದರಿಯತ್ತ ನಡೆದೇ ಬಿಟ್ಟರು.

ಹಿಮಾಲಯದ ದುರ್ಗಮ ದಾರಿಯಲ್ಲಿ ಕಳ್ಳರ ಪಡೆ ಅಡ್ಡಗಟ್ಟಿದಾಗ ತನ್ನ ಶಿಷ್ಯ ಉಪೇಂದ್ರತೀರ್ಥರನ್ನು ಅವರ ಜೊತೆ ಹೋರಾಡಿಸಿ ಕಳ್ಳರ ಸದ್ದಡಗಿಸಿದರು. "ಬುದ್ಧಿ ಬಲದಂತೆಯೇ ದೇಹ ಬಲವನ್ನು ಬೆಳೆಸಿಕೊಳ್ಳಬೇಕು. ದುರ್ಬಲ

ವಾದ ದೇಹದಲ್ಲಿ ಬಲಿಷ್ಠವಾದ ಬೌದ್ಧಿಕತೆ ಇರುವುದು ಸಾಧ್ಯವಿಲ್ಲ" ಎನ್ನುತ್ತಿದ್ದ ಆಚಾರ್ಯರು ತಮ್ಮ ಶಿಷ್ಯರನ್ನು ವೇದಾಂತ ಸಾಧನೆಯಲ್ಲಿ ಹೇಗೊ ಹಾಗೆ ಅಂಗಸಾಧನೆಯಲ್ಲೂ ಚತುರರನ್ನಾಗಿ ಮಾಡಿದ್ದರು.

ಸ್ವತಃ ವಜ್ರಾಂಗದ ದೃಢಕಾಯವನ್ನು ಪಡೆದಿದ್ದ ಆಚಾರ್ಯರ ದೇಹ ಬಲವೆ ಆ ಕಾಲದ ಜನಕ್ಕೆ ಒಂದು ಪವಾಡವಾಯಿತು. ಕಳಸದ ಸಮೀಪ ಭದ್ರಾ ನದಿಯಲ್ಲಿ ಆಚಾರ್ಯರು ಎತ್ತಿಟ್ಟ ಹೆಬ್ಬಂಡೆಗಲ್ಲು ಆಚಾರ್ಯರ ಭೀಮ ಬಲಕ್ಕೆ ಶಿಲಾ ಸಾಕ್ಷಿಯಾಗಿ ಉಳಿದಿದೆ. ಆ ಬಂಡೆಯ ಮೇಲಿನ ಶಾಸನ ವಾಕ್ಯ ಈ ಮಾತನ್ನು ದೃಢಪಡಿಸುತ್ತದೆ.

ಮತ್ತೆ ಬದರಿಯಲ್ಲಿ ನಾರಾಯಣನ ದರ್ಶನ, ವ್ಯಾಸ ದರ್ಶನ. ಮರಳಿ ಬಂದು ಮಹಾಭಾರತ ತಾತ್ಪರ್ಯ ನಿರ್ಣಯದ ರಚನೆ. ದಾರಿಯಲ್ಲಿ ಕಾಶಿಗೆ ಭೇಟಿ. ಅಲ್ಲಿ ಅಮರೇಂದ್ರಪುರಿ ಎಂಬ ಹಿರಿಯ ಅದ್ವೈತಿ ಯತಿಯೊಡನೆ ಶಾಸ್ತ್ರ ಚರ್ಚೆ. ಆಚಾರ್ಯರ ಪ್ರತಿಭೆಯ ಮುಂದೆ ಆತ ತೆಪ್ಪಗೆ ತೆರಳಿದ. ಅಲ್ಲಿಂದ ಕುರುಕ್ಷೇತ್ರ. ಇಲ್ಲಿ ಒಂದು ವಿಚಿತ್ರ ನಡೆಯಿತು. ಆಚಾರ್ಯರು ಕುರುಕ್ಷೇತ್ರದ ಒಂದೆಡೆ ಮಣ್ಣು ಅಗೆಯಿಸಿ ಹೂತು ಹೋಗಿದ್ದ ಭೀಮಸೇನನ ಗದೆಯನ್ನು ತನ್ನ ಶಿಷ್ಯರಿಗೆಲ್ಲ ತೆಗೆದು ತೋರಿಸಿ ಮತ್ತೆ ಹಾಗೆಯೇ ಭೂಗತ ಮಾಡಿಸಿದರು.

ಮುಂದೆ ಉಡುಪಿಗೆ ಮರಳುವ ದಾರಿಯಾಗಿ ಗೋವೆಗೆ ಬಂದರು. ಪಶುಪೆಯಲ್ಲಿ ಸಂಗೀತ ಹಾಡಿ ಸಭೆಯ ಮೈಮರೆಸಿದರು. ದೇಹ ಶಕ್ತಿ ಮತ್ತು ಬುದ್ಧಿ ಶಕ್ತಿ ಪೂರ್ತಿ ಪ್ರಮಾಣದಲ್ಲಿ ವಿಕಾಸಗೊಂಡ ಆಚಾರ್ಯರ ಕಂಠಶ್ರೀಯೂ ಅಪೂರ್ವವಾಗಿತ್ತು. ಅವರ ಸಂಗೀತ ಪಾಂಡಿತ್ಯದ ಬಗೆಗೆ ಅವರ ಕಂಠ ಮಾಧುರ್ಯದ ಬಗೆಗೆ ಅವರ ಸಮಕಾಲೀನ ಗ್ರಂಥಕಾರರು ಮೈಯುಬ್ಬಿ ಹೊಗಳಿದ್ದುಂಟು.

### ಎಲ್ಲವೂ ಅಪೂರ್ವ

ಹೀಗೆ ಆಚಾರ್ಯ ಮಧ್ವರು ಎರಡು ಬಾರಿ ಭಾರತದಾದ್ಯಂತ ಸಂಚರಿಸಿದರು. ದೇಶದ ವಿದ್ವಾಂಸರ ಮುಂದೆ ತನ್ನ ತತ್ವವಾದವನ್ನು ಮಂಡಿಸಿದರು. ವಿದ್ವದ್‌ವೃಂದವೆಲ್ಲ ಈ ಪ್ರತಿಭೆಗೆ ತಲೆದೂಗಿ ಮಣಿಯಿತು.

ಆ ತನಕ ಅಜ್ಞಾತವಾಗಿದ್ದ ಅನೇಕ ವೇದ ಭಾಗಗಳನ್ನು ಆಚಾರ್ಯರು ಉದ್ಧರಿಸಿದರು. ಶ್ರುತಿ ಪುರಾಣಗಳಿಗೆ ಸಮನ್ವಯದ ದಾರಿಯನ್ನೂ ತೋರಿದರು. ವೈದಿಕ ವಾಙ್ಮಯದಲ್ಲಿ ಹುದುಗಿದ್ದ ಅಧ್ಯಾತ್ಮದ ಅರ್ಥವನ್ನು ಹೊರಗೆಡವಿದರು. ಆ ತನಕ ಬೆಳೆದು ಬಂದಿದ್ದ ಬ್ರಹ್ಮ ಸೂತ್ರದ ೨೧ ಭಾಷ್ಯಗಳನ್ನು ಪ್ರಶ್ನಿಸಿ ಜನರು ಆ ಬಗೆಗೆ ಮರುಪರಿಶೀಲನೆ ಮಾಡುವಂತೆ ಮಾಡಿದರು.

ಹೀಗೆ ಆಚಾರ್ಯ ಮಧ್ವರದ್ದು ಭಾರತೀಯ ಇತಿಹಾಸದಲ್ಲಿ ಅಪೂರ್ವವಾದ ಬಹುಮುಖ ಪ್ರತಿಭೆಯ ವ್ಯಕ್ತಿತ್ವ. ಅವರು ತತ್ವ ಶಾಸ್ತ್ರದಲ್ಲಿ ಅದ್ವಿತೀಯ ವಿದ್ವಾಂಸರಾಗಿದ್ದರು. ವೇದ-ವೈದಿಕ ವಾಙ್ಮಯದ ಅಪೂರ್ವ ಸಂಶೋಧಕರಾಗಿದ್ದರು. ಜ್ಯೋತಿಷ, ಶಿಕ್ಷಾ-ಕಲ್ಪ ಮುಂತಾದ ವೇದಾಂಗಗಳಲ್ಲಿ ಪ್ರಗಲ್ಭ ಪಂಡಿತರಾಗಿದ್ದರು. ಶಿಲ್ಪ ಶಾಸ್ತ್ರದಲ್ಲಿ ಪರಿಣತರಾಗಿದ್ದರು. ಕರ್ನಾಟಕ ಸಂಗೀತಕ್ಕೆ ಮೂಲರೂಪವನ್ನು ಕೊಟ್ಟ ಆಚಾರ್ಯಪುರುಷರಾಗಿದ್ದರು. ವಾಗ್ಗೇಯಕಾರರಾಗಿದ್ದರು. ಮಹಾವಾಗ್ಮಿಗಳಾಗಿದ್ದರು. ಜತೆಗೆ ಸರ್ವಾಂಗ ಸುಂದರವಾದ, ಪ್ರಮಾಣ ಬದ್ಧ ಮೈಕಟ್ಟನ್ನು ಪಡೆದ ದೃಢಕಾಯರೂ ಆಗಿದ್ದರು. ಸ್ವತಃ ಇದಾವುದನ್ನು ಅಂಟಿಸಿಕೊಳ್ಳದ ಬದುಕಿನ ನಿರ್ಲಿಪ್ತ ಧೀರ ಸನ್ಯಾಸಿಗಳಾಗಿದ್ದರು.

ಆಚಾರ್ಯರ ಕಾಲದಲ್ಲಿ ಕಿಂಚಿತ್ತಾಗಿ ಕ್ರೈಸ್ತ ಧರ್ಮವೂ ಇಲ್ಲಿ ಪಸರಿಸಿತ್ತು. ಇಸ್ಲಾಂ ಧರ್ಮವಂತು ಉತ್ತರ ಭಾರತದಲ್ಲಿ ಸಾಕಷ್ಟು ವ್ಯಾಪಕವಾಗಿ ಬೆಳೆದಿತ್ತು. ಭಾರತದ ಹಲವು ಧರ್ಮಗಳ ಜೊತೆಗೆ ಕರ್ನಾಟಕದಲ್ಲಿ ಜೈನ ಧರ್ಮ ಮತ್ತು ವೀರಶೈವ ಧರ್ಮ ಗಾಢವಾಗಿ ಬೇರೂರಿತ್ತು. ಈ ಎಲ್ಲ ಧರ್ಮಗಳ ಹಿನ್ನೆಲೆಯಲ್ಲಿ ವೈದಿಕ ಧರ್ಮದ ಪುನರುಜ್ಜೀವನ ಆಚಾರ್ಯರ ಪ್ರಮುಖ ಕಾರ್ಯವಾಯಿತು. ಈ ಪುನರುಜ್ಜೀವನ ಕಾರ್ಯದಲ್ಲಿ ಆಚಾರ್ಯರು ಹಾಕಿಕೊಟ್ಟ ಪರಂಪರೆಯೂ ಅಪೂರ್ವವಾದದ್ದು. ಶಾಸ್ತ್ರಗಳ ಸಾರಮಥನಕ್ಕಾಗಿ ವಿದ್ವಾಂಸರಿಗಾಗಿ ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ಬರೆದರು. ಆದರೆ ಆ ಉದ್ಗ್ರಂಥಗಳು ಜನಸಾಮಾನ್ಯರನ್ನು ಮುಟ್ಟುವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ಸ್ವತಃ ಹಿರಿಯ ಸಂಗೀತಗಾರರೂ ವಾಗ್ಗೇಯಕಾರರೂ ಆದ ಆಚಾರ್ಯರು ತಿಳಿಯಾದ ಸಂಸ್ಕೃತದಲ್ಲಿ ಹಾಡುಗಬ್ಬಗಳನ್ನು ರಚಿಸಿದರು. ತನ್ನ ಶಿಷ್ಯರಿಂದ ಕನ್ನಡದಲ್ಲಿ ಕೀರ್ತನೆಗಳನ್ನು ಬರೆಯಿಸಿ ಭಾಗವತರ ಮೂಲಕ ಅವನ್ನು ಬಳಕೆಗೆ ತಂದರು. ನರಹರಿತೀರ್ಥರು ಪ್ರಾರಂಭಿಸಿದ ಈ ಕೀರ್ತನ ಸಾಹಿತ್ಯ ಮುಂದೆ ಶ್ರೀ ಪಾದರಾಜರು, ಶ್ರೀ ವ್ಯಾಸತೀರ್ಥರು ಮತ್ತು ಶ್ರೀ ವಾದಿರಾಜರಿಂದ ಪರಿಪುಷ್ಟವಾಗಿ ಬೆಳೆಯಿತು. ಸ್ವತಃ ವೈಣಿಕರಾಗಿದ್ದ ಶ್ರೀ ರಾಘವೇಂದ್ರ ಸ್ವಾಮಿಗಳ ತನಕ ಈ ವಾಗ್ಗೇಯಕಾರ ಯತಿಗಳ ಪರಂಪರೆ ಮುಂದುವರಿಯಿತು. ಹೀಗೆ ವ್ಯಾಸ ಪಂಥ ಕನ್ನಡದಲ್ಲಿ ದಾಸ ಪಂಥವಾಗಿ ಬೆಳೆದು ಬಂತು. ಈ ಪರಂಪರೆಯ ಶ್ರೀ ಪುರಂದರದಾಸ, ಕನಕದಾಸ, ವಿಜಯದಾಸ, ಗೋಪಾಲದಾಸ, ಜಗನ್ನಾಥದಾಸರಂಥ ಅನುಭಾವಿಗಳನ್ನು ಕನ್ನಡ ನಾಡಿಗೆ ನೀಡಿತು. ಹೆಳವನಕಟ್ಟೆ ಗಿರಿಯಮ್ಮನಂಥ ಮಹಿಳೆಯರೂ ಈ ಪರಂಪರೆಯನ್ನು ಬೆಳಗಿದರು. ವೇದದ ಸಂದೇಶವನ್ನು ಕನ್ನಡದಲ್ಲಿ ಬಿತ್ತರಿಸುವ ಈ ಪರಂಪರೆಯ ಮೂಲ ಸಂಘಟಕರು ಆಚಾರ್ಯ ಮಧ್ವರು, ಮೂಲ ಸ್ಫೂರ್ತಿ ಆಚಾರ್ಯ ಮಧ್ವರು ಎನ್ನುವುದನ್ನು ಮರೆಯಲಾಗದು. ಆಚಾರ್ಯರ ಈ ದೂರದೃಷ್ಟಿಯಿಂದಾಗಿಯೇ ದಾಸ ಸಾಹಿತ್ಯದ ಗಂಗೆ ಕನ್ನಡದ ನೆಲದಲ್ಲಿ ಹರಿದು ಕನ್ನಡ ಸಾಹಿತ್ಯ ಇನ್ನಷ್ಟು ಶ್ರೀಮಂತವಾಯಿತು.

ಆಚಾರ್ಯರ ಕೊಡುಗೆ ಅಲ್ಲಿಗೇ ಮುಗಿಯಲಿಲ್ಲ. ನಿರಕ್ಷರರಾದ ಹಳ್ಳಿಯ ಜನರನ್ನು ಈ ಸಂದೇಶ ಮುಟ್ಟಬೇಕು ಎನ್ನುವುದಕ್ಕಾಗಿ ಅವರು ತನ್ನ ಶಿಷ್ಯ ನರಹರಿತೀರ್ಥರ ಮೂಲಕ ಭಾಗವತರ ಆಟ, ದಶಾವತಾರದ ಆಟ ಎಂದು ಹೆಸರಾದ ಬಯಲಾಟದ ಕಲಾಮಾಧ್ಯಮವನ್ನು ಕನ್ನಡಜಿಲ್ಲೆಗಳಿಗೆ ತಂದರು. ಈ ಕಲೆ ಇಂದು ಕೂಡ ದಕ್ಷಿಣೋತ್ತರ ಕನ್ನಡ ಜಿಲ್ಲೆಗಳ ಪ್ರಭಾವಿ ಮನ್ನಣೆಗೆ ಪಾತ್ರವಾಗಿದೆ. ಇದೇ ಮುಂದೆ ಆಂಧ್ರದ ಕಲಾ ಮಾಧ್ಯಮವಾಗಿ ಬೆಳೆದು ದೇಶ ವಿದೇಶಗಳಲ್ಲಿ ಕೂಚುಪುಡಿಯ ಬೆಳವಣಿಗೆಗೆ ಸ್ಫೂರ್ತಿ ನೀಡಿತು.

ಆಚಾರ್ಯರ ಈ ಬಹುಮುಖ ಪ್ರತಿಭೆ ನಿಜಕ್ಕೂ ವಿಸ್ಮಯ ಬರಿಸುವಂಥದ್ದು. ಇದಕ್ಕಿಂತಲೂ ವಿಸ್ಮಯದ ಸಂಗತಿಯೆಂದರೆ ಈ ಕನ್ನಡದ ಸುಪುತ್ರನಿಂದ ಇಷ್ಟು ವ್ಯಾಪಕವಾದ ಕೊಡುಗೆ ಸಂದಿದೆ ಎನ್ನುವುದನ್ನೂ ಅರಿಯದೆ ಕನ್ನಡದ ಜನ ಎಲ್ಲವನ್ನೂ ಮರೆತು ಹಾಯಾಗಿ ಕುಳಿತಿರುವುದು.

### ಕೊನೆಯ ದಿನಗಳು

ಎರಡನೆಯ ಬಾರಿ ಬದರಿಯಿಂದ ಮರಳಿದ ಆಚಾರ್ಯರು ಉಡುಪಿಯ ಪರಿಸರದಲ್ಲೇ ಇಂಥ ಸಾಮಾಜಿಕ ಸುಧಾರಣೆಗಳಿಗೆ

ಮುಂದಾದರು. ಅರುವತ್ತರ ಅಂಚು ದಾಟಿದ ಈ ಪಕ್ವಾವಸ್ಥೆಯಲ್ಲಿ ಅವರು ತನ್ನ ಹುಟ್ಟೂರಲ್ಲೇ ಕೆಲವು ವಿರೋಧಗಳನ್ನು ಎದುರಿಸಬೇಕಾಯಿತು. ಅವರ ಹೊಸ ಸಂದೇಶವನ್ನು ವಿರೋಧಿಸುವ ಸಂಪ್ರದಾಯವಾದಿಗಳ ಒಂದು ವರ್ಗ ಇನ್ನೂ ಜಾಗೃತವಾಗಿಯೇ ಇತ್ತು.

ಈ ಅವಧಿಯಲ್ಲೇ ಪುಂಡರೀಕಪುರಿ ಎಂಬ ಅದ್ವೈತದ ಯತಿಗಳೊಬ್ಬರು ಉಡುಪಿಯಲ್ಲಿ ಆಚಾರ್ಯರ ಜತೆ ವಾದಕ್ಕೆ ಕಾಲು ಕೆದಕಿ ಕೈಸೋತು ಮರಳಿದರು. ಇದೇ ಸಮಯದಲ್ಲಿ ಕಾಸರಗೋಡಿನಲ್ಲಿ ಪಜತ್ತಾಯ ಶಂಕರ ಪಂಡಿತರ ವಶವಿದ್ದ ಆಚಾರ್ಯರ ಅಪೂರ್ವ ಗ್ರಂಥ ಸಂಗ್ರಹವನ್ನು ಪದ್ಮತೀರ್ಥ ಎಂಬ ಯತಿಗಳು ಕಳವು ಮಾಡಿಸಿದರು. ಆಚಾರ್ಯರು ಕಾಸರಗೋಡಿಗೆ ತೆರಳಿ ಪದ್ಮ ತೀರ್ಥರನ್ನು ವಾದದಲ್ಲಿ ಸೋಲಿಸಿದರು. ಆಗ ನಡೆದ ವಾದದ ತಿರುಳನ್ನ ಶಿಷ್ಯರು ಬರೆದಿದ್ದರು. ಅದೇ ವಾದ ತತ್ತ್ವೋದ್ಯೋತ ಎನ್ನುವ ಗ್ರಂಥವಾಯಿತು. ಮುಂದೆ ತುಳುನಾಡಿನ ರಾಜ ಕುಂಬಳೆಯ ಜಯಸಿಂಹ ಆಚಾರ್ಯರನ್ನು ತನ್ನ ಆಸ್ಥಾನಕ್ಕೆ ಕರೆಸಿ, ಕಳವಾದ ಪುಸ್ತಕಗಳನ್ನು ಮರಳಿಸಿ ಸನ್ಮಾನಿಸಿದ. ರಾಜ ಗುರುವಾಗಿದ್ದ ಪಜತ್ತಾಯ ತ್ರಿವಿಕಮ ಪಂಡಿತಾಚಾರ್ಯರು ಈ ಸಂದರ್ಭದಲ್ಲಿ ಆಚಾರ್ಯರ ಜೊತೆ ೧೫ ದಿನಗಳ ಕಾಲ ವಾದ ನಡೆಸಿ ಆಚಾರ್ಯರ ಗರಿಮೆಗೆ ತಲೆಬಾಗಿ ಶಿಷ್ಯರಾದರು. ಆಚಾರ್ಯರ ಬ್ರಹ್ಮಸೂತ್ರ ಭಾಷ್ಯಕ್ಕೆ "ತತ್ತ್ವ ದೀಪಿಕಾ" ಎಂಬ ಸಾಟಿಯಿಲ್ಲದ ಟೀಕೆಯನ್ನು ಬರೆದು ಗುರುಕಾಣಿಕೆಯನ್ನು ಸಲ್ಲಿಸಿದರು.

ಆಚಾರ್ಯರಿಗೂ ತ್ರಿವಿಕ್ರಮ ಪಂಡಿತರೆಂದರೆ ಅಪಾರ ಪ್ರೀತಿ. ಈ ಪ್ರಿಯ ಶಿಷ್ಯನ ಪ್ರಾರ್ಥನೆಯ ಫಲವಾಗಿಯೇ ಆಚಾರ್ಯರು ಬ್ರಹ್ಮಸೂತ್ರಗಳ ಮೇಲೆ "ಅನುವ್ಯಾಖ್ಯಾನ" ಎಂಬ ಶ್ಲೋಕಬದ್ಧವಾದ ಬೃಹತ್ ಗ್ರಂಥವನ್ನು ರಚಿಸಿದರು. ಒಬ್ಬೊಬ್ಬನಿಂದ ಒಂದೊಂದು ಭಾಗವನ್ನು ಬರೆಸುತ್ತ ನಾಲ್ಕು ಮಂದಿ ಶಿಷ್ಯರಿಂದ ಆಚಾರ್ಯರು ಈ ಗ್ರಂಥವನ್ನು ಏಕಕಾಲದಲ್ಲಿ ಬರೆಸಿದರು. ಜತೆಗೆಯೇ "ನ್ಯಾಯವಿವರಣ"ದ ರಚನೆಯೂ ಆಯಿತು.

ಕಾಸರಗೋಡಿನಲ್ಲಿ ಚಾತುರ್ಮಾಸ್ಯವನ್ನು ಮುಗಿಸಿ ಮರಳಿದ ಆಚಾರ್ಯ ಮಧ್ವರು ಪಾಜಕಕ್ಕೆ ಬಂದು ವಿರಕ್ತಿಯಿಂದ ಸನ್ಯಾಸವನ್ನು ಬಯಸಿ ಕಾದು ನಿಂತ ತನ್ನ ಸೋದರನಿಗೆ ಸನ್ಯಾಸ ದೀಕ್ಷೆಯಿತ್ತರು. ಇವರೇ ಈಗಣ ಸೋದೆ ಮಠ ಮತ್ತು ಸುಬ್ರಹ್ಮಣ್ಯ ಮಠದ ಮೂಲ ಯತಿಗಳಾದ ಶ್ರೀ ವಿಷ್ಣುತೀರ್ಥರು. ಇದೇ ಸುಮಾರಿಗೆ ಗೋದಾವರೀ ತೀರದ ಶೋಭನ ಭಟ್ಟರೂ ಆಚಾರ್ಯರಿಂದ ಸನ್ಯಾಸ ದೀಕ್ಷೆ ಪಡೆದರು. ಇವರೇ ಮುಂದೆ ದೇಶಸ್ಥ ಮಠಗಳ ಮೂಲ ಯತಿಗಳಾಗಿ ಪದ್ಮನಾಭ ತೀರ್ಥರು ಎಂದು ಖ್ಯಾತರಾದರು.

ಈ ಇಬ್ಬರ ಮೊದಲೂ ಅನಂತರವೂ ಅನೇಕ ಮಂದಿ ಬೇರೆಬೇರೆ ಪ್ರದೇಶದ ಶಿಷ್ಯರು ಆಚಾರ್ಯರಿಂದ ಸನ್ಯಾಸ ದೀಕ್ಷೆ ಪಡೆದದ್ದುಂಟು. ಅವರ ಪೈಕಿ ಉಡುಪಿಯಲ್ಲಿ ನೆಲೆನಿಂತ ಎಂಟು ಮಂದಿ ಶಿಷ್ಯರ ಹೆಸರು ಆಶ್ರಮದ ಕ್ರಮದಂತೆ ಹೀಗಿದೆ.

೧) ಹೃಷೀಕೇಶತೀರ್ಥ (ಪಲಿಮಾರು ಮಠ)
೨) ನರಸಿಂಹತೀರ್ಥ (ಅದಮಾರು ಮಠ)
೩) ಜನಾರ್ದನತೀರ್ಥ (ಕೃಷ್ಣಾಪುರ ಮಠ)
೪) ಉಪೇಂದ್ರತೀರ್ಥ (ಪುತ್ತಿಗೆ ಮಠ)
೫) ವಾಮನತೀರ್ಥ (ಶೀರೂರು ಮಠ)
೬) ವಿಷ್ಣುತೀರ್ಥ (ಸೋದೆ ಮಠ)
೭) ಶ್ರೀರಾಮತೀರ್ಥ (ಕಾಣಿಯೂರು ಮಠ)
೮) ಅಧೋಕ್ಷಜತೀರ್ಥ (ಪೇಜಾವರ ಮಠ)

ಆಚಾರ್ಯರ ಪಕ್ಷಿನ್ಯಾಸಿ ಶಿಷ್ಯರಲ್ಲಿ ಇನ್ನಿಬ್ಬರು ಪ್ರಸಿದ್ಧರಾದರು.

೯) ಪದ್ಮನಾಭತೀರ್ಥ
೧೦) ನರಹರಿ ತೀರ್ಥ (ದೇಶಸ್ಥ ಮಠಗಳು)

ಪದ್ಮನಾಭತೀರ್ಥರಿಗೆ ಯಾವಾಗ ಆಶ್ರಮವಾಯಿತು ಎನ್ನುವುದು ಖಚಿತವಾಗಿ ತಿಳಿದು ಬಂದಿಲ್ಲ. ಅವರಿಗಿಂತ ಮೊದಲು ಸನ್ಯಾಸ ಸ್ವೀಕರಿಸಿದ್ದವರೂ ಹಲವರಿದ್ದರು. ಈ ಎಂಟು ಮಂದಿಯ ನಡುವೆ ಎಲ್ಲೋ ಒಂದೆಡೆ ಅವರಿಗೂ ಆಶ್ರಮವಾಗಿರಬೇಕು.

ಆಚಾರ್ಯರಿಗೆ ಈಗ ಎಪ್ಪತ್ತರ ಹರಯ. ಈ ಕಾಲದಲ್ಲಿ ಅವರು ಜಿಲ್ಲೆಯಾದ್ಯಂತ ಸಂಚರಿಸಿ ಜನಜಾಗೃತಿಯಲ್ಲಿ ತೊಡಗಿದರು. ಇಡ್ಯ ಎಂಬ ಹಳ್ಳಿಯಲ್ಲಿದ್ದ ಸಾತ್ವಿಕ ವಿಪ್ರ ಎಡತ್ತಾಯರಿಗಾಗಿ 'ಕೃಷ್ಣಾಮೃತ ಮಹಾರ್ಣವ' ಎಂಬ ಗ್ರಂಥವನ್ನು ರಚಿಸಿ ಕೊಟ್ಟರು. ಉಜಿರೆಗೆ ತೆರಳಿ ಅಲ್ಲಿ ಕರ್ಮಪಾರಮ್ಯವಾದಿಗಳಾದ ಬ್ರಾಹ್ಮಣರ ಕಣ್ಣು ತೆರೆಸುವುದಕ್ಕಾಗಿ ಕರ್ಮಕಾಂಡದ ಅಧ್ಯಾತ್ಮ ಮುಖವನ್ನು ವಿವರಿಸಿದರು. ಈ ಪ್ರವಚನವೆ ಖಂಡಾರ್ಥ ನಿರ್ಣಯ (ಕರ್ಮ ನಿರ್ಣಯ) ಎಂಬ ಗ್ರಂಥವಾಗಿ ಪ್ರಚಾರವಾಯಿತು. ಪೂಜೆ ಪುರಸ್ಕಾರಗಳು ನಿಂತು ಹಾಳುಬಿದ್ದಿದ್ದ ಪಾರಂತಿಯ ಪಂಚಲಿಂಗೇಶ್ವರ ದೇವಾಲಯಕ್ಕೆ ಭೇಟಿ ನೀಡಿ ಅಲ್ಲಿ ಮತ್ತೆ ಆಗಮೋಕ್ತವಾದ ಪೂಜೆ ನಡೆಯುವಂತೆ ವ್ಯವಸ್ಥೆಗೊಳಿಸಿದರು.

೭೯ ವರ್ಷಗಳ ಕಾಲದ ಆಚಾರ್ಯರ ಒಟ್ಟು ಜೀವಿತ ಕಾಲ ಹೀಗೆ ಚಟುವಟಿಕೆಗಳಿಂದ. ತುಂಬಿತ್ತು. ತನ್ನ ಜೀವಿತದ ಉದ್ದೇಶ ಈಡೇರಿತು ಎಂದಾಗ ಈ ತತ್ತ್ವವಾದದ ಪರಂಪರೆಯನ್ನು ಮುಂದುವರಿಸುವ ಹೊಣೆಯನ್ನು ತನ್ನ ಶಿಷ್ಯರ ಹೆಗಲ ಮೇಲೆ ಹೊರಿಸಿ ತಾನು ಏಕಾಕಿಯಾಗಿ ನಿರ್ಲಿಪ್ತ ನಿಶ್ಚಿಂತೆಯಿಂದ ಬದರಿಗೆ ತೆರಳಿದರು. ಅವರು ಹೀಗೆ ಬದರಿಗೆ ತೆರಳಿದ ದಿನ ಕಲಿವರ್ಷ ೪೪೧೮, ಪಿಂಗಲ ಸಂವತ್ಸರದ ಮಾಘ ಶುದ್ಧ ನವಮಿ (ಕ್ರಿ.ಶ. ೧೩೧೭) ಇಂದಿಗೂ ಈ ದಿನದಂದೆ ಮಧ್ವನವಮಿಯೆಂದು ಆಚಾರ್ಯರ ಪುಣ್ಯ ತಿಥಿಯನ್ನು ಆಚರಿಸುತ್ತಾರೆ.

**ಬೆಳೆದುಬಂದ ಪರಂಪರೆ**

ಆಚಾರ್ಯರ ಸನ್ಯಾಸಿ ಶಿಷ್ಯರು ಮತ್ತು ಗೃಹಸ್ಥ ಶಿಷ್ಯರು ಈ ಪರಂಪರೆಯನ್ನು ನಿಷ್ಠೆಯಿಂದ ಮುಂದುವರಿಸಿದರು. ತಮ್ಮ ತಪಸ್ಸಿನ ಪಾಂಡಿತ್ಯದ ನೀರೆರೆದು ಬೆಳೆಸಿದರು. ನೂರಾರು ಶಾಸ್ತ್ರ ಗ್ರಂಥಗಳು ರಚನೆಯಾದವು. ಈ ಪರಂಪರೆಯ ಗ್ರಂಥಕಾರರಲ್ಲಿ ಅತ್ಯಂತ ಮುಖ್ಯರಾದ ಕೆಲವರನ್ನು ಸುಮಾರಾಗಿ ಕಾಲಾನುಕ್ರಮದಂತೆ ಹೀಗೆ ಗುರುತಿಸ ಬಹುದು: ಶ್ರೀ ವಿಷ್ಣು ತೀರ್ಥ, ಪದ್ಮನಾಭತೀರ್ಥ, ನರಹರಿ ತೀರ್ಥ, ತ್ರಿವಿಕ್ರಮ ಪಂಡಿತಾಚಾರ್ಯ, ನಾರಾಯಣ ಪಂಡಿತಾಚಾರ್ಯ, ವಾಮನ ಪಂಡಿತಾಚಾರ್ಯ,(ತ್ರೈವಿಕ್ರಮಾರ್ಯದಾಸ), ಜಯತೀರ್ಥ (ಟೀಕಾಚಾರ್ಯ) ವಿಜಯಧ್ವಜ ತೀರ್ಥ, ವಿಷ್ಣುದಾಸಾಚಾರ್ಯ, ವ್ಯಾಸತೀರ್ಥ, ವಾದಿರಾಜ, ವಿಜಯೀಂದ್ರತೀರ್ಥ, ರಾಘವೇಂದ್ರ ಸ್ವಾಮಿ, ಯದುಪತಿ ಆಚಾರ್ಯ ಇತ್ಯಾದಿ.

ಆಚಾರ್ಯರು ಮಧ್ವಸಂಸ್ಥಾನಮ್ಮ ಕಟ್ಟಿದವರಲ್ಲ. ಅವರು ತನ್ನ ಸನ್ಯಾಸಿ ಶಿಷ್ಯರಿಗೆ ನೀಡಿದ ಆಸ್ತಿಯೆಂದರೆ ದೇವರ ಪೆಟ್ಟಿಗೆ, ದಂಡ, ಜೋಳಿಗೆ ಮಾತ್ರ. ಮುಂದೆ ಶಿಷ್ಯ ಸಂಪತ್ತು ಬೆಳೆದಂತೆ ಮಠಗಳು ರೂಪಗೊಂಡವು. ಈಗಿರುವ ಮಧ್ವ ಮಠಗಳ ಒಂದು ಸ್ಥೂಲವಾದ ಪರಿಚಯ ಇಲ್ಲಿದೆ.

ಶ್ರೀಕೃಷ್ಣನ ಆರಾಧನೆಯ ಹೊಣೆಹೊತ್ತು ಉಡುಪಿಯಲ್ಲಿ ರೂಪುಗೊಂಡ ಮಠಗಳು ಎಂಟು:

೧) ಪಲಿಮಾರು ಮಠ
೨) ಅದಮಾರು ಮಠ
೩) ಕೃಷ್ಣಾಪುರ ಮಠ
೪) ಪುತ್ತಿಗೆ ಮಠ
೫) ಶೀರೂರು ಮಠ
೬) ಸೋದೆ ಮಠ
೭) ಕಾಣಿಯೂರು ಮಠ
೮) ಪೇಜಾವರ ಮಠ

ಮಠಗಳಿಗೆ ಮೂಲತಃ ದತ್ತಿಯಾಗಿ ಬಂದ ಆಸ್ತಿಯಿರುವ ಹಳ್ಳಿಯ ಹೆಸರಿನಲ್ಲೇ ಮಠಗಳನ್ನು ಕರೆಯುವುದು ಇಲ್ಲಿಯ ರೂಢಿ. ಪಲಿಮಾರು ಗ್ರಾಮದಲ್ಲಿ ಆಸ್ತಿಯನ್ನು ಪಡೆದ ಮಠ ಪಲಿಮಾರು ಮಠ ಇತ್ಯಾದಿ. ಸೋದೆ ಮಠದ ಹಿಂದಿನ ಹೆಸರು ಕುಂಭಾಸಿ ಮಠ. ಈ ಗ್ರಾಮವೂ ದಕ್ಷಿಣ ಕನ್ನಡ ಜಿಲ್ಲೆಯಲ್ಲೇ ಇದೆ. ಮುಂದೆ ವಾದಿರಾಜರ ಕಾಲದಲ್ಲಿ ಉತ್ತರ ಕನ್ನಡದ ಸೋದೆಯಲ್ಲಿ ಮಠ ಸ್ಥಾಪನೆಯಾದ ಮೇಲೆ ಅದು ಸೋದೆ ಮಠ ಎಂದು ಪ್ರಸಿದ್ಧವಾಯಿತು.

ಅನುಕ್ರಮವಾಗಿ ಶ್ರೀಪದ್ಮನಾಭತೀರ್ಥ, ನರಹರಿತೀರ್ಥ, ಮಾಧವತೀರ್ಥ ಮತ್ತು ಅಕ್ಷೋಭ್ಯತೀರ್ಥರಿಂದ ಬೆಳೆದು ಬಂದ ಕರ್ನಾಟಕದ ಮಠಗಳು ಎಂಟು:

೯) ಉತ್ತರಾದಿ ಮಠ
೧೦) ಕುಂದಾಪುರ ವ್ಯಾಸರಾಯ ಮಠ
೧೧) ಸೋಸಲೆ ವ್ಯಾಸರಾಯರ ಮಠ
೧೨) ರಾಘವೇಂದ್ರ ಮಠ
೧೩) ಮುಳುಬಾಗಿಲು ಮಠ
೧೪) ಮಜ್ಜಿಗೆ ಹಳ್ಳಿ ಮಠ
೧೫) ಕೂಡ್ಲಿ ಮಠ
೧೬) ಬಾಳೆಗಾರು (ಬಾಣಾಗಾರ) ಮಠ

ಮೊದಲ ನಾಲ್ಕು ಮಠಗಳಿಗೆ ಪದ್ಮನಾಭತೀರ್ಥರಿಂದ ಅಕ್ಷೋಭ್ಯ ತೀರ್ಥರ ತನಕದ ನಾಲ್ವರು ಮೂಲಪುರುಷರು. ವ್ಯಾಸರಾಯ ಮಠದ್ದೇ ಒಂದು ಪರಂಪರೆ ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರದಲ್ಲಿ ವ್ಯಾಸರಾಯರ ಮಠವನ್ನು ಸ್ಥಾಪಿಸಿ ಕುಂದಾಪುರ ವ್ಯಾಸರಾಯರ ಮಠ ಎಂದು ಪ್ರಸಿದ್ಧವಾಯಿತು.

ಪದ್ಮನಾಭತೀರ್ಥರ ಇನ್ನೊಂದು ಕವಲು ಮುಳುಬಾಗಿಲು ಮಠವಾಯಿತು. ದಾಸ ಸಾಹಿತ್ಯದ ಮೂಲ ಪ್ರವರ್ತಕರಲ್ಲಿ ಒಬ್ಬರೂ ವ್ಯಾಸತೀರ್ಥರ ವಿದ್ಯಾಗುರುಗಳೂ ಆದ ಶ್ರೀಪಾದ ರಾಜರು (ಶ್ರೀ ಲಕ್ಷ್ಮೀನಾರಾಯಣತೀರ್ಥ) ಈ ಮಠದ ಪರಂಪರೆಯಲ್ಲಿ ಬೆಳಗಿದ ಮಹಾನ್‌ಯತಿಗಳು.

ಮಾಧವ ತೀರ್ಥರ ಇನ್ನೊಂದು ಕವಲು ಮಜ್ಜಿಗೆಹಳ್ಳಿಯಲ್ಲಿ ಬೆಳೆದು ಬಂತು. ಹಾಗೆಯೇ ಅಕ್ಷೋಭ್ಯ ತೀರ್ಥರಿಂದ ಎರಡು ಕವಲು ಬೆಳೆದು ಕೂಡ್ಲಿ ಮತ್ತು ಬಾಳೆಗಾರು (ಬಾಣಾಗಾರ) ಮಠಗಳಾಗಿ ಬೆಳೆದು ಬಂದವು.

ಇವಲ್ಲದೆ ತೌಳವ ಮಂಡಲದಲ್ಲಿ ಇನ್ನು ನಾಲ್ಕು ಮಠಗಳಿವೆ:

೧೭) ಸುಬ್ರಹ್ಮಣ್ಯ ಮಠ
೧೮) ಭಂಡಾರಕೇರಿ ಮಠ
೧೯) ಭೀಮನಕಟ್ಟೆ ಮಠ
೨೦) ಚಿತ್ರಾಪುರ ಮಠ

ಸುಬ್ರಹ್ಮಣ್ಯ ಮಠ ವಿಷ್ಣುತೀರ್ಥರ ಪರಂಪರೆಯಿಂದಲೇ ಬೆಳೆದು ಬಂದದ್ದು. ಆಚಾರ್ಯರ ಸನ್ಯಾಸಗುರುಗಳಾದ ಅಚ್ಯುತ ಪ್ರಜ್ಞರ ಶಿಷ್ಯ ಪರಂಪರೆಯು ಭಂಡಾರಕೇರಿ ಮತ್ತು ಭೀಮನ ಕಟ್ಟೆಗಳಲ್ಲಿ ಎರಡು ಕವಲಾಗಿ ಬೆಳೆದು ಬಂತು ಎಂದು ಹೇಳುತ್ತಾರೆ. ಭಂಡಾರ ಕೇರಿ ಉಡುಪಿಯಿಂದ ಸುಮಾರು ೨೦ ಕಿ.ಮೀ. ಉತ್ತರದಲ್ಲಿ ಬಾರಕೂರಿನಲ್ಲಿದೆ. ಭೀಮನಕಟ್ಟೆ (ಭೀಮಸೇತು ಮುನಿವೃಂದ) ಮಠ ತೌಳವ ಪೀಠವೇ ಆದರೂ ಅದರ ಮೂಲ ಮಠ ತೀರ್ಥಹಳ್ಳಿ–ಶಿವಮೊಗ್ಗದ ದಾರಿಯಲ್ಲಿ ಭೀಮನ ಕಟ್ಟೆ ಎನ್ನುವಲ್ಲಿದೆ. ಚಿತ್ರಾಪುರ ಮಠ ಪೇಜಾವರ ಮಠದ ಕವಲು ಎಂದು ಐತಿಹ್ಯ. ಈ ಮಠ ಉಡುಪಿ–ಮಂಗಳೂರು ಹೆದ್ದಾರಿಯಲ್ಲಿ ಉಡುಪಿಯಿಂದ ಸುಮಾರು ೩೫ ಕಿ.ಮೀ. ದೂರದ ಚಿತ್ರಾಪುರದಲ್ಲಿದೆ.

ಮಾಧ್ವ ಸಮಾಜವನ್ನು ಬೆಳಗಿದ ಗೌಡ ಸಾರಸ್ವತ ಬ್ರಾಹ್ಮಣರ ಎರಡು ಮಠಗಳೂ ಪ್ರಖ್ಯಾತವಾಗಿವೆ.

೨೧) ಗೋಕರ್ಣ ಪರ್ತಗಾಳಿ ಜೀವೋತ್ತಮ ಮಠ
೨೨) ಕಾಶೀಮಠ

ಗೋಕರ್ಣ ಮಠದ ಮೂಲಸ್ಥಾನ ಗೋಕರ್ಣ. ಅನಂತರ ಈ ಪರಂಪರೆಯವರು ಪರ್ತಗಾಳಿಯಲ್ಲಿ ಮಡಗಾಂವ (ಮಠ ಗ್ರಾಮ) ಮಠವನ್ನು ಸ್ಥಾಪಿಸಿದರು. ಈ ಮಠದ ಖ್ಯಾತ ಯತಿ ಜೀವೋತ್ತಮ ತೀರ್ಥರಿಂದಾಗಿ ಇದು ಜೀವೋತ್ತಮ ಮಠ ಎಂದೂ ಖ್ಯಾತವೆನಿಸಿತು. ಉಡುಪಿಯ ಪಲಿಮಾರು ಮಠದ ಹತ್ತನೆಯ ಯತಿಗಳಾದ ಶ್ರೀರಾಮಚಂದ್ರತೀರ್ಥರಿಂದ ಸನ್ಯಾಸ ದೀಕ್ಷೆ ಪಡೆದ ಶ್ರೀ ನಾರಾಯಣ ತೀರ್ಥರು ಈ ಮಠದ ಮೂಲ ಯತಿಗಳು ಎಂದು ಮಠದ ಗುರು ಪರಂಪರೆಯಿಂದ ತಿಳಿದು ಬರುತ್ತದೆ.

ಕಾಶೀಮಠದ ಸಂಸ್ಥಾನವೊಂದು ಕಾಶಿಯಲ್ಲಿದ್ದರೂ ಅದು ಮೂಲತಃ ದಕ್ಷಿಣದ ಮಠವೆ. ಕರಾವಳಿ ಪ್ರದೇಶದಲ್ಲೂ ಉಡುಪಿಯಿಂದ ಮುಂಬಯಿಯ ತನಕ ಹರವಿರುವ ಉತ್ತರ ಭಾಗದ ಗೌಡ ಸಾರಸ್ವತ ಬ್ರಾಹ್ಮಣರು ಗೋಕರ್ಣ ಮಠದ ಶಿಷ್ಯರು. ಉಡುಪಿಯಿಂದ ದಕ್ಷಿಣಕ್ಕೆ ಕನ್ಯಾಕುಮಾರಿಯ ತನಕದ ಗೌಡ ಸಾರಸ್ವತರು ಕಾಶೀಮಠದ ಶಿಷ್ಯರು.

ಇದಲ್ಲದೆ ಇನ್ನೆರಡು ಉತ್ತರ ಭಾರತದ ಮಹತ್ವದ ಮಾಧ್ವ ಸಂಸ್ಥೆಗಳನ್ನು ಇಲ್ಲಿ ಉಲ್ಲೇಖಿಸಬೇಕು.

೨೩) ಬಂಗಾಲದ ಮಾಧ್ವಗೌಡೀಯ ಮಠ
೨೪) ಅಂತಾರಾಷ್ಟ್ರೀಯ ಹರೇಕೃಷ್ಣ ಪಂಥ

ಮಾಧ್ವಗೌಡೀಯ ಮಠವು ಬಂಗಾಲದ ಮಾಧ್ವ ಪೀಠ. ಈಗಿನ ಬಾಂಗ್ಲಾದೇಶದಲ್ಲೂ ಹಿಂದೆ ಇದರ ಶಾಖೆಯೊಂದಿತ್ತು. ಆಚಾರ್ಯ ಮಧ್ವರ ಗುಡಿಯೂ ಅಲ್ಲಿತ್ತು. ಈ ಮಾಧ್ವ ಗೌಡೀಯ ಮಠದ ಒಂದು ಒಬ್ಬ ಯತಿಗಳಾದ ಎ. ಸಿ. (ಅಚ್ಯುತ ಚರಣ) ಭಕ್ತಿ ವೇದಾಂತ ಪ್ರಭುವಾದರೆ ವಿಶ್ವವ್ಯಾಪಿಯಾದ ಹರೇಕೃಷ್ಣ ಪಂಥದ (ಇಂಟರ್‌ನೇಶನಲ್ ಸೊಸೈಟಿ ಆಫ್ ಕೃಷ್ಣ ಕಾನ್‌ಸಿಯಸ್‌ನೆಸ್) ಸ್ಥಾಪಕರು. ಈ ಪಂಥದ (ಇಸ್‌ಕೋನ್) ದವರು ತಮ್ಮ ಗುರುಪರಂಪರೆಯಲ್ಲಿ ಆಚಾರ್ಯ ಮಧ್ವರನ್ನೇ ತಮ್ಮ ಮೂಲಗುರುಗಳಾಗಿ ಪರಿಗಣಿಸುತ್ತಾರೆ.

**ಆಚಾರ್ಯರ ಕೃತಿಗಳು**

ಸೂತ್ರಪ್ರಸ್ಥಾನದ ಮೇಲೆ ಆಚಾರ್ಯರು ನಾಲ್ಕು ಕೃತಿಗಳನ್ನು ರಚಿಸಿದ್ದಾರೆ.

೧) ಬ್ರಹ್ಮಸೂತ್ರ ಭಾಷ್ಯ
೨) ಸರ್ವಶಾಸ್ತ್ರಾರ್ಥ ಸಂಗ್ರಹ (ಅಣು ಭಾಷ್ಯ)
೩) ಬ್ರಹ್ಮಸೂತ್ರಾನುವ್ಯಾಖ್ಯಾನ

೪) ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯ ವಿವರಣ
ಗೀತಾಪ್ರಸ್ಥಾನದ ಮೇಲೆ ಎರಡು ಗ್ರಂಥಗಳು:
೫) ಭಗವದ್‌ಗೀತಾಭಾಷ್ಯ
೬) ಭಗವದ್‌ಗೀತಾ ತಾತ್ಪರ್ಯ ನಿರ್ಣಯ

ಉಪನಿಷತ್ ಪ್ರಸ್ಥಾನದಲ್ಲಿ ಪ್ರಧಾನವಾದ ಹತ್ತು ಉಪನಿಷತ್ತುಗಳಿಗೆ ಆಚಾರ್ಯರು ಭಾಷ್ಯ ರಚಿಸಿದ್ದಾರೆ. ಅದರಲ್ಲೂ ಒಂದು ವಿಶೇಷವುಂಟು. ಉಳಿದವರೆಲ್ಲ ಐತರೇಯ ಉಪನಿಷತ್ತಿನ ಮೂರು ಅಧ್ಯಾಯಗಳಿಗೆ ಮಾತ್ರ ಟೀಕೆ ಬರೆದಿದ್ದರೆ ಆಚಾರ್ಯರು ಐತರೇಯ ಆರಣ್ಯಕದ ಇಡಿಯ ಉಪನಿಷತ್ ಕಾಂಡಕ್ಕೆ (೯ ಅಧ್ಯಾಯಗಳು) ಭಾಷ್ಯ ರಚಿಸಿದ್ದಾರೆ.

೭) ಮಹೈತರೇಯೋಪನಿಷದ್ ಭಾಷ್ಯ
೮) ಬೃಹದಾರಣ್ಯಕೋಪನಿಷದ್ ಭಾಷ್ಯ
೯) ಛಂದೋಗೋಪನಿಷದ್ ಭಾಷ್ಯ
೧೦) ತೈತ್ತಿರೀಯೋಪನಿಷದ್ ಭಾಷ್ಯ
೧೧) ತಲವಕಾರೋಪನಿಷದ್ ಭಾಷ್ಯ
(ಕೇನೋಪನಿಷದ್ ಭಾಷ್ಯ)
೧೨) ಕಾಠಕೋಪನಿಷದ್ ಭಾಷ್ಯ
೧೩) ಅಥರ್ವಣೋಪನಿಷದ್ ಭಾಷ್ಯ (ಮುಂಡಕೋಪನಿಷದ್ ಭಾಷ್ಯ)
೧೪) ಷಟ್ಪ್ರಶ್ನೋಪನಿಷದ್ ಭಾಷ್ಯ
೧೫) ಯಾಜ್ಞೀಯ ಮಂತ್ರೋಪನಿಷದ್ ಭಾಷ್ಯ
(ಈಶಾವಾಸ್ಯೋಪನಿಷದ್ ಭಾಷ್ಯ)
೧೬) ಮಾಂಡೂಕೋಪನಿಷದ್ ಭಾಷ್ಯ

ಮಾಂಡೂಕೋಪನಿಷತ್ತಿನ ಮಧ್ಯದಲ್ಲಿ ಬರುವ ಶ್ಲೋಕಗಳನ್ನು ಗೌಡಪಾದರ ಕಾರಿಕೆಗಳೆಂದು ತಪ್ಪಾಗಿ ಭ್ರಮಿಸಲಾಗುತ್ತಿದೆ. ಆಚಾರ್ಯ ರಾಮಾನುಜರು ಇವು ಉಪನಿಷತ್ತಿನ ಭಾಗವೆ ಎಂದು ಒಪ್ಪಿಕೊಂಡಿದ್ದಾರೆ. ಆಚಾರ್ಯ ಮಧ್ವರಂತು ಈ ಮಂತ್ರಗಳಿಗೆ ಭಾಷ್ಯ ರಚಿಸಿ ಈ ತಪ್ಪು ಕಲ್ಪನೆಯನ್ನು ತಿರಸ್ಕರಿಸಿದ್ದಾರೆ. ಬ್ರಹ್ಮಾನಂದ ಮುಂತಾದ ಹಿರಿಯ ಅದ್ವೈತ ವಿದ್ವಾಂಸರೂ ಇವು ಉಪನಿಷನ್ಮಂತ್ರಗಳೇ ಎಂದು ಒಪ್ಪಿಕೊಂಡಿರುವುದನ್ನು ಇಲ್ಲಿ ಗಮನಿಸಬೇಕು.

ಶ್ರುತಿ ಪ್ರಸ್ಥಾನದಲ್ಲಿ ಋಗ್ವೇದದ ೪೦ ಸೂಕ್ತಗಳಿಗೆ ಅಧ್ಯಾತ್ಮದ ಅರ್ಥಬರೆದು ಮಾರ್ಗದರ್ಶನ ಮಾಡಿದ್ದಲ್ಲದೆ ಐತರೇಯ ಬ್ರಾಹ್ಮಣದ ಕೆಲವು ಖಂಡಗಳಿಗೂ ಆರಣ್ಯಕದ ಮಹಾನಾಮ್ನೀ ಖಂಡಕ್ಕೂ ವ್ಯಾಖ್ಯಾನ ಬರೆದು ಸಂಹಿತಾ–ಬ್ರಾಹ್ಮಣ ಆರಣ್ಯಕಗಳ ಸಮನ್ವಯದ ದಾರಿ ತೋರಿದರು.

೧೭) ಋಗ್ ಭಾಷ್ಯ
೧೮) ಖಂಡಾರ್ಥನಿರ್ಣಯ (ಕರ್ಮನಿರ್ಣಯ)

ಹಾಗೆಯೇ ಇತಿಹಾಸ–ಪುರಾಣಗಳ ಸಮನ್ವಯಕ್ಕಾಗಿ ಮಹಾಭಾರತ ಭಾಗವತಗಳ ಹೃದಯವನ್ನು ತೆರೆದು ತೋರುವ ಮೂರು ಕೃತಿಗಳು:

೧೯) ಮಹಾಭಾರತ ತಾತ್ಪರ್ಯ ನಿರ್ಣಯ
೨೦) ಮಹಾಭಾರತ ತಾತ್ಪರ್ಯ (ಯಮಕ ಭಾರತ)
೨೧) ಭಾಗವತ ತಾತ್ಪರ್ಯ ನಿರ್ಣಯ

ಪ್ರಮಾಣ ಪ್ರಮೇಯಗಳ ನಿಷ್ಕರ್ಷೆಗಾಗಿ ೯ ಪ್ರಕರಣ ಗ್ರಂಥಗಳು:

೨೨) ವಿಷ್ಣು ತತ್ತ್ವ ನಿರ್ಣಯ
೨೩) ವಾದ (ತತ್ತ್ವೋದ್ಯೋತ)
೨೪) ಮಾಯಾವಾದ ದೂಷಣ (ಮಾಯಾವಾದ ಖಂಡನ)
೨೫) ಉಪಾಧಿದೂಷಣ (ಉಪಾಧಿಖಂಡನ–ತತ್ತ್ವಪ್ರಕಾಶಿಕಾ)
೨೬) ಮಿಥ್ಯಾತ್ವಾನುಮಾನದೂಷಣ
(ಮಿಥ್ಯಾತ್ವಾನುಮಾನ ಖಂಡನ)
೨೭) ತತ್ತ್ವ ಸಂಖ್ಯಾನ
೨೮) ತತ್ತ್ವ ವಿವೇಕ
೨೯) ಪ್ರಮಾಣ ಲಕ್ಷಣ
೩೦) ವಾದ ಲಕ್ಷಣ (ಕಥಾಲಕ್ಷಣ)

ಧರ್ಮಶಾಸ್ತ್ರದ ವ್ರತ–ಅನುಷ್ಠಾನಗಳ ಬಗೆಗೆ, ವಾಸ್ತುಶಿಲ್ಪದ ಬಗೆಗೆ ಮಂತ್ರ–ತಂತ್ರಗಳ ಬಗೆಗೆ, ಗೃಹಸ್ಥರ ಮತ್ತು ಸನ್ಯಾಸಿಗಳ ಆಚಾರ–ಧರ್ಮಗಳ ಬಗೆಗೆ ಮಾರ್ಗದರ್ಶನ ಮಾಡುವ ಏಳು ಗ್ರಂಥಗಳು:

೩೧) ಕೃಷ್ಣಾಮೃತ ಮಹಾರ್ಣವ
೩೨) ತಂತ್ರಸಾರ ಸಂಗ್ರಹ
೩೩) ಸದಾಚಾರಸ್ಮೃತಿ
೩೪) ಜಯಂತೀ ನಿರ್ಣಯ
೩೫) ಓಂ ತತ್‌ಸತ್‌ಪ್ರಣವ ಕಲ್ಪ (ಯತಿಪ್ರಣವ ಕಲ್ಪ)
೩೬) ನ್ಯಾಸ ಪದ್ಧತಿ
೩೭) ತಿಥಿ ನಿರ್ಣಯ

ಸ್ತೋತ್ರ ಸಾಹಿತ್ಯದಲ್ಲಿ ಒಂದು ಸ್ತುತಿ, ಮತ್ತೊಂದು ಸಂಗೀತ ಬದ್ಧವಾದ ಹಾಡು ಗಬ್ಬಗಳ ಸಂಕಲನ.

೩೮) ನರಸಿಂಹ ಸ್ತುತಿ
೩೯) ದ್ವಾದಶ ಸ್ತೋತ್ರಗಳು.

ಮತ್ತು ಆಚಾರ್ಯರು ಬಾಲ್ಯದಲ್ಲಿ ಚೆಂಡಾಟದ ವೇಳೆ ರಚಿಸಿದ್ದೆಂದು ಹೇಳಲಾದ ಅಪೂರ್ವ ಛಂದಸ್ಸಿನ ಒಂದು ಪುಟ್ಟ ಕೃತಿ.

೪೦) ಕಂದುಕ ಸ್ತುತಿ.

ಇವುಗಳಲ್ಲಿ ೩೮ ಗ್ರಂಥಗಳು ಈ ಮೊದಲೆ ಪ್ರಸಿದ್ಧವಾಗಿದ್ದು ಯತಿ ಧರ್ಮವನ್ನು ವಿವರಿಸುವ "ನ್ಯಾಸ ಪದ್ಧತಿ" ಮತ್ತು ತಿಥಿ ಸ್ಫುಟದ ವಿವರ ನೀಡುವ ಅಪೂರ್ವ ಗಣಿತ ಗ್ರಂಥ 'ತಿಥಿ ನಿರ್ಣಯ' ಇವೆರಡು ಕೆಲವರ್ಷಗಳ ಹಿಂದೆ ತಾಡವಾಲೆ ಪುಸ್ತಕಗಳ ಸಂಶೋಧನ ನಡೆಸುವಾಗ ನನ್ನ ಗಮನಕ್ಕೆ ಬಂದ ಅಪೂರ್ವ ಕೃತಿಗಳು.

### ಸಿದ್ಧಾಂತದ ಸಾರ: ತತ್ತ್ವವಾದ: ದ್ವೈತ

ಭಾರತೀಯ ತತ್ತ್ವಜ್ಞಾನದ ಪರಂಪರೆಗೆ ಆಚಾರ್ಯ ಮಧ್ವರ ವಿಚಾರ ಧಾರೆ ಒಂದು ಹೊಸ ತಿರುವು ನೀಡಿತು. ಪ್ರಾಚೀನ ಗ್ರಂಥಗಳಲ್ಲಿ ಇದನ್ನು ತತ್ತ್ವವಾದ ಎಂದು ಕರೆದಿದ್ದಾರೆ. ಅನಂತರದ ದಿನಗಳಲ್ಲಿ ದ್ವೈತ–ಅದ್ವೈತಗಳ ಮೂಲಕವೇ ವೈದಿಕ ಮತಗಳನ್ನು ಗುರುತಿಸುವ ಸಂಘರ್ಷ ಮೂಲವಾದ ಅತಾತ್ತ್ವಿಕ ನಿಲುವು ಬೆಳೆದಾಗ ಇದನ್ನು 'ದ್ವೈತ ಮತ' ಎಂದು ಕರೆಯಲಾಯಿತು. ವೈದಿಕ ಪರಂಪರೆಯ ದೃಷ್ಟಿಯಿಂದ ಇದು ಅಷ್ಟೊಂದು ಸಮರ್ಥನೀಯವಾದ ಹೆಸರಲ್ಲ.

ಆಚಾರ್ಯರ ಸಿದ್ಧಾಂತದಲ್ಲಿ ಮೂಲತಃ ತತ್ತ್ವಗಳು ಎರಡು: ಸ್ವತಂತ್ರ ತತ್ತ್ವ ಮತ್ತು ಅಸ್ವತಂತ್ರ ತತ್ತ್ವ. ವಿಶ್ವದ ಸೃಷ್ಟಾರನಾದ ಭಗವಂತ ಸ್ವತಂತ್ರ ತತ್ತ್ವ; ಅವನಿಂದ ಸೃಷ್ಟವಾದ ಸಮಸ್ತ ವಿಶ್ವ ಅಸ್ವತಂತ್ರ ತತ್ತ್ವ.

ನಾರಾಯಣನೊಬ್ಬನೇ ಸರ್ವೋತ್ತಮನಾದ, ಸ್ವತಂತ್ರನಾದ ಪರದೈವ. ಸಮಸ್ತ ವೇದವೂ ಅವನೊಬ್ಬನನ್ನೆ ಅಗ್ನಿ,

ಇಂದ್ರ, ವರುಣ ಮುಂತಾದ ನಾನಾ ಬಗೆಯ ಗುಣನಾಮಗಳಿಂದ ಸ್ತುತಿಸುತ್ತದೆ. 'ಏಕೋ ದೇವಃ' ಎನ್ನುವುದೇ ಸಮಸ್ತ ವೈದಿಕ ವಾಙ್ಮಯದ ತಿರುಳು ಹೊರತು ಅನೇಕ ದೇವವಾದ ವಲ್ಲ.

ಎಲ್ಲಾ ನಾಮಗಳೂ ಗುಣವಾಚಕಗಳು. ಭಗವಂತ ಎಲ್ಲ ಗುಣಗಳ ಕಡಲು. ಆದ್ದರಿಂದ ಯಾವ ನಾಮದಿಂದ ಕರೆದರೂ ಸರಿಯೆ, ಎಲ್ಲ ನಾಮಗಳೂ ಭಗವಂತನ ಹೆಸರೇ. ವೈದಿಕ ಪದಗಳಷ್ಟೇ ಅಲ್ಲ, ಸಂಸ್ಕೃತದ ನಾಮಗಳಷ್ಟೇ ಅಲ್ಲ, ಜಗತ್ತಿನ ಯಾವುದೇ ಭಾಷೆಯ ಯಾವ ಹೆಸರಿನಿಂದ ಕರೆದರೂ ಅದು ಅವನಿಗೆ ಸಲ್ಲುತ್ತದೆ, ಏಕೆಂದರೆ ಮೂಲತಃ ಭಗವಂತನ ಹೆಸರಲ್ಲದ ಯಾವ ನಾದವೂ, ಯಾವ ಪದವೂ ಜಗತ್ತಿನ ಯಾವ ಭಾಷೆಯಲ್ಲೂ ಇಲ್ಲ.

ದೇವರೊಬ್ಬನೇ ಆದರೂ ದೇವತೆಗಳು ಹಲವು. ಈ ದೇವತೆಗಳೆಂದರೆ ದೇವರಲ್ಲ. ದೇವರನ್ನು ಸಾಕ್ಷಾತ್ಕರಿಸಿ, ಸಿದ್ಧಿ ಪಡೆದು ಎತ್ತರಕ್ಕೇರಿದ ಜೀವರು. ಸಾಧಕನಾದ ಜೀವನಿಗೆ ಸಿದ್ಧರಾದ ಇವರು ಸಾಧನೆಯಲ್ಲಿ ಮಾರ್ಗದರ್ಶನ ಗುರುಗಳಾಗಿ ಸಹಕರಿಸಬಲ್ಲರು.

ಭಗವಂತ ಬಿಂಬವಾದರೆ ದೇವರು ಅವನ ಪ್ರತಿಬಿಂಬ. ಯಾವಾಗಲೂ ಪ್ರತಿಬಿಂಬ ಬಿಂಬದ ಅಧೀನವಾಗಿಯೇ ಇರುತ್ತದೆ ಹೊರತು ಅದು ಬಿಂಬವೇ ಆಗಲಾರದು. ಒಂದು ಬಿಂಬಕ್ಕೆ ಅನೇಕ ಪ್ರತಿಬಿಂಬಗಳು. ಹಾಗೆಯೇ ಅನಂತ ಜೀವರು. ಒಬ್ಬೊಬ್ಬ ದೇವ ಒಂದೊಂದು ತರ. ಎಷ್ಟು ದೇವರೋ ಅಷ್ಟು ತರಗಳು. ಎಲ್ಲ ತರತಮಗಳ ಜತೆಗೆ ಈ ದೇವರು, ಚಿದ್ರೂಪದಿಂದ ಭಗವಂತನ ಸಾದೃಶ್ಯದ ಸೂತ್ರದಲ್ಲಿ ಹೆಣೆದು ಕೊಂಡವರು.

ಜೀವರಂತೆಯೇ ಸೃಷ್ಟಿಗೆ ಮೂಲವಾದ ಜಡದ್ರವ್ಯಗಳೂ ಅನಂತ. ಹೀಗೆ ಭಗವಂತ–ಜೀವ–ಜಡ ಪ್ರಪಂಚ ಈ ಮೂರರ ಮಧ್ಯವರ್ತಿಯಾದ ಜೀವ ಈಚೆಗೆ ಒಲೆದರೆ ಜಡ ಪ್ರಪಂಚದಲ್ಲಿ ಮುಳುಗಿ ಸಂಸಾರಿಯಾಗುತ್ತಾನೆ. ಆಚೆಗೆ ತಿರುಗಿದರೆ ಭಗವಂತನನ್ನು ಸೇರಿ ಮುಕ್ತನಾಗುತ್ತಾನೆ.

ಇಲ್ಲಿ ಒಂದು ಮಾತು ಮುಖ್ಯ: ಮುಕ್ತಿ–ಬಿಡುಗಡೆ ಎಂದರೆ ವಿಶ್ವದ ಬಿಡುಗಡೆಯಲ್ಲ. ಇದೆ ಎಂದು ಭ್ರಮಿಸಿದ ವಿಶ್ವ ಇಲ್ಲವಾಗುವುದಲ್ಲ. ಮುಕ್ತಿ ಎಂದರೆ ವಿಶ್ವದ ಬಂಧನದಿಂದ ಬಿಡುಗಡೆ. ಆಮೇಲೂ ವಿಶ್ವ ಇದೆ. ಅದರ ಬಂಧನವಿಲ್ಲ. ಮೊದಲು ಜೀವ ತನ್ನ ಚೈತನ್ಯ ಶಕ್ತಿಯನ್ನು, ಬಿಂಬವನ್ನು ಅರಿಯದೆ ಜಡದಲ್ಲಿ ಬಿಂಬವನ್ನರಸುತ್ತ ಜಡದ ಕೈಗೊಂಬೆಯಾಗಿದ್ದ, ಈಗ ಜಡವನ್ನು ಗೆದ್ದ. ಏಕೆಂದರೆ ವಿಶ್ವದ ಸೃಷ್ಟಿಯ ಮೂಲವನ್ನು, ತನ್ನ ಬಿಂಬವಾದ ಭಗವಂತನನ್ನು ಅರಿತಿದ್ದಾನೆ.

ಪಂಚಭೂತಗಳು, ಪಂಚತನ್ಮಾತ್ರಗಳು, ಪಂಚಕೋಶಗಳು, ಪಂಚೇಂದ್ರಿಯಗಳು – ಹೀಗೆ ಈ ಜಡ ಪ್ರಪಂಚ ಪಂಚಮುಖಿಯಾಗಿದೆ. ಆದಕ್ಕೆಂದೆ ಅದನ್ನು ಪ್ರ–ಪಂಚ ಎಂದು ಕರೆಯುತ್ತಾರೆ. ಈ ಪಂಚೀಕೃತವಾದ ಪ್ರಪಂಚನೊಳಗೆ ಪ್ರಾಣತತ್ತ್ವ ಪಂಚರೂಪದಿಂದ ತುಂಬಿದೆ: ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ. ಜತೆ ಜತೆಗೆ ಭಗವಂತನೂ ಪಂಚರೂಪನಾಗಿ ನಿಂತು ನಿಯಂತ್ರಿಸುತ್ತಿದ್ದಾನೆ. ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ಮತ್ತು ನಾರಾಯಣ.

ಅಂತೆಯೇ ಈ ಪ್ರಪಂಚದಲ್ಲಿ ಪಂಚವಿಧ ಭೇದಗಳನ್ನು ಗುರುತಿಸಬಹುದು: ಜಡ–ಜಡ ಭೇಧ, ಜಡ–ಜೀವರ ಬೇಧ, ಜಡ–ಪರಮಾತ್ಮರ ಭೇದ, ಜೀವ–ಜೀವರ ಭೇದ ಮತ್ತು ಜೀವ–ಪರಮಾತ್ಮರ ಭೇಧ. ಈ ಭೇದ ತಾತ್ಕಾಲಿಕವೂ ಅಲ್ಲ, ವ್ಯಾವಹಾರಿಕವೂ ಅಲ್ಲ. ಬದಲಿಸಲಾಗದ ವಸ್ತುವಿನ ಸಹಜ ಧರ್ಮ, ಏಕೆಂದರೆ ಇದು ಪ್ರಕೃತಿ ನಿಯಮ. ಒಂದು ಎರಡಲ್ಲ; ಎರಡು ಒಂದಲ್ಲ.

ಭಗವಂತನ ಬಗೆಗೆ, ಉಪಾಸನೆಯ ಬಗೆಗೆ, ವಿಶ್ವದ ಬಗೆಗೆ ಬೆಳೆದು ಬಂದಿದ್ದ ಕೆಲವು ವಿರೋಧಾಭಾಸದ ಕಲ್ಪನೆಗಳನ್ನು ಆಚಾರ್ಯರು ಸಮನ್ವಯದಿಂದ ಸಮೀಕರಿಸಿದರು. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ಉಲ್ಲೇಖಿಸಬಹುದು:

ಭಗವಂತ ಸಾಕಾರನೂ ಹೌದು. ನಿರಾಕಾರನೂ ಹೌದು. ಸಗುಣನೂ ಹೌದು; ನಿರ್ಗುಣನೂ ಹೌದು. ಜ್ಞಾನಾನಂದಮಯ ಶರೀರದಿಂದ ಅವನು ಸಾಕಾರ. ನಮ್ಮ ಕಲ್ಪನೆಗೆ ಎಟಕುವ ಭೌತಿಕ ಶರೀರ ಅವನಿಗೆ ಇಲ್ಲವಾದ್ದರಿಂದ ಅವನು ನಿರಾಕಾರ. ಸಕಲ ಕಲ್ಯಾಣಗುಣಗಳಿಂದ ಪೂರ್ಣನಾಗಿದ್ದರಿಂದ ಅವನು ಸಗುಣ, ಭೌತಿಕ ಗುಣಗಳಿಂದ ದೂರನಾದ್ದರಿಂದ ನಿರ್ಗುಣ. ಸರಿಯಾದ ನೆಲೆಯಲ್ಲಿ ನಿಂತು ನೋಡಿದಾಗ ಎಲ್ಲ ಮಾತುಗಳೂ ಒಂದೇ ಸತ್ಯದ ಹಲವು ಮುಖಗಳನ್ನು ಹೇಳುತ್ತವೆ ಎನ್ನುವುದು ಗೋಚರವಾಗುತ್ತದೆ. ಈ ಸಮನ್ವಯ ಪ್ರಜ್ಞೆ ಇಲ್ಲದವನಿಗೆ ವೇದ ವಾಙ್ಮಯ ತನ್ನ ಹೃದಯವನ್ನು ತೆರೆದು ತೋರುವುದಿಲ್ಲ.

ಜಗತ್ತು ಡೊಂಬರಾಟದ ಮಾಯಾ ಸೃಷ್ಟಿಯಲ್ಲ. ಅದು ಪರಮಾರ್ಥ ಸತ್ಯ. ಇನ್ನೊಂದು ನಿಟ್ಟಿನಲ್ಲಿ ಅದು ಅಸತ್ಯವೂ ಹೌದು. ಇಲ್ಲಿ ಅಸತ್ಯ ಎಂದರೆ ಸುಳ್ಳು ಎಂದಲ್ಲ. ಅಧೀನ ಸತ್ಯ ಎಂದು ಅರ್ಥ. ಅದು ಭಗವಂತನಿಂದ ನಿಯತವಾದ ಸತ್ಯ. ಆದ್ದರಿಂದ ಅಸತ್ಯ.

ಹಾಗೆಯೆ ವೈದಿಕ ಧರ್ಮ ವಿಗ್ರಹೋಪಾಸಕ ಎಂಬ ಆಕ್ಷೇಪದಲ್ಲೂ ಹುರುಳಿಲ್ಲ. ಏಕೆಂದರೆ ಇದು ವಿಗ್ರಹವನ್ನು ಪೂಜಿಸುವುದಿಲ್ಲ. ವಿಗ್ರಹದಲ್ಲಿ ದೇವರನ್ನು ಪೂಜಿಸುವುದು ಎಲ್ಲೆಡೆಯು ಇರುವ ಭಗವಂತ ವಿಗ್ರಹದಲ್ಲಿ ಇಲ್ಲವೇನು?

ಆಚಾರ್ಯರ ತತ್ತ್ವವಾದದ ವೈಶಿಷ್ಟ್ಯಪೂರ್ಣವಾದ ಕೊಡುಗೆಗಳಲ್ಲಿ ಇನ್ನೊಂದು ವ್ಯಕ್ತಿ ವಿಶಿಷ್ಟವಾದ ಮತ್ತು ಸ್ವಭಾವವಾದ. ಅವುಗಳನ್ನು ಹೀಗೆ ಸಂಗ್ರಹಿಸಬಹುದು:

ಒಂದು ವಸ್ತುವಿನಂತೆ ಇನ್ನೊಂದು ವಸ್ತುವಿಲ್ಲ. ಒಬ್ಬನ ಜೀವನದಂತೆ ಇನ್ನೊಬ್ಬನದಿಲ್ಲ. ಪ್ರತಿಯೊಂದಕ್ಕೂ ಪ್ರತಿಯೊಬ್ಬನಿಗೂ ತನ್ನದೇ ಆದ ವೈಶಿಷ್ಟ್ಯವಿದೆ, ತನ್ನದೇ ಆದ ಸ್ವಭಾವವಿದೆ, ತನ್ನದೇ ಆದ ವ್ಯಕ್ತಿತ್ವವಿದೆ. ಈ ವ್ಯಕ್ತಿತ್ವದ ಪೂರ್ಣ ವಿಕಾಸವೇ ಜೀವನದ ಗುರಿ. ಜೀವ ಭಗವಂತನ ಅಧೀನವಾಗಿ ತನ್ನ ವ್ಯಕ್ತಿತ್ವವನ್ನು ಪೂರ್ಣ ಪ್ರಮಾಣದಲ್ಲಿ ವಿಕಾಸಗೊಳಿಸುವ ಕಮ್ಮಟ ಶಾಲೆಯೇ ಸಂಸಾರ. ವಿಕಸಿತ ವ್ಯಕ್ತಿತ್ವದ ಸವಿಯನ್ನು ಸವಿಯುವ ಪೂರ್ಣಾವಸ್ಥೆಯೆ ಮುಕ್ತಿ.

ಅವರವರ ಸಾಧನೆಗೆ ತಕ್ಕಂತೆ ಅವರವರ ಸಿದ್ಧಿ. ನಮ್ಮ ವ್ಯಕ್ತಿತ್ವಕ್ಕೆ ತಕ್ಕಂತೆ ನಮ್ಮ ವಿಕಾಸ. ಕಡಲೂ ಪೂರ್ಣವಾಗಿದೆ. ಕೆರೆಯೂ ಪೂರ್ಣವಾಗಿದೆ. ನೀರು ತುಂಬಿದ ಕೊಡಗಳೂ ಪೂರ್ಣವಾಗಿವೆ. ಆದರೆ ಅಪೂರ್ಣತೆ ಏಕರೂಪವಾದದ್ದಲ್ಲ. ಪಾತ್ರ ಬೇರೆಯಾದಂತೆ ಗಾತ್ರವೂ ಬೇರೆ. ಎಲ್ಲವೂ ಪೂರ್ಣ. ಆದರೂ ವೈವಿಧ್ಯಪೂರ್ಣ.

ಯಾವುದೇ ಎರಡು ವಸ್ತು ಏಕರೂಪವಾಗಿರುವಂಥದು ಈ ಸೃಷ್ಟಿಯಲ್ಲಿಲ್ಲ. ಒಂದೇ ಮರದ ಎರಡು ಎಲೆಗಳೂ ಏಕರೂಪವಾಗಿಲ್ಲ. ಆದ್ದರಿಂದ ಕೊನೆಯಲ್ಲಿ ಎಲ್ಲರೂ ಒಂದಾಗುತ್ತಾರೆ ಅಥವಾ ಏಕರೂಪವಾಗುತ್ತಾರೆ ಎನ್ನುವುದು ಮೋಣ

ಗಂಟಿಗೆ ಬೆಲ್ಲ ಹಚ್ಚುವ ಮೋಡಿ. ಇದು ಅನುಭವಕ್ಕೆ ಸಲ್ಲದ ಮಾತು. ಶ್ರುತಿಗಳಿಗೆ ಒಲ್ಲದ ಮಾತು. ಪ್ರಕೃತಿ ನಿಯಮಕ್ಕೇ ವಿರುದ್ಧವಾದ ಮಾತು.

ಜೀವನದ ಬೆಳವಣಿಗೆ ಅವನ ಸ್ವಭಾವಕ್ಕೆ ತಕ್ಕಂತೆ ನಡೆಯುತ್ತದೆ. ಪರಿಸರ ವಾತಾವರಣ ಹುದುಗಿದ್ದ ಸ್ವಭಾವದ ಅಭಿವ್ಯಕ್ತಿಗಷ್ಟೆ ನೆರವಾಗುತ್ತದೆ. ಸ್ವಭಾವ ಎನ್ನುವುದು ಜೀವದ ಸಹಜ ನಡೆ. ಅನಾದಿ ನಿತ್ಯವಾಗಿ ಜೀವನದಲ್ಲಿ ಹುದುಗಿರುವ ಸಹಜ ಶಕ್ತಿ. ಅದನ್ನು ಒದಗಿಸುವುದು ಸಾಧನೆಯಿಂದಲೂ ಸಾಧ್ಯವಿಲ್ಲ. ಸಾತ್ವಿಕ ತಾಮಸನಾಗಲಾರ. ತಾಮಸ ಸಾತ್ವಿಕನಾಗಲಾರ. ಅವರವರ ಸ್ವಭಾವದ ಪೂರ್ಣಾಭಿವ್ಯಕ್ತಿಯೆ ಅವರವರ ಸಿದ್ಧಿ.

ಗೀತೆಯಲ್ಲಿ ಬಂದಿರುವ ಚಾತುರ್ವರ್ಣ್ಯವೂ ಇದೇ ಮಾತನ್ನು ಹೇಳುತ್ತವೆ. ಈ ಚಾತುರ್ವರ್ಣ್ಯದ ಕಲ್ಪನೆ ಈಗಣ ಸಾಮಾಜಿಕ ಜಾತಿ ಪದ್ಧತಿಯ ಕಲ್ಪನೆಗಿಂತ ಭಿನ್ನವಾದದ್ದು. ಇದು ಆತ್ಮದ ಸ್ವಭಾವಕ್ಕೆ ಸಂಬಂಧ ಪಟ್ಟ ಮಾತು. ಆತ್ಮದ ನಿಜ ಬಣ್ಣ ಬಯಲಾಗಬೇಕು. ಅದೇ ನಿಜವಾದ ವರ್ಣ ವ್ಯವಸ್ಥೆ. ಈ ವ್ಯವಸ್ಥೆಯಲ್ಲಿ ಒಬ್ಬ ಶೂದ್ರನ ಮಗ ಬ್ರಾಹ್ಮಣನಿರಬಹುದು. ಒಬ್ಬ ಬ್ರಾಹ್ಮಣನ ಮಗ ಶೂದ್ರನೂ ಇರಬಹುದು. ಏಕೆಂದರೆ ವರ್ಣ ಆನುವಂಶಿಕವಾಗಿ ಹರಿದು ಬರುವಂಥದಲ್ಲ. ವೈಯಕ್ತಿಕವಾದದ್ದು. ವ್ಯಕ್ತಿಯ ಸ್ವಾಭಾವಿಕ ಗುಣಗಳಿಂದ ನಿರ್ಧರಿಸುವಂತಹದು.

ಭಗವಂತನನ್ನು ಅರಿತವನು ಮಾತ್ರವೇ ಜಗತ್ತಿನ ರಹಸ್ಯವನ್ನು ಅರಿಯಬಲ್ಲ. ಭೌತಿಕವಾದ ಅನ್ವೇಷಣೆಯಿಂದ ಜಗತ್ತನ್ನು ಸಮಗ್ರವಾಗಿ ತಿಳಿಯುವುದು ಅಸಾಧ್ಯ. ಅದಕ್ಕಾಗಿ ಭಗವಂತನನ್ನೇ ಅರಿಯಬೇಕು. ಇದೇ ಜ್ಞಾನಯೋಗ. ಈ ಜ್ಞಾನಯೋಗದ ಮೂಲಕ ಜೀವನವನ್ನು ಭಗವಂತನ ಜತೆ ಸಂಯೋಜಿಸುವ ಸೂತ್ರವೇ ಪ್ರಾಣತತ್ವ. ಎಲ್ಲ ಜೀವಗಳ ಅಭಿಮಾನಿಯಾದ ಜೀವೋತ್ತಮ ತತ್ವ. ಈ ಪ್ರಾಣ ತತ್ವದ ಅಂಶವೆ ಪರತತ್ವದ ಆವಿಷ್ಕಾರಕ್ಕಾಗಿ ಮಧ್ವನಾಗಿ ಜನಿಸಿತು ಎಂದು ಆಚಾರ್ಯರು ತನ್ನ ಬಗೆಗೆ ಹೇಳುತ್ತಾರೆ.

ಈ ಜ್ಞಾನಯೋಗದ ದಾರಿ ಕರ್ಮ ವಿರೋಧಿಯಲ್ಲ. ಅದು ಕರ್ಮತ್ಯಾಗವನ್ನು ಬಯಸುವುದಿಲ್ಲ. ಅಜ್ಞಾನಿಗಳಿಗೆ ಕರ್ಮಯೋಗ, ಜ್ಞಾನಿಗಳಿಗೆ ಜ್ಞಾನಯೋಗ ಎಂಬ ವಿಭಾಗವು ಅಸಂಗತ. ಕರ್ಮವಿಲ್ಲದ ಜ್ಞಾನ ಪ್ರಯೋಗಕ್ಕಿಳಿಸದ ಬೌದ್ಧಿಕ ಕಸರತ್ತು. ಜ್ಞಾನವಿಲ್ಲದ ಕರ್ಮ ಕುರುಡು ಕರ್ಮದಂತೆ. ಅರಿವು ಬೇಕು. ಅರಿತು ಆಚರಿಸಬೇಕು. ಜತೆಗೆ ಭಗವಂತನ ಮಹಿಮೆಯ ಎಚ್ಚರ ಬೇಕು. ಭಗವಂತನ ಹಿರಿಮೆಯನ್ನರಿತು ಅವನನ್ನು ಅನನ್ಯವಾಗಿ ಪ್ರೀತಿಸಬೇಕು ಈ ವಿಚಿತ್ರ ವಿಶ್ವ ಅವನ ಲೀಲಾಸೃಷ್ಟಿ ಎಂದು ಜಗತ್ತನ್ನು ಪ್ರೀತಿಸಬೇಕು. ವಿಶ್ವವನ್ನು ನಿರಾಕರಿಸುವುದೆಂದರೆ ಭಗವಂತನ ಮಹಿಮೆಯನ್ನು ನಿರಾಕರಿಸಿದಂತೆ. ಭಗವಂತನ ರಾಜ್ಯದ ಪ್ರಜೆಗಳಾದ ನಾವು ದುಃಖಿತರಿಗೆ ನೆರವಾಗುವುದು ಭಗವಂತನಿಗೆ ಸಲ್ಲಿಸುವ ಕಂದಾಯ ಎನ್ನುವ ಭಾವದಿಂದ ಕರ್ತವ್ಯ ಪರಾಯಣರಾಗಬೇಕು. ಹೀಗೆ ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗಗಳ ಸಮಷ್ಟಿಯೆ ಸಮಗ್ರವಾದ ಜೀವನ ಯೋಗ.

ಅರಿವಿನ ವಿಕಾಸಕ್ಕೆ ಹೊರಗಣ್ಣು ಮಾತ್ರ ಸಾಲದು. ಒಳಗಣ್ಣು ತೆರೆಯಬೇಕು. ಅಂತರ್ಮುಖಿಗಳಾಗಬೇಕು. ಅದಕ್ಕೆ ಎರಡು ದಾರಿ. ಪ್ರತ್ಯಕ್ಷಾನುಭವ ಮತ್ತು ಸತ್ಯವನ್ನು ಸಾಕ್ಷಾತ್ಕರಿಸಿಕೊಂಡ ವಿಜ್ಞಾನಿಗಳ ಅನುಭವ ವಾಣಿ. ವೇದ ದ್ರಷ್ಟಾರರಾದ ಋಷಿಗಳು ವಿಜ್ಞಾನಿಗಳು. ಅವರ ವಾಣಿ ನಮಗೆ ದಾರಿ ದೀಪ. ಆ ದೀಪದ ಬೆಳಕಿನಲ್ಲಿ, ಆ ದಾರಿಯಲ್ಲಿ ನಾವು ಸಾಗಿ ಸತ್ಯವನ್ನು ಕಂಡುಕೊಳ್ಳಬೇಕು. ಹೀಗೆ ಶಾಸ್ತ್ರದ ವಾಣಿ ಮತ್ತು ನಮ್ಮ ಅನುಭವ ಮೇಳವಿಸಿದಾಗ ಅದು ಪರಮೋಚ್ಚ ಪ್ರಮಾಣವಾಗಿ ನಮ್ಮ ನಂಬುಗೆಯನ್ನು ದೃಢಪಡಿಸುತ್ತದೆ. ಅದಕ್ಕಾಗಿ ನಿರಂತರ ಸಚ್ಛಾಸ್ತ್ರಗಳ ಶ್ರವಣ–ಮನನ–ನಿಧಿಧ್ಯಾಸ ನಡೆಯಬೇಕು.

ಆತ್ಮಸಾಕ್ಷಿಗೆ ವಿರುದ್ಧವಾಗಿ ಯಾವ ಶಾಸ್ತ್ರವೇ ಹೇಳಿದರೂ ಒಪ್ಪುವಂತಿಲ್ಲ. ಜಾಗೃತವಾದ ಆತ್ಮಸಾಕ್ಷಿ, ವೇದಗಳಲ್ಲಿ ಪೂರ್ವೋತ್ತರ ಸಂಗತವಾದ ಏಕಮಾತ್ರತೆಯನ್ನು ಕಂಡುಕೊಳ್ಳಬಲ್ಲುದು. ವೇದಗಳ ಸಮನ್ವಿತ ಸಾರವನ್ನು ತೋರಿಸುವುದಕ್ಕಾಗಿಯೇ ಬ್ರಹ್ಮಸೂತ್ರ, ಭಾರತ, ಪಂಚತಂತ್ರ, ಪುರಾಣಗಳು ನಿರ್ಮಾಣಗೊಂಡಿವೆ. ಇವಿಷ್ಟೆ ಮೂಲ ಪ್ರಮಾಣಗಳು. ಮನು ಮುಂತಾದ ಋಷಿಗಳು ರಚಿಸಿದ ಸ್ಮೃತಿಗ್ರಂಥಗಳು. ವೇದದ ಮೂಲ ಸಂದೇಶಕ್ಕೆ ಅನುಗುಣವಾಗಿದ್ದರೆ ಮಾತ್ರ ಗ್ರಾಹ್ಯ. ಅವು ಚರಮ ಪ್ರಮಾಣಗಳೇನೂ ಅಲ್ಲ. ಪ್ರತ್ಯಕ್ಷ ಮತ್ತು ಶಬ್ದದ ಜತೆಗೆ ಇನ್ನೊಂದು ಪ್ರಮಾಣ. ಅನುಮಾನ ಅಥವಾ ಯುಕ್ತಿ. ಇದು ಪ್ರಮಾಣ ಹೌದಾದರೂ ಸ್ವತಂತ್ರ ಪ್ರಮಾಣವಲ್ಲ. ಅದಕ್ಕೆಂದೇ ಅದನ್ನು ಅನು–ಮಾನ (ಅನುಸಾರಿ–ಪ್ರಮಾಣ) ಎಂದೇ ಕರೆಯುತ್ತಾರೆ. ಪ್ರತ್ಯಕ್ಷ ಮತ್ತು ಶಬ್ದಗಳಿಗೆ ಪೋಷಕ ಪ್ರಮಾಣವಾಗಿ ಮಾತ್ರವೇ ಅದನ್ನು ಬಳಸಬಹುದು. ಮುಖ್ಯವಾಗಿ ಅತೀಂದ್ರಿಯ ವಿಷಯಗಳಲ್ಲಿ ಅನುಮಾನದಿಂದ, ಯುಕ್ತಿಯಿಂದ, ಸ್ವತಂತ್ರವಾಗಿ ಏನನ್ನೂ ಸಾಧಿಸಬರುವುದಿಲ್ಲ. ಏಕೆಂದರೆ ಯುಕ್ತಿಯಿಂದ ಏನನ್ನು ಬೇಕಾದರೂ ಸಾಧಿಸಬಹುದು. ಈ ಎಚ್ಚರ ಇಲ್ಲದವರು ಯುಕ್ತಿ ಬಲದಿಂದ ಏನನ್ನೂ ಸಾಧಿಸಲಾರರು.

ಆದ್ದರಿಂದ ಅತೀಂದ್ರಿಯದ ಬಗೆಗೆ ಮುಖ್ಯವಾಗಿ ಭಗವಂತನ ಬಗೆಗೆ ಯುಕ್ತಿಗೆ ಶರಣಾಗಿ ಫಲವಿಲ್ಲ. ಭಗವಂತನಿಗೇ ಶರಣಾಗಬೇಕು. ಭಗವಂತನನ್ನು ಕಂಡ ವಿಜ್ಞಾನಿಗಳ ಆರ್ಷವಾಣಿಗೆ, ವೇದ ವಾಙ್ಮಯಕ್ಕೆ ಶರಣಾಗಬೇಕು. ಆರ್ಷವಾಣಿಯಿಂದ ಅರಿಯಬೇಕು. ಅರಿತು ಅನುಭವಿಸಬೇಕು. ಅನುಭವಿಸಿ ಕಾಣಬೇಕು. ಕಂಡು ಗೆದೆಯಬೇಕು. ಗೆದ್ದು ಪಡೆಯಬೇಕು.

ಅದಕ್ಕಾಗಿ ಭಗವಂತನಿಗೆ ಶರಣಾಗಬೇಕು. ಶರಣಾಗಿ ತಿಳಿಯಬೇಕು. ತಿಳಿದು ಮತ್ತೆ ಶರಣಾಗಬೇಕು. ಈ ಅರಿವೇ ಆನಂದದ ಕೀಲಿಗೈ. ಇದಿಷ್ಟು ಸ್ಥೂಲವಾಗಿ ಆಚಾರ್ಯರ ಅಧ್ಯಾತ್ಮ ದರ್ಶನದ ಸಾರ.

ಭೌತಿಕ ಪ್ರಪಂಚದ ಬಗೆಗೆ, ಸೃಷ್ಟಿಕ್ರಮದ ಬಗೆಗೆ, ಸೃಷ್ಟಿಗೆ ಮೂಲವಾದ ತತ್ವಗಳ ಬಗೆಗೆ ಕೂಡ ಆಚಾರ್ಯರು ಅನೇಕ ಅಪೂರ್ವ ಸಂಗತಿಗಳನ್ನು ಆವಿಷ್ಕರಿಸಿದ್ದಾರೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಬಹುದು:

೧) ವಿಶ್ವದ ಒಳಗೆ ತುಂಬಿರುವ ಪಂಚ ಭೂತಗಳಲ್ಲಿ ಒಂದಾದ ಭೂತಾಕಾಶವು ವಿಶ್ವದ ಜನತೆಗೆ ಲಯವಾಗುವಂಥದು. ಅದು ಕಣ್ಣಿಗೆ ಕಾಣದ ಅತೀತ ನೀಲದಿಂದ ತುಂಬಿಕೊಂಡಿದೆ. ವಿಶ್ವದ ಒಳಗೂ ಹೊರಗೂ ತುಂಬಿರುವ ವಿಶ್ವ ನಿರಪೇಕ್ಷವೂ, ನಿತ್ಯವೂ ಆದ ಇನ್ನೊಂದು ಆಕಾಶ ಉಂಟು. ಅದನ್ನು ಅವ್ಯಾಕೃತಾಕಾಶ ಎಂದು ಕರೆಯುತ್ತಾರೆ.

೨) ಭೌತಿಕ ದ್ರವ್ಯದ ಸೂಕ್ಷ್ಮಾವಯವಗಳಾದ ಪರಮಾಣುಗಳು ಅವಿಭಾಜ್ಯವಾದ ಅಂತ್ಯಾವಯಗಳೇನೂ ಅಲ್ಲ. ಒಂದೊಂದು ಪರಮಾಣುವಿನ ಒಳಗೂ ಅನೇಕಾನೇಕ ಸೂಕ್ಷ್ಮಾಣುಗಳು ತುಂಬಿವೆ.

೩) ವನಸ್ಪತಿಗಳಲ್ಲಿ–ಗಿಡಬಳ್ಳಿಗಳಲ್ಲಿ ಕೂಡ ಜೀವ ಸಂಚಾರವಿದೆ. ಅದು ಮನುಷ್ಯನ ಕ್ರಿಯೆಗೆ ಪ್ರತಿಕ್ರಿಯೆ ನೀಡಬಲ್ಲದು. ಒಳ್ಳೆಯ ಸಂಗೀತದ ವಾದಕ್ಕೆ ಮನಸೋತು ಚಿಗುರುವ, ಹೂ ಹಣ್ಣು ಬಿಡುವ ಗಿಡಗಳುಂಟು.

೪) ಯಾವ ವಸ್ತುವೂ ಪೂರ್ಣವಾಗಿ ನಾಶವಾಗುವುದಿಲ್ಲ. ರೂಪಾಂತರವೇ ನಾಶ. ದೇಹ ನಾಶವಾಯಿತು ಎನ್ನುತ್ತೇವೆ. ವಸ್ತುತಃ ದೇಹ ನಾಶವಾಗಲಿಲ್ಲ. ಬೂದಿಯಾಯಿತು ಅಷ್ಟೆ. ಹೀಗೆ ಭಾವ–ಅಭಾವಗಳು ಒಂದೇ ನಾಣ್ಯದ ಎರಡು ಮಗ್ಗುಲುಗಳು.

೫) ಪಿಂಡಾಂಡದಿಂದ ಬ್ರಹ್ಮಾಂಡದ ತನಕ ಇಡಿಯ ವಿಶ್ವ ಪರಸ್ಪರ ಹೆಣೆದುಕೊಂಡಿದೆ. ಯಾವುದೇ ಒಂದು ವಸ್ತುವನ್ನು ಪೂರ್ಣವಾಗಿ ಅರಿಯಬೇಕಾದರೂ ಇಡಿಯ ವಿಶ್ವವನ್ನು ಪೂರ್ಣವಾಗಿ ಅರಿತಿರಬೇಕಾಗುತ್ತದೆ. ಒಂದು ತಿಳಿದರೆ ಎಲ್ಲವೂ ತಿಳಿದೀತು. ಎಲ್ಲ ತಿಳಿಯದವನಿಗೆ ಒಂದೂ ಸರಿಯಾಗಿ ತಿಳಿದಿಲ್ಲ.

೬) ಹೆಸರು, ಒಡೆತನ, ಯೋಚನೆ, ಮಾತು, ಕೃತಿ, ವೀರ್ಯ, ಅನ್ನ, ಮನಸ್ಸು, ಇಂದ್ರಿಯ, ನೆಲ, ನೀರು, ಬೆಂಕಿ, ಗಾಳಿ, ಆಕಾಶ ಮತ್ತು ಶ್ರದ್ಧೆ–ಈ ಹದಿನೈದು ಬೇಲಿಯ ಒಳಗೆ ಹದಿನಾರನೆಯ ಜೀವಕಲೆ ಅಡಗಿದೆ. ಈ ಹದಿನೈದು ಜಡ ಬೇಲಿಗಳನ್ನು ಮುರಿದಾಗ ತನ್ನ ಅರಿವು ತನಗಾಗುತ್ತದೆ. ಇದೇ ಆತ್ಮಸಾಕ್ಷಾತ್ಕಾರ. ಹೀಗೆ ತನ್ನನ್ನು ತಾನು ಕಂಡುಕೊಂಡವನಿಗೆ ಅದರಾಚೆಗಿರುವ ಪರಮಾತ್ಮನ ಸಾಕ್ಷಾತ್ಕಾರದ ದಾರಿ ಸುಗಮವಾಗುತ್ತದೆ. ಮೊದಲು 'ಅಹಂ' ತತ್ವದ ಸಾಕ್ಷಾತ್ಕಾರ ಅನಂತರ "ಸಃ" ಎಂಬ ಪರತತ್ವದ ಸಾಕ್ಷಾತ್ಕಾರ. ಇದೇ "ಸೋಹಂ" ಸಾಕ್ಷಾತ್ಕಾರದ ರಹಸ್ಯ. ಆತ್ಮದ ಬಗೆಯೆ ಎಚ್ಚರವಿಲ್ಲದವನು ಅಥವಾ ಆತ್ಮದ ಅರಿವೆ ಕೊನೆಯ ಸಾಕ್ಷಾತ್ಕಾರ ಎಂದು ಭ್ರಮಿಸಿಕೊಂಡವನು ಪರಮಾತ್ಮ ಸಾಕ್ಷಾತ್ಕಾರದ ದಾರಿಯಲ್ಲಿ ಸಾಗಲಾರ.

ಒಟ್ಟಿನಲ್ಲಿ ಆಚಾರ್ಯ ಮಧ್ವರ ಜೀವನ–ಸಂದೇಶ ಇದು:

ಕುರು ಭುಙ್ಕ್ಷ್ವ ಚ ಕರ್ಮ ನಿಜಂ ನಿಯತಂ
ಹರಿಪಾದ ವಿನಮ್ರಧಿಯಾ ಸತತಮ್
ಹರಿರೇವ ಪರೋ ಹರಿರೇವ ಗುರು:
ಹರಿರೇವ ಜಗತ್ ಪಿತೃಮಾತೃ ಗತಿಃ (ದ್ವಾದಶ
(ಸ್ತೋತ್ರ)

(ನಿನ್ನ ಪಾಲಿನ ಕರ್ಮ ಮಾಡು ಬಂದುದನುಣ್ಣು
ಹರಿಯ ಚರಣಗಳರಿವು ತಪ್ಪದಿರಲಿ
ಹರಿಯೆ ಪರದೈವತವು ಹರಿಯೆ ಗುರು ಆಸರೆಯು
ಹರಿಯೊಬ್ಬನೇ ಜಗದ ತಾಯಿ–ತಂದೆ)

ತದಲಂ ಬಹುಲೋಕ–ವಿಚಿಂತನಯಾ
ಪ್ರವಣಂ ಕುರು ಮಾನಸಮೀಶಪದೇ
(ದ್ವಾದಶ ಸ್ತೋತ್ರ)

(ಸಾಕು ಮಾಡೀ ಜಗದ ಕಾಕು ವಾರ್ತೆಯ ಚಿಂತೆ
ನೆಲೆಗೊಳಿಸು ಬಗೆಯನ್ನು ಹರಿ ಚರಣಗಳಲಿ)

# ಕರ್ನಾಟಕದಲ್ಲಿ ವೀರಶೈವ ಧರ್ಮ

ಎಂ. ಜಿ. ನಂಜುಂಡಾರಾಧ್ಯ

ಕರ್ನಾಟಕದಲ್ಲಿ ಬಹುಸಂಖ್ಯೆಯ ಜನರು ಅವಲಂಬಿಸಿರುವ ಮತಧರ್ಮಗಳಲ್ಲಿ ವೀರಶೈವವೂ ಒಂದು. ವೀರಶೈವ ಎಂಬುದು ಒಂದು ಜಾತಿ ಅಲ್ಲ; ಅದು ಒಂದು ತತ್ವವನ್ನು ಅವಲಂಬಿಸಿರುವ ಪಂಥ. ಲಿಂಗವಂತಿಕೆ ವೀರಶೈವದ ಮುಖ್ಯ ಲಕ್ಷಣ; ಎಂದರೆ ಶಿವಲಿಂಗವನ್ನು ಮಸ್ತಕ, ಕಂಠ, ಹೃದಯ ಮುಂತಾದ ಕಡೆ ಧರಿಸುವುದು. ಲಿಂಗವು ಪರಶಿವ ಬ್ರಹ್ಮದ ಪ್ರತೀಕ.

ಶಿವಲಿಂಗವನ್ನು ಪೀಠ ಅಥವಾ ವೇದಿಕೆಯ ಮೇಲೆ ಇಟ್ಟು ಅಥವಾ ಸ್ಥಾಪಿಸಿ ಆರಾಧಿಸುವುದು ಶೈವ. ಅದೇ ಶಿವಲಿಂಗವನ್ನು ಗುರುಮುಖದಿಂದ ಶಿವದೀಕ್ಷೆಯಲ್ಲಿ ಪಡೆದು ಶರೀರದ ಮೇಲೆ ಧರಿಸುವುದು ವೀರಶೈವ.

ಅಂತರಂಗದಲ್ಲಿ ಪ್ರಾಣಲಿಂಗ ಮತ್ತು ಭಾವಲಿಂಗವೆಂದೂ ಬಾಹ್ಯದಲ್ಲಿ ಇಷ್ಟಲಿಂಗವೆಂದೂ ಭಾವಿಸಿ, ತ್ರಿವಿಧೋಪಾಸನ ಕ್ರಮದಂತೆ, ಎಂದರೆ ಇಷ್ಟ ಲಿಂಗದಲ್ಲಿ ಪ್ರಾಣ-ಭಾವಲಿಂಗಗಳನ್ನು ಏಕೀಕರಿಸಿ, ವಾಮಹಸ್ತದಲ್ಲಿಟ್ಟು ಪೂಜಿಸಿ "ಶಿವೋಹಂ ಭಾವ"ದಿಂದ "ಶಿವನೇ ನಾನು" ಎಂದು ಅನುಸಂಧಾನ ಮಾಡುವುದು ವೀರಶೈವ ಉಪಾಸನಾ ಪದ್ಧತಿ.

ಶಿವಲಿಂಗೋಪಾಸನ ಕೇವಲ ಕರ್ನಾಟಕ ಅಥವಾ ಭಾರತಕ್ಕೆ ಸೀಮಿತವಲ್ಲ. ಏಕೆಂದರೆ ಅದು ಅತ್ಯಂತ ಪುರಾತನ; ಸಿಂಧೂ ನದಿಯ ಕಣಿವೆ, ಈಜಿಪ್ಟ, ಸುಮೇರಿಯನ್ ಮತ್ತು ಅಸ್ಸೀರಿಯನ್ ಸಂಸ್ಕೃತಿಗಳನ್ನು ಒಳಗೊಂಡು ಮೆಡಿಟರೇನಿಯನ್ ಸಮುದ್ರದವರಗೂ ಹಬ್ಬಿದ್ದಿತೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅಷ್ಟೇ ಅಲ್ಲದೆ ಮೆಂಫಿಸ್ (ಉ. ಆಫ್ರಿಕಾ),ಬಾಬಿಲೋನ್ (ಟರ್ಕಿ), ಮಕ್ಕಾ, ಬ್ರೆಜಿಲ್ (ಅಮೆರಿಕ), ಕೊರಿಂಥ್ (ಗ್ರೀಸ್), ಗ್ಲಾಸ್ಗೋ (ಸ್ಕಾಟ್‌ಲೆಂಡ್), ಏಟಿಸ್ (ಫ್ರಿಜಿಯನ್) ನಿನಿವಾ, ಅಫರಿದೀಸ್ಥಾನ್, ಚಿತ್ರಾಲ, ಕಾಬೂಲ್, ಬಲಿಖ್ ಮತ್ತು ಬುಖಾರ ಮುಂತಾದ ಕಡೆಗಳಲ್ಲಿ ಶಿವಲಿಂಗಗಳು, ನಂದಿವಾಹನ ಶಿವ, ಗಣಪತಿ, ಪಾರ್ವತಿ ಮುಂತಾದ ಶೈವಮೂರ್ತಿಗಳಿರುವುದಾಗಿ ತಿಳಿದು ಬಂದಿದೆ.(೧)

ಇದಲ್ಲದೆ ಇಂದಿಗೆ ಸುಮಾರು ಐದು ಸಾವಿರ ವರ್ಷಗಳಷ್ಟು ಹಿಂದಿನದೆಂದು ತಿಳಿದುಬಂದಿರುವ ಹರಪ್ಪ-ಮೊಹೆಂಜೊದಾರೋ ಉತ್ಖನನದಲ್ಲಿ ದೊರೆತಿರುವ ವಸ್ತುಗಳಲ್ಲಿ "ಯೋಗಾರೂಢ ಶಿವಯೋಗಿ" ಶಿವಲಿಂಗ, ನಾಗ, ವೃಷಭ, ಅಶ್ವತ್ಥ ವೃಕ್ಷ, ತಾಂತ್ರಿಕ ಚಿಹ್ನೆಗಳಾದ ಚಕ್ರ, ತ್ರಿಕೋಣ, ಶಿವ, ಪಶುಪತಿ ಮುಂತಾದವು ಸೇರಿವೆ.(೨)

ಅಲ್ಲಿ ದೊರೆತಿರುವ ಹತ್ತು ಬಗೆಯ ಶಿವಲಿಂಗಗಳಲ್ಲಿ ಪೀಠ, ಗೋಮುಖಿಗಳಿಂದ ಕೂಡಿದವೂ ಇವೆ. ಇವುಗಳಲ್ಲಿ ದೊಡ್ಡವುಗಳನ್ನು ಅಂದಿನ ಜನರು ಪೀಠ ಅಥವಾ ವೇದಿಕೆಗಳಲ್ಲಿ ಇಟ್ಟು ಪೂಜಿಸುತ್ತಿದ್ದಿರಬೇಕು; ಸಣ್ಣವುಗಳನ್ನು ಪೀಡಾ ನಿವಾರಣಗಾಗಿ ಶರೀರದ ಮೇಲೆ ಧರಿಸುತ್ತಿದ್ದಿರಬೇಕೆಂದು ಊಹಿಸಲಾಗಿದೆ.

ಶೈವ ಸಂಸ್ಕೃತಿಯ ವಿವರಗಳನ್ನು ಪ್ರತಿಪಾದಿಸುವ ಆಗಮಗಳಲ್ಲಿ ಏಳು ಬಗೆಯ ಶೈವಗಳು ಉಕ್ತವಾಗಿವೆ ಮತ್ತು ವೇದಾಗಮಗಳಲ್ಲಿ ಶಿವಲಿಂಗಗಳನ್ನು ಸಂಸ್ಕರಿಸುವ, ಪ್ರಾಣ ಪ್ರತಿಷ್ಠೆ ಮಾಡುವ ಮತ್ತು ಅವುಗಳನ್ನು ಧರಿಸಿ, ಅರ್ಚಿಸುವ ಕ್ರಮಗಳು ನಿರೂಪಿತವಾಗಿವೆ. ನಿಗಮ (ವೇದ) ಮತ್ತು ಆಗಮಗಳು ಒಬ್ಬನೇ ಪರಮೇಶ್ವರನ ಸ್ಪಷ್ಟ ಮತ್ತು ಅಸ್ಪಷ್ಟವಾಣಿ ಎಂಬುದು ಭಾರತ ಸಂಸ್ಕೃತಿಯ ನಂಬುಗೆ.

### ಶೈವ ಪ್ರಭೇದಗಳು

ಅನಾದಿ ಶೈವ, ಆದಿ ಶೈವ, ಅನುಶೈವ, ಅವಾಂತರ ಶೈವ, ಅನ್ಯ ಶೈವ ಮತ್ತು ವೀರಶೈವ ಎಂಬ ಏಳು ಬಗೆಯ ಪ್ರಭೇದಗಳನ್ನು ಸೂಕ್ಷ್ಮಾಗಮವು ನಿರ್ದೇಶಿಸಿದೆ. (ಸೂ. ಆ. ೭-೪-೧೮)

ಪಾರಮೇಶ್ವರ ತಂತ್ರದಲ್ಲಿ ವೀರಶೈವ, ಅನಾದಿ ಶೈವ, ಆದಿಶೈವ, ಮಹಾಶೈವ, ಅನುಶೈವ, ಯೋಗಶೈವ, ಮತ್ತು ಜ್ಞಾನಶೈವ ಎಂಬ ಸಪ್ತವಿಧ ಶೈವಗಳು ಉಕ್ತವಾಗಿವೆ.೩

---

೧. ನಿರ್ಮಾಲ್ಯ ರತ್ನಾಕರ- ಮಿ. ಬಾಬೂ ಬೇಚೂ ಸಿಂಹ.

೨. ಭಾರತೀಯ ಸಂಸ್ಕೃತಿ-ಡಾ. ಎಸ್. ಶ್ರೀಕಂಠ ಶಾಸ್ತ್ರಿ, ಮೈಸೂರು ವಿಶ್ವವಿದ್ಯಾಲಯ ಪ್ರಕಟಣೆ (ಪು. ೪೯).

೩. ಶೈವಂ ಸಪ್ತವಿಧಂ ಪುಣ್ಯಂ ವೀರಶೈವಾದಿ ಭೇದತಃ|
ವೀರಶೈವಂ ತಥಾನಾದಿಶೈವಮಾದಿಪದಂ ತತಃ||
ಅನುಶೈವಂ, ಮಹಾಶೈವಂ, ಯೋಗಶೈವಂತು ಷಷ್ಠಕಂ|
ಸಪ್ತಮಂ ಜ್ಞಾನಶೈವಾಖ್ಯಂ ತತ್ರ ಸರ್ವೋತ್ತಮೋತ್ತಮಂ||
ವೀರಶೈವಮಿತೀಶಾನಿ ತದಂಗಾನೀತರಾಣಿತು||
ಗಾಣಪತ್ಯಂ ವೈರಭದ್ರಂ ಭೈರವಂ ಶರಭಾಭಿಧಂ|
ನಾಂದಿಕೇಶಂಚಕೌಮಾರಂ ಪೈಶಾಚಮಿತಿ ಸಪ್ತಧಾ||
- ಪಾರಮೇಶ್ವರ ೧-೨೨-೨೫

ಇಲ್ಲಿ ವೀರಶೈವಕ್ಕೆ ಮೊದಲ ಸ್ಥಾನ ಕೊಟ್ಟಿರುವುದಲ್ಲದೆ ಯೋಗ ಮತ್ತು ಜ್ಞಾನಶೈವಗಳನ್ನು ಒಳಗೊಂಡಿರುವ ವೀರ ಶೈವವು ಎಲ್ಲಾ ಶೈವಗಳಿಗಿಂತಲೂ ಶ್ರೇಷ್ಠವೆಂದೂ, ಉಳಿದವು ಅದರ ಅಂಗಗಳೆಂದೂ ಹೇಳಿದೆ. ಇವಲ್ಲದೆ ಗಾಣಪತ್ಯ, ವೈರಭದ್ರ, ಭೈರವ, ಶಾರಭ, ನಾಂದಿಕೇಶ, ಕೌಮಾರ ಹಾಗೂ ಪೈಶಾಚ ಎಂಬ ಪ್ರಭೇದಗಳೂ ಇರುವುದಾಗಿ ಹೇಳಿದೆ.

ಕಾಲಕ್ರಮದಲ್ಲಿ ರಾಜಕೀಯ ಆಂದೋಲನಗಳ ಫಲವಾಗಿ ಶೈವ ಸಂಸ್ಕೃತಿ ಪ್ರಪಂಚದಲ್ಲಿ ಹ್ರಾಸವಾಗುತ್ತಾ ಬಂದು ಭಾರತದಲ್ಲಿ ನೆಲೆಯೂರಿತು. ಶೈವ ಸಂಸ್ಕೃತಿ ಅನಾದಿ ಕಾಲ ದಿಂದ ಭಾರತಾದ್ಯಂತ ವ್ಯಾಪಿಸಿರುವ ಬಗೆಗೆ ದ್ವಾದಶ ಜ್ಯೋತಿ ರ್ಲಿಂಗಗಳು ನಿದರ್ಶನ.

ಸೌರಾಷ್ಟ್ರದಲ್ಲಿ ಸೋಮನಾಥ, ಶ್ರೀಶೈಲದಲ್ಲಿ ಮಲ್ಲಿ ಕಾರ್ಜುನ, ಉಜ್ಜಯಿನಿಯಲ್ಲಿ ಮಹಾಕಾಲ, ಅಮಲೇಶ್ವರದಲ್ಲಿ ಓಂಕಾರೇಶ್ವರ, ಪರಳಿಯಲ್ಲಿ ವೈದ್ಯನಾಥ, ಡಾಕಿನಿಯಲ್ಲಿ ಭೀಮಶಂಕರ, ಸೇತುಬಂಧದಲ್ಲಿ ರಾಮೇಶ್ವರ, ದಾರುಕವನ ದಲ್ಲಿ ನಾಗೇಶ, ವಾರಣಾಸಿಯಲ್ಲಿ ವಿಶ್ವೇಶ್ವರ, ಗೌತಮೀ ತಟದಲ್ಲಿ ತ್ರ್ಯಂಬಕ, ಹಿಮಾಲಯದಲ್ಲಿ ಕೇದಾರೇಶ್ವರ ಮತ್ತು ಶಿವಾಲಯದಲ್ಲಿ ಘಸೃಣೇಶ್ವರ ಎಂಬ ಲಿಂಗಗಳು, ಅನಾದಿ ಕಾಲದಿಂದ ಸ್ವಯಂಭುಗಳೆನಿಸಿ ಪ್ರಖ್ಯಾತವಾಗಿವೆ.

ಇದಲ್ಲದೆ ಉತ್ತರ ಮತ್ತು ದಕ್ಷಿಣ ಭಾರತಗಳೆರಡ ರಲ್ಲಿಯೂ ಪರಶಿವನ ಅಷ್ಟಮೂರ್ತಿಗಳ ಪ್ರತೀಕಗಳೆನಿಸಿ ರುವ ಪಂಚ ಮಹಾಭೂತ ಶಿವಲಿಂಗಗಳ ದಿವ್ಯ ಕ್ಷೇತ್ರಗಳಿವೆ.

ಶಿವನ ಅಷ್ಟ ಮೂರ್ತಿಗಳು, ಸೂರ್ಯ, ಚಂದ್ರ, ಯಜ ಮಾನ, ಪೃಥಿವಿ, ಅಪ್ಪು, ತೇಜಸ್ಸು, ವಾಯು ಮತ್ತು ಆಕಾಶ ಗಳು ಇವುಗಳಿಗೆ ಕ್ರಮವಾಗಿ ಈಶಾನ, ಮಹಾದೇವ, ಪಶುಪತಿ, ಭೀಮ, ಉಗ್ರ, ರುದ್ರ, ಭವ ಮತ್ತು ಶಿವ ಎಂಬ ಅಷ್ಟಾಭಿ ಧಾನಗಳಿವೆ. ಈಶಾನ ಸೂರ್ಯಮೂರ್ತಿ; ಮಹಾದೇವ ಸೋಮ ಮೂರ್ತಿ–ಕಾಠಿಯವಾಡದ ಸೋಮನಾಥ ಮತ್ತು ಬಂಗಾಳ ದಲ್ಲಿರುವ ಚಂದ್ರನಾಥರು ಈ ತತ್ವಕ್ಕೆ ಸೇರಿದವರು. ನೇಪಾ ಲದ ಪಶುಪತಿನಾಥ ಯಜಮಾನಮೂರ್ತಿ, ಚಿದಂಬರೇಶ್ವರ ಲಿಂಗವು ಆಕಾಶಮೂರ್ತಿ, ಕಾಳಹಸ್ತಿಯಲ್ಲಿರುವುದು ವಾಯು ಮೂರ್ತಿ, ತಿರುವಣ್ಣಾಮಲೆಯ ಅರುಣಾಚಲೇಶ್ವರ ತೇಜೋ ಲಿಂಗ, ಜಂಬುಕೇಶ್ವರದ್ದು ಜಲಲಿಂಗ, ಕಂಚಿಯ ಏಕಾಮ್ರೇ ಶ್ವರ ಕ್ಷಿತಿಲಿಂಗ ಇವು ಸ್ಥಾವರಗಳಾದ್ದರಿಂದ ಶೈವ ಕ್ಷೇತ್ರ ಗಳು.

ಇದರಂತೆ ವೀರಶೈವ ಮತಾಚಾರ್ಯರ ಐದು ಧರ್ಮ ಪೀಠಗಳೂ ಭಾರತಾದ್ಯಂತ ಅನಾದಿಕಾಲದಿಂದ ನಡೆದು ಬಂದಿವೆ. ಹಿಮವತ್ಕೇದಾರದ ಓಖೀಮಠದಲ್ಲಿ ಏಕೋರಾಮಾಚಾರ್ಯರ ವೈರಾಗ್ಯ ಸಿಂಹಾಸನ, ವಾರಣಾಸಿಯಲ್ಲಿ ವಿಶ್ವಾರಾಧ್ಯರ ಜ್ಞಾನ ಸಿಂಹಾಸನ, ಮಹಾಕಾಲ ಉಜ್ಜಯಿನಿಯಲ್ಲಿ ಮರುಳಾರಾಧ್ಯರ ಧರ್ಮಸಿಂಹಾಸನ, ಪ್ರಕೃತ ಈ ಪೀಠವು ಕರ್ನಾಟಕದಲ್ಲಿ ಉಜ್ಜಿನಿ (ಚಿತ್ರದುರ್ಗ ಜಿಲ್ಲೆ)ಯಲ್ಲಿದೆ. ಶ್ರೀ ಶೈಲದಲ್ಲಿ ಪಂಡಿತಾರಾಧ್ಯರ ಸೂರ್ಯಸಿಂಹಾಸನ, ಪ್ರಕೃತ ಈ ಪೀಠವೂ ಕರ್ನಾಟಕದಲ್ಲಿ ನಿಡುಮಾಮಿಡಿ, ಗೂಳೂರುಗಳಲ್ಲಿ (ಕೋಲಾರ ಜಿಲ್ಲೆ) ಇದೆ. ರಂಭಾಪುರಿಯಲ್ಲಿ (ಚಿಕ್ಕಮಗಳೂರು ಜಿಲ್ಲೆ) ರೇಣುಕಾಚಾರ್ಯರ ವೀರ ಸಿಂಹಾಸನ ಪೀಠಗಳಿವೆ. ಈ ಪೀಠಾ ಚಾರ್ಯರ ಪರಂಪರೆ ಸನಾತನ ಕಾಲದಿಂದ ನಡೆದುಬಂದಿದೆ.

**ವೀರಶೈವ ಸಿದ್ಧಾಂತ ಪ್ರತಿಪಾದಕ ಸಾಹಿತ್ಯ**

ಶಂಕರಾದಿ ಆಚಾರ್ಯರು ಪ್ರಸ್ಥಾನತ್ರಯ (ಬ್ರಹ್ಮಸೂತ್ರ–ಉಪನಿಷತ್ತು ಮತ್ತು ಸ್ಮೃತಿ (ಗೀತ) ಮುಂತಾದುವುಗಳ ಮೇಲೆ ಭಾಷ್ಯಗಳನ್ನು ಬರೆದು ತಮ್ಮ ತಮ್ಮ ಸಿದ್ಧಾಂತ ಗಳನ್ನು ಪ್ರತಿಪಾದಿಸಿರುವಂತೆ ರೇಣುಕಾದಿ ಆಚಾರ್ಯರು ಕೂಡ ವೇದ, ಆಗಮ–ಉಪನಿಷತ್ತು ಬ್ರಹ್ಮಸೂತ್ರ, ಶಿವಸೂತ್ರ ಮತ್ತು ಪುರಾಣಗಳ ಆಧಾರದ ಮೇಲೆ ವೀರಶೈವ ಸಿದ್ಧಾಂತ ಪ್ರತಿಪಾದನೆ ಮಾಡಿದ್ದಾರೆ.

ಉಪದೇಶಂ ಆಗಮೋಕ್ತಂ ಕುರ್ವಂತಿ ವಸುಧಾತಲೇ|
ತ ಏತೇ ಗುರವಸ್ಸರ್ವೇ ಕೈಲಾಸಸ್ಥ ಗಣೇಶರಾಃ
(೬೭೧)

ಎಂಬ ವೀರಾಗಮ(೧) ಸೂತ್ರಕ್ಕೆ ಭಾಷ್ಯವನ್ನು ಬರೆದಿರುವ ಕಾಶೀ ಕಾಂಡ ಚನ್ನವೀರಕೃತ ವ್ಯಾಖ್ಯಾನದಲ್ಲಿ ಮೇಲೆ ಹೇಳಿದ ವೀರ ಶೈವ ಮತಾಚಾರ್ಯರು ರಚಿಸಿರುವ ತಂತ್ರ ಗ್ರಂಥಗಳ ಉಲ್ಲೇಖವಿದೆ. ಇವುಗಳಲ್ಲಿ ರೇಣುಕಾಗಸ್ತ್ಯ ಸಂವಾದ ರೂಪ ವಾದ "ರೇಣುಕ ತಂತ್ರವನ್ನು" ಆಧರಿಸಿ ಶಿವಯೋಗಿ ಶಿವಾ ಚಾರ್ಯರು (ಕ್ರಿ. ಶ. ಸು. ೭೦೦) ರಚಿಸಿರುವ ಸಿದ್ಧಾಂತ ಶಿಖಾ ಮಣಿ ನಮಗೆ ಉಪಲಬ್ಧವಾಗಿದೆ. ಇದರಲ್ಲಿ ವೀರಶೈವದ ೧೦೧ (ಏಕೋತ್ತರ ಶತಸ್ಥಲ) ಸ್ಥಲಗಳ ಪ್ರತಿಪಾದನ ಸುಂದರವಾಗಿ ಬರೆಯಲ್ಪಟ್ಟಿದೆ.

ಎರಡನೆಯದಾಗಿ ರೇಣುಕರಿಂದ ಶಿವಸಿದ್ಧಾಂತ ತತ್ತ್ವೋಪದೇಶವನ್ನು ಪಡೆದು ಅಗಸ್ತ್ಯರು ಬ್ರಹ್ಮಸೂತ್ರ ಗಳಿಗೆ ಬರೆದಿರುವ ವೈಯಾಸಿಕ ಸೂತ್ರ ವೃತ್ತಿಯನ್ನು ಆಧರಿಸಿ ಶ್ರೀಪತಿ ಪಂಡಿತಾರಾಧ್ಯರು (ಕ್ರಿ. ಶ. ಸು. ೧೦೬೦) ಬರೆದಿರುವ ಶ್ರೀಕರ ಭಾಷ್ಯ ಪ್ರಸಿದ್ಧವಾಗಿದೆ.(೨)

ಅಗಸ್ತ್ಯಮುನಿಚಂದ್ರೇಣ ಕೃತಾಂ ವೈಯಾಸಿಕೀಂ ಶುಭಾಂ||
ಸೂತ್ರವೃತ್ತಿಂ ಸಮಾಲೋಕ್ಯ ಕೃತಂ ಭಾಷಂ ಶಿವಂ
ಕರಂ||

ಎಂಬ ಕಾರಿಕೆ ಶ್ರೀಕರ ಭಾಷ್ಯದ ಪ್ರಾರಂಭದಲ್ಲಿದೆ. "ಶ್ರೀಕರ ಭಾಷ್ಯ" ಸಿದ್ಧಾಂತ ಶಿಖಾಮಣಿಯನ್ನು ಪ್ರಮಾಣವಾಗಿ ಉಲ್ಲೇಖಿ ಸಿದೆ.

ಇನ್ನು ವೀರಾಗಮ ವ್ಯಾಖ್ಯೆಯಲ್ಲಿ ಉಕ್ತವಾಗಿರುವ ದಾರುಕ ದಧೀಚಿ ಸಂವಾದ ರೂಪ "ದಾರುಕ ತಂತ್ರ", ಘಂಟಾಕರ್ಣ–ಉಪಮನ್ಯು ಸಂವಾದ ರೂಪ "ಘಂಟಾಕರ್ಣನ ತಂತ್ರ", ಗಜ ಕರ್ಣ–ದೇವಲ ಸಂವಾದ ರೂಪ "ಗಜಕರ್ಣ ತಂತ್ರ"ಗಳು ಉಪಲಬ್ಧವಾಗಿಲ್ಲ.

ಶಕ್ತಿ ವಿಶಿಷ್ಟ ಪರಶಿವ ಬ್ರಹ್ಮವನ್ನು ಒಪ್ಪಿರುವ ಶಿವಾ ದ್ವೈತದ ೩೬ ತತ್ವಗಳ ಪ್ರತಿಪಾದನವು ಐತಿಹಾಸಿಕವಾಗಿ ನಮಗೆ ದೊರೆಯುವುದು ಆಚಾರ್ಯ ನಂದಿಕೇಶ್ವರನ (ಕ್ರಿ. ಪೂ. ೭೦೦) ಮಾಹೇಶ್ವರ ಸೂತ್ರಗಳ ವ್ಯಾಖ್ಯೆಯಾದ "ನಂದಿ ಕೇಶ್ವರ ಕಾರಿಕೆ"ಗಳಲ್ಲಿ.

———

೧. ಇದು ಅಪ್ರಕಟಿತ ಹಸ್ತಪ್ರತಿಯಿಂದ ಉದ್ಧರಿಸಿದೆ. (ಡಾ. ಜ. ಚ. ನಿ.) ವೀರಾಗಮಕ್ಕೆ ಯೋಗಂಟಿ ಕಾಶೀಕಾಂಡ ಚನ್ನವೀರ ಕೃತ ವ್ಯಾಖ್ಯಾನವಿದೆ. (ಸಂ)

೨. ಶ್ರೀಕರ ಭಾಷ್ಯ ೧ ಮತ್ತು ೨ ಸಂಪುಟಗಳು (ಮೈಸೂರು ಪ್ರಾಚ್ಯ ಸಂಶೋಧನಾ ಸಂಸ್ಥೆ ೧೯೭೭–೭೯)

ನಂದಿಕೇಶ್ವರ ಪ್ರಮಥ ಗಣಗಳಲ್ಲಿ ಮೊದಲಿಗ. ಆತ ಪರಶಿವನ, ಡಮರುವಿನಿಂದ ಧ್ವನಿಸಿದ "ಅ–ಇ–ಉ–ಣ್" ಮುಂತಾದ ೧೪ ಸೂತ್ರಗಳಿಗೆ ಬ್ರಹ್ಮಪರವಾಗಿಯೂ ಅವನ ಶಿಷ್ಯಪಾಣಿನಿ (ಕ್ರಿ. ಪೂ. ೭೦೦)ಯು ಶಬ್ದ ಶಾಸ್ತ್ರ ಪರವಾಗಿಯೂ ವ್ಯಾಖ್ಯೆಗಳನ್ನು ಬರೆದಿರುವುದಾಗಿ ವ್ಯಾಕರಣ ಮಹಾ ಭಾಷ್ಯದ ಪ್ರದೀಪೋದ್ಯೋತದಲ್ಲಿ ಹೇಳಿದೆ. (೧)

ಅಕಾರೋಬ್ರಹ್ಮರೂಪಃ ಸ್ಯಾತ್ ನಿರ್ಗುಣಃ ಪರಮೇಶ್ವರಃ
ಚಿತ್ಕಲಾಮಿಂ ಸಮಾಶ್ರಿತ್ಯ ಜಗದ್ರೂಪ ಉಣೀಶ್ವರಃ(೨)

ಎಂಬ ನಂದಿಕೇಶ್ವರ ಕಾರಿಕೆಗೆ (ಅ) ನಿರ್ಗುಣ ಪರಮೇಶ್ವರನು (ಇ) ಚಿತ್ ಕಲೆಯನ್ನು ಆಶ್ರಯಿಸಿ (ಉ) ಸಗುಣನೂ, ವ್ಯಾಪಕನೂ (ಣ್) ಆದನು. ಪರಶಿವನು ಚಿತ್‌ಶಕ್ತಿಯ ಸಹಾಯದಿಂದ ಜಗತ್ತನ್ನು ಸೃಜಿಸಿದನು. ಈ ಆಶಯವನ್ನು ಸಿದ್ಧಾಂತ ಶಿಖಾಮಣಿಯು

ಅಕಾರಃ ಶಿವಅಖ್ಯಾತಃ ಹಂಕಾರಶ್ಶಕ್ತಿರುಚ್ಯತೇ|
ಶಿವಶಕ್ತಿ ಮಯಂಬ್ರಹ್ಮ ಸ್ಥಿತಮೇಕ ಮಹಂಪದೇ॥
(ಸಿ. ಶಿ. ಪಂ. ೨೦)

ಎಂಬ ಶ್ಲೋಕವು ಸಮರ್ಥಿಸಿದೆ. ಇಲ್ಲಿ ಪರಶಿವ ಬ್ರಹ್ಮದ ಶಕ್ತಿ ವಿಶಿಷ್ಟತನವು ಸ್ಪಷ್ಟವಾಗಿರುವುದಲ್ಲದೆ ಕಾರಿಕೆಗಳಲ್ಲಿ ೩೬ ತತ್ತ್ವಗಳ ಪ್ರತಿಪಾದನವೂ ಸುಂದರವಾಗಿ ನಿರೂಪಿತವಾಗಿದೆ.

ಇನ್ನೂ ವಿದ್ಯಾರಣ್ಯಕೃತ ಶಂಕರ ದಿಗ್ವಿಜಯದಲ್ಲಿ (ಸರ್ಗ ೧೫) ಶಿವಸೂತ್ರ ಬ್ರಹ್ಮಸೂತ್ರ ಕರ್ತೃವೆಂದು ಉಲ್ಲೇಖಿಸುವ ಶ್ರೀ ನೀಲಕಂಠಶಿವಾಚಾರ್ಯರು ತಮ್ಮ ಶಿಷ್ಯಹರದತ್ತಾಚಾರ್ಯರೊಡನೆ ಗೋಕರ್ಣದಲ್ಲಿ ಆದಿಶಂಕರಾಚಾರ್ಯ (ಕ್ರಿ. ಶ ೮೦೦)ರನ್ನು ಸಂಧಿಸಿ ವಾಕ್ಯಾರ್ಥ ನಡೆಸಿದರೆಂದು ಹೇಳಿದೆ. ಇವರನ್ನು "ಆನಂದಗಿರಿ" ತನ್ನ "ಶಂಕರ ವಿಜಯ"ದಲ್ಲಿ ಶಿರೋಲಿಂಗಧಾರಿ ಜಂಗಮರೆಂದು ಉಲ್ಲೇಖಿಸಿದೆ. ಶ್ರೀಮನ್ನೀಲಕಂಠಶಿವಾಚಾರ್ಯರು ರಚಿಸಿದ್ದ ಬ್ರಹ್ಮಸೂತ್ರ ಭಾಷ್ಯವು ಇಂದು ಉಪಲಭ್ಯವಿಲ್ಲ. ಆದರೂ ಮತ್ತೊಬ್ಬ ನೀಲಕಂಠಶಿವಾಚಾರ್ಯರು (ಕ್ರಿ. ಶ. ೧೪೦೦) ಈ ಭಾಷ್ಯದ ಮೇಲೆ ರಚಿಸಿರುವ "ಕ್ರಿಯಾಸಾರ"ದ ಮೊದಲ ನಾಲ್ಕು ಉಪದೇಶಗಳು; ಮೂಲ ನೀಲಕಂಠ ಭಾಷ್ಯದ ಕಾರಿಕಾರೂಪ ಭಾಷಾಂತರ. ಕ್ರಿಯಾಸಾರದ ಪ್ರಾರಂಭದಲ್ಲಿ ಬರುವ–

ನೀಲಕಂಠ ಶಿವಾಚಾರ್ಯನಾಮ್ನಾ ಭಾಷ್ಯಮಚೀಕರತ್
ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದನಮುತ್ತಮಂ॥
ಮಯಾಪಿ ತಸ್ಯತಾತ್ಪರ್ಯಂ ಪ್ರೋತೃಣಾಂ ಸುಖಿ
ಬುದ್ಧಯೇ
ಕಾರಿಕಾರೂಪತಃ ಸರ್ವಂಕ್ರಮೇಣೈವನಿಬದ್ಧ್ಯತೆ
(ಕ್ರಿಯಾಸಾರ ಉ. ೧)

ಈ ಕಾರಿಕೆಗಳು ಮೇಲಿನ ಅರ್ಥವನ್ನು ಸಮರ್ಥಿಸಿವೆ. ಶ್ರೀಕರ ಭಾಷ್ಯದಲ್ಲಿಯೂ ನೀಲಕಂಠ ಭಾಷ್ಯದ ಉಲ್ಲೇಖಗಳಿವೆ. ಈ ನೀಲಕಂಠ ಶಿವಾಚಾರ್ಯರು ಶ್ರೀ ಶೈಲ ಪೀಠ ಪರಂಪರೆಗೆ ಸೇರಿದವರು. (೩) ಇವರು ಗೋಕರ್ಣದಲ್ಲಿ ಆಚಾರ್ಯ ಶಂಕರರನ್ನು ಪ್ರತಿಭಟಿಸಿದ ಫಲವಾಗಿ ಇವರಿಗೆ "ಗೋಕರ್ಣಾಚಾರ್ಯರೆಂಬ" ಪರ್ಯಾಯ ನಾಮವಿದೆ. ಹಾಗೂ ಶ್ರೀಶೈಲ ಶಾಖೆಗೆ "ಧೇನುಕರ್ಣ" ಎಂಬ ಹೆಸರೂ ಉಂಟು.

ಶ್ರೀ ಶೈಲದ ವಿರೂಪಾಕ್ಷ ದೇಶಿಕೇಂದ್ರರು ಶಾಸನೋಕ್ತರಾದ (೪) ಇಮ್ಮಡಿ ಪಂಡಿತಾರಾಧ್ಯರ (ಕ್ರಿ.ಶ. ೯೦೦) ಕರಕಮಲ ಸಂಜಾತರು. ಶ್ರೀಪತಿ ಪಂಡಿತ (ಕ್ರಿ. ಶ. ೧೦೬೦)ರ ದೀಕ್ಷಾ ಗುರುಗಳು. ಇವರನ್ನು ಶ್ರೀಕರ ಭಾಷ್ಯದಲ್ಲಿ "ದೇಶಿಕೇಂದ್ರ" "ಶರಣ" ಏಕೋರಾಮ ಸಿದ್ಧ" ಮುಂತಾಗಿ ವರ್ಣಿಸಲಾಗಿದೆ. ಮತ್ತು ತಮ್ಮ ಭಾಷ್ಯದ ಪ್ರಾರಂಭದ ಎರಡು ಪದ್ಯಗಳಲ್ಲಿ ಇವರನ್ನೂ ಸ್ತುತಿಸಿದ್ದಾರೆ.

ಸರ್ವಭೂತಹಿತಃ ಶಾಂತಃ ತ್ರಿದಂಡೀಸಕಮಂಡಲುಃ |
ಏಕೋರಾಮಃ ಪರಿವ್ರಜ್ಯ ಭಿಕ್ಷಾರ್ಥೀ ಗ್ರಾಮಾವಿಶೇತ್
ಯಾಜ್ಞವಲ್ಕ್ಯಸ್ಮೃತಿ (ಯತಿ ಪ್ರಕರಣ)

ಎಂಬ ಲಕ್ಷಣವು ಈ ಮಹಾನುಭಾವರಿಗೆ ಅನ್ವಯಿಸಿದಂತೆ ಅಲ್ಲಿ ವರ್ಣಿಸಲಾಗಿದೆ.

ಚಂದ್ರಗುಂಡ ದೇಶಿಕೇಂದ್ರರು ಏಕೋರಾಮ ಸಿದ್ಧ (ವಿರೂಪಾಕ್ಷ) ಭಗವತ್ಪಾದರ ಶಿಷ್ಯರು. ಬಸವ ಪೂರ್ವ ಯುಗದ ದೇವರ ದಾಸಿಮಾರ್ಯರು ಚಂದ್ರಗುಂಡರಿಂದ ಶಿವದೀಕ್ಷೆ ಪಡೆದವರು. ಶ್ರೀ ಶೈಲದಲ್ಲಿ ಶ್ರೀ ಚಂದ್ರಗುಂಡರ ಮೊದಲ ಅನುಭವ ಮಂಟಪದಲ್ಲಿ (೫) ನುರಿತ ದೇವರದಾಸಿ ಮಾರ್ಯರು ರಚಿಸಿರುವ ಕನ್ನಡ ವಚನಗಳು ಪ್ರಕಟವಾಗಿವೆ. ಬಸವಾದಿ ಶಿವಶರಣರು ದೇವರದಾಸಿಮಾರ್ಯರನ್ನು ಮೇಲಿಂದ ಮೇಲೆ ನೆನೆಯುತ್ತಿರುತ್ತಾರೆ.

ದೇವರ ದಾಸಿಮಾರ್ಯರ ಸಮಕಾಲೀನರಾಗಿದ್ದ ಶಿವಶರಣರಲ್ಲಿ ಶಂಕರ ದಾಸಿಮಯ್ಯ, ಕೊಂಡುಗುಳಿ ಕೇಶಿರಾಜ, ವೀರ ಶಂಕರದೇವ, ಶಿವದಾಸಿಮಯ್ಯ, ಕೆಂಭಾವಿ ಭೋಗಣ್ಣ, ತುರುಗಾಹಿ ರಾಮಣ್ಣ, ಸಿರಿಯಾಳ, ಸಿಂಧು ಬಲ್ಲಾಳ, ಡೋಹರ ಕಕ್ಕಯ್ಯ, ಡಕ್ಕೆಯ ಮಾರಯ್ಯ, ಮಾದರ ಚೆನ್ನಯ್ಯ, ಮಲ್ಲರಸ ಮುಂತಾದವರು ಮುಖ್ಯರು.

**೧೨ ನೇ ಶತಮಾನದ ವೀರಶೈವ ಉತ್ಕ್ರಾಂತಿಗೆ ಆರಾಧ್ಯ ಸಂಪ್ರದಾಯದ ಕೊಡುಗೆ**

ಬಸವಣ್ಣನವರ ಧರ್ಮಸ್ಫೂರ್ತಿಗೆ, ವಿಚಾರಕ್ರಾಂತಿಗೆ ತಕ್ಕ ಹಿನ್ನೆಲೆಯನ್ನು ಕಲ್ಪಿಸಿದ ಕೀರ್ತಿ ಬಸವಪೂರ್ವಯುಗಕ್ಕೆ ಸೇರಿದ ಆರಾಧ್ಯ ಸಂಪ್ರದಾಯಕ್ಕೆ ಸೇರಿದ್ದು.

ಆರಾಧ್ಯ ಸಂಪ್ರದಾಯ ಮುಖ್ಯವಾಗಿ ಸಿದ್ಧತ್ರಯ, ಆಚಾರ್ಯತ್ರಯ, ಆರಾಧ್ಯತ್ರಯ ಮತ್ತು ಪಂಡಿತ ತ್ರಯ ಎಂಬ ಹನ್ನೆರಡು ಮಂದಿ ಮಹನೀಯರ ಪರಂಪರೆಯನ್ನು ಹೇಳುತ್ತದೆ. ರೇವಣಸಿದ್ಧ, ಮರುಳಸಿದ್ಧ ಮತ್ತು ಏಕೋರಾಮ ಸಿದ್ಧರದು ಸಿದ್ಧತ್ರಯ. ಶ್ವೇತಾಚಾರ್ಯ, ಲಕುಲೀಶಾಚಾರ್ಯ, ನೀಲಕಂಠ ಶಿವಾಚಾರ್ಯರದು ಆಚಾರ್ಯತ್ರಯ. ಉದ್ಭಟಾರಾಧ್ಯ, ಕೋಟಿ ಪಲ್ಲಾರಾಧ್ಯ ಮತ್ತು ವೇಮಾರಾಧ್ಯರದು ಆರಾಧ್ಯತ್ರಯ. ಶ್ರೀಪತಿ ಪಂಡಿತ, ಮಂಚಣ ಪಂಡಿತ, ಮಲ್ಲಿಕಾರ್ಜುನ ಪಂಡಿತರದು ಪಂಡಿತತ್ರಯ. ಪ್ರಾಯಃ ಇವರೆಲ್ಲರೂ ಮಹಾ ವಿದ್ವಾಂಸರು. ವೀರಶೈವ ಸಿದ್ಧಾಂತವನ್ನು ವೇದ, ಆಗಮ, ಉಪನಿಷತ್ತುಗಳ ಆಧಾರದ ಮೇಲೆ ಸ್ಥಾಪಿ

---

(೧) (ಅ. ೧. ಪಾ. ೧. ಆ ೨. ಪು. ೯೦)
(೨) ಇಲ್ಲಿ ನಿರ್ಗುಣ ಪದಕ್ಕೆ ಹೇಯಗುಣಗಳಿಲ್ಲದವನು ಎಂದು ಅರ್ಥ.
(೩) ಶ್ರೀ ಶೈಲ ಪೀಠದ ದರ್ಶನ (ಪು.೧೩೨).
(೪) ಕರ್ನೂಲು ಜಿಲ್ಲಾ ಪಾಣಂ (ನಂ. ೧೯೭ ಎಂಬಲ್ಲಿನ ಶಿಲಾಶಾಸನದಲ್ಲಿ ಇವರ ಹೆಸರಿದೆ.
೫. ದೇವರ ದಾಸಿ ಮಾರ್ಯ ಪ್ರಶಸ್ತಿ. ಡಾ. ಫ. ಗು. ಹಳಕಟ್ಟಿ ಅವರ ಲೇಖನ (ಪು. ೪೦೦)

ಸಿದ ಕೀರ್ತಿ ಅವರದು. ಹಿಂದೆ ಹೇಳಿದ ವೀರಶೈವ ಸಿದ್ಧಾಂತ ಪ್ರತಿಪಾದಕ ಸಾಹಿತ್ಯ ಅವರ ಪಾಂಡಿತ್ಯ, ಪ್ರತಿಭೆ, ಮತ್ತು ಅನುಭವಗಳ ಅಪೂರ್ವ ಕೊಡುಗೆ.

ಆರಾಧ್ಯ ಸಂಪ್ರದಾಯ ತನ್ನನ್ನು "ಅತ್ಯಾಶ್ರಮಿ" (೧) ಎಂದು ಹೇಳಿಕೊಳ್ಳುತ್ತದೆ. ಇಲ್ಲಿ ಆಶ್ರಮ ಪದವು ವರ್ಣಕ್ಕೂ ಸಂಕೇತ ಎಂದರೆ ಅತ್ಯಾಶ್ರಮ ಪದಕ್ಕೆ ವರ್ಣ ಮತ್ತು ಆಶ್ರಮಗಳನ್ನು ಮೀರಿದ್ದು ಎಂದು ಅರ್ಥ. ಆದರೆ ತಿರಸ್ಕರಿಸಿದ್ದು ಎಂಬ ಅರ್ಥವಲ್ಲ. ಬದಲಾಗಿ ಅತಿಶಯವಾದ ವರ್ಣಾಶ್ರಮಗಳನ್ನು ಹೊಂದಿರುವುದು ಎಂದು ಅರ್ಥ. ಈ ಅತಿಶಯವು ಯಾವುದು ಎಂದರೆ ಮಾನವನು ಪ್ರಾಕೃತವಾದ ಯಾವುದೇ ವರ್ಣ ಮತ್ತು ಆಶ್ರಮದಲ್ಲಿಯೇ ಇರಲಿ ಶಕ್ತಿಪಾತದಿಂದ ಗುರುಕೃಪೆಗೆ ಪಾತ್ರನಾಗಿ ಶಿವದೀಕ್ಷೆ ಪಡೆದ ಪಕ್ಷದಲ್ಲಿ ಅವನು ವೀರಶೈವನಾಗಬಹುದು. ಶಿವದೀಕ್ಷೆಗೆ ಸ್ತ್ರೀ, ಪುರುಷ ಭೇದವಿಲ್ಲ.

ವೀರಶೈವದ ಪವಿತ್ರವಾದ ಅತ್ಯಾಶ್ರಮದ ಹಿರಿಮೆಯನ್ನು ಕಂಡು ಆಕರ್ಷಿತರಾದವರಲ್ಲಿ ಪ್ರಾಜ್ಞರಾದ ಬ್ರಾಹ್ಮಣರು ಮೊದಲಿಗರು. ಇವರು ವೀರಶೈವ ಆಚಾರ್ಯರಿಂದ ಶಿವದೀಕ್ಷೆ ಪಡೆದು ವೀರಶೈವರಾದರು. ಆದರೂ ಅವರಲ್ಲಿ ಕೆಲವರಿಗೆ ಬ್ರಾಹ್ಮಣ್ಯದ ಅಭಿಮಾನ ಪೂರ್ತಿಯಾಗಿ ಅಳಿದಿರಲಿಲ್ಲ ಎಂಬುದಕ್ಕೆ ಮಲ್ಲಿಕಾರ್ಜುನ ಪಂಡಿತಾರಾಧ್ಯರು ನಿದರ್ಶನ. ಇವರು ಶಿವದೀಕ್ಷೆ ಪಡೆದರು. ಆದರೂ ಅವರು "ಭಕ್ತಿ ಮೀದಿಬಲಿಪು ಬ್ರಾಹ್ಮ್ಯಂಬುತೋ ಬೊತ್ತು ಬಾಯಲೇನು ಬಸವ ಲಿಂಗ" ಎಂದರೆ ಬಸವಣ್ಣ ನನಗೆ ಭಕ್ತಿಯ ಮೇಲೆ ಒಲವು. ಆದರೂ ಬ್ರಾಹ್ಮಣ್ಯದ ಸೆಳೆತ ನನ್ನನ್ನು ಬಿಡಲೊಲ್ಲದು ಎಂದು ಅಂಗಲಾಚಿದ್ದಾರೆ. ಶಿವದೀಕ್ಷೆ ಪಡೆದವರಲ್ಲಿ ಕೆಲವರು ಲಿಂಗದ ಜೊತೆಗೆ ಯಜ್ಞೋಪವೀತವನ್ನು ಉಳಿಸಿಕೊಂಡು "ಆರಾಧ್ಯ ಬ್ರಾಹ್ಮಣ" ರೆನಿಸಿದರು. ಇವರು "ಕರ್ಮಾಧಿಕಾರಕ್ಕಾಗಿ ಜನಿವಾರ, ಮುಕ್ತಿ ಸಾಧನೆಗಾಗಿ ಲಿಂಗಧಾರಣೆಗಳು ಬ್ರಾಹ್ಮಣರಿಗೆ ಅಗತ್ಯ" ಎನ್ನುತ್ತಾರೆ.

ಮುಖದಲ್ಲಿ ಮಂತ್ರ, ಹೃದಯದಲ್ಲಿ ಧ್ಯಾನ, ಮಸ್ತಕದಲ್ಲಿ ಲಿಂಗಧಾರಣ, ಶಿಖೆ, ಉಪವೀತ ಮತ್ತು ಭಸ್ಮಧಾರಣ ಈ ಆರು ಲಕ್ಷಣಗಳುಳ್ಳವನು ಬ್ರಾಹ್ಮಣ(೨) ಎಂಬ ಗೌತಮ ಸ್ಮೃತಿಯನ್ನು ಆಧಾರವಾಗಿ ಕೊಡುತ್ತಾರೆ. "ಶಿಖೋಪವೀತಿ ಭಸ್ಮಾನಿ" ಎಂಬಲ್ಲಿ "ಶಿಖರುದ್ರಾಕ್ಷ ಭಸ್ಮಾನಿ" ಎಂಬ ಪಾಠಾಂತರವೂ ಶ್ರೀಕರ ಭಾಷ್ಯದಲ್ಲಿ ನಿದರ್ಶಿಸಲಾಗಿದೆ. ಇದರಿಂದ ಉಪವೀತವನ್ನು ವಿಕಲ್ಪ ವಿಧಿಸಿದಂತಾಗಿದೆ.

ಆರಾಧ್ಯ ಸಂಪ್ರದಾಯದಲ್ಲಿ ಉಪನಯನ, ಗಾಯತ್ರೀ ಮಂತ್ರೋಪದೇಶಗಳು ತಂದೆಯಿಂದ; ಲಿಂಗಧಾರಣವು ಗುರುವಿನಿಂದ ನಡೆಯುತ್ತದೆ.

**ಆರಾಧ್ಯರಲ್ಲಿ 'ಸಹಜ' ಹಾಗೂ 'ಆಗಂತುಕ' ಎಂಬ ಪ್ರಭೇದಗಳು**

ಆರಾಧ್ಯರಲ್ಲಿ ಸಹಜ ಮತ್ತು ಆಗಂತುಕ ಎಂಬ ಪ್ರಭೇದಗಳಿವೆ. ಪಾಲ್ಕುರಿಕೆ ಸೋಮನಾಥನು ತನ್ನನ್ನು ಭೃಂಗಿರಿಟಿ ಗೋತ್ರದವನೆಂದು ಹೇಳಿಕೊಂಡಿರುವುದರಿಂದ ಆತ ಸಹಜ ಆರಾಧ್ಯನೆನಿಸಿದ್ದಾನೆ. ಶ್ರೀಪತಿ ಪಂಡಿತ ಮುಂತಾದವರು ತಮ್ಮ ಹಿಂದಿನ ಋಷಿ ಗೋತ್ರಗಳನ್ನು ಶಿವದೀಕ್ಷಾ ಕಾಲದಲ್ಲಿ ತ್ಯಜಿಸಿ ಗುರುವಿನ ಗೋತ್ರಗಳನ್ನು ಹೇಳತೊಡಗಿದರು. ಹರಿಹರ, ರಾಘವಾಂಕ, ಕೆರೆಯ ಪದ್ಮರಸರು ಬಸವನ ತರುವಾಯವೂ ಕೂಡಾ ಲಿಂಗ ಮತ್ತು ಯಜ್ಞೋಪವಿತಗಳನ್ನು ಧರಿಸಿದ್ದುದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಇವರೆಲ್ಲಾ ಆಗಂತುಕರು.

ಬಸವಣ್ಣನೂ ಕೂಡ ಈ ಆಗಂತುಕ ವೀರಶೈವ ಸಂಪ್ರದಾಯದವನು. ಇವನು ಜನಿಸಿದಾಗ ಕೂಡಲಸಂಗಮದಿಂದ ಜಾತವೇದ (ಈಶಾನ್ಯ) ಗುರುಗಳು ಬಂದು ಲಿಂಗದೀಕ್ಷೆ ನೀಡಿದ್ದರು. ಎಂಟನೆಯ ವರ್ಷಕ್ಕೆ ಸಂಪ್ರದಾಯದಂತೆ ಅವನಿಗೆ ಉಪನಯನ ಮಾಡಿ ಜನಿವಾರ ಹಾಕಿದಾಗ ಅವನು ಅದನ್ನು "ಕರ್ಮಲತೆ" ಎಂದು ಕಿತ್ತೆಸೆದು ಲಿಂಗವನ್ನು ಮಾತ್ರ ಉಳಿಸಿಕೊಂಡು ಅಕ್ಕ ನಾಗಮ್ಮ ಮತ್ತು ಭಾವ ಶಿವಸ್ವಾಮಿಯರ ಜೊತೆ ಕೂಡಲಸಂಗಮಕ್ಕೆ ಆಗಮಿಸಿದನು. ಈ ಬದಲಾವಣೆ ಆರಾಧ್ಯ ಬ್ರಾಹ್ಮಣ ಸಂಪ್ರದಾಯವನ್ನು ಕೆರಳಿಸಿತು. ಸಮಾಜದಿಂದ ಬಹಿಷ್ಕರಿಸಿತು. ಆದರೂ ಜಾತವೇದ ಮುನಿಗಳ ಕೃಪೆ ಅವರಿಗೆ ರಕ್ಷಾಕವಚವಾಯಿತು.

ಕಲ್ಯಾಣದ ಸಿದ್ದಣ್ಣ ಮಂತ್ರಿ ಮತ್ತು ಬಿಜ್ಜಳರೂ ಸಹ ಬಸವಣ್ಣನಿಗೆ ಕುಲ ಬಾಂಧವರೇ ಆಗಿದ್ದರು. ಬಸವಣ್ಣನ ವಿದ್ಯಾ, ಬುದ್ಧಿ, ಪ್ರತಿಭೆಗಳನ್ನು ಗುರ್ತಿಸಿದ ಸಿದ್ದಣ್ಣ ಮಂತ್ರಿ ತನ್ನ ಮಗಳು ಗಂಗಾಂಬೆಯನ್ನೂ, ಬಿಜ್ಜಳ ತನ್ನ ತಂಗಿ ನೀಲಾಂಬೆಯನ್ನೂ ಬಸವಣ್ಣನಿಗೆ ಕೊಟ್ಟು ಧಾರೆಯೆರೆದರು. ಮೊದಲು ಅರಮನೆಯಲ್ಲಿ ಲೆಕ್ಕಿಗನಾಗಿ ಸೇರಿದ ಬಸವಣ್ಣ ತನ್ನ ನಿಸ್ಪೃಹತೆ, ಪ್ರತಿಭೆಗಳಿಂದ ರಾಜನ ಮೆಚ್ಚುಗೆ ಪಡೆದು ಪ್ರಧಾನಿ ಆದರು.

**ಬಸವಣ್ಣನವರ ಸುಧಾರಣೆಗಳು**

ಬಸವಣ್ಣನವರು ಮಹಾಮಂತ್ರಿಯಾದ ಮೇಲೆ ಕೇವಲ ರಾಜಕೀಯದಲ್ಲಿ ಮುಳುಗಲಿಲ್ಲ. ಅದರ ಜೊತೆಗೆ ಆತ್ಮೋದ್ಧಾರ ಮತ್ತು ಸಮಾಜ ಸುಧಾರಣೆಗಳ ಕಡೆಗೂ ಗಮನವಿಟ್ಟರು. ಆತ್ಮೋದ್ಧಾರಕ್ಕೆ ಅಹಂಕಾರ-ಮಮಕಾರಗಳು ಅಳಿಯಬೇಕು.

ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ
ಎನಗೆ ಇದೇ ದಿವ್ಯ

ಎಂದು ವಿನಯವನ್ನು ಮೆರೆದರು.

ನಾನು ಆರಂಭಮಾಡುವೆನಯ್ಯಾ, ಗುರುಪೂಜೆಗೆಂದು
ನಾನು ಬೆವಹಾರವ ಮಾಡುವೆನಯ್ಯಾ ಲಿಂಗಾರ್ಚನೆಗೆಂದು
ನಾನು ಪರಸೇವೆಯ ಮಾಡುವೆನಯ್ಯಾ ಜಂಗಮ
ದಾಸೋಹಕ್ಕೆಂದು
ನಾನಾವ ಕರ್ಮಗಳ ಮಾಡಿದಡೆಯೂ ಆ ಕರ್ಮ ಫಲ
ಭೋಗವ
ನೀ ಕೊಡುವೆ ಎಂಬುದ ಬಲ್ಲೆನು
ನೀ ಕೊಟ್ಟ ದ್ರವ್ಯ ನಿಮಗಲ್ಲದೆ ಮತ್ತೊಂದು ಕ್ರಿಯೆ
ಮಾಡೆನು
ನಿಮ್ಮ ಸೊಮ್ಮು ನಿಮಗೆ ಸಲಿಸುವೆ ಕೂಡಲಸಂಗಮ
ದೇವಾ||

ಎಂದು ಭಗವಂತನಲ್ಲಿ ಮೊರೆಯಿಟ್ಟರು.

---

೧. ಬ್ರಹ್ಮಚಾರೀ ಗೃಹಸ್ಥೋವಾವಾನಪ್ರಸ್ಥೋಯತಿಸ್ತ್ವಾ
ಯಸ್ತು ಲಿಂಗಾಂಗ ಸಂಯುಕ್ತ ಸ ಏವಾತ್ಯಾಶ್ರಮೀ
ಭವೇತ್|
(ಶಿವಾಗಮ)

೨. ಮುಖೇ ಮಂತ್ರೋ ಹೃದಿಧ್ಯಾನಂ ಮಸ್ತಕೇ ಲಿಂಗ
ಧಾರಣಂ
ಶಿಖೋಪವೀತಿ ಭಸ್ಮಾನಿ ಇತಿ ಬ್ರಾಹ್ಮಣೋ ಲಕ್ಷಣಂ||
ಗೌತಮ ಸ್ಮೃತಿ (ಶ್ರೀಕರ ಭಾಷ್ಯ ಟೀಕೆ ಪುಟ ೧೧೮)

ಆತ್ಮಸ್ತುತಿ ಮತ್ತು ಪರನಿಂದೆಗಳು ಸತ್ಪುರುಷರಿಗೆ ಸಲ್ಲದು, "ತನ್ನ ಬಣ್ಣಿಸ ಬೇಡ, ಇದಿರ ಹಳಿಯಲು ಬೇಡ" ಎಂಬುದು ಅವರ ದೃಢ ನಿಶ್ಚಯ. ಹೇಳಿದರು,

ಲೋಕದ ಡೊಂಕ ನೀವೇಕೆ ತಿದ್ದುವಿರಿ
ನಿಮ್ಮ ನಿಮ್ಮ ತನುವ ಸಂತೈಸಿ ಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿ ಕೊಳ್ಳಿ
ನೆರೆಮನೆಯ ದುಃಖಕ್ಕೆ ಅಳುವವರ ಮೆಚ್ಚ ಕೂಡಲ
ಸಂಗಮ ದೇವಾ

ಎಂದು ಎಚ್ಚರಿಸಿದರು. ಮುಂದೆ ಬಸವಣ್ಣನವರು ಯಜ್ಞಯಾಗಾದಿಗಳಲ್ಲಿ ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಪಶುಬಲಿಯನ್ನು ನಿಲ್ಲಿಸಿದರು.

ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು
ಎಲೆ ಹೋತೆ ಅಳು ಕಂಡೆಯಾ?
ವೇದವನೋದಿದವರ ಮುಂದೆ ಅಳು ಕಂಡೆಯಾ?

ಎಂದು ಮರುಗಿದರು.

ಉಚ್ಚವರ್ಣದವರೆಂದು ಹೇಳಿಕೊಳ್ಳುವವರಲ್ಲಿದ್ದ ಕುಟಿಲತೆಗಾಗಿ ಕಿಡಿ ಕಿಡಿಯಾದರು.

ಏನಯ್ಯ ವಿಪ್ರರು ನುಡಿದಂತೆ ನಡೆಯರು. ಇದೆಂತಯ್ಯ
ತಮಗೊಂದು ಬಟ್ಟೆ, ತಮ್ಮ ಶಾಸ್ತ್ರಕ್ಕೊಂದು ಬಟ್ಟೆ

ಎಂದರು. ಕೇವಲ ವಿಪ್ರರೇ ಏಕೆ ಉಳಿದವರಲ್ಲಿಯೂ ಇದ್ದ ಬೂಟಾಟಿಕೆಯ ಆಚಾರ ಮಾಡುತ್ತಿದ್ದವರನ್ನು ಹೀಯಾಳಿಸಿದರು.

ತೊರೆಯ ಮಿಂವ ಅಣ್ಣಗಳಿರಾ| ತೊರೆಯ ಮಿಂವ
ಸ್ವಾಮಿಗಳಿರಾ
ತೊರೆಯಿಂಭೋ, ತೊರೆಯಿಂಭೋ,
ಪರನಾರಿಯ ಸಂಗ ತೊರೆಯಿಂಭೋ
ಪರದ್ರವ್ಯರಾದಾಮಿಷವ ತೊರೆಯಿಂಭೋ
ಇವ ತೊರೆಯದೆ ಹೋಗಿ ತೊರೆಯ ಮಿಂದರೆ ಬರುದೊರೆ||

ಎಂದರು. ನುಡಿಯಲ್ಲಿ ಎಚ್ಚೆತ್ತು ನಡೆಯಲ್ಲಿ ತಪ್ಪಿದರೆ ಹಿಡಿದಿದ್ದ ಲಿಂಗ ಘಟಸರ್ಪ ಎಂದು ವೀರಶೈವರನ್ನು ಎಚ್ಚರಿಸಿದರು.

ಧರ್ಮಕ್ಕೆ ದಯೆ ಅಡಿಗಲ್ಲು. "ದಯೆಯಿಲ್ಲದ ಧರ್ಮ ಅದಾವುದು?" ಎಂಬ ಪ್ರಶ್ನೆ ಅವರದು.

ಬಸವಣ್ಣನವರು ನೂತನವಾದ ಒಂದು ಧರ್ಮವನ್ನು ಸ್ಥಾಪಿಸ ಹೋಗಲಿಲ್ಲ. ಬದಲಾಗಿ ಅವರು ಯಾವುದೇ ಧರ್ಮದಲ್ಲಿದ್ದರೂ ಅಲ್ಲಿ ಮಾತು, ಮನಸ್ಸು ಮತ್ತು ಮಾಟ ಎಂದರೆ ನಡೆಗಳಲ್ಲಿ ಪರಿಶುದ್ಧನಾಗಿರಬೇಕು ಎಂಬುದನ್ನು ತಮ್ಮ ಜೀವನದಲ್ಲಿ ಮಾಡಿ ತೋರಿಸಿದರು.

ದೇವರಿದ್ದಾರೆ ಎಂದು ನಂಬಿದರೆ ಮಾತ್ರ ಸಾಲದು. ಹಲವು ದೇವರುಗಳನ್ನು ನಂಬಿದರೆ ತನ್ನ ಭಕ್ತಿ ಹರಿದು ಹಂಚಿ ಹೋಗುತ್ತದೆ. ಅದರಲ್ಲಿ ಪಾತಿವ್ರತ್ಯ ಇರಬೇಕು.

"ದೇವನೊಬ್ಬ ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ"

ಎಂಬ ದಾರ್ಢ್ಯಬೇಕು.

ಪುಣ್ಯ ಪಾಪಗಳ ಸೂಕ್ಷ್ಮವನ್ನು ಅವರು ಹೇಳಿದಂತೆ ಇತರರು ಹೇಳಿದುದು ಕಾಣುವುದಿಲ್ಲ. ಅವರ ದೃಷ್ಟಿಯಲ್ಲಿ "ಅಯ್ಯ ಎಂದರೆ ಸ್ವರ್ಗ, ಎಲವೊ ಎಂದರೆ ನರಕ, ದೇವ ಭಕ್ತ ಜಯ ಜಯಾ" ಎಂಬ ನುಡಿಯೊಳಗೆ ಕೈಲಾಸವೇ ಇದೆ.

ಎಂಥ ಸುಂದರ ನಿರ್ವಚನ! ಅವರು ನ್ಯಾಯ ನಿಷ್ಠುರಿ! ಇದ್ದುದನ್ನು ನೇರವಾಗಿ ಹೇಳಿ ಮನ ಮುಟ್ಟುವಂತೆ ಮಾಡುವ ಮಾಂತ್ರಿಕ ಶಕ್ತಿ ಅವರ ಮಾತಿಗಿತ್ತು. "ಶರಣ ಲೋಕ ವಿರೋಧಿ ಅವನು ಯಾರಿಗೂ ಅಂಜುವವನಲ್ಲ" ಎಂದು ಖಂಡಿತವಾಗಿ ಹೇಳಿಬಿಡುವುದು ಅವರ ಜಾಯಮಾನ.

ಮಾಯೆಯ ಉಪಟಳವನ್ನು ಪರಿಪರಿಯಾಗಿ ಬಣ್ಣಿಸಿದ್ದಾರೆ.
"ನಾನೊಂದ ನೆನೆದರೆ ತಾನೊಂದು ನೆನೆವುದು
ನಾನಿತ್ತಲೆಳೆದರೆ ತಾನತ್ತಲೆಳೆವುದು
ತಾ ಬೇರೆ ಎನ್ನನಳಲಿಸಿ ಕಾಡಿತ್ತು ಬಳಲಿಸಿ ಕಾಡಿತ್ತು
ಕೂಡಲ ಸಂಗಮದೇವನ ಕೂಡಿಹೆನೆಂದರೆ
ತಾನೆನ್ನ ಮುಂದುಗೆಡಿಸಿತ್ತು ಮಾಯೆ"

ಎಂದು ಪರಿತಪಿಸಿ ಶಿವನ ಒಲುಮೆಗಾಗಿ ಮೊರೆಯಿಟ್ಟಿದ್ದಾರೆ.

ನೀನೊಲಿದರೆ ಕೊರಡು ಕೊನರುವುದಯ್ಯ
ಬರಡು ಹಯನಹುದಯ್ಯ; ವಿಷವೆಲ್ಲ
ಅಮೃತವಹುದಯ್ಯ ಅಷ್ಟೇ ಅಲ್ಲ, ಅವನು ಒಲಿದರೆ
ಸಕಲ ಪಡಿಪದಾರ್ಥವೆಲ್ಲಾ ಇದಿರಲ್ಲಿರ್ಪುವು|

ಎಂಬ ನಂಬುಗೆ ಅವರದು. ಅವರಿಗೆ ಉತ್ತಮ ಕುಲದಲ್ಲಿ ತಾನು ಹುಟ್ಟಿದೆನೆಂಬ ಹಮ್ಮು ಇರಲಿಲ್ಲ.

ಮೇಲಾಗಲೊಲ್ಲೆನು ಕೀಳಾಗದೆ
ಕೀಳಿಂಗಲ್ಲದೆ ಹಯನು ಕರೆಯುವುದೂ?

ಎಂದು ಪ್ರಶ್ನಿಸುತ್ತಾರೆ. ಮೇಲಾಗಿ ನರಕದಲ್ಲಿ ಓಲಾಡುವುದಕ್ಕಿಂತ ಕೀಳಾಗಿ ಶರಣರ ಪಾದಕ್ಕೆ ಎರಗು ಎನ್ನುತ್ತಾರೆ. ಇದಕ್ಕೆಲ್ಲಾ ಭಕ್ತಿ ಪರಮ ಸಾಧನ. ಶಿವ, ಭಕ್ತಿಪ್ರಿಯ, ಭಕ್ತಿಯನ್ನು ಮಾಡುವುದೂ ಕಷ್ಟ. ಅದು ಗರಗಸದಂತೆ ಹೋಗುತ್ತ ಕೊಯ್ಯುತ್ತದೆ, ಬರುತ್ತಾ ಕೊಯ್ಯುತ್ತದೆ. ಈ ಪರೀಕ್ಷೆಯಲ್ಲಿ ಉತ್ತೀರ್ಣನಾದವನನ್ನು "ಶಿವ ಕೈ ಹಿಡಿದು ಎತ್ತಿಕೊಂಬ" ಎಂಬ ನಿರ್ಧಾರಕ್ಕೆ ಬರುತ್ತಾರೆ.

ಹೀಗೆ ಬಸವಣ್ಣನವರ ಸಾಧನೆಯಿಂದ ಅವರ ಮನಸ್ಸು
ಆಲಿಕಲ್ಲ ಹರಳಿನಂತೆ, ಅರಗಿನ ಪುತ್ಥಳಿಯಂತೆ ತನು
ಕರಗಿ ನೆರೆವ ಸುಖವ ನಾನೇನೆಂಬೆ
ಕಡೆಗೋಡಿವರಿದವೆನಗಯ್ಯ ನಯನ ಸುಖ ಜಲಂಗಳು
ನಮ್ಮ ಕೂಡಲಸಂಗಮ ದೇವರ ಮುಟ್ಟಿ ನೆರೆವ ಸುಖದ
ನಾನಾರಿಗೇನೆಂಬೆ?

ಎಂದು ಶಿವನಲ್ಲಿ ಸಮರಸಗೊಂಡಿತು.

ಕಂಗಳು ತುಂಬಿದ ಬಳಿಕ ನೋಡಲಿಲ್ಲ
ಕಿವಿ ತುಂಬಿದ ಬಳಿಕ ಕೇಳಲಿಲ್ಲ
ಕೈಗಳು ತುಂಬಿದ ಬಳಿಕ ಪೂಜಿಸಲಿಲ್ಲ
ಮನವ ತುಂಬಿದ ಬಳಿಕ ನೆನೆಯಲಿಲ್ಲ
ಮಹಾಂತ ಕೂಡಲಸಂಗಮದೇವನ|

ಮುಂತಾದ ಬಸವಣ್ಣನ ಬೋಧನೆಗಳು ಭಾಷಣಗಳಾಗದೆ ಕಾರ್ಯರೂಪಕ್ಕಿಳಿದಿದ್ದವು. ಶಿವಭಕ್ತನಾದ ಮೇಲೆ ವರ್ಣ, ಜಾತಿಗಳ ಸೋಂಕಿಲ್ಲ ಎಂಬುದನ್ನು ಕಾರ್ಯರೂಪಕ್ಕೆ ಇಳಿಸುವಾಗ ಅದು ಅವರಿಗೆ ಒಂದು ಸವಾಲಾಯಿತು.

ರಾಜಾಸ್ಥಾನದಲ್ಲಿ ಮಂತ್ರಿಗಳಲ್ಲಿ ಒಬ್ಬನಾಗಿದ್ದ ಬ್ರಾಹ್ಮಣ ಮಧುವರಸ ಮತ್ತು ಹೊಲೆಯ ಹರಳಯ್ಯ ಇಬ್ಬರೂ ಲಿಂಗ ದೀಕ್ಷೆ ಪಡೆಯುತ್ತಾರೆ. ಮಧುವರಸನ ಮಗಳಿಗೂ, ಹರಳಯ್ಯನ ಮಗನಿಗೂ ಪ್ರೇಮ ಬೀಜ ಅಂಕುರಿಸುತ್ತದೆ. ಉಭಯ ಕುಟುಂಬಗಳ ಸಮ್ಮತಿಯಿಂದ ಅವರ ವಿವಾಹ ಏರ್ಪಡುತ್ತದೆ.

ಮೊದಲೇ ಬಸವಣ್ಣನ ಮೇಲೆ ಕತ್ತಿ ಇರಿದು ನಿಂತಿದ್ದ ಪರಮತೀಯರೂ, ಸನಾತನಿಗಳೂ, ಸ್ವಾರ್ಥಸಾಧಕರೂ ವಿಕ್ಷುಬ್ಧರಾಗಿ ರಾಜನಿಗೆ ದುರ್ಬೋಧನೆ ಮಾಡಿ ಅವನ ಮನಸ್ಸನ್ನು ಕೆಡಿಸುತ್ತಾರೆ. ಕೊಂಡೆಯವರು “ಬಸವಣ್ಣ ದಾಸೋಹದ ನೆಪದಲ್ಲಿ ಗುಪ್ತ ಸೈನ್ಯವನ್ನು ಕೂಡಿಸಿ, ಸಿಂಹಾಸನವನ್ನು ಆಕ್ರಮಿಸಲು ಹೊಂಚು ಹಾಕುತ್ತಿದ್ದಾನೆ” ಎಂದು ಹೆದರಿಸುತ್ತಾರೆ. ಭಯ, ರೋಷ, ಸಂತಪ್ತನಾದ ಅರಸ ಬೆಳಗಾಗುವುದೊಳಗೆ ನಿರಪರಾಧಿಗಳಾದ ಮಧುವರಸ, ಹರಳಯ್ಯ ಮತ್ತು ಅವರ ಕುಟುಂಬದ ಮಕ್ಕಳ ಕಣ್ಣು ಕೀಳಿಸಿ, ಚಿತ್ರಹಿಂಸೆಗೆ ಗುರಿಪಡಿಸುತ್ತಾನೆ. ಶರಣರ ಕ್ರಾಂತಿಯಾಗಿ ಕಲ್ಯಾಣ ಹಾಳಾಗುತ್ತದೆ.

ಇದು ಬಸವಣ್ಣನ ಕ್ರಾಂತಿಗೆ ದೊರೆತ ಪ್ರತಿಫಲ. ಬಸವಣ್ಣನವರ ಪ್ರಭಾವಲಯದಲ್ಲಿ ಏರ್ಪಟ್ಟಿದ್ದ ಅನುಭವ ಮಂಟಪದಲ್ಲಿ ಭಾರತದ ನಾನಾ ಪ್ರಾಂತಗಳ ಎಲ್ಲ ಕುಲಕಸಬುಗಳ ಸಾಧಕರೂ ಸೇರಿದ್ದರು. ಇವರಲ್ಲಿ ಮುಖ್ಯರಾದವರು ಅಲ್ಲಮ ಪ್ರಭು, ಚೆನ್ನ ಬಸವೇಶ್ವರ, ಸಿದ್ಧರಾಮೇಶ್ವರ, ಮಡಿವಾಳ ಮಾಚಿದೇವ, ಅಕ್ಕಮಹಾದೇವಿ, ಗಂಗಾಂಬಿಕೆ, ನೀಲಾಂಬಿಕೆ, ಅಜಗಣ್ಣ, ಮುಕ್ತಾಯಕ್ಕ, ರೇವಣಸಿದ್ಧ, ಘನಲಿಂಗಿ, ರುದ್ರಮುನಿ, ಮರುಳಸಿದ್ಧ ಮಲ್ಲಿಕಾರ್ಜುನ ಪಂಡಿತಾರಾಧ್ಯ, ಮೋಳಿಗೆ ಮಾರಯ್ಯ, ನುಲಿಯ ಚಂದಯ್ಯ, ಹಡಪದ ಅಪ್ಪಣ್ಣ, ಮರುಳ ಶಂಕರದೇವ, ನೊಡ್ಡಳ ಚಾಚರಸ, ಕಿನ್ನರಿ ಬೊಮ್ಮಯ್ಯ, ಘಟ್ಟನಾಳಯ್ಯ, ಆದಯ್ಯ, ಬಹುರೂಪಿ ಚೌಡಯ್ಯ, ವಚನ ಭಂಡಾರಿ ಶಾಂತರಸ, ಶಿವನಾಗಮಯ್ಯ ಅಂಬಿಗರ ಚೌಡಯ್ಯ, ವೈದ್ಯ ಸಂಗಣ್ಣ, ಒಕ್ಕಲಿಗ ಮುದ್ದಯ್ಯ, ಕುರುಬರ ಗೊಲ್ಲಾಳ, ತೆಲುಗೇಶ ಮಸಣಯ್ಯ, ಹಾಲಿನ ಹಾಳ ಕಲ್ಲಯ್ಯ, ಉರಿಲಿಂಗದೇವ, ಉರಿಲಿಂಗಪೆದ್ದಿ,, ನಿಜಲಿಂಗ ಚಿಕ್ಕಯ್ಯ, ವರದಾನಿ ಗುಡ್ಡವ್ವ, ದಸರಯ್ಯ, ಡೋಹರ ಕಕ್ಕಯ್ಯ, ಮೇದರ ಕೇತಯ್ಯ ಮುಂತಾದವರು.

ಇವರು ರಚಿಸಿರುವ ಕನ್ನಡ ವಚನ ಸಾಹಿತ್ಯದ ಕೆಲವು ಭಾಗ ಇಂದು ಹೊರಬಂದಿದೆ. ಇನ್ನೂ ಆಗಬೇಕಾದದ್ದು ಅಪಾರವಾಗಿದೆ. ವಚನ ಸಾಹಿತ್ಯ ಅದೊಂದು ಶಾಸ್ತ್ರದ ಮಟ್ಟ ಮುಟ್ಟಿದೆ. ಉಪನಿಷತ್ಕಾಲದಲ್ಲಿ ಋಷಿಮುನಿಗಳು ಅರಣ್ಯಗಳಲ್ಲಿ ಪರ್ಣಶಾಲೆಗಳನ್ನು ನಿರ್ಮಿಸಿಕೊಂಡು ಮಾಡಿದ ಬ್ರಹ್ಮಾನುಭವದ ಉಪನಿಷತ್ತುಗಳಲ್ಲಿ ನಮಗೆ ಲಭ್ಯವಾಗಿರುವಂತೆ ಶಿವಶರಣರ ಯುಗ ಕರ್ನಾಟಕದಲ್ಲಿ ಮತ್ತೆ ತಲೆಯೆತ್ತಿ ಉಪನಿಷದ್ಯುಗದ ಸವಿನೆನಪನ್ನು ಮಾಡಿಕೊಟ್ಟಿದೆ. ಬಸವ ಯುಗದಿಂದ ಮಹಾತ್ಮಾ ಗಾಂಧಿ ಯುಗದವರೆಗೆ ಕಟ್ಟಿದ ಧರ್ಮ ಸೇತುವೆ, ಶಿವಶರಣರ ಸಂಸ್ಕೃತಿ, ವಚನ ಸಾಹಿತ್ಯ, ಕನ್ನಡಿಗರ ಭಾಗ್ಯನಿಧಿ; ವಿಶ್ವದ ಪುಣ್ಯ ಸಂಪತ್ತು.ಅದನ್ನು ನಮ್ಮದನ್ನಾಗಿ ಮಾಡಿಕೊಳ್ಳುವ ಹೊಣೆ ಮಾನವ ಕುಲದ್ದು. ಕರ್ನಾಟಕದಲ್ಲಿ ರೂಪುಗೊಂಡ ಶಿವಶರಣ ಧರ್ಮ ಕೇವಲ ವೀರಶೈವದ್ದಲ್ಲ, ಕರ್ನಾಟಕದ್ದೂ ಅಲ್ಲ, ಅದು ವಿಶ್ವಧರ್ಮ.

# ಕರ್ನಾಟಕದಲ್ಲಿ ಇಸ್ಲಾಂ

ಡಾ. ಎಜಾಸುದ್ದೀನ್ ಫೈರೋಜ್

ಪುರಾತನ ಕಾಲದಿಂದ ಅರಬರು ದಕ್ಷಿಣ ಭಾರತಕ್ಕೆ ವ್ಯಾಪಾರಕ್ಕಾಗಿ ಬರುತ್ತಿದ್ದರು. ಜಲ ಮಾರ್ಗದಿಂದ ಬರುತ್ತಿದ್ದ ಈ ವ್ಯಾಪಾರಿಗಳ ಕೇಂದ್ರ ಮಲಬಾರು ಅಥವಾ ಇಂದಿನ ಕೇರಳವಾಗಿತ್ತು. ಕ್ರಿ.ಶ. ೬೭೦ರಲ್ಲಿ ಪ್ರವಾದಿ ಮಹಮ್ಮದ್ ಅವರ ಜನನ ಅರಬ್ ದೇಶದಲ್ಲಾಯಿತು. ನಲವತ್ತು ವರ್ಷಗಳ ಅನಂತರ ಭಗವಂತ ಅವರನ್ನು ತನ್ನ ಅಂತಿಮ ಪೈಗಂಬರರನ್ನಾಗಿ ಆಯ್ಕೆ ಮಾಡಿಕೊಂಡು ತಮ್ಮ ಮೇಲೆ ದಿವ್ಯ ಕುರಾನನ್ನು ಅವತೀರ್ಣಗೊಳಿಸಿದ. ಅಂದಿನಿಂದ ಇಸ್ಲಾಂ ಧರ್ಮ ಜಗತ್ತಿನಲ್ಲಿ ಪ್ರಸಾರಗೊಂಡಿತು. ಅರಬ್ ದೇಶದ ಈ ವ್ಯಾಪಾರಿಗಳೂ ಇವರ ಅನುಯಾಯಿಗಳಾಗಿದ್ದರು, ಹಿಂದೆ ಬರುತ್ತಿದ್ದ ಅರಬರಿಗೂ ಮುಸ್ಲಿಮರಾಗಿ ಬರಲಾರಂಭಿಸಿದ ಅರಬರಿಗೂ ಇರುವ ವ್ಯತ್ಯಾಸವನ್ನು ಮಲಾಬಾರ್ ಸಮುದ್ರ ತೀರದ ಜನರು ಗುರುತಿಸಿದರು. ಮುಸ್ಲಿಮರಾಗಿ ಬಂದ ಅರಬರ ವ್ಯವಹಾರ, ನಡವಳಿಕೆ ಮತ್ತು ನೀತಿಯಲ್ಲಿ ತುಂಬಾ ಬದಲಾವಣೆಗಳಿದ್ದವು. ಇಸ್ಲಾಂ ಧರ್ಮದ ಏಕದೇವೋಪಾಸನೆ, ಸಮತಾಭಾವನೆಯ ತತ್ವ, ಅರಬರ ಪ್ರಾಮಾಣಿಕತೆ ಇವುಗಳಿಂದ ಪ್ರಭಾವಿತರಾಗಿ ಮಲಬಾರಿನಲ್ಲಿ ಅನೇಕರು ಕ್ರಮೇಣ ಈ ಧರ್ಮದ ಅನುಯಾಯಿಗಳಾದರು. ಕರ್ನಾಟಕದ ಸಂಪರ್ಕ ಕೇರಳದೊಡನೆ ಆ ಕಾಲದಿಂದಲೂ ಇತ್ತು. ಹೀಗಾಗಿ ಇದರ ಪ್ರಭಾವ ಇಲ್ಲಿಯೂ ಬೀರಿತು.

## ಆಗಮನ

ಐತಿಹಾಸಿಕವಾಗಿ ನೋಡಿದರೆ ಬಾಬಾಬುಡನ್ ಗಿರಿಯ ಹಜರತ್ ದಾದಾ ಹಯಾತ ಮೀರ್ ಖಲಂದರ್ ಅವರು ಇಸ್ಲಾಂ ಮತವನ್ನು ಕರ್ನಾಟಕಕ್ಕೆ ತಂದವರು. ಕ್ರಿ.ಶ. ಸುಮಾರು ೭೧೦ನೇ ಇಸವಿಯ ಸುತ್ತಮುತ್ತ ಪ್ರವಾದಿ ಮುಹಮ್ಮದ್ ಅವರ ಅನುಯಾಯಿಗಳಲ್ಲಿ ಒಂದು ಗುಂಪಿನವರನ್ನು "ಅಸಹಾಬ್-ಸುಪ್ಪಾ" ಅಂದರೆ ಪವಿತ್ರ ಚೌಕಟ್ಟಿನ ಸಂಗಾತಿಗಳೆಂದು ಕರೆಯಲಾಗುತ್ತಿತ್ತು. ಮಕ್ಕಾದಲ್ಲಿ ಒಂದು ಕಲ್ಲಿನ ಚೌಕಟ್ಟಿತ್ತು. ಪ್ರಾರ್ಥನೆಯ ಅನಂತರ ಈ ಮಹಾನುಭಾವರು ಭಗವಚ್ಚಿಂತನೆ ಮಾಡುತ್ತಾ ಅಲ್ಲಿ ಕುಳಿತಿರುತ್ತಿದ್ದರು. ತಪಸ್ಸು ಮತ್ತು ಪ್ರಾರ್ಥನೆಯಲ್ಲೇ ಇವರು ಹೆಚ್ಚು ಸಮಯ ಕಳೆಯುತ್ತಿದ್ದರು.

ಪ್ರವಾದಿ ಮುಹಮ್ಮದ್ (ಸಲ್ಲಂ) ಅವರು ತಮ್ಮ ಸಂಗಾತಿಗಳನ್ನು ಜಗತ್ತಿನ ಬೇರೆ ಬೇರೆ ಭೂಭಾಗಗಳಿಗೆ ಶಾಂತಿಯ ಸಂದೇಶದೊಡನೆ ಕಳುಹಿಸುತ್ತಿದ್ದರು. ಇದೇ ರೀತಿಯಲ್ಲಿ ಭಾರತದೇಶಕ್ಕೆ "ಅಸಹಾಬ್-ಸುಪ್ಪಾ" ಗುಂಪಿನ ತಮ್ಮ ಆತ್ಮೀಯ ಶಿಷ್ಯರೂ ಅನುಯಾಯಿಗಳೂ ಆದ ಹಜರತ್ ಶೇಖ್ ಅಬ್ದುಲ್ ಅಜೀಜ್ ಮಕ್ಕಿ ಅವರನ್ನು ಕಳುಹಿಸಿಕೊಟ್ಟರು. ಪ್ರವಾದಿಗಳು ಇವರ ಸತ್ಕರ್ಮಗಳಕ್ಕಾಗಿ ಅಲ್ಲಾಹನ ಹತ್ತಿರ ಪ್ರಾರ್ಥನೆ ಮಾಡಿ "ಹಯಾತ್-ಉಲ್-ಬಹ್ರ" ಅಂದರೆ ಸಮುದ್ರದಷ್ಟು ಆಯುಸ್ಸು ನಿಮ್ಮದಾಗಲಿ, ಎಂದು ಆಶೀರ್ವಾದ ಮಾಡಿ "ಖಲಂದರ್" ಎಂಬ ಬಿರುದು ಕೊಟ್ಟು ಶಾಂತಿಯ ಸಂದೇಶದೊಡನೆ ಬೀಳ್ಕೊಟ್ಟರು. ಖಲಂದರ್ ಎಂದರೆ ಅಧ್ಯಾತ್ಮ-ಚಕ್ರವರ್ತಿ ಎಂದರ್ಥ.

ಹಜರತ್ ಶೇಖ್ ಅಬ್ದುಲ್ ಅಜೀಜ್ ಮಕ್ಕಿ ಅವರು ಸಮುದ್ರ ಮಾರ್ಗವಾಗಿ ದಕ್ಷಿಣ ಭಾರತಕ್ಕೆ ಬಂದರು. ಅಲ್ಲಿಂದ ಪಾದಯಾತ್ರೆ ಮಾಡುತ್ತಾ ಕರ್ನಾಟಕ ರಾಜ್ಯದ ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಬಾಬಾ ಬುಡನ್‌ಗಿರಿಗೆ ಬಂದು ಅಲ್ಲಿ ಒಂದು ಗುಹೆಯಲ್ಲಿ ಇರತೊಡಗಿದರು. ಸಾವಿರಾರು ಜನರು ಅಲ್ಲಿ ಅವರ ದರ್ಶನಕ್ಕಾಗಿ ಬರತೊಡಗಿದರು. ಭಾರತದೇಶದ ಮೂಲೆ ಮೂಲೆಗಳಲ್ಲಿದ್ದ ಎಷ್ಟೋ ಪ್ರಸಿದ್ಧ ಸಂತರು, ಅಲ್ಲಿಗೆ ಬಂದಿದ್ದರು. ಹಜರತ್ ಶೇಖ್ ಫರೀದ್ ಗಂಜ್‌ಶಕರ್, ಹಜರತ್ ಶಿಹಾಬುದ್ದೀನ್ ರೂಮಿ, ಹಜರತ್ ಸೈಯದ್ ಖಿಜರ್ ರೂಮಿ, ಹಜರತ್ ನಹ್‌ತ್ತರ್ ವಲಿ, ಹಜರತ್ ಮುಖ್ದೂಮ, ಜಾನ್ ಜಹಾನ್ ಗತ್, ಶಾಹ್ ಲತೀಫ್ ಬರ್ರೀ, ಹಜರತಿ ಸೈಯದ್ ಮೀರಾನ್, ಮಹಮೂದ್, ಹಜರತ್ ಶೇಖ್ ಪಾಯ್ ದೋಜ್, ಹಜರತ್ ಬಾಬಾ ತಾಜುದ್ದೀನ್ ಮುಂತಾದ ಸಂತರು ದಾದಾ ಹಯತ್ ಖಲಂದರ್ ಅವರ ಆಸ್ಥಾನದಲ್ಲಿದ್ದು ಉಪದೇಶ ಸ್ವೀಕರಿಸಿ ಮತ್ತೆ ತಮ್ಮ ತಮ್ಮ ಆಸ್ಥಾನಗಳಿಗೆ ತೆರಳಿದ್ದಾರೆ. ಅವರೆಲ್ಲರೂ ಈಗ ಪ್ರಸಿದ್ಧ ಔಲಿಯಾಗಳಾಗಿ ಹೋಗಿದ್ದಾರೆ. ಈ ದೃಷ್ಟಿಯಿಂದ ನೋಡಿದರೆ ಬಾಬಾಬುಡನ್‌ಗಿರಿಯ ಈ ಗುಹೆ ಆ ಕಾಲದಲ್ಲಿಯೇ ಬಹಳ ದೊಡ್ಡ ಅಧ್ಯಾತ್ಮ ಕೇಂದ್ರವಾಗಿತ್ತು.

## ಮಹತ್ವ

ಕರ್ನಾಟಕದಲ್ಲಿ ಇದರ ವೈಭವ ವೈಶಿಷ್ಟ್ಯಕ್ಕೆ ಇದರ ಸರಳ ಸಿದ್ಧಾಂತ ಹಾಗೂ ಇದನ್ನು ಕಂಡ ಸಂತರ ವಿಶ್ವ ಕಲ್ಯಾಣ ಮನೋಭಾವ, ತ್ಯಾಗಮಯ ಜೀವನ ಮತ್ತು ಮಾನವ ಜನಾಂಗದ ಉದ್ಧಾರದ ಏಕಮಾತ್ರ ಗುರಿಯೇ ಕಾರಣವಾಗಿತ್ತು. ಇದೇ ನಿಜವಾದ ಇಸ್ಲಾಂ ಮತ.

ಇಸ್ಲಾಂ ಶಬ್ದದ ಅರ್ಥ ಈ ಜಗತ್ತಿನ ಸೃಷ್ಟಿಕರ್ತ ಮತ್ತು ಏಕೈಕ ಒಡೆಯನಾದ ಅಲ್ಲಾಹ್‌ನಿಗೆ ತಲೆ ಬಾಗುವುದು ಹಾಗೂ ಶಾಂತಿಯುತ ಬಾಳ್ವೆ ಎಂದು. ಸಾರ್ವಕಾಲಿಕ ಮತ್ತು ಸಾರ್ವ

ಭೌಮ ನಿರಾಕಾರ ಭಗವಂತನಲ್ಲಿ "ಈಮಾನ್" ಅಂದರೆ ವಿಶ್ವಾಸವಿಟ್ಟು, ಅವನು ನಮಗೆ ದಯ ಪಾಲಿಸಿದ ಸನ್ಮಾರ್ಗದಲ್ಲಿ ನಡೆಯುವುದು. ಮನುಷ್ಯ ಹುಟ್ಟನಿಂದ ಮೃತ್ಯುವಿನ ವರೆಗೆ ಜೀವನದ ವಿವಿಧ ಕ್ಷೇತ್ರಗಳಲ್ಲಿ ವಿವಿಧ ಘಟ್ಟಗಳಲ್ಲಿ ಹೇಗೆ ಜೀವನ ಮಾಡಬೇಕೆಂಬುದು ದಿವ್ಯ ಕುರಾನು ತೋರಿಸುತ್ತದೆ. ಪ್ರವಾದಿ ಮಹಮ್ಮದ್ ಅವರ ಮೇಲೆ ಅವತೀರ್ಣವಾದದ್ದೇ ಈ ದಿವ್ಯ ಕುರಾನು. ನಮಾಜು (ಪ್ರಾರ್ಥನೆ) ರೋಜಾ (ಉಪವಾಸ ವ್ರತ) ಜಕಾತ್ (ಅಲ್ಲಾಹ್‌ನ ಹೆಸರಿನಲ್ಲಿ ಕೊಡುವ ಜಿಡ್ಡಾಯದಾನ) ಹಾಗೂ ಹಜ್ (ಆರ್ಥಿಕವಾಗಿ ಸಾಧ್ಯವಾದರೆ ಜೀವನದಲ್ಲಿ ಒಂದು ಸಲ ಮಕ್ಕಾಯಾತ್ರೆ ಮಾಡುವುದು) ಅಖಿರತ್ (ಪರಲೋಕದಲ್ಲಿ ಪೂರ್ಣ ವಿಶ್ವಾಸವಿಡುವುದು) ಮುಂತಾದ ಸಿದ್ಧಾಂತಗಳ ಮತ್ತು ಏಕೈಕ ಸೃಷ್ಟಿಕರ್ತನಾದ ನಿರಾಕಾರ ಅಲ್ಲಾಹ್‌ನಲ್ಲಿ ಪರಿಪೂರ್ಣ ಈಮಾನ್ ಒಬ್ಬ ಮುಸಲ್ಮಾನ ಮಾಡಬೇಕಾದ ಕರ್ತವ್ಯಗಳಾಗಿವೆ. ಕರ್ನಾಟಕದಲ್ಲಿ ಇದು ಪ್ರಸಾರಗೊಳ್ಳಲು ಈ ಸಿದ್ಧಾಂತಗಳ ಸರಳತೆಯೇ ಕಾರಣ.

## ಉರ್ದುವಿನ ಬೆಳವಣಿಗೆ

ಭಾರತೀಯ ಭಾಷೆಗಳಲ್ಲಿ ಒಂದಾದ ಸಶಕ್ತ ಸಾಹಿತ್ಯದ ಗಣಿಯೂದ ಉರ್ದು ಭಾಷೆಯ ತಾಯಿ ಬೇರು ದಕ್ಕನಿ ಭಾಷೆ. ಇದು ಕರ್ನಾಟಕದಲ್ಲಿ ಉಗಮಿಸಿ ವಿಕಾಸಗೊಂಡ ಭಾಷೆಯಾಗಿದೆ. ಇದರಲ್ಲಿ ಸಾಕಷ್ಟು ಕಾವ್ಯ ಗ್ರಂಥಗಳಿವೆ. ಈ ಸಾಹಿತ್ಯದ ಮೇಲೆ ನಾವು ಇಸ್ಲಾಂ ಮತದ ಪ್ರಭಾವವನ್ನು ನೋಡಬಹುದು.

ಕರ್ನಾಟಕ ರಾಜ್ಯದ ಗುಲ್ಬರ್ಗಾ ಜಿಲ್ಲೆಯಲ್ಲಿ ಹಜರತ್ ಖ್ವಾಜಾ ಬಂದೇ ನವಾಜ್ ಗೇಸುದರಾಸ್ ಅವರ ದರ್ಗಾಹ್ ಇದೆ. ಈ ಸಂತರು ಮಾನವ ಜನಾಂಗದ ಕಲ್ಯಾಣಕ್ಕಾಗಿ ದುಡಿದ ಮಹಾಮಹಿಮರು. ಇಂದೂ ಅವರ ದರ್ಗಾಹಕ್ಕೆ ಎಲ್ಲಾ ಧರ್ಮದ ಜನರೂ ಬರುವುದನ್ನು ನಾವು ನೋಡಬಹುದು. ಬಂದೇ ನವಾಬರು ಕ್ರಿ.ಶ. ೧೩೨೧ ರಲ್ಲಿ ದೆಹಲಿಯಲ್ಲಿ ಜನ್ಮ ತಾಳಿದರು. ತೈಮೂರನ ದಂಗೆಗಿಂತ ಮುಂಚೆ ಗುಲ್ಬರ್ಗಾಕ್ಕೆ ಬಂದು ನೆಲೆಸಿದರು. ಅವರು ರಚಿಸಿದ ಗ್ರಂಥಗಳಲ್ಲಿ ಕೇವಲ ೩೬ ಗ್ರಂಥಗಳು ನಮ್ಮ ಕೈ ಸೇರಿವೆ. ಈ ಗ್ರಂಥಗಳಲ್ಲಿ "ಅಸ್‌ಮಾರುಲ್ ಅಸರಾರ್", "ಅದಾಬುಲ್ ಮುರೀದೈನ್", "ಬುರ್‌ಹಾನುಲ್ ಆಶಿಹೈನ್" ಮತ್ತು "ಹಜ್ವಾಯರುಲ್ ಖುದ್ಸ್" ಬಹಳ ಮುಖ್ಯವಾದುವು. ಈ ಎಲ್ಲಾ ಕೃತಿಗಳ ಮೇಲೆ ಇಸ್ಲಾಮಿನ ಪ್ರಭಾವವಿದೆ. ಈ ಗ್ರಂಥಗಳಲ್ಲಿ ಇಹಲೋಕದ ಜೀವನ ಮತ್ತು ಧರ್ಮ, ಭಕ್ತ-ಭಗವಂತನ ಸಂಬಂಧ ಮುಂತಾದ ವಿಷಯ ಚರ್ಚೆ ಇದೆ. ಹಜರತ್ ಬಂದೇ ನವಾಬರು ಕ್ರಿ.ಶ. ೧೪೨೨ ರಲ್ಲಿ ನಿಧನ ಹೊಂದಿದರು.

ಇವರ ಅನಂತರ ಹಜರತ್ ಮೀರಾಂಜಿ ಶಂಶುಲ್ ಶಾಹ್ ಅವರು ಬರುತ್ತಾರೆ. ಅರಬ್ ದೇಶದ ಮಕ್ಕಾ ನಗರದಲ್ಲಿ ಇವರ ಜನ್ಮವಾಯಿತು. ಇಪ್ಪತ್ತಾರು ವರ್ಷ ವಯಸ್ಸಿನಲ್ಲಿ ಇವರು ಬಿಜಾಪುರಕ್ಕೆ ಬಂದು, ಅಲ್ಲಿದ್ದ ಪ್ರಸಿದ್ಧ ಸಂತ 'ಹಜರತ್ ಕಮಾಲುದ್ದೀನ್ ಬಯಾಬಾನಿ' ಅವರ ಶಿಷ್ಯರಾದರು. ಮೀರಾಂಜಿ ಅವರ ಕೃತಿಗಳಲ್ಲಿ 'ಖುಕ್‌ನಾಮಾ' 'ಖುಶನಗ್ಜ' 'ಶಹಾತತುತ್-ತಹಖೀಖ್' 'ಮಾಗ್ಜ-ಮಾರ್‌ಗೂಬ್' ಬಹಳವಾದುವು. "ಖುಶ್‌ನಾಮಾ" ಪ್ರಶ್ನೋತ್ತರ ಶೈಲಿಯಲ್ಲಿರುವ ಕಾವ್ಯ. ಶಿಷ್ಯೆ ಇಸ್ಲಾಮ್ ಧರ್ಮದ ವಿವಿಧ ತತ್ವಗಳ ಬಗ್ಗೆ ಪ್ರಶ್ನೆ ಕೇಳುತ್ತಾಳೆ. ಗುರುಗಳು ಉತ್ತರಿಸುತ್ತಾರೆ. "ಖುಶ್ ನಗ್"ನಲ್ಲಿ ಆತ್ಮ ಪರಮಾತ್ಮ, ಜೀವ ಜಗತ್ತು, ಸಾಧನೆ ಮುಂತಾದ ವಿಷಯಗಳ ವಿವರಣೆ ಇದೆ. ಕ್ರಿ. ಶ. ೧೪೯೬ ಮೀರಾಂಜ್ ಅವರ ದೇಹಾಂತವಾಯಿತು.

"ಸೈಯದ್ ಶಾಹ್ ಅಶ್‌ರಫ್ ಬಯಾಬಾನಿ" ಅವರು ಮೀರಾಂಜಿ ಅವರ ಸಮಕಾಲೀನರಾಗಿದ್ದರು. ಇವರ ಕಾವ್ಯಗಳಲ್ಲಿ "ಲಾಜಿಮುಲ್-ಮುಬ್‌ತದಾ" "ವಾಹದಾ ಬಾರಿ" ಮತ್ತು "ನೌ ಸರ್‌ಹಾರ್" ಬಹಳ ಮುಖ್ಯವಾದವು. ಮನುಷ್ಯನ ಜೀವನದಲ್ಲಿ ಧರ್ಮದ ಸ್ಥಾನದ ವರ್ಣನೆ "ಲಾಜಿಮುಲ್ - ಮುಬತದಾ" ದಲ್ಲಿ ದೊರಕುತ್ತದೆ. ಇವರ ನಿಧನ ಕ್ರಿ.ಶ. ೧೫೨೮ ರಲ್ಲಾಯಿತು.

ಬುರ್‌ಹಾನುದ್ದೀನ್ ಜಾನಮ್ ಮೀರಾಂಜಿ ಅವರ ಪುತ್ರರು. ಇವರ ಜನ್ಮ ಬಿಜಾಪುರದಲ್ಲಾಯಿತು. ಇವರ ಗ್ರಂಥಗಳಲ್ಲಿ "ಇರ್‌ಶಾದನಾಮಾ", "ವಶೀಯತುಲ್ ಹಾದಿ", "ಬಶಾರತುಜ್ಜರರ್", "ಸುಖ್-ಸುಹೇಲಾ" ಮತ್ತು "ಮುನ್‌ಫತುಲ್ ಈಮಾನಿ" ಮುಖ್ಯವಾದುವು. ಇಸ್ಲಾಂ ಮತದ ತತ್ವಗಳು, ಹಾಗೂ ಇದರ ಮೂಲಕ ಸತ್ಯ-ಅಸತ್ಯ, ಆತ್ಮ-ಇಂದ್ರಿಯಗಳು ಸ್ವರ್ಗ-ನರಕಗಳನ್ನರಿಯುವ ವಿವರಣೆ ಈ ಗ್ರಂಥದಲ್ಲಿದೆ. ಕ್ರಿ.ಶ. ೧೫೮೨ ರಲ್ಲಿ ಇವರು ಮೃತರಾದರು.

"ಅಮೀನುದ್ದಿನ್ ಅಲೀ ಆಲಾ" ಅವರು ಜಾನಮ್ ಅವರ ಅನಂತರ ಬರುವ ಮುಖ್ಯ ಸಾಹಿತಿಗಳು. ಉರ್ದು ಸಾಹಿತ್ಯದ ಪ್ರಥಮ ಗದ್ಯಗ್ರಂಥ "ಕಲೀಮತುಲ್-ಹಖಾಯಖ್" ಇವರ ಪ್ರಮುಖ ರಚನೆಯಾಗಿದೆ. ಇಸ್ಲಾಂ ಧರ್ಮದ ತತ್ವಗಳ ಸಮಗ್ರ ವರ್ಣನೆ ಈ ಕೃತಿಯಲ್ಲಿದೆ. ಇವರ ಉಳಿದ ಗ್ರಂಥಗಳಲ್ಲಿ "ಕಲಮತುಲ್-ಅಸ್‌ರಾರ್", "ವಜೂದಿಯಾ", ಮತ್ತು "ರಮೂಜುಜ್-ಸಾಲಿಕೀನ್" ಮುಖ್ಯವಾದವು. ಕ್ರಿ.ಶ. ೧೬೭೫ ರಲ್ಲಿ ಇವರು ನಿಧನರಾದರು.

ಇವರ ಅನಂತರ ಬರುವ ಪ್ರಮುಖ ಕವಿಗಳೆಂದರೆ ಮುಲ್ಲಾವಜಹೀ. ಇವರ ಕಾಲ ಕ್ರಿ.ಶ. ೧೬೫೯. ಇಸ್ಲಾಂ ತತ್ವದ ವರ್ಣನೆ ಬರುವ ಇವರ ಗ್ರಂಥ "ತಾಜುಲ್ ಹಖಾಯ್" ಬಹಳ ಮುಖ್ಯವಾದುದ್ದು. ಮಿರಾನ್ ಹಾಶಿಮಿ ಅವರ ಕಾಲ ಕ್ರಿ. ಶ. ೧೬೯೭. ಪ್ರವಾದಿ ಮಹಮ್ಮದ್ (ಸಲ್ಲಿಂ) ಅವರ ದಿವ್ಯಯಾತ್ರೆಯನ್ನು ವರ್ಣಿಸಿರುವ ಇವರ ಗ್ರಂಥ "ಮೇರಾಜ್ ನಾಮಾ" ಉಲ್ಲೇಖನೀಯವಾದುದು. ಮಖ್‌ದೂಮ್ ಶಾಹ್ ಹುಸೈನಿ ಅವರ ಕಾಲ ಕ್ರಿ. ಶ. ೧೬೨೨, ಇವರ ಕೃತಿ "ತಿಲಾವತುಲ್-ವಜೂದ್" ಪ್ರಾರ್ಥನೆ ಮತ್ತು ಆತ್ಮಶುದ್ಧಿಯ ಮೇಲೆ ಬರೆಯಲಾದ ಬಹಳ ಸುಂದರ ಕೃತಿ. ಕ್ರಿ.ಶ. ೧೮೦೦ರ ಅನಂತರ ಬರುವ ಸಂತರಲ್ಲಿ ತುಮಕೂರು ಜಿಲ್ಲೆಯ ಸಿರಾದಲ್ಲಿಯ ಆರಿಫ್ ಶಾಹ್ ಖಾದ್ರಿ, ಬೆಂಗಳೂರು ಜಿಲ್ಲೆಯ ನೆಲ-ಮಂಗಲದಲ್ಲಿ ಸಮಾಧಿಯಾಗಿರುವ ಶಹಾ ಸದರದ್ದೀನ್, ಕೋಲಾರಿನ ಹಜರತ್ ಅಹಮದ್ ಖಾನ್‌ಶೀರಾನಿ, ಮೈಸೂರಿನ ಅಬ್ದುಲ್ ರಹೀಮ್ ದರ್ಗಾಹಿ ಮತ್ತು ಹೈ ವಾಯೀಜ್, ಇವರುಗಳ ರಚನೆಗಳಲ್ಲಿಯೂ ಇಸ್ಲಾಂ ತತ್ವದ ಪೂರ್ಣ ಪ್ರಭಾವವನ್ನು ಗುರುತಿಸಬಹುದು. ಕನ್ನಡದ ವಚನಕಾರ ಶಿಶುನಾಳ ಷರೀಫ್ ಸಾಹೇಬರ ಸಾಹಿತ್ಯದಲ್ಲಿ ಇಸ್ಲಾಂ ಮತದ ಪ್ರಭಾವವನ್ನು ನೋಡಬಹುದು.

## ವಾಸ್ತುಶಿಲ್ಪ

ಕರ್ನಾಟಕದಲ್ಲಿ ಸ್ಥಾಪನೆಗೊಂಡಿದ್ದ ಬಹಮನಿ ರಾಜ್ಯದ ಕಾಲದಲ್ಲಿ ಗುಲ್ಬರ್ಗಾ ಮತ್ತು ಬೀದರ್‌ನಲ್ಲಿ ಕಟ್ಟಲಾದ ಮಸೀದಿ ಮತ್ತು ಗೋಪುರಗಳ ಶೈಲಿಯ ಮೇಲೆ ಇಸ್ಲಾಮಿನ ಪ್ರಭಾವ ಬಿದ್ದಿದೆ. ಕಲಾತ್ಮಕ ಸೌಂದರ್ಯಕ್ಕೆ ಇವು ಸಾಕ್ಷಿಯಾಗಿವೆ. ಜುಮ್ಮಾಮಸೀದಿ, ಬೀದರಿನ ೧೬ ಸ್ತಂಭಗಳ ಮಸೀದಿ, ರಂಗೀನ್ ಮತ್ತು ತಾರ್‌ಕಶ್ ಮಹಲ್, ಬೀದರ್ ಜಿಲ್ಲೆಯ ಆಷ್ಟೂರ್‌ನಲ್ಲಿ ಕಟ್ಟಲಾದ ಹನ್ನೆರಡು ಗೋಪುರಗಳು, ಮಹಮುದ್

ಗವಾನ್ ಕಟ್ಟಿಸಿದ ವಿಶ್ವವಿದ್ಯಾನಿಲಯ, ಇಂದೂ ತಮ್ಮ ವೈಭವಕ್ಕೆ ಮೌನ ಸಾಕ್ಷಿಗಳಾಗಿ ನಿಂತಿವೆ.

ಆದಿಲ್‌ಶಾಹಿ ರಾಜ್ಯದಲ್ಲಿ ಕಟ್ಟಲಾದ 'ಗೋಲ್ ಗುಂಬಜ್' ಜಗತ್ತಿನ ಅತ್ಯುತ್ತಮ ಕಲಾಕೃತಿಗಳಲ್ಲೊಂದಾಗಿದೆ. ಕ್ರಿ. ಶ. ೧೬೭೧ರಲ್ಲಿ ಕಟ್ಟಲಾದ "ಇಬ್ರಾಹೀಂ-ರೋಜಾ" ಮತ್ತು ಗಗನ್ ಮಹಲ್, ಎರಡನೆಯ ಇಬ್ರಾಹೀಂ ಕಾಲದಲ್ಲಿ ನಿರ್ಮಿಸಲಾದ ಸಾತ್ ಮಂಜಿಲ್ ಮತ್ತು ಮಹತರ್ ಮಹಲ್. ಅಲಿಯ ಕಾಲದ ಲಕ್ಷ್ಮೇಶ್ವರದ ಮಸೀದಿ, ಬಿಜಾಪುರ ಜಿಲ್ಲೆಯ ಕುಮಟಗಿ ಹಳ್ಳಿಯಲ್ಲಿರುವ ಅಸರ್‌ಮಹಲ್ ಇಸ್ಲಾಮೀ ಪ್ರಭಾವದಿಂದ ಕೂಡಿದ ಕಲಾತ್ಮಕ ಕಟ್ಟಡಗಳಾಗಿವೆ. ಹೈದರ್ ಆಲಿ, ಟಿಪ್ಪು ಸುಲ್ತಾನರ ಕಾಲದಲ್ಲಿ ಶ್ರೀರಂಗ ಪಟ್ಟಣದಲ್ಲಿ ಕಟ್ಟಲಾದ ಮಸೀದಿಗಳ ಸ್ಥಾಪತ್ಯದಲ್ಲೂ ಇಸ್ಲಾಮೀ ಪ್ರಭಾವ ನೋಡಬಹುದು.

## ಜ್ಞಾನ, ಸಂಸ್ಕೃತಿ ಕೇಂದ್ರಗಳು

ಇಸ್ಲಾಂ-ಧರ್ಮದ ಪ್ರಸಾರ ಕರ್ನಾಟಕದಲ್ಲಿ ಹಜರತ್ ದಾದಾ ಹಯಾತ್ ಮೀರ್ ಖಲಂದರ್‌ರವರ ಕಾಲದಲ್ಲೇ ಪ್ರಾರಂಭವಾಯಿತು. ಅಂದಿನಿಂದ ಸುಮಾರು ಹದಿನೆಂಟನೆಯ ಶತಮಾನದವರೆಗೂ ಈ ಕಾರ್ಯ ಕೇವಲ ಸಂತರಿಂದ ನಡೆಯಿತು. ಅವರು ಪ್ರಸಾರಕ್ಕಾಗಿ ಪ್ರಸಾರ ಮಾಡಲಿಲ್ಲ. ತಮ್ಮ ಜೀವನವೇ ಇಸ್ಲಾಮ್‌ಮಯವಾಗಿಟ್ಟು ಕೊಂಡಿದ್ದರು. ಕಾಯೇನ ವಾಚಾ ಮನಸಾ ತ್ರಿಕರಣ ಶುದ್ಧಿಯಿಂದ ಮಾನವ ಜನಾಂಗದ ಸೇವೆ ಮಾಡುತ್ತಿದ್ದರು. ಸನ್ಮಾರ್ಗದ ದಾರಿ ದೀವಿಗೆಗಳಾಗಿ ಇವರಿದ್ದರು. ಗುಲ್ಬರ್ಗಾದಲ್ಲಿರುವ ಹಜರತ್ ಖ್ವಾಜಾ ಬಂದೇನವಾಜ್ ಗೇಸುದರಾಸ್, ಬಾಬಾಬುಡನ್‌ಗಿರಿಯಲ್ಲಿರುವ ಹಜರತ್ ದಾದಾ ಹಯತ್ ಮೀರ್ ಖಲಂದರ್, ಮಂಗಳೂರಿನ ಉಲ್ಲಾಳದಲ್ಲಿರುವ ಹಜರತ್ ಸೈಯದ್ ಮದನಿ ಶಹಮತುಲ್ಲಾ ಅಲೈಹಿ, ಬೆಂಗಳೂರಿನಲ್ಲಿರುವ ಹಜರತ್ ತವಕ್ಕೈಲ್ ಮಸ್ತಾನ್, ತುಮಕೂರು ಜಿಲ್ಲೆಯ ಕೆಸರ್‌ಮಡುವಿನಲ್ಲಿರುವ ಹಜರತ್ ಮೋಮಿನ್ ಬಾಷಾ ಖಾದ್ರಿ, ಕೋಲಾರ ಜಿಲ್ಲೆಯ ಮುರುಗ್‌ಮಲ್ಲಾದಲ್ಲಿರುವ ಅಮ್ಮಾಜಾನ್, ಬಾವಾಜಾನ್ ಹಜರತ್ ಖಾಹಶಾಹ್ ಮೌಲಾ, ಈ ದರ್ಗಾಹ್‌ಗಳಲ್ಲಿ ಸಮಾಧಿ ಹೊಂದಿರುವ ಸಂತರು ಉಲ್ಲೇಖಾರ್ಹ ಕಾರ್ಯ ಮಾಡಿದವರು. ಇಂದೂ ಎಲ್ಲಾ ಮತದವರು ಇವರ ದರ್ಗಾಹ್‌ಗಳಿಗೆ ದರ್ಶನಕ್ಕಾಗಿ ಹೋಗುತ್ತಾರೆ. ಇಂದು ಈ ದರ್ಗಾಹ್‌ಗಳು ಪ್ರಮುಖ ಕೇಂದ್ರಗಳ ರೀತಿಯಲ್ಲಿವೆ.

ಇಸ್ಲಾಂ ಧರ್ಮ ಶಾಸ್ತ್ರ, ಹದೀಸ್, ಕುರಾನ್ ಮುಂತಾದ ಶಾಸ್ತ್ರಗಳ ಅಧ್ಯಯನ ಕೆಲವು ಮದ್ರಸಾಗಳಲ್ಲಿ ನಡೆಯುತ್ತದೆ. ಮಂಗಳೂರಿನ ಉಳ್ಳಾಲದಲ್ಲಿರುವ ಅರಾಬಿಕ್ ಕಾಲೇಜು, ಬೆಂಗಳೂರು ಕಾಡಗೋಡನ ಹಳ್ಳಿಯಲ್ಲಿರುವ ಶಬೀರುಲ್‌ಇರ್ಷಾದ್ ಕಾಲೇಜು ಕರ್ನಾಟಕದ ಮುಖ್ಯ ಕೇಂದ್ರಗಳಾಗಿವೆ. ಇಪ್ಪತ್ತನೆಯ ಶತಮಾನದವರೆಗೆ ಇಸ್ಲಾಮಿನ ಮೇಲೆ ಗ್ರಂಥಗಳು ಕೇವಲ ಉರ್ದು ಭಾಷೆಯಲ್ಲಿ ದೊರಕುತ್ತಿದ್ದವು. ಈಗ ಕನ್ನಡದಲ್ಲಿಯೂ ಈ ಬಗ್ಗೆ ಗ್ರಂಥಗಳು ದೊರೆಯುತ್ತಿವೆ. ಈ ಲೇಖನದ ಲೇಖಕ ಸಂಪೂರ್ಣ ದಿವ್ಯ ಕುರಾನನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾನೆ. ಅದರ ದ್ವಿತೀಯ ಸಂಸ್ಕರಣ ಈಗ ಬಂದಿದೆ. ಕರ್ನಾಟಕದಲ್ಲಿ ಮುಸಲ್ಮಾನರು ಅಲ್ಪಸಂಖ್ಯಾತರಾಗಿದ್ದಾರೆ.

# ಕರ್ನಾಟಕದಲ್ಲಿ ಕ್ರೈಸ್ತ ಧರ್ಮ

ನಾ. ಡಿಸೋಜ

ಕ್ರೈಸ್ತಧರ್ಮ ಭಾರತದ ಪ್ರಾಚೀನ ಧರ್ಮಗಳಲ್ಲಿ ಒಂದು ಎಂದು ಕರೆಯಲ್ಪಡಲು ಕಾರಣವಿದೆ. ಕ್ರಿಸ್ತನ ಮರಣಾನಂತರ ಅವನ ೧೨ ಮಂದಿ ಶಿಷ್ಯರಲ್ಲಿ ಓರ್ವನಾದ ಸಂತ ಥಾಮಸ್ ಕ್ರಿ. ಶ. ೫೨ರಲ್ಲಿ ಮಲಬಾರಿನ ತೀರಪ್ರದೇಶಕ್ಕೆ ಬಂದು ಇಲ್ಲಿ ಕ್ರೈಸ್ತ ಮತವನ್ನು ಪ್ರಚಾರ ಮಾಡಿದ. ಥಾಮಸ್ ಕಟ್ಟಿಸಿದ ಏಳು ಚರ್ಚ್‌ಗಳನ್ನು ಇತಿಹಾಸಕಾರರು ಇಂದಿಗೂ ಗುರುತಿಸುತ್ತಾರೆ. ಕ್ರಿ. ಶ. ೭೨ರಲ್ಲಿ ಮದರಾಸಿನ ಮೈಲಾಪುರದಲ್ಲಿ ಥಾಮಸ್ ತೀರಿಕೊಂಡನೆಂದು ಹೇಳಲಾಗಿದೆ. ತಾವು ಥಾಮಸ್‌ನಿಂದ ಕ್ರೈಸ್ತ ದೀಕ್ಷೆ ಪಡೆದ ಪ್ರಥಮ ಭಾರತೀಯರೆಂದು ಕೇರಳದ ಸೀರಿಯನ್ ಕ್ರಿಶ್ಚಿಯನ್ನರು ಹೇಳಿಕೊಳ್ಳುತ್ತಾರೆ.

ಕ್ರಿ. ಪೂ. ೫ನೇ ಶತಮಾನದಿಂದಲೇ ಸಮುದ್ರ ಮಾರ್ಗವಾಗಿ ವಿದೇಶಿ ಪ್ರವಾಸಿಗಳು ಭಾರತದ ಕಡಲ ತೀರಕ್ಕೋ, ಒಳನಾಡಿಗೋ ಬಂದು ಹೋಗಲಾರಂಭಿಸಿದ್ದರಿಂದ ಕ್ರಿಸ್ತನ ಶಿಷ್ಯ ಥಾಮಸ್‌ನು, ಅವನ ಧರ್ಮ ಪ್ರಚಾರಕರು ಇಲ್ಲಿಗೆ ಬಂದುದರಲ್ಲಿ ಅಚ್ಚರಿ ಏನಿಲ್ಲ. ಪೋರ್ಚುಗೀಸರು ಗೋವೆಗೆ ಬಂದ ನಂತರವೇ ಇಲ್ಲಿ ಕ್ರೈಸ್ತ ಮತದ ಚಟುವಟಿಕೆಗಳು ಹೆಚ್ಚಿದವಾದರೂ ಅದಕ್ಕೂ ಶತಮಾನಗಳ ಹಿಂದೆ ಇಲ್ಲಿ ಕ್ರೈಸ್ತರಿದ್ದರು ಎಂಬುದಕ್ಕೆ ಆಧಾರಗಳಿವೆ.

ಸಂತ ಥಾಮಸ್‌ನ ಜೀವನದೊಡನೆಯೇ ಉಲ್ಲೇಖಿಸಲಾಗುವ ದೊರೆಗಳು ಕನ್ನಡ ನಾಡಿನವರೇ ಆಗಿದ್ದರೆಂಬ ಹೇಳಿಕೆಯಿದೆ. ಮೈಲಾಪುರದ ಥಾಮಸ್‌ನ ಸಮಾಧಿ ದೇವಾಲಯಕ್ಕೆ ಉಂಬಳಿ ಬರೆಸಿದವನು ಬುಕ್ಕರಾಯನೆಂಬುದು ಕೂಡ ಗಮನಾರ್ಹವಾದ ವಿಷಯ.

ಎರಡನೆಯ ಹಾಗೂ ನಾಲ್ಕನೆಯ ಶತಮಾನಗಳಲ್ಲಿ ಕೊಂಕಣ ಪ್ರದೇಶದಲ್ಲಿ ಕ್ರೈಸ್ತ ಧರ್ಮ ಪ್ರಚಾರದಲ್ಲಿತ್ತೆಂದು ಪ್ರವಾಸಿಗಳಾದ ಪಾಂತೈನೋಸ್ ಹಾಗೂ ಸಾಂಚೆರೋಮೆ ಬರೆದಿದ್ದಾರೆ. ಕ್ರಿ ಶ. ೩೪೫ರಲ್ಲಿ ಓರ್ವ ಶ್ರೀಮಂತ ಕ್ರೈಸ್ತ ವರ್ತಕ ನಾನೂರು ಜನರ ತನ್ನ ಪರಿವಾರದೊಡನೆ ಮಲಬಾರಿಗೆ ಬಂದದ್ದು, ಕ್ರಿ. ಶ. ೫೨೦–೫೨೫ರಲ್ಲಿ ಈಜಿಪ್ಟಿನ ಓರ್ವ ಪ್ರವಾಸಿ ಕೊಂಕಣ ಪ್ರದೇಶದಲ್ಲಿ, ಇಲ್ಲಿಯ ಚರ್ಚುಗಳ ವಿಷಯ ಹೇಳಿರುವುದು, ಅನಂತರದ ಪ್ರವಾಸಿಗಳು ಕೂಡಾ ಇಲ್ಲಿಯ ಕ್ರೈಸ್ತ ಧರ್ಮೀಯರ ಬಗ್ಗೆ ಅಲ್ಲಲ್ಲಿ ಉಲ್ಲೇಖಿಸಿರುವುದು, ಮಲಬಾರು ಕೊಂಕಣ ಕರ್ನಾಟಕಗಳಲ್ಲಿ ಕ್ರೈಸ್ತ ಧರ್ಮ ಹಿಂದಿನ ಕಾಲದಿಂದಲೂ ನೆಲೆ ನಿಂತಿತ್ತೆಂಬುದನ್ನು ಸಮರ್ಥಿಸುತ್ತದೆ. ಕನ್ನಡ ಜಿಲ್ಲೆಯ ಕಲ್ಯಾಣಪುರದಲ್ಲಿ ಕ್ರಿ. ಶ. ಮೊದಲನೆ ಶತಮಾನದಲ್ಲಿಯೇ ಹೀಬ್ರೂ ಭಾಷೆಯ ಬೈಬಲ್ ಗ್ರಂಥ ಬಳಕೆಯಲ್ಲಿತ್ತೆಂದು ಕೂಡಾ ಹೇಳಲಾಗಿದೆ.

ಕ್ರಿ. ಶ. ೧೫೨೪ರಲ್ಲಿ ಐದು ಮಂದಿ ಡೊಮೆನಿಕನ್ ಪಾದ್ರಿಗಳು ಕನ್ನಡ ನೆಲದಲ್ಲಿ ಮತ ಪ್ರಚಾರ ಕೈಗೊಂಡರು. ಆಗ ಇಲ್ಲಿ ಸುಮಾರು ಹತ್ತು ಸಾವಿರ ಕ್ರೈಸ್ತರು ಇದ್ದರೆಂದು ಹೇಳಲಾಗಿದೆ. ವಿಜಯನಗರದ ಅರಸರ ಕಾಲದಲ್ಲಿ ಯಹೂದಿಗಳೂ, ಮುಸ್ಲಿಮರೂ ಮಾತ್ರವಲ್ಲದೇ ಕ್ರೈಸ್ತರು ಕೂಡಾ ಇದ್ದರು. ಕ್ರಿ. ಶ. ೧೪೪೫ರಲ್ಲಿ ವಿಜಯನಾಗರದ ಅರಸರ ಬಳಿ ಒಬ್ಬ ಕ್ರೈಸ್ತ ದಿವಾನ ಕೂಡ ಇದ್ದನೆಂದು ಹೇಳಲಾಗಿದ್ದು, ಇವನು ಕ್ರೈಸ್ತ ಮತಕ್ಕೆ ಮತಾಂತರಗೊಂಡ ಹಿಂದುಗಳ ವಂಶಸ್ಥನಾಗಿದ್ದಿರಬಹುದೆಂದು ಹಯವದನರಾಯರು ಅಭಿಪ್ರಾಯ ಪಟ್ಟಿದ್ದಾರೆ.

### ಕ್ರೈಸ್ತ ಪಂಥಗಳ ಆಗಮನ

ಏಸುಕ್ರಿಸ್ತ ಸ್ಥಾಪಿಸಿದ್ದು ಒಂದೇ ಧರ್ಮವಾದರೂ ಅದು ಕಾಲಕ್ರಮೇಣ ಹಲವು ಪಂಥಗಳಾಗಿ ಒಡೆದುಕೊಂಡದ್ದು ಒಂದು ವಿಚಿತ್ರವೇ. ಒಳಗಿನ ಭಿನ್ನಾಭಿಪ್ರಾಯಗಳಿಂದಾಗಿ, ಹೊರಗಿನ ಆಚರಣೆಗಳಿಂದಾಗಿ ಕ್ರೈಸ್ತಧರ್ಮ ಭಿನ್ನ ಭಿನ್ನ ಪಂಥಗಳಿಗೆ ಎಡೆಕೊಟ್ಟಿತು. ಪ್ರಮುಖವಾದ ರೋಮನ್ ಕ್ಯಾಥೋಲಿಕ್ ಪಂಥ ಒಂದಾಯಿತು. ರೋಮನ್ ಪ್ರಭುತ್ವ ಸಂಪ್ರದಾಯಗಳನ್ನು ವಿರೋಧಿಸಿ ಹೊರಬಂದವರು ಪ್ರಾಟೆಸ್ಟೆಂಟರಾದರು.

ಇಂದು ಕರ್ನಾಟಕದಲ್ಲಿ ಆರೂವರೆ ಲಕ್ಷ ಕ್ರೈಸ್ತರಿದ್ದಾರೆ. ಇವರಲ್ಲಿ ಅಧಿಕ ಸಂಖ್ಯಾತರು, ಅಂದರೆ ಸುಮಾರು ಐದೂವರೆ ಲಕ್ಷ ಜನ ಕ್ಯಾಥೋಲಿಕರು. ಉಳಿದವರು ಪ್ರಾಟೆಸ್ಟೆಂಟರು. ಪ್ರಾಟೆಸ್ಟೆಂಟರೆಲ್ಲಾ ಈಗ ದಕ್ಷಿಣ ಭಾರತ ಸಭಾ (ಚರ್ಚ್ ಆಫ್ ಸೌತ್ ಇಂಡಿಯಾ) ಎಂಬ ಹೆಸರಿನ ಅಡಿಯಲ್ಲಿ ಏಕತೆ ಸಾಧಿಸಿಕೊಂಡಿದ್ದಾರಾದರೂ ಇವರು ಒಂದು ಕಾಲದಲ್ಲಿ ಕರ್ನಾಟಕಕ್ಕೆ ಬಂದದ್ದು, ಕರ್ನಾಟಕದಲ್ಲಿ ಬೆಳೆದದ್ದು, ಬೇರೆ ಬೇರೆಯಾಗಿಯೇ. ಬಾಸೆಲ್‌ಮಿಷನ್, ವೆಸ್ಲಿ ಮಿಷನ್ ಅಂಜಲಿಕನ್, ಮಾರ್ಥೋಮಾ ಸೀರಿಯನ್, ಎಪಿಸ್ಕೋಪಲ್, ಮೆಥಾಡಿಸ್ಟ, ಪೆಂಟಿಕೋಸ್ಟ ಎಂದೆಲ್ಲ ಪ್ರತ್ಯೇಕ ಹೆಸರುಗಳೊಡನೆ ಮತಪ್ರಚಾರ, ಶಿಕ್ಷಣ ವೈದ್ಯ ಮೊದಲಾದ ಸೇವಾರಂಗಗಳಲ್ಲಿ ಈ ಸಭೆಗಳು ದುಡಿದು ಕರ್ನಾಟಕದ ಅಭಿವೃದ್ಧಿಗೆ ಕಾರಣವಾದವು.

ಪೋರ್ಚುಗೀಸರು, ಬ್ರಿಟಿಷರು ಭಾರತಕ್ಕೆ ಆಗಮಿಸಿದ ಅನಂತರ ಕ್ಯಾಥೋಲಿಕರ, ಪ್ರಾಟೆಸ್ಟೆಂಟ್ ಮಿಷನ್ನುಗಳ ಚಟುವಟಿಕೆ ಕರ್ನಾಟಕದಲ್ಲಿ ಅಧಿಕವಾಯಿತು. ಕ್ರಿ. ಶ. ೧೪೯೮ರಲ್ಲಿ ವಾಸ್ಕೋಡಿಗಾಮ ಕರ್ನಾಟಕದ ಸ್ಯೆಂಟ್ ಮೇರಿ ದ್ವೀಪದ ಮೇಲೆ ಕಾಲಿರಿಸಿದ. ೧೫೧೦ರಲ್ಲಿ ಗೋವೆ ಪೋರ್ಚುಗೀಸರ ವಶವಾಯಿತು. ಪೋರ್ಚುಗೀಸರು ಮತಾಂತರ ಕಾರ್ಯವನ್ನು ತ್ವರಿತಗೊಳಿಸಿದರು. ಅವರು ವಿಜಯನಗರ, ಇಕ್ಕೇರಿ ಮೊದಲಾದ ದೊರೆಗಳೊಡನೆ ಸಂಪರ್ಕ ಇರಿಸಿಕೊಂಡಿದ್ದರಿಂದ ಪೋರ್ಚುಗೀಸ್ ಪಾದ್ರಿಗಳು ಮತಾಂತರ, ಮತ ಪ್ರಚಾರ ಮಾಡಲು ಕನ್ನಡ ನಾಡಿಗೂ ಬರಲಾರಂಭಿಸಿದರು.

ಕ್ರಿ. ಶ. ೧೫೬೦ರಲ್ಲಿ ಗೋವಾದ ಪೋರ್ಚುಗೀಸರು ಮತಾಂತರಗೊಂಡ ಕ್ರೈಸ್ತರನ್ನು ಶಿಕ್ಷಿಸಲು ಇನ್‌ಕ್ವಿಜಿಷನ್ (ಧಾರ್ಮಿಕ ವಿಚಾರಣೆ) ಆರಂಭಿಸಿದರು. ಮತಾಂತರಗೊಂಡ ಕ್ರೈಸ್ತರು ಅಂತರಂಗದಲ್ಲಿ ಹಿಂದಿನ ದೇವರುಗಳನ್ನೇ ನಂಬುತ್ತಾ, ಹಿಂದಿನ ಆಚಾರಗಳನ್ನೇ ಪಾಲಿಸುತ್ತಾ, ಹೊರಗೆ ಮಾತ್ರ ಕ್ರೈಸ್ತರಂತೆ ನಟಿಸುತ್ತಿದ್ದುದನ್ನು ತಪ್ಪಿಸುವುದೆ ಈ ಉಗ್ರ ವಿಚಾರಣೆಯ ಉದ್ದೇಶವಾಗಿತ್ತು. ಈ ವಿಚಾರಣಾಕ್ರಮ ಭಯಾನಕವೂ, ಅಮಾನುಷವೂ ಆಗಿದ್ದರಿಂದ ಪದ್ಧತಿಗಳನ್ನು ಬಿಡಲೊಪ್ಪದ ಕ್ರೈಸ್ತರು ಗೋವೆಯಿಂದ ಓಡಿಬಂದು ಕನ್ನಡ ನಾಡನ್ನು ಹೊಕ್ಕರು. ಹೀಗೆ ಬಂದವರು ಕರಾವಳಿ ತೀರದ ಉದ್ದಕ್ಕೂ ಅಂದರೆ ಗಂಗೊಳ್ಳಿ, ಕುಂದಾಪುರ, ಬಸ್ರೂರು, ಮುಲ್ಕಿ, ಮಂಗಳೂರು, ಬಂಟ್ವಾಳಗಳ ವರೆಗೂ ಹಬ್ಬಿಕೊಂಡರು. ವಿಜಯನಗರ, ಇಕ್ಕೇರಿ, ಸೋಂದೆಯ ಅರಸರು ಹೀಗೆ ಬಂದ ಕ್ರಿಸ್ತರಿಗೆ ಭೂಮಿ ನೀಡಿ ಅವರನ್ನು ರಕ್ಷಿಸಿದರು. ಇವರೇ ಇಂದಿನ ಕೊಂಕಣಿ ಕ್ಯಾಥೋಲಿಕರು.

ಅಲ್ಲದೆ ಇಕ್ಕೇರಿ ಹಾಗೂ ಸೋಂದಾ ದೊರೆಗಳ ಅನುಗ್ರಹದಿಂದ ಫ್ರಾನ್ಸಿಸ್ಕನ್ನರು ಮತ್ತು ಜೆಸುಯಿಟ್ ಪಾದ್ರಿಗಳು ಕರಾವಳಿ ಪ್ರದೇಶದಲ್ಲಿ ಕ್ರೈಸ್ತಮತ ಪ್ರಚಾರದ ಜೊತೆಗೆ ದೇವಾಲಯಗಳನ್ನೂ ಸ್ಥಾಪಿಸಿ ಕ್ರೈಸ್ತಮತವನ್ನು ಅಭಿವೃದ್ಧಿಪಡಿಸಲಾರಂಭಿಸಿದರು. ಇವರ ಚಟುವಟಿಕೆ ಉಲ್ಲಾಳ, ಮಂಗಳೂರು, ಬಸ್ರೂರು, ಕಾರವಾರಗಳಿಂದ ಖಾನಾಪುರದ ವರೆಗೂ ಹಬ್ಬಿತ್ತು.

ಕ್ರಿ. ಶ. ೧೫೮೭ರ ಸುಮಾರಿಗೆ ಅಂದಿನ ಮೈಸೂರು ರಾಜ್ಯದಲ್ಲಿ ಕೂಡ ಕ್ರೈಸ್ತ ಮಿಷನರಿಗಳ ಚಟುವಟಿಕೆ ಕಂಡು ಬಂತು. ಮೈಸೂರಿನ ದೊರೆಗಳು ಈ ಕಾರ್ಯಕ್ಕೆ ತಮ್ಮ ಅನುಮತಿ ನೀಡಿದ್ದು ಮೈಸೂರು ರಾಜ್ಯದಲ್ಲಿ ಕ್ರೈಸ್ತಧರ್ಮ ಬಲವಾಗಿ ಕಾಲೂರಲು ಸಾಧ್ಯವಾಯಿತು.

ಟಿಪ್ಪು ಸುಲ್ತಾನನ ಕಾಲದಲ್ಲಿ ಇಲ್ಲಿಯ ಕ್ರೈಸ್ತರ ಮೇಲೆ ದೊಡ್ಡದೊಂದು ಆಘಾತವಾಯಿತು. ಕ್ರೈಸ್ತರು ಇಂಗ್ಲೀಷರಿಗೆ ಸಹಾಯ ಮಾಡಬಹುದೆಂಬ ಗುಮಾನಿಯ ಮೇಲೆ ಟಿಪ್ಪು ಸುಲ್ತಾನನು ಕನ್ನಡ ಜಿಲ್ಲೆ, ಬಿದನೂರುಗಳಲ್ಲಿನ ಸುಮಾರು ೩೦,೦೦೦ ಕ್ರೈಸ್ತರನ್ನು ಬಂಧಿಸಿ ಶ್ರೀರಂಗಪಟ್ಟಣಕ್ಕೆ ಕರೆದೊಯ್ದ. ಸೆರೆಮನೆಯಲ್ಲಿ ವಿವಿಧ ಹಿಂಸೆಗಳನ್ನು ಅನುಭವಿಸಿದ ಇವರಲ್ಲಿ ಕೆಲವೇ ಸಹಸ್ರ ಜನ ಸೆರೆಮನೆಯಿಂದ ಬಿಡುಗಡೆ ಹೊಂದಿ ವಿರಾಜಪೇಟೆ, ತನ್ನೂರು, ಮಂಗಳೂರಿಗೆ ಹಿಂತಿರುಗಿ ಅಲ್ಲಿ ನೆಲಸಲಾರಂಭಿಸಿದರು.

ಗೋವೆಯ ಸಂತ ಫ್ರಾನ್ಸಿಸ್ ಸೇವಿಯರನ ಮತ ಪ್ರಚಾರ ಕಾರ್ಯವು ಅದ್ಭುತ ಎನ್ನುವ ರೀತಿಯಲ್ಲಿ ಆರಂಭವಾಗಿದ್ದರಿಂದ ಇದರ ಗಾಳಿ ಕರ್ನಾಟಕದಲ್ಲೂ ಬೀಸಿ ಇಲ್ಲಿ ಕೂಡಾ ಇತರ ಮತಸ್ಥರು ಕ್ರೈಸ್ತ ಮತಕ್ಕೆ ಮತಾಂತರ ಹೊಂದಿದರು. ಈ ಎಲ್ಲಾ ಕಾರಣಗಳಿಂದಾಗಿ ಕರ್ನಾಟಕದಲ್ಲಿ ಕ್ಯಾಥೊಲಿಕ್ ಕ್ರೈಸ್ತರು ಅಧಿಕ ಸಂಖ್ಯೆಯಲ್ಲಿ ಕಾಣಿಸಿಕೊಂಡರು.

ಪ್ರಾಟೆಸ್ಟೆಂಟ್ ಪಂಥದವರು ಈ ನಾಡಿಗೆ ಬಂದುದು ೧೮೦೦ರ ಅನಂತರವೆಂದೇ ಹೇಳಬೇಕು. ಪೋರ್ಚುಗೀಸರ, ಬ್ರಿಟಿಷರ ಬೆಂಬಲದಿಂದಾಗಿ ಕ್ಯಾಥೊಲಿಕರು ಬೆಳೆದದ್ದೇ ಅಲ್ಲದೆ ಕರ್ನಾಟಕದ ಎಲ್ಲ ಕ್ಯಾಥೊಲಿಕ್ ಕ್ರೈಸ್ತರು ರೋಮಿನ ಪೋಪನ ಮುಂದಾಳುತ್ವವನ್ನು ಆಗಲೇ ಒಪ್ಪಿಕೊಂಡಿದ್ದರು ಆದರೆ ಪ್ರಾಟೆಸ್ಟೆಂಟ್ ಪಂಥಗಳಿಗೆ ಈ ಬಗೆಯ ರಾಜಕೀಯ ಬೆಂಬಲ ಇಲ್ಲಿ ದೊರೆಯಲಿಲ್ಲ.

ಕ್ರಿ. ಶ. ೧೮೧೦ರಲ್ಲಿ ಬಳ್ಳಾರಿಯಲ್ಲಿ ನೆಲಸಿ ತನ್ನ ಮತ ಪ್ರಚಾರ ಕಾರ್ಯವನ್ನು ಆರಂಭಿಸಿದ ಲಂಡನ್ ಮಿಷನ್ ಕನ್ನಡ ನಾಡಿನಲ್ಲಿ ಪ್ರಾರಂಭವಾದ ಮೊಟ್ಟಮೊದಲ ಪ್ರಾಟೆಸ್ಟೆಂಟ್ ಪಂಥವೆಂದು ಹೇಳಲಾಗಿದೆ. ಇದೇ ಸಮಯದಲ್ಲಿ ಮೈಸೂರಿನಲ್ಲಿ ಡೇನಿಷ್‌ಲುಥೇರನ್ ಮಿಷನ್ ತನ್ನ ಕಾರ್ಯವನ್ನು ಆರಂಭಿಸಿತ್ತು.

ಲಂಡನ್ ಮಿಷನ್ ೧೮೨೦ರಲ್ಲಿ ಬೆಳಗಾವಿಯಲ್ಲಿ ಸ್ಥಾಪಿತವಾಗಿ ಬೆಳಗಾವಿಯ ಸುತ್ತಮುತ್ತ ತನ್ನ ಕಾರ್ಯವನ್ನು ಆರಂಭಿಸಿದರೆ ಇದೇ ಸಮಯದಲ್ಲಿ ಲಂಡನ್ ಮಿಷನ್ ಬೆಂಗಳೂರಿನಲ್ಲೂ ಕಾರ್ಯನಿರತವಾಯಿತು.

ವೆಸ್ಲಿ ಮಿಶನ್ ಕ್ರಿ.ಶ. ೧೮೨೦ರಲ್ಲಿ ಮೈಸೂರಿನಲ್ಲಿ ತನ್ನ ಕಾರ್ಯವನ್ನು ಆರಂಭಿಸಿದರೆ, ಬಾಸೆಲ್ ಮಿಷನ್ ಕ್ರಿ.ಶ. ೧೮೩೪ರಲ್ಲಿ ಮಂಗಳೂರಿನಲ್ಲಿ ಮತ ಪ್ರಚಾರಕ್ಕೆ ತೊಡಗಿತು. ಇದೇ ಮಿಶನ್ ೧೮೩೭ರ ಅನಂತರ ಧಾರವಾಡ, ಬೆಟಗೇರಿ, ಗುಳೇದಗುಡ್ಡ, ಬಿಜಾಪುರಗಳಲ್ಲಿ ಜನಪ್ರಿಯವಾಯಿತು.

ವೆಸ್ಲಿ ಮಿಷನ್, ಗುಬ್ಬಿ, ಕುಣಿಗಲ್, ತುಮಕೂರು, ಶಿವಮೊಗ್ಗ, ಹಾಸನಗಳಲ್ಲಿ, ಬಾಸೆಲ್ ಮಿಷನ್ ಹುಬ್ಬಳ್ಳಿ, ಬೆಟಗೇರಿ, ಗುಳೇದ ಗುಡ್ಡಗಳಲ್ಲಿ, ಸೀರಿಯನ್ ಕ್ರಿಶ್ಚಿಯನ್ನರು ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಬೆಳ್ತಂಗಡಿ, ಉಡುಪಿ, ಬ್ರಹ್ಮಾವರಗಳಲ್ಲಿ ನೆಲೆನಿಂತು ಸೇವಾಕಾರ್ಯವನ್ನು ಮುಂದುವರಿಸಿದರು. ಹೊನ್ನಾವರ, ಕುಮುಟಾಗಳಲ್ಲಿ ಸೇವಾನಿರತರಾಗಿರುವ ಮಾರ್ತೋಮಾ ಸೀರಿಯನ್ನರನ್ನೂ ಇಲ್ಲಿ ಮರೆಯುವಂತಿಲ್ಲ.

### ವೈಶಿಷ್ಟ್ಯ—ವೈಭವ

ಏಸುಕ್ರಿಸ್ತನನ್ನು ರಕ್ಷಕನೆಂದು ನಂಬುವ ಕ್ಯಾಥೊಲಿಕರು ಏಸುವಿನ ತಂದೆ ಜೋಸೆಫ್, ತಾಯಿ ಮೇರಿಯಮ್ಮನನ್ನು ಉಳಿದ ಸಂತರನ್ನು ನಂಬುತ್ತಾರೆ. ಗೌರವಿಸುತ್ತಾರೆ. ಸಂತರ ಹೆಸರಿನಲ್ಲಿ ಚರ್ಚುಗಳನ್ನು ಸ್ಥಾಪಿಸಿ, ಸಂತರ ಹುಟ್ಟು ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಾರೆ. ಬೆಂಗಳೂರಿನ ಸಂತ ಮೇರಿ, ಸಂತ ಜೋಸೆಫರ ಚರ್ಚು, ಮೈಸೂರಿನ ಸಂತ ಫಿಲೋಮಿನಾ ಚರ್ಚು, ಮಂಗಳೂರಿನ ಮಿಲಾಗ್ರಿಸ್, ರುಜಾರಿಯೋ, ಹೊನ್ನಾವರದ ಸಲ್ವಾದೋರ್, ಹರಿಹರದ ಆರೋಗ್ಯಮಾತೆ, ದೋರ್ನಹಳ್ಳಿಯ ಸಂತ ಅಂತೋನಿ ಹೀಗೆ ಕರ್ನಾಟಕದಲ್ಲಿ ಅತಿ ಪ್ರಾಚೀನವಾದ ಜನಪ್ರಿಯವಾದ ಚರ್ಚುಗಳನ್ನು ಉಲ್ಲೇಖಿಸಬಹುದು. ಸಂತರ ಹುಟ್ಟು ಹಬ್ಬವನ್ನು ಈ ಚರ್ಚುಗಳಲ್ಲಿ ಜಾತ್ರೆಯೋಪಾದಿಯಲ್ಲಿ ಆಚರಿಸುವುದಲ್ಲದೆ ದೂರದ ಊರುಗಳಿಂದ ಈ ಹಬ್ಬಗಳಿಗೆ ಜನ ಬರುತ್ತಾರೆ. ಈ ಸಂತರಿಗೆ ಹರಕೆ ಹೇಳಿಕೊಂಡವರು ಬೆಳ್ಳಿಬಂಗಾರದ ಒಡವೆಗಳನ್ನು ತೊಟ್ಟಿಲು, ಬಾಲವಿಗ್ರಹ, ಕಣ್ಣು, ಕಿವಿ, ಮೂಗು, ಕೈಕಾಲುಗಳನ್ನು ದೇವರಿಗೆ ನೀಡುವುದು ಉಂಟು, ಯಾವುದೋ

ದೈಹಿಕ ಬಾಧೆಗೆ ಒಳಗಾದ ಜನ ಸಂತನಿಂದ ಆ ಬಾಧೆಗೆ ಪರಿಹಾರ ದೊರಕಿದರೆ ಹೀಗೆ ಹರಕೆ ಒಪ್ಪಿಸುವುದಾಗಿ ಹೇಳಿಕೊಂಡಿರುತ್ತಾರೆ. ಬೆಳ್ಳಿಯ ವಸ್ತುಗಳ ಬದಲು ಮೇಣದ ವಸ್ತುಗಳನ್ನೂ ದೇವರಿಗೆ ನೀಡುವುದುಂಟು.

ಕ್ಯಾಥೋಲಿಕರು ಸಂತರ ಹಬ್ಬವನ್ನಲ್ಲದೆ ಕ್ರಿಸ್‌ಮಸ್ ಹಬ್ಬವನ್ನೂ ಕೂಡ ವೈಭವದಿಂದ ಕೊಂಡಾಡುತ್ತಾರೆ. ಮನೆ ಮನೆ ಎದುರು ನಕ್ಷತ್ರಗಳು ತೂಗಿ ಬೀಳುತ್ತವೆ. ಕೆಲವರು ಮನೆಯಲ್ಲಿ ಏಸುವಿನ ಜನ್ಮದ ಸಂಕೇತವಾಗಿ ಸಣ್ಣ ಕೊಟ್ಟಿಗೆ ನಿರ್ಮಿಸಿ ಅದರಲ್ಲಿ ಏಸು, ಮೇರಿ, ಜೋಸೆಫರ ವಿಗ್ರಹವಿರಿಸಿ, ಅಲಂಕಾರ ಮಾಡುತ್ತಾರೆ. ಕೆಲಮನೆಗಳಲ್ಲಿ ಕ್ರಿಸ್‌ಮಸ್ ಟ್ರೀ ಕೂಡಾ ಇರಿಸುವುಂಟು. ಶುಭಾಶಯ ಪತ್ರಗಳ ವಿನಿಮಯ, ಮಾಡಿದ ತಿಂಡಿಗಳನ್ನು ಪರಸ್ಪರ ಹಂಚಿಕೊಳ್ಳುವುದು, ನೆಂಟರಿಷ್ಟರು ಒಂದಾಗಿ ಶುಭಾಶಯಗಳನ್ನು ಹೇಳುವುದು, ಮಧ್ಯರಾತ್ರಿಯಲ್ಲಿ ಚರ್ಚಿನಲ್ಲಿ ನಡೆಯುವ ಪೂಜೆಯಲ್ಲಿ ಭಾಗವಹಿಸುವುದು ಇದೆಲ್ಲಾ ಕ್ರಿಸ್‌ಮಸ್‌ನ ವಿಶೇಷ.

ಹೊಸವರುಷ ಕೂಡ ಒಂದು ವೈಭವದ ಹಬ್ಬವೆ. ಜನವರಿ ತಿಂಗಳ ಮೊದಲ ದಿನ ಚರ್ಚಿಗೆ ಹೋಗಿ ದೇವರಿಗೆ ಪ್ರಾರ್ಥನೆ ಸಲ್ಲಿಸಿ, ಬರಲಿರುವ ವರ್ಷ ತಮಗೆಲ್ಲಾ ಶುಭವಾಗಲಿ ಎಂದು ಹಾರೈಸುತ್ತಾರೆ ಎಲ್ಲ ಕ್ರೈಸ್ತರು.

ಏಸು ಶಿಲುಬೆಯ ಮೇಲೆ ಅಸುನೀಗಿದ ಶುಭ ಶುಕ್ರವಾರದ ಹಿಂದಿನ ೪೦ ದಿನಗಳನ್ನು ತಪಸ್ಸಿನ ಕಾಲವೆಂದು ಕರೆದು, ಆ ೪೦ ದಿನ ಉಪವಾಸ, ದೇವರ ಪ್ರಾರ್ಥನೆಗಳಲ್ಲಿ ಕಳೆಯುವುದಲ್ಲದೆ, ಮನರಂಜನೆ, ಸಂತೋಷಕೂಟ, ಮದುವೆಗಳನ್ನು ಈ ಕಾಲದಲ್ಲಿ ಮಾಡದೆ ನಿತ್ಯವೂ ಚರ್ಚಿಗೆ ಹೋಗಿ ಪ್ರಾರ್ಥಿಸುವುದಲ್ಲದೆ, ಪ್ರತಿ ಶುಕ್ರವಾರದಂದು ಚರ್ಚಿನಲ್ಲಿ "ಶಿಲುಬೆಯ ಹಾದಿ" ಎಂಬ ವಿಶೇಷ ಜಪದಲ್ಲಿ ಏಸು ಶಿಲುಬೆ ಹೊತ್ತು ಕಲ್ವಾರ ಪರ್ವತವನ್ನು ಏರಿದಾಗ ಸಹಿಸಿದ ಎಲ್ಲ ಕಷ್ಟಗಳನ್ನು ನೆನಪಿಗೆ ತಂದುಕೊಂಡು ಅದಕ್ಕಾಗಿ ವ್ಯಥೆ ಪಡುತ್ತಾರೆ. ಏಸು ಸತ್ತು ಸಮಾಧಿಯಿಂದ ಎದ್ದು ಬಂದುದನ್ನು ಈಸ್ಟರ್ ಭಾನುವಾರದಂದು ಸಂಭ್ರಮದಿಂದ ಆಚರಿಸುತ್ತಾರೆ. ಸೆಪ್ಟೆಂಬರ್ ತಿಂಗಳಿನಲ್ಲಿ ಬರುವ ಮೇರಿಯಮ್ಮನ ಹಬ್ಬ ಕ್ಯಾಥೋಲಿಕರಿಗೆ ಮತ್ತೊಂದು ದೊಡ್ಡ ಹಬ್ಬ. ಇದನ್ನು ಸುಗ್ಗಿ ಹಬ್ಬವೆಂದು ಕೂಡಾ ಕರೆಯುತ್ತಾರೆ. ಅದೇ ಬಂದ ಬತ್ತದ ಫಸಲನ್ನು ಕಬ್ಬಿನ ಝಲ್ಲೆಗಳನ್ನು ಮೆರವಣಿಗೆಯಲ್ಲಿ ಊರ ಚರ್ಚಿಗೆ ತರುತ್ತಾರೆ. ಪಾದ್ರಿ ಅವನ್ನು ಮಂತ್ರಿಸಿ ಜನರಿಗೆಲ್ಲ ಹಂಚುತ್ತಾನೆ. ಜನ ಭತ್ತದ ಫಸಲನ್ನು ತೆಗೆದುಕೊಂಡುಹೋಗಿ, ವಿಶೇಷವಾಗಿ ಪಾಯಸವನ್ನು ಮಾಡಿ ಅದರಲ್ಲಿ ಹಾಕಿ ಸೇವಿಸುವುದುಂಟು. ಅಂದು ಕ್ಯಾಥೊಲಿಕರ ಮನೆಗಳಲ್ಲಿ ಮಾಂಸ ನಿಷಿದ್ಧ. ಏಳು ಬಗೆಯ ತರಕಾರಿ ಪಲ್ಯಗಳನ್ನು ಮಾಡುವುದು ಅಂದಿನ ವಿಶೇಷ. ಹೊಸ ಫಸಲನ್ನು ನೀಡಿದ ದೇವರಿಗೆ ವಂದನೆ ಸಲ್ಲಿಸುತ್ತಾರೆ. ದೇವಮಾತೆಯಾದ ಮೇರಿಯಮ್ಮಳ ಜನ್ಮದಿನವನ್ನು ಈ ರೀತಿಯಲ್ಲಿ ಕೊಂಡಾಡುತ್ತಾರೆ.

ಕ್ಯಾಥೊಲಿಕರು ಇನ್ನೂ ಕೆಲ ಸಂತರ ಹಬ್ಬಗಳನ್ನು ಆಚರಿಸುತ್ತಾರೆ. ಸಂತ ಸಬಸ್ತಿಯಾನ ಇವರ ಹಬ್ಬಗಳನ್ನು ಮಾಡುತ್ತಾರೆ. ಅಸಿಸ್ಸಿ ಹಬ್ಬದಂದು ಕೊಂಕಣಿ ಕ್ರಿಸ್ತರು ಎಲೆಗಡುಬು ಮಾಡುವುದೊಂದು ವಿಶೇಷ. ಇನ್ನು ಸತ್ತ ಹಿರಿಯರನ್ನು ಸ್ಮರಣೆಗೆ ತಂದುಕೊಳ್ಳುವ ಸಕಲ ಆತ್ಮರ ಹಬ್ಬ ನವಂಬರಿನಲ್ಲಿ ಬರುತ್ತದೆ. ಅಂದು ಹಿರಿಯರ ಆತ್ಮಗಳು ಮನೆಗಳಿಗೆ ಬರುತ್ತವೆ ಎಂಬ ನಂಬಿಕೆ ಇದೆ.

ಪಾಪ ನಿವೇದನೆ ಒಂದು ಪವಿತ್ರ ಸಂಸ್ಕಾರ. ಕ್ರಿಸ್ತನಲ್ಲಿ ತಾನು ಮಾಡಿದ ಪಾಪಗಳಿಗಾಗಿ ಪಶ್ಚಾತ್ತಾಪಪಟ್ಟು ಅವುಗಳಿಗೆ ತಕ್ಕ ಪರಿಹಾರವನ್ನು ಪಾದ್ರಿಯಿಂದ ಪಡೆದು, ಅನಂತರ ಏಸುವಿನ ರಕ್ತ ಮಾಂಸದ ಪ್ರತೀಕವಾದ ದಿವ್ಯ ಪ್ರಸಾದವನ್ನು ಪಡೆಯುತ್ತಾರೆ. ಪ್ರಥಮ ಬಾರಿ ದಿವ್ಯ ಪ್ರಸಾದವನ್ನು ಪಡೆಯುವ ವಿಧಿಯನ್ನು ಮನೆಮಂದಿಯೆಲ್ಲಾ ಸಡಗರದಿಂದ ಆಚರಿಸುತ್ತಾರೆ. ಅಂದು, ಆ ದಿವ್ಯ ಪ್ರಸಾದ ಪಡೆಯುವ ಮಗುವಿಗೆ ಶ್ವೇತವಸ್ತ್ರ ತೊಡಿಸಿ, ಚರ್ಚಿಗೆ ಕರೆದೊಯ್ಯುತ್ತಾರೆ. ಪಾದ್ರಿ ಅಂದು ಮೊದಲ ಬಾರಿಗೆ ಮಗುವಿಗೆ ದಿವ್ಯ ಪ್ರಸಾದ ನೀಡಿದ ನಂತರ ಹಿರಿಯರೆಲ್ಲ ಮಗುವನ್ನು ಆಶೀರ್ವದಿಸುತ್ತಾರೆ. ದೃಢೀಕರಣ ಎಂಬುದು ಕೂಡ ಒಂದು ಸಂಸ್ಕಾರವೇ. ದೃಢೀಕರಣ ಸಂಸ್ಕಾರದ ಅನಂತರ ಏಸುವಿನ ಧರ್ಮವನ್ನು ಸಾರಲು, ಪರಿಪಾಲಿಸಲು ಮಗು ಯೋಗ್ಯನಾಗುತ್ತಾನೆ ಎಂಬುದು ಒಂದು ನಂಬಿಕೆ.

ದೇವರ ಗುರುಹಿರಿಯರ ಅನುಮತಿಯೊಡನೆ ವಿವಾಹ ನಡೆಯುತ್ತದೆ. ವಿವಾಹಕ್ಕೆ ಇನ್ನೂ ಮೂರು ಭಾನುವಾರಗಳಿರುವಾಗ ಪಾದ್ರಿ ಈ ವಿಷಯವನ್ನು ಜಾಹೀರುಪಡಿಸುತ್ತಾನೆ. ವಿವಾಹಕ್ಕೆ ಯಾವುದೇ ಅಡ್ಡಿ ಆತಂಕವಿದ್ದರೆ ಜನ ಅದನ್ನು ಪಾದ್ರಿಗೆ ತಿಳಿಸಬಹುದು. ಇದರ ಅನಂತರ ಪಾದ್ರಿಯಿಂದ ಪ್ರಾರ್ಥನೆ ಮಂತ್ರಗಳನ್ನು ವಧೂವರರು ಕಲಿಯಬೇಕು. ಇಗರ್ಜಿಯಲ್ಲಿ ಪೂಜಾ ಸಮಯದಲ್ಲಿ ಪಾದ್ರಿ ವಿವಾಹ ವಿಧಿಯನ್ನು ಪೂರೈಸಿಕೊಡುತ್ತಾನೆ. ಅಲ್ಲಿಯೇ ಉಂಗುರಗಳ ವಿನಿಮಯವಾಗುತ್ತದೆ. ವಧೂವರರು ತಮ್ಮ ಒಪ್ಪಿಗೆಯನ್ನು ಸಾಕ್ಷಿದಾರರಿಗೆ ಕೇಳುವಂತೆ ಉಚ್ಚರಿಸಿದ ಮೇಲೆಯೇ ವಿವಾಹ ನಡೆಯುತ್ತದೆ. ಅನಂತರದ ಕಾರ್ಯಕ್ರಮಗಳೆಲ್ಲ ಮನೆಯಲ್ಲಿ. ಧಾರೆ ಸೀರೆ ಉಡಿಸುವುದು, ತಾಳಿ ಕಟ್ಟುವುದು, ಹಸೆಯ ಮೇಲೆ ಕೂರಿಸುವುದು, ಉಡುಗೊರೆ, ಹಾಡು ಹಸೆ ಹೇಳಿಸುವುದು, ಒಪ್ಪಿಸಿಕೊಡುವುದು ಮನೆ ತುಂಬಿಸಿಕೊಳ್ಳುವುದು ಇದೆಲ್ಲವೂ ಹೆಚ್ಚಾಗಿ ಹಿಂದೂ ಸಂಪ್ರದಾಯಗಳಿಗೆ ಅನುಗುಣವಾಗಿಯೇ ನಡೆಯುತ್ತದೆ.

ಕ್ರಿಸ್ತರು ಹೆಣವನ್ನು ಹುಗಿಯುತ್ತಾರೆ. ಸಾವು ಸಮೀಪಿಸುತ್ತಿದೆ ಎನ್ನುವಾಗ ಪಾದ್ರಿಯನ್ನು ಕರೆಸಿ ಕೊನೆಯುಸಿರೆಳೆಯುತ್ತಿರುವ ವ್ಯಕ್ತಿಗೆ ಅಂತ್ಯಾಭ್ಯಂಜನ ಎಂಬ ಸಂಸ್ಕಾರವನ್ನು ಕೊಡಿಸಲಾಗುತ್ತದೆ. ಆ ವ್ಯಕ್ತಿ ತಾನು ಮಾಡಿದ ಎಲ್ಲ ಪಾಪಗಳಿಂದ ಕ್ಷಮಿಸಲ್ಪಟ್ಟವನಾಗಿ, ದೇವರ ಸನ್ನಿಧಿಗೆ ತೆರಳಲು ಅನುಕೂಲವಾಗಲೆಂಬುದೇ ಈ ವಿಧಿಯ ಉದ್ದೇಶ. ಇನ್ನು ಸತ್ತ ವ್ಯಕ್ತಿಯನ್ನು ಸಮಿತ್ರಿಯ ತನಕ ಹಿಂಬಾಲಿಸಿ ಅವನ ಸಮಾಧಿಗೆ ಕೊನೆಯದಾಗಿ ಒಂದು ಹಿಡಿ ಮಣ್ಣನ್ನು ಹಾಕುವ ಕಾರ್ಯವನ್ನು ಕ್ರಿಸ್ತರು ತಪ್ಪದೆ ಅನುಸರಿಸುತ್ತಾರೆ. ರೋಗಿಗಳನ್ನು ನೋಡಲು ಹೋಗುವುದು, ಅಂತ್ಯ ಸಂಸ್ಕಾರಕ್ಕೆ ಹೋಗುವುದು, ಕ್ರಿಸ್ತರ ಒಂದು ಪದ್ಧತಿ.

ಹೀಗೆಯೇ ಭಾನುವಾರಗಳಂದು ಚರ್ಚಿಗೆ ಹೋಗುವುದು ಕೂಡಾ ಒಂದು ಪದ್ಧತಿಯೇ. ಪಾದ್ರಿ ಮಾಡುವ ಪೂಜೆಯನ್ನು ಎಲ್ಲ ಕ್ರಿಸ್ತರು ಭಯಭಕ್ತಿಯಿಂದ ಆಲಿಸುತ್ತಾರೆ. ಪೂಜಾ ಸಮಯದಲ್ಲಿ ಪಾದ್ರಿ, ಏಸು ಜನರ ಪಾಪಗಳನ್ನು ಪರಿಹರಿಸಲು ತನ್ನನ್ನು ತಾನೇ ಶಿಲುಬೆಗೆ ಏರಿಸಿಕೊಂಡ ಘಟನೆಯನ್ನು ಅನುಕರಿಸಿ, ಪೂಜೆಯ ನಡುವೆ ಏಸುವಿನ ರಕ್ತ ಮಾಂಸವಾದ ದಿವ್ಯ ಪ್ರಸಾದವನ್ನು ಜನರಿಗೆ ನೀಡುತ್ತಾನೆ. ಮನೆಗಳಲ್ಲಿ ಕೂಡ ಕ್ರಿಸ್ತರು ಬೆಳಗ್ಗೆ, ಮಧ್ಯಾಹ್ನ, ಸಂಜೆ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ. ಚರ್ಚಿನ ಗಂಟೆ ಅವರಿಗೆ ಪ್ರಾರ್ಥನಾ ಸಮಯವನ್ನು ಸಾರಿ ಹೇಳುತ್ತಿರುತ್ತದೆ.

ಪ್ರಾಟೆಸ್ಟೆಂಟರು ಸಂತರನ್ನು, ಏಸುವಿನ ತಂದೆ ತಾಯಿಯನ್ನು ನಂಬುವುದಿಲ್ಲ. ಚರ್ಚಿನಲ್ಲಿ ಯಾವನೇ ಸಂತ ಇರುವುದಿಲ್ಲವಾದ್ದರಿಂದ ಅವರು ಸಂತನ ಹಬ್ಬವನ್ನು ಆಚರಿಸುವುದರ ಬದಲು ಚರ್ಚಿನ ವಾರ್ಷಿಕೋತ್ಸವವನ್ನು ಆಚರಿಸುತ್ತಾರೆ. ಅಂದು ಸಾಮೂಹಿಕ ಊಟ, ಪ್ರಾರ್ಥನೆ ಇರುತ್ತವೆ. ಸಂಜೆ ನಾಟಕ ನೃತ್ಯಗಳ ಮನೋರಂಜನೆಯೂ ಇರುತ್ತದೆ.

ಕ್ರಿಸ್‌ಮಸ್, ಹೊಸ ವರುಷ, ಶುಭ ಶುಕ್ರವಾರ, ಈಸ್ಟರ್ ಮೊದಲಾದ ಹಬ್ಬಗಳು ಪ್ರಾಟೆಸ್ಟೆಂಟರಿಗೆ ಇವೆ. ಏಸುವನ್ನು ದೇವರಿಗೆ ಸಮರ್ಪಿಸಲಾದ ಒಂದು ಸಂದರ್ಭ ಫೆಬ್ರವರಿ ತಿಂಗಳಲ್ಲಿ ಸಮರ್ಪಣಾ ಹಬ್ಬವೆಂದು ಇವರು ಆಚರಿಸುತ್ತಾರೆ. ಸುಗ್ಗಿ ಹಬ್ಬ ಕೂಡಾ ಪ್ರಾಟೆಸ್ಟೆಂಟರಿಗೆ ದೊಡ್ಡ ಹಬ್ಬವೆ. ಅಂದು ಮನೆ ತೋಟದಲ್ಲಿ ಬಿಟ್ಟ ಹೊಸ ತರಕಾರಿಯನ್ನು ತಂದು ಚರ್ಚಿಗೆ ಕೊಡುತ್ತಾರೆ. ಆ ತರಕಾರಿಯನ್ನು ಹರಾಜಿಗೆ ಹಾಕಿ ಹಣವನ್ನು ಚರ್ಚಿನ ನಿಧಿಗೆ ಸೇರಿಸಿಕೊಳ್ಳಲಾಗುತ್ತದೆ.

ಭಾರತದ ಸ್ವಾತಂತ್ರ್ಯೋತ್ಸವ, ಗಣರಾಜ್ಯೋತ್ಸವನ್ನು ಇವರು ವಿಶೇಷ ಜಪ-ಪ್ರಾರ್ಥನೆಗಳೊಡನೆ ಆಚರಿಸುತ್ತಾರೆ. ಪ್ರಾಟೆಸ್ಟೆಂಟರು ವಿಗ್ರಹಾರಾಧಕರಲ್ಲ. ಅವರ ಚರ್ಚುಗಳಲ್ಲಿ ವಿಗ್ರಹ, ಪಟಗಳು ಕಡಿಮೆ. ಇದ್ದರೂ ಅವುಗಳಿಗೆ ಅವರು ನಮಸ್ಕರಿಸುವುದಿಲ್ಲ. ಇನ್ನು ಪಾಪನಿವೇದನೆಗೆ ಅವರು ಪಾದ್ರಿಗಳ ಬಳಿ ಹೋಗದೆ ಮನಸ್ಸಿನಲ್ಲೇ ಅವುಗಳ ಬಗ್ಗೆ ಪಶ್ಚಾತ್ತಾಪಪಟ್ಟು ದಿವ್ಯ ಪ್ರಸಾದ ಪಡೆಯುತ್ತಾರೆ. ಕ್ಯಾಥೋಲಿಕರಂತೆಯೇ ಪ್ರಾಟೆಸ್ಟೆಂಟರ ಮದುವೆಯೂ ಚರ್ಚಿನಲ್ಲೇ ನಡೆಯುತ್ತದೆ. ಉಳಿದೆಲ್ಲ ಕಾರ್ಯಗಳು ಮನೆಯಲ್ಲಿ ಹಾಡು, ಸಂಗೀತಗಳ ನಡುವೆ ನಡೆಯುತ್ತವೆ.

ದಕ್ಷಿಣ ಕನ್ನಡ, ಶಿವಮೊಗ್ಗ, ಚಿಕ್ಕಮಗಳೂರುಗಳಲ್ಲಿ ಕೊಂಕಣಿ ಕ್ಯಾಥೊಲಿಕರು ಅಧಿಕ ಸಂಖ್ಯೆಯಲ್ಲಿರುವುದರಿಂದ ಇಲ್ಲೆಲ್ಲ ಚರ್ಚಿನ ಆರಾಧನಾ ಭಾಷೆ ಕೊಂಕಣಿಯೇ. ದೇವರ ಕುರಿತ ಭಕ್ತಿ ಗೀತೆಗಳು ಕೂಡ ಕೊಂಕಣಿಯಲ್ಲಿ ಹಾಡಲ್ಪಡುತ್ತವೆ. ಬಳ್ಳಾರಿ, ಧಾರವಾಡ, ಚಿತ್ರದುರ್ಗ, ಬೆಳಗಾಂ, ದಾವಣಗರೆ, ಮಂಡ್ಯ, ಮೈಸೂರು, ಬೆಂಗಳೂರುಗಳಲ್ಲಿ ಕನ್ನಡಕ್ಕೆ ಅಗ್ರಸ್ಥಾನ. ಸುಶ್ರಾವ್ಯವಾದ ಕನ್ನಡ ಗೀತೆಗಳನ್ನು ಇಲ್ಲಿಯ ಕ್ರಿಸ್ತರು ಹಾಡುತ್ತಾರೆ. ಕೆಲವೆಡೆಗಳಲ್ಲಿ ಇಂಗ್ಲೀಷು, ಮಲೆಯಾಳಿ, ತೆಲುಗು, ತಮಿಳುಗಳಲ್ಲಿ ಕೂಡ ಚರ್ಚಿನಲ್ಲಿ ಪೂಜೆ ಪ್ರಾರ್ಥನೆ ನಡೆಯುತ್ತದೆ.

ಪ್ರಾಟೆಸ್ಟೆಂಟರು ಆರಂಭದಿಂದಲೂ ಕನ್ನಡ ಪ್ರಾರ್ಥನೆಗೇ ಪ್ರಾಶಸ್ತ್ಯ ಕೊಟ್ಟುಕೊಂಡು ಬಂದಿದ್ದಾರೆ. ೧೫೦ರಷ್ಟು ಹಿಂದೆಯೇ ಜರ್ಮನಿ ಹಾಗೂ ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದಿಸಲ್ಪಟ್ಟ ಕ್ರಿಸ್ತ ಗೀತೆಗಳು ಇವರಲ್ಲಿ ತುಂಬಾ ಜನಪ್ರಿಯವಾಗಿವೆ. ಈ ಗೀತೆಗಳು ಇಂಗ್ಲೀಷ್ ಧಾಟಿಯಲ್ಲಿ ಇರುವ ಗೀತೆಗಳು. ಜೊತೆಗೆ ಕರ್ನಾಟಕ ಸಂಗೀತಕ್ಕೆ ಅನುಗುಣವಾದ ಹಲವು ಗೀತೆಗಳು ಇವರಲ್ಲಿ ಪ್ರಚಲಿತವಾಗಿವೆ.

## ಧರ್ಮಕ್ಷೇತ್ರಗಳು

ಕರ್ನಾಟಕದಲ್ಲಿ ಕ್ಯಾಥೋಲಿಕರಿಗೆ ಸಂಬಂಧಪಟ್ಟಂತೆ ಆರು ಧರ್ಮಕ್ಷೇತ್ರಗಳಿವೆ. ಈ ಆರು ಕ್ಷೇತ್ರಗಳ ಆಡಳಿತವನ್ನು ಆರು ಜನ ಧರ್ಮಾಧ್ಯಕ್ಷರು (ಬಿಷಪ್) ನೋಡಿಕೊಳ್ಳುತ್ತಾರೆ. ಬೆಂಗಳೂರು, ಮೈಸೂರು, ಬೆಳಗಾವಿ, ಬಳ್ಳಾರಿ, ಚಿಕ್ಕಮಗಳೂರು, ಮಂಗಳೂರು, ಇಲ್ಲಿರುವ ಧರ್ಮಾಧ್ಯಕ್ಷರುಗಳು ತಮ್ಮ ಧರ್ಮಕ್ಷೇತ್ರಗಳಲ್ಲಿಯ ಆಗುಹೋಗುಗಳಿಗೆ, ಚಟುವಟಿಕೆಗಳಿಗೆ ಕಾರಣಕರ್ತರಾಗಿ ತಮ್ಮ ತಮ್ಮ ಧರ್ಮಕ್ಷೇತ್ರಗಳಿಗೆ ಆಗಾಗ್ಗೆ ಭೇಟಿಕೊಟ್ಟು ಹೊಸ ಚರ್ಚುಗಳನ್ನು ಕಟ್ಟಿಸಲು, ಇರುವ ಚರ್ಚುಗಳನ್ನು ವಿಸ್ತರಿಸಲು, ಬಡ ಕ್ರಿಸ್ತರಿಗೆ ಮನೆ ಮತ್ತಿತರ ಸೌಲಭ್ಯಗಳನ್ನು ಕಲ್ಪಿಸಿಕೊಡಲು ಸ್ಥಳೀಯ ಪಾದ್ರಿಗಳಿಗೆ ನೆರವು ನೀಡುತ್ತ ಆ ಮೂಲಕ ತಮ್ಮ ಧರ್ಮಕ್ಷೇತ್ರದ ಕ್ರಿಸ್ತರ ಅಭಿಮಾನ ಗೌರವಕ್ಕೆ ಪಾತ್ರರಾಗುತ್ತಾರೆ. ಪ್ರಾಟೆಸ್ಟೆಂಟರಲ್ಲೂ ಮೂರು ಜನ ಧರ್ಮಾಧ್ಯಕ್ಷರುಗಳಿದ್ದು ಕರ್ನಾಟಕವನ್ನು ಮೂರು ಧರ್ಮಕ್ಷೇತ್ರಗಳನ್ನಾಗಿ ವಿಂಗಡಿಸಿಕೊಂಡು ಆ ಜನರ ಕ್ಷೇಮಾಭಿವೃದ್ಧಿಗಾಗಿ ಇವರು ಶ್ರಮಿಸುತ್ತಾರೆ.

ಆರಂಭದಲ್ಲಿ ಕ್ರೈಸ್ತ ಪಾದ್ರಿಗಳು, ಧರ್ಮಾಧ್ಯಕ್ಷರು, ಮತಪ್ರಚಾರಕರು ವಿದೇಶಿಯರೇ ಆಗಿರುತ್ತಿದ್ದರು. ಫ್ರೆಂಚ್, ಪೋರ್ಚುಗೀಸ್, ಇಂಗ್ಲೀಷ್ ಮತ್ತು ಜರ್ಮನ್ನರು ಇಲ್ಲಿ ಕ್ರೈಸ್ತರ ಸೇವೆಗೆ ಸನ್ನದ್ಧವಾಗಿ ನಿಲ್ಲುತ್ತಿದ್ದುದು ಸಾಮಾನ್ಯ ವಿಷಯವಾಗಿತ್ತು. ಆದರೆ ಇಂದು ರೋಮನ್ ಕ್ಯಾಥೋಲಿಕರಲ್ಲೂ, ಪ್ರಾಟೆಸ್ಟೆಂಟರಲ್ಲೂ ವಿದೇಶಿ ಪಾದ್ರಿಗಳೂ ಧರ್ಮಾಧ್ಯಕ್ಷರೂ ಕಾಣಲು ಸಿಗುವುದಿಲ್ಲ. ಸ್ಥಳೀಯರು, ಸ್ಥಳೀಯ ಜನರನ್ನು ಬಲ್ಲವರು ಈಗ ಪಾದ್ರಿಗಳಾಗಿ ಬರುತ್ತಿದ್ದಾರೆ, ಬಿಷಪ್ಪರುಗಳಾಗುತ್ತಿದ್ದಾರೆ.

ರೋಮನ್ ಕ್ಯಾಥೋಲಿಕರಲ್ಲಿ ಪಾದ್ರಿಗಳು ಮದುವೆಯಾಗಬಾರದೆಂಬ ನಿಯಮವಿದೆ. ಸಂಸಾರ, ತಂದೆ ತಾಯಿ, ಬಂಧು, ಬಳಗವನ್ನು ಬಿಟ್ಟು ಆತ ಏಸುವಿನ ಸೇವೆಗೆ ನಿಲ್ಲಬೇಕಾಗುತ್ತದೆ. ಆದರೆ ಪ್ರಾಟೆಸ್ಟೆಂಟರಲ್ಲಿ ಈ ನಿಯಮವಿಲ್ಲ. ಅವರ ಪಾದ್ರಿಗಳು ಮದುವೆಯಾಗಿ, ಹೆಂಡತಿ ಮಕ್ಕಳನ್ನು ನೋಡಿಕೊಂಡೂ ದೇವರ ಕಾರ್ಯವನ್ನು ನಡೆಸಿಕೊಡುತ್ತಾರೆ. ಪಾದ್ರಿಗಳನ್ನು ಕ್ರಿಸ್ತರು ಗೌರವದಿಂದ ಕಾಣುತ್ತಾರೆ. ಅವರ ಮಾತಿಗೆ ಬೆಲೆ ಕೊಡುತ್ತಾರೆ. ಜನಾಂಗದ ಅಂತರಂಗದ ವಿಷಯವನ್ನು, ಸಮಸ್ಯೆಯನ್ನು ಬಿಡಿಸುವಲ್ಲಿ ಪಾದ್ರಿ ಸದಾ ನೆರವಾಗುತ್ತಾನೆ. ಎಷ್ಟೋ ಕೌಟುಂಬಿಕ ಸಮಸ್ಯೆಗಳಿಗೆ ಪಾದ್ರಿ ಪರಿಹಾರ ನೀಡುವುದೂ ಉಂಟು. ಕ್ರಿಸ್ತರಿಗೆ ಮಾರ್ಗದರ್ಶನ ಮಾಡುವಲ್ಲಿ ಅವರ ದೈವಭಕ್ತಿ, ಶಿಕ್ಷಣ, ನಡತೆ ಮೊದಲಾದವುಗಳನ್ನು ತಿದ್ದುವಲ್ಲಿ ಪಾದ್ರಿಯ ಹೊಣೆಗಾರಿಕೆ ಹೆಚ್ಚು.

ಕ್ರಿಸ್ತರು ಬಿಷಪ್ ಗುರುಗಳ ಬಗ್ಗೆಯೂ ಹೆಚ್ಚಿನ ಗೌರವವನ್ನು ಇರಿಸಿಕೊಂಡಿರುತ್ತಾರೆ. ಬಿಷಪ್ ಗುರುಗಳು ಮಾಡುವ ಪೂಜೆಯನ್ನು ಕೇಳಲು, ಅವರ ಪ್ರವಚನ ಆಲಿಸಲು, ಅವರು ಧರಿಸುವ ಪವಿತ್ರ ಉಂಗುರವನ್ನು ಮುತ್ತಿಡಲು ಜನ ಕಾತರಾಗಿರುತ್ತಾರೆ. ತಮ್ಮ ಕ್ಷೇತ್ರಕ್ಕೆ ಬರುವ ಬಿಷಪ ಗುರುಗಳನ್ನು ಅತ್ಯಾದರಗಳಿಂದ ಬರಮಾಡಿಕೊಳ್ಳುತ್ತಾರೆ. ಯುವಕ-ಯುವತಿಯರನ್ನು ಕ್ರೈಸ್ತ ಮತ ಪ್ರಚಾರಕ್ಕೆ, ಕ್ರಿಸ್ತರ ಸೇವೆ, ಮಾರ್ಗದರ್ಶನಕ್ಕೆ ಸಿದ್ಧಪಡಿಸುವ ಸಂಸ್ಥೆಗಳು ಕರ್ನಾಟಕದಲ್ಲಿ ಹಲವಾರಿವೆ. ಕ್ರಿಸ್ತನನ್ನೇ ರಕ್ಷಕನೆಂದು ನಂಬಿದ ತರುಣ ತರುಣಿಯರು ಈ ಸಂಸ್ಥೆಗಳ ಮೂಲಕ ಗುರುಗಳಾಗಿ ಕನ್ಯಾಸ್ತ್ರೀಗಳಾಗಿ ಕ್ರೈಸ್ತ ಸೇವಾದೀಕ್ಷೆಯನ್ನು ಕೈಕೊಂಡು ಹೊರಬರುತ್ತಾರೆ.

ಬೆಂಗಳೂರಿನ ಸಂತರಾಯಪ್ಪನವರ ಗುರು ವಿದ್ಯಾಮಂದಿರ, ಸಂತ ಅಂತೋನಿ ಫ್ರೈಯರಿ, ಕ್ರೈಸ್ತ ಜ್ಯೋತಿ ಕಾಲೇಜು, ಧರ್ಮಾರಾಂ ಕಾಲೇಜು, ರೆಡೆಂಟರಿಸ್ಟ್ ಚರ್ಚು, ಕೆಂಗೇರಿ ಮಾನೆಸ್ಟ್ರಿ, ಮಂಗಳೂರಿನ ಸಂತ ಜೋಸೆಫ್ ಸೆಮಿನರಿಗಳನ್ನು ಇಲ್ಲಿ ಉದಾಹರಿಸಬಹುದು. ಬೆಳಗಾವಿಯಲ್ಲೂ ಇಂಥ ಒಂದು ಸಂಸ್ಥೆ ಇದೆ. ಮೈಸೂರು, ಚಿಕ್ಕಮಗಳೂರುಗಳಲ್ಲಿ ಕಿರಿಯ ಗುರುಮಠಗಳಿವೆ. ಈ ಮಠಗಳಲ್ಲಿ ಪ್ರಾರಂ

ಭದ ಮೂರು ವರ್ಷಗಳ ಭಾಷಾ ಶಿಕ್ಷಣವನ್ನು ನೀಡಿ ಮುಂದಿನ ವ್ಯಾಸಂಗಕ್ಕೆ ವಿದ್ಯಾರ್ಥಿಗಳನ್ನು ಬೆಂಗಳೂರಿನ ಸೆಮಿನರಿಗಳಿಗೆ ಕಳಿಸಲಾಗುತ್ತದೆ. ಇಲ್ಲಿ ತತ್ವಶಾಸ್ತ್ರ, ಮತಧರ್ಮಶಾಸ್ತ್ರ, ಇತ್ಯಾದಿಗಳನ್ನು ಕಲಿತು ತರುಣರು ಗುರುಪಟ್ಟಕ್ಕೆ ಅರ್ಹರಾಗುತ್ತಾರೆ. ಇವರಲ್ಲಿ ಧಾರ್ಮಿಕ ಗುರುಗಳು, ಚರ್ಚಿನ ಗುರುಗಳು ಎಂಬ ಎರಡು ವ್ಯತ್ಯಾಸಗಳನ್ನು ಕಾಣಬಹುದು. ಧಾರ್ಮಿಕ ಗುರುಗಳು ಬಡತನ, ಬ್ರಹ್ಮಚರ್ಯ, ವಿಧೇಯತೆ ಈ ಮೂರು ವ್ರತಗಳ ಮೂಲಕ ಶಿಕ್ಷಣ, ಮತಪ್ರಚಾರ, ವೈದ್ಯಕೀಯ ಸೇವೆ, ಸಮಾಜಸೇವೆಗಳಲ್ಲಿ ತೊಡಗುತ್ತಾರೆ. ಮಾಂಸಾಹಾರವನ್ನು ತ್ಯಜಿಸಿ, ಹೆಚ್ಚು ಮಾತನಾಡದೆ, ಕಟ್ಟುನಿಟ್ಟಿನ ಜೀವನವನ್ನು ಅನುಸರಿಸಿಕೊಂಡು ಇವರು ಬರುತ್ತಾರೆ. ಚರ್ಚಿನ ಗುರುಗಳು ಚರ್ಚುಗಳಲ್ಲಿ ಹೋಗಿ ನೆಲೆಸಿ ಆ ಮೂಲಕ ದೇವರ, ಜನರ ಸೇವೆ ಮಾಡುತ್ತಾರೆ. ಇವರ ಕಾರ್ಯಕ್ಕೆ ತಕ್ಕಂತೆ ಇವರಿಗೆ ಕೊಂಚ ಹೆಚ್ಚಿನ ಸ್ವಾತಂತ್ರ್ಯವಿರುತ್ತದೆ. ಗುರುಗಳೇ ಅಲ್ಲದೆ, ಮಂಗಳೂರಿನ ಫ್ರಾನ್ಸಿಸ್ಕನ್ ಬ್ರದರ್ಸ್ ಸೊಸೈಟಿ ಮತ್ತು ಕ್ರಿಶ್ಚಿಯನ್ ಬ್ರದರ್ಸ್ ಸೊಸೈಟಿಯವರೂ ಸೇವಾ ಮನೋಭಾವವುಳ್ಳ ಬ್ರದರ್ಸ್‌ಗಳ ತರಬೇತಿ ಕೊಟ್ಟು ಸಿದ್ಧಪಡಿಸುತ್ತಾರೆ. ಇವರ ಸೇವೆಯೂ ಗಮನಾರ್ಹ.

ಇನ್ನು ಕನ್ಯಾಸ್ತ್ರೀಯರ ತರಬೇತಿ ಕೇಂದ್ರಗಳು ಕೂಡ ಕರ್ನಾಟಕದ ಬೆಂಗಳೂರು, ಮೈಸೂರು, ಮಂಗಳೂರು, ಬೆಳಗಾವಿಗಳಲ್ಲಿವೆ. ತಂದೆ ತಾಯಿಗಳನ್ನು, ಪ್ರಪಂಚದ ಎಲ್ಲ ಸುಖ ಸಂತೋಷಗಳನ್ನು ತೊರೆದು ತರುಣಿ ಕನ್ಯಾಸ್ತ್ರೀಯಾಗಿ ಜನಸೇವೆಗೆ ನಿಲ್ಲುತ್ತಾಳೆ. ಮಂಗಳೂರಿನ ಉರ್ಸುಲ ಪಂಗಡ, ಬೆಥನಿ ಸೋದರಿಯರು, ಕ್ಯಾಕಿಸ್ ಸಿಸ್ಟರ್ಸ್, ಭದ್ರಾವತಿಯಲ್ಲಿ ವಿದ್ಯಾಕೇಂದ್ರ ಹಾಗೂ ಆಸ್ಪತ್ರೆ ನಡೆಸುವ ಚಾರ್ಲ್ಸ್ ಸಿಸ್ಟರ್ಸ್ ಬೆಂಗಳೂರಿನ ಗುಡ್‌ಪಟ್ಟು ಸೋದರಿಯರು ಇಲ್ಲಿ ಉಲ್ಲೇಖಾರ್ಹ.

ಪ್ರಾಟೆಸ್ಟೆಂಟರ ಮಂಗಳೂರಿನ ಥಿಯೊಲಜಿಕಲ್ ಕಾಲೇಜು, ಬೆಂಗಳೂರಿನ ಯುನೈಟೆಡ್ ಥಿಯೊಲಜಿಕಲ್ ಕಾಲೇಜುಗಳು, ಪ್ರಾಟೆಸ್ಟೆಂಟ್ ಗುರುಗಳನ್ನು ಸಿದ್ಧಪಡಿಸುವ ಕಾರ್ಯದಲ್ಲಿ ಗಣನೀಯ ಸೇವೆ ಮಾಡುತ್ತಿವೆ.

**ಸಾಹಿತ್ಯ, ಕಲೆ – ಸೇವೆ**

ಕ್ರೈಸ್ತ ಮಿಷನರಿಗಳು ಕ್ರೈಸ್ತ ಮತವನ್ನು ಈ ನಾಡಿನಲ್ಲಿ ಪ್ರಚಾರ ಮಾಡಲೆಂದು ಕನ್ನಡವನ್ನು ಕಲಿತರು. ವ್ಯಾಕರಣ, ಕನ್ನಡ ನಿಘಂಟು, ಛಂದಸ್ಸುಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಅವರು ಹೊರತಂದರು. ಕನ್ನಡ ಸಾಹಿತ್ಯ ಚರಿತ್ರಕಾರರು ಹೊಸಗನ್ನಡದ ಅರುಣೋದಯವಾದುದೇ ಕ್ರೈಸ್ತ ಮಿಷನರಿಗಳಿಂದ ಎಂದು ಹೇಳಿದ ಮಾತಿನಲ್ಲಿ ಉತ್ಪ್ರೇಕ್ಷೆ ಏನಿಲ್ಲ. ೧೮೧೭ರಲ್ಲಿ ವಿಲಿಯಂ ಕೇರಿ ಕನ್ನಡ ವ್ಯಾಕರಣವನ್ನು ಹೊರತಂದ. ಇದಕ್ಕೂ ಮುನ್ನ ಅಂದರೆ ೧೮೦೯ರಲ್ಲಿ ವಿಲಿಯಂ ಕೇರಿ, ೧೮೧೨ರಲ್ಲಿ ಜಾನ್‌ಹ್ಯಾಂಡ್ಸನ್ ಬೈಬಲನ್ನು ಕನ್ನಡಕ್ಕೆ ಅನುವಾದಿಸಿದ್ದರು. ಮಿಷನರಿಗಳೂ, ಪಾಶ್ಚಾತ್ಯ ವಿದ್ವಾಂಸರೂ ಕನ್ನಡದ ಪ್ರಾಚೀನ ಮಹಾಕಾವ್ಯಗಳನ್ನು ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸಿದರು. ಜೈಮಿನಿ ಭಾರತ (೧೮೪೮), ದಶಪರ್ವ ಭಾರತ (೧೮೫೧), ಬಸವಪುರಾಣ (೧೮೫೦), ಚೆನ್ನಬಸವಪುರಾಣ (೧೮೫೧) ಇತ್ಯಾದಿ ಪ್ರಾಚೀನ ಗ್ರಂಥಗಳು ಕ್ರೈಸ್ತ ವಿದ್ವಾಂಸರ ಕೊಡುಗೆಗಳು. ಜಾನ್‌ಹ್ಯಾಂಡ್ಸನ್, ವಿಲಿಯಂ ರೀವ, ಜೀಗ್ಲರ್, ಬಿ.ಎಲ್.ರೈಸ್, ಇ. ಪಿ. ರೈಸ್, ಮೊದಲಾದ ವಿದ್ವಾಂಸರ ಕನ್ನಡ ಸೇವೆ ಸ್ಮರಣೀಯವಾದದ್ದು. ರೆವರೆಂಡ್ ಫರ್ಡಿನೆಂಡ್ ಕಿಟ್ಟೆಲರಂತೂ ಕನ್ನಡ ಭಾಷೆಗೆಂದೇ ತಮ್ಮ ಜೀವನವನ್ನು ಮುಡಿಪಾಗಿಟ್ಟರು.

ಕನ್ನಡ ಭಾಷೆಯನ್ನು ಮುದ್ರಣಕ್ಕೆ ಹೊಂದಿಸಿ ಪುಸ್ತಕ ಪತ್ರಿಕೆಗಳನ್ನು ಹೊರತರುವಲ್ಲಿ ಕೂಡಾ ಬಾಸೆಲ್‌ಮಿಷನ್ ಅಚ್ಚುಕೂಟ, ಕೊಡಿಯಾಲ್‌ಬೈಲ್ ಅಚ್ಚುಕೂಟ, ವೆಸ್ಲಿಪ್ರೆಸ್‌ಗಳ ಸೇವೆ ಗಣನೀಯವಾದದ್ದು. ಇಂದು ಕ್ರೈಸ್ತ ಪಾದ್ರಿಗಳು ಕನ್ನಡ ಭಾಷಾ ಸಾಹಿತ್ಯ ಸೇವೆಯಿಂದ ಕೊಂಚ ದೂರ ಉಳಿದಿದ್ದಾರಾದರೂ ಕ್ರೈಸ್ತ ಮತಪ್ರಚಾರಕ್ಕೆ ಬೇಕಾದ ಪುಸ್ತಕ, ಪತ್ರಿಕೆಗಳನ್ನು ಅವರು ಸಿದ್ಧಪಡಿಸುತ್ತಲೇ ಇದ್ದರು. ಬೈಬಲ್ಲಿನ ಹೊಸ ಅನುವಾದಗಳನ್ನು ಹೊರತರುತ್ತಿದ್ದಾರೆ. ಬೆಂಗಳೂರಿನ ಬೈಬಲ್ ಸೊಸೈಟಿ ಈ ಕಾರ್ಯವನ್ನು ಮಾಡುತ್ತಿದೆ. ಕ್ಯಾಥೋಲಿಕರ ಧರ್ಮಕ್ಷೇತ್ರಗಳಿಂದ ಧಾರ್ಮಿಕ ಪತ್ರಿಕೆಗಳು ಪ್ರಕಟವಾಗುತ್ತವೆ. ಮೈಸೂರಿನಿಂದ ದೂತ, ಬೆಂಗಳೂರಿನಿಂದ ಕರ್ನಾಟಕ ತಾರೆ, ಚಿಕ್ಕಮಗಳೂರಿನಿಂದ ನವಜ್ಯೋತಿ ಮುಂತಾದ ಪತ್ರಿಕೆಗಳು ಹೊರಬೀಳುತ್ತಿವೆ. ಮಂಗಳೂರಿನಿಂದ ರಾಕ್ಣೊ, ಸೇವಕ, ಮೊದಲಾದ ಕೊಂಕಣಿ ಪತ್ರಿಕೆಗಳು ಬರುತ್ತಿವೆ. ಕನ್ನಡ ಸಾಹಿತ್ಯ ಸೇವೆಯನ್ನು ಮಾಡುವಲ್ಲಿ ಕ್ರಿಸ್ತರು ಈಗೀಗ ಮುಂದೆ ಬರುತ್ತಿದ್ದಾರೆ.

ಕ್ರಿಸ್ತಧರ್ಮ ಕನ್ನಡ ನಾಡಿಗೆ ಹಲವು ಸುಂದರ ಚರ್ಚುಗಳನ್ನು ನೀಡಿದೆ. ಮಂಗಳೂರಿನಲ್ಲಿ ಬಾಸೆಲ್‌ಮಿಷನ್‌ನವರು ೧೮೬೨ರ ಸುಮಾರಿಗೆ ಕಟ್ಟಿದ ಶಾಂತಿ ದೇವಾಲಯ ಇದಕ್ಕೂ ಶತಮಾನಗಳ ಹಿಂದೆ ಕ್ಯಾಥೋಲಿಕರು ಮಂಗಳೂರಿನ ಬೋಳಾರಿನಲ್ಲಿ ಕಟ್ಟಿಸಿದ (ಕ್ರಿ. ಶ. ೧೫೬೮) ರೊಜಾರಿಯೋ ದೇವಾಲಯ, ಬೆಂಗಳೂರಿನ ಕೋಟೆಯಲ್ಲಿಯ ದೇವಾಲಯ (೧೮೫೭) ಸಂತ ಮಾರ್ಕ್ ದೇವಾಲಯ (೧೮೦೮) ಸಂತ ಮೇರಿ ದೇವಾಲಯ (೧೮೮೨) ಸಂತ ಜೋಸೆಫ್ ಚರ್ಚ್ (೧೮೯೫) ಹಡ್ಸನ್ ಸ್ಮಾರಕ ದೇವಾಲಯ (೧೯೦೪) ಅಲ್ಲದೆ ಹೊನ್ನಾವರ, ಅತ್ತಾವರ, ಉಡುಪಿ, ಹುಬ್ಬಳ್ಳಿ, ಧಾರವಾಡ, ಮೈಸೂರುಗಳಲ್ಲಿಯೂ ಪ್ರಾಚೀನವಾದ ದೇವಾಲಯಗಳು ಇವೆ. ಈ ಚರ್ಚುಗಳ ವೈಶಿಷ್ಟ್ಯವೆಂದರೆ ಭಾರತೀಯ ಶಿಲ್ಪ ಸಂಪ್ರದಾಯಕ್ಕೆ ಭಿನ್ನವಾದ ರೀತಿಯಲ್ಲಿ ಕಟ್ಟಿರುವುದೇ. ಆಕಾಶವನ್ನೇ ತಿವಿಯುವಂತೆ ಕಟ್ಟಲಾದ ತ್ರಿಕೋಣಾಕೃತಿಯ ಚೂಪು ಗೋಪುರಗಳು ದಪ್ಪ ಕಂಬಗಳು, ಬಣ್ಣ ಬಣ್ಣದ ಗಾಜಿನ ಕಿಟಕಿಗಳು, ದೇವರ ಪೀಠ, ಪಾದ್ರಿಯ ಪ್ರವಚನಕ್ಕೆಂದೇ ಮಾಡಲಾದ ವಿಶೇಷ ವೇದಿಕೆ, ದೇವರ ಪಟಗಳು, ದೇವರ ಸಂತರ ವಿಗ್ರಹಗಳು ಚರ್ಚುಗಳ ಅಂದಚೆಂದವನ್ನು ಹೆಚ್ಚಿಸುತ್ತವೆ. ಮಂಗಳೂರಿನ ಸಂತ ಅಲೋಶಿಯಸ್ ಚರ್ಚಿನಲ್ಲಿ ಏಸುವಿನ ಜೀವನಕ್ಕೆ ಸಂಬಂಧಿಸಿದ ಚಿತ್ರಗಳನ್ನು ಬರೆಸಲಾಗಿದ್ದರೆ, ಬೆಂಗಳೂರಿನ ಹಡ್ಸನ್ ಸ್ಮಾರಕ ದೇವಾಲಯದಲ್ಲಿ ವೇದಿಕೆಯ ಹಿಂಬದಿಯಲ್ಲಿ ಪುನರುತ್ಥಾನದ ದೃಶ್ಯವಿರುವ ಗಾಜಿನ ಕಿಟಕಿಯನ್ನು ಇರಿಸಲಾಗಿದೆ. ಮೈಸೂರಿನ ಸಂತ ಫಿಲೋಮಿನಾ ದೇವಾಲಯದ (ಈಗ ಇದು ಸಂತ ಜೋಸೆಫರ ದೇವಾಲಯ) ನೆಲಮಾಳಿಗೆಯಲ್ಲಿ ಫಿಲೋಮಿನಾಳ ಆಳುದ್ದದ ವಿಗ್ರಹವನ್ನು ಮಲಗಿಸಲಾಗಿದೆ. ಕ್ರಿಸ್ತರ ಈ ದೇವಾಲಯಗಳು ಇವುಗಳ ಶೈಲಿ, ಒಳಗಿನ ಅಲಂಕಾರ, ಕಲಾತ್ಮಕತೆ ಚರ್ಚುಗಳಿಗಷ್ಟೇ ಮೀಸಲಾದದ್ದು. ಪಾಶ್ಚಾತ್ಯ ದೇಶಗಳಲ್ಲಿ ಜನಪ್ರಿಯವಾಗಿರುವ ಗಾಥಿಕ್ ಮೊದಲಾದ ಶೈಲಿಯ ಚರ್ಚುಗಳು ಕರ್ನಾಟಕದಲ್ಲೂ ಇವೆ ಎಂಬುದು ಒಂದು ವಿಶೇಷವೇ.

ಕ್ಯಾಥೊಲಿಕರ ಚರ್ಚುಗಳ ಎದುರು ಸಾಮಾನ್ಯವಾಗಿ ಕಲ್ಲಿನಲ್ಲಿ ನಿರ್ಮಿಸಲಾದ ಒಂದು ಗುಹೆಯನ್ನು, ಈ ಗುಹೆಯಲ್ಲಿರಿಸಲಾದ ಒಂದು ಮಾತೆಯ ವಿಗ್ರಹವನ್ನು ನೋಡಬಹುದು.

ಲೂರ್ದ್ ಅಥವಾ ಫಾತಿಮಾ ಎಂಬಲ್ಲಿ ಕಾಣಿಸಿಕೊಂಡ ದೇವಮಾತೆಯನ್ನು ಇರಿಸಲಾಗುವ ಈ ಗುಹಾಲಯ ಕೂಡ ಕ್ರಿಸ್ತ ವಾಸ್ತುಶಿಲ್ಪದ ಒಂದು ವಿಶೇಷ ಮಾದರಿಯೇ.

**ಶಿಕ್ಷಣ**

ಶಿಕ್ಷಣ ರಂಗದಲ್ಲಿ ಕ್ರೈಸ್ತ ಮಿಷನರಿಗಳು ಸಲ್ಲಿಸಿದ ಸೇವೆ ಗಮನಾರ್ಹವಾದುದಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರಿನಲ್ಲಿ ಬಾಸೆಲ್‌ಮಿಷನ್ನಿನವರು ೧೮೩೬ರಲ್ಲಿ ಶಾಲೆಯನ್ನು ತೆರೆದು ಶಿಕ್ಷಣ ಕ್ಷೇತ್ರದಲ್ಲಿ ಕಾಲಿರಿಸಿದರು. ಕಾರ್ಮೆಲ್ ಪಂಥದವರು ಕೂಡ ೧೮೬೦ರಲ್ಲಿ ಒಂದು ಶಾಲೆಯನ್ನು ತೆರೆದರು. ಉನ್ನತ ಶಿಕ್ಷಣವನ್ನು ಆರಂಭಿಸುವ ಉದ್ದೇಶದಿಂದ ೧೮೭೯ರಲ್ಲಿ ಮಂಗಳೂರಿನಲ್ಲಿ ಸಂತ ಅಲೋಶಿಯಸ್ ಕಾಲೇಜನ್ನು ಸ್ಥಾಪಿಸಲಾಯಿತು. ೧೮೮೨ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾದ ಸಂತ ಜೋಸೆಫ್ ಕಾಲೇಜು ಇದೀಗ ತನ್ನ ಶತಮಾನೋತ್ಸವ ವರ್ಷವನ್ನು ಆಚರಿಸುತ್ತಿದೆ.

ಲಂಡನ್ ಮಿಶನ್ನಿನವರು ೧೮೪೬ರಲ್ಲಿ ಬಳ್ಳಾರಿಯಲ್ಲಿ ಇಂಗ್ಲೀಷ್ ಶಾಲೆ ತೆರೆದರು. ಮುಂದೆ ಅದೇ ವಾರ್ಡ್ಲಾ ಕಾಲೇಜಾಗಿ ಬೆಳೆಯಿತು. ಬೆಳಗಾವಿ ಪ್ರದೇಶದಲ್ಲಿ ಲಂಡನ್ ಮಿಶನ್ ಶಾಲೆಗಳನ್ನು ತೆರೆದದ್ದು ಅಲ್ಲೆಲ್ಲಾ ಸಾಕ್ಷರತೆ ಹಬ್ಬಲು ಕಾರಣವಾಯಿತು. ಕ್ರಿ.ಶ. ೧೮೪೦ರಲ್ಲಿ ಪ್ರಥಮ ಬಾರಿಗೆ ಹೆಣ್ಣು ಮಕ್ಕಳಿಗಾಗಿ ಬೆಂಗಳೂರಿನಲ್ಲಿ ಕನ್ನಡ ಶಾಲೆಯನ್ನು ಸ್ಥಾಪಿಸಿದ ಕೀರ್ತಿಯೂ ಸಲ್ಲುತ್ತದೆ. ೧೮೩೨ರಲ್ಲಿ ರೆವರೆಂಡ್ ಕ್ಯಾಂಬೆಲ್ಲರು ಕನ್ನಡ ಮಕ್ಕಳಿಗಾಗಿ ವಸತಿ ಸೌಕರ್ಯವಿರುವ ಶಾಲೆಯನ್ನು ಬೆಂಗಳೂರಿನಲ್ಲಿ ತೆರೆದದ್ದು ಗಮನಾರ್ಹ. ಮೈಸೂರಿನಲ್ಲಿ ವೆಸ್ಲಿ ಮಿಷನ್ ಸಂಸ್ಥೆ ೧೮೫೪ರಲ್ಲಿ ಒಂದು ಶಾಲೆಯನ್ನು ತೆರೆಯಿತು. ಬಾಸೆಲ್ ಮಿಷನ್ನಿನವರು ಉತ್ತರ ಕರ್ನಾಟಕದ ಪ್ರಮುಖ ಕೇಂದ್ರಗಳಲ್ಲಿ ಪ್ರಾಥಮಿಕ ಶಾಲೆಗಳಿಂದ ಪ್ರೌಢ ಶಾಲೆಗಳವರೆಗೆ ವಿದ್ಯಾ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದರು.

ಹೀಗೆ ಸಣ್ಣದಾಗಿ ಪ್ರಾರಂಭವಾದ ಕ್ರೈಸ್ತ ವಿದ್ಯಾಲಯಗಳು ಇಂದು ಅಸಂಖ್ಯಾತವಾದ ರೀತಿಯಲ್ಲಿ ಕನ್ನಡ ನಾಡಿನ ಎಲ್ಲ ನಗರ ಪಟ್ಟಣಗಳಲ್ಲೂ ವ್ಯಾಪಿಸಿಕೊಂಡಿವೆ. ಸಾಮಾನ್ಯವಾಗಿ ಕ್ರಿಶ್ಚಿಯನ್ ದೇವಾಲಯಗಳ ಹತ್ತಿರವೇ ಕಾನ್ವೆಂಟುಗಳು, ಕಾಲೇಜುಗಳು, ಇರುವುದರಿಂದ ಇವೆರಡನ್ನೂ ಒಂದು ಸಂಸ್ಥೆಯೇ ನೋಡಿಕೊಳ್ಳುತ್ತದೆಂಬ ಅಭಿಪ್ರಾಯ ಇರುತ್ತದೆ. ಆದರೆ ಇದು ತಪ್ಪು. ಕ್ರಿಶ್ಚಿಯನ್ ಕಾಲೇಜುಗಳು ಕಾನ್ವೆಂಟುಗಳು ಸ್ವತಂತ್ರವಾಗಿ ಬೇರೊಂದು ಸಂಸ್ಥೆಯ ಆಡಳಿತದಲ್ಲಿರುತ್ತವಲ್ಲದೇ ಸ್ಥಳೀಯ ಚರ್ಚುಗಳಿಗೂ, ಈ ವಿದ್ಯಾ ಸಂಸ್ಥೆಗಳಿಗೂ ಆಡಳಿತದ ಸಂಬಂಧಗಳು ಹೆಚ್ಚು ಇರುವುದಿಲ್ಲ.

**ವೈದ್ಯಕೀಯ ಕ್ಷೇತ್ರ**

ರೋಗಿಗಳ ಸೇವೆ ಮಾಡುವುದರ ಮೂಲಕ ದೇವರ ಪ್ರೀತಿಗೆ ಪಾತ್ರರಾಗಬೇಕೆಂಬುದು ಏಸು ಬೋಧಿಸಿದ ತತ್ವಗಳಲ್ಲಿಮುಖ್ಯವಾದದ್ದು. ಹೀಗೆಂದೇ ಕ್ರೈಸ್ತ ಮಿಷನರಿಗಳು ವೈದ್ಯಕೀಯ ರಂಗವನ್ನು ತಮ್ಮ ಸೇವಾ ಕ್ಷೇತ್ರವಾಗಿ ಮಾಡಿಕೊಂಡರು. ೧೮೮೦ರಲ್ಲಿ ಮಂಗಳೂರಿಗೆ ಬಂದ ಜೆಸುಯಿಟ್ (ಜೆಸ್ವಿಟ್) ಪಾದ್ರಿ ಫಾದರ್ ಮುಲ್ಲರ್ ತನ್ನ ನಾಡಿನಲ್ಲಿ ಆರಂಭಿಸಿದ ಹೋಮಿಯೋಪತಿ ಆಸ್ಪತ್ರೆ ಇಂದು ಬಹಳ ದೊಡ್ಡದಾಗಿ ಬೆಳೆದು ನಿಂತಿದೆ. ಫಾದರ್ ಮುಲ್ಲರ್ಸ್ ಸ್ಪೆಸಿಫಿಕ್ಸ್ ಎಂಬ ಹೋಮಿಯೋಪತಿ ಔಷಧಿಗಳು ಇಲ್ಲಿ ತಯಾರಾಗಿ ಭಾರತದ ವಿವಿಧ ಭಾಗಗಳಲ್ಲದೆ ಶ್ರೀಲಂಕಾ, ಬರ್ಮಾ ಮತ್ತು ಇತರ ದೇಶಗಳಿಗೂ ರಫ್ತಾಗುತ್ತವೆ. ಈ ಆಸ್ಪತ್ರೆಯಲ್ಲಿ ಅತ್ಯಾವಶ್ಯಕವಾದ ಎಲ್ಲ ವಿಭಾಗಗಳು ಇವೆ. ಇಲ್ಲಿಯ ಮಾನಸಿಕ ಚಿಕಿತ್ಸಾ ವಿಭಾಗ ಅದ್ವಿತೀಯವಾದುದಾಗಿದೆ. ಈ ಸಂಸ್ಥೆಯವರು ದಾದಿಯರ ತರಬೇತಿ ಶಾಲೆ, ರೋಗವೈಜ್ಞಾನಿಕ ಪ್ರಯೋಗಾಲಯ, ರಕ್ತದ ಬ್ಯಾಂಕು ಮೊದಲಾದವುಗಳನ್ನು ನಡೆಸುತ್ತಾರೆ.

ಪ್ರಾಟೆಸ್ಟೆಂಟ್ ಕ್ರಿಶ್ಚಿಯನ್ನರು ನಡೆಸುವ ಉಡುಪಿಯ ಕ್ರಿಶ್ಚಿಯನ್ ಆಸ್ಪತ್ರೆ ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ಆಸ್ಪತ್ರೆಗಳಲ್ಲೊಂದು. ಬೆಂಗಳೂರಿನ ಸೈಂಟ್ ಮಾರ್ಥಾಸ್ ಆಸ್ಪತ್ರೆ ಕೂಡ ಅತ್ಯಾಧುನಿಕವಾದ ಎಲ್ಲ ಯಂತ್ರ ಶಸ್ತ್ರಗಳಿಂದ ಸುಸಜ್ಜಿತವಾದ ಒಂದು ಆಸ್ಪತ್ರೆ. ಇದನ್ನು ಗುಡ್ ಷೆಪರ್ಡ್ ಕನ್ಯಾಸ್ತ್ರೀಯರು ಸೇವಾ ತತ್ಪರರಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಮೈಸೂರಿನ ಹೋಲ್ಡ್ಸ್‌ವರ್ತ್ ಮೆಮೋರಿಯಲ್ ಆಸ್ಪತ್ರೆ ಕೂಡ ಇಲ್ಲಿ ಉಲ್ಲೇಖಾರ್ಹ. ಇದನ್ನು ವೆಸ್ಲಿಯನ್ ಮಿಷನ್ನಿನವರು ನಡೆಸಿಕೊಂಡು ಬರುತ್ತಿದ್ದಾರೆ. ಈ ಎಲ್ಲ ಆಸ್ಪತ್ರೆಗಳಲ್ಲಿ ಬಡವರಾದವರಿಗೆ ಉಚಿತ ಇಲ್ಲವೆ ರಿಯಾಯಿತಿಯ ಸೇವಾ ಸೌಲಭ್ಯ ದೊರೆಯುವುದು ಒಂದು ವಿಶೇಷವೇ.

ಕ್ರಿಶ್ಚಿಯನ್ ಮಿಷನರಿಗಳು ಸ್ಥಾಪಿಸಿರುವ ಬೆಂಗಳೂರಿನ ಜಾನ್ ಮೆಡಿಕಲ್ ಕಾಲೇಜು ಹಾಗೂ ಆಸ್ಪತ್ರೆ ಇತ್ತೀಚಿನ ಅವರ ಸಾಧನೆಯಾಗಿದೆ. ಅಲ್ಲದೆ ಅಲ್ಲಲ್ಲಿ ಅನಾಥಾಶ್ರಮಗಳನ್ನು, ವೃದ್ಧರಿಗೆ ವಿಶ್ರಾಂತಿ ಧಾಮಗಳನ್ನು ಸ್ಥಾಪಿಸಿ ಈ ಮೂಲಕ ಕ್ರಿಸ್ತನ ಸೇವೆಯನ್ನು ಇವರು ಮಾಡುತ್ತಾ ಬಂದಿದ್ದಾರೆ. ಬೆಳಗಾವಿಯ ಹತ್ತಿರದ ಹಿಂಡಲಗಿಯಲ್ಲಿರುವ ಕುಷ್ಠ ರೋಗಿಗಳ ಅನಾಥಾಲಯವನ್ನು ಇಲ್ಲಿ ಉದಾಹರಿಸಬೇಕು.

ಕ್ರೈಸ್ತ ಮಿಷನರಿಗಳು ಮುದ್ರಣ ಕ್ಷೇತ್ರಕ್ಕೆ ಇಳಿದು ವಿಕ್ರಮ ಸಾಧಿಸಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಂಚಿನ ಉದ್ಯಮದಲ್ಲಿ ಹೆಸರು ಪಡೆದಿದ್ದಾರೆ. ಮಂಗಳೂರಿನ ಬಾಸೆಲ್ ಮಿಷನ್ನಿನವರು ಕೈಮಗ್ಗದಲ್ಲಿ ನೂತ "ಖಾಕಿ" ಬಟ್ಟೆ ಪೋಲೀಸರ, ಸೈನಿಕರ ಸಮವಸ್ತ್ರಕ್ಕಾಗಿ ಬಳಸಲಾಗುತ್ತಿತ್ತು. ದಕ್ಷಿಣ ಕನ್ನಡ ಜಿಲ್ಲೆಯ ಜೆಪ್ಪು, ಬೆಳ್ತಂಗಡಿಯಲ್ಲಿ ಬೆಂಗಳೂರಿನ ಕ್ರೈಸ್ತ ಮಿಷನರಿಗಳು ಹಲವು ಉದ್ಯಮಗಳನ್ನು ನಡೆಸುತ್ತಿದ್ದಾರೆ.

ಕರ್ನಾಟಕದ ಇತರ ಧರ್ಮೀಯರೊಡನೆ ಹೋಲಿಸಿದಾಗ ಕ್ರೈಸ್ತರು ಅಲ್ಪ ಸಂಖ್ಯಾತರು. ಆದರೆ ಶಿಕ್ಷಣ ಕ್ಷೇತ್ರದಲ್ಲಿ ಇವರು ಕರ್ನಾಟಕಕ್ಕೆ ಸಲ್ಲಿಸುತ್ತಿರುವ ಸೇವೆ ಕಡಿಮೆಯಾದುದಲ್ಲ. ಸಮರ್ಪಣಾ ಭಾವದಿಂದ ದುಡಿಯುವ ಪಾದ್ರಿಗಳು, ಕನ್ಯಾಸ್ತ್ರೀಯರು, ಈ ಸೇವಾ ಕ್ಷೇತ್ರಗಳ ಹೊಣೆ ಹೊತ್ತಿರುವುದರಿಂದಲೇ ಈ ಕಾರ್ಯ ಸಾಧ್ಯವಾಗಿದೆ ಎಂಬುದು ಕೂಡ ಅಷ್ಟೇ ಮುಖ್ಯ. ಇದೀಗ ಇತರ ಕೆಲ ಸಂಸ್ಥೆಗಳು ಕ್ರೈಸ್ತ ಮಿಶನರಿಗಳ ಹಾಗೆಯೇ ವಿದ್ಯಾ ಕ್ಷೇತ್ರದಲ್ಲಿ, ವೈದ್ಯಕೀಯ ರಂಗದಲ್ಲಿ ದುಡಿಯಲು ಮುಂದೆ ಬರುತ್ತಿರುವುದು ಕ್ರೈಸ್ತ ಧರ್ಮದ ಪ್ರಭಾವದಿಂದಲೇ ಎಂದು ಹೇಳಿದರೆ ತಪ್ಪಾಗಲಾರದು. ಅಗ್ನಿ ವಿಕೋಪಕ್ಕೆ ಜನ ಗುರಿಯಾದಾಗ, ಜಲಪ್ರಳಯದಿಂದಲೋ, ಇನ್ನೊಂದು ಅವಘಡದಿಂದಲೋ ಜನತೆಗೆ ಹಾನಿಯಾದಾಗ ಅಲ್ಲಿಗೆಲ್ಲಾ ಧಾವಿಸಿ ಸೇವಾನಿರತರಾಗಿರುವ ಸಂಸ್ಥೆಗಳು ಕ್ರೈಸ್ತ ಮಿಷನರಿಗಳಿಂದಲೇ ಸ್ಫೂರ್ತಿ ಪಡೆದಿರುತ್ತವೆಂಬುದೂ ಸುಳ್ಳಲ್ಲ.

ಕನ್ನಡ ಸಾಹಿತ್ಯ ಕ್ರಿಸ್ತನ ಪ್ರಭಾವದಿಂದಾಗಿ ಕೆಲವು ಸುಂದರ ಕವಿತೆಗಳಿಗೆ, ಸಾಹಿತ್ಯ ಕೃತಿಗಳಿಗೆ ಜನ್ಮ ನೀಡಿದೆ.

ಪಿಲಿಗ್ರಿಮ್ಸ್ ಪ್ರೊಗ್ರೆಸ್ ಗ್ರಂಥ ಬಹಳ ಹಿಂದೆಯೇ ಕನ್ನಡಕ್ಕೆ ಅನುವಾದವಾಗಿದೆ. ಇಮಿಟೇಶನ್ ಆಫ್ ಕ್ರೈಸ್ಟ ಗ್ರಂಥ ಕೂಡ ಕನ್ನಡದಲ್ಲಿ ಬಂದಿದೆ. ಮಂಜೇಶ್ವರ ಗೋವಿಂದ ಪೈಗಳು ಗೊಲ್ಗೊಥಾದಂಥ ಮಹಾಕಾವ್ಯವನ್ನು ಬರೆದಿದ್ದಾರೆ. ಕುವೆಂಪು, ಶಿವರುದ್ರಪ್ಪ, ವಿ. ಸೀ. ಕಣವಿ, ನಿಸಾರ್, ಎಕ್ಕುಂಡಿ, ನರಸಿಂಹಸ್ವಾಮಿ, ಬೇಂದ್ರೆಯವರಂಥ ಕವಿಗಳು ಏಸುವಿನ ತ್ಯಾಗ ಬಲಿದಾನಗಳ ಕುರಿತು ಬರೆದಿದ್ದಾರೆ. ಏಸುವಿನ ಜೀವನ ಚರಿತ್ರೆಗಳೂ ಕನ್ನಡದಲ್ಲಿ ಬಂದಿವೆ. ಏಸುವಿನ ಸಂಪೂರ್ಣ ಜೀವನವನ್ನು ಆಧರಿಸಿ ರಚಿತವಾದ ಒಂದು ಯಕ್ಷಗಾನ ಬಯಲಾಟ ಕನ್ನಡ ಜಿಲ್ಲೆಗಳಲ್ಲಿ, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಜನಪ್ರಿಯವಾಗಿದೆ.

# ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳುವಳಿ

ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್

ಕರ್ನಾಟಕದಲ್ಲಿ ಎಂದಿನಿಂದಲೂ ಸ್ವಾತಂತ್ರ್ಯದ ಆಕಾಂಕ್ಷೆಯಿತ್ತು ಮತ್ತು ಅದಕ್ಕೂ ಹೋರಾಟ ನಡೆದೇ ಇತ್ತು. ಟಿಪ್ಪುವಿನ ಮರಣಾನಂತರ ಬ್ರಿಟಿಷರಿಗೆ ಅವರು ಭಾವಿಸಿದಂತೆ ರಾಜ್ಯ ಸುಖವಾಗಿ ದಕ್ಕಲಿಲ್ಲ. ಟಿಪ್ಪು ಮಡಿದ ಅನಂತರ ಅವನ ಸೈನ್ಯದಲ್ಲಿಯೇ ಸರದಾರನಾಗಿದ್ದ ಧೊಂಡೋಜಿ ವ್ಯಾಘ್ (ವ್ಯಾಘ್) ಎಂಬುವನು ೧೮೦೦ರಲ್ಲಿ ಬ್ರಿಟಿಷರನ್ನು ಎದುರಿಸಿ ರಾಜ್ಯವನ್ನು ಕಟ್ಟಿದ. ಫ್ರೆಂಚರು ಅವನಿಗೆ ಬೆಂಬಲ ಕೊಟ್ಟರು. ದಕ್ಷಿಣ ಕನ್ನಡ,ಧಾರವಾಡ, ಹರಪನ ಹಳ್ಳಿ ಇಲ್ಲೆಲ್ಲ ಅವನ ಆಧಿಪತ್ಯ ಸ್ಥಾಪನೆಯಾಯಿತು. ಧೊಂಡೋಜಿ ೧೮೦೦ರಲ್ಲಿ ಲೊಂಡ ಎಂಬಲ್ಲಿ ನಡೆದ ಯುದ್ಧದಲ್ಲಿ ಪೇಷ್ವೆಯ ದಂಡನಾಯಕ ದೊಂಡೋಪಂತ್ ಗೋಖಲೆಯನ್ನು ಕೊಂದ. ಧೊಂಡೋಜಿ ವ್ಯಾಘನ ಸೈನ್ಯದಲ್ಲಿ ಐವತ್ತು ಸಾವಿರ ಕಾಲಾಳು ಮತ್ತು ತೊಂಬತ್ತು ಸಾವಿರ ಕುದುರೆ ಸವಾರರು ಇದ್ದರೆಂದು ಉಲ್ಲೇಖವಿದೆ. ಅವನು ಆರ್ಥರ್ ವೆಲ್ಲೆಸ್ಲಿಯ ಸೈನ್ಯದೊಡನೆ ಕೋಣಗಲ್‌ನಲ್ಲಿ ಯುದ್ಧ ಮಾಡುವಾಗ ಮಡಿದ. ಕರ್ನಾಟಕದಲ್ಲಿ ಬ್ರಿಟಿಷರನ್ನು ಎದುರಿಸಿ, ಮೊದಲು ದಂಗೆಯೆದ್ದವರು ನಿಜಾಮ್ ರಾಜ್ಯದ ಕೊಪ್ಪಳದ ವೀರಪ್ಪ. ಅವನು ಸೈನ್ಯವನ್ನು ಕೂಡಿಸಿ ಕೊಪ್ಪಳ ಕೋಟೆಯನ್ನು ಸ್ವಾಧೀನ ಮಾಡಿಕೊಂಡು ಸುತ್ತಲ ಪ್ರದೇಶಕ್ಕೆಲ್ಲ ಆಳ್ವಿಕೆ ವಿಸ್ತರಿಸಿದ. ಬ್ರಿಟಿಷ್ ಸೈನ್ಯ, ಮೇಜರ್ ಡ್ರಿಸ್ಲರ್‌ನ ನಾಯಕತ್ವದಲ್ಲಿ ಕೊಪ್ಪಳದ ಕೋಟೆಯನ್ನು ಮುತ್ತಿ ಮತ್ತು ವೀರಪ್ಪ ರಣದಲ್ಲಿ ಮಡಿದ. ಮರುವರುಷವೇ ನಿಜಾಮನ ರಾಜ್ಯದಲ್ಲಿ ಶಿವಲಿಂಗಯ್ಯ ದೇಶಮುಖ್ ಎಂಬ ಹೆಸರಿನ ಪಾಳೆದಾರ ಬ್ರಿಟಿಷರ ಆಳ್ವಿಕೆಯನ್ನು ಎದುರಿಸಿದ. ಈ ಹೋರಾಟಕ್ಕೆ ದೇಶಮುಖ್ ದಂಗೆ ಎಂದೇ ಹೆಸರಾಯ್ತಿತು. ತಿರುಮಲರಾವ್ ದೇಶಮುಖ್ ಮತ್ತು ಮೇಘಶ್ಯಾಂ ಎಂಬ ಸರದಾರರು ಶಿವಲಿಂಗಯ್ಯನ ಜೊತೆ ಸೇರಿದರು. ನಿಜಾಮ ಬ್ರಿಟಿಷರ ಸಹಾಯವನ್ನು ಕೋರಿದ. ಆಗ ೧೮೨೧ರಲ್ಲಿ ಲೆಫ್ಟಿನೆಂಟ್ ಸದರ್‌ಲ್ಯಾಂಡ್ಸ್ ಸೈನ್ಯ, ಶಿವಲಿಂಗಯ್ಯ ಮತ್ತು ಮೇಘಶ್ಯಾಮರ ಮೇಲೆ ದೊಡ್ಡ ಸೈನ್ಯದೊಂದಿಗೆ ದೀರ್ಘಕಾಲದ ಹೋರಾಟ ನಡೆಸಿ, ಯುದ್ಧದಲ್ಲಿ ಅವರನ್ನು ಸೆರೆಹಿಡಿದ.

ಇದೇ ಕಾಲಕ್ಕೆ ಬಿಜಾಪುರ ಜಿಲ್ಲೆಯ ಸಿಂದಗಿ ಎಂಬಲ್ಲಿ ದಿವಾಕರ ದೀಕ್ಷಿತ್ ಎಂಬ ಸರದಾರ, ರಾವ್‌ಜಿ ಬಾಲಾಜಿ ದೇಶಪಾಂಡೆ ಮತ್ತು ಸೆಟ್ಟೆಪ್ಪ ತುಕ್ಕಳ್ಳಿ ಎಂಬುವರ ಸಹಾಯದಿಂದ ಪ್ರತಿ ಸರ್ಕಾರವನ್ನು ರಚಿಸಿ ಆಳ್ವಿಕೆಯನ್ನು ಪ್ರಾರಂಭಿಸಿದ. ಸೈನ್ಯ ಬಂದು ದಿವಾಕರ ದೀಕ್ಷಿತನನ್ನು ಅಡಗಿಸಿತು. ಕಿತ್ತೂರು ಚೆನ್ನಮ್ಮನ ಸ್ವಾತಂತ್ರ್ಯದ ಕೆಚ್ಚು, ದೇಶಪ್ರೇಮವೂ ಮೈನವಿರೇಳಿಸುತ್ತದೆ. ಚೆನ್ನಮ್ಮ ಭರತವರ್ಷದ ವೀರರಮಣಿಯರಲ್ಲಿ ಉಜ್ವಲ ತಾರೆ. ಬ್ರಿಟಿಷರು ಕಿತ್ತೂರಿನ ಆಡಳಿತದಲ್ಲಿ ಪ್ರವೇಶಿಸುವುದನ್ನು ಅವಳು ಪ್ರತಿಭಟಿಸಿದಳು. ಸಿಂಹಿಣಿಯಂತೆ ಸೆಟೆದು ಯುದ್ಧಕ್ಕೆ ನಿಂತಳು. ಅಂದಿನ ಸ್ವಾತಂತ್ರ್ಯ ಹೋರಾಟಗಾರರಿಗೆಲ್ಲ ಅಳಿಯದ ಉತ್ಸಾಹದ ಚಿಲುಮೆಯಾದಳು. ಬ್ರಿಟಿಷ್ ಸೈನ್ಯಾಧಿಕಾರಿ ಥ್ಯಾಕರೆ ಕಿತ್ತೂರನ್ನು ಜಯಿಸಲು ದೊಡ್ಡ ಸೈನ್ಯದೊಂದಿಗೆ ಬಂದು ಮುತ್ತಿಗೆ ಹಾಕಿದನು. ಯುದ್ಧದಲ್ಲಿ ಥ್ಯಾಕರೆ ಸತ್ತ. ಅನೇಕ ಬ್ರಿಟಿಷ್ ಅಧಿಕಾರಿಗಳೂ ಅವರ ಪರಿವಾರದವರೂ ಕಿತ್ತೂರಿನವರಿಗೆ ಸೆರೆ ಸಿಕ್ಕಿದರು. ಅನಂತರ ದಕ್ಷಿಣ ಭಾರತದ ಬ್ರಿಟಿಷ್ ಕಮ್ಯಾಂಡರರು ಭಾರಿ ಸೈನ್ಯವನ್ನು ಕೂಡಿಸಿಕೊಂಡು ಹೋಗಿ ಕಿತ್ತೂರನ್ನು ಮುತ್ತಿದರು. ಬ್ರಿಟಿಷರು ಚೆನ್ನಮ್ಮನನ್ನು ಬೈಲ ಹೊಂಗಲಿನಲ್ಲಿ ಸೆರೆಯಲ್ಲಿಟ್ಟು, ಕಿತ್ತೂರನ್ನು ಮುಂಬಯಿ ಆಧಿಪತ್ಯಕ್ಕೆ ಸೇರಿಸಿಕೊಂಡರು. ಪರತಂತ್ರ ಜೀವನ ಚೆನ್ನಮ್ಮನಿಗೆ ಜಿಗುಪ್ಸೆಯಾಗಿರಬೇಕು. ಅವಳು ಐದೇ ವರುಷಗಳಲ್ಲಿ ತೀರಿಕೊಂಡಳು. ಭಾರತದಲ್ಲಿ ಸೂರ್ಯನೇ ಮುಳುಗದಿದ್ದ ಬ್ರಿಟಿಷ್ ಚಕ್ರಾಧಿಪತ್ಯ ಮಣ್ಣುಪಾಲಾಯಿತು. ಆದರೆ ಚೆನ್ನಮ್ಮನ ಕೀರ್ತಿ ಮಾತ್ರ ಆಚಂದ್ರಾರ್ಕವಾಗಿ ಉಳಿದಿದೆ.

ಚೆನ್ನಮ್ಮನ ಮರಣಾನಂತರವೂ ಆಕೆ ಹೊತ್ತಿಸಿದ ಬಂಡಾಯದ ಕಿಡಿ ಪ್ರಜ್ವಲಿಸುತ್ತಲೇ ನಡೆಯಿತು. ಕಿತ್ತೂರು ಸೈನ್ಯದಲ್ಲಿ ಸೇವೆ ಸಲ್ಲಿಸಿದ್ದ ಸಂಗೊಳ್ಳಿ ರಾಯಣ್ಣನೆಂಬ ಸಿಪಾಯಿ, ಚೆನ್ನಮ್ಮನ ದತ್ತು ಮಗನಿಗೆ ರಾಜ್ಯವನ್ನು ಕೊಡಿಸಲು ೧೮೨೯ರಲ್ಲಿ ಒಂದು ಸೈನ್ಯವನ್ನು ಕಟ್ಟಿದ. ಸುರಪುರದ ನಾಯಕನೂ ಅವನಿಗೆ ಸಹಾಯಕನಾದ. ಆದರೆ ಅನಂತರ ಅವರ ಪಕ್ಷದವರೇ ಅವನನ್ನು ಬ್ರಿಟಿಷರಿಗೆ ಹಿಡಿದು ಕೊಟ್ಟರು. ಅವನಿಗೆ ಫಾಸಿಯಾಯಿತು. ಅನಂತರ ಕಿತ್ತೂರಿನ ಮತ್ತೊಬ್ಬ ಪ್ರೇಮಿ ಸರ್ದಾರ್ ಗುರುಸಿದ್ಧಪ್ಪನೂ, ಕಿತ್ತೂರು ದತ್ತು ಪುತ್ರ ಶಿವಲಿಂಗಪ್ಪನನ್ನು ಸಿಂಹಾಸನದ ಮೇಲೆ ಕೂರಿಸಲು ದಂಗೆ ಎದ್ದ. ಬ್ರಿಟಿಷರು ಶಿವಲಿಂಗಪ್ಪನನ್ನು ಸೆರೆಯಲ್ಲಿಟ್ಟರು. ಅದೇ ಕಾಲದಲ್ಲಿ (೧೮೩೩) ಶಂಕರಣ್ಣನೆಂಬ ಸರದಾರನೂ ಬ್ರಿಟಿಷರ ವಿರುದ್ಧ ದಂಗೆ ಎದ್ದ. ಅದು ವಿಫಲವಾಯಿತು. ಮತ್ತೆ ೧೮೩೬ರಲ್ಲಿ ನಾಗಪ್ಪ ಗಜಪತಿ ಸವ್ವಸೆಟ್ಟಿ ಮತ್ತು ರುದ್ರಪ್ಪ ಕೊಟ್ಟಿಗಿ ಇವರೆಲ್ಲ ಬ್ರಿಟಿಷರಿಗೆ ಎದುರಾಗಿ

ಮತ್ತೊಂದು ಸೈನ್ಯವನ್ನು ಕಟ್ಟಿದರು. ಅವರು ಗೋವಾದ ಪೋರ್ಚುಗೀಸರ ಸಹಾಯವನ್ನು ಕೂಡ ಪಡೆಯಲು ಪ್ರಯತ್ನಿಸಿದರು. ಆದರೆ ಅವರೂ ಜಯಶಾಲಿಗಳಾಗಲಿಲ್ಲ. ಬ್ರಿಟಿಷರಲ್ಲಿ ವಿರೋಧವೂ, ಸ್ವಾತಂತ್ರ್ಯ ಪ್ರೇಮವೂ ಎಷ್ಟು ಉಜ್ವಲವಾಯಿತೆಂದರೆ–ಸಂಗೊಳ್ಳಿ ರಾಯಣ್ಣನನ್ನು ಬ್ರಿಟಿಷರು ಹಿಡಿದುಕೊಳ್ಳಲು ಸಹಾಯ ಮಾಡಿದ ಕೋದನಪುರದ ಲಿಂಗನಗೌಡ ಎಂಬುವವನನ್ನು ಕಿತ್ತೂರಿನ ಪ್ರೇಮಿಗಳು ಹಿಡಿದುಕೊಂಡು ಸೈನ್ಯವನ್ನು ಕಟ್ಟಿದರು. ಆದರೆ ಅದು ಬ್ರಿಟಿಷರಿಗೆ ಎದುರಾಗಿ ವಿಫಲವಾಯಿತು. ಈ ಮೇಲಿನ ಹೋರಾಟಗಳ ಸರಮಾಲೆಯಿಂದ, ಕಿತ್ತೂರಿನ ವಿಷಯದಲ್ಲಿ ಜನತೆಗಿದ್ದ ಪ್ರೇಮವೂ ಬ್ರಿಟಿಷರಲ್ಲಿದ್ದ ದ್ವೇಷವೂ ಚೆನ್ನಮ್ಮನ ಸ್ಫೂರ್ತಿಯೂ ವ್ಯಕ್ತವಾಗುತ್ತವೆ. ಇದೇ ಸಂದರ್ಭದಲ್ಲಿ ದಕ್ಷಿಣ ಮತ್ತು ಉತ್ತರ ಕನ್ನಡದ ರೈತರು ಬ್ರಿಟಿಷರಿಗೇ ವಿರುದ್ಧ ದಂಗೆಯೆದ್ದರು. ಕೊಡಗಿನಲ್ಲಿ ಬ್ರಿಟಿಷರು ಚಿಕವೀರ ರಾಜನನ್ನು ಸಿಂಹಾಸನ ಚ್ಯುತನನ್ನಾಗಿ ಮಾಡಿದ ಅನಂತರ, ಅಪರಂಪರಾನಂದ ಮತ್ತು ಕಲ್ಯಾಣಸ್ವಾಮಿ ಎಂಬ ಇಬ್ಬರು ದೊಡ್ಡ ಸೈನ್ಯವನ್ನು ಕಟ್ಟಿ (೧೮೩೫–೩೭) ಬ್ರಿಟಿಷರನ್ನು ಎದುರಿಸಿದರು. ಅವರು ಸುಳ್ಯ, ಪುತ್ತೂರು, ಬಂಟವಾಳ, ಮಂಗಳೂರು, ಕಾಸರಗೋಡು ಇಲ್ಲೆಲ್ಲ ಪ್ರತಿ ಸರ್ಕಾರವನ್ನೇ ಸ್ಥಾಪಿಸಿದರು. ಬೆಳ್ಳಾರೆ, ಬಂಟ್ವಾಳ ಮತ್ತು ಕಾಸರಗೋಡು ಖಜಾನೆಗಳನ್ನು ಲೂಟಿ ಮಾಡಿದರು. ಬ್ರಿಟಿಷ್ ಕಲೆಕ್ಟರು ಮತ್ತು ಇತರ ಆಂಗ್ಲರು ತಮ್ಮ ಕುಟುಂಬಗಳೊಡನೆ ಮಂಗಳೂರಿನಿಂದ ಪಲಾಯನ ಮಾಡಿ ಹೊನ್ನಾವರದಲ್ಲಿ ರಕ್ಷಣೆ ಹೊಂದಿದರು. ಬ್ರಿಟಿಷರು ಅಪರಂಪರಾನಂದ ಸ್ವಾಮಿಯನ್ನು ಸೆರೆ ಹಿಡಿದರು. ಆದರೂ ದಂಗೆ ನಿಲ್ಲಲಿಲ್ಲ. ಆಗ ಜನತೆಗೆ ಮತ್ತೊಬ್ಬ ನಾಯಕ ಹುಟ್ಟಿಕೊಂಡನು. ಅವನ ಹೆಸರು ಪುಟ್ಟಬಸಪ್ಪ ಎಂದು. ಅವನ ಜೊತೆ ಬಂಗಡಿರಾಜಕುಮಾರ, ಗುಡ್ಡೆಮನೆ ಅಪ್ಪಯ್ಯ ಎಲ್ಲ ಸೇರಿ ಸರ್ಕಾರವನ್ನೇ ಕೆಲವು ಕಾಲ ಸ್ಥಗಿತಗೊಳಿಸಿದರು. ಬ್ರಿಟಿಷ್ ಸೈನ್ಯ ಪುಟ್ಟಬಸಪ್ಪ ಬಂಗಡಿರಾಜಕುಮಾರ ಮತ್ತು ಗುಡ್ಡೆಮನೆ ಅಪ್ಪಯ್ಯ ಎಲ್ಲರನ್ನೂ ಸೆರೆ ಹಿಡಿದು ಫಾಸಿಗೆ ಹಾಕಿದರು. ೧೮೪೧ರಲ್ಲಿ ಸುರಪುರದ ನಾಯಕರು, ಸಾತಾರೆಯ ನರಸಪ್ಪ ಪೇಟ್ಕಾರ ಎಂಬುವನಿಗೆ ಸಹಾಯ ಮಾಡಲು ಬ್ರಿಟಿಷರಿಗೆ ವಿರೋಧವಾಗಿ ಸೈನ್ಯವನ್ನು ಕಟ್ಟಿದ. ಬೀದರ್ ಜಿಲ್ಲೆಯಲ್ಲಿ ೧೮೫೭ರಲ್ಲಿ ಒಂದು ಸೈನ್ಯ ಲಿಂಗಪ್ಪ ಸರ್ದಾರನ ನೇತೃತ್ವದಲ್ಲಿ ಬ್ರಿಟಿಷರನ್ನು ಎದುರಿಸಿತು. ಬ್ರಿಟಿಷ್ ಸೈನ್ಯ ಅವನನ್ನೂ ಸೋಲಿಸಿತು.

ಭಾರತೀಯರ ಸ್ವಾತಂತ್ರ್ಯಾಭಿಲಾಷೆಯನ್ನು ಒಂದು ದಿನವೂ ಅಡಗಿಸುವುದು ಬ್ರಿಟಿಷ್ ಸರ್ಕಾರಕ್ಕೂ ಸಾಧ್ಯವಾಗಲಿಲ್ಲ. ೧೮೫೭ರಲ್ಲಿ ನಡೆದ ಸಿಪಾಯಿ ದಂಗೆಯಲ್ಲಿ–ಇದನ್ನು ಭಾರತದ ಪ್ರಥಮ ಸ್ವಾತಂತ್ರ್ಯ ಹೋರಾಟವೆಂದು ಕರೆಯುತ್ತೇವೆ–ದೂರದ ದಕ್ಷಿಣದಲ್ಲಿದ್ದರೂ ಕರ್ನಾಟಕ ತನ್ನ ಪಾಲಿನ ಕರ್ತವ್ಯವನ್ನು ಸಲ್ಲಿಸಿತು. ಸುರಪುರ, ನರಗುಂದದ ರಾಜರು, ಹಲಗಲಿ ಬೇಡರು, ಧಾರವಾಡದ ದೇಸಾಯಿಗಳು, ಎಲ್ಲರೂ ಮಂಡರಗಿ ಭೀಮರಾಯನ ನೇತೃತ್ವದಲ್ಲಿ ಬ್ರಿಟಿಷರನ್ನು ಎದುರಿಸಿದರು. ಕಾನ್ಪುರದಿಂದ, ಪೇಶ್ವೆ ನಾನಾರಾಯನೇ ಬರೆದ ಕೆಲವು ಪತ್ರಗಳು ಮಂಡರಗಿ ಭೀಮರಾಯನಲ್ಲಿ ಸಿಕ್ಕಿದುವು. ಹಗಲಲಿ ಬೇಡರು ೫೦೦ ಯೋಧರು ಬಾಬಾಜಿ ನಿಂಬಾಳ್ಕರ್ ನೇತೃತ್ವದಲ್ಲಿ, ಜಡಗಿಯ ಮತ್ತು ಬಾಳ್ಯ ಎಂಬುವರ ಮಾರ್ಗದರ್ಶನದಲ್ಲಿ, ತಮ್ಮಲ್ಲಿದ್ದ ಬಂದೂಕುಗಳನ್ನು ಸರ್ಕಾರಕ್ಕೆ ಒಪ್ಪಿಸಲು ನಿರಾಕರಿಸಿದರು. ಬ್ರಿಟಿಷ್ ಸೈನ್ಯವನ್ನು ಎದುರಿಸಿದ ಸಂದರ್ಭದಲ್ಲಿ ನಿಂಬಾಳ್ಕರ್ ವೀರ ಮರಣವನ್ನು ಅಪ್ಪಿದನು. ಬ್ರಿಟಿಷರು ೨೯೦ ಬೇಡರನ್ನು ಸೆರೆ ಹಿಡಿದರು. ಹತ್ತೊಂಬತ್ತು ಮಂದಿಯನ್ನು ಗಲ್ಲಿಗೆ ಹಾಕಿದರು. ಗಲ್ಲಿಗೆ ಹಾಕಿದವರ ಪೈಕಿ ಮುಖಂಡರಾದ ಜಡಗಿಯ ಮತ್ತು ಬಾಳ್ಯ ಇದ್ದರು. ಕರ್ನಾಟಕದಲ್ಲಿ ಬ್ರಿಟಿಷ್ ಸೈನ್ಯವನ್ನು ಎದುರಿಸಿದವರಲ್ಲಿ ಸುರಪುರದ ವೆಂಕಟನಾಯಕನೂ ಪ್ರಮುಖನಾಗಿದ್ದ. ಅವನು ನಾನಾಸಾಹೆಬ್ ಪೇಷ್ವೆಯೊಂದಿಗೆ ಸಂಪರ್ಕವಿಟ್ಟುಕೊಂಡಿದ್ದ. ೧೮೫೮ರಲ್ಲಿ ಬ್ರಿಟಿಷ್ ಕ್ಯಾಪ್ಟನ್ ವಿಂಡಹ್ಯಾಂ ಎಂಬುವನು ಸೈನ್ಯದೊಂದಿಗೆ ಬಂದು ಸುರಪುರಕ್ಕೆ ಮುತ್ತಿಗೆ ಹಾಕಿದನು. ಕೋಟೆಯಿಂದ ಗುಂಡು ಹಾರಿ ಬ್ರಿಟಿಷ್ ಕಮಾಂಡರ್‌ನನ್ನು ಕೊಂದಿತು. ಅನಂತರ ಕೋಟೆಯೊಳಗಿನ ದೇಶದ್ರೋಹಿಗಳ ಸಹಾಯದಿಂದಲೇ ಬ್ರಿಟಿಷರು ಕೋಟೆಯನ್ನು ಜಯಿಸಿ ವೆಂಕಟಪ್ಪನಾಯಕನನ್ನು ಹೈದರಾಬಾದು ತುರಂಗದಲ್ಲಿ ಸೆರೆಯಿಟ್ಟರು. ಅವನ ರಾಜ್ಯವನ್ನು ಅವನಿಗೆ ಹಿಂತಿರುಗಿಸುವುದಾಗಿಯೂ ಬ್ರಿಟಿಷರು ವಾಗ್ದಾನ ಮಾಡಿದ್ದರು. ಆದರೆ ನಾಯಕನ ಆತ್ಮಾಭಿಮಾನಕ್ಕೂ ಸ್ವಾತಂತ್ರ್ಯಕ್ಕೂ ಕುಂದಕವುಂಟಾಗಿತ್ತು. ಅವನು ಸೆರೆಮನೆಯಲ್ಲಿ ಆತ್ಮಹತ್ಯೆ ಮಾಡಿಕೊಂಡ. ನರಗುಂದದ ಬಾಬಾ ಸಾಹೇಬನದೂ ಇದೇ ವೀರಕತೆ. ಅವನಲ್ಲಿದ್ದ ಆಯುಧಗಳು, ಫಿರಂಗಿ ಎಲ್ಲವನ್ನೂ ಒಪ್ಪಿಸುವಂತೆ ಬ್ರಿಟಿಷರು ಆಜ್ಞಾಪಿಸಿದರು. ಬಾಬಾ ಸಾಹೇಬನ ಸೈನಿಕರು ಬ್ರಿಟಿಷ್ ಕಮ್ಯಾಂಡರ್ ಮೊನ್‌ಸನ್‌ನನ್ನು ಕೊಂದರು. ಬ್ರಿಟಿಷ್ ಸೈನ್ಯ ನರಗುಂದಕ್ಕೆ ಮುತ್ತಿಗೆ ಹಾಕಿ ಬಾಬಾ ಸಾಹೇಬನನ್ನು ಗಲ್ಲಿಗೆ ಹಾಕಿದರು. ಮಂಡರಗಿ ಭೀಮರಾಯನು ಬ್ರಿಟಿಷರನ್ನು ೧೮೫೮ರಲ್ಲಿ ಎದುರಿಸಿದನು. ಮಂಡರಗಿ ಭೀಮರಾವ್ ಇಂಗ್ಲೀಷ್ ವಿದ್ಯಾಭ್ಯಾಸವನ್ನು ಮಾಡಿದ್ದನು. ಬ್ರಿಟಿಷರ ಸೈನ್ಯದಲ್ಲಿದ್ದವನು. ಆದರೆ ತೀವ್ರ ದೇಶಭಕ್ತಿಯಿಂದ ಸ್ವಾತಂತ್ರ್ಯವನ್ನು ಬಯಸಿದನು. ಗದುಗಿನ ಖಜಾನೆಯನ್ನು ಲೂಟಿ ಮಾಡಿದ. ಭೀಮರಾಯ ತಪ್ಪಿಸಿಕೊಂಡಿದ್ದವನು ಹೆಂಡತಿಯನ್ನು ಬ್ರಿಟಿಷರು ಸೆರೆ ಹಿಡಿದರೆಂದು ಕೇಳಿ "ಹೆಂಡಿರ ಸೆರೆಯನ್ನು ಕಂಡು ಬದುಕುವವನಲ್ಲ ಭೀಮರಾಯ" ಎಂದು ಹೇಳಿ ರಣಕ್ಕೆ ಹಿಂದಿರುಗಿದ. ಬ್ರಿಟಿಷರು ಅವನ ಕೋಟೆಗೆ ಮುತ್ತಿಗೆ ಹಾಕಿದರು. ಭೀಮರಾಯನೂ ಹಮ್ಮಿಗೆ ದೇಸಾಯಿ ಕೆಂಚನಗೌಡನೂ ಸ್ಥಳದಲ್ಲಿ ಮೃತರಾದರು. ಬ್ರಿಟಿಷ್ ಫಿರಂಗಿಗಳು ಮುತ್ತಿಗೆಯಲ್ಲಿ ೭೭ ಜನರನ್ನು ಕೊಂದವು:

ಭೀಮರಾಯನನ್ನು ಕುರಿತು ಲಾವಣಿಗಳೇ ಹುಟ್ಟಿದವು.

ಕಿತ್ತ ಕತ್ತಿ ಕೈ ಎತ್ತಿ ಸುತ್ತಮುತ್ತ
ಕೇಳುತಾನೆ ಭಂಟರನು
ಭೀಮರಾಯ ಕೂಡಿಹೊಡೆದಾ ರಣ ಶೂರ
ತಡೆಯದೆ ಹಾರುತ್ತಿದ್ದವು ಶಿರಾ
ಹರಿಯುತಲ್ಕೆತೋ ಕೆಂಪುನೆತ್ತರ
ಒಮ್ಮೆ ಗುಂಡು ಹಾರಿತೋ ಸಾವಿರ
ಹಮ್ಮಿಗೆ ದೇಸಾಯಿ, ಭೀಮರಾಯ
ಅದೇ ಕ್ಷಣಕೆ ಸಂಹಾರ

ಬ್ರಿಟಿಷರ ಸಾಮ್ರಾಜ್ಯ ನಿರ್ಮಾಣವನ್ನು ಸಶಸ್ತ್ರ ಯುದ್ಧದಲ್ಲಿ ಸಹ, ಕರ್ನಾಟಕ ಪ್ರಬಲ ರೀತಿಯಲ್ಲಿ ವಿರೋಧಿಸಿತು.

ಕಾಂಗ್ರೆಸ್ ಸಂಸ್ಥೆ, ೧೯೧೯ರಲ್ಲಿ ಗಾಂಧೀಜಿಯ ನೇತೃತ್ವಕ್ಕೆ ಬಂದು, ಅಲ್ಲಿಂದ ಮುಂದೆ "ಭಾರತದಿಂದ ತೊಲಗಿ" ಚಳುವಳಿ ಪೂರ್ತಿ ಸ್ವಾತಂತ್ರ್ಯ ಹೋರಾಟದ ಎಲ್ಲ ಘಟ್ಟಗಳಲ್ಲಿಯೂ ಕರ್ನಾಟಕ, ಪ್ರಮುಖ ಪಾತ್ರವನ್ನು ವಹಿಸಿತು. ಸ್ವಾತಂತ್ರ್ಯದ ಆಸೆ, ಅದಕ್ಕಾಗಿ ಹೋರಾಟ, ತ್ಯಾಗ,

ಪ್ರಾಣಾರ್ಪಣೆ ಎಲ್ಲರಿಗೂ ಪ್ರಿಯವಾದ ಅದಮ್ಯ ಆಸೆಯಾಗಿತ್ತು. ಕರ್ನಾಟಕದವರು ಎಂದಿನಿಂದಲೂ ಕಲಿಗಳು, ದೊಡ್ಡ ದೊಡ್ಡ ಚಕ್ರಾಧಿಪತ್ಯಗಳನ್ನು ಕಟ್ಟಿ ಆಳಿದರು. ಸಶಸ್ತ್ರ ಹೋರಾಟದಲ್ಲಿ ಹೇಗೆ ಕರ್ನಾಟಕದವರು ಹಿಂದಾಗಿರಲಿಲ್ಲವೋ ಹಾಗೆಯೇ ಬ್ರಿಟಿಷ್ ಸಾಮ್ರಾಜ್ಯ ಭಾರತದಲ್ಲಿ ದೃಢ ತಳ ಹದಿಯ ಮೇಲೆ ನಿಂತ ಅನಂತರವೂ, ಅದನ್ನು ಎದುರಿಸುವ ಕಾಂಗ್ರೆಸ್ ಚಳುವಳಿಯಲ್ಲಿಯೂ ಕರ್ನಾಟಕ ಸದಾ ಮುಂಚೂಣಿಯಲ್ಲಿರುತ್ತಿತ್ತು. ೧೮೯೫ರಲ್ಲಿಯೇ ಕಾಂಗ್ರೆಸ್ ಸಂಸ್ಥಾಪಕ ಎ.ಒ. ಹ್ಯೂಮನ್ ಬೆಳಗಾವಿಗೆ ಬಂದು ಕಾಂಗ್ರೆಸ್ ಧ್ಯೇಯವನ್ನು ಪ್ರಚಾರ ಮಾಡಿದ. ೧೮೯೫, ೧೯೦೩ ಈ ಸಂವತ್ಸರಗಳಲ್ಲಿ ಬೆಳಗಾವಿ ಧಾರವಾಡಗಳಲ್ಲಿ ರಾಜಕೀಯ ಸಮ್ಮೇಳನಗಳು ನಡೆದವು. ೧೮೯೫ರ ಸಮ್ಮೇಳನದ ಅಧ್ಯಕ್ಷರು ಸರ್‌ದಿನ್‌ಷಾ ವಾಚಾ, ೧೯೦೩ರಲ್ಲಿ ಫಿರೋಜ್‌ಶಾ ಮೆಹ್ತಾ ಅಧ್ಯಕ್ಷರಾಗಿದ್ದರು. ತಿಲಕರು ಈ ಸಭೆಗೆ ಬಂದಿದ್ದರು. ಬೆಳಗಾವಿ, ಧಾರವಾಡಗಳಲ್ಲಿ ರಾಜಕೀಯ ಸಮ್ಮೇಳನಗಳು ನಡೆದವು. ವಂಗ ವಿಭಜನೆಯ ಚಳುವಳಿಯಲ್ಲಿ ಬೆಳಗಾವಿ, ಧಾರವಾಡ, ಅಳ್ನಾವರ, ಗದಗ, ಬಾಗಲಕೋಟೆ, ಕಿತ್ತೂರು ಮುಂತಾದ ಕಡೆಗಳಲ್ಲಿ ಗೋವಿಂದ ರಾವ್ ಯಾಳಗಿ, ಡಾ. ಜೋಶಿ ಇವರ ಮುಖಂಡತ್ವದಲ್ಲಿ ಅನೇಕರು ಹೆಂಡದಂಗಡಿಗಳನ್ನು ಪಿಕೆಟ್ ಮಾಡಿ ಸೆರೆಮನೆ ಸೇರಿದರು. ಲೋಕಮಾನ್ಯ ಬಾಲಗಂಗಾಧರ ತಿಲಕರ ಪ್ರಭಾವ, ಸ್ಫೂರ್ತಿ ಕರ್ನಾಟಕದ ಮೇಲೆ ತುಂಬ ಆಗಿತ್ತು. ಅವರ ಕೇಸರಿ, ಮರಾಠ ಪತ್ರಿಕೆಗಳು ಕರ್ನಾಟಕದಲ್ಲಿ ರಾಷ್ಟ್ರಪ್ರೇಮವನ್ನು ಹರಡಿದವು.

ಕಾಂಗ್ರೆಸಿಗೆ ತಿಲಕರ ಬೆಂಗಲಿಗರಾಗಿ ಆಲೂರು ವೆಂಕಟರಾವ್, ಅಣ್ಣಾಚಾರ್ಯ ಹೊಸಕೇರಿ, ಶ್ರೀನಿವಾಸ ರಾವ್ ಕೌಜಲಗಿ, ಗೋವಿಂದರಾವ್ ಯಾಳಗಿ, ಗಂಗಾಧರರಾವ್ ದೇಶಪಾಂಡೆ ಇವರೆಲ್ಲ ಹೋಗಿದ್ದರು. ತಿಲಕರು ಕರ್ನಾಟಕಕ್ಕೆ ಪದೇ ಪದೇ ಭೇಟಿ ಕೊಡುತ್ತಿದ್ದರು. ೧೯೦೬ರಲ್ಲಿ ಬೆಳಗಾವಿ, ಬಳ್ಳಾರಿ, ಗುರ್ಲ, ಹೊಸೂರುಗಳಿಗೆ ಬಂದಿದ್ದರು. ಆಗಲೇ ಅವರು ಬೆಳಗಾವಿ ಕರ್ನಾಟಕಕ್ಕೆ ಸೇರಿದ್ದು ಎಂದು ಹೇಳಿದ್ದರು. ಹೋಮ್ ರೂಲ್ ಲೀಗಿನ ಸಂದರ್ಭದಲ್ಲಿ ಸಹ ತಿಲಕರು ೧೯೧೬ರಲ್ಲಿ ಬೆಳಗಾವಿ, ಸಂಕೇಶ್ವರ, ಶಿರಸಿ, ಸಿದ್ಧಾಪುರ, ಬಳ್ಳಾರಿ, ಹುಬ್ಬಳ್ಳಿ, ಮಂಗಳೂರು, ಇಲ್ಲೆಲ್ಲ ಸಂಚರಿಸಿ ಹೋಮ್ ರೂಲ್‌ಗೆ ಶಾಖೆಗಳನ್ನು ತೆರೆದರು. ಹದಿನಾರನೇ ಬೊಂಬಾಯಿ ಪ್ರಾಂತ ರಾಜಕೀಯ ಸಮ್ಮೇಳನ ೧೯೧೬ರಲ್ಲಿ ಬೆಳಗಾವಿಯಲ್ಲಿ ನಡೆಯಿತು. ಹದಿನೆಂಟನೆ ಸಮ್ಮೇಳನ ಬಿಜಾಪುರದಲ್ಲಿ ನಡೆಯಿತು. ಈ ಎರಡು ಸಭೆಗಳಿಗೂ ಗಾಂಧೀಜಿ ಬಂದಿದ್ದರು.

ಕರ್ನಾಟಕ ಪ್ರಾಂತದ ರಾಜಕೀಯ ಸಮ್ಮೇಳನ ೧೯೨೦ರಲ್ಲಿ ವಿ. ಪಿ. ಮಾಧವದಾಸರ ಅಧ್ಯಕ್ಷತೆಯಲ್ಲಿ ನಡೆಯಿತು. ೧೯೨೦ರಲ್ಲಿಯೇ ಭಾರತೀಯ ಕಾಂಗ್ರೆಸ್ಸು, ಭಾಷಾವಾರು ಪ್ರಾಂತ ರಚನೆಯನ್ನು ಒಪ್ಪಿ ಕರ್ನಾಟಕಕ್ಕೆ ಒಂದು ಪ್ರಾಂತದ ಸ್ಥಾನವನ್ನು ಕೊಟ್ಟಿತು. ಗಂಗಾಧರರಾವ್ ದೇಶಪಾಂಡೆಯವರು ಕರ್ನಾಟಕ ಪ್ರಾಂತ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು. ಮೈಸೂರು ಸಂಸ್ಥಾನ ರಾಜರ ಆಳ್ವಿಕೆಯಲ್ಲಿದ್ದರೂ, ಸ್ವಾತಂತ್ರ್ಯ ಚಳುವಳಿಯಲ್ಲಿ ಜನರು ಕಾಂಗ್ರೆಸ್ಸಿನ ಕಾರ್ಯಕ್ರಮಗಳನ್ನೆಲ್ಲ ಉತ್ಸಾಹದಿಂದ ಕೈಗೊಳ್ಳುತ್ತಿದ್ದರು. ಇಡೀ ಭಾರತಕ್ಕೇ ಮೊದಲನೆಯದಾಗಿ ಮೈಸೂರಿನಲ್ಲಿ ಪ್ರಜಾಪ್ರತಿನಿಧಿ ಸಭೆ, ಸ್ಥಳೀಯ ಸಂಸ್ಥೆಗಳಿಗೆ ಆಡಳಿತಾಧಿಕಾರ ಇವುಗಳನ್ನು ಮಹಾರಾಜರು ಕೊಟ್ಟಿದ್ದರು. ಕಾಂಗ್ರೆಸ್ಸು ಮೈಸೂರು ಸಂಸ್ಥಾನಕ್ಕೆ ಒಂದು ಸ್ಥಾನವನ್ನು ಕೊಟ್ಟು ನ್ಯಾಯಮೂರ್ತಿ ಸೆಟ್ಲೂರರನ್ನು ಅಧ್ಯಕ್ಷರನ್ನಾಗಿ ಮಾಡಿತ್ತು. ಸಂಸ್ಥಾನಗಳಲ್ಲಿ ನೇರವಾಗಿ ಹೋರಾಟವನ್ನು ಪ್ರಾರಂಭಿಸುವುದು ಕಾಂಗ್ರೆಸ್ಸಿನ ಉದ್ದೇಶವಾಗಿರಲಿಲ್ಲ. ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಗಳು ಮೈಸೂರು ಸಂಸ್ಥಾನದಲ್ಲಿ ನಡೆಯುತ್ತಿದ್ದವು.

ಭಾರತೀಯ ಕಾಂಗ್ರೆಸ್ಸಿನ ಹೋರಾಟ ದೇಶದಲ್ಲಿ-ಗ್ರಾಮಾಂತರ ಪ್ರದೇಶಗಳಿಗೂ ಸಹ ಕಾಡುಕಿಚ್ಚಿನಂತೆ ಹಬ್ಬಿತು. ಒಬ್ಬ ಮನುಷ್ಯ, ಒಂದು ಊರು ಎಂಬುದಿಲ್ಲ; ದೇಶಕ್ಕೆ ದೇಶವೇ ಹೋರಾಟದ ಕಣವಾಯಿತು. ಅಸಹಕಾರದ ಚಳುವಳಿಯಲ್ಲಿ (೧೯೨೦) ಗಾಂಧೀಜಿ ಬೆಂಗಳೂರಿಗೆ ಬಂದಿದ್ದರು. ಅದು ಖಿಲಾಫತ್ ಚಳುವಳಿಯ ಕಾಲ. ಮೌಲಾನಾ ಶೌಕತ್ ಆಲಿ, ಮಹಮ್ಮದ್ ಆಲಿ ಸಹ ಬಂದರು. ಹಿಂದೂ ಮುಸ್ಲಿಂ ಐಕ್ಯ ಘೋಷವು ಬ್ರಿಟಿಷ್ ಸರ್ಕಾರವನ್ನು ಸಹ ತಲ್ಲಣಗೊಳಿಸಿತು. ಅಸಹಕಾರ ಚಳುವಳಿಯಲ್ಲಿ ಶಾಲಾ ಕಾಲೇಜುಗಳು ಮುಚ್ಚಲ್ಪಟ್ಟವು. ದತ್ತೋಪಂತ್ ಮಜಲಿ, ಕೃಷ್ಣರಾವ್ ಕರಿಗುಪ್ಪೆ, ನಾರಾಯಣರಾವ್ ಜೋಶಿ, ಶ್ರೀನಿವಾಸರಾವ್, ಕೌಡಲಿಗಿ ದಿವಾನ್ ಸಾಹೇಬ್ ಜನವೇಕಲ್, ಜಯರಾವ್ ದೇಶಪಾಂಡೆ, ರಂಗರಾವ್ ತಿಲ್‌ಗುಲ್, ಹನುಮಂತರಾವ್ ಕೌಜಲಗಿ, ಅಂತರಾವ್ ಜಾಲಿಹಾರ, ವೆಂಕಟೇಶ ಕುಲಕರ್ಣಿ, ಕಾರ್ನಾಡ್ ಸದಾಶಿವರಾವ್, ಕೆ. ಆರ್. ಕಾರಂತ, ಆಲೂರು ವೆಂಕಟರಾವ್ ಮುಂತಾದವರೆಲ್ಲ ನ್ಯಾಯಾಲಯಗಳನ್ನು ಬಹಿಷ್ಕರಿಸಿದರು. ಮದ್ಯದ ಅಂಗಡಿ, ಪರದೇಶಿ ವಸ್ತ್ರದ ಅಂಗಡಿ ಪಿಕೆಟಿಂಗ್ ಎಲ್ಲೆಲ್ಲಿಯೂ ನಡೆಯಿತು. ಧಾರವಾಡದಲ್ಲಿ ಪೋಲೀಸರು ಅಸಹಕಾರಿಗಳ ಮೇಲೆ ಗುಂಡು ಹಾರಿಸಿದರು. ಚಳುವಳಿ ಸರ್ವವ್ಯಾಪಿಯಾಗಿತ್ತು. ಅನೇಕ ನಿರಪರಾಧಿಗಳ ಕೊಲೆಯಾಯಿತು. ದಿವಾಕರ್, ಹುಕ್ಕೇರಿಕರ್, ಮುದವವೇಡ್ಕರ್, ಮೊಹರೆ, ಚೌಡನಾಯಕ, ತಿಮ್ಮಪ್ಪ ನಾಯಕ. ಗಂಗಾದರ್‌ರಾವ್ ದೇಶಪಾಂಡೆ ಮುಂತಾದ ಅಸಂಖ್ಯಾತ ಅಸಹಕಾರಿಗಳ ಬಂಧನವಾಯಿತು. ಬಳ್ಳಾರಿಯಲ್ಲಿ ಟೇಕೂರು ನಾರಾಯಣ ಶಾಸ್ತ್ರಿ, ಕಲ್ಲೂರು ಸುಬ್ಬರಾವ್, ಲಾಂಗ್ಲಿ ಭೀಮಸೇನರಾವ್ ಸೆರೆಸೇರಿದರು. ಡಿ. ಕೆ. ಭಾರದ್ವಾಜರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಂಧಿತರಾದರು. ೧೯೨೧ನೇ ನವೆಂಬರ್ ೧೭ರಂದು ವೇಲ್ಸ್ ರಾಜಕುಮಾರ ಭಾರತಕ್ಕೆ ಬಂದಾಗ ದೇಶದಲ್ಲಿ ಹರತಾಳವಾಯಿತು. ಬೆಂಗಳೂರು ದಂಡಿನ ಪ್ರದೇಶದಲ್ಲಿ ಗೋಲಿಬಾರ್ ಆಗಿ ಖಿಲಾಫತ್ ಸತ್ಯಾಗ್ರಹಿಗಳು ಸತ್ತುದಲ್ಲದೆ ಅನೇಕರ ಬಂಧನವೂ ಆಯಿತು. ೧೯೨೧ರ ಅಸಹಕಾರ ಚಳುವಳಿಯಲ್ಲಿ ಕಾಂಗ್ರೆಸ್ ಸಂದೇಶದಂತೆ ದೇಶಭಕ್ತರನೇಕರು ಸರ್ಕಾರೀ ಶಾಲೆಗಳನ್ನು ಸ್ಥಾಪಿಸಿದರು.

ಅಸಹಕಾರಿ ವಿದ್ಯಾರ್ಥಿಗಳನೇಕರು ಆ ಶಾಲೆಗಳನ್ನು ಸೇರಿದರು. ಅಸಹಕಾರ ಚಳುವಳಿ ಉಲ್ಬಣವಾಗಿದ್ದರೂ, ನಾಗಪುರ ಕಾಂಗ್ರೆಸ್ಸಿನಲ್ಲಿ ಕರ್ನಾಟಕದವರ ಪಾತ್ರ ಪ್ರಾಮುಖ್ಯವಾಗಿತ್ತು. ಎಂಟುನೂರಕ್ಕಿಂತಲೂ ಹೆಚ್ಚು ಜನ ಪ್ರತಿನಿಧಿಗಳು ಕರ್ನಾಟಕದಿಂದಲೇ ಹೋಗಿದ್ದರು. ರಾಜಕೀಯವಾಗಿ ಅನೇಕ ಆಡಳಿತಗಳಲ್ಲಿ ಹಂಚಿಹೋಗಿರುವ ಕರ್ನಾಟಕವನ್ನು, ಕಾಂಗ್ರೆಸ್ ವ್ಯವಸ್ಥೆಯಲ್ಲಿ ಒಂದು ಪ್ರಾಂತವಾಗಿ ಮಾಡುವ ನಿರ್ಣಯ ನಾಗಪುರದಲ್ಲಿ ಅಂಗೀಕಾರವಾಗಬೇಕಾಗಿತ್ತು. ನಿರ್ಣಯ ಅಂಗೀಕಾರವಾಯಿತು. ಕರ್ನಾಟಕದ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ವಾತಂತ್ರ್ಯದಷ್ಟೇ ಏಕೀಕರಣವೂ ಪ್ರಾಮುಖ್ಯವಾಗಿತ್ತು.

ನಾಗಪುರದಲ್ಲಿ(೧೯೨೩) ಕರ್ನಾಟಕದ ಸ್ವಯಂ ಸೇವಕರು ಸಕ್ರಿಯವಾಗಿ ಭಾಗವಹಿಸಿದ ಮತ್ತೊಂದು ಕಾಂಗ್ರೆಸ್ ಹೋರಾಟವೆಂದರೆ ಧ್ವಜ ಸತ್ಯಾಗ್ರಹ. ಆಗ ಕಾಂಗ್ರೆಸ್ ಧ್ವಜವನ್ನು ಹಾರಿಸುವುದೂ ರಾಜದ್ರೋಹವೆಂದು ಘೋಷಿಸಲಾಗಿತ್ತು.

ಆ ನಿಷೇಧಾಜ್ಞೆಯನ್ನು ಎದುರಿಸಬೇಕೆಂದು ಕಾಂಗ್ರೆಸ್ ನಿರ್ಣಯಿಸಿತು. ಧ್ವಜಸತ್ಯಾಗ್ರಹವೆಂದು ಒಂದು ದಿನವನ್ನು ಕಾಂಗ್ರೆಸ್ ಘೋಷಿಸಿ ಎಲ್ಲ ಪ್ರಾಂತಗಳಿಂದಲೂ ಬಂದು ಸ್ವಯಂ ಸೇವಕರು, ನಿಷೇಧಾಜ್ಞೆಯಿದ್ದ ರಸ್ತೆಯಲ್ಲಿ ಧ್ವಜವನ್ನು ಹಿಡಿದು ನಡೆದು ಸತ್ಯಾಗ್ರಹ ಮಾಡಿದರು. ಪ್ರತಿದಿನವೂ ಪೋಲೀಸರು ಸ್ವಯಂ ಸೇವಕರನ್ನು ಹಿಡಿದು ಸೆರೆಮನೆಗೆ ಹಾಕುತ್ತಿದ್ದರು. ಇದು ಮೂರು ನಾಲ್ಕು ತಿಂಗಳು ನಡೆದು ಅನೇಕ ಸಾವಿರ ಸ್ವಯಂ ಸೇವಕರು ಬಂಧಿತರಾದ ಮೇಲೆ ಸರ್ಕಾರ ನಿಷೇಧಾಜ್ಞೆಯನ್ನು ತೆಗೆಯಿತು. ಈ ಸತ್ಯಾಗ್ರಹದಲ್ಲಿ ಬೆಂಗಳೂರಿನ ವಿ. ಎಸ್. ನಾರಾಯಣ ರಾವ್ ಮುಂತಾದ ಅನೇಕ ಸ್ವಯಂ ಸೇವಕರು ಭಾಗವಹಿಸಿದರು.

೧೯೨೪ರಲ್ಲಿ ಬೆಳಗಾವಿಯಲ್ಲಿ, ಗಾಂಧೀಜಿಯ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಿಂದ ಕನ್ನಡಿಗರ ರಾಷ್ಟ್ರೀಯತ್ವಕ್ಕೆ ಹೊಸ ಸ್ಫೂರ್ತಿ ದೊರೆಯಿತು. ಕಾಂಗ್ರೆಸ್ಸಿನ ಎಲ್ಲ ವಿಧಾಯಕ ಕಾರ್ಯಕ್ರಮ ಮತ್ತು ಹೋರಾಟಗಳಲ್ಲಿ ಅಹಿಂಸಾತ್ಮಕವಾಗಿ ಸಕ್ರಿಯವಾಗಿ ಭಾಗವಹಿಸುತ್ತಿದ್ದುದರಿಂದ ಕರ್ನಾಟಕಕ್ಕೆ ಗಾಂಧಿ ಪ್ರಾಂತವೆಂದೇ ಹೆಸರಾಯಿತು. ಅಸಹಕಾರ ಚಳುವಳಿಯಲ್ಲಿ ಮೈಸೂರು ಪ್ರಾಂತದಿಂದ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಧಾರವಾಡದ ರಾಮಚಂದ್ರ ವಡವಿ, ಶಾಲೆ ಬಿಟ್ಟು ಗಾಂಧೀ ಆಶ್ರಮ ಮತ್ತು ಗುಜರಾತ್ ವಿದ್ಯಾಪೀಠ ಸೇರಿದರು.

೧೯೩೦ರಲ್ಲಿ ನಡೆದ ಉಪ್ಪಿನ ಸತ್ಯಾಗ್ರಹವೂ, ಕರ್ನಾಟಕದಲ್ಲಿ ತುಂಬ ಯಶಸ್ವಿಯಾಯಿತು. ಗಾಂಧೀಜಿ ದಂಡಿಯಲ್ಲಿ ಉಪ್ಪನ್ನು ತಯಾರಿಸಿದ ದಿನವೇ, ಕರ್ನಾಟಕದಲ್ಲಿಯೂ ಅಂಕೋಲದಲ್ಲಿ ಸಮುದ್ರ ತೀರದಲ್ಲಿ ನಲವತ್ತು ಸಾವಿರ ಜನರ ಸಮ್ಮುಖದಲ್ಲಿ ಸತ್ಯಾಗ್ರಹಿಗಳು ಉಪ್ಪನ್ನು ತಯಾರಿಸಿದರು. ಸಂತೆಗಳಲ್ಲಿ ಬಹಿರಂಗವಾಗಿಯೇ, ಪೋಲೀಸರ ಎದುರಿನಲ್ಲಿಯೇ ಕಾನೂನು ಬಾಹಿರ ಉಪ್ಪು ಹೆಚ್ಚು ಬೆಲೆಯಲ್ಲಿ ಮಾರಾಟವಾಯಿತು. ಹಿಂದೆ ಹೆಸರಿಸಿದ ದೇಶಭಕ್ತರಲ್ಲದೆ ಉಮಾಬಾಯಿ ಕುಂದಾಪುರ, ನಾಡಕರ್ಣಿ ವಿದ್ಯಾನಂದ ಮುಂತಾದವರೆಲ್ಲ ಬಂಧಿತರಾದರು. ಸತ್ಯಾಗ್ರಹಿಗಳು ಸರ್ಕಾರದ ಉಪ್ಪಿನ ಕೋಠಿಗಳನ್ನು ವಶಪಡಿಸಿಕೊಂಡರು. ಹೀಗೆ ಉಪ್ಪಿನ ಕಾಯಿದೆ ನಾಮಾವಶೇಷವಾಯಿತು. ಇದೇ ಸಂದರ್ಭದಲ್ಲಿ ಡಾ. ಹರ್ಡಿಕರರು ಸೇವಾದಲವನ್ನು ಸ್ಥಾಪಿಸಿದರು. ಅದು ಹಿಂದೂಸ್ಥಾನದಲ್ಲೆಲ್ಲ ಪ್ರಸಿದ್ಧವಾಗಿ, ಲಕ್ಷಾಂತರ ಜನ ಸೇರುತ್ತಿದ್ದ ಕಾಂಗ್ರೆಸ್ ಅಧಿವೇಶನದ ಅವಿಭಾಜ್ಯ ಅಂಗವಾಗಿ, ಸಮ್ಮೇಳನಗಳಲ್ಲಿ ಶಾಂತಿ ಮತ್ತು ಶಿಸ್ತಿನ ವಾತಾವರಣವನ್ನು ಕಲ್ಪಿಸುತ್ತಿದ್ದಿತು. ಗಾಂಧೀಜಿಯ ಚಳುವಳಿಗಳ ಮತ್ತೊಂದು ವಿಶೇಷವೆಂದರೆ, ಯಾವಾಗಲೂ ಹಿಂದೆ ಉಳಿದಿದ್ದ ಭಾರತದ ಸ್ತ್ರೀಯರು ಎಲ್ಲ ಚಳುವಳಿಗಳಲ್ಲಿಯೂ ಭಾಗವಹಿಸಿದುದು. ಹಿಂದೂ ದೇಶದ ಅಪಾರ ಸಂಖ್ಯೆಯ ಸ್ತ್ರೀಯರನ್ನು ರಾಜಕೀಯದಲ್ಲಿ ಪ್ರವೇಶಗೊಳಿಸಿದವರೇ ಗಾಂಧೀಜಿ. ಹಿಂದೆ ಬುದ್ಧ, ಈ ಕಾರ್ಯವನ್ನು ಮಾಡಿದ್ದ. ಗಾಂಧೀಜಿ ಅನುಸರಿಸಿದ ಸತ್ಯಾಗ್ರಹ, ಅಹಿಂಸೆ, ಶಿಸ್ತು, ಸೇವಾಭಾವನೆ ಧರ್ಮದ ಮೇಲೆ ಅವಲಂಬನೆ ಇವೆಲ್ಲ ಸ್ತ್ರೀಯರ ಸ್ವಭಾವಕ್ಕೆ ಹೊಂದಿಕೊಳ್ಳುತ್ತಿದ್ದುದರಿಂದ, ಸ್ತ್ರೀಯರು ಉತ್ತಮ ಸತ್ಯಾಗ್ರಹಿಗಳಾಗುತ್ತಿದ್ದರು. ಕರ್ನಾಟಕದ ಮಹಿಳೆಯರು ಗಾಂಧೀಜಿಯಿಂದಲೇ ಮೆಚ್ಚಿಕೆ ಮತ್ತು ಆಶೀರ್ವಾದವನ್ನು ಪಡೆದು ಧನ್ಯರಾದರು.

ಕರ್ನಾಟಕದಲ್ಲಿ ಬೃಹತ್ ಚಳುವಳಿ ನಡೆಯಿತು. ಕಾರ್ನಾಡ್ ಸದಾಶಿವರಾಯರು, ದಿವಾಕರ್ ನಾರಾಯಣರಾವ್ ಜೋಷಿ, ಶ್ರೀನಿವಾಸರಾವ್ ಕೌಜಲಗಿ, ಹುಕ್ಕೇರಿ ಎಲ್ಲ ಮುಖಂಡರೂ ಭಾಗವಹಿಸಿದ್ದರು. ಮೂವತ್ತು ಸ್ಥಳಗಳಲ್ಲಿ ಸತ್ಯಾಗ್ರಹಿಗಳು ಉಪ್ಪನ್ನು ಅಕ್ರಮವಾಗಿ ತಯಾರಿಸಿದರು. ಶ್ರೀಮತಿ ಮಹದೇವಿ ತಾಯಿ ಕಲ್ಲಮ್ಮ, ಕಾವೇರಮ್ಮ, ಗಂಗವ್ವ, ನಾಗೇಶ ಹೆಗಡೆ ಎಲ್ಲರೂ ಚಳುವಳಿಯಲ್ಲಿ ಸೇರಿದರು. ಮಂಗಳೂರು ಜಿಲ್ಲೆಯಲ್ಲಿಯೂ ಎಲ್ಲ ಚಳುವಳಿಗಳೂ ತೀವ್ರತರದಲ್ಲಿ ನಡೆದವು.

ಎರಡನೆ ಮಹಾಯುದ್ಧ ಪ್ರಾರಂಭವಾದಾಗ, ಸರ್ಕಾರ ಯುದ್ಧದಲ್ಲಿ ಭಾರತವನ್ನು ಪ್ರವೇಶಗೊಳಿಸಿದುದನ್ನು ಪ್ರತಿಭಟಿಸಿ, ಯುದ್ಧ ವಿರೋಧಿ ವ್ಯಕ್ತಿ ಸತ್ಯಾಗ್ರಹವನ್ನು ಗಾಂಧೀಜಿಯ ಮುಖಂಡತ್ವದಲ್ಲಿ ಕಾಂಗ್ರೆಸ್ ಆರಂಭಿಸಿತು. ಅದನ್ನು ಪ್ರಾರಂಭಿಸುವವರು ಆದರ್ಶ ಸತ್ಯಾಗ್ರಹಿಯಾಗಿರಬೇಕಾಗಿತ್ತು. ಅಹಿಂಸೆ, ಅಸ್ಪೃಶ್ಯತಾ ವಿರೋಧ, ಪಾನ ನಿರೋಧ, ಜಾತಿಭೇದ ವಿರೋಧಿ ಆಗಿರಬೇಕಾಗಿತ್ತು. ಮೊದಲ ಸತ್ಯಾಗ್ರಹಿಯನ್ನು ಗಾಂಧೀಜಿಯೇ ಆರಿಸಿದರು. ಅವರು ವಿನೋಬಾ ಭಾವೆ. ಪಂಡಿತ ಜವಾಹರಲಾಲ್‌ರು ಎರಡನೆ ಸತ್ಯಾಗ್ರಹಿ. ಸರ್ಕಾರ ಅವರಿಗೆ ನಾಲ್ಕು ವರುಷ ಕಠಿಣ ಶಿಕ್ಷೆ ವಿಧಿಸಿತು. ಈ ವ್ಯಕ್ತಿ ಸತ್ಯಾಗ್ರಹದಲ್ಲಿ ಪ್ರತಿ ಪ್ರಾಂತದಲ್ಲಿಯೂ ಸಾವಿರಾರು ಜನ ಆರಿಸಿದ ವ್ಯಕ್ತಿಗಳೇ ಸೆರೆಯಾದರು. ಕರ್ನಾಟಕದಲ್ಲಿಯೂ ಎರಡು ಸಾವಿರ ಸ್ತ್ರೀ ಪುರುಷರು ಬಂಧಿತರಾದರು. ಕ್ವಿಟ್ ಇಂಡಿಯಾ ಚಳುವಳಿ ಪ್ರಾರಂಭವಾಗದಿದ್ದರೆ, ಯುದ್ಧ, ನಡೆದಷ್ಟು ದಿನವೂ ಆ ಚಳುವಳಿಯೂ ನಡೆಯುತ್ತಿದ್ದಿತೇನೋ.

ಉಪ್ಪಿನ ಸತ್ಯಾಗ್ರಹ ಮತ್ತು ಕರನಿರಾಕರಣೆಯ ಸಂದರ್ಭದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ೮೦೦ ಜನ ಸತ್ಯಾಗ್ರಹಿಗಳು ಉತ್ತರ ಕನ್ನಡ ಜಿಲ್ಲೆಯಲ್ಲಿ ೪೫೦, ಧಾರವಾಡ ಜಿಲ್ಲೆಯಲ್ಲಿ ೨೦೦, ದಕ್ಷಿಣ ಕನ್ನಡದಲ್ಲಿ ೧೬೦, ಬಿಜಾಪುರ ಜಿಲ್ಲೆಯಲ್ಲಿ ೧೬೦, ಕೊಡಗಿನಲ್ಲಿ೪೦ ಮಂದಿ ಸೆರೆ ಸೇರಿದರು. ಬೆಳ್ಳಿಪ್ಪ, ಕರುಂಬಯ್ಯ, ಆರ್. ಕೃಷ್ಣಯ್ಯ, ಪೂಣಚ್ಚ ಮುಂತಾದವರು ಸೆರೆಯಾದರು. ಸರ್ಕಾರ ಕೊಡಗು ಪತ್ರಿಕೆಯ ಪ್ರಕಟಣೆಯನ್ನು ನಿಷೇಧಿಸಿತು. ಹಳೆ ಮೈಸೂರಿನಲ್ಲಿ ವೆಂಕಟಕೃಷ್ಣಯ್ಯ, ಭಾಷ್ಯಂ ಇವರಿಂದ ಪ್ರೇರಿತರಾಗಿ ಅನೇಕರು ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಅರ್ಕಲಗೂಡು ವೆಂಕಟರಾಮಯ್ಯ, ಟಿ. ಸದಾಶಿವಂ ಮುಂತಾದವರು ತಮಿಳುನಾಡಿನ ವೇದಾರಣ್ಯಂ ಸತ್ಯಾಗ್ರಹದಲ್ಲಿ ಸಹ ಭಾಗವಹಿಸಿದರು. ಅತ್ಯಂತ ಯಶಸ್ವಿಯಾಗಿ– ಸರ್ದಾರ್ ವೀರಣ್ಣಗೌಡ ಪಾಟೀಲರ ನೇತೃತ್ವದಲ್ಲಿ ನಡೆಯಿತು. ೧೯೩೦–೩೧ರ ಸತ್ಯಾಗ್ರಹದಲ್ಲಿ ಎರಡು ಸಾವಿರಕ್ಕಿಂತ ಹೆಚ್ಚು ಮಂದಿ ಸತ್ಯಾಗ್ರಹಿಗಳು ಸೆರೆವಾಸ ಅನುಭವಿಸಿದರು. ಸತ್ಯಾಗ್ರಹದ ಇತಿಹಾಸದಲ್ಲಿ ಕರ್ನಾಟಕಕ್ಕೆ ಸುವರ್ಣಕಲಶವಾದ ಮತ್ತೊಂದು ಸತ್ಯಾಗ್ರಹವೆಂದರೆ ಅಂಕೋಲ, ಸಿದ್ದಾಪುರ ಮುಂತಾದ ತಾಲೂಕುಗಳಲ್ಲಿ ನಡೆದಂತೆ ಕರನಿರಾಕರಣೆ ಚಳುವಳಿ. ಉಪ್ಪಿನ ಸತ್ಯಾಗ್ರಹ ಜಯಪ್ರದವಾಗಿ ಮುಗಿದುದರಿಂದ ಜನತೆಗೆ ಸವಿನಯ ಕಾಯಿದೆ ಭಂಗದ ಶಿಸ್ತು, ಸಂಯಮ ಅಹಿಂಸೆ, ತ್ಯಾಗ ಇವೆಲ್ಲ ಅಭ್ಯಾಸವಾಗಿದ್ದುವು. ಕರನಿರಾಕರಣ ಚಳುವಳಿಯನ್ನು ಅವರು ಪ್ರಾರಂಭಿಸಿದರು. ಆಯಾ ತಾಲೂಕಿನ ಜನತೆಯ ಜೊತೆಗೆ ಮೈಸೂರಿನ ಸರ್ದಾರ್ ಕೆ. ಎ. ವೆಂಕಟರಾಜಯ್ಯ (ದಂಪತಿಗಳು) ಎಂ. ಎನ್. ಜೋಯಿಸ್ (ದಂಪತಿಗಳು) ಪಾರ್ಥಸಾರಾಯಣ ಪಂಡಿತರು ಎಲ್ಲ ಸೇರಿದರು. ಕರನಿರಾಕರಣೆ ಎಂದರೆ ಸರ್ಕಾರಕ್ಕೆ ಯಾವಾಗಲೂ ಗಾಬರಿ. ಎಲ್ಲೆಡೆಯೂ ಬಂಧನ, ನಿಷೇಧಾಜ್ಞೆ, ಬರಡೋಲಿಯನ್ನು ಬಿಟ್ಟರೆ,

ಭಾರತದಲ್ಲಿ ಮತ್ತಾವ ಕಡೆಯೂ ಅಂಕೋಲ, ಸಿದ್ಧಾಪುರ ಮುಂತಾದ ತಾಲೂಕುಗಳಲ್ಲಿ ನಡೆದಂತೆ ಕರನಿರಾಕರಣ ಚಳುವಳಿ ನಡೆಯಲೇ ಇಲ್ಲ.

ಬರಡೋಲಿಯದಲ್ಲಾದರೆ ಅಖಿಲ ಭಾರತ ಪ್ರಸಿದ್ಧಿಯ ಮುಖಂಡ ಸರ್ದಾರ್ ಪಟೇಲರು ಇದ್ದರು. ಇಲ್ಲಿಯಾದರೋ ನಮ್ಮ ನಮ್ಮವರೆ. ಆದರೆ ಅವರ ತ್ಯಾಗ, ಅಹಿಂಸೆ ಚಿರಸ್ಮರಣೀಯ. ಕಂದಾಯ ಕೊಡದ ರೈತರ ಜಮೀನು, ದನಕರುಗಳು, ಚರಸ್ವತ್ತು, ಅವರ ಹೆಂಡತಿಯರ ಮಾಂಗಲ್ಯ ಎಲ್ಲವೂ ಹರಾಜಾದವು. ಹರಾಜಾದ ಪದಾರ್ಥಗಳನ್ನು ಯಾರೂ ಕೊಳ್ಳಲಿಲ್ಲ. ಸುಮಾರು ಎರಡು ಸಾವಿರ ಕುಟುಂಬಗಳವರು ಸರ್ವಸ್ವವನ್ನೂ ಕಳೆದುಕೊಂಡರು. ಈ ಅಹಿಂಸಾತ್ಮಕ ಚಳುವಳಿ, ಸರ್ಕಾರದ ದೌರ್ಜನ್ಯದ, ಹಿಂಸಾಯುಕ್ತ ಪ್ರತೀಕಾರದ ಭಾವನೆಯನ್ನು ಎಷ್ಟರ ಮಟ್ಟಿಗೆ ಎತ್ತಿತೋರಿಸಿತೆಂದರೆ, ಇದನ್ನು ಕುರಿತು ಬೆಂಗಳೂರಿನ ಪ್ರಸಿದ್ಧ ಅಡ್ವೋಕೇಟ್ ದೇಶಭಕ್ತ ಸಂಪಿಗೆ ವೆಂಕಟಪತಯ್ಯನವರು ತಯಾರಿಸಿ ಕಳುಹಿಸಿದ ಒಂದು ವರದಿ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ಚರ್ಚೆಗೆ ಬಂದಿತು. ಸರ್ಕಾರದ ಪ್ರತಿಬಂಧಕಾಜ್ಞೆಗಳನ್ನೆಲ್ಲ ವಿರೋಧಿಸಿ ಜನ ಸಭೆಗಳನ್ನು ನಡೆಸುತ್ತಿದ್ದರು. ಈ ಒಂದು ಸತ್ಯಾಗ್ರಹವನ್ನು ಪ್ರತಿಬಂಧಿಸುವುದಕ್ಕಾಗಿಯೇ ವೈಸ್‌ರಾಯರು ಒಂಭತ್ತು ಸುಗ್ರೀವಾಜ್ಞೆಗಳನ್ನು ಹೊರಡಿಸಿದರು. ಸ್ತ್ರೀ ಸತ್ಯಾಗ್ರಹಿಗಳ ಮೇಲೆ ಲಾಠಿ ಪ್ರಹಾರ ನಡೆಯಿತು. ಎಷ್ಟು ಅವಿದ್ಯಾವಂತರಾಗಿರಲಿ ಬಡವರಾಗಿರಲಿ ಅವರು ಸರ್ವತ್ಯಾಗಕ್ಕೂ ಸಿದ್ಧರಾಗಿ ಆದರ್ಶ ಸತ್ಯಾಗ್ರಹಿಯಾದರೆ, ಬ್ರಿಟಿಷ್ ಸಾಮ್ರಾಜ್ಯದಂಥ ದೊಡ್ಡ ಪಾಶವೀ ಶಕ್ತಿಯನ್ನು ಸಹ ಸೋಲಿಸಬಲ್ಲರೆಂಬುದಕ್ಕೆ ಕರ್ನಾಟಕದ ಕರನಿರಾಕರಣೆಯ ವೀರಕಥೆಯೇ ಉದಾಹರಣೆ.

ಮೈಸೂರು ದೇಶ– ದೇಶೀಯ ಸಂಸ್ಥಾನವಾದರೂ– ಇತರ ಸಂಸ್ಥಾನಗಳಂತಲ್ಲದೆ ರಾಜಕೀಯ ತುಂಬ ಜಾಗೃತಿ ಹೊಂದಿದ ರಾಜ್ಯವಾಗಿತ್ತು. ಇಲ್ಲಿನ ಮುಖಂಡರು ಭಾರತೀಯ ಕಾಂಗ್ರೆಸ್‌ನೊಂದಿಗೆ ಸದಾ ಸಂಪರ್ಕವಿಟ್ಟುಕೊಂಡಿದ್ದರು. ಆ ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಕ್ರಮಗಳನ್ನಲ್ಲದೆ ರಾಜಕೀಯ ಹೋರಾಟವನ್ನೂ ಅನುಸರಿಸುತ್ತಿದ್ದರು. ಸಂಸ್ಥಾನಗಳು ತಮ್ಮ ಸ್ವಂತ ಕಾಂಗ್ರೆಸ್ ಸಮಿತಿಗಳನ್ನು ರಚಿಸಿಕೊಂಡು ಜವಾಬ್ದಾರ ಸರ್ಕಾರ ಸ್ಥಾಪನೆಗೆ ಹೋರಾಡಬೇಕೆಂದೂ ಆದರಿಂದ ಅವರ ಶಕ್ತಿ ಹೆಚ್ಚುವುದೆಂದೂ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆ ಸೂಚಿಸಿದವು. ಚೆಂಗಲ್‌ರಾಯರೆಡ್ಡಿ ಮತ್ತು ಎ. ವೆಂಕಟಪ್ಪನವರು ಪ್ರಜಾಪಕ್ಷವನ್ನು ವಿಸರ್ಜಿಸಿ ೧೯೩೭ರಲ್ಲಿ ಮೈಸೂರು ಕಾಂಗ್ರೆಸನ್ನು ಸ್ಥಾಪಿಸಿದರು. ಮೊದಲನೆಯ ಅಧಿವೇಶನ ಶಿವಪುರದಲ್ಲಿ ನಡೆಯಿತು. ಅಲ್ಲಿ ರಾಷ್ಟ್ರಧ್ವಜ ಸತ್ಯಾಗ್ರಹವಾಗಿ ನೂರಾರು ಜನರ ಬಂಧನವಾಯಿತು. ಜವಾಬ್ದಾರಿ ಸರ್ಕಾರದ ಘೋಷಣೆ ದೇಶದಲ್ಲಿ ಮೊಳಗಿತು. ಜನರ ಉತ್ಸಾಹ ಪ್ರಚಂಡವಾಗಿತ್ತು. ಎರಡನೆಯ ಕಾಂಗ್ರೆಸ್ ಅಧಿವೇಶನ ವಿದುರಾಶ್ವತ್ಥದಲ್ಲಿ ನಡೆಯಿತು. ಅಲ್ಲಿ ನಡೆದ ಪೊಲೀಸ್ ಗೋಲಿಬಾರ್‌ನಲ್ಲಿ ಅನೇಕರು ಹತರಾದರು. ಅದೇ ವರ್ಷ ಅರಣ್ಯ ಸತ್ಯಾಗ್ರಹ ನಡೆದು ಸಾವಿರಾರು ಜನರು ಬಂಧಿತರಾದರು. ಕೊಡಗಿನಲ್ಲಿಯೂ ಹೈದರಾಬಾದಿನಲ್ಲಿಯೂ ನೂರಾರು ಸತ್ಯಾಗ್ರಹಿಗಳ ಬಂಧನವಾಯಿತು. ಮಹಾರಾಜರ ಸರಕಾರ ಕೆ. ಆರ್. ಶ್ರೀನಿವಾಸ ಅಯ್ಯಂಗಾರರ ಅಧ್ಯಕ್ಷತೆಯಲ್ಲಿ ಆಡಳಿತ ಸುಧಾರಣೆ ಸಮಿತಿಯನ್ನು ರಚಿಸಿತು. ಅದರ ಶಿಫಾರಸ್ಸನ್ನು ಕಾಂಗ್ರೆಸ್ ತಿರಸ್ಕರಿಸಿತು. ಬೆಂಗಳೂರು ಬಿನ್ನಿ ಗಿರಣಿಯ ಕಾರ್ಮಿಕರು ಭದ್ರಾವತಿ ಕಾರ್ಖಾನೆ ಮಾಲೀಕರು ಸರ್ಕಾರವನ್ನು ವಿರೋಧಿಸಿದರು. ಅವರ ಮುಷ್ಕರಗಳು ಎಪ್ಪತ್ತೈದು ದಿನ ನಡೆದುವು. ಸರ್ಕಾರ, ದಾಸಪ್ಪನವರ ವಕೀಲಿ ಅರ್ಹತೆಯನ್ನು ರದ್ದು ಮಾಡಿತು.

ಹೈದರಾಬಾದ್ ಕರ್ನಾಟಕದಲ್ಲಿ ಸಹ ಸ್ವಾತಂತ್ರ್ಯ ಚಳುವಳಿಯ ಎಲ್ಲ ಹಂತಗಳಲ್ಲಿಯೂ ರಾಮಾಚಾರ್ಯ, ರಮಾನಂದತೀರ್ಥ, ಮೇಲುಕೋಟೆ ಕೃಷ್ಣಾಚಾರ್ಯ, ಜನಾರ್ದನ ದೇಸಾಯಿ, ಮುಂತಾದವರು ಭಾಗವಹಿಸಿದರು. ಜಮಖಂಡಿ, ಮುಧೋಳ, ಮೊದಲಾದ ರಾಜ್ಯಗಳಲ್ಲಿಯೂ ನಡೆಯಿತು. ಎಲ್ಲೆಲ್ಲಿಯೂ ಚಳುವಳಿಗಳು ಶಾಂತಿಯಿಂದ ವ್ಯವಸ್ಥಿತ ರೀತಿಯಲ್ಲಿ ನಡೆದವು. ಹಿಂಸಾ ಪ್ರಕರಣ ತುಂಬ ಅಪರೂಪವಾಗಿತ್ತು. ಪೋಲೀಸು ಮತ್ತು ಸರ್ಕಾರವೇ ಹಿಂಸೆಯ ಪ್ರತಿಕ್ರಿಯೆ ಆಚರಿಸಿತು. ಕ್ವಿಟ್ ಇಂಡಿಯಾ ಚಳುವಳಿ ಕರ್ನಾಟಕದಲ್ಲಿ ಅತ್ಯಂತ ಪ್ರಜ್ವಲವಾಗಿ ಎದ್ದಿತು. ಚಳುವಳಿ ಬೆಳಗಾವಿ, ಧಾರವಾಡ, ಬೆಂಗಳೂರು ಮತ್ತು ಮೈಸೂರುಗಳಲ್ಲಿ ತುಂಬ ತೀವ್ರವಾಗಿತ್ತು. ಮೈಸೂರು ಕಾಂಗ್ರೆಸ್ಸಿನ ಎಲ್ಲ ಸದಸ್ಯರು ತಗಡೂರು ರಾಮಚಂದ್ರರಾದಿಯಾಗಿ ಎಲ್ಲ ಕಾಂಗ್ರೆಸ್ಸಿಗರೂ, ಬಂಧಿತರಾದರು. ಎಲ್ಲೆಲ್ಲಿಯೂ ಸಭೆಗಳು. ಹೈದರಾಬಾದು, ಉತ್ತರ ಕರ್ನಾಟಕ, ಮಂಗಳೂರು, ಕೊಡಗು, ಎಲ್ಲೆಡೆಯೂ ಬಂಧನ. ಗೋಲೀಬಾರು, ಲಾಠಿ ಏಟು. ಸೆರೆಮನೆಗಳೆಲ್ಲ ತುಂಬಿಹೋದುವು. ಅನೇಕ ಹಂಗಾಮಿ ಸೆರೆಮನೆಗಳೂ ಪಾಠಶಾಲೆ, ಪ್ರವಾಸಿ ಮಂದಿರ, ಛತ್ರಗಳಲ್ಲಿ ನಿರ್ಮಿತವಾದುವು. ಅನೇಕ ಊರುಗಳಲ್ಲಿ ಪ್ರತಿ ಸರ್ಕಾರಗಳು ಸ್ಥಾಪನೆಗೊಂಡವು. ಕರ್ನಾಟಕ ಕಾಂಗ್ರೆಸ್ ಸಮಿತಿ ಅಧ್ಯಕ್ಷ ತಾಳಕೆರೆ ಸುಬ್ರಹ್ಮಣ್ಯ, ದಾಸಪ್ಪ, ವೀರಣ್ಣ ಗೌಡ, ಕೆ. ಹನುಮಂತಯ್ಯ, ಚೆಂಗಲರಾಯ ರೆಡ್ಡಿ, ನಿಜಲಿಂಗಪ್ಪ, ಸಾಹುಕಾರ ಚೆನ್ನಯ್ಯ, ಎಂ. ಟಿ. ರಾಮರಾವ್, ತಗಡೂರು ಎಲ್ಲರೂ ಬಂಧಿತರಾದರು. ಸಂತೆಗಳಲ್ಲಿ ಸುಂಕ ಕೊಡಲು ನಿರಾಕರಿಸಿದವರನ್ನೆಲ್ಲ ಸೆರೆಮನೆಗೆ ಕರೆತಂದು ಕೂಡಿ, ಬೆಳಿಗ್ಗೆ ಬಿಡುತ್ತಿದ್ದರು. ಕರ್ನಾಟಕದಲ್ಲಿಯೇ ಬಂಧಿತರಾದವರ ಸಂಖ್ಯೆ ಎಂಟು ಸಾವಿರಕ್ಕಿಂತ ಹೆಚ್ಚಾಗಿತ್ತು. ನಿತ್ಯ ಬೆಳಿಗ್ಗೆ ಬಂಧಿಸಿ ಸಂಜೆಗೆ ಬಿಡುತ್ತಿದ್ದವರ ಸಂಖ್ಯೆ ಇದರಲ್ಲಿ ಸೇರಿಲ್ಲ. ಈ ಚಳುವಳಿಯಲ್ಲಿಯೇ ಶಿವಮೊಗ್ಗ ಜಿಲ್ಲೆಯಲ್ಲಿ ಈಸೂರಿನಲ್ಲಿ ಅಧಿಕಾರಿಗಳ ಕೊಲೆಯಾಗಿ, ಅನಂತರ ಐವರು ಚಳುವಳಿಗಾರರಿಗೆ ಫಾಸಿ ಆಯಿತು. ಅನೇಕ ಕೆಲಸಗಾರರು ಭೂಗತರಾಗಿ ಚಳುವಳಿ ನಡೆಸಿದರು. ರೈಲು ಕಂಬಿ ಕೀಳುವುದು, ಟೆಲಿಫೋನ್ ತಂತಿಗಳ ಹಾನಿ, ರೈಲ್ವೆ ಸ್ಟೇಷನ್ ಭಸ್ಮ, ಪೋಸ್ಟ್ ಆಫೀಸಿಗೆ ಬೆಂಕಿ, ಪಂಚಾಯಿತಿ ಚಾವಡಿಗಳಿಗೆ ಬೆಂಕಿ, ಖಜಾನೆ ಲೂಟಿ, ಸಬ್‌ರಿಜಿಸ್ಟ್ರಾರ್ ಆಫೀಸಿಗೆ ಬೆಂಕಿ, ಸರ್ಕಾರಿ ದೌರ್ಜನ್ಯ ಮತ್ತು ಪ್ರತಿಹಿಂಸೆ ಮಿತಿಮೀರಿದ್ದುವು. ಶ್ರೇಷ್ಠ ಗಾಂಧೀ ಕಾರ್ಯಕರ್ತ ಮೈಲಾರ ಮಹದೇವಪ್ಪ ಮತ್ತು ಸಂಗಡಿಗರು ಗುಂಡಿಗೆ ಬಲಿ. ಬೆಂಗಳೂರು ಗುಂತಕಲ್ ರೈಲು ಎರಡು ವಾರ ನಿಂತಿತು. ಸರ್ಕಾರ ಎಲ್ಲೆಲ್ಲಿಯೂ ಪುಂಡುಗಂದಾಯ ವಿಧಿಸಿತು. ಚಳುವಳಿಯನ್ನು ಅಡಗಿಸಲು ಸರ್ಕಾರ ಯೂರೋಪಿಯನ್ ಮಿಲಿಟರಿಯನ್ನು ನಿಯಮಿಸಬೇಕಾಯಿತು. ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಮಹದೇವ ದೇಸಾಯಿ ಸೆರೆಮನೆಯಲ್ಲಿ ತೀರಿಕೊಂಡ ಸುದ್ದಿಯಿಂದ ಜನ ತುಂಬ ಅಶಾಂತಿಗೊಳಗಾದರು. ಅಂದು ಬೆಂಗಳೂರಿನಲ್ಲಿ ಮೈಸೂರು ಬ್ಯಾಂಕ್ ಚೌಕದಲ್ಲಿ ಅನೇಕರು ಪೋಲೀಸ್ ಗುಂಡಿನಿಂದ ಸತ್ತರು. ನಿಪ್ಪಾಣಿಯಲ್ಲಿ ಏಳು ಜನರ ಕೊಲೆಯಾಯಿತು. ಕರ್ನಾಟಕದಲ್ಲಿ ಈ ಚಳುವಳಿ ಒಂದು ವರ್ಷದ ವರೆಗೆ ನಡೆಯಿತು. ಸೆರೆಮನೆಯಲ್ಲಿದ್ದ ಗಾಂಧೀಜಿಗೆ ಸಂಗತಿ ತಿಳಿಯಲೇ ಇಲ್ಲ. ವಿಷಯ ಗೊತ್ತಾದಾಗ ಅವರು ಕೂಡಲೇ ಎಲ್ಲ ಭೂಗತ ಕಾರ್ಯ

ಕರ್ತರೂ ವಿಧ್ವಂಸಕ ಕೃತ್ಯಗಳನ್ನು ನಿಲ್ಲಿಸಬೇಕೆಂದು ಸರ್ಕಾರಕ್ಕೆ ಶರಣಾಗತರಾಗಬೇಕೆಂದೂ ಹೇಳಿಕೆ ನೀಡಿದರು. ಅನಂತರ ದಿವಾಕರ್, ವೆಂಕಟರಾಮಯ್ಯ, ಎ. ಜಿ. ರಾಮಚಂದ್ರರಾವ್ ಮೊದಲಾದವರೆಲ್ಲ ಸರ್ಕಾರಕ್ಕೆ ಶರಣಾದರು. ಹಳೆ ಮೈಸೂರಿನಲ್ಲಿ ಸಹ ಭಾರತದಿಂದ ತೊಲಗಿ ಚಳುವಳಿಯಲ್ಲಿ ವಿಧ್ವಂಸಕೃತ್ಯವೆಸಗಿದ ಅನೇಕ ಉತ್ಸಾಹಿ ತರುಣರು ಬಂಧಿತರಾದರು. ಅವರ ಪೈಕಿ ಶಾಂತವೇರಿ ಮತ್ತು ಗೋಪಾಲಗೌಡ, ಎಲ್. ಟಿ. ಕಾರ್ಲ್ ಟೆಲಿಗ್ರಾಫ್ ತಂತಿ ಕತ್ತರಿಸಿ ಶಿಕ್ಷೆಗೆ ಒಳಗಾದವರು.

೧೯೪೭ರ ಅಗಸ್ಟ್ ಮಧ್ಯರಾತ್ರಿ ಭಾರತ ಸ್ವತಂತ್ರವಾಯಿತು. ಸ್ವತಂತ್ರವಾದರೂ ದುರದೃಷ್ಟದ ದೇಶೀಯ ಸಂಸ್ಥಾನಗಳ ಪ್ರಜೆಗಳಿಗೆ ಇನ್ನೊಂದು ಹೋರಾಟ ಕಾದಿತ್ತು. ಅದುವೆ ಸಂಸ್ಥಾನದ ಅರಸರಿಂದ ಬಿಡುಗಡೆ. ನಮ್ಮ ಅರಸರು ಬ್ರಿಟಿಷ್ ಸರ್ಕಾರಕ್ಕಿಂತ ಕ್ರೂರರಾದರು. ಮೈಸೂರು ದೇಶದಲ್ಲಿ ದಿವಾನ್ ಆರ್ಕಾಟ್ ರಾಮಸ್ವಾಮಿ ಮೊದಲಿಯೂರರ ದಿವಾನ್‌ಗಿರಿಯಲ್ಲಿ ಮತ್ತೊಂದು ಸ್ವಾತಂತ್ರ್ಯ ಆಂದೋಳನ ನಡೆಯಬೇಕಾಯಿತು. ಈ ಚಳುವಳಿ ಸಹ ಅಹಿಂಸಾತ್ಮಕವಾಗಿ "ಪ್ಯಾಲೇಸ್ ಚಲೊ" "ಅರಮನೆ ಮುತ್ತಿ" ಎಂಬ ಘೋಷಣೆಯೊಂದಿಗೆ ಆರುವಾರ ನಡೆಯಿತು. ರೈಲು ಸಿಬ್ಬಂದಿ, ಪೋಲೀಸು, ವಿದ್ಯಾರ್ಥಿಗಳು ಎಲ್ಲರೂ ಈ ಚಳುವಳಿಯಲ್ಲಿ ಸೇರಿದರು. ಪಟೇಲರೆಲ್ಲ ರಾಜೀನಾಮೆ ಇತ್ತರು. ದೇಶಾದ್ಯಂತ ಬಂಧನಗಳಾದುವು. ಕೆಲವುಕಡೆ ಗೋಲಿಬಾರಿನಿಂದ ಸತ್ಯಾಗ್ರಹಿಗಳೂ ವಿದ್ಯಾರ್ಥಿಗಳೂ ರೈತರೂ ಸತ್ತರು. ಹೆಚ್. ಎಸ್. ದೊರೆಸ್ವಾಮಿ ಮುಂತಾದವರು ಸಂಸ್ಥಾನದ ಹೊರಗೆ ನಿಂತು ಪ್ರಚಾರ ಮಾಡಿದರು. ಸರ್ಕಾರದ ಕೆಲಸ ಸ್ಥಗಿತವಾಯಿತು. ಶ್ರೀಮಾನ್ ಚಂಗಲರಾಯ ರೆಡ್ಡಿಯವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದರು. ಆರು ವಾರಗಳೊಳಗೆ ಸರ್ಕಾರ ನಿರುಪಾಯವಾಗಿ ಸೋತು, ಕಾಂಗ್ರೆಸ್ಸಿನೊಂದಿಗೆ ರಾಜಿಮಾಡಿಕೊಂಡಿತು. ಚಂಗಲರಾಯ ರೆಡ್ಡಿಯವರ ಮುಖ್ಯಮಂತ್ರಿತ್ವದಲ್ಲಿ ಜವಾಬ್ದಾರಿ ಸರ್ಕಾರದ ಪ್ರಥಮ ಮಂತ್ರಿಮಂಡಲ ಸ್ಥಾಪನೆಯಾಯಿತು.

ಸ್ವಾತಂತ್ರ್ಯ ದೊರೆತರೂ ಕನ್ನಡನಾಡಿನ ಏಕೀಕರಣ ಸಿದ್ಧಿಸಿರಲಿಲ್ಲ. ಕನ್ನಡಿಗರ ಬಯಕೆ ಎಂದಿನಿಂದಲೂ ಕನ್ನಡನಾಡು ಒಂದು ಪ್ರಾಂತವಾಗಿ ಒಂದು ಆಳ್ವಿಕೆಯಲ್ಲಿ ಏಕತಂತ್ರವಾಗಿ ಬರಬೇಕೆಂಬುದೇ ಆಗಿತ್ತು. ಸ್ವಾತಂತ್ರ್ಯ ಹೋರಾಟದ ಈ ಎಲ್ಲ ಸಂವತ್ಸರಗಳಲ್ಲಿಯೂ ಎಲ್ಲೆಡೆ ಇರುವ ಕನ್ನಡಿಗರೆಲ್ಲ ಸವ್ಯಸಾಚಿಗಳಾಗಿ ಸ್ವಾತಂತ್ರ್ಯ ಮತ್ತು ಏಕೀಕರಣಕ್ಕಾಗಿ ಒಟ್ಟಿಗೇ ಹೋರಾಡಿದರು. ಸಾಹಿತ್ಯ ಪರಿಷತ್ತು ಪ್ರತಿವರುಷವೂ ಏಕೀಕರಣ ಮಂತ್ರ ಜಪಿಸುತ್ತಲೇ ಇತ್ತು. ಸಾಹಿತಿಗಳಿಗೆಲ್ಲ ಅದೇ ಕನಸಾಗಿತ್ತು. ಕರ್ನಾಟಕ ಇಪ್ಪತ್ತೆರಡು ಆಳ್ವಿಕೆಗಳಲ್ಲಿ ಹಂಚಿಹೋಗಿತ್ತು. ಕೊನೆಗೆ ೧೯೫೬ರ ನವೆಂಬರ್ ಒಂದರಂದು ಕರ್ನಾಟಕ ರಚನೆಯಾಯಿತು. ಆಗ ಕಡಿದಾಳ ಮಂಜಪ್ಪನವರು ಮುಖ್ಯಮಂತ್ರಿಗಳಾಗಿದ್ದರು. ನಮ್ಮ ಪ್ರಯಾಣದಲ್ಲಿ ಸ್ವಾತಂತ್ರ್ಯ ಮತ್ತು ಏಕೀಕರಣದ ಮಜಲನ್ನು ಮುಟ್ಟಿದೆವು. ಈ ಸಾಧನೆಯ ಕೀರ್ತಿ ಶ್ರೀಮಾನ್ ನಿಜಲಿಂಗಪ್ಪ, ಹನುಮಂತಯ್ಯ ಮತ್ತು ದೇವರಾಜ ಅರಸರಿಗೆ ಸೇರಬೇಕು.

ನಮ್ಮ ಪ್ರಾಂತ್ಯವೇನೋ ನಮಗೆ ಸಿಕ್ಕಿತು. ಕರ್ನಾಟಕ ಭಾರತದಲ್ಲಿ ಅತ್ಯಂತ ಶ್ರೇಷ್ಠವಾದ ಪ್ರಾಂತ. ಭಾರತಾಂಬೆಯ ಮುಕುಟದಲ್ಲಿ ಅನರ್ಘ್ಯ ರತ್ನ. ಹೇರಳವಾಗಿ ನೈಸರ್ಗಿಕ ಸಂಪತ್ತು ಇರುವ ರಾಷ್ಟ್ರ. ಕನ್ನಡಿಗರು ಇನ್ನೂ ಹೆಚ್ಚು ಸಾಹಸಪರರೂ ಪಟ್ಟು ಹಿಡಿದು ಕೆಲಸ ಮಾಡುವವರೂ ಆಗಬೇಕು. ಈ ಪ್ರಾಂತ ಗಾಂಧೀಜಿಗೆ ಪ್ರಿಯವಾಗಿತ್ತು. ಈಗ ಪಟ್ಟಣಗಳಿಗೇ ಹೆಚ್ಚು ಪ್ರಾಶಸ್ತ್ಯ ದೊರೆಯುತ್ತಿದೆ. ಗ್ರಾಮ ಕೈಗಾರಿಕೆ, ಗ್ರಾಮ ಸ್ವಾವಲಂಬನೆ, ಕೈಗಾರಿಕೆಗಳ ವಿಕೇಂದ್ರೀಕರಣ, ದುರ್ಬಲ ವರ್ಗಗಳ ಉನ್ನತಿ, ಬಡತನ ನಿರ್ಮೂಲನಕ್ಕೆ ಹೆಚ್ಚು ಪ್ರಾಧಾನ್ಯತೆ ನೀಡಬೇಕು. ಇದಕ್ಕಾಗಿ ಸರ್ಕಾರಗಳೂ ಪ್ರಜೆಗಳೂ ಶ್ರಮಿಸಬೇಕು.

(ಈ ಲೇಖನವನ್ನು ನನ್ನ ಸ್ವಂತ ಅನುಭವದಿಂದಲೂ, ಡಾ. ಸೂರ್ಯನಾಥ ಕಾಮತರ ಗ್ರಂಥದ ಆಧಾರದಿಂದಲೂ ಬರೆದಿದ್ದೇನೆ. ಅನೇಕ ಹೋರಾಟಗಾರರ ಹೆಸರು ಬಿಟ್ಟುಹೋಗಿದೆ. ಸಂಬಂಧಪಟ್ಟವರೆಲ್ಲ ಈ ಕೊರತೆಗಾಗಿ ನನ್ನನ್ನು ಮನ್ನಿಸಬೇಕು. ರಾವ್‌ಬಹದ್ದೂರರು ರಚಿಸಿದ "ಕರನಿರಾಕರಣೆಯ ವೀರಕಥೆ" ಆ ವಿಷಯಕ್ಕೆ ಅತಿ ಸಮರ್ಥ ಗ್ರಂಥ.)

# ಕರ್ನಾಟಕದ ಏಕೀಕರಣ

ಆದ್ಯ ರಾಮಾಚಾರ್ಯ

ಕರ್ನಾಟಕ ಎಂದೊಡನೆ ಒಂದು ಉಜ್ವಲವಾದ, ಪುರಾತನವಾದ, ಸಾಂಸ್ಕೃತಿಕ ಪರಂಪರೆಯ ಭವ್ಯ ವಿರಾಟರೂಪದ, ಸೌಂದರ್ಯದ ದರ್ಶನವಾಗುತ್ತದೆ. ಒಂದು ಹೊಸ ಲೋಕವನ್ನೇ ಪ್ರವೇಶಮಾಡಿದಂತಹ ಅನುಭವ ಕನ್ನಡಿಗನಿಗಾಗುತ್ತದೆ. ಆ ರಮ್ಯೋದ್ಯಾನದ ಹೆಬ್ಬಾಗಿಲಿನಲ್ಲಿ ಆಲೂರು ವೆಂಕಟರಾಯರು, ಕಡಪಾ ರಾಘವೇಂದ್ರರಾಯರು, ಮುದವೀಡು ಕೃಷ್ಣರಾಯರು, ಶಾಂತಕವಿಗಳು, ಶ್ರೀ ಅವರು, ತೀ. ನಂ. ಶ್ರೀ. ಅವರು, ಉತ್ತಂಗಿಯವರು, ಪಂಜೆ ಹಾಗೂ ಗೋವಿಂದ ಪೈ, ದೊಡ್ಡಮೇಟಿಯವರು, ವಿಶ್ವೇಶ್ವರಯ್ಯನವರು – ಇವರೇ ಮೊದಲಾದ ಮಹನೀಯರ ದರ್ಶನವು ಲಭಿಸುತ್ತದೆ. ಈ ಹಿರಿಯರ ಆಶೀರ್ವಾದವನ್ನು ಪಡೆದು ಮುನ್ನಡೆಯುತ್ತಿದ್ದ ಕನ್ನಡಿಗನಿಗೆ ಆ ಲೋಕದ ಇನ್ನೊಂದು ಭಾಗದಲ್ಲಿ ಬಸವಪ್ಪ ಶಾಸ್ತ್ರಿಗಳು, ಕೆರೂರು ವಾಸುದೇವಾಚಾರ್ಯರು, ಗಳಗನಾಥರು, ವೆಂಕೋಬಾಚಾರ್ಯರು, ತುರಮುರಿಯವರು, ಕಿಟೆಲ್, ಡೆಪ್ಯುಟಿ ಚೆನ್ನಬಸಪ್ಪ ಹಾಗೂ ಮುದ್ದಣ–ಮನೋರಮೆಯರು, ಕೆಂಪು ನಾರಾಯಣ ಮತ್ತು ಹೊನ್ನಮ್ಮ, ಚಿಕ್ಕದೇವರಾಯ, ಪೂರ್ಣಯ್ಯ, ಷಡಕ್ಷರಿ, ಕಿತ್ತೂರು ಚೆನ್ನಮ್ಮ, ಟೀಪೂ ಸುಲ್ತಾನ್, ಸುರಪುರದ ವೆಂಕಟಪ್ಪ ನಾಯಕ, ಸಂಗೊಳ್ಳಿ ರಾಯಣ್ಣ ಮೊದಲಾದವರ ದರ್ಶನ ಲಭಿಸುತ್ತದೆ.

ಈ ಮಹನೀಯರನ್ನೆಲ್ಲ ಆದರಪೂರ್ವಕ ಮಾತನಾಡಿಸಿ ಅವರಿಂದ ಆಶೀರ್ವಾದ ಪಡೆದು ಇನ್ನೂ ಸ್ವಲ್ಪ ಮುಂದೆ ನಡೆದಾಗ ಸರ್ವಜ್ಞ, ಶರಣಶ್ರೇಷ್ಠರು, ಲಕ್ಷ್ಮೀಶ, ರತ್ನಾಕರ, ಕುಮಾರವ್ಯಾಸ ಮೊದಲಾದವರು ಆತನಿಗೆ ಕಾಣಸಿಗುತ್ತಾರೆ. ಅವರ ಸ್ಫೂರ್ತಿದಾಯಕವಾದ ಕಾವ್ಯವಾಣಿ ಅಲೆ ಅಲೆಯಾಗಿ ಮಂದವಾಗಿ ಕೇಳಬಂದಂತಾಗುತ್ತದೆ. ಆ ವಾಣಿಯಲ್ಲಿಯೇ ತಲ್ಲೀನನಾಗಿ ಮುನ್ನಡೆಯುತ್ತಿದ್ದಾಗ ಮಹಾ ಮಹಿಮರಾದ ವಿದ್ಯಾರಣ್ಯರು ತಮ್ಮ ತಪಸ್ಸಿಗಾಗಿ ಯೋಗಾಸನಸ್ಥರಾಗಿ ಕುಳಿತ ದೃಶ್ಯ ಕಾಣಸಿಗುತ್ತದೆ. ಆ ಪೂಜ್ಯರಿಗೆ ದಂಡವತ್ ಪ್ರಣಾಮಗಳನ್ನು ಸಲ್ಲಿಸಿ ಇನ್ನೊಂದು ಬದಿಗೆ ಸರಿದಾಗ ಪೂಜ್ಯರಾದ ವ್ಯಾಸರಾಯರು, ಪುರಂದರದಾಸರು, ಶಾರ್ಙದೇವ, ಪುಂಡಲೀಕ ವಿಠಲ, ನಿಜಗುಣ ಶಿವಯೋಗಿಗಳು ಇವರೇ ಮೊದಲಾದ ಮಹಾನುಭಾವರು ಪರಸ್ಪರ ಚರ್ಚೆಯಲ್ಲಿ ನಿರತರಾದಂತೆ ಭಾಸವಾಗುತ್ತದೆ. ಆ ದಿವ್ಯೋದ್ಯಾನದ ಇನ್ನೊಂದು ಭಾಗದಲ್ಲಿ ಜಕ್ಕಣ, ಪದ್ಮೋಜ, ವಾಸೋಜ, ಮಲ್ಲೋಜ ಮೊದಲಾದ ಶಿಲ್ಪಿಗಳು ತಮ್ಮ ಶಿಲ್ಪ ರಚನಾ ಕಾರ್ಯದಲ್ಲಿ ತಲ್ಲೀನರಾದುದು ಕಾಣಸಿಗುತ್ತದೆ. ಈ ಎಲ್ಲ ಮಹನೀಯರಿಗೂ ನಮಿಸಿ ಕೃತಾರ್ಥಭಾವದಿಂದ ಮುನ್ನಡೆದಾಗ ಹಂಪಿ, ಸೋಮನಾಥಪುರ, ಹಳೆಬೀಡು, ಬೇಲೂರು, ಲಕ್ಕುಂಡಿ ಮೊದಲಾದ ರಮಣೀಯ ಸ್ಥಾನಗಳು, ಗುಹೆಗಳು ಕಮಲದಂತೆ ಸುಂದರವಾಗಿ ಅರಳಿ ನಿಂತುದನ್ನು ಕಂಡಾಗ ಕನ್ನಡಿಗನ ಮೈ ಮನಗಳು ಹರ್ಷದಿಂದ ತುಂಬಿ ಬರುತ್ತವೆ. ಈ ರಮ್ಯ ನೋಟದ ಮಧ್ಯಬಿಂದುಗಳಾಗಿ ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಮಧ್ವಾಚಾರ್ಯರು ಇವರು ವಿಶ್ವಕ್ಕಿತ್ತ ದರ್ಶನ ಶಾಸ್ತ್ರಗಳ ಅಮೃತ ವಾಣಿಯೊಂದಿಗೆ ಬಸವೇಶ್ವರರು, ಅಲ್ಲಮ ಪ್ರಭುಗಳು, ಅಕ್ಕಮಹಾದೇವಿಯವರ ಮಧುರ ವಚನಾಮೃತವು ಅಲೆ ಅಲೆಯಾಗಿ ತೇಲಿ ಬರುತ್ತಿರುವಂತಹ ಅನುಭವವಾಗುತ್ತದೆ. ಪಂಪ, ರನ್ನ, ಹೊನ್ನರ ಕೃತಿಗಳು ಸ್ಪರ್ಧಾ ರೂಪದಲ್ಲಿ ಹೇಳಿಕೊಳ್ಳುತ್ತಿರುವಂತಹ ಧ್ವನಿಮುದ್ರಿಕೆಗಳು ಕಿವಿಯ ಮೇಲೆ ಬೀಳುತ್ತವೆ.

ಇದುವೇ ಕರ್ನಾಟಕ. ಇದು ಪಾವನ ಭೂಮಿ. ಇದು ಕ್ಷಾತ್ರಭೂಮಿ. ಇದು ಕರ್ಮಭೂಮಿ. ಕ್ಷಾತ್ರ ತೇಜದೊಂದಿಗೆ ಧರ್ಮತೇಜ ಒಕ್ಕೂಡಿಕೊಂಡು ಬಂದ ಸಂಗಮ ಕ್ಷೇತ್ರವಿದು. ಈ ನೆಲವನ್ನೇ ಭಾರತಾಂತರ್ಗತ ಕರ್ನಾಟಕ ಎಂದು ನಮ್ಮ ಪೂರ್ವಜರು ಕರೆಯುತ್ತ ಬಂದರು.

ಸಮಗ್ರ ಭಾರತದಲ್ಲಿ ಅಶೋಕನ ಕಾಲಾವಧಿಯ ಆಡಳಿತವನ್ನು ಬಿಟ್ಟರೆ ಈ ಭಾರತದ ಮೇಲೆ ಏಕಮೇವಾದ್ವಿತೀಯ ಪ್ರಭುತ್ವವನ್ನು ನಡೆಸಿದವರು ಬ್ರಿಟಿಷರು ಎಂಬ ಮಾತನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ. ಏಕೆಂದರೆ, ಭಾರತ ಬಹು ದೊಡ್ಡ ರಾಷ್ಟ್ರ. ಈ ರಾಷ್ಟ್ರದಲ್ಲಿ ಅನೇಕ ಭಾಷೆಗಳೊಂದಿಗೆ ನಡೆ, ನುಡಿ, ಸಂಸ್ಕೃತಿಗಳಲ್ಲಿಯೂ ಏಕತೆಯೊಂದಿಗೆ ವಿವಿಧತೆಯೂ ಎದ್ದು ತೋರುವುದುಂಟು. ಈ ಬೃಹದ್ರಾಷ್ಟ್ರದ ಮೇಲೆ ಅನೇಕ ವಿದೇಶೀಯರು ಸಾಕಷ್ಟು ದಾಳಿ ಮಾಡಿದರು. ಕೇವಲ ಸಂಪತ್ತಿಗಾಗಿ ಕೆಲವರು ದಾಳಿ ಮಾಡಿದರೆ, ಮತ್ತೆ ಕೆಲವರು ಪ್ರಭುತ್ವಕ್ಕಾಗಿ ದಾಳಿ ನಡೆಸಿದರು. ಇವರಲ್ಲಿ ಕೆಲವರಂತೂ ಈ ನೆಲದಲ್ಲಿಯೇ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಡಿದರು. ಹೀಗಿದ್ದರೂ ಕೇವಲ ವ್ಯಾಪಾರ ನಿಮಿತ್ತವಾಗಿ ಈ ರಾಷ್ಟ್ರಕ್ಕೆ ಈ ನಾಡಿನ ಕರಾವಳಿಗೆ ಆಗಮಿಸಿದ ಬ್ರಿಟಿಷರು, ತಮ್ಮ ಭೇದೋಪಾಯಗಳ ಕುತಂತ್ರಗಳಿಂದಾಗಿ ಒಂದು ದಿನ ಇಡೀ ಭಾರತವನ್ನು ತಮ್ಮದನ್ನಾಗಿ ಮಾಡಿಕೊಂಡರು. ೧೮೫೭–೫೮ರಲ್ಲಿ ನಡೆದ ವಿಖ್ಯಾತ ಭಾರತದ ಹೋರಾಟವನ್ನು ಸಮಗ್ರ ಭಾರತದ ಕ್ಷಾತ್ರ ತೇಜದ, ಸ್ವಾಭಿ

ಷೂನದ ಹೋರಾಟವೆಂದು ಗುರುತಿಸುವುದುಂಟು. ಈ ಹೋರಾಟದ ಅನಂತರ ವಿಶ್ರಾಂತ ಭಾರತದಿಂದ ಜನರ ಮನಸ್ಸು ವಿಶ್ವಾಸ ಭಾರತದ ಕಡೆಗೆ ಪರಿವರ್ತನೆಗೊಳ್ಳಲು ಭಾರತೀಯ ಜನಮನದಲ್ಲಿ ರಾಷ್ಟ್ರದ ಸ್ವಾಭಿಮಾನ ಮೂಡಲು ನಾಡು, ನುಡಿ ಹಾಗೂ ಪ್ರಾಂತೀಯ ಭಾಷೆ ಇವುಗಳಿಗೆ ಮಹತ್ವ ಬರುವಂತಾಯಿತು.

ಆಂಗ್ಲರು ಭಾರತವನ್ನಾಳುವ ಪೂರ್ವದಲ್ಲಿ ರಾಷ್ಟ್ರ ಭಾರತದಲ್ಲಿ ಪ್ರಾಂತ್ಯಗಳ ಅಸ್ತಿತ್ವ ಎಂದಿನಂತೆ ನಡೆದುಕೊಂಡು ಬರುವಂತಾಗಿತ್ತು. ಆಗ ನಮ್ಮ ನಾಡು, ನಮ್ಮ ನುಡಿ ಇವುಗಳಿಗಾಗಿ ಚಳವಳಿಯನ್ನು ನಡೆಸುವಂತಹ ಅಗತ್ಯವಿರಲಿಲ್ಲ. ಆಳುವ ಪ್ರಭುಗಳು ಸ್ವದೇಶಿಯರಾದುದರಿಂದ ಅವರು ಪ್ರಜೆಗಳ ಮನೋಭಾವವನ್ನರಿತು ತಮ್ಮ ಅಧಿಕಾರವನ್ನು ನಡೆಸಿಕೊಂಡು ಬಂದರು. ಮುಂದೆ ರಾಷ್ಟ್ರ ಭಾರತದಲ್ಲಿ ಬ್ರಿಟಿಷರ ಆಡಳಿತ ಪ್ರಾರಂಭವಾದಾಗ ಪರಕೀಯರ ನಡೆ ನುಡಿಗಳ ಹೇರಿಕೆಯನ್ನು ಸಹಿಸದ ಭಾರತೀಯರು ತಮ್ಮ ನಾಡು ನುಡಿಗಳ ರಕ್ಷಣೆಗಾಗಿ ಹಾಗೂ ಭಾರತದ ಸ್ವಾತಂತ್ರ್ಯಕ್ಕಾಗಿ ತಮ್ಮ ತ್ಯಾಗ ಬಲಿದಾನಗಳಿಂದ ಈ ರಾಷ್ಟ್ರವನ್ನು ದಾಸ್ಯದಿಂದ ವಿಮೋಚನೆಗೊಳಿಸಲು ಕಂಕಣಬದ್ಧರಾದರು. ಈ ಕಾರಣದಿಂದಲೇ ಭಾರತದ ಸ್ವಾತಂತ್ರ್ಯದ ಇತಿಹಾಸದೊಂದಿಗೆ ಭಾಷಾವಾರು ಪ್ರಾಂತ ರಚನೆಗಳ ಇತಿಹಾಸವಾದರೂ ಸಹ ಹಾಸುಹೊಕ್ಕಾಗಿ ಬೆಳೆದು ಬಂದುದನ್ನು ಅಭ್ಯಾಸದಿಂದ ನಾವು ಕಾಣಬಹುದು. ಆದುದರಿಂದಲೇ ಕರ್ನಾಟಕದ ಏಕೀಕರಣದ ಇತಿಹಾಸವೆಂದರೆ, ರಾಷ್ಟ್ರ ಭಾರತದ ಸ್ವಾತಂತ್ರ್ಯ ಇತಿಹಾಸ, ರಾಷ್ಟ್ರ ಭಾರತದ ಸ್ವಾತಂತ್ರ್ಯ ಇತಿಹಾಸವೆಂದರೆ ಕರ್ನಾಟಕ ಏಕೀಕರಣದ ಇತಿಹಾಸ ಎಂದು ನಾವು ಹೇಳಬಹುದು.

ವಿದೇಶೀಯರಾದ ಆಂಗ್ಲರು, ಭಾರತದ ಒಂದೊಂದೇ ಭಾಗಗಳನ್ನು ಸ್ವಾಧೀನಪಡಿಸಿಕೊಳ್ಳಲು ಹೋದಂತೆಯೇ ಅವರು ತಮಗನುಕೂಲವಾದ ರೀತಿಯಲ್ಲಿ ರಾಜ್ಯಾಡಳಿತವನ್ನು ಗೊತ್ತುಪಡಿಸಲಾರಂಭಿಸಿದರು. ಆದುದರಿಂದ ಪ್ರಾಂತೀಯ ಭಾಷೆ, ಸಂಸ್ಕೃತಿ, ಸಾಹಿತ್ಯ ಇವುಗಳ ಮೇಲೆ ವಿಲಕ್ಷಣವಾದ ದುಷ್ಪರಿಣಾಮ ಕಾಣಬರತೊಡಗಿತು. ಅವರು ಒಂದೇ ಪ್ರಾಂತ್ಯದ ಒಂದೇ ಭಾಷೆಯ ಭಾಗಗಳನ್ನು ಇಬ್ಬಗೆಯಾಗಿ ವಿಂಗಡಿಸಿ ಒಂದನ್ನು ಮದ್ರಾಸ್ ಪ್ರಾಂತಕ್ಕೆ ಸೇರಿಸಿದರೆ, ಇನ್ನೊಂದನ್ನು ಮುಂಬೈ ಪ್ರಾಂತಕ್ಕೆ ಕೂಡಿಸಿದರು. ಹೀಗೆ ಮಾಡಲು ಬಲವತ್ತರವಾದ ಕಾರಣವಿತ್ತು. ಒಂದು ಭಾಷೆಯ ಜನ ಒಂದೇ ಕಡೆಯಲ್ಲಿ ಮಿಳಿತರಾದರೆ ಅದರಿಂದ ತಮ್ಮ ಅಸ್ತಿತ್ವಕ್ಕೆ ಹಾನಿಯಾಗಬಹುದೆಂಬ ಸಂಶಯ ಅವರ ಮನಸನ್ನಾವರಿಸಿತ್ತು. ಆದುದರಿಂದ ಸಂಪದ್ಭರಿತವಾದ ಪ್ರಾಂತ್ಯಗಳು ಈ ವಿದೇಶೀಯರ ಕೈವಾಡದಿಂದಾಗಿ ನಾನಾ ಬಗೆಯಾಗಿ ಹಂಚಿಹೋಗುವಂತಾದವು. ಈ ವಿಷಯವನ್ನು ಮನದಟ್ಟು ಮಾಡಿಕೊಂಡ ನಮ್ಮ ಹಿರಿಯರು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನಾರಂಭಿಸಿದಾಗ ಗ್ರಾಮೀಣ ಜನತೆಗೆ ಈ ಹೋರಾಟದ ಸತ್ವ ಹಾಗೂ ತತ್ವಗಳ ಅರಿವಾಗಬೇಕೆಂಬ ಮಹೋದ್ದೇಶದಿಂದ ಪ್ರಾಂತೀಯ ಭಾಷೆಗಳನ್ನೇ ತಮ್ಮ ಪ್ರಚಾರ ಮಾಧ್ಯಮವನ್ನಾಗಿ ಬಳಸಿಕೊಳ್ಳಲಾರಂಭಿಸಿದರು. ಹೀಗೆ ಹರಿದು ಹಂಚಿಹೋಗಿದ್ದ ಒಂದು ಪ್ರಾಂತ್ಯವನ್ನು ಒಕ್ಕೂಡಿಸಲು ಮಾಡಿದ ಪ್ರಯತ್ನವನ್ನೇ 'ಕರ್ನಾಟಕ ಏಕೀಕರಣ' ಎಂದು ಕರೆಯಲಾರಂಭಿಸಿದರು.

ಒಂದು ಕಾಲದಲ್ಲಿ ನಮ್ಮ ಈ ನಾಡನ್ನು ಕರುನಾಡು, ಕರಿಯನಾಡು, ಕನ್ನಾಡು, ಎತ್ತರವಾದ ನಾಡು ಎಂಬೆಲ್ಲ ಹೆಸರುಗಳಿಂದ ಕರೆದಿರುವುದುಂಟು. ಸಂಸ್ಕೃತದ ಉದ್ದಾಮ ಕವಿಯಾದ ವೆಂಕಟಾಧ್ವರಿಯು ಕರ್ಣಯೋಃ ..ಅಟತಿ ಇತಿ ಕರ್ನಾಟಃ ಎಂದು ಹೇಳಿ ಇದನ್ನು ಕೀರ್ತಿಶಾಲಿಯಾದ ದೇಶವೆಂದು ವರ್ಣಿಸಿದ 'ಕಮ್ಮಿತುನಾಡು' ಎಂದರೆ ಸುವಾಸನೆಯಿಂದ ಕೂಡಿದ ಪ್ರದೇಶವೆಂದೂ ಇದನ್ನು ಕರೆದಿರುವುದುಂಟು. ಭಾರತೀಯರ ಮನದಲ್ಲೇ ಶ್ರೀ ರಾಮಚಂದ್ರ ಪ್ರಭುವಿಗೆ ದೊರೆತ ಗೌರವಾದರಗಳು ಈ ನಾಡಿನ ದೊರೆಯಾದ ಸುಗ್ರೀವನಿಗೂ ಲಭಿಸುವಂತಾದ ವಿಷಯ ರಾಮಾಯಣದಿಂದ ನಮಗೆ ತಿಳಿದು ಬರುವುದು. ಈ ನಾಡಿನ ಭಾಷೆಯ ಪ್ರಾಚೀನತೆಯನ್ನು ಕುರಿತು ವಿಚಾರ ಮಾಡಿದಾಗ ಎರಡನೆಯ ಶತಮಾನದ ಕಾಲದಲ್ಲಿಯೇ ಗ್ರೀಕರಲ್ಲಿ ಹಲಕೆಲವರಿಗೆ ಈ ಭಾಷೆಯ ಪರಿಚಯವಿತ್ತೆಂದು ಕಂಡು ಬರುವುದು. ಅದೇ ರೀತಿಯಾಗಿ ಕ್ರಿ. ಶ. ಎರಡರಿಂದ ನಾಲ್ಕನೆಯ ಶತಮಾನದ ವರೆಗೆ ಭಾರತದ ಕೀರ್ತಿಯನ್ನು ಪಾಶ್ಚಾತ್ಯ ದೇಶಗಳಿಗೆ ಹಬ್ಬಿಸುವಂಥ ಪ್ರಯತ್ನದಲ್ಲಿ ಈ ಕರ್ನಾಟಕವು ತನ್ನದೇ ಆದ ಮಹತ್ವಪೂರಿತವಾದ ಪಾತ್ರವನ್ನು ವಹಿಸಿತೆಂದು ತಿಳಿದುಬರುವುದು. ಕ್ರಿ. ಶ. ೧೦೯೭ರ ಸುಮಾರಿನಲ್ಲಿ ಕರ್ನಾಟಕದ ಗಂಗ ಮನೆತನದ ನಾನ್ಯದೇವ ನೇಪಾಳದ ರಾಜಮನೆತನವೊಂದಕ್ಕೆ ಸಂಸ್ಥಾಪಕನೆಂದು ಕರೆಸಿಕೊಂಡ. ಅದೇ ರೀತಿಯಾಗಿ ಬಂಗಾಳದ ಸೇನರೂ ಕೂಡಾ ಕರ್ನಾಟಕದವರೆಂಬುದು ಸರ್ವವಿದಿತ. ಆರನೆಯ ಶತಮಾನದಿಂದ ಹನ್ನೆರಡನೆಯ ಶತಮಾನದ ವರೆಗೆ ಕರ್ನಾಟಕದ ಸಂಸ್ಕೃತಿ ಭಾರತದ ಎಲ್ಲ ಪ್ರಾಂತಗಳ ಮೇಲೂ ಒಂದಿಲ್ಲೊಂದು ರೀತಿಯಿಂದ ತನ್ನ ಒಳ್ಳೆಯ ಪ್ರಭಾವವನ್ನು ಬೀರಿತೆಂಬ ಮಾತು ಇತಿಹಾಸದ ಅಭ್ಯಾಸದಿಂದ ತಿಳಿದುಬರುವುದು. ಇಂಥ ಚಾರಿತ್ರ್ಯಸಂಪನ್ನ ನಾಡು ಹಾಗೂ ಆ ನಾಡಿನ ಭಾಗಗಳು ಹರಿದು ಹಂಚಿಹೋದಾಗ ಆ ಭಾಗಗಳನ್ನೆಲ್ಲ ಒಂದುಗೂಡಿಸಲು ಮಾಡಿದ ಪ್ರಯತ್ನದ ಕಾಲಾವಧಿಯನ್ನು ಸುಮಾರು ಒಂದುನೂರು ವರ್ಷ ಎಂದು ಅಂದಾಜು ಮಾಡಬಹುದು. ಇಂದು ಒಕ್ಕೂಡಿದ ಈ ಕರ್ನಾಟಕ ರಾಜ್ಯದಲ್ಲಿ ವಿಶ್ವದ ಎಲ್ಲ ಕನ್ನಡಿಗರೂ ಒಂದುಗೂಡಿದಾಗ ಈ ಏಕೀಕರಣದ ಇತಿಹಾಸವನ್ನು ಕುರಿತು ಪುನರಾಲೋಚನೆ ಮಾಡುವುದು ಅತ್ಯಂತ ಹಿತವೆಂದು ತೋರುವುದು.

**ವಿದ್ಯಾವರ್ಧಕ ಸಂಘ**

೧೮೫೭ರ ಬಂಡಾಯದ ಅನಂತರ ಭಾರತದಲ್ಲಿ ತಮ್ಮ ಸಾರ್ವಭೌಮತ್ವ ಉಳಿದುಕೊಂಡುಬರಬೇಕಾದಲ್ಲಿ ಸ್ಥಳೀಯ ಸಂಸ್ಥಾನಿಕರ ಅಸ್ತಿತ್ವವನ್ನು ಉಳಿಸಿಕೊಂಡು ಬರುವುದು ಅಂದಿನ ಆಳರಸರಿಗೆ ಅತ್ಯಾವಶ್ಯಕ ಮಾತಾಗಿತ್ತು. ಆದುದರಿಂದ ಅವರು ಆ ಸಂಸ್ಥಾನಿಕರ ವಿತ್ತಾಪಹಾರಗಳೊಂದಿಗೆ ಗೌರವಾದರಗಳನ್ನು ರಕ್ಷಿಸಿಕೊಂಡು ಬರುವುದಾಗಿ ಅಭಯವನ್ನಿತ್ತರು. ತತ್ಪರಿಣಾಮವಾಗಿ ಕರ್ನಾಟಕ ಪ್ರಾಂತ್ಯದಲ್ಲಿ ಅದೇ ತಾನೇ ಕೊನೆಗೊಂಡ ಪೇಶ್ವೆಯರ ಆಳ್ವಿಕೆಯಿಂದಾಗಿ ಅಲ್ಲಲ್ಲಿ ಚಿಕ್ಕ ಪುಟ್ಟ ಮರಾಠ ಸಂಸ್ಥಾನಗಳು ಅಸ್ತಿತ್ವದಲ್ಲಿ ಉಳಿದುಕೊಂಡು ಬರುವಂತಾದುವು. ಇದರಿಂದಾಗಿ ಉತ್ತರ ಕನ್ನಡದ ಪ್ರಭುತ್ವದವರ ಬೆಂಬಲದಿಂದಾಗಿಯೂ ಸಂಸ್ಥಾನಿಕರ ಸಹವಾಸದಿಂದಾಗಿಯೂ ಅವರಾಡುತ್ತಿದ್ದ ಮರಾಠೀ ಭಾಷೆಗೆ ವಿಶೇಷವಾದ ಪುರಸ್ಕಾರವನ್ನೀಯುವಂತಹ ಪದ್ಧತಿ ನಡೆದುಕೊಂಡುಕೊಂಡು ಬರುವಂತಾಗಿತ್ತು. ಆದುದರಿಂದ ನಮ್ಮ ಹಿರಿಯರಿಗೆ ಆಂತರಿಕವಾಗಿ ಹಬ್ಬಿದ ಇನ್ನೊಂದು ಭಾಷೆಯ ವ್ಯಾಮೋಹವನ್ನು ದೂರ ಮಾಡುವಂತಹ ಕಾರ್ಯ ಅತ್ಯಾವಶ್ಯಕವಾಗಿತ್ತು. ಈ ಎಲ್ಲ ಕಾರಣಗಳಿಂದ ಉತ್ತರ ಕರ್ನಾಟಕದ ಗಂಡುಮೆಟ್ಟಿನ ಸ್ಥಳವೆನಿಸಿದ ಧಾರವಾಡದಲ್ಲಿ ದಿನಾಂಕ

೨೦-೭-೧೮೯೦ರಂದು ವಿದ್ಯಾವರ್ಧಕ ಸಂಘ ಎಂಬ ಹೆಸರಿನ ಸಂಸ್ಥೆಯೊಂದು ರೂಪ ತಾಳಿತು. ಅಂದಿನ ಮುಂಬೈ ಉಚ್ಚ ನ್ಯಾಯಾಲಯದ ವಕೀಲರಾಗಿದ್ದ ಕಾಯ್ಕಿಣಿ ಶಾಮರಾಯರು ಈ ಸಂಸ್ಥೆಯ ಅಥವಾ ಈ ಸಂಘದ ಮೊತ್ತಮೊದಲನೆಯ ಅಧ್ಯಕ್ಷರೆಂದೂ ಶ್ರೀ ವೆಂಕಟರಂಗೋ ಕಟ್ಟೀಯವರು ಉಪಾಧ್ಯಕ್ಷರೆಂದೂ ನಾಮ್ದಾರ್ ರಾವ್ ಗುರುಸಿದ್ದಪ್ಪ ಗಿಲಗಂಚಿ, ರಾವ್ ಸಾಹೇಬ್. ಶ್ರೀನಿವಾಸ ರೊದ್ದ, ರಾವ್ ಸಾಹೇಬ್ ರಾಮರಾವ್ ದೇಸಾಯಿ, ಶಾಂತವೀರಪ್ಪ ಮೆಣಸಿನಕಾಯಿ, ಶೇಷಗಿರಿ ರಾವ್ ಕೊಪ್ಪೀಕರ್, ಗುರಾಚಾರ್ ಮೊರಬ್, ಧೋಂಡೋ ನರಸಿಂಹ ಮುಳಬಾಗಿಲು ಇವರೇ ಮೊದಲಾದವರುಗಳೆಲ್ಲ ವ್ಯವಸ್ಥಾಪಕರೆಂದೂ ರಾವ್ ಸಾಹೇಬ್ ರಾಮಚಂದ್ರ ಹಣಮಂತ ದೇಶಪಾಂಡೆಯವರು ಗೌರವ ಕಾರ್ಯದರ್ಶಿಗಳೆಂದೂ ಆಯ್ಕೆಯಾದರು. ಅಂದಿನಿಂದಲೇ ಕನ್ನಡದ ನೆಲದಲ್ಲಿ ಭಾಷೆ. ಸಂಸ್ಕೃತಿ, ಇತಿಹಾಸ ಈ ವಿಚಾರಗಳನ್ನು ಕುರಿತು ಪ್ರಚೋದನಾತ್ಮಕವಾದ ಸಾರ್ವಜನಿಕ ಚಟುವಟಿಕೆಗಳು ಪ್ರಾರಂಭವಾದವು. ಮುಂದೆ ೧೮೯೬ರಲ್ಲಿ ಈ ಸಂಸ್ಥೆಯು ವಾಗ್ಭೂಷಣ ಎಂಬ ಹೆಸರಿನ ಮಾಸಪತ್ರಿಕೆಯನ್ನೂ ಸಹ ಪ್ರಾರಂಭಿಸಿತು. ಈ ಮಾಸಪತ್ರಿಕೆಯಲ್ಲಿಯೇ ಕುಲಪುರೋಹಿತರಾದ ಆಲೂರು ವೆಂಕಟರಾಯರು ೧೯೦೭ರಲ್ಲಿ ಕರ್ನಾಟಕವು ಒಂದಾಗದೆ ಕರ್ನಾಟಕಸ್ಥರ ಏಳಿಗೆಯು ಎಂದಿಗೂ ಸಾಧ್ಯವಾಗದು ಎಂಬ ತಮ್ಮ ಧೀರೋದಾತ್ತವಾದ ವಿಚಾರವನ್ನು ಲೇಖನ ರೂಪದಲ್ಲಿ ಪ್ರಕಟಿಸಿದರು. ಅವರ ಈ ಲೇಖನವೇ ಮುಂದೆ ಕರ್ನಾಟಕ ಏಕೀಕರಣದ ಬೀಜಮಂತ್ರವಾಗಿ ಪರಿಣಮಿಸುವಂತಾಯಿತು.

### ಕಾಂಗ್ರೆಸ್ ಮತ್ತು ಏಕೀಕರಣ

೧೯೦೫ರಲ್ಲಿ ಸ್ವದೇಶೀ ಚಳವಳಿ ಪ್ರಾರಂಭವಾದಾಗ ಅಖಿಲಭಾರತ ಕಾಂಗ್ರೆಸ್ಸಿನಲ್ಲಿ ಕರ್ನಾಟಕಕ್ಕೆ ವಿಶೇಷ ಪ್ರಾತಿನಿಧ್ಯವು ದೊರೆಯಬೇಕೆಂಬ ಹೋರಾಟ ಪ್ರಾರಂಭವಾಯಿತು. ಈ ಹೋರಾಟಕ್ಕೆ ೨೧-೯-೧೯೩೭ರಲ್ಲಿ ಮಹಾತ್ಮಾ ಗಾಂಧೀ ಅವರಿಂದ ಆಶೀರ್ವಾದ ಲಭಿಸಿತು. ಮುಂದೆ ನಾಗಪುರ ಅಧಿವೇಶನದಲ್ಲಿ ಕರ್ನಾಟಕ ರಾಜಕೀಯ ಪರಿಷತ್ತು ಹಾಗೂ ಏಕೀಕರಣದ ಚಟುವಟಿಕೆಗೆ ಮಾನ್ಯತೆ ಲಭಿಸುವಂತಾಯಿತು. ಭಾಷಾವಾರು ಪ್ರಾಂತ ರಚನೆಗಳಿಗೆ ಅಖಿಲ ಭಾರತ ಕಾಂಗ್ರೆಸ್ ತನ್ನ ಒಪ್ಪಿಗೆಯನ್ನು ಸೂಚಿಸಿದಾಗಲೂ ಆ ಸೂಚನೆಯನ್ನು ಕಾರ್ಯರೂಪಕ್ಕೆ ತರಲು ಆಗಾಗ ಅನೇಕ ತೊಡಕುಗಳು ಕಾಣಬರತೊಡಗಿದವು. ಭಾಷಾನ್ವಯ ಪ್ರಾಂತ್ಯ ರಚನೆಗಳಿಗಾಗಿ ಮುಂಬೈ ಹಾಗೂ ಮದ್ರಾಸ್ ಪ್ರಾಂತ್ಯಗಳ ವಿಧಿಮಂಡಲಗಳು ೧೯೩೮ರ ಸುಮಾರಿನಲ್ಲಿ ಒಮ್ಮತದ ನಿರ್ಣಯವನ್ನು ತೆಗೆದುಕೊಂಡವು. ಇದರಿಂದಾಗಿ ರಾಷ್ಟ್ರೀಯ ಕಾಂಗ್ರೆಸ್ ಸಮಿತಿಗೆ ನಿಶ್ಚಿತವಾದ ಧೋರಣೆ ಮೂಡಿಬರುವಂತಾಯಿತು.

ಮಹಾತ್ಮಾ ಗಾಂಧೀಜೀಯವರು ೨೫-೧-೧೯೪೮ರಂದು ತಾವು ಕರ್ನಾಟಕ ಪ್ರಾಂತ್ಯ ರಚನೆಯ ವಿಚಾರವನ್ನು ಮನಸಾ ಒಪ್ಪಿರುವುದಾಗಿ ಘೋಷಿಸಿ ಪ್ರಾಂತೀಯ ಭಾಷೆಗಳು ಬೆಳೆದು ಪರಿಪೂರ್ಣ ಅವಸ್ಥೆಯನ್ನು ಹೊಂದಬೇಕಾದಲ್ಲಿ ಭಾಷಾನ್ವಯ ತಳಹದಿಯ ಮೇಲೆಯೇ ಆ ಪ್ರಾಂತ್ಯಗಳನ್ನು ಪುನರ್ವಿಂಗಡಿಸುವುದು ಅತ್ಯಾವಶ್ಯಕ ಎಂಬ ಮಾತನ್ನು ಸ್ಪಷ್ಟಪಡಿಸಿದರು. ಆದರೆ, ಹಿಂದಿ ಪ್ರಾಂತೀಯ ಭಾಷೆಯ ಸ್ಥಾನವನ್ನು ಎಂದೂ ಆಕ್ರಮಿಸಕೂಡದು. ಹಿಂದೂಸ್ಥಾನಿಯು ಪ್ರಾಂತ್ಯಗಳಲ್ಲಿ ಶಿಕ್ಷಣ ಮಾಧ್ಯಮವಾಗಲಾರದು. ಎಲ್ಲ ಪ್ರಾಂತ್ಯಗಳು ಭಾರತದೊಡನೆ ಪರಸ್ಪರ ನಿಕಟವಾದ ಸಂಬಂಧವನ್ನು ಹೊಂದಿವೆ ಎಂದು ತೋರಿಸಿಕೊಡುವುದಕ್ಕಾಗಿ ಹಿಂದೀ ಭಾಷೆ ಅತ್ಯಾವಶ್ಯಕ ಎಂಬ ಮಾತನ್ನು ಅವರು ಸ್ಪಷ್ಟಪಡಿಸಿದರು.

### ಕರ್ನಾಟಕ ಸಾಹಿತ್ಯ ಪರಿಷತ್ತು

ಕನ್ನಡ ನಾಡಿನ ಶ್ರೇಯೋಭಿವೃದ್ಧಿಗಾಗಿ ಜನ್ಮತಾಳಿದ ವಿದ್ಯಾವರ್ಧಕ ಸಂಘದ ೧೧-೩-೧೯೦೦ರಲ್ಲಿ ನಡೆದ ವಾರ್ಷಿಕ ಸಭೆಗೆ ಮೈಸೂರು ಸರಕಾರದವರು ಎಂ. ಬಿ. ಶ್ರೀನಿವಾಸ ಅಯ್ಯಂಗಾರ್ ಇವರನ್ನು ಪ್ರತಿನಿಧಿಯಾಗಿ ಕಳುಹಿಸಿದರು. ಈ ಸಂಘ ಕನ್ನಡ ನಾಡಿನ ಗ್ರಂಥಕರ್ತರ ದ್ವಿತೀಯ ಸಮ್ಮೇಳನವೊಂದನ್ನು ಬೆಂಗಳೂರಿನಲ್ಲಿ ನಡೆಸುವ ಪ್ರಯತ್ನವನ್ನು ಮಾಡಿತು. ಅಂದಿನ ವಿದ್ಯಾ ಇಲಾಖೆಯವರಿಗೆ ಈ ಪ್ರಯತ್ನವು ರಾಜಕೀಯಪೂರಿತ ಎಂದು ಕಂಡುಬಂದುದರಿಂದ ಅದನ್ನು ಧಾರವಾಡದಲ್ಲಿಯೇ ನಡೆಸಲಾಯಿತು. ಹೀಗಿದ್ದರೂ ಕನ್ನಡಾಭಿಮಾನಿಗಳ ಬೆಂಬಲದಿಂದಾಗಿ ಬೆಂಗಳೂರಿನಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತು ಎಂಬ ಸಂಸ್ಥೆ ರೂಪುಗೊಳ್ಳುವಂತಾಯಿತು. ಇದಾದ ನಂತರ ೧೯೧೫ರಲ್ಲಿ ಕರ್ನಾಟಕದ ಸಾಹಿತಿಗಳ ಮೊತ್ತಮೊದಲನೆಯ ಸಭೆಯು ಹಾಸನದಲ್ಲಿಯೇ ನಡೆಯಿತು. ಹೀಗೆ ನಾಡಿನ ನಾನಾ ಭಾಗಗಳಿಂದ ಒಂದುಗೂಡಿದ ಸಾಹಿತಿಗಳ ಈ ಸಭೆ ಕರ್ನಾಟಕದ ಇತಿಹಾಸದಲ್ಲಿ ಮೊತ್ತಮೊದಲನೆಯದು ಎಂದು ಕರೆಸಿಕೊಳ್ಳುವಂತಾಯಿತು. ಈ ಕನ್ನಡ ಸಾಹಿತಿಗಳ ಸಮ್ಮೇಳನದಲ್ಲಿಯೇ ಅಖಿಲ ಕರ್ನಾಟಕ ಸಾಹಿತ್ಯ ಪರಿಷತ್ತು ಎಂಬ ಸಂಸ್ಥೆ ಬೆಂಗಳೂರಿನಲ್ಲಿ ಸ್ಥಾಪಿಸಬೇಕೆಂಬ ಗೊತ್ತುವಳಿಯು ಸ್ವೀಕೃತವಾಯಿತು. ರಾಜಕೀಯ ದೃಷ್ಟಿಯಿಂದ ಕರ್ನಾಟಕದ ಮೈಸೂರೇತರ ಭಾಗಗಳಲ್ಲಿ ೧೯೦೫ ಹಾಗೂ ೧೯೦೭ರ ಈ ಹೆಚ್ಚಿನ ಜಾಗೃತಿ ಆದಂತೆ ಕಾಣಬರತೊಡಗಿತು. ೧೯೧೫ರ ಸುಮಾರಿನಲ್ಲಿ ಅಖಿಲ ಭಾರತ ವ್ಯಾಪ್ತಿಯನ್ನೊಳಗೊಂಡ ಹೋಂ ರೂಲ್ ಚಳವಳಿಯ ಕಾಲಕ್ಕೆ ಉತ್ತರ ಕರ್ನಾಟಕದಲ್ಲಿ ವಿಶೇಷವಾದ ಕಾರ್ಯಚಟುವಟಿಕೆಗಳು ನಡೆದು ಕನ್ನಡ ಭಾಷೆಯ ಮೂಲಕ ಜನಜಾಗೃತಿಯ ಕಾರ್ಯವು ಬಲಗೊಳ್ಳುವಂತಾಯಿತು.

### ರಾಜ್ಯ ಪುನರ್ರಚನಾ ಆಯೋಗ

ಕರ್ನಾಟಕದ ಸಂಸ್ಥಾನಿಕರಲ್ಲಿ ಸೊಂಡೂರಿನ ಅರಸುಮನೆತನದವರು ೧೯೪೭ರಲ್ಲಿ ಕರ್ನಾಟಕ ಏಕೀಕರಣಕ್ಕಾಗಿ ತಮ್ಮ ಬೆಂಬಲವನ್ನು ಸೂಚಿಸಿದರು. ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯ ವತಿಯಿಂದ ೧೯೪೮ರಲ್ಲಿ ಧಾರ್ ಸಮಿತಿ ರೂಪ ತಾಳಿತು. ೧೯೫೧ರಲ್ಲಿ ಬೆಂಗಳೂರು ಮಹಾನಗರದಲ್ಲಿ ಪ್ರಾಂತ ರಚನೆಗಾಗಿ ಸಮ್ಮೇಳನವನ್ನು ಕರೆಯಲಾಯಿತು. ೧೯೫೩ರಲ್ಲಿ ಕೇಳ್ಕರ್ ಸಮಿತಿ ಹಾಗೂ ವಾಂಛೂ ವರದಿಗಳು ಪ್ರಕಟಗೊಂಡವು. ೧೯೫೪ರಲ್ಲಿ ರಾಜ್ಯ ಪುನರ್ರಚನಾ ಆಯೋಗ ನಾಡಿನ ತುಂಬೆಲ್ಲ ತನ್ನ ಸಂಚಾರವನ್ನಾರಂಭಿಸಿತು. ತತ್ಪೂರ್ವದಲ್ಲಿ ಸೈಮನ್ ಸಮಿತಿ, ಆಟ್ಲೀವರದಿ, ಪಟೇಲರ ಆಶ್ವಾಸನೆ, ಖೇರರಬೆಂಬಲ ಮೊದಲಾದವುಗಳಿಂದ ಈ ಪ್ರಾಂತ ರಚನಾ ಕಾರ್ಯಕ್ಕೆ ವಿಶೇಷವಾದ ಬೆಂಬಲವು ದೊರೆಯುವಂತಾಯಿತು. ೧೯೫೫ರಲ್ಲಿ ಶೇಷಾದ್ರಿ ಸಮಿತಿ ತನ್ನ ವರದಿಯನ್ನು ಒಪ್ಪಿಸಿತು.

ಕರ್ನಾಟಕದ ಶಿಷ್ಟ ಮಂಡಲವು ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ಎಸ್.ನಿಜಲಿಂಗಪ್ಪನವರ ಧುರೀಣತ್ವದಲ್ಲಿ ೧೪.೯.೧೯೫೩ರಂದು ಪ್ರಧಾನಮಂತ್ರಿಗಳನ್ನು ಕಂಡು ಕರ್ನಾಟಕದ ಘಟನೆಗಳನ್ನು ಸಂಪೂರ್ಣವಾಗಿ ವಿವರಿಸಿದರು. ಆಗ ಪಂಡಿತ ಜವಾಹರಲಾಲ್ ನೆಹರೂ ಅವರು "ನಾನು

ಕರ್ನಾಟಕದ ಈ ಬೇಡಿಕೆಯನ್ನು ಸಂಪೂರ್ಣವಾಗಿ ಒಪ್ಪಿಕೊಂಡಿದ್ದೇನೆ. ಇದಕ್ಕೆ ಮೂರ್ತಸ್ವರೂಪವನ್ನು ಹೇಗೆ ಕೊಡಬೇಕೆಂಬುದೇ ಮುಖ್ಯ ಸಮಸ್ಯೆಯಾಗಿದೆ. ಮೈಸೂರು ಸಂಸ್ಥಾನದಿಂದ ಈ ವಿಷಯದಲ್ಲಿ ಹೆಚ್ಚಿನ ತೊಂದರೆಯಾಗದಂತೆ ನೋಡಿಕೊಳ್ಳುವುದು ಅತ್ಯಾವಶ್ಯಕವಿದೆ" ಎಂದು ಸೂಚಿಸಿದರು.

ಒಂದು ಕಾಲದಲ್ಲಿ ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿದ ಈ ನಾಡು ಕಾಲನ ಪ್ರಭಾವದಿಂದಾಗಿ ದಿನಗಳೆದಂತೆಲ್ಲ ತನ್ನ ಬಲವನ್ನು ಕಳೆದುಕೊಳ್ಳುತ್ತಾ ಮುಂದೆ ಅದು ಮುಂಬೈ ಪ್ರಾಂತ, ಮದ್ರಾಸ್ ಪ್ರಾಂತ, ಕೊಡಗು ಪ್ರಾಂತ ಎಂಬ ಮೂರು ಪ್ರಾಂತಗಳಲ್ಲಿಯೂ, ಮೈಸೂರು, ಹೈದರಾಬಾದ್, ಕೊಲ್ಲಾಪುರ, ಸಾಂಗ್ಲಿ, ಮಿರ್ಜಿ (ಹಿರಿ) ಮಿರ್ಜಿ (ಕಿರಿ), ಕುರಂದ್ವಾಡ್ (ಹಿರಿ), ಜಮಖಂಡಿ, ಮುಧೋಳ್, ರಾಮದುರ್ಗ, ಜತ್, ಅಕ್ಕಲಕೋಟೆ, ಔಂದ್, ಸವಣೂರು, ಸೊಂಡೂರು, ಮೊದಲಾದ ಸಂಸ್ಥಾನಗಳ ಭಾಗವಾಗಿ ವಿಂಗಡಿಸಲ್ಪಟ್ಟಿತ್ತು. ಈ ಎಲ್ಲ ಭಾಗಗಳನ್ನೂ ಒಂದುಗೂಡಿಸುವಾಗ ಅನೇಕ ಸಮಸ್ಯೆಗಳು ಉದ್ಭವವಾದವು. ಬಳ್ಳಾರಿಯ ವಿಷಯದಲ್ಲಿಯೂ, ಕೋಲಾರದ ವಿಷಯದಲ್ಲಿಯೂ, ಕಾಣಿಸಿಕೊಂಡ ಸಮಸ್ಯೆಗಳನ್ನು ನಿವಾರಿಸಿಕೊಳ್ಳುವಲ್ಲಿ ಸಾಕಷ್ಟು ಪರಿಶ್ರಮವನ್ನು ನಮ್ಮ ಧುರೀಣರು ವಹಿಸಬೇಕಾಯಿತು. ಅಂದಿನ ಮೈಸೂರು ಸಂಸ್ಥಾನದ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರು ಕರ್ನಾಟಕ ಏಕೀಕರಣದ ವಿಷಯದಲ್ಲಿ ಧೀರೋದಾತ್ತ ನಿಲುವನ್ನು ತಾಳಿದರು. ಅಂದು ಹನುಮಂತಯ್ಯನವರು ಹೇಳಿದ ಈ ಮಾತುಗಳು ಅವರ ಹೃದ್ಗತವನ್ನು ಸ್ಪಷ್ಟವಾಗಿ ಕನ್ನಡಿಗರ ಮುಂದೆ ಅಚ್ಚಳಿಯದೆ ಉಳಿದು ಬರುವಂತಹ ವಿಚಾರಗಳಾಗಿರುವುವು:

"ಐತಿಹಾಸಿಕ ಕಾರಣಗಳು ಮೈಸೂರು ಸಂಸ್ಥಾನವನ್ನು ವಿಶಾಲಗೊಳಿಸುತ್ತಿವೆ. ಪಕ್ಕದ ಪ್ರದೇಶದಲ್ಲಿಯ ಜನರು ಸ್ವಯಂಪ್ರೇರಣೆಯಿಂದ ಮೈಸೂರು ಸಂಸ್ಥಾನದಲ್ಲಿ ಸೇರ್ಪಡೆ ಹೊಂದಲು ಆತುರರಾಗಿದ್ದಾರೆ. ಅವರೆಲ್ಲರನ್ನೂ ನಾವು ಅವರಾಡುವ ಭಾಷೆಯನ್ನು ಗಮನಿಸದೆಯೇ ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇವೆ. ಹೇಗಿದ್ದರೂ ನಾವೆಲ್ಲ ಭಾರತವೆಂಬ ಒಂದೇ ಮಾತೃಭೂಮಿಯ ನಾಗರಿಕರಾಗಿದ್ದೇವೆ. ಅವರನ್ನು ಸ್ವಾಗತಿಸದಿರುವುದು ಸಾಧುವಲ್ಲ. ನಮ್ಮ ದೇಶಬಾಂಧವರು ಒಳಕ್ಕೆ ಬಾರದಂತೆ ನಾವು ಬಾಗಿಲನ್ನು ಮುಚ್ಚಿಕೊಳ್ಳುವುದೆಂದರೆ ದೇಶಪ್ರೇಮ ಮತ್ತು ಭ್ರಾತೃಪ್ರೇಮಗಳಿಗೆ ಮಿತಿಯನ್ನು ಹಾಕಿಕೊಂಡಂತೆ." ಎಂದು ಹೇಳಿದ ಅವರ ಮಾತುಗಳು ಒಂದು ಮಹಾನ್ ಪ್ರಯತ್ನಕ್ಕೆ ಅವರು ಮಾಡಿದ ಪ್ರಯತ್ನದ ಸಾಕ್ಷಿಯಾಗಿ ಉಳಿದುಕೊಂಡು ಬರುವಂತಾದವು.

**ವಿಶಾಲ ಕರ್ನಾಟಕ**

ರಾಷ್ಟ್ರೀಯ ಕಾಂಗ್ರೆಸ್ ಈ ಪುನರ್ರಚನಾ ಆಯೋಗದ ವರದಿಯನ್ನು ಮುಕ್ತ ಮನಸ್ಸಿನಿಂದ ಒಪ್ಪಿಕೊಂಡಾಗಲೂ ಮೈಸೂರು ಸಂಸ್ಥಾನದ ಹಲಕೆಲವರಲ್ಲಿ ಏಕೀಕರಣದ ಪ್ರಯತ್ನಕ್ಕೆ ವಿರೋಧವಿದ್ದಿತು. ಕೆಲವರು ಎರಡು ಕರ್ನಾಟಕವಾಗಲೆಂದು ಆಯೋಗಕ್ಕೆ ತಮ್ಮ ವರದಿಯನ್ನೊಪ್ಪಿಸಿದರು. ಹಳೆಯ ಮೈಸೂರು ಸಂಸ್ಥಾನ ಅತ್ಯಂತ ಪ್ರಗತಿಪರವಾದ ಪ್ರಾಂತವೆಂದು ಅವರ ಭ್ರಮೆಯಾಗಿತ್ತು. ಮತ್ತೆ ಕೆಲವರು ನಾಲ್ಕು ಕರ್ನಾಟಕವಾಗಬೇಕೆಂಬ ವಾದವನ್ನೂ ಮಂಡಿಸಿದರು. ಆದರೆ, ನಿಜಾಂ ಕರ್ನಾಟಕದ ಮುಖಂಡರು ಮಾತ್ರ ಜನಾರ್ದನ ರಾವ್ ದೇಸಾಯಿ, ಜಿ.ಎಸ್. ಮೇಲುಕೋಟೆ, ಚಂದ್ರಶೇಖರ ಪಾಟೀಲ ರಾ. ಗೋ. ಜಾಗಿರ್ದಾರ್, ಕೃಷ್ಣಾಚಾರ್ ಜೋಷಿ ಮೊದಲಾದವರ ಹಿರಿತನದಲ್ಲಿ ಏಕೀಕೃತ ಕರ್ನಾಟಕಕ್ಕೆ ಬೆಂಬಲ ಸೂಚಿಸಿದರು. ಇದೇ ರೀತಿಯಾಗಿ ಆಕರಾನೀ ನಿಯೋಗದವರೂ ತಮ್ಮ ಬೇಡಿಕೆಗಾಗಿ ಹತ್ತುಸಾವಿರ ಸಹಿಗಳನ್ನು ಸಂಗ್ರಹಿಸಿ ಆಯೋಗದವರಿಗೆ ಒಪ್ಪಿಸಿದರು. ಕುಲಪುರೋಹಿತರಾದ ಆಲೂರು ವೆಂಕಟರಾಯರನ್ನು ಆಯೋಗ ಆದರದಿಂದ ಕಂಡು ಇತಿಹಾಸಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಅವರೊಂದಿಗೆ ಚರ್ಚೆಮಾಡಿತ್ತು. ಹೀಗೆ ಅನೇಕ ರೀತಿಯ ಹೋರಾಟದಿಂದಾಗಿ ಕೊನೆಗೊಮ್ಮೆ ೩೦.೯.೧೯೫೫ರಂದು ಭಾರತ ಸರಕಾರ ಆಯೋಗದ ವರದಿಯನ್ನು ಸಂಪೂರ್ಣವಾಗಿ ಅವಲೋಕಿಸಿದ ನಂತರ ೧.೧೧.೧೯೫೬ರಂದು ಮೈಸೂರು ರಾಜ್ಯ ಎಂಬ ಹೆಸರು ಪಡೆದ ಕರ್ನಾಟಕವು ರೂಪುಗೊಳ್ಳುವಂತಾಯಿತು. ಅದರಲ್ಲಿ ಈಗಿನ ಮೈಸೂರು ರಾಜ್ಯ, ಮುಂಬೈ ರಾಜ್ಯದ (ಚಂದಗಢ ತಾಲ್ಲೂಕಿನ ಹೊರತಾಗಿ) ಇಡೀ ಬೆಳಗಾವಿ ಜಿಲ್ಲೆ, ವಿಜಾಪುರ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳು, ಹೈದರಾಬಾದ್ ರಾಜ್ಯದ ಗುಲ್ಬರ್ಗಾ ಜಿಲ್ಲೆಗೆ ಸೇರಿದ (ಕೋಡಂಗಲ್ ಹಾಗೂ ತಾಂಡೂರು ತಾಲೂಕುಗಳನ್ನು ಬಿಟ್ಟು) ರಾಯಚೂರು ಜಿಲ್ಲೆ (ಅಲಂಪೂರ್, ಗದ್ವಾಲ್ ತಾಲ್ಲೂಕುಗಳನ್ನು ಬಿಟ್ಟು), ಬೀದರ್ ಜಿಲ್ಲೆಯ ಬೀದರ್, ಭಾಲ್ಕಿ, ಸಂತಪೂರ್, ಹುಮ್ನಾಬಾದ್ ತಾಲ್ಲೂಕುಗಳು ಮದರಾಸ್ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆ, (ಕಾಸರಗೋಡು ತಾಲ್ಲೂಕು, ಅಮೀನ ದ್ವೀಪಗಳನ್ನು ಬಿಟ್ಟು) ಕೊಯಮತ್ತೂರು ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕು ಹಾಗೂ, ಈಗಿನ ಕೊಡಗು ರಾಜ್ಯ ಈ ಪ್ರದೇಶಗಳನ್ನೊಳಗೊಂಡ ಹೊಸ ಮೈಸೂರು ರಾಜ್ಯ ರೂಪಿತವಾಗುವಂತಹ ವರದಿ ೧೬.೭.೧೯೫೬ ರಂದು ಲೋಕಸಭೆಗೆ ಒಪ್ಪಿಸಲ್ಪಟ್ಟಿತು. ಈ ಹೊಸ ಮೈಸೂರಿಗೆ 'ಕರ್ನಾಟಕ' ಎಂಬ ಹೆಸರಿಡಬೇಕೆಂದು ಪರಿಶೀಲನ ಸಮಿತಿಯ ಸದಸ್ಯರಾದ ಶ್ರೀ ಕಮಲಕುಮಾರ ಬಸು ಮತ್ತು ಜಿ.ವಿ.ಕೆ.ವಲ್ಲಭರಾವ್ ತಮ್ಮ ಮತವನ್ನು ಸೂಚಿಸಿದ್ದರು. ಪುನರ್ವಿಮರ್ಶಿತ ವಿಧೇಯಕ ೧೮.೮.೧೯೫೬ರಂದು ಸುದೀರ್ಘ ಚರ್ಚೆಯೊಂದಿಗೆ ಸ್ವೀಕರಿಸಲ್ಪಟ್ಟಿತು. ರಾಜ್ಯಸಭೆ ೨೫.೮.೧೯೫೬ ರಂದು ವಿಧೇಯಕಕ್ಕೆ ತನ್ನ ಒಪ್ಪಿಗೆಯನ್ನು ಕೊಟ್ಟಿತು.

ಹೀಗೆ ಹೊಸದಾಗಿ ರೂಪಿತವಾದ ನವಮೈಸೂರು ರಾಜ್ಯದಲ್ಲಿ ಅಚ್ಚಕನ್ನಡ ಪ್ರದೇಶಗಳಾದ ಕಾಸರಗೋಡು, ಆಲೂರು, ಆದವಾನಿ, ರಾಯದುರ್ಗ, ಮಡಕಶಿರಾ, ಸೋಲಾಪುರದ ಕೆಲವು ಭಾಗಗಳು, ಜತ್ ಸಂಸ್ಥಾನದ ಕೆಲವು ಪ್ರದೇಶಗಳು ನಮಗೆ ಬಾರದೆ ಪುನರ್ರಚನೆಯ ವಿಧೇಯಕ ೩೦.೮.೧೯೫೬ರಂದು ರಾಷ್ಟ್ರಪತಿಗಳ ಅಂಕಿತವನ್ನು ಪಡೆಯುವಂತಾಯಿತು.

ಹರಿದು ಹಂಚಿಹೋಗಿದ್ದ ನಾಡು ಒಂದುಗೂಡಿದಾಗ ಕುಲಪುರೋಹಿತರಾದ ಆಲೂರು ವೆಂಕಟರಾಯರು ತಮ್ಮ ಒಂದು ಸಂದೇಶದಲ್ಲಿ ಈ ರೀತಿಯಾಗಿ ಹೇಳಿದರು: "ಹೊಸದಾಗಿ ಕಟ್ಟಲ್ಪಟ್ಟ ಈ ಕರ್ನಾಟಕ ರಾಜ್ಯವು ಕೇವಲ ಜನತೆಯು ಜನತೆಗಾಗಿ ಕಟ್ಟಿದ ರಾಜ್ಯ. ಇದು ಅಹಿಂಸಾತ್ಮಕವಾಗಿ ಕಟ್ಟಲ್ಪಟ್ಟಿದ್ದು. ಜನತೆ ತನ್ನ ಕಲ್ಪನಾವಿಲಾಸದಿಂದ ಕಟ್ಟಿದ ರಾಜ್ಯ. ಗತವೈಭವದ ಯುಗ ಮುಗಿಯಿತು. ಭಾವೀ ವೈಭವವು ಬರಬೇಕಾಗಿದೆ. ಅದನ್ನು ಈಗಿನ ಪೀಳಿಗೆಯವರು ತಮ್ಮ ಸ್ವಂತ ಪರಿಶ್ರಮದಿಂದ ತರಬೇಕಾಗಿದೆ. "ಈಗ ಮೈಸೂರು ರಾಜ್ಯ ಎಂದು ತಪ್ಪಾಗಿ ಹೆಸರಿಡಲ್ಪಟ್ಟ ಕರ್ನಾಟಕ ರಾಜ್ಯವು ಆಯುಷ್ಯವಂತವಾ

ಗಲಿ, ಆರೋಗ್ಯವಂತವಾಗಲಿ, ಭಾಗ್ಯವಂತವಾಗಲಿ–ಎಂದು ಹಿರಿಯನಾದ ನಾನು ಹಾರೈಸುತ್ತೇನೆ. ಕರ್ನಾಟಕ ಎಂಬ ಶಬ್ದದಲ್ಲಿ ಅದೆಂಥ ಮಾಂತ್ರಿಕ ಶಕ್ತಿ ಅಡಗಿರುತ್ತದೆಂಬುದು ಹೇಳಲು ಸಾಧ್ಯವಿಲ್ಲ. ಕನ್ನಡನಾಡಿನ ಸರ್ವತೋಮುಖವಾದ ಅಭ್ಯುದಯಕ್ಕೆ ನಾವು ಕನ್ನಡಿಗರೆಲ್ಲರೂ ಒಂದಾಗಿ ದುಡಿಯೋಣ. ಕನ್ನಡಮ್ಮನ ಪವಿತ್ರ ಸೇವೆಯಿಂದ 'ಕರ್ನಾಟಕ'ಪದವನ್ನು ಕಿತ್ತುಹಾಕಲು ಸಾಧ್ಯವಿಲ್ಲ" ಎಂದು ಸಾರಿದ ಆ ಕುಲಪುರೋಹಿತರ ಕನಸು ೧೯೭೩ರ ನವೆಂಬರ್ ೧ರಂದು ಸಾಕಾರ ರೂಪವನ್ನು ತಾಳಿತು. ಅಂದಿನ ಮುಖ್ಯ ಮಂತ್ರಿಗಳಾಗಿದ್ದ ಶ್ರೀ ದೇವರಾಜ ಅರಸರ ಹಿರಿತನದಲ್ಲಿ ಈ ರಾಜ್ಯಕ್ಕೆ ಕರ್ನಾಟಕ ಎಂಬ ನಾಮಕರಣವಾಯಿತು.

# ಕನ್ನಡ ಲಿಪಿ

ಡಾ. ರಾ. ಯ. ಧಾರವಾಡಕರ

ಲಿಪಿ ಬಾಯ್ಮಾತಿನ ಚಾಕ್ಷುಷ ಪ್ರತಿನಿಧಿ. ಭಾಷೆಗೆ ಲಿಪಿ ಇರುವುದರಿಂದಲೇ, ಆ ಭಾಷಿಕರ ಸಾಹಿತ್ಯ, ಇತಿಹಾಸ ಹಾಗೂ ಸಂಸ್ಕೃತಿಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ. ಭಾಷೆಗೆ ಲಿಪಿಯ ಈ ಸಾಧನವಿರದಿದ್ದರೆ, ಇವೆಲ್ಲ ಜಲ-ಲಿಪಿಯಾಗುತ್ತಿದ್ದುವು. ಅಕ್ಷರವನ್ನು ಚಾಕ್ಷುಷವಾಗಿ ಒಡಮೂಡಿಸುವುದೇ ಲಿಪಿ. ಕನ್ನಡ ವ್ಯಾಕರಣರು ಅಕ್ಷರ ಹಾಗೂ ವರ್ಣಗಳನ್ನು ಸಮಾನಾರ್ಥದಲ್ಲಿ ಬಳಸಿದರು. ಅಕ್ಕರಮುಮ್ ವರ್ಣಮುಮ್ ಎಂದಕ್ಕುಂ ಶುದ್ಧಾಕ್ಷರಕ್ಕೆ ನಾಮಂ; ಬರೆಪಂಬೊಕ್ಕು ಉಚ್ಚರಿಸಲ್ ಬಾರದುವು ಅಕ್ಕರಮ್ ಅಲ್ತು; ಅವು ಘನಸ್ವನಾದಿ ಧ್ವನಿಗಳ್. ಮೇಘದಿಂದುಂಟಾಗುವ ಗುಡುಗು ಮೊದಲಾದ ಸಪ್ಪಳಗಳನ್ನು ಅಕ್ಷರರೂಪದಲ್ಲಿ ಹಿಡಿದಿಡಲಿಕ್ಕೆ ಬಾರದ್ದರಿಂದ ಅವು ಅಕ್ಷರಗಳಲ್ಲ. ಉಳಿದವು ನಷ್ಟಹೊಂದಿದರೂ ಅಕ್ಷರಗಳು ಮಾತ್ರ ಅ-ಕ್ಷರಗಳಾಗಿಯೇ (ನಾಶಹೊಂದದೆಯೇ) ಉಳಿಯುತ್ತವೆ.

ಕೇಶಿರಾಜಾದಿಗಳು ಅಕ್ಷರಕ್ಕೆ ಶ್ರಾವಣ ಹಾಗೂ ಚಾಕ್ಷುಷ ಎಂದು ಎರಡು ರೂಪಗಳಿವೆಯೆಂದು ಹೇಳುತ್ತಾರೆ:

ವ್ಯವಹರಿಪುವೆರಡು ರೂಪಿಂ
ದವಕ್ಕರಂ ಶ್ರಾವಣಂ ಸ್ವನೈಕಾಕಾರಂ
ವಿವಿಧಾಕಾರಂ ಲಿಪಿಭೇ
ದವೃತ್ತಿಯಿಂ ಚಾಕ್ಷುಷಂ ಪುರಾತನಮತದಿಂ|

ಅಕ್ಷರಕ್ಕೆ ಶ್ರಾವಣ ಎಂದರೆ ಕಿವಿಗೆ ಕೇಳುವುದು ಹಾಗೂ ಚಾಕ್ಷುಷ ಎಂದರೆ ಕಣ್ಣಿಗೆ ಕಾಣುವುದು ಎಂಬ ಎರಡು ರೂಪಗಳಿವೆ. ಇವುಗಳಲ್ಲಿ ಎಲ್ಲ ಭಾಷೆಯ ಶ್ರಾವಣ ಸ್ವರೂಪ ಏಕಾಕಾರವಾಗಿದೆ. ಆದರೆ, ಲಿಪಿ ಬೇರೆ ಬೇರೆಯಾಗಿರುವುದರಿಂದ ಚಾಕ್ಷುಷ ವಿವಿಧಾಕಾರವಾಗಿದೆ. ಶ್ರಾವಣ ಹಾಗೂ ಚಾಕ್ಷುಷಗಳಲ್ಲಿ ಈ ಒಂದು ಅಂತರವಲ್ಲದೆ, ಭಾಷೆಯ ಶ್ರಾವಣಸ್ವರೂಪದ ವ್ಯಾಪ್ತಿ ಪರಿಮಿತವಾಗಿದೆ; ಚಾಕ್ಷುಷದ ವ್ಯಾಪ್ತಿ ನಿರಂತರವಾಗಿದೆ. ಅಂದರೆ, ನಾವು ಈಗ, ಈ ಕ್ಷಣಕ್ಕೆ ಏನನ್ನಾದರೂ ಮಾತಾಡಿದರೆ, ಅದು ಆ ಸ್ಥಳದಲ್ಲಿ, ನಮ್ಮೆದುರಿಗಿರುವವರಿಗೆ ಮಾತ್ರ ವೇದ್ಯವಾಗುತ್ತದೆ. ಇತರತ್ರ, ಇಲ್ಲವೆ ನಮ್ಮಿಂದ ದೂರವಿರುವ ಜನರಿಗೆ ಅದು ವೇದ್ಯವಾಗುವುದಿಲ್ಲ ಅದೇ ಲಿಪಿಬದ್ಧವಾದ ಚಾಕ್ಷುಷರೂಪದ ವ್ಯಾಪ್ತಿ ನಿರಂತರವಾಗಿರುತ್ತದೆ. ನಾವು ಒಂದು ಸಲ ಏನನ್ನಾದರೂ ಬರೆದುಬಿಟ್ಟರೆ, ಆ ಕಾಲಕ್ಕೆ ಆ ಸ್ಥಳದಲ್ಲಿದ್ದವರು ಓದಿಕೊಳ್ಳುವುದಲ್ಲದೆ, ಅನಂತರ ಬರುವವರೂ ಅದನ್ನು ಓದಿಕೊಳ್ಳಬಹುದು. ಪಂಪ ಹೇಗೆ ಮಾತಾಡಿದ ಎಂಬುದು ಇಂದು ನಮಗೆ ಗೊತ್ತಿಲ್ಲ; ಆದರೆ, ಪಂಪ ಚಾಕ್ಷುಷವಾಗಿ ಬರೆದಿಟ್ಟ ಕಾವ್ಯಗಳು ಇಂದಿಗೂ ನಮ್ಮ ಕಣ್ಣೆದುರಿಗಿವೆ. ಆದ್ದರಿಂದ ಭಾಷೆಯ ಶ್ರಾವಣದ ವ್ಯಾಪ್ತಿಗಿಂತ, ಲಿಪಿಬದ್ಧವಾದ ಚಾಕ್ಷುಷದ ವ್ಯಾಪ್ತಿ ಹೆಚ್ಚು ನಿರಂತರವಾಗಿದೆ. ಇದೂ ಅಲ್ಲದೆ, ಪ್ರತಿನಿತ್ಯ ವ್ಯತ್ಯಾಸ ಹೊಂದುತ್ತಿರುವ ಭಾಷೆಯ ಬದಲಾವಣೆಯ ಸ್ವರೂಪವನ್ನು ಅರಿತುಕೊಳ್ಳಲೂ ಲಿಪಿಬದ್ಧವಾದ ಚಾಕ್ಷುಷ ತುಂಬಾ ಸಹಾಯಕವಾಗಿದೆ.

### ಕನ್ನಡ ಲಿಪಿಯ ಉಗಮ - ವಿಕಾಸ

ಹಾಗಾದರೆ, ಕನ್ನಡದಲ್ಲಿ ಲಿಪಿ ಎಂದಿನಿಂದ ಪ್ರಾರಂಭವಾಯಿತು? ಅದು ಯಾವ ಮೂಲದಿಂದ ಬಂದಿತು? ಅದು ಹೇಗೆ ವಿಕಾಸ ಹೊಂದಿತು? ಎಂಬುದನ್ನು ನಾವು ಈಗ ಗಮನಿಸಬೇಕು.

ಭಾರತದಲ್ಲಿ ಲಿಪಿ ಫಿನೀಶಿಯನ್ನರಿಂದ ಬಂದಿತೆಂದು ವೀಬರ್ ಮೊದಲಾದ ಪಂಡಿತರು ಹೇಳುತ್ತಾರೆ. ಆದರೆ, ಭಾರತೀಯ ಸಾಹಿತ್ಯದಲ್ಲಿಯೇ ದೊರಕುವ ಉಲ್ಲೇಖಗಳ ಮೇಲಿಂದ ಭಾರತೀಯರಿಗೆ ಲಿಪಿ ತೀರ ಪ್ರಾಚೀನಕಾಲದಿಂದಲೂ ಗೊತ್ತಿತ್ತು ಎಂದು ನಿರ್ವಿವಾದವಾಗಿ ಹೇಳಬಹುದು. ಜ್ಯೋತಿಷ ತತ್ತ್ವದ ಮೇರೆಗೆ ಲಿಪಿಗಳೆಲ್ಲ ಬ್ರಹ್ಮನಿಂದಲೇ ನಿರ್ಮಿತವಾದುವು:

ಷಾಣ್ಮಾಸಿಕೇತು ಸಮಯೇ ಭ್ರಾನ್ತಿಸ್ಸಂಜಾಯತೇ ಯತಃ
ಧಾತ್ರಾಕ್ಷರಾಣಿ ಸೃಷ್ಟಾನಿ ಪತ್ರರೂಢಾನ್ಯತಃ ಪುರಾ||

ಯಾಜ್ಞವಲ್ಕ್ಯ ಸ್ಮೃತಿಯಲ್ಲಿ "ಕೃತ್ವಾ ಲೇಖ್ಯಂತು ಕಾರಯೇತ್" ಎಂದು ಬರುತ್ತದೆ. ವಾತ್ಸ್ಯಾಯನ ಕಾಮಸೂತ್ರದ ಮೇರೆಗೆ ಅರವತ್ತು ನಾಲ್ಕು ಕಲೆಗಳಲ್ಲಿ ಪುಸ್ತಕವಾಚನವೂ ಒಂದಾಗಿದೆ. ಅದೂ ಅಲ್ಲದೆ, ಪ್ರತಿಯೊಬ್ಬನ ಮನೆಯಲ್ಲಿಯೂ ಪುಸ್ತಕಗಳಿರಬೇಕು. ಗೃಹಸಾಮಗ್ರೀಷು, ಯಃ ಕಶ್ಚಿತ್ ಪುಸ್ತಕಃ ಪಾಣಿನೀಯ ಶಿಕ್ಷೆಯಲ್ಲಿ ಈ ಕೆಳಗಿನ ಆರು ಜನರು 'ಪಾಠಕಾಧಮ'ರೆಂದು ಹೇಳಲಾಗಿದೆ:

ಗೀತೀ, ಶೀಘ್ರೀ, ಶಿರಃಕಂಪೀ, ತಥಾ ಲಿಖಿತ ಪಾಠಕಃ
ಅನರ್ಥಜ್ಞೋ, ಅಲ್ಪಕಂಠಶ್ಚ, ಷಡೇತೇ ಪಾಠಕಾಧಮಾಃ||

ಲಿಖಿತಪಾಠಕ ಪಾಠಕಾಧಮ. ಆದ್ದರಿಂದ, ಲಿಪಿ ವಿಷಯ ಭಾರತೀಯರಿಗೆ ಪ್ರಾಚೀನಕಾಲದಿಂದಲೂ ಗೊತ್ತಿದ್ದಿತು.

ಕನ್ನಡಲಿಪಿ, ಭಾರತದ ಇತರ ಲಿಪಿಗಳಂತೆ ಕ್ರಿ. ಪೂ. ೩ನೆಯ ಶತಮಾನದ ಅಶೋಕನ ಬ್ರಾಹ್ಮೀಲಿಪಿಯಿಂದ ಉಗಮ ಹೊಂದಿತು. ಅಶೋಕನ ಬ್ರಾಹ್ಮೀಲಿಪಿ ಉತ್ತರದ ನೇಪಾಳದಿಂದ ದಕ್ಷಿಣದ ಮೈಸೂರಿನವರೆಗೂ ಕಂಡುಬರುತ್ತದೆ. ಈ ಲಿಪಿ ಎಡದಿಂದ ಬಲಕ್ಕೆ ಬರೆಯಲ್ಪಟ್ಟಿದೆ. ಅಶೋಕನ ಬ್ರಾಹ್ಮೀಲಿಪಿಯ ಶಾಸನಗಳು ಕರ್ನಾಟಕದಲ್ಲಿ ಚಿತ್ರದುರ್ಗ ಜಿಲ್ಲೆಯ ಬ್ರಹ್ಮ

ಗಿರಿ, ಸಿದ್ಧಾಪುರ ಮತ್ತು ಜಟಿಂಗರಾಮೇಶ್ವರ ಎಂಬ ಸ್ಥಳಗಳಲ್ಲಿಯೂ, ರಾಯಚೂರು ಜಿಲ್ಲೆಯ ಮಾಸ್ಕಿ ಮತ್ತು ಕೊಪ್ಪಳದ ಗವಿಮಠ ಮೊದಲಾದ ಸ್ಥಳಗಳಲ್ಲಿಯೂ ದೊರಕುತ್ತವೆ. ಗುಲ್ಬರ್ಗ ಜಿಲ್ಲೆಯ ಸನ್ನತಿ ಎಂಬಲ್ಲಿ ದೊರೆತ ಶಾಸನಗಳಲ್ಲಿಯ ಅಕ್ಷರಗಳು ಅಲಂಕಾರಯುತವಾಗಿ ಸುಂದರವಾಗಿವೆ. ಮೊದಮೊದಲು ಚೌಕಾಕಾರವಾಗಿದ್ದ ಕನ್ನಡಲಿಪಿ ಕಾಲಕ್ರಮದಲ್ಲಿ ದುಂಡಗಾಗುತ್ತ ನಡೆಯಿತು. ಅಶೋಕನ ಬ್ರಾಹ್ಮೀ ಲಿಪಿಯಿಂದ ಕನ್ನಡ ಲಿಪಿ ಹೇಗೆ ನಿಷ್ಪನ್ನವಾಯಿತೆಂಬುದಕ್ಕೆ ಉದಾಹರಣೆಯಾಗಿ ನಾವು ಇಂದಿನ 'ಕ' ವರ್ಣವನ್ನು ತೆಗೆದುಕೊಳ್ಳಬಹುದು. ಅಶೋಕಲಿಪಿಯಲ್ಲಿ 'ಕ' ವರ್ಣವನ್ನು ಸರಳವಾಗಿ ಲ್ಯಾಟಿನ್ ಕ್ರೂಜೆಯ ಆಕಾರದಲ್ಲಿ '+' ಹೀಗೆ ತೋರಿಸಲಾಗುತ್ತಿತ್ತು. ಇದರಿಂದ ಗವಿಲಿಪಿಯ 'ಕ', ವರ್ತುಳ ಪೂರ್ವದ 'ಕ', ದೇವನಾಗರಿ 'क' ಹಾಗೂ ಕನ್ನಡ-ತೆಲುಗು 'ಕ' 'ಕ' 'క' ಸಂಜ್ಞೆಗಳು ಬಂದುವು. ಅದರಂತೆಯೇ, ಅಶೋಕನ 'ಅ' ಸಂಜ್ಞಾಸೂಚಕ '𑀅' ದಿಂದ, ದೇವನಾಗರಿ 'अ' ಕನ್ನಡ-ತೆಲುಗುಗಳ 'ಅ' 'ಅ' 'ಅ' 'అ' ಬಂದಿತು.

ಹೀಗೆ ವಿಕಾಸಹೊಂದುತ್ತ ಕನ್ನಡಲಿಪಿ ಕ್ರಿ. ಶ. ೧೦–೧೨ನೆಯ ಶತಮಾನದ ಕಲ್ಯಾಣಿಯ ಚಾಳುಕ್ಯರ ಕಾಲದಲ್ಲಿ ಸಾಕಷ್ಟು ದುಂಡಾಗಿ, ಆಧುನಿಕ ಕನ್ನಡ ಲಿಪಿಯ ಲಕ್ಷಣಗಳನ್ನೆಲ್ಲ ಹೋಲುತ್ತದೆ. ಕಲ್ಯಾಣಿಯ ಚಾಲುಕ್ಯರ ಕಾಲದಲ್ಲಿ ಕನ್ನಡದ ಕ, ರ, ಯ ಮೊದಲಾದ ಅಕ್ಷರಗಳು ಇಂದಿನ ಅಕ್ಷರಗಳಂತೆಯೇ ಇವೆ. ಅನಂತರ, ೧೨, ೧೩ನೆಯ ಶತಮಾನಗಳಲ್ಲಿಯಂತೂ ಹೊಯ್ಸಳ ದೊರೆಗಳ ಅನೇಕ ಶಾಸನಗಳು ನುಣುಪಾದ ಕಲ್ಲಿನ ಹಲಗೆಗಳ ಮೇಲೆ ಬರೆಯಲ್ಪಟ್ಟು ತುಂಬಾ ಕಲಾತ್ಮಕವಾಗಿವೆ, ಮೋಹಕವಾಗಿವೆ. ಕನ್ನಡಲಿಪಿಯ ಸೌಂದರ್ಯದ ಹೆಚ್ಚಳವನ್ನು ನಾವು ಈ ಕಾಲದಲ್ಲಿ ಕಾಣುತ್ತೇವೆ. ಇಲ್ಲಿಯವರೆಗೂ ಅಂದರೆ, ಕ್ರಿ. ಶ. ೧೩ನೆಯ ಶತಮಾನದವರೆಗೆ ಕನ್ನಡ ಹಾಗೂ ತೆಲುಗು ಲಿಪಿಗಳು ಹೆಚ್ಚು ಕಡಿಮೆ ಒಂದೇ ಆಗಿವೆ. ಆದರೆ, ಕ್ರಿ. ಶ. ೧೪, ೧೬ನೆಯ ಶತಮಾನಗಳ ವಿಜಯನಗರದ ಅರಸರ ಕಾಲದಲ್ಲಿ ಕನ್ನಡ ಅಕ್ಷರಗಳು ಡೊಂಕುಡೊಂಕಾಗಿ ಕೊರೆಯಲ್ಪಟ್ಟಿದ್ದು, ಅಷ್ಟು ಸುಂದರವಾಗಿ ಕಾಣುವುದಿಲ್ಲ. ಆದರೆ, ದ, ಡ, ಪ ಮೊದಲಾದ ಅಲ್ಪಪ್ರಾಣಗಳಿಗೆ ಕೆಳಗೊಂದು ಗೀಟು ತೋರಿಸಿ, ಧ, ಢ, ಫ ಎಂದು ಮೊದಲಾಗಿ ಮಹಾಪ್ರಾಣಗಳ ರೂಪಗಳನ್ನು ಸಿದ್ಧಿಸಿಕೊಂಡದ್ದೂ, ಮತ್ತು ಈ ವರೆಗೆ ಅಕ್ಷರಗಳ ಮೇಲ್ಭಾಗದಲ್ಲಿ ಚುಕ್ಕೆ ಇಲ್ಲವೆ ಚಿಕ್ಕಬಿಂದುವಿನಿಂದ ಸೂಚಿಸಲ್ಪಡುತ್ತಿದ್ದ ಬಿಂದುವನ್ನು ಆ ಆ ಅಕ್ಷರಗಳ ಬಲಗಡೆಗೆ ಅಷ್ಟೇ ಆಕೃತಿಯಲ್ಲಿ ತೋರಿಸಿದ್ದುದೂ ಹೊಸಗನ್ನಡ ಲಿಪಿಯ ಮಾರ್ಗವನ್ನು ತೋರಿಸುತ್ತದೆ.

ಬಾದಾಮಿ ಚಾಳುಕ್ಯರು, ರಾಷ್ಟ್ರಕೂಟರು ಮತ್ತು ಕಲ್ಯಾಣಿ ಚಾಳುಕ್ಯರ ಕಾಲದಲ್ಲಿ ಅಂದರೆ ಸುಮಾರು ೪, ೫ನೆಯ ಶತಮಾನದಿಂದ ಮೊದಲುಗೊಂಡು, ೧೩, ೧೪ನೆಯ ಶತಮಾನಗಳವರೆಗೆ ಕನ್ನಡ ಮತ್ತು ತೆಲುಗು ಲಿಪಿಗಳು ಒಂದೇ ತೆರನಾಗಿವೆ. ೧೪, ೧೫ನೆಯ ಶತಮಾನದಿಂದ ಮಾತ್ರ ಕನ್ನಡ ಹಾಗೂ ತೆಲುಗು ಲಿಪಿಗಳಲ್ಲಿ ವ್ಯತ್ಯಾಸವನ್ನು ಕಾಣಲು ಪ್ರಾರಂಭವಾಗುತ್ತದೆ. ಮುದ್ರಣ ಪ್ರಾರಂಭವಾದಂದಿನಿಂದ ಈ ವ್ಯತ್ಯಾಸ ಇನ್ನೂ ಹೆಚ್ಚಾಗಿ ಕಂಡುಬಂದರೂ, ಕನ್ನಡ ಲಿಪಿಯನ್ನು ಬಲ್ಲವನಿಗೆ ತೆಲುಗು ಲಿಪಿಯನ್ನೂ, ತೆಲುಗು ಲಿಪಿಯನ್ನು ಬಲ್ಲವನಿಗೆ ಕನ್ನಡ ಲಿಪಿಯನ್ನೂ ಓದಲು ವಿಶೇಷ ತೊಂದರೆಯಾಗುವುದಿಲ್ಲ. ಕನ್ನಡ ಹಾಗೂ ತಮಿಳು ಲಿಪಿಗಳು ಪ್ರಾರಂಭದಿಂದಲೇ ವಿಭಿನ್ನತೆಯನ್ನು ತೋರುತ್ತವೆ. ಕನ್ನಡಲಿಪಿ ಬಾದಾಮಿ ಚಾಳುಕ್ಯರ ಕಾಲದಿಂದಲೂ ಇಂದಿನ ಮಹಾರಾಷ್ಟ್ರ ಮತ್ತು ಗುಜರಾಥ ಭಾಗಗಳಲ್ಲಿ ಪ್ರಚಲಿತವಿದ್ದು, ಅನಂತರ ಮಾತ್ರ ಅಲ್ಲಿ ನಾಗರಿ ಲಿಪಿ ಪ್ರಾರಂಭವಾಯಿತು.

### ವರ್ಣಗಳು

ಕನ್ನಡದಲ್ಲಿ ವರ್ಣಗಳು ಎಷ್ಟು? ಸಂಸ್ಕೃತ ವರ್ಣಸಮಾಮ್ನಾಯ ಪದ್ಧತಿಯನ್ನು ಅನುಕರಿಸಿದ ಕನ್ನಡ ವೈಯಾಕರಣರು ಕನ್ನಡದಲ್ಲಿ ೪೭ ವರ್ಣಗಳಿವೆಯೆಂದು ಹೇಳಿದ್ದಾರೆ. ಸಂಸ್ಕೃತದಲ್ಲಿ ಇರುವ ಹಲವು ವರ್ಣಗಳು ಕನ್ನಡದಲ್ಲಿ ಇಲ್ಲ; ಸಂಸ್ಕೃತದಲ್ಲಿ ಇರದ ಹಲವು ವರ್ಣಗಳು ಕನ್ನಡದಲ್ಲಿ ಇವೆ ಎಂದು ವ್ಯಾಖ್ಯಾನಿಸುವಲ್ಲಿ ನಾಗವರ್ಮ ಕೇಶಿರಾಜಾದಿಗಳ ತೌಲನಿಕ ಭಾಷಾ ದೃಷ್ಟಿಯನ್ನು ಕಾಣುತ್ತೇವೆ.

ಕೇಶಿರಾಜನ ಮೇರೆಗೆ ಸಂಸ್ಕೃತದಲ್ಲಿ ಹೀಗೆ ವರ್ಣಗಳಿವೆ:

| | |
|---|---|
| ಸ್ವರಗಳು | ೧೪ |
| ವರ್ಗೀಯ ವ್ಯಂಜನಗಳು | ೨೫ |
| ಅವರ್ಗೀಯ ವ್ಯಂಜನಗಳು | ೮ |
| ಯೋಗವಾಹಗಳು | ೪ |
| ಒಟ್ಟು | ೫೧ |

ಆದರೆ, ಸಂಸ್ಕೃತದ ಈ ೫೧ ವರ್ಣಗಳಲ್ಲಿ ಈ ಕೆಳಗಿನವು ಕನ್ನಡದಲ್ಲಿಲ್ಲ. ಅವು ಯಾವುವೆಂದರೆ:

ಋ, ೠ, ಌ ೡ, ಶ ಷ ವಿಸರ್ಗ ೱ ೲ ಮತ್ತು ಕ್ಷ ಳ. ಸಂಸ್ಕೃತದ ೫೧ ವರ್ಣಗಳಲ್ಲಿ ಈ ೧೦ ವರ್ಣಗಳನ್ನು ಕಳೆದರೆ, ಉಳಿಯುವವು ೪೨. ಸಂಸ್ಕೃತದಲ್ಲಿ ಇರದ ಐದು ದೇಶ್ಯವರ್ಣಗಳು ಕನ್ನಡದಲ್ಲಿ ಇವೆ. ಅವು ಯಾವುವೆಂದರೆ:

ಅಲ್ಪೀಡನದಿಂ ರೇಫಾಶ್ರಿತವಾದ 'ಱ' ಕಾರ, ಡಕಾಶ್ರಿತವಾದ 'ೞ ಱ' ಅಂಗೀಕೃತ ಲತ್ವಕ್ಕೆ ಚಟ್ಟೆತನಿಸದಕುಳ ಹ್ರಸ್ವ ಎ ಹಾಗೂ ಒ. ಮೇಲಿನ ೪೨ ವರ್ಣಗಳಲ್ಲಿ ಈ ಐದನ್ನು ಕೂಡಿಸಿದರೆ ಕನ್ನಡದಲ್ಲಿ ನಲವತ್ತೇಳು ವರ್ಣಗಳು. "ನಲ್ವತ್ತೇಳಾಯ್ತೆ ಶುದ್ಧಗೆ ಅಚ್ಚಕನ್ನಡಕ್ಕೀ ಕ್ರಮದಿಂ".

ಕೇಶಿರಾಜಾದಿಗಳು ಹೇಳಿದ ಈ ೪೭ರಲ್ಲಿಯೂ, ಆಧುನಿಕರ ಮೇರೆಗೆ 'ೞಱ' ವರ್ಣಗಳು, ಅನುಸ್ವಾರ, ಐ, ಔ, ಸಂಧ್ಯಕ್ಷರಗಳು ಹಾಗೂ ಹತ್ತು ಮಹಾಪ್ರಾಣಗಳು ಹೊಸಗನ್ನಡಕ್ಕೆ ಬೇಕಿಲ್ಲ. ೪೭ರಲ್ಲಿ ಈ ೧೫ ವರ್ಣಗಳನ್ನು ಕಳೆದರೆ, ಕನ್ನಡಕ್ಕೆ ೩೨ ವರ್ಣಗಳು ಮಾತ್ರ ಸಾಕು.

ಸಂಸ್ಕೃತದ ಮಾದರಿಯ ಮೇಲೆ ರೂಪಿತವಾದ ಕನ್ನಡ ವರ್ಣಮಾಲೆ ತುಂಬಾ ಶಾಸ್ತ್ರೀಯವಾದುದೂ ನಿರ್ದುಷ್ಟವಾದುದೂ ಆಗಿದೆಯೆಂದು ಹೇಳಬೇಕು. ಯಾವುದೇ ಭಾಷೆಯ ಲಿಪಿಯಲ್ಲಿ ಬರೆದಂತೆ ಉಚ್ಚರಿಸಬೇಕು; ಉಚ್ಚರಿಸಿದಂತೆ ಬರೆಯಬೇಕು. ಬರಹ ಮತ್ತು ಉಚ್ಚಾರಣೆಗಳಲ್ಲಿ ತಾಳಮೇಳವಿರಬೇಕು. ಅವೆರಡರಲ್ಲಿಯೂ ತರ್ಕಬದ್ಧತೆ ಹಾಗೂ ಸಾತತ್ಯಗಳಿರಬೇಕು. ಉದಾಹರಣೆಗೆ, ವಿಶ್ವವಿಖ್ಯಾತಿಯನ್ನು ಪಡೆದ ಇಂಗ್ಲಿಷ್‌ಭಾಷೆಯಲ್ಲಿ ಬರೆಯುವುದು KNOW ಎಂದು. ಉಚ್ಚರಿಸುವುದು 'ನೋ' ಎಂದು. ಇದು 'ಕ್ನೊ' ಏಕಾಗಬಾರದು? ಇದಕ್ಕೆ ಉತ್ತರವಿಲ್ಲ. ಹಾಗೆಯೇ, ಬರೆಯುವುದು WALK TALK ಎಂದು. ಉಚ್ಚರಿಸುವುದು 'ವಾಕ್' 'ಟಾಕ್' ಎಂದು, 'L' ಉಚ್ಚಾರವೇಕಾಗಲಿಲ್ಲ? ಇಂಗ್ಲಿಷ್ ಭಾಷೆಯನ್ನು ಹೊಸದಾಗಿ ಕಲಿಯುತ್ತಿರುವವರಿಗೆ ಈ ಗೂಢದ ಅರ್ಥವಾಗದು. ಪ್ರವಿಷ್ಟರಿಗೆ ಮಾತ್ರ ಈ ಉಚ್ಚಾರದ ಅರ್ಥವಾಗುತ್ತದೆ. ಇದು ಗತಾನುಗತಿಕ ಉಚ್ಚಾರಣೆಯ ರೀತಿ. ಹಾಗೆಯೇ, ಹಲವೆಡೆಗೆ ಅದೇ ವರ್ಣವನ್ನೇ ಬೇರೆ ಬೇರೆ ವಿಧದಲ್ಲಿ ಉಚ್ಚರಿಸಬೇ

ಕಾಗುತ್ತದೆ. CAT 'ಕ್ಯಾಟ್' ಆದರೆ, CINEMA 'ಸಿನಿಮೊ' ಆಗುತ್ತದೆ. RUN 'ರನ್' ಎಂದಾದರೆ, PUT 'ಪಟ್' ಎಂದಾಗದೆ, 'ಪುಟ್' ಎಂದಾಗುತ್ತದೆ. ಇದೂ ಅಲ್ಲದೇ ಇಂಗ್ಲಿಷ್ ಲಿಪಿಯಲ್ಲಿ ಮೂರು ವಿಧದ ಬರವಣಿಗೆ ಇದೆ. ಇದೆಲ್ಲ ಲಿಪಿಯಲ್ಲಿಯ ಅನವಸ್ಥೆ. ಆದ್ದರಿಂದಲೇ, ಈ ಅನವಸ್ಥೆಯನ್ನು ಹೋಗಲಾಡಿಸಿ, ತರ್ಕಶುದ್ಧವಾದ ಲಿಪಿಯನ್ನು ನಿರ್ಮಾಣ ಮಾಡುವವರಿಗೆ ಬಹುಮಾನವನ್ನು ಕೊಡುವುದಾಗಿ ಜಾರ್ಜ್ ಬರ್ನಾರ್ಡ್ ಶಾ ಸಾರಿದ್ದರು.

ಇದರಂತೆಯೇ ದ್ರಾವಿಡಭಾಷಾ ವರ್ಗಕ್ಕೆ ಸೇರಿರುವ ತಮಿಳಿನಲ್ಲಿಯೂ ಇಂಗ್ಲಿಷ್‌ನಲ್ಲಿಯಂತೆಯೇ ಗೊಂದಲವಿದೆ. ತಮಿಳಿನಲ್ಲಿ ಎಲ್ಲ ಧ್ವನಿಗಳಿಗೂ ಪ್ರತ್ಯೇಕ ಸಂಕೇತಗಳಿಲ್ಲ. 'ಕ' ಮಾತ್ರದಿಂದ ಕವರ್ಗವನ್ನೂ, 'ಪ'ದಿಂದ ಪವರ್ಗವನ್ನೂ, 'ಟ'ದಿಂದ ಟವರ್ಗವನ್ನೂ, 'ತ'ದಿಂದ ತವರ್ಗವನ್ನೂ ಆ ಭಾಷೆಯಲ್ಲಿ ಸೂಚಿಸಲಾಗುತ್ತದೆ. ಅರ್ಥಾತ್ ತಮಿಳಿನಲ್ಲಿ ಬರೆಯುವುದು ಒಂದು, ಉಚ್ಚರಿಸುವುದು ಇನ್ನೊಂದು. ಬರೆಯುವುದು ಮಹಾತ್ಮ ಕಾಂದಿ ಎಂದಿದ್ದರೂ, ಉಚ್ಚರಿಸುವುದು ಮಹಾತ್ಮಾ ಗಾಂಧಿ ಎಂದು. ಇದು ಹೀಗೇಕೆ ಆಗಬೇಕು? ಆ ಭಾಷೆಯನ್ನು ಬಲ್ಲವರಿಗೆ ಮಾತ್ರ ಈ ಉಚ್ಚಾರ ಸಾಧ್ಯ. ತಮಿಳು ಲಿಪಿ ಸಂಸ್ಕೃತದ ರೀತಿಯಲ್ಲಿ ಬೆಳೆದು ಬಾರದದ್ದರಿಂದಲೇ, ಈ ರೀತಿ ಬರಹ ಹಾಗೂ ಉಚ್ಚಾರಗಳಲ್ಲಿ ನಾವು ವ್ಯತ್ಯಾಸವನ್ನು ಕಾಣುತ್ತೇವೆ. ಅಂತೆಯೇ, ದಿವಂಗತ ಆರ್. ನರಸಿಂಹಾಚಾರ್ಯ ಅವರು But the Tamil alphabet is a very imperfect system for expressing the Tamil sounds and this is due, according to some scholars, to its not being adapted from a Sanskrit prototype ಎಂದು ಹೇಳಿದರು.

ಇದರಂತೆಯೇ, ಮರಾಠಿಯಲ್ಲಿಯೂ ಕೂಡ ಹಲವೆಡೆಗೆ ಅನುಸ್ವಾರ ಚಿಹ್ನವನ್ನು ಹಾಕಿದರೂ, ಆ ಅನುಸ್ವಾರದ ಉಚ್ಚಾರವಿರುವುದಿಲ್ಲ. ಅದೂ ಅಲ್ಲದೆ, ಅಲ್ಲಿ ಹ್ರಸ್ವ 'ಎ' ಮತ್ತು 'ಒ' ವರ್ಣಗಳಿಲ್ಲ. ಕನ್ನಡ ಲಿಪಿಯಲ್ಲೂ ಹೀಗಿಲ್ಲ. ಪ್ರತಿಯೊಂದು ಧ್ವನಿಯನ್ನು ಉಚ್ಚರಿಸಲೂ ಕನ್ನಡ ಲಿಪಿಯಲ್ಲಿ ಸಂಕೇತಗಳಿವೆ. ಒಂದು ರೀತಿ ಬರೆದು, ಬೇರೊಂದು ರೀತಿಯಲ್ಲಿ ಉಚ್ಚರಿಸುವ ಪ್ರಮೇಯವಿಲ್ಲ. ಆದ್ದರಿಂದ, ಕನ್ನಡ ಲಿಪಿಯಾವ ಅಭಿವ್ಯಕ್ತಿಗೂ ಪರಿಪೂರ್ಣವಾದ ಲಿಪಿಯಾಗಿದೆಯೆಂದು ಹೇಳಬಹುದು.

ಆದರೂ, ಅನ್ಯಭಾಷಾಸಂಪರ್ಕ ಬಂದಂತೆ, ಆ ಭಾಷೆಯ ಶಬ್ದಗಳು ಕನ್ನಡ ಕೋಶಕ್ಕೇ ಸೇರಿಕೊಳ್ಳುವುದು ಅನಿವಾರ್ಯವಾಯಿತು. ಕೊಡು ಕೊಳು ಇದು ಭಾಷೆ ಬೆಳೆದು ಬರುವ ರೀತಿ. ಹಾಗೇ, ಕನ್ನಡಕ್ಕೆ ಇಂಗ್ಲಿಷ್ ಭಾಷೆಯ ಸಂಪರ್ಕ ಬಂದಂದಿನಿಂದ, ಇಂಗ್ಲಿಷಿನ FATHER, FIRST, FRUIT, ಮೊದಲಾದ ಶಬ್ದಗಳು ಕನ್ನಡಕ್ಕೆ ಬಂದುವು. ಇಲ್ಲಿಯ 'F' ಉಚ್ಚಾರ ಕನ್ನಡದ 'ಫ'ದಂತಲ್ಲ. ಆದ್ದರಿಂದ, ಈ ಉಚ್ಚಾರದ ಸಂಕೇತವಾಗಿ 'ಫ' ಎಂಬ ಸಂಜ್ಞೆಯನ್ನು ಕನ್ನಡ ಲಿಪಿ ಬರಮಾಡಿಕೊಳ್ಳಬೇಕಾಯಿತು. ಅದರಂತೆಯೇ ZOO ' ಶಬ್ದದಲ್ಲಿಯ Z ದ ಉಚ್ಚಾರ ಪೂರ್ಣ 'ಝ' ಅಲ್ಲ. ಅದಕ್ಕಾಗಿ 'ಝ' ನಿರ್ಮಿಸಿಕೊಳ್ಳಬೇಕಾಯಿತು. CAT, BAT, RAT ಗಳಲ್ಲಿಯ a ಉಚ್ಚಾರಕ್ಕಾಗಿ 'ಕ್ಯಾಟ್', 'ಬ್ಯಾಟ್'. 'ರ್‍ಯಾಟ್' ಎಂದು ಮೊದಲಾಗಿ ಸಂಜ್ಞೆ ಬೇಕಾದುವು.

ಒಟ್ಟಾರೆ, ಅಶೋಕ ಚಕವರ್ತಿಯ ಬ್ರಾಹ್ಮೀಲಿಪಿಯಲ್ಲಿ ತನ್ನ ಮೂಲವನ್ನು ಕಂಡುಕೊಂಡ ಕನ್ನಡಲಿಪಿ, ಕ್ರಮೇಣ ವಿಕಾಸವನ್ನು ಹೊಂದುತ್ತ, ಹೊಯ್ಸಳರ ಕಾಲದಲ್ಲಿ ತುಂಬಾ ಸುಂದರವಾಗಿ ಅಲಂಕಾರಪೂರ್ಣವಾಗಿ, ಬರವಣಿಗೆ ಮತ್ತು ಉಚ್ಚಾರಗಳಲ್ಲಿಯ ಸುಸಂಗತಿಯ ಮೂಲಕ ತರ್ಕಬದ್ಧವಾಗಿ, ಸಾಧ್ಯವಿದ್ದಷ್ಟು ಮಟ್ಟಿಗಿನ ಧ್ವನಿಗಳಿಗೆಲ್ಲ ಸಂಕೇತಗಳನ್ನು ಪಡೆದು, ಪ್ರಪಂಚದಲ್ಲಿಯೇ ಸುಂದರಲಿಪಿ ಎಂಬ ಹೆಗ್ಗಳಿಕೆಯನ್ನು ಅಂತಾರಾಷ್ಟ್ರೀಯ ಪ್ರದರ್ಶನಗಳಲ್ಲಿ ಪಡೆದ ಲಿಪಿಯಾಗಿದೆ.

# ಹಳಗನ್ನಡ

ಎಂ. ವಿ. ಸೀತಾರಾಮಯ್ಯ

'ಲಿಪಿರಹಿತ' ಮತ್ತು 'ಲಿಪಿಸಹಿತ'ವಾಗಿರುವ ಜಗತ್ತಿನ ಭಾಷೆಗಳು ಕೆಲವು ಮೂಲಭೂತ ಧ್ವನಿಶಾಸ್ತ್ರದ ( ಉಚ್ಚಾರಣೆಗೆ ಸಂಬಂಧಪಟ್ಟ) ಮತ್ತು ವ್ಯಾಕರಣ ಶಾಸ್ತ್ರದ ವೈಶಿಷ್ಟ್ಯಗಳ ಆಧಾರದ ಮೇಲೆ ಭಾರತೀಯ ವಿಜ್ಞಾನಿಗಳಿಂದ ಕೆಲವು ಪ್ರತ್ಯೇಕ ಗುಂಪುಗಳಾಗಿ ಅಥವಾ ಕುಟುಂಬಗಳಾಗಿ ವರ್ಗೀಕರಣಗೊಂಡಿವೆ. ಭಾರತದ ಭಾಷೆಗಳು ಉತ್ತರ ಭಾರತದ ಇಂಡೋ-ಆರ್ಯನ್ ಕುಟುಂಬ ಮತ್ತು ದ್ರಾವಿಡ ಭಾಷಾ ಕುಟುಂಬ ಎಂದು ಸ್ಥೂಲವಾಗಿ ಎರಡು ಗುಂಪುಗಳಾಗಿ ವಿಭಜಿಸಲ್ಪಟ್ಟಿವೆ. ತಮಿಳು, ತೆಲುಗು, ಮಲಯಾಳಂ, ತುಳು, ಕೊಡಗು, ತೋಡ, ಗೊಂಡಿ, ಕೋಲಾಮಿ, ಕುಯಿ, ಕುರುಖ್, ಪಸೆಲ್ತೊ, ಬ್ರಾಹೂಯಿ ಇವಲ್ಲದೆ ಇನ್ನೂ ಕೆಲವು ಭಾಷೆಗಳೊಂದಿಗೆ ಕನ್ನಡ ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿದ್ದಾಗಿದೆ. ಇಂಡೋ-ಆರ್ಯನ್ ಕುಟುಂಬಕ್ಕೆ ಸೇರಿದ ಸಂಸ್ಕೃತದಿಂದ ಕನ್ನಡ ಹುಟ್ಟಿದೆಯೆಂದು ಹೇಳುವುದು ತಪ್ಪು. ಹಾಗೆಯೆ ಕನ್ನಡ ತಮಿಳು ಭಾಷೆಯಿಂದ ಹುಟ್ಟಿದ ಒಂದು ಉಪಭಾಷೆ ಎಂದೆನ್ನುವ ಕೆಲವು ತಮಿಳು ಪಂಡಿತರ ಹೇಳಿಕೆಗಳೂ ಸಮರ್ಥನೀಯವಲ್ಲ. ಇಂಥ ಅಶಾಸ್ತ್ರೀಯ ಹೇಳಿಕೆಗಳಿಗೆ ಕಾರಣವೂ ಇದೆ. ಕನ್ನಡ, ಅದರಲ್ಲೂ ಹಳಗನ್ನಡ, ಶಬ್ದಸಂಪತ್ತು ಮತ್ತು ಇನ್ನಿತರ ಭಾಷಾ ವೈಲಕ್ಷಣ್ಯಗಳ ವಿಚಾರದಲ್ಲಿ ತಮಿಳು ಭಾಷೆಯನ್ನು ಎಷ್ಟು ಮಟ್ಟಿಗೆ ಹೋಲುತ್ತಿದೆಯೆಂದರೆ ತಮಿಳು ಭಾಷಾ ದುರಭಿಮಾನಿಗಳು ಸ್ವಾಭಾವಿಕವಾಗಿಯೆ ಇಂಥ ಅಸಂಬದ್ಧ ಹೇಳಿಕೆಗಳನ್ನು ನೀಡತೊಡಗುತ್ತಾರೆ, ಕನ್ನಡ ತನ್ನ ಲಿಖಿತ ಚರಿತ್ರೆಯ ಅತಿ ಪ್ರಾಚೀನ ಕಾಲದಿಂದಲೆ ತನ್ನ ಶಬ್ದಸಂಪತ್ತಿಯನ್ನು ಸಮೃದ್ಧಗೊಳಿಸಲು ಸಂಸ್ಕೃತದಿಂದ ಹೇರಳವಾಗಿ, ಕೆಲವೊಂದು ಸಲ ಯಾವ ಕಾರಣವೂ ಇಲ್ಲದೆ ಅನಾವಶ್ಯಕವಾಗಿ ಶಬ್ದಗಳನ್ನು ಎರವಲಾಗಿ ತೆಗೆದುಕೊಳ್ಳಲು ಎಷ್ಟೂ ಹಿಂಜರಿದಿಲ್ಲ. ಹಳಗನ್ನಡ ಕವಿಗಳು ಸಾಮಾನ್ಯವಾಗಿ ಸಂಸ್ಕೃತದಲ್ಲಿ ನುರಿತವರೇ ಆಗಿದ್ದರಿಂದ ತಾವು ಉಭಯ ಭಾಷಾ ಕವಿಗಳೆಂದು ಕರೆದುಕೊಳ್ಳುವಲ್ಲಿ ಅಭಿಮಾನ ಪಡುತ್ತಿದ್ದರು. ಕನ್ನಡ ವ್ಯಾಕರಣಕಾರರು ತಮ್ಮ ಹಳಗನ್ನಡ ವ್ಯಾಕರಣಗಳನ್ನು ಸಂಸ್ಕೃತ ವ್ಯಾಕರಣದ ಮಾದರಿಯಲ್ಲಿ ರಚಿಸುತ್ತಿದ್ದರು. ಸಂಸ್ಕೃತವು ಕನ್ನಡದ ತಾಯಿಯೆಂಬ ತಪ್ಪು ಭಾವನೆಗೆ ಈ ಕೆಲವು ಅಂಶಗಳು ಎಡೆಮಾಡಿಕೊಟ್ಟವು. 'ದ್ರಾವಿಡಭಾಷೆಗಳ ತೌಲನಿಕ ವ್ಯಾಕರಣ' ( A Comparative Grammar of Dravidian Languages) ಎಂಬ ಸುಪ್ರಸಿದ್ಧ ಆಂಗ್ಲಗ್ರಂಥದ ಕರ್ತೃವಾದ ಡಾ। ರಾಬರ್ಟ್ ಕಾಲ್ಡ್‌ವೆಲ್ ಮತ್ತು ಇತರ ಆಧುನಿಕ ಭಾಷಾ ವಿಜ್ಞಾನಿಗಳಾದ ಜ್ಯೂಲ್ಸ್‌ಬ್ಲಾಕ್, ಎಂ. ಬಿ. ಇಮೆನೊ. ಟಿ. ಬರ್ರೊ, ರೆ. ಎಫ್. ಕಿಟೆಲ್ ಮುಂತಾದವರು (ನಮ್ಮ ಕನ್ನಡ ಪಂಡಿತರಾದ ಆರ್. ನರಸಿಂಹಾಚಾರ್ ಮತ್ತು ಬಿ. ಎಂ, ಶ್ರೀಕಂಠಯ್ಯ ಇವರನ್ನೊಳಗೊಂಡು) ಸ್ಪಷ್ಟವಾಗಿ ಮತ್ತು ಸಂದೇಹಕ್ಕೆಷ್ಟೂ ಎಡೆಯಿಲ್ಲದಂತೆ ತಮಿಳು, ಕನ್ನಡ, ತೆಲುಗು ಮುಂತಾದವು ಪರಸ್ಪರ ಸ್ವತಂತ್ರವಾಗಿದ್ದರೂ ದ್ರಾವಿಡ ಭಾಷಾ ಕುಟುಂಬಕ್ಕೆ ಸಂಬಂಧಪಟ್ಟುವೆಂದು ಸ್ಥಾಪಿಸಿದ್ದಾರೆ. ಈ ಭಾಷೆಗಳಲ್ಲಿ ಕೆಲವಂತೂ ತುಂಬ ಬಲಿಷ್ಠವೂ ಚೆನ್ನಾಗಿ ಬೆಳವಣಿಗೆ ಹೊಂದಿದವೂ ಆಗಿದ್ದು ಇತಿಹಾಸ ಪೂರ್ವಕಾಲದ ಭಾಷೆಯಾಗಿದ್ದ 'ಮೂಲ ದ್ರಾವಿಡ' (Proto Dravidian) ಭಾಷೆಯೆಂದು ಕರೆಯಲ್ಪಡುವ ಒಂದೇ ಮಾತೃಭಾಷಾ ವೃಕ್ಷದ ಬೇರೆ ಬೇರೆ ಶಾಖೆಗಳೇ ಆಗಿವೆ.[1]

ಈ ಮೂಲ ದ್ರಾವಿಡ ಭಾಷೆಯ ರಚನಾ ವಿನ್ಯಾಸವನ್ನು ಪುನಃಸೃಷ್ಟಿಗೊಳಿಸುವುದು ಸಾಧ್ಯವಲ್ಲದಿದ್ದರೂ ದ್ರಾವಿಡ ಭಾಷಾ ಕುಟುಂಬದ ಭಾಷೆಗಳಿಗೆ ಮತ್ತು ಅದರ ಉಪ ಕುಟುಂಬಗಳಿಗೆ ಸಮಾನವಾದ ಮೂಲ ಮಾತೃಭಾಷೆಯೊಂದು ಇದೆಯೆಂಬುದನ್ನು ಸಂಬಂಧಪಟ್ಟ ಭಾಷೆಗಳ ಆಯಾ ವೈಲಕ್ಷಣ್ಯಗಳ ತೌಲನಿಕ

1. "ತೌಲನಿಕ ಭಾಷಾಶಾಸ್ತ್ರದ ಮೂಲ ತತ್ತ್ವಗಳ ಪರಿಚಯವುಳ್ಳ ಮತ್ತು ದ್ರಾವಿಡ ಭಾಷೆಗಳ ವ್ಯಾಕರಣ ಹಾಗೂ ಶಬ್ದಕೋಶಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿ ಅವುಗಳನ್ನು ಸಂಸ್ಕೃತ ಭಾಷೆಯ ವ್ಯಾಕರಣ ಹಾಗೂ ಶಬ್ದಕೋಶಗಳೊಂದಿಗೆ ಹೋಲಿಸಿ ನೋಡಿದ ಯಾವನೂ ಈ ಭಾಷೆಗಳ ವ್ಯಾಕರಣ, ರಚನಾ ವಿನ್ಯಾಸ, ಪ್ರಾತ್ಯಯಿಕ ರೂಪಗಳು ಮತ್ತು ಬಹು ಸಂಖ್ಯೆಯಲ್ಲಿರುವ ಮಹತ್ವದ ಧಾತು ರೂಪಗಳು ಸಂಸ್ಕೃತದ ಯಾವುದೇ ಪ್ರಕ್ರಿಯೆಯ ವಿಕಾಸಕ್ಕಾಗಲಿ ವಿಕಾರಕ್ಕಾಗಲಿ ಒಳಪಟ್ಟು ಉಂಟಾದುವೆಂದು ಊಹಿಸಲಾರ – ಡಾ। ರಾಬರ್ಟ್ ಕಾಲ್ಡವೆಲ್. '*A Comparative Grammar of the Dravidian or South Indian Familv of Languages*', University of Madras, 1976; ಪು. 43–44.

ವ್ಯಾಸಂಗದಿಂದ ಸಿದ್ಧಪಡಿಸಲು ಸಾಧ್ಯವಿದೆಯೆಂಬುದು ಕಂಡು ಬಂದಿದೆ.

ದ್ರಾವಿಡ ಭಾಷೆಗಳು ಭಾರತದಲ್ಲೆಲ್ಲ ಬೇರೆ ಬೇರೆ ಪ್ರದೇಶಗಳಲ್ಲಿ ಹರಡಿವೆಯೆಂಬುದು ಎಲ್ಲರಿಗೂ ಗೊತ್ತಿದ್ದ ಭಾಷಾಶಾಸ್ತ್ರ ವಿಷಯ. ಒಟ್ಟಿನಲ್ಲಿ ದ್ರಾವಿಡ ಭಾಷೆಗಳ ಪೀಳಿಗೆಯ ಸಂಬಂಧದ ಪರಿಶೀಲನೆ ಮಾಡುವಾಗ ಅತಿ ಹತ್ತಿರದ ಇಲ್ಲವೆ ಪ್ರತ್ಯೇಕವಾಗಿರುವ ಭೌಗೋಲಿಕ ಅಥವಾ ಪ್ರಾದೇಶಿಕ ಅಂಶಗಳನ್ನು ಗಮನದಲ್ಲಿರಿಸಿಕೊಳ್ಳುವುದು ಅವಶ್ಯಕ. ಇವು ದ್ರಾವಿಡ ಭಾಷೆಗಳಲ್ಲಿಯ ಉಪಕುಟುಂಬಗಳ ಹರಡುವಿಕೆಯನ್ನು ಗುರುತಿಸಿ ನಿರ್ಣಯಿಸುತ್ತವೆ. ಹೆಚ್ಚಿನ ಶಾಸ್ತ್ರೀಯ ವಿವರಗಳ ವಿವೇಚನೆ ಈ ಲೇಖನದ ಉದ್ದೇಶವಲ್ಲದ್ದರಿಂದ ಅದಕ್ಕೆ ಹೋಗದೆ 'ಮೂಲ ದ್ರಾವಿಡ' ಭಾಷೆ ಮೂರು ಮುಖ್ಯ ಉಪಕುಟುಂಬಗಳಾಗಿ ಉದಾ: ಉತ್ತರ ದ್ರಾವಿಡ (ಉ.ದ್ರಾ.), ಮಧ್ಯದ್ರಾವಿಡ(ಮ.ದ್ರಾ) ಮತ್ತು ದಕ್ಷಿಣ ದ್ರಾವಿಡ (ದ.ದ್ರಾ) ಎಂದು ಕವಲೊಡೆದುವೆಂದಷ್ಟೇ ಹೇಳಬಹುದು. ತೆಲುಗು ಭೌಗೋಲಿಕವಾಗಿ ದ.ದ್ರಾ. ಭಾಷೆಯಾಗಿದ್ದು, ದ.ದ್ರಾ. ಗುಂಪಿನ ಕೆಲವು ಸಾಮಾನ್ಯ ಲಕ್ಷಣಗಳನ್ನು ಹೊಂದಿದ್ದರೂ ಅದು ಮ.ದ್ರಾ. ಗುಂಪಿಗೆ ಸೇರಿದ್ದೆಂದು ಕಾಣುತ್ತದೆ. ತಮಿಳು, ಕನ್ನಡ ಮತ್ತು ತುಳು – ಇವು ಪೀಳಿಗೆಯ ಸಂಬಂಧದ ದೃಷ್ಟಿಯಿಂದ ಸ್ವತಂತ್ರ ವೈಶಿಷ್ಟ್ಯಗಳನ್ನು ವ್ಯಕ್ತಪಡಿಸುತ್ತವೆ. ದಕ್ಷಿಣ ಭಾರತದಲ್ಲಿ ಮೂಲ ದ್ರಾವಿಡ ಭಾಷೆ ಹರಡಿಕೊಂಡ ಕ್ರಮದಲ್ಲಿ ತುಳುವಿನ ಖಚಿತ ಸ್ಥಾನ ನಿರ್ದೇಶ ಮಾಡುವುದು ಕಠಿಣವೆನಿಸಿದೆ. ಇದೇನಿದ್ದರೂ, ಕನ್ನಡ , ತಮಿಳುಗಳೆರಡೂ ಸಮಾನವಾಗಿ ದಕ್ಷಿಣ ದ್ರಾವಿಡ ಅಂಶಗಳನ್ನು ಹೊಂದಿದ್ದ ಅವಸ್ಥೆಯೊಂದು ಇತ್ತೆಂದು ತೋರುತ್ತದೆ. ಅದನ್ನು 'ಕಂದಮಿೞ್ ಇಲ್ಲವೆ 'ತಮಿೞ್ ಕನ್ನಡಂ' ಅವಸ್ಥೆಯೆಂದು ಕರೆಯಬಹುದು. ದ.ದ್ರಾ.ದ ಈ ಮುಖ್ಯ ಶಾಖೆ ಎರಡು ಸ್ವತಂತ್ರ ಗುಂಪುಗಳಾಗಿ ಎಂದರೆ ಶಾಸನಗಳಲ್ಲಿಯ 'ಪೂರ್ವದ ಹಳಗನ್ನಡ' ಮತ್ತು 'ಪೂರ್ವದ ಹಳದಮಿಳು' – ಎಂದು ವಿಭಜನೆಗೊಂಡಂತೆ ಕಾಣುತ್ತದೆ. ಧ್ವನಿಶಾಸ್ತ್ರ ಮತ್ತು ಆಕೃತಿಮಾಶಾಸ್ತ್ರ (Phonology & Morphology) ಗಳ ದೃಷ್ಟಿ ಯಿಂದ ಪೂ.ಹ.ಗನ್ನಡ ಮತ್ತು ಪ್ರಾಚೀನ ಸಾಹಿತ್ಯಕ ಮತ್ತು ಶಾಸನಿಕ ಹಳದಮಿಳು ಇವೆರಡರ ನಡುವೆ ಅನೇಕ ಸಾಮ್ಯಗಳಿವೆ. ಕನ್ನಡದಲ್ಲಿ ಉಪಲಬ್ಧವಿರುವ ಅತಿ ಪ್ರಾಚೀನ ಹಾಗೂ ಪ್ರಪ್ರಥಮ ಗ್ರಂಥವಾಗಿರುವ ಶ್ರೀವಿಜಯ[2]ನ 'ಕವಿರಾಜಮಾರ್ಗ' 'ಪಟಗನ್ನಡ' ವನ್ನು ಉಲ್ಲೇಖಿಸುತ್ತದೆ. ಅದೇ ಬಹುಶಃ ಈ ಮೊದಲು ಉಲ್ಲೇಖಿಸಿದ ಪೂ. ಹಟಗನ್ನಡವಿರಬಹುದು.[3] ಆಧುನಿಕ ವಿದ್ವಾಂಸರು ಇದನ್ನು 'ಪೂ. ಹ. ಗನ್ನಡ'ವೆಂದೇ ಹೆಸರಿಸಿದ್ದಾರೆ. ಕೆಳಗೆ ಕಾಣಿಸಿದ 6 ನೆಯ ಮತ್ತು 7 ನೆಯ ಶತಕಗಳ ಕನ್ನಡ ಶಾಸನಗಳಿಂದಾಯ್ದ ಉದಾಹರಣೆಗಳು ಪೂ. ಹ. ಗನ್ನಡ ಮತ್ತು ತಮಿಳುಗಳ ನಡುವೆ ತೀರ ಹತ್ತಿರದ ಹೋಲಿಕೆಗಳಿವೆಯೆಂಬುದನ್ನು ಸಮರ್ಥಿಸುತ್ತವೆ :

(1) ಹಲ್ಮಿಡಿ ಶಾಸನ (ಕ್ರಿ. ಶ. 450) : ನರಿದಾವಿ (ಳೆ) –: ನಾಡುಳ್ (ಹ.ಗ. ನಾಡೊಳ್); ಕಾದಿಱಿದು (ಕಾದು + ಇಱಿದದು); ಹ.ಗ. ಕಾದೆಱಿದು; ಕುಱುಂಬಿಡಿವಿಟ್ಟಾರ್ (ಹ.ಗ ಬಿಟ್ಟರ್); ಅದಾನಟಿಪೊನ್ಗೆ (ಹ.ಗ. ಅದನಟಿವನ್ಗೆ) – ಇತ್ಯಾದಿ.

(2) ಬಾದಾಮಿ ಶಾಸನ: (ಕ್ರಿ. ಶ. 597–609): ಇತ್ತೊದಾನ್ ಅೞಿವೊನ್ (ಹ.ಗ. ಇತ್ತುದನ್ ಅೞಿವನ್) ಏೞನೆಯಾ ನರಕಾದಾ ಪುೞುಅಕ್ಕುಂ (ಹ.ಗ. ಏೞನೆಯ ನರಕದ ಪುೞು ಅಕ್ಕುಂ).

(ಟಿಪ್ಪಣಿ : ಕವಿರಾಜಮಾರ್ಗವು 'ಆ' ಎಂಬ ಷಷ್ಠೀ ವಿಭಕಿ ಪ್ರತ್ಯಯಂದ ಬಳಕೆಯನ್ನು ಅಂಗೀಕರಿಸಿದ್ದರಿಂದ ಮತ್ತು ಕೇಶಿರಾಜನೂ 'ಈಂದ ಪುಲಿಯಾಪೊಲಿರ್ದಳ್' ಎಂಬ ಪ್ರಯೋಗವನ್ನು ಉದಾಹರಣೆಯಾಗಿ ಉಲ್ಲೇಖಿಸಿದ್ದರಿಂದ ಪೂ.ಹ.ಗನ್ನಡದ ಷಷ್ಠೀ ವಿಭಕ್ತಿ ಪ್ರತ್ಯಯವಾದ 'ಆ' ಎಂಬುದು ಹಳಗನ್ನಡದಲ್ಲೂ ಉಳಿದು ಬಂದಿತ್ತೆಂದು ತಿಳಿಯಬಹುದಾಗಿದೆ.)

(3) ಬಳ್ಳಿಗಾವೆ ಶಾಸನ : (ಕ್ರಿ. ಶ. 690); ಎರಡುಂನಾಟ್ಕೆ (ನಾಡು + ಕೆ) (ಹ.ಗ. ಎರಡುಂ ನಾಡಿಗೆ); ಪ್ರಸಾದಂಕೆಯ್ದಾರ್ (ಹ.ಗ. ಪ್ರಸಾದಂಗೆಯ್ದರ್); ವಿತ್ತಿದಲ್ಲಿವೆಳೆಯಾದೆಕೆಡುಗೆ (ಹ.ಗ. ಬಿತ್ತಿದಲ್ಲಿ ಬೆಳೆಯದೆ ಕಿಡುಗೆ).

ಮೇಲ್ಕಾಣಿಸಿದ ಉದಾಹರಣೆಗಳಲ್ಲಿ 'ಉಳ್' (ಸಪ್ತಮಿ ವಿಭಕ್ತಿ ಪ್ರತ್ಯಯ; ಹ.ಗ.: 'ಒಳ್'); 'ಎಱಿ (ಹ.ಗ. ಇಱಿ). ವಿಟ್ಟಾರ್ (ಹ.ಗ. ಬಿಟ್ಟರ್; 'ವಿಡು – ಬಿಡು), ಅದಾನ್ (ಹಗ. ಅದನ್ : ದ್ವಿತೀಯಾ ವಿಭಕ್ತಿ ಪ್ರತ್ಯಯ ಆನ್ ಅನ್ (ಹ.ಗ.) ಇಟ್ಟುದಾನ್ (ಹ.ಗ. ಇಟ್ಟುದನ್), ಕೆಯ್ (ಹ.ಗ. ಗೆಯ್) ಇತ್ಯಾದಿ. ಇದರಿಂದ ಪೂ.ಹ.ಗನ್ನಡವು ತಮಿಳನ್ನು ಹೇಗೆ ಮಹತ್ವಪೂರ್ಣ ರೀತಿಯಲ್ಲಿ ಹೋಲುತ್ತದೆಂಬುದನ್ನು ತಿಳಿಯಬಹುದಾಗಿದೆ,

ಹೀಗೆಯೆ ಕೆಲವು ಶಬ್ದಗಳು ಮತ್ತು 'ಆಕೃತಿ' ಅಥವಾ 'ಆಕೃತಿಮಾ'ಗಳು[4] ಹಳಗನ್ನಡ ಮತ್ತು ತಮಿಳುಗಳಲ್ಲಿ ಸಮಾನ

---

2. 'ಕವಿರಾಜಮಾರ್ಗ'ದ ಗ್ರಂಥಕರ್ತನು ರಾಷ್ಟ್ರಕೂಟ ಚಕ್ರವರ್ತಿಯಾಗಿದ್ದ ಅಮೋಘವರ್ಷ ನೃಪತುಂಗ (ಕ್ರಿ.ಶ. 814 – 877)ನೆಂದು ಈ ಗ್ರಂಥದ ಪ್ರಥಮ ಆವೃತ್ತಿ(1898)ಯ ಸಂಪಾದಕ ಕೆ. ಬಿ. ಪಾಠಕರು ಮತ್ತ್ ಆರ್. ನರಸಿಂಹಾಚಾರ್ಯರೇ ಮೊದಲಾದ ಇತರ ಪ್ರಮುಖ ವಿದ್ವಾಂಸರು ನಿರ್ಣಯಿಸಿದ್ದರು. ಹೀಗಿದ್ದರೂ ಆರ್. ನರಸಿಂಹಾಚಾರ್ಯರೇ ಸ್ವತಃ ಈ ಗ್ರಂಥದ ನಿಜವಾದ ಕರ್ತೃ ಶ್ರೀ ವಿಜಯನೇ ಇದ್ದಿರಬಹುದೆಂದು ಸೂಚಿಸಿದ್ದರು. ಈ ಗ್ರಂಥದ ಕರ್ತೃ ಶ್ರೀವಿಜಯನೇ ಎಂದು ಸ್ಥಾಪಿಸುವ ಕಾರ್ಯ ಪ್ರಸ್ತುತ ಲೇಖಕನದಾಯ್ತು ಮತ್ತು ಈ ಲೇಖಕನು ಮಂಡಿಸಿದ ಸಂಶೋಧನಾತ್ಮಕ ನಿರ್ಣಯಾಂಶಗಳನ್ನು ಬಹುಮಟ್ಟಿಗೆ ಇಂದಿನ ಎಲ್ಲ ವಿದ್ವಾಂಸರು ಸ್ವೀಕರಿಸಿದ್ದಾರೆ.

3. ನೆಲಸಿದ ಕಾವ್ಯಂಕಾವ್ಯ ।
ಕ್ಕೆ ಲಕ್ಷಣಂ ಸತತಮೆಂದೆಪಟಗನ್ನಡಮಂ
ಪೊಲಗೆಡಿಸಿ ನುಡಿವರ್ ಆಗಮ ।
ಬಲಹೀನರ್ ದೇಸಿಯಲ್ಲದೆಂದೞಿದಿರ್ದುಂ ॥ (1 – 48)

4. ಆಕೃತಿ (Morph) ಅಥವಾ ಆಕೃತಿಮಾ (Morphene) ಎಂಬುದು ಪದರೂಪದ ಧ್ವನಿ ಘಟಕವಾಗಿದ್ದು ಅದು ಅರ್ಥವುಳ್ಳದು ಇಲ್ಲವೆ ಅರ್ಥವಿಲ್ಲದು ಆಗಿರಬಹುದು. ಮೇಲಿನ ಶಬ್ದಗಳ ಪಟ್ಟಿಯಲ್ಲಿ ತಾಯ್, ಪೆಣ್, ಕೆ ಇವು ಆಕೃತಿಮಾಗಳು. 'ಅವನ್ಗೆ' (ಅ + ಆನ್ [ ವನ್] + ಗೆ) ಈ ಪದದಲ್ಲಿ ಮೂರು ಆಕೃತಿಮಾಗಳುಂಟು.

ವಾಗಿರುವವೆಂಬುದಕ್ಕೆ ಹಲವಾರು ಉದಾಹರಣೆಗಳನ್ನು ಎತ್ತಿ ತೋರಿಸಬಹುದು :

ನಾಮಪದಗಳು : ತಾಯ್, ಪೆಣ್, ಅಡಿ, ಮುಡಿ, ಕಣ್, ಕಾಲ್, ಮಣ್, ನೀರ್, ಪಗಲ್, ಪುಲಿ, ಪೊನ್, ಪಣಮ್, ಅಱಿಮ್, ಅಱಿವು, ಇತ್ಯಾದಿ.

ಕ್ರಿಯೊಧಾತುರೂಪಗಳು : ಆಡು, ಅಱಿ, ಓಡು, ಓದು, ಕಡಿ, ಕುಡಿ, ನಂಬು ಇತ್ಯಾದಿ.

ವಿಶೇಷಣಗಳು : ನಲ್, ನೇರ್, ತಣ್, ನುಣ್, ಪೞಿ, ಮೆಲ್, ಇನಿಯ ಇತ್ಯಾದಿ.

ಸಂಖ್ಯಾವಾಚಕಗಳು : ಆಱು, ಏೞ್, ಪತ್ತು, ನೂಱು.

ಅವ್ಯಯಗಳು ಮತ್ತು ಪ್ರತ್ಯಯಗಳು : ಉಮ್, ಪಿನ್, ಮುನ್, ಒಳ್ – ಉಳ್ ( – ಒಳ್), ಕೆ, – ಅವ್.

ಮೇಲಿನ ಉದಾಹರಣೆಗಳಿಂದ ಕನ್ನಡ ಮತ್ತು ತಮಿಳುಗಳು ಒಂದೇ ಮೂಲ ಮಾತೃಭಾಷೆಯಾದ ದ.ದ್ರಾ.ದಿಂದ ಸಮಾನ ವಾದ ಅಂಶಗಳನ್ನು ಪಡೆದಿವೆ ಎಂದು ಕಂಡುಬರುತ್ತದೆ. ಹಳಗನ್ನಡದವೇ ಆದ ಸ್ವತಂತ್ರ ಅಂಶಗಳನ್ನು ತಿಳಿದುಕೊಳ್ಳ ಬೇಕಾದರೆ ಪೂ.ಹ.ಗನ್ನಡ ಮತ್ತು ಪೂ.ಹ.ದಮಿಳುಗಳು ದ.ದ್ರಾ.ದ ಕಾಂಡದಿಂದಲೆ ಕವಲೊಡೆದುವಾಗಿದ್ದು (ಈ ಮೊದಲೆ ಕಂಡು ಕೊಂಡಂತೆ) ಅದರಿಂದಲೆ ಸಮಾನ ಅಂಶಗಳನ್ನು ಪಡೆದಿವೆಯೆಂಬ ಸಂಗತಿಯನ್ನು ಅರಿತುಕೊಳ್ಳುವುದು ಅವಶ್ಯಕ. ಇವು ಒಂದ ನ್ನೊಂದು ಅಗಲಿ ಬೇರೆ ಬೇರೆ ದಿಕ್ಕುಗಳತ್ತ ಸಾಗುತ್ತಿದ್ದ ಈ ವಿಧಾನದಲ್ಲಿ ಕನ್ನಡವು ತಮಿಳಿನಲ್ಲಿ ಕಾಣದೊರೆಯದ ಕೆಲವು ಪ್ರಾಚೀನ ಅಂಶಗಳನ್ನು ಉಳಿಸಿಕೊಂಡಿದ್ದರೆ, ತಮಿಳು ಆ ಪ್ರಾಚೀನ ಅಂಶಗಳಲ್ಲಿ ಹೆಚ್ಚಿನವನ್ನು ಉಳಿಸಿಕೊಂಡಿದೆ.

'ಕ್' ಧ್ವನಿಮಾ (ಎಂದರೆ ಧ್ವನಿ) ಹ.ಗ.ದಲ್ಲಿ ಉಳಿದಿದೆ; ತಮಿಳಿನಲ್ಲಿ ಅದು 'ತಾಲವ್ಯೀಕರಣ್ ಹೊಂದಿ 'ಚ್' ಆಗಿದೆ :

| | |
|---|---|
| ಕನ್ನಡ | ತಮಿಳು |
| ಕೇರಿ (ಓಣಿ) | ಚೇರಿ |
| ಕಿವಿ (ಶ್ರವಣೇಂದ್ರಿಯ) | ಚೆವಿ |
| ಕೆಮ್ಮುಲು | ಚೆರುಮಲ್ |
| ಕೆರೆ (ಕೊಳ) | ಚೆಱಿ |
| ಕೀಱು (ಕೂಗಾಡು) | ಚೀಱು |
| ಕಿವುಡು | ಚೆವಿಡು ಇತ್ಯಾದಿ. |

ಪೂ.ಹ. ಗನ್ನಡವನ್ನು ಕುರಿತು ಬರೆಯುತ್ತ ಆರ್. ನರಸಿಂಹಾ ಚಾರ್ಯರು ಹೀಗೆ ಹೇಳಿದ್ದಾರೆ : "ಮುಂದೆ ಬಂದ ಹಳಗನ್ನಡದ ಅವಸ್ಥಾ ಭೇದದಲ್ಲಿ ಕಾಣದೊರೆಯದ ಹಲವಾರು ವ್ಯಾಕರಣ ವೈಶಿಷ್ಟ್ಯಗಳನ್ನು ಹೊಂದಿರುವ ಬಹು ಮಹತ್ವಪೂರ್ಣ ಅವಸ್ಥಾ ಭೇದವಿದು. ಈಗ ಹ.ಗ.ದಲ್ಲಿ ಕಾಣ ದೊರೆಯದ ಸಂದಾನ್ ಬಂದೋನ್, ಜಕ್ಕಲುಳ್, ತಪ್ಪಾದೆ, ವಿಟ್ಟದು, ನೋನ್ಪಿ, ಕೆಡುಗು ವರೆಯಾನ್, ಎೞಿ, ತೞಿಕ್ಕಾಡು, – ಮುಂತಾದ ರೂಪಗಳು ತಮಿಳಿನಲ್ಲಿ ಬಳಕೆಯಲ್ಲಿರುವ ರೂಪಗಳೇ ಆಗಿವೆ; ಇಲ್ಲವೆ ಬಳಕೆ ಯಲ್ಲಿರುವ ರೂಪಗಳಿಗೆ ಹತ್ತಿರದವಾಗಿವೆ. ಕನ್ನಡ ಸಾಹಿತ್ಯ ಪ್ರಾಚೀನ ಕಾಲದಲ್ಲಿ ದೂರ ದೂರ ಹೋದಹಾಗೆ ಅಲ್ಲಿಯ ರೂಪಗಳು ಹೆಚ್ಚು ಹೆಚ್ಚಾಗಿ ತಮಿಳಿನ ರೂಪಗಳನ್ನೆ ಹೋಲು ವುದನ್ನು ಕಾಣುತ್ತೇವೆಂದು ಹೇಳಬಹುದಾಗಿದೆ"

(History of Kannada Language, Mysore University – 1934 ಪು. 128 – 131).

[ 2 ]

ಹಳಗನ್ನಡದ ಅವಸ್ಥಾಭೇದದಲ್ಲೂ ಕನ್ನಡ ತನ್ನ ಅತಿ ಪ್ರಾಚೀನ ರೂಪಗಳನ್ನು ಕೆಲವು ಶಬ್ದಗಳಲ್ಲಿ ಉಳಿಸಿಕೊಂಡು ಬಂದಿದೆ. ಉದಾ : ನೋಡು, ನಾಡು, ಕಾಡು, ಕೋಡು, ಇತ್ಯಾದಿ ಮತ್ತು ಅವುಗಳಿಂದ ಹುಟ್ಟಿದ ನೋಟ್ಕಿ ನಾಟ್ಕಿ ಕಾಟ್ಕಿಚ್ಚು ಕೋಟ್ಗಿ ಇತ್ಯಾದಿ. ನೋಟ್, ನಾಟ್, ಕಾಟ್, ಕೋಟ್ (ಅಥವಾ ನೋಟ್, ನಾಟ್, ಕಾಟ್(?) ಕೋಟ್, – ಇವು ಪ್ರಾಯಶಃ ಮೂಲ ದ್ರಾವಿಡ ರೂಪಗಳಿದ್ದಿರಬೇಕು. (ಧ್ವನಿ ಮಾಧುರ್ಯ (ಅಥವಾ ಸೌಕರ್ಯವುಂಟು ಮಾಡುವ 'ಉ' ಸ್ವರವನ್ನು ಹೊಂದಿ ನೋಟ್(ಟ್) ಇತ್ಯಾದಿ ನೋಡು[6] ಇತ್ಯಾದಿ ಕನ್ನಡದಲ್ಲಿ ಆಗಿರಬೇಕು.)

ಈ ಸಂದರ್ಭದಲ್ಲಿ ಕನ್ನಡದ 'ನೋಡು' ಪದದ ಸಜಾತೀಯ 'ಅಥವಾ ಜ್ಞಾತಿ ಪದವು ತಮಿಳು – ಮಲಯಾಳಂಗಳಲ್ಲಿ 'ನೋಕ್ಕು' ಎಂದಿದೆ. ಕನ್ನಡದ 'ನೋಟ', ತಮಿಳಿನಲ್ಲಿ 'ನೋಕೆ' ಎಂದಿದೆ. ಕಿಟೆಲ್ ಶಬ್ದಕೋಶವು (ಪು. 914) 'ನೋಟ್ ಶಬ್ದವು ಪ್ರಾಯಶಃ ರೂಪಗಳಾದ 'ನೋಟ್ಪಂ ( – ನೋಡುವಂ), ನೋಟ್ಪೊಡೆ, ನೋಟ್ಪುದು, ಇತ್ಯಾದಿಗಳ ಆಧಾರದಿಂದ ಉಲ್ಲೇಖಿ ಸಿದೆ. 'ನೋಡ್' ಎಂಬುದಕ್ಕೆ 'ಕೆ' ತದ್ಧಿತ ಪ್ರತ್ಯಯವನ್ನು ಹತ್ತಿಸಿ (ನೋಡ್ + ಕೆ < ನೋಟ್ಕೆ) ನೋಟ್ಕೆ ಎಂಬ ನಾಮಪದವನ್ನು ಸಾಧಿಸುವುದು ಸುಲಭ. ಹೀಗೆ 'ನೋಟ್ಕೆ ಎಂಬುದು ತಮಿಳಿನ 'ನೋಕೆ' ( – ನೋಟ) ಎಂಬ ರೂಪಕ್ಕಿಂತ ಪ್ರಾಚೀನವಾದು ದೆಂದು ತೋರುತ್ತದೆ. ಹಾಗೆಯೇ ನೋಟ್ಕು ಎಂಬುದು ನೋಕ್ಕು ಎಂಬುದರ ಪ್ರಾಚೀನ ರೂಪ. (ನೋಡ್ < ನೋಲ ಅಥವಾ (ನೋಟ್ + ಕು) < ನೋಟ್ಕು < ನೋಕ್ಕು)

ಈ ಬಗೆಯ ಸಮೀಕ್ಷೆಯನ್ನು ಹೀಗೆಯೇ ಮುಂದುವರಿಸಿ ದಲ್ಲಿ ಪೂ.ಹ.ಗನ್ನಡ ಮತ್ತು ಪೂ. ತಮಿಳುಗಳು ಸಮಾನವಾದ ಮೂಲ ಭಾಷಾಕಾಂಡದಿಂದ (ಎಂದರೆ ಮೂಲ ದ.ದ್ರಾ.ದಿಂದ) ಕವಲೊಡೆದಿರಬೇಕೆಂದು ಊಹಿಸಬೇಕಾಗುತ್ತದೆ. ಈ ಮೂಲ ಭಾಷಾಕಾಂಡ ವನ್ನು 'ಕಂದಮಿೞ್' ಎಂದು ಈ ಮೊದಲೆ

5. ತಾಲವ್ಯೀಕರಿಸು: ಉಚ್ಚಾರಣೆಯ ಧ್ವನಿಯನ್ನು ತಾಲವ್ಯ ಮಾಡು. (ಕ್ < ಚ್). ತಾಲವ್ಯೀಕರಣ.

6. 'ಟ'ವು 'ಡ' ಆಗಿ ಪರಿವರ್ತನ ಹೊಂದುವುದೆಂಬುದು ಸಂದೇಹಾಸ್ಪದ. ಯಾಕೆಂದರೆ ಕೇಶಿರಾಜನ ಮತದಂತೆ ಡ (ಟ ಪರಿವರ್ತನವು ಸುಸ್ಪಷ್ಟವಾಗಿದೆ: 'ಡಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ' 'ಟಬಿಂ' ಪುಟ್ಟುಗುಂ ಎಂದು ವಿಶದಪಡಿಸಿದ್ದಾನೆ. ಉದಾ : ಕೋಡಿ < ಕೋಟಿ, ಕಡಲ್ < ಕಟಲ್ ಆದರೆ ನಿಸ್ಸಂದೇಹ ವಾಗಿ ಕನ್ನಡ ಮತ್ತು ತಮಿಳುಗಳ 'ಕೋಟಿ (ಕೋಟಿ ಕನ್ನಡದಲ್ಲಿ 'ಕೋಳಿ' ಆಗುತ್ತದೆ) ತೆಲುಗಿನಲ್ಲಿ 'ಕೋಡಿ' ಎಂದಾಗಿದೆ.

ಸೂಚಿಸಿದಂತೆ ಹೆಸರಿಸಬೇಕಾಗುತ್ತದೆ. (ಮೂಲದ ದ್ರಾ.ಭಾಷೆಯ ಈ ಅವಸ್ಥೆಯ ಸ್ವರೂಪವನ್ನು ನಾವು ಬರಿ ಊಹಿಸಿ ತಿಳಿದು ಕೊಳ್ಳಬೇಕಾಗುತ್ತದೆ. ಯಾಕೆಂದರೆ ಇದರ ಉಲ್ಲೇಖ ಎಲ್ಲಿಯೂ ಉಪಲಬ್ಧವಿಲ್ಲ) ಈ ಮೂಲದ ದ್ರಾ.ದ ಮಾತೃಭಾಷಾ ಕಾಂಡ ದಿಂದ ಹಲ ಕೆಲವು ಭಾಷಾವೈಚಿತ್ರ್ಯಗಳ ಆಧಾರದ ಮೇಲೆ ಉಪ ಭಾಷಾ ಕುಟುಂಬಗಳು ಹುಟ್ಟಿ ಬೆಳೆದಿವೆ. ದ.ದ್ರಾ. ಭಾಷೆಗಳ ಮೂಲ ಸಂಬಂಧವನ್ನು ಅವುಗಳ ವಂಶಾವಳಿಯ ರೇಖಾ ಚಿತ್ರದಿಂದ ಹೀಗೆ ವಿಶದಪಡಿಸಬಹುದಾಗಿದೆ :




ಕವಿರಾಜಮಾರ್ಗದಲ್ಲಿ ಅನೇಕ ಗದ್ಯಕಾರರ ಮತ್ತು ಪದ್ಯ ಕಾರರ ಹೆಸರುಗಳು ಉಲ್ಲೇಖಗೊಂಡಿವೆ. ಅವರು ಕ್ರಿ. ಶ. 850ಕ್ಕೆ ಮುಂಚೆ ಬದುಕಿದ್ದು ಗ್ರಂಥರಚನೆ ಮಾಡಿದವರು. ದುರ್ದೈವ ದಿಂದ ಈ ಗ್ರಂಥಕರ್ತರ ಯಾವೊಂದು ಕೃತಿಯೂ ಇಂದು ಉಪಲಬ್ಧವಿಲ್ಲ. ಮತ್ತು ಈ ಗ್ರಂಥಗಳಲ್ಲಿ ಬಳಸಲ್ಪಟ್ಟ ಭಾಷೆ, ನಮಗೆ ತಿಳಿದಂತೆ, 'ಕವಿರಾಜಮಾರ್ಗ'ದಿಂದ ಈಚೆಗೆ ಮುಂದು ವರಿದು ಬಂದ ಹಳಗನ್ನಡವೆಂದಾಗಲಿ ಪೂ.ಹ.ಗನ್ನಡಕ್ಕೆ ಹತ್ತಿರ ದ್ದೆಂದಾಗಲಿ ಹೇಳಲಾಗದು. 'ಕವಿರಾಜಮಾರ್ಗಕಾರ' ಈ ಗ್ರಂಥ ಕರ್ತರನ್ನು ಬಹು ಗೌರವದಿಂದ ಉಲ್ಲೇಖಿಸಿರುವುದರಿಂದ ಈ ಗ್ರಂಥಗಳ ಕನ್ನಡವು 'ಕವಿರಾಜಮಾರ್ಗ'ದ ಹಳಗನ್ನಡವನ್ನು ಹೋಲುವಂಥದೇ ಆಗಿರಲು ಸಾಧ್ಯ.

[ 3 ]

ಹ.ಗ.ದ ಪ್ರಮುಖ ಲಕ್ಷಣಗಳನ್ನು ತಿಳಿದುಕೊಳ್ಳುವ ಮೊದಲು ಭೌಗೋಲಿಕ ಮತ್ತು ಐತಿಹಾಸಿಕ ಕಾರಣಗಳಿಂದ ಮತ್ತು ತತ್ಪರಿಣಾಮವಾಗಿ ಭಾಷೆಯ ರಚನಾವಿನ್ಯಾಸಗಳಲ್ಲಿಹೊಸ ತನ (ಎಂದರೆ ಬದಲಾವಣೆಗಳು) ಉಂಟಾಗಲು ಹಳಗನ್ನಡವು ಯಾವ ಯಾವ ಬಾಹ್ಯ ಪ್ರಭಾವಗಳಿಗೆ ಗುರಿಯಾಯ್ತು ಎಂಬು ದನ್ನು ಗೊತ್ತುಪಡಿಸಿಕೊಳ್ಳುವುದು ಅವಶ್ಯಕ.

ಕಾಲಕ್ರಮವಾಗಿ, ಹಲ್ಮಿಡಿಶಾಸನವು (ಕ್ರಿ. ಶ. 450) ಪೂ.ಹ. ಗನ್ನಡದ ಅತಿ ಪ್ರಾಚೀನ ಹಾಗೂ ಅಧಿಕೃತ ದಾಖಲೆ ಯಾಗಿದೆ.[8] ಆ ತರುವಾಯದಿಂದ ಕ್ರಿ. ಶ. 750ರ ವರೆಗೆ ಹಲವಾರು ಶಾಸನಗಳು ದೊರಕಿವೆ. ಈಗಾಗಲೆ ಸೂಚಿಸಿದಂತೆ ಪೂ.ಹ. ಗನ್ನಡದ ಲಕ್ಷಣಗಳು ಈ ಶಾಸನಗಳಲ್ಲಿ ಕಂಡುಬರುತ್ತವೆ. ಇವು ಗಳಲ್ಲಿಯ ಶಬ್ದಗಳ ಬಳಕೆಯ ಮೇಲೆ ಮತ್ತು ಕಾವ್ಯಭಾಷಾ ಸರಣಿಯ ಮೇಲೆ ಅನಗತ್ಯ ಸಂಸ್ಕೃತ ಭಾಷಾ ಪ್ರಭಾವವು, ದಟ್ಟ ವಾಗಿ ಬಿದ್ದುದು ಕಂಡುಬರುತ್ತದೆ. ದೇಶೀಯ ಮಟ್ಟು ಎನಿಸಿದ ತ್ರಿಪದಿ[9] ಛಂದಸ್ಸಿನಲ್ಲಿ ರಚಿತವಾದ ಒಂದು ಶಾಸನವನ್ನುಳಿದು ಇನ್ನಿತರ ಎಲ್ಲವೂ ಸಾಮಾನ್ಯವಾಗಿ ಸಂಸ್ಕೃತ ಭೂಯಿಷ್ಠ ಶೈಲಿ ಯಲ್ಲಿಯೆ ರಚಿತವಾಗಿದೆ. ಈ ಶಾಸನಗಳನ್ನು ರಚಿಸಿದವರು ಸಂಸ್ಕೃತ ಕಾವ್ಯ ಭಾಷಾ ಸರಣಿಯಲ್ಲಿ ನುರಿತವರಾದ್ದರಿಂದಲೆ ಇವು ಗಳಲ್ಲಿ ಸಂಸ್ಕೃತದ ಮಿಶ್ರಣವನ್ನು ಹೇರಳವಾಗಿ ಕಾಣುತ್ತೇವೆ. ಸಾಹಿತ್ಯಿಕ ಶೈಲಿಯಲ್ಲಿ ಇದ್ದರೂ ಈ ಶಾಸನಗಳು ಆಯಾ ಕಾಲದ ಆಡುಮಾತಿನ ಕನ್ನಡದಲ್ಲಿ ಕಾಣದೊರೆಯುತ್ತವೆ. (ಉದಾ : ಬಂದೋರು, ಹೋದೋರು, ಇದ್ದೋರು, ಇಲ್ಲದೋರು). ಈ ಭಾಷಾ ವೈಚಿತ್ರ್ಯಗಳು ಹತ್ತನೆಯ ಶತಮಾನದವರೆಗೆ ಹಾಗೆಯೆ ಸಾಹಿತ್ಯಿಕ ಭಾಷೆಯಲ್ಲೂ ನುಗ್ಗಿಬಂದಿರಬೇಕು. ಹಾಗಿಲ್ಲದಿದ್ದರೆ ಚಾವುಂಡರಾಯ ಪುರಾಣಂ' ಗ್ರಂಥದಲ್ಲಿ ಅಪರೂಪವಾಗಿಯೂ 'ವಡ್ಡಾರಾಧನೆ'[10] ಗ್ರಂಥದಲ್ಲಿ ವಿಶೇಷವಾಗಿಯೂ ಕಂಡುಬರುವ ಈ ಬಗೆಯ ರೂಪಗಳ ಬಗ್ಗೆ ವಿವರಣೆ ನೀಡುವುದು ದುಸ್ತರ ಆದರೆ ಕೇಶೀರಾಜ (ಕ್ರಿ. ಶ. 1260)ನಿಗಿಂತ ಮೊದಲೆ 'ಕವಿರಾಜ ಮಾರ್ಗ' ಕಾರನಾದ ಶ್ರೀವಿಜಯನು ಮಾರ್ಗ ಕಾವ್ಯದಲ್ಲಿ ಇಂಥ

---

8. ಈ ಶಾಸನದ ಕೆಲವು ಪ್ರಯೋಗಗಳು : ನರಿದಾವಿಳೆನಾಡುಳ್; ದಕ್ಷಿಣಾಪಥ; ಬಹುಶತ ಹವನಾಹವದುಳ್; ಪಶುಪತಿಯೆನ್ದು ಪೊಗಳೆಪ್ಪೊಟ್ಟಣ (ದ್ರಾವಿಡ ವಾಕ್ಯ ರಚನೆಗೆ ಸಲ್ಲದ, ಕರ್ಮಣಿ ಪ್ರಯೋಗವನ್ನು ಗಮನಿಸಬಹುದು) ಕೇಕಯ ಪಲ್ಲವರಂ ಕಾದೆಱೆದು ಪೆತ್ತಜಯನಾ (ಪೆತ್ತಜಯನ್' – ಸಂಸ್ಕೃತದ ರಚನೆ ಯಿದು) ಸಂಸ್ಕೃತ ಪದಗಳು ಮತ್ತು ಸಮಾಸಗಳು : ವ್ಯೋಮತಾರಾಧಿನಾಥನ್; ಶೌರ್ಯೋದ್ದಮಭರಿತನ್; ಅಹವ, ಸಮಕ್ಷದೆ, ಸುತ, ದಕ್ಷಿಣಾಪಥ ಇತ್ಯಾದಿ.
9. ಸಾಧುಗೆ ಸಾಧು ಮಾಧುರ್ಯ್ಯಂಗೆ ಮಾಧುರ್ಯಂ ।
ಬಾಧಿಪ್ಪ ಕಲಿಗೆ ಕಲಿಯುಗ । ವಿಪರೀತನ್ ।
ಮಾಧವನೀತನ್ ಪೆಱನಲ್ಲ ॥
ಕಟ್ಟಿದ ಸಿಂಘಮನ್‌ಕೆಟ್ಟೋದೇನೆಮಗೆಂದು ।
ಬಿಟ್ಟವೋಲ್ ಕಲಿಗೆ ವಿಪರೀತಂ । ಗಹಿತರ್ಕ್ಕಳ್
ಕೆಟ್ಟರ್‌ಮೇಣ್‌ಸತ್ತರವಿಚಾರಂ । ॥ (ಬಾದಾಮಿ ಶಾಸನ ಕ್ರಿ. ಶ. 700)
10. 'ವಡ್ಡಾರಾಧನೆ'ಯಲ್ಲಿ ಬಳಕೆಯಾದ ಪೂ.ಹ,ಗನ್ನಡದ ಶಬ್ದರೂಪಗಳ ಮತ್ತು 'ಆಕೃತಿ'ಗಳ ಬಗ್ಗೆ ಕೆಲವು ಉದಾಹರಣೆಗಳು : (ಡಿ. ಎಲ್. ನರಸಿಂಹಾಚಾರ್ಯ ಆವೃತ್ತಿ 1972)
1) – ಅನ್ – ದ್ವಿತೀಯಾ ವಿಭಕ್ತಿ ಪ್ರತ್ಯಯ : ವಾಯುಭೂತಿಯೆಂಬೊ ನಾನ್ ಅಮೋದಿಸಿದೆಂ (ಪು. 24–4).

ಮಾತಿನ ರೂಪಗಳನ್ನು ಬಳಸುವುದು ತಪ್ಪೆಂದು ತುಂಬ ಶ್ರಮ ವಹಿಸಿ ತೋರಿಸಿಕೊಟ್ಟಿದ್ದಾನೆ. ಆಶ್ರಯದಾತ ನೃಪತುಂಗನು ಮತ್ತು ಆಶ್ರಿತ ಶ್ರೀವಿಜಯನು ಇವರಿಬ್ಬರೂ ಕೂಡಿ "ನಿಷ್ಕರ್ಷಿಸಿದ ಕಾವ್ಯ ಶೈಲಿಯ ಮತ್ತು ಆದರ್ಶ ಗ್ರಾಂಥಿಕ ಭಾಷೆಯ ಮಾದರಿಯೊಂದನ್ನು ತಮ್ಮ ತರುವಾಯ ಬರಲಿದ್ದ ಕವಿಗಳು ಅನುಸರಿಸಲೆಂದು ಅವರ ಮುಂದೆ ಮಂಡಿಸುವ ಯತ್ನ ಮಾಡಿದ್ದಾರೆ. ಕಾವ್ಮ ಶೈಲಿಯೂ ಅಲ್ಲಿ ಬಳಸಿದ ಭಾಷೆಯ ವ್ಯಾಕರಣಾಂಶಗಳನ್ನು ನಿರ್ಧರಿಸುತ್ತದೆ ಎಂಬುದನ್ನು ನಾವು ಮರೆಯಕೂಡದು. ಆ ಕಾಲದ ಎರಡು ವಿಶಿಷ್ಟ ಸಾಹಿತ್ಯ ಪ್ರಕಾರಗಳಾಗಿದ್ದ 'ಚತ್ತಾಣ' ಮತ್ತು 'ಬೆದಂಡೆ' ಇವುಗಳಿಗೆ ಸಂಬಂಧಿಸಿದಂತೆ ಶ್ರೀವಿಜಯನು ದೇಶೀಯ ಮಟ್ಟುಗಳಾದ ತ್ರಿಪದಿ, ಚೌಪದಿ, ಅಕ್ಕರ, ಮತ್ತು ಗೀತಿಕೆ ಇವುಗಳನ್ನು ಉಲ್ಲೇಖಿಸಿದ್ದರೂ 'ಮಾರ್ಗಕವಿ'ಗಳಿಂದ ಅವು ವಿಶೇಷವಾಗಿ ಬಳಕೆಗೆ ಬಂದಿಲ್ಲ. ಮಾರ್ಗ ಕಾವ್ಯಗಳ ಅಥವಾ ಚಂಪೂ ಕಾವ್ಯಗಳ ಕಾಲಾವಧಿಯು ಆದಿಕವಿ ಪಂಪ (ಕ್ರಿ ಶ. 941) ನಿಂದ ಆರಂಭವಾಗಿ 13ನೆಯ ಶತಕದವರೆಗೆ ನಡೆದು ಬಂದುದು ಹ.ಗ.ದ ಕಾಲಾವಧಿಯನ್ನು ಪ್ರತಿನಿಧಿಸುತ್ತದೆ. ಆ ತರುವಾಯ ಮುಂದೆ ಕನ್ನಡ ಸಾಹಿತ್ಯವು ಹೊಸ ಬಗೆಯ ಭಾಷಾ ಅವಸ್ಥೆಯತ್ತ ಒಮ್ಮೆಲೆ ಬದಲಾವಣೆ ಹೊಂದುತ್ತಿರುವುದನ್ನು ನಾವು ಕಾಣುತ್ತೇವೆ. ಭಾಷೆಯ ಈ ಅವಸ್ಥೆಯನ್ನು 'ಮಧ್ಯ ಯುಗದ ಕನ್ನಡ' ಅಥವಾ 'ನಡುಗನ್ನಡ' ಎಂದು ಕಿಟೆಲ್ ಮತ್ತು ಆರ್. ನರಸಿಂಹಾಚಾರ್ಯರಂಥ ವಿದ್ವಾಂಸರು ಹೆಸರಿಸಿದ್ದಾರೆ. 14ನೆಯ ಶತಕದ ಆರಂಭದಿಂದ 15ನೆಯ ಶತಕದ ಕೊನೆಯವರೆಗಿನ ಈ ಕಾಲಾವಧಿಯನ್ನು ಹಳಗನ್ನಡದಿಂದ ಹೊಸಗನ್ನಡಕ್ಕೆ ತಿರುಗಲಿರುವ' ಸಂಧಿಕಾಲ' ಎನ್ನಬಹುದು.

[ 4 ]

## ಹಳಗನ್ನಡದ ವೈಶಿಷ್ಟ್ಯಗಳು

ಹಳಗನ್ನಡದ ವೈಶಿಷ್ಟ್ಯಗಳನ್ನು ಆರ್. ನರಸಿಂಹಾಚಾರ್ಯರು ಈ ಪ್ರಕಾರವಾಗಿ ಸ್ವಲ್ಪದರಲ್ಲಿ ಅಡಕವಾಗಿ ಸಂಗ್ರಹಿಸಿದ್ದಾರೆ:

"ಹಳಗನ್ನಡವು ಅಸಾಧಾರಣ ನಯ, ನುಣುಪು ಹಾಗೂ ಸೂಕ್ಷ್ಮ ಅಭಿರುಚಿಗಳಿಂದ ಏಕಪ್ರಕಾರವಾಗಿ ಪರಿಶುದ್ಧ ಹಾಗೂ ಪರಿಷ್ಕೃತವಾಗಿರುವುದು. ಇಂದಿಗೂ ಅದು ಜ್ಯೆನ ಪಂಡಿತರಿಂದ ರಚಿತವಾದ ಹಲವಾರು ಗ್ರಂಥಗಳಲ್ಲಿ ಸುರಕ್ಷಿತವಾಗಿ ಉಳಿದು ಬಂದಿದೆ. ಮತ್ತು ಸುಮಾರು 10ನೆಯ ಶತಕದಿಂದ 13ನೆಯ ಶತಕದ ಮಧ್ಯದ ವರೆಗೆ ಸಾಹಿತ್ಯಿಕ ಉದ್ದೇಶಗಳಿಗಾಗಿ ಅದು ಪರಂಪರಾಗತವಾಗಿ ಬಂದುದು ಕಂಡುಬರುತ್ತದೆ.ಅದರ ಪ್ರಮುಖ ವೈಶಿಷ್ಟ್ಯಗಳೆಂದರೆ – ವಿಸ್ತೃತ ಹಾಗೂ ವಿವರಾತ್ಮಕ ರೀತಿಯಲ್ಲಿ ಯುಕ್ತಿ-ಚಾತುರ್ಯಗಳಿಂದ ನಿರೂಪಿಸಿದ ಕೃತಕ ಚಂಪೂರಚನೆ; ಇಂದು ಹೆಚ್ಚು ಕಡಿಮೆ ರೂಢಿಯಲ್ಲಿಲ್ಲದ ನಾಮವಿಭಕ್ತಿ – ಕ್ರಿಯಾ ವಿಭಕ್ತಿ ಪ್ರತ್ಯಯಗಳ ಬಳಕೆಯಲ್ಲಿ ವಾಕ್ಯರಚನಾ ನಿಯಮಗಳ ಪಾಲನೆಯಲ್ಲಿ ಕಟ್ಟುನಿಟ್ಟಿನ ಅನುಸರಣೆ, ಇಷ್ಟವೆನಿಸಿದಾಗ ಅಥವಾ ನಿರೂಪಣಾ ಸೌಕರ್ಯಕ್ಕಾಗಿ ಅವಶ್ಯವೆನಿಸಿದಾಗ ಮಾರ್ಪಾಟುಗೊಳ್ಳದ ರೂಪದಲ್ಲಿ ಸಂಸ್ಕೃತ ಪದಗಳ ಮತ್ತು ಪರಂಪರಾಗತವಾಗಿ ಅಂಗೀಕೃತವಾಗಿ ಬಂದ 'ತದ್ಭವ' ಪದಗಳ ಬಳಕೆ; ಟ, ಱ, ೞ, ಲ ಮತ್ತುಱಕಾರಗಳನ್ನು ಅವುಗಳ ಸೂಕ್ಷ್ಮ ಭೇದವರಿತು ಬಳಸುವುದು ಮತ್ತು ಈ ಸೂಕ್ಷ್ಮಭೇದದ ಆಧಾರದಿಂದಲೆ ಎಚ್ಚರಿಕೆಯಿಂದ ಅನುಪ್ರಾಸಾದಿಗಳನ್ನು ನಿರ್ಮಿಸುವುದು; ಮತ್ತು ಕೊನೆಯದಾಗಿ, ಕಿವಿಗಿಂಪಾಗುವಂತೆ ವರ್ಣವರ್ಣಗಳ ನಡುವೆ ಸಂಧಿಯ ಲಾಲಿತ್ಯವನ್ನು ಕಾಯ್ದುಕೊಳ್ಳುವುದು (History of Kannada Language ಪುಟ 132)

### ಸಂಸ್ಕೃತ ಪದಗಳ ಬಳಕೆ

ಕ್ರಿ. ಶ. 450ರ ಹಲ್ಮಿಡಿ ಶಾಸನದ ಕಾಲದಿಂದಲೆ ಸಂಸ್ಕೃತ ಪದಗಳ ಬಳಕೆ ರೂಢಿಯಲ್ಲಿದ್ದುದನ್ನು ಈಗಾಗಲೆ ಉಲ್ಲೇಖಿಸಿದ್ದಾಗಿದೆ. ಕವಿರಾಜಮಾರ್ಗದ ಕಾಲದ ಹೊತ್ತಿಗೆ ಸಂಸ್ಕೃತವು ಕನ್ನಡ ಬರವಣಿಗೆಯ ಮೇಲೆ ಬಲವತ್ತಾದ ಪ್ರಭಾವ ಬೀರಿತ್ತು. ಇದರಿಂದ ಕನ್ನಡದ ಶಬ್ದಭಾಂಡಾರವು ನಿಸ್ಸಂಶಯವಾಗಿ ಸಂಪದ್ಭರಿತವಾಯ್ತು. ಕವಿರಾಜಮಾರ್ಗಕಾರನು ಒಂದೆಡೆ ಕನ್ನಡದ ಮೇಲಿನ ಉತ್ಕಟ ಪ್ರೇಮದಿಂದ, ಇನ್ನೊಂದೆಡೆ ಸಂಸ್ಕೃತದಿಂದ ಎರವಲಾಗಿ ಕೊಳ್ಳುವ ವ್ಯವಹಾರ ದೃಷ್ಟಿಯಿಂದ ಕನ್ನಡದದ ಉದಯೋನ್ಮುಖ ಕವಿಗಳ ಮುಂದೆ ಈ ಬಗ್ಗೆ ವಿಧಿ

---

2) – ಆ – ಷಷ್ಠೀ ವಿಭಕ್ತಿಯ ದೀರ್ಘಸ್ವರ. ಅಧಮರಾವುಲ್ಲಮಾನಸರಾ ದುರ್ಜನರಾಜರಾಜಾತರಾ ವಿಜಾತಿಗಳ್ಗೆ (8 – 14); ವರ್ಣೆಯೆಂಬ ತೋಟ'ಯಾ ತಡಿಯೊಳ್ (128–13)

3) 'ಒಡೆಯ – 'ಉಳ್ಳ' ಎಂಬರ್ಥದಲ್ಲಿ (ಈ ಗ್ರಂಥದಲ್ಲಿ ಈ 'ಆಕೃತಿ' ಅನೇಕ ಬಾರಿ ಬಂದಿದೆ); ಒಡೆಯನ್, ಒಡೆಯಳ್, ಒಡೆಯರ್, ಒಡೆಯದು, ಒಡೆತು, ಒಡೆಯವು.

(ಟಿಪ್ಪಣಿ: 'ವಡ್ಡಾರಾಧನೆ'ಯ ಕಾಲವು ಕ್ರಿ. ಶ. 920 ಎಂದು ಡಿ.ಎಲ್.ನ. ಅವರಿಂದ ನಿರ್ಣಯಿಸಲಾಗಿದೆ. ಡಾ: ಆ.ನೇ. ಉಪಾಧ್ಯೆ ಅವರ ಸೂಚನೆಯಂತೆ ಅದು 10ನೆಯ ಶತಕದ ಉತ್ತರಾರ್ಧ ಎಂದರೆ ಚಾ. ರಾ. ಪುರಾಣದ ರಚನೆಯ ಕಾಲವಾದ ಕ್ರಿ. ಶ. 97 ತರುವಾಯ 'ವಡ್ಡಾರಾಧನೆ'ಯ ಕಾಲ ಎನ್ನುವುದಕ್ಕಿಂತ ಡಿ.ಎಲ್.ನ. ಅವರು ನಿರ್ಣಯಿಸಿದ ಕಾಲವು ಸತ್ಯಕ್ಕೆ ಹತ್ತಿರದ್ದು ಎನಿಸುತ್ತದೆ. 'ವಡ್ಡಾರಾಧನೆ' ಆ ಕಾಲದ ಆಡುಮಾತಿನ ರೂಪಗಳನ್ನೊಳಗೊಂಡ ಒಂದು ಬಗೆಯ ಹ.ಗ.ವನ್ನು ಪ್ರತಿನಿಧಿಸುತ್ತದೆ.)

11. ಶ್ರೀವಿಜಯನು ತಪ್ಪು ಪ್ರಯೋಗಗಳೆಂದು ಸೂಚಿಸಿದ ಮಾತಿನ ರೂಪಗಳನ್ನುಳಿದು ಆತನೇ ಕೆಲವು ಹಳೆಯ ರೂಪಗಳನ್ನು ಬಳಸಿದ್ದಾನೆ; ಬಹುಶಃ ಅವು ಆತನಿಗಿಂತ ಮುಂಚೆ ಇದ್ದ ಸುಪ್ರಸಿದ್ಧ ಕವಿಗಳು ಬಳಸಿದಂಥವಿರಬಹುದು. ಅವು ಯಾವುವೆಂದರೆ, – ನೋ + ಗೆ ( – ನೋಡುಗೆ; ನೋಡಲಿ ) (1 – 89) ಈ ತೆಱತ್ತು, ಎರಟ್ತೆಱತ್ತು (1–101, 114); ಕಲ್ಲದರಿಂ (2–13); ಬಾರದೆ, ಬಗೆಯಾದೆ, ತಡೆದಾನ್, ಅವನಾನ್, ಅಟ್ಟಿದೇನ್ (1 – 128); ಒಪ್ಪುವವ'ಗಾನ್' (2 – 145), 'ಗುಣಂಗಳಾ'ನ್ (3 – 12); ಅಪ್ಪೊನ್ (2 – 145); ಆವೊನ್ (2 – 152)

ನಿಷೇಧಗಳನ್ನು ಸಮರ್ಪಕ ರೀತಿಯಲ್ಲಿ ಮಂಡಿಸಿದ್ದಾನೆ. 'ಸಮ ಸಂಸ್ಕೃತ' ಪದಗಳ (– ಎಂದರೆ ಅನಂತರ ಬಂದ ವ್ಯಾಕರಣ ಕಾರರು ಹೆಸರಿಸಿದಂತೆ 'ತತ್ಸಮ' ಪದಗಳ) ಬಳಕೆಯನ್ನು ಸಾಧು ವೆಂದು ನೆನಪಿಡಲರ್ಹವಾದ ಈ ಸೂತ್ರಗಳಲ್ಲಿ ಹೀಗೆ ಹೇಳಿದ್ದಾನೆ:

ಸಮಸಂಸ್ಕೃತಂಗಳೊಳ್ ಸ ।
ಯ್ತುಮರ್ದಿರೆ ಕನ್ನಡಮನಱಿದು ಪೇೞ್ಗೆ ಎಂಬುದಿದಾ ॥
ಗಮಕೋವಿದನಿಗದಿತ ಮಾ ।
ರ್ಗಂ ಇದಂಬೆರಸಲ್ಕಮಾಗದೀಸಕ್ಕದದೊಳ್ ॥

ಈ ಬಗೆಯ ಅವ್ಯಯಗಳನ್ನು ಕನ್ನಡದೊಂದಿಗೆ ಬಳಸಕೂಡದು:

ಅಹರಹರುಚ್ಚೈರ್ನೀಚೈ – ।
ರ್ಮುಹುರ್ಮುಹುರಿತಸ್ತತಃ ಪುನಃಪುನರಂತ ॥
ರ್ಬಹಿರಾದಿಹ ಪ್ರಾದುರಹೋ ।
ಸಹಸಾದಿಗಳವ್ಯಯಂಗಳಸಹಾಯಂಗಳ್ ॥

ಈ ಅವ್ಯಯಗಳನ್ನು ಸಂಸ್ಕೃತದ ಮೂಲರೂಪದಲ್ಲೆ ಬಳಸು ವುದರಿಂದ ಆಗುವ ಪರಿಣಾಮವಾದರೂ ಏನು? ಮುಗಿಲೆ ಕತ್ತರಿಸಿಕೊಂಡು ನೆಲಕ್ಕೆ ಬೀಳುವುದೇನು? ಇಲ್ಲ, ಅದಕ್ಕಿಂತ ಹೆಚ್ಚಿನ ಕೆಡುಕು:

ಬೆರಸಿರೆ ಕನ್ನಡದೊಳ್ ಬಂ ।
ಧುರಮಾಗದು ಕಾವ್ಯರಚನೆ ಪೇೞ್ದೊಡೆ ಪೀನಂ ।
ಪರುಷತರಮಕ್ಕುಂ ಒತ್ತುಂ ।
ಗರಡೆಯ ಮದ್ದಳೆಯ ಜರ್ಝರ ಧ್ವನಿಗಳವೋಲ್ ॥

ಅನಂತರ ಸರಿಯಾದ ಮತ್ತು ತಪ್ಪಾದ ಪ್ರಯೋಗಗಳನ್ನು ಕೊಟ್ಟು ಹೀಗೆ ಘೋಷಿಸಿದ್ದಾನೆ.

ವಿದಿತಸಮಸಂಸ್ಕೃತೋದಿತ ।
ಪದಂಗಳೊಳ್ಪುದಿದು ಬೆರಸಿಬರೆ ಕನ್ನಡದೊಳ್ ॥
ಮುದಮನವುತಕ್ಕುಂ, ಅತಿಶಯ ।
ಮೃದಂಗಸಂಗೀತಕಾದಿ ಮಧುರರವಂಬೋಲ್ ॥

'ಬಹಿರಂತರುಪವನಂಗಳೊಳ್' ಎಂಬುದು ಅಬದ್ಧ, 'ಬಹಿರುದ್ಯಾನಾಂತರದೊಳ್' ಎಂದರೆ ಸಾಧುಪ್ರಯೋಗ. ಅಲ್ಲದೆ, ಕನ್ನಡಪದ ಮತ್ತು ಸಂಸ್ಕೃತ ಪದಗಳನ್ನು ಕೂಡಿಸಿ ಸಮಾಸಮಾಡುವು ದನ್ನು ಆತ ನಿಷೇಧಿಸುತ್ತಾನೆ. ತಾತ್ಪರ್ಯವೇನೆಂದರೆ – ಕವಿ ರಾಜಮಾರ್ಗವು ಭಾಷಾವಿಚಾರದಲ್ಲಿ ಆದಿಪರಿಶೋಧಕ ಇಲ್ಲವೆ ಮಾರ್ಗದರ್ಶಕ ಗ್ರಂಥ. ಹಳಗನ್ನಡ ವ್ಯಾಕರಣ ರಚನಾ ವಿನ್ಯಾಸಕ್ಕಾಗಿ ಮೊದಲ ಬಾರಿ ಭದ್ರ ತಳಹದಿ ಹಾಕಿದ ಗ್ರಂಥ. ಹಾಗೆಯೇ, 'ಮಾರ್ಗಕಾವ್ಯ' ರಚನೆಯ ವಿಚಾರದಲ್ಲಿ ಅನುಸರಿಸ ಬೇಕಾದ ಕಾವ್ಯಶೈಲಿಯನ್ನು ಕುರಿತ ಮಾರ್ಗದರ್ಶಕ ಸೂತ್ರಗಳ ಗ್ರಂಥವೂ ಇದಾಯ್ತು. ಆದರೆ, ಸಂಸ್ಕೃತದಲ್ಲಿರುವ ಹಳಗನ್ನಡ ವ್ಯಾಕರಣವನ್ನು ಕುರಿತ ಚಿಕ್ಕ ಪ್ರಬಂಧವೆನಿಸಿದ 'ಭಾಷಾಭೂಷಣ' ವನ್ನೂ 'ಕಾವ್ಯಾವಲೋಕನ' ಗ್ರಂಥದ ಮೊದಲ ಅಶ್ವಾಸವೆನಿಸಿದ 'ಶಬ್ದಸ್ಮೃತಿ' ಎಂಬ ಹಳಗನ್ನಡದ ಚಿಕ್ಕ ವ್ಯಾಕರಣವನ್ನೂ ರಚಿಸಿದ ಇಮ್ಮಡಿ ನಾಗವರ್ಮ (ಕ್ರಿ. ಶ. 1042) ಕನ್ನಡದಲ್ಲಿ ವ್ಯಾಕರಣ ವಾಙ್ಮಯ ಸೃಷ್ಟಿಗೆ ನಿಜವಾಗಿಯೂ ಅಗ್ರಗಾಮಿಯಾಗಿದ್ದಾನೆ. ನಾಗವರ್ಮ ಹಳಗನ್ನಡದ ಮೊದಲ ವ್ಯಾಕರಣಕಾರನಾಗಿದ್ದರೂ ಹಳಗನ್ನಡ ವ್ಯಾಕರಣ ಸೂತ್ರಗಳನ್ನು ಸಮಗ್ರವಾಗಿ ರಚಿಸುವ ಭಾಗ್ಯ ಕೇಶಿ ರಾಜ (ಕ್ರಿ. ಶ. 1260)ನದಾಗಿತ್ತು. ಆತನ 'ಶಬ್ದಮಣಿ ದರ್ಪಣ' ಆಧುನಿಕ ವಿದ್ವಾಂಸರಿಂದ ಚಿರಸ್ಥಾಯಿ ಗ್ರಂಥವೆಂದು ಹೊಗಳಲ್ಪಟ್ಟಿದ್ದು, ಹಳಗನ್ನಡದ ಸಕಲ ಸಂಕೀರ್ಣತೆಯ ಹಾಗೂ ವಿಶಾಲತೆಯ ದರ್ಪಣವೇ ಆಗಿದೆ. ಆಗ ಉದ್ದಾಮ ಕವಿಗಳೆನಿಸಿದ್ದ ಗಜಗ, ಗುಣನಂದಿ, ಮನಸಿಜ, ಅಸಗ, ಚಂದ್ರಭಟ್ಟ, ಶ್ರೀವಿಜಯ, ಪೊನ್ನ, ಪಂಪ, ಸುಜನೋತ್ತಂಸ ಮತ್ತು ಹೆಸರಿಸದ ಇನ್ನೂ ಹಲವಾರು ಕವಿವರ್ಯರ ಪ್ರಮಾಣಬದ್ಧ ಮಾರ್ಗಕಾವ್ಯಗಳಿಂದಾಯ್ದ ಪ್ರಯೋಗಗಳನ್ನು ನುಡಿಗಟ್ಟುಗಳನ್ನೂ ಆಧರಿಸಿ ಕಟ್ಟಿದ ಸೂತ್ರಗಳಲ್ಲಿ ಗ್ರಂಥದ ಘನತೆಯಿದೆ. ಈತನ ಲಕ್ಷಣಸೂತ್ರಗಳು ಮತ್ತು ಅಸಂಖ್ಯ ಲಕ್ಷ್ಯಗಳು ( ಎಂದರೆ ಉದಾಹರಣರೂಪದ ಪದ್ಯಗಳು ಇಲ್ಲವೆ ಪದ್ಯ ಪಂಕ್ತಿಗಳು)ಹಳಗನ್ನಡ ಶಬ್ದಭಾಂಡಾರದ ಮತ್ತು ವಾಗ್ರೂಢಿಗಳ ಮೂಲ ನಿಧಿಯಾಗಿವೆ. ಮತ್ತು ಕೊನೆಯ ಪದ್ಯವು (342) ಶ್ರೀವಿಜಯನಿಂದ ಕೇಶಿರಾಜನ ವರೆಗಿನ ಮಾರ್ಗ ಕಾವ್ಯಗಳಲ್ಲಿಯ ಹ.ಗ.ದ ಸಾರವತ್ತಾದ ವೈಶಿಷ್ಟ್ಯಗಳನ್ನು ಹೀಗೆ ಪಟ್ಟಿಮಾಡಿದೆ:

ಗಮಕಸಮಾಸದಿಂ ಱೞಕುಳಕ್ಷಳದಿಂ ಶ್ರುತಿಸಹ್ಯಸಂಧಿಯಿಂ ।
ಸಮುಚಿತಮಾಗಿಬರ್ಪಸತಿಸಪ್ತಮಿಯಿಂಸಮಸಂಸ್ಕೃತೋಕ್ತಿಯಿಂ
ವಮುಹಪಭೇದದಿಂ ವಿರಹಿತಾವ್ಯಯ ಸಂಸ್ಕೃತಲಿಂಗದಿಂಪದೋ
ತ್ತಮ ಶಿಥಿಲ ದ್ವಿತ್ವದಿಂ ಯತಿವಿಲಂಘನದಿಂದರಿದಲ್ತೆ ಕನ್ನಡಂ॥

---

ಬಿ.ಎಂ. ಶ್ರೀಕಂಠಯ್ಯನವರು ಮೇಲ್ಕಾಣಿಸಿದ ಕ.ರಾ.ಮಾ.ದಲ್ಲಿ ಬಳಕೆಯಾಗಿರುವ ಶಬ್ದಗಳ ಬಗ್ಗೆ ಪಟ್ಟ ಅಭಿಪ್ರಾಯಗಳು ಈ ಸಂದರ್ಭದಲ್ಲಿ ಗಮನಾರ್ಹವಾಗಿದೆ "128ನೆಯ ಪದ್ಯದಲ್ಲಿ 'ಗೌರವದೋಷ'ಕ್ಕೆ ಉದಾಹರಣೆಗಳನ್ನು ಕೊಡುತ್ತ 'ಹ್ರಸ್ವ' ಸ್ವರವಿರಬೇಕಾದಲ್ಲಿ 'ದೀರ್ಘ' ಸ್ವರವಿಡುವುದು: ಉದಾ – 'ಬಗೆಯದೆ ಎಂಬುದಕ್ಕೆ ಬದಲಾಗಿ 'ಬಗೆಯಾದೆ ಎಂಬುದು, 'ಅವನನ್' ಎಂಬುದಕ್ಕೆ ಬದಲಾಗಿ 'ಅವನಾನ್' ಎಂಬುದು, 'ಅಟ್ಟಿದೆನ್' ಎಂಬುದಕ್ಕೆ ಬದಲಾಗಿ 'ಅಟ್ಟಿದೇನ್' ಎಂಬುದು 'ಬಾರದೆ' ಎಂಬುದಕ್ಕೆ ಬದಲಾಗಿ 'ಬಾರಾದೆ' ಎಂಬುದು (– ಬಾರಾದೆ ಎಂಬುದೇ ಛಂದಸ್ಸಿಗೆ ಸರಿಹೊಂದುವ ಸರಿಯಾದ ಪಾಠ. ಇದನ್ನು ನಕಲುಕಾರನು ತಿದ್ದಿದ್ದಾನೆಂಬುದು ಸುಸ್ಪಷ್ಟ) 'ತಡೆದನ್ ಎಂಬುದಕ್ಕೆ ಬದಲಾಗಿ 'ತಡೆದಾನ್' ಎಂಬುದು. ವಿಶೇಷವಾಗಿ ಈ ನಿಷೇಧಕ್ರಿಯಾ ರೂಪಗಳು ಕ. ರಾ. ಮಾರ್ಗಕಾರನ ಮತದಂತೆ ನಿಷಿದ್ಧ ರೂಪಗಳೆನಿಸಿವೆ; ಆದರೆ ಈ ರೂಪಗಳು ಶಾಸನಗಳಲ್ಲಿ ಕಂಡುಬರುವ ಹಳೆಯ ರೂಪಗಳಾಗಿವೆ ಮತ್ತು ಇಂದಿಗೂ ಇವಕ್ಕೆ ಸಮಾನವಾದ ರೂಪಗಳು ತಮಿಳಿನಲ್ಲಿ ರೂಢಿಯಲ್ಲಿವೆ. ದ್ವಿತೀಯಾ ವಿಭಕ್ತಿಯ ಹಳೆಯ ಪ್ರತ್ಯಯ ರೂಪಗಳನ್ನು ಕೇಶೀರಾಜನು ಗುರುತಿಸಿದ್ದಾನೆ. ಉದಾ: ಸೂತ್ರ 118ರಲ್ಲಿ – – 'ತನತ್ತು ಬಿಲ್ಲಾಸದನಂತೆ – ಕೀಸುವಂ (ನೃಪತುಂಗನೂ ಸಹ ಆ 2 – 15, 16, 17, 104, 145ರಲ್ಲಿ ಬಳಸಿದ್ದಾನೆ.) ಇದರ ಕುತೂಹಲಕಾರಿ ಅವಶೇಷವನ್ನು ಕೇಶೀರಾಜನು ಉಳಿಸಿಕೊಂಡಿದ್ದಾನೆ; ಸೂತ್ರ – 61 (ಪರಿಷತ್ತಿನ ಆವೃತ್ತಿ ಪು. 48 – 49) – ಬಗೆವೊಡಮಿನಿನಿಸಿ ಅದೆ, ಇರಅದೆ, ಇರಾದೆ, ಇರದೆ"

2) 'ಪ' ಕಾರಕ್ಕೆ ಬದಲಾಗಿ 'ಹ'ಕಾರ ಪ್ರಯೋಗವು 10ನೆಯ ಶತಕದಲ್ಲಿ ಕನ್ನಡನಾಡಿನ ಎಲ್ಲಾ ಭಾಗಗಳಲ್ಲೂ ರೂಢಿಗೆ ಬರತೊಡಗಿವೆ ಡಾ। ಎ. ಎನ್. ನರಸಿಂಹಯ್ಯ – Grammar of the Oldest Kannada inscriptions ಪು. 2

3) ಪ್ರಕೃತ, ಪ>ಹ ಮಾರ್ಪಾಡಿಗೆ ಒಂದು ನಿದರ್ಶನವಾದರೂ 'ವಡ್ಡಾರಾಧನೆ'ಯಲ್ಲಿ ದೊರೆಯುತ್ತಿಲ್ಲ' (ಡಿ.ಎಲ್.ಎನ್. 'ವಡ್ಡಾರಾಧನೆ' ಮೈಸೂರು 1970. ಪೀಠಿಕೆ ಪು: XXVI)

(ಕನ್ನಡವು ಗಮಕಸಮಾಸ, ಱಟಕುಳಕ್ಷಳ, ಶ್ರುತಿ ಸಹ್ಯಸಂಧಿ, ಸತಿ ಸಪ್ತಮಿ, ಸಮಸಂಸ್ಕೃತ, ವ–ಮ–ಹ–ಪ ಭೇದ ಇತ್ಯಾದಿ ವಿಶಿಷ್ಟಾಂಶಗಳಿಂದ ವಿಖ್ಯಾತವಾಗಿದೆ.)

ಮೇಲ್ಕಾಣಿಸಿದ ವಿಶಿಷ್ಟಾಂಶಗಳಲ್ಲಿ ಕೆಲವನ್ನು ಸಂಕ್ಷೇಪವಾಗಿ ಪರೀಕ್ಷಿಸುವ :

**ಗಮಕ ಸಮಾಸ :** ಕೇಶಿರಾಜನು ಕನ್ನಡಪದ ಮತ್ತು ಸಂಸ್ಕೃತ ಪದಗಳಿಂದ ಕೂಡಿದ ಸಮಾಸವನ್ನು ನಿಷೇಧಿಸಿದ್ದರೂ (ಉದಾ : ಮುಖತಾವರೆ, ಅರಸುಕುಮಾರ ಇತ್ಯಾದಿ) ಬೀಸುವ ಚಾಮರಂ, ಪೂಸಿದ ಭಸ್ಮಪರಾಗಂ, ಪೊಣ್ಮುವ ಘರ್ಮಜಲಂಗಳ್, ಮುಂತಾದ ಸಮಾಸ ಪದಗಳನ್ನು ಈ ನಿಯಮಕ್ಕೆ ಅಪವಾದವೆಂದು ಒಪ್ಪುತ್ತಾನೆ. (ಗಮಕಸಮಾಸವನ್ನು ಸಮಾಸವೆಂದಾದರೂ ಗಣಿಸಬೇಕೆ, ಬೇಡವೆ ಎಂಬುದು ವಿವಾದಾಸ್ಪದ ಪ್ರಶ್ನೆ; ಅದು ಸಮಗೀಗ ಪ್ರಸ್ತುತವಲ್ಲ.)

**ಱಟ–ಕುಳ–ಕ್ಷಳ:**'ಱ'ವು ಹಳೆಗನ್ನಡದಲ್ಲಿ ಒಂದು ಮಹತ್ವಪೂರ್ಣ ಧ್ವನಿಮಾ. ಅದು 'ರ' ಅಥವಾ ರೇಫಕ್ಕೆ ಭಿನ್ನವಾದದ್ದು, ಅದರದೇ ಆದ ಉಚ್ಚಾರಣೆ ಅಥವಾ ಧ್ವನಿ ಮೌಲ್ಯವನ್ನು ಹೊಂದಿದೆ. ಇದಕ್ಕೆ ಆಧಾರವಾಗಿ ಅರ್ಥದಲ್ಲೂ ಭಿನ್ನತೆಯಿರುವ ಈ ಕೆಲವು ಶಬ್ದಗಳ ಜತೆಗಳನ್ನು ಉದಾಹರಿಸಬಹುದಾಗಿದೆ :ಕಱೆ (ಕಪ್ಪು)ಕಲೆ, ದೋಷ) – ಕರೆ (ನಾಮ – ಸರಹದ್ದು ಕಡಲ ಅಂಚಿನ ಸೀಮೆ, ಕರೆಯುವಿಕೆ, ಕ್ರಿಯಾಧಾತು – ಆಮಂತ್ರಿಸು, ಆಹ್ವಾನಿಸು, ಕರೆ ಇತ್ಯಾದಿ ಅಱಿ (ಕ್ರಿಯಾಧಾತು : ತಿಳಿ) – ಅರಿ (ಕ್ರಿ.ಧಾ. ಕತ್ತರಿಸು,(ಸಂ); ಎಱಿ (– ಸುರಿ:) ಎರೆ (–ಯಾಚಿಸು) ಇತ್ಯಾದಿ. 'ಱ' ಧ್ವನಿಯು 16ನೆಯ ಶತಕದವರೆಗೆ ರೂಢಿಯಲ್ಲಿತ್ತು; ಅನಂತರ ಅದರ ಬಳಕೆ ನಿಂತುಹೋಯ್ತು. ತೆಲುಗು–ತಮಿಳುಗಳು ಇದನ್ನು ಇಂದಿಗೂ ಸಾಹಿತ್ಯಿಕ ರೂಢಿಯಲ್ಲಿ ಉಳಿಸಿಕೊಂಡಿದೆ.

'ೞ'ವು ಸುಸ್ಪಷ್ಟ ದ್ರಾವಿಡ ಧ್ವನಿ. ತೆಲುಗೂ ಇದರ ಬಳಕೆಯನ್ನು ಬಹಳ ಕಾಲದ ಹಿಂದೆಯೆ ನಿಲ್ಲಿಸಿತ್ತೆಂದು ಕಾಣುತ್ತದೆ. ತಮಿಳು ಇದನ್ನು ಇನ್ನೂ ಭಾಷೆಯ ಕೆಲ ಒಳಭೇದಗಳೊಂದಿಗೆ ಉಳಿಸಿಕೊಂಡಿದೆ. ಕನ್ನಡದಲ್ಲಿ ಇದು ತನ್ನ ಸುಸ್ಪಷ್ಟವಾದ ಸ್ವರೂಪವನ್ನು ಕೇಶಿರಾಜನಿಗಿಂತ ಮೊದಲೆ ಕಳೆದುಕೊಂಡಿತ್ತು. ಆತನು 'ೞ'ವುಳ್ಳ ಸುಮಾರು 200 ಶಬ್ದಗಳನ್ನು ಪರಿಶ್ರಮವಹಿಸಿ ಸಂಗ್ರಹಿಸಿ ಅದನ್ನು 'ಳ'ದಿಂದ ಭಿನ್ನವಾದ ಒಂದು ಸ್ವತಂತ್ರ ಧ್ವನಿಯೆಂದು ಕನ್ನಡ ವರ್ಣಮಾಲೆಯಲ್ಲಿ ಹೇಗಾದರೂ ಮಾಡಿ ಉಳಿಸಿಕೊಳ್ಳಲು ಭೀಮ ಯತ್ನ ಮಾಡಿದ. ಆದ್ದರಿಂದ ಆತನು 'ಳ' ಮತ್ತ 'ೞ' ಗಳು ಭಿನ್ನ ಧ್ವನಿಗಳಾದ ಕಾರಣ ಪದ್ಯರಚನೆಯಲ್ಲಿ ಅವುಗಳ ಆದಿಪ್ರಾಸವನ್ನು ಒಪ್ಪಲಿಲ್ಲ. ('ೞದ' ಧ್ವನಿ ಇಂಗ್ಲಿಷಿನ 'Zh' ಧ್ವನಿಗೆ ಬಹುಮಟ್ಟಿಗೆ ಹತ್ತಿರದ್ದು. ಉದಾ : (azure) ಆದರೆ ಕೇಶಿರಾಜನಿಗಿಂತ ಮೊದಲೆ ಹರಿಹರಕವಿ (ಕ್ರಿ. ಶ. 1200) ಳ–ಕುಳ – ಕ್ಷಳಗಳು ಒಂದೇ (ಎಂದರೆ ಧ್ವನಿಯಲ್ಲಿ ಸಮಾನ) ಎಂದು ಘೋಷಿಸಿದ್ದ. ಅವುಗಳ ಧ್ವನಿ ಭೇದಗಳು ಇಲ್ಲದೆ ಇರುವುದರಿಂದ ಅವುಗಳ ಉಚ್ಚಾರ ಭೇದವನ್ನು ಲಕ್ಷಿಸಬೇಕಿಲ್ಲ ಎಂದು ಸಾರಿದ. 'ೞ'ವು 'ಳ' ದಂತೆಯೆ ಉಚ್ಚರಿಸಲ್ಪಡುತ್ತಿತ್ತು. ಕನ್ನಡದ ದೇಶೀಯ. ಧ್ವನಿಯಾದ 'ಳ'ವನ್ನು ಕೇಶಿರಾಜನು 'ಕುಳ'ವೆಂದು ಹೆಸರಿಸಿ ಸಂಸ್ಕೃತ ಶಬ್ದದ 'ಲ' ಕಾರಕ್ಕೆ ಪ್ರತಿಯಾಗಿ ಬಂದ 'ಳ' ಕಾರವು 'ಕ್ಷಳ'ವೆಂದು ಕರೆಯಲ್ಪಟ್ಟು 'ಕುಳ' ಪ್ರಾಸದ ಸಂದರ್ಭದಲ್ಲಿ ಕವಿಗಳಿಂದ ಬಳಸಲ್ಪಡುತ್ತಿತ್ತು. (ಉದಾ : ಕುಳಿರ್–ಲಳಿತ, ಮಳಲ್–ಬಳಯುತ ಇತ್ಯಾದಿ)

**ಮ–ವ :** ಧ್ವನಿ ಶಾಸ್ತ್ರದ ಅನಾವಶ್ಯಕ ಸೂಕ್ಷ್ಮ ವಿವರಗಳ ಗೋಜಿಗೆ ಹೋಗದೆ ಹಳಗನ್ನಡದಲ್ಲಿ 'ಮ' ಕಾರವು 'ವ'ಕಾರವಾಗುವ (ಮ > ವ) ಕೆಲವು ಪ್ರಯೋಗಗಳನ್ನು ಪರೀಕ್ಷಿಸುವ :

1. ಕಿವಿಗಿಂಪಾದ ಸಂಧಿಕಾರ್ಯಕ್ಕೆ ಉದಾ :
   ಕಾಣ್ಬಂದಮ್ + ಎನ್ಸೊ = ಕಾಣ್ಬಂದವೆನ್ಸೊ;
2. ನಿಜ 'ಮ' ಕಾರದೆಡೆಗೆ 'ವ'ತ್ವ ಬರುವುದಕ್ಕೆ –
   ತಾಮರೆ,> ತಾವರೆ,> ಸಾಮಂತಂ,
   ಬೆಮರ್, ಬೆವರ್, ಇತ್ಯಾದಿ.

**ಪ–ಹ :** ಕೇಶಿರಾಜನು 'ಪ' ಕಾರವು 'ಹ' ಕಾರವಾಗುವ ಶಬ್ದಗಳ ಪಟ್ಟಿಯನ್ನು ಕೊಟ್ಟು ಇದೊಂದು ಕನ್ನಡದ ಸಲ್ಲಕ್ಷಣವೆಂದು ಅಭಿಮಾನದಿಂದ ಹೇಳಿದ್ದಾನೆ. ('ಸಂದಪಕಾರಕ್ಕೆ ಹಕಾರಂ ದೊರೆಕೊಳ್ಗುಂ;' 'ಸುಂದರಂ ಆ ದೇಸಿಯಿದಂ ಎಂಬರ್ ವಿಬುಧರ್; ಇದು ದೇಶಿಯೊಳ್ ಚೆಲ್ವು')

ಪಂಪ, ಪೊನ್ನ, ರನ್ನ ಮುಂತಾದ ಮತ್ತು 10, 11ನೆಯ ಶತಕಗಳ ಇತರ ಕವಿಗಳ ಬರವಣಿಗೆಗಳಲ್ಲಿ ಪ – ಹ ಮಾರ್ಪಾಟಿನ ಪ್ರಕ್ರಿಯೆ ಬಳಕೆಯಲ್ಲಿರಲಿಲ್ಲವೆಂಬುದು ಗಮನಿಸಬೇಕಾದ ವಿಷಯ. 12ನೆಯ ಶತಕದ ವಚನ ಸಾಹಿತ್ಯದಲ್ಲಿ 'ಹ'ಕಾರವು ಬಳಕೆಯಲ್ಲಿ ಬಂದುದು ಗೋಚರಿಸುತ್ತದೆ. ಮೊಟ್ಟಮೊದಲ ಬಾರಿ 'ಹ'ಕಾರದ ಪ್ರಯೋಗವು ಕ್ರಿ. ಶ. 931ರ ಕನ್ನಡ ಶಾಸನದಲ್ಲಿ ಕಂಡುಬಂದಿದೆ. ಕನ್ನಡದಲ್ಲಿಯ ಪ – ಹ ಪರಿವರ್ತನೆಯಲ್ಲಿ ಪ್ರಾಕೃತದ ಪ್ರಭಾವವಿದೆಯೆಂದು ತಿಳಿದುಬರುತ್ತದೆ. ಇದು ದ್ರಾವಿಡ ಭಾಷೆಯ ಲಕ್ಷಣವಲ್ಲ.[12] 'ಪ' ಕಾರವು ಆಧುನಿಕ ಕನ್ನಡದಲ್ಲೂ ಭಿನ್ನಾರ್ಥಕ ಜೋಡು – ನುಡಿಗಳಲ್ಲಿ ಕಂಡುಬರುತ್ತದೆ. ಉದಾ– ಪಾಲು (ಭಾಗ, ವಿಭಾಗ)– ಹಾಲು – ಪಾಲು (ಕುಡಿಯುವ ಪದಾರ್ಥ) ಪಾಡು (ಕಹಿ ಅನುಭವ) – ಹಾಡು ಪಾಡು ( – ಗೀತ) ಇತ್ಯಾದಿ

ಹಾಗೆಯೆ ಕನ್ನಡದಲ್ಲಿ 'ವ' ಕಾರವು 'ಬ' ಕಾರವಾಗುವುದು (ವ < ಬ) (ಉದಾ– ವಿತ್ತು – ಬಿತ್ತು; ವೆಳೆಯಾದೆ – ಬೆಳೆಯದೆ, ವಿಳಕ್ಕು – ಬೆಳಕು) ಈ ಬದಲಾವಣೆ ಮೂಲ ದ್ರಾವಿಡದ ಲಕ್ಷಣ

---

12. "ಶಬ್ದದ ಮೊದಲಕ್ಷರವಾಗಿರುವ ಪ ಹ ಪರಿವರ್ತನೆಯು ಅತ್ಯಧಿಕ ಪ್ರಮಾಣದಲ್ಲಿ, ಸುವ್ಯವಸ್ಥಿತ ರೀತಿಯಲ್ಲಿ ಮತ್ತು ಪೂರ್ತಿಯಾಗಿ ( – ಒಟ್ಟು ಮೊತ್ತದಲ್ಲಿ ಸಮಗ್ರವಾಗಿ ಅಲ್ಲದಿದ್ದರೂ) ಒಂದು ಹೊಸತನವನ್ನು ಹೊಂದಿದ ದಕ್ಷಿಣದ್ರಾವಿಡ ಭಾಷೆಯೆಂದರೆ ಕನ್ನಡವೊಂದೇ –
"ಮೂಲ ದಕ್ಷಿಣ ದ್ರಾವಿಡದಿಂದ ಹಳೆಯ ತಮಿಳು ಮತ್ತು ಮಲಯಾಳಂವರೆಗೆ" (ದ್ವಿತೀಯ ಅಂತಾರಾಷ್ಟ್ರೀಯ ಸಮ್ಮೇಳನದ ಮದ್ರಾಸಿನ ತಮಿಳು ವ್ಯಾಸಂಗ ಗೋಷ್ಠಿಯ ಸಂಪುಟದಲ್ಲಿ ಪ್ರಸಿದ್ಧವಾದ ಪ್ರಬಂಧ 1968, ಪು. 2)

ವಲ್ಲ. ಈ ಪರಿವರ್ತನೆಯಲ್ಲೂ ಪ್ರಾಕೃತದ ಪ್ರಭಾವವು ಕಂಡು ಬರುತ್ತದೆ.[13] 'ಹ' ಕಾರವು ಹಳಗನ್ನಡದಲ್ಲಿ ನಿಜವಾಗಿಯೂ ವಿಶಿಷ್ಟ ಧ್ವನಿಯಲ್ಲವಾದ್ದರಿಂದ ಇದಕ್ಕೆ ಹಳೆಗನ್ನಡ ವರ್ಣಮಾಲೆಯಲ್ಲಿ ಸ್ಥಾನವಿಲ್ಲ.

ಮಹಾಪ್ರಾಣಗಳು: ಇವೂ ದ್ರಾವಿಡ ಭಾಷೆಯ ವೈಶಿಷ್ಟ್ಯಾಂಶವಲ್ಲ. ಸಂಸ್ಕೃತ ಶಬ್ದಗಳು ಕನ್ನಡ ಶಬ್ದಭಾಂಡಾರದ ಒಂದು ಭಾಗವಾಗಿರುವುದರಿಂದ ಮತ್ತು ಮಹಾಪ್ರಾಣಗಳು ಸಂಸ್ಕೃತ ವರ್ಣಮಾಲೆಯ ಭಾಗವಾಗಿರುವುದರಿಂದ ಕೇಶಿರಾಜನು ಇವುಗಳನ್ನು ಕನ್ನಡ ವರ್ಣಮಾಲೆಯಲ್ಲಿ ಸೇರಿಸಿರುವ ಬಗ್ಗೆ ಇರುವ ಆತನ ನಿಲುವನ್ನು ಸಮರ್ಥಿಸಬಹುದು. ಆದರೆ ಮಹಾಪ್ರಾಣಗಳು ಕನ್ನಡದ ದೇಶಿಯಲ್ಲವಾದ್ದರಿಂದ ಅವು ಹ.ಗ.ಕ್ಕೆ ಹೊರತಾದುವು.

ಸಮಸಂಸ್ಕೃತ: ಹ.ಗ.ದಲ್ಲಿ ಬದಲಾವಣೆ ಹೊಂದದ ರೂಪದಲ್ಲಿಯೆ ಸಂಸ್ಕೃತ ಶಬ್ದಗಳ ದೆಂಡ್ದ ರಾಶಿಯೆ ಇರುವುದರಿಂದ ಅವುಗಳನ್ನು ಕೇಶಿರಾಜನು 'ಸಮಸಂಸ್ಕೃತ'ವೆಂದು ಹೆಸರಿಸಿದ್ದಾನೆ. ಆತನು 'ಅಪಭ್ರಂಶ' ಪ್ರಕರಣದಲ್ಲಿ ಧ್ವನಿ ವ್ಯತ್ಯಾಸದ ಬಗ್ಗೆ ಅಧಿಕಾರಯುಕ್ತ ವಿಶ್ಲೇಷಣೆಯನ್ನು ಕೊಟ್ಟಿದ್ದಾನೆ. 'ಈಕ್ಷಿಸಿ ಶಿಕ್ಷಾಸೂತ್ರದ ಲಕ್ಷಣಮಂ' ಎಂಬ ಆತನ ಅಸ್ಪಷ್ಟ ಹೇಳಿಕೆಯಿಂದ ಈ ವಿಚಾರದಲ್ಲಿ ಪ್ರಾಕೃತ – ವ್ಯಾಕರಣಗಳನ್ನು ಆತನು ಅನುಸರಿಸಿರುವನೆಂಬುದು ಸುಸ್ಪಷ್ಟ. ಕರ್ನಾಟಕದಲ್ಲಿ ಜೈನಮತದ ಪ್ರವೇಶದೊಂದಿಗೆ ಪ್ರಾಕೃತದ ಮುಖಾಂತರ ಸಂಸ್ಕೃತದಿಂದ ವಿಕಾರಗೊಂಡ ಅಸಂಖ್ಯ ಅಪಭ್ರಂಶ ಅಥವಾ ತದ್ಭವ ಪದಗಳು ಕನ್ನಡದಲ್ಲಿ ಆಡುಮಾತಿನಲ್ಲಿ ಹೊಕ್ಕು ಕ್ರಿ.ಶ.ದ ಆರಂಭದಲ್ಲಿಯೆ ಕನ್ನಡ ಭಾಷೆಯ ಅಭಿನ್ನಾಂಶಗಳಾಗಿವೆ. ಆದ್ದರಿಂದ ಹ.ಗ.ದ ಬಗ್ಗೆ ಮಾತನಾಡುವಾಗ ಸಂಸ್ಕೃತ ಶಬ್ದಗಳನ್ನು ಮತ್ತು ಸಂಸ್ಕೃತದಿಂದ ಸಾಧಿತವಾದ ತದ್ಭವ ಗಳನ್ನು ಕನ್ನಡ ಭಾಷೆಯಿಂದ ಎಂದರೆ ಶಬ್ದಕೋಶದ ದೃಷ್ಟಿಯಿಂದ ಮಾತ್ರ ಪ್ರತ್ಯೇಕಿಸುವಂತಿಲ್ಲ. ಆದರೆ ಭಾಷೆಯ ತಳಿಶಾಸ್ತ್ರದ ದೃಷ್ಟಿಯಿಂದ ಅವು ಪ್ರತ್ಯೇಕವಾಗಿ ನಿಲ್ಲುತ್ತವೆಂದೇ ಹೇಳಬೇಕಾಗುತ್ತದೆ. ತೆಲುಗಿನಲ್ಲಿಯಂತೆ ಕನ್ನಡದಲ್ಲಿಯ ಅನೇಕ ತದ್ಭವಗಳನ್ನು 'ಪ್ರಾಕೃತಭವ' ಗಳೆಂದು ವರ್ಗೀಕರಿಸಬೇಕಾಗುತ್ತದೆ.

ಕೊನೆಯದಾಗಿ, ಹ.ಗ.ವು ಅದೆಷ್ಟು ಸುಲಲಿತವೂ ಸಂಪದ್ಭರಿತವೂ ಆಗಿದೆಯೆಂದರೆ, ಮುದ್ದಣ (ನಂದಳಿಕೆ ಲಕ್ಷ್ಮೀನಾರಣಪ್ಪ), ಬಿ. ಎಂ. ಶ್ರೀಕಂಠಯ್ಯ ಮತ್ತು ಇನ್ನು ಕೆಲವರು 'ರಾಮಾಶ್ವಮೇಧಂ', 'ಅಶ್ವತ್ಥಾಮನ್' ಮುಂತಾದ ಗ್ರಂಥಗಳನ್ನು ಶುದ್ಧ ಹ.ಗ. ಭಾಷಾ ಶೈಲಿಯಲ್ಲಿ ರಚಿಸಲು ಮನಸ್ಸು ಮಾಡಿದ್ದುಂಟು. ಹಳಗನ್ನಡದ ವ್ಯಾಸಂಗ ಕಾರ್ಯ ಮತ್ತು ಅದರ ಸಂಸ್ಕರಣ ಕಾರ್ಯ ಈಗ ಅತ್ಯಗತ್ಯದ್ದಾಗಿದೆ. ಈ ಕೆಲಸ ಈ ಭಾಷೆಗೋಸ್ಕರ ಮಾತ್ರವಲ್ಲ; ನಮ್ಮ ಪೂರ್ವಾರ್ಜಿತ ಭಾಷೆಯ ಮತ್ತು ಸಾಹಿತ್ಯದ ಸಂಪತ್ತನ್ನು ಒಂದಿಲ್ಲೊಂದು ರೂಪದಲ್ಲಿ ಸಂರಕ್ಷಿಸುವದಕ್ಕೋಸುಗ ಮತ್ತು ನಮ್ಮ ಭವಿಷ್ಯತ್ಕಾಲದ ಸಾಹಿತ್ಯಿಕ ಸಾಹಸಗಳಲ್ಲಿ ಅದರಿಂದ ಸ್ಫೂರ್ತಿ ಪಡೆಯುವುದಕ್ಕೋಸುಗ. ಹ.ಗ.ದ ಪರಿಪೂರ್ಣ ಜ್ಞಾನವೂ ದ್ರಾವಿಡ ಭಾಷಾ ವಿಜ್ಞಾನದ ವ್ಯಾಸಂಗಕ್ಕೆ ಮತ್ತು ಹ.ಗ.ದಲ್ಲಿಯ ಹಸ್ತಪ್ರತಿಗಳ ಸಂಪಾದನಾ ಕಾರ್ಯಕ್ಕೆ ತೀರ ಅವಶ್ಯಕ.

ಕನ್ನಡ ಅನುವಾದ: **ಎಸ್. ಆರ್. ಮಳಗಿ**

---

13 ಶಬ್ದದ ಮೊದಲಕ್ಷರವಾದ ವ. ಬ ಪರಿವರ್ತನೆಯ ಈ ಹೊಸತನವು ಕನ್ನಡ, ಬಡಗ ಮತ್ತು ಕೊಡಗು ಭಾಷೆಗಳಲ್ಲಿ ಸಮಾನವಾಗಿ ಕಂಡುಬರುವ ವೈಲಕ್ಷಣ್ಯ.

# ಹಳಗನ್ನಡ ಸಾಹಿತ್ಯ

ಡಾ. ರಂ.ಶ್ರೀ. ಮುಗಳಿ

ಕನ್ನಡವು ಭಾರತದ ಅತ್ಯಂತ ಪ್ರಾಚೀನ ಭಾಷೆಗಳಲ್ಲಿ ಒಂದಾಗಿದೆ. ಸಾಹಿತ್ಯ ರೂಪ ಹಾಗೂ ವಸ್ತುಗಳಲ್ಲಿ ವಿವಿಧವೂ ಗತಿಶೀಲವೂ ಸತ್ವಯುಕ್ತವೂ ಆಗಿರುವ ಅಖಂಡ ಸಾಹಿತ್ಯ ಪರಂಪರೆಯೂ ಅದಕ್ಕಿದೆ. ಅದರ ಸಾಹಿತ್ಯವು ಖಚಿತವಾಗಿ ಒಂದು ಸಾವಿರ ವರ್ಷಗಳಿಗೂ ಮೀರಿದ ಪ್ರಾಚೀನತೆಯುಳ್ಳದು ಯೂಕೆಂದರೆ ಕನ್ನಡದ ಮೊದಲ ಉಪಲಬ್ಧ ಗ್ರಂಥವೆನಿಸಿದ ಕವಿರಾಜಮಾರ್ಗವು ಕ್ರಿ. ಶ. ೯ನೆಯ ಶತಕದಲ್ಲೇ ರಚಿತವಾದುದು. ಅಲ್ಲದೆ, ನಂಬಲರ್ಹವಾದ ಶಾಸನಗಳ ಹಾಗೂ ಸಾಹಿತ್ಯಕ ಆಧಾರಗಳ ಮೇಲಿಂದ ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಇನ್ನೂ ಹಿಂದಕ್ಕೆ ಎಂದರೆ ಆರನೆಯ ಶತಕದ ವರೆಗೆ ಒಯ್ಯಲು ಸಾಧ್ಯವಿದೆ. ಬಹು ಪ್ರಾಚೀನವೂ ವಿಸ್ತಾರವೂ ವೈವಿಧ್ಯಮಯವೂ ಆಗಿರುವ ಈ ಸಾಹಿತ್ಯದ ಸಮೀಕ್ಷೆಯನ್ನು ಸ್ಥೂಲವಾಗಿ ಮತ್ತು ಸ್ವಲ್ಪದರಲ್ಲಿ ಮಾತ್ರ ಇಲ್ಲಿ ಮಾಡಬಹುದಾಗಿದೆ. ವಾಡಿಕೆಯಂತೆ ಈ ಸಮೀಕ್ಷೆಯನ್ನು ಕಾಲಾನುಕ್ರಮವಾಗಿ ವಿಂಗಡಿಸಿ ಮಾಡುವುದು ಸಾಧ್ಯ. ಸಾಹಿತ್ಯ ರೂಪ ಇಲ್ಲವೆ ಭಾಷೆಯ ಅವಸ್ಥೆಗಳನ್ನು ಕುರಿತು ಈ ಪರಿಶೀಲನೆ ನಡೆಯಬಹುದಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯ ಎಲ್ಲ ಕಾಲ ವಿಭಾಗಗಳಲ್ಲಿ ಹಳಗನ್ನಡದಲ್ಲಿ ರಚಿತವಾಗಿರುವ ಕನ್ನಡ ಸಾಹಿತ್ಯವನ್ನು ಕುರಿತು ಈ ಲೇಖನದಲ್ಲಿ ಪರಿಶೀಲಿಸುತ್ತೇನೆ. ಸ್ಥೂಲವಾಗಿ ಹೇಳಬೇಕೆಂದರೆ ಹಳಗನ್ನಡ ಸಾಹಿತ್ಯವು ಮೊದಲ ಕಾಲ ವಿಭಾಗದಲ್ಲಿ ಎಂದರೆ ಕ್ರಿ. ಶ. ೬ನೆಯ ಶತಕದಿಂದ ೧೨ನೆಯ ಶತಕದ ಮಧ್ಯದ ವರೆಗೆ ನಿರ್ಮಾಣವಾದುದು ಮತ್ತು ಆಗ ಅದು ತಳೆದ ಪ್ರಮುಖ ಸಾಹಿತ್ಯ ಪ್ರಕಾರವು ಮಾರ್ಗಪದ್ಧತಿಯ ಗದ್ಯ-ಪದ್ಯ ಮಿಶ್ರಿತ ಚಂಪೂ ಎಂಬುದಾಗಿತ್ತು. ಸಾಹಿತ್ಯದ ಚರಿತ್ರೆ ವಿವಿಧ ಅವಸ್ಥೆಗಳಲ್ಲಿ ಹಾಯ್ದು ಬಂದಿದೆ. ಆದರೂ ಅನಂತರದ ಕಾಲ ವಿಭಾಗಗಳಲ್ಲಿ ಇತರ ಸಾಹಿತ್ಯ ರೂಪಗಳ ಹಾಗೂ ಭಾಷಾ ಸ್ವರೂಪಗಳ ಪ್ರಾಬಲ್ಯವಿದ್ದಾಗಲೂ ಹಳಗನ್ನಡ ಚಂಪೂ ಕಾವ್ಯಗಳ ನಿರ್ಮಾಣಕ್ಕೆ ತಡೆಯಿರಲಿಲ್ಲ. ವಸ್ತುಸ್ಥಿತಿಯೆಂದರೆ, ೧೭ ಮತ್ತು ೧೮ನೆಯ ಶತಕಗಳಲ್ಲಿ ಹಳಗನ್ನಡ ಕೃತಿ ರಚನೆಯು ವಿಲಕ್ಷಣವಾಗಿ ಪುನಶ್ಚೇತನಗೊಂಡುದು ಕಂಡುಬರುತ್ತದೆ. ಆಧುನಿಕ ಕಾಲದಲ್ಲೂ ಹಳಗನ್ನಡದಲ್ಲಿ ರಚಿತವಾದ ಉತ್ತಮ ಸಾಹಿತ್ಯ ಕೃತಿಗಳು ಅಪರೂಪವಾಗಿಯಾದರೂ ಕಾಣ ದೊರೆಯುತ್ತವೆ.

ಹಲ್ಮಿಡಿಯಲ್ಲಿ ದೊರೆತ ಕ್ರಿ. ಶ. ೫ನೆಯ ಶತಕದ ಶಾಸನವೇ ಅತ್ಯಂತ ಪ್ರಾಚೀನವಾದುದು. ಈ ಶಾಸನದಲ್ಲಿ ಅದೇ ಬೆಳವಣಿಗೆ ಹೊಂದುತ್ತಿರುವ ಪೂರ್ವದ ಹಳಗನ್ನಡವೆಂದು ಹೆಸರಿಸಲಾದ ಹಳಗನ್ನಡ ಗದ್ಯದ ಸುಳಿವುಗಳು ಕಂಡುಬರುತ್ತವೆ. ಈ ಶಾಸನವು ಸಾಹಿತ್ಯಕ ವೈಖರಿಯುಳ್ಳದಾಗಿದ್ದು ಆ ಕಾಲದಲ್ಲಿ ಪ್ರೌಢ ಶೈಲಿಯ ಬರವಣಿಗೆಯಿತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಆದರೆ ಇದು ಸಾಹಿತ್ಯಕ ರಚನೆಯಾಗಿರದೆ ಹೆಚ್ಚಾಗಿ ಶಾಸನದ ದಾಖಲೆಯೇ ಆಗಿದೆ. ಹಳಗನ್ನಡದಲ್ಲಿ ನಿಜವಾದ ಸಾಹಿತ್ಯಕ ಅಭಿವ್ಯಕ್ತಿಯ ಮೊಟ್ಟಮೊದಲ ಉದಾಹರಣೆಯೆಂದರೆ ಗುಣಮಧುರನೆಂಬ ಮಹಾವ್ಯಕ್ತಿಯ ಗುಣಗಾನವನ್ನೊಳಗೊಂಡ ಒಂದು ಶಾಸನ ಪದ್ಯ. ಇದೊಂದು ಸುಂದರ ವ್ಯಕ್ತಿ ಚಿತ್ರ. ಕೆಲವೆಡೆಗಳಲ್ಲಿ ಇದರ ಅರ್ಥವು ಕ್ಲಿಷ್ಟವಾಗಿದ್ದರೂ ಬಿಗುವಿನ ರಚನೆಯಿಂದಾಗಿ ತುಂಬ ಪರಿಣಾಮಕಾರಿ ಆದುದು. ಈ ಶಾಸನದ ಕಾಲವು ಕ್ರಿ.ಶ. ೫೦೦ ರಿಂದ ೫೫೦ರ ಮಧ್ಯದ್ದೆಂದು ನಿಶ್ಚಿತವಾಗಿದೆ. ಇದರ ತರುವಾಯ ಮಾಧವನೆಂಬ ಇನ್ನೊಬ್ಬ ವೀರಪುರುಷನ ವರ್ಣನೆಯು ಹಳಗನ್ನಡದಲ್ಲಿ ರಚಿತವಾದ ತ್ರಿಪದೀ ಛಂದಸ್ಸಿನ ಮೂರು ಪದ್ಯಗಳಲ್ಲಿ ದೊರೆಯುತ್ತದೆ. ಇಲ್ಲಿಯ ಭಾಷೆಯಲ್ಲಿ ಅಲ್ಲಲ್ಲಿ ಹಳೆಯ ರೂಪಗಳ ಬಳಕೆ ಕಂಡುಬರುತ್ತದೆ. ಈ ಶಾಸನವು ಏಳನೆಯ ಶತಮಾನದ್ದಾಗಿತ್ತು. ಅನಂತರದ ಶತಮಾನಗಳಲ್ಲಿ ವಿಪುಲ ಸಂಖ್ಯೆಯಲ್ಲಿ ದೊರೆಯುವ ಸಾಹಿತ್ಯ ಗುಣವುಳ್ಳ ಶಾಸನಗಳಿಗೆಲ್ಲ ಇದು ಅಗ್ರಗಾಮಿ.

ಈ ಮೊದಲೇ ಉಲ್ಲೇಖಿಸಿದ ಕವಿರಾಜಮಾರ್ಗವು ದಂಡಿಯ ಸಂಸ್ಕೃತ ಕಾವ್ಯಾದರ್ಶವನ್ನು ಆಧರಿಸಿ ರಚಿತವಾದ ಅಲಂಕಾರ ಶಾಸ್ತ್ರ ಗ್ರಂಥ. ಪ್ರಾಯಶ: ಇದು ರಾಷ್ಟ್ರಕೂಟ ವಂಶದ ಸುಪ್ರಸಿದ್ಧ ಚಕ್ರವರ್ತಿ ನೃಪತುಂಗನ ಆಸ್ಥಾನವನ್ನು ಅಲಂಕರಿಸಿದ್ದ ಒಬ್ಬ ಸೂಕ್ಷ್ಮಗ್ರಾಹೀ ಜೈನ ಪಂಡಿತನಿಂದ ರಚಿತವಾಗಿರಬೇಕು. ಕನ್ನಡದಲ್ಲಿ ಈ ಮುಂಚೆ ಬಹುದೊಡ್ಡ ಹಾಗೂ ಸಂಪದ್ಭರಿತ ಸಾಹಿತ್ಯ ಪರಂಪರೆಯೊಂದು ಇತ್ತೆಂಬುದಕ್ಕೆ ಸುಸ್ಪಷ್ಟ ಆಧಾರಗಳು ಈ ಗ್ರಂಥದಲ್ಲಿ ದೊರೆಯುತ್ತವೆ. ಉದಾಹರಣೆಗಾಗಿ ಹಲವಾರು ಗದ್ಯಕಾರರ ಹಾಗೂ ಪದ್ಯಕಾರರ ಹೆಸರುಗಳು ಇಲ್ಲಿ ಉಲ್ಲೇಖಗೊಂಡಿವೆ. ಪಳಗನ್ನಡ ಎಂಬ ಪದದ ಪ್ರಯೋಗವು ಇಲ್ಲಿ ಮೊಟ್ಟ ಮೊದಲಿಗೆ ಗೋಚರಿಸಿದ್ದು, ಇದು ಉಲ್ಲೇಖಗೊಂಡ ಸಂದರ್ಭದ ಮೇಲಿಂದ ಇದಕ್ಕೂ ಮುಂಚೆ ಹಳಗನ್ನಡದಲ್ಲಿ ಬಹುಕಾಲದಿಂದ ಒಂದು ಸುವಿಖ್ಯಾತ ಸಾಹಿತ್ಯ ಪರಂಪರೆ ನೆಲಸಿತ್ತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಉಚಿತ ಸಾಹಿತ್ಯ ಶೈಲಿಯನ್ನು ಕುರಿತ ಚರ್ಚೆಯ ಸಂಬಂಧದಲ್ಲಿ ವ್ಯಕ್ತವಾದ ವಿಚಾರಗಳು ತುಂಬ ಕುತೂಹಲಕಾರಿಯಾಗಿವೆ. ಬೆಳೆಯುತ್ತಿರುವ ಭಾಷಾ ಶಾಸ್ತ್ರದ ಅರಿವು ಸಾಲದ ಕೆಲವರು ಸುಪ್ರಸಿದ್ಧ ಪ್ರಾಚೀನ ಕಾವ್ಯಗಳೇ ಆಧುನಿಕ ಕಾವ್ಯ ಶೈಲಿಗೆ ಲಕ್ಷಣವೆಂದು ತಪ್ಪು ಭಾವಿಸಿ, ಅದು

ದೇಸಿಯಲ್ಲವೆಂದರಿತಿದ್ದರೂ ಹಳಗನ್ನಡವನ್ನು ಹೊಲಗೆಡಿಸಿ ಬಳಸುತ್ತಾರೆ ಎಂದಿದ್ದಾನೆ. (೧೪೪೮ ಕ.ರಾ.ಮಾ.) ಇದು ಭಾಷೆಯ ಬಳಕೆಯ ಬಗ್ಗೆ ಆಧುನಿಕ ಮತ್ತು ಪ್ರಗತಿಶೀಲ ದೃಷ್ಟಿಯನ್ನು ಪ್ರಕಟಪಡಿಸುವುದೆಂದಷ್ಟೇ ಅಲ್ಲ, ಕವಿರಾಜ ಮಾರ್ಗ ಗ್ರಂಥವು ರಚಿತವಾಗಿದ್ದ ೯ನೆಯ ಶತಕದಲ್ಲಿ ಹಳಗನ್ನಡವು ಬಹುಕಾಲದಿಂದ ಉಳಿದುಬಂದಿದ್ದರೂ ಪ್ರತಿಯೊಂದು ಅಂಶದಲ್ಲೂ ಅದು ಹೇಗೆ ಮಾದರಿಯಾಗಿದ್ದಿರಲಾರದೆಂಬುದನ್ನೂ ಸೂಚಿಸುತ್ತದೆ. ಈ ಶತಕದಲ್ಲಿದ್ದ ಗ್ರಂಥಕಾರರಲ್ಲಿ ಅಸಗನ ಉಲ್ಲೇಖವನ್ನು ಮಾಡಲೇಬೇಕು. ಕನ್ನಡ ಮತ್ತು ಸಂಸ್ಕೃತ ಗ್ರಂಥಗಳ ಜತೆಗೆ ಈತನು ಬರೆದಿದ್ದ 'ಕರ್ನಾಟಕ ಕುಮಾರ ಸಂಭವ'ವು ಬಹುಶ: ಕಾಳಿದಾಸನ ಸುಪ್ರಸಿದ್ಧವಾದ ಕುಮಾರ ಸಂಭವದ ಕನ್ನಡಾನುವಾದವಿದ್ದಿರಬೇಕು. ಒಂದನೆಯ ಗುಣವರ್ಮನು ಅಗಸನ ಸಮಕಾಲೀನನು. ಹರಿವಂಶ ಮತ್ತು ಶೂದ್ರಕ ಎಂಬೆರಡು ಗ್ರಂಥಗಳು ಈತನವೆಂದೂ ಇವುಗಳಲ್ಲಿ ಒಂದು ಧಾರ್ಮಿಕ ಗ್ರಂಥ ಇನ್ನೊಂದು ಲೌಕಿಕ ಗ್ರಂಥವೆಂದೂ ತಿಳಿದುಬಂದಿದೆ. ಈ ಗ್ರಂಥಗಳಿಂದ ಉದ್ಧರಿಸಲ್ಪಟ್ಟ ಪದ್ಯಗಳು ಅನಂತರದ ಕಾವ್ಯ ಸಂಗ್ರಹಗಳಲ್ಲಿ ಗುರುತಿಸಲ್ಪಟ್ಟಿವೆ. ವಡ್ಡಾರಾಧನೆ ಎಂಬ ಗ್ರಂಥವು ೧೦ನೆಯ ಶತಕದ ಆದಿಭಾಗದಲ್ಲಿ ಶಿವಕೋಟ್ಯಾಚಾರ್ಯನೆಂಬವನಿಂದ ರಚಿತವಾಯ್ತೆಂದು ನಂಬಲಾಗಿದೆ. ಆದರೆ ಈ ಗ್ರಂಥದ ಕಾಲ ಮತ್ತು ಕರ್ತೃತ್ವಗಳೆರಡೂ ಖಚಿತಪಟ್ಟಿಲ್ಲ. ವಡ್ಡಾರಾಧನೆಯು ಜೈನ ಪುರಾಣೇತಿಹಾಸಗಳಿಂದ ಆಯ್ದುಕೊಂಡು ವೈಶಿಷ್ಟ್ಯಪೂರ್ಣ ಗದ್ಯಶೈಲಿಯಲ್ಲಿ ರಚಿತವಾದ ಕಥೆಗಳ ಸಂಗ್ರಹ. ಹೀಗೆ ಕವಿರಾಜ ಮಾರ್ಗಕ್ಕಿಂತ ಮೊದಲು ಅನೇಕ ಶತಮಾನಗಳಿಂದ ಹಳಗನ್ನಡ ಸಾಹಿತ್ಯದ ಸುದೀರ್ಘ ಪರಂಪರೆಯೊಂದು ಪ್ರಸ್ಥಾಪಿತವಾಗಿ, ಹತ್ತನೆಯ ಶತಕದಿಂದ ಆರಂಭವಾದ ಹಳಗನ್ನಡ ಚಂಪೂ ಮಹಾಕಾವ್ಯಗಳ ಸೃಷ್ಟಿಗೆ ತಕ್ಕ ಮಾರ್ಗವನ್ನು ಸಿದ್ಧಪಡಿಸಿತ್ತೆಂದು ಕಂಡುಬರುತ್ತದೆ. ೧೦ನೆಯ ಶತಕದಲ್ಲಿ ಪಂಪ, ಪೊನ್ನ ಮತ್ತು ರನ್ನ ಎಂಬ ಮೂವರು ಕವಿಗಳು ಹಳಗನ್ನಡದಲ್ಲಿ ಮಾರ್ಗಕಾವ್ಯಗಳ ಮಹೋಜ್ವಲ ಸರಣಿಗೆ ಕಾರಣಕರ್ತರಾದರು. ಮನೋಧರ್ಮ ಹಾಗೂ ಪ್ರತಿಭಾಶಕ್ತಿಗಳು ಬೇರೆ ಬೇರೆಯಾಗಿದ್ದರೂ ಈ ಮೂವರಲ್ಲೂ ಒಂದು ಸಮಾನಾಂಶವಿತ್ತು. ಜೈನ ಧರ್ಮದಲ್ಲಿ ಅಪಾರ ಶ್ರದ್ಧಾವಂತರಾಗಿದ್ದರೂ ಅವರದು ವಿಶಾಲದೃಷ್ಟಿ. ಆದ್ದರಿಂದಲೇ ಬಹುಶ: ಮೊದಲನೆಯ ಗುಣವರ್ಮನು ಹಾಕಿಕೊಟ್ಟ ಸಂಪ್ರದಾಯವನ್ನನುಸರಿಸಿ, ಒಂದು ಲೌಕಿಕ ಹಾಗೂ ಇನ್ನೊಂದು ಆಗಮಿಕ ಗ್ರಂಥಗಳನ್ನು ಇವರು ರಚಿಸಿದರು. ಕನ್ನಡ ಕಾವ್ಯಕ್ಕೆ ವಿಶಿಷ್ಟವೆನಿಸಿದ ಚಂಪೂ ರೂಪದಲ್ಲಿ ಸೃಜನಾತ್ಮಕ ಬರವಣಿಗೆಯ ಕಲೆ ಈ ಕಾಲದಲ್ಲಿ ಉನ್ನತ ಶ್ರೇಣಿಯನ್ನು ಮುಟ್ಟಿತು. ಈ ಶ್ರೇಣಿಯ ಶ್ರೇಷ್ಠ ಕವಿಗಳಲ್ಲಿ ಪಂಪನು ಎದ್ದು ಕಾಣುವಂಥವನು. ಈತನದು ವರ್ಣರಂಜಿತ ವ್ಯಕ್ತಿತ್ವ. ಕವಿಯೂ, ಕಲಿಯೂ ಎಂದು ಹೆಸರಾಂತ ಈತನು ಆ ಕಾಲದ ರಾಜಕೀಯದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿದ್ದ ಚಾಲುಕ್ಯ ಸಾಮಂತರಾಜ ಎರಡನೆಯ ಅರಿಕೇಸರಿಯ ಆಸ್ಥಾನದಲ್ಲಿ ಆಶ್ರಯ ಪಡೆದಿದ್ದನು. ಇವನು ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯ ಎಂಬೆರಡು ಕಾವ್ಯಗಳನ್ನು ಚಂಪೂ ರೂಪದಲ್ಲಿ ರಚಿಸಿದನು. ಆದಿಪುರಾಣವು ಜೈನ ಪುರಾಣಗಳಲ್ಲಿ ಬರುವ ಪ್ರಥಮ ತೀರ್ಥಂಕರನಾದ ಪುರುದೇವನ ಜೀವನ ಹಾಗೂ ಆಧ್ಯಾತ್ಮಿಕ ಪ್ರಗತಿಯನ್ನು ಕುರಿತದ್ದು. ಈ ಕಾವ್ಯದ ವಸ್ತು ನಿರೂಪಣೆ ಬಹು ವಿಸ್ತಾರವಾದುದು. ಮಾರ್ಗ ಪದ್ಧತಿಯ ಮಹಾಕಾವ್ಯದ ತಂತ್ರವನ್ನು ಜಿನಸೇನನ ಸಂಸ್ಕೃತ ಮಹಾಪುರಾಣದಲ್ಲಿ ಬಂದ ಕಥಾನಕದೊಂದಿಗೆ ಹಾಳತವಾಗಿ ಜತೆಗೂಡಿಸಲಾಗಿದೆ. ಪುರಾಣದ ವಿವರಗಳಿಂದಲೂ ಜೈನ ತಾತ್ವಿಕ ಚರ್ಚೆಗಳಿಂದಲೂ ಕೆಲವೆಡೆಗಳಲ್ಲಿ ಭಾರವತ್ತಾಗಿದ್ದರೂ ಮಹತ್ವಪೂರ್ಣ ಸನ್ನಿವೇಶಗಳಲ್ಲಿ ಆದಿಪುರಾಣವು ಕವಿತ್ವದ ಅತ್ಯುನ್ನತ ಹಂತಗಳಿಗೇರಿದೆ. ಇಂಥಲ್ಲಿ ಪಾತ್ರ ಹಾಗೂ ಕ್ರಿಯೆಗಳೆರಡೂ ಬೆರೆತು, ಕವಿಯ ಹೇಳಿಕೆಯಂತೆ ಧರ್ಮ ಹಾಗೂ ಕಾವ್ಯ ಧರ್ಮಗಳೆರಡರ ಸಾಮರಸ್ಯವು ಸಿದ್ಧಿಗೊಂಡಿದೆ. ಪಂಪನ ಎರಡನೆಯ ಕಾವ್ಯವಾದ ವಿಕ್ರಮಾರ್ಜುನ ವಿಜಯ ಅಥವಾ ಪಂಪಭಾರತವು ನಿಸ್ಸಂಶಯವಾಗಿ ಕನ್ನಡದಲ್ಲಿಯ ಅತ್ಯಂತ ಶ್ರೇಷ್ಠ ಕಾವ್ಯಗಳಲ್ಲಿ ಒಂದಾಗಿದೆ. ವ್ಯಾಸ ರಚಿತ ಮಹಾಭಾರತದ ಸಂಗ್ರಹರೂಪದ ಕಾವ್ಯಾನುವಾದವಿದು. ಈ ದೃಷ್ಟಿಯಿಂದ ಕವಿ ಇದನ್ನು 'ಸಮಸ್ತ ಭಾರತ' ಎಂದು ಹೆಸರಿಸಿದ್ದಾನೆ. ಈ ಸಂಗ್ರಹ ಕಾರ್ಯದಲ್ಲಿ ಮಹಾಭಾರತದ ಸಮಗ್ರ ಕಥಾ ವಸ್ತುವನ್ನು ಪಾತ್ರಗಳ ವೈಶಿಷ್ಟ್ಯವನ್ನು ಗುರಿತಪ್ಪದಂತೆ ಗ್ರಹಿಸಿದುದು, ಈ ಮಾನವೀಯ ಚರಿತ್ರೆಯ ಬಹುಮುಖ್ಯ ಭಾಗವಾದ ಭ್ರಾತೃಸಂಘರ್ಷದ ಕತೆ ನಾನಾ ವಿಧವಾದ ಪಾತ್ರವರ್ಗವನ್ನೊಳಗೊಂಡು, ಕೊನೆಯಲ್ಲಿ ಕುರುಕ್ಷೇತ್ರ ಮಹಾಯುದ್ಧದಲ್ಲಿ ಪರ್ಯವಸಾನಗೊಂಡುದು, ಇದೆಲ್ಲವೂ ಉನ್ನತ ಔಚಿತ್ಯಪೂರ್ಣ ಪ್ರಜ್ಞೆಯಿಂದ ಮಹೋಜ್ವಲವಾಗಿ ಚಿತ್ರಿತವಾಗಿದೆ. ಅಲ್ಲದೆ, ಅರ್ಜುನನನ್ನು ಆಶ್ರಯವಿತ್ತ ರಾಜ ಅರಿಕೇಸರಿಯೊಂದಿಗೆ ಸಮೀಕರಿಸಿ ಸಮಕಾಲೀನ ಚರಿತ್ರೆಯನ್ನು ಈ ಮಹಾಕಾವ್ಯದ ಕತೆಯೊಡನೆ ಬೆರೆಸಲು ಕವಿ ಯತ್ನಿಸಿದ್ದಾನೆ. ಕವಿಯ ಕಲ್ಪನಾ ಶಕ್ತಿ ಮತ್ತು ಅಭಿವ್ಯಕ್ತಿ ಸಾಮರ್ಥ್ಯಗಳು ಅತ್ಯುತ್ತಮವಾಗಿ ಪ್ರಕಟವಾಗಿವೆ. ಮತ್ತು ಕವಿಯೇ ತನ್ನ ಮೊದಲ ಕಾವ್ಯದಲ್ಲಿ ಹೇಳಿರುವ 'ಸಂಸಾರಸಾರೋದಯ' ಅಥವಾ ಸಾಧ್ಯವಿರುವ ಸಕಲ ವಿಧದ ಅನುಭವಪೂರ್ಣ ಸರ್ವಸ್ವವು ಇಲ್ಲಿ ಮಾರ್ಗ ಕಾವ್ಯದ ಮಹೋನ್ನತಿಯ ಚೊಕ್ಕತನದಿಂದ ಸ್ಫುಟವಾಗಿ ತಳತಳಿಸುತ್ತದೆ. ಎರಡೂ ಕಾವ್ಯಗಳಲ್ಲಿ ಪಂಪನ ಶೈಲಿ ಕೆಲವೆಡೆಗಳಲ್ಲಿ ಕ್ಲಿಷ್ಟ ಹಾಗೂ ಅಡಂಬರದ್ದಾಗಿದ್ದರೂ 'ಮಾರ್ಗ' ಮತ್ತು ದೇಸಿಯ ಎಂದರೆ ಮಹೋನ್ನತ ಹಾಗೂ ಜನಪ್ರಿಯ ಭಾಷಾ ಸರಣಿಗಳ ಅಸಾಧಾರಣ ಸಾಮರಸ್ಯದಿಂದ ಕೂಡಿದೆ. ಪಂಪನ ಸಮಕಾಲೀನನೂ ಉದ್ದಾಮ ಕವಿಯೂ ಆಗಿದ್ದ ಪೊನ್ನನು ಭುವನೈಕ ರಾಮಾಭ್ಯುದಯ ಮತ್ತು ಶಾಂತಿ ಪುರಾಣಗಳನ್ನು ರಚಿಸಿದನು. ಇವುಗಳಲ್ಲಿ ಮೊದಲನೆಯ ಕೃತಿ ಉಪಲಬ್ಧವಿಲ್ಲ. ಆದರೆ ಅದರ ಕೆಲವು ಉದ್ಧೃತ ಪದ್ಯಗಳಿಂದ ಅದೊಂದು ರಾಮಾಯಣ ಕಾವ್ಯವಿದ್ದಿರಬಹುದು. ಬಹುಶ: ಪಂಪಭಾರತದ ಹಾಗೆಯೇ ಐತಿಹಾಸಿಕ ಧ್ವನಿಯುಳ್ಳದೂ, ಆಗಿರಬೇಕು. ಉಪಲಬ್ಧವಿರುವ ಆತನ ಶಾಂತಿಪುರಾಣವು ಆದಿಪುರಾಣದಂತೆ ಆಗಮಿಕ ಕಾವ್ಯ. ಹದಿನಾರನೆಯ ತೀರ್ಥಂಕರನಾದ ಶಾಂತಿನಾಥನ ಜೀವನ ಹಾಗೂ ಮಹಿಮಾತಿಶಯಗಳನ್ನು ಕುರಿತದ್ದು. ಈ ಕಾವ್ಯದ ಒಂಭತ್ತು ಆಶ್ವಾಸಗಳು ಇಲ್ಲಿಯ ಕೇಂದ್ರ ಪಾತ್ರವಾದ ಶಾಂತಿನಾಥನ ಹನ್ನೊಂದು ಪೂರ್ವಜನ್ಮಗಳಿಗೆ ಮೀಸಲಾಗಿದ್ದು, ಮೂರು ಆಶ್ವಾಸಗಳು ಮಾತ್ರ ಆತನ ಕೊನೆಯ ಜನ್ಮದ ತಪಸ್ಸಾಧನೆ ಮತ್ತು ಕೈವಲ್ಯಸಿದ್ಧಿಗಳಿಗೆ ಸಂಬಂಧಪಟ್ಟುವಾಗಿವೆ. ಜೈನ ಪುರಾಣ ಕಥನ ಮತ್ತು ಜೈನ ತತ್ವಗಳಿಂದ ಈ ಕೃತಿ ಭಾರವತ್ತಾಗಿದ್ದರೂ ವಿಪುಲ ವಿದ್ವತ್ತಿನ ಜತೆಗೆ ಕಲ್ಪನಾ ಶಕ್ತಿ ಮತ್ತು ಅಭಿವ್ಯಕ್ತಿ ಸಾಮರ್ಥ್ಯಗಳಿಂದ ಇದು ಗಮನಾರ್ಹವೆನಿಸಿದೆ.

ಈ ರತ್ನತ್ರಯರಲ್ಲಿ ರನ್ನನು ಇನ್ನೊಬ್ಬ ಕವಿ. ಈತನು ಹತ್ತನೆಯ ಶತಕದ ಕೊನೆಯಲ್ಲಿದ್ದನು. ತನ್ನ ಹಿರಿಯ ಸಮಕಾಲೀನರಾದ ಪಂಪ–ಪೊನ್ನರ ದಾರಿಯನ್ನೇ ತುಳಿಯುತ್ತ ಗದಾಯುದ್ಧ ಮತ್ತು ಅಜಿತ ಪುರಾಣ ಎಂಬೆರಡು ಉದ್ಗ್ರಂಥಗಳನ್ನು ರಚಿಸಿದನು. ಈತನು ತನ್ನ ಗದಾಯುದ್ಧದಲ್ಲಿ

ಮಹಾಭಾರತ ಯುದ್ಧದ ಕೊನೆಯ ದಿನದ ಮೇಲೆ ತನ್ನ ಲಕ್ಷ್ಯವನ್ನು ಕೇಂದ್ರೀಕರಿಸಿದ್ದಾನೆ. ಭೀಮನು ಅಡಗಿ ಕುಳಿತಿದ್ದ ದುರ್ಯೋಧನನನ್ನು ಹುಡುಕಿ, ಆತನನ್ನು ಗದಾಯುದ್ಧದಲ್ಲಿ ಪರಾಭವಗೊಳಿಸಿ ದ್ರೌಪದಿಗಿತ್ತ ವಚನವನ್ನು ಪೂರೈಸುತ್ತಾನೆ. ಮಹಾಭಾರತದ ಪ್ರಮುಖ ಕಥಾವಸ್ತುವಿನ ಅಂಶಗಳನ್ನು "ಸಿಂಹಾವಲೋಕನ ಕ್ರಮ"ದಿಂದ ಈ ಕಾವ್ಯದಲ್ಲಿ ತಂದುದು ಕವಿಯ ಜಾಣ್ಮೆಯ ಕುರುಹು. ರನ್ನನು ಸಂಸ್ಕೃತ ಆಕರಗಳಿಂದ ಅನೇಕ ಅಂಶಗಳನ್ನು ವಿಪುಲವಾಗಿ ಸ್ವೀಕರಿಸಿದ್ದಾನಲ್ಲದೆ ಪಂಪ ಭಾರತಕ್ಕೆ ವಿಶೇಷವಾಗಿ ಋಣಿಯಾಗಿದ್ದಾನೆ. ಆದರೂ ಈ ಕಥಾನಕವನ್ನು ತನ್ನದೇ ಆದ ನಾಟಕೀಯ ಹಾಗೂ ಶಕ್ತಿಯುತ ರೀತಿಯಲ್ಲಿ ಬೆಳೆಸಿಕೊಂಡು ಹೋಗಿದ್ದಾನೆ. ಚಂಪೂರೂಪದಲ್ಲಿಯ ಈ ಕಾವ್ಯವು ಒಂದು ಪ್ರಭಾವಶಾಲೀ ನಾಟಕದಂತೆ ಭಾಸವಾಗುತ್ತದೆ. ತನ್ನ ಕಾವ್ಯನಾಯಕ ಭೀಮನನ್ನು ತನ್ನ ಆಶ್ರಯದಾತನಾಗಿದ್ದ ಚಾಲುಕ್ಯ ವಂಶದ ಸತ್ಯಾಶ್ರಯನೊಂದಿಗೆ ಸಮೀಕರಿಸಿದ್ದರಿಂದ ಪಂಪಭಾರತದಂತೆ ಗದಾಯುದ್ಧವೂ ತಾತ್ಕಾಲೀನ ಮಹತ್ವವನ್ನು ಹೊಂದಿತು. ರನ್ನನ ಇನ್ನೊಂದು ಕಾವ್ಯವಾದ ಅಜಿತ ಪುರಾಣವು ಎರಡನೆಯ ತೀರ್ಥಂಕರನಾದ ಅಜಿತನಾಥನ ಜೀವನ ಕತೆ. ಈ ತೀರ್ಥಂಕರನ ಜೀವನದಲ್ಲಿಯ ಮಹತ್ವಪೂರ್ಣ ಘಟನೆಗಳಾದ ಪಂಚ ಕಲ್ಯಾಣಗಳಿಗೆ ಇಲ್ಲಿ ವಿಶೇಷ ಗಮನ ಕೊಡಲಾಗಿದೆ – ಆತನ ಭವಾವಳಿಗಲ್ಲ.

೧೧ನೆಯ ಮತ್ತು ೧೨ನೆಯ ಶತಕಗಳಲ್ಲಿ ಹಳಗನ್ನಡದ ಮಾರ್ಗಕಾವ್ಯ ಪದ್ಧತಿಯನ್ನು ಮುಂದುವರಿಸಿಕೊಂಡು ಹೋದ ಕವಿಗಳಲ್ಲಿ ಮೊದಲನೆಯ ಹಾಗೂ ಎರಡನೆಯ ನಾಗವರ್ಮರು, ದುರ್ಗಸಿಂಹ, ನಾಗಚಂದ್ರ, ನಯಸೇನ ಹಾಗೂ ಬ್ರಹ್ಮಶಿವ ಇವರು ಉಲ್ಲೇಖನಾರ್ಹರು. ಮೊದಲನೆಯ ನಾಗವರ್ಮನು ಬಾಣನ ಕಾದಂಬರಿಯ ಕನ್ನಡಾನುವಾದ ಮಾಡಿದನು. ಉದ್ದುದ್ದ ಸಮಾಸಗಳಿಂದ ಕೂಡಿದ್ದಾಗಿ ಕ್ಲಿಷ್ಟವೂ ಮಹದಾಡಂಬರದ್ದೂ ಆಗಿದ್ದ ಸಂಸ್ಕೃತ ಗದ್ಯ ಮಾದರಿಯ ಕಾವ್ಯವನ್ನು ಸುಲಭವೂ, ಸುಲಲಿತವೂ ಆದ ಚಂಪೂರೂಪದ ರಚನೆಗೆ ಪರಿವರ್ತಿಸಿದನು. ಹೀಗೆ ಈತನ ಕರ್ನಾಟಕ ಕಾದಂಬರಿಯು ಭಾಷಾಂತರವಾಗದೆ ಪ್ರತಿ ಸೃಷ್ಟಿಯೇ ಆಯಿತು. ಎರಡನೆಯ ನಾಗವರ್ಮನು ವ್ಯಾಕರಣ, ಅಲಂಕಾರ, ನಿಘಂಟು ಮೊದಲಾದ ಶಾಸ್ತ್ರಗ್ರಂಥಗಳ ರೂಪದಲ್ಲಿ ಕನ್ನಡಕ್ಕೆ ಬಹುಬೆಲೆಯುಳ್ಳ ಕೊಡುಗೆಯನ್ನಿತ್ತಿರುವನಲ್ಲದೆ ಕೊನೆಯ ತೀರ್ಥಂಕರನಾದ ಮಹಾವೀರನನ್ನು ಕುರಿತ ವರ್ಧಮಾನ ಪುರಾಣವನ್ನು ರಚಿಸಿದ್ದಾನೆ. ಈ ಮೊದಲ ಕಾಲಾವಧಿಯಲ್ಲಿ ಕೆಲವು ಸಲ ಅತಿ ಕಠಿನವೂ, ಜಟಿಲವೂ ಆಗಿದ್ದ ಚಂಪೂ ಶೈಲಿ ನಾಗಚಂದ್ರ ಹಾಗೂ ಆತನ ತರುವಾಯದ ಇತರ ಕವಿಗಳ ಕೈಯಲ್ಲಿ ಸರಳವೂ ಸುಗಮವೂ ಆಯಿತು. ಇದಕ್ಕೆ ಬಹುಶಃ ಮೊದಲನೆಯ ನಾಗವರ್ಮನ ಪ್ರಭಾವವು ಕಾರಣವಾಗಿರಬೇಕು. ನಾಗಚಂದ್ರನು ವಿಮಲ ಸೂರಿಯ ಪ್ರಾಕೃತ ಮೂಲದಿಂದ ಪ್ರಭಾವಿತನಾಗಿ ಜೈನಪದ್ಧತಿಯ ರಾಮಾಯಣ ರಚನೆ ಮಾಡಿದನು. ಈತನ ರಾಮಾಯಣದಲ್ಲಿ ರಾವಣ ಪಾತ್ರವು ಉದಾತ್ತ ಪ್ರಕೃತಿಯದಾಗಿ ನಿರೂಪಿತವಾಗಿದ್ದು, ಆತನು ಒಂದು ದುರ್ಬಲ ಸಮಯದಲ್ಲಿ ಆಶೆಗೆ ಸಿಕ್ಕುಬಿದ್ದು ಸೀತೆಯನ್ನು ಕದ್ದೊಯ್ದನು ಆದರೆ ಅನಂತರದಲ್ಲಿ ಸೀತೆಯ ದೃಢವಾದ ಪತಿಭಕ್ತಿಯನ್ನು ಕಂಡು ಪಶ್ಚಾತ್ತಾಪಗೊಂಡನು. ಈ ಕಲ್ಪನೆ ವಿಮಲ ಸೂರಿಯಿಂದಲೇ ಪ್ರೇರಿತವಾಗಿದ್ದು ಹೊಸತಲ್ಲನಾದರೂ ದುರಂತ ಸನ್ನಿವೇಶದ ವಿಲಕ್ಷಣ ಉತ್ಕಟತೆಯಿಂದಾಗಿ ನಿರೂಪಣೆಯಲ್ಲಿ ನಿಜವಾಗಿಯೂ ಮೂಲಕ್ಕಿಂತ ಹೆಚ್ಚು ಪರಿಷ್ಕೃತಗೊಂಡುದಾಗಿದೆ. ನಾಗಚಂದ್ರನು ತನ್ನ ಇನ್ನೊಂದು ಕೃತಿಯಾದ ಮಲ್ಲಿನಾಥ ಪುರಾಣದಲ್ಲಿ ಉಜ್ವಲ ಧರ್ಮಶ್ರದ್ಧೆ ಹಾಗೂ ತೀವ್ರ ಕಾವ್ಯೋತ್ಸಾಹ ಇವೆರಡರ ಸಮನ್ವಯ ಸಾಧನೆಯಲ್ಲಿ ಕನ್ನಡ ಸಂಪ್ರದಾಯವನ್ನು ಮುಂದುವರಿಸಿದ್ದಾನೆ. ದುರ್ಗಸಿಂಹನು ವಸುಭಾಗಭಟ್ಟನ ಪಂಚತಂತ್ರವನ್ನು ಕನ್ನಡಿಸಿ ಪಂಚತಂತ್ರದ ಇನ್ನೊಂದು ಅಪರೂಪ ಸಂಪ್ರದಾಯವನ್ನು ಬಹಿರಂಗಗೊಳಿಸಿದ್ದಾನೆ. ಈ ಸಂಪ್ರದಾಯದ ಕೆಲವೆ ಆಕರಗಳು ಮುಖ್ಯವಾಗಿ ಬೃಹದ್ಭಾರತದಲ್ಲಿ ದೊರೆತಿವೆ. ದುರ್ಗಸಿಂಹನ ಈ ಕೃತಿ ಚಂಪರೂಪದಲ್ಲಿದ್ದು ಕಥಾ ಪ್ರಸಂಗಗಳಲ್ಲೆಲ್ಲಾ ಈತನು ವಿಪುಲವಾಗಿ ಗದ್ಯವನ್ನೇ ಬಳಸಿದ್ದಾನೆ. ನಯಸೇನನ ಧರ್ಮಾಮೃತವು ಒಂದು ಕಥಾಗುಚ್ಛ. ಇಲ್ಲಿಯ ಕತೆಗಳು ಜೈನತತ್ವ ಹಾಗೂ ಆಚಾರಗಳಿಗೆ ಕನ್ನಡಿ ಹಿಡಿದಂತಿವೆ. ಈ ಕತೆಗಳ ಉದ್ದೇಶವು ಪ್ರಸ್ಫುಟವಾಗಿ ಮತೀಯವಾಗಿದ್ದರೂ ಇಲ್ಲಿಯ ಕಥನಕಲೆ ಸಂಪದ್ಭರಿತ ಕಲ್ಪನಾ ಲಹರಿಗಳಿಂದಲೂ ದೇಸಿಯ ನುಡಿಗಟ್ಟುಗಳಿಂದಲೂ ಜೀವಕಳೆ ತುಂಬಿ ತುಳುಕುತ್ತ ಗೆಲವುಳ್ಳದಾಗಿದೆ. ಅನಂತರ ಬಂದ ಬ್ರಹ್ಮಶಿವನು ತನ್ನ ಸಮಯ ಪರೀಕ್ಷೆ ಎಂಬ ಗ್ರಂಥದಲ್ಲಿ ಮುಚ್ಚುಮರೆಯಿಲ್ಲದ ಕಟುವಿಡಂಬನಕಾರನಾಗಿ ಮೆರೆದಿದ್ದಾನೆ. ಈ ಗ್ರಂಥವು ಆತನ ಕಾಲದ ಧಾರ್ಮಿಕ ತತ್ವ ಹಾಗೂ ಆಚರಣೆಗಳನ್ನು ನೇರವಾದ ಟೀಕೆಗೆ ಗುರಿಪಡಿಸಿದೆ. ಈ ಕೃತಿಯಲ್ಲಿ ಆ ಕಾಲದ ಬಾಹ್ಯಾಡಂಬರವನ್ನೂ ಭಾವುಕತನವನ್ನೂ ಗೇಲಿ ಮಾಡುತ್ತಾ ಕನ್ನಡ ಸಾಹಿತ್ಯ ಚರಿತ್ರೆಯಲ್ಲೇ ಮೊತ್ತಮೊದಲ ಸಾರಿ ಜನತೆಯ ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳ ಮೇಲೆ ಅವನು ಬೆಳಕು ಚೆಲ್ಲಿದ್ದಾನೆ. ಇವನ ಈ ವಿಡಂಬನೆಯಲ್ಲಿ ಸಾಮಾನ್ಯವಾಗಿ ಜೈನ ಮತದ ಬಗ್ಗೆ ಪಕ್ಷಪಾತ, ಇತರ ಮತಪಂಥಗಳ ಬಗ್ಗೆ ಪ್ರತಿಕೂಲ ಧೋರಣೆ ಎದ್ದು ಕಾಣುತ್ತವೆ. ಈ ಕಾಲದ ಗ್ರಂಥಗಳ ಪ್ರತಿಪಾದಿತ ವಿಷಯವೇನಿದ್ದರೂ ಹೆಚ್ಚಾಗಿ ಚಂಪೂರೂಪದಲ್ಲಿವೆ. ಶಾಸ್ತ್ರಗ್ರಂಥಗಳೂ ಈ ರೂಪದಲ್ಲಿವೆ. ಕೆಲಸಲ ವಚನ ಭಾಗಗಳಿಲ್ಲದೆ ಕಂದ, ವೃತ್ತಗಳಲ್ಲಿ ಮಾತ್ರ ರಚಿತವಾಗಿದೆ. ಈ ಮೊದಲೇ ಉಲ್ಲೇಖಿಸಿದಂತೆ ಗದ್ಯ ಸರಣಿಯಲ್ಲೆ ಇಡಿಯಾಗಿ ರಚಿತವಾಗಿದ್ದ ವಡ್ಡಾರಾಧನೆ ಮತ್ತು ಚಾವುಂಡರಾಯನ ಚಾವುಂಡರಾಯ ಪುರಾಣದಂಥ ಕೃತಿಗಳು ವಿರಳವಾಗಿ ಮಾತ್ರ ಕಂಡುಬರುತ್ತವೆ. ಇವು ಜೈನ ಪುರಾಣ ಕಥಾನಕಗಳನ್ನು ಗುರಿತಪ್ಪದ ಪ್ರೌಢ ಶೈಲಿಯಲ್ಲಿ ನಿರೂಪಿಸುತ್ತವೆ. ಕನ್ನಡದಲ್ಲಿ ಸೃಜನಾತ್ಮಕ ಮತ್ತು ವಿಮರ್ಶಾತ್ಮಕ ಇವೆರಡರಲ್ಲೂ ಕೃತಿರಚನೆ ಮಾಡಿದವರಲ್ಲಿ ಜೈನರೇ ಮೊದಲಿಗರು. ಆದ್ದರಿಂದ ಈ ಕಾಲದ ಸಾಹಿತ್ಯ ಪ್ರಪಂಚದಲ್ಲಿ ಅವರದೇ ಪ್ರಾಬಲ್ಯವಿತ್ತು. ಕನ್ನಡ ಭಾಷಾ ಸಾಹಿತ್ಯಗಳ ಸ್ಥಾನಮಾನಗಳನ್ನು ಅವರೇ ಉನ್ನತಗೊಳಿಸಿದುದು ಸ್ವಾಭಾವಿಕವಾಗಿದೆ.

೧೨ನೆಯ ಶತಕದ ಮಧ್ಯದಲ್ಲಿ ವಚನ ಎಂಬ ಅನುಭಾವಿಕ ಗದ್ಯ ಕಾವ್ಯ ರೂಪವು ಹೊಸತಾಗಿ ತಲೆಯೆತ್ತಿತು. ಇದೊಂದು ಪ್ರಭಾವಶಾಲೀ ಅತ್ಮಾಭಿವ್ಯಕ್ತಿಯ ಮಾಧ್ಯಮವಾಗಿ ಬಸವೇಶ್ವರರಿಂದ ಬಳಕೆಯಲ್ಲಿ ಬಂದಿತು. ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿಯ ಆಂದೋಲನದ ಮುಂದಾಳುಗಳಾಗಿದ್ದ ಬಸವೇಶ್ವರರ ಪ್ರೇರಣೆಯಿಂದ ಸಾವಿರಾರು ಶರಣರು ತಂಡತಂಡವಾಗಿ ಈ ಪ್ರತಿಭಟನೆಯಲ್ಲಿ ಪಾಲ್ಗೊಂಡು ಅವರ ಅನುಯಾಯಿಗಳಾದರು. ಇದರ ಪರಿಣಾಮವಾಗಿ ಸಾಹಿತ್ಯ ಕ್ರಾಂತಿಯ ಹೊಸಗಾಳಿ ಬೀಸತೊಡಗಿತು. ಹಳೆಗನ್ನಡ ಸಾಹಿತ್ಯದ ನಡೆಗೆ ಒಂದು ಬಗೆಯ ಕುಲುಕಾಟ ಉಂಟಾಯಿತು. ಕ್ರಮೇಣ ನಡುಗನ್ನಡ ಅಥವಾ ಹೊಸಗನ್ನಡವು ಹಳಗನ್ನಡದ ಸ್ಥಾನವನ್ನಾಕ್ರಮಿಸತೊಡಗಿತು. ಜನಪ್ರಿಯ ಛಂದಸ್ಸುಗಳಾದ ರಗಳೆ ಷಟ್ಪದಿಗಳಲ್ಲಿ ಕಾವ್ಯರಚನೆ ಮಾಡಲು ಬಹುಜನ ಕವಿಗಳು ಮುಂದಾದರು. ಹೀಗಿದ್ದರೂ ಈ ಹೊಸ ಆಂದೋಲನದ

ಪ್ರಭಾವವೆಷ್ಟೂ ಚಂಪೂರೂಪದ ಮೇಲಾಗಲಿಲ್ಲ. ಇತರ ಕಾವ್ಯಪ್ರಕಾರಗಳೊಂದಿಗೆ ಚಂಪೂ ಮುಂದುವರಿಯಿತು. ಹರಿಹರನೂ ಕೂಡ ತನ್ನ ಎಲ್ಲ ಶರಣರ ಚರಿತ್ರಗಳನ್ನು ಒಂದು ಆಶ್ವಾಸದಲ್ಲಿ ಗದ್ಯ ಇನ್ನೊಂದರಲ್ಲಿ ರಗಳೆಯ ಛಂದಸ್ಸು ಹೀಗೆ ಒಂದಾದ ಮೇಲೊಂದು ವರಸೆ ವರಸೆಯಾಗಿ ಬರುವಂತೆ ಮಿಶ್ರಣಗೊಳಿಸಿ ಬರೆದಿದ್ದರೂ ಗಿರಿಜಾ ಕಲ್ಯಾಣವೆಂಬ ಪೌರಾಣಿಕ ವಸ್ತುವನ್ನು ಉತ್ತಮ ಹಳೆಗನ್ನಡ ಚಂಪುವಿನಲ್ಲೇ ರಚಿಸಿದನು. ನೇಮಿಚಂದ್ರನು ಲೀಲಾವತಿ ಮತ್ತು ನೇಮಿನಾಥ ಪುರಾಣಗಳೆರಡನ್ನೂ ಒಂದು ಲೌಕಿಕ, ಇನ್ನೊಂದು ಆಗಮಿಕ ಕಾವ್ಯವಾಗಿ ಉನ್ನತ ಕಾವ್ಯಗುಣದಿಂದ ಕೂಡಿದ ಚಂಪೂ ರೂಪಗಳಲ್ಲೇ ರಚಿಸಿದನು. ಅವನ ತರುವಾಯ ವಿವಿಧ ಕಾವ್ಯಗುಣವುಳ್ಳ ಅನೇಕ ಕವಿಗಳು ಬಂದಿದ್ದಾರೆ. ಇವರಲ್ಲಿ ಜನ್ನನು ಅತ್ಯಂತ ಪ್ರಮುಖ ಕವಿ. ಈತನ ಯಶೋಧರ ಚರಿತೆ ಮತ್ತು ಅನಂತನಾಥ ಪುರಾಣಗಳು ಜೈನಧರ್ಮ ಮತ್ತು ನೀತಿಗಳನ್ನು ಪ್ರತಿಪಾದಿಸಲೆಂದೇ ರಚಿತವಾಗಿದ್ದರೂ ಸ್ತ್ರೀ ಪುರುಷರ ನಡುವಿನ ಪ್ರಣಯದ ರಹಸ್ಯವನ್ನೂ ಅದರ ಹಿನ್ನೆಲೆಯ ಮನೋವಿಶ್ಲೇಷಣೆಯನ್ನೂ ಚಿತ್ರಿಸುವಲ್ಲಿ ಇಲ್ಲಿಯ ಕಥಾನಕವನ್ನು ಜನ್ನನು ಬಹು ಜಾಣ್ಮೆಯಿಂದ ಬಳಸಿಕೊಂಡಿದ್ದಾನೆ. ಆಂಡಯ್ಯನು ಕಬ್ಬಿಗರ ಕಾವ ಎಂಬ ಚಮತ್ಕೃತಿಯುಕ್ತ ಕಾಲ್ಪನಿಕ ಕಾವ್ಯವನ್ನು ರಚಿಸುವಲ್ಲಿ ಕಲ್ಪಕತೆ ಮತ್ತು ನಿರೂಪಣಾ ವಿಧಾನಗಳೆರಡರಲ್ಲೂ ಬಹುಮಟ್ಟಿಗೆ ಮೌಲಿಕತೆಯನ್ನು ಪ್ರದರ್ಶಿಸಿದ್ದಾನೆ. ಮೊಟ್ಟ ಮೊದಲ ಬಾರಿ ಈತನು ಚಂಪೂರೂಪದಲ್ಲಿ ಸಂಸ್ಕೃತವನ್ನು ನೇರವಾಗಿ ಬಳಸದೆ ಕಾವ್ಯರಚನೆ ಮಾಡಿದ್ದಾನೆ.

ಇದೇ ಕಾಲದಲ್ಲಿ ನೇಮಿಚಂದ್ರನ ಸಮಕಾಲೀನನಾಗಿದ್ದ ರುದ್ರಭಟ್ಟನು ಬ್ರಾಹ್ಮಣ ಶಿಷ್ಟ ಸಂಪ್ರದಾಯದ ಸಂಕೋಲೆಗಳನ್ನು ಕಳಚಿಹಾಕಿ ಶ್ರೀಕೃಷ್ಣ ಚರಿತ್ರೆಯನ್ನು ಜಗನ್ನಾಥ ವಿಜಯವೆಂಬ ಹಳೆಗನ್ನಡ ಚಂಪೂ ಕಾವ್ಯ ರೂಪದಲ್ಲಿ ಬರೆದನು. ಅವನ ತರುವಾಯ ಬಂದ ಚೌಂಡರಸನು ತನ್ನ ಅಭಿನವ ದಶಕುಮಾರ ಚರಿತೆಯಲ್ಲಿ ವಿಠಲಭಕ್ತಿಯ ಅಂಶವನ್ನು ಹೊಸದಾಗಿ ಸೇರಿಸಲು ಯತ್ನಿಸಿದ್ದಾನೆ.

ಈ ಸಾಹಿತ್ಯ ಚರಿತ್ರೆಯ ಮೂರನೆಯ ಕಾಲಾವಧಿಯಲ್ಲಿ ಎಂದರೆ ೧೪ರಿಂದ ೧೬ನೆಯ ಶತಕದವರೆಗೆ ಷಟ್ಪದಿ ಮತ್ತು ಸಾಂಗತ್ಯ ಛಂದೋರೂಪಗಳು ಕುಮಾರವ್ಯಾಸ, ಚಾಮರಸ ಮತ್ತು ರತ್ನಾಕರವರ್ಣಿ ಮುಂತಾದ ಶ್ರೇಷ್ಠ ಕವಿಗಳಿಂದ ಉನ್ನತ ರೀತಿಯಲ್ಲಿ ರೂಢಿಗೆ ಬಂದು ಪ್ರಭುತ್ವ ಪಡೆದವು. ಈ ಈ ಕಾಲದಲ್ಲಿ ಹಳೆಗನ್ನಡ ಚಂಪೂ ಕಾವ್ಯರಚನೆ ತೀರ ಕುಗ್ಗಿ ಹೋಯಿತು. ಪುರಂದರದಾಸ ಕನಕದಾಸರಂಥ ಹರಿದಾಸರ ಭಕ್ತಿಗೀತೆಗಳಿಂದಲೂ ಈ ಕಾಲದ ವಾತಾವರಣವು ತುಂಬಿ ಹೋಯಿತು.

ಕನ್ನಡ ಸಾಹಿತ್ಯ ಚರಿತ್ರೆಯ ನಾಲ್ಕನೆಯ ಕಾಲಾವಧಿಯು ಹಳೆಗನ್ನಡದ ಚಂಪೂಪರಂಪರೆಯ ಪುನಶ್ಚೇತನದಿಂದ ವಿಶಿಷ್ಟವಾದುದು. ಪ್ರತಿಭಾವಂತ ವೀರಶೈವ ಕವಿಯೆನಿಸಿದ ಷಡಕ್ಷರದೇವನು ತನ್ನ ಮೂರೂ ಕಾವ್ಯಗಳನ್ನು ಚಂಪೂ ರೂಪದಲ್ಲಿ ವೈಭವಪೂರ್ಣ ಹಾಗೂ ಪ್ರೌಢವಾದ ಮಾರ್ಗ ಶೈಲಿಯಲ್ಲಿ ರಚಿಸಿದ್ದಾನೆ. ಮೈಸೂರ ಚಿಕ್ಕದೇವರಾಜ ಒಡೆಯರ ಮಂತ್ರಿಯೂ, ಶ್ರೀವೈಷ್ಣವ ಪಂಡಿತಕವಿಯೂ ಆಗಿದ್ದ ತಿರುಮಲಾರ್ಯನು ರಚಿಸಿದುದೆಲ್ಲವೂ ತನ್ನ ಆಶ್ರಯದಾತನನ್ನು ಹಾಗೂ ಆತನ ಸಾಹಸ ಕೃತ್ಯಗಳನ್ನು ಕುರಿತ ಕಾವ್ಯಗಳು. ಆತನ ಚಿಕ್ಕದೇವರಾಜ ವಿಜಯವು ಚಂಪೂಕೃತಿ ಆಗಿದ್ದು, ಚಿಕ್ಕದೇವರಾಜವಂಶಾವಳಿಯು ಒಂದು ವಿಶಿಷ್ಟ ಗದ್ಯಕೃತಿಯಾಗಿದೆ. ಈತನ ಸಮಕಾಲೀನನಾಗಿದ್ದ ಚಿಕುಪಾಧ್ಯಾಯನು ೩೦ಕ್ಕಿಂತ ಹೆಚ್ಚು ಗ್ರಂಥಗಳನ್ನು ರಚಿಸಿದ್ದು ಅವುಗಳಲ್ಲಿ ದಿವ್ಯಸೂರಿ ಚರಿತೆ ಒಂದು ಸುಪ್ರಸಿದ್ಧ ಚಂಪೂ ಕಾವ್ಯ. ಲಿಂಗಣ್ಣನು ತನ್ನ ಕೆಳದಿ ನೃಪವಿಜಯವೆಂಬ ಒಂದು ಮಹತ್ವಪೂರ್ಣ ಐತಿಹಾಸಿಕ ಕಾವ್ಯವನ್ನು ಚಂಪೂರೂಪದಲ್ಲಿ ಬರೆದಿದ್ದಾನೆ.

ಇದಿಷ್ಟು ಹಳೆಗನ್ನಡದಲ್ಲಿ ಸೃಷ್ಟಿಯಾದ ಮಾರ್ಗ ಕಾವ್ಯದ ಸಂಕ್ಷಿಪ್ತ ಕತೆ. ಈ ಪರಂಪರೆಯ ಏಳುಬೀಳಿನಲ್ಲೂ, ಕೆಲವಾದರೂ ಉತ್ಕೃಷ್ಟ ಮಾರ್ಗ ಕಾವ್ಯಗಳು ಎದ್ದು ಕಾಣುವಂತಿವೆ.

**ಕನ್ನಡ ಅನುವಾದ: ಪ್ರೊ, ಎಸ್. ಆರ್, ಮಳಗಿ**

# ನಡುಗನ್ನಡ

ಸಿದ್ದಯ್ಯ ಪುರಾಣಿಕ

ನಡುಗನ್ನಡ ಸಾಹಿತ್ಯದ ಹರಹು ಹಿರಿದಾದುದು. ಅದು ಒಳಗೊಳ್ಳುವ ವಾಙ್ಮಯ ವಿಪುಲವಾದುದು, ವೈಶಿಷ್ಟ್ಯಪೂರ್ಣವಾದುದು, ವೈವಿಧ್ಯಮಯವಾದುದು. ಅದರ ಆದಿಯನ್ನು ಖಚಿತವಾಗಿ ಹೇಳಬಹುದಾಗಲಿ ಅದರ ಅಂತ್ಯವನ್ನು ನಿಖರವಾಗಿ ಹೇಳಲಾಗದು. ಅನೇಕರ ಅಭಿಪ್ರಾಯದಂತೆ ವಚನ ಸಾಹಿತ್ಯದಿಂದ ಆರಂಭವಾಗುವ ನಡುಗನ್ನಡ ಸಾಹಿತ್ಯ ಪರಂಪರೆ ಚಿಕ್ಕದೇವರಾಯನ ಕಾಲ (೧೬೭೩-೧೭೦೪) ದ ವರೆಗೂ ಮುಂದುವರಿಯುವುದು. ಇದು ಸ್ಥೂಲ ವಿಭಾಗವೆಂದೇ ಹೇಳಬೇಕು. ನಡುಗನ್ನಡದಲ್ಲಿ ಕಾವ್ಯರಚನೆ ಮಾಡುತ್ತಿರುವವರು ಈಗಲೂ ಇಲ್ಲವೆ? ಆದರೂ, ಹೊಸಗನ್ನಡ ಸಾಹಿತ್ಯದ ಹುಟ್ಟಿನೊಡನೆ ನಡುಗನ್ನಡ ಯುಗ ಮುಗಿದು, ಅದರ ಉಪಲಬ್ಧಿಗಳಾದ ಜನಾಭಿಮುಖತೆ, ದೇಸಿಯ ಹೆಚ್ಚಳ, ಕನ್ನಡ ಛಂದಸ್ಸಿನ ಪ್ರಾಚುರ್ಯ, ಪ್ರಯೋಗಪ್ರಿಯತೆ, ಸ್ವತಂತ್ರಮತಿ ಇತ್ಯಾದಿಗಳು ಪಾಶ್ಚಾತ್ಯ-ಸಂಸರ್ಗ- ಜನ್ಯ ಪರಿವರ್ತನೆಗಳೊಂದಿಗೆ, ಹೊಸ ಭಂಗಿ-ಭಣಿತೆಗಳೊಡನೆ ಮುಂದೆ ಸಾಗಿದುವೆಂದು ಹೇಳಬಹುದಾಗಿದೆ. ಬೃಹತ್ತು, ಮಹತ್ತುಗಳೆರಡರ ದೃಷ್ಟಿಯಿಂದಲೂ ಗಣ್ಯವೂ, ವಿಪುಲವೂ ಆದ ಈ ಸಾಹಿತ್ಯವನ್ನು ಎರಡು ಮೂರು ಸಾವಿರ ಶಬ್ದಗಳ ಪರಿಮಿತಿಯಲ್ಲಿ ಪರಿಚಯಿಸಲು ಪ್ರಯತ್ನಿಸುವುದು ಕೊಡದಿಂದ ಕಡಲನ್ನು ಅಳೆಯಲು ಯತ್ನಿಸಿದಂತೆಯೇ ಸರಿ.

**ವಚನ ಸಾಹಿತ್ಯ**

ನಡುಗನ್ನಡ ಸಾಹಿತ್ಯದ ಉದಯ ಕನ್ನಡ ಸಾಹಿತ್ಯದಲ್ಲಿ ಮಾತ್ರವಲ್ಲ, ಆ ಕಾಲದ ಯಾವ ಭಾಷೆಯ ಸಾಹಿತ್ಯದಲ್ಲಿಯೂ ಸಿಕ್ಕದ ವಚನರೂಪದ ಅದ್ಭುತ ವಾಙ್ಮಯ ಸೃಷ್ಟಿಯೊಡನೆ ಆದುದು ವಿಚಾರಿಸಿದಷ್ಟೂ ವಿಸ್ಮಯ ಹುಟ್ಟಿಸುವ ಮಹದ್ಘಟನೆಯಾಗಿದೆ. ಹಿಂದಿನ ಸಾಹಿತ್ಯ ಪರಂಪರೆಯ ಸಂಬಂಧವನ್ನು ಸಂಪೂರ್ಣವಾಗಿ ಕಡಿದುಕೊಂಡು, ಸ್ವತಂತ್ರವಾಗಿ ವಿಕಸಿಸಿ, ಹುಟ್ಟಿದ ಹನ್ನೊಂದು ತಿಂಗಳಲ್ಲಿ ವಿಜೃಂಭಿಸಿ, ಮುಂದಿನ ಸಾಹಿತ್ಯ ಪರಂಪರೆಗಳ ಮೇಲೆ ಪ್ರಭಾವಬೀರಿ, ಇಂದಿಗೂ ಪ್ರಸ್ತುತವಾಗಿ ಉಳಿದಿರುವ ವಚನ ಸಾಹಿತ್ಯ ಕನ್ನಡ ನಾಡಿನ ಅಮೂಲ್ಯ ಆಸ್ತಿ. ಅದರ ಅತ್ಯುತ್ತಮ ಭಾಗ ವಿಶ್ವ ಸಾಹಿತ್ಯದ ಅವಿಭಾಜ್ಯ ಅಂಗ. ಬಸವನಿಗಿಂತ ಸ್ವಲ್ಪ ಮುಂಚೆ ಆರಂಭಗೊಂಡಿರಬಹುದಾದರೂ ಬಸವನ ಯುಗದಲ್ಲಿ ಮಾತ್ರ ನೆರೆಬಂದ ತೊರೆಯಂತೆ ಉಕ್ಕಿ ಹರಿದ ಈ ಸಾಹಿತ್ಯದ ಮೂಲಗಳನ್ನು ಸಂಸ್ಕೃತದ ದಂಡಕಗಳಲ್ಲಿಯೋ, ತಮಿಳು ತೇವಾರಗಳಲ್ಲಿಯೋ, ಕನ್ನಡದ ತ್ರಿಪದಿಗಳಲ್ಲಿಯೋ ಹುಡುಕಲು ಹೊರಟವರ ಪ್ರಯತ್ನಗಳಿನ್ನೂ ಫಲಕಾರಿಯಾಗಿಲ್ಲ. ಇದು 'ಸ್ವಯಂಭು ಸಾಹಿತ್ಯ'ವೆಂದೇ ಹೇಳಬೇಕು.

ಈ ಸಾಹಿತ್ಯದ ವಿಶೇಷಗಳನ್ನು ವಿದ್ವಾಂಸರು ಬಹಳಷ್ಟು ವಿವರಿಸಿದ್ದಾರೆ. ಡಾ. ರಂ. ಶ್ರೀ. ಮುಗಳಿಯವರು ಇದರ ವೈಶಿಷ್ಟ್ಯದರ್ಶಕವಾದ ಹತ್ತು ಪ್ರಮುಖ ಲಕ್ಷಣಗಳನ್ನು ನಿರೂಪಿಸಿದ್ದಾರೆ. (ಕನ್ನಡ ಸಾಹಿತ್ಯ ಚರಿತ್ರೆ: ಐದನೆಯ ಮುದ್ರಣ, ಪುಟ ೧೫೮). "ಇದು ಅಲ್ಪದಲ್ಲಿ ಕಲ್ಪವನ್ನು ಕೆತ್ತಿದ ಶಿಲ್ಪ"ವೆಂದು ಪ್ರೊ. ಬಿ. ಎಚ್. ಶ್ರೀಧರರು ಹೇಳಿರುವುದು ಸಮಂಜಸವಾದುದೇ ಆಗಿದೆ. "ದೇವವಾಣಿಗೆ ಜನವಾಣಿಯಾಗುವುದು ಸಾಧ್ಯವಾಗದಿದ್ದಾಗ ಜನವಾಣಿಯನ್ನೇ ದೇವವಾಣಿಯನ್ನಾಗಿಸಿದ ಪವಾಡ ವಚನಕಾರರದು" ಎಂಬ ಪ್ರೊ. ಶಿ. ಶಿ. ಬಸವನಾಳರ ಸಾರೋಕ್ತಿ (ಬಸವಣ್ಣನವರ ವಚನಗಳ ಪ್ರಸ್ತಾವನೆಯಲ್ಲಿ) ವಚನ ಸಾಹಿತ್ಯದ ಬಗ್ಗೆ ನಾಣ್ಣುಡಿಯಾಗಿ ಹೋಗಿದೆ. ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವ, ಅಕ್ಕಮಹಾದೇವಿ, ಮೋಳಿಗೆಯ ಮಾರಯ್ಯ, ಸಿದ್ಧರಾಮಯ್ಯ ಮೊದಲಾದ ಅಸಾಮಾನ್ಯರೂ, ಅಂಬಿಗರ ಚೌಡಯ್ಯ, ತುರುಗಾಹಿ ರಾಮಣ್ಣ, ಗಾಣದ ಕನ್ನಪ್ಪ ಮೊದಲಾದ ಶ್ರೀಸಾಮಾನ್ಯರೂ, ಮಾದಾರ ಚೆನ್ನಯ್ಯ, ಮಾದಾರ ಕೇತಯ್ಯ, ಡೋಹರ ಕಕ್ಕಯ್ಯ, ಹರಳಯ್ಯ ಮೊದಲಾದ ಆದಿಜನರೂ, ಇಂದಿಗೂ ಬಹುಪಾಲು ಜೀತದಾಳುಗಳಂತಿರುವ ಮಹಿಳೆಯರೂ – ಎಲ್ಲರೂ ಸೇರಿ ಜನರಾಡುವ ಮಾತಿನಲ್ಲಿಯೇ, ಜನರ ಜೀವನಾನುಭವದ ಮೂಲದ್ರವ್ಯವನ್ನು ಬಳಸಿಕೊಂಡೇ, ಜನರ ಜೀವನೋಜ್ವಲತೆಯ ಸಾಧನಗಾಗಿಯೇ, ಜನಸಾಮಾನ್ಯರೂ ಓದಿ, ಓದಿಸಿ, ಕೇಳಿ ಸುಲಭವಾಗಿ ಅರ್ಥಮಾಡಿಕೊಂಡು ಸಾರ್ಥಕ ಜೀವಿಗಳಾಗುವ ರೀತಿಯಲ್ಲಿ ಸಹಜ ಸುಂದರವಾಗಿ ರಚಿಸಿದುದೇ ವಚನ ಸಾಹಿತ್ಯ. ಸ್ತ್ರೀಪುರುಷರು, ಪಂಡಿತ ಪಾಮರರು, ಬಡವ ಬಲ್ಲಿದರು ಸೇರಿ ಸುಮಾರು ಮುನ್ನೂರೈವತ್ತು ಜನ, ಅನುಭವಮಂಟಪದಲ್ಲಿ "ಆತ್ಮ ಆತ್ಮ ಮಥನಿಸಿ", ಪರಸ್ಪರ ಪ್ರಭಾವಿತರಾಗಿಯೂ ಸ್ವಾನುಭವೈಕನಿಷ್ಠರಾಗಿ, ಸ್ವತಂತ್ರ ಚಿಂತನೆಯ ಹಕ್ಕನ್ನು ಉಳಿಸಿಕೊಂಡು, ತಂತಮ್ಮ ಅನುಭವ-ಅನುಭಾವಗಳಿಗೆ ಅಭಿವ್ಯಕ್ತಿ ನೀಡಿದ ಕಾರಣ ಇದೊಂದು ಬಗೆಯ ವ್ಯಕ್ತಿನಿಷ್ಠ ಸಮಷ್ಟಿ ಸಾಹಿತ್ಯವಾಗಿ ಪರಿಣಮಿಸಿದೆ. ಇವರ ಕೈಯಲ್ಲಿ ಕನ್ನಡ ನುಡಿ ಎಲ್ಲ ವಿಷಯ, ವಿಚಾರಗಳ ಅಭಿವ್ಯಕ್ತಿಗೂ ಸಮರ್ಥವಾಗುವ ರೀತಿಯಲ್ಲಿ ಬೆಳೆದು ಬೆಳಗಿದೆ. ಗದ್ಯಪದ್ಯಗಳ ಮಧ್ಯದ ಅಂತರವೇ ಉಳಿಯದಂತೆ ಪದ್ಯದ ಲಯವನ್ನೂ

ಗದ್ಯದ ಸ್ಫುಟಿತ ಸ್ಪಷ್ಟತೆಗಳನ್ನೂ ಮೈಗೂಡಿಸಿಕೊಂಡು ಬೆಳೆದಿರುವ ಈ ಸಾಹಿತ್ಯ ಗೇಯತೆಯನ್ನು ಒಳಗೊಂಡು ಹಾಡುಗಾರಿಕೆಗೂ ಒಗ್ಗುತ್ತಲಿರುವುದು ಅದರ ಹಿರಿಮೆಯ ಗೋಪುರಕ್ಕೆ ಹೊಂಗಳಸವನ್ನಿರಿಸಿದಂತಾಗಿದೆ.

ಇಲ್ಲಿ ಎಲ್ಲ ವಚನಕಾರರ ನಾಮ ನಿರ್ದೇಶನಕ್ಕೂ ಅವಕಾಶವಿಲ್ಲ. ವಚನಕಾರರ ಪ್ರಮುಖ ಲಕ್ಷಣ ವಿಚಾರ ಸ್ವಾತಂತ್ರ್ಯವೆಂದು ಹೇಳಿದರೆ ಸಾಕು. ಒಬ್ಬೊಬ್ಬರೂ ತಂತಮ್ಮ ಸ್ವತಂತ್ರಮತಿ ಒಪ್ಪಿದುದನ್ನು ಅಭಿವ್ಯಕ್ತಿಸಿದ್ದಾರೆ. ಅವರ ಭಾಷೆ, ಶೈಲಿ, ವಿಚಾರಧಾರೆಯ ಮೇಲೆ ಅವರ ಕಾಯಕ, ಒಲವು, ಅಭಿರುಚಿಗಳು ಪ್ರಭಾವ ಬೀರಿ ಒಬ್ಬೊಬ್ಬರಿಗೂ ಒಂದೊಂದು ವಿವಿಧ ಅನನ್ಯತೆಯನ್ನು ನೀಡಿವೆ. ಸಮಾಜ ಸಂಸ್ಕರಣಾಪೇಕ್ಷೆಯ ವಚನಗಳು, ನಿಷ್ಠುರ ಆತ್ಮ ನಿರೀಕ್ಷಣೆಯ ವಚನಗಳು, ಜೀವನ ವಿಮರ್ಶೆಯ ವಚನಗಳು, ಆರ್ಥಿಕ ಚಿಂತನೆಯ, ಆತ್ಮಮಥನದ, ಸ್ವದೋಷ ಕಥನದ ವಚನಗಳು, ಸತಿಪತಿಭಾವದ ವಚನಗಳು, ಕಾಯಕ ಪ್ರೇರಿತ ವಚನಗಳು – ಹೀಗೆ ಹಲವು ಹನ್ನೆರಡು ಬಗೆಯ ವಚನಗಳು ಸೇರಿ ವಚನ ಸಾಹಿತ್ಯಕ್ಕೆ ಎಲ್ಲಿಲ್ಲದ ಅತಿಶಯತೆಯನ್ನು ತಂದು ಕೊಟ್ಟಿವೆ. ವಚನ ಸಾಹಿತ್ಯದ ಬಗ್ಗೆ ಅಧಿಕಾರವಾಣಿಯಿಂದ ಹೇಳಬಲ್ಲವರಾಗಿದ್ದ ದಿವಂಗತ ಎಂ. ಆರ್. ಶ್ರೀ. ಅವರ ಮಾತುಗಳಲ್ಲಿ ಈ ವಚನಯುಗಕ್ಕೆ ಮಂಗಳ ಹಾಡಬಹುದು. "ವಚನಗಳಲ್ಲಿ ರಸಭಾವ ಅಲಂಕಾರಗಳೂ, ಉದಾತ್ತ ಧ್ಯೇಯವೂ ಇರುವುದರಿಂದ ಅವು ಉತ್ತಮ ಸಾಹಿತ್ಯವೆಂದು ಧಾರಾಳವಾಗಿ ಹೇಳಬಹುದು. ವಚನಗಳು ನಮ್ಮ ಕನ್ನಡ ಸಾಹಿತ್ಯದ ಉಪನಿಷತ್ತುಗಳು. ಆ ಕವಿಗಳು ನಮ್ಮ ಕನ್ನಡ ನಾಡಿನ ರಸಋಷಿಗಳು. ಆ ರಸಋಷಿಗಳ ಉಪದೇಶಸಾರ: ಸಾಹಿತ್ಯವೇ ದರ್ಶನ, ದರ್ಶನವೇ ಸಾಹಿತ್ಯ! ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ" (ವಚನಧರ್ಮಸಾರದ ಮುಕ್ತಾಯದಲ್ಲಿ) ಕವಿಚರಿತೆಕಾರರೂ ವಚನಗಳನ್ನು ಕನ್ನಡದ ಉಪನಿಷತ್ತುಗಳೆಂದು ಕರೆದಿದ್ದಾರೆ. ಆದರೆ ಡಾ. ರಂ. ಶ್ರೀ. ಮುಗಳಿಯವರ ಮಾತುಗಳನ್ನೂ ಈ ಸಂದರ್ಭದಲ್ಲಿ ಮರೆಯದಿರುವುದು ಮೇಲು: "ಉಪನಿಷತ್ಕಾರರ ಆತ್ಮಾನುಭವ, ದೃಷ್ಟಿ ವೈಶಾಲ್ಯ, ಸತ್ಯಧರ್ಮ ದರ್ಶನ ಇವು ವಚನಕಾರರಲ್ಲಿವೆ. ಜೊತೆಗೆ ಉಪನಿಷತ್ತಿನಲ್ಲಿ ಇಲ್ಲದ ತತ್ವಪ್ರಣಾಲಿ, ಸಮಾಜ ನೀತಿ, ಆಚಾರಧರ್ಮಗಳೂ, ಅವುಗಳನ್ನು ಕನ್ನಡಿಸುವುದಕ್ಕೆ ಹೊರಟ ಭಾಷೆಯ ಜನಸಂಮುಖ ಸ್ವರೂಪಗಳೂ ವಚನಗಳಲ್ಲಿವೆ. ನಾಗಚಂದ್ರನು ಹೇಳಿದ "ಜನತಾ ದೃಷ್ಟಿ" ಎಂಬ ಸಾಹಿತ್ಯದ ಸಾಮಾನ್ಯ ಲಕ್ಷಣವು ವಚನ ವಾಙ್ಮಯಕ್ಕೆ ವಿಶೇಷವಾಗಿ ಸರಿ ಹೋಗುತ್ತದೆ." (ಕನ್ನಡ ಸಾಹಿತ್ಯ ಚರಿತ್ರೆ: ಪುಟ ೧೫೫).

**ಹರಿಹರ– ರಾಘವಾಂಕ**

ವಚನ ಸಾಹಿತ್ಯ ಒಂದು ಅದ್ಭುತ ಆಂದೋಲನದ ಉಪೋತ್ಪನ್ನವಾಗಿ ಉದ್ಭವಿಸಿ ಅಪ್ರಜ್ಞಾಪೂರ್ವಕ ಕಲೆಗೆ ಉಜ್ವಲ ಉದಾಹರಣೆಯಾಗಿ ನಿಂತಿದ್ದರೆ ಅದೇ ಸಾಹಿತ್ಯದಿಂದ ಪ್ರಭಾವಿತರಾಗಿ ಕೃತಿ ರಚನೆ ಮಾಡಿದ ಹರಿಹರ, ರಾಘವಾಂಕ, ಕೆರೆಯ ಪದ್ಮರಸರ ಕಾವ್ಯಗಳು ಪ್ರಜ್ಞಾಪೂರ್ವಕ ಕಲೆಯ ಗೆಲವು ಗಂಬಗಳೆಂತಿವೆ. ಹರಿಹರನೂ ತ್ರಿವಿಧ ಕ್ರಾಂತಿಯ ಹರಿಕಾರನಾಗಿ "ಹರಿಹರಮಾರ್ಗ" ವೆಂಬ ಹೊಸ ಮಾರ್ಗದ ಪ್ರವರ್ತಕನಾಗಿ ಮೆರೆದಿದ್ದಾನೆ. "ನೋಡುವೊಡೊಂದುಕ್ಕರಮದು | ಮಾಡುವೊಡು ಚ್ಚರಣೆಗರಿದು ಮೂರುಂ ತೆರನಂ" ಎಂದು ಸಾರಿ ರಳ, ಕುಳ, ಕ್ಷಳಗಳ ಭೇದವನ್ನು ತೊಡೆದುಹಾಕಿ, ಭಾಷೆಯಲ್ಲಿ ಕ್ರಾಂತಿಯನ್ನೂ, ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ ಪದ್ಯಮಂ ವಿರಚಿಸದೆ ಹಂಪೆಯೊಳ್ದನ, ಅವನ ಭಕ್ತರ ಬಗ್ಗೆ ಕಾವ್ಯರಚಿಸುವುದೆಂದು ಸಾರಿ ಕಾವ್ಯೋದ್ದೇಶದಲ್ಲಿ ಕ್ರಾಂತಿಯನ್ನೂ, "ಗಿರಿಜಾ ಕಲ್ಯಾಣ" ವೆಂಬ ವೈಶಿಷ್ಟ್ಯಪೂರ್ಣ ಚಂಪೂ ಕಾವ್ಯವನ್ನು ಬರೆದೂ ತನ್ನ ಕಾವ್ಯೋದ್ದೇಶಕ್ಕೆ ಚಂಪೂ ಮಾರ್ಗ ತಕ್ಕುದಲ್ಲವೆಂದು ಮನಗಂಡು, ರಗಳೆಯ ನಿರರ್ಗಳ ಪ್ರವಹನ ಶಕ್ತಿಯನ್ನು ಗಮನಿಸಿ, ರಘಟಾ ಪ್ರಬಂಧಗಳನ್ನು ರಚಿಸಿ ಛಂದಸ್ಸಿನಲ್ಲಿ ಕ್ರಾಂತಿಯನ್ನೂ ತಂದ ಈ ಕ್ರಾಂತಿಪುರುಷ ಬಸವಾದಿ ಪ್ರಮಥರ ತರುವಾಯ ಒಂದು ಶತಮಾನಕ್ಕಿಂತ ಕಡಮೆ ಅವಧಿಯಲ್ಲಿಯೇ ಉದಿಸಿ ಅವರ ಸಂದೇಶವನ್ನು ಕಾವ್ಯಚಿತ್ರದಿಂದ ಬಿತ್ತರಿಸಿ ಕೃತಾರ್ಥನಾಗಿದ್ದಾನೆ. ಇವನ ಶಿಷ್ಯನೂ, ಸೋದರಳಿಯನೂ, ಗುರುವಿನಂತೆ ಕ್ರಾಂತಿಕಾರಿಯೂ, ಪ್ರಪ್ರಥಮವಾಗಿ ಷಟ್ಪದೀ ಛಂದಸ್ಸಿನಲ್ಲಿ ಸಮಗ್ರ ಕಾವ್ಯಗಳನ್ನು ರಚಿಸಿದವನೂ ಆದ ರಾಘವಾಂಕನೂ ಗುರುವಿಗೆ ತಕ್ಕ ಶಿಷ್ಯನಾಗಿ ಮಹಾಕೃತಿಗಳನ್ನು ನೀಡಿ ಧನ್ಯನಾಗಿದ್ದಾನೆ.

ಹರಿಹರ ರಚಿಸಿದ ಕೃತಿಗಳ ಸಂಖ್ಯೆಯೇ ಬೆಕ್ಕಸ ಬೆರಗುಗೊಳಿಸುವಂತಹದು. ಗಿರಿಜಾಕಲ್ಯಾಣ, ಪಂಪಾಶತಕ, ರಕ್ಷಾಶತಕ, ಮುಡಿಗೆಯ ಅಷ್ಟಕ ಹಾಗೂ ಸುಮಾರು ೧೦೬ ಚಿಕ್ಕ ದೊಡ್ಡ ರಗಳೆಗಳು. ಇವುಗಳಲ್ಲಿ ಕೇವಲ ಗಿರಿಜಾಕಲ್ಯಾಣವನ್ನಾಗಲೀ, ಪಂಪಾಶತಕ, ರಕ್ಷಾಶತಕಗಳನ್ನಾಗಲೀ ಬಸವರಾಜ ದೇವರ ರಗಳೆ, ನಂಬಿಯಣ್ಣನ ರಗಳೆಗಳನ್ನಾಗಲೀ ರಚಿಸಿ ಹೋಗಿದ್ದರೂ ಕನ್ನಡದ ಅಮರ ಕವಿಗಳಲ್ಲಿ ಒಬ್ಬನಾಗುತ್ತಿದ್ದ ಹರಿಹರ. ರಾಘವಾಂಕನೂ ಅಷ್ಟೆ. ಸೋಮನಾಥ ಚರಿತೆ, ಶರಭ ಚರಿತ್ರೆಗಳನ್ನು ಅವನು ಬರೆಯದೆ ಕೇವಲ ಸಿದ್ಧರಾಮ ಪುರಾಣ ಹಾಗೂ ಹರಿಶ್ಚಂದ್ರ ಕಾವ್ಯಗಳನ್ನು ಬರೆದಿದ್ದರೂ, ಹರಿಶ್ಚಂದ್ರ ಕಾವ್ಯವೊಂದನ್ನೇ ಬರೆದಿದ್ದರೂ ಕನ್ನಡ ಸಾಹಿತ್ಯದಲ್ಲಿ ಅವನ ಉನ್ನತ ಸ್ಥಾನಕ್ಕೆ ಚ್ಯುತಿ ಬರುತ್ತಿರಲಿಲ್ಲ.

ಹರಿಹರನ ಕೃತಿಗಳ ಮುಖ್ಯ ಲಕ್ಷಣ ಮಹೋತ್ಸಾಹ. ಇದರಿಂದಾಗಿ ಅವನು ಏನನ್ನೇ ಬರೆಯಲಿ, ಅದರಲ್ಲಿ ಉತ್ಸ್ಫೂರ್ತಿ ಉಕ್ಕಿ ಹರಿಯುತ್ತದೆ. ಹರಿಹರನ ರಗಳೆಗಳಲ್ಲಿ ಒಡಮೂಡಿರುವ ಶಿವಗಣ ಪ್ರಪಂಚವಂತೂ ಮೈನವಿರೆಬ್ಬಿಸುವ ವಿಸ್ತಾರವಾದ ಪ್ರಪಂಚ. ವಿವಿಧ ಕಾಯಕ ಮನೋಧರ್ಮಗಳ, ಅಭಿರುಚಿಗಳ, ಸ್ವಭಾವಗಳ, ಸ್ಥಾನಮಾನಗಳ, ಪ್ರದೇಶಗಳ, ವಯೋಮಿತಿಗಳ ಶಿವಭಕ್ತರು ಇದರಲ್ಲಿ ಸಮಾವೇಶಗೊಂಡು ಒಂದು ವ್ಯಾಪಕವೂ ವೈವಿಧ್ಯಮಯವೂ ಆದ ಪ್ರಪಂಚವನ್ನೇ ನಿರ್ಮಿಸಿದ್ದಾರೆ. ಪ್ರೊ. ಸ. ಸ. ಮಾಳವಾಡರು ತಮ್ಮ 'ಹರಿಹರನ ರಗಳೆಗಳಲ್ಲಿ ಜೀವನ ದರ್ಶನ' ಹಾಗೂ 'ಹರಿಹರ ರಾಘವಾಂಕರು' ಎಂಬ ಪುಸ್ತಕಗಳಲ್ಲಿ ವಿವರಿಸಿರುವಂತೆ, ತಮ್ಮ ತಮ್ಮ ಜೀವನ ವೃತ್ತಿಗಳನ್ನೇ ಪರಮಾತ್ಮನ ಸಾಕ್ಷಾತ್ಕಾರದ ಸಾಧನಗಳನ್ನಾಗಿ ಬಳಸಿಕೊಂಡ ಶಿವಭಕ್ತರ ಪ್ರಪಂಚವನ್ನು ಹರಿಹರನು ನಿರ್ಮಿಸಿದ್ದಾನೆ. ಭಿನ್ನ ಭಿನ್ನ ವ್ಯಕ್ತಿಗಳ ..ಸ್ವಾರಸ್ಯಕರವಾದ ಮೆರವಣಿಗೆಯು ಹರಿಹರನ ರಗಳೆಗಳಲ್ಲಿ ರೂಪುಗೊಂಡಿವೆ. ಇವರನ್ನೆಲ್ಲ ಬಂಧಿಸುವ ಏಕಸೂತ್ರವೆಂದರೆ ಅವರೆಲ್ಲರೂ ಭಕ್ತರು. "ಎಂ. ಸೀ." ಅವರು ನಿರ್ಣಯಿಸಿರುವಂತೆ "ಹರಿಹರನ ಸಾಧನೆ. ಸಿದ್ಧಿ ಎರಡೂ ದೊಡ್ಡವು" (ಹರಿಹರ ಗ್ರಂಥದಲ್ಲಿ ಉಪಸಂಹಾರ).

ರಾಘವಾಂಕನ ಸಾಧನೆಗಳನ್ನು ಅವರೇ ಹೀಗೆ ಸಂಗ್ರಹಿಸಿದ್ದಾರೆ: "ಪಾಂಡಿತ್ಯ, ರಸಿಕತೆ, ಭಕ್ತಿ, ಶಕ್ತಿ, ದಿಟ್ಟತನ, ಸಾಹಸಪ್ರಿಯತೆ, ಪರಸ್ಪರ ಶಕ್ತಿಯ ಆವಿರ್ಭಾವದ ಬಗೆಗೆ ಗೌರವ ಭಾವನೆಗಳನ್ನು ಮೇಳವಿಸಿಕೊಂಡು ಕಾಂತಿಯುಕ್ತ,

ವಾದ ವ್ಯಕ್ತಿತ್ವವನ್ನು ಪಡೆದುಕೊಂಡ. ಅವನ ಕಾವ್ಯಗಳಲ್ಲಿ ಸ್ವಪ್ರೋಕ್ತಿ, ಸ್ವತಂತ್ರ ಮನೋಭಾವ, ಆತ್ಮವಿಶ್ವಾಸಗಳು ಒಡಮೂಡಿ ಬಂದಿವೆ. ಲೋಕ ನಿರೀಕ್ಷಣೆ, ಮಾನವ ಸ್ವಭಾವದ ಪರಿಚಯ, ಪಾತ್ರಗಳ ಅಂತರಂಗದ ಒಳತೋಟಿಯ ಸೂಕ್ಷ್ಮತೆ, ರಸದೃಷ್ಟಿ, ಭಾವ ಪುಷ್ಟಿ, ಚತುರೋಕ್ತಿ, ಪ್ರಖರ ತರ್ಕದ ಜಾಣ್ಮೆ, ಬಾಳಿನ ಉದಾತ್ತ ಮೌಲ್ಯಗಳ ಅಭಿವ್ಯಕ್ತಿ—ಇವುಗಳು ರಾಘವಾಂಕನ ಕಾವ್ಯಗಳಲ್ಲಿವೆ." (ಹರಿಹರ ರಾಘವಾಂಕರು: ಪುಟ ೭೪) ಹರಿಹರನು ನಂಬಿದುದು ಭಕ್ತಿಯನ್ನು. ರಾಘವಾಂಕ ನಂಬಿದುದು "ಹರನೆಂಬುದೇ ಸತ್ಯ. ಸತ್ಯವೆಂಬುದೇ ಹರ" ನೆಂಬ ಸೂತ್ರವನ್ನು. ಇವರಿಬ್ಬರ ಸಂಯುಕ್ತ ಸಂದೇಶ ಸತ್ಯ, ಪ್ರೇಮ (ಭಕ್ತಿ) ಗಳ ಸಂದೇಶ.

**ಇತರರು**

ಹರಿಹರನ ಸಮಕಾಲೀನನೂ ಸ್ನೇಹಿತನೂ ಆದ ಕೆರೆಯ ಪದ್ಮರಸನ 'ದೀಕ್ಷಾ ಬೋಧೆ'ಯು ಲಲಿತ ರಗಳೆಯಲ್ಲಿದ್ದರೂ ಉದ್ದಕ್ಕೂ ತತ್ವ ನಿರೂಪಣೆಯೇ ಇರುವುದರಿಂದ, ಅಧ್ಯಾತ್ಮ ವಿಷಯಗಳೇ ಬರುವುದರಿಂದ ಕವಿತಾಶಕ್ತಿಯ ಪ್ರಕಟನೆಗೆ ಇದರಲ್ಲಿ ಅವಕಾಶವಿಲ್ಲ. ಆದರೂ ಕನ್ನಡದ ಕೆಲವೇ ಅನುಭಾವೀ ತಾತ್ವಿಕ ಕವಿಗಳಲ್ಲಿ ಅವನಿಗೆ ಉನ್ನತ ಸ್ಥಾನವಿದೆ. ಅವನ ಕವಿತ್ವಕ್ಕಿಂತ ಅವನ ವಿದ್ವತ್ವ, ವಿದ್ವತ್ವಕ್ಕಿಂತ ವ್ಯಕ್ತಿತ್ವ ದೊಡ್ಡದೆಂದು ಹೇಳಬಹುದು. ಹರಿಹರ ರಾಘವಾಂಕರ ಇನ್ನಿಬ್ಬರು ಸಮಕಾಲೀನರಾದ ನೇಮಿಚಂದ್ರ, ರುದ್ರಭಟ್ಟರ ನಾಮೋಲ್ಲೇಖನ ಮಾತ್ರ ಸಾಧ್ಯವಿಲ್ಲಿ. ಅವರಿಬ್ಬರೂ ಪ್ರೌಢ ಚಂಪೂ ಕವಿಗಳಾದ ಕಾರಣ ನಡುಗನ್ನಡ ಸಾಹಿತ್ಯ ಪ್ರಭೇದದಿಂದ ಹೊರಗೆ ಉಳಿಯುತ್ತಾರೆ. "ಶರಣ ಕವಿ" ಹೆಸರು ಪಡೆದ ಕೆರೆಯ ಪದ್ಮರಸ ಪುತ್ರ ಕುಮಾರ ಪದ್ಮರಸನೂ ಕೇವಲ ನಾಮೋಲ್ಲೇಖನಕ್ಕೆ ಪಾತ್ರ. ನಾನಾ ಷಟ್ಪದಿಗಳಲ್ಲಿ ರಚಿತವಾಗಿರುವ ಅವನ "ಸಾನಂದ ಚರಿತ್ರೆ" ಸಾಧಾರಣ ಶ್ರೇಣಿಯ ಕಾವ್ಯ. ಚೌಪ್ಪಣ ಪಂಡಿತನ "ಗೊಮ್ಮಟಸ್ತುತಿ" ಹಾಗೂ ಇಂಗಳೇಶ್ವರ ಅಗ್ಗಳನ "ಚಂದ್ರಪ್ರಭ ಪುರಾಣ"ಗಳನ್ನು ಉಲ್ಲೇಖಿಸಬೇಕು. ತೆಲುಗು ಸಾಹಿತ್ಯದ ದಿಗ್ಗಜಗಳಲ್ಲಿ ಒಬ್ಬನಾದ ಪಾಲ್ಕುರಿಕೆಯ ಸೋಮನಾಥ ಕನ್ನಡದಲ್ಲಿ ಹಿರಿಯ ಸ್ಥಾನ ಗಳಿಸಿಲ್ಲ. ಸೋಮೇಶ್ವರ ಶತಕವೂ ಅವನದಲ್ಲ. ಭೀಮ ಕವಿಯ ಬಸವ ಪುರಾಣಕ್ಕೆ ಮೂಲ ಮಾತೃಕೆಯಾದ ತೆಲುಗು ಬಸವ ಪುರಾಣದ ಕರ್ತೃವೆಂದು ಕನ್ನಡ ಸಾಹಿತ್ಯಪ್ರಿಯರಿಗೂ ಇವನು ಪ್ರಿಯವಾಗಿದ್ದಾನೆ. ದೇವ ಕವಿ, ಜನ್ನರು, ಸೋಮರಾಜ, ಕಮಲಭವ, ಆಂಡಯ್ಯರು, ಚೌಂಡರಸ ಮೊದಲಾದವರೂ ಚಂಪೂ ಕವಿಗಳಾಗಿ ಈ ಸಮನ್ವಯ ಸಮೀಕ್ಷೆಯಿಂದ ಹೊರಗುಳಿಯುತ್ತಾರೆ.

೧೪ನೆಯ ಶತಮಾನದ ಉತ್ತರಾರ್ಧಕ್ಕೆ ಸೇರುವ ಭೀಮ ಕವಿ ಆ ಕಾಲದ ಅಗ್ರಗಣ್ಯ ಕವಿಯೆಂದು ಹೇಳಬಹುದು. ಅವನ ಬಸವ ಪುರಾಣ (ರಚನೆ ಕ್ರಿ.ಶ. ೧೩೬೯) ಅನುವಾದ ಕೃತಿಯಾದರೂ ಸ್ವತಂತ್ರ ಕೃತಿಯಿರಬಹುದೆಂಬ ಅನುಮಾನವನ್ನು ಹುಟ್ಟಿಸುತ್ತದೆ. ವೀರಶೈವ ಪುರಾಣಗಳ ಪರಂಪರೆಗೆ ಹೊಸ ತಿರುವನ್ನು ಕೊಡುವುದಲ್ಲದೆ ಭಾಮಿನೀ ಷಟ್ಪದಿಯ ಪ್ರಪ್ರಥಮ ಪೂರ್ಣ ಕಾವ್ಯವೆಂದಿದಕ್ಕೆ ಮಹತ್ವವಿದೆ. ಶ್ರೀ ಕೆ. ಮರುಳ ಸಿದ್ದಪ್ಪ ಹೇಳಿರುವಂತೆ, "ಕುಮಾರವ್ಯಾಸನ ಕೈಯಲ್ಲಿ ಭಾಮಿನಿ ಷಟ್ಪದಿ ಕುಣಿಯಲು ತಕ್ಕ ಸಿದ್ಧತೆಯನ್ನು ಭೀಮ ಕವಿ ನಡೆಸಿದ್ದ." (ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ—ಭಾಗ ೨ ಪು. ೫೪) ಈ ಬಗ್ಗೆ ಸಾಕಷ್ಟು ಅಧ್ಯಯನ ಇನ್ನೂ ನಡೆದಿಲ್ಲವೆಂದು ವಿಷಾದದಿಂದಲೇ ಹೇಳಬೇಕು. ಇದ್ದುದರಲ್ಲಿ ಡಾ. ಎಚ್. ತಿಪ್ಪೇರುದ್ರ ಸ್ವಾಮಿಗಳವರ "ಭೀಮ ಕವಿ", ಡಾ. ಎಂ. ಚಿದಾನಂದ ಮೂರ್ತಿಗಳ "ಬಸವಪುರಾಣ—ಒಂದು ಸಮೀಕ್ಷೆ" (ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ—ಬೆಂಗಳೂರು ವಿಶ್ವವಿದ್ಯಾಲಯ. ಸಂಪುಟ ೪ ಭಾಗ ೧) ಉದ್ಬೋಧಕವಾಗಿವೆ. "ಕೃತಿಯನ್ನೇ ಗಮನಿಸಿ ಹೇಳುವುದಾದರೆ, ಕಾವ್ಯದ ದೃಷ್ಟಿಯಿಂದ ಕನ್ನಡ ವೀರಶೈವ ಪುರಾಣಗಳಲ್ಲೆಲ್ಲ ಇದು ಉತ್ಕೃಷ್ಟವಾದುದು." ಎಂಬ ಡಾ. ಚಿದಾನಂದ ಮೂರ್ತಿಗಳ ಅಭಿಪ್ರಾಯವನ್ನೂ, "ಕನ್ನಡದ ಪ್ರಥಮ ದರ್ಜೆಯ ಕವಿಗಳ ಸಾಲಿಗೇರುವಂತಹ ಪ್ರತಿಭೆಯ ಹೊಳಪನ್ನು ಭೀಮನಲ್ಲಿ ಕಾಣದಿದ್ದರೂ, ಮಧ್ಯ ಮಾರ್ಗ ಕ್ಕಿಂತ ಸ್ವಲ್ಪ ಮಿಗಿಲಾಗಿಯೇ ನಿಲ್ಲಬಲ್ಲ ಕಾವ್ಯ ಸಂಪತ್ತು ಆತನಲ್ಲಿ ಕಾಣುತ್ತದೆ. ತನ್ನ ಕಾಲದ ಕವಿಗಳಲ್ಲಂತೂ ಈತ ಅತ್ಯಂತ ಶ್ರೇಷ್ಠ ದರ್ಜೆಗೆ ಸೇರಬಲ್ಲವನು." ಎಂಬ ಡಾ. ಎಚ್. ತಿಪ್ಪೇರುದ್ರ ಸ್ವಾಮಿಗಳವರ ಅಭಿಪ್ರಾಯವನ್ನು ಒಪ್ಪಲಾಗಿದೆ.

**ಕುಮಾರವ್ಯಾಸ**

ಷಟ್ಪದಿ ಸಂಪ್ರದಾಯದ ಶ್ರೇಷ್ಠತೆಯ ಕವಿ ಹಾಗೂ ಸಮಗ್ರ ಕನ್ನಡ ಸಾಹಿತ್ಯದ ಕೆಲವೇ ಮಹಾಕವಿಗಳಲ್ಲಿ ಅಗ್ರತಾಂಬೂಲಕ್ಕೆ ಅರ್ಹನಾದವನು ಕುಮಾರವ್ಯಾಸ. ಪಂಪ ಕುಮಾರವ್ಯಾಸರಲ್ಲಿ ಯಾರು ದೊಡ್ಡವರೆಂಬ ಪ್ರಶ್ನೆ ಅಪ್ರಸ್ತುತ. ಇದು ಎಂದಿಗೂ ಇತ್ಯರ್ಥವಾಗದ ಪ್ರಶ್ನೆ. ಇಬ್ಬರೂ ಕನ್ನಡ ಕಾವ್ಯ ಸಹ್ಯಾದ್ರಿಯ ಎರಡು ಅತ್ಯುನ್ನತ ಶಿಖರಗಳು. ಇಬ್ಬರೂ ಬರೆದುದು ಮಹಾಭಾರತ ಕತೆಯನ್ನೇ ಆದರೂ ಕನ್ನಡಿಗರ ಸುದೈವದಿಂದ ಎರಡೂ ವಿಭಿನ್ನ ಕಾವ್ಯಧರ್ಮ, ಜೀವನ ಧರ್ಮಗಳ ದರ್ಪಣಗಳಾಗಿ ಕಂಗೊಳಿಸುತ್ತಿವೆ. ಅದು ವೀರ ಪ್ರಧಾನ, ಇದು ಭಕ್ತಿ ಪ್ರಧಾನ, ಅದು ಲೌಕಿಕ ಕಾವ್ಯ, ಇದು ದೈವೀಶಕ್ತಿಯ ಸೂತ್ರಧಾರಿತ್ವದಲ್ಲಿ ನಡೆದ ಮಾನವ ಸಂಘರ್ಷಗಳ ಕಾವ್ಯ. ಅದರಲ್ಲಿ ಅರ್ಜುನ ನಾಯಕ. ಇದರಲ್ಲಿ ಕೃಷ್ಣ ನಾಯಕ. ಹೀಗೆ ಈ ಎರಡೂ ಮಹಾಕಾವ್ಯಗಳ ಸಾದೃಶ್ಯ ವೈದೃಶ್ಯಗಳ ಪಟ್ಟಿಯನ್ನು ಬೆಳೆಸಬಹುದು.

ಕುಮಾರವ್ಯಾಸ ಮಹಾಭಾರತದ ಮೊದಲ ಹತ್ತು ಪರ್ವಗಳನ್ನಷ್ಟೇ ಬರೆದರೂ ಇದು ಅಪೂರ್ಣ ಕಾವ್ಯವೇನಲ್ಲ. ಭಾಗವತ ದೃಷ್ಟಿಯ ಈ ಕವಿಗೆ ಮಹಾಭಾರತ ಯುದ್ಧ ಮುಗಿದು ಧರ್ಮರಾಜ್ಯ ಸ್ಥಾಪನೆ ಖಚಿತವಾಗುತ್ತಲೇ ತನ್ನ ಕೃತಿ ರಚನೆಯ ಉದ್ದೇಶ ಈಡೇರಿದಂತೆಯೇ ಎಂದೆನಿಸಿರಬೇಕು. ಇಲ್ಲದಿದ್ದರೆ ಈ ಕಾವ್ಯದ ವಾಚನ ಫಲವನ್ನವನು ಸೂಚಿಸುತ್ತಿರಲಿಲ್ಲ. ಈ ಹತ್ತು ಪರ್ವಗಳೂ ಅವನ ಸ್ವಂತಿಕೆಗೆ, ಸ್ವೋಪಜ್ಞತೆಗೆ, ಸರ್ವಂಕಷ ಪ್ರತಿಭೆಗೆ, ಕಥಾರಚನೆಯ ಕೌಶಲ್ಯಕ್ಕೆ, ಸನ್ನಿವೇಶ ನಿರ್ಮಾಣ ಚಾತುರ್ಯಕ್ಕೆ, ಪಾತ್ರ ಕಲ್ಪನೆಯ ಜೀವಂತಿಕೆಗೆ, ಸೂಕ್ಷ್ಮ ಸಂವೇದನೆಗೆ, ಅದ್ಭುತ ರೂಪಕ—ಕಲ್ಪಕ—ಚಿತ್ರಕ ಶಕ್ತಿಗಳಿಗೆ, ಬೆರಗುಗೊಳಿಸುವ ಉಕ್ತಿ ವಿಲಾಸಕ್ಕೆ, ಕಲಾಪ್ರಜ್ಞೆ ಭಾಗವತ ಪ್ರಜ್ಞೆಗಳ ಹೃದಯಂಗಮ ಸಂಗಮಕ್ಕೆ, ವೀರದ ಮಹಾಪೂರಕ್ಕೆ, ಶೃಂಗಾರದ ಸಮುಚಿತ ನಿರೂಪಣಕ್ಕೆ, ಹಾಸ್ಯದ ಬೆಳುದಿಂಗಳಿಗೆ, ಭಕ್ತಿಯ ಉತ್ಕಟತೆಗೆ, ಸ್ಫುಟತೆಗೆ, ಸಂಕೀರ್ಣತೆಗೆ, ಸಮುಜ್ವಲತೆಗೆ ಹಿಡಿದ ಕನ್ನಡಿಗಳಾಗಿವೆ. 'ಪ್ರತಿಪರ್ವರಸೋದಯ'ವೆಂಬ ಮಾತು ಈ ಮಹಾಕೃತಿಗೆ ಸಾರ್ಥಕವಾಗಿ ಅನ್ವಯಿಸುತ್ತದೆ.

ಇಂಥ ಅಪ್ರತಿಮ ಕೃತಿ ನಿರ್ಮಾಣಕ್ಕೆ ಎಲ್ಲ ವಿಧದ ಅರ್ಹತೆಯನ್ನು ಅಳವಡಿಸಿಕೊಂಡಿದ್ದ ಕುಮಾರವ್ಯಾಸ. ಸಂಸ್ಕೃತ ಭಾರತವನ್ನು ತಾನು 'ಭಾರತಮಯ' ನಾಗುವಷ್ಟರ ಮಟ್ಟಿಗೆ ಅರಗಿಸಿಕೊಂಡಿದ್ದ, ಸಂಸ್ಕೃತದ ಕನ್ನಡದ ಶ್ರೇಷ್ಠ ಕೃತಿಗಳ

ಸಾರವನ್ನು ಹೀರಿಕೊಂಡಿದ್ದ; ಶಾಸ್ತ್ರಜ್ಞಾನ ಸಂಪನ್ನನೂ ವ್ಯವಹಾರಜ್ಞಾನ ಪರಿಪೂರ್ಣನೂ ಆಗಿದ್ದ; ಸರ್ವಮತ ಸಹಿಷ್ಣುತೆಯನ್ನು, 'ಶಿವಾಯ ವಿಷ್ಣುರೂಪಾಯ, ಶಿವರೂಪಾಯ ವಿಷ್ಣವೇ' ಎಂಬ ಹರಿಹರಾಭೇದ ಬುದ್ಧಿಯನ್ನೂ ಮೈಗೂಡಿಸಿಕೊಂಡಿದ್ದ; ಅಲಂಕಾರಶಾಸ್ತ್ರವನ್ನು ಕರತಲಾಮಲಕ ಮಾಡಿಕೊಂಡುದಲ್ಲದೆ ಬೇಕಾದಾಗ ಹೊಸ ಹೊಸ ಶಬ್ದಗಳನ್ನು ಸಲೀಲವಾಗಿ ಟಂಕಿಸಿಕೊಳ್ಳುವ ಸಾಮರ್ಥ್ಯವನ್ನು ಗಳಿಸಿಕೊಂಡಿದ್ದ. ದೇಶ್ಯ ಅನ್ಯದೇಶ್ಯಗಳೆನ್ನದೆ ಕೈಗೆ ಎಟುಕಿದ ಭಾಷೆಗಳ ಶಬ್ದಗಳನ್ನು ತನ್ನ ಅಭಿವ್ಯಕ್ತಿ ಸೌಕರ್ಯಕ್ಕಾಗಿ ದುಡಿಸಿಕೊಳ್ಳಬಲ್ಲ ಶಕ್ತಿಯನ್ನು, ಸ್ವಾತಂತ್ರ್ಯವನ್ನು ಪಡೆದು ಕೊಂಡಿದ್ದ. ಮೂಲದಲ್ಲಿದ್ದುದನ್ನು ಬೇಕಾದಂತೆ ಸಂಗ್ರಹಿಸುವ. ವಿಸ್ತರಿಸುವ, ಮಾರ್ಪಡಿಸುವ, ಉದಾತ್ತೀಕರಿಸುವ ಔಚಿತ್ಯಪ್ರಜ್ಞೆಯನ್ನು ಸಾಧಿಸಿಕೊಂಡಿದ್ದ.

ಇವೆಲ್ಲ ಸಿದ್ಧತೆಗಳ ಫಲವಾಗಿ ಇದೊಂದು 'ಕಾವ್ಯಕೆ ಗುರುವೆನಲು' ರಚಿತವಾದ ಲೋಕೋತ್ತರ ಕಾವ್ಯವಾಯಿತು. ಸಕೃದ್ದರ್ಶನಕ್ಕೆ ಇಲ್ಲಿನ ಪಾತ್ರಗಳೆಲ್ಲ ಕೃಷ್ಣ ಕುಣಿಸಿದಂತೆ ಕುಣಿಯುವ ಬೊಂಬೆಗಳಂತೆ ತೋರಿದರೂ ಆಳವಾಗಿ ಅವಲೋಕಿಸಿದಾಗ ಸಂಪೂರ್ಣ ಕಥೆಯ ಏಕಸೂತ್ರತೆಗೆ ಕಾರಣನಾಗಿರುವ ಕೃಷ್ಣ ತಾನು, "ಸರ್ವತಂತ್ರ ಸ್ವತಂತ್ರನಾಗಿಯೂ ಮನುಷ್ಯ ಜೀವನದ ಸ್ವಾಯತ್ತತೆಗೆ, ಬೆಳವಣಿಗೆಗೆ ಭಂಗ ಬರದಂತೆ ನೋಡಿಕೊಳ್ಳುತ್ತಾನೆ. ಇದು ಕಾವ್ಯದ ಹಿರಿಮೆ." (ಡಾ. ಕೀರ್ತಿನಾಥ ಕುರ್ತಕೋಟಿ: ಕುಮಾರವ್ಯಾಸ–ಒಂದು ಸಮಗ್ರ ವಿವೇಚನೆ: ಸಮಗ್ರ ಕನ್ನಡಸಾಹಿತ್ಯ ಚರಿತ್ರೆ: ಸಂಪುಟ ೪ ಭಾಗ ೧: ಪುಟ ೧೩೧)

ಒಟ್ಟಿನಲ್ಲಿ, ಕುಮಾರವ್ಯಾಸ ಭಾರತವು ವ್ಯಾಸಭಾರತದ ಶುಷ್ಕ ಅನುವಾದವಲ್ಲ, ಸ್ವತಂತ್ರಧ್ವನಿ. ದೀಪ್ತಿ, ಕಾಂತಿಗಳನ್ನೊಳಗೊಂಡ ಪ್ರತಿನಿರ್ಮಾಣ, ಅನೇಕ ಕಡೆಗಳಲ್ಲಿ ಮೂಲಕ್ಕಿಂತ ಎದ್ದು ಕಾಣುವ, ಭಾವ ನಿರ್ಭರವಾದ, ಕಲ್ಪನಾರಮ್ಯವಾದ, ರಸಸ್ಯಂದಿಯೂದ, ಉಜ್ವಲವಾದ ಸನ್ನಿವೇಶಗಳನ್ನೂ, ಸಂವಾದಗಳನ್ನೂ ಕನ್ನಡದೇಸಿಯ ಸಹಜ ಸಂಪತ್ತಿನ ಸಹಾಯದಿಂದ ಸೃಷ್ಟಿಸಿ, ಮೂಲವನ್ನು ಮತ್ತಷ್ಟು ಸಚೇತನಗೊಳಿಸಿದ, ಸಮುಚಿತ ಗೊಳಿಸಿದ, ಸಾರ್ಥಕಗೊಳಿಸಿದ ಹಿರಿಮೆ ಹೆಗ್ಗಳಿಕೆ ನಾರಣಪ್ಪನದು. ಅವನದು ನಾರಾಯಣೀಯ ಪ್ರತಿಭೆ, ನಾರಾಯಣೀಯ ಶೈಲಿ, ನಾರಾಯಣೀಯ ಸೃಷ್ಟಿ.

ಕುಮಾರವ್ಯಾಸನ ಸಮಕಾಲೀನರಾದ ಚಾಮರಸ ನಡುಗನ್ನಡ ಸಾಹಿತ್ಯದ ಇನ್ನೊಬ್ಬ ಮಹತ್ವದ ಕವಿ. ಕುಮಾರವ್ಯಾಸನಿಗೆ ಭಾಮಿನೀ ಷಟ್ಪದಿಯ ನಿರರ್ಗಳ ಓಟದಲ್ಲಿ, ರೂಪಕ ನಿರ್ಮಾಣ ಪ್ರಾವೀಣ್ಯದಲ್ಲಿ, ಸಂದರ್ಭ ಸನ್ನಿವೇಶಗಳ ಪ್ರತ್ಯಕ್ಷೀಕರಣದಲ್ಲಿ ಹೊಯ್‌ಕಯ್ ಆಗಿರುವನೆಂಬುದಿಷ್ಟೇ ಈ ಕವಿಯ ಹೆಚ್ಚುಗೆಯಲ್ಲ. ಕನ್ನಡದ "ಪಿಲ್‌ಗ್ರಿಮ್ಸ್ ಪ್ರೋಗ್ರೆಸ್" ಎಂದು ಕೀರ್ತಿತವಾಗಿರುವ, ಕನ್ನಡದ ಏಕಮೇವ ಸಂಪೂರ್ಣ ಸಾಂಕೇತಿಕ ಕಾವ್ಯದ ಕರ್ತೃವೆಂದು ಇವನಿಗೊಂದು ವಿಶಿಷ್ಟ ಸ್ಥಾನ ಮೀಸಲು. ಒಂದು ಶ್ರೇಷ್ಠ ಶ್ರೇಣಿಯ ಚರಿತ್ರಗ್ರಂಥವೆಂದೂ ಇವನ "ಪ್ರಭುಲಿಂಗಲೀಲೆ"ಗೆ ವಿಶೇಷ ಮನ್ನಣೆ ಸಂದಿದೆ. ಅಲ್ಲಮ ಪ್ರಭುವಿನ ಅದ್ಭುತ ಮೂರ್ತಿಸ್ವರೂಪವನ್ನು ಅನನ್ಯವಾದ ರೀತಿಯಲ್ಲಿ ಇವನಂತೆ ಯಾರೂ ಇದುವರೆಗೂ ಚಿತ್ರಿಸಿಲ್ಲ. ಮತೀಯತೆಯ ಚೌಕಟ್ಟಿಗೆ ಸಿಲುಕದ, ಮಾಯೆಗೆ ನಿಲುಕದ, ಉತ್ತಮಾಂಶವೆಲ್ಲಿದ್ದರೂ ಕೈವಾರಿಸಿ, ದೋಷವೆಲ್ಲಿದ್ದರೂ ವಿಮರ್ಶಿಸಿ, ಚುಚ್ಚಿಯೂ ಮೆಚ್ಚಾಗುವ ರೀತಿಯಲ್ಲಿ ವ್ಯಂಗಿಸಿ, ವಿಡಂಬಿಸಿ, ತಿದ್ದಿ, ಉದ್ಧರಿಸುವ ಪ್ರಭುವಿನ ಪ್ರಭಾವಳಿ ಕಾವ್ಯದ ಮೇಲೆಲ್ಲ ಹರಡಿ ಅದಕ್ಕೊಂದು ದರ್ಶನ–ಧ್ವನಿ–ದೀಪ್ತಿಯನ್ನು ನೀಡಿದೆ. "ಆಡಿ ಕೆಲರಿಗೆ, ಕರುಣದಲಿ ಮಾತಾಡಿ ಕೆಲರಿಗೆ, ನುಡಿದು ಕೆಲರಿಗೆ, ನಡೆದು ಕೆಲರಿಗೆ, ಜಡಿದು ಕೆಲರಿಗೆ, ಮಾರ್ಗದರ್ಶನ ಮಾಡಿ, "ಸಮಸ್ತ ಜಾತಿಯ ಜಾಲವನು, ಸರ್ವರನು ಕರುಣಿಸಿ ಪೊರೆದ" ಅಲ್ಲಮನ ಅನುಪಮ ಚಿತ್ರ ಆಹ್ಲಾದಕಾರಿಯಾಗಿ ಒಡಮೂಡಿದೆ. ಅಲ್ಲಲ್ಲಿ ವಿಸಂಗತಿಗಳು ಇಣುಕಿದರೂ ಒಟ್ಟಂದದಲ್ಲಿ ಇದೊಂದು ಮಹಾಕೃತಿ.

**ಇತರರು**

ಹದಿನೈದನೆಯ ಶತಮಾನದ ಆರಂಭಕಾಲದಲ್ಲಿದ್ದ ಭಾಸ್ಕರ ಕುಮಾರವ್ಯಾಸನಿಂದ ತುಂಬ ಪ್ರಾಭಾವಿತನಾಗಿಯೂ ತನ್ನ ಜೀವಂಧರ ಚರಿತ್ರೆಯನ್ನು ಒಂದು ರಸವತ್ಕಾವ್ಯವನ್ನಾಗಿಸಿದ್ದಾನೆ; ಲಕ್ಕಣ್ಣದಂಡೇಶ (೧೪೧೯–೧೪೪೬) ತನ್ನ "ಶಿವತತ್ವ ಚಿಂತಾಮಣಿ"ಯಲ್ಲಿ ವೀರಶೈವ ಸಿದ್ಧಾಂತವನ್ನೂ, ಬಸವ ಚರಿತ್ರೆಯನ್ನೂ, ನೂರಾರು ಶರಣರ ಚರಿತ್ರೆಗಳನ್ನೂ ನಿರೂಪಿಸಿದ್ದಾನೆ; ಗುರುಬಸವನು ತನ್ನ ಸಪ್ತಕಾವ್ಯಗಳಲ್ಲಿ "ಅನುಭಾವ, ಅಧ್ಯಾತ್ಮ ಮತ್ತು ಯೋಗಗಳಂಥ ಗಹನ ವಿಚಾರಗಳನ್ನು ಸಾಕಷ್ಟು ಸರಳವಾಗಿ, ಸ್ವಾರಸ್ಯಕರವಾಗಿ ನಿರೂಪಿಸಿದ ವೈಶಿಷ್ಟ್ಯ"ವನ್ನು ಮರೆಸಿದ್ದಾನೆ. ಅಲ್ಲದೆ ಅವುಗಳಲ್ಲಿ ತನ್ನ ಸಂಗೀತದ ಜಾಣ್ಮೆಯನ್ನೂ ಬೆರೆಸಿದ್ದಾನೆ. ತೆರಕಣಾಂಬಿ ಬೊಮ್ಮರಸ (ಸು. ೧೫೮೫) ಸನತ್ಕುಮಾರ ಚರಿತೆಯನ್ನು ಭಾಮಿನಿ ಷಟ್ಪದಿಯಲ್ಲಿಯೂ, "ಜೀವಂಧರ ಸಾಂಗತ್ಯ"ವನ್ನು ಸಾಂಗತ್ಯದಲ್ಲಿಯೂ ಬರೆದಿದ್ದಾನೆ. ಚತುರ್ಮುಖ ಬೊಮ್ಮರಸ (ಸು. ೧೫೦೦) ರೇವಣಸಿದ್ಧೇಶ್ವರ ಪುರಾಣವನ್ನೂ, ಸಾಳ್ವ (೧೫೫೦) ನು ಸಾಳ್ವಭಾರತವನ್ನೂ, ಸಿಂಗಿರಾಜ (೧೫೦೦) ಅಮಲ ಬಸವ ಚಾರಿತ್ರವನ್ನೂ ಬರೆದಿದ್ದಾರೆ. ಈ ಕೃತಿಯ ಬಗ್ಗೆ: "ಒಟ್ಟಿನಲ್ಲಿ ಇತಿಹಾಸ ದೃಷ್ಟಿಯಿಂದಲೂ ಸಾಹಿತ್ಯ ದೃಷ್ಟಿಯಿಂದಲೂ ಉತ್ತಮ ವರ್ಗಕ್ಕೆ ಸೇರಿದ ವೀರಶೈವ ಪುರಾಣಗಳಲ್ಲಿ ಇದೊಂದೆಂದು ಹೇಳಬಹುದು". ಎಂದು ಶ್ರೀ ಎಚ್. ದೇವೀರಪ್ಪನವರು ಅಭಿಪ್ರಾಯ ಪಟ್ಟಿರುವುದು ಸರಿಯಾಗಿದೆ. (ಸಿಂಗರಾಜ ಪುರಾಣ: ಪು. ೪೦)

ಇನ್ನುಳಿದವರಲ್ಲಿ ಕೃಷ್ಣದೇವರಾಯನ ಆದೇಶದಂತೆ ಮಹಾಭಾರತದ ಕೊನೆಯ ಏಳು ಪರ್ವಗಳನ್ನು ಬರೆದ ತಿಮ್ಮಣ್ಣ ಕವಿಯನ್ನೂ, 'ತೊರವೆ ರಾಮಾಯಣ'ದ ಕರ್ತೃ ಕುಮಾರ ವಾಲ್ಮೀಕಿಯನ್ನೂ, 'ಜಯನೃಪ ಕಾವ್ಯ'ದ ಮೂರನೆಯ ಮಂಗರಸ (೧೫೦೮)ನನ್ನೂ, ಭಾವಚಿಂತಾರತ್ನ ಹಾಗೂ "ವೀರಶೈವಾಮೃತ ಪುರಾಣಗಳನ್ನು ಬರೆದ ಗುಬ್ಬಿಯ ಮಲ್ಲಣಾರ್ಯನನ್ನೂ, "ಮಹಾದೇವಿಯಕ್ಕನ ಪುರಾಣ"ವನ್ನು ಬರೆದ ಚೆನ್ನಬಸವಾಂಕನನ್ನೂ (ಸು. ೧೫೫೦) "ಭಾಗವತ"ವನ್ನು ಬರೆದ ಚಾಟುವಿಠಲನಾಥ (೧೫೩೦) ನನ್ನೂ ನೆನೆಯ ಬಹುದು. ಇವರಲ್ಲಿ ಕುಮಾರ ವಾಲ್ಮೀಕಿ ಹಾಗೂ ಗುಬ್ಬಿಯ ಮಲ್ಲಣಾರ್ಯರು ಬರೆದ ಕೃತಿಗಳು ಗಮನಾರ್ಹ.

ಜನಪ್ರಿಯತೆಯ ದೃಷ್ಟಿಯಿಂದ ಅಗ್ರಮನ್ನಣೆಗೆ ಅರ್ಹನಾಗಿದ್ದ, ಈಗಲೂ ಜನಪ್ರಿಯ ಕಾವ್ಯವೆಂದೇ ಹೆಸರಾಗಿರುವ "ಜೈಮಿನಿ ಭಾರತ"ದ ಕವಿ ಲಕ್ಷ್ಮೀಶ ಮೇಲಾದ ಕವಿ, ಉತ್ತಮ ಶ್ರೇಣಿಯ ಕಥೆಗಾರ, ನಾದಲೋಲ, ಉಪಮಾಲೋಲ, ರಸಿಕ, ಪ್ರತಿಭಾನ್ವಿತ, ಕನ್ನಡ ಭಾಷೆಯ ಬೆಡಗು ಬಿನ್ನಾಣಗಳು ಇವನ ಕೃತಿಯಲ್ಲಿ ಕುಣಿದಿರುವಂತೆ ಬಹಳ ಕೃತಿಗಳಲ್ಲಿ ಕುಣಿದಿಲ್ಲ. ಇವನ ಕೃತಿಯನ್ನು ಓದುತ್ತಿದ್ದಂತೆ ಕಥೆಗಳ ಸ್ವಪ್ನಲೋಕವೊಂದರಲ್ಲಿ ಸಂಚರಿಸಿದ ಅನುಭವವಾಗುತ್ತದೆ. ಸೀತಾಪರಿತ್ಯಾಗ ಹಾಗೂ ಚಂದ್ರಹಾಸನ ಕಥೆಯ ಭಾಗಗಳಂತೂ ಹೃದಯಸ್ಪರ್ಶಿಯಾಗಿದ್ದು ಕರುಣರಸದಲ್ಲಿ ಕೋಡಿವರಿದಿದೆ. ವೀರ, ಅದ್ಭುತ, ಶೃಂಗಾರ, ಹಾಸ್ಯರಸಗಳಿಗೂ ತಕ್ಕ

ಪ್ರಾಶಸ್ತ್ಯ ಸಿಕ್ಕಿದೆ. ಈ ಕೃತಿಯಲ್ಲಿ ಶೃಂಗಾರ ಹೆಚ್ಚಾಗಿದೆಯಿಲ್ಲದೆ ಕೆಲವೆಡೆ ಔಚಿತ್ಯವನ್ನು ಮೀರಿದೆಯೆಂದೇ ಹೇಳಬೇಕು. ಇವನಂತೆಯೇ ಭಾಷೆಯ ಬೆಡಗಿಗೆ ಹೆಸರಾದ ಇನ್ನೊಬ್ಬ ಕವಿ ವಿರೂಪಾಕ್ಷ ಪಂಡಿತ. ಭಾಷೆಯ ಮಟ್ಟಿಗೆ ಈ ಇಬ್ಬರಲ್ಲಿ ಹೋಲಿಕೆ ಅಷ್ಟ. ವಿರೂಪಾಕ್ಷ ಪಂಡಿತ ತನ್ನ ಚೆನ್ನಬಸವ ಪುರಾಣದಲ್ಲಿ ಕೃತಿನಾಯಕನನ್ನು ಕಡೆಗಣಿಸಿ ವೀರಶೈವ ಸಿದ್ಧಾಂತ, ಅರುವತ್ತು ಮೂವರು ಪುರಾತನರು, ಅಮರ ಗಣಂಗಳು, ನೂರೊಂದು ವಿರಕ್ತರು – ಇನ್ನೂ ಏನೇನನ್ನೋ ತುಂಬಿ ಮಹಾಕವಿ ಸದೃಶವಾದ ತನ್ನ ಶಕ್ತಿಯ ಅಪವ್ಯಯ ಮಾಡಿಕೊಂಡಿದ್ದಾನೆ.

ಚರಿತ್ರೆಯ ದೃಷ್ಟಿಯಿಂದ ಮೂರು, ತತ್ವ ಪ್ರತಿಪಾದನೆಯ ದೃಷ್ಟಿಯಿಂದ ಎರಡು, ಅನುವಾದದ ದೃಷ್ಟಿಯಿಂದ ಒಂದು ಹೀಗೆ ಆರು ಕೃತಿಗಳನ್ನು ಹೆಸರಿಸಬೇಕಿಲ್ಲ. ಚಿಕ್ಕನಂಜೇಶನ 'ರಾಘವಾಂಕ ಚಾರಿತ್ರ' 'ಗುರುರಾಜ ಚಾರಿತ್ರ'ಗಳು, ಅದೃಶ್ಯ ಕವಿಯ "ಪ್ರೌಢರಾಯನ ಕಾವ್ಯ" ಮಹಾಲಿಂಗರಂಗನ 'ಅನುಭವಾಮೃತ' ಹಾಗೂ ಜಗನ್ನಾಥದಾಸರ 'ಹರಿಕಥಾಮೃತ' ಮತ್ತು ನಾಗರಸನ ಭಗವದ್ಗೀತಾನುವಾದಗಳೇ ಈ ಕೃತಿಗಳು. ಇವುಗಳಲ್ಲಿ. "ಅನುಭವಾಮೃತ" ಹಾಗೂ "ಹರಿಕಥಾಮೃತಸಾರ"ಗಳು ಬಹಳ ಸಾರವತ್ತಾದ ಕೃತಿಗಳು. ಒಂದರಲ್ಲಿ ಅದ್ವೈತ ದರ್ಶನ, ಇನ್ನೊಂದರಲ್ಲಿ ದ್ವೈತ ದರ್ಶನ ಬಹಳ ಚೆನ್ನಾಗಿ ಒಡಮೂಡಿವೆ. ಕಾವ್ಯಾಂಶಗಳೂ ಸಾಕಷ್ಟು ಇವುಗಳಲ್ಲಿ ಸೇರಿಕೊಂಡು ಆಪ್ಯಾಯನಕರವಾಗಿ ಪರಿಣಾಮಿಸಿವೆ ಇವೆರಡೂ.

**ದಾಸವಾಙ್ಮಯ**

ಕುಮಾರವ್ಯಾಸನಿಂದ ನಾಗರಸನವರೆಗೆ ಅನೇಕ ಭಾಗವತ ಕವಿಗಳು ಭಾರತ, ರಾಮಾಯಣ, ಭಾಗವತ, ಭಗವದ್ಗೀತೆ ಇತ್ಯಾದಿಗಳನ್ನು ಕನ್ನಡಿಸಿ ದೇಸಿಯ ಛಂದಸ್ಸಿನಲ್ಲಿ ವೈದಿಕ ಪರಂಪರೆಯ ವಾಙ್ಮಯವನ್ನು ಸೃಷ್ಟಿಸಿದ ಸಮಯದಲ್ಲಿಯೇ ಹಾಡಿನ ರೂಪದ ಆಡುನುಡಿಯ ದಾಸ ವಾಙ್ಮಯವು ರಾಶಿರಾಶಿಯಾಗಿ ಹುಟ್ಟಿ ಆ ಪರಂಪರೆಯ ಮಂದಿರಕ್ಕೆ ಗಗನಚುಂಬಿ ಗೋಪುರವನ್ನು ಕಟ್ಟಿ ಸ್ವರ್ಣಕಲಶವನ್ನಿಟ್ಟಿತು. ಈ ವಾಙ್ಮಯ ನಾಲ್ಕು ಘಟ್ಟಗಳಲ್ಲಿ ಸೃಷ್ಟಿಗೊಂಡಿದೆಯೆಂದು ಹೇಳುತ್ತಾರೆ. ಮೊದಲನೆಯದು ಶ್ರೀಮನ್ಮಧ್ವಾಚಾರ್ಯರ ಕಾಲದಲ್ಲಿ ಅವರ ಶಿಷ್ಯ ಸಮುದಾಯವು ನರಹರಿತೀರ್ಥರ ನೇತೃತ್ವದಲ್ಲಿ ಪ್ರಕಟಿಸಿದುದು; ಎರಡನೆಯದು ಶ್ರೀಪಾದರಾಯರು, ವ್ಯಾಸರಾಯರು ಹಾಗೂ ವ್ಯಾಸರಾಯರ ಗುರುತ್ವದಲ್ಲಿ, ಪುರಂದರದಾಸ ಕನಕದಾಸರು ಸೃಷ್ಟಿಸಿದುದು; ಮೂರನೆಯದು ವಿಜಯದಾಸಾದಿ ಯತಿಗಳು ರಚಿಸಿದುದು; ನಾಲ್ಕನೆಯದು ಪ್ರಾಣೇಶ, ಗುರುಪ್ರಾಣೇಶ ಮೊದಲಾದವರು ಸೃಜಿಸಿದುದು. ದಾಸಕೂಟದ ಕೀರ್ತನಕಾರರು "ನಮಸ್ತೇ ಶ್ರೀಪಾದರಾಜಾಯ" ಎಂದು ಸ್ತುತಿಶ್ಲೋಕ ಪಾರಂಭಿಸುವುದನ್ನು ನೋಡಿದರೆ ಅವರೇ ಈ ಪರಂಪರೆಯ ಪ್ರಾರಂಭಿಗರಿರಬೇಕೆಂದು ಹೇಳ'ಲಾಗಿದೆ. (ಡಾ. ಕೆ. ಎಂ. ಕೃಷ್ಣರಾವ್: ಹರಿದಾಸ ಸಾಹಿತ್ಯದ ಹಿನ್ನೆಲೆ ಮತ್ತು ಉಗಮ: ಸಮಗ್ರಕನ್ನಡ' ಸಾಹಿತ್ಯ ಚರಿತ್ರೆ: ಸಂಪುಟ೪: ಭಾಗ ೨: ಪುಟ: ೩೧೨) ಶ್ರೀಪಾದರಾಯರ ಕೃತಿಗಳೂ ಗಮನಾರ್ಹ. "ಭ್ರಮರಗೀತೆ", "ವೇಣು ಗೀತೆ", "ಗೋಪೀಗೀತೆ"ಗಳು ಗೇಯತೆ, ಪ್ರಾಸವಿಲಾಸ, ದೇಸಿಯ ಸೊಗಸುಗಳಿಂದ ಸತ್ಕೃತಿಗಳಾಗಿವೆ. ಇವರ ಕೃತಿಗಳಲ್ಲಿ ಇವರ ಸಿದ್ಧಿ, ವ್ಯಕ್ತಿತ್ವ ಪರಿಣತಿಗಳು ಒಡಮೂಡಿವೆ. ಈ ಎರಡು ಅಂಶಗಳು ಉಳಿದ ಹರಿದಾಸರಿಗೂ ಅನ್ವಯಿಸುತ್ತವೆ.

ವ್ಯಾಸರಾಯರ ವ್ಯಕ್ತಿತ್ವ ಮಹೋನ್ನತವಾದುದು. ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಒದಗಿದ ಕುಹಯೋಗವನ್ನು ನಿವಾರಿಸಿದ ಇವರು ವಿಜಯನಗರ ದೊರೆಗಳಿಂದಲೂ ಜನತೆಯಿಂದಲೂ ಸಮಾನವಾಗಿ ಮನ್ನಣೆ ಪಡೆದವರು. ಇವರು ಬರೆದ ನೂರಾರು ಹಾಡುಗಳು ಉಪಲಬ್ಧವಿದ್ದು ಅವುಗಳಲ್ಲಿ ಇವರ "ಭಕ್ತಿ ನಿರ್ಭರತೆ, ಸಂಗೀತ ಜ್ಞಾನ, ಜನತಾದೃಷ್ಟಿ"ಗಳು ಅಭಿವ್ಯಕ್ತವಾಗಿವೆ. ಇವರ ಶಿಷ್ಯರಾದ ಪುರಂದರದಾಸರು "ದಾಸರೆಂದರೆ ಪುರಂದರದಾಸರಯ್ಯ" ಎಂಬ ನೆಗಳ್ತೆಗೆ ಪಾತ್ರರಾಗಿದ್ದಾರೆ. ಪುರಂದರದಾಸ, ಕನಕದಾಸರು ದಾಸವಾಙ್ಮಯದ ಅತ್ಯುನ್ನತ ಶಿಖರಗಳು.

ಪುರಂದರದಾಸರ ಒಂದು ಸಾವಿರಕ್ಕೂ ಹೆಚ್ಚು ಕೀರ್ತನೆಗಳು ಈ ವರೆಗೆ ದೊರೆತು ಪ್ರಕಟವಾಗಿವೆ. ಇವುಗಳಲ್ಲಿ ಪ್ರತಿಪಾದಿತವಾದ ವಿಷಯಗಳು–ಇತರ ದಾಸಕೃತಿಗಳಿಗೂ ಇದು ಅನ್ವಯಿಸುತ್ತದೆ–ನಾಮ ಮಹಿಮೆ, ಹರಿ ಗುರುಗಳ ಸ್ಮರಣೆ, ಅಂತರಂಗ ನಿವೇದನೆ, ದ್ವೈತದರ್ಶನ ವಿವೇಚನೆ, ಕೃಷ್ಣಲೀಲೆ, ಸಮಾಜ ವಿಮರ್ಶೆ, ನೀತಿ ಬೋಧೆ ಇತ್ಯಾದಿಗಳು. ವಿಷಯಗಳೇನೇ ಇರಲಿ, ಇವರ ಎಲ್ಲಾ ಕೀರ್ತನೆಗಳೂ ಸಹಜಸ್ಫೂರ್ತಿಯಿಂದಲೂ, ಆತ್ಮೋದ್ಧಾರದ ಉತ್ಕಟೇಚ್ಛೆಯಿಂದಲೂ, ಭಕ್ತಿನಿರ್ಭರತೆಯಿಂದಲೂ, ನಾದಮಾಧುರ್ಯ ಭಾವಸೌಂದರ್ಯಗಳಿಂದಲೂ, ಸಹಜ ಪ್ರಾಸ–ಹೊಸ ಹೋಲಿಕೆಗಳು, ಸಹಜ ದೇಸಿಯ ಸಂಪತ್ತಿನಿಂದಲೂ ಚೇತೋಹಾರಿಯಾಗಿವೆ. ಪುನರುಕ್ತಿಗಳೂ, ಅದೆಅದೆತನವೂ ಇಲ್ಲವೆಂತಲ್ಲ. ಆದರೂ ಎಲ್ಲಿಯೂ ಸಾಧಾರಣತೆಯ ಸೋಂಕಿಲ್ಲ. ವ್ಯಾಸರಾಯರೇ. "ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ ಮಾತುಮಾತಿಗೆ ಬಿಡದೆ ವರ್ಣಿಸುತಲಿ|| ಗೀತನರ್ತನದಿ ಶ್ರೀಕೃಷ್ಣನ ಪೂಜಿಸುವ ಪೂತಾತ್ಮದಾಸ ಪುರಂದರದಾಸರಯ್ಯ||" ಎಂದು ಶ್ಲಾಘಿಸಿರಬೇಕಾದರೆ ಪುರುಂದರದಾಸರ ವ್ಯಕ್ತಿತ್ವವು ಎಷ್ಟು ಉನ್ನತವಾದುದೆಂಬುದು ವ್ಯಕ್ತವಾಗುತ್ತದೆ. ತ್ಯಾಗರಾಜರೂ ಸ್ಮರಿಸಿರುವ ಪುರಂದರದಾಸರು ಕರ್ನಾಟಕ ಸಂಗೀತದ ಪಿತಾಮಹರೆಂದೂ ಕೀರ್ತಿತರಾಗಿದ್ದಾರೆ. ಇದಕ್ಕೂ ಮುಖ್ಯವಾದುದು ಅವರು ಜನಜೀವನವನ್ನು ಹಸನುಗೊಳಿಸಬಲ್ಲ ಹಾಡುಗಳನ್ನು ನೀಡಿರುವುದು, ಸಾಹಿತ್ಯಕ್ಕೂ ಜನಸಾಮಾನ್ಯಕ್ಕೂ ಹತ್ತಿರ ಗಡೆಯನ್ನು ಸೃಷ್ಟಿಸಿದುದು.

ಕುರುಬರಾಗಿ ಹುಟ್ಟಿ ಹರಿಶರಣರಾಗಿ ಮೆರೆದ ಕನಕದಾಸರ ಕೀರ್ತನೆಗಳು ಮೇಲ್ಮಟ್ಟದವಾಗಿರುವಂತೆ ಅವರು ರಚಿಸಿದ ಷಟ್ಪದಿ, ಸಾಂಗತ್ಯ ಕೃತಿಗಳಾದ "ಹರಿಭಕ್ತಿಸಾರ" "ರಾಮಧಾನ್ಯ ಚರಿತ್ರೆ", ನಳಚರಿತ್ರೆ", "ಮೋಹನ ತರಂಗಿಣಿ"ಗಳೂ ಗಮನಾರ್ಹವಾಗಿವೆ. "ನೃಸಿಂಹಸ್ತವ" ಎಂಬ ಚಿಕ್ಕ ಸಾಂಗತ್ಯವೂ ಅವನು ಬರೆದುದೇ ಆಗಿರಬಹುದು. ಅವರ ಕೀರ್ತನೆಗಳಲ್ಲಿ ಕೆಲವು ಸಾಹಿತ್ಯದೃಷ್ಟಿಯಿಂದಲೂ ಶ್ರೇಷ್ಠವಾಗಿವೆ. ಉಳಿದವು ಅವರ ಪರಿಪಕ್ವ ಪ್ರಪಂಚಾನುಭವಕ್ಕೂ, ವಿವೇಕಶೀಲತೆಗೂ, ಸಮದರ್ಶಿತ್ವಕ್ಕೂ, ಸ್ವಾತಂತ್ರ್ಯಪ್ರಿಯತೆಗೂ ಕನ್ನಡಿ ಹಿಡಿಯುತ್ತವೆ. "ಹರಿಭಕ್ತಿಸಾರ" ಪಾರಾಯಣ ಗ್ರಂಥ ಕೆಲವರಿಗೆ; ನಳಚರಿತ್ರೆಯೊಂದು ಸತ್ಕಾವ್ಯ; ಮೋಹನ ತರಂಗಿಣಿಯೊಂದು ಹಿರಿಯ ಕೃತಿ, "ರಾಮಧಾನ್ಯ ಚರಿತ್ರೆ"ಯೊಂದು ಸ್ವಕಲ್ಪಿತ ಸ್ವಾರಸ್ಯಮಯ ಕಥೆ. ಭತ್ತದ ಮೇಲೆ ರಾಗಿಯ ವಿಜಯ ಸಾರುವ ಈ ಕೃತಿ ಕನಕದಾಸನು ಬಡವರಬಂಧುವೆಂಬುದನ್ನು ಸಾರುತ್ತಿದೆ.

ವಾದಿರಾಜರು ತಮ್ಮ ಇತರ ಕೃತಿಗಳಿಗಿಂತ ಕೀರ್ತನೆ. ಸುಳಾದಿ, ಉಗಾಭೋಗಗಳಿಂದ ಓದುಗರಿಗೆ ಪ್ರಿಯರಾಗುತ್ತಾರೆ. ಇವುಗಳಲ್ಲಿ ಸಾಹಿತ್ಯಕ್ಕಿಂತ ಶಾಸ್ತ್ರ ಹೆಚ್ಚಿದೆ, ಭಾವನೆಗಿಂತ ಬುದ್ಧಿ ಅಧಿಕವಾಗಿದೆ. ೧೮ನೆಯ ಶತಮಾನದಲ್ಲಿ ಪ್ರಸನ್ನ ವೆಂಕಟದಾಸರೂ, ಮಹಿಪತಿದಾಸರೂ, ವಿಜಯದಾಸರೂ,

ಗೋಪಾಲದಾಸರೂ ಹಾಗೂ ಜಗನ್ನಾಥದಾಸರೂ ದಾಸವಾಙ್ಮಯ ಪರಂಪರೆಯನ್ನು ಮುಂದುವರಿಸಿದ ಮಹಾನುಭಾವರು. ಇವರಲ್ಲಿ ಜಗನ್ನಾಥದಾಸರ ಸ್ಥಾನ ಪುರಂದರ, ಕನಕರಷ್ಟೇ ಮಹತ್ವದ ಸ್ಥಾನ". ಇವರ "ಹರಿಕಥಾಮೃತಸಾರ"ದ ಪ್ರಸ್ತಾಪ ಇದಾಗಲೇ ಬಂದಿದೆ. ಇದರಲ್ಲಿಯೂ, ಇವರ ಕೀರ್ತನೆಗಳಲ್ಲಿಯೂ ಅವರ ಘನವಾದ ವ್ಯಕ್ತಿತ್ವ, ವಿದ್ವತ್ವ, ಕವಿತ್ವಗಳು ಸೂರೆಗೊಂಡಿವೆ. "ಒಟ್ಟಿನಲ್ಲಿ ವಿಷಯ, ರೂಪ, ಭಾಷೆಗಳಲ್ಲಿ ದಾಸಸಾಹಿತ್ಯ ವಿಶಿಷ್ಟ ಕಾಂತಿಯುಳ್ಳದಾಗಿ ಕನ್ನಡಿಗರ ಚಿರಸ್ಥಾಯಿಯಾದ ಸೊತ್ತಾಗಿದೆ". (ಡಾ. ಮುಗುಳಿ: ಕ.ಸಾ.ಚ. ಪುಟ ೨೮೦)

ಚಿಕ್ಕದೇವರಾಯನ ಕಾಲದಲ್ಲಿ ತಿರುಮಲಾರ್ಯ, ಚಿಕುಪಾಧ್ಯಾಯ, ಸಿಂಗರಾರ್ಯರು ಶ್ರೀವೈಷ್ಣವ ಹಾಡುಗಾರರಾಗಿ ಮೈದೋರಿ, ಸುಂದರ ಹಾಡುಗಳನ್ನು ಸೃಷ್ಟಿಸಿ ಈ ಸಾಹಿತ್ಯ ಪ್ರಕಾರವೊಂದು ತ್ರಿವೇಣಿ ಸಂಗಮವಾಗುವಂತೆಸಗಿದ್ದಾರೆ.

ಈ ವೈದಿಕ ವಾಙ್ಮಯ ಪರಂಪರೆಗೆ ಸಂವಾದಿಯಾಗಿ ವೀರಶೈವ, ಜೈನ, ಸಾಹಿತ್ಯವಾಹಿನಿಗಳೂ ಇದೇ ಕಾಲದಲ್ಲಿ ತುಂಬಿ ಹರಿದುವು. ಪ್ರೌಢದೇವರಾಯನ ಆಳಿಕೆಯಲ್ಲಿ ವಚನ ಸಾಹಿತ್ಯದ ಸಂಗ್ರಹ, ಸಂಪಾದನೆ, ಸಂಕಲನ, ವ್ಯಾಖ್ಯಾನೇತ್ಯಾದಿ ಕಾರ್ಯಗಳು ನಡೆದುದರ ಪರಿಣಾಮವಾಗಿ ನಾಲ್ಕು (ಐದು?) ಶೂನ್ಯ ಸಂಪಾದನೆಗಳು ಹುಟ್ಟಿಕೊಂಡುದೂ, ತೋಂಟದ ಸಿದ್ಧಲಿಂಗ ಶಿವಯೋಗಿಗಳವರ ನೇತೃತ್ವದಲ್ಲಿ ವಚನ ಸಾಹಿತ್ಯದ ಪುನರುಜ್ಜೀವನ ಕಾರ್ಯ ನಡೆದುದೂ ಮಹತ್ವದ ಘಟನೆಗಳು. ಸ್ವತಃ ಸಿದ್ಧಲಿಂಗೇಶ್ವರರೇ ಉತ್ತಮ ವಚನಕಾರರಾಗಿ ವಿರಾಜಿಸಿದರು. ಅವರ ಶಿಷ್ಯರಾದ ಸ್ವತಂತ್ರ ಸಿದ್ಧಲಿಂಗೇಶ್ವರರೂ, ಘನಲಿಂಗ ಶಿವಯೋಗಿಗಳೂ ವಚನಗಳನ್ನು ರಚಿಸಿ ವಚನಸಾಹಿತ್ಯವಾಹಿನಿ ಇನ್ನೂ ಬತ್ತಿರದ ತೊರೆಯೆಂಬುದನ್ನು ಸಿದ್ಧ ಪಡಿಸಿದರು. ಬೆಂಗಳೂರು ಮುದ್ದುವೀರಸ್ವಾಮಿ ಹಾಗೂ ಜೇವರಗಿಯ ಷಣ್ಮುಖ ಶಿವಯೋಗಿಗಳೂ ವಚನಕಾರರು. ತೋಂಟದ ಸಿದ್ಧಲಿಂಗೇಶ್ವರರೂ, ಘನಲಿಂಗಿಗಳೂ, ಷಣ್ಮುಖ ಶಿವಯೋಗಿಗಳೂ ಶ್ರೇಷ್ಠ ವಚನಕಾರರು. ಹನ್ನೆರಡನೆಯ ಶತಮಾನದ ವಚನಸಾಹಿತ್ಯಕ್ಕೆ ಹೋಲಿಸಿದಾಗ ಇವು ಅವುಗಳಿಗಿಂತ ಕಡಿಮೆ ದರ್ಜೆಯ ವಚನಗಳೆಂದು ತೋರಿದರೂ ಹನ್ನೆರಡನೆಯ ಶತಮಾನದ ವಚನಸಾಹಿತ್ಯವನ್ನು ಓದದೆ ಇವನ್ನೇ ಮೊದಲು ಓದಿದರೆ ತುಂಬ ಪರಿಣಾಮಕಾರಿಯಾಗಿ ತೋರಬಹುದು.

"ನಿಜಗುಣ ಶಿವಯೋಗಿ ಕನ್ನಡ ನಾಡಿನ ಅದ್ಭುತ ವ್ಯಕ್ತಿಗಳಲ್ಲಿ ಒಬ್ಬನು. ಅಗಾಧ ವಿದ್ವತ್ತೆಯಿಂದಲೂ ದೀರ್ಘ ತಪಶ್ಚರ್ಯೆಯಿಂದಲೂ ಜ್ಞಾನದ ತುತ್ತತುದಿಯನ್ನೇರಿ ಕೆಳಗಿಳಿದು ಬಂದು ತರತರದ ಗದ್ಯಪದ್ಯಗಳಲ್ಲಿ ಕನ್ನಡಕ್ಕೆ ತನ್ನ ಅರಿವನ್ನು ಹಂಚಿಕೊಟ್ಟವನು." (ಡಾ. ಮುಗಳಿ ಕ. ಸಾ. ಚ. ಪುಟ ೩೧೧-೨) ಇವನ ಕೃತಿಗಳಲ್ಲಿ 'ಕೈವಲ್ಯ ಪದ್ಧತಿ' ಹೃದಯಂಗಮವಾದ ಹಾಡು ಗಬ್ಬಗಳ ಸಂಗ್ರಹ; 'ಪರಮಾನುಭವ ಬೋಧೆ'ಯು ಯಾಜ್ಞವಲ್ಕ್ಯ – ಮೈತ್ರೇಯರ ಸಂವಾದರೂಪವಾದ ಅದ್ವೈತ ತತ್ವ ಪ್ರತಿಪಾದಕ ಕೃತಿ; 'ಅನುಭವಸಾರ' ತ್ರಿಪದಿಯಲ್ಲಿ 'ಸಕಲ ವೇದಾಂತಸಾರ'ವನ್ನು ತಿಳಿಸುವ ಗ್ರಂಥ. 'ಪರಮಾರ್ಥ ಗೀತೆ" ಲಲಿತರಗಳೆ ಕಂದಗಳಲ್ಲಿ ಮೋಕ್ಷ ಶಾಸ್ತ್ರವನ್ನು ನಿರೂಪಿಸುವ ಕಾವ್ಯ; 'ಪರಮಾರ್ಥ ಪ್ರಕಾಶಿಕೆ' ಯೋಗ ವಿಷಯಕ ಗಂಥ, 'ವಿವೇಕ ಚಿಂತಾಮಣಿ' ಆ ಕಾಲದ ವಿಶ್ವಕೋಶ, ಅರುವತ್ತು ಮೂರರ ತ್ರಿವಿಧಿ ಹೆಸರೇ ಸೂಚಿಸುವಂತೆ ಅರುವತ್ತು ಮೂವರು ಪುರಾತನರ ಸ್ತುತಿರೂಪದ ಕೃತಿ. ಇವೆಲ್ಲ ಕೃತಿಗಳಿಂದ ಇವನು ಜ್ಞಾನೋಪಾಸಕರಿಗೆ ಧ್ರುವತಾರೆಯಾಗಿದ್ದಾನೆ.

ಇವನ ಸಮಕಾಲೀನ ಮುಪ್ಪಿನ ಷಡಕ್ಷರಿಯ 'ಸುಬೋಧ ಸಾರ' ದಲ್ಲಿ ಭಕ್ತಿಯ ಉತ್ಕಟತೆ, ಸಮರ್ಪಣಾಭಾವ, ಸತ್ಯ ಧರ್ಮ ಪ್ರಜ್ಞೆ, ಅನುಭಾವದ ಎತ್ತರಗಳನ್ನೊಳಗೊಂಡ ಹಾಡುಹಬ್ಬಗಳು ಸಂಗ್ರಹಗೊಂಡಿವೆ. ಇವುಗಳಲ್ಲಿ ಇವನ ವ್ಯಕ್ತಿತ್ವದ ವಿಶಾಲತೆ ವ್ಯಕ್ತಗೊಂಡಿದೆ.

ಸರ್ಪಭೂಷಣ ಶಿವಯೋಗಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳು, ಘನಮಠದಾರ್ಯರು, ಮೈಲಾರ ಬಸವಲಿಂಗ ಶರಣರು, ಮತುಕೂರು ನಂಜುಂಡ ಶಿವಯೋಗಿಗಳು, ಸೋಮೇಕಟ್ಟೆ ಕರಿವೃಷಭೇಂದ್ರರು, ಕೂಡಲೂರ ಬಸವಲಿಂಗ ಶರಣರು, ಜನ್ಮದಿಂದ ಮಹಮ್ಮದೀಯರಾದರೂ ಶಿವಯೋಗಿಗಳೆಂದೇ ಹೆಸರಾಗಿರುವ ಶಿಶುನಾಳ ಷರೀಫ ಸಾಹೇಬರು, ಹಾನಗಲ್ ಕುಮಾರಸ್ವಾಮಿಗಳವರು ಶಿವಶರಣರ ಹಾಡುಗಬ್ಬಗಳ ಕೈವಲ್ಯಗಳ ಪರಂಪರೆಯನ್ನು ಮುಂದುವರಿಸಿದ ಮಹಾನುಭಾವರು. ಇವರೆಲ್ಲರ ಹಾಡುಗಳಲ್ಲಿಯೂ ಭಕ್ತಿ, ಜ್ಞಾನ, ವೈರಾಗ್ಯಗಳ ಪ್ರಭೆಯಿದೆ; ಅಂತರಂಗದ ಆವಿಷ್ಕಾರವಿದೆ; ಸುನೀತಿ, ಸುವಿವೇಕಗಳ ಬೋಧೆಯಿದೆ; ಸಕಲರ ಸದ್ಗತಿಯ ಹಂಬಲವಿದೆ. ಅಲ್ಲಲ್ಲಿ ಭಾವಗೀತಾತ್ಮಕತೆ ಸಿದ್ಧಿಸಿದೆ. ಎಲ್ಲೆಡೆಯಲ್ಲಿಯೂ ಸಹಜ ಗೇಯತೆ ಗರಿಗೆದರಿದೆ.

## ರತ್ನಾಕರ

ಜೈನವಾಙ್ಮಯ ಪರಂಪರೆಯ ಕೊನೆಯ ಜ್ಯೋತಿರ್ಧರನೆಂದು, ಕನ್ನಡದ ಕೆಲವೇ ಮಹಾಕವಿಗಳಲ್ಲಿ ಒಬ್ಬನೆಂದು ರತ್ನಾಕರನ ಬಗ್ಗೆ ನಾಲ್ಕು ಸಾಲು ಬರೆದು ಈ ಕನ್ನಡ ಸಾಹಿತ್ಯ ಸಮೀಕ್ಷೆಯನ್ನು ಮುಕ್ತಾಯಗೊಳಿಸಬಹುದಾಗಿದೆ. ಸಾಂಗತ್ಯ ಕವಿಗಳಲ್ಲಿ ಕುಮಾರರಾಮ ಚರಿತೆಯನ್ನು ಬರೆದ ನಂಜುಂಡ ಕವಿ (ಸು. ೧೫೨೫) ಗೂ ಗಣ್ಯಸ್ಥಾನವಿರುವುದಾದರೂ ರತ್ನಾಕರ ವರ್ಣಿ (ಸು. ೧೫೫೭) ಯೇ ಸಾಂಗತ್ಯ ಸಾಹಿತ್ಯದ ಸಾರ್ವಭೌಮ. ಚಂಪೂ ಕಾವ್ಯಕ್ಕೆ ಪಂಪ, ರಗಳೆಗಳಿಗೆ ಹರಿಹರ, ಭಾಮಿನಿ ಷಟ್ಪದಿಗೆ ಕುಮಾರವ್ಯಾಸ, ತ್ರಿಪದಿಗೆ ಸರ್ವಜ್ಞರು ಸೀಮಾಪುರುಷರೆನಿಸಿರುವಂತೆ ಸಾಂಗತ್ಯಕ್ಕೆ ರತ್ನಾಕರನೇ ಸೀಮಾಪುರುಷ. ಇವನು ಮೂರು ಶತಕಗಳನ್ನೂ, ಸಾವಿರಾರು ಹಾಡುಗಳನ್ನೂ ಬರೆದಿದ್ದರೂ ಅವನ ಮೇರುಕೃತಿ – ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟ ಕೃತಿ, ಭರತೇಶ ವೈಭವವಾಗಿದೆ. ಭರತೇಶನನ್ನು ಮೇಲೆತ್ತುವ ಭರದಲ್ಲಿ ಬಾಹುಬಲಿಯನ್ನು ಕೆಳಗಿಳಿಸಿದ್ದಾನೆಂಬ ಆಕ್ಷೇಪವೊಂದನ್ನುಳಿದರೆ ಎಲ್ಲ ವಿಮರ್ಶಕರೂ ಏಕಪ್ರಕಾರವಾಗಿ ಕೈವಾರಿಸಿರುವ ಕೃತಿಯಿದು. ಭರತನಲ್ಲಿ ರಾಗರಸಿಕತೆಯ ಜತೆಗೆ ವೀತರಾಗರಸಿಕತೆಯನ್ನೂ ಆತ್ಮವಿಜ್ಞಾನದ ಜೊತೆಗೆ ಭೇದ ವಿಜ್ಞಾನವನ್ನೂ, ತಾತ್ವಿಕ ಜಿಜ್ಞಾಸೆಯ ಜತೆಗೆ ಸೌಂದರ್ಯ ಪ್ರಜ್ಞೆ, ಬಹುಕಲಾಪರಿಣತಿಗಳನ್ನೂ ಅಳವಡಿಸಿಕೊಂಡಿರುವ ಅಪೂರ್ವ ವ್ಯಕ್ತಿ – ಕೃಷ್ಣನನ್ನು ಸ್ಮರಣೆಗೆ ತಂದೂ ಕೃಷ್ಣನಿಂದ ಭಿನ್ನವೆನಿಸುವ ವ್ಯಕ್ತಿ. ಅವನು ಬಳಿಸಿ ಬ್ರಹ್ಮಚಾರಿ, ಉಂಡು ಉಪವಾಸಿ. ಅವನಿಗೆ ಆಹಾರವುಂಟು. ನೀಹಾರವಿಲ್ಲ. ಅಧಿಕಾರದಲಿ ನೋಡೆ ಆದಿ ತೀರ್ಥಂಕರ ತನೂಜ ಹಾಗೂ ಪ್ರಥಮ ಚಕ್ರವರ್ತಿ; ಚೆಲ್ವಿಕೆಯಲಿ ನೋಡೆ 'ನಿಟ್ಟಿಸಿದರೆ ಮುದುಕಿಗಾದರೂ ಜುಂಮುದಟ್ಟಿಸುವ' ರೂಪ; ವೀರತನದಲಿ ನೋಡೆ 'ಅದ್ರಿಗಳ ಆಣೆಕಲ್ಲಾಡುವ ಅದಟು; ಸಂಸಾರ ವೈಭವದಿ ನೋಡೆ ೯೬ ಸಾವಿರ ಸುಂದರ ಸತಿಯರು! ಯಾವುದರ ಕೊರತೆ ಅವನಿಗೆ? ಹೀಗಿ

ದ್ದೂ ಅಂತರಂಗದಲ್ಲಿ ಅನಾಸಕ್ತ ಯೋಗಿಯವ; 'ಮಂಡೆ ಬೆಳೆದು ಮನ ಬೋಳಾದ ತಪಸಿ; 'ವಿಷಯ ವಿಷವನುಂಡು ದಕ್ಕಿಸಬಲ್ಲ ನಿರ್ವಿಷ ಸಿದ್ಧ!' ಅವನ ಮಾತೃ ಭಕ್ತಿ ಅನುಪಮ; ಸಹಾಸ್ರಾವಧಿ ಸತಿಯರಲ್ಲಿಯೂ ಸಮಾನ ಪ್ರೀತಿ ಆಶ್ಚರ್ಯಕರ; ರಸಿಕತೆ ಅಸದಳವಾದುದು. ತಾನು ಸಹಜವಾಗಿ ಸೋಲಿಸಬಹುದಾಗಿದ್ದ ತಮ್ಮನನ್ನು ಒಳ್ನುಡಿಗಳಿಂದ ಒಳ್ದಾರಿಗೆ ತಂದ ಅವನ ಅನುಜ ವಾತ್ಸಲ್ಯ ಅಪಾರವಾದುದು.

ಇಂಥ ಬೃಹತ್ ವ್ಯಕ್ತಿತ್ವವೊಂದನ್ನು ತನ್ನ ಕಾವ್ಯವಸ್ತುವನ್ನಾಗಿ ಆರಿಸಿಕೊಂಡ ರತ್ನಾಕರ ತನ್ನ ಅಸಾಮಾನ್ಯ ಪ್ರತಿಭೆಯಿಂದ ಅದನ್ನೊಂದು ಅಮೂಲ್ಯ ಕಲಾಕೃತಿಯನ್ನಾಗಿ ರೂಪಿಸಿದ್ದಾನೆ. ಆರಂಭದಲ್ಲಿಯೇ, 'ಗಣನೆಯಿಲ್ಲದ ರಾಜ್ಯ ಸುಖದೊಳೋಲಾಡಿ, ಧಾರಣಿ ಮೆಚ್ಚೆ, ಜಿನಯೋಗಿಯಾಗಿ, ಕ್ಷಣಿಕ ಕರ್ಮವ ಸುಟ್ಟು ಜಿನನಾದ ಭೂಭುಜಾಗ್ರಣಿಯ ವೈಭವವ ಲಾಲಿಸಿರೋ' ಎಂದು ಕರೆಯಿತ್ತೇ, 'ಅಯ್ಯಯ್ಯ ಚೆನ್ನಾದುದನೆ ಕನ್ನಡಿಗರು, ರಯ್ಯಾ ಮಂಚಿದೆಯನೆ ತೆಲುಗಾ, ಅಯ್ಯಯ್ಯ ಎಂಚ ಪೊರ್ಲಾಂಡೆಂದು ತುಳುವರು ಮೈಯುಬ್ಬಿ' ಕೇಳುವಂತೆ ಕನ್ನಡದಲ್ಲಿ ಕೃತಿ ರಚಿಸುವೆನೆಂದು ವಚನವಿತ್ತೇ ಹೊರಟ ರತ್ನಾಕರ ತನ್ನ ಆಶ್ವಾಸನವನ್ನು ಈಡೇರಿಸಿಕೊಟ್ಟಿದ್ದಾನೆ. ಅವನಲ್ಲಿ ಪ್ರೊ. ಎಸ್. ವಿ. ರಂಗಣ್ಣನವರು ಹೇಳಿರುವಂತೆ, 'ಲಲಿತಕಲೆಗಳ ಅಪಾರ ತಿಳುವಳಿಕೆ, ಅಮೋಘ ರಸಜ್ಞತೆ, ತತ್ವಶಾಸ್ತ್ರಗಳಲ್ಲಿ ಖಚಿತ ಜ್ಞಾನ, ತರ್ಕಪಾಂಡಿತ್ಯ, ವಿಶಾಲ ಲೋಕಾನುಭವ, ನಿರರ್ಗಳ ಪದ್ಯರಚನೆ, ಬೇಕು ಬೇಕಾದಾಗ ವರ್ಷಿಸುವ ಮಾಧುರ್ಯ, ಶಬ್ದ ಸಂಪತ್ತು, ವರ್ಣನಾ ಚಮತ್ಕಾರ, ಕಥನ ಚಾತುರ್ಯಗಳೆಲ್ಲವೂ ಬೀಡುಬಿಟ್ಟಿದ್ದುವೆಂದೇ (ಶೈಲಿ–೨, ಪುಟ ೧೪೭) ಅವನಿಂದ ಬೃಹತ್ತು, ಮಹತ್ತು ಎರಡರ ದೃಷ್ಟಿಯಿಂದಲೂ ಅದ್ಭುತವೆನಿಸಿರುವ ಇಂಥ ಮಹಿಮಾಸ್ಪದ ಕೃತಿ ನಿರ್ಮಿತವಾಯಿತೆಂದು ಹೇಳಬಹುದು.

ಇದು ನಡುಗನ್ನಡ ಸಾಹಿತ್ಯದ ಅರುಂಧತೀ ದರ್ಶನ ಮಾತ್ರ. ಎಲ್ಲ ಪರಂಪರೆಗಳೂ ಪರಿಮಳಿಸಿವೆ ಇಲ್ಲಿ; ಎಲ್ಲ ಕಾವ್ಯ ಮಾರ್ಗಗಳೂ ಕಾವ್ಯ ಪ್ರಭೇದಗಳೂ ಮೇರುಕೃತಿಗಳನ್ನು ಕಂಡುಕೊಂಡಿವೆಯಿಲ್ಲಿ, ಕನ್ನಡ ಛಂದಸ್ಸಿನ ಎಲ್ಲ ರೂಪಗಳೂ ಸಿದ್ಧಿಯನ್ನು ಪಡೆದುಕೊಂಡಿವೆಯಿಲ್ಲಿ, ಎಲ್ಲ ಧಾರ್ಮಿಕ ಸಾಮಾಜಿಕ ಆಂದೋಲನಗಳಿಗೂ ಆಡುಂಬೊಲವಾಗಿದೆ ಇದು. ಒಟ್ಟಿನಲ್ಲಿ ಇದು ಜನಯುಗ; ಕನ್ನಡಯುಗ; ವೈವಿಧ್ಯಯುಗ; ಪ್ರಯೋಗ ಪ್ರಧಾನಯುಗ; ಸ್ವಾತಂತ್ರ್ಯಯುಗ ಸಾರ್ಥಕತೆಯ ಯುಗ.

# ಸ್ವಾತಂತ್ರ್ಯ ಪೂರ್ವ ಕನ್ನಡ ಗದ್ಯ ಸಾಹಿತ್ಯ

ಎ. ಬಿ. ವೊಳೆಯೂರ

ಒಂದು ಸಾವಿರ ವರ್ಷಗಳ ಪ್ರಾಚೀನತೆಯನ್ನು ಹೊಂದಿ ವೈವಿಧ್ಯ, ವೈಶಾಲ್ಯಗಳನ್ನು ಮೈಗೂಡಿಸಿಕೊಂಡ ಕನ್ನಡ ಗದ್ಯ ಸಾಹಿತ್ಯದ ಹರಿವು, ಹರವುಗಳು ಬೆರಗನ್ನುಂಟುಮಾಡುವಂತಿವೆ. ಸ್ವಾತಂತ್ರ್ಯಪೂರ್ವದ ಸುಮಾರು ನೂರೈವತ್ತು ವರ್ಷಗಳ ಕನ್ನಡ ಗದ್ಯ ಸಾಹಿತ್ಯದ ವಸ್ತು ಮತ್ತು ಭಾಷೆಗಳ ವಿಶಿಷ್ಟತೆಯನ್ನು ಗುರುತಿಸುವುದು ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ. ಕಾಲ ಹಾಗೂ ಪುಟಗಳ ಮಿತಿಯ ಪರಿಧಿಯೊಳಗಷ್ಟೇ ಸಂಚರಿಸುತ್ತ 'ಅಲ್ಲಲ್ಲಿ ಇಷ್ಟಿಷ್ಟು' ಎನ್ನುವಂತೆ ಉದಾಹರಣೆಗಳನ್ನೊಳಗೊಂಡ ಒಂದು ಸ್ಥೂಲ ವಿವೇಚನೆಯನ್ನು ಈ ಲೇಖನದಲ್ಲಿ ಕಾಣಬಹುದಾಗಿದೆ.

ಪ್ರಾಚೀನತೆಯ ದೃಷ್ಟಿಯಿಂದ ಗಮನಿಸಿದಾಗ ಪದ್ಯದಷ್ಟೇ ಹಳಮೆ ಗದ್ಯಕ್ಕೂ ಇರುವುದು ಗೋಚರಿಸುವುದಾದರೂ, ಗುಣ, ಗಾತ್ರಗಳಲ್ಲಿ ಅದು ಪದ್ಯದಂತೆ ಗಣನೀಯವಾಗಿರಲಿಲ್ಲ. 'ವಡ್ಡಾರಾಧನೆ', 'ಚಾವುಂಡರಾಯ ಪುರಾಣ'ಗಳೆಂಬ ಬೆರಳೆಣಿಕೆಯ ಸಮಗ್ರ ಗದ್ಯ ಕೃತಿಗಳು ನಮಗೆ ದೊರೆಯುತ್ತವೆ. ಚಂಪೂ ಕಾವ್ಯಗಳಲ್ಲಿ ಪಾಂಡಿತ್ಯಪೂರ್ಣ ಗದ್ಯ ಭಾಗಗಳನ್ನೂ, ಪದ್ಯದ ಛಾಯೆಯುಳ್ಳ ವಚನ ಸಾಹಿತ್ಯವನ್ನೂ, ಶಾಸನಗಳಲ್ಲಿ ಉಕ್ತವಾದ ಗದ್ಯಗಳನ್ನೂ ಗಮನಿಸಿ ಗದ್ಯದ ಅಸ್ತಿತ್ವವನ್ನು ನಾವು ಸಾಧಿಸಬಹುದು. ಆದರೆ ಗದ್ಯ ಸಾಹಿತ್ಯವು ಜನತೆಯ ಬದುಕಿನಲ್ಲಿ ಹಾಸುಹೊಕ್ಕಾಗಿ ಬಳಕೆಯಾಗಿರಲಿಲ್ಲವೆಂಬುದನ್ನು ಗಮನಿಸಬೇಕು.

## ಒಡೆಯರ ಕಾಲ

ಅನಂತರ ೧೭ನೆಯ ಶತಮಾನದ ಕೊನೆಯಲ್ಲಿ ಮೈಸೂರು ಅರಸರ ಆಡಳಿತ ಕಾಲದಲ್ಲಿ, ಗದ್ಯದ ವ್ಯಾಪಕವಾದ ಬೆಳವಣಿಗೆಗೆ ನಾಂದಿಯಾಯಿತು. ಮೈಸೂರ ಅರಸರಲ್ಲೊಬ್ಬರಾದ ಚಿಕದೇವರಾಯರ ಕಾಲದಲ್ಲಿ ತಿರುಮಲಾರ್ಯನಿಂದ ರಚಿತವಾದ 'ಚಿಕದೇವರಾಜ ವಂಶಾವಳಿ' ಆ ದೆಸೆಯಲ್ಲಿ ಮೊದಲ ಹೆಜ್ಜೆಯಾಗಿದೆ. ಇದು ಮೈಸೂರು ಮಹಾರಾಜರುಗಳ ಚರಿತ್ರಾರೂಪವಾದ ಗದ್ಯ ಗ್ರಂಥ. ಹಳೆಗನ್ನಡದ ಗಂಡುಶೈಲಿ ಇದರಲ್ಲಿ ಕಂಡುಬರುತ್ತದೆ. ೧೮ನೆಯ ಶತಮಾನದಲ್ಲಿ ಗದ್ಯವನ್ನು ಪುರಾಣ ಮತ್ತು ಶಾಸ್ತ್ರ ಗ್ರಂಥಗಳ ಟೀಕಾನುವಾದಕ್ಕಾಗಿಯೇ ಮುಖ್ಯವಾಗಿ ಬಳಸಲಾಯಿತು. ಮೈಸೂರು ಆಸ್ಥಾನದಲ್ಲಿದ್ದ ವೀರಶೈವ ಮತ್ತು ಶ್ರೀ ವೈಷ್ಣವ ವಿದ್ವಾಂಸರು ವಿಶೇಷವಾಗಿ ಇಂಥ ಟೀಕಾಗದ್ಯವನ್ನು ರಚಿಸಿದರು. ಚಾರಿತ್ರಿಕ ವಿಚಾರಗಳ ನಿರೂಪಣೆಗೆ ಗದ್ಯವು ಚೆನ್ನಾಗಿ ಹೊಂದುವಂತಿತ್ತು. ಗದ್ಯವನ್ನು ಜ್ಯೋತಿಷ, ವೈದ್ಯಕೀಯ, ವ್ಯಾಕರಣ ಮುಂತಾದ ಶಾಸ್ತ್ರ ವಿಷಯಗಳ ನಿರೂಪಣೆಗೆ ಆಯ್ದುಕೊಂಡುದು ಕನ್ನಡ ಗದ್ಯದ ಮುನ್ನಡೆಗೆ ಸಹಕಾರಿಯಾಯಿತು. ಇಂಥ ಗದ್ಯ ಕೃತಿಗಳಲ್ಲಿ ಆ ಕಾಲದಲ್ಲಿ ಬಳಕೆಯಲ್ಲಿದ್ದ ಅನೇಕ ಹಿಂದೂಸ್ಥಾನಿ ಪದಗಳು ಕಾಣಿಸಿಕೊಂಡಿವೆ. ಅಲ್ಲದೆ, ಆಡಳಿತ ಭಾಷೆಯಾಗಿ ಕನ್ನಡವೇ ಬಳಕೆಯಾಗುತ್ತಿದ್ದುದರಿಂದಲೂ ರಾಜರ ನಿರೂಪ ಮುಂತಾದುವುಗಳಲ್ಲಿ ಗದ್ಯದ ಬಳಕೆ, ಬೆಳವಣಿಗೆಗಳಿಗೆ ಅವಕಾಶವೊದಗಿತು.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ರಚಿತವಾದ 'ಕೃಷ್ಣರಾಜ ವಾಣೀ ವಿಲಾಸ' ಎಂಬ ಮಹಾಭಾರತದ ಕನ್ನಡ ಟೀಕೆ ೧೯ನೆಯ ಶತಮಾನದ ಉತ್ಕೃಷ್ಟ ಗದ್ಯ ಗ್ರಂಥಗಳಲ್ಲಿ ಒಂದಾಗಿದೆ. ಹಾಗೆಯೇ ಪಂಚತಂತ್ರ, ಬತ್ತೀಸ ಪುತ್ತಳಿ, ಬೇತಾಳ ಪಂಚವಿಂಶತಿ ಕಥಾನಕಗಳು ಆ ಕಾಲದ ಉತ್ತಮ ಗದ್ಯಕೃತಿಗಳಾಗಿವೆ. 'ಸೌಗಂಧಿಕಾ ಪರಿಣಯ' (೧೮೨೧) ಬಹುಮಟ್ಟಿಗೆ ಸ್ವತಂತ್ರವಾದ ಕಥಾರಚನೆಯನ್ನೊಳಗೊಂಡಿದೆ" ದೇವಚಂದ್ರನ 'ರಾಜಾವಳಿ ಕಥೆ', ಯಾದವನ 'ಕಲಾವತಿ ಪರಿಣಯ' (೧೮೧೫) ಇವುಗಳೂ ಸ್ಮರಣೀಯ ಗದ್ಯ ಕೃತಿಗಳಾಗಿವೆ. ಕಲಾವತಿ ಪರಿಣಯ, ಸೌಗಂಧಿಕಾ ಪರಿಣಯಗಳು ಅದ್ಭುತ, ರಮ್ಯ ಕಥೆಗಳು. ಕಲಾವತಿ ಪರಿಣಯದಲ್ಲಿ ಒಳ್ಳೆಯ ಕಥಾನಕವಿದೆ; ಪಾತ್ರ ನಿರೂಪಣೆಯಲ್ಲಿ ಸಹಜತೆ ಇದೆ. ಸೌಗಂಧಿಕಾ ಪರಿಣಯದಲ್ಲಿ ಭಾಷೆ ಹೊಸಗನ್ನಡಕ್ಕೆ ಹತ್ತಿರವಾಗಿದೆ. ಹಿಂದೆಂದೂ ಕಂಡು ಬಾರದ ಅನೇಕ ಶಾಸ್ತ್ರ, ಪುರಾಣ ಮತ್ತು ಲೌಕಿಕ ಕಾವ್ಯಗಳು ಆ ಕಾಲದಲ್ಲಿ ಒಡಮೂಡಿದುವು. ಸಾವಿರಾರು ಪುಟಗಳ ಸರಸ ಹಾಗೂ ಸುಲಭವಾದ ಗದ್ಯಸಾಹಿತ್ಯ ಹೊಸಗನ್ನಡಕ್ಕೆ ಒದಗಿಬಂದುದು ಆ ಕಾಲದ ಗಮನೀಯ ಕೊಡುಗೆಯಾಗಿದೆ.

ಮುಮ್ಮಡಿ ಕೃಷ್ಣರಾಜನ ಆಸ್ಥಾನ ಕವಿಯಾಗಿದ್ದ ಕೆಂಪುನಾರಾಯಣನ 'ಮುದ್ರಾಮಂಜೂಷ' (೧೮೨೩) ಗಮನಾರ್ಹ ಗದ್ಯ ಗ್ರಂಥವಾಗಿದೆ. ಚಾಣಕ್ಯ ಚಂದ್ರಗುಪ್ತರಿಗೆ ಸಂಬಂಧಿಸಿದ ಐತಿಹಾಸಿಕ ಕಥೆಯನ್ನು ಮನಾಕರ್ಷಕವಾದ ರಮ್ಯ ಕಾದಂಬರಿಯಂತೆ ರಚಿಸಿ, ಹೊಸಗನ್ನಡ ಸಾಹಿತ್ಯದ ವಸಂತದ ತಂಗಾಳಿ ಬೀಸುವಂತೆ ಮಾಡಿದ್ದಾನೆ. 'ಮುದ್ರಾಮಂಜೂಷ'ಕ್ಕೆ ಮೂಲ ವಿಶಾಖದತ್ತನ 'ಮುದ್ರಾರಾಕ್ಷಸ' ಸಂಸ್ಕೃತ ನಾಟಕವಾಗಿದೆ. ಕೆಂಪುನಾರಾಯಣ ಕನ್ನಡ, ಸಂಸ್ಕೃತಗಳಲ್ಲಿ ವಿದ್ವತ್ತುಳ್ಳ ಕವಿ. ಕೃತಿಯ ಉದ್ದಕ್ಕೂ ಅಲ್ಲಲ್ಲಿ ಸಂಸ್ಕೃತ ಪದಗಳನ್ನು ಧಾರಾಳವಾಗಿ ಬಳಸಿದ್ದಾನೆ. ಸಂಸ್ಕೃತ, ಕನ್ನಡ ಪದಗಳಿಗೆ ಹಳೆಗನ್ನಡದ ವಿಭಕ್ತಿ

ಪ್ರತ್ಯಯಗಳನ್ನು ಸೇರಿಸಿ ಪ್ರಯೋಗಿಸಿದ್ದಾನೆ. ಹೊಸಗನ್ನಡ ಸ್ವರೂಪದ ಸಣ್ಣ ವಾಕ್ಯಗಳನ್ನು ಉಪಯೋಗಿಸಿಕೊಂಡಿದ್ದಾನೆ. ಆತನ ಸಂಸ್ಕೃತ ಪದಪ್ರಯೋಗವು ಭಾರವಾಗದೆ ಕನ್ನಡದೊಡನೆ ಹದವಾಗಿ ಹೊಂದಿಕೊಂಡಿದೆ. ಉದಾಹರಣೆಯಾಗಿ ಪರ್ವತರಾಜನು ವಿಷಕನ್ಯೆಯನ್ನು ಕಂಡ ಸಂದರ್ಭವನ್ನು ಆತ ವಿವರಿಸಿದ ಬಗೆಯನ್ನು ಪರಿಶೀಲಿಸಬಹುದು. ರಾಜನ ಕಂಚುಕಿಗೆ ವಿಷಕನ್ಯೆ ಕಂಡ ರೀತಿ ಇದು:

ಸಕಲ ವಸ್ತುಗಳ ಲಾವಣ್ಯಾಂಶಗಳನ್ನು ತೆಗೆದು ಬ್ರಹ್ಮನಿಂದ ನಿರ್ಮಿತಳಾದ ತಿಲೋತ್ತಮೆಯೋ ಎಂಬಂತೆ ಅತಿ ಮೋಹನಾಂಗಿಯಾಗಿ ಮಂದ ಮಾರುತದಿಂ ಚಲಿಸುವ ಕನ್ನೈದಿಲೆಯ ದಳಗಳಂತಿರುವ ನಿಜ ನೇತ್ರಕಾಂತಿಯಿಂ ರಸಿಕಜನ ಚಿತ್ತಮಂ ಮೋಹಗೊಳಿಸುತ್ತಾ ಚಂದ್ರಗಾವಿಯ ವಸ್ತ್ರದಿಂ ಮುಸುಕಿಟ್ಟು ಕುಚಭಾರದಿಂ ಬಳುಕುವ ಬಡನಡುವಿನಲ್ಲಿ ವಾಮಹಸ್ತವನಿಕ್ಕಿ ಬೆಡಗಂ ಬೀರುತ್ತಿರುವ ಕನ್ಯಾರತ್ನ'.

ಪರ್ವತ ರಾಜನಿಗೆ ಆಕೆ ಈ ರೀತಿ ಕಾಣಿಸಿದಳು:

'ಈ ಲಾವಣ್ಯ, ಈ ರೂಪು, ಈ ಸೌಂದರ್ಯ, ಈ ಬೆಡಗು ಇವಳಿಗಿರುವುದನ್ನು ಎಲ್ಲಿಯೂ ಕಂಡುದಿಲ್ಲ. ಇವಳು ಬಹು ಪುಣ್ಯಶಾಲಿಗೆ ದೊರೆಯತಕ್ಕವಳು. ಇವಳ ಅಂಗ ಸಂಗವಾದ ಪುರುಷನು ಬಹು ಧನ್ಯನು. ಇವಳ ನೋಟ ಬೇಟಗಳು ಋಷಿಗಳ ಮನಸ್ಸನ್ನಾದರೂ ಅಪಹರಿಸದಿರಲಾರವು. ಇವಳು ಕೇಳಿದರೆ ನನ್ನ ಪ್ರಾಣವನ್ನಾದರೂ ಕೊಡುವೆನು'.

ಕನ್ನಡ ನುಡಿಗಟ್ಟಿನಲ್ಲಿ, ನೇರವಾಗಿ ಜನಜೀವನದಿಂದ ಬಂದ ಬಿಡಿ ಹೋಲಿಕೆಗಳನ್ನು, ಗಾದೆಗಳನ್ನು ಆತ ಹೆಣೆದಿದ್ದಾನೆ. ಚೆತ್ತಲು ಕುದುರೆ, ನಾಡಾಡಿ ಹೆಣ್ಣು, ಸಾಗ ಕಳುಹಿಸು, ಪೋಲು ಮಾಡು, ಫೌಜು, ಸುಖದ ಸನ್ನಿ, ಬಿಡಿಮಾತು, ಲಕ್ಪೋಟು, ಕಾಗದ ಮುಂತಾದ ಪ್ರಯೋಗಗಳಿಂದ ಭಾಷಾ ಮಡಿವಂತರನ್ನು ಅಚ್ಚರಿಗೊಳಿಸಿದ್ದಾನೆ. ತಾನು ಬಳಸಿದ ಕನ್ನಡ ನುಡಿಗೆ ಕಸುವನ್ನೂ ಓಜಸ್ಸನ್ನೂ ತುಂಬುವುದರಲ್ಲಿ ಅವನು ಧೀರತೆಯಿಂದ ಮುನ್ನಡೆದಿದ್ದಾನೆ. ಆಡುಮಾತಿನ ಹೊಸಗನ್ನಡದಲ್ಲಿ ಸಂಸ್ಕಾರಗೊಂಡಂಥ ಸಂಭಾಷಣೆಗಳನ್ನು ನಿರ್ವಹಿಸಿದ್ದಾನೆ. ಅಂಥ ಸಂದರ್ಭಗಳಲ್ಲಿ ವ್ಯಾಕರಣಕ್ಕೆ ವಿಶೇಷ ಗಮನವೀಯದೆ ಕೂತುಕೊಂಡು, ಹೊಕ್ಕಮನೆ, ದುಥುಂ ಪ್ರವೇಶ, ಕಟ್ಟು ಕರಣಿಕ, ಎಡವಟ್ಟು, ಹೊಳಲು ಕೊಡು– ಮುಂತಾದ ಪದ ಪ್ರಯೋಗಗಳನ್ನು ಧಾರಾಳ ಬಳಸಿದ್ದಾನೆ. 'ಮುದ್ರಾ ಮಂಜೂಷ'ದಲ್ಲಿಯ ಕಥನ ರೀತಿ ಕಾದಂಬರಿಗೆ ಹೆಚ್ಚು ಸಮೀಪವಾಗಿದೆ. ಇದರಲ್ಲಿ ಹಳೆಗನ್ನಡ ಭಾಷೆಯ ಬಿಗಿ ಕ್ರಮೇಣ ಸಡಿಲಾಗುತ್ತ ಸರಳತೆ ಮತ್ತು ಹೃದಯಂಗಮತೆಯ ಕಡೆಗೆ ತಿರುಗುವುದನ್ನು ಮೊತ್ತಮೊದಲಿಗೆ ನಾವು ಗಮನಿಸಬಹುದು.

### ಕ್ರೈಸ್ತ ಮಿಶನರಿಗಳು

ಮುದ್ರಣ ಯಂತ್ರಗಳ ಬಳಕೆ, ಆ ಮೂಲಕವಾಗಿ ಹಳೆಯ ಗ್ರಂಥಗಳ ಪ್ರಕಟಣೆ ಹಾಗೂ ವೃತ್ತಪತ್ರಿಕೆಗಳ ಪ್ರಸರಣ ಕಾರ್ಯದಲ್ಲಿ ಕ್ರೈಸ್ತ ಮಿಶನರಿಗಳ ಪಾತ್ರ ಮಹತ್ವದ್ದಾಗಿದೆ. ಶಿಕ್ಷಣ, ಧರ್ಮಪ್ರಚಾರ ಇತ್ಯಾದಿ ಉದ್ದೇಶಗಳಿಂದ ಪ್ರೇರಿತರಾದ ಇವರ ದುಡಿಮೆಯಿಂದ ಪಠ್ಯ ಪುಸ್ತಕಗಳೂ, ಇತಿಹಾಸಕ್ಕೆ ಸಂಬಂಧಿಸಿದ ಕೃತಿಗಳೂ, ಬೈಬಲಿನ ಅನುವಾದವೇ ಮೊದಲಾದ ಧಾರ್ಮಿಕ, ಶಾಸ್ತ್ರ ಗ್ರಂಥಗಳೂ ಕನ್ನಡಕ್ಕೆ ದೊರಕಿದವು. ಬಳ್ಳಾರಿಯಲ್ಲಿ ಜಾನ್ ಹ್ಯಾಂಡ್ಸ್ ಎಂಬಾತನು ೧೮೨೮ರಲ್ಲಿ ಕನ್ನಡ ಮುದ್ರಣ ಯಂತ್ರವನ್ನು ಸ್ಥಾಪಿಸಿದನು. ವಿಲಿಯಂ ರೀವ್ ವಿರಚಿತ ಇಂಗ್ಲಿಷ್–ಕನ್ನಡ ಶಬ್ದಕೋಶ (೧೮೨೪) ಹೊಸಗನ್ನಡದ ಮೊದಲ ಅರ್ಥಕೋಶ, ಕ್ರೌನ್ ¼ ಆಕಾರದ ಕಲ್ಲಚ್ಚಿನಲ್ಲಿ ೩,೦೦೦ ಪುಟಗಳಿಂದ ಕೂಡಿದೆ. ೧೮೭೦ರಲ್ಲಿ ಹೊರಬಂದ, ಬೈಬಲಿನ "ಹೊಸ ಒಡಂಬಡಿಕೆ" ಸಂಪೂರ್ಣವಾಗಿ ಕನ್ನಡದಲ್ಲಿರುವ ಮೊದಲ ಮುದ್ರಿತ ಗ್ರಂಥವಾಗಿದೆ. ಜಾನ್ ಗ್ಯಾರೆಟ್ ಎಂಬಾತನು ಮೈಸೂರು ಸಂಸ್ಥಾನದ ಶಿಕ್ಷಣಾಧಿಕಾರಿಯಾಗಿದ್ದಾಗ ತಾನು ಇಂಗ್ಲಿಷ್ ಭಾಷೆಯಲ್ಲಿ ಬರೆದು, ಎಂ. ಡಿ. ಸಿಂಗರಾಚಾರ್ಯರು ಭಾಷಾಂತರಿಸಿದ "ಪಂಚತಂತ್ರ" (೧೮೬೫) ಎಂಬ ತಿಳಿಯಾದ ಗ್ರಂಥವನ್ನೂ, ಬಿ. ರಾಮರಾವ್ ಬರೆದ ರೇಖಾಗಣಿತ (೧೮೬೬) ವನ್ನೂ ಪ್ರಕಟಿಸಿದನು. ಪತ್ರಿಕಾ ವ್ಯವಸಾಯಿಯಾಗಿ, ಗ್ರಂಥ ಸಂಪಾದಕನಾಗಿ, ಧಾರ್ಮಿಕ ವಿಚಾರದ ಕೃತಿಕರ್ತನಾಗಿ ಹೊಸಗನ್ನಡಕ್ಕೆ ಹೊಳಪನ್ನು ನೀಡಿದವನು ಹರ್ಮನ್ ಮೊಗ್ಲಿಂಗ್. ಜನತೆಯ ಆಡುನುಡಿಯನ್ನಾಧರಿಸಿ ಸುಮಾರು ೩,೦೦೦ ಪಡೆನುಡಿಗಳನ್ನು ಸಂಗ್ರಹಿಸಿ (೧೮೪೭ರಲ್ಲಿ) ಪ್ರಕಟಿಸಿದ ಆತನ ಕಾರ್ಯವು ಅಪೂರ್ವವಾಗಿದೆ. ವ್ಯಾಕರಣ, ಛಂದಸ್ಸುಗಳ, ಹಳೆಗನ್ನಡ ಕೃತಿಗಳ ಸಂಪಾದನೆ, ಕನ್ನಡ–ಇಂಗ್ಲಿಷ್ ನಿಘಂಟು ರಚನೆ ಈ ಕಾರ್ಯಗಳಿಂದ ಫರ್ಡಿನಾಂಡ ಕಿಟ್ಟೆಲ್ ಮಹಾಶಯ ಕನ್ನಡ ನಾಡಿನಲ್ಲಿ ಚಿರಸ್ಥಾಯಿಯಾಗಿ ಹೆಸರಾಗಿದ್ದಾನೆ. ಹರ್ಮನ್ ಕೌಂಡಿಣ್ಯ, ಪಾಲ್ ಕೌಶಿಕ ಇವರು ಕನ್ನಡದ ಕೈಂಕರ್ಯವನ್ನು ಶ್ರದ್ಧೆಯಿಂದ ಮಾಡಿದರು. ಪದಮಂಜಿಯ "ಯಮುನಾ ಬಾಯಿಯ ಸಂಚಾರ" (೧೮೯೫), ಬೇರೊಬ್ಬನ ಕೃತಿಯಾದ "ದಾಂಪತ್ಯ ವಿಚಾರ" (೧೮೯೫)ಗಳನ್ನು ಸೊಲೊಮನ್ ಭಾಸ್ಕರ ಎಂಬಾತ ಅನುವಾದಿಸಿದ. ಗಣೇಶಪಾಲ್‌ನ "ಜಹಂಗೀರ ಚರಿತ್ರ", ಟಿ. ಜಿ. ಮಾಬೆನ್‌ನ "ವ್ಯವಹಾರ ಬೋಧಿನಿ" ಪ್ರಕಟವಾದುವು. ತಿಗ್ಲರ್ ಎಂಬಾತನು ಶಾಲಾ ಅಧ್ಯಾಪಕನಾಗಿದ್ದು ಕನ್ನಡ ಭಾಷೆಯಲ್ಲಿ ಗಣಿತ, ಭೂಗೋಳ, ಸಸ್ಯದ ಶಾಸ್ತ್ರಗಳ ಕುರಿತು ಪಠ್ಯ ಪುಸ್ತಕಗಳನ್ನು ರಚಿಸಿದನು. ಬ್ರಿಟಿಷ್ ಅಧಿಕಾರಿಯಾದ ಮೆಕಂಝಿಯು ದೇವಚಂದ್ರನ "ರಾಜಾವಳಿ ಕಥೆ"ಯ ರಚನೆಗೆ ಆರ್ಥಿಕ ನೆರವನ್ನಿತ್ತು ಪ್ರೋತ್ಸಾಹಿಸಿದ್ದಲ್ಲದೆ ಬುಕನನ್ ಎಂಬಾತನೊಡನೆ ಕರ್ನಾಟಕದ ಅರಸು ಮನೆತನಗಳ ಐತಿಹಾಸಿಕ ಶಾಸನ, ಕಡತಗಳನ್ನು ಪರಿಶೀಲಿಸಿ ಕರ್ನಾಟಕ ಇತಿಹಾಸದ ಸಾಮಗ್ರಿಗಳನ್ನು ಸಂಗ್ರಹಿಸಿದನು. ಮಾರ್ಕ್ ವಿಲ್ಕ್ಸ್ ಮೈಸೂರು ಇತಿಹಾಸವನ್ನು (೧೮೦೫–೧೮೧೮ ಅವಧಿಯಲ್ಲಿ) ರಚಿಸಿದನು. ಮೈಸೂರು ಒಡೆಯರ ಮನೆತನದ ಜೊತೆಗೆ ಕದಂಬ, ಚಾಲುಕ್ಯ, ರಾಷ್ಟ್ರಕೂಟ ಮುಂತಾದ ರಾಜಮನೆತನಗಳ ಇತಿಹಾಸವೂ ಬಂದಿದೆ. ಇದರಲ್ಲಿ ಸಾಂಸ್ಕೃತಿಕ ಮತ್ತು ಸಾಹಿತ್ಯಕ ವಿಚಾರಗಳೂ ಇವೆ. ವಾಲ್ಟರ್ ಎಲಿಯಟ್‌ನು ಶಿಕ್ಷಣ, ಪಠ್ಯ ಪುಸ್ತಕಗಳ ರಚನೆ, ಶಾಸನಗಳ ಸಂಗ್ರಹ, ಇತಿಹಾಸ ಲೇಖನ, ಕನ್ನಡ ಕೃತಿಗಳ ಸಂಪಾದನೆಯಲ್ಲಿ ದುಡಿದ ಮಹನೀಯನು. ಶಾಸನಗಳ ಸಂಶೋಧನೆಯ ಮೂಲಕ ಇತಿಹಾಸ ಸಂಶೋಧನೆಗೆ ದಾರಿ ತೋರಿದವರು ಬಿ. ಲೂಯಿ ರೈಸ್ ಹಾಗೂ ಜೆ. ಎಫ್. ಫ್ಲೀಟ್.

### ಪತ್ರಿಕೋದ್ಯಮ

ಗದ್ಯದ ಬಳಕೆ, ಬೆಳವಣಿಗೆಗಳನ್ನು ಪತ್ರಿಕೆಯ ಮೂಲಕ ಹೇಗೆ ಸಾಧಿಸಲಾಯಿತೆಂದು ಗಮನಿಸುವುದಕ್ಕಾಗಿ ಒಂದೆರಡು ಉದಾಹರಣೆಗಳನ್ನಿಲ್ಲಿ ಒದಗಿಸಲಾಗಿದೆ. "ಮಂಗಳೂರ ಸಮಾಚಾರ" ೧೮೪೩ರಲ್ಲಿ ಪ್ರಕಟವಾದ ಲೇಖನದ ತುಣುಕೊಂದು ಹೀಗಿದೆ:

"ಈ ದೇಶವೆಂಬ ಮನೆಯಲ್ಲಿ ವಾಸಿಸುವ ಜನರು ಇಂದಿನ ಪರಿಯಂತದ ಹೊರಗಿನ ದೇಶಸ್ಥರ ಸಮಾಚಾರ ಮಾರ್ಗ

ಮರ್ಯಾದೆಗಳನ್ನು ತಿಳಿಯದೇ ಕಿಟಿಕಿಯಿಲ್ಲದ ಬಿಡಾರದಲ್ಲಿ ವುಳ್ಳವರ ಹಾಗೆ ಇರುತ್ತಾ ಬಂದರು. ಆದ ಕಾರಣ ಹೊರಗಿನ ಕಾರ್ಯಗಳನ್ನು ಕಾಣುವ ಹಾಗೆಯೂ ಸ್ವಲ್ಪ ಬೆಳಕು ಬೀರುವ ಹಾಗೆಯೂ ನಾಲ್ಕೂ ದಿಕ್ಕಿಗೆ ಕಿಟಿಕಿಗಳನ್ನು ಮಾಡುವ ಈ ಸಮಾಚಾರ ಕಾಗದಗಳನ್ನು ಪಕ್ಷಕ್ಕೆ ಒಂದು ಸಾರಿ ಸಿದ್ಧ ಮಾಡಿ ಓದಬೇಕೆಂದಿರುವವರೆಲ್ಲರಿಗೆ ಕೊಟ್ಟರೆ ಕಿಟಿಕಿಗಳನ್ನು ಮಾಡಿದ ಹಾಗಾಗಿರುವುದು."

ಬೆಳಗಾವಿಯಿಂದ ೧೮೪೯ರಲ್ಲಿ "ಸುಬುದ್ಧಿ ಪ್ರಕಾಶ" ಎಂಬ ಪತ್ರಿಕೆ ಕಲ್ಲಚ್ಚಿನಲ್ಲಿ ಪ್ರಕಟವಾಯಿತು. ಇದರಲ್ಲಿ ಅಯೋಧ್ಯೆ, ಕಬ್ಬಿಣದ ಮಾರ್ಗ (ರೈಲ್ವೆ), ಮುಲ್ಕೀಖಾತೆಯ ವೃತ್ತಾಂತ ಮತ್ತು ಬಿಡಿ ವಿಷಯಗಳಿವೆ. ಇದರ ವಿಷಯ, ಶೈಲಿಯ ದೃಷ್ಟಿಯಿಂದ ಈ ಕೆಳಗಿನ ವಾಕ್ಯಗಳನ್ನು ಗಮನಿಸಬೇಕು:

ಬಂಗಾಲದೊಳಗೆ ನಡೆದ ಸಾಂಥಲ ಜನರ ಬಂಡು ಯಿನ್ನು ಪರಿಯಂತಕ್ಕೆ ಹಾಂಗೆ ನಡೆದಿದೆ. ಮತ್ತು ಯೀ ಬಂಡು ಉತ್ಪನ್ನವಾದ ಯಾವ ಕಾರಣವಂನು ಮೊದಲು ಛಾಪಿಸೋಣದರಲ್ಲಿ ಬಂದಿತೋ ಅದು ಮೃಷಾ ಅದೇ ಹೀಂಗೆ ಬರುತ್ತದೆ...."

ಕನ್ನಡದಲ್ಲಿ ಪತ್ರಿಕೋದ್ಯಮದ ಹುಟ್ಟು, ಬೆಳವಣಿಗೆಗಳನ್ನು ಗಮನಿಸಿದಾಗ ಕನ್ನಡ ಗದ್ಯದ ಸ್ಥಿತಿ–ಗತಿಗಳೂ ಜೊತೆಯಲ್ಲಿಯೇ ಮನವರಿಕೆಯಾಗುತ್ತದೆ. "ಕನ್ನಡದ ಗದ್ಯ ಶೈಲಿಗೆ ಗರಿ ಮೂಡಿದುದೂ ರೆಕ್ಕೆ ಬಲಿತುದೂ ಪತ್ರಿಕೆಗಳಿಂದಲೇ ಎಂಬ ಅಭಿಪ್ರಾಯವನ್ನು ಕವಿ, ಕಾದಂಬರಿಕಾರ ಹಾಗೂ ಖ್ಯಾತ ಪತ್ರಿಕೋದ್ಯಮಿಯೂಗಿದ್ದ ಕಡೆಂಗೋಡ್ಲು ಶಂಕರ ಭಟ್ಟರು ವ್ಯಕ್ತಪಡಿಸಿರುವುದು ಸ್ಮರಣೀಯವಾಗಿದೆ. ಜನತೆಯ ಸಾಮಾಜಿಕ, ಸಾಹಿತ್ಯಕ, ಧಾರ್ಮಿಕ, ರಾಜಕೀಯ, ಬದುಕಿನ ಆಗುಹೋಗುಗಳಿಗೆ ಪತ್ರಿಕೆಗಳು ಮೊದಲಿನಿಂದಲೇ ಸ್ಪಂದಿಸುತ್ತ ಬಂದಿವೆ. ಕೆಲವು ಸಂಪಾದಕೀಯ–ಅಗ್ರಲೇಖಗಳು ಉಗ್ರರೂಪದಲ್ಲಿ ವ್ಯಕ್ತವಾಗುತ್ತ ರಾಜಕೀಯದ ಕೆಡುಕಿನ ವಿರುದ್ಧ ಜನತೆ ಸಿಡಿದೇಳುವುದಕ್ಕೆ ಕಾರಣವಾದುವು. ಆಲೂರ ವೆಂಕಟರಾಯರು, ಮುದವೀಡು ಕೃಷ್ಣರಾಯರು, ಮೊಹರೆ ಹಣಮಂತರಾಯರು, ರಂ. ರಾ. ದಿವಾಕರ ಮುಂತಾದವರು ಈ ಬಗೆಯ ಬರಹಗಳಿಂದ ಪ್ರಸಿದ್ಧರಾಗಿದ್ದಾರೆ.

ಈಗಾಗಲೇ ಪ್ರಸ್ತಾವಿಸಲಾದ 'ಕನ್ನಡ ಸಮಾಚಾರ' ಪತ್ರಿಕೆ, "ಕನ್ನಡ ಸುವಾರ್ತಿಕ", "ಕರ್ನಾಟಕ ಪತ್ರಿಕೆ" ಮತ್ತು 'ಬಾಲಪತ್ರ' ಎಂದು ಮೂರು ಬಾರಿ ಹೆಸರು ಬದಲಾಯಿಕೊಂಡು ಮುನ್ನಡೆಯಿತು. ಮುಂದಕ್ಕೆ ಇದೇ 'ಕ್ರೈಸ್ತ ಸಭಾಪತ್ರ' ಎಂಬ ಹೆಸರಿನಲ್ಲಿ ೧೮೯೫ರ ತನಕ ನಡೆಯಿತು. ಈ ಕಾಲದಲ್ಲಿ ಹಳೆಯ ಮೈಸೂರಿನಲ್ಲಿ "ಮೈಸೂರು ವೃತ್ತಾಂತ ಬೋಧಿನಿ" (೧೮೫೯) "ಕರ್ನಾಟಕ ಪ್ರವೇಶಿಕಾ" (೧೮೬೫) ಮತ್ತು "ದೇಶಾಭಿಮಾನಿ" ಎಂಬ ಮಹತ್ತ್ವದ ಪತ್ರಿಕೆಗಳು ನಡೆದು ನಿಂತುವು. ಕನ್ನಡ ಪತ್ರಿಕೋದ್ಯಮದ ಪಿತಾಮಹರೆನಿಸಿದ ಡಿ. ಎಂ. ಕೃಷ್ಣಯ್ಯನವರ "ವೃತ್ತಾಂತ ಚಿಂತಾಮಣಿ" ವಾರ ಪತ್ರಿಕೆಯೂ ಇದೇ ಕಾಲದ್ದಾಗಿದೆ. ಬೆಂಗಳೂರಿನಿಂದ "ಕಾವ್ಯ ಕಲ್ಪದ್ರುಮಮ್" (೧೮೯೨), "ವಿದ್ಯಾನಂದಿನಿ" (೧೮೯೨), ಮೈಸೂರಿನಿಂದ "ವಿದ್ಯಾದಾಯಿನಿ" (೧೯೦೫), ಆರ್ಯಧರ್ಮೋಜ್ಜೀವಿನಿ" (೧೯೦೫) ಹಾಗೂ "ಕರ್ನಾಟಕ ಗ್ರಂಥಮಾಲೆ" (೧೮೯೩) ಎಂಬ ಪತ್ರಿಕೆಗಳು ಪ್ರಕಟವಾಗುತ್ತಿದ್ದುವು. ದಕ್ಷಿಣ ಕನ್ನಡದಿಂದ "ಸುಬೋಧಿನಿ" (೧೮೭೧), "ಸುದರ್ಶನ" (೧೮೯೪), "ಸತ್ಯದೀಪಿಕೆ" (೧೮೯೬), "ಸುವಾಸಿನಿ" (೧೯೦೬), "ಶ್ರೀಕೃಷ್ಣ ಸೂಕ್ತಿ" (೧೯೦೫), "ಕನ್ನಡ ಕೋಗಿಲೆ" (೧೯೧೬), "ವಸಂತ" (೧೯೨೫) ರಾಷ್ಟ್ರಬಂಧು (೧೯೨೮) ಮುಂತಾದ ಪತ್ರಿಕೆಗಳು ಪ್ರಕಟವಾಗುತ್ತಿದ್ದುವು. ಉತ್ತರ ಕರ್ನಾಟಕದಲ್ಲಿ ಬೆಳಗಾವಿಯಿಂದ "ಶಾಲಾ ಪತ್ರಿಕೆ" (೧೮೬೫) ವಿಜಾಪುರ ಜಿಲ್ಲೆಯಿಂದ "ಹಿತೇಚ್ಛು" (೧೮೯೧), "ಕರ್ನಾಟಕ ವೈಭವ" (೧೮೯೨), ಧಾರವಾಡದಿಂದ "ರಾಜಹಂಸ" (೧೮೯೧), "ಕರ್ನಾಟಕ ವೃತ್ತ" (೧೮೮೨), "ಕರ್ನಾಟಕ ಪತ್ರ" (೧೮೮೩), "ವಾಗ್ಭೂಷಣ" (೧೮೯೬) ಎಂಬ ಪತ್ರಿಕೆಗಳು ಹೊರಡುತ್ತಿದ್ದುವು. ಕೆರ್ಕಿ ವೆಂಕಟರಮಣ ಶಾಸ್ತ್ರಿಯವರ "ಹವ್ಯಕ ಸುಬೋಧ" (೧೮೮೫–೧೮೯೯)ದಲ್ಲಿ ವಾರ್ತಾ ವ್ಯಾಪ್ತಿಯೂ ಕಾಣಿಸಿಕೊಂಡಿದೆ.

ಮೈಸೂರಿನಿಂದ "ಆರ್ಯ ಮಹಿಳಾ", ಶಿವಮೊಗ್ಗದಿಂದ "ಭಾಗ್ಯೋದಯ" (೧೯೧೪), ನಂಜನಗೂಡಿನಿಂದ "ಕರ್ನಾಟಕ ನಂದಿನಿ" (೧೯೧೬) ಪತ್ರಿಕೆಗಳೂ, ಆರ್. ಕಲ್ಯಾಣಮ್ಮನವರ "ಸರಸ್ವತಿ" ಪತ್ರಿಕೆಯೂ ಮಹಿಳೆಯರಿಗಾಗಿ ಮೀಸಲಾಗಿದ್ದುವು. ರಾಜಕೀಯ ಜಾಗೃತಿಯೊಂದಿಗೆ ಮಹಿಳಾ ಸಾಹಿತ್ಯವು ರೂಪುಗೊಂಡುದು ಈ ಕಾಲದ ವೈಶಿಷ್ಟ್ಯವಾಗಿದೆ. ಈ ಕಾಲದಲ್ಲಿ ಸಾಹಿತ್ಯ, ಸಂಸ್ಕೃತಿಯ ವಿಮರ್ಶೆ ತಲೆದೋರಿತು. ಇಂದಿಗೂ ಆ ದಿಸೆಯಲ್ಲಿ ಕಾರ್ಯವೆಸಗುತ್ತಿರುವ "ಪ್ರಬುದ್ಧ ಕರ್ನಾಟಕ", ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಗಳ ಪ್ರಕಟಣೆ ಆ ಕಾಲದಲ್ಲಿ ಆರಂಭವಾದುವು.

ಕುಮುಟಾದಿಂದ ಪ್ರಕಟವಾದ "ಕಾನಡಾ ವೃತ್ತ" (೧೯೧೬) ಉ. ಕ. ಜಿಲ್ಲೆಯಲ್ಲಿ ೧೯೩೦ರಲ್ಲಾದ ಅಸಹಕಾರ ಆಂದೋಲನದ ಚಿತ್ರವನ್ನು ಯಥಾವತ್ತಾಗಿ ಒದಗಿಸಿದೆ. ೧೯೦೭ರಲ್ಲಿ ಅಗಡಿಯಲ್ಲಿ ಆರಂಭವಾಗಿ ಅವಿಚ್ಛಿನ್ನವಾದ ಸೇವೆಯನ್ನು ಕನ್ನಡ ಸಾಹಿತ್ಯಕ್ಕೆ ಸಲ್ಲಿಸುತ್ತ ಮುನ್ನಡೆದಿರುವ "ಸದ್ಬೋಧ ಚಂದ್ರಿಕೆ"ಯು ಉಲ್ಲೇಖನೀಯವಾಗಿದೆ. ತನ್ನ ದೀರ್ಘಾವಧಿಯ ಸಾಹಿತ್ಯ ಸೇವೆಯಲ್ಲಿ ಈ ಪತ್ರಿಕೆಯು ಕನ್ನಡಿಗರಿಗೆ ಕಾದಂಬರಿ, ಕಥೆ, ಜೀವನ ಚರಿತ್ರೆ, ಕ್ಷೇತ್ರ ಮಹಾತ್ಮೆ, ಕವಿತೆ, ಸಾಂಸ್ಕೃತಿಕ ವಿಷಯದ ಲೇಖನಗಳನ್ನು ನೀಡಿ–ವಿಶೇಷ ಉಪಕಾರವನ್ನು ಮಾಡಿದೆ. ಮೊದಲ ವರ್ಷಗಳಲ್ಲಿ ಗಳಗನಾಥರು ಅನಂತರ ಭೀ. ಪ. ಕಾಳೆ ಮುಂತಾದ ಹಲವು ಲೇಖಕರು ಈ ಪತ್ರಿಕೆಗೆ ಬರಹಗಳನ್ನು ಒದಗಿಸುತ್ತಿದ್ದರು. ಆ ಕಾಲದಲ್ಲಿ ೨೦೦೦ದಷ್ಟು ಚಂದಾದಾರರನ್ನು ಪಡೆದಿದ್ದ ಈ ಪತ್ರಿಕೆಯ ಸಾಹಿತ್ಯ ಸೇವೆ ಅವಿಸ್ಮರಣೀಯವಾಗಿದೆ.

ಪತ್ರಿಕೋದ್ಯಮ–ಸಾಹಿತ್ಯಗಳ ಸಂಬಂಧವು ತುಂಬ ನಿಕಟವಾಗಿದೆ. ಅನೇಕ ಸಾಹಿತಿಗಳು ಸ್ವತಃ ಪತ್ರಿಕಾಕರ್ತರಾಗಿರುವುದೂ ಇದಕ್ಕೆ ಕಾರಣ. ಉದಾಹರಣೆಗಾಗಿ–ಗಳಗನಾಥರು (ಸದ್ಗುರು) ಆಲೂರು ವೆಂಕಟರಾವ್(ಜಯಕರ್ನಾಟಕ), ಶಿವರಾಮ ಕಾರಂತ (ವಸಂತ), ಡಿ. ವಿ. ಜಿ. (ಭಾರತಿ ಇತ್ಯಾದಿ), ವೀರ ಕೇಸರಿ ಸೀತಾರಾಮ ಶಾಸ್ತ್ರಿ (ಗ್ರಾಮಜೀವನ, ವೀರಕೇಸರಿ) ಅ. ನ. ಕೃ., ತಿ. ತಾ. ಶರ್ಮ (ವಿಶ್ವ ಕರ್ನಾಟಕ), ಮುದವೀಡು ಕೃಷ್ಣ ರಾವ್ (ಕರ್ನಾಟಕ ವೃತ್ತ), ಕೆರೂರು ವಾಸುದೇವಾಚಾರ್ಯ (ಸಚಿತ್ರ ಭಾರತಿ, ಶುಭೋದಯ) ಬೆಟಗೇರಿ ಕೃಷ್ಣ ಶರ್ಮ (ಜಯಂತಿ), ಬೆನಗಲ್ ರಾಮ ರಾವ್ (ಸುವಾಸಿನಿ) ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಜೀವನ), ಕಡೆಂಗೋಡ್ಲು ಶಂಕರ ಭಟ್ಟರು (ರಾಷ್ಟ್ರಬಂಧು), ರಾ. ಶಿ. (ಕೊರವಂಜಿ) ಮೊದಲಾದವರ ಹೆಸರುಗಳನ್ನು ಗಮನಿಸಬಹುದಾಗಿದೆ.

### ಮುದ್ದಣ

ಗದ್ಯ ಸಾಹಿತ್ಯದಲ್ಲಿ, "ಪದ್ಯಂ ವಧ್ಯಂ ಗದ್ಯಂ ಹೃದ್ಯಂ" ಎಂದು ಸಾರಿದ ಮುದ್ದಣ (ನಂದಳಿಕೆ ಲಕ್ಷ್ಮೀನಾರಣಪ್ಪ ೧೮೭೦–೧೯೦೧) ಬಲು ದೊಡ್ಡ ಹೆಸರು. ಮುದ್ದಣನು

"ಅದ್ಭುತ ರಾಮಾಯಣ" ೧೮೯೫–೯೬, "ಶ್ರೀ ರಾಮಾಶ್ವಮೇಧ" (೧೮೯೬–೯೭) ಎಂಬ ಪ್ರಸಿದ್ಧ ಗದಕಾವ್ಯಗಳನ್ನು ರಚಿಸಿದ್ದಾನೆ. ವಸ್ತುವಿನ ಮೂಲವು ರಾಮಾಯಣವೇ ಆಗಿದೆ. ವಿನ್ಯಾಸ, ಭಾಷೆಗಳಲ್ಲಿ ಅವನು ಹಳೆಯ ಕವಿಗಳನ್ನು ಅನುಸರಿಸಿದ್ದಾನೆ. ಆದರೂ ರಾಮಾಶ್ವಮೇಧದ ವಸ್ತುವಿನ ನಿರ್ವಹಣೆಯಲ್ಲಿ ಬಳಸಿಕೊಂಡ ತಂತ್ರದಿಂದಾಗಿ ಹೊಸ ಸಾಹಿತ್ಯದ ಹೊಸಲಿಗೇ ಬಂದು ನಿಂತಿದ್ದಾನೆ ಮುದ್ದಣ. ಹಳೆಯ ಶತಮಾನದ ಕೊನೆಯ ಮೂರು ದಶಕಗಳನ್ನು ದಾಟಿ ಈ ಶತಮಾನದ ಆರಂಭದಲ್ಲಿ ಆಗಿಹೋದ ಆತನ ಬದುಕೇ ಈ ಸಂಕೇತಕ್ಕೆ ಸಾಕ್ಷಿಯಾಗಿದೆ. ಮುದ್ದಣನು ಆಧುನಿಕರಲ್ಲಿ ಮೊದಲಿಗನಾಗುವುದಕ್ಕೆ ಅವನ ಕಾಲವೊಂದೇ ಕಾರಣವಾಗಿರದೆ, ಅವನು ಪ್ರಾಚೀನ ಸಾಹಿತ್ಯವನ್ನು ಅರಗಿಸಿಕೊಂಡುದೂ ಕಾರಣವಾಗಿದೆ. ಅವನದೊಂದು ಮಹತ್ವಪೂರ್ಣವಾದ ಸಂಧಿಕಾಲ. ಹಳೆಯ ವಸ್ತುವಿಗೆ ಹೊಸ ವಿನ್ಯಾಸ, ಮೆರುಗುಗಳನ್ನಿತ್ತು ಮುದ್ದಣ ಆಧುನಿಕ ಕಾಲಕ್ಕೆ ಹತ್ತಿರವಾಗಿದ್ದಾನೆ.

ಮುದ್ದಣ–ಮನೋರಮೆಯರ ಸಂಭಾಷಣೆಗಳಲ್ಲಿ ರಾಮಾಶ್ವಮೇಧದ ಕಥೆಯ ಸುರುಳಿ ಬಿಚ್ಚಿಕೊಳ್ಳುತ್ತದೆ. ಮನೋರಮೆ "ತಿರುಳ್ಗನ್ನಡದ ಬೆಳ್ನುಡಿಯೊಳ್ ಪುರುಳೊಂದೆ ಪೇಳ್ವುದು" ಎಂದಾಗ "ಆದೊಡಂ ಸಕ್ಕದಮೊಂದೆ ರನ್ನವಣಿಯಂ ಪೊನ್ನಿಂ ಬಿಗಿದಂತೆಸೆಗುಂ. ಅದರಿಂ ಕರ್ಮಣಿ ಸರದೊಳ್ ಚೆಂಬವಳಂ ಕೋದಂತಿರೆ, ರಸಮೊಸರೆ, ಲಕ್ಕಣಂ ಮಿಕ್ಕಿರೆ, ಎಡೆ ಎಡೆಯೊಳ್ ಸಕ್ಕದದ ನಲ್ನುಡಿ ಮೆರೆಯ ತಿರುಳ್ಗನ್ನಡದೊಳ್" ಕತೆಯನ್ನು ಹೇಳಬೇಕೆನ್ನುವುದು ಅವನ ಅಭಿಪ್ರಾಯವಾಗಿದೆ. ಸಂಸ್ಕೃತ ಪದ ಭೂಯಿಷ್ಠವಾದ ಅವನ ಭಾಷೆ ಮನೋರಮೆಗೆ "ನೀರಿಳಿಯದ ಗಂಟಲೊಳ್ ಕಡುಬಂ ತುರುಕಿದಂತಾಯ್ತು". ಜನಸಾಮಾನ್ಯರ ಪ್ರತಿನಿಧಿಯಾಗಿ ಮನೋರಮೆ ಈ ಮಾತನ್ನು ನುಡಿದಂತಿದೆ. ಪ್ರವಾಹಶೀಲವಾಗಿ, ನಿರರ್ಗಳವಾಗಿ, ಲಯಬದ್ಧವಾಗಿ ಹರಿಯುವ ಮುದ್ದಣನ ಗದ್ಯದಲ್ಲಿ ವೈವಿಧ್ಯವಿದೆ. ದೀರ್ಘವಾಕ್ಯಗಳು, ಹ್ರಸ್ವ ನುಡಿಗಳು, ಸಂಭಾಷಣೆಯ ಧಾಟಿಗಳು ಹೇಳಿಕೆಯಾಗಿ ಸೆಟೆದು, ಪ್ರಶ್ನೆಯಾಗಿ ಕೊಂಕು ಲಲ್ಲೆಗರೆದು ರಮಿಸುವ ಬೆಡಗಿನ ನಡಗಳಾಗಿ ಮೇಳವಿಸಿವೆ. ಪಾತ್ರಗಳು ಮುಖಾಮುಖಿಯಾದಾಗ ಭಾಷೆಯು ಅರಳು ಸಿಡಿದಂತೆ ಭಾವೋಜ್ವಲವಾಗುತ್ತದೆ. ಮಾತೆಲ್ಲ ಚಿಕ್ಕ ವಾಕ್ಯಗಳಾಗಿ ಅಮಿತವಾಗಿ ರಂಜಿಸುತ್ತವೆ. ಕಾವ್ಯಾರಂಭದಲ್ಲಿ ಬರುವ ವರ್ಷಾ ಕಾಲದ ವರ್ಣನೆ ಮುದ್ದಣನ ಕೌಶಲಕ್ಕೆ ಸಾಕ್ಷಿಯಾಗಿದೆ. "ಈ ವರ್ಣನೆಯೊಂದಿಗೆ ತಲೆ ಎತ್ತಬಹುದಾದ ಇನ್ನೊಂದು ಉದಾಹರಣೆ ಗೋಚರವಾಗುವುದಿಲ್ಲ"–ಎಂದು ಎಸ್. ವಿ. ರಂಗಣ್ಣ ಕೊಂಡಾಡಿದ್ದಾರೆ. ಕಾಡಿನಲ್ಲಿ ಸೀತೆ ಬಸವಳಿದು ನಡೆಯಲಾರದೆ ನಡೆಯುತ್ತಿರುವ ಚಿತ್ರವನ್ನು ಮುದ್ದಣ ಹೀಗೆ ನೀಡಿದ್ದಾನೆ:

"ಆ ಪೊಳ್ತಿಂಗೆ ಭೂಮಿಜೆ ದೆಸೆಗೆಟ್ಟು, ತಿಟ್ಟನೇರಿ, ಪಿಟ್ಟನಿಳಿದು, ಕಣಿಯಂ ಕಳಿದು, ಅಗಳ್ತೆಯಂ ದಾಂಟಿ, ದರಿಯಾಸಾರ್ದು, ಮರನಂ ಪಾಯ್ದು, ಕಲ್ಲನೆಡವಿ, ಮುಳ್ಳಂ ತಡವಿ, ಕಣ್ಣಾಣದಳ್ಕಿ ಬಳ್ಕಿ ನಡೆನಡೆದು ಕಾಲೊಡೆದು ನೆತ್ತರ್ ಬಸಿಯೆ ಮಯ್ಯುಂದಿ ಧರೆಗೆ ಹಮ್ಮಯಿಸೆ, ಸೌಮಿತ್ರಿ ಮುಂದುಗಾಣದೆ ದೇವಿಯನುಪಚರಿಸುತಿರ್ದಂ"

ಮುದ್ದಣ–ಮನೋರಮೆಯರ ಸಂಭಾಷಣೆಗಳಲ್ಲಿ ಕವಿಯು ತನ್ನ ಪ್ರತಿಭೆಯೊಂದಿಗೆ ವಿಮರ್ಶನ ಪ್ರಜ್ಞೆಯನ್ನೂ ಬೆಸೆದಿದ್ದಾನೆ. ಗಾದೆಗಳನ್ನೂ, ನುಡಿಗಟ್ಟುಗಳನ್ನೂ ತದ್ಭವಗಳನ್ನೂ ಹೇರಳವಾಗಿ ಬಳಸಿಕೊಂಡ ಆತನ ಗದ್ಯ ಸಂಪುಷ್ಟವಾಗಿದೆ. ಹಳತು–ಹೊಸತರ ಸಂಗಮವಾಗಿ, ಎರಡು ಕಾಲಗಳ ನಡುವೆ ನಿಂತು "ಕನ್ನಡದ ನವೋದಯದ ಮುಂಗೋಳಿ"ಯೆನಿಸಿದ ಮುದ್ದಣ ಸದಾ ಸ್ಮರಣೀಯನಾಗಿದ್ದಾನೆ.

### ಹೊಸಯುಗದ ಹೆಬ್ಬಾಗಿಲು

ಆಂಗ್ಲರ ಆಳ್ವಿಕೆಯ ಪ್ರಭಾವವು ರಾಜಕೀಯದ ಮೇಲೆ ಆದಂತೆ ಆಂಗ್ಲ ಸಾಹಿತ್ಯದ ಪ್ರಭಾವ, ಪ್ರೇರಣೆಗಳು ದೇಶ ಭಾಷೆಗಳಲ್ಲಿಯೂ ಕಾಣಿಸಿಕೊಂಡುವು, ಕನ್ನಡ ಸಾಹಿತ್ಯ ಆ ಕಾಲದಲ್ಲಿ ಹೊಸಯುಗದ ಹೆಬ್ಬಾಗಿಲನ್ನು ತೆರೆಯಿತು. ಕಳೆದ ಶತಮಾನದ ಆರಂಭದ ಕಾಲದಲ್ಲಿ "ಕರ್ನಾಟಕ ಕಾವ್ಯ ಮಂಜರಿ", "ಕರ್ನಾಟಕ ಕಾವ್ಯ ಕಲಾನಿಧಿ" ಮಾಲೆಗಳಲ್ಲಿ ಎಂ. ಎ. ರಾಮಾನುಜಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾಚಾರ್ಯರು ಉತ್ತಮ ಕೃತಿಗಳನ್ನು ಪ್ರಕಟಿಸಿ ಅನೇಕ ಗದ್ಯ ಕಾವ್ಯಗಳನ್ನು ಬೆಳಕಿಗೆ ತಂದರು. ಅಲ್ಲದೆ ಅವರ ಯೋಜನೆಯ ಪ್ರಕಾರ ಮಹಾಭಾರತದ ಕಥಾ ಪ್ರಸಂಗಗಳ ಗದ್ಯಾನುವಾದವನ್ನು ಪ್ರಕಟಿಸಿದರು. ದೇವ ಶಿಖಾಮಣಿ ಅಳಸಿಂಗಾಚಾರ್ಯರ ರಾಮಾಯಣ, ಮಹಾಭಾರತ ಮತ್ತು ಭಾಗವತಗಳ ಗದ್ಯಾನುವಾದಗಳು ಗದ್ಯದ ಸರ್ವಗ್ರಾಹ್ಯತೆಗೆ ಸಾಕ್ಷಿಗಳಾದುವು. ಎಂ. ವೆಂಕಟಕೃಷ್ಣಯ್ಯನವರ "ಚೋರ ಗ್ರಹಣ ತಂತ್ರ" (೧೮೯೭) ಕನ್ನಡದ ಮೊತ್ತಮೊದಲ ಪತ್ತೇದಾರಿ ಕಾದಂಬರಿಯಾಗಿದೆ. ಚ. ವಾಸುದೇವಯ್ಯ (೧೮೫೨–೧೯೪೩) ನವರ "ಆರ್ಯಕೀರ್ತಿ", "ಭೀಷ್ಮ ಚರಿತೆ" ಕೃತಿಗಳ ತೇಜಸ್ವಿಯಾದ ಗದ್ಯದಿಂದ ಅವರಿಗೆ "ಹೊಸಗನ್ನಡ ಗದ್ಯ ಶಿಲ್ಪಿ" ಎಂಬ ಕೀರ್ತಿ ಲಭಿಸಿತು. ಆರ್. ಅಣ್ಣಾಜಿ ರಾವ್ ಅವರು "ಆಲಿವರ್ ಟ್ವಿಸ್ಟ್", "ಟಾಮ್ ಜೋನ್ಸ್"ಗಳನ್ನು ಕನ್ನಡಕ್ಕೆ ಅನುವಾದಿಸಿದುದಲ್ಲದೆ ಭಾರತೀಯ ಹಿನ್ನೆಲೆಯುಳ್ಳ "ಪರಿಕಲಾಭ್ಯುದಯ", "ಮಹೀಮಂಡನ", "ಮೂರು ಮುತ್ತುಗಳು" ಮುಂತಾದ ಕೃತಿಗಳನ್ನೂ ತಿಳಿಯಾದ ಗದ್ಯದಲ್ಲಿ ರಚಿಸಿದ್ದಾರೆ.

೧೮೯೨ರಲ್ಲಿ ಗದಗಕರರ "ಸೂರ್ಯಕಾಂತ" ಕನ್ನಡದ ಮೊದಲ ಐತಿಹಾಸಿಕ ಸ್ವತಂತ್ರ ಐತಿಹಾಸಿಕ ಕಾದಂಬರಿಯಾಗಿ ಪ್ರಕಟಗೊಂಡಿತು. ರೆಂಟ್ಲ ವೆಂಕಟಸುಬ್ಬ ರಾವ್ "ಕೇಸರಿ ವಿಲಾಸ" (೧೮೯೫) ಎಂಬ ಕಾದಂಬರಿಯನ್ನು ಬರೆದರು. ಗುರುಮಠಗಳಲ್ಲಿ ನಡೆಯುವ ಡಂಭಾಚಾರ, ಗೊಡ್ಡು ಆಚರಣೆಗಳನ್ನು ವಿಡಂಬಿಸಿ, ಸದ್ಧರ್ಮವನ್ನು ರೂಪಿಸುವ ಹೊಸ ದೃಷ್ಟಿಯುಳ್ಳ ಕನ್ನಡ ಸ್ವತಂತ್ರ ಸಾಮಾಜಿಕ ಕಾದಂಬರಿ "ಇಂದಿರಾ ಬಾಯಿ ಇಲ್ಲವೆ ಸದ್ಧರ್ಮ ವಿಜಯ" (೧೮೯೯) ಗುಲವಾಡಿ ವೆಂಕಟರಾಯರಿಂದ ರಚಿತವಾಯಿತು. ಸಾಮಾಜಿಕ ಮಹತ್ವವುಳ್ಳ ಈ ಕೃತಿಯನ್ನು ೧೯೦೮ರಲ್ಲಿ, ಕಲೆಕ್ಟರನಾಗಿದ್ದ ಕ್ಲಚ್‌ಮನ್ ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾನೆ. ಗುಲವಾಡಿ ವೆಂಕಟರಾಯರಿಂದ "ವೇಣಮ್ಮ ನಾಗಮ್ಮರ ಸಂವಾದ", "ಲಾಡು ಪ್ರಿಯಾಚಾರ್ಯ" ಎಂಬ ಕಿರಿಯ ಕೃತಿಗಳೂ, "ಭಾಗೀರಥೀ", "ಸೀಮಂತಿನೀ" ಎಂಬ ಕಾದಂಬರಿಗಳೂ ಈ ಕಾಲದಲ್ಲಿ ರಚನೆಯಾದುವೆಂದು ತಿಳಿದು ಬರುತ್ತದೆ. ಗುಳವಾಡಿ ಅಣ್ಣಾಜಿರಾಯರ "ರೋಹಿಣಿ ಇಲ್ಲವೆ ಸಾರಸ್ವತ ಮಂಡಳ" (೧೯೦೭) ಮತ್ತು ಬೋಳಾರ ಬಾಬುರಾಯರ "ವಾಗ್ದೇವಿ" (೧೯೦೫)ಗಳು ಸಮಾಜ ಸುಧಾರಣಾ ದೃಷ್ಟಿಯುಳ್ಳ ಕಾದಂಬರಿಗಳು. ಈ ಮೂವರೂ ಕಾದಂಬರೀ ಕ್ಷೇತ್ರದಲ್ಲಿ ಮೊದಲಿಗರು.

### ಈ ಶತಮಾನದ ಆರಂಭ

ಈ ಶತಮಾನದ ಆರಂಭದ ಪ್ರಮುಖ ಲೇಖಕರಲ್ಲಿ ಬಿ. ವೆಂಕಟಾಚಾರ್ಯರು (೧೮೪೫–೧೯೧೪) ಒಬ್ಬರು. ವಂಗ

ಸಾಹಿತ್ಯಾಭ್ಯಾಸಿಯೊದ ಅವರು ತಮ್ಮ ವಿದ್ಯಾಗುರು ಈಶ್ವರ ಚಂದ್ರ ವಿದ್ಯಾಸಾಗರರ"ಭ್ರಾಂತಿ ವಿಲಾಸ", "ಶಾಕುಂತಲ", "ಸೀತಾವನವಾಸ" ಕೃತಿಗಳನ್ನು ಭಾಷಾಂತರಿಸಿದರು. ಹರಪ್ರಸಾದ ಶಾಸ್ತ್ರಿಯ "ಭಾರತ ಮಹಿಳಾ" (೧೮೮೪) ಕೃತಿಯನ್ನು ಅನುವಾದಿಸಿದರು. ಬಂಕಿಮಚಂದ್ರರ "ದುರ್ಗೇಶ ನಂದಿನಿ" (೧೮೮೫), "ದೇವಿ ಚೌಧುರಾಣಿ", "ಆನಂದಮಠ", ವಿಷ ವೃಕ್ಷ" (೧೯೦೦) ಮೊದಲಾದುವನ್ನು ಅನುವಾದಿಸಿದ್ದಾರೆ. ಅವರ ೭೫ ಕೃತಿಗಳಲ್ಲಿ ೬೦ ಕಾದಂಬರಿಗಳಿವೆ. ಅವರ ಕಾದಂಬರಿಗಳಲ್ಲಿನ ಪ್ರಕೃತಿ ವರ್ಣನೆ, ಸ್ತ್ರೀ ವರ್ಣನೆಗಳು ಸಂಪ್ರದಾಯಬದ್ಧವಾಗಿ, ಶಬ್ದಪ್ರೌಢಿಮೆಯಿಂದ ಕೂಡಿವೆ. ಕಥಾನಕದ ಹೊಸತನ, ಇತಿಹಾಸದ ಅದ್ಭುತ ರಮ್ಯತೆ, ಗದ್ಯಕ್ಕೆ ಸಹಜವಾಗಿರುವ ಆತ್ಮೀಯತೆಗಳಿಂದ ಅವರ ಕೃತಿಗಳು ಜನಪ್ರಿಯವಾದುವು. ಜನರು ಈ ಕಾದಂಬರಿಗಳಲ್ಲಿ ನವೀನ ಪ್ರಪಂಚವನ್ನು ಕಂಡು ಸ್ವಾಗತಿಸಿದರು. ಮಧ್ಯಮ ವರ್ಗದ ಜನರ ಭಾವವಿಕಾಸಕ್ಕೂ ಈ ಕೃತಿಗಳು ಕಾರಣವಾದುವು. ಕನ್ನಡ ಕಾದಂಬರಿ ಪ್ರಕಾರಕ್ಕೆ ಭದ್ರ ಬುನಾದಿಯನ್ನು ಹಾಕಿದವರು ಗಳಗನಾಥರು. ಈ ಶತಮಾನದ ಆದಿ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ರೂಢವಾಗಿದ್ದ ಶೈಲಿಯನ್ನು ಗಳಗನಾಥರು ಅನುಸರಿಸಿದರು. "ಕನ್ನಡ ಕಾದಂಬರಿ"ಯಲ್ಲಿ, ಕುಲಕರ್ಣಿಯವರ "ನಾಡನೆಲೆಗಾರ"ದಲ್ಲಿ ಹಾಗೂ ಗನಿಗಯ್ಯ ಹೊನ್ನಾಪುರಮಠದ ಪುಸ್ತಕಗಳಲ್ಲಿ ಕಂಡುಬಂದ ಶೈಲಿಯಲ್ಲೇ ಹತ್ತಾರು ಕೃತಿಗಳನ್ನು ಬರೆದು ಆ ಶೈಲಿಗೆ ಸ್ಥಿರತೆಯನ್ನು ತಂದುಕೊಟ್ಟರು. ಮರಾಠೀ ಸಾಹಿತ್ಯ ಉತ್ತರ ಕರ್ನಾಟಕಕ್ಕೆ ತೀರ ಹತ್ತಿರವಾಗಿತ್ತು. "ಕುಮುದಿನಿ", "ಮರಾಠರ ಅಭ್ಯುದಯ", ಕನ್ನಡಿಗರ ಕರ್ಮ ಕಥೆ"; ಕಮಲ ಕುಮಾರಿ", "ಈಶ್ವರೀ ಸೂತ್ರ", "ಛತ್ರಪತಿ ಶಿವಾಜಿ"ಗಳು ನೇರವಾಗಿ ಸರಳ ಶೈಲಿಯಲ್ಲಿದ್ದು ಓದುಗರ ಅಂತಃಕರಣವನ್ನು ತುಂಬುವಂತಿವೆ. "ಮಾಧವ ಕರುಣಾ ವಿಲಾಸ" ಗಳಗನಾಥರ ಸ್ವತಂತ್ರ ಕಾದಂಬರಿ. ಈ ಲೇಖಕರಿಬ್ಬರೂ ಜನಸಾಮಾನ್ಯರಲ್ಲಿ ವಾಚನಾಭಿರುಚಿಯನ್ನು ಬೆಳೆಸುವಲ್ಲಿ ಸಮರ್ಥರಾದರು.

ಎಂ. ಎಸ್. ಪುಟ್ಟಣ್ಣನವರು (೧೮೫೪–೧೯೩೦) ಕಾದಂಬರಿ, ಜೀವನ ಚರಿತ್ರೆ, ಸಂಶೋಧನೆ, ಭಾಷಾಂತರ–ರೂಪಾಂತರ, ಬಾಲಸಾಹಿತ್ಯ, ಪತ್ರಿಕೋದ್ಯಮ ಹಾಗೂ ಲೇಖನ ವ್ಯವಸಾಯದ ಕ್ಷೇತ್ರಗಳಲ್ಲಿ ಹೊಸಗನ್ನಡ ಗದ್ಯದ ಮುನ್ನಡೆಗಾಗಿ ದುಡಿದವರು. ಜಿಡ್ಡುಗಟ್ಟಿದ ನೀರಸ ಗದ್ಯದ ಬಿಗುವನ್ನು ಸಡಿಲಿಸಿ ಅದಕ್ಕೆ ಲಾಲಿತ್ಯವನ್ನೂ, ಬಳುಕನ್ನೂ ನೀಡಿದರು. ಆಡುನುಡಿಯನ್ನು ಅತ್ಯಂತ ಸಮರ್ಥವಾಗಿ ಬಳಸಿ ಬರವಣಿಗೆಯಲ್ಲಿ ಸೊಗಡನ್ನು ತುಂಬಿದರು. "ಮಾಡಿದ್ದುಣ್ಣೋ ಮಹಾರಾಯ" (೧೯೧೫), ಮುಸುಕು ತೆಗೆಯೇ ಮಾಯಾಂಗನೆ" (೧೯೨೮) "ಅವರಿಲ್ಲದೂಟ" (೧೯೩೯) ಈ ಮೂರು ಕಾದಂಬರಿಗಳು ಅವರ ಸ್ವತಂತ್ರ ರಚನೆಗಳು. (ಇವುಗಳಲ್ಲಿ ಕೊನೆಯದು ಗ್ರಂಥ ಕರ್ತರ ಮರಣಾನಂತರವೇ ಪ್ರಕಟವಾಯಿತು). ಆ ಕಾಲದ ಸಾಮಾಜಿಕ ಗೊಂದಲದ ಪರಿಸ್ಥಿತಿಯನ್ನು ಸೆರೆಹಿಡಿದು ನಿರೂಪಿಸುವುದು ಈ ಕಾದಂಬರಿಗಳ ಸಾಧನೆ. ಆಡುನುಡಿಯನ್ನು ಸಮರ್ಥವಾಗಿ ಬಳಸಿ ಕಥನ ಸಾಹಿತ್ಯಕ್ಕೆ ಹೊಸ ಆಯಾಮವನ್ನು ಜೋಡಿಸಿದ ಕೀರ್ತಿ ಪುಟ್ಟಣ್ಣನವರಿಗೆ "ಮಾಡಿದ್ದುಣ್ಣೋ ಮಹಾರಾಯ"ದಿಂದ ದಕ್ಕಿತು. ಅವರ ಈ ಕೃತಿಗಳು ಕನ್ನಡ ಕಾದಂಬರಿಗಳಿಗೆ ಮುಂದಿನ ದಾರಿ ದಿಕ್ಕುಗಳನ್ನು ತೋರಿಸಿ ಸುಭದ್ರ ಅಡಿಪಾಯವನ್ನು ಹಾಕಿದುವು. ಪುಟ್ಟಣ್ಣನವರ ನೀತಿ ಚಿಂತಾಮಣಿ, ಮಕ್ಕಳ ನೀತಿ ಕಥೆಗಳು, ಪೇಟೆ ಮಾತೇನಜ್ಜಿ, ತಕ್ಕೊಂಡಪ್ಪನ ಕಥೆ, ಯಾರ ಮಕ್ಕಳು–ಈ ಕಥೆಗಳು ಬರಹಗಾರನ ಚಾತುರ್ಯಕ್ಕೆ ಸಾಕ್ಷಿಯಂತಿವೆ. ಮುಮ್ಮಡಿ ಕೃಷ್ಣರಾಜ ಒಡೆಯರ ರಸಿಕತೆ, ಪ್ರಜಾವಾತ್ಸಲ್ಯಗಳ ಚಿತ್ರಣ, ಸಾಮಾಜಿಕ ಜೀವನ ವಿಧಾನ, ಜನಸಾಮಾನ್ಯರ ಮಾತುಕತೆಯ ಸಹಜತೆ–ಇವುಗಳೆಲ್ಲ "ಮುಸುಕು ತೆಗೆಯೇ ಮಾಯಾಂಗನೆ"ಯಲ್ಲಿ ಕಾಣಿಸಿಕೊಂಡಿವೆ. ಆ ಕೃತಿಯಿಂದ ಆಯ್ದ ಒಂದು ಉದಾಹರಣೆಯನ್ನು ಇಲ್ಲಿ ಗಮನಿಸಬಹುದು:

"ಈ ಬಸಪ್ಪನು ಆ ಹೆಂಗಸಿನ ಗೀಳನ್ನು ಮನಸ್ಸಿಗೆ ಹತ್ತಿಸಿಕೊಂಡು ಪೇಚಾಡುತ್ತಾ ತನ್ನ ಕೋರಿಕೆ ನೆರವೇರುವುದಕ್ಕೆ ಬೇಕಾದ ಪ್ರಯತ್ನ ಒಂದನ್ನೂ ಬಿಡದೆ ಮಾಡಿದನು. ಒಂದು ದಿನ ಅಂಗರೇಖು ರುಮಾಲು ಪಾಯಿಜಾಮ ಹಾಕಿಕೊಂಡು ಒಳ್ಳೇ ಪಂಚೆಯನ್ನು ಮೇಲೆ ಹೊದ್ದು ಆ ನಾಯಕಸಾನಿಯ ಮನೇ ಮುಂದೆ ಸುಳಿದಾಡುವುದೂ, ಇನ್ನೊಂದು ದಿನ ತಲೆಗೆ ಜೋಡೀ ವಸ್ತ್ರವನ್ನು ಕುಚ್ಚು ಬಿಟ್ಟು ಸುತ್ತಿ ಪಟ್ಟೇ ಅಂಚಿನ ಪಂಚೆಯನ್ನು ಹೊದ್ದು ಹೋಗುವುದೂ, ಇನ್ನೊಂದು ದಿನ ವಜ್ರದ ಹತ್ತಕಡಕವನ್ನೂ, ಕೈಬೆರಳುಗಳಿಗೆ ಉಂಗುರಗಳನ್ನೂ ಇಟ್ಟು ಮಲ್ಲಿಗೆ ಹೂವು, ಪಚ್ಚೆ ತೆನೆ, ಸಂಪಿಗೆ ಹೂವು, ಇರವಂತಿಗೇ ಹೂವು ಮೊದಲಾದ ಪರಿಮಳದ ಹೂವು ಇವುಗಳಿಗೆ ಪನ್ನೀರನ್ನು ಚಿಮುಕಿಸಿ ಅವುಗಳನ್ನು ಜವ್ವಾಜಿ ಸವರಿದ ನಾರಿನಿಂದ ಕಟ್ಟಿಸಿ ಅದನ್ನು ತನ್ನ ಎಣ್ಣೆಗಂಟಿಗೆ ಪಟ್ಟವಾಗಿ ಸುತ್ತಿ, ಆ ಗಂಟನ್ನು ತನ್ನ ಬೆನ್ನಿನ ಮೇಲೆ ಭುಜದಿಂದ ಭುಜಕ್ಕೆ ಉರುಳಾಡಿಸುತ್ತಾ, ಹುಬ್ಬಿನ ನಡುವೆ ಚುಕ್ಕಿ ಬಟ್ಟನ್ನಿಟ್ಟು ಒಲಪು ಮಾಡುತ್ತಾ, ಆ ಬೀದಿಯಲ್ಲಿ ಗುಜರೀ ಹೊತ್ತಿನಲ್ಲಿ ತಿರುಗಾಡುತ್ತಾ, ನೆವ ನೆವದಲ್ಲಿ ಆ ಹೆಂಗಸಿನ ಮನೆಯ ಮುಂದೆ ನಿಲ್ಲುತ್ತಾ ತಾಂಬೂಲವನ್ನು ದವಡೆ ಒಡೆಯುವ ಹಾಗೆ ಒತ್ತರಿಸಿಕೊಂಡು ಅಗಿಯುತ್ತಾ ಸಿಕ್ಕಿದವರನ್ನು ಅಲ್ಲಲ್ಲಿ ನಿಲ್ಲಿಸಿಕೊಂಡು ಮಾತನಾಡುತ್ತಾ, ಕಾರಣವಿಲ್ಲದಿದ್ದಾಗ್ಯೂ ತಾನೇ ನಗುತ್ತಾ ಹೀಗೆಲ್ಲ ಒನಪು ಮಾಡುತ್ತಾ ಬಂದನು".

## ವಿಪುಲ ವೈವಿಧ್ಯ

೧೯೨೮ರಲ್ಲಿ ಕಲ್ಬುರ್ಗಿಯ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಬಿ. ಎಂ. ಶ್ರೀಯವರು ಹೀಗೆ ಸಾರಿದ್ದಾರೆ – "ಪ್ರಪಂಚದಲ್ಲಿ ತಿಳಿದಿರುವ, ನುಡಿದಿರುವ, ನಡೆದಿರುವ ಉತ್ತಮ ವಿಷಯಗಳೆಲ್ಲವನ್ನೂ ಸಿಂಹಾವಲೋಕನದಿಂದ ತಾನು ಸ್ವಾನುಭವಕ್ಕೆ ತಂದುಕೊಂಡು ಹಾಗೆ ತಿಳಿಯಲಾರದ ಇತರರಿಗೆ ತಿಳಿಸತಕ್ಕುದು. ಇದಕ್ಕೆ ಒಂದು ನಾಡಲ್ಲ, ಒಂದು ಬೀಡಲ್ಲ. ಇದರ ಮೂಲಮಂತ್ರ–"ಉದಾರ ಚರಿತಾನಾಂತು ವಸುಧೈವ ಕುಟುಂಬಕಂ". ಹೊಸ ಮಾರ್ಗದ ಗ್ರಂಥಕರ್ತನು ಸ್ವತಂತ್ರನು. ಪದ್ಯಕ್ಕಿಂತಲೂ ಹೆಚ್ಚಾಗಿ ಗದ್ಯದಲ್ಲಿ ಕೆಲಸ ಮಾಡುವನು. ವಿಷಯಕ್ಕೆ ತಕ್ಕ ಶೈಲಿಯನ್ನು ಹೊಂದಿಸಿ ಸರ್ವರೂ ಅರ್ಥ ಮಾಡಿಕೊಳ್ಳುವಂತೆ ಬರೆಯುವನು." ಈ ಮಾತು ಗದ್ಯದ ಸ್ಥಾನ ನಿರ್ದೇಶನವನ್ನು ಸೊಗಸಾಗಿ ಗುರುತಿಸುತ್ತದೆ.

ಕಾದಂಬರಿ, ಸಣ್ಣ ಕತೆಗಳ ಪ್ರಕಾರಗಳು ಗದ್ಯದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. "ಕಾನೂರು ಸುಬ್ಬಮ್ಮ ಹೆಗ್ಗಡಿತಿ" ಕುವೆಂಪು ಅವರ ಬೃಹತ್ ಕಾದಂಬರಿಯಾಗಿದ್ದು ಮಲೆನಾಡಿನ ಹಳ್ಳಿಯ ಜೀವನವನ್ನೂ ಅದರ ಹಿನ್ನೆಲೆಯನ್ನೂ ಚಿತ್ರಿಸುವಲ್ಲಿ ಗ್ರಾಮ್ಯ ಮಾತುಗಾರಿಕೆ, ಸಂಸ್ಕೃತ ಭೂಯಿಷ್ಠತೆಗಳ ಸಮರಸತೆಯನ್ನು ಸಾಧಿಸಿದೆ. ಶಿವರಾಮ ಕಾರಂತರ ಮೊದಲ ಕಾದಂಬರಿಗಳಲ್ಲಿ ಜೀವನದ ವಿವಿಧ ಸಮಸ್ಯೆಗಳ ವಾಸ್ತವ ಚಿತ್ರಣಗಳನ್ನು ಕಾಣುತ್ತೇವೆ. "ಮರಳಿ ಮಣ್ಣಿಗೆ", "ಬೆಟ್ಟದ ಜೀವ", "ಚೋಮನ ದುಡಿ"– ಈ ಕಾದಂಬರಿಗಳಲ್ಲಿ ಮನುಷ್ಯ ಜೀವನದೊಡನೆ ನಿಸರ್ಗವೂ

ಹಾಸುಹೊಕ್ಕಾಗಿದ್ದು ಪ್ರಾದೇಶಿಕತೆಯ ಸೊಗಸು ಕಂಗೊಳಿಸುತ್ತದೆ. ಅ.ನ.ಕೃ. ಅವರದು ಸುಲಲಿತವಾದ ಆಕರ್ಷಕ ಶೈಲಿ, ಹಿತಮಿತ ವರ್ಣನೆಗಳು, ಚತುರ ಸಂಭಾಷಣೆ ಇವು ಕತೆಯ ತೀವ್ರವಾದ ಓಟಕ್ಕೆ ಸಹಕಾರಿಯಾಗಿವೆ. ಮುಗಳಿಯವರ ಕೌಟುಂಬಿಕ ಚಿತ್ರಗಳ ಹೃದಯವಂತಿಕೆ ಗಮನಾರ್ಹವಾಗಿದೆ. ಕಡೆಂಗೋಡ್ಲು ಶಂಕರ ಭಟ್ಟರ "ಧೂಮಕೇತು" ಸಂವಿಧಾನ, ಕಥಾನಕಗಳ ದೃಷ್ಟಿಯಿಂದಲೂ, ದಕ್ಷಿಣ ಕನ್ನಡದ ದೇಸಿ ನುಡಿಯ ಚೆಡಗಿನೊಂದಿಗೆ ಹಳಗನ್ನಡ ಸಂಸ್ಕೃತಗಳ ಬಿಗುವನ್ನೂ ಯಕ್ಷಗಾನದ ಸೊಗಡನ್ನೂ ಒಳಗೊಂಡ ಶೈಲಿಯಿಂದಲೂ ಗಮನ ಸೆಳೆಯುತ್ತದೆ. ಆಡುನುಡಿಯ ಸತ್ವದೊಡನೆ ಸಂಸ್ಕೃತದ ಅಭಿಜಾತತೆಯನ್ನೂ ದೇವುಡು ಅವರ ಶೈಲಿ ಮೇಳವಿಸಿಕೊಂಡಿದೆ. ಶ್ರೀರಂಗರ "ವಿಶ್ವಾಮಿತ್ರ ಸೃಷ್ಟಿ"ಯಲ್ಲಿ ಮನೋವಿಶ್ಲೇಷಣಾ ತಂತ್ರವಿದೆ. ಕಲ್ಪನಾ ವಿಲಾಸ, ವರ್ಣನಾ ವೈಖರಿಗಳಲ್ಲಿ ಅವರು ಅನ್ಯಾದೃಶರಾಗಿ ಕಾಣಿಸುತ್ತಾರೆ. ಹೀಗೆ ವೈವಿಧ್ಯಪೂರ್ಣ ಬೆಳವಣಿಗೆಯಿಂದ ಗದ್ಯವನ್ನು ಬೆಳಗಿಸುವ ನಿಟ್ಟಿನಲ್ಲಿ ಕಾದಂಬರಿಗಳ ಕೃಷಿ ಸಾಗಿದೆ. ಇಂಥ ಇನ್ನೊಂದು ಜನಪ್ರಿಯ ಪ್ರಕಾರವಾದ ಸಣ್ಣ ಕತೆಯನ್ನು ಪ್ರಸ್ತಾವಿಸುವಾಗ ಆ ದಿಸೆಯಲ್ಲಿ ಮೊದಲಿಗರಾದ ಪಂಜೆ ಮಂಗೇಶ ರಾವ್ ಹಾಗೂ ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಶ್ರೀನಿವಾಸ) ನಮ್ಮ ಗಮನವನ್ನು ಸೆಳೆಯುತ್ತಾರೆ. ಸರಳವಾದ ಕಥನ ಶೈಲಿಯಲ್ಲಿ ರಂಜಕತೆಯನ್ನು ಬೆಸೆದಿರುವುದು ಪಂಜೆಯವರ ವಿಶೇಷತೆಯೆನಿಸಿದರೆ "ಕನ್ನಡದ ಆಸ್ತಿ"ಯೆನಿಸಿರುವ ಮಾಸ್ತಿಯವರ ಸ್ಫಟಿಕ ಶುದ್ಧ ಶೈಲಿಯಲ್ಲಿ ಯಾವ ವಸ್ತುವೂ ಬಣ್ಣಗೆಡದೆ ಸಹಜವಾಗಿ ಮೂಡಿ ಬರುತ್ತದೆ. ಕೆರೂರು ವಾಸುದೇವಾಚಾರ್ಯ, ಆನಂದ ಕಂದ, ಕೃಷ್ಣಕುಮಾರ ಕಲ್ಲೂರ, ಟೇಂಗ್ಸೆ ಗೋವಿಂದ ರಾವ್, ಕಾರಂತ, ಕುವೆಂಪು, ಪು. ತಿ. ನ. ಮುಗಳಿ ಇವರ ಕತೆಗಳಲ್ಲಿನ ವೈಶಿಷ್ಟ್ಯವನ್ನು ಕಡೆಗಣಿಸುವಂತಿಲ್ಲ. ಗೊರೂರು, ಪಡುಕೋಣೆ ಅವರ ಹಾಸ್ಯಪ್ರಿಯ ನಿರೂಪಣೆ, ವಸ್ತುನಿಷ್ಠತೆಗಳು ಆತ್ಮೀಯವೆನಿಸುತ್ತವೆ. ಬೇಂದ್ರೆ, ದೇವುಡು, ಕೊಡಗಿನ ಗೌರಮ್ಮ, ಸೇಡಿಯಾಪು, ಕಡೆಂಗೋಡ್ಲು, ಬಾಗಲೋಡಿ ದೇವರಾಯ ಇವರ ಬರಹಗಳೂ ಉಲ್ಲೇಖಾರ್ಹವಾಗಿದೆ. ಅನಂತರ, ಪ್ರಗತಿಶೀಲ ಕತೆಗಾರರಾದ ಅ. ನ. ಕೃ., ತ. ರಾ. ಸು., ಕಟ್ಟೀಮನಿ, ನಿರಂಜನ ಮುಂತಾದವರ ಕೊಡುಗೆಯೂ ಸಣ್ಣ ಕತೆಯ ಕ್ಷೇತ್ರವನ್ನು ವಿಸ್ತರಿಸಿದುವು.

ಗದ್ಯದ ವಿಪುಲ ವೈವಿಧ್ಯವನ್ನು ಅವಲೋಕಿಸುವಾಗ ಎದ್ದು ತೋರುವ ಪ್ರಕಾರವೇ "ಪ್ರಬಂಧ". ಮೂಲತಃ ಆಂಗ್ಲ ಸಾಹಿತ್ಯದ ಪ್ರಭಾವದಿಂದ ಕನ್ನಡದಲ್ಲಿ ಕಾಣಿಸಿಕೊಂಡ ಪ್ರಬಂಧವು ಕಾಲಕ್ರಮೇಣ ಹಲವು ಶಾಖೆಗಳಲ್ಲಿ ತನ್ನ ಬೆಳವಣಿಗೆಯನ್ನು ಸಾಧಿಸಿದೆ. ವಿಷಯ ನಿರೂಪಣಾ ಸ್ಪಷ್ಟತೆ, ಭಾಷಾಸೌಷ್ಠವ, ವಾಚಕರೊಂದಿಗಿನ ಸಾಮೀಪ್ಯ, ಒಳ್ಳೆಯ ಅಂತಃಕರಣದ ರುಚಿಶುದ್ಧಿಯಿಂದ ಈ ಸಾಹಿತ್ಯ ಪ್ರಕಾರ ಶೋಭಿಸುತ್ತದೆ. ಬಹುಮುಖ ಪ್ರತಿಭಾವಂತರಾದ ಎಂ. ಗೋವಿಂದ ಪೈಯವರು ಸಂಶೋಧಕರಾಗಿ, ನಾಟಕ ಕರ್ತೃವಾಗಿ, ಪ್ರಬಂಧಕಾರರಾಗಿ ಕನ್ನಡ ಗದ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ. ಅವರ "ಬರಹಗಾರನ ಹಣೆ ಬರಹ" ಪ್ರಬಂಧದಿಂದ ಆಯ್ದ ಕೆಲವು ಸಾಲುಗಳನ್ನು ಗಮನಿಸೋಣ.

"ಬರಹಗಾರನ ಬಾಳ್ವೆಯಲ್ಲಿ ಹೀಗೆ ತರತರಹದ ಕೆಲವು ತಾಗುತಟ್ಟುಗಳಿದ್ದರೂ, ಕೊನೆಗೆ ಅಳೆವವರೇ ಬಳಲುವವರಲ್ಲದೆ ಬಳ್ಳಿ ಬಳಲುವುದೆ? ಎಂದೂಮ್ಮೆ ಮನಸ್ಸಿನ ಸೂತಕ ಕಳೆವುದೆ, ಕಣ್ಣನ್ನು ಉರಿಸುವ ಹೊಗೆಯೇ ಕಣ್ಣನ್ನು ತಂಪೂ ಸೊಂಪೂ ಇರಿಸುವ ಕಾಡಿಗೆಯಾಗುವಂತೆ ಆ ಚುಚ್ಚುವ ಅನುಭವಗಳೇ ಆತನಿಗೆ ಮತ್ತೂ ಬರೆಯುವಂತೆ ಒಂದು ವಿಸ್ಮಯನೀಯವಾದ ಉತ್ಸಾಹವನ್ನು ನೀಡಿ ಬರವಣಿಗೆಯ ಬಳವಿಯಲ್ಲಿ ಮುಂದಟ್ಟುತ್ತವೆ." ಪ್ರಸಿದ್ಧಿಯಲ್ಲಿ ಪೈಗಳ ಹೊಸತನ–ಇಕೆ, ತೆ, ಇಸು ಪ್ರತ್ಯಯಗಳ ಬಳಕೆಯಲ್ಲಿ–ಕಾಣಿಸಿಕೊಂಡಿದೆ. ನುಡಿತ, ಬಗೆತ, ಅಕ್ಷರಿಕೆ, ಮನಸಿಸು, ಕೆಳಗಿಸು ಮುಂತಾದ ಹೊಸ ಪದಪ್ರಯೋಗಗಳಿಂದ, ಉಪಮೆ, ಗಾದೆಗಳ ವಿಪುಲ ಬಳಕೆಯಿಂದ ಅವರು ಗದ್ಯದ ಸೊಗಸನ್ನು ಹೆಚ್ಚಿಸಿದ್ದಾರೆ.

ಪ್ರಬಂಧದ ಪ್ರಾರಂಭದ ಕಾಲದತ್ತ ಕಣ್ಣು ಹಾಯಿಸಿದಾಗ ಬಿ. ವೆಂಕಟಾಚಾರ್ಯರ "ಲೋಕ ರಹಸ್ಯ" (೧೮೯೮) "ದಾರಿಯ ಹೇಳಿಕೆ", ಎಂ. ಎ. ರಾಮಾನುಜಯ್ಯಂಗಾರ್ಯರ "ಪ್ರಬಂಧಾವಳಿ", ಎ. ವೆಂಕಟಕೃಷ್ಣಯ್ಯನವರ "ಧನಾರ್ಜನ"–ಇವುಗಳು ಈ ಶತಮಾನದ ಆರಂಭದ ಕೃತಿಗಳಾಗಿ ಕಾಣಿಸುತ್ತವೆ. ಪಂಜೆ ಮಂಗೇಶ ರಾವ್, ಪು. ತಿ. ನ., ದ.ಬಾ. ಕು., ಡಿ. ವಿ. ಜಿ., ಕಾರಂತ, ಕುವೆಂಪು, ಕೆರೂರು, ವಿ. ಸೀ. ಮೊದಲಾದವರಲ್ಲದೆ ಎ. ಎನ್. ಮೂರ್ತಿರಾವ್ ಪ್ರಬಂಧಕಾರರಲ್ಲಿ ಗಣ್ಯರು. "ಲಲಿತ ಪ್ರಬಂಧ" ಕಾಣಿಸಿಕೊಂಡ ಬಳಿಕ ಪ್ರಬಂಧ ಕ್ಷೇತ್ರದ ವ್ಯಾಪ್ತಿ ಇನ್ನಷ್ಟು ಹಿರಿದಾಗಿ ಹಲವು ಲೇಖಕರ ಸೃಜನೆಗೆ ಅವಕಾಶವಾಗಿದೆ.

ನಾಟಕಗಳೂ ಗದ್ಯದ ಪಾತ್ರ, ಗಾತ್ರಗಳನ್ನು ರೂಪಿಸುವ ದಿಸೆಯಲ್ಲಿ ಗಮನೀಯವೆನಿಸುತ್ತವೆ. ಕರ್ಕಿ ವೆಂಕಟರಮಣ ಶಾಸ್ತ್ರಿ (ಸೂರಿ) ಅವರ "ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ" (೧೮೮೧)ವು ಮೊದಲ ಸಾಮಾಜಿಕ ನಾಟಕವಾಗಿದೆ. ಸಿಂಗರಾರ್ಯನ "ಮಿತ್ರವಿಂದಾ ಗೋವಿಂದ" ಉಲ್ಲೇಖಿತ ಪ್ರಥಮ ನಾಟಕ. ಸಂಸ್ಕೃತ ನಾಟಕಗಳ ಅನುವಾದಗಳು ಕಾಣಿಸಿಕೊಂಡುವು. ಕಂಪೆನಿಗಳಿಗೆ ಆಡಿ ತೋರುವುದಕ್ಕಾಗಿ ರಚಿತವಾದ ನಾಟಕಗಳೂ ಬಂದುವು. ಐತಿಹಾಸಿಕ ನಾಟಕಗಳ ಕರ್ತೃ 'ಸಂಸ' ಹಾಗೂ ಕಲಾತ್ಮಕ ನಾಟಕಗಳ ಮೂಲಕ ಸಮಾಜವನ್ನು ಬಡಿದೆಬ್ಬಿಸಿದ ಶ್ರೀರಂಗ (ಆದ್ಯ ರಂಗಾಚಾರ್ಯ)–ಇವರು ಗಮನಾರ್ಹ ಸಾಧನೆಗಳನ್ನು ಮಾಡಿದ್ದಾರೆ. ಆಂಗ್ಲ ಮಿಶ್ರಿತ ಕನ್ನಡದ ವಿಶಿಷ್ಟ ಶೈಲಿಯನ್ನು ಸೃಜಿಸಿ, ಸಮಾಜದ ಟೊಳ್ಳು–ಗಟ್ಟಿಗಳನ್ನು ಗುರುತಿಸಿದ ವಿನೋದ ಪ್ರಜ್ಞೆಯ ಟಿ. ಪಿ. ಕೈಲಾಸಂ ಅವರದು ಪ್ರಸಿದ್ಧ ಹೆಸರು. ಕುವೆಂಪು, ಬೇಂದ್ರೆ, ಗೋವಿಂದ ಪೈ ಕಡೆಂಗೋಡ್ಲು, ಕೆ. ಹಿರಣ್ಣಯ್ಯ, ಎಂ. ಆರ್. ಶ್ರೀ, ಮುಗಳಿ ಮುಂತಾದವರು ಈ ಕ್ಷೇತ್ರದ ಹಸನಾದ ಬೆಳೆಗೆ ಕಾರಣರಾಗಿದ್ದಾರೆ.

ಜೀವನ ಚರಿತ್ರೆ, ಆತ್ಮಚರಿತ್ರೆಗಳೂ ನಮ್ಮ ಗದ್ಯವನ್ನು ಪುಷ್ಟಿಗೊಳಿಸಲು ನೆರವಾಗಿವೆ. ಎಂ. ಎಸ್. ಪುಟ್ಟಣ್ಣನವರ "ಕುಣಿಗಲ್ ರಾಮಶಾಸ್ತ್ರಿಗಳ ಚರಿತ್ರೆ" (೧೯೧೦) "ಸಾಲಾರ್ ಜಂಗನ ಚರಿತ್ರೆ" (೧೯೧೭) ಎ. ಎಸ್. ಮುನಿಸ್ವಾಮಿಯವರ "ರಾಜಯೋಗಿ ಚಿಕ್ಕಲಿಂಗಣ್ಣ ಸ್ವಾಮಿಗಳ ಜೀವನ ಚರಿತ್ರೆ", ಡಿ. ವಿ. ಜಿ. ಅವರ "ದಿವಾನ್ ರಂಗಾಚಾರ್ಲು", "ಗೋಪಾಲಕೃಷ್ಣ ಗೋಖಲೆ" (೧೯೨೫)–ಇವನ್ನು ಈ ಶತಮಾನದ ಆರಂಭಕಾಲದ ಜೀವನ ಚರಿತ್ರೆಗಳೆಂದು ಹೇಳಬಹುದು. ಸಿ. ಕೆ. ವೆಂಕಟರಾಮಯ್ಯನವರ "ಪೈಗಂಬರ್ ಮಹಮ್ಮದನು" (೧೯೩೪) ಹಾಗೂ "ಯೇಸು ಕ್ರಿಸ್ತ" (೧೯೧೧), ಎ. ಆರ್. ಕೃಷ್ಣಶಾಸ್ತ್ರಿಯವರ "ಶ್ರೀ ರಾಮಕೃಷ್ಣ ಪರಮಹಂಸ ಚರಿತ್ರೆ" (೧೯೧೯), ಕುವೆಂಪು ಅವರ "ಶ್ರೀ ರಾಮಕೃಷ್ಣ ಪರಮಹಂಸ" (೧೯೩೪), "ಸ್ವಾಮಿ ವಿವೇಕಾನಂದ" (೧೯೩೭), ಎಂ. ಆರ್. ಶ್ರೀ ಅವರ "ಭಕ್ತಿ ಭಂಡಾರಿ

ಬಸವಣ್ಣ" (೧೯೩೧) ಮುಂತಾದುವು ಗಣನೀಯ ಜೀವನ ಚರಿತ್ರೆಗಳಾಗಿವೆ. ಹಾಗೆಯೇ ರಾ. ನರಸಿಂಹ ಮೂರ್ತಿ, ಕೆ. ಜಿ. ಕುಂದಣಗಾರ, ಸಿಂಪಿ ಲಿಂಗಣ್ಣ, ಅನಂತರಾವ್ ಮಂಟಗಣಿಕರ, ಅಶ್ವತ್ಥನಾರಾಯಣ, ಜಗತ್‌ರಾಮ್ ದವೆ ಮುಂತಾದವರೂ ಬರೆದಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿ, ಹೀಗೆ, ೨೦೦ಕ್ಕೂ ಮಿಕ್ಕಿ ಕೃತಿಗಳು ಪ್ರಕಟಗೊಂಡ ದಾಖಲೆಗಳಿವೆ.

ಕರ್ಕಿ ವೆಂಕಟರಮಣ ಶಾಸ್ತ್ರಿ (ಸೂರಿ) ಅವರ "ದಕ್ಷಿಣ ಭಾರತ ಯಾತ್ರೆ" (೧೮೯೦) ಮೊದಲ ಪ್ರವಾಸ ಕಥನ. ವಿ ಸೀ. ಅವರ "ಪಂಪಾಯಾತ್ರೆ" ಪ್ರಸಿದ್ಧ ಕೃತಿ, ಇಲ್ಲಿನ ವರ್ಣನಾವೈಖರಿ ನಮ್ಮ ಗದ್ಯವನ್ನು ಅಲಂಕರಿಸಿದೆ. ಶಿವರಾಮ ಕಾರಂತರ ಅಬೂವಿನಿಂದ ಬರಾಮಕ್ಕೆ", ಶ್ರೀಕೃಷ್ಣ ನಾರಾಯಣ ಗೋಸಾವಿ ಅವರ "ಕೈಲಾಸ–ಮಾನಸ ಸರೋವರ ಯಾತ್ರೆ", "ಬದರೀ ಯಾತ್ರೆ", "ಹಿಮಾಲಯ ದರ್ಶನ" ಮುಂತಾದುವು ಈ ದಿಸೆಯಲ್ಲಿ ಎದ್ದು ತೋರುವ ಕೃತಿಗಳು.

ವಿಮರ್ಶಾ ಕೃತಿಗಳೂ, ಸಂಶೋಧನಾತ್ಮಕ ಲೇಖನಗಳೂ ಕನ್ನಡದ ಗದ್ಯಕ್ಕೆ ವಿಶಿಷ್ಟ ಆಯಾಮವನ್ನು ನೀಡಿವೆ. ಮಂ. ಅ. ರಾಮಾನುಜಯ್ಯಂಗಾರ್ಯರ "ಕವಿಸಮಯ", "ಕವಿ ಕಾವ್ಯ ಪ್ರಶಂಸೆ", ಬಿ. ಎಂ. ಶ್ರೀ ಅವರ "ಕನ್ನಡ ಸಾಹಿತ್ಯ ಚರಿತ್ರೆ", ಭಾಷಣ ಮತ್ತು ಲೇಖನಗಳು, ಆರ್. ರಘುನಾಥರಾಯರ "ವ್ಯಾಕರಣೋಪನ್ಯಾಸ ಮಂಜರಿ" ಪೈ ಹಾಗೂ ಪಂಜೆಯವರ ಲೇಖನಗಳು ಈ ಶತಮಾನದ ಆರಂಭಕಾಲದ ಶಬ್ದಶಕ್ತಿಯನ್ನು ತೋರುತ್ತವೆ. ಟಿ. ಎಸ್. ವೆಂಕಣ್ಣಯ್ಯ, ಎ. ಆರ್. ಕೃ., ಮಾಸ್ತಿ, ಎಸ್. ವಿ. ರಂಗಣ್ಣ, ಬೇಂದ್ರೆ, ಕುವೆಂಪು, ಮುಗಳಿ, ವಿ. ಸೀ., ತೀ. ನಂ. ಶ್ರೀ, ಪು. ತಿ. ನ.–ಮುಂತಾದವರು ತಮ್ಮ ವಿಮರ್ಶಾತ್ಮಕ ಬರಹಗಳಿಂದಲೂ ಕನ್ನಡ ಗದ್ಯವನ್ನು ವೃದ್ಧಿಸಿದ್ದಾರೆ. ಮುಳಿಯ ತಿಮ್ಮಪ್ಪಯ್ಯನವರ "ನಾಡೋಜ ಪಂಪ", "ಪಾರ್ತಿಸುಬ್ಬ" ಇತ್ಯಾದಿ ಕೃತಿಗಳಲ್ಲಿ ಗದ್ಯದ ಹರಹನ್ನೂ, ಖಚಿತತೆಯನ್ನೂ ಗುರುತಿಸಬಹುದು. ವೈಜ್ಞಾನಿಕವಾಗಿಯೂ ಕೆಲವು ಮಹತ್ವದ ಕೃತಿಗಳು ಕಾಣಿಸಿಕೊಂಡಿವೆ. ಉದಾ– ಎಸ್. ಎನ್. ನರಹರಯ್ಯನವರ "ಖಗೋಳ ಶಾಸ್ತ್ರ" (೧೯೩೧), ಬೆಳ್ಳಾವೆ ವೆಂಕಟನಾರಣಪ್ಪನವರ "ಜೀವ ವಿಜ್ಞಾನ" (೧೯೩೯), ಆರ್. ಎಲ್. ನರಸಿಂಹಯ್ಯನವರ "ಶಕ್ತಿ", "ಜಗತ್ತುಗಳ ಹುಟ್ಟು ಸಾವು", "ನಕ್ಷತ್ರ ದರ್ಶನ" ಇತ್ಯಾದಿ.

ಈ ಬಗೆಯಾಗಿ ಕನ್ನಡ ಗದ್ಯವು ವ್ಯಾಪಕವಾಗಿ ಬೆಳೆಯುತ್ತ ಹಲವು ಕವಲುಗಳಲ್ಲಿ ಮೈ ತುಂಬಿ ಸ್ವಾತಂತ್ರ್ಯ ನಂತರದಲ್ಲಿ ತನ್ನ ಬಹುಮುಖ ಪ್ರಗತಿಯನ್ನು ತೋರುತ್ತಿರುವುದು ಕನ್ನಡಿಗರ ಸೌಭಾಗ್ಯವಾಗಿದೆ.

# ಸ್ವಾತಂತ್ರ್ಯಪೂರ್ವ ಕನ್ನಡ ಕವಿತೆ

ಎಂ. ಗೋಪಾಲಕೃಷ್ಣ ಅಡಿಗ

ಈ ಶತಮಾನದ ಪೂರ್ವಾರ್ಧದ ಕನ್ನಡ ಕಾವ್ಯದ ಈ ಸಂಕ್ಷಿಪ್ತ ಅವಲೋಕನದಲ್ಲಿ ಪ್ರಾರಂಭದ ಸಂದರ್ಭವನ್ನು, ಬೇರೂರಿದ ಒಲವುಗಳನ್ನು ಮತ್ತು ಅತ್ಯಂತ ಕ್ರಿಯಾಶಾಲಿಗಳಾದ ಕವಿಗಳನ್ನು ಮಾತ್ರ ಗಮನಿಸುವುದು ಅನಿವಾರ್ಯವಾಗಿದೆ. ಈ ಶತಮಾನದ ಪ್ರಾರಂಭದ ದಶಕಗಳಲ್ಲಿ ಸೃಜನಶೀಲತೆ ಕೆಳ ಮಟ್ಟದಲ್ಲೇ ಇತ್ತು. ಅದು ನಿರಾಶಾದಾಯಕವೂ ಆಗಿತ್ತು. ದೇಶದಾದ್ಯಂತ, ಅದರಲ್ಲೂ ಮುಖ್ಯವಾಗಿ ಬಂಗಾಳದಲ್ಲಿ ಕಲೆಗಳಲ್ಲಿ ಮತ್ತು ಬದುಕಿನಲ್ಲಿ ಕಾಣಿಸುತ್ತಿದ್ದ ಪುನರುಜ್ಜೀವನದ ಪ್ರಭಾವಗಳು ಮುದ್ದಣನಂತಹ ಸತ್ವಶಾಲಿಯಾದ ಕವಿಯನ್ನು ತಟ್ಟಿದರೂ ಅವನು ಹಳಗನ್ನಡದ ಶಬ್ದಗಳನ್ನು ಮತ್ತು ಪದ್ಯರೂಪಗಳನ್ನು ಬಳಸುವುದರಲ್ಲೇ ತೃಪ್ತನಾಗಬೇಕಾಯಿತು. ತನ್ನ ಕಾಲದ ಕನ್ನಡವನ್ನು ಉಪಯೋಗಿಸಿ ಹೊಸರೀತಿಯಲ್ಲಿ ಬರೆಯುವುದನ್ನು ಕೂಡ ಯೋಚಿಸಲಿಕ್ಕೆ ಸಾಧ್ಯವಿರಲಿಲ್ಲ. ಪದ್ಯರೂಪದಲ್ಲಿ ಬರೆದದ್ದೆಲ್ಲ ಕಾವ್ಯವೆನ್ನುವ ಭ್ರಮೆಯಿದ್ದ ಕಾಲ ಅದು. ಆಗಿನ ಓದುಗರು ಕುಮಾರವ್ಯಾಸನಿಗಿಂತ ಲಕ್ಷ್ಮೀಶನೇ ಉತ್ತಮ ಕವಿಯೆಂದು ಭಾವಿಸಿದ್ದರು. ಪದ್ಯ ಬರೆಯವವರಿಗೆ ಮಾದರಿಯೆಂದರೆ ಪಂಪ, ಕುಮಾರವ್ಯಾಸ ಅಥವಾ ಲಕ್ಷ್ಮೀಶನ ಕಾವ್ಯಗಳು ಅಥವಾ ತಮಗಿಂತ ಹಿಂದಿನ ನಿಜಗುಣ ಶಿವಯೋಗಿಯಂಥ ಕವಿಗಳ ಅಥವಾ ಹರಿದಾಸರ ಕೃತಿಗಳಾಗಿದ್ದುವು. ಆದ್ದರಿಂದಲೇ ತನ್ನ ಕೃತಿಗಳು ಮೈಸೂರಿನಲ್ಲಾದರೂ ಪ್ರಕಟವಾಗಲಿ ಎನ್ನುವ ಆಸೆಯಿಂದ ಅವು ಹಳೆಯ ಹಸ್ತಪ್ರತಿಗಳಲ್ಲಿ ದೊರಕಿದುವೆಂದು ಮುದ್ದಣ ನಟಿಸಬೇಕಾಯಿತು.

ನಿಧಾನವಾಗಿ, ಆದರೆ ಭದ್ರವಾಗಿ, ಆ ಶತಮಾನದ ಮೂರನೆಯ ಮತ್ತು ನಾಲ್ಕನೆಯ ದಶಕಗಳಲ್ಲಿ ನವೋದಯ ಕನ್ನಡನಾಡನ್ನೂ ತಲುಪಿತು. ನಮ್ಮ ಲೇಖಕರ ಮೇಲೆ ಅದರ ಪ್ರಭಾವ ದ್ವಿಗುಣಗೊಂಡಿತು. ಅಷ್ಟು ಹೊತ್ತಿಗೆ ಹೊಸದಾಗಿ ಸ್ಥಾಪಿತವಾದ ಶಾಲೆಕಾಲೇಜುಗಳಲ್ಲಿ ನಮ್ಮ ಯುವಕರು ಇಂಗ್ಲೀಷ್ ಸಾಹಿತ್ಯದ ಪ್ರಭಾವಕ್ಕೆ ಒಳಗಾಗಿದ್ದರು. ಅಲ್ಲದೆ ದೇಶದಾದ್ಯಂತ ಆವರಿಸುತ್ತಿದ್ದ ರಾಷ್ಟ್ರೀಯ ಭಾವನೆಯು ಅವರನ್ನು ತಟ್ಟಿತ್ತು. ಇಂಗ್ಲಿಷ್ ಸಾಹಿತ್ಯದ ಪ್ರಭಾವ ಕ್ರಿಯಾಶೀಲತೆಯ ಹೊಸದಿಗಂತಗಳನ್ನು ತೋರಿಸಿದರೆ, ರಾಷ್ಟ್ರೀಯ ಭಾವನೆ "ಹೊಸಗನ್ನಡ" ಭಾಷೆಯಲ್ಲಿ, ಇಂಗ್ಲಿಷ್ ಕಾವ್ಯ ತೋರಿಸಿದ ದಾರಿಯಲ್ಲಿ, ತಮ್ಮದೇ ಭಾವನೆಗಳನ್ನು ಮತ್ತು ಅನುಭವಗಳನ್ನು ಅಭಿವ್ಯಕ್ತಗೊಳಿಸುವ ಆತ್ಮವಿಶ್ವಾಸವನ್ನು ತಂದುಕೊಟ್ಟಿತು. ತಮ್ಮ ಆತ್ಮವಿಶ್ವಾಸವನ್ನು ದೃಢಪಡಿಸುವುದಕ್ಕಾಗಿ ಅವರು ಶತಮಾನಗಳಷ್ಟು ಹಳೆಯದಾದ ತಮ್ಮ ಸಂಸ್ಕೃತಿಯ ಮೂಲಗಳಿಂದಲೂ ಹೊಸದಾದ ತೀವ್ರವಾದ ವೈಯುಕ್ತಿಕ ಅಭಿವ್ಯಕ್ತಿಯ ಕ್ರಮಕ್ಕಾಗಿ ಶೇಕ್ಸ್‌ಪಿಯರ್‌ನಿಂದ ಹಿಡಿದು ಟೆನಿಸನ್ ಮತ್ತು ಬ್ರೌನಿಂಗ್‌ವರೆಗಿನ ಕಾವ್ಯಗಳಿಂದಲೂ ಬಹಳಷ್ಟನ್ನು ಕಲಿಯಬೇಕಾಯಿತು. ಇವೆರಡರ ನಡುವೆ ಘರ್ಷಣೆಗಳಿದ್ದುದರಿಂದ ಇವುಗಳನ್ನು ಸಮತೂಕದಲ್ಲಿಡುವ ಪ್ರಯತ್ನ ಅವರಿಗೆ ಹೊಸ ಅನ್ವೇಷಣೆಯಲ್ಲಿ ತೊಡಗಿದ್ದರೂ ಸಂಪ್ರದಾಯಸ್ಥರಾಗುವುದಕ್ಕೆ ಬೇಕಾದ ಸಾಮರ್ಥ್ಯವನ್ನು ಒದಗಿಸಿದವು.

ಮೊದಲ ಪ್ರಯತ್ನಗಳು ನೇರವಾದ ಅನುವಾದಗಳ ಕಡೆಗೆ, ಎರವಲು ಪಡೆಯುವುದಕ್ಕೆ ಅಥವಾ ಸಂಪೂರ್ಣ ಅನುಕರಣೆಗೆ ತಿರುಗಿದ್ದು ಸಹಜವೇ ಆಗಿತ್ತು. ಆ ಕಾಲದಲ್ಲಿ ನಮ್ಮ ಕವಿಗಳು ಈ ಎಲ್ಲ ಕೆಲಸಗಳಲ್ಲೂ ತೊಡಗಿದ್ದಕ್ಕೆ ಆಧಾರಗಳಿವೆ. ಈ ಪ್ರಯತ್ನಗಳಲ್ಲೆಲ್ಲಾ ಇಂಗ್ಲಿಷ್ ಮತ್ತು ಕನ್ನಡ ಪ್ರೊಫೆಸರರೂ, ಪ್ರಸಿದ್ಧ ಪಂಡಿತರೂ, ವಿದ್ಯಾರ್ಥಿಗಳ ಗೌರವಕ್ಕೆ ಪಾತ್ರರಾಗಿದ್ದ ಉಪಾಧ್ಯಾಯರೂ ಆಗಿದ್ದ ಬಿ. ಎಂ. ಶ್ರೀಕಂಠಯ್ಯನವರ ಪ್ರಯತ್ನ ಅತ್ಯಂತ ಗಮನಾರ್ಹವಾದದ್ದು ಮತ್ತು ಸಫಲವಾದದ್ದು. ಅವರ "ಇಂಗ್ಲೀಷ್ ಗೀತೆಗಳು" ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಮುಖವಾದ ಕೃತಿಯಾಗಿದೆ. ಇದು ಪಾಲ್‌ಗ್ರೇವ್‌ನ "ಇಂಗ್ಲೀಷ್ ಭಾವಗೀತೆಗಳ ಮತ್ತು ಲಾವಣ್ಯಗಳ ಸುವರ್ಣಭಂಡಾರ" ದಿಂದ ಆರಿಸಿದ ಹಾಡುಗಳ ಮತ್ತು ಭಾವಗೀತೆಗಳ ಸಂಕಲನವಾಗಿದೆ. ದಾಸರು ಮತ್ತು ಕೀರ್ತನಕಾರರು ಉಪಯೋಗಿಸಿದ ಛಂದಸ್ಸುಗಳಲ್ಲಿ ಅವಶ್ಯವಾದ ಬದಲಾವಣೆಗಳನ್ನು ಮಾಡಿಕೊಂಡು ಮತ್ತು ನಮ್ಮ ಷಟ್ಪದಿಗರು ಉಪಯೋಗಿಸಿದ ಮಾತ್ರಾಗಣಗಳನ್ನು ಆಧರಿಸಿದ ಹೊಸ ಛಂದಸ್ಸುಗಳನ್ನು ಸೃಷ್ಟಿಮಾಡಿ, ಶ್ರೀಕಂಠಯ್ಯನವರು ಕನ್ನಡ ಛಂದಸ್ಸಿಗೆ ವೈವಿಧ್ಯವನ್ನು ತಂದುಕೊಟ್ಟರು. ಇಂಗ್ಲೀಷ್ ಕವಿಗಳು ಪ್ರೀತಿಸಂಬಂಧವಾದ, ನಿಸರ್ಗಸಂಬಂಧವಾದ ಮತ್ತು ಮನುಷ್ಯಸಂಬಂಧವಾದ ತಮ್ಮ ವೈಯುಕ್ತಿಕ ಭಾವನೆಗಳನ್ನು ಅಭಿವ್ಯಕ್ತಿ ಮಾಡಿದ ಭಾವಗೀತೆಗಳನ್ನೇ ಅವರು ಮುಖ್ಯವಾಗಿ ಅನುವಾದಿಸಿದರು. ಆ ಕಾಲದ ಹಳೆಯ ಮೈಸೂರಿನಲ್ಲಿ ನಿತ್ಯವೂ ಬಳಸುತ್ತಿದ್ದ ಶುದ್ಧವಾದ ಸರಳ ಕನ್ನಡವನ್ನೇ ಅವರು ಉಪಯೋಗಿಸುತ್ತ, ಅತ್ಯಂತ ಅನಿವಾರ್ಯತೆಯಿದ್ದಾಗ ಮಾತ್ರ ಸಂಸ್ಕೃತಪದಗಳನ್ನು ಬಳಸಿದರು. ಈ ರೀತಿಯಲ್ಲಿ, ನಮ್ಮ ತರುಣ ಕವಿಗಳು ನಾದಮಯವಾದ ಸಂಸ್ಕೃತ ಶಬ್ದಗಳಿಗೆ ಅಥವಾ ಶಾಬ್ದಿಕವಾದ ಹಳಗನ್ನಡ ವ್ಯಾಕರಣಕ್ಕೆ ಶರಣುಹೋಗದೆ, ದಿನನಿತ್ಯದ ಭಾಷೆಯಲ್ಲಿ ಉತ್ಕೃಷ್ಟ ಕಾವ್ಯವನ್ನು ರಚಿಸಬಹುದೆನ್ನುವುದನ್ನು ಅವರು ರಚನೆಗಳ ಮೂಲಕ ತೋರಿಸಿದರು.

ಇಂಗ್ಲೀಷಿನಲ್ಲಿ ಅತ್ಯುತ್ತಮವಾದುದನ್ನು ಅನುವಾದಿಸಲು ಹೊಸಗನ್ನಡವಿನ್ನೂ ಬೆಳೆಯಬೇಕಾದ ಭಾಷೆಯೆನ್ನುವುದು ಅವರಿಗೆ ಗೊತ್ತಿದ್ದರಿಂದ, ಅವರು ವರ್ಡ್ಸ್‌ವರ್ತ್ಸ್, ಕೋಲರಿಜ್ ಅಥವಾ ಕೀಟ್ಸ್‌ರಲ್ಲಿ ಅತ್ಯುತ್ತಮವಾದುದನ್ನು ಅನುವಾದಿಸಲಿಲ್ಲವೆನ್ನುವುದು ಗಮನಾರ್ಹವಾಗಿದೆ. ಅವರು ಎರಡು ಗ್ರೀಕ್ ನಾಟಕಗಳನ್ನೂ ಕನ್ನಡಕ್ಕೆ ಅನುವಾದಿಸಿದರು. ಆದರೆ ಅಲ್ಲಿ ಅವರು ಉಪಯೋಗಿಸಿದ ಕನ್ನಡಕ್ಕಿಂತ ತೀರಾ ಭಿನ್ನವಾಗಿದೆ. ಬಹುಶಃ ಅಂದಿನ ಕನ್ನಡಕ್ಕೆ ರುದ್ರನಾಟಕಗಳ ಗಾಂಭೀರ್ಯವನ್ನು ವೈಚಾರಿಕತೆಯನ್ನು ತಡೆದುಕೊಳ್ಳುವುದು ಸಾಧ್ಯವಿಲ್ಲವೆಂದು ಅವರು ಭಾವಿಸಿದ್ದರಿಂದಲೋ ಏನೋ ಹಳಗನ್ನಡವನ್ನು ಆ ನಾಟಕಗಳಲ್ಲಿ ಉಪಯೋಗಿಸಿದ್ದಾರೆ. ಸಂಸ್ಕೃತ ಪದಗಳನ್ನು ಉಪಯೋಗಿಸುವುದರ ಬದಲು ಮೂಲ ಕನ್ನಡಕ್ಕೆ ಹೋಗಿ ಅವರು ಉಪಯೋಗಿಸಿರುವ ಪದಗಳನ್ನು ಈ ಹೊತ್ತು ನೋಡಿದರೆ, ಇಂದಿನ ಕನ್ನಡಿಗನಿಗೆ ಅವು ತಮಿಳು ಪದಗಳಿರಬಹುದೆಂದು ಅನ್ನಿಸುತ್ತದೆ. ಅವರ ಈ ಪ್ರಯೋಗಗಳನ್ನು ನೋಡಿದ ಅವರ ಅನುಯಾಯಿಗಳು ಗಂಭೀರವಾದ ವಿಷಯಕ್ಕೆಲ್ಲ ಹೊಸಗನ್ನಡ ಸಾಲದು ಎಂದು ಭಾವಿಸಿದರು. ಇದು ಪ್ರತಿಗಾಮಿ ಹೆಜ್ಜೆಯಾಗಿ ಇತ್ತೀಚೆನವರೆಗೂ ಕನ್ನಡ ಕಾವ್ಯದ ಮೇಲೆ ದುಷ್ಪರಿಣಾಮವನ್ನು ಬೀರಿತು. ಪರಿಣಾಮವನ್ನು ಅಲ್ಪವೆಂದು ಹೇಳಲಿಕ್ಕಾಗುವುದಿಲ್ಲ. ಪ್ರೊಫೆಸರರಾಗಿ, ವಾಗ್ಮಿಗಳಾಗಿ, ಹೊಸಮಾರ್ಗದ ಅನ್ವೇಷಕರಾಗಿ ಮತ್ತು ಸ್ಫೂರ್ತಿಯ ಕೇಂದ್ರವಾಗಿ ಬಿ. ಎಂ. ಶ್ರೀಕಂಠಯ್ಯನವರು ಎಂದೆಂದಿಗೂ ಸ್ಮರಣೀಯರಾಗಿದ್ದಾರೆ.

**ಮೂರು ಕೇಂದ್ರಗಳು**

ಕರ್ನಾಟಕದ ಪ್ರತಿ ಮೂಲೆಮೂಲೆಗಳಿಂದ ಪ್ರತಿ ಪೊದೆಯಿಂದ ಮತ್ತು ಮರದಿಂದ, ಅನೇಕ ಕಾವ್ಯಧ್ವನಿಗಳು ಕೇಳಿಬಂದವು. ಆಗ ಪದ್ಯಬರೆಯುತ್ತಿದ್ದವರಲ್ಲಿ ಅನೇಕರು ಈಗ ಮರೆತುಹೋಗಿದ್ದಾರೆ ಅಥವಾ ಸಾಹಿತ್ಯಗಳ ಸಾಧನಗಳನ್ನು ಬಳಸಿ ಜೀವಂತವಾಗಿರಲಿಕ್ಕೆ ವೀರ ಪ್ರಯತ್ನಗಳನ್ನು ಮಾಡಿದರೂ ಅವರಲ್ಲಿ ಕೆಲವರು ಮರೆತುಹೋಗಿದ್ದಾರೆ. ಶ್ರೀಕಂಠಯ್ಯನವರ ಮಾರ್ಗವನ್ನು ಹಿಡಿದವರಲ್ಲಿ ಮೂರು ಹೆಸರುಗಳು ಮಾತ್ರ ಎದ್ದುಕಾಣುತ್ತವೆ. ಕೆ. ವಿ. ಪುಟ್ಟಪ್ಪ. (ಕುವೆಂಪು) ಪಿ. ಟಿ. ನರಸಿಂಹಾಚಾರ್, (ಪು.ತಿ.ನ.) ಮತ್ತು ಕೆ. ಎಸ್. ನರಸಿಂಹಸ್ವಾಮಿ.

ಪುಟ್ಟಪ್ಪನವರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅದ್ಭುತ ವ್ಯಕ್ತಿಯಾಗಿದ್ದಾರೆ. ಸಂಕೋಚಗಳಿಲ್ಲದ ಮಹತ್ವಾಕಾಂಕ್ಷೆಯಿಂದ, ಅವರು ಕೇವಲ ಸ್ವಪ್ರಯತ್ನದಿಂದ, ಸತತಾಭ್ಯಾಸದಿಂದ ಮತ್ತು ಚಿತ್ತೈಕಾಗ್ರತೆಯಿಂದ ದೊಡ್ಡಸ್ಥಾನವನ್ನು ಪಡೆದಿದ್ದಾರೆ. ಸಂಸ್ಕೃತದಿಂದ, ಇಂಗ್ಲೀಷ್ ರೊಮ್ಯಾಂಟಿಕ್ ಕಾವ್ಯದಿಂದ ಮತ್ತು ಇಂಗ್ಲೀಷ್‌ಸಾಹಿತ್ಯದಿಂದ ರಾಮಕೃಷ್ಣ, ಅರೊಬಿಂದೋ ಮತ್ತು ವಿವೇಕಾನಂದರಿಂದ ಪ್ರಭಾವಗಳನ್ನು ಅರಗಿಸಿಕೊಂಡರು. ಭಾರತದ ಹೊಸ ಯುಗದಲ್ಲಿ ಆವಿರ್ಭವಿಸಿದ ರಾಷ್ಟ್ರಭಕ್ತಿ, ಸ್ವಾತಂತ್ರ್ಯಪ್ರೇಮ, ಸಮಾಜ ಸುಧಾರಣೆ, ಸಾಮಾಜಿಕ ಬದಲಾವಣೆ ಮೊದಲಾದ ವಿಚಾರಗಳನ್ನೂ ಆದರ್ಶಗಳನ್ನೂ ಹೀರಿಕೊಂಡರು. ಭಾವಗೀತೆಯಿಂದ ಮಹಾಕಾವ್ಯದವರೆಗೆ ಮತ್ತು ವಿಮರ್ಶೆಯಿಂದ ಲಲಿತ ಪ್ರಬಂಧದವರೆಗೆ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಅವರು ಕೃತಿರಚನೆ ಮಾಡುವ ಸಾಹಸಿಗಳಾದರು. ಪ್ರಮುಖವಾದ ಅವರ ಸಾಹಿತ್ಯ ಕೃತಿಗಳೆಂದರೆ "ರಾಮಾಯಣದರ್ಶನ" "ಕಾನೂರು ಸುಬ್ಬಮ್ಮ ಹೆಗ್ಗಡಿತಿ" ಮತ್ತು "ಮಲೆಗಳಲ್ಲಿ ಮದುಮಗಳು".

ಅಂತರ್ಮುಖಿ ಅತಿಯಾಯಿತೇನೋ ಎನ್ನುವಂತಹ ಸೂಕ್ಷ್ಮ ಮನಸ್ಸಿನ ಪು.ತಿ.ನ.ರವರು ಅಪರೂಪದ ಕವಿ. ಸುಸಂಸ್ಕೃತ ಮನಸ್ಸುಳ್ಳ, ಅಧ್ಯಯನಶೀಲರಾದ ಈ ಕವಿ ಕೆಲವು ಅತ್ಯುತ್ತಮ ಭಾವಗೀತೆಗಳನ್ನು ಮತ್ತು ಸುನೀತಗಳನ್ನು ಬರೆದಿದ್ದಾರೆ. ನಮ್ಮ ಪುರಾತನ ಸಂಸ್ಕೃತ ಕಾವ್ಯಗಳಲ್ಲಿರುವ ಚೇತನವೂ, ಧ್ಯಾನಶೀಲತೆಯೂ ಸೇರಿರುವ ಅವರ ಮನಸ್ಸು ಅವರ ಗದ್ಯಪ್ರಬಂಧಗಳಲ್ಲೂ ಕಾಣಿಸುತ್ತದೆ. ಅವರು ಕೆಲವು ಸಂಗೀತರೂಪಕಗಳನ್ನೂ ಬರೆದಿದ್ದಾರೆ. ಅವರು ಯಾವಾಗಲೂ ಕಾವ್ಯದ ತಿರುಳನ್ನು ಸೆರೆಹಿಡಿಯಲಿಕ್ಕೆ ಪ್ರಯತ್ನಿಸುತ್ತಾರೆ. ಆ ತಿರುಳು ಸಂಗೀತದಲ್ಲಿ ಅವರಿಗೆ ಸಿಕ್ಕಿರಬಹುದೋ ಏನೋ.

ಕೆ. ಎಸ್. ನರಸಿಂಹಸ್ವಾಮಿಯವರು ಸ್ವಾತಂತ್ರ್ಯಪೂರ್ವದಲ್ಲೇ "ಮೈಸೂರು ಮಲ್ಲಿಗೆ"ಯಲ್ಲಿರುವ ಪ್ರೇಮಗೀತೆಗಳಿಂದ ಜನಪ್ರಿಯರಾಗಿದ್ದರು. ಸ್ವಾತಂತ್ರ್ಯಾನಂತರವೂ ಬರೆಯುತ್ತಿರುವ ಅವರು ಕಾಲಕ್ಕೆ ತಕ್ಕಂತೆ ತಮ್ಮ ಕಾವ್ಯಕ್ಕೆ ಹೊಸ ಆಯಾಮಗಳನ್ನು ಸೇರಿಸಿದ್ದಾರೆ. ಸರಳವಾದ ಗೇಯಗುಣವುಳ್ಳ ಅವರ ಪ್ರೇಮ ಕವಿತೆಗಳು ತುಂಬ ಸುಶಿಕ್ಷಿತವಾದ ಕಾವ್ಯಸಂವೇದನೆಯಿಂದ ಕೂಡಿವೆ. ಬಿ. ಎಂ. ಶ್ರೀಕಂಠಯ್ಯನವರ ಇಂಗ್ಲೀಷ್ ಕವನಗಳ ಅನುವಾದಗಳ ನಂತರ ಬಂದ ಕವಿಗಳಲ್ಲಿ ಹಳೆಯ ಮೈಸೂರು ಪ್ರಾಂತದ ನಗರದಲ್ಲಿದ್ದರೂ ನೀರಸವಾದ ಭಾಷೆಯಲ್ಲೂ ಅತ್ಯುತ್ತಮ ಕವಿತೆಯನ್ನು ಬರೆದವರೆಂದು ಎದ್ದು ಕಾಣುತ್ತಾರೆ. ..

ಉತ್ತರ ಕರ್ನಾಟಕದಲ್ಲಿ, ಅದರಲ್ಲೂ ಧಾರವಾಡದಲ್ಲಿ, ಈ ಯುಗದ ಅತ್ಯಂತ ಶ್ರೇಷ್ಠಕವಿಯಾದ ದ.ರಾ. ಬೇಂದ್ರೆಯವರ ಸ್ಫೂರ್ತಿದಾಯಕ ನೇತೃತ್ವದಲ್ಲಿ ಸೃಜನಶೀಲತೆಯ ಇನ್ನೊಂದು ಕೇಂದ್ರವಿತ್ತು. ಸ್ವಾತಂತ್ರ್ಯಪೂರ್ವದಲ್ಲಿ ಉತ್ತರ ಕರ್ನಾಟಕ ಬ್ರಿಟಿಷರ ಆಡಳಿತಕ್ಕೊಳಪಟ್ಟಿದ್ದರೂ, ಸಾಂಸ್ಕೃತಿಕವಾಗಿ ಮಹಾರಾಷ್ಟ್ರದ ಅಧೀನದಲ್ಲಿತ್ತು. ಹಳೆಯ ಮೈಸೂರು ಪ್ರಾಂತದಲ್ಲಿನ ಕವಿಗಳಿಗಿಂತ ಉತ್ತರ ಕರ್ನಾಟಕದ ಕವಿಗಳು ಹೆಚ್ಚು ಆತಂಕಗಳನ್ನು ಎದುರಿಸಬೇಕಾಗಿತ್ತು. ಆಗ ಬೇಂದ್ರೆಯವರ ಸುತ್ತಲೂ ಸೇರಿದ ಕವಿಗಳ ಗುಂಪೊಂದು ಕಾವ್ಯ ರಚನೆಗೆ ಪ್ರಯತ್ನಿಸಿತು. ಅವರಲ್ಲೆಲ್ಲಾ ಬೇಂದ್ರೆಯವರೊಬ್ಬರೇ ದೊಡ್ಡವರಾಗಿ ಕಾಣಿಸುತ್ತಾರೆ. ಕನ್ನಡದಲ್ಲಿ ಅತ್ಯಂತ ಶ್ರೇಷ್ಠ ಭಾವಗೀತೆಗಳನ್ನು ಬರೆದ ಈ ಕವಿಯ ಭಾವಗೀತೆಗಳಿಗೆ ಸರಿಸಾಟಿ ಬೇರೆ ಇಲ್ಲ. ಹತ್ತು ದಿಕ್ಕಿನ ಪ್ರಭಾವಗಳಿಗೆ ತಮ್ಮನ್ನು ಒಡ್ಡಿಕೊಂಡು ತುಂಬಾ ವಿದ್ವಾಂಸರಾದರೂ, ಅವರು ಈ ನೆಲದ ಸತ್ವಗಳನ್ನೆಲ್ಲ ತೆರೆದು ತೋರಿಸಿದರೂ. ಅವರ ಯಾವ ಪದ್ಯದಲ್ಲೂ ಪಾಶ್ಚಾತ್ಯಪ್ರಭಾವ ಕಾಣಿಸದಿರುವುದಕ್ಕೆ ಅವರು ಅದನ್ನು ಸಂಪೂರ್ಣವಾಗಿ ತಮ್ಮ ಅಂತಃಸತ್ವದಲ್ಲಿ ಅರಗಿಸಿಕೊಂಡದ್ದೇ ಕಾರಣವಿರಬೇಕು. ಆಧುನಿಕ ಸಂವೇದನೆಯುಳ್ಳ ಆಧುನಿಕ ಮನುಷ್ಯನಾಗಿದ್ದರೂ ಉತ್ತರಕರ್ನಾಟಕದ ಹಳ್ಳಿಗಳ ಆಡುಮಾತನ್ನೇ ಬಳಸಬೇಕಾದ ಅಸಂಗತ ಪರಿಸ್ಥಿತಿಯ ಜೊತೆಗೆ ಅವರು ಸೆಣಸಾಡಬೇಕಾಯಿತು. ಕುಮಾರವ್ಯಾಸನ ನಂತರ ಕನ್ನಡಭಾಷೆಯ ಗುಪ್ತಮೂಲಗಳನ್ನೆಲ್ಲಾ ನಮ್ಮಲ್ಲಿ ಹುಡುಕಿದವರೆಂದರೆ ಬೇಂದ್ರೆಯವರೊಬ್ಬರೇ. ಅವರು ಅನೇಕ ವಸ್ತುಗಳ ಬಗ್ಗೆ ಬರೆದಿದ್ದಾರೆ ಮತ್ತು ಬಹಳಷ್ಟು ಬರೆದಿದ್ದಾರೆ. ಅವರು ತಮ್ಮ ಕವಿತೆಗಳನ್ನು ಓದುತ್ತಿದ್ದಾಗ ತಮ್ಮ ಶಬ್ದಗಾರುಡಿಯಿಂದ ಸಭಿಕರನ್ನು ಮಂತ್ರಮುಗ್ಧರನ್ನಾಗಿಸುತ್ತಿದ್ದರು. ತಮ್ಮ ಸುತ್ತಲಿನ ಗಂಡಸರು ಹೆಂಗಸರಿಂದ ಹಿಡಿದು ಆಧ್ಯಾತ್ಮಿಕ ಶಾಸ್ತ್ರದವರೆಗೆ, ಗಣಿತಶಾಸ್ತ್ರದಿಂದ ಹಿಡಿದು ಕಾವ್ಯದವ

ರೆಗೆ ಅವರಿಗೆ ಅನೇಕ ಆಸಕ್ತಿಗಳಿದ್ದವು. ಈಗ ಬರೆಯತ್ತಿರುವ ರುವ ಕನ್ನಡದ ಎಲ್ಲ ಕವಿಗಳ ಮೇಲೂ ಪ್ರಭಾವ ಬೀರಿದ ಈ ಕವಿ ಕಾವ್ಯ ಕ್ಷೇತ್ರಕ್ಕೆ ತಮ್ಮೆಲ್ಲ ಶಕ್ತಿಯನ್ನು ಧಾರೆಯೆರೆಯಲಿಲ್ಲ ಮತ್ತು ಅಷ್ಟು ಸಫಲವಲ್ಲದ ಕವಿತೆಗಳನ್ನು ತಿದ್ದಲಿಲ್ಲ ಎನ್ನುವುದೊಂದೇ ನಮ್ಮ ಅಸಮಾಧಾನ.

ಬೇಂದ್ರೆಯವರ “ಗೆಳೆಯರ ಗುಂಪಿ”ನಲ್ಲಿದ್ದ ಇತರ ಕವಿಗಳಲ್ಲಿ ಮಧುರಚೆನ್ನ, ವಿ.ಕೃ. ಗೋಕಾಕ್ ಮತ್ತು ಮುಗಳಿಯವರನ್ನು ಹೆಸರಿಸಬಹುದು.

ಬ್ರಿಟಿಷ್ ಆಡಳಿತಕ್ಕೊಳಪಟ್ಟ ಆಗಿನ ದಕ್ಷಿಣಕನ್ನಡದಲ್ಲಿ ಮತ್ತೊಂದು ಸೃಜನಶೀಲ ಕೇಂದ್ರವಿತ್ತು. ಶಾಲೆಯಲ್ಲಿ ಓದುವ ಹುಡುಗ ಹುಡುಗಿಯರಿಗಾಗಿ ಕವಿತೆಗಳನ್ನು ರಚಿಸಿದ ಪಂಜೆ ಮಂಗೇಶರಾಯರು ಮತ್ತು ಪಂಡಿತ ಕವಿಯಾಗಿದ್ದ (ಕವಿಗಿಂತ ಹೆಚ್ಚಾಗಿ ಪಂಡಿತರಾಗಿ) ಮನಕರಗುವಂಥ ಕೆಲವು ಕವಿತೆಗಳನ್ನು ಬರೆದ ಗೋವಿಂದ ಪೈಯವರು ಈ ಗುಂಪಿನಲ್ಲಿ ಮುಖ್ಯರಾಗಿದ್ದರು. ಸ್ವಾತಂತ್ರ್ಯಪೂರ್ವ ದಕ್ಷಿಣ ಕನ್ನಡದ ಕವಿಗಳಲ್ಲಿ ಕಡೆಂಗೋಡ್ಲು ಶಂಕರ ಭಟ್ಟರ ಹೆಸರು ಎದ್ದು ಕಾಣಿಸುತ್ತದೆ. ಆಧುನಿಕವಾದ ‘ಹೊಸಗನ್ನಡ’ದಲ್ಲಿ ಅಪೂರ್ವವಾದ ಚಿಂತನಶೀಲವ್ಯಕ್ತಿತ್ವವನ್ನು ಅವರ ಕವಿತೆಗಳು ಮೈಗೂಡಿಕೊಂಡಿವೆ. “ಮಾದ್ರಿಯ ಚಿತೆ” ಎನ್ನುವ ಅವರ ದೀರ್ಘಕವನದ ಚಿಂತನ ಅನುಭವ ಅಭಿವ್ಯಕ್ತಿಗಳ ಸಮಗ್ರೀಕರಣದ ಮೂಲಕ ಕನ್ನಡ ಜನಗಳು ಅವರನ್ನು ಯಾವಾಗಲೂ ನೆನಪಿನಲ್ಲಿಡುವಂತೆ ಮಾಡಿದ್ದಾರೆ.

ಈ ಎಲ್ಲ ಕವಿಗಳ ನಡುವೆ, ಈಗ ತೊಂಬತ್ತರಲ್ಲಿರುವ, ವರ್ಡ್ಸ್‌ವರ್ತನ ಪ್ರಭಾವದಲ್ಲಿ ಬಂದ ಇಂಗ್ಲೀಷ್ ರೊಮ್ಯಾಂಟಿಕ್ ಕಾವ್ಯದ ನಿಜವಾದ ಸತ್ವವನ್ನು ಹೀರಿಕೊಂಡು ಹಳೆಯ ಮೈಸೂರು ಪ್ರಾಂತದ ಮಾಸ್ತಿ ವೆಂಕಟೇಶ ಅಯ್ಯಂಗಾರರು ಎದ್ದು ಕಾಣುತ್ತಾರೆ. ಈ ಅಂಶ ಮುಖ್ಯವಾಗಿ ಅವರ ಭಾಷೆಯ ಬಳಕೆಯಲ್ಲಿ ಕಾಣಿಸುತ್ತದೆ. ಅವರ ಕವಿತೆಗಳಲ್ಲಿ ಬರುವ ಭಾವನೆಯಾಗಲಿ ಅಥವಾ ಭಾಷೆಯಾಗಲಿ ಅತಿಯಾಯಿತೆಂದು ಅನ್ನಿಸುವುದೇ ಇಲ್ಲ. ಮೈಸೂರು ಪ್ರದೇಶದ ದಿನನಿತ್ಯದ ಬದುಕಿಗೆ ತುಂಬಾ ಹತ್ತಿರವಾಗಿರುವ ಭಾಷೆಯನ್ನು ಅವರು ಬಳಸುತ್ತಾರೆ. ವರ್ಡ್ಸ್‌ವರ್ತ್ ಸೋತಾಗ ಹೇಗೆ ಅವನ ಕವಿತೆಯೇ ಕಾಂತಿರಹಿತವಾಗಿರುತ್ತಿತ್ತೋ ಹಾಗೆ ಬರೆದ ಮಾಸ್ತಿಯವರು ವರ್ಡ್ಸ್‌ವರ್ತ್ ಯಶಸ್ವಿಯಾದಾಗ ಹೇಗೆ ಬರೆದಿದ್ದಾನೋ ಹಾಗೆಯೇ ಬರೆಯುವ ಸಾಮರ್ಥ್ಯವನ್ನೂ ಉಳ್ಳವರು. ಅವರು ಸಣ್ಣ ಕತೆಗಾರರಾಗಿ ಹೆಚ್ಚು ಪ್ರಸಿದ್ಧರಾಗಿದ್ದರೂ, “ನವರಾತ್ರಿ”ಯಲ್ಲಿ ಅವರ ಕವನಗಳು ಗಮನಾರ್ಹವಾಗಿವೆ. “ರಾಮನವಮಿಯ ದಿವಸ” ಮತ್ತು “ಗೌಡರಮಲ್ಲಿ” ವಿಚಾರ ಮತ್ತು ಭಾವನೆಗಳ ಯಶಸ್ವಿಯಾದ ಹೊಂದಾಣಿಕೆಯಲ್ಲಿ ಸಫಲವಾಗಿದೆ. ಅವರ ಕೆಲವು ಸುನೀತಗಳು ಕೂಡ ಉತ್ತಮವಾಗಿವೆ. ಭಾಷೆಯ ಮತ್ತು ಛಂದಸ್ಸಿನ ಉಪಯೋಗದಲ್ಲಿ ಇಂದಿನ ಕವಿಗಳು ಅವರಿಂದ ಕಲಿಯಬೇಕಾದುದು ಬಹಳಷ್ಟಿದೆ.

ಸ್ವಾತಂತ್ರ್ಯದ ಮುಂಚಿನ ಈ ಶತಮಾನದಲ್ಲಿ ಬಂದ ಹೊಸ ಕನ್ನಡ ಕವಿತೆಯ ಮೊದಲ ಘಟ್ಟ ಮುಂದಿನ ಬೆಳವಣಿಗೆಗೆ ಭದ್ರವಾದ ತಳಹದಿಯನ್ನು ಹಾಕಿದೆ. ಹೊಸಗನ್ನಡವನ್ನು ಗಂಭೀರ ಕಾವ್ಯಕ್ಕೂ ಬಳಸುವುದನ್ನು ಅದು ಸಾಧ್ಯ ಮಾಡಿತು. ಕಾವ್ಯಕ್ಕೂ ಕಾವ್ಯೇತರ ಬಳಕೆಗೂ ಉಪಯೋಗಿಸುವಂತೆ ಕರ್ನಾಟಕದ ಅನೇಕ ಉಪಭಾಷೆಗಳಿಂದ ಒಂದು ಸಾಮಾನ್ಯವಾದ ಕನ್ನಡವನ್ನು ಸಿದ್ಧಪಡಿಸುವುದರಲ್ಲಿ ಅದು ಯಶಸ್ವಿಯಾಗಿದೆ. “ಸ್ವಚ್ಛಂದ ಛಂದಸ್ಸೇ” ಆಗದಿದ್ದರೂ, ಅದಕ್ಕೆ ಹತ್ತಿರವಾದ ಸರಳ ರಗಳೆಯನ್ನು ಅದು ಸೃಷ್ಟಿಸಿತು. ಹಿಂದಿನ ಕಾಲದಲ್ಲಿ ಕಾವ್ಯವಸ್ತುವೆಂದು ಪರಿಗಣಿಸಲಾಗದ್ದನ್ನು ಅದು ಕಾವ್ಯವಸ್ತುವಾಗಿ ಬಳಸಿ ತೋರಿಸಿತು. ಹೀಗೆ ಅದು ಕಾವ್ಯಕ್ಷೇತ್ರವನ್ನು ವಿಸ್ತರಿಸಿ ಅದಕ್ಕೆ ವೈಯಕ್ತಿಕ ತೀವ್ರತೆಯನ್ನೂ ಹೊಸತೊಂದು ಗಾಂಭೀರ್ಯವನ್ನೂ ತಂದುಕೊಟ್ಟಿತು. ಕವಿಯಾದವನು ತನ್ನ ಸ್ವಂತ ಭಾವನೆಗಳ ಬಗ್ಗೆ ಕಾವ್ಯವನ್ನು ರಚಿಸಬಹುದೆನ್ನುವುದನ್ನು ಯಾವ ಅನುಮಾನಕ್ಕೂ ಆಸ್ಪದವಿಲ್ಲದಂತೆ ಅದು ಸಾಧಿಸಿ ತೋರಿಸಿತು. ಅದಕ್ಕೆ ಅವರದೇ ಆದ ಮಿತಿಗಳೂ ಇದ್ದುವೆನ್ನುವುದು ನಿಜ. ಅದರ ಪ್ರಯೋಗಗಳಿಂದ ಅದು ಗಂಭೀರವಾದ ದೊಡ್ಡ ದೊಡ್ಡ ವಿಚಾರಗಳನ್ನು ಪದ್ಯದಲ್ಲಿ ಹಾಕಿದ ಮಾತ್ರಕ್ಕೆ ಅವೆಲ್ಲವೂ ಕಾವ್ಯವಾಗುತ್ತದೆ ಎಂಬ ಭ್ರಮೆಯನ್ನೂ ಹೋಗಲಾಡಿಸಲಿಲ್ಲ. ಕೆಲವು ಕವಿತೆಗಳನ್ನು ಹಾಡಿದ್ದರಿಂದ ಅಥವಾ ರಾಗವಾಗಿ ಓದುತ್ತಿದ್ದುದರಿಂದ ಅದು ಕಾವ್ಯದ ಸ್ವಾಯತ್ತತೆಯನ್ನು ವ್ಯವಸ್ಥೆಗೊಳಿಸಲಿಲ್ಲ ಮತ್ತು ಕಣ್ಣಿಗೆ ಕಾಣಿಸದ ಸಂಗೀತದ ಬೇಡಿಗಳಿಂದ ಕಾವ್ಯವನ್ನು ಬಿಡಿಸಲಿಲ್ಲ. ಅಷ್ಟೇ ಅಲ್ಲದೆ ಆ ಕಾಲದ ಕವಿಗಳು ಕಾವ್ಯದ ಸಾವಯವ ಶಿಲ್ಪದ ಬಗ್ಗೆ ಯೋಚಿಸಲೇ ಇಲ್ಲ. ಅವರು ಬಿಡಿ ಚರಣಗಳನ್ನು, ಅಥವಾ ಬಿಡಿಯಾದ ಕೆಲವು ಸಾಲುಗಳನ್ನು ಮೆಲುಕು ಹಾಕುತ್ತ ಖುಷಿಪಡುವುದರಲ್ಲೇ ತೃಪ್ತರಾಗಿದ್ದರು. ಆ ಕಾಲದ ಬಹಳಷ್ಟು ಕವಿಗಳಿಗೆ ಆತ್ಮವಿಮರ್ಶೆಯ ಶಕ್ತಿ ಇಲ್ಲದೆ ಇದ್ದುದರಿಂದ, ಪ್ರಾರಂಭದ ದಶಕಗಳಲ್ಲಿ ಕನ್ನಡದಲ್ಲಿ ಬರೆದುದೆಲ್ಲವನ್ನು ಹೊಗಳುವುದು ಸ್ವಾಭಾವಿಕವಾದ್ದರಿಂದ, ಕಾವ್ಯದ ಬಗ್ಗೆ ಸರಿಯಾದ ವಿಮರ್ಶೆ ಬೆಳೆಯಲಿಲ್ಲ. ಅವರು ಎಲ್ಲವನ್ನು ಮಾಡಲಿಕ್ಕೆ ಸಾಧ್ಯವೂ ಇರಲಿಲ್ಲ. ಅವರು ಮಾಡಬೇಕಾದ ಬಹಳಷ್ಟನ್ನು ಮುಂದಿನ ತಲೆಮಾರುಗಳಿಗೆ ಬಿಟ್ಟುಕೊಟ್ಟರು.

**ಕನ್ನಡ ಅನುವಾದ: ಸುಮತೀಂದ್ರ ನಾಡಿಗ**

# ಸ್ವಾತಂತ್ರ್ಯೋತ್ತರ ಕನ್ನಡ ಗದ್ಯ ಸಾಹಿತ್ಯ

ವೇಣುಗೋಪಾಲ ಸೊರಬ

ಸಾಹಿತ್ಯದ ಅಭಿವ್ಯಕ್ತಿಯ ಒಂದು ಪ್ರಕಾರವಾಗಿ ಗದ್ಯಕ್ಕೆ ಸರಿಸಾಟಿಯಾದುದಿಲ್ಲ. ಅದು ಪಂಡಿತರ ಇಂಗಿತಕ್ಕೆ ತಕ್ಕಂತೆ ಕುಣಿಯುವಂತೆಯೇ ಶ್ರೀಸಾಮಾನ್ಯನ ಅಗತ್ಯಗಳನ್ನೂ ಪೂರೈಸುತ್ತದೆ.

ಗದ್ಯಪ್ರಕಾರದಲ್ಲಿ ಅನೇಕ ಬಗೆಗಳಿವೆ. ಪ್ರಹಸನದಿಂದ ವಿಡಂಬನದವರೆಗೆ, ಉಗ್ರ ವಿಡಂಬನ ಲೇಖನದಿಂದ ಕರಪತ್ರ ಲೇಖನದ ವರೆಗೆ ಹಲವು ಬಗೆಗಳಿವೆ. ನಾವು ನಮ್ಮ ಉದ್ದೇಶಕ್ಕಾಗಿ ಕಥಾತ್ಮಕವಾದ ಹಾಗೂ ಕಥಾತ್ಮಕೇತರ ಬರಹಗಳನ್ನು ಅಂದರೆ ಪ್ರವಾಸ ಕಥನ, ಜೀವನ ಚರಿತ್ರೆ, ಆತ್ಮಕಥೆ ಹಾಗೂ ಮುಂದೆ ಗಂಭೀರವಾದ ಬರವಣಿಗೆಯೆಂದು ಪರಿಗಣಿಸಬಹುದಾದ ಪತ್ರಿಕಾ ಬರಹದ ಕೆಲವು ಬಗೆಗಳತ್ತ ಮಾತ್ರ ಗಮನ ಹರಿಸಬೇಕಾಗಿದೆ. ಕಥಾಸಾಹಿತ್ಯವನ್ನು ತೆಗೆದುಕೊಂಡರೆ ಕಾದಂಬರಿ, ಸಣ್ಣಕಥೆ, ಜಾನಪದ ಕಥೆ ಮೊದಲಾದ ಅಸಂಖ್ಯಾತ ಬಗೆಗಳಿವೆ. ನಾಟಕ ಏಕೆ ಈ ವರ್ಗಕ್ಕೆ ಸೇರಬಾರದು ಎಂದೂ ಕೇಳಬೇಕೆನಿಸಬಹುದು. ಅಂತೆಯೇ ವಿಮರ್ಶೆ ಹಾಗೂ ವ್ಯಾಖ್ಯೆಗಳು ಗದ್ಯದವ್ಯಾಪ್ತಿಗೆ ಒಳಪಡುವುದಿಲ್ಲ ಎಂದು ಅವುಗಳನ್ನು ಮರೆತು ಬಿಡುವುದಕ್ಕಾಗುತ್ತದೆಯೇ? ಅದರಲ್ಲಿಯೂ, ತತ್ವಶಾಸ್ತ್ರದ ಬರವಣಿಗೆಗಳಿಂದ ಹಿಡಿದು ಜನಪ್ರಿಯ ವಿಜ್ಞಾನ ಮಾಲೆಯವರೆಗೆ ವ್ಯಾಪಿಸಿರುವ ಗಂಭೀರ ಬರವಣಿಗೆಯನ್ನು ಗದ್ಯದ ಕ್ಷೇತ್ರದಿಂದ ಹೊರಗಿಡಲು ಸಾಧ್ಯವಿಲ್ಲದಿರುವಾಗ? ಇದು ಆಧುನಿಕ ಗದ್ಯಲೇಖನದ ಒಂದು ಕ್ಷೇತ್ರವಾಗಿದ್ದು, ಇದನ್ನು ನಾವು ನಿರ್ಲಕ್ಷಿಸುವಂತಿಲ್ಲ. ಇದಕ್ಕೆ ಕಾರಣವೆಂದರೆ ಆಧುನಿಕ ದೃಷ್ಟಿಕೋನ ಹೊಂದಿರುವ ಅನೇಕರು ಈ ಬಗೆಯ ಬರವಣಿಗೆಗೆ ಬದ್ಧರಾಗಿದ್ದಾರೆ. ಇತ್ತೀಚೆಗೆ ಮಡಿಕೇರಿಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಮ್ಮೇಳನದ ಅಧ್ಯಕ್ಷಪಟ್ಟವನ್ನು ಅತ್ಯಂತ ಅಸಾಂಪ್ರದಾಯಿಕ ಹಿನ್ನೆಲೆಯಿಂದ ಬಂದಂಥ ಮಹಾಮೇಧಾವಿಯೊಬ್ಬರಿಗೆ ನೀಡಿದ್ದು ಉಚಿತವೇ ಆಗಿದೆ. ಹಾಗಾಗಿ ಸ್ವಾತಂತ್ರ್ಯೋತ್ತರ ಕನ್ನಡ ಗದ್ಯದ ಈ ಸಂಕ್ಷಿಪ್ತ ಸರ್ವೇಕ್ಷಣೆಯಲ್ಲಿ ಈ ಎಲ್ಲ ಅಂಶಗಳ ಬಗ್ಗೆ ಗಮನಹರಿಸುವ ಪ್ರಯತ್ನ ಮಾಡಲಾಗಿದೆ.

ಜೀವನದ ಬಗೆಯನ್ನು ರೂಪಿಸುವಂಥ ವಿಚಾರಧಾರೆಗಳು ಬದಲಾದಂತೆ ಸಾಹಿತ್ಯದಲ್ಲಿನ ಪ್ರವೃತ್ತಿಗಳೂ ಬದಲಾವಣೆಗಳಿಗೊಳಗಾಗುತ್ತವೆ. ಆದರೆ ಸಾಹಿತ್ಯವನ್ನು ಸಾಮಾಜಿಕ ಬದಲಾವಣೆಯ ಒಂದು ಸಾಧನ ಎಂಬಂತೆ ಎಣಿಸಲಾಗುತ್ತಿರುವುದರಿಂದ ಅದು ಹೆಚ್ಚು-ಕಡಿಮೆ ಜನರ ಜೀವನವನ್ನು ರೂಪಿಸುತ್ತದೆಂದು ನಿರೀಕ್ಷಿಸಲಾಗಿದೆ. ಜೊತೆಗೆ, ಅಂಥ ಒಂದು ದೃಷ್ಟಿಕೋನವನ್ನು ಅತಿ ಆದರ್ಶಮಯವಾದುದೆಂದೂ ಪರಿಗಣಿಸಬಹುದಾಗಿದೆ. ಆದ್ದರಿಂದ ಜೀವನದ ಬಗ್ಗೆ ಅತಿರೇಕಪೂರ್ಣವಲ್ಲದಂಥ ದೃಷ್ಟಿಕೋನ ತಳೆದಿರುವಂಥವರು, ಸಾಹಿತ್ಯವನ್ನು ಜೀವನದ ಪ್ರತಿಬಿಂಬವೆಂದು ಪರಿಗಣಿಸುತ್ತಾರೆ. ಸುಮಾರು ಮೂರುವರೆ ದಶಕಗಳಿಗೂ ಮೀರಿದ ಅವಧಿಯ ಸಾಹಿತ್ಯದತ್ತ ದೃಷ್ಟಿ ಹರಿಸಿದಾಗ, ಈ ಅವಧಿಯನ್ನು ಕೆಳಕಂಡ ಶೀರ್ಷಿಕೆಗಳಲ್ಲಿ ವಿಗಂಡಿಸುವ ಪ್ರಯತ್ನ ನಡೆಸಿರುವುದು ನಮಗೆ ಕಂಡು ಬರುತ್ತದೆ. ೧) ನವೋದಯ, ೨) ಪ್ರಗತಿಶೀಲ, ೩) ನವ್ಯ ಮತ್ತು ೪) ದಲಿತ ಹಾಗೂ ಬಂಡಾಯ.

ನವೋದಯ ಸಾಹಿತ್ಯ ೧೯೫೦ರ ವೇಳೆಗೆ ಬಹುಮಟ್ಟಿಗೆ ಕೊನೆಯುಸಿರನ್ನೆಳೆಯುತ್ತಿದ್ದರೆ, ೧೯೪೦ರ ಸುಮಾರಿನಲ್ಲಿ ಮುನ್ನಡೆದಿದ್ದ ಪ್ರಗತಿಶೀಲ ಸಾಹಿತ್ಯ ತನ್ನ ಹಿಡಿತವನ್ನು ಕಳೆದುಕೊಳ್ಳುತ್ತಿತ್ತು. ಅನಂತರವೂ ಬಹುಕಾಲದವರೆಗೆ ಈ ಪ್ರವೃತ್ತಿಗಳು ತಮ್ಮ ಪ್ರಭಾವವನ್ನು ಕಳೆದುಕೊಂಡಿರಲಿಲ್ಲ ಎಂಬುದೂ ನಿಜ. ಈ ರೀತಿಯ ವಿಕಾಸ ಬಹು ಸಾಮಾನ್ಯವೇ ಏಕೆಂದರೆ ಸಾಹಿತ್ಯಕ ಪ್ರವೃತ್ತಿಗಳು ವ್ಯಕ್ತಿಗಳ ಅಥವಾ ವಿಶಿಷ್ಟ ಗುಂಪುಗಳ ಬದ್ಧತೆಗಳೇ ಹೊರತು, ಒಂದು ಕಾಲದಲ್ಲಿ ಲೇಖನ ಕಾರ್ಯದಲ್ಲಿ ತೊಡಗಿರುವ ಲೇಖಕರ ಇಡೀ ಸಮೂಹದ್ದಲ್ಲ. ಇದರ ಜೊತೆಗೆ, ಮತ್ತೊಂದು ಮುಖವೂ ಇದೆ. ಅದೆಂದರೆ ಒಂದು ನಿರ್ದಿಷ್ಟ ಕೃತಿ ಅಥವಾ ಕೃತಿಗಳ ಸಮುಚ್ಚಯ ಜನಸಮುದಾಯದ ಮೇಲ ಹೊಂದಿರುವ ಪ್ರಭಾವ. ಮಹತ್ಕೃತಿಯೊಂದು ಸಮಕಾಲೀನ ಕ್ಷೇತ್ರದ ಮೇಲೆ ಯಾವುದೇ ಪರಿಣಾಮ ಬೀರದಿದ್ದರೂ, ಮುಂದಿನ ಅವಧಿಯಲ್ಲಿ ಅದು ಪ್ರಭಾವಶಾಲಿಯಾಗಿ ಪರಿಣಮಿಸಿದಂಥ ನಿದರ್ಶನಗಳೂ ಇವೆ. ಸಾಧ್ಯವಾದ ಮಟ್ಟಿಗೂ ವ್ಯಕ್ತಿಗಳನ್ನು ತರದೆ, ಈ ವರ್ಗೀಕರಣಗಳ ಅರ್ಥವೇನಾಗಿದೆ ಎಂಬುದನ್ನು ಈ ಸರ್ವೇಕ್ಷಣೆಯಲ್ಲಿ ಸೂಚಿಸುವ ಪ್ರಯತ್ನ ಮಾಡಲಾಗಿದೆ.

ಸ್ವಾತಂತ್ರ್ಯ ಸಂಗ್ರಾಮ ದಿನಗಳಿಂದ ಹಿಡಿದು ಐವತ್ತರ ದಶಕದವರೆಗೂ ನವೋದಯ ವ್ಯಾಪಿಸಿಕೊಳ್ಳುತ್ತದೆ. ಅದು ಹೊಸ ವಿಚಾರಧಾರೆಗಳು ವಿದ್ಯಾವಂತರ ಮೇಲೆ ತಮ್ಮ ಪ್ರಭಾವ ಬೀರುತ್ತಿದ್ದಂಥ ಸಮಯ. ಆದರೆ ಶ್ರೀ ಸಾಮಾನ್ಯರ ಗಮನ ಸೆಳೆಯುತ್ತಿದ್ದಂಥ ರಾಷ್ಟ್ರೀಯ ಪುನರುಜ್ಜೀವನದ ಚಿತ್ರವೆಂದರೆ ಪ್ರಾಚೀನ ಭಾರತದ – ಅಂದರೆ ಗ್ರಾಮಗಳ ಭಾರತದ ಶ್ರೀಮಂತ ಜಮೀನ್ದಾರರ ಹಾಗೂ ಪ್ರಭಾವೀ ಸಾರ್ವಜನಿಕ ವ್ಯಕ್ತಿಗಳ ಮತ್ತು ಸಾಧುಸಂತರ ಭಾರತದ ಚಿತ್ರವಾಗಿತ್ತು. ರಾಷ್ಟ್ರೀಯ ಏಕತೆ ಹಾಗೂ ಪ್ರಗತಿಯ ಆದರ್ಶದ

ಪ್ರಸಕ್ತಿಯೇ ಇರಲಿಲ್ಲ. ನವೋದಯದ ಲೇಖಕರು ಇಂಗ್ಲಿಷ್ ರೋಮ್ಯಾಂಟಿಕ್ ಲೇಖಕರಿಂದ ಸ್ಫೂರ್ತಿಯನ್ನು ಪಡೆಯಲು ಯತ್ನಿಸುತ್ತಿದ್ದುದೇ ಇದಕ್ಕೆ ಕಾರಣವಾಗಿರಬಹುದು. ಇದೇ ಸಮಯದಲ್ಲಿ, ಬಂಗಾಳೀ ನವಮಾರ್ಗಪ್ರವರ್ತಕರಾದ ಬಂಕಿಮಚಂದ್ರರ ಪ್ರಭಾವವೂ ಮುಂದುವರಿದಿತ್ತು. ಆದರೆ ಪ್ರಗತಿಶೀಲ ಲೇಖಕರು, ಯುರೋಪಿನ ಒಡೆಯರನ್ನು ಅನುಕರಿಸಲು ಆಲೋಚಿಸಿದರು. ಸಹಜವಾಗಿಯೇ, ಸೋವಿಯತ್ ರಷ್ಯಾ ಹಾಗೂ ಇತರ ಸಾಮ್ಯವಾದಿ ರಾಷ್ಟ್ರಗಳ ಲೇಖಕರು ಈ ಲೇಖಕರಿಗೆ ಮಾದರಿಯಾಗಿದ್ದರು; ಏಕೆಂದರೆ, ಅವರು ವಾಮಪಂಥೀಯ ವಿಚಾರಧಾರೆಗಳಿಗೆ ಬದ್ಧರಾಗಿದ್ದರು. ಆದರೆ, ಅವರು ಸಾಧಿಸಿದ್ದನ್ನು ನಮ್ಮಲೇಖಕರು ಸಾಧಿಸಲಾರದೇ ಹೋದರು. ಸುಧಾರಣೆಯ ಉತ್ಸಾಹ ಹಾಗೂ ಕ್ರಾಂತಿಯ ಜ್ವಾಲೆಯ ಭಾವನೆಗಳಿಗೆ ಮಾರುಹೋದರು. ಆದರೆ ಆ ಕಾಲದಲ್ಲಿ ಭಾರತದಲ್ಲಿದ್ದ ಪರಿಸ್ಥಿತಿಗೆ ಇದು ಅಪ್ರಸಕ್ತವೇ ಆಗಿತ್ತು. ಸಾಕಷ್ಟು ಕಡಿಮೆ ಸಂಖ್ಯೆಯಲ್ಲಿದ್ದ ನವ್ಯ ಗದ್ಯಲೇಖಕರು ಸ್ವಲ್ಪ ಮಟ್ಟಿನ ಬೌದ್ಧಿಕವಾದವನ್ನು ತಂದರು. ಇದು ಬಹುಮಟ್ಟಿಗೆ ಅಸಹಜವೂ ಹಾಗೂ ತರ್ಕಪೂರ್ಣವೂ ಆಗಿತ್ತು. ಇದರ ಪರಿಣಾಮವೇನೆಂದರೆ ನವ್ಯರ ಬರವಣಿಗೆ ಸಾಮಾನ್ಯ ಓದುಗನ ಮೇಲೆ ಸೀಮಿತ ಪ್ರಭಾವ ಬೀರಿತು. ಅದೇ ಪ್ರಗತಿಶೀಲ ಪಂಥ ತನ್ನ ಮುಂದೆ ಒಂದು ವಾಚಕವರ್ಗವನ್ನೇ ಪಡೆದಿತ್ತು. ಪ್ರಗತಿಶೀಲ ಹಾಗೂ ನವ್ಯ–ಇವೆರಡಕ್ಕೆ ವೈದೃಶ್ಯವಾಗಿ ನವೋದಯ ಮಾತ್ರವೆ? ಅತ್ಯಂತ ಹೆಚ್ಚಿನ ಸಂಖ್ಯೆಯ ಓದುಗರನ್ನು ತಲುಪುವ ಪ್ರಯತ್ನ ನಡೆಸಿತು.

ಈ ಮೇಲಿನವಕ್ಕೆ ವೈದೃಶ್ಯವಾಗಿ ದಲಿತ ಹಾಗೂ ಬಂಡಾಯ ಚಳುವಳಿ ಮುಂಬರಲಿರುವ ಸಾಮಾಜಿಕ ಕ್ರಾಂತಿಯ ವಿಶಿಷ್ಟ ದನಿಯೊಂದನ್ನು ಮೊಳಗಿಸುತ್ತಿದೆ; ಅಷ್ಟೇ ತನ್ನನ್ನೇ ತೆತ್ತುಕೊಂಡಿದೆ. ಆದರೆ ಈ ಸಮೂಹ ಸಂಘರ್ಷ ಸಾಮಾಜಿಕ ಸುಧಾರಣೆಯ ಒಂದು ಮಾಧ್ಯಮವನ್ನಾಗಿ ಸಾಹಿತ್ಯವನ್ನು ಹೇಗೆ ಬಳಸಿಕೊಳ್ಳಲಿದೆ ಎಂಬುದನ್ನು ಕಾದು ನೋಡಬೇಕಾಗಿದೆ. ಸಂದಿಗ್ಧ ಕಾಲಗಳಲ್ಲಿ ಇದೂ ಒಂದಾಗಿದ್ದು, ಭಾವೀ ಪೀಳಿಗೆಯಷ್ಟೇ ಇದರ ಬಗ್ಗೆ ಯಾವುದೇ ತೀರ್ಮಾನವನ್ನು ಕೈಗೊಳ್ಳಬೇಕಾಗಿದೆ.

ಎಂದ ಮೇಲೆ, ಇತಿಹಾಸದಲ್ಲಿ ಅಷ್ಟೊಂದು ಹೋಲಿಕೆಗಳಿಲ್ಲದಂಥ ಸಂಧಿಕಾಲದಲ್ಲಿ ನಾವು ಇದ್ದೇವೆ ಎಂದು ಹೇಳಬಹುದು. ನಾವು ಈಗ ಹಾದುಹೋಗುತ್ತಿರುವ ಅವಧಿ ಎಂಥದಾಗಿದೆಯೆಂದರೆ ಇಲ್ಲಿ ಪ್ರವಾದಿಗಳಿಗೆ ಸ್ಥಾನವಿಲ್ಲ; ಬದ್ಧರಾದಂಥ ಕ್ರಿಯಾಶೀಲವ್ಯಕ್ತಿಗಳ ತಂಡವೊಂದು ಹೊಸ ವಿಚಾರಗಳ ಬಗ್ಗೆ ನಮಗೆ ಭರವಸೆಯನ್ನು ನೀಡಬಹುದಾಗಿದೆ. ಸಾಹಿತ್ಯದ ಕ್ಷೇತ್ರದಲ್ಲಿ ಸಹ ಜನಸಾಮಾನ್ಯರ ತಿಳುವಳಿಕೆಗೆ ತಕ್ಕಂಥ ಧೋರಣೆಗಳ ಬಗೆಗಿನ ತಮ್ಮ ವ್ಯಾಖ್ಯೆಗಳ ಮೂಲಕ ಜನ ಸಾಮಾನ್ಯರ ಬಳಿಗೆ ಬಂದು ತಲುಪುವಂಥ ಲೇಖಕರಿಗೆ ನಾವು ಎದುರುನೋಡುತ್ತಿದ್ದೇವೆ. ಹೀಗಾದಲ್ಲಿ ಸಮಷ್ಟಿವಾದದ ಅಂಶವೂ ಸೇರಿದಂತೆ ಹೊಸ ನುಡಿಗಟ್ಟು ಹಾಗೂ ಹೊಸ ಸಂವೇದನೆಯನ್ನು ತಂದುಕೊಟ್ಟಂತಾಗುತ್ತದೆ. ಎಂದರೆ, ಇದು ವ್ಯಾಖ್ಯಾನಕಾರರ ಯುಗವೇ ವಿನಾ ಹೊಸ ವ್ಯವಸ್ಥೆಯನ್ನು ಹಾಗೂ ಹೊಸ ಅಭಿಪ್ರೇರಣೆಯನ್ನು ಕಂಡುಕೊಳ್ಳಬಲ್ಲಂಥ ಯುಗವಲ್ಲ.

ಓದು ಬಲ್ಲವರಲ್ಲಿ ಕಾದಂಬರಿಯನ್ನು ಜನಪ್ರಿಯಗೊಳಿಸಿದ ಕೀರ್ತಿ ಡಾ. ಅ. ನ. ಕೃಷ್ಣರಾಯರಿಗೆ ಸಲ್ಲುತ್ತದೆ. ಇದರಿಂದ ಮತ್ತೊಂದು ಪ್ರಭಾವವೂ ಉಂಟಾಯಿತು. ಅದೆಂದರೆ ಅನುಕರಣೆ ಮಾಡುವವರ ಸಂಖ್ಯೆ ಹೆಚ್ಚಿದ್ದು. ಈ ಲೇಖಕರುಗಳ ಕೊಡುಗೆ ಏನೇ ಆಗಿರಲಿ, ವಿವಿಧ ಸ್ತರಗಳ ಜನರಲ್ಲಿ ಸಾಹಿತ್ಯ ಪ್ರಸಾರಕ್ಕೆ ಡಾ. ಕೃಷ್ಣರಾಯರು ಸಲ್ಲಿಸಿದ ಸೇವೆಯನ್ನು ತಳ್ಳಿಹಾಕುವಂತಿಲ್ಲ. ತಮ್ಮ ಸಂದೇಶಗಳಲ್ಲಿ ತಮ್ಮ ಗುರುವಿಗಿಂತ ಮೂಲಭೂತವಾಗಿ ಬೇರೆಯಾಗಿರಬಹುದಾದರೂ ಈ ಅವಧಿಯ ಅತ್ಯುತ್ತಮ ಲೇಖಕರಾದಂಥ ತರಾಸು, ನಿರಂಜನ, ಚದುರಂಗ ಮತ್ತಿತರರು ತಮ್ಮ ಗುರುವಿನ ವೈಶಿಷ್ಟ್ಯದ ಮುದ್ರೆಯನ್ನು ಪಡೆದಂಥ ಕೃತಿಗಳನ್ನು ರಚಿಸಿದರು. ಶ್ರೀ ದೇವುಡು ನರಸಿಂಹ ಶಾಸ್ತ್ರಿ ಮತ್ತು ಶ್ರೀ ಕೆ. ವಿ. ಅಯ್ಯರ್ ಅವರು ಭಿನ್ನವರ್ಗಕ್ಕೆ ಸೇರಿದಂಥವರು. ಪುರಾಣಗಳನ್ನು ಗ್ರಹಿಸುವ ರೀತಿ ಹಾಗೂ ಬಹುಮಟ್ಟಿಗೆ ನೂತನ ಉದ್ದೇಶವನ್ನು ದೃಷ್ಟಿಯಲ್ಲಿರಿಸಿಕೊಂಡು ಅವುಗಳನ್ನು ಪುನರ್‌ಸೃಷ್ಟಿಸುವ ವಿಧಾನ – ಈ ದೃಷ್ಟಿಗಳಿಂದ ಶ್ರೀ ಶಾಸ್ತ್ರಿಗಳ ಕೃತಿಗಳು ವಿಶಿಷ್ಟವಾಗಿ ನಿಲ್ಲುತ್ತವೆ. ರೊಮ್ಯಾಂಟಿಕ್ ವಾಸ್ತವತೆಯತ್ತ ಕೈಚಾಚುವ ಶ್ರೀ ಅಯ್ಯರ್ ಅವರು ಐತಿಹಾಸಿಕ ಹಿನ್ನೆಲೆಯನ್ನೊಳಗೊಂಡಿರುವ ತಮ್ಮ ಕೃತಿಗಳಲ್ಲಿ ಅದನ್ನು ಸಾಧಿಸಲು ಪ್ರಯತ್ನಿಸುತ್ತಾರೆ. ಹೀಗಾಗಿ ಅವರ ಕೃತಿಗಳು ವಿಶೇಷ ಪ್ರಭಾವ ಬೀರುತ್ತವೆ. ಅಂತೆಯೇ ತರಾಸು ರವರ ಕೃತಿಗಳಿಗೂ ಇವಕ್ಕೂ ಇರುವ ವೈದೃಶ್ಯದ ಬಗ್ಗೆ ಅಧ್ಯಯನ ನಡೆಸುವುದೂ ಅಗತ್ಯವಾಗಿರುತ್ತದೆ.

ತಮ್ಮ "ಮಲೆಗಳಲ್ಲಿ ಮದುಮಗಳು" ಕಾದಂಬರಿಯಲ್ಲಿ ಡಾ. ಕೆ. ವಿ. ಪುಟ್ಟಪ್ಪನವರು (ಕುವೆಂಪು) ಮಹಾನ್ ರಷ್ಯನ್ ಲೇಖಕರ ಮಟ್ಟವನ್ನು ಮುಟ್ಟಲು ಪ್ರಯತ್ನಿಸುತ್ತಾರೆ. ಇದರಲ್ಲಿ ಡಾ. ಪುಟ್ಟಪ್ಪನವರು ಮಲೆನಾಡಿನ ನೈಜ ಜೀವನಚಿತ್ರವನ್ನು ಕೊಡುವುದು ಮಾತ್ರವಲ್ಲದೆ ನೂತನ ವ್ಯವಸ್ಥೆಯೊಂದನ್ನೂ ಮುಂಗಾಣುತ್ತಿದ್ದಾರೆ. ಮತ್ತೊಬ್ಬ ಜ್ಞಾನಪೀಠಪ್ರಶಸ್ತಿ ವಿಜೇತರಾದ ಡಾ. ಕೆ. ಶಿವರಾಮ ಕಾರಂತರು ಜೀವನವನ್ನು ಅದರ ಎಲ್ಲ ಮುಖಗಳಲ್ಲಿಯೂ ಗಮನಿಸುತ್ತಾರೆ. ಜೀವನದ ಇತರ ರಂಗಗಳಲ್ಲಿ ಡಾ. ಕಾರಂತರು ವೈಜ್ಞಾನಿಕ ದೃಷ್ಟಿಕೋನವನ್ನು ಪ್ರಬಲವಾಗಿ ಪ್ರತಿಪಾದಿಸುತ್ತಾರಾದರೂ, ತಮ್ಮ ಕಾದಂಬರಿಗಳಲ್ಲಿ ತಮ್ಮ ಕಲ್ಪನೆಯ ಮುಕ್ತ ವಿಹಾರಕ್ಕೆ ಅನುವುಮಾಡಿಕೊಡುತ್ತಾರೆ. "ಚೋಮನದುಡಿ", "ಬೆಟ್ಟದ ಜೀವ"ದಂಥ ಕಾದಂಬರಿಗಳಲ್ಲಿ ಪ್ರದರ್ಶಿಸಿರುವ ಮಾನವೀಯ ಸಂವೇದನೆಯಿಂದಾಗಿ ಅವರು ನಮ್ಮ ಮಹಾಲೇಖಕರಲ್ಲಿ ಒಬ್ಬರಾಗುತ್ತಾರೆ. ಇತ್ತ, "ಮೂಕಜ್ಜಿಯ ಕನಸುಗಳು" ಸಿದ್ಧಾಂತವೊಂದನ್ನು ಸಂಪೂರ್ಣವಾಗಿ ಅವೈಜ್ಞಾನಿಕವಾದ (ನೋನ್-ಸೈಂಟಿಫಿಕ್) ದೃಷ್ಟಿಕೋನದಿಂದ ಸಮರ್ಥಿಸುವ ಪ್ರಯತ್ನವನ್ನು ಪ್ರದರ್ಶಿಸುತ್ತದೆ. ಆದರೆ ಇಲ್ಲಿಯೂ ಪಾತ್ರಚಿತ್ರಣ ಸಾಕಷ್ಟು ರಂಜಿಸುತ್ತದೆ.

ಇತರರಲ್ಲಿ, ಶ್ರೀ ಬಸವರಾಜ ಕಟ್ಟೀಮನಿ ಮತ್ತು ರಾವ್ ಬಹಾದ್ದೂರರಿಗೆ ವಿಶಿಷ್ಟ ಸ್ಥಾನವಿದೆ. ಕಟ್ಟೀಮನಿಯವರು ಸಾಮಾಜಿಕ ಅರಿವಿನಿಂದ ಕೃತಿರಚನೆ ಮಾಡಿರುವರಾದರೆ ರಾವ್ ಬಹಾದ್ದೂರ್ ಅವರು ಅಪೂರ್ವವಾದ ಅಂತರ್ದೃಷ್ಟಿಯಿಂದ ಕೂಡಿದ ಗ್ರಾಮೀಣ ಜೀವನವನ್ನು ಚಿತ್ರಿಸುವ ಕೃತಿಯನ್ನು ರಚಿಸಿದ್ದಾರೆ.

ಪಿ. ಲಂಕೇಶರ "ಮುಸ್ಸಂಜೆಯ ಕಥಾಪ್ರಸಂಗ", ಶ್ರೀ ಸಿ. ಕೆ. ನಾಗರಾಜ ರಾಯರ "ಪಟ್ಟಮಹಾದೇವಿ ಶಾಂತಲಾ". ಡಾ. ಎಸ್. ಎಲ್. ಭೈರಪ್ಪನವರ "ಪರ್ವ" – ಇವು ಈಚಿನ ದಿನಗಳಲ್ಲಿ ವಾಚಕರನ್ನು ಗೆದ್ದಿರುವ ಕೃತಿಗಳು. ತನ್ನದೇ ಆದ ರೀತಿಯಲ್ಲಿ ಕಲಾತ್ಮಕವಾಗಿ ಪರಿಪೂರ್ಣವಾಗಿ ಈ ಒಂದೊಂದು ಕಾದಂಬರಿಯೂ ತನ್ನದೇ ಆದ ಪ್ರಪಂಚವನ್ನು

ತೆರೆದು ತೋರುತ್ತವೆ. ಸಮಕಾಲೀನ ಗ್ರಾಮೀಣ ಜೀವನದಲ್ಲಿ ಕಾಣಬರುವ ಕೆಡುಕು, ಕುಟಿಲತೆಗಳನ್ನು ಬೆಳಕಿಗೆ ತರುವ ಪ್ರಯತ್ನ ಉಲ್ಲೇಖನಾರ್ಹ. ನಾಗರಾಜರಾಯರು ವಿಶಿಷ್ಟ ನೈಪುಣ್ಯದಿಂದ ಐತಿಹಾಸಿಕ ಪಾತ್ರಗಳನ್ನು ಪುನಸ್ಸೃಷ್ಟಿಸಿದ್ದಾರೆ. ಮಹಾಭಾರತದ ಐತಿಹ್ಯ ಹಾಗೂ ವಾಸ್ತವಿಕತೆಯನ್ನು ಪುನಸ್ಸೃಷ್ಟಿಸುವಲ್ಲಿ ಡಾ. ಭೈರಪ್ಪನವರು ಸಾಮಾಜಿಕ – ಮಾನವಶಾಸ್ತ್ರೀಯ ಸ್ತರದಲ್ಲಿ ಕಾರ್ಯಪ್ರವೃತ್ತರಾಗಿದ್ದಾರೆ.

ಹೊಸ ದೃಷ್ಟಿಕೋನಕ್ಕಾಗಿ ಹಾತೊರೆಯುವ ಹಿನ್ನೆಲೆಯಲ್ಲಿ ವರ್ಗಸಂಘರ್ಷದ ಪಾರಂಪರಿಕ ಸಮಸ್ಯೆಯನ್ನು ಚಿತ್ರಿಸುವ ದಿಟ್ಟ ಪ್ರಯತ್ನ ಡಾ. ಯು. ಆರ್. ಅನಂತಮೂರ್ತಿಯವರ "ಸಂಸ್ಕಾರ". ಯಶವಂತ ಚಿತ್ತಾಲರು ತಮ್ಮ ಈಚಿನ ಕಾದಂಬರಿ "ಶಿಕಾರಿ"ಯಲ್ಲಿ ಸಂಪೂರ್ಣವಾಗಿ ವೈಯಕ್ತಿಕವಾದ ಸಂಘರ್ಷದಿಂದ ಉದ್ಭವಿಸುವ ಪರಿಸ್ಥಿತಿಯನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ. ಚಿತ್ತಾಲರು ಕಥಾವಸ್ತುವನ್ನು ಬಳಸುವ ರೀತಿಯಿಂದ ಅದು ಅಸಾಧಾರಣ ಮಟ್ಟಕ್ಕೇರುತ್ತದೆ. ತ್ರಿವೇಣಿಯವರಲ್ಲಿ ಹೆಣ್ಣಿನ ಮನಸ್ಸಿನ ಪ್ರವೃತ್ತಿಗಳನ್ನು ಒಳಹೊಕ್ಕು ವಿಶ್ಲೇಷಿಸುವ ಕಾದಂಬರಿಕಾರ್ತಿಯೊಬ್ಬರನ್ನು ಕಾಣುತ್ತೇವೆ. ತ್ರಿವೇಣಿಯವರ ಮಟ್ಟಕ್ಕೆ ಏರಬಲ್ಲ ಕಾದಂಬರಿಕಾರ್ತಿ ಇನ್ನೂ ಬಂದಿಲ್ಲವೆಂಬ ಸಂಗತಿಯಿಂದ ಅವರ ಬರವಣಿಗೆಯ ವಿಶಿಷ್ಟ ಗುಣಮಟ್ಟವನ್ನು ಅರಿಯಬಹುದಾಗಿದೆ.

ಕನ್ನಡ ನಾಟಕ ಕ್ಷೇತ್ರದಲ್ಲಿ ಗಿರೀಶ ಕಾರ್ನಾಡರು ಹೊಸ ಯುಗವನ್ನು ಆರಂಭಿಸಿದ್ದಾರೆ. ಅವರ "ತುಘಲಕ್", "ಹಯವದನ" ಮತ್ತು "ಅಂಜುಮಲ್ಲಿಗೆ" ನಾಟಕಗಳು ಆಧುನಿಕ ಕನ್ನಡ ನಾಟಕದ ಅತ್ಯುಚ್ಚ ಮಟ್ಟವನ್ನು ಸ್ಥಾಪಿಸಿರುವುದು ಸ್ಪಷ್ಟ. ಅಲ್ಲದೆ, ಅವುಗಳಿಗೆ ಸರಿಸಾಟಿಯಾದುವು ಇಲ್ಲವೇ ಇಲ್ಲವೆನ್ನಬಹುದಾಗಿದೆ. ಜಿ. ಬಿ. ಜೋಶಿ, ಪಿ. ಲಂಕೇಶ ಮತ್ತು ಚಂದ್ರಶೇಖರ ಕಂಬಾರರ ನಾಟಕಗಳು ವೈವಿಧ್ಯವನ್ನು ತಂದುಕೊಟ್ಟಿವೆ. ಇದಾಗಿಯೂ ಪಿ. ಲಂಕೇಶರ ಸೊಫೋಕ್ಲಿಸ್ ಅನುವಾದಗಳು ಮತ್ತು ಕೆ. ಎಸ್. ನಿಸಾರ್ ಅಹಮದ್‌ರ ಶೇಕ್ಸ್‌ಪಿಯರ್ ಅನುವಾದಗಳು ಹೊಸ ದಾಖಲೆಯನ್ನು ಸ್ಥಾಪಿಸಿದುವಂತೆ ಕಾಣುತ್ತವೆ. ಈ ಅನುವಾದಗಳ ವೈಶಿಷ್ಟ್ಯವೆಂದರೆ ಇವನ್ನು ರಂಗಕ್ಕೆ ಉತ್ತಮವಾಗಿ ಅಳವಡಿಸಿರುವುದು.

ಕಥಾತ್ಮಕೇತರ ಗದ್ಯದ ವ್ಯಾಪ್ತಿವಿಸ್ತಾರಗಳು ಹೆಚ್ಚುತ್ತಲೇ ಇವೆ. ಶ್ರೀ ಎಚ್. ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್, ಶ್ರೀ ಜೆ. ಆರ್. ಲಕ್ಷ್ಮಣ ರಾವ್, ಶ್ರೀ ಜಿ. ಟಿ. ನಾರಾಯಣ ರಾವ್ ಮತ್ತು ಇತರ ಅನೇಕರು ಈ ಪ್ರಕಾರಕ್ಕೆ ಕೊಡುಗೆ ನೀಡುತ್ತಿದ್ದಾರೆ. ಭಾಷಾಂತರ ಮತ್ತು ಪತ್ರಿಕೋದ್ಯಮ ಬರವಣಿಗೆಯ ಪ್ರಕಾರಗಳನ್ನು ಜನಪ್ರಿಯಗೊಳಿಸುವಲ್ಲಿ ಸಿದ್ಧವನಹಳ್ಳಿ ಕೃಷ್ಣಶರ್ಮ, ತಿರುಮಲೆ ತಾತಾಚಾರ್ಯ ಶರ್ಮ, ಪಾಟೀಲ ಪುಟ್ಟಪ್ಪ, ಪಿ. ವೆಂಕಟರಮಣ ಆಚಾರ್ಯ ಮೊದಲಾದ ಪತ್ರಿಕೋದ್ಯಮಿಗಳು ಹಾಗೂ ಭಾಷಾಂತರಕಾರರು ವಹಿಸಿದ ಪಾತ್ರ ಕಡಿಮೆ ಮಹತ್ವದ್ದೇನೂ ಅಲ್ಲ.

ಸಾಹಿತ್ಯ ವಿಮರ್ಶೆಯ ಬಗ್ಗೆಯೂ ಒಂದು ಮಾತು ಹೇಳಬಹುದು. ಡಾ. ವಿನಾಯಕ ಕೃಷ್ಣ ಗೋಕಾಕ್, ಡಾ. ಯು. ಆರ್. ಅನಂತಮೂರ್ತಿ, ಡಾ. ಎಂ. ಜಿ. ಕೃಷ್ಣಮೂರ್ತಿ, ಕೀರ್ತಿನಾಥ ಕುರ್ತಕೋಟಿ, ಮತ್ತು ಗಿರಡ್ಡಿ ಗೋವಿಂದರಾಜ ಮೊದಲಾದವರು ಈ ಕ್ಷೇತ್ರದ ಗಣ್ಯ ಲೇಖಕರಲ್ಲಿ ಕೆಲವರು. ಈ ವಿಮರ್ಶಕರು ಸಾಹಿತ್ಯಕೃತಿಗಳು ಮತ್ತು ಪ್ರವೃತ್ತಿಗಳ ವಿಶ್ಲೇಷಣೆ ಹಾಗೂ ವಿಮರ್ಶೆಗೆ ಹೊಸ ಮಾರ್ಗಗಳನ್ನು ರೂಪಿಸಿದ್ದಾರೆ. ಅತ್ಯಂತ ಮುಖ್ಯ ಲೇಖಕನೊಬ್ಬನನ್ನು ಪರಿಚಯಿಸುವ ವಿಚಾರಕ್ಕೆ ಬಂದಾಗ ಪಾಬ್ಲೊ ನೆರೂದನನ್ನು ಪರಿಚಯಿಸಿಕೊಟ್ಟಿರುವ ಕೆ. ಎಸ್. ನಿಸಾರ್ ಅಹಮದ್ ಅವರ ಪ್ರಯತ್ನವನ್ನು ಉಲ್ಲೇಖಿಸಬಹುದು. "ಇದು ಬರಿ ಬೆಡಗಲ್ಲೊ ಅಣ್ಣ" ಎಂಬ ಅವರ ಕೃತಿಯಲ್ಲಿ ಸೇರಿದೆ. ಅಲ್ಲದೆ ಡಾ. ಅನಂತಮೂರ್ತಿಯವರ "ಪ್ರಜ್ಞೆ ಮತ್ತು ಪರಿಸರ", ಕುರ್ತಕೋಟಿಯವರ "ಸಾಹಿತ್ಯ ಮತ್ತು ಯುಗಧರ್ಮ", ಡಾ. ಕೃಷ್ಣಮೂರ್ತಿಯವರ "ಆಧುನಿಕ ಭಾರತೀಯ ಸಾಹಿತ್ಯ" ಮೊದಲಾದುವು ಸತತ ಪರಾಮರ್ಶನಯೋಗ್ಯ ಕೃತಿಗಳಾಗಿ ಉಳಿದಿವೆ.

ಕೊನೆಯದಾಗಿ, ಹೇಳಬಹುದಾಗಿರುವ ಮಾತೇ? ಹೊಸ ಭಾವನೆಗಳು ಹಾಗೂ ವೈಜ್ಞಾನಿಕ ಪ್ರಸಾರದ ವಿಚಾರಕ್ಕೆ ಬಂದಾಗ, ತಿಳಿಯಾದ ಗದ್ಯಶೈಲಿಯ ವಿಕಾಸವೇ ಅತ್ಯಂತ ಮುಖ್ಯವಾದುದು ಎಂಬುದಾಗಿದೆ. ವೈವಿಧ್ಯಮಯವಾದ ವಿಚಾರಗಳು ಹಾಗೂ ವೈಯಕ್ತಿಕ ಅನುಭವಗಳನೇಕವಕ್ಕೆ ಗದ್ಯವೇ ಅನಿವಾರ್ಯವಾದ ಮಾಧ್ಯಮವಾಗುತ್ತದೆ. ಹಾಗಾಗಿರುವಾಗ, ಕನ್ನಡತನ ಸಮಗ್ರವಾಗಿ ಮೈದಳೆಯುವಂತೆ ಮಾಡುವಲ್ಲಿ ಉತ್ತಮ ಗದ್ಯ ವಹಿಸುವ ಪಾತ್ರವನ್ನು ನಿರ್ಲಕ್ಷ್ಯಿಸುವಂತಿಲ್ಲ. ಈ ದಿಸೆಯಲ್ಲಿ ನಮ್ಮ ಹಿರಿಯರು ಸಲ್ಲಿಸಿರುವ ಅನುಪಮ ಸೇವೆ ಮುಂಬರುವ ಜನಾಂಗಗಳಿಗೂ ಸ್ಫೂರ್ತಿದಾಯಕವಾಗಿ ಉಳಿಯಲಿ ಎಂದು ಹಾರೈಸೋಣ.

**ಕನ್ನಡ ಅನುವಾದ: ಎಸ್. ಎಸ್. ಶಾರದಾ ಪ್ರಸಾದ್**

# ಸ್ವಾತಂತ್ರ್ಯೋತ್ತರ ಕಾಲದ ಕನ್ನಡ ಕಾವ್ಯ

ಡಾ. ಬುದ್ದಣ್ಣ ಹಿಂಗಮಿರೆ

ಪಂಪನಿಂದ ಕುವೆಂಪುವರೆಗೆ ಕನ್ನಡ ಅವಿಚ್ಛಿನ್ನವಾಗಿ ಬೆಳೆಯುತ್ತ ಬಂದಿದ್ದು, ಆಗಾಗ ನವೀನವೆನ್ನಬಹುದಾದ ಪರಂಪರೆ ಮಾರ್ಗಗಳನ್ನು ಸೃಷ್ಟಿಸುತ್ತ ಬಂದಿದೆ. ಪಂಪನ ಕಾಲದಲ್ಲಿ ಚಂಪೂಕಾವ್ಯ, ಹರಿಹರ–ರಾಘವಾಂಕರ ಕಾಲದಲ್ಲಿ ರಗಳೆ–ಷಟ್ಪದಿ, ರತ್ನಾಕರವರ್ಣಿಯ ಕಾಲದಲ್ಲಿ ಸಾಂಗತ್ಯ ಹೀಗೆ ಪದ್ಯ ವಿಭಿನ್ನ ರಚನಾ ವಿಧಾನಗಳನ್ನು ಪ್ರದರ್ಶಿಸಿದೆ.

ವಿಕ್ರಮಾರ್ಜುನ ವಿಜಯ, ಸಾಹಸ ಭೀಮ ವಿಜಯ (ಗದಾಯುದ್ಧ) ನಾಗಚಂದ್ರನ ರಾಮಚಂದ್ರ ಚರಿತಪುರಾಣ, ರಾಘವಾಂಕನ ಹರಿಶ್ಚಂದ್ರ ಕಾವ್ಯ, ಜನ್ನನ ಯಶೋಧರ ಚರಿತೆ, ಕುಮಾರವ್ಯಾಸನ ಭಾರತಕಾವ್ಯ, ಷಡಕ್ಷರದೇವನ ರಾಜಶೇಖರ ವಿಳಾಸ, ರತ್ನಾಕರವರ್ಣಿಯ ಭರತೇಶ ವೈಭವ, ಮುದ್ದಣನ ರಾಮಾಶ್ವಮೇಧ– ಮುಂತಾದ ಕೃತಿಗಳು ಕನ್ನಡ ಸಾಹಿತ್ಯ–ಸಂಸ್ಕೃತಿಯ ಶ್ರೀಮಂತಿಕೆಯನ್ನು ನಿದರ್ಶಿಸುವ ಉನ್ನತ ಕೃತಿಗಳಾಗಿವೆ. ಮಹಾಕಾವ್ಯ ಸೃಷ್ಟಿಯಾಗುತ್ತಿದ್ದ ಸಾವಿರಾರು ವರ್ಷದ ಅವಧಿಯಲ್ಲಿ, ಕನ್ನಡದ ಅಭಿಮಾನವನ್ನು ಪ್ರಕಟಿಸುವ ಕವಿಗಳು ಇಲ್ಲದಿಲ್ಲ. ಆಂಡಯ್ಯನ ಕನ್ನಡಾಭಿಮಾನ, ಕೇಶಿರಾಜನ ಭಾಷಾಪ್ರೇಮ, ನಯಸೇನರ ಜಾನಪದ ಮಡಿಗಟ್ಟಿನ ಸೊಗಡು–ಅವರ ಕೃತಿಗಳಲ್ಲಿ ಅಭಿವ್ಯಕ್ತವಾಗಿರುವುದು ಗಮನಾರ್ಹವಾದದ್ದು. ಹನ್ನೆರಡನೆಯ ಶತಮಾನದಲ್ಲಿಯ ಶರಣರ ವಚನಗಳು, ಹದಿನೈದನೆಯ ಶತಮಾನದ ದಾಸರ ಪದಗಳು, ಕೀರ್ತನಗಳು–ಕಾವ್ಯವನ್ನು ಜನತಾಭಿಮುಖವಾಗಿಸುವಲ್ಲಿ ಯಶಸ್ವಿಯಾಗಿವೆ. ಅವು ನವೀನ ಪ್ರಯೋಗಗಳಾಗಿಯೂ ಗಮನ ಸೆಳೆಯುತ್ತವೆ.

ನವೋದಯ ಕಾವ್ಯ ಸಂದರ್ಭದಲ್ಲಿ ಭಾರತ ದೇಶದ ಸ್ಥಿತಿಗತಿಗಳು ಕವಿಗಳ ಗಮನ ಸೆಳೆದವು. ದೇಶದ ಪಾರತಂತ್ರ್ಯ, ಚಳುವಳಿ–ಸತ್ಯಾಗ್ರಹ, ಸ್ವರಾಜ್ಯ, ಸ್ವಾತಂತ್ರ್ಯ ಪರಕೀಯರ ದಬ್ಬಾಳಿಕೆ–ಇತ್ಯಾದಿ ಕವಿಯ ಕಾವ್ಯದ ವಿಷಯಗಳಾದವು. ಜನರ ಅಜ್ಞಾನ ಹಾಗೂ ದಾರಿದ್ರ್ಯದಿಂದಾಗಿ ಅನಾಹುತಗಳು, ಅಚಾತುರ್ಯಗಳು ಕೂಡ ಕವಿಯ ಕಣ್ಣಿನಿಂದ ಹೊರತಾಗಲಿಲ್ಲ. ಸಮಗ್ರ ದೇಶದಲ್ಲಿನ ಅಸ್ತವ್ಯಸ್ತಗೊಂಡ ರಾಜಕೀಯ, ಸಾಮಾಜಿಕ, ಆರ್ಥಿಕ, ಜೀವನದ ಘೋರ ಪರಿಣಾಮಗಳನ್ನು ಜನತೆಯ ಬದುಕನ್ನು ತಲ್ಲಣಗೊಳಿಸಿದ್ದವು. ನವೋದಯ ಕವಿ–ಇಂಥ ಹಲವು ಸಂದರ್ಭಗಳನ್ನು ಪರಿಭಾವಿಸಿ ಕಾವ್ಯ ಬರೆಯಲಾರಂಭಿಸಿದ. ದೇಶದ ಬಗೆಗಿನ ಅಭಿಮಾನ, ಹೆಮ್ಮೆ, ಉತ್ಸಾಹ, ರೊಚ್ಚು, ಆವೇಶದ ಭಾವನೆಗಳೊಂದಿಗೆ ಜೀವನಾದರ್ಶಗಳು ಕಾವ್ಯದಲ್ಲಿ ಪ್ರಕಟವಾಗತೊಡಗಿದುವು. ಜನರಿಗೆ ಅರ್ಥವಾಗಬಲ್ಲ ಪ್ರಚಲಿತ ಶಿಷ್ಟ ಭಾಷೆಯಲ್ಲಿ ಕಾವ್ಯ ರಚಿಸುವ ಉಪಕ್ರಮ ಆರಂಭವಾಯಿತು.

ಎಸ್. ಜಿ. ನರಸಿಂಹಾಚಾರ್ಯ, ಪಂಜೆ ಮಂಗೇಶರಾವ್ ಗೋವಿಂದ ಪೈ, ಹಟ್ಟಿಯಂಗಡಿ ನಾರಾಯಣರಾವ್ ಮುಂತಾದವರು ಭಾಷೆಗೆ ಮುಸುಕಿದ್ದ ಬೂದಿಯನ್ನು ತೊಡೆದು ಕೆಲವು ಇಂಗ್ಲಿಷ್ ರಚನೆಗಳನ್ನು ಕನ್ನಡಕ್ಕೆ ನಿವೇದಿಸುವ ಪ್ರಯತ್ನ ಮಾಡಿದರು. ಬಿ. ಎಂ. ಶ್ರೀ. ಅವರ ಇಂಗ್ಲಿಷ್ ಗೀತಗಳು ಅಂಥ ಒಂದು ಸಫಲ ಪ್ರಯತ್ನ ಹಾಗೂ ಪ್ರಯೋಗವಾಗಿ ಇಂಗ್ಲಿಷ್ ರೋಮ್ಯಾಂಟಿಕ್ ಕಾವ್ಯ ಮಾದರಿಯನ್ನು ಕನ್ನಡಕ್ಕೆ ಪರಿಚಯಿಸುವ ಕಾರ್ಯ ಮಾಡಿತು. ಭಾಷೆ, ಛಂದಸ್ಸು, ಲಯಗಳ ಬಳಕೆ ಹಾಗೂ ಅಭಿವ್ಯಕ್ತಿಯ ಕ್ರಮದಿಂದ 'ಇಂಗ್ಲಿಷ್ ಗೀತಗಳು' ಕಾವ್ಯ ಸಂಕಲನ ಒಂದು ಮಹತ್ವದ ಮೈಲುಗಲ್ಲಾಯಿತು. ಕಾವ್ಯ ಭಾವಗೀತದ ಆಕೃತಿಗಿಳಿಯಿತು. ಯಾವುದೇ ಒಂದು ಕ್ಷಣದ ಭಾವನೆಯ ಅಭಿವ್ಯಕ್ತಿಗೂ ಕಾವ್ಯದಲ್ಲಿ ಸ್ಥಾನ ಸಿಕ್ಕಿತು. ವೈಯುಕ್ತಿಕ ಅನುಭವದ ಪ್ರಕಾಶನಕ್ಕೆ ಆದ್ಯತೆ ದೊರೆತು, ಕವಿಯ ಕಾವ್ಯದ ಕ್ಷಿತಿಜ ವಿಸ್ತಾರಗೊಂಡಿತು. ಸತ್ಯ, ಸೌಂದರ್ಯ ಹಾಗೂ ಆನಂದ ಕಾವ್ಯದ ಮೂಲಭೂತ ಮೌಲ್ಯಗಳಾದವು. ಕಲ್ಪನೆಯ ಕುಂಚದಿಂದ ಕಾವ್ಯಕ್ಕೆ ಹೊಸ ಮೆರುಗು, ಹೊಸ ರಂಗು ಪ್ರಾಪ್ತವಾದವು. ವೈಯುಕ್ತಿಕ ಅನುಭವವಲ್ಲದೆ ನಿಸರ್ಗಸೌಂದರ್ಯ, ಕೌಟುಂಬಿಕ ಪರಿಸರ, ಪ್ರೀತಿ, ಬದುಕಿನ ಭಿನ್ನ ಸಂದರ್ಭಗಳು, ಇತಿಹಾಸ, ಪುರಾಣಗಳಿಂದ ಆಯ್ದ ಹಾಗೂ ವರ್ತಮಾನದ ಸಂಕೀರ್ಣ ಸನ್ನಿವೇಶಗಳು ಭಾವಗೀತೆ ರಚನೆಗೆ ಸಾಮಗ್ರಿಯಾಗಿ ದೊರೆತವು. ಸಂದರ್ಭ, ಸನ್ನಿವೇಶ, ಹಾಗೂ ಪರಿಸರಕ್ಕೆ ತಕ್ಕಂತೆ ಭಾವಗೀತಗಳು, ಸೃಷ್ಟಿಯಾಗುತ್ತ ಬಂತು. ವಿಭಿನ್ನ ಛಂದೋಲಯಗಳು ಗೀತದ ಗತಿಯನ್ನು ವಿಸ್ತರಿಸಿದುವು. ಅನುಭವ ಸಂವೇದನೆಯ ನಿರರ್ಗಳವಾದ ಉತ್ಕಟ–ಭಾವಗೀತದ ಆಕಾರ ಪಡೆಯಿತು. ಮೂರ್ತ–ಅಮೂರ್ತ ಅನ್ನಿಸಿಕೆಗಳು ಭಾವಗೀತದಲ್ಲಿ ಅಭಿವ್ಯಕ್ತವಾದವು. ಗೋವಿಂದ ಪೈ, ಶ್ರೀನಿವಾಸ, ಕಡೆಂಗೋಡ್ಲು ಶಂಕರ ಭಟ್ಟ, ಪು. ತಿ. ನ., ವಿ. ಸೀ., ಡಿ.ವಿ.ಜಿ., ಮುಗಳಿ ಮುಂತಾದವರಲ್ಲದೆ ಅಂಬಿಕಾತನಯದತ್ತ ಮತ್ತು ಕುವೆಂಪು ಇವರು ನವೋದಯ ಕಾವ್ಯದ ಮೌಲ್ಯಗಳಿಗೆ ಬದ್ಧರಾಗಿ ಸಂಕೀರ್ಣ ವಿಷಯವನ್ನೊಳಗೊಂಡು ಕಾವ್ಯ ರಚಿಸಿದರು. ನಿಸರ್ಗ ಸೌಂದರ್ಯದ ಹಾಗೂ ಬದುಕಿನ ಘಟನೆಗಳಿಂದ ಪ್ರೇರಿತರಾಗಿ ತಮ್ಮ ಅನಿಸಿಕೆಗಳನ್ನು ಕಾವ್ಯದ ರೂಪದಲ್ಲಿ ಹಾಡಿಕೊಂಡರು. ನವೋದಯ ಕವಿಗಳು ವಿಶ್ವದ ಆಶ್ಚರ್ಯ, ಅಗಾಧತೆ, ವೈಜ್ಞಾನಿಕ ಶೋಧಗಳು ಮುಂತಾದವುಗಳಿಂದ ಬೆರಗುಗೊಂಡರು. ಇಂಥ ವಿಷಯಗಳು ಅವರಿಗೆ

ಚಮತ್ಕಾರವೆನಿಸಿ ಅಂಥ ವಿಷಯಗಳನ್ನು ಪರಿಭಾವಿಸಿ ಕಾವ್ಯ ರಚಿಸಿದರು. ಬದುಕಿನ ಅನುಭವ, ಹಾಗೂ ಆದರ್ಶಗಳನ್ನು ಕಾವ್ಯದ ಮುಖಾಂತರ ಪ್ರಕಟಿಸುವ ಹವಣಿಕೆ, ಕುತೂಹಲಗಳನ್ನು ಇವರಕಾವ್ಯದಲ್ಲಿ ಕಾಣಬಹುದು. ಪು. ತಿ. ನ. ಅವರ "ರಸಸರಸ್ವತಿ" ಯಂಥ ಪದ್ಯಗಳು ರಸದ ಆವಿಷ್ಕಾರವನ್ನು ಸಂಕೇತ, ರೂಪಕಗಳ ಮುಖಾಂತರ ಅಭಿವ್ಯಕ್ತಗೊಳಿಸಿರುವ ರೀತಿ ಅತ್ಯಂತ ಗಮನಾರ್ಹವಾಗಿದೆ. ವಿ. ಸೀ. ಮತ್ತು ಡಿ. ವಿ. ಜಿ. ಇವರ ಪದ್ಯಗಳು ಸಂಸ್ಕೃತಿ, ಕಲೆ, ಇತಿಹಾಸದ ವಿರಳ ಘಟನೆಗಳಿಂದ ಪ್ರೇರಿತವಾಗಿ, ನವೋದಯ ಕಾವ್ಯದ ಸೃಷ್ಟಿಯನ್ನು ಪುಷ್ಟಿಗೊಳಿಸಿವೆ. ಗೋವಿಂದ ಪೈ, ಪಂಜೆ, ಶ್ರೀನಿವಾಸ, ಕಡೆಂಗೋಡ್ಲು ಶಂಕರಭಟ್ಟ ಇವರು ಪೌರಾಣಿಕ ಸಂದರ್ಭಗಳನ್ನು ಆಯ್ದು, ಕಥನಗೀತಗಳ ಗುಣವನ್ನು ಪ್ರಚುರ ಪಡಿಸಿದರು. ಕುವೆಂಪು, ಬೇಂದ್ರೆ–ಇವರು ನಿಸರ್ಗ ಸೌಂದರ್ಯ ಹಾಗೂ ಬದುಕಿನ ಸಂಕೀರ್ಣ ವಿಷಯಗಳ ಮೇಲೆ ಪದ್ಯ ರಚಿಸಿ ಗುಣ–ಮೊತ್ತಗಳೆರಡರಲ್ಲಿ ನವೋದಯ ಕಾವ್ಯಮಾರ್ಗವನ್ನು ಗಟ್ಟಿಗೊಳಿಸಿದರು. ಇವರ ಪದ್ಯಗಳು ಭಾವನಿಷ್ಠವಾಗಿರುವಂತೆ ಕಲಾತ್ಮಕವಾಗಿ ಗಮನ ಸೆಳೆಯುತ್ತವೆ.

"ಕಾವ್ಯ ಕಲೆಗಾಗಿ, ಸೌಂದರ್ಯಾನುಭವದ ಅಭಿವ್ಯಕ್ತಿಗಾಗಿ" ಎನ್ನುವುದನ್ನು ಇವರ ಕಾವ್ಯ ಸಿದ್ಧಪಡಿಸುತ್ತದೆ. ಸ್ಫೂರ್ತಿ, ಪ್ರೇರಣೆ ಹಾಗೂ ಕಲ್ಪನೆಯ ಹಿನ್ನೆಲೆಯಲ್ಲಿ ಸೃಷ್ಟಿಯಾಗಿರುವ ಇವರ ಕಾವ್ಯ ಬೆರಗುಗೊಳಿಸುವಂತಿದೆ. ಅಂಬಿಕಾತನಯದತ್ತರ ಗರಿ, ಸಖೀಗೀತ, ನಾದಲೀಲೆ, ಗಂಗಾವತರಣ ಮತ್ತು ಕುವೆಂಪು ಅವರ ನವಿಲು, ಕಲಾಸುಂದರಿ, ಪ್ರೇಮ ಕಾಶ್ಮೀರ, ಚಂದ್ರ ಮಂಚಕೆ ಬಾ ಚಕೋರಿ–ಮುಂತಾದ ಕಾವ್ಯ ಸಂಕಲನಗಳು ಕನ್ನಡ ಭಾವಗೀತೆಯ ಹಿರಿಮೆ–ಗರಿಮೆಯ ಪ್ರತೀಕವಾಗಿದೆ. ಮಧುರ ಚೆನ್ನರ "ನನ್ನ ನಲ್ಲ"" ಒಂದು ಆಧ್ಯಾತ್ಮಿಕ ಭಾವಗೀತವಾಗಿ ಮಹತ್ವ ಪಡೆದಿದೆ. ಕೆ. ಎಸ್. ನರಸಿಂಹ ಸ್ವಾಮಿ ಅವರ "ಮೈಸೂರು ಮಲ್ಲಿಗೆ" ಸುಕುಮಾರ ಭಾವಗೀತಗಳ ಗುಚ್ಛವಾಗಿ ಜನಪ್ರಿಯವಾಗಿವೆ.

ನವೋದಯ ಕಾವ್ಯ ಸಂದರ್ಭದಲ್ಲಿ ಬರೆಯುತ್ತಿದ್ದ ವಿನಾಯಕ, ಅಡಿಗ, ಚೆನ್ನವೀರ ಕಣವಿ, ಶಿವರುದ್ರಪ್ಪ, ಸುಬ್ಬಣ್ಣ ಯಕ್ಕುಂಡಿ ಮುಂತಾದವರು ಇನ್ನೊಂದು ಕಾವ್ಯ ಮಾರ್ಗಕ್ಕೆ ಆಕರ್ಷಿತವಾಗಿ ಕನ್ನಡದಲ್ಲಿ ನವ್ಯ ಕಾವ್ಯ ಮಾರ್ಗವೂ ಹುಟ್ಟಿಕೊಳ್ಳುವಂತಾಯಿತು. ಬದುಕಿನ ಸಂಕೀರ್ಣ ಅನುಭವಗಳನ್ನು ವಾಸ್ತವವಾಗಿ ಪ್ರಕಟಿಸುವ ಕಸುವು ರೋಮ್ಯಾಂಟಿಕ್ ಕವಿಯ ಭಾಷೆಗೆ ಇಲ್ಲವಾಗಿತ್ತು. ತಾಳ–ಲಯ ರಾಗ ರಂಜನೆಯಿಂದ ಕೂಡಿದ ಭಾಷೆ ನವ್ಯ ಕವಿಯ ಸಂವೇದನೆಯ ಅಭಿವ್ಯಕ್ತಿಗೆ ಅಸಮರ್ಥವಾಗಿತ್ತು. ಪರಂಪರೆ ಹಾಗೂ ಆದರ್ಶಗಳಲ್ಲಿ ಬೇರೂರಿದ್ದ ವ್ಯಕ್ತಿತ್ವವನ್ನು ಬಿಡಿಸಿಕೊಂಡರು. ವರ್ತಮಾನದ ಭಾಷೆಗೆ ಹೊಸ ಶಕ್ತಿಯನ್ನು, ಮೊನಚನ್ನು ನೀಡುವುದು ಅವಶ್ಯವಾಗಿತ್ತು. ರೋಮ್ಯಾಂಟಿಕ್ ಕಾವ್ಯದಲ್ಲಿ ಕಲಾಭಿಜ್ಞತೆ, ಸುಸಂಬದ್ಧತೆಯಿದ್ದರೂ ಅನುಭವದ ಅಭಿವ್ಯಕ್ತಿಯಲ್ಲಿ ಪ್ರಾಮಾಣಿಕತೆ ಮತ್ತು ವೈಜ್ಞಾನಿಕ ದೃಷ್ಟಿಕೋನ ವಿರಲಿಲ್ಲವಾದ್ದರಿಂದ ಕಾವ್ಯದ ದಿಕ್ಕು ಬದಲಾಗುವುದು ಅನಿವಾರ್ಯವೆನ್ನಿಸಿತು. ನವೋದಯ ಕಾವ್ಯದಲ್ಲಿ ಕೃಷಿ ಮಾಡಿದ ಗೋಕಾಕರು ಇದನ್ನು ಮನಗಂಡರು. ಬದಲಾವಣೆಯ ಅನಿವಾರ್ಯತೆಯನ್ನು ಒತ್ತಿ ಹೇಳಿದ್ದರು. "ಕೊಡದಿರು ಶರಧಿಗೆ ಷಟ್ಪದಿಯ ದೀಕ್ಷೆಯನು" ಎನ್ನುವುದು ಛಂದೋಲಯಗಳ ಅನಗತ್ಯತೆಯನ್ನು ಸೂಚಿಸುತ್ತದೆ. ನವ್ಯ ಕಾವ್ಯ ಮುಕ್ತ ಮನೋಧರ್ಮವುಳ್ಳದ್ದಾಗಬೇಕೆಂದು ಅವರು ಘೋಷಿಸಿದ್ದನ್ನು ಸ್ಮರಿಸಿಕೊಳ್ಳಬಹುದು.

ವಿನಾಯಕರ "ಸಮುದ್ರ ಗೀತಗಳು" ನವ್ಯ ಕಾವ್ಯದ ಮುಕ್ತಮಾರ್ಗವನ್ನು ತೆರೆಯಿತು. ರೋಮ್ಯಾಂಟಿಕ್ ಕಾವ್ಯದ ಮೌಲ್ಯಗಳು ಹಾಗೂ ಅರ್ಥವಂತಿಕೆಯನ್ನುಳಿಸಿಕೊಂಡು ವಿನಾಯಕರ ಕಾವ್ಯ ಮಾನವತಾವಾದದ ಧೋರಣೆಯನ್ನು ಬಿತ್ತರಿಸಿತು. ದ್ಯಾವಾಪೃಥಿವೀ ಹಾಗೂ ತ್ರಿಶಂಕುವಿನ ಪ್ರಜ್ಞಾಪ್ರಭಾತ ಸಂಕಲನಗಳು ವಿನಾಯಕರ ಕಾವ್ಯಸಿದ್ಧಿಯನ್ನು ನಿದರ್ಶಿಸುತ್ತವೆ. ಇದೇ ಸಂದರ್ಭದಲ್ಲಿ ಗೋಪಾಲಕೃಷ್ಣ ಅಡಿಗರ "ಚಂಡೆಮದ್ದಳೆ" ಹಾಗೂ "ಭೂಮಿಗೀತ" ಕಾವ್ಯ ಪ್ರಕಟವಾಗಿ ಅಡಿಗರ ಕಾವ್ಯ ಮನೋಭೂಮಿಕೆ ವಿನಾಯಕರ ಕಾವ್ಯಧೋರಣೆಯಿಂದ ಭಿನ್ನವಾಗಿ ಅಸ್ತಿತ್ವವಾದೀ ಪ್ರಜ್ಞೆಯ ಹಿನ್ನೆಲೆಯಲ್ಲಿ ಬೆಳೆದುಬಂತು. ಕಾವ್ಯದಲ್ಲಿ ಮಣ್ಣಿನ ವಾಸನೆ, ಸಮಕಾಲೀನ ಪ್ರಜ್ಞೆ, ಆಡುಮಾತಿನ ಲಯ–ಇರಬೇಕೆಂಬ ವಿಚಾರಗಳು ರಾಮಚಂದ್ರ ಶರ್ಮ, ಕೆ. ಎಸ್. ನರಸಿಂಹ ಸ್ವಾಮಿ, ನಾಡಿಗ, ಕೆ. ಎಸ್. ನಿಸಾರ್ ಅಹಮದ್, ಚಂದ್ರಶೇಖರ ಕಂಬಾರ, ಲಂಕೇಶ ಮುಂತಾದವರನ್ನು ಆಕರ್ಷಿಸಿದವು. ವಿನಾಯಕರ ಸಮನ್ವಯವಾದೀ ಧೋರಣೆಯ ಕಾವ್ಯ ಹಾಗೂ ಅಡಿಗರ ಭೂಮಿಗೀತ ಮಾದರಿಯ ನವ್ಯ ಕಾವ್ಯ–ಹೀಗೆ ನವ್ಯ ಕಾವ್ಯ ಮಾರ್ಗ ಕವಲೊಡೆಯಿತು. ಯುದ್ಧಾನಂತರದ ತ್ರಸ್ತ ಜೀವನ, ಮನುಷ್ಯರ ಸ್ವಾರ್ಥ ಹಾಗೂ ಪೊಳ್ಳುತನ, ನಾಗರಿಕ ಬದುಕಿನ ಅಸ್ತವ್ಯಸ್ತತೆ ಹಾಗೂ ಅಶಾಂತಿ, ಅತೃಪ್ತಿ, ನಿರ್ವೀರ್ಯತೆ, ಜಿಗುಪ್ಸೆಯ ಭಾವಗಳು ನವ್ಯ ಕಾವ್ಯದಲ್ಲಿ ಅಭಿವ್ಯಕ್ತಿಯನ್ನು ಪಡೆದುವು. ರೂಪಕ, ಸಂಕೇತ ಹಾಗೂ ಪ್ರತಿಮೆಗಳ ಮುಖಾಂತರ ಕವಿ ಮಾತನಾಡಲಾರಂಭಿಸಿದ್ದರಿಂದ ನವ್ಯ ಕಾವ್ಯ ಕ್ಲಿಷ್ಟವಾಗಿ ಪರಿಣಮಿಸಿತು.

ಗೋಕಾಕರ "ಸಮುದ್ರ ಗೀತಗಳು",ಅಡಿಗರ "ಭೂಮಿಗೀತ", ನರಸಿಂಹ ಸ್ವಾಮಿ ಅವರ "ಶಿಲಾಲತೆ", ಕಣವಿ ಅವರ "ಮಂಗಣ್ಣನ ಮೆರವಣಿಗೆ", ಶರ್ಮ ಅವರ "ಏಳು ಸುತ್ತಿನ ಕೋಟೆ", ಶಿವರುದ್ರಪ್ಪ ಅವರ "ಗೋಡೆ", ಕಂಬಾರರ "ತಕರಾರಿನವರು", ಕೆ. ಎಸ್. ನಿಸಾರ್ ಅಹಮದ್ ಅವರ "ಸಂಜೆ ಐದರ ಮಳೆ" ಅತ್ಯಂತ ಗಮನಾರ್ಹ ರಚನೆಗಳಾಗಿವೆ.

ಗುಂಪುಗಳಿಂದ ಹೊರಗಿದ್ದು ಕಾವ್ಯ ರಚನೆ ಮಾಡುತ್ತಿರುವ ಕಂಬಾರರ ಕಾವ್ಯ ಮತ್ತು ನಿಸಾರ್ ಅಹಮದ್ ಅವರ ಕಾವ್ಯ ಇಂದಿಗೂ ಸತ್ವಯುತವೆನ್ನಿಸಿಕೊಂಡಿದೆ. "ಹೊಸ ಕಾವ್ಯ" ಮತ್ತು "ಹೊಸ ಜನಾಂಗದ ಕಾವ್ಯ" ಈ ಎರಡು ಅಂಥಾಲಜಿಗಳು ಹಲವು ಹೊಸ ಕವಿಗಳನ್ನು ಪರಿಚಯ ಮಾಡಿಕೊಟ್ಟವು.

ಸಾರ್ವಜನಿಕ ಹಾಗೂ ರಾಜಕೀಯ ಸ್ಥಿತ್ಯಂತರಗಳು, ಪ್ರಚಲಿತ ಸಂಕೀರ್ಣ ಸಮಸ್ಯೆಗಳು ಸಾಮಾನ್ಯ ಜನತೆಯ ನೋವು, ನಿರಾಶೆ, ದೀನದಲಿತರ ಮೇಲಿನ ಅತ್ಯಾಚಾರ, ಅನ್ಯಾಯಗಳು–ಯುವಕವಿಗಳ ಗಮನ ಸೆಳೆದವು. ವರ್ತಮಾನದ ಬದುಕು ಹಾಗೂ ಘಟನೆಗಳಿಗೆ ಪ್ರತಿಸ್ಪಂದಿಸುತ್ತ ಕಾವ್ಯ ಇನ್ನೊಂದು ಮಜಲನ್ನು ಗುರ್ತಿಸಿತು. ಶೋಷಣೆಯನ್ನು ಪ್ರತಿಭಟಿಸುವ ಪ್ರಸ್ತುತ ಸಾಮಾಜಿಕ, ರಾಜಕೀಯ ಅವಸ್ಥೆಯ ವಿರುದ್ಧ ಸಿಡಿದೇಳುವ ಧ್ವನಿ ಕಾವ್ಯದಲ್ಲಿ ಕೇಳಿಸುವಂತಾಯಿತು.

ಮಾರ್ಕ್ಸ್, ಬಸವಣ್ಣ, ಅಂಬೇಡ್ಕರ್, ಲೋಹಿಯಾ, ವಿಚಾರಗಳಿಂದ ಪ್ರೇರಿತಗೊಂಡ ಪ್ರಗತಿಶೀಲ, ದಲಿತ–ಬಂಡಾಯ ಧೋರಣೆಗಳು ಕಾಣಿಸಿಕೊಂಡು ಕಾವ್ಯ ಜನಸಮುದಾಯದ ಹತ್ತಿರ ಬರುವಂತಾಯಿತು. ಚಂದ್ರಶೇಖರ ಪಾಟೀಲ, ಇಮ್ರಾಪೂರ, ಸಿದ್ಧಲಿಂಗಯ್ಯ, ಕಾಳೆಗೌಡ ನಾಗವಾರ, ಚೆನ್ನಣ್ಣ ವಾಲೀಕಾರ, ಅಲ್ಲಮ ಪ್ರಭು, ಬೆಟ್ಟದೂರ, ಇಂದೂಧರ ಹೊನ್ನಾಪುರ–ಮುಂತಾದವರು ವರ್ತಮಾನ ಸಂಬಂಧಗಳಿಗೆ ಪ್ರತಿಸ್ಪಂದಿಸತೊಡಗಿದರು. ರಾಜಕೀಯ, ಸಾಮಾಜಿಕ, ಧಾರ್ಮಿಕ

ಕ್ಷೇತ್ರಗಳಲ್ಲಿ ನಡೆಯುವ ಶೋಷಣೆ, ಭ್ರಷ್ಟಾಚಾರ ಇವು ಇವರ ಕಾವ್ಯದ ವಿಷಯಗಳಾದವು. ಇಲ್ಲಿಯವರೆಗೆ ಕಾಲೊತ್ತಡಕಾಗಿದ್ದ ನವ್ಯದ ತಂತ್ರ ಸಡಲಿ ಇವರೆಲ್ಲ ಮೈಚಳಿ ಬಿಟ್ಟು ಕಾವ್ಯ ಬರೆಯತೊಡಗಿದರು. ಗಟ್ಟಿಯಾದ ಕಾವ್ಯ ಸೃಷ್ಟಿಯಾಗದೆ ಹೋದರೂ ಸಾಮಾಜಿಕ ಕಾಳಜಿಯಿಂದ ಆವಿರ್ಭವಿಸಿದ ಕಾವ್ಯದಲ್ಲಿ ಕ್ರಾಂತಿಕಾರಿ ಧೋರಣೆಯ ಮಿಡಿತಗಳಿರುವುದನ್ನು ಗುರ್ತಿಸಬಹುದು.

ಇತ್ತೀಚಿನ ದಿನಗಳಲ್ಲಿ ಕಾವ್ಯ ಜನಸಮುದಾಯದ ದನಿಯಾಗಬೇಕೆನ್ನುವುದು ನಿಜಕ್ಕೂ ಸ್ವಾಗತಾರ್ಹವಾದದ್ದು. ಒಮ್ಮೊಮ್ಮೆ ತೀವ್ರ ಆಘಾತ ಇಲ್ಲವೆ ಸಾಮಾಜಿಕ ಬದ್ಧತೆ ಇಲ್ಲದೆ ಹುಟ್ಟುವ ಕಾವ್ಯ ಸ್ವಪ್ರಚಾರ, ಪ್ರತಿಷ್ಠೆಯ ಮಟ್ಟಕ್ಕಿಳಿಯುವುದುಂಟು. ಒಮ್ಮೊಮ್ಮೆ, ಕವಿ ನಂಬಿಕೊಂಡಿರುವ ವಿಚಾರ ಪ್ರಣಾಲಿ ಮುಖ್ಯವಾಗಿ, ಅದು ಕಾವ್ಯದಲ್ಲಿಯೂ ನುಗ್ಗಿ ಬರುವುದರಿಂದ, ಅದು ಕಾವ್ಯದ ಮೂಲಭೂತ ಕಾಳಜಿಗಳನ್ನು ಗಾಳಿಗೆ ತೂರುವುದೆಂಬಂತೆ ಎನ್ನಿಸುವುದು. ತೀವ್ರ ಸಂವೇದನೆ ಹಾಗೂ ಕಳಕಳಿಯಿಂದ ಬರೆಯುವ ಕವಿಗಳು ಒಂದಿಬ್ಬರು ಮಾತ್ರ ಸಿಗುತ್ತಾರೆ. ವರ್ತಮಾನದ ಕಾವ್ಯದಲ್ಲಿ ಘೋಷಣೆಗಳ ಪ್ರಾಬಲ್ಯ ಹಾಗೂ ಸಾಮಾಜಿಕ ಕಳಕಳಿಯ ಧ್ವನಿಯೇ ನಿಚ್ಚಳವಾಗಿ ಕೇಳಿಬರುತ್ತದೆ. ಸಮಾಜವನ್ನು ಬದಲು ಮಾಡಬೇಕೆನ್ನುವುದು ಮಾತುಗಳಲ್ಲಿ ಮೊಳಗುವುದಾದರೂ ಅದಿನ್ನೂ ಸುಸಂಘಟಿತ ಕ್ರಿಯೆಯಾಗಿ ಕಾವ್ಯ ರೂಪದಲ್ಲಿ ಕಾಣಿಸಿಕೊಂಡಿಲ್ಲ. ನವ್ಯ ಕಾವ್ಯ ರಚನೆ ನಿರರ್ಥಕವೆನ್ನಿಸಿದ್ದರಿಂದ ಕಾವ್ಯ ಸಮೂಹದ ಮಾಧ್ಯಮವಾಗುವ ಸಾಧ್ಯತೆಯನ್ನು ಪಡೆದುಕೊಂಡಿರುವುದೆಂದು ಹೇಳಬಹುದು. ಸಂಕೇತ, ಪ್ರತಿಮೆ, ರೂಪಕಗಳ ಮುಖಾಂತರ ಮಾತಾಡುತ್ತಿದ್ದ ಕವಿ ಇಂದು ನೇರವಾಗಿ ಸರಳವಾಗಿ ಸ್ಪಷ್ಟವಾಗಿ ಮಾತಾಡುತ್ತಿರುವುದನ್ನು ಗಮನಿಸಬಹುದು. ಜನರಾಡುವ ಸಹಜ ಹಾಗೂ ನಿರಾಡಂಬರ ಭಾಷೆಯಿಂದ ಕಾವ್ಯ ಮತ್ತೆ ಹೊಸಮೈ ಪಡೆಯುತ್ತಿರುವುದು ಸುಳ್ಳೇನಲ್ಲ. ಆದರೆ ಇದು ಸ್ವಪ್ರಚಾರ, ಪ್ರತಿಷ್ಠೆ, ಗುಂಪುಗಾರಿಕೆಯಲ್ಲಿ ಕರಗಿ ಹೋಗದಿದ್ದರೆ ವರ್ತಮಾನದ ಕನ್ನಡ ಕಾವ್ಯಕ್ಕೆ ಉಜ್ವಲ ಭವಿಷ್ಯವೂ ಇದೆ. ಶೋಷಣೆ ಹಾಗೂ ಭ್ರಷ್ಟ ವ್ಯವಸ್ಥೆಯ ವಿರುದ್ಧ ಕೈಯೆತ್ತಿ ನಿಂತಿರುವ ಕನ್ನಡ ಕಾವ್ಯ ಒಂದು ತಾತ್ವಿಕ ನೆಲೆಯನ್ನು ಗುರ್ತಿಸಿಕೊಳ್ಳುವುದು ಅಗತ್ಯವಾಗಿದೆ. ಸಮಾಜ ಬದಲಾವಣೆ, ಬದಲೀ ವ್ಯವಸ್ಥೆ ಹಾಗೂ ಮಾನವೀಯ ಮೌಲ್ಯಗಳ ಪುನಃ ಪ್ರತಿಷ್ಠಾಪನೆಗೆ ಕವಿಗಳು ಹೋರಾಡುತ್ತಿರುವುದಕ್ಕೆ ಅರ್ಥವಿಲ್ಲದಿಲ್ಲ. ಇಂದು ಸಮುದ್ರಗೀತಗಳು, ಭೂಮಿ ಗೀತದಂಥ ಕೃತಿಗಳ ಸೃಷ್ಟಿಯಾಗಿಲ್ಲವಾದರೂ ತಾತ್ಪೂರ್ತಿಕ, ವಾಸ್ತವಿಕ ಸಂದರ್ಭಗಳಲ್ಲಿ ಮಿಡಿಯುವ ಕಾವ್ಯವೂ ಅಷ್ಟೇ ಗಮನಾರ್ಹವಾದದ್ದು.

ಅನುಭವವನ್ನು ಪ್ರಾಮಾಣಿಕವಾಗಿ ಅಭಿವ್ಯಕ್ತಗೊಳಿಸುವ ಜನಸಮೂಹದ ಧ್ವನಿಯಾಗಬೇಕೆನ್ನುವ ಕಾವ್ಯ ಯಾವ ಕಾಲಕ್ಕೂ ಬೇಕು. ಜನತಾಭಿಮುಖಿವಾಗುತ್ತಿರುವ ಕನ್ನಡ ಕಾವ್ಯ ಅದಿನ್ನೊಂದು ಹೊಸ ತಿರುವಿಗಾಗಿ ಕಾಯುತ್ತಿರುವುದೆಂದು ಹೇಳಬಹುದು.

# ಕನ್ನಡ ಸಾಹಿತ್ಯ-ಈಚಿನ ಒಲವುಗಳು

ಸುಮತೀಂದ್ರ ನಾಡಿಗ

೧೯೭೦ರ ಈಚೆಗೆ ಕನ್ನಡ ಸಾಹಿತ್ಯದಲ್ಲಿ ಬದಲಾವಣೆಯ ಅನೇಕ ಲಕ್ಷಣಗಳು ಕಾಣಿಸುತ್ತಿವೆ. ನವ್ಯ ಸಾಹಿತ್ಯದ ಗುಂಪು ಒಡೆದು ಹೋಗಿ, ನವ್ಯದ ಮೇಲೆ ದಾಳಿಯೂ ನಡೆಯುತ್ತಿದೆ. ಈ ದಾಳಿಗಳನ್ನು ಎರಡು ಶಾಖೆಗಳಾಗಿ ಗಮನಿಸಬಹುದು. ಮೊದಲನೆಯ ಶಾಖೆಯನ್ನು ಒಕ್ಕೂಟ, ಬಂಡಾಯ ಮತ್ತು ದಲಿತ ಚಳವಳಿಗಳು ಪ್ರತಿನಿಧಿಸಿದರೆ, ಎರಡನೆಯದನ್ನು ಭಾವಗೀತಾತ್ಮಕವಾಗಿ ಕಾವ್ಯ ರಚಿಸುತ್ತಿರುವ ಕವನ ಸಂಕಲನಗಳೂ ಮತ್ತು ಭ್ರಾಮಕ ಕಲ್ಪನೆಯನ್ನು ವಿಶಿಷ್ಟವಾಗಿ ಬಳಸುತ್ತಿರುವ ಎಂ. ಎಸ್. ಪ್ರಭು, ಎಸ್. ದಿವಾಕರ, ಕೃಷ್ಣರಾಜು ಮೊದಲಾದವರ ಸಣ್ಣ ಕತೆಗಳೂ ಪ್ರತಿನಿಧಿಸುತ್ತವೆ ಎನ್ನಬಹುದು. ಈ ಎರಡು ಪ್ರಮುಖ ಪ್ರತಿಕ್ರಿಯೆಗಳ ಸ್ವರೂಪವನ್ನು ಗುರ್ತಿಸುವುದು ಈ ಲೇಖನದ ಉದ್ದೇಶವಾಗಿದೆ.

ಒಕ್ಕೂಟದ ಉದ್ದೇಶ ಮೊದಲ ಸುತ್ತೋಲೆಯಲ್ಲಿ ಹೀಗೆ ಪ್ರಕಟಿತವಾಗಿದೆ: "ರೇಡಿಯೋ, ವೃತ್ತ ಪತ್ರಿಕೆ, ಟೆಲಿವಿಷನ್, ಪುಸ್ತಕ ಪ್ರಕಾಶನ, ಸಿನಿಮಾ ಎಲ್ಲೆಲ್ಲೂ ಉಚ್ಚ ವರ್ಗದ ವೈದಿಕದ ಹಿಡಿತವಿದೆ. ಸಾವಿರಾರು ವರ್ಷದಿಂದ ಬೌದ್ಧಿಕ ದಬ್ಬಾಳಿಕೆ ನಡೆಸಿ ಜನತೆಗೆ ತಿಳಿಯದ ಭಾಷೆಯ ಮೂಲಕ, ಆಡಳಿತ ಸೂತ್ರಗಳ ಮೂಲಕ ನಮ್ಮ ಜನರನ್ನು ಮೂಕರನ್ನಾಗಿಸಿ ಕತ್ತಲಲ್ಲಿ ಕೊಳೆಯಬಿಟ್ಟ ಈ ವೈದಿಕರ ಗುತ್ತಿಗೆ ಸಾಮಾನ್ಯವಾದದ್ದಲ್ಲ. ಈ ವೈದಿಕರ ಹತೋಟಿಯಿಂದ ಮಾಧ್ಯಮಗಳನ್ನು ಬಿಡುಗಡೆ ಮಾಡಲು ಎರಡು ದಾರಿಗಳಿವೆ. ಒಂದು, ಬಹು ಸಂಖ್ಯಾತರು ವೈದಿಕರ ಅನುಯಾಯಿಗಳಾಗುವುದು. ಆದರೆ ಈಗಾಗಲೇ ತಮ್ಮ ಸ್ವಾರ್ಥದಿಂದ ಮತ್ತು ಜನತೆಯೊಂದಿಗೆ ಲೇವಾದೇವಿ ಕಳೆದುಕೊಂಡು ವೈದಿಕ ರೀತಿಯಿಂದ ಈ ವೈದಿಕರು ಬರಡಾಗಿದ್ದಾರೆ. ಅವರ ಕೈಯಲ್ಲಿನ ಮಾಧ್ಯಮ ಕೂಡ ಬರಡಾಗಿದೆ. ಅಪ್ರಾಮಾಣಿಕವಾಗಿದೆ. ಎರಡನೆಯ ದಾರಿ, ಈ ವೈದಿಕರ ಮರ್ಜಿ ಹಿಡಿಯದೆ ಇವರ ವಿರುದ್ಧ ಬಹು ಸಂಖ್ಯಾತರ ಸಂಘಟನೆ ನಡೆಸಿ ಈ ಮಾಧ್ಯಮಗಳ ಹತೋಟಿ ಪಡೆಯುವುದು." (ಸಂಕ್ರಮಣ ೬೦. ಕರ್ನಾಟಕ ಬರಹಗಾರರ ಮತ್ತು ಕಲಾವಿದರ ಒಕ್ಕೂಟ ಸಂಸ್ಥಾಪನಾ ಸಮ್ಮೇಳನ ವಿಶೇಷಾಂಕ. ಪುಟ ೧೨೩) ಈ ರೀತಿಯ ಉದ್ದೇಶದಿಂದ ಹೊರಟ ಒಕ್ಕೂಟ ಜೈಗುಳದ ಮಟ್ಟಕ್ಕೆ ಇಳಿದು ಸಾಹಿತ್ಯ ಚಳವಳಿಗಳು ಯಾವ ರೀತಿಯಲ್ಲಿ ನಡೆಯಬಾರದು ಎನ್ನುವುದಕ್ಕೆ ಉದಾಹರಣೆಯಾಯಿತು.

ಒಕ್ಕೂಟ ಸೃಷ್ಟಿಸಿದ ವಾತಾವರಣದಿಂದ ಸಾಹಿತ್ಯ ಕ್ಷೇತ್ರದಲ್ಲಾದ ಪರಿಣಾಮವನ್ನು ಯಶವಂತ ಚಿತ್ತಾಲರು ಹೀಗೆ ಹೇಳಿದ್ದಾರೆ. "೧೯೬೫ರಲ್ಲಿ ನನಗಿದ್ದ ಧೈರ್ಯ ಮತ್ತು ಆತ್ಮವಿಶ್ವಾಸಗಳನ್ನು ಮಾತ್ರ ನಾನಿನ್ನೂ ಮರೆತಿಲ್ಲ. ಅದಾದ ೧೫ ವರ್ಷಗಳ ನಂತರ ಈ ಹೊತ್ತು ಮತ್ತೆ ಸಾಹಿತ್ಯದ ಬಗೆಗಿನ ನನ್ನ ವಿಚಾರಗಳನ್ನು ಪ್ರಕಟಿಸುವಾಗ ಮಾತ್ರ ಅಂದಿನ ಧೈರ್ಯವಾಗಲೀ ಆತ್ಮವಿಶ್ವಾಸವಾಗಲೀ ಇಲ್ಲ ಎಂಬುದನ್ನು ವಿಷಾದ ತುಂಬಿದ ಮುಜುಗರದಿಂದಲೇ ಒಪ್ಪಿಕೊಳ್ಳಲೇ ಬೇಕಾಗಿದೆ". ಈ ವಿಷಾದಕ್ಕೆ ಕಾರಣ: ಪ್ರಾಮಾಣಿಕ ವಿಚಾರಗಳನ್ನೇ, ಅನ್ನಿಸಿಕೆಗಳನ್ನೇ ಅಸಾಧ್ಯ ಮಾಡಿದಂತಹ ದಿಲ್ಲಿಯ ರಾಜಕಾರಣಕ್ಕೆ ಯಾವುದೇ ರೀತಿಯಿಂದ ಹಿಂದೆ ಬೀಳದಂತಹ ವಾತಾವರಣವೊಂದು ಸಾಹಿತ್ಯ ಕ್ಷೇತ್ರಕ್ಕೂ ದಾಳಿ ಇಟ್ಟದ್ದು. ಬೆಳಕಿಗಿಂತ ಸದ್ದೇ ದೊಡ್ಡದಾದ ಶಬ್ದ ಪ್ರಪಂಚ ವಿಮರ್ಶೆಯ ಹೆಸರಿನಲ್ಲಿ ಮೆರೆಯಹತ್ತಿದ್ದು. ರಾಜಕಾರಣದ, ಅದಕ್ಕಿಂತ ಹೆಚ್ಚಾಗಿ ರಾಜಕೀಯ ಪ್ರಚಾರದ ಸಂಕಲ್ಪನೆಗಳನ್ನು ಸಾಹಿತ್ಯ ವಿಮರ್ಶೆಯಲ್ಲಿ ಎಳೆದು ತಂದು ನಮಗೆ ಎಂತಹ ಸಾಹಿತ್ಯ ಬೇಕು ಎನ್ನುವುದಕ್ಕಿಂತ ಹೆಚ್ಚಾಗಿ ಯಾರು ಯಾರಿಗೆ ಸಾಹಿತ್ಯದ ಇತಿಹಾಸದಲ್ಲಿ ಸ್ಥಾನ ಸಿಗಬೇಕು ಎಂಬುದರ ಸುತ್ತಲೂ ವಿವಾದ ಎಬ್ಬಿಸಿದ್ದು. ಕೃತಿಗಿಂತ ಮೆನಿಫೆಸ್ಟೋಗೆ ಪ್ರಾಧಾನ್ಯ ಸಿಕ್ಕಿದ್ದು. ಇಂತಹ ಉಸಿರುಗಟ್ಟಿಸುವ ವಾತಾವರಣ. (ಸಾಹಿತ್ಯ ಸೃಜನಶೀಲತೆ ಮತ್ತು ನಾನು ಪುಟ. ೮೪-೫) ಬಹುಶಃ ಇದೇ ಅರ್ಥದಲ್ಲೋ ಏನೋ, ದೇವನೂರ ಮಹಾದೇವರು ಒಕ್ಕೂಟದ ಬಗ್ಗೆ ೧೦-೧೧-೧೯೭೯ರಲ್ಲಿ ನಡೆದ ಬಂಡಾಯ ಸಾಹಿತ್ಯದ ಸಮ್ಮೇಳನದ ಆಶಯ ಭಾಷಣದಲ್ಲಿ: ಅದರ ಹುಂಬುತನ ಅಬ್ಬರ, ಪ್ರಚಾರ, ತತ್ವವನ್ನು ವ್ಯಕ್ತಿಗತಗೊಳಿಸುವ ಗೊಂದಲದ ಸರಪಳಿಗಳು ಒಕ್ಕೂಟವನ್ನು ಕಟ್ಟಿಹಾಕಿ ನಮ್ಮ ಕಣ್ಣೆದುರು ತಿಂದುದನ್ನು ನೋಡಿದ್ದೇವೆ ಎಂದು ಹೇಳಿದ್ದಾರೆ. ಅದೇ ಸಂದರ್ಭದಲ್ಲಿ ಬಿ. ಕೃಷ್ಣಪ್ಪನವರು ಒಕ್ಕೂಟದ ಉದ್ದೇಶ "ಬ್ರಾಹ್ಮಣಶಾಹಿ ಅಥವಾ ಪುರೋಹಿತಶಾಹಿ"ಯ ವಿರುದ್ಧ ಹೋರಾಡುವುದಿತ್ತು ಎಂದು ಹೇಳಿದ್ದಾರೆ. ಒಕ್ಕೂಟದ ಉದ್ದೇಶ ಸಾಹಿತ್ಯವಾಗಿರದೆ ಅರ್ಧ ರಾಜಕೀಯ ಉದ್ದೇಶವಿತ್ತು ಎಂದಾಗ ಕುವೆಂಪುರವರು ಹೇಳಿದ ಎಚ್ಚರದ ಮಾತುಗಳು ಬಹುಶಃ ಒಕ್ಕೂಟದ ಪತನಕ್ಕೆ ಕಾರಣವಾಗಿರಲಿಕ್ಕೂ ಸಾಕು. ಒಕ್ಕೂಟಕ್ಕೆ ರಾಜಕೀಯ ಕಾರಣಗಳೇ ಅಲ್ಲದೆ ಕೆಲವರ ವೈಯಕ್ತಿಕ ಕಾರಣಗಳೂ ಇದ್ದವು. ಒಕ್ಕೂಟದ ಸಂಘಟನೆಯನ್ನು ಅತೃಪ್ತ ಲೇಖಕರು ತಮ್ಮ ಸ್ಥಾನಗಳ ಭದ್ರತೆಗಾಗಿ ಉಪಯೋಗಿಸಿಕೊಂಡರು. ಇದರ ಬಗ್ಗೆ ಗಿರಡ್ಡಿ ಗೋವಿಂದ ರಾಜರ ಅಭಿಪ್ರಾಯ ಹೀಗಿದೆ: "ಈ ಅತೃಪ್ತ ಗುಂಪು ತಮ್ಮ ವೈಯಕ್ತಿಕ ಜಗಳವನ್ನೇ ಒಂದು ಸಾಂಸ್ಕೃತಿಕ ಆಂದೋಲನವನ್ನಾಗಿ ಮಾಡಿಕೊಳ್ಳಲು ಬ್ರಾಹ್ಮಣ

ದ್ವೇಷವನ್ನೇ ಒಂದು ತಾತ್ವಿಕ ಸಿದ್ಧಾಂತವನ್ನಾಗಿ ರೂಪಿಸಿಕೊಂಡು ಜನರನ್ನು ವಂಚಿಸಲು ಯತ್ನಿಸುತ್ತಿದೆ. ಸ್ವಾರ್ಥಕ್ಕಾಗಿ ಇಂಥ ಜನ ಏನು ಮಾಡಲಿಕ್ಕೂ ಹೇಸುವುದಿಲ್ಲ. ಕ್ರಾಂತಿಯನ್ನೂ ಕೂಡ (ಸಾಹಿತ್ಯ ಮತ್ತು ಪರಂಪರೆ ಪುಟ. ೧೯೯) ಒಕ್ಕೂಟದಿಂದ ಏನಿಲ್ಲವೆಂದರೂ ಬಹುಸಂಖ್ಯೆಯಲ್ಲಿರುವ ಅಲ್ಪಸಂಖ್ಯಾತ, ಸಂಕೋಚದ, ಶೋಷಿತ ಲೇಖಕರು ತಮ್ಮ ಅನುಭವವನ್ನು ಮೈಚಳಿ ಬಿಟ್ಟು ತಮ್ಮದೇ ಆದ ಭಾಷೆಯಲ್ಲಿ ಹೇಳುವ ತಾಕತ್ತು ದೊರೆಯಿತು. ಜಾಣತನವನ್ನು ಪ್ರತಿಭೆಯೆಂದೂ ನಾಜೂಕನ್ನು ಪ್ರೌಢಿಮೆಯೆಂದೂ ಸುಲಭವಾಗಿ ತೀರ್ಮಾನಿಸುವ ನಮ್ಮ ಬೌದ್ಧಿಕ ವಾತಾವರಣದಲ್ಲಿ ಪ್ರತಿಭೆಗೆ ಹೊಸ ಅರ್ಥ ದೊರೆಯುವಂತಾಯಿತು.", (ಶೂದ್ರ ಸಂಪುಟ ೪ ಸಂಚಿಕೆ ೪–೫ ಪು. ೩೦.) ಹೀಗೆ, ಒಕ್ಕೂಟವನ್ನು ಕಟ್ಟಿದವರೊಬ್ಬರಾದ ಲಂಕೇಶರು ಬಂಡಾಯ ಚಳವಳಿಗೆ ಒಕ್ಕೂಟವೇ ದಾರಿ ಮಾಡಿತು ಎಂದು ಹೇಳಿದರೆ ಬುದ್ದಣ್ಣ ಹಿಂಗಮಿರೆ ಮತ್ತು ಸೋಮಶೇಖರ ಇಮ್ರಾಪೂರರು "ಈ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸುವವರೆಲ್ಲರೂ ಒಕ್ಕೂಟದ ಮಂದಿ. ಶೂದ್ರ ಲೇಬಲ್ ಹಚ್ಚಿಕೊಂಡು ವಿಮುಖರಾದವರೇ" ಎಂದು ಬಂಡಾಯ ಸಾಹಿತ್ಯ ಸಮ್ಮೇಳನಕ್ಕೆ ಹೋಗುವವರಿಗೆ ಎಚ್ಚರಿಕೆಯನ್ನು ಕೊಟ್ಟಿದ್ದರು. ಈ ಒಕ್ಕೂಟದ ಗುಂಪು ಮಾಡಿದ ಒಂದು ದೊಡ್ಡ ತಪ್ಪೆಂದರೆ ಬ್ರಾಹ್ಮಣರಲ್ಲದವರೆಲ್ಲರನ್ನೂ ಶೂದ್ರರು ಎಂದು ಕರೆದುಕೊಂಡದ್ದು. ಇನ್ನೊಂದು ತಪ್ಪೆಂದರೆ ಬರೀ ಬೈಗುಳದಲ್ಲೇ ಒಕ್ಕೂಟದ ಅವಸಾನಕ್ಕೆ ಕಾರಣವಾದದ್ದು.

ಒಕ್ಕೂಟದ ನಂತರ ೧೯೭೮ರಲ್ಲಿ ಪ್ರಗತಿ ಪಂಥ ಸಮ್ಮೇಳನ ನಡೆಯಿತು. ಸಮಾಜವಾದದತ್ತ ಜಗತ್ತನ್ನು ನಡೆಸುವುದೇ ಅದಕ್ಕಾಗಿ ಲೇಖಣಿಯನ್ನು ಉಪಯೋಗಿಸುವುದೇ ಪ್ರಗತಿ ಪಂಥದ ಉದ್ದೇಶವಾಗಿತ್ತು. ಪ್ರಗತಿ ಪಂಥ ಒಕ್ಕೂಟದ ಹಾಗೆಯೇ ಮರೆತುಹೋದ ಒಂದು ಚಳವಳಿಯಾಗಿದೆ. ಸದ್ಯಕ್ಕೆ ಉಳಿದಿರುವ ಚಳವಳಿಯೆಂದರೆ ಬಂಡಾಯ ಮಾತ್ರ. ಬಂಡಾಯ ಸಾಹಿತ್ಯ ಸಮ್ಮೇಳನ ನಡೆದದ್ದು ೧೯೭೯ರ ಕೊನೆಯಲ್ಲಿ. ಇದರ ಆಶಯಗಳನ್ನು ಕುರಿತು ಮಹಾದೇವ ಹೀಗೆ ಹೇಳಿದ್ದಾರೆ: "ಇಂಥ ಒಂದು ಆಂದೋಲನದಿಂದ ಮಾತ್ರವೇ ಅಸ್ಪೃಶ್ಯತೆಯ ಕತ್ತಲು ಕೊನೆಯಾಗಬಹುದು. ಜಾತೀಯ ಗೋಡೆಗಳು ಕುಸಿಯಬಹುದು. ವರ್ಗದ ಪಿರಮಿಡ್ಡು ನೆಲಸಮವಾಗಬಹುದು. ಮನುಷ್ಯ ಮನುಷ್ಯರ ನಡುವೆ ಇರುವ ದ್ವೇಷ ವಿಷಕ್ಕೆ ಬದಲಾಗಿ ಪ್ರೀತಿ ಹಾಲು ಉಕ್ಕಬಹುದು" (ಬಂಡಾಯ ಮತ್ತು ಸಾಹಿತ್ಯ: ಬಂಡಾಯ ಸಂಘಟನಾ ಕೇಂದ್ರ ಸಮಿತಿ, ಬೆಂಗಳೂರು ಇವರ ಪ್ರಕಟಣೆ, ೧೯೭೯, ಪುಟ ೧೫) ಸಾಹಿತ್ಯ ಡಂಬತನ, ಅಬ್ಬರಗಳಿಲ್ಲದ ಇಂಥ ಮಾತುಗಳಲ್ಲಿ ಬಂಡಾಯ ಸಾಹಿತ್ಯದ ಚಳವಳಿಯ ಅರ್ಥಪೂರ್ಣತೆ ಮತ್ತು ಅದು ಮುಂದುವರಿಯುವ ಲಕ್ಷಣಗಳು ಕಾಣಿಸುತ್ತವೆ. ಬಂಡಾಯ ಸಾಹಿತ್ಯಗಳ ಇನ್ನು ಕೆಲವು ಮಾತುಗಳು ಹೀಗಿವೆ: ಇಂದೂಧರ ಹೊನ್ನಾಪುರರು ಹೀಗೆ ಹೇಳಿದ್ದಾರೆ. "ಬದಲಾವಣೆ ಬಯಸುವ ಲೇಖಕ ಈಗ ಬೀದಿಗೆ ಇಳಿಯಬೇಕಾಗಿದೆ. ಭ್ರಮೆಯ ಲೋಕವನ್ನು ಬಿಟ್ಟು ವಾಸ್ತವತೆಗೆ ಬರಬೇಕಾಗಿದೆ. ಜನರೊಂದಿಗೆ ಬೆರತು ಸಮಕಾಲೀನ ಬದುಕಿಗೆ ಸ್ಪಂದಿಸುವಂಥ ಸಾಹಿತ್ಯ ರಚಿಸಬೇಕಾಗಿದೆ. ಸಾವಿರಾರು ವರ್ಷಗಳ ಅಮಾನವೀಯ ವ್ಯವಸ್ಥೆಯನ್ನು ಉಚ್ಚಾಟಿಸಿ ಶೋಷಣೆ ರಹಿತ ವ್ಯವಸ್ಥೆಯೊಂದರ ನಿರ್ಮಾಣಕ್ಕೆ ಆತ ಸಿದ್ಧವಾಗಬೇಕಾಗಿದೆ. ಸುಲಿಗೆ ರಹಿತ ಪ್ರಜಾಪ್ರಭುತ್ವ ಸ್ಥಾಪನೆಗೆ ಹೋರಾಡಬೇಕಾಗಿದೆ. (ಅದೇ ಪುಟ ೨೫) ಈ ಚಳವಳಿ ಮುಂದುವರಿಯಬೇಕಾದರೆ "ಜಾತಿಯಿಂದ ವರ್ಗದಿಂದ ತುಳಿತಕ್ಕೆ ಒಳಗಾದ ದಲಿತರಿಂದ ಮಾತ್ರ ಸಾಧ್ಯ. ಬಂಡಾಯ ಚಳವಳಿ ಕ್ರಾಂತಿಕಾರಿಯಾಗಿ ಯಶಸ್ವಿಯಾಗಬೇಕಾದರೆ ದಲಿತರು ಅದರ ಮುಂಚೂಣಿಯಲ್ಲಿರಬೇಕಾಗಿದೆ. ಅವರೊಂದಿಗೆ ಹೆಗಲು ಕೊಟ್ಟು ಎಲ್ಲ ಪಂಥೀಯರು, ಪ್ರಗತಿವಾದಿಗಳು ಕೆಲಸ ಮಾಡಬೇಕಾಗಿದೆ." ಎಂದು ಬಿ. ಕೃಷ್ಣಪ್ಪನವರು ಹೇಳಿದ್ದಾರೆ. (ಅದೇ ಪುಟ ೭೯) ಒಕ್ಕೂಟ ಮತ್ತು ಪ್ರಗತಿ ಪಂಥದ ಲೇಖಕರಿಗಿಂತ ಬಂಡಾಯದ ಲೇಖಕರು ತಮ್ಮ ಸಿದ್ಧಾಂತಗಳನ್ನು ಸಾಹಿತ್ಯವಾಗಿಸುವ ಕಡೆಗೆ ಹೆಚ್ಚು ಲಕ್ಷ್ಯ ಕೊಟ್ಟಿದ್ದಾರೆ. ಉದಾಹರಣೆಗೆ ದಲಿತ ಕವಿ ಸಿದ್ಧಲಿಂಗಯ್ಯ ಹೀಗೆ ಹೇಳಿದ್ದಾರೆ: "ಬೆಲ್ಚಿ, ಪಂತ್ ನಗರ, ವಿಲ್ಲುಪುರ, ಕಂಜವಾಲ ಹೀಗೆ ನಾಡಿನ ಮೂಲೆ ಮೂಲೆಯಲ್ಲಿ ದಲಿತರನ್ನು ಸುಟ್ಟ ಸುದ್ದಿಯನ್ನು ಓದಿ ರೊಚ್ಚಿಗೇಳದವನು ಮನುಷ್ಯನೆ ಮಾನವತೆಯ ಹತ್ಯೆಯ ಈ ಸಂದರ್ಭದಲ್ಲಿ ಸಾಹಿತಿ ಅಂತರ್ಮುಖಿ ಆಗುವುದಾದರೆ ಆತ ಖಂಡಿತವಾಗಿಯೂ ಸಾಮಾಜಿಕ ಅಪರಾಧಿ ಆಗುತ್ತಾನೆ. ಬದುಕಿನ ಬಗ್ಗೆ ಅಪಾರ ಪ್ರೀತಿ ಮತ್ತು ನಿಷ್ಠೆಯಿಂದ ಕೂಡಿದ ಸಾಹಿತ್ಯ ನಮಗೆ ಬೇಕಾಗಿದೆ. ಅದನ್ನು ಕಾಂತಿಕಾರೀ ಸಾಹಿತಿಗಳು ಮಾತ್ರ ಕೊಡಬಲ್ಲರು."

ಕ್ರಾಂತಿಕಾರೀ ಕಾವ್ಯ ಜನಪದೀಕರಣಕ್ಕೆ ಒಳಗಾಗಬೇಕು. ಕವಿಗಳು ಜನಸಮುದಾಯದ ಭಾವನೆಗಳನ್ನು ಸಮರ್ಥವಾಗಿ ಬಳಸಿಕೊಳ್ಳಬೇಕು. ಜಾನಪದ ಸಂಗ್ರಾಹಕ ಜನಪದ ಗೀತೆಗಳನ್ನು ಅಚ್ಚು ಹಾಕಿಸುವ ಕೆಲಸವನ್ನು ಮಾತ್ರ ಮಾಡುತ್ತಾನೆ. ಆದರೆ ಕ್ರಾಂತಿಕಾರೀ ಕಾವ್ಯ ಜಾನಪದ ಸತ್ವವನ್ನು ಉಂಡು ಬೆಳೆಯಬೇಕಾಗಿದೆ. ಜನತೆಯ ಋಣವನ್ನು ಹಿಂದಿರುಗಿಸಬೇಕಾಗಿದೆ. ಕ್ರಾಂತಿಕಾರೀ ಹಾಡುಗಳನ್ನು ಜನತೆ ತಮ್ಮದೆಂದು ಸ್ವೀಕರಿಸಬೇಕು. ಕವಿಯ ಹೆಸರೇ ಮರೆತು ಹೋಗಿ ನಮ್ಮ ಕಾವ್ಯ ಜನತೆಯ ಕಾವ್ಯವಾಗಬೇಕು." (ಅದೇ ಪುಟ ೧೦೬, ೧೦೭, ೧೦೮) ಈ ಮಾತುಗಳಲ್ಲಿ ಸಿದ್ಧಲಿಂಗಯ್ಯನವರು ಕಾವ್ಯದ ವಸ್ತು ಮತ್ತು ರೀತಿಯನ್ನು ವಿವೇಚಿಸಿದ್ದರೆ, ಬರಗೂರು ರಾಮಚಂದ್ರಪ್ಪನವರು ಇನ್ನು ಕೆಲವು ಆಯಾಮಗಳನ್ನು ಕುರಿತು ಯೋಚಿಸಿದ್ದಾರೆ. "ಬಂಡಾಯ ಸಾಹಿತಿಗಳಲ್ಲಿ ನಿಸರ್ಗ, ಹೆಣ್ಣು ಇತ್ಯಾದಿ ವಸ್ತುಗಳು ಬೇರೆ ಯಾವುದೇ ಆಯಾಮವಿಲ್ಲದೆ ಹಾಗೇ ರಚಿತವಾಗಬಾರದೆಂದೇನೂ ಕಡ್ಡಾಯವಿಲ್ಲ. ಬಂಡಾಯ ಸಾಹಿತಿಯು ನಿಸರ್ಗ, ಹೆಣ್ಣು ಇತ್ಯಾದಿ ವಸ್ತುಗಳನ್ನು ಬೇರೆಯೇ ರೀತಿಯಲ್ಲಿ ಕಾಣುವ, ಕಂಡರಿಸುವ ಸೃಜನಶೀಲತೆ ಮುಖ್ಯ. ಇಲ್ಲಿಯೂ ನಮ್ಮ ಸಾಹಿತ್ಯ ಚಳವಳಿಯ ಛಾಪು ಇರಬೇಕಾಗುತ್ತದೆ. ಈ ಚಳವಳಿಯ ಭಾವನೆಗಳು ವ್ಯಕ್ತಿತ್ವದ ಭಾಗವಾಗದೆ ಅಥವಾ ಆಗಿದ್ದರೆ ಇದು ತಾನಾಗಿಯೇ ಸಂಭವಿಸುತ್ತದೆ."

"ನಾವು ಸೌಂದರ್ಯಾನುಭವದ ವಿರೋಧಿಗಳೇನೂ ಅಲ್ಲ. ನಾವು ಬಯಸುವುದು ಜನಸಾಮಾನ್ಯರನ್ನು ಬಂಧಿಸದ ಸುಂದರ ಬದುಕು. ದುಡಿಯುವ ಜನತೆಗೆ ದಕ್ಕುವ ಸಮಾನತೆಯ ಬದುಕು. ಸ್ತ್ರೀಸ್ವಾತಂತ್ರ್ಯಕ್ಕೆ ಅರ್ಥ ತರುವ ಸುಂದರ ಬದುಕು. ಒಟ್ಟಿನ ಸಾರಾಂಶ: ಬಂಡಾಯ ಸಾಹಿತ್ಯ ಚಳವಳಿಯ ಮುಖ್ಯ ತಳಹದಿ ಮಾನವೀಯತೆ. ಮನುಷ್ಯನನ್ನು ಮನುಷ್ಯನನ್ನಾಗಿಯೇ ನೋಡುವುದು, ಚರಿತ್ರೆಯ ಕಟು ವಾಸ್ತವಗಳ ಹಿನ್ನೆಲೆಯಲ್ಲಿ ಅರಿಯುವುದು ಸರಿಯಾದ ವಿಧಾನವೆಂಬುದು ನಮ್ಮ ಭಾವನೆ. ಬದುಕಿನ ಭ್ರಮೆಗಳನ್ನು ಸೀಳಿ ವಾಸ್ತವವನ್ನು ಕಂಡುಕೊಳ್ಳುತ್ತ ಅದರ ಸೂಕ್ಷ್ಮಗಳನ್ನು ಸೂರೆಗೊಳ್ಳುವ ಶಕ್ತಿ ಸಾಹಿತ್ಯದಲ್ಲಿ ಪ್ರಕಟವಾಗಬೇಕು. ಎಬ್ಬೊಟ್ಟು ಸಾಹಿತಿ ಕಾಣುವ ಒಂದೊಂದು ಮಗ್ಗುಲೂ ಒಗ್ಗೂಡಿ ಸಮಕಾಲೀನ ಬದುಕಿನ ನೈಜರೂಪ ಕಣ್ಣೆದುರು ಕಟ್ಟಬೇಕು. ಇದು ಇರುವ ಸ್ಥಿತಿಯನ್ನು ಬದಲಾಯಿಸುವ, ಹೊಸ ಬದುಕನ್ನು ಬಯಸುವ

ಪ್ರೇರಣೆಯಾಗಬೇಕು. ನಮ್ಮ ಕೃತಿಗಳ ಸಿಟ್ಟು, ವ್ಯಂಗ್ಯ ವಿಷಾದ, ವಿಡಂಬನೆ, ಅಸಹಾಯಕತೆಗಳ ಹಿಂದೆ ಮಾನವೀಯ ತುಡಿತವಿರಬೇಕು. ಇದು ಬಂಡಾಯ ಸಾಹಿತ್ಯ ಚಳವಳಿಯ ಆಶಯ ಮತ್ತು ಜವಾಬ್ದಾರಿ" (ಸಾಹಿತ್ಯ ಮತ್ತು ರಾಜಕಾರಣ: ಬರಗೂರು ರಾಮಚಂದ್ರಪ್ಪ: ಸಮತಾ ಪ್ರಕಾಶನ, ಹುಬ್ಬಳ್ಳಿ-೨೯, ಪುಟ ೨೩, ೨೪)

ಬಂಡಾಯ ಸಾಹಿತ್ಯ ಚಳವಳಿಯ ರೂಪರೇಖೆಗಳನ್ನು ಕೊಡುವ, ಬಂಡಾಯ ಸಾಹಿತಿಗಳ ಈ ಮಾತುಗಳನ್ನು ಕೇಳಿಯಾದ ಮೇಲೆ ಈ ಲೇಖಕರಿಗೆ ಶೋಷಿತರ ಬಗ್ಗೆ ಮತ್ತು ದಲಿತರ ಬಗ್ಗೆ ಇರುವ ಕಾಳಜಿ ಮುಖ್ಯವಾಗಿ ಕಾಣಿಸುತ್ತದೆ. ನವ್ಯ ಕಾವ್ಯದ ಕ್ಲಿಷ್ಟ ಅಭಿವ್ಯಕ್ತಿಯ ಮಾರ್ಗದಿಂದ ಹೊಸತೊಂದು ರೀತಿಯ ಅಭಿವ್ಯಕ್ತಿಗೆ ಈ ಲೇಖಕರು ಹವಣಿಸುತ್ತಿರುವುದು ಕೂಡ ಎದ್ದು ಕಾಣುತ್ತದೆ. ಪ್ರಗತಿಶೀಲ ಚಳವಳಿಗೂ ಬಂಡಾಯ ಚಳವಳಿಗೂ ಇರುವ ಸಾಮ್ಯಗಳನ್ನು ಕುರಿತು ಅನೇಕರು ಪ್ರಸ್ತಾಪಿಸಿದ್ದಾರೆ. ಉದಾಹರಣೆಗೆ ಬಸವರಾಜ ಕಲ್ಗುಡಿಯವರ ಅಭಿಪ್ರಾಯ ಇದು: "ಪ್ರಗತಿಶೀಲರಿಗಿಂತ ಭಿನ್ನವಾದ ನಿರ್ಣಯ ಘೋಷಣೆಗಳು ಉಳಿದ ಎರಡು ಸಮ್ಮೇಳನಗಳ ಆಶಯವಾಗಿದ್ದಾವೆಯೇ ಎಂದು ನೋಡಿದರೆ ಹಾಗೇನೂ ಆಗಿಲ್ಲ" (ಆಲೋಕ, ಸಂಚಿಕೆ ೩, ಸೆಪ್ಟೆಂಬರ್ ೧೯೭೯, ಪುಟ ೧೮) ಆದರೆ ಪ್ರಗತಿಶೀಲ ಚಳವಳಿಯ ಕಾಲಕ್ಕೆ ದೇವನೂರ ಮಹಾದೇವ ಮತ್ತು ಸಿದ್ಧಲಿಂಗಯ್ಯನವರಂತಹ ಲೇಖಕರು ಇರಲಿಲ್ಲವೆನ್ನುವುದನ್ನೂ, ಅಂತಹ ಲೇಖಕರು ಈಗ ಬರುತ್ತಿರುವುದರಿಂದ ಸಾಹಿತ್ಯ ಕ್ಷೇತ್ರದಲ್ಲಿ ಕೆಲವು ಮುಖ್ಯವಾದ ಬದಲಾವಣೆಗಳಾಗುತ್ತವೆ ಎನ್ನುವುದನ್ನೂ ಗಮನಿಸಬೇಕಾಗುತ್ತದೆ. ದೇವನೂರ ಮಹಾದೇವ ಮತ್ತು ಸಿದ್ಧಲಿಂಗಯ್ಯನವರಂತಹ ಸಾಹಿತಿಗಳು ದಲಿತರ ಬಗ್ಗೆ ಬರೆಯುವುದಷ್ಟೇ ಅಲ್ಲದೆ, ಅವರಿಗೆ ಆದರ್ಶ ವ್ಯಕ್ತಿಗಳೂ ಆಗಿ, ದಲಿತರ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತ, ಸಾಮಾಜಿಕ ಬದಲಾವಣೆಗಳಿಗೂ ಕಾರಣರಾಗುತ್ತಾರೆ ಎನಿಸುತ್ತದೆ.

ಈ ಒಕ್ಕೂಟದ ಮತ್ತು ಬಂಡಾಯ ಚಳವಳಿಯವರು ನವ್ಯರನ್ನು ಸಾಕಷ್ಟು ಟೀಕಿಸಿದ್ದಾರೆ. ಅದರಲ್ಲೂ ಗೋಪಾಲಕೃಷ್ಣ ಅಡಿಗರನ್ನು. ಆದರೆ ಅದೇ ಗೋಪಾಲಕೃಷ್ಣ ಅಡಿಗರು ತಮ್ಮ "ಸಾಕ್ಷಿ" ಪತ್ರಿಕೆಯಲ್ಲಿ ಲಂಕೇಶ, ಬುದ್ಧಣ್ಣ ಹಿಂಗಮಿರೆ, ದೊಡ್ಡರಂಗೇಗೌಡ, ಚನ್ನಣ್ಣ ವಾಲೀಕಾರ, ಬರಗೂರು ರಾಮಚಂದ್ರಪ್ಪ, ಕೆ. ಎನ್. ಶಿವತೀರ್ಥನ್, ಚಂದ್ರಶೇಖರ ಕಂಬಾರ, ದೇವನೂರ ಮಹದೇವ ಮುಂತಾದ ಒಕ್ಕೂಟ, ಬಂಡಾಯ ಮೊದಲಾದ ಚಳುವಳಿಯ ನಾಯಕರು ಮತ್ತು ಸದಸ್ಯರ ಬರಹಗಳನ್ನು ಪ್ರಕಟಿಸಿದ್ದಷ್ಟೇ ಅಲ್ಲ, ಮಾರ್ಕ್ಸವಾದದ ಬಗ್ಗೆಯೂ, ಸಮಾಜದ ಏರುಪೇರುಗಳ ಬಗ್ಗೆಯೂ ಲೇಖನಗಳನ್ನು ಪ್ರಕಟಿಸಿದ್ದರೆನ್ನುವುದನ್ನು ಮರೆತು ಮಾತಾಡಿದಾಗ ಅವು ಹೊಸ ಅಭಿವ್ಯಕ್ತಿಗಾಗಿ ತುಡಿಯುತ್ತಿರುವವರ ಆವೇಶದ ಮಾತುಗಳಾಗಿ ಕಾಣಿಸುತ್ತವೆ.

ಇತ್ತೀಚಿನ ಕತೆಗಾರರಾದ ಎಂ. ಎಸ್. ಕೆ. ಪ್ರಭು, ಕೃಷ್ಣ ರಾಜು ಮತ್ತು ಎಸ್. ದಿವಾಕರರು ನವ್ಯಮಾರ್ಗದ ಕತೆಗಳಿಂದ ಬೇರೆಯಾದ ರೀತಿಯಲ್ಲಿ ಕತೆಗಳನ್ನು ಹೇಳುತ್ತಿದ್ದಾರೆ, ಇವರು ಮೂವರಲ್ಲೂ ಭ್ರಾಮಕ ಕಲ್ಪನೆಯ ವಿಶೇಷವಾದ ಬಳಕೆಯಿದೆ. (ಪ್ರಸ್ತುತ ಲೇಖಕನೂ ಆ ರೀತಿಯ ಕತೆಗಳನ್ನು ಬರೆದಿದ್ದಾನೆ). ಭ್ರಾಮಕ ಕಲ್ಪನೆಯನ್ನಷ್ಟೇ ಅಲ್ಲದೆ, ಈ ಲೇಖಕರು ನೇರವಾಗಿ ಕತೆ ಹೇಳಲಿಕ್ಕೂ ಹೊರಡುತ್ತಾರೆ. ಪ್ರಜ್ಞಾ ಪ್ರವಾಹ ಮೊದಲಾದ ನವ್ಯದ ತಂತ್ರಗಳನ್ನು ಬಿಟ್ಟು, ಬರೀ ಮನಸ್ಸಿನ ಹೊಯ್ದಾಟಗಳನ್ನು ಸ್ವಗತಗಳ ಮೂಲಕ ಚಿತ್ರಿಸದೆ ಈ ಲೇಖಕರು ಪಾತ್ರಗಳ ಅಸ್ತಿತ್ವಕ್ಕೆ ಗಮನಕೊಟ್ಟು, ಘಟನಾಪ್ರಧಾನವಾದ ಕತೆಗಳನ್ನು ಬರೆಯುತ್ತಾರೆ, ಈ ರೀತಿಯಾದ ಘಟನಾ ಪ್ರಧಾನ ಕತೆಗಳನ್ನು ಬಂಡಾಯ ಸಾಹಿತಿಗಳೂ ಬರೆಯುತ್ತಿದ್ದಾರೆ.

ಇನ್ನು ಕಾವ್ಯಕ್ಷೇತ್ರಕ್ಕೆ ಬಂದರೆ ನವ್ಯಕಾವ್ಯದ ವ್ಯಂಗ್ಯ ಮಾರ್ಗವನ್ನು ಬಿಟ್ಟು ನವೋದಯ ಕಾವ್ಯಮಾರ್ಗಕ್ಕೆ ಹತ್ತಿರವಾದ ಭಾವಗೀತಾತ್ಮಕ ಕವಿತೆಗಳನ್ನು ಇತ್ತೀಚೆಗೆ ಬರೆಯುತ್ತಿದ್ದಾರೆ. (ಪ್ರಸ್ತುತ ಲೇಖಕನ "ಉದ್ಘಾಟನೆ" ಎನ್ನುವ ಕವನ ಸಂಗ್ರಹ ಈ ರೀತಿಯ ಕಾವ್ಯದ ಘೋಷಣೆಯನ್ನೂ ಒಳಗೊಂಡಿದೆ) ಭಾವಗೀತಾತ್ಮಕವಾಗಿ ಬರೆಯುತ್ತಿರುವವರಲ್ಲಿ ಎಚ್. ಎಸ್. ವೆಂಕಟೇಶ ಮೂರ್ತಿ ಮತ್ತು ದಲಿತಕವಿ ಸಿದ್ಧಲಿಂಗಯ್ಯನವರು ಗಮನಾರ್ಹರಾಗಿದ್ದಾರೆ. ಸಿದ್ಧಲಿಂಗಯ್ಯನವರ ಬಂಡಾಯ ಕಾವ್ಯ ಸಮಾಜದ ಕಡೆಗೆ ಕಣ್ಣುಹಾಯಿಸುತ್ತಲೇ ಇರುತ್ತದೆ.

ಬಂಡಾಯ ಚಳುವಳಿಯ ಬಗ್ಗೆ ಮಿಕ್ಕ ಲೇಖಕರಿಂದ ಒಂದೇ ಒಂದು ಸಂದೇಹವೆಂದರೆ, ಎಲ್ಲಿ ಈ ಲೇಖಕರು ತಾವು ಬಹಳ ಜನರನ್ನು ಮುಟ್ಟುವ ತುಯ್ತದಲ್ಲಿ, ಅನುಭವಗಳ ಸಮಗ್ರತೆಯನ್ನು ಉಳಿಸಿಕೊಳ್ಳುತ್ತಾರೋ ಇಲ್ಲವೋ ಎನ್ನುವುದು. ಈ ರೀತಿಯ ಆತಂಕವನ್ನು ಜೊತೆಯ ಲೇಖಕರಿಗಿರುವ ಕಾಳಜಿಯೆಂದು ಪರಿಗಣಿಸಬೇಕೇ ಹೊರತು ವಿರೋಧವೆಂದು ತೆಗೆದುಕೊಳ್ಳಬಾರದು. ಬಂಡಾಯ ಸಾಹಿತ್ಯ ಚಳುವಳಿ ದಲಿತರನ್ನೂ ಒಳಗೊಂಡಿದೆ ಎನ್ನುವುದು ಈಗಾಗಲೇ ಸ್ಪಷ್ಟವಾಗಿದೆ. ಬಂಡಾಯ ಸಾಹಿತ್ಯವನ್ನಾಗಲೀ ಅದರಲ್ಲಿ ಸೇರಿರುವ ದಲಿತ ಸಾಹಿತ್ಯವನ್ನಾಗಲೀ ವಿರೋಧಿಸುವ ಗಣ್ಯ ಸಾಹಿತಿಗಳು ಯಾರೂ ಇಲ್ಲ. ಅಭಿವ್ಯಕ್ತಿಗೆ ನಾನಾ ರೂಪಗಳಿವೆ. ಕಾಲದಿಂದ ಕಾಲಕ್ಕೆ ಸಮಸ್ಯೆಗಳು ಬದಲಾದ ಹಾಗೆ ಅಭಿರುಚಿಯೂ ಬದಲಾಗುತ್ತದೆ. ಅದರಿಂದಾಗಿ, ಸಾಹಿತ್ಯದ ಸ್ವರೂಪವೂ ಬದಲಾಗುತ್ತದೆ ಎನ್ನುವುದನ್ನೂ ಯಾರೂ ಅಲ್ಲಗಳೆಯುವುದಿಲ್ಲ. ಬಂಡಾಯ ಸಾಹಿತ್ಯ ಚಳುವಳಿ ಸಾಕಷ್ಟು ಪ್ರಮಾಣದಲ್ಲಿ ಸಾಹಿತ್ಯ ಸೃಷ್ಟಿಯನ್ನು ಮಾಡಬೇಕಾಗಿದೆ. ಈ ಚಳುವಳಿಯ ಪರಿಣಾಮವಾಗಿ ಶ್ರೇಷ್ಠ ಕೃತಿಗಳು ಮೂಡಿಬಂದರೆ ಇದರ ಸಾರ್ಥಕತೆ ಸ್ಪಷ್ಟವಾದೀತು. ಬಂಡಾಯದ ಆಶಯಗಳು ಕೃತಿಗಿಳಿದಾವೆ ಎನ್ನುವುದನ್ನು ಕಾದು ನೋಡಬೇಕು.

# ಕನ್ನಡ ಸಾಹಿತ್ಯಕ್ಕೆ ಕ್ರೈಸ್ತರ ಕೊಡುಗೆ

ಡಿ. ಲಿಂಗಯ್ಯ

ನಮ್ಮ ದೇಶದ ರಾಜಕೀಯ, ಸಾಮಾಜಿಕ ಬದಲಾವಣೆಗಳಿಂದ ಪಾಶ್ಚಾತ್ಯ ಕ್ರೈಸ್ತರು ನಮ್ಮ ದೇಶಕ್ಕೆ ಬಂದರು. ಜರ್ಮನ್, ಬ್ರಿಟಿಷ್ ಮಿಶನರಿಗಳು ಇವರಲ್ಲಿ ಮುಖ್ಯರು. ಇವರು ರೋಮನ್ ಕಥೋಲಿಕ್ ಮತ್ತು ಪ್ರೊಟೆಸ್ಟೆಂಟ್ ಸಂಸ್ಥೆಗಳಿಗೆ ಸೇರಿದ ಕ್ರೈಸ್ತರು. ೧೭ನೆಯ ಶತಮಾನದಿಂದಲೂ ಕರ್ನಾಟಕದಲ್ಲಿ ಕ್ರಿಸ್ತ ಮಿಶನರಿಗಳು ಇದ್ದರೂ ೧೯ನೆಯ ಶತಮಾನದಲ್ಲಿ ಇವರ ಕಾರ್ಯ ಚಟುವಟಿಕೆ ಉಚ್ಛ್ರಾಯ ಸ್ಥಿತಿಗೇರಿತು. ಕ್ರೈಸ್ತರಾದ ಜರ್ಮನ್ ಮಿಶನರಿಗಳಿಂದ. ಬ್ರಿಟಿಷ್ ಆಡಳಿತಗಾರರಿಂದ ಕರ್ನಾಟಕದಲ್ಲಿ ವಿಶೇಷವಾಗಿ ಸಾಹಿತ್ಯ ಕೃಷಿ ನಡೆದಿದೆ.

ಕ್ರೈಸ್ತರು ಧರ್ಮಾಭಿಮಾನಿಗಳು. ಹೊರದೇಶಗಳಿಂದ ಬಂದ ಇವರು ತಮ್ಮ ಮತ ಪ್ರಚಾರಕ್ಕೆ ಹೆಚ್ಚು ಗಮನ ಕೊಟ್ಟರು. ಧರ್ಮ ಮತ್ತು ಶಿಕ್ಷಣವನ್ನು ಒಟ್ಟೊಟ್ಟಿಗೆ ಪರಿಗಣಿಸಿದ್ದು ಇವರ ಬುದ್ಧಿವಂತಿಕೆಯ ಕುರುಹು. ನಮ್ಮನ್ನು ಆಳಲು ಬಂದ ಇವರಿಗೆ ನಮ್ಮ ಜನರ ಆಚಾರ, ವಿಚಾರ, ನಂಬಿಕೆ, ಜೀವನಮಟ್ಟ, ಮನೋಧರ್ಮ, ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ ಮೊದಲಾದ ವಿಷಯಗಳನ್ನು ಅರಿತುಕೊಳ್ಳುವುದು ಅನಿವಾರ್ಯವಾಗಿತ್ತು. ಈ ಅರಿವು ಇಲ್ಲದಿದ್ದರೆ ಆಳುವುದು ಕಷ್ಟವೆಂದು ತಿಳಿದಿದ್ದ ಸೂಕ್ಷ್ಮಮತಿಗಳು ಇವರು.

ತಮ್ಮ ಆಳ್ವಿಕೆಯನ್ನು ನೆಲೆಯೂರಿಸಲು, ತಮ್ಮ ಅಸ್ತಿತ್ವವನ್ನು ಊರ್ಜಿತಗೊಳಿಸಲು ಪಾಶ್ಚಾತ್ಯ ಕ್ರೈಸ್ತರು ಕನ್ನಡ ಭಾಷೆಯನ್ನು ಕಲಿತರು. ಕನ್ನಡ ಪಂಡಿತರ ಸಾಹಿತ್ಯದ ನೆರವನ್ನು ಪಡೆದುಕೊಂಡರು. ಆ ಮೂಲಕ ಕನ್ನಡ ಭಾಷೆಗೆ ನಾನಾ ರೂಪಗಳಲ್ಲಿ ಸೇವೆ ಸಲ್ಲಿಸಿದರು. ಆಡಳಿತ, ಶಿಕ್ಷಣ, ಇತಿಹಾಸ, ಶಾಸ್ತ್ರ, ಸಾಹಿತ್ಯ, ಕಲೆ, ಜಾನಪದ ಮೊದಲಾದ ವಿಷಯಗಳಲ್ಲಿ ಕ್ರೈಸ್ತರ ಕೊಡುಗೆ ಕನ್ನಡಿಗರಿಗೆ ಧಾರಾಳವಾಗಿ ಲಭಿಸಿದೆ. ಮುಖ್ಯವಾಗಿ ೧೯ನೆಯ ಶತಮಾನದಲ್ಲಿ (೧೮೧೦ ರಿಂದ ೧೯೧೦) ಕ್ರೈಸ್ತರಿಂದ ಕನ್ನಡ ಸಾಹಿತ್ಯಕ್ಕೆ ಆಗಿರುವ ಉಪಕಾರ ಅಪಾರ.

ಪಾಶ್ಚಾತ್ಯ ಕ್ರೈಸ್ತರು ಉಪಾಯವಾಗಿ ನಮ್ಮ ನಾಡಿನ ಆಡಳಿತಕ್ಕೆ ಪ್ರವೇಶಿಸಿದರು. ಜೊತೆಯಲ್ಲಿ ತಮ್ಮ ಆಡುಭಾಷೆಯಾದ ಇಂಗ್ಲಿಷನ್ನು ಆಡಳಿತದ ಎಲ್ಲ ಹಂತಗಳಲ್ಲಿ ಸೇರಿಸಿದರು. ಶಿಕ್ಷಣ ಕ್ಷೇತ್ರಕ್ಕೂ ಅನ್ವಯಿಸಿದರು. ಇದರಿಂದ ಕನ್ನಡ ಭಾಷೆ ಸೊರಗಿದರೂ ಇಂಗ್ಲಿಷ್ ಭಾಷೆಯಲ್ಲಿ ಅಭ್ಯಾಸ ನಡೆಸಿದವರಿಗೆ ಪ್ರಪಂಚದ ಜ್ಞಾನ ತಿಳಿಯಲು ಸಹಾಯವಾಯಿತು. ಹೊಸದೃಷ್ಟಿ, ಹೊಸ ಆಲೋಚನೆ, ಹೊಸ ವಿಷಯಗಳ ಕಲಿಕೆ, ಐತಿಹಾಸಿಕ ಪ್ರಜ್ಞೆ ವಿಮರ್ಶಾ ದೃಷ್ಟಿ ಬೆಳೆಯಲು ಅನುವಾಯಿತು. ಇಂಗ್ಲೀಷ್ ಆಡಳಿತಗಾರರಿಂದ, ಇಂಗ್ಲೀಷ್ ಬೋಧನೆಯಿಂದ ನಮ್ಮವರು ಸಹಜವಾಗಿಯೇ ಪ್ರಭಾವಿತರಾದರು. ಅಭ್ಯಾಸ, ಬೋಧನೆ ಬರವಣಿಗೆಗಳಲ್ಲಿ ಹೊಸ ಮಾದರಿಗಳು ಸೃಷ್ಟಿಯಾದವು. ಹಿಂದಿನಿಂದ ಇದ್ದ ಸಾಹಿತ್ಯ ದೃಷ್ಟಿ ಬದಲಾಯಿತು. ಕೆಲವರ ಸ್ವತ್ತಾಗಿದ್ದ ಶಿಕ್ಷಣ ಎಲ್ಲರ ಸ್ವತ್ತಾಯಿತು.

ಶಿಕ್ಷಣ ಸಾರ್ವತ್ರಿಕವಾದುದರಿಂದ ಅದಕ್ಕೆ ಬೇಕಾದ ಸಾಮಗ್ರಿಯ ಸಿದ್ಧತೆಯೂ ಅಧಿಕ ಪ್ರಮಾಣದಲ್ಲಿ ನಡೆಯಬೇಕಾಯಿತು. ಇದಕ್ಕಾಗಿ ಕ್ರೈಸ್ತ ಮಿಶನರಿಗಳು ಮುದ್ರಣ ಮತ್ತು ಗ್ರಂಥೋದ್ಯಮಕ್ಕೆ ಹೆಚ್ಚು ಗಮನ ಕೊಟ್ಟರು. ಪಠ್ಯಪುಸ್ತಕಗಳ ಸಿದ್ಧತೆ, ಮುದ್ರಣಗಳಿಂದ ಶಿಕ್ಷಣಕ್ಕೆ ಬಹಳ ಉಪಯೋಗವಾಯಿತು. ಆ ವರೆಗೆ ಕನ್ನಡ ಸಾಹಿತ್ಯ ಓಲೆಗರಿಗಳಲ್ಲಿ, ಶಿಲಾಶಾಸನಗಳಲ್ಲಿ ಅಡಕವಾಗಿತ್ತು. ಆ ಸಾಹಿತ್ಯ ಮುದ್ರಣದಿಂದ ಕಾಗದಕ್ಕಿಳಿಯಲು ಪ್ರಾರಂಭವಾಯಿತು. ಮೊದಲು ಕರ್ನಾಟಕದ ಹೊರಗೆ ಕನ್ನಡ ಪುಸ್ತಕಗಳು ಮುದ್ರಣವಾದುವು. ಕ್ರಮೇಣ ಕ್ರೈಸ್ತರಿಂದ ರಾಜ್ಯದ ಹಲವು ಕಡೆಗಳಲ್ಲಿ ಮುದ್ರಣ ಕಾರ್ಯ ನಡೆಯಿತು. ಮುದ್ರಣ ಸೌಲಭ್ಯಕ್ಕಾಗಿ ಕನ್ನಡ ಲಿಪಿ ಸುಧಾರಣೆಯೂ ಆಯಿತು. ಮುದ್ರಣ ಮತ್ತು ಗ್ರಂಥೋದ್ಯಮದಿಂದ ಕನ್ನಡ ಸಾಹಿತ್ಯ ಹೆಚ್ಚಾಗಿ ಪ್ರಕಟವಾಯಿತು.

ಕಾವ್ಯ ಪ್ರಬಂಧಗಳ ರೂಪದಲ್ಲಿದ್ದ ಕನ್ನಡ ಸಾಹಿತ್ಯಕ್ಕೆ ಹಲವು ಹೊಸ ಸಾಹಿತ್ಯ ಪ್ರಕಾರಗಳು ಕೂಡಿಕೊಳ್ಳಲು ಕ್ರೈಸ್ತರು ಕಾರಣರಾಗಿದ್ದಾರೆ. ಕ್ರೈಸ್ತಧರ್ಮದ ಪ್ರಚಾರ, ಮತಾಂತರ ಇವು ಕ್ರೈಸ್ತರ ಮುಖ್ಯ ಉದ್ದೇಶವಾಗಿದ್ದರಿಂದ ಅದಕ್ಕೆ ಸಂಬಂಧಿಸಿದ ಸಾಹಿತ್ಯ ಕನ್ನಡಕ್ಕೆ ಅನುವಾದವಾಯಿತು. ಧರ್ಮಪ್ರಧಾನ ಸಾಹಿತ್ಯ ಅನುಕರಣ ಅಥವಾ ಅನುವಾದದ ರೂಪದಲ್ಲಿ ಪ್ರಕಟವಾಯಿತು. ಕ್ರೈಸ್ತ ಧರ್ಮವನ್ನು ಕನ್ನಡಿಗರಿಗೆ ಕನ್ನಡದಿಂದಲೇ ಪರಿಚಯಿಸುವುದರಿಂದ ಹೆಚ್ಚು ಲಾಭವಿದೆಯೆಂದು ಕ್ರೈಸ್ತರು ಮನಗಂಡಿದ್ದರು. ಕ್ರೈಸ್ತರು ತಮ್ಮ ಪ್ರಭಾವ ಬೀರಲು ಕನ್ನಡದಲ್ಲಿ ವ್ಯಾಕರಣ ಶಾಸ್ತ್ರ ಶಬ್ದಕೋಶ ಮೊದಲಾದ ಗ್ರಂಥಗಳನ್ನು ಬರೆದು ಮುದ್ರಿಸಿದರು. ಜ್ಞಾನ ಪ್ರಸಾರಕ್ಕಾಗಿ ಕನ್ನಡ ಪತ್ರಿಕೆಗಳನ್ನು ಹುಟ್ಟು ಹಾಕಿದರು. ಸುಮಾರು ೧೨೦ ಜನ ಕ್ರೈಸ್ತ ಮಿಶನರಿಗಳು, ಕೆಲವು ಬ್ರಿಟಿಷ್ ಆಡಳಿತಗಾರರು ಬಹಳವಾಗಿ ದುಡಿದರು. ೧೯ನೆಯ

ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ ಕ್ರೈಸ್ತರಿಗೆ ಬಹುತೇಕ ಮೀಸಲಾಗಿದೆ.

ಲಿಯೋನಾರ್ಡೋ ಸಿನ್ನಾಮಿ, ಚಾರ್ಬೊನಾ, ಹ್ಯಾಂಡ್ಸ್, ವಿಲಿಯಂ ರೀವ್, ವಿಲಿಯಂ ಕ್ಯಾರಿ, ಬಿಯ್ನನ್, ಕ್ಯಾಂಬೆಲ್, ರೀಡ್, ಬಿ. ಎಚ್. ರೈಸ್, ಜಾನ್ ಗ್ಯಾರೆಟ್, ಡ್ಯಾನಿಯಲ್ ಸ್ಯಾಂಡರ್ಸನ್, ಜೆ. ಸ್ಟೀವೆನ್ಸನ್, ಹೆನ್ರಿಹೇಗ್, ಜೆ. ಎಫ್. ವೈಗಲ್, ಡಬ್ಲ್ಯೂ ಬಿ. ವರ್ತ್, ಎಫ್. ತ್ರಿಗ್ಲರ್, ಹರ್ಮನ್ ಮೋಗ್ಲಿಂಗ್, ಫರ್ಡಿನಂಡ್ ಕಿಟೆಲ್ ಮೊದಲಾದ ಕ್ರೈಸ್ತ ಮಿಶನರಿಗಳು ಕನ್ನಡ ಸಾಹಿತ್ಯಕ್ಕೆ ಚಿರಸ್ಮರಣೀಯವಾದ ಸೇವೆ ಸಲ್ಲಿಸಿದ್ದಾರೆ.

ಸುಸಂಸ್ಕೃತನೂ ಪ್ರತಿಭಾಶಾಲಿಯೂ ಆದ ಬೆಂಜಮಿನ್ ಹರ್ಮನ್ ರೈಸ್ ಅಧ್ಯಾಪಕನಾಗಿದ್ದುದಲ್ಲದೆ ಅರುಣೋದಯ ಎಂಬ ಆಂಗ್ಲ-ಕನ್ನಡ ಪತ್ರಿಕೆಯನ್ನು ಪ್ರಾರಂಭಿಸಿ ನಡೆಸಿದ. ಜಾನ್ ಗ್ಯಾರೆಟ್ ಎಂಬವನು ಪಠ್ಯಪುಸ್ತಕ ರಚನೆ, ಪ್ರಾಚೀನ ಕೃತಿ ಸಂಪಾದನೆ ಇವುಗಳ ಜೊತೆಗೆ ಕನ್ನಡ - ಇಂಗ್ಲೀಷ್ ಕೋಶವನ್ನು ಪ್ರಕಟಿಸಿದ.

ಕನ್ನಡ ಸಾಹಿತ್ಯಕ್ಕೆ ಬಾಸೆಲ್ ಮಿಶನ್ ಕ್ರೈಸ್ತರ ಕಾಣಿಕೆ ಗಮನಾರ್ಹವಾದುದು. ಹರ್ಮನ್ ಮೋಗ್ಲಿಂಗ್ ಆ ಸಂಸ್ಥೆಯವನು. ಮೋಗ್ಲಿಂಗ್ ಕನ್ನಡ ಭಾಷೆಯಲ್ಲಿ ಪರಿಣತನಾಗಿದ್ದ. ಕೊಡಗು ಜನಜೀವನವನ್ನು ಚೆನ್ನಾಗಿ ಅಭ್ಯಸಿಸಿದ್ದ. ಕನ್ನಡಿಗರಿಂದ ನೇರವಾಗಿ ಕನ್ನಡ ಗಾದೆಗಳನ್ನು ಸಂಗ್ರಹಿಸಿ ಪ್ರಕಟಿಸಿದವರಲ್ಲಿ ಇವನೂ ಒಬ್ಬ. ಕನ್ನಡ ಪಂಚಾಂಗವನ್ನು ಮೊದಲು ತಯಾರಿಸಿದವನು ಇವನೇ. ಮಂಗಳೂರು ಸಮಾಚಾರ, ಕನ್ನಡ ಸಮಾಚಾರ, ಕರ್ನಾಟಕ ವಾಗ್ವಿದಾಯಿನಿ, ಸಭಾಪತ್ರ ಪತ್ರಿಕೆಗಳನ್ನು ನಡೆಸಿದ. ಪುರಂದರದಾಸ, ಕನಕದಾಸರ ಪದಗಳನ್ನು ಜರ್ಮನ್ ಭಾಷೆಗೆ ಅನುವಾದಿಸಿದ್ದಲ್ಲದೆ ಕನ್ನಡ ಸಾಹಿತ್ಯ ವಿದೇಶೀಯರಿಗೆ ತಿಳಿಯುವಂತೆ ಮಾಡಿದ. ತಾಳೆಗರಿಯಲ್ಲಿದ್ದ ಜೈಮಿನಿ ಭಾರತ, ತೊರವೆ ರಾಮಾಯಣ, ಹರಿಭಕ್ತಿಸಾರ ಮೊದಲಾದ ಗ್ರಂಥಗಳನ್ನು ಪ್ರಕಟಿಸಿದ. ಇತರ ಮಿಶನರಿಗಳಂತೆ ಕನ್ನಡದಲ್ಲಿ ಕ್ರೈಸ್ತಮತ ಪ್ರಚಾರದ ಗ್ರಂಥಗಳನ್ನೂ ಬರೆದಿದ್ದಾನೆ. ತುಳು ಪಾಡ್ದನಗಳನ್ನು ಸಂಗ್ರಹಿಸಿ ಜರ್ಮನ್ ಭಾಷೆಗೆ ಅನುವಾದಿಸಿದ್ದಲ್ಲದೆ ಕೋಟಿ ಚೆನ್ನಯ ಕತೆಯನ್ನು ಮೊದಲು ಸಂಗ್ರಹಿಸಿ ಪ್ರಕಟಿಸಿದ ಕೀರ್ತಿ ಇವನಿಗೆ ಸಲ್ಲಬೇಕು. ದಕ್ಷಿಣ ಮಹಾರಾಷ್ಟ್ರವೆಲ್ಲ ಕನ್ನಡ ನಾಡು ಎಂದು ಮಿಶನ್ ವರದಿ ತಯಾರಿಸಿದ ಇವನ ಕನ್ನಡ ಪ್ರೇಮ, ಇತಿಹಾಸ ಪ್ರಜ್ಞೆ ಮೆಚ್ಚುವಂಥಾದ್ದು. ಇವನು ಬರೆದ ದೇವ ವಿಚಾರಣೆ, ಜಾತಿ ವಿಚಾರಣೆ, ವಿಗ್ರಹಾರಾಧನೆ ಗ್ರಂಥಗಳಲ್ಲಿ ಹಿಂದೂ ಧರ್ಮದ ದೋಷಗಳ ಪ್ರಸ್ತಾಪವಿದ್ದರೂ ಮನನೀಯ ವಿಚಾರಗಳಿವೆ.

ಕ್ರೈಸ್ತ ಸಾಹಿತಿಗಳಲ್ಲಿ ಫರ್ಡಿನಾಂಡ್ ಕಿಟೆಲ್ ಮತ್ತೊಂದು ದೊಡ್ಡ ಹೆಸರು. ಇವನ ಮೇರು ಕೃತಿ "ಕನ್ನಡ-ಇಂಗ್ಲೀಷ್ ನಿಘಂಟು" ಇದು ಕನ್ನಡ ಭಾಷಾಭ್ಯಾಸಿಗಳಿಗೆ ಪ್ರಮುಖ ಆಕರ ಗ್ರಂಥ. ಕನ್ನಡ ಭಾಷೆಯಲ್ಲಿ ದೀರ್ಘಕಾಲ ನಿಲ್ಲುವ ಕೃತಿ ಇದು. ಎರಡನೆಯ ನಾಗವರ್ಮನಂತೆ ಎಫ್. ಕಿಟೆಲ್ ಕನ್ನಡಕ್ಕೆ ದುಡಿದ. ಕನ್ನಡದ ಕೆಲಸಕ್ಕೆ ಡಾಕ್ಟರೇಟ್ ಪದವಿ ಗಳಿಸಿದವರಲ್ಲಿ ಕಿಟೆಲ್ ಮೊದಲಿಗ. ಶಬ್ದಮಣಿದರ್ಪಣ, ನಾಗವರ್ಮನ ಛಂದೋಂಬುಧಿ ಮೊದಲಾದ ಹಳಗನ್ನಡದ ಅಪರೂಪ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದ. ಸಣ್ಣ ಕರ್ನಾಟಕ ಕಾವ್ಯ ಮಾಲೆ, ಹಳಗನ್ನಡ ಸಂಕ್ಷೇಪ ವ್ಯಾಕರಣ ಸೂತ್ರಗಳು, ಕಾವ್ಯಮಂಜರಿ (ಮಕ್ಕಳಿಗಾಗಿ), ಕ್ರೈಸ್ತ-ಹಿಂದೂ ಧರ್ಮದ ತೌಲನಿಕ ಅಭ್ಯಾಸ, ಪರಮಾತ್ಮಜ್ಞಾನ, ಮೈನರ್ ಪೊಯಿಟಿಕಲ್ ಆಂಥಾಲಜಿ, ಸ್ವಂತ ಕವನ ಸಂಗ್ರಹ, ಕ್ರೈಸ್ತ ಸಭಾಚರಿತೆ, ಯಜ್ಞಸುಧಾನಿಧಿ, ಸಹಸ್ರ ಗಾಥಾಮೃತ ಕಲಶ (೨೦೦೦ ಕನ್ನಡ ಗಾದೆಗಳ ಸಂಗ್ರಹ) ಮೊದಲಾದ ಗ್ರಂಥಗಳನ್ನು ಬರೆದು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ. ಕ್ರೈಸ್ತಮತ ಪ್ರಸಾರ ಮಾಡುವ ಮಿಶನರಿಗಳು ಕಡ್ಡಾಯವಾಗಿ ಕನ್ನಡ ಕಾವ್ಯಗಳನ್ನು ಅಭ್ಯಾಸ ಮಾಡಬೇಕು. ಕನ್ನಡ ಕಲಿಕೆ ಕಡ್ಡಾಯವಾಗಿರಬೇಕು ಎಂದು ದೃಢವಾಗಿ ಹೇಳಿದ. ಕನ್ನಡ ಸಾಹಿತ್ಯಾಭ್ಯಾಸಿಗಳು ಕಿಟೆಲ್‌ನನ್ನು ಎಂದಿಗೂ ಮರೆಯುವಂತಿಲ್ಲ.

ಡಬ್ಲ್ಯೂ ಬಿ. ವರ್ತ್ ಎಂಬಾತ ಬಸವಪುರಾಣ, ಚೆನ್ನಬಸವ ಪುರಾಣಗಳ ಕಥಾಸಾರವನ್ನು ಇಂಗ್ಲೀಷ್ ಭಾಷೆಗೆ ಅನುವಾದಿಸಿದ. ಫೆಡ್ರಿಕ್ ಝೀಗ್ಲರ್ ಎಂಬುವನು ಕನ್ನಡ-ಸಂಸ್ಕೃತ-ಇಂಗ್ಲೀಷ್ ಕೋಶ, ಕನ್ನಡ ಬಾಲ ವ್ಯಾಕರಣ, ಕನ್ನಡ ಶಾಲಾ ವ್ಯಾಕರಣ ಮೊದಲಾದ ಗ್ರಂಥಗಳನ್ನು ಬರೆದನು. ಕನ್ನಡ ಕಲಿಯುವವರಿಗೆ ಅನುಕೂಲವಾಗಲು, ಎ ಪ್ರಾಕ್ಟಿಕಲ್ ಕೀ ಟು ಕಾನ್ಯರೀಸ್ ಗ್ರಾಮರ್, ಎ ಪ್ರಾಕ್ಟಿಕಲ್ ಕೀ ಟು ಕಾನ್ಯರೀಸ್ ಲ್ಯಾಂಗ್ವೇಜ್, ಕನ್ನಡ ವ್ಯಾಕರಣ ಬೋಧಿನಿ, ಹಿಮ್ ಬುಕ್ ಇನ್ ಕ್ಯಾನರೀಸ್ ಮುಂತಾದ ಗ್ರಂಥಗಳ ಮೂಲಕ ಕನ್ನಡ ಭಾಷೆಯನ್ನು ಕುರಿತು ಇಂಗ್ಲೀಷ್‌ನಲ್ಲಿ ಬರೆದಿದ್ದಾನೆ. ಇವನು ಕನ್ನಡದಲ್ಲಿ ಕ್ರೈಸ್ತಧರ್ಮದ ಗ್ರಂಥವನ್ನೂ ರಚಿಸಿದ್ದಾನೆ. ರೀವ್ ಎಂಬಾತ ಕನ್ನಡ-ಇಂಗ್ಲೀಷ್ ಕೋಶ ಸಿದ್ಧಪಡಿಸಿದ. ಈತ ಹೊಸಗನ್ನಡದ ಮೊದಲ ಕೋಶಕಾರ. ಗ್ಯಾರೆಟ್ ಇನ್ನೊಬ್ಬ ಕೋಶಕಾರ. ಡ್ಯಾನಿಯಲ್ ಸ್ಯಾಂಡರ್ಸನ್ ಕೂಡ ಇಂಗ್ಲೀಷ್-ಕನ್ನಡ ಕೋಶವನ್ನು ಬರೆದಿದ್ದಾನೆ. ರೀವ್ ಮತ್ತು ಗ್ಯಾರೆಟ್ ಕೋಶ, ಕನ್ನಡ-ಲ್ಯಾಟಿನ್ ಕೋಶ ತಯಾರಾಗಿದೆ. ಇಂಗ್ಲೀಷ್-ಕನ್ನಡ ಕೋಶ, ಗಣಿತನ್ಯಾಯ, ಎ ಪ್ರಾಕ್ಟಿಕಲ್ ಕೀ ಟು ಕನ್ನಡ ಲಾಂಗ್ವೇಜ್ ಮೊದಲಾದ ಗ್ರಂಥಗಳನ್ನು ಬರೆದ ಎಫ್. ತ್ರಿಗ್ಲರ್ ಹೆಸರಿಸಬೇಕಾದ ಮತ್ತೊಬ್ಬ ಜರ್ಮನ್ ಮಿಶನರಿಯಾಗಿದ್ದಾನೆ.

ಜರ್ಮನ್ ಮಿಶನರಿಗಳಂತೆ ಬ್ರಿಟಿಷ್ ಆಡಳಿತಗಾರರ ಕನ್ನಡ ಸಾಹಿತ್ಯ ಸೇವೆಯೂ ಉಲ್ಲೇಖಾರ್ಹವಾಗಿದೆ. ಕನ್ನಡಕ್ಕಾಗಿ ಕನ್ನಡ ಕಲಿತ ಇವರಿಂದ ಕನ್ನಡಿಗರಲ್ಲಿ ಇತಿಹಾಸ ಪ್ರಜ್ಞೆ ಬೆಳೆಯಲು ಸಹಾಯವಾಗಿದೆ. ಕಾರ್ಲ್ ಮೆಕೆಂಝಿ ಬುಕನ್, ವಾಲ್ಟರ್ ಎಲಿಯಟ್, ಬಿ. ಲೂಯಿ ರೈಸ್, ಜೆ. ಎಫ್ ಫ್ಲೀಟ್ ಮುಂತಾದವರು ಕನ್ನಡ ಸಂಶೋಧನಾ ಕ್ಷೇತ್ರಕ್ಕೆ ಆಕರ ಸಾಮಗ್ರಿ ಸಂಗ್ರಹಿಸುವುದರ ಮೂಲಕ ಅಮೂಲ್ಯವಾದ ಸೇವೆ ಸಲ್ಲಿಸಿದ್ದಾರೆ. ಕನ್ನಡ ಶಾಸನ, ಹಸ್ತಪ್ರತಿ, ಪುರಾತನ ವಸ್ತು, ಐತಿಹ್ಯ, ಸ್ಥಳ ಪುರಾಣ, ಶಿಲಾಲೇಖ, ನಾಣ್ಯಶಾಸ್ತ್ರ, ಜನಪದ ಸಾಹಿತ್ಯ ಸಂಗ್ರಹ ಮೊದಲಾದ ವಿಷಯಗಳ ಸಂಗ್ರಹಕ್ಕೆ ಇವರು ಶ್ರಮಿಸಿದ್ದಾರೆ.

ಕರ್ನಾಟಕದ ಅಪರೂಪ ಶಾಸನಗಳನ್ನು ಬೆಳಕಿಸಿದ ಬಿ. ಲೂಯಿ ರೈಸ್ ಕರ್ನಾಟಕ ಶಾಸನ ಪಿತಾಮಹನೆಂದು ಹೆಸರಾಗಿದ್ದಾನೆ. ಎಡ್ವರ್ಡ್ ಪಿ. ರೈಸ್ ಕನ್ನಡ ಸಾಹಿತ್ಯವನ್ನು ಕುರಿತು ಇಂಗ್ಲೀಷ್‌ನಲ್ಲಿ ಬರೆದ ಮೊದಲ ಸಾಹಿತ್ಯಚರಿತ್ರಕಾರ. ಕಾಲಿನ್ ಮೆಕೆಂಝಿ ದೇವಚಂದ್ರ ಕವಿಯ ರಾಜಾವಳೀ ಕಥೆ ರಚನೆಗೆ ಸ್ಫೂರ್ತಿ ನೀಡಿದ್ದಾನೆ. ವಿಲ್ಕ್ಸ್ ಎಂಬಾತ ಮೈಸೂರು ಚರಿತ್ರೆ ಬರೆದಿದ್ದಾನೆ; ಎಲಿಯಟ್ ಎಂಬಾತ ಕನ್ನಡ ಶಾಲೆ ಸ್ಥಾಪಿಸಿದ ಮೊದಲಿಗನಾಗಿದ್ದಾನೆ. ಎಫ್. ಡಬ್ಲ್ಯೂ. ಎಲಿಸ್ ಕನ್ನಡ ಭಾಷಾಭ್ಯಾಸ, ಮಕ್ಕರೆಲ್ ಕನ್ನಡ ವ್ಯಾಕರಣ ಗ್ರಂಥಗಳನ್ನು ಬರೆದಿದ್ದಾರೆ. ಚಾರ್ಲ್ಸ್ ಗೋವರ್ 'ಫೋಕ್

ಸಾಂಗ್ಸ್ ಆಫ್ ಸದರ್ನ್ ಇಂಡಿಯ' ಎಂಬ ವಿಶಿಷ್ಟವಾದ ಜನಪದ ಹಾಡುಗಳ ಸಂಗ್ರಹವನ್ನು ಪ್ರಕಟಿಸಿದ್ದಾನೆ. ಬುಕನ್ ಸಂಗ್ರಹಿಸಿದ ಚಾರಿತ್ರಿಕ ದಾಖಲೆಗಳಿಂದ ಸಂಶೋಧಕರಿಗೆ ಅಪೂರ್ವ ನಿಧಿ ಸಿಕ್ಕಿದಂತಾಗಿದೆ. ಜೆ. ಎಫ್. ಫ್ಲೀಟ್ ಶ್ರಮಪಟ್ಟು ಸಂಗ್ರಹಿಸಿದ ಮಾಹಿತಿಗಳಿಂದ, ಕನ್ನಡ ಇತಿಹಾಸ ಸಂಶೋಧನೆಯ ಸುಮಾರು ೨೦೦ ಬಿಡಿ ಲೇಖನಗಳನ್ನು ಬರೆದಿದ್ದಾನೆ. ಬಿಡುವಿನ ವೇಳೆಯಲ್ಲಿ, ರಾತ್ರಿಯ ಹೊತ್ತು ಹಳ್ಳಿಗರ ನಡುವೆ ಕಳೆತು, ಹಳ್ಳಿಗರಿಂದ ಜನಪದ ಹಾಡುಗಳನ್ನು ಹೇಳಿಸಿ, ಕೇಳಿ ಅಪರೂಪದ ಚಾರಿತ್ರಿಕ ಲಾವಣಿಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾನೆ. ಥಾಮಸ್ ಹಡ್ಸನ್ 'ಏನ್ ಎಲಿಮೆಂಟರಿ ಗ್ರಾಮರ್ ಆಫ್ ದಿ ಕನ್ನಡ' ಅಥವಾ ಕ್ಯಾನರೀಜ್ ಲ್ಯಾಂಗ್ವೇಜ್ ಎಂಬ ಗ್ರಂಥ ಬರೆದಿದ್ದಾನೆ. ಜಾರ್ಜ್‌ವರ್ತ್ ಎಂಬಾತ ಪ್ರಾಕ್ಕಾವ್ಯಮಾಲೆ ಎಂಬ ಕಾವ್ಯ ಸಂಕಲನ ಪ್ರಕಟಿಸಿದ್ದಾನೆ. ಜೆ. ಮ್ಯಾಕ್ 'ವಿಚಿತ್ರ ವರ್ತಮಾನ ಸಂಗ್ರಹ' ಎಂಬ ಪತ್ರಿಕೆ ನಡೆಸಿದ್ದಾನೆ; ಕಾವ್ಯ ಪುಂಜ ಎಂಬ ಕವನ ಸಂಕಲನ ಸಿದ್ಧಪಡಿಸಿದ್ದಾನೆ. ಹರ್ಮನ್ ರೀಫ್ ಯೇಸು ಕ್ರಿಸ್ತನ ಮೂಲಕ ಸ್ಥಾಪಿತವಾದ ಹೊಸ ಒಡಂಬಡಿಕೆ ಗ್ರಂಥವನ್ನೂ, ರೆವರೆಂಡ್ ಕೀಜ್ ಕನ್ನಡ ಬಾಲವ್ಯಾಕರಣ, ಭೂಗೋಳ ಶಾಸ್ತ್ರಸಾರ ಗ್ರಂಥಗಳನ್ನೂ ಬರೆದಿದ್ದಾರೆ.

ಬೇರೆ ಬೇರೆ ದೃಷ್ಟಿಗಳಿಂದ ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿರುವ ಈ ಮುಂದಿನ ಕ್ರೈಸ್ತರನ್ನೂ ಹೆಸರಿಸಬಹುದು. ಜಾನ ರೀಡ್, ಕೊನೇಲಿ, ಬ್ಯೂಹಾರ್, ರಾಬರ್ಟ್ ಸಿವೆಲ್, ಹಲ್, ಮೇಲ್ ಕಾಸ್ಟಾಂಜಾ, ಚೌಟ್ಲೊ, ಮೈಗಲ್, ಗ್ರೇಟರ್ ಹೆನ್ರಿ ಹೈಗ ಮೊದಲಾದವರು. ಗ್ರೀಯರ್‌ಸನ್, ಮೊಹೋನಿ, ಸ್ಟೋಟ್ಸ್, ಫೋರ್ಟ್ಸ್, ಬ್ರೌನ್, ಬೆಸ್ಟ್, ಕಾಲ್ಡವೆಲ್, ಸ್ಟೀವನ್‌ಸನ್, ಗೋವರ್, ಬರ್ನೆಲ್, ಬರ್ಜೆಸ್, ಬುಚಾರ್, ಹ್ಯೂಮ್ ಮೊದಲಾದವರು ಕರ್ನಾಟಕ ಗಡಿ ಪ್ರದೇಶ ನಿಷ್ಕರ್ಷೆ, ಕನ್ನಡ ಭಾಷಾ ಲಕ್ಷಣ, ಇತಿಹಾಸ, ಸಂಶೋಧನೆ ಮುಂತಾದ ಹಲವು ಹತ್ತು ವಿಷಯಗಳಿಗೆ ಸಂಬಂಧಿಸಿದಂತೆ ಕೆಲಸ ಮಾಡಿದ್ದಾರೆ.

ಕೆಲವು ಕ್ರೈಸ್ತ ಸಾಹಿತಿಗಳು ಕನ್ನಡವನ್ನು ಕಲಿತು ಕನ್ನಡ ಭಾಷೆಯ ವಿಷಯಗಳನ್ನು ಕನ್ನಡದಲ್ಲಿ ಬರೆದರು. ಇನ್ನು ಕೆಲವರು ಕನ್ನಡ ಭಾಷೆಯ ವಿಷಯಗಳನ್ನು ಇಂಗ್ಲೀಷ್ ಜರ್ಮನ್ ಭಾಷೆಗಳಲ್ಲಿ ಬರೆದರು. ಕೆಲವರು ಕನ್ನಡವನ್ನು ಕುರಿತು ಕನ್ನಡ ಇಂಗ್ಲೀಷ್ ಎರಡೂ ಭಾಷೆಗಳಲ್ಲಿ ಬರೆದರು. ಇವರಿಂದ ಕನ್ನಡ ಭಾಷೆ ಬೆಳೆಯಲು, ರಾಜ್ಯದ ಒಳಗೆ ಹೊರಗೆ ಕನ್ನಡ ಪ್ರಸಾರವಾಗಲು, ಕನ್ನಡಿಗರಿಗೆ ಮತ್ತು ಕನ್ನಡೇತರರಿಗೆ ಕನ್ನಡ ಭಾಷಾ ಸಂಪತ್ತು ತಿಳಿಯಲು, ಕನ್ನಡದಲ್ಲಿ ಆಗಿರುವ, ಆಗಬೇಕಾದ ಕೆಲಸದ ಬಗೆಗೆ ವಿದ್ವಾಂಸರಿಗೆ ಮನದಟ್ಟಾಗಲು ಸಹಾಯವಾಗಿದೆ.

೧೯ನೆಯ ಶತಮಾನದಲ್ಲಿ ಕನ್ನಡಕ್ಕೆ ದುಡಿದ ಕ್ರೈಸ್ತರು ಹುಟ್ಟು ಕನ್ನಡಿಗರಲ್ಲ. ಆದರೂ ಇವರು ಕನ್ನಡಿಗರಂತೆ ದುಡಿದರು. ಹೊಸದಾದ ಕನ್ನಡ ಭಾಷೆಯನ್ನು ಕಲಿತು ವ್ಯವಹರಿಸಿದರು. ಪಾಶ್ಚಾತ್ಯ ದೇಶಗಳಲ್ಲಿ ನಡೆಯುತ್ತಿದ್ದ ಸಂಶೋಧನೆ, ಸಾಹಿತ್ಯಕೃಷಿಯನ್ನು ಇಲ್ಲಿ ಮಾಡಿತೋರಿಸಿದರು. ಜೀವಂತವಾದ ಜನರಾಡುವ ಕನ್ನಡ ಭಾಷೆಯಲ್ಲಿ ಏನೇನು ಕೆಲಸ ಮಾಡಬಹುದು ಎಂಬ ಬಗ್ಗೆ ದಾರಿ ತೋರಿದರು. ಕನ್ನಡಿಗರಿಗಿಂತ ಹೆಚ್ಚಾಗಿ ಕರ್ನಾಟಕದಲ್ಲಿ ಸುತ್ತಾಡಿ, ಕನ್ನಡಿಗರೊಡನೆ ಬೆರೆತು, ಕನ್ನಡಿಗರ ಬದುಕನ್ನು ವೀಕ್ಷಿಸಿ ದಾಖಲು ಮಾಡಿದರು. ಕನ್ನಡಿಗರಲ್ಲಿ ಅಪಾರವಾಗಿ ಹುದುಗಿದ್ದ ಜನಪದ ಗಾದೆ ಹಾಡುಗಳ ಸಂಗ್ರಹದಲ್ಲಿ ಕ್ರೈಸ್ತರು ಮಾಡಿದ ಪ್ರಯತ್ನ ಮುಂದಿನ ವಿದ್ವಾಂಸರಿಗೆ ದಾರಿದೀಪವಾಯಿತು. ಇವರು ಸಂಗ್ರಹಿಸಿ ಕೊಟ್ಟ ಐತಿಹಾಸಿಕ ದಾಖಲೆಗಳು ಹಲವು ರೀತಿಯ ಸಂಶೋಧನೆಗೆ ಆಕರವಾದುವು; ದೇಶೀಯ ಸಂಶೋಧಕರು ಸೃಷ್ಟಿಯಾಗಲು ಸಹಾಯವಾದುವು. ಕರ್ನಾಟಕದಲ್ಲಿ ಕ್ರೈಸ್ತರು ಮಾಡಿದ ಮತ ಪ್ರಚಾರ ಸ್ವಕಾರ್ಯ, ಕನ್ನಡ ಸಾಹಿತ್ಯ ಸೇವೆ ಸ್ವಾಮಿ ಕಾರ್ಯ. ಒಂದರಿಂದ ಜನ ಜಾಗೃತಿ ಉಂಟಾಯಿತು; ಮತ್ತೊಂದರಿಂದ ಕನ್ನಡದಲ್ಲಿ ಕೆಲಸ ಮಾಡಲು ಹೊಸದಾರಿ ಕಂಡಿತು.

೧೯ನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದವರಲ್ಲಿ ಕ್ರೈಸ್ತರದೇ ಸಿಂಹಪಾಲು. ಇವರಿಂದ ಕ್ರೈಸ್ತ ಧರ್ಮಕ್ಕೆ ಸಂಬಂಧಿಸಿದ ಗ್ರಂಥಗಳೇ ಹೆಚ್ಚಾಗಿ ರಚನೆಯಾಗಿವೆ. ಕನ್ನಡದಲ್ಲಿ ಮೊದಲ ಬಾರಿಗೆ ಕ್ರೈಸ್ತ ಸಾಹಿತ್ಯ ಇವರಿಂದ ಲಭ್ಯವಾಗಿದೆ. ಸುಮಾರು ೨೦೦ ಧರ್ಮಗ್ರಂಥಗಳನ್ನು ಕ್ರೈಸ್ತರು ಕನ್ನಡದಲ್ಲಿ ರಚಿಸಿದ್ದಾರೆ. ಈ ಧರ್ಮಗ್ರಂಥಗಳಲ್ಲಿ ಪ್ರಧಾನವಾಗಿ ಎರಡು ಅಂಶಗಳಿವೆ: ಒಂದು–ಕ್ರೈಸ್ತ ಧರ್ಮದ ಹೊಗಳಿಕೆ. ಎರಡು–ಹಿಂದೂ ಧರ್ಮದ ಟೀಕೆ. ತಮ್ಮ ಧರ್ಮ ಪ್ರಚಾರದ ಹುರುಪಿನಲ್ಲಿ ಕ್ರೈಸ್ತರು ಹಿಂದೂ ಧರ್ಮವನ್ನು ಟೀಕಿಸಿದ್ದಾರೆ. ಈ ಪ್ರವೃತ್ತಿಯಿಂದ ಹಿಂದೂಗಳು ಎಚ್ಚೆತ್ತುಕೊಳ್ಳಲು, ತಮ್ಮ ಧರ್ಮ ಸಮರ್ಥನೆಗೆ ತೊಡಗಲು, ತಮ್ಮ ಲೋಪದೋಷಗಳನ್ನು ವಿಮರ್ಶಿಸಿಕೊಳ್ಳಲು, ಧರ್ಮದ ಬಗೆಗೆ ಮುಕ್ತವಾಗಿ ಚರ್ಚಿಸಲು ಅವಕಾಶವಾಗಿದೆ. ಕನ್ನಡ ಸಾಹಿತ್ಯದಲ್ಲಿ ವೈಚಾರಿಕತೆ ಮೂಡಲು ಕ್ರೈಸ್ತರ ಧರ್ಮಾಭಿಮಾನ ಸಾಹಿತ್ಯವೂ ಸಾಕಷ್ಟು ಕಾರಣವಾಗಿದೆ ಎನ್ನಬಹುದು. ಕ್ರೈಸ್ತರಿಂದ ಜರ್ಮನ್, ಇಂಗ್ಲೀಷ್ ಮೊದಲಾದ ಅನ್ಯಭಾಷೆಯ ಗ್ರಂಥಗಳು ಕನ್ನಡಕ್ಕೆ ಅನುವಾದವಾದುದರಿಂದ ಕನ್ನಡ ಸಾಹಿತ್ಯ ಪುಷ್ಟವಾಗಿದೆ. ಪ್ರಾಪಂಚಿಕ ವಿಷಯಗಳಿಗೆ ಸಂಬಂಧಿಸಿದ ಕವಿತೆ, ಕತೆ, ಕಾದಂಬರಿ, ನಿಘಂಟು, ಪ್ರಬಂಧ ಮೊದಲಾದ ಸಾಹಿತ್ಯ ಪ್ರಕಾರಗಳ ಪರಿಚಯ ಕನ್ನಡಕ್ಕಾಗಿದೆ. ಕನ್ನಡ ಪ್ರಾಚೀನ ಗ್ರಂಥ ಸಮೂಹ ಸಾಂಸ್ಕೃತಿಕ ಅಧ್ಯಯನದ ಮಾಹಿತಿ ಸಂಗ್ರಹಗಳ ಅಗತ್ಯ ತಿಳಿಯುವಂತಾಗಿದೆ. ಮಿಗಿಲಾಗಿ ಹೊಸಕನ್ನಡ ಸಾಹಿತ್ಯ ಸೃಷ್ಟಿಗೆ ಕ್ರೈಸ್ತರು ಸ್ಫೂರ್ತಿ ನೀಡಿದ್ದಾರೆ. ೧೯ನೆಯ ಶತಮಾನದಲ್ಲಿ ಕ್ರೈಸ್ತರಿಂದ ಧಾರ್ಮಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಸಾಕಷ್ಟು ನಷ್ಟವಾಗಿದ್ದರೂ ಸಾಹಿತ್ಯಕವಾಗಿ ಭಾಷಿಕವಾಗಿ ಕನ್ನಡಕ್ಕೆ ಲಾಭವಾಗಿದೆ.

ಪಾಶ್ಚಾತ್ಯ ಕ್ರೈಸ್ತರಿಂದ ಮತಾಂತರ ಹೊಂದಿದ ದೇಶೀಯ ಕ್ರೈಸ್ತರಲ್ಲಿ ಕೆಲವರು ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದ್ದಾರೆ. ಹರ್ಮನ್ ಮೋಗ್ಲಿಂಗ್‌ನಿಂದ ಮತಾಂತರ ಹೊಂದಿದ ಆನಂದರಾಯ ಕೌಂಡಿಣ್ಯ, ಭಗವಂತರಾವ್, ಮುಕುಂದರಾವ್, ಇಂಥವರಲ್ಲಿ ಕೆಲವರು. ಇವರು ಮತಾಂತರದ ಅನಂತರ ಹರ್ಮನ್ ಕಾಂಡಿಣ್ಯ, ಜೇಕಬ್‌ಪಾಲ್ ಕೌಶಿಕ್, ಎಂದು ನಾಮಕರಣಗೊಂಡರು. ರೆವರೆಂಡ್ ಹೆಸರು ಗಳಿಸಿದ ದೇಶೀಯರಲ್ಲಿ ಹರ್ಮನ್ ಕಾಂಡಿಣ್ಯ ಮೊದಲಿಗ. ಇವನು ಬಾರ್ಥ್ಸ್ ಎಂಬುವನ ಬೈಬಲ್ ವ್ಯಾಖ್ಯಾನ ಗ್ರಂಥವನ್ನು ಕನ್ನಡೀಕರಿಸಿದ್ದಾನೆ. ಕರ್ಯ್ ಎಂಬವನ ಜರ್ಮನ್ ಕೃತಿಗಳನ್ನು ಕ್ರೈಸ್ತ ಧರ್ಮಬೋಧನೆ, ಪರಿಶುದ್ಧ ಚರಿತ್ರೆ ಎಂಬ ಹೆಸರಿನಿಂದ ಅನುವಾದಿಸಿದ್ದಾನೆ. ಜೇಕಬ್ ಮತ್ತು ಪಾಲ್ ಕೌಂಡಿಣ್ಯರು ಮರಾಠಿಯ ಕೆಲವು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ವತ್ಸ ಸುವಾರ್ತಪ್ಪ ಎಂಬುವನು ಒಂದು ನೂರು ಸುಭಾಷಿತ ಪ್ರಸಂಗಗಳನ್ನು ಆಯ್ದು ಪ್ರಕಟಿಸಿದ್ದಲ್ಲದೆ ಚೆನ್ನಪ್ಪ ಲಿಂಗಾಯಿತ ಮತ ಕುರಿತು ಗ್ರಂಥ ಬರೆದಿದ್ದಾನೆ. ದೇವಧರ ಸೊಲಮೋ

ನಷ್ಟ ವೇದಾಂತ ವಾದ ನಿರ್ಣಯ, ಗಣೇಶಪಾಲ್ ಜಹಂಗೀರನ ಚರಿತ್ರೆ ಬರೆದಿದ್ದಾರೆ. ಕ್ರಿಸ್ತಾನುಜವತ್ಸ, ಯುವಗೋಪಾಲರತ್ನ, ಬೂಯ ಕಡೇ ದಿನಗಳು, ವೇದದಲ್ಲಿ ಏನಿದೆ?, ವಿಕ್ಟೋರಿಯಾ ರಾಣಿಯ ಚರಿತ್ರೆ ಮೊದಲಾದ ಗ್ರಂಥಗಳನ್ನು ಬರೆದಿರುವುದಲ್ಲದೆ ಮೊದಲಬಾರಿಗೆ ಕನ್ನಡದಲ್ಲಿ ಸಂಸ್ಕೃತ ವ್ಯಾಕರಣ ರಚಿಸಿದ್ದಾನೆ. ಹೀಗೆ ೧೯ನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯ ಸೇವೆ ಮಾಡಿದ ಪಾಶ್ಚಾತ್ಯ ಹಾಗೂ ದೇಶೀಯ ಕ್ರೈಸ್ತರ ದೊಡ್ಡಪಟ್ಟಿಯನ್ನೇ ಕಾಣಬಹುದು.

೨೦ನೆಯ ಶತಮಾನದಲ್ಲಿ ಹಲವು ದೇಶೀಯ ಕ್ರೈಸ್ತರು ಕನ್ನಡಕ್ಕೆ ದುಡಿದಿರುವುದು ಕಂಡುಬರುತ್ತದೆ. ಇವರಲ್ಲಿ ರೆವರೆಂಡ್ ಉತ್ತಂಗಿ ಚೆನ್ನಪ್ಪನವರು ಮುಖ್ಯರು. ಇವರು ಮತಾಂತರ ಹೊಂದಿದ ಕ್ರೈಸ್ತರಾದರೂ ಮತಾಂಧರಾಗದೆ ಸಮನ್ವಯ ದೃಷ್ಟಿಯಿಂದ ಧಾರ್ಮಿಕ ವ್ಯಕ್ತಿಯಾಗಿ ಮೆರೆದರು. ಇವರು ಸರ್ವಜ್ಞ ವಚನಗಳನ್ನು ಕಷ್ಟಪಟ್ಟು ಸಂಗ್ರಹಿಸಿ, ಪರಿಷ್ಕರಿಸಿ, ವರ್ಗೀಕರಿಸಿ ಪ್ರಕಟಿಸಿದ್ದಾರೆ. ಇವರು ಶ್ರಮ ಪಡದಿದ್ದರೆ ಅಮೂಲ್ಯವಾದ ಸರ್ವಜ್ಞ ವಚನಗಳು ಈಗಿನ ಪ್ರಮಾಣದಲ್ಲಿ ಕನ್ನಡಿಗರಿಗೆ ಸಿಗುತ್ತಿರಲಿಲ್ಲ. ಲಿಂಗಾಯಿತ ಧರ್ಮ ಮತ್ತು ಕ್ರೈಸ್ತ ಧರ್ಮವನ್ನು ಕುರಿತು ಇವರು ಬರೆದಿರುವ ಗ್ರಂಥಗಳು ವೈಚಾರಿಕವಾಗಿವೆ. ಈಚೆಗೆ ನಾ. ಡಿಸೋಜರು ಕಥಾ ಸಾಹಿತ್ಯ ಬರೆಯುತ್ತಿದ್ದಾರೆ. ಒಬ್ಬಿಬ್ಬರು ಧಾರ್ಮಿಕ ಗೀತೆಗಳನ್ನು ರಚಿಸಿ ಸ್ವರ ಪ್ರಸ್ತಾರ ಹಾಕುವುದರಲ್ಲಿ ಬೆಳಕಿಗೆ ಬರುತ್ತಿದ್ದಾರೆ. ಈ ಸಂಖ್ಯೆ ಏನೇನೂ ಸಾಲದು. ೨೦ನೆಯ ಶತಮಾನದಲ್ಲಿ ಕನ್ನಡ ಕ್ರೈಸ್ತರ ಸಾಹಿತ್ಯ ಸೇವೆ ಹೇಳಿಕೊಳ್ಳುವಂಥದಲ್ಲ. ಈ ಕೊರತೆಯನ್ನು ತುಂಬುವ ಕೆಲಸ ನಡೆಯಬೇಕಾಗಿದೆ; ಸಾಹಿತ್ಯ ಕೃಷಿ ಹುಲುಸಾಗಿ ಬೆಳೆಯಬೇಕಾಗಿದೆ.

೧೯ನೆಯ ಶತಮಾನದಲ್ಲೆ ಕರ್ನಾಟಕದಲ್ಲಿ ಪಾಶ್ಚಾತ್ಯ ಕ್ರೈಸ್ತರಿದ್ದರು. ಈಗ ದೇಶೀಯ ಕನ್ನಡ ಕ್ರೈಸ್ತರಿದ್ದಾರೆ. ಇವರೆಲ್ಲ ಮತಾಂತರ ಹೊಂದಿದವರು. ಇವರು ಧಾರ್ಮಿಕವಾಗಿ ಬೇರೆಯಾದರೂ ಕರ್ನಾಟಕದ ಇತರರಂತೆ ಇವರ ಭಾಷೆಯೂ ಕನ್ನಡವೇ ಆಗಿದೆ. ಕನ್ನಡ ಕ್ರೈಸ್ತರ ಇಹಪರ, ಲೌಕಿಕ ಕನ್ನಡಮಯವಾಗಿದೆ. ಕನ್ನಡ ಕ್ರೈಸ್ತರಿಗೆ ಕನ್ನಡದಿಂದಲೇ ಮುಕ್ತಿ. ಕನ್ನಡ ಕ್ರೈಸ್ತರ ಮನೆ ಮಠಗಳಲ್ಲಿ ಕನ್ನಡ ವಿಜೃಂಭಿಸಬೇಕು. ಈ ನಿತ್ಯಸತ್ಯ ಕರ್ನಾಟಕ ಕ್ರೈಸ್ತರ ಮಠಗಳ ಧರ್ಮಾಧಿಕಾರಿಗಳಿಗೂ ಅರಿವಾಗಬೇಕು. ಪ್ರಪಂಚದ ಇತರ ಭಾಷೆಗಳ ಕ್ರೈಸ್ತರೂ ಅವರವರ ಪ್ರಾದೇಶಿಕ ಭಾಷೆಗಳಲ್ಲಿ ಧಾರ್ಮಿಕ ವಿಧಿ ನಡೆಸುವಂತೆ ಕನ್ನಡ ಕ್ರೈಸ್ತರೂ ನಡೆಸಬೇಕು. ಕನ್ನಡ ಭಾಷೆ ಧಾರ್ಮಿಕವಾಗಿ, ಸಾಮಾಜಿಕವಾಗಿ ವ್ಯಾವಹಾರಿಕವಾಗಿ ಕನ್ನಡ ಕ್ರೈಸ್ತರ ಅಭಿವ್ಯಕ್ತಿ ಮಾಧ್ಯಮವಾದಾಗ ಇವರ ಸೃಜನಶಕ್ತಿ ಜಾಗೃತವಾಗುತ್ತದೆ. ೧೯ನೆಯ ಶತಮಾನದಲ್ಲಿ ಕನ್ನಡ ಸಾಹಿತ್ಯಕ್ಕೆ ಅನುಪಮವಾದ ಸೇವೆ ಸಲ್ಲಿಸಿದ ಪಾಶ್ಚಾತ್ಯ ಕ್ರೈಸ್ತರ ಪಾಂಡಿತ್ಯ ಪರಂಪರೆಯನ್ನು ಮುಂದುವರಿಸುವ ಹೊಣೆ ಕನ್ನಡ ಕ್ರೈಸ್ತರ ಮೇಲಿದೆ.

# ಇತರ ಸಾಹಿತ್ಯದ ಮೇಲೆ ಕನ್ನಡದ ಪ್ರಭಾವ

ವೆಂ. ಮು. ಜೋಶಿ

ಒಂದು ಭಾಷೆಯ ಸಾಹಿತ್ಯದ ಮೇಲೆ ಇನ್ನೊಂದು ಭಾಷಾ ಸಾಹಿತ್ಯದ ಪ್ರಭಾವ ಬೀಳಬೇಕಿದ್ದಲ್ಲಿ ಆ ಭಾಷೆಯ ಮೇಲೆ ಇನ್ನೊಂದು ಭಾಷೆಯ ಪ್ರಭಾವ ಇರಲೇ ಬೇಕಾದುದು ಅನಿವಾರ್ಯವೆನಿಸುತ್ತದೆ. ಆ ದೃಷ್ಟಿಯಿಂದ ಈ ವಿಷಯವನ್ನು ಪರಿಶೀಲಿಸುವಾಗ ಅಮೋಘವರ್ಷ – ನೃಪತುಂಗನ (ರಾಷ್ಟ್ರಕೂಟ ಅರಸು) ಕವಿರಾಜ ಮಾರ್ಗದಲ್ಲಿ ಕರ್ನಾಟಕದ ಸೀಮೆ ಗೋದಾವರಿಯ ವರೆಗೆ ಹಬ್ಬಿತ್ತು (ಕಾವೇರಿಯಿಂದಮಾ ಗೋದಾವರಿ ವರಂ ಇರ್ದ ನಾಡದಾ ಕನ್ನಡ) ಎಂಬ ಮಾತು ಸಾಕಷ್ಟು ಬೆಳಕನ್ನು ಬೀರುತ್ತದೆ. ಇಂದಿನ ಮಹಾರಾಷ್ಟ್ರದ ನಾಶಿಕ ಜಿಲ್ಲೆಯಲ್ಲಿ ಇಂದಿಗೂ ವಾಸ ಮಾಡುವ ಕಾನಡಾಗೌಳಿ ಮತ್ತು ವೀರಗಲ್ಲುಗಳು ಈ ಮಾತನ್ನು ದೃಢೀಕರಿಸುತ್ತವೆ. ನಮ್ಮ ಸಂಕಲ್ಪ ಮಂತ್ರಗಳ ಗೋದಾವರಿಯ ದಕ್ಷಿಣ ತೀರ ಎನ್ನುವ ಮಾತಿನತ್ತ ನಾವು ಗಮನ ಹರಿಸಬಹುದಾಗಿದೆ. ಮರಾಠೀ ಭಾಷೆ ರೂಪುಗೊಳ್ಳುವ ವರೆಗೆ, ಗೋದಾವರೀ ತೀರದವರೆಗೆ ಕನ್ನಡ ನಾಡಿನ ಸೀಮೆ ಪಸರಿಸಿದ್ದುದರಿಂದ ಆ ಭಾಷೆಯೇ ಅಲ್ಲಿ ಪ್ರಚಲಿತವಾಗಿರಬಹುದೆಂಬುದನ್ನು ತಳ್ಳಿ ಹಾಕುವಂತಿಲ್ಲ. ಆ ಕಾಲದಲ್ಲಿ 'ಮಹಾರಾಷ್ಟ್ರ' ಅಸ್ತಿತ್ವದಲ್ಲಿಯೇ ಇರಲಿಲ್ಲ. ಬೇರೆ ಕಡೆಯ ಹಳೆಯ ಐತಿಹಾಸಿಕ ದಾಖಲೆಗಳಲ್ಲಿ ಕಾಣಸಿಗುವ 'ಮಹಾರಾಷ್ಟ್ರ' ಎಂಬುದು 'ಕರ್ನಾಟಕ'ಕ್ಕೆ ಇರುವ ವಿಶೇಷಣವಾಗಿದೆ ಎಂಬುದರಲ್ಲಿ ಸಂದೇಹವೇ ಇಲ್ಲ. ಈ ಸಂದರ್ಭದಲ್ಲಿ ಕರ್ನಾಟಕದ ಸುಪ್ರಸಿದ್ಧ ಸಂಶೋಧಕರೂ ಕವಿಗಳೂ ಆದ ದಿವಂಗತ ಮಂಜೇಶ್ವರ ಗೋವಿಂದ ಪೈಗಳು 'ತಾರಾತಂತ್ರ' ಎಂಬ ಪ್ರಾಚೀನ ಗ್ರಂಥದಲ್ಲಿ ಕರ್ನಾಟಕಕ್ಕೇನೇ ಮಹಾರಾಷ್ಟ್ರ ಎಂದು ಕರೆಯಲಾಗಿದೆ ಎಂದು ಹೇಳಿದ್ದಾರೆ. ನಮ್ಮ ನಾಡಿನ ಇನ್ನೊಬ್ಬ ಸುಪ್ರಸಿದ್ಧ ಸಂಶೋಧಕರಾದ ಡಾ. ಶಂ. ಬಾ. ಜೋಶಿಯವರು ತಮ್ಮ "ಮರಾಟಿ ಸಂಸ್ಕೃತಿ ಕಾಹೀ ಸಮಸ್ಯಾ" ಎನ್ನುವ ಸಂಶೋಧನಾತ್ಮಕ ಗ್ರಂಥದಲ್ಲಿ, ಎ. ಮಾಸ್ಟರ್, ಅಯ್. ಸಿ. ಎಸ್. ಅವರು "ಇಂಡಿಯನ್ ಅಂಟಿಕ್ವೆರಿ" ಎನ್ನುವ ಗ್ರಂಥದಲ್ಲಿ ಈ ವಿವರಣೆಯನ್ನು ಪ್ರಸ್ತಾಪಿಸಿದ್ದಾರೆ.

"ಕರು ಮೀನ್ಸ್ ನೋಟ್ ಓನ್ಲಿ ಟಾಲ್ ಬಟ್ ಗ್ರೇಟ್ ಅಂಡ್ ಇಟ್ ಸೀಮ್ಸ್ ಹೈಲಿ ಪ್ರೊಬೇಬಲ್ ದೇಟ್ ದಿ ಪ್ರಾಕ್ರಿತ್ ಸ್ಪೀಕಿಂಗ್ ಇನ್‌ಹೇಬಿಟೆಂಟ್ಸ್ ಆಪ್ ದಿ ನೋರ್ತ ಡೆಕ್ಕನ್ ಹೈಲೇಂಡ್ಸ್ ಸಿಂಪ್ಲಿ ಟ್ರಾನ್ಸ್‌ಲೇಟೆಡ್ ದಿ ವರ್ಡ್ "ಕರುನಾಡು" ಇನ್‌ಟು 'ಮಹಾರಾಷ್ಟ್ರ' ಟು ಡೆಸಿಗ್ನೇಟ್ ದಿ ಎರಿಯಾ ಪ್ರಮ್ ವ್ಹಿಚ್ ದೇ ಕಮ್".

ಕರ್ನಾಟಕದ ಖ್ಯಾತಿ – ವ್ಯಾಪ್ತಿಗಳಿಂದಾಗಿ ಅದನ್ನೇ ಮಹಾರಾಷ್ಟ್ರವೆಂದು ಅಂದಿನ ಜನ ಪರಿಗಣಿಸಿದಲ್ಲಿ ಯಾರೂ ಅಚ್ಚರಿ ಪಡಬೇಕಾಗಿಲ್ಲ.

ಹೀಗಾಗಿ ಮರಾಠಿ ಭಾಷೆ ರೂಪುಗೊಳ್ಳುವಾಗ ಅದರಲ್ಲಿ ಸಾಕಷ್ಟು ಕನ್ನಡ ಶಬ್ದಗಳು ಉಳಿದುಕೊಂಡಿರುವುದು ಸಹಜವಾದ ಪ್ರಕ್ರಿಯೆ. ಮೂಲ ಕನ್ನಡ ಶಬ್ದಗಳು, ಪಡೆನುಡಿಗಳು, ನಾಣ್ಣುಡಿಗಳು, ಜೋಡುನುಡಿಗಳು, ಮರಾಠಿ ಭಾಷೆಯಲ್ಲಿ, ಏಕರೂಪತೆಯನ್ನು ಹೊಂದಿ ಅವು ಮರಾಠೀ ಶಬ್ದ ಕೋಶಗಳಲ್ಲಿಯೂ ಸ್ಥಾನಗಳಿಸಿಕೊಂಡಿರುವುದನ್ನು ಡಾ. ಶಂ. ಬಾ. ಜೋಶಿಯವರು ಮೇಲೆ ಉಲ್ಲೇಖಿಸಿದ ಪುಸ್ತಕದಲ್ಲಿ ಉದಾಹರಿಸಿದ್ದಾರೆ.

ತೋಟಿ–ಪಟ್ಟೆಯಂತಹ ಕನ್ನಡ ಜೋಡು ನುಡಿಗಳಂತೆ, ಮರಾಠಿಯಲ್ಲಿ "ಪೈಸಾ–ಅಡಕಾ" (ದುಡ್ಡು ದುಗ್ಗಾಣಿ) – ಅಡಕೆ ಒಂದು ಕಾಲಕ್ಕೆ ಕನಿಷ್ಠ ನಾಣ್ಯವಾಗಿ ಬಳಕೆಯಲ್ಲಿದ್ದಿತು ಎಂಬುದನ್ನು ಕನ್ನಡ ನಾಣ್ಣುಡಿ "ಅಡಕೆ ಕದ್ದ ಅಪಮಾನ ಆನೆ ಕೊಟ್ಟರೂ ಬಂದೀತೆ?" ಸಾಬೀತು ಪಡಿಸುತ್ತಿದೆ. ಈ 'ಅಡಕೆ' ಮರಾಠಿಯಲ್ಲಿ ಪೈಸಾ – ಅಡಕಾ ಜೋಡುನುಡಿಯಾಗಿ ಉಳಿದುಕೊಂಡಿತು, ಹಾಗೆಯೇ "ಶೇಲಾ" 'ವಲ್ಲಿ' ಧೋತರಕ್ಕೆ ಬಳಸುವ ಶುದ್ಧ ಕನ್ನಡ ಪದದಲ್ಲಿ ಮರಾಠಿಯಲ್ಲಿಯ ಶೇಲಾ ಗಂಡಸರು ಉಡುವ ಧೋತರ. ಅದರಂತೆ ಮರಾಠಿಯಲ್ಲಿ ಬಳಕೆಯಲ್ಲಿರುವ ಒಂದು ಪದ ಪ್ರಯೋಗ ನೋಡಿ "ಹೀ ಗೋಷ್ಠ ಮಲಾ ಫಾರ ನಡತೆ" (ಈ ಮಾತು ನನ್ನನ್ನು ತುಂಬಾ ಚುಚ್ಚುತ್ತದೆ). ಈ 'ನಡು' ಮೂಲಧಾತು (ಅರ್ಥ ಚುಚ್ಚು) ಕನ್ನಡದ್ದು. ಇಂತಹ ಹಲವು ಉದಾಹರಣೆಗಳು ಮರಾಠಿ ಭಾಷೆಯ ಮೇಲೆ ಕನ್ನಡದ ಪ್ರಭಾವವನ್ನು ಸ್ಪಷ್ಟೀಕರಿಸುತ್ತವೆ.

ಆರ್ಯರು ದಕ್ಷಿಣಾಪಥಕ್ಕೆ ಮುಂದುವರಿದಂತೆ ಒಂದು ರೀತಿಯಲ್ಲಿ ಆರ್ಯೀಕರಣ ನಡೆದಿದ್ದು, ಮರಾಠೀ ಭಾಷೆ ಆರ್ಯರ ಸಂಸ್ಕೃತ ಪ್ರಭಾವಕ್ಕೆ ಒಳಗಾಗಿ ದ್ರಾವಿಡ ಭಾಷೆಗಳಿಂದ ದೂರ ಸರಿಯತೊಡಗಿತು. ಹೀಗಾಗಿ ಮರಾಠೀ ಜನರನ್ನು ಕನ್ನಡ ಭಾಷಿಕರು "ಆರ್ಯರು" ಎಂದು ಕರೆದಿರಲೂ ಬಹುದು. ಇಂದಿಗೂ ಉತ್ತರ ಕರ್ನಾಟಕದಲ್ಲಿಯ ಹಳ್ಳಿಗಳಲ್ಲಿ ನೆಲೆಸಿರುವ ಮರಾಠಿ ಜನರನ್ನು ಅಲ್ಲಿಯ ಕನ್ನಡಿಗರು "ಅರೇರು" ಎಂದೇ ಗುರುತಿಸುತ್ತಾರೆ.

ಈ ಭಾಷಾ ಸಾಮಿಪ್ಯ – ಹಾಗೂ ಬಾಂಧವ್ಯದ ದೃಷ್ಟಿಯಿಂದ ಕನ್ನಡ ಸಾಹಿತ್ಯದ ಪ್ರಭಾವ ಮರಾಠೀ ಸಾಹಿತ್ಯದ

ಮೇಲೆ ಬಹಳಷ್ಟು ಬಿದ್ದಿದೆ. ಮರಾಠೀ ಭಾಷೆ ರೂಪುಗೊಳ್ಳುತ್ತಿರುವ ಕಾಲದಲ್ಲಿ ಕನ್ನಡ ಭಾಷೆ ಪ್ರಗಲ್ಭ ಅವಸ್ಥೆಯನ್ನು ಹೊಂದಿದ್ದು ದೊಡ್ಡ ದೊಡ್ಡ ಕವಿಗಳ ಕನ್ನಡ ಕಾವ್ಯಗಳು ಕನ್ನಡ ಸಾಹಿತ್ಯ ಪ್ರಪಂಚವನ್ನು ಸಮೃದ್ಧಗೊಳಿಸಿದ್ದವು.

ಮರಾಠೀ ಭಾಷೆಯಲ್ಲಿಯ ಮೊದಲನೆಯ ಪ್ರೌಢ ಕಾವ್ಯ ಗ್ರಂಥವೆಂದರೆ "ಜ್ಞಾನೇಶ್ವರಿ". ಈ ಗ್ರಂಥದಲ್ಲಿ ಬರುವ ಒಂದು ಪದ್ಯದ ಭಾಗ ಹೀಗಿದೆ:

"ಕಾಶಿಯೇ ಕನೋಜು ದ್ವಾರಕಾ ಗುಜರು
ಕಾನಡಾ ವಿಠಲ ಪಂಢರಿಯೇ ಕಾನಡಾ ಹೋ ವಿಠಲ
ಕರ್ನಾಟಕು ಯೋಣ್ಣೆ ಮಜ ಲಾವಿಸ ವೇಧು ವಿಠಲ ಕಾನಡಿ
ಬೋಲು ಜಾಣರ ತ್ಯಾಚಿ ಭಾಷಾ ಪುಂಡಲೀಕ ನೇಣಿ"

ಮೇಲಿನ ಅಭಂಗದಲ್ಲಿ ಜ್ಞಾನೇಶ್ವರರೇ "ಈ ವಿಠಲ ಕನ್ನಡದವನು. ಅವನ ಭಾಷೆ ಕನ್ನಡ" ಎಂದು ಸ್ಪಷ್ಟಗೊಳಿಸುತ್ತಾರೆ. ನಮ್ಮ "ದಾಸ ಸಂಪ್ರದಾಯ"ದಲ್ಲಿ ಕನ್ನಡದ ದಾಸರ ಪದಗಳಲ್ಲಿ "ಪುರಂದರ ವಿಠಲ" ಮುಂತಾದ ವಿಠಲ ಮುದ್ರಿಕೆಗಳ ಪ್ರಭಾವ ಮರಾಠೀ ಸಾಹಿತ್ಯದ ಮೇಲೂ ಬಿದ್ದಿದೆ.

ಹಾಗೆಯೇ ಮಹಾರಾಷ್ಟ್ರದ ಮರಾಠೀ ಮಹಾಕವಿ ಎನ್ನಿಸಿಕೊಂಡ "ಮುಕ್ತೇಶ್ವರ" ಕವಿಯ ಮನೆತನದ ಹೆಸರು "ಮುದಗಲ್" ಈ "ಕವಿಗೆ" ಕನ್ನಡ ಭಾಷೆಯ ಒಳ್ಳೆಯ ಜ್ಞಾನವಿದ್ದಿತು. "ಕುಮಾರ ವ್ಯಾಸ"ನ ನಂತರ ಸುಮಾರು ೧೫೦ ವರ್ಷಗಳ ಅನಂತರದ ಕಾಲದಲ್ಲಿಯೇ ಈ ಮುಕ್ತೇಶ್ವರ ಕವಿ ಮಹಾಭಾರತ ಕಾವ್ಯವನ್ನು ಮರಾಠಿಯಲ್ಲಿ ಬರೆದಿದ್ದಾನೆ. ಕುಮಾರವ್ಯಾಸನ ಕಾವ್ಯಕ್ಕೂ ಮುಕ್ತೇಶ್ವರರ ಕಾವ್ಯಕ್ಕೂ ಮೂಲ ವ್ಯಾಸರ 'ಮಹಾಭಾರತ'ವೇ ಆಗಿದ್ದರೂ ಮುಕ್ತೇಶ್ವರರ ಮರಾಠೀ ಭಾರತ ಕಾವ್ಯದಲ್ಲಿ ಕುಮಾರವ್ಯಾಸನ ಪದ ರಚನೆಗಳ ಅನುವಾದವೇ ಎನಿಸುವ ಮಟ್ಟಿಗೆ ಕೆಲವು ಕಡೆ ಸಾಮ್ಯತೆ ಕಂಡು ಬರುತ್ತದೆ. ಈ ವಿಷಯದಲ್ಲಿ ಆಚಾರ್ಯ ವಿನೋಬಾಭಾವೆಯವರ ಅಭಿಪ್ರಾಯವನ್ನು ಗಮನಿಸಿದರೆ, ಈ ಮಾತಿನ ಯಥಾರ್ಥತೆ ಅರ್ಥವಾಗುತ್ತದೆ. ಆಚಾರ್ಯ ವಿನೋಬಾ ಭಾವೆ ಹೇಳುತ್ತಾರೆ. ★"ಕುಮಾರವ್ಯಾಸ ಅಣಿ ಮುಕ್ತೇಶ್ವರ ದೋಘೇಹೀ ಅಪಾಪಲ್ಯಾ ಭಾಷೆಚ್ಚೆ ಮಹಾಕವಿ ಅಹೇತ. ಕುಮಾರವ್ಯಾಸ ನಿಸ್ಸಂಶಯ ದೀಡಶೇ ವರ್ಷೆ ತರೀ ಮುಕ್ತೇಶ್ವರಾಚ್ಯಾ ಅಧೀಚೆ ಅಹೇತ್....ಯಾ ಲೇಖಕಾನೆ ಸಾದರ ಕೇಲಲೆ ದೋನ ಉತಾರೆ ಇತಕೆ ತಂತೋ ತಂತ ಅಹೇತ್ ಕಿ ತ್ಯಾತೀಲ ಸಾಮ್ಯ ಅಭ್ಯಸನೀಯ ಅಹೆ-ತ್ಯಾ ಕಾರಣಾನ ಮುಕ್ತೇಶ್ವರಾನಿ ಕುಮಾರ ವ್ಯಾಸಾಚೆ ಭಾಷಾಂತರ ಕೆಲೆಲೆ ಅಹೆ ಅಸೆ ಮ್ಹಣಾವಯಾಸ ಪಾಹಿಜೆ."

★("ಕುಮಾರವ್ಯಾಸ ಮತ್ತು ಮುಕ್ತೇಶ್ವರ ಇವರಿಬ್ಬರೂ ತಮ್ಮ ತಮ್ಮ ಭಾಷೆಯಲ್ಲಿ ಮಹಾ ಕವಿಗಳೇ ಆಗಿದ್ದಾರೆ. ಕುಮಾರವ್ಯಾಸ ನಿಸ್ಸಂದೇಹವಾಗಿ, ಮುಕ್ತೇಶ್ವರನಿಗಿಂತಲೂ ಒಂದು ನೂರ ಐವತ್ತು ವರ್ಷ ಪೂರ್ವದಲ್ಲಿಯೇ ಈ ಕಾವ್ಯ ಬರೆದ. ಮುಕ್ತೇಶ್ವರರು ತಮ್ಮ ಕಾವ್ಯದಲ್ಲಿ ಸಾದರ ಪಡಿಸಿದ ಕೆಲವು ಪದ್ಯಗಳಂತೂ ಕುಮಾರ ವ್ಯಾಸನ ಪದ್ಯಗಳನ್ನು ಪೂರ್ತಿಯಾಗಿ ಹೋಲುತ್ತವೆ. ಆದುದರಿಂದ ಒಂದು ದೃಷ್ಟಿಯಿಂದ ಮುಕ್ತೇಶ್ವರ ಮಹಾಕವಿ ಕುಮಾರವ್ಯಾಸನ ಕಾವ್ಯವನ್ನೇ ಅನುವಾದ ಮಾಡಿದರು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ".)

ಆಚಾರ್ಯ ವಿನೋಬಾ ಭಾವೆಯವರ ಈ ಸ್ಪಷ್ಟೋಕ್ತಿ ಕನ್ನಡ ಸಾಹಿತ್ಯದ ಪ್ರಭಾವ ಮರಾಠೀ ಭಾಷೆಯ ಮೇಲೆ ಎಷ್ಟೊಂದು ಗಾಢವಾಗಿ ಬಿದ್ದಿದೆ ಎಂಬುದನ್ನು ತಿಳಿಸುತ್ತದೆ.

ಅದೇ ರೀತಿಯಾಗಿ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿಯ ದಾಸಶ್ರೇಷ್ಠರೆನಿಸಿಕೊಂಡ ಪುರಂದರ ದಾಸರ ಕಾವ್ಯದ ಪ್ರಭಾವವೂ ಮಹಾರಾಷ್ಟ್ರದ ಶಿವಾಜೀ ಕಾಲೀನ ಕವಿಗಳ ಕಾವ್ಯ ರಚನೆಯ ಮೇಲೂ ಬೀರಿದೆ. "ಸಂತ ತುಕಾರಾಮರ ಅಭಂಗಗಳಲ್ಲಿ "ನಿಂದಕಾಚೆ ಘರ ಅಸಾವೆ ಶೇಜಾರಿ" ಎನ್ನುವ ಪದ ಪಂಕ್ತಿ ಪುರಂದರದಾಸರ "ನಿಂದಕರಿರಬೇಕು – ಇರಬೇಕು" ಈ ವಾಕ್ಯದ ಭಾಷಾಂತರವೇ ಎನಿಸಿಕೊಳ್ಳುತ್ತದೆ.

"ಕರ್ನಾಟಕ ಸಂಗೀತದ ಪ್ರತೋದರರು ಎನಿಸಿದ ಪುರಂದರದಾಸರ ಪ್ರಭಾವ ತಮಿಳುನಾಡಷ್ಟೇ ಅಲ್ಲ ಇಡೀ ದಕ್ಷಿಣ ಭಾರತದ ಭಾಷೆಗಳ – ಸಂಗೀತದ ಮೇಲೆ ಆಗಿದೆ ಎಂಬುದಂತೂ ನಿರ್ವಿವಾದ. ದಕ್ಷಿಣಾದಿ ಸಂಗೀತಕ್ಕೆ ಮೂಲಭೂತ ರೂಪವನ್ನು ನೀಡಿದವರೇ ಪುರಂದರ ದಾಸರು.

ತೆಲುಗು ಸಾಹಿತ್ಯದ ಮೇಲೆ ಕನ್ನಡ ಪ್ರಭಾವ ಗಮನಾರ್ಹವಾಗಿದೆ. ಈ ವಿಷಯದಲ್ಲಿ ಪ್ರೊ. ಕೆ. ಎಂ. ಕೃಷ್ಣರಾವ್ ಅವರು ತಮ್ಮ "ಕನ್ನಡ ತೆಲುಗು (ಸಂಬಂಧ ಸಾಮ್ಯ)" ಎನ್ನುವ ಪುಸ್ತಕದಲ್ಲಿ (ಐ. ಬಿ. ಎಚ್. ಪ್ರಕಾಶನ) ಅತ್ಯಂತ ನಿಖರವಾಗಿ ತಿಳಿಸಿದ್ದಾರೆ. (ಪುಟ ೧೨-೨೦). "ಕನ್ನಡದ ಆದಿ ಕವಿ ಪಂಪ, ಆಂಧ್ರದ ಆದಿಕವಿ ನನ್ನಯ್ಯ ಇಬ್ಬರಿಗೂ ಮೂಲ ಆಧಾರ ಗ್ರಂಥ ಶ್ರೀ ವೇದವ್ಯಾಸ ಪ್ರಣೀತ ಸಂಸ್ಕೃತ ಮಹಾಭಾರತವೇ. ನನ್ನಯ್ಯನ ಮೇಲೆ ಪಂಪನ ಪ್ರಭಾವವಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಇವರಿಬ್ಬರೂ ಬಳಸಿರುವ ಛಂದಸ್ಸುಗಳ ವ್ಯಾಪ್ತಿಯಲ್ಲಿ ಹೋಲಿಕೆ ಇದೆ ........ ಅಸಾಧಾರಣ ಶಬ್ದಸಾದೃಶ್ಯ, ವರ್ಣನೆಗಳಲ್ಲಿ ಸಾದೃಶ್ಯ, ಕಥಾ ವಸ್ತುವಿನಲ್ಲಿ ಸಾದೃಶ್ಯ ಇರುವುದಲ್ಲದೇ ಪಂಪ ಬಿಟ್ಟಿರುವ ಭಾಗಗಳನ್ನು ನನ್ನಯ್ಯನೂ ಬಿಟ್ಟಿರುವುದು ಕಂಡು ಬರುತ್ತದೆ. "ಸರಳತಮಾಳ ತಾಳ ಹರಿಚಂದನ ನಂದನ ಭೂಜರಾಜಿಯಿಂ" ಎಂದು ಪಂಪ ಹೇಳಿದರೆ ನನ್ನಯ್ಯ "ಸರಳ ತಮಾಳ ತಾಳ ಹರಿಚಂದನ ಚಂಪಕ ನಾರಿಕೇಳಾದಿ" ಎಂದಿದ್ದಾನೆ ಎಂದು ಪ್ರೊ. ಕೆ. ಎಂ. ಕೃಷ್ಣರಾವ್ ಕನ್ನಡದ ಪ್ರಭಾವದ ಬಗೆಗೆ ಬೆಳಕನ್ನು ಬೀರಿದ್ದಾರೆ. ಅವರು ಮುಂದುವರಿದು "ಕನ್ನಡ ವಚನಕಾರರ ಪ್ರಭಾವ ತೆಲುಗಿನ ಶಿವಕವಿ ಯುಗದ ಮೇಲೂ ತಿಕ್ಕನ ಯುಗದ ಮೇಲೂ ಕನ್ನಡದ ಪ್ರಸಿದ್ಧ ವರಕವಿ ಕುಮಾರ ವ್ಯಾಸನ ಪ್ರಭಾವ ತೆಲುಗಿನ ಪ್ರಸಿದ್ಧ ಕವಿ ಶ್ರೀನಾಥನ ಹೆಸರಿನಲ್ಲೆ ಇರುವ ಶ್ರೀನಾಥ ಯುಗದ ಮೇಲೂ ಆಗಿದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ. ................ತೆಲುಗಿನ ವೇಮನನಿಗೂ ಕನ್ನಡದ ಸರ್ವಜ್ಞನಿಗೂ ತುಂಬಾ ಸಾಮ್ಯವಿದೆ" ಎಂದು ಸೋದಾಹರಣವಾಗಿ ವಿವರಿಸಿದ್ದಾರೆ. ಧಾರವಾಡದ ಕನ್ನಡ ನಾಟಕ ಕಂಪನಿಯೊಂದು ತೆಲುಗು ಸ್ವತಂತ್ರ ನಾಟಕಗಳ ಉಗಮಕ್ಕೆ ಕಾರಣವಾಯಿತೆಂದೂ ಹೇಳುತ್ತಾರೆ.

ಮಲೆಯಾಳಂ ಸಾಹಿತ್ಯದ ಮೇಲೂ ಕನ್ನಡ ತನ್ನ ಪ್ರಭಾವ ಬೀರಿದೆ. ಕುಮಾರವ್ಯಾಸನ "ಕಾವ್ಯ" ಮಲೆಯಾಳಿ ಭಾಷೆಯಲ್ಲಿ ಬರೆದ "ತಾಳೆಗರಿ" ಗ್ರಂಥ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಸಂಗ್ರಹಾಲಯದಲ್ಲಿದೆ.

ಇನ್ನು "ನಾಟಕ ಕ್ಷೇತ್ರ"ದ ಬಗೆಗೆ ಅಭ್ಯಾಸ ಮಾಡುವಾಗಲಂತೂ ಕರ್ನಾಟಕದ ಕೊಡುಗೆ – ಪ್ರಭಾವ ಅಮೂಲ್ಯವೆನಿಸುತ್ತದೆ. ಕನ್ನಡದ ಅತ್ಯಂತ ಹಳೆಯ ಜಾನಪದ ನಾಟಕಗಳೆಂದು ಖ್ಯಾತಿ ಪಡೆದ, ಸಣ್ಣಾಟ – ಡಬ್ಬಿನಾಟ, ದೊಂಬೀದಾಸರ ಆಟಗಳೇ ಮರಾಠೀ ಜನರನ್ನು ಆಕರ್ಷಿಸಿದವು. ಅವುಗಳ ಆಧಾರದ ಮೇಲೆಯೇ ಮರಾಠಿಯಲ್ಲಿ ಅತ್ಯಂತ ಜನಪ್ರಿಯ ಲೋಕ

ನಾಟ್ಯ "ತಮಾಷಾ" ರೂಪುಗೊಂಡಿದೆ. "ಘನಶ್ಯಾಮಸುಂದರಾ – ಶ್ರೀಧರಾ" ಭೂಪಾಳಿ ಕಾವ್ಯವನ್ನು ಮರಾಠಿಯಲ್ಲಿ ಬರೆದ ಕವಿ "ಹೊನ್ನಾಜಿ ಬಾಳ" ಕನ್ನಡದ ಗವಳಿ. (ಹಾಲು ಮಾರುವವ) ಮೂಡಲ ಪಾಯದ ಯಕ್ಷಗಾನ ದೊಡ್ಡಾಟಗಳು ಮರಾಠಿ ನಾಟಕದ ಸ್ಫೂರ್ತಿ ವಸ್ತುಗಳಾದವು. ಮರಾಠೀ ನಾಟಕದ ಮೂಲ ಬೇರುಗಳು ಕನ್ನಡದ ಮಣ್ಣಿನಲ್ಲಿಯೇ ಸಿಗುತ್ತವೆ. ಈ ಮಾತನ್ನು ಮರಾಠಿ ನಾಟಕದ ಪರಿಣತರೇ ಒಪ್ಪಿಕೊಳ್ಳುತ್ತಾರೆ. ಮರಾಠಿಯಲ್ಲಿಯ ಮೊದಲ ನಾಟಕ ೧೮೪೩ ರಲ್ಲಿ ಸಾಂಗ್ಲಿಯಲ್ಲಿ ಸಾದರ ಪಡಿಸಲಾಯಿತು. ಈ ನಾಟಕವನ್ನು ಕನ್ನಡದಿಂದ ಮರಾಠಿಗೆ ಅನುವಾದಿಸಿದವರು ಶ್ರೀ ವಿಷ್ಣುದಾಸಭಾವೆ. ಈ ನಾಟಕದ ಹೆಸರು "ಸೀತಾ ಸ್ವಯಂವರ". ಈ ನಾಟಕವನ್ನು ಮರಾಠಿಯಲ್ಲಿ ಸಾದರ ಪಡಿಸಲು ಅವರಿಗೆ ಪ್ರಭಾವ ನೀಡಿದ್ದು ಕನ್ನಡದ ಬಯಲಾಟ. ಈ ನಾಟಕ ಯಶಸ್ವಿಯಾದುದನ್ನು ಕಂಡ ಭಾವೆ ಅವರು ೫೦ ಆಖ್ಯಾಯಿಕೆಗಳನ್ನು ಬರೆದು ಮರಾಠೀ ನಾಟಕ ಪ್ರಪಂಚದಲ್ಲಿ ಆದ್ಯ ನಾಟಕಕಾರರೆಂದು ಹೆಸರನ್ನು ಪಡೆದರು. ೨೮ ಡಿಸೆಂಬರ್ ೧೯೪೧ ರಲ್ಲಿ ಮುಂಬಯಿ ನಗರದಲ್ಲಿ ಮಹಾರಾಷ್ಟ್ರ ನಾಟಕ ಸಮ್ಮೇಳನ ನಡೆಯಿತು. ಈ ಸಮ್ಮೇಳನದ ಅಧ್ಯಕ್ಷರಾದ ಪ್ರಖ್ಯಾತ ನಾಟಕಕಾರರಾದ ದಿ. ಆಚಾರ್ಯ ಪ್ರಲ್ಹಾದ ಕೇಶವ ಅತ್ರೆ ಅವರೇ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಈ ಮಾತನ್ನು ಹೇಳಿದ್ದಾರೆ. (ಶಿರೇಜ್ ಪಾಣಿ – ಅತ್ರೆ – ಪುಟ – ೧೧೪.)

ಇಂದು ಮರಾಠೀ ರಂಗಭೂಮಿ ಸಾಕಷ್ಟು ಪ್ರಗತಿ ಸಾಧಿಸಿದ್ದರೂ, ಕನ್ನಡದ ಪ್ರಖ್ಯಾತ ನಾಟಕಕಾರರಾದ ಶ್ರೀರಂಗ ಹಾಗೂ ಗಿರೀಶಕಾರ್ನಾಡರ ನಾಟಕಗಳು ತಮ್ಮ ಪ್ರಭಾವವನ್ನು ಬೀರುತ್ತಲಿವೆ.

ಮರಾಠಿ ಹಳೆಯ ವೃತ್ತಿ ರಂಗಭೂಮಿಯ ರಂಗ ಸಂಗೀತದ ಮೇಲೂ ಕನ್ನಡ ವೃತ್ತಿ ರಂಗಭೂಮಿಯ ಸಂಗೀತದ ಪ್ರಭಾವ ಬಿದ್ದಿದೆ ಎಂಬುದು ಕೂಡ ನಿರ್ವಿವಾದ. ಹಲವು ಮರಾಠೀ ರಂಗ ಸಂಗೀತದ ಹಾಡುಗಳ ಧಾಟಿಯ ಬಗೆಗೆ, ಮರಾಠೀ ನಾಟಕಕಾರರೇ "ಕಾನಡೀ ಚಾಲಿವರೂನ್" (ಕನ್ನಡ ಹಾಡಿನ ಧಾಟಿಯಂತೆ) ಎಂದು ನಮೂದಿಸಿರುವುದನ್ನು ಇಲ್ಲಿ ನೆನೆಯಬಹುದು.

ಒಟ್ಟಿನಲ್ಲಿ ಒಂದು ಕಾಲದಲ್ಲಿ ಕನ್ನಡ ಭಾಷೆ ಸಾಹಿತ್ಯ ಇತರ ಭಾಷೆ ಸಾಹಿತ್ಯಗಳ ಮೇಲೆ ತನ್ನ ಪ್ರಭಾವ ಬೀರಿತ್ತು ಎನ್ನುವುದು ನಿರ್ವಿವಾದ.

# ಮಹಾ ಕವಿ ಪಂಪ

ಎನ್. ಎಸ್. ತಾರಾನಾಥ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ೧೦ನೆಯ ಶತಮಾನವನ್ನು ಚಿನ್ನದ ಕಾಲ ಎಂದು ಕರೆಯುವುದು ರೂಢಿಯಲ್ಲಿದೆ. ಈ ಶತಮಾನದಲ್ಲಿ ಆಗಿಹೋಗಿದ್ದಿರಬಹುದಾದ ಕವಿಗಳು ಹಲವರು. ಆದರೆ ತಿಳಿದು ಬಂದಿರುವ ಕವಿಗಳು ಕೆಲವರು. ಮೊದಲನೆಯ ಗುಣವರ್ಮ, "ವಡ್ಡಾರಾಧನೆ"ಯ ಕರ್ತೃ, ಪಂಪ, ಪೊನ್ನ, ಚಾವುಂಡರಾಯ ಹಾಗೂ ರನ್ನರು ಈ ಯುಗದ ಪ್ರಮುಖ ಕವಿಗಳು. ಇವರಲ್ಲಿ ಪಂಪ, ಪೊನ್ನ ಮತ್ತು ರನ್ನರು ರತ್ನತ್ರಯರೆಂದು ಪ್ರಸಿದ್ಧರಾಗಿದ್ದಾರೆ. ೧೦ನೆಯ ಶತಮಾನಕ್ಕೆ ಬಂಗಾರದ ಬೆಲೆ ಮತ್ತು ಬಣ್ಣಗಳು ಬಂದಿರುವುದು ಇವರಿಂದಲೇ. ಇವರಲ್ಲಿಯೂ ಪಂಪನದೇ ಸಿಂಹಪಾಲು. ಪಂಪ ಕವಿ ಈವರೆಗಿನ ಖಚಿತವಾದ ತಿಳಿವಳಿಕೆಯ ಮಟ್ಟಿಗೆ "ಆದಿಪುರಾಣ" ಮತ್ತು "ವಿಕ್ರಮಾರ್ಜುನ ವಿಜಯ" ಎಂಬ ಎರಡು ಹಳೆಗನ್ನಡ ಕೃತಿಗಳ ಕರ್ತೃವಾಗಿ ಪ್ರಸಿದ್ಧನಾಗಿದ್ದಾನೆ. ವಿಕ್ರಮಾರ್ಜುನ ವಿಜಯವನ್ನು ಪಂಪಭಾರತ ವೆಂದು ಕರೆಯುವುದೇ ರೂಢಿಯಾಗಿದೆ. ಈ ಎರಡೂ ಕೃತಿಗಳು ಚಂಪೂಕಾವ್ಯಗಳು. "ಆದಿಪುರಾಣ" ಜೈನರಲ್ಲಿ ಪ್ರಥಮ ತೀರ್ಥಂಕರನೆಂದು ಪ್ರಸಿದ್ಧನಾಗಿರುವ ಪುರುದೇವನ (ಈತನಿಗೆ ಆದಿನಾಥ, ವೃಷಭನಾಥನೆಂಬ ಹೆಸರುಗಳೂ ಇವೆ) ಚರಿತ್ರೆಯನ್ನು ಕುರಿತದ್ದಾಗಿದೆ, ೧೬ ಆಶ್ವಾಸಗಳಿರುವ ಈ ಕೃತಿಯಲ್ಲಿ ಒಟ್ಟು ೧೬೩೦ ಪದ್ಯಗಳಿವೆ. "ವಿಕ್ರಮಾರ್ಜುನ ವಿಜಯ" ವೈದಿಕ ಪರಂಪರೆಯ ಮಹಾಭಾರತದ ಕಥೆಯನ್ನು ಸಂಗ್ರಹವಾಗಿ ನಿರೂಪಿಸುವಂಥದಾಗಿದೆ, ೧೪ ಆಶ್ವಾಸಗಳಿರುವ ಈ ಕೃತಿಯಲ್ಲಿ ಒಟ್ಟು ೧೬೦೯ ಪದ್ಯಗಳಿವೆ.

**ಜೀವನ**

ದುಂದುಭಿಗಭೀರನಿನದನಾದ ತಾನು ದುಂದುಭಿ ಸಂವತ್ಸರದಲ್ಲಿ ಹುಟ್ಟಿದನೆಂದು "ಆದಿಪುರಾಣ"ದ ಆರಂಭದಲ್ಲಿ (೧-೩೩) ಪಂಪ ಹೇಳಿಕೊಂಡಿದ್ದಾನೆ. ಈ ದುಂದುಭಿ ಸಂವತ್ಸರ ಶಕ ೮೨೪ರಲ್ಲಿ ಬರುವುದಾಗಿದ್ದು, ಇದು ಕ್ರಿಸ್ತಶಕ ೯೦೨-೩ಕ್ಕೆ ಸರಿಹೊಂದುತ್ತದೆ; ಎಂದರೆ ಪಂಪಕವಿ ಕ್ರಿಸ್ತಶಕ ೯೦೨-೩ನೆಯ ಇಸವಿಯಲ್ಲಿ ಹುಟ್ಟಿದನೆನ್ನಬೇಕು. ಈತ ತನ್ನ "ಆದಿಪುರಾಣ"ದ ರಚನೆಯ ಕಾಲವನ್ನು ಅದರ ಅಂತ್ಯಭಾಗದಲ್ಲಿ (೧೬-೭೬,೭೭) ತಿಳಿಸಿದ್ದಾನೆ; ಅದರ ಪ್ರಕಾರ "ಆದಿಪುರಾಣ" ಶಕ ೮೬೩ರ ಪ್ಲವ ಸಂವತ್ಸರದ ಕಾರ್ತಿಕ ಮಾಸದ ಶುಕ್ಲ ಪಕ್ಷದ ಪಂಚಮಿಯ ಭಾನುವಾರದಂದು ಮೂಲ ನಕ್ಷತ್ರವಿರುವಾಗ ಅಂತ್ಯಗೊಂಡಿತೆಂದು ವಿಶದವಾಗುತ್ತದೆ. ಈ ತೇದಿಯ ವಿವರಗಳು ಕ್ರಿ.ಶ. ೯೪೧ರ ಅಕ್ಟೋಬರ್ ೨೪ನೆಯ ತಾರೀಕಿಗೆ ಸರಿಹೊಂದುತ್ತವೆ. "ಆದಿ ಪುರಾಣ"ದ ರಚನಾಕಾಲವಾದ ಈ ಕ್ರಿಸ್ತ ಶಕ ೯೪೧ನೆಯ ಇಸವಿಯನ್ನೇ ಪಂಪನ ಕಾಲವೆಂದು ವಿದ್ವಾಂಸರು, ಸಾಹಿತ್ಯಚರಿತ್ರಕಾರರು ಸಾಮಾನ್ಯವಾಗಿ ತಿಳಿದಿದ್ದಾರೆ, ಉಲ್ಲೇಖಿಸುತ್ತಾ ಬಂದಿದ್ದಾರೆ. "ಆದಿಪುರಾಣ"ದ ರಚನಾಕಾಲವನ್ನು ನೇರವಾಗಿ ತಿಳಿಸಿದಂತೆ "ಪಂಪಭಾರತ"ದ ರಚನಾಕಾಲವನ್ನು ಪಂಪ ಕವಿ ತಿಳಿಸಿಲ್ಲ. "ಪಂಪಭಾರತ"ದಲ್ಲಿ "ಆದಿಪುರಾಣ"ದ ಉಲ್ಲೇಖವಿದೆ (೧೪-೬೦); ಅಲ್ಲದೆ ಭಾರತ ಮತ್ತು "ಆದಿಪುರಾಣ" ಗಳನ್ನು ೬ ತಿಂಗಳಲ್ಲಿ ಒಂದು, ೩ ತಿಂಗಳಲ್ಲಿ ಇನ್ನೊಂದು – ಹೀಗೆ ರಚಿಸಿದ್ದಾಗಿಯೂ ಪಂಪ ಇದೇ ಪದ್ಯದಲ್ಲಿ ತಿಳಿಸಿದ್ದಾನೆ. ಇದರಿಂದ "ಆದಿಪುರಾಣ"ವು ಪಂಪನ ಮೊದಲ ರಚನೆಯೆಂದೂ, "ಪಂಪಭಾರತ"ಕ್ಕಿಂತ ಅದು ಮೊದಲೇ ರಚಿತವಾದುದೆಂದೂ ವಿಶದವಾಗುತ್ತದೆ ಕ್ರಿಸ್ತ ಶಕ ೯೪೬ರ ಕರೀಂನಗರದ ಶಿಲಾಶಾಸನವೊಂದರಲ್ಲಿ "ಪಂಪಭಾರತ"ದ ಮೊದಲನೆಯ ಆಶ್ವಾಸದ ೧೫, ೩೧, ೪೧, ೪೩ ಮತ್ತು ೫೦ನೆಯ ಪದ್ಯಗಳು ಉಕ್ತವಾಗಿವೆ. ಇದರಿಂದ ೯೪೬ಕ್ಕಿಂತ ಮುಂಚೆ "ಪಂಪಭಾರತ" ರಚಿತವಾಗಿದ್ದಿರಬೇಕು ಎಂಬುದು ಸ್ಪಷ್ಟ. ಈ ಶಾಸನೋಕ್ತ ಪದ್ಯಗಳಾದರೂ "ಪಂಪಭಾರತ" ದಿಂದ ನೇರವಾಗಿಯೇ ಉದ್ಧೃತವಾಗಿರುವುದು ಹೆಚ್ಚು ಸಂಭಾವ್ಯವೆನಿಸುತ್ತದೆ. ಈ ಸಂಗತಿ ದಿಟವಾಗಿದ್ದಲ್ಲಿ "ಆದಿಪುರಾಣ" ಕ್ರಿಸ್ತಶಕ ೯೪೧ರಲ್ಲಿ, "ಪಂಪಭಾರತ" ೯೪೧ರಿಂದ ೯೪೬ರ ನಡುವೆ ರಚಿತವಾದುವೆನ್ನಬಹುದು. ಒಟ್ಟಿನಲ್ಲಿ ಪಂಪನಕಾಲ ಹತ್ತನೆಯ ಶತಮಾನದ ಪೂರ್ವಾರ್ಧವೆಂಬುದರಲ್ಲಿ ಸಂದೇಹವಿಲ್ಲ.

ಇನ್ನು ಪಂಪನ ವಾಂಶಿಕ ವಿವರಗಳನ್ನು ನೋಡಬಹುದು. ಪಂಪನೇ ತನ್ನ "ವಿಕ್ರಮಾರ್ಜುನ ವಿಜಯ"ದ ೧೪ನೆಯ ಆಶ್ವಾಸದ ೪೦ರಿಂದ ೪೮ರವರೆಗಿನ ಪದ್ಯಭಾಗದಲ್ಲಿ ಈ ಕುರಿತು ಕೆಲವು ವಿವರಗಳನ್ನು ಕೊಟ್ಟಿದ್ದಾನೆ. ಇದರೊಂದಿಗೆ ಆಂಧ್ರ ಪ್ರದೇಶದ ಕರೀಂನಗರ ಜಿಲ್ಲೆಗೆ ಸೇರಿದ, ಕುರ್ಕ್ಯಾಲ ಗ್ರಾಮದ ಒಂದು ಬಂಡೆಗಲ್ಲು ಶಾಸನದಲ್ಲಿ ಕೂಡ ಕೆಲವು ಹೆಚ್ಚಿನ ಸಂಗತಿಗಳು ಉಕ್ತವಾಗಿವೆ. ಈ ಆಕರಗಳನ್ನವಲಂಬಿಸಿದಲ್ಲಿ ತಿಳಿಯುವ ಒಟ್ಟು ವಿವರಗಳಿವು: ಪಂಪನ ತಂದೆಯ ಕಡೆಯ ಪೂರ್ವಜರು ಈಗಿನ ಆಂಧ್ರಪ್ರದೇಶದ ಮತ್ತು ಗೋದಾವರಿಗಳ ನಡುವಣ ವೆಂಗಿಮಂಡಲ ಅಥವಾ ವೆಂಗಿನಾಡು ಪ್ರಾಂತಕ್ಕೆ ಸೇರಿದವರು. ಪಂಪನ ತಾಯಿಯ ಕಡೆಯವರು ಈಗಿನ ಧಾರವಾಡ ಜಿಲ್ಲೆಯ ಗದಗ, ರೋಣ ಮತ್ತು ನವಲಗುಂದ ಭಾಗಗಳನ್ನೊಳಗೊಂಡ ಬೆಳ್ವೊಲ ಪ್ರಾಂತಕ್ಕೆ ಸೇರಿದವರು. ತಂದೆಯ ಕಡೆಯ ಪೂರ್ವಜರು ವೆಂಗಿನಾಡಿನ ಸಪ್ತಗ್ರಾಮಗಳಲ್ಲಿ ಒಂದಾದ, ಇಂದಿನ ಗುಂಟೂರು ಜಿಲ್ಲೆಯ

ಬಾಪಟ್ಲಾ ತಾಲ್ಲೂಕಿನಲ್ಲಿರುವ ವೆಂಗಿಪಳು ಅಥವಾ ವಂಗಿಪರ್ರು ಇಲ್ಲವೆ ವಂಗೀಪುರ ಎಂಬ ಅಗ್ರಹಾರಕ್ಕೆ ಸೇರಿದವರು; ಆದ್ದರಿಂದಲೇ ಅವರು ವಂಗಿಪರ್ರು ಕಮ್ಮೆಬ್ರಾಹ್ಮಣರೆಂದು ಖ್ಯಾತರಾಗಿದ್ದರು. ಅವರು ಜಮದಗ್ನಿ ಪಂಚಾರ್ಷೇಯ ಪ್ರವರದ ಶ್ರೀವತ್ಸಗೋತ್ರದವರು. ವೇದ ಸಂಬಂಧವಾದ ತಮ್ಮ ಆಚಾರ ವಿಚಾರಗಳಿಂದ, ವಿದ್ಯೆ ಶ್ರದ್ಧೆಗಳಿಂದ ಪ್ರಸಿದ್ಧರಾಗಿದ್ದವರು.

ಪಂಪ ಸೂಚಿಸಿರುವ ಮಟ್ಟಿಗೆ ಈ ಮನೆತನದ ಮೊದಲಿಗ ಮಾಧವ ಸೋಮಯಾಜಿ. ಈತ ಶಾಸ್ತ್ರಾರ್ಥ ನಿರ್ಣಯದಲ್ಲಿ ಸುಪ್ರಸಿದ್ಧ; ಪರಮ ಪಂಡಿತನೂ, ವೈದಿಕಶ್ರೇಷ್ಠನೂ ಆಗಿದ್ದ ಈತ ಹೋಮಹವನಗಳನ್ನು ಶ್ರದ್ಧೆಯಿಂದ ನಡೆಸಿ ಕೀರ್ತಿವಂತನಾಗಿದ್ದ. ಗುಂಡಿಕರ್ರದ ನಿತುಂಗೊಂಡೆಯಲ್ಲಿದ್ದ ಅಭಿಮಾನಚಂದ್ರ ಈತನ ಮಗ; ಬೇಡಿದವರಿಗೆ ಇಲ್ಲವೆನ್ನದೆ ಇತ್ತು ಖ್ಯಾತನಾದ ದೊಡ್ಡದಾನಿ. ವೇದ, ವೇದಾಂತಗಳನ್ನು ಚೆನ್ನಾಗಿ ಅಧ್ಯಯನ ಮಾಡಿದ್ದ ಕೊಮರಯ್ಯ (ಕುಮಾರಯ್ಯ) ಈತನ ಮಗ. ಇವನ ಮಗನೇ ಪಂಪನ ತಂದೆಯಾದ ಭೀಮ ಅಥವಾ ಭೀಮಪಯ್ಯ. ಈತನಿಗೆ ಬೆಳ್ವೊಲದ ಅಣ್ಣಿಗೆರೆಯ–ಎಂದರೆ ಇಂದಿನ ನವಲಗುಂದ ತಾಲ್ಲೂಕಿನ ಅಣ್ಣಿಗೆರೆಯ ಜೋಯಿಸ ಸಿಂಘನ ಮೊಮ್ಮಗಳಾದ ಅಬ್ಬಣಬ್ಬೆಯನ್ನು ಕೊಟ್ಟು ಮದುವೆಯಾಗಿತ್ತು. ಭೀಮಪಯ್ಯ ವಿಪ್ರಕುಲಕ್ಕೆ ಶೋಭಿಸುವ ಧರ್ಮವೆಂದರೆ ಜೈನಧರ್ಮವೆಂದು ತಿಳಿದು ಆ ಧರ್ಮಕ್ಕೆ ಸೇರಿಕೊಂಡ. ಈ ದಂಪತಿಗಳ ಮಕ್ಕಳೇ ಪಂಪ ಮತ್ತು ಜಿನವಲ್ಲಭರು. ಜಿನವಲ್ಲಭನು ಪಂಪನ ತಮ್ಮ. ಈ ಜಿನವಲ್ಲಭ ಕರೀಂನಗರದ ಬಳಿಯಿರುವ ವೃಷಭಗಿರಿಯಲ್ಲಿ ತಮ್ಮ ಕುಲದೇವತೆಯ ಪ್ರತಿಮೆಗಳನ್ನೂ, ಚಕ್ರೇಶ್ವರಿಯ ವಿಗ್ರಹವನ್ನೂ ಸ್ಥಾಪಿಸಿದ; ತ್ರಿಭುವನ ತಿಲಕವೆಂಬ ಬಸದಿಯನ್ನೂ, ಕವಿತಾಗುಣಾರ್ಣವವೆಂಬ ಕೆರೆಯನ್ನೂ, ಮದನ ವಿಳಾಸವೆಂಬ ತೋಟವನ್ನೂ ನಿರ್ಮಿಸಿದ. ಈತ ಗಾಯಕ, ಗಮಕಿ; ಪ್ರಿಯಭಾಷಿ, ಉಪಕಾರಿ, ಜೈನಾನುಯಾಯಿ. ಕಾವ್ಯಜ್ಞ, ಭ್ರಾತೃಪ್ರೇಮಿ ಆಗಿದ್ದ. ಪಂಪ ತನ್ನ ಧಾರ್ಮಿಕ ಗುರು ದೇವೇಂದ್ರ ಮುನಿಯೆಂದು "ಆದಿಪುರಾಣ"ದಲ್ಲಿ ತಿಳಿಸಿದ್ದಾನೆ (೧–೨೫); ಜಿನವಲ್ಲಭ ತನ್ನ ಗುರು ಜಯನಂದಿಯೆಂದು ಇಂಗಿತಗೊಳಿಸಿದ್ದಾನೆ. ಪಂಪನ ಗುರು ದೇವೇಂದ್ರಮುನಿ ಒಬ್ಬ ಗುಣನಂದಿಯ ಶಿಷ್ಯನೆಂದೂ ಈಗಾಗಲೇ ವಿದ್ವಾಂಸರು ಸಕಾರಣವಾಗಿ ಸೂಚಿಸಿದ್ದಾರೆ.

ಪಂಪ ತನ್ನ "ಪಂಪಭಾರತ"ದ ಆರಂಭಭಾಗದ ೩೬ ಪದ್ಯಗಳಲ್ಲಿ (೧ ೧೫ ೫೧) ತನಗೆ ದೊರೆತಿದ್ದ ದೊರೆಯ ಪೋಷಣೆ, ಆತನ ಪೂರ್ವಜರು, ಆತನ ವಂಶದ ಗುಣಕಥನವೇ ಮುಂತಾದುವನ್ನು ವಿವರಿಸಿದ್ದಾನೆ. ಆ ಕೃತಿಯ ಅಂತ್ಯಭಾಗದಲ್ಲೂ ತನಗೆ ಆಶ್ರಯವಿತ್ತಿದ್ದ ರಾಜ ಹಾಗೂ ಆತನೊಡನೆ ತನಗಿದ್ದ ಮೈತ್ರಿಯೇ ಮುಂತಾದ ವಿಷಯಗಳನ್ನು ಹೇಳಿದ್ದಾನೆ (೧೪–೫೦–೫೭). ಈ ಎಲ್ಲದರಿಂದ ತಿಳಿಯುವ ಸಂಗತಿಗಳಿವು: ಪಂಪನಿಗೆ ಆಶ್ರಯವಿತ್ತಿದ್ದ ರಾಜ ರಾಷ್ಟ್ರಕೂಟರ ಸಾಮಂತನಾಗಿದ್ದ ವೇಮುಲವಾಡ ಚಾಲುಕ್ಯ ವಂಶದ ಅರಸನಾದ ಇಮ್ಮಡಿ ಅರಿಕೇಸರಿ; ನರಸಿಂಹ ಜಾಕಬ್ಬೆಯರ ಮಗನಾದ ಈತನನ್ನು ಮಹಾಭಾರತದ ಅರ್ಜುನನೊಡನೆ ಅಭೇದಕಲ್ಪನೆ ಮಾಡಿ ಪಂಪ ತನ್ನ ಭಾರತವನ್ನು ರಚಿಸಿರುವುದಾಗಿ ಹೇಳಿದ್ದಾನೆ (೧–೧೪,೫೧); ಈ ಭಾರತವನ್ನಾದರೂ ಅರಿಕೇಸರಿಯ ಅಪೇಕ್ಷೆಯ ಮೇರೆಗೆ ಆತ ರಚಿಸಿದನಂತೆ; ಕೃತಿರಚನೆಯ ಅನಂತರ ಅರಿಕೇಸರಿ ಈತನಿಗೆ ಮೆಚ್ಚುಗೆಯ ಬಹುಮಾನವಾಗಿ ಒಡವೆ, ವಸ್ತು, ಗೋಧನ, ಗ್ರಾಮಸಂಪತ್ತು, ದಾಸೀಸಮೂಹವನ್ನು ಕೊಟ್ಟು ಸನ್ಮಾನಿಸಿದನಂತೆ; ಇದಕ್ಕಿಂತ ಮಿಗಿಲಾಗಿ ಧರ್ಮಪುರವೆಂಬ ಅಗ್ರಹಾರವನ್ನು ಶಾಸನ ಬರೆಸಿ ದಾನವಿತ್ತನಂತೆ (೧–೫; ೫೬). ಇದರಿಂದ ಮತ್ತು ಇಂಥ ಇತರ ಕೆಲವು ಸಾಕ್ಷ್ಯಗಳಿಂದ ಪಂಪ ಮತ್ತು ಅರಿಕೇಸರಿಯರ ನಡುವೆ ಗಾಢವಾದ ಸ್ನೇಹವಿತ್ತೆಂದು ವಿದ್ವಾಂಸರು ಸೂಚಿಸಿದ್ದಾರೆ. ಅರಿಕೇಸರಿಯ ಮೆಚ್ಚಿನ ಬಿರುದಾದ ಗುಣಾರ್ಣವ ಎಂಬುದನ್ನೇ ಪಂಪ ತನ್ನ ನೆಚ್ಚಿನ ಬಿರುದಾದ "ಕವಿತಾ ಗುಣಾರ್ಣವ" ಎಂದಾಗಿಸಿಕೊಂಡಿದ್ದಾನೆ. "ಪ್ರಸನ್ನ ಗಂಭೀರ ವಚನರಚನ ಚತುರ" ಎಂಬುದು ಈತನ ಇನ್ನೊಂದು ಬಿರುದು. ಪಂಪನೇ ತನ್ನನ್ನು "ಹಿತಮಿತಮೃದುವಚನಂ", "ಅಭಿಜನ ವತ್ಸಲನ್", "ಅಭಿಮಾನಮೂರ್ತಿ", "ಸುಕವಿಯಶೋ ನಿರ್ಮತ್ಸರನ್", "ಸರಸ್ವತೀ ಮಣಿಹಾರಂ" ಎಂದೂ ಕರೆದುಕೊಂಡಿದ್ದಾನೆ; "ಲಲಿತ ಮಧುರ ಸುಂದರ ವೇಷಂ", "ವನಿತಾ ಕಟಾಕ್ಷ ಕುವಲಯ ವನಚಂದ್ರಂ" ಎಂದೂ ತನ್ನನ್ನು ಹೊಗಳಿಕೊಂಡಿರುವುದುಂಟು (ಆದಿ ಪು. ೧–೨೯, ೩೦. ೩೧). ಈ ಎಲ್ಲದರಿಂದ ಪಂಪ ತುಂಬ ಸಮೃದ್ಧವೂ, ಸಂಪದ್ಯುಕ್ತವೂ, ಸಂತೃಪ್ತಿಕರವೂ ಆದ ಸಂಸಾರಯುತ ಜೀವನವನ್ನು ನಡೆಸಿದ್ದನೆನ್ನಬಹುದು. ಆತನ ಕೃತಿಗಳಂತೆ ಆತನ ಜೀವನ ಸಂಸಾರಗಳೂ ಶೋಭಾಯಮಾನವಾದುವೇ.

**ಆದಿಪುರಾಣ**

ಕನ್ನಡ ಸಾಹಿತ್ಯದ ಈವರೆಗಿನ ಜೈನಪುರಾಣಗಳಲ್ಲಿ "ಆದಿಪುರಾಣ" ಅತ್ಯಂತ ಶ್ರೇಷ್ಠವಾದ ಕೃತಿಯೆಂಬ ಮನ್ನಣೆಗೆ ಪಾತ್ರವಾಗಿದೆ. ಇದರ ಮೂಲಕ ಜೈನಧರ್ಮದ ತತ್ತ್ವ ಮತ್ತು ಸಿದ್ಧಾಂತಗಳನ್ನು ಬೆಳಗಲು ಪಂಪ ಪ್ರಯತ್ನಿಸಿದ್ದಾನೆ. ಹದಿನಾರು ಆಶ್ವಾಸಗಳ ಈ ದೀರ್ಘ ಪುರಾಣಕಾವ್ಯದ ಮೊದಲ ಆರು ಆಶ್ವಾಸಗಳಲ್ಲಿ ಪುರುದೇವನ ಹಿಂದಿನ ಹತ್ತು ಜನ್ಮಗಳ ನಿರೂಪಣೆಯಿದೆ; ಏಳರಿಂದ ಹತ್ತನೆಯ ಆಶ್ವಾಸದವರೆಗೆ ಪುರುದೇವನ ಜನನ, ಬಾಲ್ಯ, ವಿದ್ಯಾಭ್ಯಾಸ. ವಿವಾಹ, ರಾಜ್ಯಭಾರ, ವೈರಾಗ್ಯ, ಪರಿನಿಷ್ಕ್ರಮಣಗಳ ವರ್ಣನೆಯಿದೆ; ಕೊನೆಯ ಐದು ಆಶ್ವಾಸಗಳಲ್ಲಿ ಪುರುದೇವನ ಮಕ್ಕಳಾದ ಭರತ–ಬಾಹುಬಲಿಯರ ವೃತ್ತಾಂತವಿದೆ. ಹೀಗೆ ಈ ಕೃತಿಯ ವಸ್ತುವನ್ನು ಮೂರು ಮುಖ್ಯ ಘಟ್ಟಗಳಿಗನುಗುಣವಾಗಿ ಪಂಪ ವಿನ್ಯಾಸಗೊಳಿಸಿದ್ದಾನೆ.

"ಆದಿಪುರಾಣ"ದ ಆರಂಭದಲ್ಲಿ (೧–೩೫) ಪಂಪ ಆ ಕೃತಿಗೆ ಪ್ರೇರಕವೂ ಮೂಲವೂ ಆದ ಕವಿ ಪರಂಪರೆ ಹಾಗೂ ಆಕರಗಳನ್ನು ಸೂಚಿಸಿದ್ದಾನೆ. ಅಲ್ಲಿ ಜಿನಸೇನರ ಉಲ್ಲೇಖವೂ ಇದೆ. ಕ್ರಿ. ಶ. ೮೩೮ರಲ್ಲಿದ್ದ ಜಿನಸೇನರ ಸಂಸ್ಕೃತಭಾಷೆಯ "ಪೂರ್ವಪುರಾಣ"ವೇ ಪಂಪನಿಗೆ ಪ್ರಥಮವೂ ಪ್ರಧಾನವೂ ಆದ ಆಕರ. ೧೦,೮೦೦ ಶ್ಲೋಕಗಳ ಆ ಬೃಹತ್ ಕೃತಿ ಒಟ್ಟು ೪೭ ಪರ್ವಗಳಾಗಿ ವಿಭಜಿತವಾಗಿದೆ. ಆದಿನಾಥನ ಕಥೆಯನ್ನು ಅವನ ಎಲ್ಲ ಭವಾವಳಿಗಳ ಸಹಿತ ಇಲ್ಲಿ ಸುದೀರ್ಘವಾಗಿಯೂ ಸಾವಧಾನವಾಗಿಯೂ ವಿಸ್ತರಿಸಿ ನಿರೂಪಿಸಿದೆ. ಕಾವ್ಯಲೇಪನದ ಅಭಿವ್ಯಕ್ತಿ ಈ ಕೃತಿಯಲ್ಲಿ ಕಂಡುಬಂದರೂ ಮತೀಯ ಪ್ರಕ್ರಿಯೆಗಳ ಚರ್ಚೆ, ಧರ್ಮಬೋಧೆ ಹಾಗೂ ಜೈನಾಗಮ ತತ್ತ್ವಗಳ ಸಾವಕಾಶ ನಿರೂಪಣೆಯಿಂದ ಕೃತಿ ಪುರಾಣಮಾರ್ಗವನ್ನು ಹಿಡಿದಿದೆ; ಕಾವ್ಯದ ಹೊಳಪು ಅಲ್ಲಲ್ಲಿಯಾದರೂ ಕಾಂತಿಗುಂದಿರುವುದು ಎದ್ದು ಕಾಣುತ್ತದೆ. ಇದು ಸರಳವೂ ಲಲಿತವೂ ಆದ ಭಾಷೆ ಶೈಲಿಗಳನ್ನೊಳಗೊಂಡಿದ್ದರೂ, ಇದರಲ್ಲಿ ಕಾವ್ಯದೃಷ್ಟಿಗಿಂತ ಪುರಾಣದೃಷ್ಟಿ, ಅಧಿಕವಾಗಿದೆ. ಪಂಪ ಸಮಗ್ರಕಥಾವಸ್ತು, ಆ ವಸ್ತುವಿನ ವಿನ್ಯಾಸ, ಕಥನಕ್ರಮ ಮತ್ತು ನಿರೂಪಣೆ, ಸನ್ನಿವೇಶ ಹಾಗೂ ಪಾತ್ರರಚನೆ, ಧರ್ಮಬೋಧೆ

ಇತ್ಯಾದಿಗಳ ದೃಷ್ಟಿಯಿಂದ “ಪೂರ್ವಪುರಾಣ”ವನ್ನು ಬಲು ಮಟ್ಟಿಗೆ ಹತ್ತಿರದಿಂದಲೇ ಅನುಸರಿಸಿದ್ದಾನೆ. ಆದರೆ ಈ ಅನುಸರಣೆಯಲ್ಲಿ ಮೂಲವನ್ನು ಕನ್ನಡಕ್ಕೆ ಯಥಾವತ್ತಾಗಿ ತಂದಿಲ್ಲ; ಚಾಚೂ ತಪ್ಪದ ಭಾಷಾಂತರವಾಗಿಸಿಲ್ಲ. ಮೂಲದ ೧೦,೮೦೦ ಶ್ಲೋಕಗಳನ್ನು ೧೬೩೦ ಪದ್ಯಗಳಿಗೆ ಇಳಿಸಿರುವುದು ಆತನ ಒಂದು ದೊಡ್ಡ ಸಾಧನೆ. ಇದರಿಂದಲೇ ಆತನ ಸಂಗ್ರಹಕಲೆ ಏನೆಂಬುದು ವಿದಿತವಾಗುತ್ತದೆ. ಆನೆಯನ್ನು ಅಂಗೈ ಮೇಲೆ ತರುವಲ್ಲಿ ಆತ ಯಶಸ್ವಿಯಾಗಿದ್ದಾನೆ. ಒಟ್ಟಿನಲ್ಲಿ ಜಿನಸೇನರದು ಪುರಾಣಪಥ; ಪಂಪನದು ಕಾವ್ಯಪಥ.

ತನ್ನ “ಆದಿಪುರಾಣ”ದಲ್ಲಿ ಧರ್ಮ ಹಾಗೂ ಕಾವ್ಯಧರ್ಮಗಳನ್ನು ಸಮನ್ವಯಿಸಿದ್ದೇನೆ ಎಂದು ಪಂಪ ಘೋಷಿಸಿದ್ದಾನೆ (೧–೩೮). ಇದರ ಸೋಲು ಗೆಲವುಗಳಲ್ಲಿಯೇ ಈ ಕೃತಿಯ ಸೋಲು ಗೆಲವುಗಳೂ ಅಡಗಿವೆ. ಈ ಕೃತಿ ಒಬ್ಬನೇ ವ್ಯಕ್ತಿಯ, ಒಂದು ಜನ್ಮದ ಕಥೆಯನ್ನು ಮಾತ್ರ ನಿರೂಪಿಸುವುದಿಲ್ಲ; ಒಬ್ಬನೇ ವ್ಯಕ್ತಿಯ ಅನೇಕ ಭವಗಳ ವೃತ್ತಾಂತವೂ, ಇತರ ವ್ಯಕ್ತಿಗಳ ಕಥೆಗಳೂ ಇಲ್ಲಿ ಬಣ್ಣಿತವಾಗಿವೆ. ಜಯವರ್ಮ, ಮಹಾಬಲ, ಲಲಿತಾಂಗ, ವಜ್ರಜಂಘ, ಆರ್ಯ, ಶ್ರೀಧರದೇವ, ಸುವಿಧಿ, ಅಚ್ಯುತೇಂದ್ರ, ವಜ್ರನಾಭಿ, ಅಹಮಿಂದ್ರ–ಎಂಬ ಪುರುದೇವನ ಹತ್ತು ಪೂರ್ವಭವಗಳ ಕಥನದ ತರುವಾಯ ಆತನ ವೃತ್ತಾಂತ ಬರುತ್ತದೆ. ಆ ಹತ್ತು ಪೂರ್ವಭವಗಳಲ್ಲಿ ಎಲ್ಲವೂ ಚಚ್ಚೌಕವಾಗಿದ್ದು, ಅಚ್ಚುಕಟ್ಟಾದ ಕಾವ್ಯಾಭಿವ್ಯಕ್ತಿಯನ್ನೇನೂ ಒಳಗೊಂಡಿಲ್ಲ. ಮೊದಲ ನಾಲ್ಕು ಭವಗಳಲ್ಲಿ ಲೌಕಿಕ ವಾಸನೆ, ಮಾನಸಿಕವಾದ ಹುಯ್ಯು, ತುಮುಲ, ಭೋಗಭಾಗ್ಯಗಳ ಸೆಳೆತ ಗಾಢವಾಗಿರುವುದರಿಂದ ಪಂಪನಿಗೆ ಕಾವ್ಯ ಬುಗ್ಗೆ ಚಿಮ್ಮಿಸಲು ಅವು ಅಗತ್ಯವೂ ಅನುಕೂಲಕರವೂ ಆದ ರಸದಾಣಗಳಾಗಿವೆ. ತರುವಾಯದ ಭವಗಳಲ್ಲಿ ಆದಿನಾಥನ ಭವವನ್ನುಳಿದರೆ, ಇತರ ಭವಗಳು ಭಾಷಾಪಾಂಡಿತ್ಯ, ಧಾರ್ಮಿಕ ವಿವರಗಳ ಹೆಚ್ಚಳ, ಮತೀಯ ನಿರೂಪಣೆಗಳಿಂದ ಜಡ ಹಾಗೂ ಭಾರವೆನಿಸುತ್ತವೆ. ಲಲಿತಾಂಗನ ಮೃತ್ಯು ಭೀತ ಚೇತನದ ಹೃದಯ ವಿದ್ರಾವಕ ಪ್ರಲಾಪ, ಸ್ವಯಂಪ್ರಭೆಯ ಆಲಾಪ, ವಜ್ರಜಂಘ–ಶ್ರೀಮತಿಯರ ಶಯ್ಯಾಗೃಹ ಮರಣ–ಇಂಥ ಪ್ರಸಂಗಗಳಲ್ಲಿ ಪಂಪ ಪ್ರತಿಭೆ ತನ್ನ ಚರಮ ಸೀಮೆ, ಸಿದ್ಧಿಗಳನ್ನು ಮುಟ್ಟಿದೆ. ಕಣ್ಣು ತುಂಬುವ ಈ ಚಿತ್ರಗಳು, ಹೃದಯ ಕಲಕುವಷ್ಟು ಪರಿಣಾಮಕಾರಿಯಾಗಿವೆ. ಜಿನಸೇನರಲ್ಲಿ ಕಾಣಬರದ ಸಹಜತೆ, ತೀವ್ರತೆ ಮತ್ತು ಕಾವ್ಯದ ಕಾವುಗಳಿಂದ ಈ ಪ್ರಸಂಗಗಳು ಪಂಪನಲ್ಲಿ ನವೀನವಾಗಿವೆ, ಭಿನ್ನ ಆಯಾಮವನ್ನು ಪಡೆದುಕೊಂಡಿವೆ.

ಪುರುದೇವಭವದಲ್ಲಿ ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನ ಹಾಗೂ ಪರಿನಿರ್ವಾಣವೆಂಬ ಪಂಚಕಲ್ಯಾಣಗಳನ್ನು ಪಂಪನು ಜಿನಸೇನರ ಮಾರ್ಗವನ್ನನುಸರಿಸಿಯೇ ನಿರೂಪಿಸಿದ್ದಾನೆ. ಈ ಐದು ಕಲ್ಯಾಣಗಳಲ್ಲಿ ಪಂಪನು ಪುರುದೇವನ ಜನ್ಮಾಭಿಷೇಕ ಮತ್ತು ಪರಿನಿಷ್ಕ್ರಮಣ ಕಲ್ಯಾಣಗಳನ್ನು ಚಿತ್ತಚುಂಬಕ ನಿರೂಪಣೆ ವರ್ಣನೆಗಳಿಂದ ಅದ್ಭುತವಾಗಿಸಿದ್ದಾನೆ. ಮೇರು ಪರ್ವತದ ನೆತ್ತಿಯಲ್ಲಿ ನಡೆಯುವ ಜನ್ಮಾಭಿಷೇಕಕ್ಕೆ ಶಿಶುವಾದ ಪುರುದೇವನನ್ನು ಇಂದ್ರ ಕರೆದೊಯ್ಯುವ, ತರುವಾಯ ಇಂದ್ರನೆ ಸ್ವತಃ ಆಡುವ ಆನಂದನೃತ್ಯದ ವರ್ಣನೆಗಳು ಅಪೂರ್ವವಾದ ಭವ್ಯತಾಚಿತ್ರಗಳಾಗಿವೆ. ಜಿನಸೇನರಲ್ಲಿನ ಅತಿವಿಸ್ತಾರವನ್ನು ಮೊಟಕುಗೊಳಿಸಿ ಅಡಕವೂ ಆಕರ್ಷಕವೂ ಆದ ಕಾವ್ಯಭಾಗಿಯಿಂದ ಈ ಸನ್ನಿವೇಶವನ್ನು ಪ್ರಭಾಪೂರ್ಣವಾಗಿಸಿರುವುದೇ ಪಂಪನ ವೈಶಿಷ್ಟ್ಯ. ಪುರುದೇವನ ಪರಿನಿಷ್ಕ್ರಮಣ ಕಲ್ಯಾಣ ಸಂದರ್ಭದ ನೀಲಾಂಜನೆಯ ನೃತ್ಯ ಪಂಪ ಪ್ರತಿಭೆಯ ಇನ್ನೊಂದು ಸಾಕ್ಷ್ಯ. ಇಲ್ಲಂತೂ ಪಂಪನ ಕಾವ್ಯ ಸಾಮರ್ಥ್ಯ, ಕಲಾಶಕ್ತಿ, ಪಾತ್ರಗಳ ಒಳಹೊರಗುಗಳನ್ನರಿವ ದಕ್ಷತೆ, ಸನ್ನಿವೇಶವನ್ನು ಬಿಡಿಸುವ ಕೌಶಲ ಮೇಲಾದ ರೀತಿಯಲ್ಲಿ ಪ್ರಕಟಗೊಂಡಿವೆ. ಇಲ್ಲಿಯ ಅನೇಕ ಪದ್ಯಗಳಲ್ಲಿ ಪಂಪ ಮೂಲವನ್ನು ಅನುಸರಿಸಿರುವಂತೆ, ಅದನ್ನು ಉನ್ಮೀಲನಗೊಳಿಸಿರುವುದೂ ಉಂಟು. ನೀಲಾಂಜನೆಯ ಹಾವಭಾವಕ್ಕನುಗುಣವಾದ ಪದಗತಿ, ಪುರುದೇವನ ಒಳತೋಟಿಗನುಗುಣವಾದ ಕಾವ್ಯಗತಿ ಇಲ್ಲಿವೆ. ಭೋಗ ತ್ಯಾಗಕ್ಕೆ, ವೈಭೋಗ ವೈರಾಗ್ಯಕ್ಕೆ ತಿರುವು ಪಡೆಯುವ ಬಗೆಯನ್ನು ಪಂಪ ಬಲು ಸೊಗಸಾಗಿ ಇಲ್ಲಿ ಚಿತ್ರಿಸಿದ್ದಾನೆ. ವೈರಾಗ್ಯದೆಡೆ ಮನಹರಿದ ಪುರುದೇವನ ಈ ಸಂದರ್ಭದ ಚಿತ್ತ ಲಹರಿಯೊಂದು ಹೀಗಿದೆ:

> ತನು ರೂಪ ವಿಭವ ಯೌವನ
> ಧನ ಸೌಭಾಗ್ಯಾಯುರಾದಿಗಳ್ಗೆಣೆ ಕುಡುಮಿಂ
> ಚಿನ ಪೊಳಪು ಮುಗಿಲ ನೆಳಲಿಂ
> ದ್ರನ ಬಿಲ್ ಬೊಬ್ಬುಳಿಕೆಯುಬ್ಬು ಪರ್ಬಿದ
> ಭೋಗಂ॥ (೯–೪೬)

ಮುಂದೆ ಭರತ ಬಾಹುಬಲಿಯರ ವೃತ್ತಾಂತವಿದೆ. ಈ ಅಣ್ಣತಮ್ಮಂದಿರ ತಂದೆಯಾದ ಪುರುದೇವನ ಕಥೆಯಲ್ಲಿ ಭೋಗತ್ಯಾಗವಿದ್ದರೆ, ಇಲ್ಲಿ ಗರ್ವತ್ಯಾಗವಿದೆ. ಈ ವೃತ್ತಾಂತವನ್ನು ಮಾತ್ರ ಪಂಪ ಹಂತಹಂತವಾಗಿ ನಾಟಕೀಯ ಸ್ಪರ್ಶದಿಂದ ರಮ್ಯ ದೃಶ್ಯಗಳ ರಂಗಶಾಲೆಯಾಗಿಸಿದ್ದಾನೆ. ಚಕ್ರರತ್ನ ಹಾಗೂ ಮಗನ ಉದಯ, ತಂದೆಯ ಕೈವಲ್ಯ ಪ್ರಾಪ್ತಿ, ಭೋಗೋತ್ಕಟತೆ, ಅನ್ಯರಾಜರ ಮೇಲಣ ದಿಗ್ವಿಜಯ ಇವುಗಳಿಂದ ಸೊಕ್ಕಿಬೀಗುವ ಭರತ ಚಕ್ರವರ್ತಿಯ ಒಂದು ಮುಖ; ವೃಷಭಾದ್ರಿಯಲ್ಲಿ ಕೀರ್ತಿ ಪ್ರಶಸ್ತಿ ಕೆತ್ತಿಸಲು ಯತ್ನಿಸಿದಾಗ ಆಗುವ ಅಭಿಮಾನ ಭಂಗ, ಚಕ್ರಗಮನ ಸ್ತಂಭನ, ಬಾಹುಬಲಿಯ ಪ್ರತಿಭಟನೆ, ಕೊನೆಗೆ ಆತನಿಂದಲೇ ಆಗುವ ಸೋಲು–ಇವುಗಳಿಂದ ಬಾಗಿಭಂಗಿತನಾಗುವ ಭರತನ ಇನ್ನೊಂದು ಮುಖ. ಈ ಹೊತ್ತಿನಲ್ಲಿ ಬಾಹುಬಲಿಯ ಸಂಯಮ, ಉದಾತ್ತದೃಷ್ಟಿ, ಗಾಂಭೀರ್ಯ, ಅತ್ಯಪೂರ್ವ ನಡವಳಿಕೆ–ಇವುಗಳ ಉನ್ನತವಾದ ಮತ್ತೊಂದು ಮುಖ. ಇಂಥವುಗಳಿಂದ ಈ ಪ್ರಸಂಗ, ಪಾತ್ರ ಹಾಗೂ ನಿರೂಪಣೆ ಬೃಹತ್ತು ಮಹತ್ತುಗಳನ್ನು ಸಮನಿಸಿಕೊಂಡು ಭವ್ಯಗೊಂಡಿವೆ.

“ಆದಿಪುರಾಣ”ದಲ್ಲಿಯ ವರ್ಣನೆಗಳು ಬಹುಪಾಲು ಕವಿಸಮಯವನ್ನವಲಂಬಿಸಿದ ಸರಕುಗಳೇ; ಆದರೆ ೧೧–೪೩–೧೩೭ರವರೆಗಿನ ಪದ್ಯಗಳಲ್ಲಿ ಬಂದಿರುವ ಪುಷ್ಪಾಪಚಯ ವರ್ಣನೆ ಸ್ವಾಭಾವಿಕ ಹಾಗೂ ತುಂಬ ನೈಜವೆನ್ನಿಸುವಂತಿದೆ. ಈ ಸಂದರ್ಭದ ಹಲವಾರು ಪದ್ಯಗಳು ಬಿಡಿ ಭಾವಗೀತೆಗಳಾಗಿವೆ. ಇಂಥವೇ ಈ ಕೃತಿಯಲ್ಲಿ ಇತರ ಕಡೆಗಳಲ್ಲಿಯೂ ಬಂದಿರುವುದುಂಟು. ಭಾಷೆ, ಶೈಲಿಗಳ ದೃಷ್ಟಿಯಿಂದಲೂ ಇದೊಂದು ಉತ್ತಮ ದರ್ಜೆಯ ಕೃತಿಯೇ. ಶೈಲಿಯ ಮಾಧುರ್ಯ ಲಾಲಿತ್ಯಗಳೂ ಭಾಷೆಯ ಪಾಂಡಿತ್ಯ ಪ್ರಗಲ್ಭತೆಗಳೂ ಇಲ್ಲಿ ಕಾಣಿಸಿಕೊಂಡಿವೆ. ಇಂಥ ಕಾವ್ಯಕರ್ಮದ ವೈವಿಧ್ಯಪೂರ್ಣ ಬಣ್ಣಗಾರಿಕೆಯಿಂದ ಇದೊಂದು ಶೋಭಾಯಮಾನವಾದ ಕೃತಿಯಾಗಿದೆ. ಒಟ್ಟಿನಲ್ಲಿ ಕೆ. ವಿ. ಪುಟ್ಟಪ್ಪನವರು ಹೇಳುವ, “ಕಥೆ ರೀತಿ, ಉದ್ದೇಶ, ಸಿದ್ಧಿಗಳ ದೃಷ್ಟಿಯಿಂದ ಆದಿಪುರಾಣ ಜಗತ್ ಕಾವ್ಯವಾಗಿ ಪರಿಣಮಿಸಿದೆ” ಎಂಬ ಮಾತುಗಳನ್ನು ಸಮರ್ಥಿಸಬಹುದಾಗಿದೆ.

ಕನ್ನಡ ಭಾರತಗಳಲ್ಲಿ "ಪಂಪಭಾರತ"ವೇ ಪ್ರಾಚೀನವೂ ಪ್ರಸಿದ್ಧವೂ ಆದುದು. "ಆದಿಪುರಾಣ"ದಲ್ಲಿ ಜಿನಾಗಮವನ್ನು ಮೆರೆದಿದ್ದರೆ, ಇಲ್ಲಿ ಲೌಕಿಕವನ್ನು ಬೆಳಗಿದ್ದೇನೆ ಎಂದು ಪಂಪನೇ ಹೇಳಿಕೊಂಡಿದ್ದಾನೆ (೧೪–೬೦). ಈ ಗ್ರಂಥಾರಂಭದಲ್ಲಿ "ವ್ಯಾಸ ಮುನೀಂದ್ರ ರುಂದ್ರ ವಚನಾಮೃತವಾರ್ಧಿಯನೀಸುವೆಂ ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ" (೧–೧೩) ಎಂಬ ಪಂಪೋಲ್ಲೇಖದಿಂದ ವ್ಯಾಸಭಾರತವೇ ಈ ಕೃತಿಗೆ ಪ್ರಧಾನ ಆಕರವೆಂಬುದು ಇಂಗಿತಗೊಳ್ಳುತ್ತದೆ. ಆದರೆ ಎರಡೂ ಭಾರತಗಳ ಉದ್ದೇಶ, ಶಿಲ್ಪಗಳೇ ಬೇರೆಯಾಗಿವೆ. ವ್ಯಾಸಕಥೆಯೇ ಇದರಲ್ಲಿದ್ದರೂ ಪಂಪ ತನ್ನ ಪ್ರತಿಭೆ ಮತ್ತು ಕುಶಲವಾದ ಕಲೆಗಾರಿಕೆಗಳಿಂದ ಇದನ್ನು ಭಿನ್ನಕೃತಿಯಾಗಿಸಿದ್ದಾನೆ. ಒಂದು ಲಕ್ಷ ಶ್ಲೋಕಗಳ "ಮಹಾಭಾರತ" ಕಥೆಯನ್ನು ೧೬೦೯ ಪದ್ಯಗಳಲ್ಲಿ ಆತ ಭಟ್ಟಿಯಿಳಿಸಿದ್ದು ಆತನ ಅತ್ಯುತ್ತಮ ಸಂಗ್ರಹವಿಧಾನಕ್ಕೆ ಜೀವಂತ ಸಾಕ್ಷ್ಯವಾಗಿದೆ. ಮೊದಲ ಮೂರು ಆಶ್ವಾಸಗಳಲ್ಲಿ ಪಾಂಡವ, ಕೌರವರ ಜನನ, ಮಾತ್ಸರ್ಯ, ಜತುಗೃಹದಾಹ,. ಹಿಡಿಂಬ–ಬಕಾಸುರರ ವಧೆ, ದ್ರೌಪದೀ ಸ್ವಯಂವರ ಮತ್ತು ವಿವಾಹದವರೆಗಿನ ಕಥೆಯಿದೆ; ಅನಂತರದ ಮೂರು ಆಶ್ವಾಸಗಳಲ್ಲಿ ಯುಧಿಷ್ಠಿರನ ಪಟ್ಟಾಭಿಷೇಕ, ಇಂದ್ರಪ್ರಸ್ಥ ನಿರ್ಮಾಣ, ಸುಭದ್ರಾರ್ಜುನರ ವಿವಾಹ, ರಾಜಸೂಯಯಾಗ ಹಾಗೂ ಜರಾಸಂಧ ಮತ್ತು ಶಿಶುಪಾಲರ ವಧೆಗಳಿವೆ; ೭ರಿಂದ ೧೦ರ ವರೆಗಿನ ಮೂರು ಆಶ್ವಾಸಗಳಲ್ಲಿ ದ್ಯೂತಪ್ರಸಂಗ, ದ್ರೌಪದೀಮಾನಹರಣ ಪ್ರಯತ್ನ, ಅರಣ್ಯಪ್ರವೇಶ, ಈಶ್ವರಾರ್ಜುನ ಯುದ್ಧ, ಅರ್ಜುನನ ದಿವ್ಯಾಸ್ತ್ರ ಸಂಪಾದನೆ, ವಿರಾಟನಗರ ಪ್ರವೇಶ, ಕೀಚಕ ವಧೆ, ದಕ್ಷಿಣೋತ್ತರ ಗೋಗ್ರಹಣ, ಅಭಿಮನ್ಯು ವಿವಾಹ, ಕುರುಕ್ಷೇತ್ರ ಪ್ರಯಾಣ ಪ್ರಸಂಗಗಳಿವೆ; ಕೊನೆಯ ನಾಲ್ಕು ಆಶ್ವಾಸಗಳಲ್ಲಿ ಭೀಷ್ಮಪರ್ವದಿಂದ ಸ್ತ್ರೀಪರ್ವದವರೆಗಿನ ಮುಖ್ಯ ವೃತ್ತಾಂತಗಳೂ ಅರ್ಜುನನ ಪಟ್ಟಾಭಿಷೇಕ ವರ್ಣನೆಯೂ ಇವೆ.

ವ್ಯಾಸಭಾರತದ ವಸ್ತುವಿನ್ಯಾಸವನ್ನ ಪಂಪ ತನ್ನ ಕೃತಿಯಲ್ಲಿ ಅನುಸರಿಸಿದ್ದರೂ ಮುಖ್ಯವಾದ ಅನೇಕ ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ; ಸೇರ್ಪಡೆಗಳನ್ನು ತಂದಿದ್ದಾನೆ; ಇರುವ ಅನೇಕ ಪ್ರಸಂಗಗಳನ್ನು ಬಿಟ್ಟಿದ್ದಾನೆ. ಎರಡೂ ಕೃತಿಗಳ ನಡುವೆ ಇರುವ ಮುಖ್ಯವಾದ ಕೆಲವು ವ್ಯತ್ಯಾಸಗಳಿವೆ: (೧) ಈ ಕೃತಿಯ ಕಥಾನಾಯಕ ಪಾಂಡವ-ಕೌರವ ಜ್ಯೇಷ್ಠನಾದ ಧರ್ಮರಾಯನಲ್ಲ; ಆತನ ತಮ್ಮನಾದ ಅರ್ಜುನ. ಇಲ್ಲಿ ದ್ರೌಪದಿ ಪಾಂಡವರೈವರನ್ನೂ ವರಿಸಿ ಪಂಚವಲ್ಲಭೆಯಾಗಿಲ್ಲ; ಅರ್ಜುನನನ್ನು ಮಾತ್ರ ವರಿಸುತ್ತಾಳೆ (ಆದರೆ ತನಗೆ ಕಷ್ಟ ಬಂದಾಗ ಈಕೆ ಗಂಡನಾದ ಅರ್ಜುನನಿಗಿಂತ, ಭಾವನಾದ ಭೀಮನನ್ನು ಮೊರೆಹೋಗುವುದೇ ಹೆಚ್ಚು!). (೨) ಭಾರತದ ಯುದ್ಧಾನಂತರ ಅರ್ಜುನ–ಸುಭದ್ರೆಯರಿಗೆ ಇಲ್ಲಿ ಪಟ್ಟಾಭಿಷೇಕವಾಗುತ್ತದೆಯೇ ವಿನಾ, ಮೂಲಭಾರತದಂತೆ ಧರ್ಮರಾಯ–ದ್ರೌಪದಿಯರಿಗಲ್ಲ. (೩) ಅರ್ಜುನನನ್ನು ರಾಜನಾದ ಅರಿಕೇಸರಿಯೊಡನೆ ಅಭೇದಗೊಳಿಸಿ ಇಲ್ಲಿ ಕೃತಿಯನ್ನು ನಿರ್ವಹಿಸಲಾಗಿದೆ; ಇದರಿಂದ ಅರಿಕೇಸರಿಯ ಮಾತಾಪಿತೃಗಳು, ಬಿರುದು, ದಿಗ್ವಿಜಯಗಳೇ ಅರ್ಜುನನವೂ ಆಗಿ ಅಲ್ಲಲ್ಲಿ ಆಭಾಸಗಳಿಗೆ ಕಾರಣವಾಗಿದೆ. (೪) ಅರ್ಜುನನಾದರೂ ಸುಭದ್ರೆಯನ್ನು ಅಪಹರಿಸಿ ಇಲ್ಲಿ ಮದುವೆಯಾಗುವುದಿಲ್ಲ; ಕೃಷ್ಣನ ನೆರವಿನಿಂದ ಪರಸ್ಪರ ಅನುರಾಗದಿಂದ ಆತ ಸುಭದ್ರೆಯನ್ನೂ ಇಂದ್ರಪ್ರಸ್ಥಕ್ಕೆ ಕರೆದೊಯ್ಯುತ್ತಾನೆ. (೫) ಅಂಬಿಕೆ–ಅಂಬಾಲಿಕೆಯರು ವ್ಯಾಸನ ದಿವ್ಯದೃಷ್ಟಿಯಿಂದ ಗರ್ಭವತಿಯರಾಗುವುದು, ದ್ರುಪದನನ್ನು ದ್ರೋಣನು ಒದ್ದು ಅಪಮಾನಿಸುವುದು; ಕೃಷ್ಣ ತನ್ನಗರ್ಘ್ಯವಿತ್ತ ತಟ್ಟೆಯಲ್ಲಿಯೇ ಶಿಶುಪಾಲನ ತಲೆಯನ್ನು ಕತ್ತರಿಸುವುದು, ದ್ವೈತವನದಲ್ಲಿ ಪಾಂಡವರಿದ್ದಾಗ ವಿಪ್ರರ ಬೇಳ್ವರಣಿಯನ್ನು ಮದಗಜ ಕೊಂಡುಹೋಗುವುದು, ಕಾಲವಂಚನೆ ಮಾಡಲು ದುರ್ಯೋಧನ ವೈಶಂಪಾಯನ ಸರೋವರ ಪ್ರವೇಶಿಸುವುದು–ಇವೆಲ್ಲ ಮೂಲಭಾರತಕ್ಕಿಂತ ಭಿನ್ನವಾದ ಸಂಗತಿ ಮತ್ತು ಪ್ರಸಂಗಗಳಿವೆ. (೬) ಪಂಪನಲ್ಲಿ ಕಂಡುಬರುವ ಕನಕನ ಬೇಳ್ವೆಯ ಕಥೆ, ಸತ್ಯಂತಪ ವೃತ್ತಾಂತ, ಭಾನುಮತಿಯ ನೆತ್ತ ಪ್ರಸಂಗ ವ್ಯಾಸ ಭಾರತದಲ್ಲಿಲ್ಲ. ಪೂರ್ವೋಕ್ತ ವ್ಯತ್ಯಾಸಗಳಿಂದ ಈ ಕೃತಿಗೆ ಲಾಭ ನಷ್ಟಗಳೆರಡೂ ಆಗಿವೆ. ಕಾವ್ಯ ಸ್ವಾರಸ್ಯ ಹೆಚ್ಚಿ ಅದಕ್ಕೆ ನಾವೀನ್ಯ ದೊರೆತಿರುವುದು ಲಾಭ; ವಸ್ತ್ವೈಕ್ಯಕ್ಕೆ ಭಂಗ ಬಂದು ಅಲ್ಲಲ್ಲಿ ಕಣ್ಣೊತ್ತುವ ಆಭಾಸಗಳಾಗಿರುವುದು ನಷ್ಟ. ಇದೇನೆ ಇರಲಿ, ತೀ. ನಂ. ಶ್ರೀಕಂಠಯ್ಯನವರು ಹೇಳುವಂತೆ "ವಿಕ್ರಮಾರ್ಜುನ ವಿಜಯವು ಕನ್ನಡದ ಕನ್ನಡಿಯಲ್ಲಿ ಚಿಕ್ಕದಾಗಿ ಬಿದ್ದ ವ್ಯಾಸಭಾರತದ ನೆರಳಲ್ಲ; ಅಲ್ಲಿಯ ಚಿನ್ನವನ್ನು ಶೋಧಿಸಿ ತಂದು ಹೊಸದಾಗಿ ಎರಕಹೊಯ್ದು ಒಪ್ಪವಿಟ್ಟು ನಿಲ್ಲಿಸಿದ ನೂತನ ಪುತ್ತಳಿ ಅದು" ಎಂಬ ಮಾತುಗಳು ದಿಟವಾದುವೇ ಸರಿ.

"ಪಂಪಭಾರತ"ದ ಪ್ರಸಿದ್ಧಿಯೆಲ್ಲ ಬಲುಮಟ್ಟಿಗೆ ಅದರ ಹಿತಮಿತವಾದ ಭಾಷೆ ಶೈಲಿಗಳಲ್ಲಿ, ಅನೇಕ ಅರ್ಥ ಹಾಗೂ ಭಾವಗಳನ್ನು ಚಿಮ್ಮಿಸುವ ಅನನ್ಯವಾದ ಕಲೆಗಾರಿಕೆಯಲ್ಲಿ ಅಡಗಿದೆ. ಸಾವಿರಮಾತುಗಳಲ್ಲಿ, ನೂರು ಪಂಕ್ತಿಗಳಲ್ಲಿ, ಹತ್ತು ಪದ್ಯಗಳಲ್ಲಿ ಹೇಳುವ ಕಥಾವಿಷಯವನ್ನೆಲ್ಲ ಪಂಪ ಕೆಲವೇ ಮಾತುಗಳಲ್ಲಿ, ನಾಲ್ಕು ಪಂಕ್ತಿಗಳಲ್ಲಿ, ಒಂದು ಪದ್ಯದಲ್ಲಿ ಹೇಳುತ್ತಾನೆ. ಇಡೀ ಸನ್ನಿವೇಶವನ್ನ ಬಿಡಿಯಾದ ಒಂದೇ ಪದ್ಯದಲ್ಲಿ ಹಿಡಿದಿಡುವ ಆತನ ಸಂಗ್ರಹಶೀಲಗುಣ ಅದ್ಭುತವಾದುದು. ಇದರಿಂದ ಕೃತಿಕಟ್ಟಡಕ್ಕೆ ಬೇಕಾದ ಬಿಗಿ, ಕೃತಿ ನಿರ್ವಹಣೆಗೆ ಬೇಕಾದ ವೇಗ ಎರಡೂ ಲಭ್ಯವಾಗಿವೆ. ವ್ಯಾಸರಲ್ಲಿ ಹಲವಾರು ಶ್ಲೋಕಗಳವರೆಗೆ ಹರಿದಿರುವ ಶಂತನು–ಸತ್ಯವತಿಯರ ಪ್ರಸಂಗ ಪಂಪನಲ್ಲಿ ಒಂದೇ ಒಂದು ಪದ್ಯದಲ್ಲಿ ಹೀಗೆ ಅಭಿವ್ಯಕ್ತಗೊಂಡಿದೆ:

ಮೃಗಯಾವ್ಯಾಜದಿನೊರ್ಮೆ ಶಂತನು ತೊಳಲ್ತರ್ಪಂ
  ಪಳಂಚಲ್ಕೆ ತ
ನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂಬೋಲ್
  ಸೋಲ್ತು ಕಂಡೊಲ್ದು ನ
ಲ್ಮೆಗೆ ದಿಬ್ಯಂಬಿಡಿವಂತೆವೋಲ್ ಪಿಡಿದುಂ ನೀಂ ಬಾ
  ಪೋಪಮೆಂದಂಗೆ ಮ
ಲ್ಲಗೆ ತತ್ಕನ್ಯಕೆ ನಾಣ್ಚಿ ಬೇಡುವಡೆ ನೀವೆಮ್ಮಯ್ಯನಂ
  ಬೇಡಿರೇ || (೧–೭೦)

ಈ ಪದ್ಯದ ಪ್ರತಿ ಪದದಲ್ಲಿರುವ ಭಿನ್ನ ಭಿನ್ನ ಅರ್ಥಛಾಯೆ, ಧ್ವನಿಶಕ್ತಿ, ಪ್ರಣಯಿಗಳ ಸಂವಾದ ಸ್ವಾರಸ್ಯ, ಉಚಿತವಾದ ಸಂಗ್ರಹಶೀಲತ – ಇವುಗಳಿಂದಾಗಿ "ಪಂಪಭಾರತ"ದ ಕಾಂತಿಯುಕ್ತ ಪದ್ಯರತ್ನಗಳಲ್ಲಿ ಇದೊಂದಾಗಿದೆ. ಗಾಂಧಾರಿ ಬಸಿರನ್ನು ಹೊಸೆದುಕೊಳ್ಳುವ ಪ್ರಸಂಗ, ಭೀಮ ಪ್ರತಿಜ್ಞೆ, ಸತ್ಯಂತಪ ವೃತ್ತಾಂತ, ಭಾನುಮತಿ ನೆತ್ತವಾಡಿದ ಕಥೆ–ಇವೆಲ್ಲ ವರ್ಣಿತವಾಗಿರುವುದಾದರೂ ಕೆಲವಾರು ಪದ್ಯಗಳಲ್ಲಿಯೇ. ನಾಲ್ಕು ರೇಖೆಗಳಿಂದ ಜೀವಂತ ಚಿತ್ರವನ್ನು ಬಿಡಿಸುವ ಕಲಾವಿದನಂತೆ ಪಂಪ ಇವನ್ನು ಬಿಡಿಸಿದ್ದಾನೆ. ಇಲ್ಲೆಲ್ಲ ಪಾತ್ರದ ಒಳಸುಳಿಗಳನ್ನು ಬಿಚ್ಚುವ ಸನ್ನಿವೇಶ, ಭಾವವನ್ನಪ್ಪುವ ಭಾಷೆ, ಲಯವನ್ನೊಪ್ಪುವ ಛಂದಸ್ಸು ಒಟ್ಟಾಗಿ ಕೂಡಿ

ಕೊಂಡು ಇವು ಪಂಪನ ಉತ್ಕೃಷ್ಟವಾದ ಕಾವ್ಯಕರ್ಮದಾಣಗಳಾಗಿವೆ.

ವ್ಯಾಸಭಾರತದ ಕಥೆಯಲ್ಲಿಯೇ ಜೀವನದ ಎಲ್ಲ ಮುಖಗಳು, ಲೌಕಿಕಭಾವಗಳು, ಸಂಘರ್ಷಗಳು, ಮೌಲ್ಯಗಳು ವ್ಯಕ್ತಗೊಂಡಿವೆ. ಅಜ್ಜ–ಮೊಮ್ಮಗ, ತಂದೆ–ಮಗ, ತಾಯಿ–ಮಗ, ಅಣ್ಣ–ತಮ್ಮ, ಗಂಡ–ಹೆಂಡತಿ, ಸ್ವಾಮಿ–ಭೃತ್ಯ, ಗೆಳೆಯ–ಶತ್ರು, ಬಂಧು,–ದಾಯಾದಿ,–ಈಎಲ್ಲ ಸಂಬಂಧ ಸಂಘರ್ಷಗಳು ಅಲ್ಲಿ ತಾರಸ್ಥಿತಿಯಲ್ಲಿ ಕಾಣಿಸಿಕೊಂಡಿವೆ. ಮಾನವನ ಪ್ರೀತಿ, ವಿಶ್ವಾಸ, ಅನುಕಂಪೆ, ಸಹಾನುಭೂತಿ, ಗೌರವ, ಸ್ನೇಹಭಾವ, ಲೋಭ, ಮಾತ್ಸರ್ಯ, ಅಸೂಯೆ, ಮದ–ಈ ಎಲ್ಲ ಭಾವಗಳು ಅಲ್ಲಿ ಉತ್ಕಟವಾಗಿ ಚಿಮ್ಮಿವೆ. ಇವೇ ಆ ಕೃತಿಯುದ್ದಕ್ಕೂ ಹರಿದಿರುವುದು. ಇವುಗಳ ಸಾರವನ್ನು ಹೀರಿಕೊಂಡು, ಮೂಲಸ್ವರಗಳನ್ನು ಹಿಡಿದು ಭಾವವೀಣೆಯೊಂದಿಗೆ ಕಾವ್ಯನಾದದಲ್ಲಿ ಇವನ್ನು ಪಂಪನು ತನ್ನ ಕೃತಿಯಲ್ಲಿ ಮೀಟಿದ್ದಾನೆ. ಹೀಗಾಗಿ 'ಪಂಪಭಾರತ'ದ ದ್ಯೂತ ಪ್ರಸಂಗ, ಭೀಮಪ್ರತಿಜ್ಞೆ, ಭೀಷ್ಮಪಟ್ಟಾಭಿಷೇಕ, ದುಶ್ಶಾಸನ ವಧೆ, ಕರ್ಣಾರ್ಜುನ ಹಾಗೂ ಬೀಮ-ದುರ್ಯೋಧನ ಯುದ್ಧ ಪ್ರಸಂಗಗಳು ಭಾವಾವೇಗ ಮತ್ತು ಮಾನವ ಸಂಘರ್ಷಗಳಿಂದ ಓದುಗನನ್ನು ಪ್ರಬಲವಾಗಿ ಆಕರ್ಷಿಸುತ್ತವೆ; ಉಜ್ವಲವಾದ ಕಾವ್ಯಗುಣದಿಂದ ಆತನ ಮನಸ್ಸಿನಲ್ಲಿ ಅಳಿಯದ ಮುದ್ರೆಯನ್ನೊತ್ತುತ್ತವೆ. ಇಂಥವು ಆ ಕೃತಿಯಲ್ಲಿ ಒಂದಲ್ಲ, ಎರಡಲ್ಲ; ನೂರು.

ಪಂಪ ತನ್ನ ಭಾರತದಲ್ಲಿ ಪಾತ್ರಗಳ ಸ್ವಭಾವ ಚರ್ಯೆಗಳನ್ನು, ದೃಷ್ಟಿ ಧೋರಣೆಗಳನ್ನು ಮೂಲದಿಂದ ತಕ್ಕ ಮಟ್ಟಿಗೆ ಭಿನ್ನವಾಗಿಸಿದ್ದಾನೆ. ಆತ ದುರ್ಯೋಧನನಲ್ಲಿ ಛಲ, ಕರ್ಣನಲ್ಲಿ ನನ್ನಿ, ಭೀಮಸೇನನಲ್ಲಿ ಗಂಡುತನ, ಶಲ್ಯನಲ್ಲಿ ಬಲಿಷ್ಠತೆ, ಭೀಷ್ಮನಲ್ಲಿ ಔನ್ನತ್ಯ, ದ್ರೋಣನಲ್ಲಿ ಬಿಲ್ಲಾಗ್ರಿಕೆ. ಅರ್ಜುನನಲ್ಲಿ ಸಾಹಸಮಹಿಮೆ, ಧರ್ಮರಾಜನಲ್ಲಿ ನಿರ್ಮಲ ಧರ್ಮಗಳನ್ನು ಕಂಡಿದ್ದಾನೆ (೧೪–೬೪). "ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ" ಎಂದೂ ಆತ ಘೋಷಿಸಿದ್ದಾನೆ. ಈ ಮೂಲಕ ಆತ ದುರ್ಯೋಧನ ಮತ್ತು ಕರ್ಣರ ಪಾತ್ರಗಳನ್ನು ಅಪಾರವಾಗಿ ಮೆಚ್ಚಿದ್ದನೆಂಬುದು ಇಂಗಿತವಾಗುತ್ತದೆ. ಈ ಕೃತಿಯ ನಾಯಕ ಅರ್ಜುನನಾದುದರಿಂದ ಒಂದು ವಿಧದಲ್ಲಿ ಪ್ರತಿನಾಯಕ ಕರ್ಣನಾಗಿದ್ದಾನೆ. ಕರ್ಣಪಾತ್ರದ ಮೇಲೆ ಪಂಪನಿಗೆ ವಿಶೇಷವಾದ ಮಮತೆ, ಕಳಕಳಿ. ಕರ್ಣನ ಹುಟ್ಟು, ಬೆಳವಣಿಗೆ, ಜೀವನಗಳಲ್ಲಿ ವಿಧಿಯಾಡಿದ ಆಟ ಮತ್ತು ಆತನ ಅಸಹಾಯಕ ಪರಿಸ್ಥಿತಿಗಳಿಂದ ಪಂಪ ಆ ಪಾತ್ರದಲ್ಲಿ ಕರಗಿ ಹೋಗಿದ್ದಾನೆ; ತಲ್ಲೀನನಾಗಿದ್ದಾನೆ. ಕರ್ಣ ಉದಾತ್ತನಾದರೂ ವಿವಶದಿಂದ ದುರಂತನಾಯಕನಾಗಿ ಪಂಪನ ಕಣ್ಣಿಗೆ ಕಾಣಿಸಿಕೊಳ್ಳುತ್ತಾನೆ. ಆತನ ಮಿತ್ರಪ್ರೇಮ, ಸ್ವಾಮಿನಿಷ್ಠೆ, ಔದಾರ್ಯಗುಣ, ಶೌರ್ಯ ಪರಾಕ್ರಮಗಳನ್ನು ಪಂಪ ಅವಕಾಶ ದೊರೆತಾಗಲೆಲ್ಲ ಉಜ್ವಲೀಕರಿಸಿ, ವೈಭವೀಕರಿಸಿ ಆತನನ್ನು ಆದರ್ಶ ಪಾತ್ರವಾಗಿಸಿದ್ದಾನೆ. ವ್ಯಾಸರ ಕರ್ಣನಿಗೆ ಸಚ್ಚಾರಿತ್ರ್ಯದ ಸ್ವರ್ಣಲೇಪನದಿಂದ ಪಂಪನು ಹೊಸ ವರ್ಣವಿತ್ತಿದ್ದಾನೆ. ಅಂತಿಮವಾಗಿ "ನೆನೆಯದಿರಣ್ಣ ಭಾರತದೊಳಿಂ ಪೆರರಾರುಮನೊಂದೆ ಚಿತ್ತದಿಂ ನೆನೆವೊಡೆ ಕರ್ಣನಂ ನೆನೆಯ" ಎಂದೂ "ಕರ್ಣರಸಾಯನಮಲ್ತೆ ಭಾರತಂ" ಎಂದೂ (೧೨–೨೧೬) ಘೋಷಿಸಿ ಆ ಪಾತ್ರವನ್ನು ಉದಾತ್ತೀಕರಿಸಿದ್ದಾನೆ. ದುರ್ಯೋಧನನ ಪಾತ್ರವನ್ನೂ ಹೀಗೆಯೇ ಮೇಲಕ್ಕೇರಿಸಿದ್ದಾನೆ. ದುರ್ಯೋಧನನ ಮಾತ್ಸರ್ಯ, ರಾಜ್ಯಾಕಾಂಕ್ಷೆ, ಅಹಂಕಾರ ಇತ್ಯಾದಿಗಳನ್ನು ತಂದಿದ್ದರೂ ಆತ ನೆಲಕ್ಕಾಗಿ ಹೋರಾಡದೆ ಛಲಕ್ಕಾಗಿ ಹೋರಾಡುತ್ತಿದ್ದಾನೆ ಎಂಬ ಭಿನ್ನಕಲ್ಪನೆಯ ಮೂಸೆಯಲ್ಲಿ ಆ ಪಾತ್ರವನ್ನು ಪುಟವಿಟ್ಟಿದ್ದಾನೆ; ಅದಕ್ಕೆ ಇನ್ನೊಂದು ಆಯಾಮವನ್ನಿತ್ತಿದ್ದಾನೆ. ಆ ಪಾತ್ರಕ್ಕೆ ಚರಮಗೀತೆಯನ್ನು ಹಾಡುವಾಗ "ಏನ್ ಅಭಿಮಾನಧನಂ ಸುಯೋಧನಂ" ಎಂಬ ಉದ್ಗಾರವನ್ನಿತ್ತು (೧೩–೯೭) ಆತನ ಬಗ್ಗೆ ತನಗಿರುವ ಸುಪ್ತ ಮೆಚ್ಚುಗೆಯನ್ನೂ ಪಂಪ ಪ್ರಕಟಿಸಿದ್ದಾನೆ. ಇಂಥ ಹೊಸತನಗಳಿಂದಲೇ ವ್ಯಾಸಭಾರತ ಪಂಪಭಾರತವಾಗಿರುವುದು.

## ನಾಡೋಜ

ಸುಮಾರು ೬೫೦ ವರ್ಷಗಳ ಹಿಂದೆ ನಾಗರಾಜನೆಂಬ ಜೈನ ಕವಿ "ಪಸರಿಪ ಕನ್ನಡಕ್ಕೊಡೆಯನೋರ್ವನೆ ಸತ್ಕವಿ ಪಂಪನಾವಗಂ" (ಪುಣ್ಯಾಸ್ರವ, ೧–೧೬) ಎಂದು ಘೋಷಿಸಿದ. ವ್ಯಾಪಕವಾಗಿ ಹರಡುತ್ತಿರುವ, ವಿಸ್ತಾರವಾಗಿ ಬೆಳೆಯುತ್ತಿರುವ ಕನ್ನಡಕ್ಕೆ ಯಾವಾಗಲೂ ಸತ್ಕವಿ ಪಂಪನೊಬ್ಬನೇ ಒಡೆಯ ಎಂಬ ಆತನ ಈ ಮಾತು ಅಂದಿಗೇ ಅಲ್ಲ ಇಂದಿಗೂ ದಿಟವಾದದ್ದಾಗಿದೆ. ವಿಮರ್ಶಕರು ಅವನನ್ನು ನಾಡೋಜ, ಆದಿಕವಿ, ಮಹಾಕವಿ, ಯುಗ ನಿರ್ಮಾಪಕ, ಕನ್ನಡದ ಕಾಳಿದಾಸ ಎಂದೆಲ್ಲ ಕರೆದಿದ್ದಾರೆ. ಈ ಎಲ್ಲ ಕರೆಹಕ್ಕೂ ಆತ ಅರ್ಹ. ಪಂಪನ ಕಾವ್ಯಗಳು ಕನ್ನಡ ಸಾಹಿತ್ಯದ ವಿಜಯ ಪತಾಕೆಗಳು; ಆತನ ಸಾಧನೆ ಕನ್ನಡ ಭಾಷೆಯ ಸಾಧನೆ; ಆತನ ಗೆಲವು ಪ್ರಸಿದ್ಧಿ ಕನ್ನಡಿಗರ ಗೆಲವು, ಪ್ರಸಿದ್ಧಿ.

# ಕವಿ ರನ್ನ

**ಕೆ. ಕುಶಾಲಪ್ಪ ಗೌಡ**

ಕನ್ನಡದಲ್ಲಿ ಪಂಪನಷ್ಟೇ ಪ್ರಸಿದ್ಧಿಯನ್ನು ಅವನಿಗಿಂತ ಒಂದು ತಲೆಮಾರು ಈಚಿನವನಾದ ರನ್ನನೂ ಪಡೆದಿದ್ದಾನೆ. ಇವನು ಜೈನ ಧರ್ಮ ಪ್ರದೀಪಕರಾದ ರತ್ನತ್ರಯರಲ್ಲಿ ಒಬ್ಬ. ಮೂವರು ಕವಿಚಕ್ರವರ್ತಿಗಳಲ್ಲಿ ಒಬ್ಬ. ಕರ್ನಾಟಕದಲ್ಲಿ ಸುಮಾರು ಒಂದು ಸಾವಿರ ವರ್ಷಗಳ ಹಿಂದೆ ಬಾಳಿದ್ದ ಇವನು ಜನ್ಮವೆತ್ತಿದುದು ಜಂಬುಖಂಡಿ ಎಪ್ಪತ್ತರ ನುಡುವೊಳಲಲ್ಲಿ. ಬಳೆಗಾರ ಕುಲದ ಜಿನವಲ್ಲಭ ಮತ್ತು ಅಬ್ಬಲಬ್ಬೆಯವರ ನಾಲ್ಕನೆಯ ಮಗನಾಗಿ. ಆರ್ಥಿಕವಾಗಿಯೂ ಸಾಮಾಜಿಕ ನೆಲೆಯಿಂದಲೂ, ಒಂದು ಸಾಮಾನ್ಯ ಕುಟುಂಬದಲ್ಲಿ ಹುಟ್ಟಿಯೂ ಪ್ರತಿಭಾಶಾಲಿಯಾಗಿ ಅಜರಾಮರ ಕೀರ್ತಿಯನ್ನು ಪಡೆದ. ತನ್ನ ಜೀವನ ಕಾಲದಲ್ಲಿ ಆ ಕಾಲದ ಕರ್ನಾಟಕ ಚಕ್ರವರ್ತಿಯಾಗಿದ್ದ ಚಾಳುಕ್ಯ ತೈಲಪನಿಂದ ಧನ ಕನಕ ವಸ್ತು ವಾಹನಾದಿಗಳನ್ನು ಪಡೆದ. ಅವನ ಆಸ್ಥಾನದಲ್ಲಿ ಹೆಸರಿಗೆ ತಕ್ಕಂತೆ ರತ್ನಪ್ರಾಯನಾದ ಪಂಡಿತನಾಗಿದ್ದ. ಇಳಿಮುಖವಾಗುತ್ತಿದ್ದ ಜೈನ ಧರ್ಮಕ್ಕೆ ಸೇರಿದ್ದ ಅವನು ಪಂಪ ಆದಿಪುರಾಣವನ್ನು ಬರೆದು ಜೈನಾಗಮವನ್ನು ಬೆಳಗಿದಂತೆ ಅಜಿತ ಪುರಾಣವನ್ನು ದಾನ ಚಿಂತಾಮಣಿ ಅತ್ತಿಮಬ್ಬೆಯ ನೆರವಿನಿಂದ ರಚಿಸಿದ.

ಜಗದೊಳಗಾದಿ ಪುರಾಣಂ  
ನೆಗಳ್ದುದುಮುಂ ಪಂಪನಿಂದೆ ಪೊನ್ನಿಗನಿಂದಂ  
ನೆಗಳ್ದುದು ಶಾಂತಿಪುರಾಣಂ  
ನೆಗಳ್ದುದು ಕವಿರತ್ನನಿಂದಮಜಿತಪುರಾಣಂ

ಎಂದು ಅವನೇ ಹೇಳಿಕೊಂಡಿದ್ದಾನೆ. ಅದಲ್ಲದೆ,

ಕವಿಜನದೊಳ್ ರತ್ನತ್ರಯ  
ಪವಿತ್ರಮೆನೆ ನೆಗಳ್ದ ಪಂಪನುಂ ಪೊನ್ನಿಗನುಂ  
ಕವಿರತ್ನಮುಮೀ ಮೂವರ್  
ಕವಿಗಳ್ ಜಿನಸಮಯ ದೀಪಕರ್ ಪೆಳರೊಳರೇ

ಎಂದು ತಾನು ಎಂತಹ ಪವಿತ್ರ ಕಾರ್ಯವನ್ನು ನಿರ್ವಹಿಸಿದೆ ಎಂದು ಹೆಮ್ಮೆ ಪಟ್ಟಿದ್ದಾನೆ. ಪಂಪನು ತನ್ನ ಪೋಷಕನಾದ ಸಾಮಂತ ಚೂಡಾಮಣಿಯಾದ ಚಾಳುಕ್ಯ ಎರಡನೇ ಅರಿಕೇಸರಿಯನ್ನು ಅರ್ಜುನನಿಗೆ ಸಮೀಕರಿಸಿ ವಿಕ್ರಮಾರ್ಜುನ ವಿಜಯವನ್ನು ಬರೆದಂತೆ, ಇವನು ತನ್ನ ಪೋಷಕ ಆಹವಮಲ್ಲ ತೈಲಪನ ಮಗ ಇರಿವಬೆಡಂಗ ಸತ್ಯಾಶ್ರಯನನ್ನು ಭೀಮನೊಡನೆ ಏಕೀಭವಿಸಿ ಸಾಹಸ ಭೀಮ ವಿಜಯವನ್ನು ಬರೆದು ಲೌಕಿಕವನ್ನು ಬೆಳಗಿದ. ತನ್ನ ಪೋಷಕನಾದವನು ಚಾಳುಕ್ಯ ಚಕ್ರವರ್ತಿ. ಆದುದರಿಂದ ಪಂಪನಿಗಿಂತ ತಾನು ಒಂದು ಹೆಜ್ಜೆ ಮುಂದಿದ್ದೇನೆಂಬ ಹೆಮ್ಮೆ ರನ್ನನದು. ಅದರಿಂದಲೇ,

ಪಡೆಯೆಡೆಯ ಕಡೆಯ ಬಡವರ  
ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್  
ಪಡೆದಂ ಮಹಿಮೋನ್ನತಿಯಂ  
ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ  
(ಗ. ಯು. ೧-೩೭)

ಎಂದು ಬೀಗುತ್ತಾನೆ. "ಪರಶುರಾಮ ಚರಿತ", ಚಕ್ರೇಶ್ವರ ಚರಿತ" ಎಂಬೆರಡು ಗ್ರಂಥಗಳನ್ನು ಬರೆದು ಅವುಗಳನ್ನು ಕ್ರಮವಾಗಿ ತನ್ನ ಮಗನ ಮತ್ತು ಮಗಳ ಹೆಸರಿಗೆ ಅಂಕಿತಗೊಳಿಸಿದ್ದನೆಂದು ಅವನ ಹೇಳಿಕೆಯಿಂದಲೇ ತಿಳಿದು ಬಂದರೂ ಆ ಗ್ರಂಥಗಳು ಸಿಕ್ಕಿಲ್ಲ. ಅವುಗಳ ಉಲ್ಲೇಖಗಳೂ ದೊರೆತಿಲ್ಲವೆಂಬುದರಿಂದ ಅವುಗಳ ಸ್ವರೂಪವೇನೆಂದು ತಿಳಿದಿಲ್ಲ.

ಇವನ ವೈಯಕ್ತಿಕ ಜೀವನ ವಿವರಣೆಯ ಬಗ್ಗೆ ಪಂಡಿತರು ಹೇಳುವ ಮಾತುಗಳನ್ನು ಹೀಗೆ ಸಂಗ್ರಹಿಸಬಹುದು.

೧) ತಂದೆ ತಾಯಿಯರು: ಜಿನವಲ್ಲಭಮತ್ತು ಅಬ್ಬಲಬ್ಬೆ  
೨) ಕುಲ: ಬಳೆಗಾರ  
೩) ಜನನ: ಕ್ರಿ. ಶ. ೯೪೯ ಸೌಮ್ಯ ಸಂವತ್ಸರ  
೪) ಸೋದರರು: ದೃಢಬಾಹು, ರೇಚಣ ಮತ್ತು ಮಾರಮಯ್ಯ  
೫) ಹೆಂಡತಿಯರು: ಶಾಂತಿ ಮತ್ತು ಜಕ್ಕಿ  
೬) ಮಕ್ಕಳು: ೧) ರಾಯ ಎಂಬಮಗ ಕ್ರಿ.ಶ. ೯೯೦ ವಿರೋಧಿ ಸಂವತ್ಸರ. ೨) ಅತ್ತಿಮಬ್ಬೆ ಎಂಬ ಮಗಳು ಕ್ರಿ. ಶ. ೯೯೪ ವಿಜಯ ಸಂವತ್ಸರ.  
೭) ಕೃತಿಗಳು: ೧) ಗದಾಯುದ್ಧ ಅಥವಾ ಸಾಹಸ ಭೀಮ ವಿಜಯ ಕ್ರಿ. ಶ.೯೮೨ ಚಿತ್ರಭಾನು ಸಂವತ್ಸರ. ೨) ಅಜಿತ ತೀರ್ಥಂಕರ ಪುರಾಣ ತಿಲಕಂ ಕ್ರಿ. ಶ. ೯೯೩ ವಿಜಯ ಸಂವತ್ಸರ.  
೮) ಮರಣ: ಸುಮಾರು ೧೦೨೦ ಕ್ರಿ. ಶ. ಎಂದು ಎಂ. ಎ. ರಾಮಾನುಜಯ್ಯಂಗಾರ್ ಊಹಿಸಿದ್ದಾರೆ. (ರನ್ನಕವಿ ಪ್ರಶಸ್ತಿ, ೧೯೭೮: ೭) ಚಕ್ರೇಶ್ವರ ಚರಿತೆ ಮತ್ತು ಪರಶುರಾಮ ಚರಿತೆಗಳನ್ನು ಯಾವಾಗ ಬರೆದನೆಂಬುದು ತಿಳಿಯುವುದಿಲ್ಲ.

ಕೃತಿ ರಚನೆಯ ಕ್ರಮಗಣನೆಯಲ್ಲೂ ಪಂಡಿತರೊಳಗೆ ಮತಭೇದವಿದೆ. ಗದಾಯುದ್ಧದ ರಚನೆಗಿಂತ ಮೊದಲೇ ಅಜಿತತೀರ್ಥಂಕರರ ಪುರಾಣದ ರಚನೆಯಾಗಿರಬಹುದು ಎಂದು ಆಂತರಿಕ ಕಾರಣಗಳಿಂದ ರಂ. ಶ್ರೀ. ಮುಗಳಿಯವರು "ಪ್ರತಿಭೆಯೊಡನೆ ಅವನು (ರನ್ನ) ನಡೆಸಿದ ಪ್ರಥಮ ಪ್ರಣಯಾವೇಶದ ಗುರುತೆಂಬಂತೆ ಈ ಕಾವ್ಯ ತೋರುತ್ತದೆ" ಎಂದು ಹೇಳಿದ್ದಾರೆ. (ಕನ್ನಡ ಸಾಹಿತ್ಯ ಚರಿತ್ರೆ, ೧೯೫೩–೧೦೭)

ಹುಟ್ಟೂರಿನಲ್ಲಿ ತನ್ನ ವಿದ್ಯೋನ್ನತಿಯನ್ನು ಸಾಧಿಸಲು ಅವಕಾಶವಿಲ್ಲದ ರನ್ನ ಊರೂರು ಅಲೆಯಬೇಕಾಯಿತು. ಮೊದಲು ಸಾಮಂತರಿಂದ ಸ್ವಲ್ಪ ಸ್ವಲ್ಪವೇ ಉದಿತೋದಿತನಾಗಿ ಕೊನೆಗೆ ಚಕ್ರವರ್ತಿಯಿಂದ ಉದಯ ಪರಂಪರೆಯನ್ನೈದಿದುದಾಗಿ ತಾನೇ ಗದಾಯುದ್ಧದ ೧-೩೪ನೇ ಪದ್ಯದಲ್ಲಿ ಹೇಳಿಕೊಂಡಿದ್ದಾನೆ. ಗಂಗರಾಜ್ಯಕ್ಕೆ ಹೋಗಿ ಗಂಗರ ಮಂತ್ರಿಯಾದ, ಶ್ರವಣಬೆಳ್ಗೊಳದಲ್ಲಿ ಗೊಮ್ಮಟನ ಮೂರ್ತಿಯನ್ನು ಆಶ್ರಯಿಸಿ ಸಂಸ್ಕೃತ, ಕನ್ನಡ ಮತ್ತು ಪ್ರಾಕೃತ ಭಾಷೆಗಳನ್ನು ಅಭ್ಯಾಸ ಮಾಡಿದ. ಸಂಸ್ಕೃತದ ಪ್ರಸಿದ್ಧ ಕವಿಗಳಾದ ಕಾಳಿದಾಸ, ಬಾಣ ಮುಂತಾದವರ ಕೃತಿಗಳ ಅಭ್ಯಾಸ ಮಾಡಿಕೊಂಡ. ಕನ್ನಡದ ಪಂಪ, ಪೊನ್ನರ ಕೃತಿಗಳನ್ನೂ ಅಧ್ಯಯನ ಮಾಡಿದನು. ಚಾವುಂಡರಾಯನ ಗುರುಗಳಾದ ಅಜಿತಸೇನಾಚಾರ್ಯರಿಂದ ಜೈನಮತ ವಿಚಾರವನ್ನು ತಿಳಿದುಕೊಂಡನು. (ರಾಮಾನುಜಯ್ಯಂಗಾರ್, ರನ್ನ ಕವಿ ಪ್ರಶಸ್ತಿ ೧೯೭೮:೪). ದಾನಚಿಂತಾಮಣಿಯಾದ ಅತ್ತಿಮಬ್ಬೆಯ ಆಶ್ರಯದಲ್ಲಿ, ಅಜಿತ ಪುರಾಣವನ್ನು ಬರೆದ ಆಹವಮಲ್ಲ ತೈಲಪನ ಮಗ ಇರಿವಬೆಡಂಗ ಸತ್ಯಾಶ್ರಯನ ಸಾಹಸಾತಿಶಯಗಳನ್ನು ವರ್ಣಿಸುವ ಸಾಹಸ ಭೀಮ ವಿಜಯವನ್ನು ಬರೆದು, ಕವಿಚಕ್ರವರ್ತಿಯೆಂಬ ಬಿರುದನ್ನು ಪಡೆದ. ಇವನು ಶ್ರವಣಬೆಳ್ಗೊಳಕ್ಕೆ ಬಂದುದರ ಕುರುಹಾಗಿ, ಚಿಕ್ಕ ಬೆಟ್ಟದಲ್ಲಿ ಪಾರ್ಶ್ವನಾಥ ಬಸದಿಯ ಬಲಗಡೆಯ ಪಂಡೆಯ ಮೇಲೆ "ಶ್ರೀ ಕವಿರತ್ನ" ಎಂದು ಅವನ ಹೆಸರು ಕೆತ್ತಿದೆ. (ಶ್ರ. ಬೆ. ಶಾಸನ ೪೩, ಎಪಿಗ್ರಾಫಿಯಾ ಕರ್ನಾಟಿಕಾ, ಸಂ. ೨, ಮೈಸೂರು ವಿ. ವಿ. ೧೯೭೩).

## ರನ್ನನ ಕಾಲದ ಕನ್ನಡ ಸಾಹಿತ್ಯ

ಕನ್ನಡದ ಆದಿ ಗ್ರಂಥವಾದ ಕವಿರಾಜಮಾರ್ಗದ ರಚನೆಯಾಗುವ ಹಿಂದೆಯೇ, ಕನ್ನಡದಲ್ಲಿ ಸಾಹಿತ್ಯ ಚಟುವಟಿಕೆಗಳು ಆರಂಭಗೊಂಡಿದ್ದುವೆಂದು ಆ ಗ್ರಂಥದ ಹೇಳಿಕೆಗಳಿಂದಲೇ ತಿಳಿಯುತ್ತದೆ. ನಾಡವರು ಕುರಿತೋದದೆಯೂ ಪರಿಣತಮತಿಗಳಾಗಿದ್ದರು. (ಕ. ರಾ. ಮಾ. ೧-೩೮). ಕಾವ್ಯ ದೋಷಗಳನ್ನು ಕಂಡರೆ ಬಿಡದೆ ಜಡಿದು ಕೆಡುನುಡಿಯುತ್ತಿದ್ದರು. (ಕ. ರಾ. ಮಾ. ೧-೪೦), "ಗದ್ಯ ಪದ್ಯಾಶ್ರಮ ಗುರುತಾಪ್ರತೀತಿ"ಯನ್ನು ಕೈಗೊಂಡಿದ್ದ ಆಚಾರ್ಯ ಪುರುಷರಿದ್ದರು (ಕ. ರಾ. ಮಾ. ೧-೨೮). ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ತಾಣಮುಂ, ನಗೆಯೇ ಪ್ರಧಾನವಾಗಿದ್ದ ದುಷ್ಕರ ಕಾವ್ಯಗಳೂ ಇದ್ದುವು ಎಂಬ ವಿಚಾರಗಳು ತಿಳಿದು ಬಂದರೂ, ಇಂತಹ ಯಾವ ಕಾವ್ಯಗಳೂ ನಮಗಿಂದು ಉಳಿದಿಲ್ಲ. ಇದಕ್ಕಿಂತ ಹಿಂದೆ ಇದ್ದ, ಕವಿರಾಜಮಾರ್ಗಕಾರ ಕರೆದಿರುವ ಪಳಗನ್ನಡದ ಸ್ವರೂಪವನ್ನರಿಯಲು ನಮಗೀಗ ದೊರೆಯುವ ಸಾಧನ ಕ್ರಿ. ಶ. ೪೨೫ಕ್ಕೆ ಸೇರಿದ ಮೊತ್ತಮೊದಲ ಕನ್ನಡ ಶಾಸನ ಹಾಗೂ ಅನಂತರ ದೊರೆಯುವ ಶಾಸನಗಳು. ಆದಿ ಪಂಪನಿಗಿಂತ ಹಿಂದಿನವಾಗಿ ದೊರೆಯುವ ಕೃತಿಗಳು ಎರಡೇ: ಕವಿರಾಜಮಾರ್ಗ ಮತ್ತು ಶಿವಕೋಟ್ಯಾಚಾರ್ಯನಿಂದ ರಚಿತವಾದ ಜೈನ ಧರ್ಮ ಪ್ರತಿಪಾದಕವಾದ ಹತ್ತೊಂಬತ್ತು ಕಥೆಗಳಿರುವ, ವಡ್ಡಾರಾಧನೆಯೆಂಬ ಗದ್ಯಗ್ರಂಥ. ಪಂಪನ ಆದಿಪುರಾಣವೂ ವಿಕ್ರಮಾರ್ಜುನ ವಿಜಯವೂ ರಚಿತವಾದ ಮೇಲೆ ಅದಕ್ಕಿಂತ ಹಿಂದಣ ಕಾವ್ಯಗಳೆಲ್ಲ ಮಸುಳಿದುವು, ನಶಿಸಿದುವು ಎಂದು ಹೇಳಲಾಗುತ್ತದೆ. ಪಂಪನೇ ತನ್ನ ಕಾವ್ಯಗಳು "ಮುನ್ನಿನ ಕಬ್ಬಮನೆಲ್ಲ ಇಕ್ಕಿ ಮೆಟ್ಟಿದುವು" ಎಂದು ಹೇಳಿಕೊಂಡ ಮಾತು ಮತ್ತು ಅದಕ್ಕಿಂತ ಹಿಂದಣ ಕಾವ್ಯ ಯಾವುದೂ ಬೆಳಕಿಗೆ ಬಾರದಿರುವುದೂ ಈ ಮಾತಿಗೆ ಬೆಂಬಲವಾಗಿದೆ. ಪಂಪನ ಎರಡು ಕೃತಿಗಳೂ ಪೊನ್ನನ ಎರಡು ಕೃತಿಗಳೂ ರನ್ನನಿಗೆ ಸ್ಪಷ್ಟವಾಗಿ ದೊರೆಕಿರಬಹುದಾದವುಗಳು ಎಂಬುದನ್ನು ಈ ಇಬ್ಬರು ಕವಿಗಳನ್ನು ಕುರಿತು ಅವನು ಹೇಳಿಕೊಳ್ಳುವ ಮಾತುಗಳು ವಿಶದೀಕರಿಸುತ್ತವೆ. ಪಂಪನಿಗಿಂತ ಹಿಂದಣ ಕೃತಿಗಳು ಅವನಿಗೆ ಲಭ್ಯವಾಗಿದ್ದಿರಬಹುದು. ಕಾರಣ, ಅವು ಒಮ್ಮಿಂದೊಮ್ಮೆ ಅಂದರೆ ಪಂಪನ ಈ ಕೃತಿಗಳನ್ನು ರಚಿಸಿದೊಡನೆ ಕಣ್ಮರೆಯಾಗಿದ್ದಿರಲಾರವು ಎಂಬುದರಿಂದ. ಮೊದಲನೆಯ ನಾಗವರ್ಮ ಸರಿಸುಮಾರಾಗಿ ರನ್ನನ ಸಮಕಾಲೀನನಾಗಿದ್ದು, "ಕರ್ನಾಟಕ ಕಾದಂಬರಿ"ಯೆಂದು ಬಾಣನ ಸಂಸ್ಕೃತ ಕಾದಂಬರಿಯ ಸಂಗ್ರಹಾನುವಾದವನ್ನು ಚಂಪೂ ರೂಪದಲ್ಲಿ ಮಾಡಿದ್ದ. ಆದರೆ ರನ್ನ ಗೌರವಿಸುವುದು ಪಂಪ ಮತ್ತು ಪೊನ್ನ ಇಬ್ಬರನ್ನೇ. ಅದೂ, ಅವರು ಜಿನಸಮಯದೀಪಕರಾದುದರಿಂದ ಮಾತ್ರ ಅವನಿಗೆ ಮಾನ್ಯರು. ಆದರೆ ಅವರ ವೈದಿಕ ರೀತಿಯ ಲೌಕಿಕ ಕಾವ್ಯಗಳನ್ನು ಅವನು ಲೆಕ್ಕಿಸುವುದಿಲ್ಲ. ಕಾವ್ಯ ಧರ್ಮದಲ್ಲಿ ಪಂಪನ ಆದಿ ಪುರಾಣಕ್ಕೆ ಪೊನ್ನನ ಶಾಂತಿ ಪುರಾಣವಾಗಲೀ ರನ್ನನ ಅಜಿತ ಪುರಾಣವಾಗಲಿ ಹೆಗಲೆಣೆಯಾಗಲಾರದು ಎಂದಿದ್ದರೂ, ಮೂವರು ಕವಿಗಳು (ಪಂಪ, ಪೊನ್ನ ಮತ್ತು ರನ್ನ) ಮಾತ್ರ ಜಿನ ಸಮಯ ದೀಪಕರು, ಬೇರಿದ್ದಾರೆಯೇ? ಎಂಬುದು ಉಳಿದಿಬ್ಬರೊಡನೆ ತನ್ನ ಸಮಾನಸ್ಕಂಧತೆಯನ್ನು ಹೇಳುವ ಹೆಮ್ಮೆಯ ಮಾತು. ಆದರೆ ನಿಜವಾಗಿ, ಅವನಿಗೆ ಪಂಪನೊಡನೆ ಕಾವ್ಯ ಧರ್ಮದಲ್ಲಿ ಸಮಾನಸ್ಕಂಧತೆ ಬರುವುದು ಅವನ ಲೌಕಿಕ ಕಾವ್ಯವಾದ ಸಾಹಸ ಭೀಮ ವಿಜಯದಿಂದ ಹೊರತು ಅಜಿತ ಪುರಾಣವೆಂಬ ಜಿನಾಗಮದಿಂದಲ್ಲ ಎಂಬುದನ್ನು ಪಂಡಿತರು ಬಲ್ಲರು. ಜೈನ ಕವಿಗಳನ್ನು ವೈದಿಕ ಅರಸರು ಪೋಷಿಸಿದರು. ಕವಿಗಳು ಮತದಿಂದ ತಾವು ಜೈನರಾದರೂ ವೈದಿಕ ಪುರಾಣಗಳನ್ನು ಲೌಕಿಕ ಕಾವ್ಯವನ್ನಾಗಿಸಿ ತಮ್ಮ ಪೋಷಕರ ಮೇಲಣ ಗೌರವದಿಂದ ಬರೆದರು. ಒಂದು ಜೈನ ಪುರಾಣ, ಮತ್ತೊಂದು ವೈದಿಕ ರೀತಿಯ ಲೌಕಿಕ ಕಾವ್ಯ ಬರೆಯುವ ಸಂಪ್ರದಾಯ ಪಂಪನಿಂದ ಕನ್ನಡದಲ್ಲಿ ಸ್ಥಿರವಾಯಿತು. ಅವನಿಗಿಂತ ಹಿಂದೆಯೇ ರಾಜಕೀಯ ಧ್ವನಿಯುಕ್ತ ಕಾವ್ಯಗಳ ರಚನೆ ಗುಣವರ್ಮ (ಮೊದಲನೆಯ) ತಳಹದಿಯನ್ನು ಹಾಕಿರಬಹುದೆಂದು ರಂ. ಶ್ರೀ. ಮುಗಳಿಯವರು ಗಮನಿಸಿದ್ದಾರೆ. (ಕನ್ನಡ ಸಾಹಿತ್ಯ ಚರಿತ್ರೆ ೧೯೫೩:೫೦).

ಆ ಕಾಲದಲ್ಲಿ ಕನ್ನಡದಲ್ಲಿ ಈಗಿರುವಷ್ಟು ವಿಪುಲ ಕೃತಿಗಳು ಇದ್ದಿರಲಾರವು. ಕನ್ನಡ ಕವಿಗಳು ಮಾತ್ರವಲ್ಲ, ಶಾಸ್ತ್ರಕಾರರೂ, ಸಂಸ್ಕೃತವನ್ನೇ ಮಾದರಿಯನ್ನಾಗಿಟ್ಟುಕೊಂಡರು. ಪಂಪರನ್ನಾದಿಗಳೂ ಸಾಹಿತ್ಯದಲ್ಲಿ ಹಾಗೂ ಭಾಷೆಯಲ್ಲಿ ಸಂಸ್ಕೃತದ ಅನುಕರಣೆ ಮಾಡಿದ್ದಾರೆಂಬುದು ಅವರ ಕೃತಿಗಳಲ್ಲಿ ಗೋಚರಿಸುತ್ತದೆ. ರನ್ನ ಕವಿ ಜೈನನಾಗಿದ್ದರೂ, ಸಂಸ್ಕೃತದ ವೈದಿಕ ಸಾಹಿತ್ಯವನ್ನೂ, ಕವಿಗಳನ್ನೂ ಮೆಚ್ಚಿಕೊಂಡಿದ್ದಾನೆ. ವ್ಯಾಸನನ್ನೂ, ವಾಲ್ಮೀಕಿಯನ್ನೂ ಅಭಿನಂದಿಸುವಲ್ಲಿ "ವ್ಯಾಸರ್" "ವಾಲ್ಮೀಕಿಗಳ್" ಎಂದು ಗೌರವ ಸೂಚಕವಾಗಿ ಬಹುವಚನ ಪ್ರಯೋಗ ಮಾಡಿದ್ದಾನೆ. (ಗ. ಯು. ೧-೮). ಕಾಳಿದಾಸ ಮತ್ತು ಬಾಣರನ್ನು "ಕಾಳಿದಾಸನುಂ, ಬಾಣನುಂ" ಎಂದು (ಗ. ಯು. ೧-೯) ಏಕವಚನ ಪ್ರಯೋಗದಿಂದ ಕರೆದಿರುವಲ್ಲಿ ಅವನು ಸಂಸ್ಕೃತ ಕವಿಗಳಲ್ಲಿ ಗೌರವದ ಶ್ರೇಣಿಯನ್ನು ತೋರಿಸುವುದು ವ್ಯಕ್ತವಾಗುತ್ತದೆ.

## ರನ್ನನ ಕಾಲದ ಸಾಹಿತ್ಯದ ಬಗ್ಗೆ ಆಗಿನವರ ಪ್ರತಿಕ್ರಿಯೆಗಳು

ಇಂದಿನಂತೆ ಅಂದೂ ಹಳೆಯದೆಲ್ಲ ಶ್ರೇಷ್ಠ, ಹೊಸದು ಚೆನ್ನಾಗಿಲ್ಲ ಎಂಬ ಅಭಿಪ್ರಾಯ ಬೇರೂರಿತ್ತು. ಅದಕ್ಕೆ ಉತ್ತರ

ವಾಗಿ ರನ್ನ, "ಕವಿಗಳಲ್ಲಿ ಪುರಾಣ ಕವಿಪುಂಗವರೇ ಶ್ರೇಷ್ಠರು. ಈಗ ಸತ್ಕವಿಗಳಿಲ್ಲ ಎನ್ನಬೇಡ. ಅವರು ಹೋದರೂ ಅವರ ಕೃತಿಗಳು ಇನ್ನೂ ಇವೆಯಲ್ಲ. ಗುಣದೋಷಗಳನ್ನು ಒರೆಗೆ ಹಚ್ಚಿ ನೋಡಿದರೆ ಅವುಗಳೇ ಹೇಳುವುದಿಲ್ಲವೆ? ಆದುದರಿಂದ ವಿದ್ವಾಂಸರು ಪುರಾತನ ನೂತನ ಕಾವ್ಯರೇಖೆಯನ್ನು ಪರೀಕ್ಷಿಸಿ ನೋಡಬೇಕು" (ಗ. ಯು. ೧-೪೭) ಎಂದು ಹೇಳುತ್ತಾನೆ. ಪುರಾಣ ಕವಿಗಳಲ್ಲಿ ಪಂಪನ ಶ್ರೇಷ್ಠತೆಯನ್ನು ರನ್ನನೇ ಹೊಗಳಿದ್ದಾನೆ. ಬಹುಶಃ ಆ ಕಾಲದ ಪಂಡಿತರಲ್ಲಿ ಪಂಪನ ಶ್ರೇಷ್ಠತೆಯ ಮಾತುಗಳೇ ನೆಲೆಗೊಂಡಿದ್ದವೆಂದು ಕಾಣುತ್ತದೆ. ಆ ಕಾರಣವಾಗಿ ಮೇಲಿನ ಮಾತನ್ನು ಆಂತರಿಕವಾಗಿ ಇವನು ಕೆರಳಿ ನುಡಿದಂತಿದೆ. ತನಗೆ ಕವಿಚಕ್ರವರ್ತಿಯೆಂದು ಬಿರುದು ಕೊಟ್ಟುದು ತೈಲಪ ಎಂದು ಕೇಶಿಯನ್ನು "ವನರುಹಭವನೆನಿಸಿದ" ಎಂದು ಬ್ರಹ್ಮನಿಗೆ ಅಂದರೆ ಹಿಂದೂ ಪುರಾಣದ ರೀತಿಯಲ್ಲಿ ಸರಸ್ವತಿಯ ವಲ್ಲಭನಿಗೆ ಸರಿಯೆಂದು ಹೋಲಿಸಿದ್ದಾನೆ. ರನ್ನನಿಂದಲೂ ವ್ಯಕ್ತ ಗೌರವಕ್ಕೆ ಭಾಜನನಾದ ಈತ ದಂಡನಾಯಕನಾಗಿಯೂ, ಕಾವ್ಯಾಸಕ್ತ ಹಾಗೂ ರನ್ನನ ಕೃತಿಯನ್ನು ತಿದ್ದುವಷ್ಟರ ಮಟ್ಟಿಗೆ ಸಮರ್ಥನೆಂದಾಗ, ನಿಜವಾಗಿ ಅವನು ದೊಡ್ಡ ಪಂಡಿತನ್ನಾಗಿದ್ದಿರಬೇಕೆಂಬುದರಲ್ಲಿ ಸಂಶಯವಿಲ್ಲ. ಸಾಹಿತ್ಯಾರಾಧನೆಯು ಕೇವಲ ಪಂಡಿತೋದ್ಯೋಗದವರ ಹಕ್ಕಿನ ಸೊತ್ತಲ್ಲ. ದಂಡನಾಯಕರೇ ಮುಂತಾದ ಬೇರೆ ಉದ್ಯೋಗದಲ್ಲಿದ್ದವರೂ ಈ ಚಟುವಟಿಕೆಗಳಲ್ಲಿ ತಲ್ಲೀನರಾಗಿದ್ದರು ಎಂದು ತಿಳಿಯುತ್ತದೆ. ತಮ್ಮ ದೋಷವನ್ನು ಏನು ಮಾಡಿದರೂ ತಾವೇ ಕಾಣಲಾರರು. ಕಣ್ಣುಗಳು ತಮ್ಮ ಕಾಡಿಗೆಯನ್ನು ತಾವೇ ಕಾಣಲಾರವು. (ಅದಕ್ಕೆ ಬೇರೆ ಕಣ್ಣುಗಳು ಇಲ್ಲವೇ ಕನ್ನಡಿ ಬೇಕಾಗುತ್ತದೆ) ಆದುದರಿಂದ ಜಾಣರಿಂದ ಕಾವ್ಯವನ್ನು ಓದಿಸಿ ಹೇಳಬೇಕೆಂದು ಕವಿರಾಜಮಾರ್ಗಕಾರ ಮಾಡಿದ ಸಲಹೆಯನ್ನು (ಕ. ರಾ. ಮಾ. ೧-೪೫) ರನ್ನ ಮಾಡಿಸಿದ್ದಾನೆಂದು ಮೆಚ್ಚತಕ್ಕ ವಿಷಯ.

### ರನ್ನನ ಮೇಲೆ ಇತರ ಕವಿಗಳ ಪ್ರಭಾವಗಳು

ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ರನ್ನ ಸಂಸ್ಕೃತ ಮತ್ತು ಕನ್ನಡ ಕವಿಗಳಿಂದ ಪ್ರಭಾವಿತನಾಗಿದ್ದಾನೆಂಬುದು ಸ್ಪಷ್ಟವಾಗಿ ಅವನ ಕಾವ್ಯಗಳಿಂದ ಗೊತ್ತಾಗುತ್ತದೆ. ಸಿಂಹಾವಲೋಕನ ಕ್ರಮದಿಂದ ಭಾರತದ ಕಥೆಯೆಲ್ಲವನ್ನೂ ಹೇಳುವಲ್ಲಿ ಭವಭೂತಿಯ ಉತ್ತರ ರಾಮ ಚರಿತ್ರ, ಪಿಶಾಚಿಗಳ ನಡವಳಿಕೆಯ ವರ್ಣನೆಯಲ್ಲಿ ಮಾಲತೀ ಮಾಧವರ ಸ್ಮಶಾನ ವರ್ಣನೆಯ ಪ್ರಸಂಗ, ಲಕ್ಷ್ಮೀ ವಿಡಂಬನೆಯಲ್ಲಿ ಬಾಣನ ಕಾದಂಬರಿ ಮತ್ತು ಗದಾಯುದ್ಧದ ವಿವಿಧ ಕಡೆಗಳಲ್ಲಿ ಭಟ್ಟ ನಾರಾಯಣನ ವೇಣೀ ಸಂಹಾರ ನಾಟಕದ ಪದ್ಯಗಳ ಅನುವಾದ, ಮುಂತಾದುವು ಕಾಣುತ್ತವೆ. (ರನ್ನ ಕವಿ ಪ್ರಶಸ್ತಿ, ೧೯೭೮-೪೩). ರನ್ನ ತನ್ನ ಗದಾಯುದ್ಧ ಕಾವ್ಯವನ್ನು ನಾಟಕ ಸಂವಿಧಾನದಲ್ಲಿ ಅಳವಡಿಸುವುದಕ್ಕೆ ಅವನು ಸಂಸ್ಕೃತ ನಾಟಕಗಳನ್ನು ಬಹಳವಾಗಿ ಮೆಚ್ಚಿಕೊಂಡಿರುವುದೇ ಕಾರಣವಾಗಿರಬೇಕು.

ಒಂದು ಜೈನ ಪುರಾಣ ಮತ್ತೊಂದು ವೈದಿಕ ರೀತಿಗು ಲೌಕಿಕ ಕಾವ್ಯವನ್ನು ಬರೆಯುವಲ್ಲಿ ಪಂಪನ ಮೇಲ್ಪಂಕ್ತಿಯಲ್ಲಿ ರನ್ನ ಸಂಪೂರ್ಣವಾಗಿ ಅನುಸರಿಸಿದ್ದಾನೆ. ಚಕ್ರವರ್ತಿ ಪಡೆಯಡೆಯ ಕಡೆಯ ಬಡವರು ಕೊಟ್ಟುದಲ್ಲ ಎಂದು ಹೇಳವಲ್ಲಿ ಸಾಮಂತ ಅರಸನಿಂದ ಪೋಷಿತನಾದ ಪಂಪ ಮತ್ತು ಚಕ್ರವರ್ತಿಯಿಂದ ಮಾನ್ಯನಾದ ತಾನು ಎಂಬ ದ್ವಂದ್ವದ ಹಿನ್ನೆಲೆಯಿದೆಯೆಂದು ಭಾಸವಾಗುತ್ತದೆ. ಮೊದಲು ಸಾಮಂತರಿಂದ ಇನಿಸಿನಿಸುಮುದಿತವಾಗಿ ಮೇಲೇರಿದ ರನ್ನ ಬೇಗ ತನ್ನ ಹಿನ್ನೆಲೆಯನ್ನು ಮರೆತು ಬಿಡಲು ಬಹುಶಃ ಈ ಹುರುಸಿನಿಂದ ತಾಳ್ಮೆ ತಪ್ಪಿದ್ದು ಕಾರಣವಿರಬೇಕು.

ಅಂದು ಎಂತಹ ಕೃತಿಯಾದರೂ ಪಂಡಿತರಿಂದ ಮಾನ್ಯತೆ ಪಡೆಯಬೇಕಾಗಿತ್ತು. ಪಂಡಿತರಾದರೋ ಪುರಾಣ ಕವಿಗಳನ್ನೇ ಹೊಗಳುವರು. ಏನೋ ಅಲ್ಪ ಸ್ವಲ್ಪ ಪ್ರತಿಭೆ, ಜಾಣ್ಮೆ ಕಿರಿದೋದುಗಳು ಇರಬಹುದು. ಅಂಥವರು ಕಾವ್ಯವನ್ನು ಸರಿಯಾಗಿ ಕೇಳದೆ, ಓದದೆ, ಅಧ್ಯಯನ ಮಾಡದೆ ಸರಸ್ವತಿ ವರ ಕೊಟ್ಟಂತೆ ಬೀಗಿ ನಡೆಯುವ ವಿಮರ್ಶಕರು. ಅವರು ತಾವಾಗಿ ಏನನ್ನೂ ಬರೆಯಲು ಅಸಮರ್ಥರು (ಗ. ಯು. ೧-೫೦) ಎಂದು ನೊಂದು ನುಡಿಯುತ್ತಾರೆ. ಗುಣವನ್ನು ಸಜ್ಜನ ಹೇಳುತ್ತಾನೆ. ದುರ್ಜನ ದೋಷಗಳನ್ನೇ ಎಣಿಸುತ್ತಾನೆ. ಗುಣದೋಷಗಳನ್ನು ಸರಿಯಾಗಿ ತೂಗಿ ನೋಡಲಿ. ಯಾರು ಬೇಡವೆನ್ನುತ್ತಾರೆ? ಎಂದು (ಗ. ಯು. ೧-೪೮) ಹೇಳುವುದರಿಂದ ಆಗ ಕಾವ್ಯ ವಿಷಯದಲ್ಲಿ ವಿಪುಲ ಚರ್ಚೆಗಳು ನಡೆಯುತ್ತಿದ್ದುವು ಎಂದು ತಿಳಿಯುತ್ತದೆ. ವಾಕ್ಶ್ರೀಯುತರು ಮತ್ಸರಿಗಳಾಗಿರುವುದರಿಂದ, ಅವರು ಅಮತ್ಸರಿಗಳಾದರೆ ಕವಿಗಳು ಕೃತಾರ್ಥರಾಗುತ್ತಾರೆಂದು (ಗ. ಯು. ೧-೪೯) ಹೇಳುತ್ತಾನಾದರೂ, ತಾನೂ ಅದರಿಂದ ಹೊರತಲ್ಲವೆಂದು ಪಂಪನ ವಿಷಯದಲ್ಲಿ ಅವನು ನಡೆದುಕೊಂಡ ರೀತಿಯಿಂದ ಗೊತ್ತಾಗುತ್ತದೆ. ಕೃತಿರತ್ನ ಪರೀಕ್ಷಕನ ಎದೆ ನಡುಗಿಸುವಂತೆ ಆದಿ ಶೇಷನ ಹಣೆಯ ರತ್ನವನ್ನೂ ರನ್ನನ ಕೃತಿರತ್ನವನ್ನೂ ಪರೀಕ್ಷಿಸುತ್ತೇನೆಂಬುವವನಿಗೆ ಎಂಟೆದೆಯೇ? ಎಂದು ರನ್ನ (ಗ. ಯು. ೧-೪೪) ಗುಡುಗುತ್ತಾನೆ. (ಇದರ ಅರ್ಥ ಮಾಡುವಾಗ ಹೋಲಬುದಪ್ಪುವ ಸಂದರ್ಭವಿದೆ. ಎಂಟು ಎಂಬ ಸಂಖ್ಯಾವಾಚಕದೊಡನೆ ಸಂಬಂಧಿಸಿ "ಎಂಟು ಎದೆಗಳು" ಎಂದು ಮಾಡುವ ಅರ್ಥದಿಂದ, ನಿಜವಾಗಿ ಎಂಟು ಅಂದರೆ ಗರ್ವ, ಎಂಟೆರ್ದೆ ಅಂದರೆ ಗರ್ವದಿಂದ ಮಾಡಿದ ಹೃದಯ) ಎಂದು ಕಿಟ್ಟೆಲರು ಅರ್ಥ ಕೊಟ್ಟಿದ್ದಾರೆ.) ಅಂತೂ ರನ್ನ ತನ್ನ ಕಾಲದ ಪಂಡಿತ ವರ್ಗವನ್ನು ತಾತ್ಸಾರ ದೃಷ್ಟಿಯಿಂದಲೇ ನೋಡುತ್ತಾನಾದರೂ, ಆಗಲೂ ಒಬ್ಬ ಎಂಟೆದೆಯವನು ಅಥವಾ ಅದಕ್ಕಿಂತಲೂ ಮಿಗಿಲಾದ ವಿಮರ್ಶಕನೊಬ್ಬನಿದ್ದನೆಂಬುದೂ ಗಮನಿಸತಕ್ಕ ವಿಷಯ ಅವನೇ ದಂಡನಾಯಕನಾದ ಕೇಶಿ ಎಂಬುವನು. ಆ ವಿಷಯದಲ್ಲಿ

ವನರುಹಭವನೆನಿಸಿದಂ–
ಡನಾಯಕಂ ಕೇಶಿ ತಿರ್ದೆ ಪೇಳ್ದಂ ಕವಿ
ರನ್ನನ ಪೇಳ್ದ ಕೃತಿ ಯಶಶ್ರೀ
ವನಿತೆಯಲಂಕೃತಿಯೆನಿಪ್ಪುದೊಂದಚ್ಚರಿಯೇ

ಅವನಂತೆ ತಾನೂ ತನ್ನ ಪೋಷಕನನ್ನು ಭಾರತದ ಒಂದು ಪಾತ್ರದೊಡನೆ ಸಮಾವೇಶಗೊಳಿಸಿ ಸಾಹಸ ಭೀಮ ವಿಜಯವನ್ನು ಬರೆದ ರೀತಿಯಿಂದಲೇ ಪಂಪನ ಹೆಜ್ಜೆಯಿಂದಲೇ ಇವನೂ ನಡೆಯುತ್ತಿರುವುದು ಥಟ್ಟನೆ ಗೋಚರಿಸುತ್ತದೆ. ಭೀಮ ದುರ್ಯೋಧನರ ಗದಾಯುದ್ಧದ ಸಂದರ್ಭ, ಪಾತ್ರ ನಿರ್ದೇಶನ, ಸನ್ನಿವೇಶ ನಿರ್ಮಾಣ ಮುಂತಾದಲ್ಲಿ ರನ್ನ ಸಂಪೂರ್ಣವಾಗಿ ಪಂಪನನ್ನು ಅನುಸರಿಸಿದ್ದಾನೆ. ಆದರೆ ಅಂತರಂಗವನ್ನು ತಟ್ಟುವ ರಸೋತ್ಕರ್ಷತೆಯ ಸಾಧನೆ ರನ್ನನಿಗೆ ಸಿದ್ಧಿಸಿ, ಅವನು ಕೈಯಾಡಿಸಿದುದೆಲ್ಲ ಬಂಗಾರವಾಗಿ ಮಿಂಚುವಂತಾಗಿದೆ. ಅದರಲ್ಲಿ ಅವನ ಸ್ವಂತಿಕೆ ಉಜ್ವಲವಾಗಿದೆ. ಪಂಪ ಅರ್ಜುನನಿಗೊಬ್ಬನಿಗೇ ದ್ರೌಪದಿಯನ್ನು ಮದುವೆ ಮಾಡಿಸಿ, ಕೊನೆಯಲ್ಲಿ ಅವಳನ್ನು ಪಂಚವಲ್ಲಭೆಯೆಂದು ಕರೆಯ

ಬೇಕಾದ ನಿರ್ಬಂಧ, ಕೀಚಕ ವಧೆ, ದುಶ್ಶಾಸನ, ದುರ್ಯೋಧನ ವಧೆಗಳ ಸಂದರ್ಭಗಳಲ್ಲಿ ಅರ್ಜುನ ವಲ್ಲಭೆಯೆಂದು ಮೊದಲು ಹೇಳಿದ ದ್ರೌಪದಿಯನ್ನು ಭೀಮನ ತಳೋದರಿ ಯನ್ನಾಗಿಸಬೇಕಾದ ಪೇಚಾಟ, ಕೊನೆಯ ಸಂದರ್ಭದಲ್ಲಿ ಅರ್ಜುನನೊಡನೆ ಸುಭದ್ರೆ ಪಟ್ಟವೇರುವುದು, ಕುರುಕ್ಷೇತ್ರ ಯುದ್ಧಕ್ಕೆ ಕಾರಣೀಭೂತಳಾಗಿ ಸಕಲ ಕಷ್ಟಗಳನ್ನೂ ಅನು ಭವಿಸಿ ಸವೆದ ದ್ರೌಪದಿಯನ್ನು ತೆರೆಯ ಹಿಂದೆ ಸರಿಸುವ ಒಪ್ಪಲಾಗದ ಅಸಹಜ ತೀರ್ಪು ಮುಂತಾದುವುಗಳಲ್ಲಿ ಸಿಕ್ಕಿ ಕೊಂಡ. ಆದರೆ ರನ್ನ ಚೊಕ್ಕವಾಗಿ ಆಯ್ಕೆ ಮಾಡಿಕೊಂಡ ಸನ್ನಿ ವೇಶದಲ್ಲಿ ಇಂತಹ ಕುಂದು ಕೊರತೆಗಳು ನುಸುಳಲು ಎಡೆ ಯಿಲ್ಲ. ಹೀಗೆ ಕಥೆಯನ್ನಾಯ್ದುಕೊಳ್ಳುವುದರಲ್ಲಿಯೂ ರನ್ನ ಜಾಣ್ಮೆ ತೋರಿದ. ಆದುದರಿಂದ ಪಂಪನಿಂದ ಪ್ರಭಾವಿತನಾ ದರೂ ತನ್ನ ಸ್ವತಂತ್ರ ವ್ಯಕ್ತಿತ್ವವನ್ನು ಉಳಿಸಿಕೊಂಡ. ಇನ್ನು ಅವನ ಹಲವು ಪದ್ಯಗಳು ಇವನ ಕೈಯಲ್ಲಿ ಹೆಚ್ಚು ಹೊಳಪನ್ನು ಪಡೆದು ಶೋಭಿಸುವಂತಾಗಿದೆ. ಹೀಗಿದ್ದರೂ ಪಂಪನ ಬಗ್ಗೆ ರನ್ನ ಒಂದು ಮಾತನ್ನಾದರೂ ಅವನ ಗದಾ ಯುದ್ಧ ಕಾವ್ಯದಲ್ಲಿ ಎತ್ತುವುದಿಲ್ಲವೆಂಬುದು ಸೋಜಿಗದ ಮಾತಾಗಿದೆ. ನಾನೊಬ್ಬನೇ ವಾಗ್ದೇವಿಯ ಭಂಡಾರದ ಮುದ್ರೆ ಯನ್ನೊಡೆದವನೆಂಬ ಭಾವನೆಯಿಂದ ಅವನಿಗೆ ಇತರ ವಿಷಯ ಗಳಾವುವೂ ಗಣನೆಗೆ ಬರುವುದಿಲ್ಲ ಎಂದು ಕಾಣುತ್ತದೆ.

### ರನ್ನನ ಜೀವನ ದೃಷ್ಟಿ

ರನ್ನ ಕುಲದಲ್ಲಿಯೂ, ಐಶ್ವರ್ಯದಲ್ಲಿಯೂ ಅತ್ಯಂತ ಕೆಳಗಿನ ಸ್ಥಾನದಿಂದ ಮೇಲೇರಿ ಬಂದವನು. ಅವನು ಜೀವನ ದಲ್ಲಿ ಎಷ್ಟೋ ಕಹಿಯಾದ ಪ್ರಸಂಗಗಳನ್ನು ಎದುರಿಸಿರ ಬೇಕು. ಆದುದರಿಂದ ಅವನ ಮಾತು ಮೊನಚಾಗುತ್ತದೆ. ವಿಡಂ ಬನೆ ತೀಕ್ಷ್ಣವಾಗುತ್ತದೆ. ಹುಟ್ಟಿನಿಂದಲೇ ಉತ್ತಮ ಕುಲ ಮತ್ತು ಸಂಸ್ಕಾರಕ್ಕೆ ಸೇರಿದ ಪಂಪನ ಹಿತ ಮಿತ ಗಂಭೀರ ವಚನ ಇವನಲ್ಲಿ ಕಾಣುವುದಿಲ್ಲ. ರನ್ನನಲ್ಲಿ ಆತ್ಮಶ್ಲಾಘನೆ ತೀರ ಸಡಿಲವಾಗಿ ಹರಿಯುತ್ತದೆ. ಬಹುಶಃ ತನ್ನ ಅತಿದೀನ ಸ್ಥಿತಿಯಲ್ಲಿ ನೆರವಿತ್ತು ಪಾಲಿಸಿದವರ ಬಗ್ಗೆ ಅತೀವ ಗೌರವ ವಿದ್ದುದರಿಂದಲೇ ಅತ್ತಿಮಬ್ಬೆಯನ್ನು ಬಹಳವಾಗಿ ಹೊಗಳಿ ದ್ದಾನೆ. ತಾನು ಯಾರಿಂದ ಉಪಕೃತನಾದನೋ ಅಂಥವರ ಹೆಸ ರನ್ನೇ ತನ್ನ ಮಕ್ಕಳಿಗಿಟ್ಟಿದ್ದಾನೆ. ಮಗನನ್ನು ರಾಯನೆಂದು ಚಾವುಂಡರಾಯನ ಹೆಸರಿನಿಂದ ಕರೆದಿದ್ದಾನೆ.

ಅಜಿತ ಪುರಾಣದಲ್ಲಿ ವೈರಾಗ್ಯ ವರ್ಣನೆ ಸರಣಿಯಾಗಿ ಬರುತ್ತದೆ. ಅದು ಬಹುಶಃ ಎಲ್ಲ ಜೈನ ಕವಿಗಳೂ ಆ ಕಾವ್ಯದ ಕಥೆಗನುಸರಿಸಿ ಬರೆಯುವಂಥದಾದುದರಿಂದ, ಅದು ಅದನ್ನು ಬರೆದ ವ್ಯಕ್ತಿಯ ಸಹಜ ಮನಸ್ಥಿತಿಯನ್ನು ತೋರಿಸುತ್ತ ದೆಂದು ಹೇಳಲು ಸಾಧ್ಯವಿಲ್ಲ. ಆದರೆ ರನ್ನ ಮತ ವಿಷಯ ದಲ್ಲಿ ತುಂಬ ಅಭಿಮಾನಿಯಾಗಿರುವಂತೆ ಕಾಣುತ್ತದೆ. ವೈದಿಕ ರಾಜರ ಆಶ್ರಯ ಪಡೆದುದರಿಂದ, ಪಂಪನಂತೆ ಇವನಿಗೂ ವೈದಿಕ ರೀತಿಯ ಕಾವ್ಯ ಬರೆಯುವ ಅಗತ್ಯ ಬಂದು, ತನ್ನ ಅರಸನನ್ನು ತ್ರಿಮೂರ್ತಿಗಳಿಗೆ ಹೋಲಿಸುವ, ತನ್ನ ಅರಸನ ವಂಶಾವಳಿಯನ್ನು ಭೀಮಸೇನನ ವಂಶಾವಳಿ ಯೆಂಬಂತೆ ಕೊಡುವ ಅಸಹಜ ವರ್ಣನೆಯನ್ನೇ ಮಾಡು ವಂತಾಯಿತು. ಚಕ್ರವರ್ತಿ ಧನಕನಕ ವಸ್ತು ವಾಹನಾದಿ ಗಳನ್ನು ಕೊಟ್ಟಿದ್ದರಿಂದ ತಾತ್ಕಾಲಿಕವಾಗಿ ಸಂತೋಷ ಪಟ್ಟಿರ ಬಹುದು. ಆದರೂ, “ಒಡಲೂ, ಒಡವೆಯೆಂಬೆರಡೂ ಕೆಡಲಿರು ವಂಥವು. ಯಶಸ್ಸು ಮಾತ್ರ ಕೆಡವೆ ಇರುವ ಚಿನ್ನ. ಕೆಡುವ ಒಡಲನ್ನೂ, ಒಡವೆಯನ್ನೂ, ಎಂದೂ ಕೆಡದ ಒಡವೆಗೆ ಮಾರಿ ಕೊಳ್ಳಬೇಕು” ಎಂಬ ಮಾತನ್ನು ದ್ರೌಪದಿಯ ಮೂಲಕ ಭೀಮ ಸೇನನಿಗೆ (ಇರಿವಬೆಡಂಗ ಸತ್ಯಾಶ್ರಯನಿಗೆ) ಹೇಳಿಸಿದ್ದಾನೆ. (ಗ. ಯು. ೨-೪) ಅದರಂತೆ ತನ್ನನ್ನು ಚಕ್ರವರ್ತಿಯ ಅನ್ನದ ಹಂಗಿಗೆ ಮಾರಿಕೊಂಡರೂ, ಅದರಿಂದ ಎಂದೂ ಕೆಡದ ಒಡವೆಯಾದ ಯಶಸ್ಸನ್ನು ಪಡೆದು ಅಮರನಾಗಿದ್ದಾನೆ.

# ಜನ್ನ

ಡಾ. ಎಂ. ಡಿ. ವಸಂತರಾಜ

ವಿಶ್ವ ಮಾನ್ಯತೆಯ ಸಾಹಿತ್ಯದ ಪುರಸ್ಕಾರ ಪಡೆದಿರುವ ದೇಶಗಳ ಪೈಕಿ ಭಾರತಕ್ಕೆ ಅಗ್ರಗಣ್ಯ ಸ್ಥಾನವಿದೆ. ಭಾರತೀಯ ಸಾಹಿತ್ಯ ಅತ್ಯಂತ ಪ್ರಾಚೀನವಾದದ್ದು ಎಂಬುದಷ್ಟೇ ಅಲ್ಲ. ಪ್ರತಿಭಾವಂತರ, ಪಂಡಿತರ, ವಿಮರ್ಶಕರ ದೃಷ್ಟಿಯಲ್ಲಿ "ಶ್ರೇಷ್ಠ" ಎಂಬ ಸನ್ಮಾನವನ್ನೂ ಪಡೆದಿರುವಂತಹದು. ಹೀಗೆ ಪ್ರಾಚೀನವೂ ಉದಾತ್ತವೂ ಆದ ಸಾಹಿತ್ಯ ಗೌರವಕ್ಕೆ ಭಾಜನವಾಗಿರುವ ಭಾರತದ ಕೇವಲ ಕೆಲವೇ ನೆಲೆಗಳಲ್ಲಿ ಕರ್ನಾಟಕಕ್ಕೆ ಗಣ್ಯ ಸ್ಥಾನವಿದೆ. ಕನ್ನಡ ವಿಶ್ವದ ಸಾಹಿತ್ಯ ಮೂಲೆಯಲ್ಲಿ ಕನ್ನಡಕ್ಕೆ ಸ್ಥಾನ ಗಳಿಸಿಕೊಟ್ಟಿರುವ ಕೃತಿಗಳಲ್ಲಿ ಪಂಪ ಕವಿಯ ಕೃತಿಗಳಿಗೆ ಅಗ್ರ ಮಾನ್ಯತೆಯಿದೆ. ಪಂಪನ ಅನಂತರ ಕನ್ನಡದ ಪ್ರಾಚೀನ ಜೈನ ಕವಿಗಳನ್ನು ಗಣನೆ ಮಾಡುವಲ್ಲಿ ರನ್ನ ಮತ್ತು ಜನ್ನರಿಗೆ ಆದ್ಯತೆ ದೊರೆಯುತ್ತದೆ.

ಭಾರತೀಯ ಪ್ರಾಚೀನ ಕಾವ್ಯ ಲಕ್ಷಣ ನಿರೂಪಣೆಯಲ್ಲಿ ಕಂಡು ಬರುವಂತೆ "ಕಾಂತಾಸಂಮಿತ"ದ ಮೃದು ಮಧುರ ಮಾರ್ಗದಿಂದ, ಧರ್ಮ, ಅಧರ್ಮ, ನೀತಿ, ಅನೀತಿ, ಒಳಿತು. ಕೆಡುಕುಗಳ ನಿರೂಪಣೆಯ ಮೂಲಕ ಮಾನವ ಜೀವನದಲ್ಲಿ ಹಿತಸಾಧನೆಯನ್ನು ಬೋಧಿಸುವುದು ಕಾವ್ಯ ರಚನೆಯ ಮುಖ್ಯ ಉದ್ದೇಶದಲ್ಲಿ ಒಂದು. ಜೈನ ಧರ್ಮೀಯರಿಗೆ ಕಾವ್ಯ ರಚನೆಯ ಈ ಉದ್ದೇಶ ಹೊರತಾಗಿಲ್ಲವೆಂಬುದು ನಿಜವಾದರೂ ಧರ್ಮ ಪ್ರರೂಪಣೆಯನ್ನು ಇವರು ಕಾವ್ಯ ರಚನೆಯ ಪ್ರಧಾನ ಮತ್ತು ಶ್ರೇಷ್ಠ ಉದ್ದೇಶವಾಗಿ ಮಾನ್ಯ ಮಾಡಿದ್ದಾರೆ.

ಪೂರ್ವಾಚಾರ್ಯರ ಮಾರ್ಗದರ್ಶನವನ್ನು ಆದರದಿಂದ ಅನುಸರಿಸಿರುವ ಜೈನ ಕನ್ನಡ ಕವಿಗಳಿಗೂ ಧರ್ಮ ಪ್ರತಿಪಾದನೆಯೇ ಕಾವ್ಯ ರಚನೆಯ ಮೂಲ ಉದ್ದೇಶವಾಗಿದೆ.

ಶ್ರಾವಕರು ನೋಂಪಿ ವ್ರತಾಚರಣೆಯ ಅಂಗವಾಗಿ ನೋಂಪಿ ಕಥಾಶ್ರವಣ ಮಾಡಬೇಕೆಂಬ ವಿಧಿಯಿದೆ. ಜನ್ನ ಕವಿಯ ಕಾಲದಲ್ಲಿ ಶ್ರಾವಕರು ನೋಂಪಿ ವ್ರತಾಚರಣೆಯನ್ನು ಕೈಗೊಂಡು ವಿಧಿ ಪೂರ್ವಕ ನೋಂಪಿ ಕಥಾಶ್ರವಣ ಮಾಡುತ್ತಿದ್ದರು. ಜೀವ ದಯಾಷ್ಟಮಿ ನೋಂಪಿ ವ್ರತಾಚರಣೆ ನಡೆಸುತ್ತಿದ್ದ ಶ್ರಾವಕ ಜನರ ಪ್ರೇರಣೆಯಿಂದ ಯಶೋಧರ ಕಾವ್ಯದ ರಚನೆ ಮಾಡಿದ ಜನ್ನ ಕವಿಗೆ ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಒಂದು ಶ್ರೇಷ್ಠ ಸ್ಥಾನವಿದೆ.

ಈಗ ಉಪಲಬ್ಧವಿರುವಂತೆ ಜೀವ ದಯಾಷ್ಟಮಿ ನೋಂಪಿಯ ಕಥೆಯು ಯಶೋಧರ ಕಾವ್ಯದ ಸಾರ ಸಂಗ್ರಹದಂತಿದೆ. ಜನ್ನನ ಕಾಲದಲ್ಲಿ ರಚನೆ, ಶೈಲಿಗಳ ದೃಷ್ಟಿಯಿಂದ ಈ ಕಥೆ ಹೇಗಿದ್ದಿತೆಂಬುದನ್ನು ಹೇಳಲಾಗದಿದ್ದರೂ ಕಾವ್ಯ ರಚನೆ ಮಾಡುವಲ್ಲಿ ಜನ್ನ ಈ ಕಥೆಗೆ ಋಣಿಯಾಗಿದ್ದಾನೆಂಬುದು ಮಾತ್ರ ನಿಶ್ಚಿತ.

ಜೀವಹಿಂಸೆಯಾಗದಂತೆ ಮನುಷ್ಯ ಬದುಕಲು ಸಾಧ್ಯವೇ ಇಲ್ಲ. "ಜಲದಲ್ಲಿ ಜಂತು, ಸ್ಥಲದಲ್ಲಿ ಜಂತು, ಆಕಾಶದಲ್ಲಿ ಜಂತು, ಹೀಗೆ ಜಂತು ಮಾಲೆಯಿಂದ ಆವೃತವಾಗಿರುವ ಲೋಕದಲ್ಲಿ ಅಹಿಂಸಕವಾಗಿರುವುದಾದರೂ ಹೇಗೆ?" ಎಂಬ ಪ್ರಶ್ನೆಯಿದೆ. ಈ ಪ್ರಶ್ನೆಗೆ, ಅತ್ಯಂತ ಸೂಕ್ಷ್ಮವಾದ ಜೀವಿಗಳು ಪೀಡಿಸಲ್ಪಡುವುದೇ ಇಲ್ಲ. ಇನ್ನೆಲ್ಲ ಸ್ಥೂಲಜೀವಿಗಳಲ್ಲಿ ಯಾವ ಜೀವಿಗಳನ್ನು ರಕ್ಷಿಸಬಹುದೋ ಅವುಗಳನ್ನು ಯತ್ನಪೂರ್ವಕ ರಕ್ಷಿಸಲಾಗುವುದು. ಇದೇ ಅಹಿಂಸೆ. ಎಂಬ ಉತ್ತರವಿದೆ. ಇಲ್ಲಿ "ಯತ್ನಪೂರ್ವಕ" ಎಂಬುದಕ್ಕೆ ವಿಶೇಷ ಅರ್ಥವಿದೆ. ಕ್ರೋಧ ಮಾನ ಮಾಯಾ ಲೋಭ ಕಷಾಯವಶನಾಗಿ ಯಾವುದೇ ಜೀವಿಯ ಬಗ್ಗೆಯಾಗಲಿ ಹಿಂಸ್ರ ಭಾವವನ್ನು ತಳೆಯುವುದೇ ಹಿಂಸೆಯಾಗಿದೆ. ಹಿಟ್ಟಿನ ಕೋಳಿಯನ್ನು ಬಲಿ ಕೊಡುವಲ್ಲಿ ಇರುವ "ಹಿಂಸೆ"ಯೂ ಇದೇ. ಇಂತಹ ಹಿಂಸ್ರ ಭಾವ, ಅಸಂಯತ ಚಿತ್ತ ಪ್ರವೃತ್ತಿಯು ಮನುಷ್ಯನನ್ನು ದುರ್ಗತಿಗೊಯ್ಯುತ್ತದೆ. ದುಃಖಭಾಗಿಯನ್ನಾಗಿ ಮಾಡುತ್ತದೆ. ಆದರೆ ಹಿಂಸಾ ಪ್ರವೃತ್ತಿಯನ್ನು ತ್ಯಜಿಸಿ "ಅಹಿಂಸೆ"ಯನ್ನು ಪಾಲಿಸಿದಲ್ಲಿ ಸದ್ಗತಿ ದೊರೆಯುತ್ತದೆ. ಸುಖ ಸಿದ್ಧಿಯಾಗುತ್ತದೆ ಎಂಬ ಧರ್ಮಬೋಧೆ ಯಶೋಧರ ಕಾವ್ಯದ ಮೂಲ ಉದ್ದೇಶವಾಗಿದೆ. ಈ ಉದ್ದೇಶದ ಸಾರ್ಥಕ ಸಿದ್ಧಿಗಾಗಿ ಧರ್ಮಬೋಧೆಯನ್ನು ರಸವತ್ತಾದ ಕಾವ್ಯದಲ್ಲಿ ಧಾರೆಯಾಗಿ ಹರಿಸಲಾಗಿದೆ.

ಬದುಕಿನಲ್ಲಿ ಮಾನವ ಅನುಭವಿಸಿದ ಸುಖ, ದುಃಖ ಮತ್ತು ಅವನ ನಾನಾ ಮುಖದ ಚಿತ್ತ ವೃತ್ತಿಯನ್ನು ಚಿತ್ರಿಸುವದು ಕಾವ್ಯದ ಒಂದು ಮುಖ್ಯ ಧರ್ಮವಾಗಿದೆ. ಇಲ್ಲಿ ಜೀವ ಸ್ಪಂದನದ, ಸ್ವತಂತ್ರ ವ್ಯಕ್ತಿತ್ವದ ಪಾತ್ರಗಳು ಮೂಡಿ ನಿಲ್ಲುತ್ತವೆ. ಇಲ್ಲಿ ರಸಭಾವಗಳ ಮೇಳ ನಡೆಯುತ್ತದೆ. ಈ ಮೇಳಕ್ಕೆ ಶಬ್ದಾಲಂಕಾರ, ಅರ್ಥಾಲಂಕರಾಗಳು ಇಲ್ಲಿ ಕಳೆಯೇರಿಸುತ್ತವೆ. ಕಾವ್ಯದ ಹಿರಿಮೆ ಗರಿಮೆಯನ್ನು ನಿರ್ಣಯಿಸುವಲ್ಲಿ

ಇದು ಒಂದು ಮುಖ್ಯ ಸಾಧನವಾಗಿದೆ. ಈ ದೃಷ್ಟಿಯಿಂದ ಪರ್ಯಾಲೋಚನೆ ಮಾಡುವಲ್ಲಿ ಜನ್ನನ ಯಶೋಧರ ಕಾವ್ಯ ವಿಶ್ವದ ಉತ್ತಮ ಕಾವ್ಯಗಳ ಸಾಲಿನಲ್ಲಿ ನಿಲ್ಲುತ್ತದೆ.

ಜನ್ನನ ಮತ್ತೊಂದು ಪ್ರಸಿದ್ಧ ಕಾವ್ಯ ಅನಂತನಾಥ ಚರಿತೆ. ಇದೊಂದು ಚಂಪೂಕಾವ್ಯ. ಪ್ರೌಢಕಾವ್ಯ. ಮಹಾಕಾವ್ಯದ ಸರ್ವಲಕ್ಷಣಗಳೂ ಇದರಲ್ಲಿವೆ. ಜೈನರ ಪರಮಾರಾಧ್ಯರಾದ ಇಪ್ಪತ್ತನಾಲ್ಕು ತೀರ್ಥಂಕರರಲ್ಲಿ ಹದಿನಾಲ್ಕನೆಯವನು ಅನಂತನಾಥ. ಸಂಸ್ಕೃತ ಮಹಾಪುರಾಣದ ಗುಣಭದ್ರಾಚಾರ್ಯ ವಿರಚಿತ ಉತ್ತರ ಪುರಾಣದಲ್ಲಿ ಅರುವತ್ತನೇ ಪರ್ವದಲ್ಲಿ ಅನಂತನಾಥ ತೀರ್ಥಂಕರನ ಚರಿತೆಯನ್ನು ನಲವತ್ತೆಂಟು ಪದ್ಯಗಳಲ್ಲಿ ಹೇಳಿದೆ. ಮತ್ತೆ ಮುಂದೆ ಮುಪ್ಪತ್ತೇಳು ಪದ್ಯಗಳಲ್ಲಿ ಜೈನ ಆಮ್ನಾಯಾನುಸಾರದ, ಬಲದೇವ, ವಾಸುದೇವ ಮತ್ತು ಪ್ರತಿವಾಸುದೇವರ ಒಂಭತ್ತು ಸಾಲುಗಳಲ್ಲಿ ನಾಲ್ಕನೆಯ ಸಾಲಿಗೆ ಸೇರಿದ ಸುಪ್ರಭ, ಪುರುಷೋತ್ತಮ ಮತ್ತು ಮಧುಸೂದನರೆಂಬ ಬಲದೇವ, ವಾಸುದೇವ ಮತ್ತು ಪ್ರತಿವಾಸುದೇವರ ಕಥೆಯನ್ನು ಹೇಳಿದೆ. ಇದನ್ನೇ ಜನ್ನ ಹದಿನಾಲ್ಕು ಆಶ್ವಾಸಗಳಲ್ಲಿ ಹಿಗ್ಗಿಸಿ ಮಹತ್‌ಕಾವ್ಯದ ಭಾರ ತುಂಬಿ, ಪದ್ಯಗದ್ಯಮಿಶ್ರಿತ ಚಂಪೂಕಾವ್ಯಧಾರೆಯಲ್ಲಿ ಹರಿಸಿದ್ದಾನೆ. ಜನ್ನನೇ ಹೇಳುವಂತೆ ಅವನ ಕಾಲಕ್ಕೆ ಗುಣವರ್ಮ, ಪಂಪ, ಪೊನ್ನ, ನಾಗವರ್ಮ, ರನ್ನ, ನಾಗಚಂದ್ರ, ಅಗ್ಗಳ, ನೇಮಿ, ಮತ್ತು ಪುಷ್ಪಬಾಣರು, ಜಿನೇಂದ್ರ ಪುರಾಣ ಕರ್ತೃಗಳೆಂಬ ಮಾನ್ಯತೆ ಹೊಂದಿದ್ದರು. ಜನ್ನನ ಅಭಿಮತದಲ್ಲಿ ತೀರ್ಥಂಕರನ ಚರಿತೆಯನ್ನು ವಸ್ತುವಾಗಿಸಿ ಕಾವ್ಯ ರಚನೆ ಮಾಡಿದ ಕವಿಗಳು ಜಿನೇಂದ್ರ ಪುರಾಣ ಕರ್ತೃಗಳು. ತ್ರಿಷಷ್ಟಿ ಶಲಾಕಾ ಪುರುಷ ಚರಿತ್ರೆಯನ್ನು ರಚಿಸಿದ ಚಾವುಂಡರಾಯನನ್ನು "ಜಿನೇಂದ್ರ ಪುರಾಣ ಕರ್ತೃ" ಎಂದು ಗಣನೆ ಮಾಡದಿರುವುದನ್ನು ಪ್ರಕೃತದಲ್ಲಿ ಗಮನಿಸಬೇಕಾಗಿದೆ. ಇಂತಹ ಜಿನೇಂದ್ರ ಪುರಾಣ ಕರ್ತೃಗಳ ಪಂಕ್ತಿಯಲ್ಲಿ ಶ್ರೇಯಸ್ಸಿನ ಯಶಸ್ಕರ ಸ್ಥಾನ ಪಡೆಯುವ ಮಹದಭಿಲಾಷೆ ಈ ಕಾವ್ಯ ರಚನೆಗೆ ಪ್ರೇರಕವಾಗಿದೆ. ಇಷ್ಟಲ್ಲದೆ ಅನಂತನಾಥ ನೋಂಪಿ ವ್ರತಾಚರಣೆ ನಡೆಸುತ್ತಿದ್ದ ವಿನೇಯ ಜನರ ಕೋರಿಕೆಯೂ ಈ ಕಾವ್ಯದ ರಚನೆಗೆ ಮುಖ್ಯ ಕಾರಣಗಳಲ್ಲೊಂದಾಗಿದೆ. ಇದರಿಂದ ಶ್ರೇಯಸ್ಸಾಧನೆಯ ಧರ್ಮ ನಿರೂಪಣೆಯೇ ಈ ಕಾವ್ಯದ ಪರಮೋದ್ದೇಶವಾಗಿದೆಯೆಂಬುದು ಸ್ಪಷ್ಟವಾಗುವುದು.

ತೀರ್ಥಂಕರನ ಚರಿತೆಯೆಂದರೆ ಪ್ರಧಾನವಾಗಿ ಪೂರ್ವಭವಗಳ ಕಥನ ಮತ್ತು ಪಂಚ ಕಲ್ಯಾಣ ವರ್ಣನೆ. ಇಲ್ಲಿ ಕವಿಯು ಪರಂಪರಾಗತವಾಗಿ ಸಾಂಪ್ರದಾಯಿಕತೆಗೆ ಕಟ್ಟು ಬೀಳುವನಾದ್ದರಿಂದ ಅವನ ಪ್ರತಿಭೆಯ ಅಭಿವ್ಯಕ್ತಿಗೆ ಹೆಚ್ಚು ಅವಕಾಶವಿರುವುದಿಲ್ಲ. ಇಂತಹ ಸನ್ನಿವೇಶದಲ್ಲಿ ಕವಿ ಪಾಂಡಿತ್ಯ ಪ್ರದರ್ಶನದ ಜಾಡು ಹಿಡಿಯುತ್ತಾನೆ. ಅನಂತನಾಥ ಪುರಾಣದ ಮುಖ್ಯ ದೋಷವೆಂದರೆ ಕವಿಯ ಈ ಪಾಂಡಿತ್ಯ ಪ್ರದರ್ಶನ. ಇಷ್ಟಾದರೂ ಕವಿಯು ಅನೇಕ ನೂತನ ಸನ್ನಿವೇಶಗಳನ್ನು ಕಲ್ಪಿಸಿ ವಿಭಾವಾನುಭಾವಾದಿ ಭಾವತರಂಗಗಳನ್ನೂ ನಾನಾ ರಸಗಳೂ ಸಹೃದಯರಲ್ಲಿ ಉದಯಿಸುವಂತೆ ಈ ಕಾವ್ಯವನ್ನು ರಚಿಸಿರುವನು ಎಂಬ ಹಾಗೂ "ಜನ್ನನ ಹಿರಿಮೆ ಅವನು ಪ್ರಯೋಗಿಸಿರುವ ಸಮಯೋಚಿತವಾದ ಅರ್ಥಪೂರ್ಣವಾದ ಮನೋಜ್ಞವಾದ ಅಸಂಖ್ಯಾತ ಉಪಮೆಗಳಲ್ಲಿದೆ. ಅಂತಹುದೇ ಕೆಲವು ರೂಪಕ ದೃಷ್ಟಾಂತಗಳಲ್ಲಿದೆ" ಎಂಬ ಸಹೃದಯ ವಿಮರ್ಶಕ ವಿದ್ವಾಂಸರ ಅಭಿಪ್ರಾಯವು ಕಾವ್ಯದ ಹಿರಿಮೆಯನ್ನು ತೋರುತ್ತದೆ.

ಅನಂತನಾಥ ಪುರಾಣದಲ್ಲಿ ಚಂಡಶಾಸನ, ಸುನಂದೆ ಮತ್ತು ವಸುಷೇಣರ ಕಥಾಭಾಗದಲ್ಲಿ ಜನ್ನನ ನಿಜ ಪ್ರತಿಭೆ ಅಭಿವ್ಯಕ್ತವಾಗಿದೆ. ಇಲ್ಲಿ ಶೃಂಗಾರ, ವೀರ, ರೌದ್ರ, ಕರುಣ ಮುಂತಾದ ರಸವಾಹಿನಿಗಳಿವೆ. ಯಶೋಧರ ಚರಿತೆಯಲ್ಲಿ ಹೆಣ್ಣಿನ ವಿಕೃತ ಕಾಮದ ದುರಂತ ಪರಿಣಾಮದ ಚಿತ್ರಣವಿದೆಯಾದರೆ ಅನಂತನಾಥ ಪುರಾಣದ ಈ ಚಂಡ ಶಾಸನ ಉಪಾಖ್ಯಾನದಲ್ಲಿ ಗಂಡಿನ ಮೇರೆ ತಪ್ಪಿದ ಕಾಮದ ಕಥೆಯಿದೆ. ಸುನಂದೆಯ ಪಾತ್ರ ರಚನೆಯಲ್ಲಿ ಭಾರತ ದೇಶದ ಆದರ್ಶ ನಾರಿಯ ಪಾತಿವ್ರತ್ಯದ ಮನೋಜ್ಞ ಚಿತ್ರಣವಿದೆ. ವಸುಷೇಣನದು ವಿಧಿವಿಲಸನದ ಕಥೆಯಾಗಿದೆ. ಎಲ್ಲವೂ ಕರುಣೆಯ ಕಥೆಯಾಗಿ ಸಹೃದಯನ ಮನಸ್ಸನ್ನು ಸೆರೆ ಹಿಡಿಯುತ್ತದೆ. ಕವಿ ಪ್ರತಿಭೆಗೆ ಇದು ಸಾಕ್ಷಿಯಾಗಿದೆ.

"ಕನ್ನಡ ನಾಡು ಕಲೆಗಳ ಬೀಡು" ಎಂಬ ಪ್ರಶಸ್ತಿಯ ಪೂರ್ಣತೆಯ ಸಿದ್ಧಿ ಪಡೆದ ಪರಿಸರದ ಸಮೃದ್ಧಿ ಸಂಸ್ಕೃತಿಯ ಕಾಲದಲ್ಲಿ ಜನ್ನ ಕವಿ ಬದುಕಿದ್ದ.

ಜನ್ನ ಹುಟ್ಟಿದ್ದು, ಬೆಳೆದದ್ದು, ನಲಿದದ್ದು ಎಲ್ಲಿ ಎಂಬುದು ಆತನ ಕೃತಿಗಳಿಂದ ತಿಳಿಯುವುದಿಲ್ಲ. ಅವನದು ಹಿರಿಯ ಮನೆತನ. ತಂದೆ ದೊಡ್ಡ ವಿದ್ವಾಂಸ, "ಕವಿಸುಮನೋಬಾಣ" ಎಂಬ ಬಿರುದು ಪಡೆದಿದ್ದ ಶಂಕರ.

ಜನ್ನನ ತಾಯಿ ಗಂಗಾದೇವಿ. ಹೆಂಡತಿ ಲಕುಮಾದೇವಿ. "ರಾಯ ದಂಡಾಧಿನಾಥ ಕೃತಾಂತಂ ಪೆಸರ್ವೆತ್ತ ಜಾಣನ ಪೆತ್ತಂ ರೇಚಯಂ ಪೆತ್ತ ಕುಲಸ್ತ್ರೀ" ಅವನು ಕವಿಗಳ ಬಳಗದಲ್ಲೇ ಬೆಳೆದ. ಸೂಕ್ತಿ ಸುಧಾರ್ಣವವನ್ನು ಬರೆದ ಪ್ರಸಿದ್ಧನಾದ ಮಲ್ಲಿಕಾರ್ಜುನ ಎಂಬುವನು ಜನ್ನನ ಸೋದರಿಯ ಗಂಡ. ಜನ್ನನ ಸೋದರಳಿಯನೇ "ಶಬ್ದಮಣಿದರ್ಪಣ"ವನ್ನು ಬರೆದ ಪ್ರಸಿದ್ಧ ಕೇಶಿರಾಜ. "ಹೀಗೆ, ಜನ್ನನ ಮನೆತನದವರೇ ಅಲ್ಲದೆ ಅವರ ಬೀಗರ ಬಳಗದವರು ಕೂಡ ದೊಡ್ಡ ಪದವಿಯವರೂ ಪಂಡಿತರೂ ಕವಿಗಳೂ ಆಗಿದ್ದರು" ಎಂದು ಕೆ. ವಿ. ರಾಘವಾಚಾರ್ಯರು ಹೇಳಿದ್ದಾರೆ. ಜನ್ನನ ಸ್ವಾಭಾವಿಕ ಪ್ರತಿಭೆಯೂ ಕವಿತೆಯೂ ಹೊಮ್ಮಿ ಅರಳುವುದಕ್ಕೆ ಈ ವಿದ್ವತ್ ಪೂರ್ಣವಾದ ವಾತಾವರಣ ಬಹಳ ನೆರವಾಗಿರಬೇಕು. ಆದಿ ಪಂಪನಂತೆ ಸರ್ವಾಂಕಷವಾದ ಮತ್ತು ಪ್ರಫುಲ್ಲವಾದ ವ್ಯಕ್ತಿತ್ವವುಳ್ಳವನು "ಜನ್ನ". "ಹೊಯ್ಸಳ ನರಸಿಂಹನ ಓಲಗದಲ್ಲಿ ನಿಂದಿರಲು ದಂಡಾಧೀಶ, ಕುಳ್ಳಿರಲು ಮಂತ್ರಿ, ಬರೆಯ ತೊಡಗಲು ಕವಿ ಆದನೆಂದು ಅವನೇ ಹೇಳಿದ್ದಾನೆ. ಆತನಿಗೆ ಕವಿಚಕ್ರವರ್ತಿ ಎಂಬ ಬಿರುದನ್ನು ಕೊಟ್ಟವನು ದೊರೆ. ಚತುರ್ವಿಧ ಪಂಡಿತ ಎಂದು ತನ್ನನ್ನು ಹೊಗಳಿಕೊಂಡಿದ್ದಾನೆ. ತಾನು ದಾನಶೂರ ಎಂದೂ ಅವನ ಹಮ್ಮು. ಅವನು ಹಲವು ಜೈನ ಮಂದಿರಗಳನ್ನು ಕಟ್ಟಿಸಿದ. ಬಿಟ್ಟಿದೇವ ವಿಷ್ಣುವರ್ಧನನಾಗಿ ಮತ ಪರಿವರ್ತನೆ ಹೊಂದಿದ ಬಳಿಕ ಜೈನ ಧರ್ಮಕ್ಕೆ ಆಘಾತವುಂಟಾಯಿತೆಂದು ಹೇಳುವುದುಂಟು. ಆದರೆ ವಿಷ್ಣುವರ್ಧನನ ಮಗ ನರಸಿಂಹ ಮತ್ತು ಅವನ ಮಗ ವೀರ ಬಲ್ಲಾಳರನ್ನು ಕುರಿತು ಜೈನ ಕವಿ ಜನ್ನನು ಹೇಳಿರುವ ಸಂಗತಿ ಹಾಗೂ ಅವನು ತನ್ನ ಬಗ್ಗೆಯೇ ಹೇಳಿಕೊಂಡಿರುವ ಸಂಗತಿಗಳು ಜೈನ ಧರ್ಮಕ್ಕೆ ಅಂತಹ ಆಘಾತವುಂಟಾಯಿತೆಂಬುದನ್ನು ಪುಷ್ಟೀಕರಿಸುವುದಿಲ್ಲವೆಂಬುದನ್ನಷ್ಟೇ ಅಲ್ಲ, ತದ್ವಿರುದ್ಧವಾಗಿ ಜೈನ ನಗ್ನ ಮುನಿಗಳು, ಧರ್ಮನಿಷ್ಠ ಶ್ರಾವಕರು ನಿರಾತಂಕವಾಗಿ ಧಾರ್ಮಿಕ ಕ್ರಿಯಾ ಕಲಾಪಗಳನ್ನು ನಡೆಸಿಕೊಂಡು ಶಾಂತಿ, ಸಂತೃಪ್ತಿಯಿಂದಿದ್ದರೆಂದು

ಸೂಚಿತವಾಗುವುದು. ಜನ್ನನು ತನ್ನ ಪಾಂಡಿತ್ಯ ಮತ್ತು ಕವಿತಾ ಸಾಮರ್ಥ್ಯವನ್ನು ದಿನದಿನಕ್ಕೆ ಹೇಗೆ ಬೆಳೆಸಿಕೊಂಡನೆಂಬುದಕ್ಕೆ ಅವನಿಂದ ರಚಿತವಾಗಿರುವ ಶಾಸನ ಸಾಹಿತ್ಯ ಮತ್ತು ಕಾವ್ಯಗಳು ಸಾಕ್ಷಿಯಾಗಿವೆ. ಅವನು ತನ್ನ ಬಗ್ಗೆ ಹೇಳಿಕೊಂಡಿರುವ ಕೆಲವು ಮಾತುಗಳು ಎಲ್ಲೆ ಮೀರಿದ ಆತ್ಮ ಪ್ರಶಂಸೆಯ ಮಾತುಗಳೆಂದು ಕಂಡು ಬರುವುದು ನಿಜ. ಇಷ್ಟಾದರೂ ಎಲ್ಲವೂ ಜಂಭದ ಮಾತುಗಳೆಂದೇನೂ ಹೇಳಲಾಗುವುದಿಲ್ಲ. ಈತನ ಕವಿತಾಶಕ್ತಿಯ ವಿಚಾರವಾಗಿ ವಿದ್ವಾಂಸರು, ವಿಮರ್ಶಕರು, ಪಂಡಿತರು ಹೇಳಿರುವ ಮೆಚ್ಚುಗೆಯ, ಪ್ರಶಂಸೆಯ ನುಡಿಗಳನ್ನೂ ಪ್ರಕೃತದಲ್ಲಿ ನೆನಪಿನಲ್ಲಿಡಬೇಕು. ಎಚ್. ಎಂ. ಶಂಕರ ನಾರಾಯಣ ರಾವ್ ಅವರು ಈ ಕವಿಯ ಬಗ್ಗೆ ಹೇಳಿರುವ ಮುಂದಿನ ಮಾತು ಪ್ರಕೃತದಲ್ಲಿ ಮನನೀಯವಾಗಿದೆ. ಕನ್ನಡ ಸಾಹಿತ್ಯದಲ್ಲಿ ಜನ್ನನು ತೇಜಸ್ವಿಯಾದ ವ್ಯಕ್ತಿ. ಪೂರ್ವಾರ್ಜಿತ ಪುಣ್ಯ, ಅದೃಷ್ಟ ಅವನಲ್ಲಿ ಮೇಳೈಸಿದ್ದ ಕಾರಣ ಒಳ್ಳೆಯ ಕುಲದಲ್ಲಿ ಹುಟ್ಟಿ, ಸದ್ಗುರುಗಳನ್ನು ಆಶ್ರಯಿಸಿ, ಉತ್ತಮವಾಗಿ ವಿದ್ಯೆ ಪಾಂಡಿತ್ಯ ಸಂಸ್ಕಾರಗಳನ್ನು ಪಡೆದು, ಪ್ರತಿಭೆ ಕವಿತಾ ಶಕ್ತಿ, ಪರಾಕ್ರಮಗಳಿಂದ ರಾಜಸ್ಥಾನದಲ್ಲಿ ಪ್ರತಿಷ್ಠೆ ಪಡೆದು, ಸತ್ಕಾವ್ಯಗಳನ್ನು ರಚಿಸಿ, ತಾನು ಗಳಿಸಿದ ದ್ರವ್ಯಕ್ಕೆ ದಾನ ಧರ್ಮಾದಿಗಳನ್ನು ಮಾಡಿ ತುಂಬು ಜೀವನವನ್ನು ನಡೆಸಿ ಕೀರ್ತಿಶಾಲಿಯಾದವನು. ಸಾಹಿತ್ಯದಲ್ಲಿ ಈ ತರನಾದ ವ್ಯಕ್ತಿಗಳು ದೊರಕುವುದು ಅಪೂರ್ವ. ಮಧುರನು ಇವನನ್ನು ಕರ್ನಾಟ ಕೃತಿಗೆ ಸೀಮಾಪುರುಷನೆಂದು ಹೊಗಳಿದ್ದಾನೆ.

# ಕವಿ ಹರಿಹರ ದೇವ

ಸ. ಸ. ಮಾಳವಾಡ

ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗುವ ಪೂರ್ವದಲ್ಲಿ ಹಂಪೆ ಒಂದು ಪವಿತ್ರ ಕ್ಷೇತ್ರವಾಗಿತ್ತು. ಅಲ್ಲಿ ಒಂದು ವಿದ್ಯಾಪೀಠವಿತ್ತು. ಹರಿಹರದೇವ ಆ ವಿದ್ಯಾಪೀಠದ ಕುಲಪತಿಯಾಗಿದ್ದ. ಆತನು ಉಜ್ವಲ ಪಂಡಿತ, ಅನ್ಯಾದೃಶ ಶಿವಭಕ್ತ, ಮಹಾಕವಿ. ನಿಷ್ಠುರ ಬ್ರಹ್ಮಚರ್ಯ, ನಿಸ್ಪೃಹತೆ, ಶಿವಯೋಗ ಸಾಧನೆಗಳಿಂದಾಗಿ ಆತನು ತೇಜಃಪುಂಜನಾಗಿ ಶೋಭಿಸುತ್ತಿದ್ದ.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಒಂದು ನೂರಿಪ್ಪತ್ತೈದು ವರುಷಗಳ ಪೂರ್ವದಲ್ಲಿಯೇ ಹರಿಹರ ಹಂಪೆಯಲ್ಲಿ ನೆಲಸಿದ್ದ. ಅಲ್ಲಿ ತನ್ನ ತಪಸ್ಸು, ವಿದ್ಯಾದಾನ, ಕಾವ್ಯ ರಚನೆ, ಉದಾತ್ತ ವ್ಯಕ್ತಿತ್ವಗಳಿಂದಾಗಿ ಪ್ರಭಾವ ಬೀರಿದ. ತನ್ಮೂಲಕ ಆತನು ಸಾಮ್ರಾಜ್ಯ ಸ್ಥಾಪನೆಯ ದಿಸೆಯಲ್ಲಿ ಕ್ಷೇತ್ರ ಶುದ್ಧಿಯ ಕಾರ್ಯವನ್ನು ನಿರ್ವಹಿಸಿದಂತಾಯಿತು.

ಪಂಪಾವಿರೂಪಾಕ್ಷನನ್ನು ಕುರಿತ ತನ್ನ ಅನನ್ಯ ಭಕ್ತಿಯಿಂದಾಗಿ ಹರಿಹರ ಆತ್ಮಾನಂದ ಪಡೆದುಕೊಂಡ. ಇತರ ಭಕ್ತರಿಗೆ ಉತ್ಸಾಹ ಆನಂದಗಳನ್ನು ಒದಗಿಸಿದ. ವಿರೂಪಾಕ್ಷ ದೇವಾಲಯದಲ್ಲಿ ನಿತ್ಯವೂ ಪ್ರವಚನ ನಡೆಯಿಸಿ ಜನ ಮನಕ್ಕೆ ಉತ್ತಮ ಸಂಸ್ಕಾರವನ್ನು ತಂದುಕೊಟ್ಟ. ಹರಿಹರ ಮತ್ತು ಆತನ ಶಿಷ್ಯ, ಸೋದರಳಿಯ ರಾಘವಾಂಕರು ತಮ್ಮ ಕಾವ್ಯಗಳಲ್ಲಿ ಪಂಪಾ ಕ್ಷೇತ್ರವನ್ನು, ವಿರೂಪಾಕ್ಷನನ್ನು ಬಗೆಬಗೆಯಾಗಿ ಬಣ್ಣಿಸಿದ್ದಾರೆ. ಆ ಸ್ತೋತ್ರ, ಪ್ರಾರ್ಥನೆಗಳು ಕನ್ನಡ ಭಕ್ತಿಗೀತೆಗಳ ಬೆಳವಣಿಗೆಗೆ ಪ್ರೇರಣೆಯನ್ನೊದಗಿಸಿದವು.

ಹರಿಹರ ಕವಿಯ ಕಾವ್ಯರಚನೆ ಕನ್ನಡ ಸಾಹಿತ್ಯದಲ್ಲಿ ಒಂದು ಹೊಸ ಯುಗವನ್ನು ನಿರ್ಮಿಸಿತು. ಮುಂದಿನ ಕನ್ನಡ ಕವಿಗಳ ಮೇಲೆ ವಿಶೇಷ ಪ್ರಭಾವ ಬೀರಿತು. ನಂತರದ ಕನ್ನಡ ಕವಿಗಳು ಹರಿಹರನ ಕಾವ್ಯಶಕ್ತಿಯನ್ನು, ಕಾವ್ಯ ಮಾರ್ಗವನ್ನು ಬಗೆಬಗೆಯಾಗಿ ಪ್ರಶಂಸಿಸಿದ್ದಾರೆ. ಹರಿಹರನನ್ನು ಒಬ್ಬ ಅವತಾರ ಪುರುಷ, ಪವಾಡ ಪುರುಷ, ಎಂದು ಬಣ್ಣಿಸಿದ್ದಾರೆ.

ನವೀನ ಕಾವ್ಯವನ್ನು, ಕಾವ್ಯೋದ್ದೇಶ, ಭಾಷಾ ಪ್ರಯೋಗ, ಛಂದಸ್ಸಿನ ಬಳಕೆ, ನಿರರ್ಗಳ ವರ್ಣನೆ, ಭಕ್ತಿ ನಿರ್ಭರತೆಗಳಿಂದ ಕೂಡಿದ ವಿಪುಲ ಕಾವ್ಯರಚನೆಯಿಂದಾಗಿ ಹರಿಹರದೇವ ಕನ್ನಡದಲ್ಲಿ ನವೀನ ಪಥಪ್ರದರ್ಶಕ ಮಹಾಕವಿಯಾಗಿ ಪರಿಣಮಿಸಿದ. ಈ ದೃಷ್ಟಿಯಿಂದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹರಿಹರನು ಮಹತ್ವಪೂರ್ಣ ಸ್ಥಾನಕ್ಕೆ ಅರ್ಹನಾಗಿದ್ದಾನೆ. ಹರಿಹರ-ರಾಘವಾಂಕರ ಹೊಸ ಬಗೆಯ ಭಾಷಾ ಪ್ರಯೋಗದಿಂದಾಗಿ ಹಳೆಗನ್ನಡ ಕಾವ್ಯವಾಹಿನಿಯು ನಡುಗನ್ನಡಕ್ಕೆ ತಿರುಗಿತು. ಕನ್ನಡ ಭಾಷಾವಿಕಾಸದಲ್ಲಿ ನಡುಗನ್ನಡ ಎಂಬ ಅವಸ್ಥೆಗೆ ಹರಿಹರ-ರಾಘವಾಂಕರು ಕಾರಣರಾದರು. ಹರಿಹರನ ರಗಳೆಗಳು ಕನ್ನಡ ಗದ್ಯದ ವಿಕಾಸಕ್ಕೆ ಹಾದಿಯನ್ನು ಸಿದ್ಧಗೊಳಿಸಿದವು.

ಹಂಪೆಯ ವಿರೂಪಾಕ್ಷನ ಪರಮಭಕ್ತರಾದ ಮಹಾದೇವ-ಶರ್ವಾಣಿಯರು ಹರಿಹರನ ತಂದೆ-ತಾಯಿ. ಹರಿಹರನ ಪಂಪಾಶತಕದ ಶಿವನ ಸ್ತುತಿಯಲ್ಲಿ "ವಿಷ್ಣು ನಯನಾರ್ಚಿತ ಪಾದಪಯೋಜ ದೇವ" ಮತ್ತು "ಹರಿನಯನಾರ್ಚಿತಾಂಘ್ರಿಯುಗಳಂ....ಹರಿಹರನ" ಎಂಬ ಮಾತು ಬಂದಿದೆ. "ಹರಿಯ ನಯನವೆಂಬ ಕಮಲದಿಂದ ಪೂಜೆಗೊಂಡ ಹರ" ಎಂಬ ಅರ್ಥವಿರುವ ದೃಷ್ಟಿಯಿಂದ ಮಹಾದೇವನು ತನ್ನ ಮಗನಿಗೆ 'ಹರಿಹರ' ಎಂಬ ಹೆಸರನ್ನಿಟ್ಟಿರಬಹುದು. ಬಾಲಕ ಹರಿಹರನು ಪಂಪಾಕ್ಷೇತ್ರದ ಮಾದರಸ ಎಂಬ ಗುರುವಿನ ಬಳಿ ವಿದ್ಯಾಭ್ಯಾಸ ಕೈಕೊಂಡ. ಹರಿಹರನು ತನ್ನ ಕಾವ್ಯದಲ್ಲಿ ತನ್ನ ಗುರುಪರಂಪರೆಯನ್ನು ಉಲ್ಲೇಖಿಸಿ ಮಾದರಸನ ಹೆಸರನ್ನು ಹೇಳಿದ್ದಾನೆ. ವೇದ. ವೇದಾಂಗ, ಇತಿಹಾಸ, ಪುರಾಣ, ಕಾವ್ಯ, ನಾಟಕ, ಅಲಂಕಾರ, ವ್ಯಾಕರಣ ಮುಂತಾದ ವಿಷಯಗಳಲ್ಲಿ ಪಾರಂಗತನಾಗಿ ಹರಿಹರ ಪಾಂಡಿತ್ಯ ಪ್ರತಿಭೆಗಳಲ್ಲಿ ಉನ್ನತ ಸ್ಥಾನ ಪಡೆದ. ಮುಂದೆ ಪಂಪಾಕ್ಷೇತ್ರದ ವಿದ್ಯಾಪೀಠದ ಕುಲಪತಿಯಾದ. ರಾಘವಾಂಕನಂತಹ ಪತಿಭಾಶಾಲಿಯನ್ನು ರೂಪುಗೊಳಿಸಿದ. ಶಿವನನ್ನು, ಶಿವಭಕ್ತರನ್ನು ನುತಿಸುವ ದೃಷ್ಟಿಯಿಂದ ಕಾವ್ಯ ರಚಿಸಿದ. ಚಂಪೂ ರೂಪದ ಗಿರಿಜಾ ಕಲಾಣವು ಶಿವನನ್ನು ಕುರಿತ ಕಾವ್ಯವಾಗಿದೆ. ಪಂಪಾ ಶತಕ, ರಕ್ಷಾ ಶತಕ ಕೃತಿಗಳು ಆತ್ಮ ನಿವೇದನೆಯಂತಿವೆ. ಕೆಲವು ಸಂಕೀರ್ಣ ರಗಳೆಗಳಲ್ಲಿಯೂ ಆತನ ಆತ್ಮ ನಿವೇದನೆಯು ವ್ಯಕ್ತವಾಗಿದೆ.

ಪಂಪಾಕ್ಷೇತ್ರದ ವಿದ್ಯಾಪೀಠದಲ್ಲಿ ನೆಲಸುವುದಕ್ಕೆ ಮೊದಲು ದ್ವಾರಸಮುದ್ರದ ಬಲ್ಲಾಳನ ಆಸ್ಥಾನದಲ್ಲಿ ಗಣಕರ ಮುಖ್ಯಸ್ಥನಾಗಿ ಹರಿಹರ ಸೇವೆ ಸಲ್ಲಿಸುತ್ತಿದ್ದನೆಂದು ತಿಳಿಯುತ್ತದೆ. ಭಾಳಾಕ್ಷನಾಜ್ಞೆಯಂ ಪಡೆದು ನರಸಿಂಹ ಬಲ್ಲಾಳ ಭೂವರನ ಗಣಕರ ನಿವಹಕೊಡೆಯನಾದಂ ಎಂಬ ಉಲ್ಲೇಖವು 'ರಾಘವಾಂಕ ಚಾರಿತ್ರ' ಕಾವ್ಯದಲ್ಲಿ ಬಂದಿದೆ. 'ಪದ್ಮರಾಜ ಪುರಾಣ'ವೂ ಇದಕ್ಕೆ ಪುಷ್ಟಿಯನ್ನು ಒದಗಿಸುತ್ತದೆ. ಲೆಕ್ಕ ಬರೆಯುವ ವಹಿಗಳಲ್ಲಿ ಹರಿಹರನು ವಿರೂಪಾಕ್ಷನ ನಾಮವನ್ನು ಮಾತ್ರ ಬರೆಯುತ್ತಿದ್ದನಂತೆ. ಇದು ಅವನ ಸಹೋದ್ಯೋಗಿಗಳ ಮನಸ್ಸಿಗೆ ಬರಲಿಲ್ಲ. ಅಂಥವರ ಮಾತಿಗೆ ಅರಸ ಕಿವಿಗೊಟ್ಟ. ಲೆಕ್ಕವನ್ನು ಪರೀಕ್ಷಿಸಲೆಂದು ಅರಸನು

ಆಸ್ಥಾನಕ್ಕೆ ಬಂದ. 'ಪಂಪಾವಿರೂಪಾಕ್ಷ' ಎಂಬ ಹೆಸರಿನ ಸಾಂಕೇತಿಕ ಭಾಷೆಯಲ್ಲಿ ಹರಿಹರ ಲೆಕ್ಕವನ್ನು ಬರೆಯುತ್ತಿದ್ದ. ಹಾಗೆ ಬರೆದ ಲೆಕ್ಕ ಸರಿಯೂಗಿತ್ತೆಂಬುದನ್ನು ತೋರಿಸಿ ಕೊಟ್ಟನಂತೆ.

ಹಂಪೆಯ ವಿರೂಪಾಕ್ಷ ದೇವಾಲಯದೊಳಗೆ ಉರಿಯುತ್ತಿದ್ದ ಬಟ್ಟೆಯ ತೆರೆಯನ್ನು ಹರಿಹರನು ಆರಿಸಿದನೆಂಬ ಸಂಗತಿಯನ್ನು ವೀರಶೈವ ಕವಿಗಳು ಹೇಳಿದ್ದಾರೆ. ಈ ಘಟನೆಯು ನಡೆದ ಮಿತಿಯನ್ನು 'ರಾಘವಾಂಕ ಚಾರಿತ್ರ'ದಲ್ಲಿ ಉಲ್ಲೇಖಿಸಲಾಗಿದೆ. ಅದು "ಈಶ್ವರ ಸಂವತ್ಸರದ ಮಾರ್ಗಶಿರ ದಶಮೀ ಸೋಮವಾರ" ಎಂದಿದೆ. ಭಾರತೀಯ ಪಂಚಾಂಗದ ಈ ಮಿತಿಯು ಕ್ರಿಸ್ತವರುಷದ ೧೨೧೭ಕ್ಕೆ ಸುಮಾರಾಗಿ ಸರಿಹೊಂದುತ್ತದೆ. ಆದ್ದರಿಂದ ಹರಿಹರನು ಕ್ರಿ. ಶ. ೧೨೧೭ರಲ್ಲಿದ್ದನೆಂದು ಸಿದ್ಧವಾಗುತ್ತದೆ. ಇದನ್ನು 'ಹರಿಹರನ ಕಾಲ ನಿರ್ಣಯ' ಎಂಬ ನನ್ನ ಸಂಶೋಧನಾ ಲೇಖನದಲ್ಲಿ ವಿವೇಚಿಸಿದ್ದೇನೆ. ಕ್ರಿ. ಶ. ೧೧೭೩ರಿಂದ ೧೨೨೦ರ ವರೆಗೆ ವೀರ ಬಲ್ಲಾಳನೆಂಬ ಅರಸನು ರಾಜ್ಯವಾಳುತ್ತಿದ್ದ. ಆತನ ಕಾಲದಲ್ಲಿ ಹರಿಹರನು ಇದ್ದನೆಂದು ಇಟ್ಟುಕೊಳ್ಳಬೇಕು. ಬಹುಜನ ವಿದ್ವಾಂಸರು ಸುಮಾರಾಗಿ ಈ ಕಾಲವನ್ನು ಒಪ್ಪಿಕೊಂಡಿದ್ದಾರೆ. ಆದ್ದರಿಂದ ಹದಿಮೂರನೆಯ ಶತಮಾನದ ಆದಿ ಭಾಗವು ಹರಿಹರನ ಕಾಲವೆಂದಾಗುತ್ತದೆ.

ಲೆಕ್ಕ ಬರೆಯುವ ತನ್ನ ಪದ್ಧತಿಯ ಬಗೆಗೆ ಅರಸನ ಆಸ್ಥಾನದಲ್ಲಿ ಮನಸ್ತಾಪ ತಲೆದೋರಿದಾಗ ಹರಿಹರ ತನ್ನ ಅಧಿಕಾರ ಸ್ಥಾನವನ್ನು ತ್ಯಜಿಸಿದ. ಮನುಜರ ಸೇವೆಯೇ ತನಗೆ ಬೇಡವೆಂದು ನಿರ್ಧರಿಸಿದ. "ಕೇಳಿಂದು ಮೊದಲಾಗಿ ಸಕಲದೇವ ನಿಜೇಶ ಸೇವೆಯಲ್ಲದೆ ಮನುಜ ಸೇವೆಯ ಗ್ರಾಹ್ಯವಿದು ಭಾಷೆಯೆನುತ" ಎಂಬ ಉಲ್ಲೇಖ "ಪದ್ಮರಾಜ ಪುರಾಣ"ದಲ್ಲಿದೆ. ಅರಸನ ಆಸ್ಥಾನವನ್ನು ತೊರೆದು ಹರಿಹರ ಪಂಪಾಕ್ಷೇತ್ರಕ್ಕೆ ಬಂದು ಅಲ್ಲಿ ನೆಲೆಸಿದ.

ಮಾನವರ ಸೇವೆಯ ಕಷ್ಟಕಾರ್ಪಣ್ಯಗಳನ್ನು, ದೈನ್ಯದ ಸ್ಥಿತಿಯನ್ನು ಹರಿಹರ "ಪಂಪಾಶತಕ"ದಲ್ಲಿ ಪರಿಣಾಮಕಾರಿಯಾಗಿ ಮನಂಬುಗುವ ಬಗೆಯಲ್ಲಿ ಬಣ್ಣಿಸಿದ್ದಾನೆ.

ನರರಂ ಸೇವಿಸುತ ಅಯ್ಯ, ಜೀಯ ಎನುತುಂ ಇರ್ಪ
ಏನೆಂದೊಡಂ ದೈನ್ಯಮು|
ಬ್ಬರಿಸುತ್ತಂ ತನು ಕುಂದಿಯಂ ತನಗೆ ತಾನೆಂತಕ್ಕೆಯಂ
ಬೇಡುತ ಇ|
ರ್ಪ ಇರವಂ ಸುಟ್ಟು ಬಿಸುಟ್ಟು ಭಕ್ತಿಯೊಳಗೆ
ಓಲಾಡಲ್ ಮನಂದಂದು|
ಶಂಕರನಂ, ಶಾಶ್ವತನಂ ಕೃಪಾಜಲನಿಧಿಯಂ ಕಂಡಂ
ವಿರೂಪಾಕ್ಷನಂ ||
ಪೋಗು ಎನೆ ಪೋಪ ಬಾರೆಲವೊ ಬಾರೆನೆ ಜೀಯ
ಹಸಾದವೆಂದು ಬೆ|
ಳ್ಳಾಗುತೆ ಬರ್ಪ, ಮಾಣ್ ಎಲವೊ ಸುಮ್ಮನಿರು ಎಂದೊಡೆ
ಸುಮ್ಮನಿರ್ಪ ಮ
ತ್ತಾಗಳೆ ಝಂಕಿಸಲ್ ನಡುಗಿ ಬೀಳುವ ಸೇವೆಯ
ವೃತ್ತಿಯಂ|
ನೀಗಿದೆಂ ಇಂದು ನಿಮ್ಮ ದಯೆಯಿಂ ಕರುಣಾಕರ
ಹಂಪೆಯೊಳ್ದನೇ||

—ಈ ನುಡಿಗಳಲ್ಲಿ ಮನುಜರ ಸೇವೆ ಮುಗಿದು ನಿವೃತ್ತಿ ಪಡೆದ ಸೂಕ್ಷ್ಮ ಸಂವೇದನಾಪರರ ಅನುಭವವು ಯಥಾರ್ಥವಾಗಿ ಚಿತ್ರಿತವಾಗಿದೆ.

ಹರಿಹರನದು ಅತ್ಯಂತ ನಿಸ್ಪೃಹತೆಯ ಮನೋಭಾವವಾಗಿತ್ತು. ಅಂತಹ ನಿಸ್ಪೃಹತೆಯುಳ್ಳ ಶಿವಭಕ್ತರ ಚರಿತ್ರೆಗಳನ್ನು ಆತನು ಬರೆದಿದ್ದಾನೆ. ಮಾನವರ ಹತ್ತಿರ ಏನನ್ನೂ ಬೇಡಬಾರದು ಎಂಬುದು ಹರಿಹರನ, ಆತನು ಚಿತ್ರಿಸಿದ ಶಿವಭಕ್ತರ ದೃಷ್ಟಿಯಾಗಿತ್ತು. ಈ ದಿಸೆಯಲ್ಲಿ ಪಂಪಾಶತಕದ ಒಂದು ಪದ್ಯವನ್ನು ಗಮನಿಸಬೇಕು:

ಸಡಿ ಫಡ ಮಾನವರ್ ಕುಡುವರೆಂಬುದಂ ಆಡದಿರೆನ್ನ
ಮುಂದೆ ಕ|
ಪ್ಪಡದ ಶರೀರಿಗಳ್ ತೃಣದ ಹಾಹೆಗಳ್ ಅಕ್ಕಟ
ಮಣ್ಣ ಬೊಂಬೆಗಳ್|
ಕುಡುವುದೇಂ, ಬೇಡು ಒಲಿದು ಈವ ಮಹಾನಿಧಿಯಂ
ಮೃಡನಂ ಅನೂನದಾನಿಯಂ ಅಲಂಪಿನ ಪೆಂಪಿನ
ಮಹೇಶನಂ ಹಂಪೆಯೊಳ್ದನಂ.

ಮಾನವರೆಂದರೆ ಮಣ್ಣಿನ, ಹುಲ್ಲಿನ ಬೊಂಬೆಗಳಿದ್ದಂತೆ. ಅವೇನು ಕೊಡಬಲ್ಲವು? ಬೇಡುವುದೇ ಆದರೆ ಪರಮಾತ್ಮನಿಂದ ನಾವು ಬೇಡಬೇಕು. ಮಾನವರನ್ನು ಬೇಡುವುದು ನಿಷ್ಪ್ರಯೋಜಕ. ಅಲ್ಲದೆ ಅದು ನಮ್ಮ ಆತ್ಮ ಗೌರವಕ್ಕೆ ಹಾನಿ, ಎಂಬುದು ಹರಿಹರನ ನಿಲುಮೆಯಾಗಿದೆ. ಪರಮಾತ್ಮನಿಂದ ಆತನು ಬೇಡಿದ್ದೂ ಕೂಡ ಐಹಿಕ ಭೋಗ–ಭಾಗ್ಯವಲ್ಲ. ಭಕ್ತಿ ಸಂಪತ್ತನ್ನು. ಹರಿಹರನ ಶಿವನಿಷ್ಠೆ ಅಚಲ, ಅನನ್ಯ. 'ರಕ್ಷಾಶತಕದಲ್ಲಿ'

ಬಿಡೆಂ ಈಶಾ ನಿಮ್ಮ ಪಾದಾಬ್ಜಮಂ ಎಲೆಲೆ ಬಿಡೆಂ
ಸೀಳ್ದೊಡಂ ಪೋಳ್ದೊಡಂ ಪೊ
ಯ್ದೊಡಂ ಅಂದು, ಎಂದುಂ ಬಿಡೆಂ ಶಂಕರಾ ಮಾಣ್
ನಾಂ ಬಲ್ ಪಿಡಿದೆಂ

ಎಂದು ಹೇಳಿದ್ದಾನೆ. ಸೀಳಿದರೂ ಹೋಳು ಮಾಡಿದರೂ ಈಶನ ಪಾದಗಳನ್ನು ಎಂದೆಂದಿಗೂ ಗಟ್ಟಿಯಾಗಿ ಹಿಡಿಯುವ ಛಲ ಆತನದಾಗಿದೆ. ಹರನಾಮವನ್ನು ಆಲಿಸಿ ಪರವಶನಾಗುವ, ಸಮಗ್ರವಾಗಿ ತನ್ಮಯತೆ ಪಡೆಯುವ ಹಂಬಲವನ್ನೂ ಆತನು ವ್ಯಕ್ತಪಡಿಸಿದ್ದಾನೆ. ತನ್ನ ಕಣ್ಣು, ನಾಲಗೆ, ಚಿತ್ತಗಳಲ್ಲಿ ವಿರೂಪಾಕ್ಷನೇ ತುಂಬಿರಬೇಕೆಂದು ಆತನ ಪ್ರಾರ್ಥನೆಯಾಗಿದೆ.

ಶತಕಗಳಲ್ಲಿ ಶಿವನಿಷ್ಠೆಯ ಅನನ್ಯತೆಯು ಹರಿಹರನ ವ್ಯಕ್ತಿಗತ ನಿಲುಮೆಯಾಗಿ ಮೂಡಿ ಬಂದಿದೆ. ಇದೇ ನಿಲುಮೆಯನ್ನು ಆತನು 'ಗಿರಿಜಾ ಕಲ್ಯಾಣ'ದಲ್ಲಿ, ಶಿವಗಣ ಚಾರಿತ್ರದ ರಗಳೆಗಳಲ್ಲಿ, ಕಾವ್ಯರೂಪದಲ್ಲಿ ಕಥಾನಿರೂಪಣೆಯೊಂದಿಗೆ ಹೃದಯಂಗಮವಾಗಿ ಚಿತ್ರಿಸಿದ್ದಾನೆ.

ಪಂಪನು ಕನ್ನಡದ ಆದಿಕವಿ. ಚಂಪೂ ಕಾವ್ಯರೂಪವನ್ನು ಆರಂಭಿಸುವುದರ ಜತೆಗೆ ಕಾವ್ಯ ನಾಯಕನ ಬಗೆಗೆ ಒಂದು ಸಂಪ್ರದಾಯವನ್ನು ರೂಢಿಸಿದ. ಅದೆಂದರೆ ತತ್ಕಾಲೀನ ಪೋಷಕ ದೊರೆಗಳನ್ನು ಕಾವ್ಯನಾಯಕರನ್ನಾಗಿ ಮಾಡುವುದು. ಅವರನ್ನು ಪುರಾಣ ಪ್ರಸಿದ್ಧ ವ್ಯಕ್ತಿಗಳೊಂದಿಗೆ ಹೋಲಿಸಿ ಪ್ರಶಂಸಿಸುವುದು. ಈ ಸಂಪ್ರದಾಯವು ಹನ್ನೆರಡನೆಯ ಶತಮಾನದ ವರೆಗೆ ಸಾಗಿ ಬಂದಿತು. ಆಸ್ಥಾನ ಕವಿಗಳಾಗಿದ್ದ ಪಂಪ, ರನ್ನರಂತಹರಿಗೆ ಇದು ಸರಿಯೆನಿಸಿರಬಹುದು. ನಿಸ್ಪೃಹಿಯಾಗಿ ಮನುಜರ ಸೇವೆಯನ್ನೇ ಧಿಕ್ಕರಿಸಿದ ಹರಿಹರ ಈ ಸಂಪ್ರದಾಯವನ್ನು ಅಲ್ಲಗಳೆದ:

ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಟರ
ಮೇಲ್ ಅಕ್ಕಟಾ

ತನತನಗೆ ಇಂದ್ರ, ಚಂದ್ರ, ರವಿ, ಕರ್ಣ.... ಎಂದು
ಮೇಣ್
ಅನವರತಂ ಪೊಗಳ್ದು ಕೆಡಬೇಡಲೆ ಮಾನವ,
ನೀನ್ ಅಹರ್ನಿಶಂ
ನೆನೆ, ಪೊಗಳ್, ಅರ್ಚಿಸು ಎಮ್ಮ ಕಡುಸೊಂಪಿನ ಪೆಂಪಿನ
ಹಂಪೆಯೊಳ್ದನಂ.

ಹರಿಹರನ ಕಾವ್ಯರಚನೆಯ ಉದ್ದೇಶ ಏಕಮುಖವಾದ ಶಿವ ನಿಷ್ಠೆ. ಅಂತಯೇ ಆತನು "ಹರಂಗೆ ನಾಲಗೆಯಂ ಮಾರಿದೆಂ" ಎಂದು ಪಂಪಾಶತಕದಲ್ಲಿ ಘೋಷಿಸಿದ್ದಾನೆ. ತನ್ನ ಕಾವ್ಯ ಶಕ್ತಿಯನ್ನು ಆತನು ವಿನಿಯೋಗಿಸಿದ್ದು ಶಿವನನ್ನು, ಶಿವಭಕ್ತರನ್ನು ಸ್ತುತಿಸುವುದಕ್ಕಾಗಿ ಮಾತ್ರ.

ಚಂಪೂ ಕಾವ್ಯ ರೂಢವಾಗಿದ್ದ ಕಾಲದಲ್ಲಿ ಈತನು ತನ್ನದೊಂದು ಕೃತಿಯನ್ನು ಚಂಪೂರೂಪದಲ್ಲಿ ರಚಿಸಿದ. ಅದು ಗಿರಿಜಾಕಲ್ಯಾಣ.

'ಕುಮಾರ ಸಂಭವ'ದ ಪ್ರಸಿದ್ಧ ಪೌರಾಣಿಕ ಕಥೆಯು 'ಗಿರಿಜಾ ಕಲ್ಯಾಣ'ಕ್ಕೆ ವಸ್ತುವನ್ನು ಒದಗಿಸಿದೆ. ಆದರೆ ಹರಿಹರನ ವಿಶಿಷ್ಟ ದೃಷ್ಟಿಯಿಂದಾಗಿ ಈ ಕಾವ್ಯದಲ್ಲಿ ಕುಮಾರನ ಜನನಕ್ಕೆ ಅಷ್ಟೊಂದು ಮಹತ್ವವುಂಟಾಗಿಲ್ಲ. ಗಿರಿಜೆಯ ಕಲ್ಯಾಣ, ತನ್ಮೂಲಕ ಲೋಕ ಕಲ್ಯಾಣ ಇಲ್ಲಿಯ ಮುಖ್ಯ ದೃಷ್ಟಿ. ಗಿರಿಜೆಯ ಕಲ್ಯಾಣ ಸಾಧ್ಯವಾದುದು ಆಕೆ ಶಿವನ ಬಗೆಗೆ ಉತ್ಕಟ ಭಕ್ತಿಯನ್ನು ತೋರಿದಾಗ ಮಾತ್ರ.

ತನ್ನ ಸೌಂದರ್ಯ ಶೃಂಗಾರ ಭಾವಗಳೊಂದಿಗೆ ಮನ್ಮಥನ ನೆರವನ್ನು ಪಡೆದೂ ಗಿರಿಜೆ ಶಿವನನ್ನು ಒಲಿಸಲು ಸಮರ್ಥಳಾಗಲಿಲ್ಲ. ನಿರ್ಮಲ ಭಾವದ ಭಕ್ತಿ, ನಿಷ್ಠುರವಾದ ತಪಸ್ಸುಗಳಿಂದ ಮಾತ್ರ ಶಿವನು ಆಕೆಗೆ ಒಲಿಯುತ್ತಾನೆ. ಗಿರಿಜೆಯ ಬಾಲ್ಯವನ್ನು ಹರಿಹರ ಶಿವಲೀಲೆಯೆಂಬಂತೆ ವರ್ಣಿಸಿದ್ದಾನೆ. ಈ ಕಾವ್ಯದಲ್ಲಿ ಆಕೆಯ ಲಿಂಗಾರ್ಚನೆಯ ಸಂಭ್ರಮ ಮುಂದೆ ಆಕೆ ಕೈಕೊಂಡ ಕಠೋರ ತಪಸ್ಸಿನ ಭವ್ಯತೆಗಳ ಬಣ್ಣನೆಯಿದೆ. ಗಿರಿಜಯ ಉತ್ಕಟ ಶಿವನಿಷ್ಠೆಯು ಫಲಪ್ರದವಾಯಿತು. ಹರ–ಗಿರಿಜೆಯರ ವಿವಾಹ ನಡೆಯಿತು. ಆ ಸನ್ನಿವೇಶದಲ್ಲಿ ಆ ಅಲೌಕಿಕ ವ್ಯಕ್ತಿಗಳಿಗೂ ಮಾನವ ಸಹಜ ಭಾವನೆಗಳನ್ನು ಆರೋಪಿಸಿ ಹರಿಹರ ಕಾವ್ಯದ ಸೊಬಗನ್ನು ಹೆಚ್ಚಿಸಿದ್ದಾನೆ. ಹರ–ಗಿರಿಜೆಯರ್ ಸ್ಥಿರ ದಂಪತಿಗಳ್—ಮಂಗಳ ಕರ ದಂಪತಿಗಳ್ ಎಂದು ಘೋಷಿಸಿದ್ದಾನೆ. ಹರ ಗಿರಿಜೆಯರ ಲೀಲೆಯು ಮಾನವೀಯ ದಂಪತಿಗಳಲ್ಲಿ ಎಂದಿನಿಂದಲೂ ಸಾಗಿಬಂದಿದೆ. ಈಗಲೂ ಸಾಗಿದೆ.

ಶಿವನನ್ನು ಒಲಿದ ಗಿರಿಜೆಯು ಆತನನ್ನು ನೋಡಿದ ಬಗೆಯನ್ನು ಹರಿಹರ ಸುಂದರವಾಗಿ ಪ್ರಭಾವಪೂರ್ಣವಾಗಿ ವರ್ಣಿಸಿದ್ದಾನೆ. ಶಿವನು ತನ್ನ ಭಾವೀ ಪತಿಯೆಂದು ಭಾವಿಸಿದ್ದರೂ ಆಕೆ ಶಿವನ ನಿಷ್ಠುರ ವೈರಾಗ್ಯಕ್ಕೆ ಹೆದರುತ್ತಿದ್ದಳು. 'ಪುಣ್ಯಮಂ ಸೇವಿಪ ಧರ್ಮದಂತೆ ಭಕ್ತಿಯಂ ಬಯಸುವ ಪುಣ್ಯದಂತೆ, ಶಿವಜ್ಞಾನಮಂ ಎಳಸುವ ಭಕ್ತಿಯಂತೆ ಶಿವಸಂಗಮಂ ಬಯಸಿ' ಗಿರಿಜೆ ಶಿವನನ್ನು ನೋಡತೊಡಗಿದಳು. ಶಿವನ ಅಂಗಾಂಗಗಳಲ್ಲಿ ಗಿರಿಜಯ ದೃಷ್ಟಿಯು ಹರಿದುದನ್ನು ಹರಿಹರ ಹೀಗೆ ಬಣ್ಣಿಸಿದ್ದಾನೆ:

ಪೊಸ ಜಡೆಯೊಳ್ ತೊಡಂಕಿ, ನೊಸಲೊಳ್ ನಡೆದಾಡಿ,
ಕಪೋಲ ಭಾಗದೊಳ್
ಪಸರಿಸಿ, ಲೋಚನಂಗಳೊಳ್ ಅಮರ್ಚಿ,
ತದಾಸ್ಯದೊಳೊಂದಿ ಕಂಠದೊಳ್

ಮಿಸುಗಿ ಪದದಲ್ಲಿ ಬಿಳ್ದವು ಭವಾನಿಯ ದೃಷ್ಟಿಗಳ್‖ ಶಿವನ ಮುಡಿಯಿಂದ ಆರಂಭಿಸಿ ಕ್ರಮಕ್ರಮವಾಗಿ ಕೆಳಗೆ ಇಳಿದು ಭವಾನಿಯ ದೈನ್ಯ ದೃಷ್ಟಿಗಳು ಶಿವನ ಪಾದದಲ್ಲಿ ಬಿದ್ದವು. ಹೀಗೆ ಶಿವನ ಸರ್ವಾಂಗಗಳಲ್ಲಿ ಗಿರಿಜೆಯ ನೋಟ ಕೀಲಿಸಿತು. ಆಗ ಆಕೆಯು,

ಬೆಮರ್ವರ್ಳ್, ಬೆರ್ಚುವಳ್, ಉರ್ಬುವ
ಳ್ ಅಮರ್ವರ್ಳ್.... ಅಂಜಿ ನಿಲ್ವಳ್ ಸೋಂಕಲ್
ನಿಮಿರ್ವರ್ಳ್....
....ಗಿರಿಜೆ ಸೆಡೆದು ಸುಯ್ವಳ್ ಕಾಯ್ವಳ್

ಪ್ರೇಮದೊಂದಿಗೆ ಭಯಮಿಶ್ರಿತ ಪೂಜ್ಯಭಾವನೆಯೂ ಗಿರಿಜೆಯಲ್ಲಿ ತುಂಬಿತ್ತು. ಆಕೆಯ ಅಂತಹ ಅವಸ್ಥೆಯನ್ನು ಹರಿಹರ ಇಲ್ಲಿ ಬಣ್ಣಿಸಿದ್ದಾನೆ. ಭಕ್ತಿಪರವಶತೆಯ ಮನೋಭಾವ ಹರಿಹರನದು. ಗಿರಿಜೆಯಲ್ಲಿಯೂ ಅಂತಹದೇ ಮನೋಭಾವವಿದೆ. ಆದರೆ ಶಿವನನ್ನು ತನ್ನ ಪತಿಯನ್ನಾಗಿ ಪಡೆಯಬೇಕೆನ್ನುವ ಹಂಬಲ ಆಕೆಯದಾಗಿದೆ. ಉಗ್ರ ತಪಸ್ಸಿನಲ್ಲಿ ನಿರತನಾದ ಶಿವನು ತನಗೊಲಿಯಬಹುದೇ? ಎಂಬ ಸಂದೇಹವೂ ಆಕೆಗಿದೆ. ಮೇಲ್ಕಂಡ ಪದ್ಯದಲ್ಲಿ ಹರಿಹರನು ಬಳಸಿದ ಅಡಕಿಲ ನುಡಿಗಳಲ್ಲಿ ಗಿರಿಜೆಯ ಭಯದ ಭಾವನೆ ಸ್ಫುಟವಾಗಿ ವ್ಯಕ್ತವಾಗಿದೆ. ಇಂತಹ ಸಂದರ್ಭದಲ್ಲಿ ಆಕೆಗೆ ನೆರವಾಗಲೆಂದು ಮನ್ಮಥನು ಬರುತ್ತಾನೆ. ಶಿವನ ತಪಸ್ಸನ್ನು ಭಂಗಗೊಳಿಸಬೇಕೆಂಬ ದೇವತೆಗಳ ಅಪೇಕ್ಷೆಯನ್ನು ಪೂರೈಸಲು ಆತನು ತನ್ನ ಚತುರಂಗ ಸೇನಾ ಸನ್ನಾಹದೊಂದಿಗೆ ಇಲ್ಲಿಗೆ ಬಂದಿದ್ದಾನೆ. ಶಿವನ ಮುಂದಿದ್ದ ನಂದಿಯು ಕೋಪದಿಂದ ಮನ್ಮಥನ ಸೇನೆಯನ್ನು ಈಕ್ಷಿಸಿದ. ಆಗ ಮನ್ಮಥನ ಸೇನೆ ಅಸ್ತವ್ಯಸ್ತಗೊಂಡಿತು:

ಅಳಿ ಮಲ್ಲಳಿಗೊಂಡವು, ಕೋ–
ಕಿಳ ನಿಕರಂ ವ್ಯಾಕುಳಂಗಳಾದವು ಚಂದ್ರಂ
ಕಳೆಗುಂದಿ ಕಂದಿದಂ....

—ಇಲ್ಲಿಯ ಪದಗಳ ಹೊಂದಾಣಿಕೆಯನ್ನು, ಅವುಗಳ ಪರಿಣಾಮಕಾರಿ ಬಗೆಯನ್ನು ಗಮನಿಸಬೇಕು. ತನ್ನ ಸೇನೆಗೊದಗಿದ ದುರವಸ್ಥೆಯನ್ನು ಕಂಡ ಮನ್ಮಥ ಚಿಂತೆಗೊಳಗಾದ. ಅದೇ ಸಮಯಕ್ಕೆ ಪೂಜಾಸನ್ನದ್ಧಳಾಗಿ,

ಬರುತಿರ್ದಳ್ ಮುಂದೆ ಕಾಂತಿಪ್ರದೆ ಸದಮಲೆ
....ನಿತ್ಯಾನಂದೆ ಚಂದ್ರಾಭರಣನ ಸಂಪತ್ತಿ
....ನಗಸಂಭೂತೆ ಸಂಪ್ರತಿಯಿಂದಂ

—ಹೀಗೆ ಗಿರಿಜೆಯ ಆಗಮನವಾದುದು ಕಾಮನಿಗೆ 'ಕಣ್ ಬಂದಂತೆ, ಉಸಿರ್ ಬಂದವೊಲ್' ಆಯಿತು. ಶಿವನ ತಪಸ್ಸಿಗೆ ಭಂಗವನ್ನುಂಟುಮಾಡುವ ತನ್ನ ಕಾರ್ಯದಲ್ಲಿ ಗಿರಿಜೆ ನೆರವಾಗಬೇಕೆಂದು ಕಾಮ ಕೇಳಿಕೊಂಡ. ಗಿರಿಜೆಗೆ ಬೇಕಾದುದೂ ಅದೇ. ಆದ್ದರಿಂದ ಆಕೆಯು ಕಾಮನ ಬಿನ್ನಹವನ್ನು ಮನ್ನಿಸಿದಳು. ಶಿವನ ನಿಷ್ಠುರ ತಪಸ್ಸಿನಿಂದ ಭಯಗೊಂಡಿದ್ದ ಗಿರಿಜಗೆ ಕಾಮನ ನೆರವೂ ಅವಶ್ಯಕವೆನಿಸಿತ್ತು. ಕಾಮನು "ತಾಯೇ, ತವರೇ ಎನ್ನ ಆಯುವೇ ಎನಗೆ ನೆರವಾಗಬೇಕು" ಎಂದು ಕೇಳಿದ. ಆಗ ಗಿರಿಜೆ "ನೀನ್ ಅಂಜದಿರ್ ಆನ್ ಇರ್ದಪೆನ್" ಎಂದು ಹೇಳಿದಳು. "ಆನ್ ಇರ್ದಪೆನ್" ಎಂಬ ನುಡಿಯಲ್ಲಿ ಆಕೆಯ ಅಹಂಕಾರ ಒಡಮೂಡಿ ಬಂದಿದೆ. ಭಕ್ತಿಗೆ ಪ್ರತಿಯಾಗಿ ಅಹಂಕಾರಕ್ಕೆ ಎಡೆಕೊಟ್ಟ ಗಿರಿಜೆಯ ಪ್ರಯತ್ನ ಫಲಿಸುವಂತಿರಲಿಲ್ಲ. ತನ್ನ ಅಹಂಕಾರವು ನಿಷ್ಪ್ರಯೋಜಕ, ಎಂಬುದನ್ನು

ಆಕೆ ಬೇಗನೆ ಕಂಡುಕೊಳ್ಳುವಂತಾಯಿತು. ಆದರೆ ಆಕೆಯ ಆಶ್ವಾಸನೆ ದೂರತಾಗ ಕಾಮನು

ಇನ್ನು ಅಂಜೆನ್ ಆಹಾ
ಉನ್ನತವಾಯ್ತು ಎನುತ್ತ....
........ತೆಗೆದಂ
ತನ್ನ ಅಗ್ಗದ ಉದಂಚ ಪಂಚಬಾಣಮಂ||

ಆ ಬಾಣಗಳನ್ನು ತನ್ನ ವಾಡಿಕೆಯ ಕುಶಲತೆಯಿಂದ ಶಿವನ ಮೇಲೆ ಎಸೆವ. ಆಗ ಕಾಮನಿರ್ಪ ವಾಮಭಾಗವಂ ನಿಟಿಲಾಕ್ಷ (ಶಿವ) ನಸುಗೋಪದಿಂದ ನೋಡಿದ. ಹಾಗೆ ನೋಡಿದ ಕೂಡಲೇ ಆತನ ಹಣೆಗಣ್ಣಿನಿಂದ ಉರಿಯು ಹೊರ ಹೊಮ್ಮಿತು:

ಪೊಗೆದುದು, ಪೊತ್ತಿದತ್ತು, ಕಿಡಿಯಿಟ್ಟುದು
ನಾಲ್ದೆಸೆತೋರಿದತ್ತು ಬಾನ್
ಗೆ ಒಗೆದುದು ನಿಂದು ಪೊಂಚೆಳಗುಮಂ ಪರಪುತ್ತ
ಅದು ಧಂ ಧಗಿಲ್, ಧಗಿಲ್
ಧಗಿಲ್ ಎನುತ್ತ ಅಟ್ಟಿ ತಟ್ಟಿದುದು ಮುಟ್ಟಿತು
ತಿಂದು ತೇಗಿದ
ತು ಅಗಿಯದೆ ನಿಂದ ಪೊಗಣೆಯನಂ ಪಣೆ
ಗಣ್ಣುರಿ
ಹಂಪೆಯೊಳ್ದನಾ

ಹೊರ ಹೊಮ್ಮಿದ ಜ್ವಾಲೆ ಭೀಕರವಾಗಿ ಹಬ್ಬಿತು. ಕಾಮನನ್ನು ಅಟ್ಟಿತು, ಸುಟ್ಟಿತು. ಈ ವರ್ಣನೆಯಲ್ಲಿ ಉರಿಯ ಪ್ರಚಂಡತೆಯಿದೆ. ಹರಿಹರನ ಪದಗಳ ಶಕ್ತಿ ಸಂಪನ್ನತೆಯಿದೆ. ಅನುಕರಣ ವಾಚಕಗಳ ಸಮರ್ಪಕತೆಯಿದೆ. ಇಲ್ಲಿಯ ಪದಪ್ರಯೋಗದಿಂದ ಜ್ವಾಲೆಯ ಹಬ್ಬುಗೆಯ ಮತ್ತು ಕಾಮದಹನದ ಚಿತ್ರ ಕಣ್ಮುಂದೆ ನಿಂತಂತಾಗುತ್ತದೆ. ಇತ್ತ "ಬೆಂದ ನುಲಿಯಂತೆ ಮದನಂ ನಿಂದಿರೆ" ಅತ್ತ ಶಿವನ ಮುಂದೆ ನಿಂತಿದ್ದ "ಗಿರಿಜಾ ಕಾಂತೆಯನ್ ಈಕ್ಷಿಸದೆ ನುಡಿಯಿಸದೆ ಅಂತರ್ಧಾನಕ್ಕೆ ಸಂದನ್" ಇದರಿಂದಾಗಿ ಗಿರಿಜೆಯ ಅಹಂಕಾರಕ್ಕೆ ಆಘಾತವೊದಗಿತು. ಆಗ ಆಕೆ,

ತಾನ್ ಇರ್ದಲ್ಲಿಗೆ ನಡೆತಂ
ದು ಆನ್ ಅರ್ಚಿಸೆ ಕಾಮವೈರಿ ನುಡಿಯಿಸದೆ ಅಂತ-
ರ್ಧಾನಕ್ಕೆ ಸಂದನ್, ಅರ್ದಂಟೇಂ
ಆನ್ ಇರ್ದಲ್ಲಿಗೆ ಸಮಂತು (ಶಿವನಂ) ತರ್ಪೆಂ

ಎಂಬ ಪ್ರತಿಜ್ಞೆ ಕೈಕೊಂಡಳು. ಅದಕ್ಕಾಗಿ ಉಗ್ರ ತಪಸ್ಸಿಗೆ ತೊಡಗಿದಳು.

ಬೇಸಿಗೆ, ಮಳೆಗಾಲ, ಚಳಿಗಾಲ ಈ ಋತುಗಳ ಭೀಕರತೆ ಅದನ್ನು ಸುಕುಮಾರ ಗಿರಿಜೆ ಎದುರಿಸಿದ ಕೆಚ್ಚು ಇವುಗಳನ್ನು ಹರಿಹರನು ಸಮರ್ಪಕವಾಗಿ ಭವ್ಯವಾಗಿ ಬಣ್ಣಿಸಿದ್ದಾನೆ.

**ಬೇಸಿಗೆ**

ದೆಸೆಯಂ ಕಾಹೇರಿಸುತ್ತುಂ ತೃಣಕುಲಲತೆಯಂ ಸೀದು
ಕರ್ಪೇರಿಸುತ್ತುಂ
ರಸೆಯಂ ಸಂತಾಪಿಸುತ್ತುಂ ಜಳಭರಿತ ತಟಾಕಂಗಳಂ
ಶೋಷಿಸುತ್ತುಂ
ಸಸಿಯಂ ವೃಕ್ಷಾಳಿಯಂ ಸುಟ್ಟುರಿಪುತೆ, ಮೃಗಮಂ ಬೇಯಿ
ಸುತ್ತ ಅದ್ರಿಯಂ ದ
ಳ್ಳಿಸಿ ಸೀಳುತ್ತುಂ ವಿಶಾಳಂ ದವ ಶಿಖಿಯವೊಲ್
ಎಳ್ದತ್ತು ಅಮೋಘನಿದಾಘಂ
ಪರಿಪರಿಲೆಂದು ಸೀದುವು ವಿಹಂಗಕುಲಂ ಕೆರೆಬಾವಿ
ಬೆಂಚೆಗಳ್
ಪುರಿದರಳ್ದುವು ಈ ಮನುಜರ್ ಆತಪ ತಾಪದೊಳ್
ಅಳ್ಕಿ ಬಳ್ಕಿದರ್
ಕರಿಮುರಿವೋಯ್ತು ಅರಣ್ಯಂ ಉರಬೆಂದು ಮೃಗಾವಳಿ
ಪೊಂದಿದತ್ತು ನಿಂ
ದು ಉರಿದುವು ಬೆಟ್ಟಂ ಇಂಗಿದುವು ವಾರಿಧಿ, ಕಾಯ್ದುದು
ಭೂರಿತಳಂ ೧೧
ಮರದಡಿಯೊಳ್ ಕಾನನದೊಳ್
ಗಿರಿತಟದೊಳ್ ಬಟ್ಟಬಯಲೊಳ್ ಅಂಬರತಳದೊಳ್
ಕರಿಯ ಬಿಸಿಲ್, ಉರಿಯ ಬಿಸಿಲ್, ಅ
ಚ್ಚರಿಯ ಬಿಸಿಲ್, ಅಖಂಡಿತದ ಬಿಸಿಲ್||

ಆ ಭೀಷ್ಮ ಗ್ರೀಷ್ಮದಲ್ಲಿ ಒಂದು ಮದಗಜವು ಪಟ್ಟ ಪಾಡು ಇಂತಿದೆ:

ನಡೆಯಲ್ಕೊಂದು ಅಡಿಯಿಟ್ಟು, ಕಾಯ್ದ ನೆಲನಂ ಕಾಲ್
ಮುಟ್ಟಿ ಚುಯ್ ಎಂದು ಬೆಂ
ದೊಡೆ ಮತ್ತೊಂದಡಿ ಎತ್ತಲಾಗದ ಅಳಲಿಂ ಕಣ್ಮುಚ್ಚಿ
ಹಸ್ತಾಗ್ರಮಂ
ಕಡೆವಾಯೊಳ್ ಸರೆವಿಟ್ಟು ನೆತ್ತಿ ಬಿರಿದು ಎತ್ತಲುಂ
ಮುತ್ತುಗಳ್ ಸುತ್ತಲುಂ
ಸಿಡಿಯುತ್ತಿರ್ಪನಂ ಇರ್ದುದು
ಆದರೆ ಘೋರ ತಪೋವಶೆ ಗಿರಿಜೆ ಶಶಿಧರನಂ ನೆನೆದು
ಬೆಸಗೆಯ ಕಳೆದಳ್.

**ಮಳೆಗಾಲ**

ಪೋದುದು ಬೇಸಗೆ, ಕಾರ್ಮೊಗವಾದುದು........
ತವೆ ಬಳೆದು ಪರ್ಬುತ ಆಕಾ
ಶವನೇರಿದ ಮುಗಿಲ ನೀರಸರೆಯಿಂತಮಿರೆದು
ಶ್ರಾವನಂ ಬಿಡಿಸುವ ಘನಶ-
ಸ್ತ್ರವಣಂ ಹೊಳೆವಂತೆ ಮಿಂಚು ಮಿಂಚಿತ್ತಾಗಳ್
ಒತ್ತರಿಸುತ್ತಂಬರಮಂ
ಮುತ್ತುತ್ತುಂ ದಿಗ್ವಿತಾನಮಂ ಧರೆಯೊಳ್ ತೀ-
ವುತ್ತುಂ ಕತ್ತಲಿಸುತ್ತುಂ
ಸುತ್ತುಂ ಜಿನುಗಿದವು ಸೋನೆ ಇರುಳುಂ ಪಗಲುಂ||
ಗಗನಂ ಕಟ್ಟುದು. ಚಂದ್ರಸೂರ್ಯರ್ ಅಳಿದರ್,
ದಿಕ್ಚಕ್ರಂ ಇಲ್ಲಾಯ್ತು ಬ
ಟ್ಟೆಗಳ್ ಅಸ್ಪಷ್ಟಮಾದುವು ಅತ್ತಜಳದೊಳ್ ಪೂಳ್ದತ್ತು
ಧಾತ್ರೀತಳಂ
ಖಗಸಂಚಾರತೆ ಶೂನ್ಯಮಾದುದು; ನಿರುದ್ಯೋಗಕ್ಕೆ
ಪಕ್ಕಾದುದೀ
ಜಗಮೆಂಬಿನಂ ಕಟ್ಟಿ ಕರೆದತ್ತಾಸಾರವೀಲೋಕತಳ
ದೊಳ್||
ಸುರಿದುದು ಮಳೆ; ತಣಿಯುತ್ತಿಳೆ
ನೆರೆದುದು ಬೆಳೆ; ಕಾನನಂಗಳೊಳ್ ವಿಸಟಂ
ಬರಿದುವು ಹೊಳೆ; ನಾಂದುವು ಶಿಳೆ
ಧರಣಿಗೆ ಮಳೆ ಪಿಡಿದ ತಳೆಗಳಾದುವು ಮಳೆಯೊಳ್
ಇಂತು ನೆಗೆದ ಮುಗಿಲ್ಗಳ ಭೀಕರಾಕಾರಕ್ಕಂ ಮಿಂಚು
ಗಳ ಸಂಚಳತೆಗಂ ಮೊಳಗಿನ ಮಹಾಧ್ವನಿಗಂ, ಸಿಡಿಲ
ಸಡಗ
ರಕ್ಕಂ, ಬಲ್ಸರಿಗಳ ಸಂಭ್ರಮಕ್ಕಂ, ಬಿರುವಳೆಯ ಬಲ್ಪೊ

ಯಿಲ್ಲಂ, ಪರ್ಮಳೆಯ ಧಾರಗಂ, ಆಲಿಕಲ್ಲ ಕರ್ಕಶಕ್ಕಂ
ಇಂದ್ರಗೋಪದ ಸಂಪದಣೆಗಂ, ಶೀಕರದ ಶೀತಕ್ಕಂ,
ತುಂತುರ
ತಿಂತಿಣಿಗಂ, ಸೋನೆಗಳ ಜಿನುಂಗಿಗಂ, ಬಿರುಗಾಳಿಯ ಗಾಸಿಗಂ
............ಕ್ರೂರ ಮೃಗದ ರೌದ್ರಕ್ಕಂ, ಉಗ್ರ ಸರ್ಪಂಗಳ
ಅದ್ಭುತಕ್ಕಂ....... ಕೋಡದೆ, ಕೊಂಕದೆ, ಬಾಡದೆ,
ಬಳ್ಕದೆ
ಸೆಡೆಯದೆ........ ಬೆಚ್ಚದೆ ಬೆದರದೆ, ಬಲಂಗಡದೆ,
ಮನಂಗುದದೆ, ಕೆಲನಂ ಸಾರದೆ, ಸಹಾಯಮಂ
ಪಾರದೆ
ಅಪರ್ಣೆ ಒಪ್ಪುತ್ತುಂ ಇರ್ದಳ್

**ಚಳಿಗಾಲ**

ಇತ್ತಲ್ ಭೂತಳದೊಳ್ ಹಿಮ
ಮ್ ಒತ್ತರಿಸಿತು ಭುವನ ಜನಮಂ ಉರೆನಡುಗಿಸುತುಂ
ಸುತ್ತುತ್ತುಂ, ಸುಗಿಯುತ್ತುಂ
ಮುತ್ತುತ್ತುಂ, ಮುಂದುಗೆಡಿಸುತುಂ ಮುಸುಕಿಡುತುಂ||
ಸಲೆರವಿ ತೇಜಗುಂದುವಂತೆ
ನಿಲಲ್ ಅಂಜುತ್ತೆ ಓಡಿ ಪುಗುವಂ ಅದ್ರಿಯಮರೆಯೊಳ್,
ಗೆಲೆ ಹರಿವ ಹಾವು ಉರಿವ ಕಿರ್ಚು
ಎಲೆ ನಿಂದುವು ಶಿಶಿರನೃಪತಿಯ ಆಜ್ಞೆಗೆ ಜಗದೊಳ್
ತಿಳಿವೊಡೆ ಶಶಿ ರವಿ, ರವಿ ಶಶಿ
ಬೆಳಗುವ ಜೊನ್ನಂ ಬಿಸಿಲ್, ಬಿಸಿಲ್ ತಾಂ ಜೊನ್ನಂ
ಚಳಿ ಬಿಸುಪು, ಬಿಸುಪು ಚಳಿ ಎನೆ
ಬೆಳೆದುದು ಹಿಮರಾಜತೇಜಂ ಈ ಜಗದೆಡೆಯೊಳ್
ನುಡಿಯ ಹುಹು ಮಾತು ಎ
ಕೆಡಡಲೇ ಪ್ರಾಣಂಗೆ ಚಳಿಯ ಕುಪ್ಪುಸಂ ಆಯ್ತು
ಎಂದೊಡೆ ಹಿಮದ ಮಹಿಮೆಯಂ ಪೇ
ಳ್ವೊಡೆ ಕೇಳ್ವ ಅವನೊರ್ವನ್ ಉರ್ವೀತಳದೊಳ್
ಪುಟ್ಟಿತು ಚಳಿ, ಬಳೆದುದು ಚಳಿ
ಕೊಟ್ಟುದು ಚಳಿ, ಕೊಂಡುದು ಎಲ್ಲಮುಂ ಚಳಿಚಳಿ ಎಂ
ದು ಉಟ್ಟುದು ಚಳಿ, ತೊಟ್ಟುದು ಚಳಿ
ಮೆಟ್ಟಿತು ಚಳಿ, ಮುಟ್ಟಿತೆಲ್ಲ ಚಳಿ ಪೊಸ ಚಳಿಯೊಳ್

ಈ ಬಗೆಯ ಚಳಿಯೂ ಗಿರಿಜೆಯನ್ನು ವಿಚಲಿತಗೊಳಿಸಲಿಲ್ಲ.

ಇಂತು ನಿದಾಘದ ನಿಷ್ಠುರತೆಯೊಳಂ ಮಳೆಗಾಲದ ಪ್ರಳಯಜಲದೊಳಂ, ಮಾಗಿಯ ಮಹಾಶೀತದೊಳಂ.... ಗಿರಿಜೆ ಅಚಲ ತಪಸ್ಸಿನಲ್ಲಿ ನಿರತಳಾಗಿದ್ದಳು. ಆಕೆಯ ತಪಃಪ್ರಭಾವವು ಶಿವನಗಚ್ಚುಗಟ್ಟಿದ ಧೈರ್ಯಮಂ ಒಡೆಯಿತು. ಆಗ ಆತನು ಇನ್ನಿರಲೆಬಾರದೆಂದು ನಿರ್ಧರಿಸಿದ. ಗಿರಿಜೆಯಿದ್ದೆಡೆಗೆ ಬಂದ. ಕಪಟ ವೇಷದಲ್ಲಿ ಗಿರಿಜೆಯನ್ನು ಪರೀಕ್ಷಿಸುವ ಪ್ರಯತ್ನ ಮಾಡಿದ. ಆದರೆ ಗಿರಿಜೆ ಗೆದ್ದಳು. ಶಿವ ಸೋತ. ತನ್ನ ನಿಜ ರೂಪದಲ್ಲಿ ಪ್ರಕಟನಾದ. ಆಗ ಗಿರಿಜೆಯು ಶಿವನನ್ನು ನೋಡಿದ ಇನ್ನೊಂದು ಬಗೆಯನ್ನು ಹರಿಹರ ಕುಶಲತೆಯಿಂದ ಬಣ್ಣಿಸಿದ್ದಾನೆ:

ಅವಲೋಕನದಿಂ ಸೆಳೆದಳ್
ಶಿವನಂ ಮನದಿಂದೆ ತೆಗೆದಳ್, ಅಪ್ಪಿದಳ್ ಅತ್ಯು
ತ್ಸವದಿಂ ಚಿತ್ತದೊಳ್ ಎಳಸುತ ತವಕಂ
ಮಿಗೆ ಚುಂಬಿಸಿದಳ್ ಅಹಂಕಾರದೊಳಂ

ಶಿವ: ನಡೆ ಕೈಲಾಸ ಗಿರಿಗೆ ಹೋಗುವ.
ಗಿರಿಜೆ: ಗಿರೀಶ್ವರನಲ್ಲಿ ಎನ್ನಂ ಬೇಡಿ.... ವಿವಾಹಮಂ ಕರುಣಿಪುದು

ಗಿರಿಜೆಯ ಉತ್ತರವು ಭಾರತದ ನಾರಿಯರ ಆದರ್ಶಕ್ಕೆ ಅನುಗುಣವಾಗಿದೆ. ಶಿವ ಹಾಗೆಯೇ ಮಾಡಿದ. ಅತ್ಯಂತ ಸಂಭ್ರಮದ ಮದುವೆ ನಡೆಯಿತು. ಅದು ಗಿರಿಜೆಯ ಕಲ್ಯಾಣ. ರತಿಯ ಕಲ್ಯಾಣವೂ ಅದರಲ್ಲಿ ಸೇರಿದೆ. "ಚೆಂದುನುಲಿ"ಯೂಗಿದ್ದ ಕಾಮ ಗಿರಿಜೆಯ ಕೃಪೆಯಿಂದಾಗಿ "ನೆನೆದಾಗಳ್ ಅನಂದವಾಗಿ ರತಿಗೆ ಸುಖ ಸಂಪದಂ ಕುಡುತಿರ್ಕೆ" ಎಂಬ ವರದಾನವನ್ನು ಶಿವ ದಯಪಾಲಿಸಿದ. ಹರ-ಗಿರಿಜೆಯರ ಮದುವೆ ನಡೆದುದು ಲೋಕ ಕಲ್ಯಾಣಕ್ಕೆಂದೇ.

ಗಿರಿಜೆಯ ಬಾಲ್ಯ, ಶಿವನನ್ನು ಕುರಿತ ಆಕೆಯ ಒಲವು, ಭಕ್ತಿ, ಅರ್ಚನೆ, ಕಾಮನ ಆಗಮನ, ಸೈನ್ಯ ಸನ್ನಾಹ, ಬಾಣ ಪ್ರಯೋಗ, ಶಿವನ ಹಣೆಗಣ್ಣಿನ ಉರಿ, ಕಾಮದಹನ, ರತಿ ವಿಲಾಪ, ನಂತರ ಗಿರಿಜೆ ಕೈಗೊಂಡ ಪ್ರತಿಜ್ಞೆ, ಬೇರೆ ಬೇರೆ ಋತುಗಳು, ಆಯಾ ಋತುಗಳಲ್ಲಿ ನಡೆಸಿದ ಕಠೋರ ತಪಸ್ಸು ಇತ್ಯಾದಿ ವರ್ಣನೆಗಳಲ್ಲಿ ಹರಿಹರನ ಕಾವ್ಯಶಕ್ತಿ, ವಿವಿಧ ರಸ ಪೋಷಣೆ ಹೊರಹೊಮ್ಮಿ ಬಂದಿವೆ. ವಟುವೇಷದ ಶಿವ, ಪಾರ್ವತಿಯರ ಸಂದರ್ಶನದಲ್ಲಿ ನಾಟಕೀಯ ಕುಶಲತೆ ವ್ಯಕ್ತವಾಗಿದೆ. ಈ ಅಂಶಗಳು ಹರಿಹರನ ಕಾವ್ಯ ಪ್ರತಿಭೆಯನ್ನು ಸ್ಪಷ್ಟಪಡಿಸುತ್ತದೆ.

ಚಂಪೂ ರೂಪದಲ್ಲಿ ಪಾಂಡಿತ್ಯದ ನಿಲುವಿನಲ್ಲಿ ರಚಿತವಾಗಿದ್ದರೂ "ಗಿರಿಜಾ ಕಲ್ಯಾಣ" ಕಾವ್ಯದಲ್ಲಿ ಹರಿಹರನ ಹೊಸ ಹಾದಿ ಕಂಡುಬರುತ್ತದೆ. ಚಂಪೂ ರಚನೆಯು ಸಡಿಲುಗೊಂಡು ಕಾವ್ಯವು ಸುಲಭತೆಯತ್ತ ಸಾಗಿದೆ. ಕಂದ, ವೃತ್ತಗಳಲ್ಲಿ ಹರಿಹರನು ವಿಶೇಷ ಸೊಬಗನ್ನು ತುಂಬಿದ್ದಾನೆ. ಸಹಜ, ಸುಂದರ ಕನ್ನಡ ಪದಗಳನ್ನು ಹೆಚ್ಚಾಗಿ ಬಳಸಿದ್ದಾನೆ. ಸಂಸ್ಕೃತದ ಧಾಟಿಯಿಂದ ಬಿಡುಗಡೆ ಪಡೆಯುತ್ತಿರುವ ಕನ್ನಡ ಭಾಷಾ ಶೈಲಿ ಇಲ್ಲಿ ಕಂಡು ಬರುತ್ತಿದೆ. ಗದ್ಯ ಭಾಗದಲ್ಲಿ ಈ ಸಂಗತಿಯು ಇನ್ನಷ್ಟು ಸ್ಪಷ್ಟವಾಗಿದೆ. ಇಲ್ಲಿಯ ಗದ್ಯ ಭಾಗಗಳು ರಗಳೆಯ ಶೈಲಿಗೆ ಸಮೀಪವಾಗಿವೆ. ಅಂತೆಯೆ ಅಲ್ಲಿ ಸಹಜ ಓಟವಿದೆ. ಕನ್ನಡ ಭಾಷೆ ಹೊಸ ಅವಸ್ಥೆಗೆ ತಿರುಗುತ್ತಿರುವ ಕನ್ನಡ ಗದ್ಯ ಹೆಚ್ಚು ಸ್ವಾಭಾವಿಕ, ಶಕ್ತಿಪೂರ್ಣವಾಗುತ್ತಿರುವ ಒಲವು ಇಲ್ಲಿದೆ. ಕನ್ನಡ ಅಕ್ಷರಗಳ ದಿಸೆಯಲ್ಲಿಯೂ ಹರಿಹರ ಕ್ರಾಂತಿಕಾರಕ ನಿಲುವನ್ನು ತೋರ್ಪಡಿಸಿದ:

ನೋಡುವಡೆ ಒಂದು ಅಕ್ಕರಂ ಅದು
ಮಾಡುವೆಡೆ ಉಚ್ಚಾರಣೆಗೆ ಅರಿದು ಮೂರುತೆರನಂ
ಕೂಡೆ ಕವಿತತಿ ವಿಚಾರಿಸ
ಬೇಡದರಿಂ ರಳಕುಳಕ್ಷಳಂಗಳನಿದರೊಳ್

ಎಂದು ಘೋಷಿಸಿ ರಳ ಕುಳ ಕ್ಷಳ ಅಕ್ಷರಗಳ ಬಳಕೆಯನ್ನು ಸುಗಮಗೊಳಿಸಿದ. ಕನ್ನಡ ಅಕ್ಷರಗಳ, ಪದಗಳ, ಛಂದಸ್ಸಿನ ಪ್ರಯೋಗದಲ್ಲಿ ಮತ್ತು ಕಾವ್ಯರಚನೆಯ ಉದ್ದೇಶದಲ್ಲಿ ಕಾವ್ಯ ವಸ್ತುವಿನಲ್ಲಿ, ಕಾವ್ಯದ ಪಾತ್ರಗಳಾಗಿ ಸಾಮಾನ್ಯರನ್ನು, ದಲಿತರನ್ನು ಆಯ್ದುಕೊಂಡ ಬಗೆಯಲ್ಲಿ ಅವರ ದಿನನಿತ್ಯದ ಬಾಳನ್ನು ಆಧ್ಯಾತ್ಮಿಕಕ್ಕೆ ತಿರುಗಿಸಿಕೊಂಡ ಕುಶಲತೆಯಲ್ಲಿ ಹರಿಹರ ಕನ್ನಡ ಕಾವ್ಯ ಮಾರ್ಗಕ್ಕೆ ಹೊಸ ಆಯಾಮವನ್ನು ತಂದುಕೊಟ್ಟಿದ್ದಾನೆ. ಮುಂದಿನ ಕವಿಗಳಿಗೆ ಹೊಸ ಹಾದಿಯನ್ನು ತೆರೆದಿದ್ದಾನೆ. ಹೀಗೆ ಹರಿಹರ ಯುಗಪ್ರವರ್ತಕ ಕವಿಯಾಗಿದ್ದಾನೆ.

ಪಾಂಡಿತ್ಯ ಪ್ರದರ್ಶಕವೆನಿಸಿದ್ದ ಚಂಪೂ ರೂಪದ ಕಾವ್ಯವಲ್ಲದೆ ರಗಳೆಗಳನ್ನು ರಚಿಸಿದುದರಲ್ಲಿ ಹರಿಹರನ ದಿಟ್ಟತನವಿದೆ. ಈತನ ಶಿಷ್ಯ ರಾಘವಾಂಕ ಷಟ್ಪದೀ ರೂಪದ ಕಾವ್ಯ ರಚನೆಯನ್ನು ಆರಂಭಿಸಿದ. ಹೀಗೆ ಇವರಿಬ್ಬರೂ ಮುಂದಿನ

ಕವಿಗಳಿಗೆ ಹೊಸ ಹಾದಿಯನ್ನು ಸಿದ್ಧಗೊಳಿಸಿದರು. ಇಡಿಯ ಕೃತಿಯನ್ನು ರಗಳೆಯ ರೂಪದಲ್ಲಿ ರಚಿಸಿದ ದಿಟ್ಟತನ ಹರಿಹರನದು. ಈ ರಗಳೆಗಳ ರಚನೆಯಿಂದಲೂ ಆತನು ಮಹಾಕವಿ ಪದಕ್ಕೆ ಅರ್ಹನಾಗುತ್ತಾನೆ.

ಹರಿಹರನು ರಚಿಸಿದ ರಗಳೆಗಳ ಸಂಖ್ಯೆಯನ್ನು ಕುರಿತು ಭಿನ್ನಾಭಿಪ್ರಾಯ ಬಂದಿವೆ. "ನೂರಿಪ್ಪತ್ತು" ಎಂಬುದು ಸಾಂಪ್ರದಾಯಿಕ ಹೇಳಿಕೆಯಾಗಿದೆ. ನಾನು ಮಾರ್ಗದರ್ಶನ ಮಾಡಿದ ಒಂದು ಪಿ. ಹೆಚ್. ಡಿ. ಸಂಶೋಧನ ಮಹಾಪ್ರಬಂಧದ ಪ್ರಕಾರ ಆ ಸಂಖ್ಯೆಯನ್ನು ೧೦೬, ಎಂದು ನಿರ್ಧರಿಸಲಾಗಿದೆ. ೬೩ ಪುರಾತನರ, ಕೆಲವು ನೂತನ ಶರಣರ ಚರಿತ್ರೆಗಳು ಮತ್ತು ಕೆಲವು ಸಂಕೀರ್ಣ ರಗಳೆಗಳು ಇವುಗಳಲ್ಲಿ ಸಮಾವೇಶಗೊಳ್ಳುತ್ತವೆ.

ಈ ರಗಳೆಗಳ ಮೂಲಕ ಹರಿಹರನು ಕನ್ನಡ ಸಾಹಿತ್ಯಕ್ಕೆ ಶಿವಶರಣರ ಒಂದು ನೂತನ ಪ್ರಪಂಚವನ್ನು ಒದಗಿಸಿದ್ದಾನೆ.

ವಿವಿಧ ವೃತ್ತಿ, ಅಭಿರುಚಿ, ಸಾಮಾಜಿಕ ಅಂತಸ್ತು, ಮನೋಧರ್ಮ ಸ್ವಭಾವವುಳ್ಳ ಶಿವಭಕ್ತರ ಚಿತ್ರಣ ಈ ರಗಳೆಗಳಲ್ಲಿ ಬಂದಿದೆ. ಮಾನವ ಸಹಜ ಭಾವನೆಗಳ ಮಹೋನ್ನತೀಕರಣವನ್ನು ಸಾಧಿಸಿದ ಶಿವಭಕ್ತರು ಇಲ್ಲಿದ್ದಾರೆ. ಅವರ ಭಕ್ತಿ ನಿರ್ಭರತೆಯನ್ನು ಹರಿಹರನು ತನ್ಮಯತೆಯಿಂದ, ಸುಂದರವಾಗಿ ಚಿತ್ರಿಸಿದ್ದಾನೆ.

ಹರಿಹರನ ಈ ಶಿವಗಣ ಪ್ರಪಂಚವು ವ್ಯಾಪಕ ಮತ್ತು ವೈವಿಧ್ಯಪೂರ್ಣ. ಮಾನವೀಯ ಬಾಳುವೆಯಲ್ಲಿ ದೈವೀ ಸಾಹಸಗಳನ್ನು ಕೈಗೊಂಡು, ಸಫಲತೆ ಪಡೆದ ದೈವೀ ಮಾರ್ಗದ ಯೋಧರವರು. ಮುಗ್ಧ ಭಕ್ತಿಯಿಂದ ಅಸಾಮಾನ್ಯ ಕಾರ್ಯದಲ್ಲಿ ತೊಡಗಿ ಕೃತಕೃತ್ಯರಾದ ರುದ್ರ ಪಶುಪತಿ, ಕೋಳೂರು ಕೊಡಗೂಸು ಇವರ ಚಿತ್ರಗಳಿವೆ. ಉಗ್ರ ನಿಷ್ಠಾವಂತರಾಗಿ ಮಾನವರನ್ನು ಬೆರಗುಗೊಳಿಸಿ ಶಿವನನ್ನು ಮೆಚ್ಚಿಸಿದ ಓಹಿಲಯ್ಯ, ಕಾರಿಕಾಲಮ್ಮ, ತಿರುನೀಲಕಂಠರಂತಹವರಿದ್ದಾರೆ. ವೇಶ್ಯಾವಿಟ ಜೀವನದಿಂದ ಮೊದಲುಗೊಂಡು ನಂತರ ಚಿತ್ತದಾತುರವನ್ನು ಮಹೋನ್ನತೀಕರಣಗೊಳಿಸಿ ಶಿವಕೃಪೆಗೆ ಪಾತ್ರರಾದ ಮಲುಹಣ, ನಂಬಿಯಣ್ಣರಿದ್ದಾರೆ. ಮರ್ತ್ಯ ಲೋಕದ ಸಾವಿನ ಭೀತಿಯನ್ನು ಇಲ್ಲವಾಗಿಸಿದ ಓಹಿಲಯ್ಯ, ಮಳೆಯರಾಜರಿದ್ದಾರೆ. ಅಲೌಕಿಕ ಶಕ್ತಿ ಪ್ರದರ್ಶನದ ಸ್ಪರ್ಧೆಗಿಳಿದು ಸಜೀವರಾಗಿ ವಿಮಾನದಲ್ಲಿ ಕೈಲಾಸಕ್ಕೆ ತೆರಳಿದ ಮತ್ತು ಇತರರನ್ನು ತಮ್ಮೊಂದಿಗೆ ಕರೆದೊಯ್ದ ಉದ್ಭಟದೇವ ಹಲಾಯುಧ ಅಮರನೀತಿಯಂತಹರಿದ್ದಾರೆ. ಈ ಸ್ಪರ್ಧೆಯಂತೂ ಇರಲಿ, ಭೂಲೋಕದಲ್ಲಿಯೇ ಕೈಲಾಸದ ಸುಖವನ್ನು ಕಂಡುಕೊಂಡ ಬಸವಣ್ಣನವರನ್ನು ಹರಿಹರ ಬಗೆದುಂಬಿ ಬಣ್ಣಿಸಿದ್ದಾನೆ. ಹರಿಹರ ನಿರ್ಮಿತ ಈ ಶಿವಭಕ್ತ ಪ್ರಪಂಚದಲ್ಲಿ ಪಚ್ಚೆಪಸಿಯ ಒಕ್ಕಲು ಮಕ್ಕಳಿದ್ದಾರೆ. ಕೂಸುಗಳು, ನಡುಹರೆಯದವರು, ಮುದುಕರು, ಗಂಡಸರು, ಹೆಣ್ಣು ಮಕ್ಕಳು, ಸಂಸಾರಿಗಳು, ವಿರಕ್ತರು, ಮುಕ್ತರು ಇದ್ದಾರೆ. ವರಕವಿ ಕಾಳಿದಾಸನಂತೆ ಕೂಲಿ ಮಾಡುವವರೂ ಇಲ್ಲಿದ್ದಾರೆ. ತಮ್ಮ ಜೀವನದ ವ್ಯಕ್ತಿಗಳನ್ನೇ ಶಿವಸಾಕ್ಷಾತ್ಕಾರದ ಸಾಧನೆಗಳನ್ನಾಗಿ ಬಳಸಿಕೊಂಡವರ, ಕಾಯಕದಲ್ಲಿಯೇ ಕೈಲಾಸ ಕಂಡವರ ಪ್ರಪಂಚವಿದು. ಆಕಳು ಕಾಯುವ ಅನಯನಾರ, ಒಕ್ಕಲು ಮಗ ಇಳೆಯಾಂಡ ಗುಡಿಮಾರ, ಬೇಡರ ಕಣ್ಣಪ್ಪ, ಕುಂಬರ ಗುಂಡಯ್ಯ, ಭತ್ತ ಕೊಯ್ಯುವ ಅರಿವಾಳ್ತಾಂಡ, ಬಟ್ಟೆ ಹಸನು ಮಾಡುವ ತಿರುಕುರುಂಪ ತೊಂಡರನ್ನು ನಾವು ಈ ಪ್ರಪಂಚದಲ್ಲಿ ಕಾಣುತ್ತೇವೆ. ವಿವಿಧ ವ್ಯಕ್ತಿಗಳ ವರ್ಣರಂಜಿತ ಮೆರವಣಿಗೆಯನ್ನು ಹರಿಹರ ಹೊರಡಿಸಿದ್ದಾನೆ. ಬಗೆಬಗೆಯ ಜನರನ್ನು ಪೋಣಿಸಿದ ಏಕಸೂತ್ರವೆಂದರೆ ಅವರ ಅಚಲ ಶಿವಭಕ್ತಿ, ಅನನ್ಯ ಶಿವನಿಷ್ಠೆ. ಬಾಳಿನಲ್ಲಿ ಘಟಿಸುವುದೆಲ್ಲವೂ ಶಿವಸಂಕಲ್ಪವೆಂದು ಭಾವಿಸಿ ಅದನ್ನು ಪ್ರಸನ್ನತೆಯಿಂದ ಸ್ವೀಕರಿಸಿ ಶಿವನಿಷ್ಠೆಯ ಕೆಚ್ಚಿನಿಂದ ಅವರು ಮಾನವೀಯ ಬಾಳನ್ನು ಎದುರಿಸಿದರು. ದಿವ್ಯ ಜೀವನದತ್ತ ಸಾಗಿದರು. ಇಲ್ಲಿ ಕಾವ್ಯವಿದೆ, ಅಧ್ಯಾತ್ಮವಿದೆ. ಬಾಳಿಗೆ ಬೆಳಕಿದೆ. ಈ ಅಂಶಗಳನ್ನು ಹೊರಹೊಮ್ಮಿಸಿ ತೋರಿಸುವ ಕೆಲವು ಉದಾಹರಣೆಗಳನ್ನು ನಾವಿಲ್ಲಿ ಗಮನಿಸಬಹುದು. ಹರಿಹರ ಮೆಚ್ಚಿಕೊಂಡ ಕೆಲವು ಶಿವಭಕ್ತರ ಸ್ವಭಾವ ಚಿತ್ರಣ:

**ಉದ್ಭಟದೇವ:**

ಶಿವನೊಳ್ ನೋಟಂ ಶಿವನೊಳ್ ಕೂಟಂ
ಶಿವನೊಳ್ ಮಾಟಂ ಶಿವನೊಳ್ ಬೇಟಂ
ಹಾಡುವುದೆಲ್ಲಂ ಸಕಲಸ್ತೋತ್ರಂ
ಮಾಡುವುದೆಲ್ಲಂ ಪೂಜಾಸ್ತೋತ್ರಂ

**ಬೊಮ್ಮಯ್ಯ:**

ಲೌಕಿಕವನೆಳ್ಳನಿತುವನುಸರಿಸದಭಿಮಾನಿ
ಸತ್ಯಂ, ಅಚಲಂ ಮಹೋತ್ಸಾಹಿ, ಕಲಿ, ನಿಷ್ಕಾಮಿ
ನಿತ್ಯ ಲಿಂಗಾರ್ಚನಾನಿರತಂ ಅಭವಪ್ರೇಮಿ
ನಿಂದಯಂ ಸ್ತನಿಸಿದ ನಿತ್ಯತರ ಗುರುಮೂರ್ತಿ

**ವೈಜಕ್ಕವ್ವೆ:**

ಪಸಿವು ಕಾಮ ಆಸೆ ಲೋಭವೆಂಬ ಕಸವನುಡುಗಿ ಕಳೆದು
ಹೃದಯ ನಿಳಯ ಕಮಳವಳಯ ಕರ್ಣಿಕಾ
ಸುಪೀಠದೊಳಗೆ
ಸದಮಳ ಪ್ರಕಾಶರಾಶಿರೂಪು ಲಿಂಗ.... ತೊಳ
ಗುತಿರ್ದುದು

ಮಗು ನಂಬಿಯಣ್ಣ ಬೆಳೆಯುತ್ತಿದ್ದ ಬಗೆ ಹೀಗೆ:

'ಹರಲೀಲೆ ಶಿಸುವಾಗಿ ಬಳೆವಂದಿದಂನೋಡ'

ಬೀದಿಯಲ್ಲಿ ಮಗು ಆಡುತ್ತಿರುವಾಗ ಅಲ್ಲಿಯ ದೊರೆ, 'ನಕ್ಷತ್ರ ಗಣಂಗಳ ನಡುವಣ ಚಂದ್ರ ಬಿಂಬದಂತಿರ್ದ ನಂಬಿಯಣ್ಣನಂ ಕಂಡು ಇದಾರ ಮಗು, ಇದಾರ ಸಾಮರ್ಥ್ಯ, ಇದಾರ ಪುಣ್ಯದ ಪುಂಜಂ, ಇದಾರ ಚೆಲ್ವಿನ ಅಂಕುರಂ? ಎಂದು ಮೂಗಿನೊಳ್ ಕೈಯಿಟ್ಟು ಅರಮನೆಗೆ ಕರೆದೊಯ್ದು, ತಾಯಿ ತಂದೆಗಳು ಹುಡುಕಿ ಕೊನೆಗೆ ಮಗು ಕಂಡಾಗ 'ಕಣ್ ಬಂದಂತೆ, ಉಸುರ್ ಬಂದಂತೆ– ಸಿಡಿಲ್ ಸೋಂಕಿ ಬರ್ದುಕಿದ ಮೊಲ್ಲೆಯ ಮುಗುಳ್, ರಾಹು ಮುಟ್ಟದ ಚಂದ್ರಕಳೆಯ' ಎಂದು ಹೇಳಿ ಸಂತಸಪಟ್ಟರು. ನಂಬಿಯಣ್ಣನ ಬಾಲ್ಯ ಪೂರ್ಣಸಿತು.

ಇಲ್ಲಿ ಬಾಲ್ಯಂ ಸಡಿಲಲ್ ಅಲ್ಲಿ ಕಾಮನ ಕಯ್ಯ
ಬಿಲ್‌ಅಗಲ್ ಸಡಿಲಲ್
ಮದನಂ ಪೋಗಿ ಪರವೆಯರ ಮರೆ ಪೊಗಲು
ವಿನುತ ಲಾವಣ್ಯವಿತ್ತಲು ತನುವಿನೊಳು ಪುಗಲು
...................................
ಏರು ಜವ್ವನ' ಶಿವಪೂಜೆಗೆಂದು ಅರಳುತಿರ್ದ
ಮೊಗ್ಗೆಯತಿರ್ದಳು

**ಪರವೆ:**

'ಹರೆಯ ಕಿರಿದು ಯೌವನಂ ಪಿರಿದಾಗಿ ಮುಖಮೆಲ್ಲಂ
ಕಣ್ಣು

ಚೆನ್ನಲ್ಲಂ ಮುಡಿ, ಉರವೆಲ್ಲಂ ಮೊಲೆ,
ನಡೆಯೆಲ್ಲಂ ಮೃದು
ನುಡಿಯೆಲ್ಲಂ ನೋಟಂ, ನೋಟವೆಲ್ಲಂ ಚೇಟವೆನಿಸಿ'–
ಶೋಭಿಸುತ್ತಿದ್ದಳು.

**ವೃದ್ಧವೇಷದ ಶಿವ:**

'ಕಯ್ಯ ಕೊಡೆಯಿಂ, ಮಯ್ಯ ತೆರೆಯಿಂ ಜೋಲ್ವ
ಪುರ್ವಿಂ,
ನೇಲ್ವ ತೋಳ ತೊವಲಿಂ, ಇಟ್ಟ ವಿಭೂತಿಯಿಂ
ಊರಿದ ಯಷ್ಟಿಯ
ಕೋಲಿಂ ಪಿಡಿದ ಕಮಂಡಲದಿಂದ, ಇಳಿದ ಬೆಳುಗಡ್ಡದಿಂ
ನಡುಗುವ ನರೆದಲೆಯಿಂ....'
ಮದುವೆಯ ಮಂಟಪವನ್ನೇ ಅಸ್ತವ್ಯಸ್ತಗೊಳಿಸಿದ.

ವಿಲಾಸಿನಿಯರೊಡನೆ ವಿಪುಲ ಭೋಗದಲ್ಲಿ ನಿರತನಾಗಿಯೂ ನಂಬಿಯಣ್ಣನಿಗೆ ತೃಪ್ತಿಯೊದಗಲಿಲ್ಲ. ಆಗ ಆತ ಪರಮಾತ್ಮನತ್ತ ಹೊರಳಿದ:

'ಇನ್ನೆನಗೆ ಪಾರ್ವತಿಯೆ ತಾಯಿ,
ವಿರೂಪಾಕ್ಷನೆ ತಂದೆ ಈ
ಲೋಕಕ್ಕೆ ಪರವಶನಲ್ಲ ಹರವಶಂ'.
ಎಂದು ನಿರ್ಧರಿಸಿ ಆ ಪುರದಿಂದ ಹೊರಟ:

'ಸಕಲ ಜನದಾನಂದರಸಂ ಮಡುಗಟ್ಟೆ,
ಚೋಳದೇಶಂ ಗುಡಿಕಟ್ಟೆ
ಭಕ್ತರ ಭಾಳಂ ಪಟ್ಟಂಗಟ್ಟೆ, ಭಕ್ತಿರಸಂ ಸೇತುಗಟ್ಟೆ
ಸತ್ಯದ ನುಡಿ ಕಿರ್ಚುಗಟ್ಟೆ, ಪುಣ್ಯದ ಫಲಂ
ಪಟಗೊನೆಗಟ್ಟೆ
ಶ್ರೀ ಶಿವನ ಸೆಜ್ಜೆಯೆನಿಸಿರ್ಪ ತಿರುವಾರೂರ್....'
ದೇವಾಲಯಕ್ಕೆ ಬಂದ:

'ಎನ್ನ ಗತಿಯೆನ್ನ ಕಣ್ಣೆನ್ನ ಪುಣ್ಯಾಸ್ಪದಂ
ಎನ್ನ ಮತಿಯೆನ್ನ ಸುಖ(ವೆ)ನ್ನ ವಿಧಿಸಂಪದಂ'
ಎಂದು ಶಿವನಿಗೆ ತನ್ನನ್ನು ಪೂರ್ತಿಯಾಗಿ ಸಮರ್ಪಿಸಿಕೊಂಡ.

ತನ್ನ ವಿಲಾಸಿನಿ ಮರಣ ಹೊಂದಿದಾಗ,
'ಅಂತಕಂ ಮಾಡಲಾರಂ ಹರನ ಕಾರ್ಯವಿದು
ಕಂತುಹರನೆಂಬುದಂ ತೋರುವ ವಿರಾಗಮಿದು'
ಎಂಬ ಬೆಳಕು ಆತನಿಗೆ ಹೊಳೆಯಿತು. ಶಿವ ಆತನನ್ನು ಮೆಚ್ಚಿಕೊಂಡು ಎಲ್ಲಾ ಸುಖವಂ ಎನಗೆ ಕೊಡುವ ಏಕಚಿತ್ತಂ ಎಂದು ಹೊಗಳಿದ. ಎಲ್ಲದಕ್ಕೂ ಎಂತಹ ಪರಿಸ್ಥಿತಿಯಲ್ಲಿಯೂ ಶಿವನನ್ನೇ ನಂಬಿದ್ದರಿಂದ ಆತನು 'ನಂಬಿ' ಎಂಬ ಹೆಸರನ್ನು ಸಾರ್ಥಕಗೊಳಿಸಿದ.

ಅಚಲ ಶ್ರದ್ಧೆ ಸಮರ್ಪಣೆಗಳುಳ್ಳ ಶಿವಭಕ್ತರನ್ನು ಹರಿಹರ ಭಕ್ತಿ ನಿರ್ಭರತೆಯಿಂದ ಬಣ್ಣಿಸಿದ್ದಾನೆ.

ಆಕಳು ಕಾಯುವ ಆನಯನಾರನ ಎದೆಯೊಳಗೆ, ಉಸಿರಿನೊಳಗೆ 'ಶಿವ ಸಿಲುಕಿದ್ದನಂತೆ. ಅಂತೆಯೆ ಆತನು ನಿಶ್ಚಿಂತ ಚಿತ್ತದಿಂ ಆನಂದಮಂ ಮುಂತಿಟ್ಟುಕೊಂಡಿದ್ದ.

ಇಳೆಯಾಂಡ ಗುಡಿಮಾರ ಶಿವಭಕ್ತರ ದಾಸೋಹಕ್ಕಾಗಿ ತನ್ನ ಹೊಲಗಳನ್ನು ಮಾರತೊಡಗಿದ:

ಎನಿತೆನಿತು ಭೂಮಿಕ್ರಮದಿಂ ಮಾರಿ ಕಿರಿದಾಗೆ
ಅನಿತನಿತು ತನ್ನಯ ಮನಂ ಪೆರ್ಚಿ ಪಿರಿದಾ(ಯಿತು)

ಭೌತಿಕ ವಸ್ತುಗಳ ಸಂಗ್ರಹ ನಮ್ಮಲ್ಲಿ ಕಿರಿದಾಗುವ ಪ್ರಮಾಣದಲ್ಲಿ ನಮ್ಮ ಮನಸ್ಸು ಘನವಾಗುವುದೆಂಬ ತತ್ವದರ್ಶನದಲ್ಲಿದೆ. ಧನ, ಧಾನ್ಯ, ಮನೆ, 'ಹಾಸಲುಂ ಹೊದೆಯಲುಂ' ತನಗಾಗಿ ಏನೂ ಇಲ್ಲದಿದ್ದಾಗ ಆತನು 'ಹರನಾಮಂ ತನಗೆ' ಇದ್ದಿತೆಂದು ತೃಪ್ತಿಪಟ್ಟುಕೊಂಡ.

**ಬೇಡರ ಕಣ್ಣಪ್ಪ:**

ಪಸಿವಿಂಗೆ ತೆರಪಿಲ್ಲ, ವಿಷಯಕ್ಕೆ ತೆರಪಿಲ್ಲ
ವ್ಯಸನಕ್ಕೆ ತೆರಪಿಲ್ಲ, ಪುಸಿವುದಕೆ ತೆರಪಿಲ್ಲ
ಎಂಬಂತೆ ಬಾಳುತ್ತಿದ್ದ.
ಅರಿವಾಳಾಂಡ ದಿನಗೂಲಿಯಿಂದ ಜೀವಿಸುತ್ತಿದ್ದ:

'ಅರಸಿ ಕರೆದೊಡೆ ಪೋಪಂ, ಅಲ್ಲದಿರ್ದೊಡೆ ಪೋಗಂ'
ಎಂಬ ನಿಯಮ ಪಾಲಿಸುತ್ತಿದ್ದ. ಒಮ್ಮೆ ಶಿವ ಈತನ ಪರೀಕ್ಷೆಗೆ ತೊಡಗಿದ. ಉಪವಾಸ ಬೀಳಬೇಕಾದ ಪರಿಸ್ಥಿತಿಯುಂಟಾಯಿತು. ಆಗ ಅರಿವಾಳಾಂಡ,

ಅಹ ಉಪವಾಸವಲ್ಲಯ್ಯ ಬರ್ದುಂಕಿದೆಂ
ಈ ತೆರದೆ ನಡೆಸಯ್ಯ....
ಎಂದು ಶಿವನನ್ನು ಬೇಡಿಕೊಂಡ.

**ಕುಂಬಾರ ಗುಂಡಯ್ಯ:**

ಊಟಂ ನಿದ್ರೆಗೆ ಮನವಿಲ್ಲಂ
ನೋಟಂ ನುಡಿಗಡೆ ಮನವಿಲ್ಲಂ
ಶಿವಪೂಜೆಯ ಕರಡಿಗೆಯಂತಿರ್ದಂ
ರುದ್ರ ಪಶುಪತಿಗೆ ಆಯುತೀರ್ದೊಡೆ (ಶಿವನ) ನಿಷ್ಠೆ ತೀರಲಿಲ್ಲವಂತೆ: ಮಲುಹಣ ಮಲುಹಣಿಯ 'ವಿರಹಂ ತೆಗೆದು ಹರನ ಮೇಲೆ' ಇಟ್ಟು ಶಿವಪಥವಲ್ಲಿ ಸಾಗಿದ.

ಕೈಲಾಸಕ್ಕೆ ಕರೆಯಬಂದ ಶಿವನಿಗೆ ಬಸವಣ್ಣ
'ಶರಣಸಂಗದ ಸುಖಂ ಕೈಲಾಸದೊಳಗುಂಟೆ?'
ಎಂಬ ಪ್ರಶ್ನೆ ಕೇಳಿದ. ಅಂದರೆ ಶಿವಭಕ್ತರ ಸಹವಾಸದಲ್ಲಿ ಬಸವಣ್ಣ ಮತ್ತು ಹರಿಹರ ಕವಿ ಕೈಲಾಸ ಸುಖದ ಅನುಭವ ಪಡೆಯಬಲ್ಲವರಾಗಿದ್ದರು. ಭೂಲೋಕದಲ್ಲಿ ದೇವ ಲೋಕವನ್ನು ಸ್ಥಾಪಿಸುವ ರಹಸ್ಯವನ್ನು ಅರಿತವರಾಗಿದ್ದರು.

ಕಲ್ಯಾಣದಲ್ಲಿ ಶಿವಶರಣರ ಶಿವಾನುಭವ ಮಂಟಪವು ಮುಕ್ತಾಯಗೊಂಡು ಐವತ್ತು ವರುಷಗಳು ಕಳೆದ ನಂತರ ಮಹಾಕವಿ ಹರಿಹರದೇವ ಹಂಪೆಯಲ್ಲಿ 'ವಿರೂಪಾಕ್ಷ ಮಂಟಪ'ವನ್ನು ಸ್ಥಾಪಿಸಿದ. ಅದನ್ನು ತನ್ನ ಶಿವಗಣದ ರಗಳೆಗಳ ವಾಚನಕ್ಕೆ ವೇದಿಕೆಯನ್ನಾಗಿ ಮಾಡಿಕೊಂಡ. ಅಲ್ಲಿ ನಿತ್ಯವೂ ಭಕ್ತರು ರಗಳೆಗಳ ವಾಚನವನ್ನು ಕೇಳುತ್ತಿದ್ದರು. ಹೀಗೆ ಹರಿಹರ ಜನಸಾಮಾನ್ಯರ ಮನಕ್ಕೆ ಉತ್ತಮ ಸಂಸ್ಕಾರವನ್ನು ಒದಗಿಸಿದ. ಅವರಲ್ಲಿ ಶಿವಭಕ್ತಿ ಸದಾಚಾರಗಳನ್ನು ರೂಢಿಸಿದ.

ಜನತೆಗೆ ಬಾಳಿನ ಬಗೆಗೆ ಉತ್ಸಾಹ ಆನಂದಗಳನ್ನು ಒದಗಿಸಿ, ಬಾಳಿನ ಅರ್ಥವನ್ನು ತಿಳಿಸಿ ಜನತೆಯಲ್ಲಿ ಸದಾಚಾರವನ್ನು ರೂಢಿಸಿ ದಿವ್ಯ ಜೀವನದತ್ತ ಜನರನ್ನು ಕರೆದೊಯ್ಯುವುದು ಕವಿಯ ಘನತೆಯಾಗಿದೆ. ಇಂತಹ ಘನತೆಯುಳ್ಳವ ಮಹಾಕವಿ ಹರಿಹರದೇವ.

# ಕುಮಾರ ವ್ಯಾಸ

ಮಳಲಿ ವಸಂತ ಕುಮಾರ

ಭಾರತೀಯ ಸಂಸ್ಕೃತಿಯ ಸಾಹಿತ್ಯ ಪರಂಪರೆಯ ಅರ್ಥಪೂರ್ಣ ಧ್ವನಿಯೂಗಿ ಮೂಡಿ ಬಂದವನು ಕುಮಾರವ್ಯಾಸ. ಕನ್ನಡ ಸಾಹಿತ್ಯದ ಸಾರ್ವಭೌಮ ಎಂಬ ಹೆಸರು ಇವನಿಗೆ ನ್ಯಾಯವಾಗಿ ಸಲ್ಲುವಂತಹದು. ಸಮಷ್ಟಿ ಪ್ರಜ್ಞೆಯಲ್ಲಿ ಪರಿಭಾವಿಸಿದಾಗ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಈತನ ಸ್ಥಾನ ಉನ್ನತೋನ್ನತವಾದುದು.

## ಕವಿ

ಕುಮಾರವ್ಯಾಸನಿಗೆ ನಾರಣಪ್ಪ ಎಂಬ ಇನ್ನೊಂದು ಹೆಸರು ಪ್ರಚಲಿತವಾಗಿದೆ. ..."ಯೋಗೀಂದ್ರ"ನೆಂದು, ಶುಕರೂಪ"ನೆಂದು ಆತ ತನ್ನನ್ನು ಕರೆದುಕೊಂಡಿದ್ದಾನೆ. ಕುಮಾರವ್ಯಾಸನೆಂಬುದು ಅವನ ಬಿರುದೆಂದೂ ನಾರಣಪ್ಪ ಎಂಬುದು ಅವನ ನಿಜವಾದ ಹೆಸರೆಂದೂ ಕೆಲವರ ವಾದ. ಬಿರುದು ಸಾಮಾನ್ಯವಾಗಿ ಬೇರೆಯವರು ಕೊಟ್ಟದ್ದು. ಆದರೆ ಅದಕ್ಕೆ ಆಧಾರಗಳಿಲ್ಲ. ಕುಮಾರವ್ಯಾಸ ಅವನ ಕಾವ್ಯನಾಮ ಎಂಬುದು ಮಾಸ್ತಿಯವರ ಅಭಿಪ್ರಾಯ.೧ ತೊರವೆ ನರಹರಿ ವಾಲ್ಮೀಕಿಯ ಮೇಲಣ ಭಕ್ತಿಯಿಂದ ತನ್ನನ್ನು ಕುಮಾರ ವಾಲ್ಮೀಕಿ ಎಂದು ಕರೆದುಕೊಂಡಂತೆ, ನಾಗಚಂದ್ರ ಪಂಪನ ಮೇಲಣ ಗೌರವದಿಂದ ತನ್ನನ್ನು ಅಭಿನವ ಪಂಪ ಎಂದು ಕರೆದುಕೊಂಡಂತೆ ನಾರಣಪ್ಪ ವ್ಯಾಸರ ಬಗ್ಗೆ ತನಗಿರುವ ಪ್ರೀತಿಯಿಂದ ತನ್ನನ್ನು ಕುಮಾರವ್ಯಾಸ ಎಂದು ಕರೆದುಕೊಂಡಿರಬಹುದು. ನಾರಣಪ್ಪ ಎಂಬ ಹೆಸರು ಕವಿ ಕೃತಿಯಲ್ಲಾಗಲಿ ಶಾಸನಗಳಲ್ಲಾಗಲಿ ಕಂಡು ಬಂದಿಲ್ಲ. ಇತ್ತೀಚೆಗೆ ಗದುಗಿನ ಕೋಳಿವಾಡ ಗ್ರಾಮದಲ್ಲಿ ಕುಮಾರವ್ಯಾಸನ ಮನೆತನಕ್ಕೆ ಸೇರಿದವರೆಂದು ಹೇಳಲಾದವರ ಮನೆಯಲ್ಲಿ ಕುಮಾರವ್ಯಾಸನನ್ನು ಕುರಿತ ಪ್ರಾಚೀನ ಕಾಗದ ಪತ್ರಗಳಿವೆ. ವೀರ ನಾರಾಯಣಯ್ಯನು ಗದುಗಿನ ವೀರ ನಾರಾಯಣನ ವರಪ್ರಸಾದದಿಂದ ಹುಟ್ಟಿದನೆಂದೂ ಅದಕ್ಕಾಗಿ ಅವನಿಗೆ ಆ ಹೆಸರನ್ನಿಡಲಾಯಿತೆಂದೂ ಒಂದು ಬಖೈರಿನಲ್ಲಿದೆ. ಈ ಹೆಸರಿನ ಸಂಕ್ಷಿಪ್ತ ರೂಪವೇ "ನಾರಣಪ್ಪ"೨ ಎಂದು ಭಾವಿಸಲಾಗಿದೆ. ಆದರೆ ಐನೂರು ವರ್ಷಗಳ ಹಿಂದಿನ ಕವಿಯನ್ನು ಕುರಿತ ಇಂತಹ ಪತ್ರಗಳ ವಾಸ್ತವಾಂಶದ ಬಗ್ಗೆ ವಿದ್ವಾಂಸರಲ್ಲಿ ಸಂದೇಹವಿದೆ. ಈ ಪತ್ರಗಳು ಸ್ವಕಲ್ಪಿತ ಸೃಷ್ಟಿಯಾಗಿರಬಹುದೆಂಬ ಅಭಿಪ್ರಾಯವೂ ಇದೆ. ಆದರೆ ಸ್ವಯಂ ಕುಮಾರವ್ಯಾಸನೆ ಗದುಗಿನ ವೀರನಾರಾಯಣನನ್ನು ತನ್ನ ಕೃತಿಯಲ್ಲಿ ಸ್ತುತಿಸಿರುವುದರಿಂದಲೂ, ಅವನು ಗದುಗಿನ ವೀರನಾರಾಯಣನ ಕಿಂಕರನಾದುದರಿಂದಲೂ ಜನರ "ಸರಸ ಸಂಗ್ರಹ"ದಲ್ಲಿ ಅವನಿಗೆ ನಾರಣಪ್ಪ ಎಂಬ ಹೆಸರು ಉಳಿದು ಬಂದಿರಬೇಕು. ಅಥವಾ ಕುಮಾರವ್ಯಾಸ ಬದುಕಿದ್ದ ಕಾಲದಲ್ಲಿ ಜನ ಅವನನ್ನು ನಾರಣಪ್ಪ ಎಂದು ಸಂಬೋಧಿಸುತ್ತಿದ್ದು ಅದು ಹಾಗೆಯೇ ಉಳಿದು ಬಂದಿರಬೇಕು. ಕವಿ ತನ್ನನ್ನು ಕುಮಾರವ್ಯಾಸ ಎಂದು ತನ್ನ ಗ್ರಂಥದಲ್ಲಿ ಕರೆದುಕೊಂಡಿದ್ದಾನೆ. ಗದುಗಿನಲ್ಲಿರುವ ಒಂದು ಶಾಸನದಲ್ಲಿ (ಶಾ. ಶ. ೧೪೬೧) ವಿಜಯನಗರದ ವೀರಪ್ರತಾಪ ಅಚ್ಯುತರಾಯನು ಕುಮಾರವ್ಯಾಸನ ಇಷ್ಟದೇವತೆಯಾದ ವೀರ ನಾರಾಯಣ ಸ್ವಾಮಿಯ ದೇಗುಲಕ್ಕೆ ದತ್ತಿ ಕೊಟ್ಟನೆಂದಿದೆ. ಇನ್ನು "ಶುಕರೂಪ" ಎಂದು ಅವನ ಪಾಲಿಗಿರುವ ಇನ್ನೊಂದು ಹೆಸರು ಕವಿ ತನ್ನನ್ನು ಬಣ್ಣಿಸಿಕೊಂಡಿರುವ ರೀತಿಯೇ ಹೊರತು ನಿಜವಾದ ಹೆಸರಲ್ಲ. ಅಲ್ಲದೆ ತನ್ನ ಭಾರತದ ಪ್ರತಿ ಪರ್ವದ ಕೊನೆಯಲ್ಲಿ ಬರುವ ಗದ್ಯದಲ್ಲಿ ಈತ "ಶ್ರೀಮತ್ಕುಮಾರವ್ಯಾಸ ಯೋಗೀಂದ್ರ" ಎಂದು ತನ್ನನ್ನು ಸಂಬೋಧಿಸಿಕೊಂಡಿದ್ದಾನೆ. ಯೋಗೀಂದ್ರ ಎಂಬುದು ಕುಮಾರವ್ಯಾಸನೆಂಬ ಹೆಸರಿನ ತುದಿಗೆ ಸೇರಿಕೊಂಡಿದ್ದು ಕವಿಯ ಪರಿವ್ರಾಜಕ ಭಾವನೆಯ ಆಧ್ಯಾತ್ಮಿಕ ಹಿರಿಮೆಗೆ ಸಾಕ್ಷಿಯಾಗಿದೆಯೆ ಹೊರತು ಅದು ಕವಿಯ ನಿಜ ನಾಮಧೇಯವಲ್ಲ.

ಕುಮಾರವ್ಯಾಸನ ಕೃತಿ "ಕರ್ನಾಟಕ ಭಾರತ ಕಥಾಮಂಜರಿ". ಅದು "ಗದುಗಿನ ಭಾರತ", ಕುಮಾರವ್ಯಾಸ ಭಾರತ", "ಕನ್ನಡ ಭಾರತ" ಮುಂತಾಗಿ ಖ್ಯಾತಿಯನ್ನು ಪಡೆದಿದೆ. "ಕರ್ನಾಟಕ ಮಹಾಭಾರತ" ಎಂದೂ ಸಹ ಕರೆಯುತ್ತಾರೆ. ತಾನು ಬರೆದ ಒಂದೇ ಗ್ರಂಥದಿಂದ ಜಗತ್ತಿನ ಮಹಾಕವಿಗಳ ಸಾಲಿಗೆ ಸೇರಿದ್ದು ಕುಮಾರವ್ಯಾಸನ ಹೆಗ್ಗಳಿಕೆ. ನಡುಗನ್ನಡ ಭಾಮಿನಿ ಷಟ್ಪದಿಯಲ್ಲಿರುವ ಈ ಕಾವ್ಯ ಹತ್ತು ಪರ್ವಗಳಲ್ಲಿ ೧೫೨ ಸಂಧಿಗಳನ್ನೊಳಗೊಂಡಿದೆ. ಇದರಲ್ಲಿ ಸುಮಾರು ೮೦೮೪ ಪದ್ಯಗಳಿವೆ. ಕುಮಾರವ್ಯಾಸ "ಐರಾವತ" ಎಂಬ ಮತ್ತೊಂದು ಕೃತಿಯನ್ನು ಬರೆದಿದ್ದಾನೆ ಎಂಬ ಹೇಳಿಕೆ ಇದೆ. ಆ ಗ್ರಂಥದ ಕರ್ತೃತ್ವಕ್ಕೆ ಮೂವರು ಕವಿಗಳ ಹೆಸರುಗಳು ಅಂಟಿಕೊಂಡಿವೆ. ಎಂಟು ಸಂಧಿಗಳ ಈ ಕಾವ್ಯದ ಹಸ್ತಲಿಖಿತ ಪ್ರತಿಗಳ ಕೊನೆಯಲ್ಲಿ ಬರುವ ಗದುಗಿನ ವೀರ ನಾರಾಯಣನ

---

೧. ನೋಡಿ: ಮಾಸ್ತಿ ವೆಂಕಟೇಶ ಐಯ್ಯಂಗಾರ್, ಕುಮಾರವ್ಯಾಸ, ಕನ್ನಡ ವಿಶ್ವಕೋಶ, ಸಂ. ೪, ಪುಟ ೭೨.

೨. ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರಿ, ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಸಂ. ೫, ಪು. ೬೧೮.

ಅಂಕಿತ ಇರುವುದು ಇದು ಕುಮಾರವ್ಯಾಸ ಬರೆದದ್ದೆಂದು ಹೇಳಲು ಕಾರಣವಾಗಿದೆ. ಆರ್. ಎಸ್. ಪಂಚಮುಖಿ "ಐರಾವತ" ಕುಮಾರವ್ಯಾಸ ವಿರಚಿತವೆಂದು ಅದರ ಉಪೋದ್ಘಾತದಲ್ಲಿ ಹೇಳುತ್ತಾರೆ. ಆದರೆ ರಂ. ಶ್ರೀ ಮುಗಳಿ ಅವರು "ಕುಮಾರವ್ಯಾಸನು ಈ ಕಾವ್ಯದ ಕರ್ತೃವಾಗಿರಲಾರನೆಂದೂ ಬೇರೊಬ್ಬ ತರುವಾಯದ ಸಾಧಾರಣ ಕವಿ ಕುಮಾರವ್ಯಾಸನ ಆದಿ ಪರ್ವದ "ಐರಾವತ" ಭಾಗವನ್ನು ತನಗೆ ತೋರಿದಂತೆ ವಿಸ್ತರಿಸಿ ಬರೆದಿರಬಹುದೆಂದೂ ನಮಗೆ ತೋರುತ್ತದೆ. ಏಕೆಂದರೆ ಭಾವಭಾಷೆಗಳಲ್ಲಿ ಕುಮಾರವ್ಯಾಸನ ಉಜ್ವಲತೆ ಸಹಜತೆಗಳ ಅನುಭೂತಿ ಇದರಲ್ಲಿ ಆಗುವುದಿಲ್ಲ"೩ ಎಂದು ಅಭಿಪ್ರಾಯಪಡುತ್ತಾರೆ. ಐರಾವತ ಕರ್ತೃವಿನ ಬಗ್ಗೆ ವಿದ್ವಾಂಸರಲ್ಲಿ ಚರ್ಚೆ ನಡೆದಿದ್ದು ಅದು ಕುಮಾರವ್ಯಾಸ ಬರೆದುದಲ್ಲ ಎಂಬುದರ ಬಗ್ಗೆಯೇ ಹೆಚ್ಚು ಒಲವಿರುವಂತೆ ಕಂಡುಬಂದಿದೆ.

ಗದುಗಿನ ಬಳಿಯ ಕೋಳಿವಾಡ ಗ್ರಾಮ ಕುಮಾರವ್ಯಾಸನ ಊರು. ಆ ಪ್ರದೇಶದಲ್ಲಿ ನೆಲಸಿರುವ ಜನಾಭಿಪ್ರಾಯದಂತೆ ಆ ಗ್ರಾಮ ಕುಮಾರವ್ಯಾಸನ ವಂಶಸ್ಥರಿಗೆ ಉಂಬಳಿಯಾಗಿ ಬಂದುದು. ಈತನ ತಂದೆಯಾದ ಲಕ್ಕರಸ ಅಥವಾ ಲಕ್ಷ್ಮಣದೇವ ಎಂಬುವನು ವಿಜಯನಗರದ ದೇವರಾಯನಲ್ಲಿ (ಕ್ರಿ. ಶ. ೧೪೦೬–೧೪೨೨) ಮಂತ್ರಿಯಾಗಿದ್ದ. ಆ ಲಕ್ಕರಸನ ಐವರು ಗಂಡು ಮಕ್ಕಳಲ್ಲಿ ಹಿರಿಯವ ವೀರ ನಾರಾಯಣ. ಈತನೇ ಕುಮಾರವ್ಯಾಸ. ಕುಮಾರವ್ಯಾಸನ ಕಾಲ ಮತ್ತು ಮತಧರ್ಮದ ಬಗ್ಗೆ ಸಾಕಷ್ಟು ಮತಭೇದಗಳಿವೆ. ಈತ ಬ್ರಾಹ್ಮಣ, ಗೌಡ ಮತ್ತು ವೀರಶೈವ ಧರ್ಮಗಳಿಗೆ ಸೇರಿದವನೆಂದು ಪರ ಮತ್ತು ವಿರೋಧವಾದ ಚರ್ಚೆಗಳು ನಡೆದಿವೆ. ಶ್ರೀ. ಶ. ಕ. ಕೋಳಿವಾಡ ಎಂಬುವರು "ಕೋಳಿವಾಡ ಗೌಡರ ಮೂಲ ಪುರುಷನು ಚಿನ್ನದ ಕೈಯ ಮಾಧವರಸನು. ಆತನ ಮಗ ತಿರುಮಲಯ್ಯನು. ಆತನ ಮಗನು ಲಕ್ಷ್ಮಣದೇವ (ಲಕ್ಕರಸಯ್ಯ). ಈತನ ಮಗನೇ ವೀರನಾರಾಯಣನು (ಕುಮಾರವ್ಯಾಸ). ಈ ಲಕ್ಷ್ಮಣದೇವನು ವಿಜಯನಗರದ ಅರಸರಲ್ಲಿ ಮಂತ್ರಿಯಾಗಿದ್ದನೆಂದು ಗೌಡರ ಇತಿಹಾಸದಿಂದ ತಿಳಿಯುತ್ತದೆ"೪ ಎಂದಿದ್ದಾರೆ. ಲೂಯಿರೈಸ್ ಕೂಡ ಈತ ಕೋಡಿವಾಳ (ಕೋಳಿವಾಡ)ದ ಗೌಡನೆಂದೂ ಇವನ ಹೆಸರು ನಾರಣಪ್ಪನೆಂದು ಇರಬಹುದೆಂದೂ ಬರೆದಿದ್ದಾರೆ.೫ ಎಸ್. ವಿ. ರಂಗಣ್ಣನವರು ಕುಮಾರವ್ಯಾಸ "ಗೌಡರ ಅಥವಾ ಶಾನುಭೋಗರ ಕುಲಕ್ಕೆ ಸೇರಿದವನು" ಎಂಬ ತೀರ್ಮಾನಕ್ಕೆ ಬರುತ್ತಾರೆ. ೬

ಕುಮಾರವ್ಯಾಸನನ್ನು ವೀರಶೈವನನ್ನಾಗಿಸುವ ದಂತಕಥೆಗಳು ಹುಟ್ಟಿಕೊಂಡಿವೆ.೭ ಇವು ಕುಮಾರವ್ಯಾಸನ ನಂತರ ಇನ್ನೂರು ಮುನ್ನೂರು ವರ್ಷಗಳ ತರುವಾಯ ರಚಿತವಾದವು. ವೀರಶೈವ ಗ್ರಂಥಗಳಲ್ಲಿ ಕುಮಾರವ್ಯಾಸನನ್ನು ಪ್ರಭುಲಿಂಗಲೀಲೆಯ ಕರ್ತೃವಾದ ಚಾಮರಸನ ತಂಗಿಯ ಗಂಡನೆಂದು ಕರೆಯಲಾಗಿದೆ. ರಾಜಾಜ್ಞೆಯಂತೆ ಕುಮಾರವ್ಯಾಸನೂ,

---

೩. ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. ೨೩೦–೩೧.

೪. ಶ್ರೀಮಾನ್ ಶ. ಕ. ಕೋಳಿವಾಡ, ಧಾರವಾಡದ "ಶಾರದೆ" ಸಂ. ೩–ಸಂಚಿಕೆ–೪, ಉದ್ಧೃತ: ಕು. ವ್ಯಾ. ಪ್ರಶಸ್ತಿ

೫ Karnataka - Bhashabhushana 1884, Intro P.xxvii Karnataka -Sabdanushasana-1890. Intro P.41

೬. ಎಸ್. ವಿ. ರಂಗಣ್ಣ, ಕುಮಾರವ್ಯಾಸ, ಪು. ೩೨.

ಚಾಮರಸನೂ ಒಂದೊಂದು ಮಹಾಭಾರತ ಕೃತಿಗಳನ್ನು ಬರೆದರಂತೆ. ಇವು ಕುಮಾರವ್ಯಾಸನನ್ನು ವೀರಶೈವ ಮತಕ್ಕೆ ಸೇರಿದವನೆಂದು ತೋರಿಸುವ ಉದ್ದೇಶದಿಂದ ಹುಟ್ಟಿಕೊಂಡ ಸ್ವಕಲ್ಪಿತ ಕಟ್ಟುಕತೆಗಳೆನ್ನುವುದರ ಬಗ್ಗೆ ಅನುಮಾನವಿಲ್ಲ. ಕೆಲವು ವಿದ್ವಾಂಸರುಗಳು ಇದನ್ನೇ ಆಧರಿಸಿ, ಹಾಗಿದ್ದರೆ ಚಾಮರಸ ಮೊದಲಿಗೆ ಭಾರತ ಬರೆಯುವಾಗ ಬ್ರಾಹ್ಮಣನಾಗಿದ್ದು ತರುವಾಯ ಪ್ರಭುಲಿಂಗ ಲೀಲೆಯನ್ನು ಬರೆಯುವ ಹೊತ್ತಿಗೆ ವೀರಶೈವನಾಗಿರಬೇಕೆಂಬ ಇನ್ನೊಂದು ವಾದವನ್ನು ಮುಂದಿಟ್ಟಿದ್ದಾರೆ. ಅವರಿಬ್ಬರೂ ಸಮಕಾಲೀನರಿರಬಹುದು, ಆದರೆ ಸಮಾನ ಪ್ರತಿಭೆಯವರಲ್ಲ. ಕುಮಾರವ್ಯಾಸ ಚಾಮರಸನಿಗಿಂತ ಬಹಳ ಎತ್ತರದ ಕವಿ.

ಕುಮಾರವ್ಯಾಸ ಬ್ರಾಹ್ಮಣ ಮತಕ್ಕೆ ಸೇರಿದವನು ಎಂಬುದಕ್ಕೆ ಆಧಾರಗಳು ಹೆಚ್ಚಾಗಿವೆ. ಆತ ಕರಣಿಕ ವಂಶಸ್ಥನಾಗಿರುವುದು, ಕೋಳಿವಾಡ ಗ್ರಾಮ ಅವನ ವಂಶಸ್ಥರಿಗೆ ಉಂಬಳಿಯಾಗಿ ಬಂದುದು, ಅವನು ಹರಿಪಾರಮ್ಯದ ಯೋಗೀಂದ್ರನೆನಿಸಿಕೊಂಡಿರುವುದು, ಕಾವ್ಯದಲ್ಲಿ ವೈದಿಕ ಧರ್ಮಕ್ಕೆ ಹೆಚ್ಚು ಒತ್ತು ಬಿದ್ದಿರುವುದು ಮತ್ತು ಬ್ರಾಹ್ಮಣರ ಅಗ್ಗಳಿಕೆಯನ್ನು ವಿಶೇಷವಾಗಿ ಎತ್ತಿಹಿಡಿದಿರುವುದು, ಇದಕ್ಕೆ ಪ್ರಬಲ ಕಾರಣಗಳಾಗಿವೆ. ಅಲ್ಲದೆ ಇಂದಿಗೂ ಕೋಳಿವಾಡ ಗ್ರಾಮದಲ್ಲಿ ಕವಿಯ ಮನೆತನಕ್ಕೆ ಸೇರಿದವರೆಂದು ಹೇಳಲಾದ ಬ್ರಾಹ್ಮಣರಿರುವುದು ಅವರಲ್ಲಿ ಈ ಕುರಿತು ಪ್ರಾಚೀನ ಕಾಗದ ಪತ್ರಗಳಿರುವುದು (ವಾದ ವಿವಾದವೇನೇ ಇದ್ದರೂ) ಇದಕ್ಕೆ ಬೆಂಬಲವಾಗಿವೆ.೮ ಕುಮಾರವ್ಯಾಸ ಗದುಗಿನ ವೀರನಾರಾಯಣನ ಪರಮ ಭಕ್ತನಾಗಿದ್ದು ನಿತ್ಯವೂ ಮಿಂದು ಬಂದು ಒದ್ದೆ ಬಟ್ಟೆಯಲ್ಲಿ ವೀರನಾರಾಯಣನ ಗುಡಿಯ ಒಂದು ಕಂಬಕ್ಕೊರಗಿ ಕುಳಿತು ಒದ್ದೆ ಆರುವವರೆಗೆ ಭಾರತವನ್ನು ಬರೆಯುತ್ತಿದ್ದನೆಂದು ಆ ಪ್ರಾಂತದ ಜನರಲ್ಲಿ ಪ್ರತೀತಿ ಇದೆ. ಇಂದಿಗೂ ಆ ಕಂಬಕ್ಕೆ ನಾರಣಪ್ಪನ ಕಂಬ ಎಂದು ಕರೆಯುವುದು ರೂಢಿಯಲ್ಲಿದೆ. ವೀರನಾರಾಯಣನೆ ಕವಿಯಾಗಿ ಲಿಪಿಕಾರ ಕುಮಾರವ್ಯಾಸನಾದ. "ಕುಮಾರವ್ಯಾಸ ತನ್ನ ಕಾವ್ಯವನ್ನು ಗಮಕದಲ್ಲಿಯೇ ಹೇಳುತ್ತಿದ್ದನೆಂದೇ ಗದುಗಿನ ಪ್ರಾಂತದಲ್ಲಿ ಪ್ರತೀತಿ ಇತ್ತು" ಎಂದು ಮಾಸ್ತಿಯವರು ಅಭಿಪ್ರಾಯ ಪಡುತ್ತಾರೆ. ಈ ಭಾರತ ಗಮಕದಿಂದಾಗಿ ಕನ್ನಡಿಗರ ಮನೆಮಾತಾಯಿತು; ಕಲಿತವರಿಗೆ ಮಾತ್ರವಲ್ಲದೆ ಕಲಿಯದವರಿಗೂ ಕಾಮಧೇನುವಾಯಿತು. ಸಂಸ್ಕೃತಿ ಮತ್ತು ಕಲೆಯ ಪುನರುಜ್ಜೀವನಕ್ಕೆ ನಾಂದಿಯಾಯಿತು.

ಸ್ವತಂತ್ರ ಪ್ರವೃತ್ತಿಯ ಪರಿವ್ರಾಜಕ ಮನೋಧರ್ಮದವನಾದ ಕುಮಾರವ್ಯಾಸ ಯಾವ ರಾಜಾಶ್ರಯವನ್ನೂ ಪಡೆದಂತೆ ಕಂಡುಬರುವುದಿಲ್ಲ. ತನ್ನ ಕೃತಿಯಲ್ಲಿ "ಅರಮನೆಯ ನಾಯ್ಗಳು" ಎಂದು ಬೈದಿರುವುದನ್ನು ನೋಡಿದರೆ ಈ ಕವಿಗೆ ರಾಜರುಗಳ ಬಗ್ಗೆ ಗೌರವವಿದ್ದಂತೆ ತೋರುವುದಿಲ್ಲ. ಈತನ ಕಾಲ ಕೂಡ ಚರ್ಚೆಗೆ ಒಳಗಾಗಿದೆ. ಕ್ರಿ.ಶ. ೧೬೫೦ರಿಂದ ಕ್ರಿ.ಶ. ೧೫೦೦ವರೆಗೆ ರಾಘವಾಂಕ ಮತ್ತು ಕೆರೆಯ ಪದ್ಮರಸರ ಜೊತೆಗೆ ಕುಮಾರವ್ಯಾಸನ ಹೆಸರು ಕೇಳಿಬರುವುದರಿಂದ ಇವನ ಕಾಲವನ್ನು ೧೬೫ ಎಂದು ಕೆಲವರು ಸೂಚಿಸಿರುವುದು ಸರಿಯಲ್ಲ

---

೭. ಗುರುರಾಜ ಚಾರಿತ್ರ (ಸು. ೧೬೫೦); ಚೋರ ಬಸವ ಚರಿತ್ರ (೧೭೬೩)

೮. ಈ ಬಗೆಯ ವಿವರವಾದ ತಿಳುವಳಿಕೆಗೆ ನೋಡಿ: ಡಾ.ಟಿ.ವಿ. ವೆಂಕಟಾಚಲ ಶಾಸ್ತ್ರಿ, ಕ. ಅ. ಕನ್ನಡ ಸಾಹಿತ್ಯ ಚರಿತ್ರೆ, ಸಂ. ೫, ಪು.೬೧೮

ವೆಂದು ಕಾಣುತ್ತದೆ. ಇವನು ಹದಿನೈದನೆಯ ಶತಮಾನದ ಮಧ್ಯ ಭಾಗದಲ್ಲಿದ್ದವನು ಎಂಬುದಕ್ಕೆ ನಂಬಲರ್ಹವಾದ ಬಲವಾದ ಆಧಾರಗಳಿವೆ. ಈ ಹಿಂದೆ ನಾವು ಗಮನಿಸಿರುವಂತೆ ಗದುಗಿನ ವೀರನಾರಾಯಣನ ಗುಡಿಯ ಒಂದು ಶಾಸನದಲ್ಲಿ ವಿಜಯನಗರದ ವೀರ ಪ್ರತಾಪ ಅಚ್ಯುತರಾಯನು ಶಾ. ಶ. ೧೪೬೧ರಲ್ಲಿ ಕುಮಾರವ್ಯಾಸನ ಇಷ್ಟದೇವತೆಯಾದ ವೀರನಾರಾಯಣ ಸ್ವಾಮಿ ದೇಗುಲಕ್ಕೆ ದತ್ತಿ ಬಿಟ್ಟನೆಂದಿದೆ. ಇದರಲ್ಲಿ ಕುಮಾರವ್ಯಾಸನ ಹೆಸರಿನ ಉಲ್ಲೇಖವಿದೆ. ಇದರಿಂದ ಕುಮಾರವ್ಯಾಸ ೧೫೩೯ಕ್ಕಿಂತ ಹಿಂದಿನವನೆಂದು ಸ್ಪಷ್ಟವಾಗುತ್ತದೆ.[೯] ಅಲ್ಲದೆ ವಿಜಯನಗರದ ಅರಸು ಒಂದನೇ ದೇವರಾಯನಲ್ಲಿ ಕುಮಾರವ್ಯಾಸನ ತಂದೆಯಾದ ಲಕ್ಷ್ಮಣದೇವ (ಲಕ್ಕರಸ- ೧೪೦೬-೧೪೨೨) ಮಂತ್ರಿಯಾಗಿದ್ದ ವಿಷಯ ವಿಜಯನಗರದ ಇತಿಹಾಸದಿಂದ ತಿಳಿಯುತ್ತದೆ. ಒಂದನೇ ದೇವರಾಯ ಮರಣಹೊಂದಿದ ಬಳಿಕ ಲಕ್ಷ್ಮಣದೇವ ತನ್ನ ಉಂಬಳಿ ಗ್ರಾಮವಾದ ಕುರ್ತಕೋಟೆಗಳ ಕಡೆಗೆ ಕ್ರಿ. ಶ. ೧೪೨೪ರ ಸುಮಾರಿಗೆ ಬಂದ. ಆದ್ದರಿಂದ ಕುಮಾರವ್ಯಾಸನ ಕಾಲ ೧೪೨೫ ರಿಂದ ೧೪೫೫ ಇರಬಹುದು ಎಂದು ಒಂದು ಅಭಿಪ್ರಾಯ ವಿದೆ.[೧೦] ಅಲ್ಲದೆ ವಿಜಯನಗರದ ಶ್ರೀಕೃಷ್ಣ ದೇವ ರಾಯ (ಕ್ರಿ. ಶ. ೧೫೦೯-೧೫೨೯) ತಿಮ್ಮಣ್ಣ ಕವಿಗೆ "ಲೇಸನಿಸಿ ಮೊದಲಾ ಕುಮಾರವ್ಯಾಸ ದಶಪರ್ವಗಳ ಪೇಳಿದ ಭಾರತದ ಉಳಿದ ಪರ್ವಗಳ ನೀ ಸಕಲಜನ ಮೆಚ್ಚು ವಂತೆ ಪೇಳು" ಎಂದು ಹೇಳಿದ. ಇದರಿಂದ ಕುಮಾರವ್ಯಾಸ ೧೫೦೯ಕ್ಕಿಂತ ಹಿಂದಿನವನೆಂದಾಯಿತು. ಕವಿ ಚರಿತಕಾರರು ಸಹ ಈತನ ಕಾಲವನ್ನು ೧೪೩೦ ಎಂದು ಸೂಚಿಸಿದ್ದಾರೆ.[೧೧] ಕ್ರಿ. ಶ. ೧೫೦೦ರಲ್ಲಿದ್ದ ಕುಮಾರ ವಾಲ್ಮೀಕಿ ಕುಮಾರವ್ಯಾಸನನ್ನು ಸ್ತುತಿಸಿದ್ದಾನೆ. ಒಟ್ಟಿನಲ್ಲಿ ಹದಿನೈದನೆಯ ಶತಮಾನದ ಮಧ್ಯಭಾಗದಲ್ಲಿ ಕುಮಾರವ್ಯಾಸ ಜೀವಿಸಿದ್ದಿರಬಹುದು.

**ಕೃತಿ**

ಭರತಖಂಡದ ಜನಪದದಲ್ಲಿ ಬೇರು ಬಿಟ್ಟಿದ್ದ, ವ್ಯಾಸ ಮಹರ್ಷಿಯಲ್ಲಿ ಬಂದು ಹೋಗಿದ್ದ ಭಾರತದ ಪುರಾಣ ಕತೆ ಕುಮಾರವ್ಯಾಸನಂತಹ ಪ್ರತಿಭಾಶಾಲಿ ಕವಿಯ ಕೈಗೆ ಸಿಕ್ಕಿ ಮಹಾಕಾವ್ಯವಾಯಿತು. ಇದರಲ್ಲಿ ಇತಿಹಾಸದ ಸಂಗತಿಗಳು ಮಿಳಿತವಾದವು. ಭಾರತದ ಸನಾತನ ಸಂಸ್ಕೃತಿ ಅಂತರ್ಗತ ವಾಯಿತು, ರಾಜಾದಿ ರಾಜರುಗಳ ರಾಜಕೀಯ ಮತ್ತು ಸಾಮಾಜಿಕ ಜೀವನ ಬೆರೆತು ಕೊಂಡವು. ಅಂದಿನ ಜೀವನ ಮೌಲ್ಯಗಳೂ ಬದುಕಿನ ರೀತಿ ನೀತಿಗಳೂ ಪಾತ್ರಗಳ ಮೂಲಕ ಸೂಕ್ತವಾಗಿ ಅಭಿವ್ಯಕ್ತಿ ಪಡೆದವು. ಸಕಲ ಶಾಸ್ತ್ರ ಪಾರಂಗತನಾಗಿದ್ದ ಕವಿಯ ವ್ಯಾಪಕವಾದ ಲೋಕಾನುಭವ ಕೃತಿಗೆ ಸಂಕೀರ್ಣ ಸ್ವರೂಪವನ್ನು ತಂದುಕೊಟ್ಟಿತು. ಇದಕ್ಕೆ ತಕ್ಕಂತೆ ಕವಿಗೆ ಸಂಸ್ಕೃತ ಮತ್ತು ಕನ್ನಡ ಸಾಹಿತ್ಯಗಳ ಪ್ರಾಚೀನ ಹಿನ್ನೆಲೆ ಯಿತ್ತು. ಈತ ಭಾಸ, ಕಾಳಿದಾಸ, ಭಾರವಿ, ಭರ್ತೃಹರಿ, ಬಾಣ ಭಟ್ಟ ಮೊದಲಾದ ಕವಿಗಳನ್ನು ಓದಿ ಜೀರ್ಣಿಸಿಕೊಂಡಿದ್ದ. ಹೆಚ್ಚು ಕಡಿಮೆ ಒಂದು ಸಾವಿರ ವರ್ಷದಿಂದ ಕನ್ನಡ ಸಾಹಿತ್ಯ ಭೂಮಿಯ ಶಿಖರದಲ್ಲಿ[೧೨] ಬಂದವನಾದ್ದರಿಂದ ಪಂಪ, ರನ್ನ, ಪೊನ್ನ, ಬಸವೇಶ್ವರ, ಹರಿಹರ ಮತ್ತು ರಾಘವಾಂಕಾದಿ ಕವಿಶ್ರೇಷ್ಠರ ಹೆಗಲೇರಿ ನಿಂತಿದ್ದ. ಅವರ ಕಾವ್ಯಶಕ್ತಿಯ ಗುಣಗಳನ್ನೂ ದೌರ್ಬಲ್ಯಗಳನ್ನೂ ಅರಿತಿದ್ದ. ತನಗಿದ್ದ ಅಸಾಧಾರಣ ಪ್ರತಿಭೆಯಿಂದ ಔಚಿತ್ಯವರಿತು ತನ್ನ ಸಾಹಿತ್ಯ ಮಾರ್ಗ ವನ್ನು ಉತ್ತಮ ಪಡಿಸಿಕೊಂಡು ಕರ್ನಾಟಕ ಭಾರತ ಕಥಾ ಮಂಜರಿಯನ್ನು ಕಾವ್ಯಕ್ಕೆ ಗುರು ಎನ್ನುವ ಹಾಗೆ ರಚಿಸಿದ.

ವ್ಯಾಸ ಪರಂಪರೆಯಲ್ಲಿ ಬಂದ ಭಾರತಗಳು ಎರಡು; ಒಂದು ಪಂಪಭಾರತ ಮತ್ತೊಂದು ಕುಮಾರವ್ಯಾಸಭಾರತ. ಒಂದಕ್ಕೂ ಮತ್ತೊಂದಕ್ಕೂ ಐನೂರು ವರ್ಷಗಳ ಅಂತರ; ಆಶಯ ಮತ್ತು ರೂಪಾಂಶಗಳಲ್ಲೂ ಎರಡಕ್ಕೂ ಅಜಗಜಾಂತರ. ಕುಮಾರವ್ಯಾಸ ಭಾರತ ಪಂಪಭಾರತಕ್ಕಿಂತ ಮೂರು ಪಟ್ಟುದೊಡ್ಡದು. ಪಂಪನಿಗೆ ಸಂಕ್ಷೇಪಿಸುವ ಇಚ್ಛೆ. ನಾರಣಪ್ಪನಿಗೆ ವಿಸ್ತರಿಸುವ ಆಶೆ. ಇದರಿಂದ ಇಬ್ಬರ ಕಾವ್ಯಶಕ್ತಿ ಹಿರಿದು ಕಿರಿದಾಗಲಿಲ್ಲ. ಆದರೆ ಪಂಪ ಕಾವ್ಯಸತ್ವದಿಂದ ಬದುಕಿದನೆ ಹೊರತು ಕಥಾರೂಪದಿಂದಲ್ಲ. ಕುಮಾರವ್ಯಾಸನಿಗೆ ಕಥಾಸತ್ವ ಮತ್ತು ಕಾವ್ಯಸತ್ವ ಎರಡೂ ಇತ್ತು. ಪಂಪ ಅರಿಕೇಸರಿಯ ಋಣಕ್ಕೆ ಒಳಗಾಗಿ ಕಥೆಯ ಪೌರಾಣಿಕತ್ವಕ್ಕೆ ಭಂಗ ತಂದಿದ್ದ. ಧರ್ಮರಾಯನನ್ನು ಬಿಟ್ಟು ಅರ್ಜುನನನ್ನು ಕಥಾನಾಯಕನನ್ನಾಗಿ ಮಾಡಿದ್ದರ ಜೊತೆಗೆ ಅರಿಕೇಸರಿಯೇ ಅರ್ಜುನ ಎನ್ನುವ ದೌರ್ಬಲ್ಯ ದೊಡ್ಡದಾಗಿತ್ತು. ಕಾವ್ಯದ ರಸಕ್ಕೆ ಚರಿತ್ರೆಯ ಅನುಚಿತ ಕಸ ಬೆರೆತು ಹೋಗಿತ್ತು. ಪುರಾಣದ ಮಹಾವೀರನೊಬ್ಬನ ಸ್ಥಾನಕ್ಕೆ ಸಾಮಾನ್ಯ ಮಾಂಡಲೀಕನೊಬ್ಬನನ್ನು ಏರಿಸುವ ಅವಿವೇಕಕ್ಕೆ ಪಂಪ ಕೈಹಾಕಿಬಿಟ್ಟಿದ್ದ. ಅರಿಕೇಸರಿಯ ಹೆಂಡತಿ ಯದು ವಂಶದವಳಾದ್ದರಿಂದ ಅದೇ ವಂಶಕ್ಕೆ ಸೇರಿದ ಸುಭದ್ರೆಗೆ ದ್ರೌಪದಿಗೆ ಬದಲಾಗಿ ಪಟ್ಟಗಟ್ಟಿದ. ಹೀಗಾಗಿ ಪಂಪಭಾರತ ಅರಿಕೇಸರಿಯ ಮಹಿಮೆಯಿಂದ ಆವೃತವಾಯಿತು. ಎಷ್ಟೋ ಕಡೆಗಳಲ್ಲಿ ಪಂಪ ತಾನು ಜೈನಧರ್ಮೀಯ ಎಂಬುದನ್ನು ತೋರ್ಪಡಿಸಿಕೊಂಡಿದ್ದಾನೆ. ಮಹಾಭಾರತದ ಮಹಾನಾಯಕರುಗಳ ಹೆಸರು ಹೇಳುವಾಗ ಕೃಷ್ಣನ ಸೊಲ್ಲನ್ನೆತ್ತುವುದಿಲ್ಲ. ಕೃಷ್ಣ ಕೇವಲ ನಾರಾಯಣನಾದರೆ ಅರ್ಜುನನನ್ನು ಉದಾತ್ತ ನಾರಾಯಣನನ್ನಾಗಿ ಚಿತ್ರಿಸುತ್ತಾನೆ. ಹಿಂದುಗಳಿಗೆ ಪರಮ ಪವಿತ್ರವಾದ ಭಗವದ್ಗೀತೆಯ ಪ್ರಸಂಗವನ್ನು ಪಂಪ ಒಂದೆರಡು ಪದ್ಯಗಳಲ್ಲಿ ಮುಗಿಸಿಬಿಡುತ್ತಾನೆ. ಪಂಪನ ಈ ಬಗೆಯ ಧೋರಣೆ ಮಹಾ ಭಾರತದ ಮಹತ್ವವನ್ನು ಸ್ವಲ್ಪ ಮಟ್ಟಿಗೆ ಲಘುಗೊಳಿಸುತ್ತದೆ. ಆದರೆ ಕುಮಾರವ್ಯಾಸನ ಕಾವ್ಯದಲ್ಲಿ ಇಂತಹ ರಸಾಭಾಸಕ್ಕಾಗಲಿ ಲೌಕಿಕ ಸಂಕೋಚಗಳಿಗಾಗಲಿ ಆಸ್ಪದವಿಲ್ಲ. ಋಷಿ ಸದೃಶವಾದ ದಿವ್ಯ ದರ್ಶನ. ಲೌಕಿಕ ಅಲೌಕಿಕ ವಿಚಾರಗಳ ಸಮನ್ವಯ ದೃಷ್ಟಿ ಅವನದು. "ಇದರಿಂದಾಗಿಯೆ ಅವನ ಕೃತಿ ಮೂಲಭೂತವಾಗಿ ಕಲೆಯೂ ಮೌಲೀಭೂತವಾಗಿ ದರ್ಶನವೂ ಆಗಿದೆ; ತನ್ಮೂಲಕ ಕನ್ನಡ ಸಾಹಿತ್ಯದಲ್ಲಿ ತೀರ ವಿಶಿಷ್ಟ ಮತ್ತು ಶ್ರೇಷ್ಠ ಎನಿಸಿದೆ. ಅದರ ಅಪಾರ ಜನಪ್ರಿಯತೆಯ ಗುಟ್ಟು ಕೂಡ ಇದೇ" [೧೩].

ಕುಮಾರವ್ಯಾಸ ಲಕ್ಷ ಶ್ಲೋಕಗಳ ವ್ಯಾಸ ಭಾರತವನ್ನು ಮೂಲ ಆಕರವಾಗಿ ಮಾಡಿಕೊಂಡಿದ್ದರೂ ಸಹ ತನ್ನ ಕೃತಿಯನ್ನು ವಿಶಿಷ್ಟ ಸ್ವತಂತ್ರ ಕಾವ್ಯವನ್ನಾಗಿ ಮಾಡಿದ್ದಾನೆ.

---

೯. ನೋಡಿ: ಗೋವಿಂದಪೈ, ಕಾಲವಿಚಾರ, ಕುಮಾರವ್ಯಾಸ ಪ್ರಶಸ್ತಿ, ಪು. ೧-೨೦.

೧೦. ನೋಡಿ: ಕುಮಾರವ್ಯಾಸ ಪ್ರಶಸ್ತಿ, ಪು. ೨೧.

೧೧. ವಿವರಗಳಿಗೆ ನೋಡಿ; ರಾ. ನರಸಿಂಹಾಚಾರ್, ಕರ್ನಾಟಕ ಕವಿ ಚರಿತೆ, ಸಂ. ೨, ಪು. ೬೪-೬೫.

೧೨. ೯ನೆಯ ಶತಮಾನದ ಕವಿರಾಜಮಾರ್ಗ ಅಲಂಕಾರ ಗ್ರಂಥ ವಾಗಿದ್ದರಿಂದ ಅದಕ್ಕೆ ಹಿಂದೆ ಕನಿಷ್ಠ ನಾನೂರು ವರ್ಷಗಳಿಂದ ಲಾದರು ಕನ್ನಡ ಸಾಹಿತ್ಯ ಬೆಳೆದು ಬಂದಿದೆ.

೧೩. ಡಾ. ಸಿ. ಪಿ. ಕೃಷ್ಣಕುಮಾರ್, ಕೆ. ಅ. ಕನ್ನಡ ಸಾಹಿತ್ಯ ಚರಿತ್ರೆ, ಸಂ ೫. ಪು. ೬೫೦.

ಅನಗತ್ಯವಾದ ಎಷ್ಟೋ ವಿಷಯಗಳನ್ನು ತೊರೆದು ಅಗತ್ಯವೆನಿಸಿದ ಕಡೆ ಹೊಸ ಅಂಶಗಳನ್ನು ಸೇರಿಸಿಕೊಂಡಿದ್ದಾನೆ. ಕೆಲವುಕಡೆ ಸೂಕ್ತ ಮಾರ್ಪಾಡು ಮಾಡಿದ್ದಾನೆ. ಎಲ್ಲಿಯೂ ಅವನು ಮೂಲದ ಪಡಿ ಅಚ್ಚಲ್ಲ.

ಕುಮಾರವ್ಯಾಸ ತನ್ನ ಮಹಾಭಾರತವನ್ನು ಭಗವದ್ವಿಲಾಸದ ಭೂಮಿ ಎಂದು ಕರೆದ. ಶ್ರೀ ಕೃಷ್ಣನನ್ನು ತನಗೆ ಮಾತ್ರವಲ್ಲದೆ ತನ್ನ ಕಾವ್ಯಕ್ಕೂ ನಾಯಕನನ್ನಾಗಿ ಸ್ವೀಕರಿಸಿದ. ವ್ಯಾಸನಲ್ಲಿ ಧರ್ಮರಾಯ, ಪಂಪನಲ್ಲಿ ಅರ್ಜುನ, ರನ್ನನಲ್ಲಿ ಭೀಮ ಕಥಾನಾಯಕರುಗಳಾದರೆ ಕುಮಾರವ್ಯಾಸನಲ್ಲಿ ಶ್ರೀಕೃಷ್ಣ ಕಥಾ ನಾಯಕ. ನಾಯಿಕೆಗೆ ಮಹತ್ವವನ್ನು ಕೊಡದೆ ನಾಯಕನನ್ನು ಸರ್ವತ್ರ ಮೆರೆಸಿದ್ದು ಕುಮಾರವ್ಯಾಸನ ವಿಶೇಷ. ಪದುಮನಾಭನ ಮಹಿಮೆ ಮತ್ತು ಧರ್ಮವಿಚಾರ ಅವನ ಕಾವ್ಯದ ಘನೋದ್ದೇಶಗಳಾದವು.

ತಿಳಿಯ ಹೇಳುವೆ ಕೃಷ್ಣ ಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯನೊರೆವೆನು ಕೃಷ್ಣ
ಮೆಚ್ಚಲಿಕೆ

ಎಂದು ಸ್ಪಷ್ಟವಾಗಿಯೇ ಹೇಳಿದ್ದಾನೆ. ಕೃಷ್ಣಾಂತರ್ಗತವಾದ ಮಹಾಭಾರತವನ್ನು ಕೃಷ್ಣನೂ ಇಳೆಯ ಜಾಣರೂ ಮೆಚ್ಚುವಂತೆ ಹೇಳುವುದು ಅವನ ಆಸೆಯಾಗಿತ್ತು. ತಾನು ವಿಶಿಷ್ಟವಾಗಿ ನಿಯೋಜಿಸಿದ ದ್ರೌಪದಿಯ ವಸ್ತ್ರಾಪಹರಣ, ದೂರ್ವಾಸಾತಿಥ್ಯ ಮತ್ತು ವಿದುರಭಕ್ತಿ ಪ್ರಸಂಗಗಳಲ್ಲಿ ಕೃಷ್ಣನ ಮಹಿಮೆ ಮುಗಿಲು ಮುಟ್ಟಿದೆ. ಮಹಾಭಾರತದ ಮಹಾ ಪಾತ್ರಗಳಿಗೆಲ್ಲ ಪ್ರತ್ಯಕ್ಷವಾಗಿಯೊ ಪರೋಕ್ಷವಾಗಿಯೊ ಶ್ರೀಕೃಷ್ಣ ಚಾಲಕ ಶಕ್ತಿಯಾಗಿದ್ದಾನೆ. ಕುಮಾರವ್ಯಾಸನಲ್ಲಿ ಹರಿಪಾರಮ್ಯವಿದ್ದರೂ ಸಹ ಈತ ಭಾಗವತ ಪ್ರಜ್ಞೆಯ ಕವಿ. ಹರಿಹರರಲ್ಲಿ ಭೇದವೆಣಿಸದ ಮಹಾನುಭಾವ. ಶ್ರೀಕೃಷ್ಣನನ್ನು ಸ್ತುತಿಸುವಂತೆಯೇ ಪರಮೇಶ್ವರನನ್ನೂ ಭಕ್ತಿಯಿಂದ ಹಾಡಿ ಮೈಮರೆತು ಕೊಂಡಾಡಿದ್ದಾನೆ. ಕಿರಾತಾರ್ಜುನೀಯ ಪ್ರಸಂಗ ಇದಕ್ಕೆ ಒಳ್ಳೆಯ ನಿದರ್ಶನ. ಮುಖ್ಯವಾಗಿ ಭಕ್ತ ಕವಿಯಾದ ಈತ ಜೀವನದ ಜಟಿಲತೆಯ ನಿವಾರಣೆಗೆ ಭಗವತ್ ಶಕ್ತಿಯ ಅವಲಂಬನೆಯನ್ನು ತರುತ್ತಾನೆ. ಭಕ್ತಿಯುಗದ ಮಹಾಪ್ರತಿನಿಧಿ ಈತ. ಋಷಿ ಕವಿಯಾದ ಈ ಅಧ್ಯಾತ್ಮ ಪುರುಷನ ಹೆಬ್ಬಯಕೆ ಲೋಕಕಲ್ಯಾಣ. ತನ್ನ ಕಾವ್ಯದಲ್ಲಿ ಅವಕಾಶ ಸಿಕ್ಕಾಗಲೆಲ್ಲ ನೀತಿ ಬೋಧೆಗೆ ಮಹತ್ವ ಕೊಡುತ್ತಾನೆ. ವಿದುರನೀತಿ– ನೀತಿಬೋಧೆಗಾಗಿಯೇ ಮೀಸಲಾದ ಒಂದು ಅಧ್ಯಾಯ. ಕೃಷ್ಣ, ಧರ್ಮರಾಯ, ಧೃತರಾಷ್ಟ್ರ ಮತ್ತು ಋಷಿವರೇಣ್ಯರುಗಳು ನೀತಿಬೋಧೆ ಮಾಡುತ್ತಾರೆ. ನ್ಯಾಯಾನ್ಯಾಯ ಮತ್ತು ಧರ್ಮಾಧರ್ಮಗಳ ಜಿಜ್ಞಾಸೆ ಈ ಕಾವ್ಯದ ತುಂಬ ತುಂಬಿದೆ. "ಎತ್ತಲೊಲೆವುದು ಧರ್ಮಬಲ ತಾನತ್ತಲೊಲೆವುದು ದೈವ" ಎಂದು ಪ್ರತಿಪಾದಿಸಿದ್ದಾನೆ ಕುಮಾರವ್ಯಾಸ.

ಒಳ್ಳೆಯ ಸನ್ನಿವೇಶ ರಚನೆ ಮತ್ತು ಉತ್ತಮ ಪಾತ್ರಚಿತ್ರಣಕ್ಕೆ ಹೆಸರಾದವನು ಕುಮಾರವ್ಯಾಸ. ಮಾನವ ಸ್ವಭಾವದ ಬಗ್ಗೆ ಕವಿಗಿರುವ ಆಳವಾದ ಅರಿವು ಮತ್ತು ವ್ಯಾಪಕವಾದ ಲೋಕಾನುಭವ ಇದಕ್ಕೆ ಕಾರಣವಾಗಿವೆ. ಮಾನವನ ಅಂತರಂಗದ ಒಳನೋಟಗಳನ್ನೂ, ಜೀವನ ವ್ಯಾಪಾರದ ವೈಚಿತ್ರ್ಯಗಳನ್ನೂ ಇವನಷ್ಟು ಸಮರ್ಥವಾಗಿ ಚಿತ್ರಿಸಿರುವ ಕವಿ ಕನ್ನಡದಲ್ಲಿ ಮತ್ತೊಬ್ಬನಿಲ್ಲ. ದ್ರೌಪದಿ ಪಾಂಡವರಿಗೆ ನಿಷ್ಠೆಯುಳ್ಳ ಹೆಂಡತಿಯೇ ಆದರೂ ಸಮಯ ಒದಗಿದಾಗ ನೀವು ಗಂಡರೋ ಭಂಡರೊ ಎಂದು ಹೀಯಾಳಿಸಲು ಹಿಂಜರಿಯುವುದಿಲ್ಲ. ಪಂಚ ಪತಿವ್ರತೆಯರಲ್ಲಿ ಒಬ್ಬಳಾದರೂ ಅವಳ ಮನಸ್ಸಿನ ಚಾಂಚಲ್ಯದ ಭಿನ್ನ ಗತಿಸ್ಥಿತಿಯನ್ನು ಗುರುತಿಸದೆ ಬಿಡುವುದಿಲ್ಲ ಈ ಕವಿ. ಮಾನವ ಮನಸ್ಸಿನ ಹಲವು ಮುಖಗಳನ್ನು ಸೆರೆಹಿಡಿಯುವುದರಲ್ಲಿ ಕುಮಾರವ್ಯಾಸ ನಿಷ್ಣಾತ. ಮನಸ್ಸಿನ ಒಳಪದರಗಳನ್ನು ಬಿಡಿಸಿ ಅರ್ಥೈಸುವ ನಿಪುಣ ಮನಶ್ಶಾಸ್ತ್ರಜ್ಞ. ಭೀಮ ಧರ್ಮರಾಯನಿಗೆ ಸದಾ ವಿಧೇಯ. ನಿಜ ಆತ ಅಣ್ಣನ ಆಜ್ಞೆಯ ಬಂಧನದ ಪ್ರೀತಿಯ ಕಟ್ಟಾಳು. ನೆರೆದ ರಾಜಸಭೆಯಲ್ಲಿ ಕೌರವರು ದ್ರೌಪದಿಯ ಸೀರೆಯನ್ನು ಸೆಳೆಯುತ್ತಿದ್ದರೂ, ತನ್ನ ಕೋಪ ಅದೆಷ್ಟು ಭಯಂಕರವಾಗಿದ್ದರೂ ಕೊನೆಗೆ ಅಣ್ಣನ ಆಜ್ಞೆಯನ್ನು ಉಲ್ಲಂಘಿಸಲಾರದ ಸಂಯಮಿ. ಆದರೆ ಕೀಚಕನ ಕೆಟ್ಟ ಕಣ್ಣಿಗೆ ಗುರಿಯಾದ ದ್ರೌಪದಿ ತನ್ನ ಸಂಕಷ್ಟವನ್ನು ದುಃಖದಿಂದ ಹೇಳಿಕೊಂಡು ಅವನ ಕಾಲಿಗೆರಗಿ 'ಪರಿಹರಿಸು'ವಂತೆ ಪರಿಪರಿಯಲ್ಲಿ ಬೇಡಿಕೊಂಡಾಗ "ಅರಸಿಬಿಡು ಖಾತಿಯನು ವಿಸ್ತರಿಸಲೇಕೆಮ್ಮಣ್ಣನಾಜ್ಞೆಯ ಗೆರೆಯ ದಾಂಟಿದೆನು ಹೋಗೆಂದನಾ ಭೀಮ" ಒಮ್ಮೆಯಂತು 'ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೆ" ಎಂದು ಬಿಡುತ್ತಾನೆ. ಹೀಗೆ ಒಂದೇ ಪಾತ್ರ ಸನ್ನಿವೇಶವಶದಿಂದ ಭಿನ್ನ ಸ್ವಭಾವಕ್ಕೊಳಗಾಗುವುದನ್ನು ಈ ಕವಿ ಸಮರ್ಥವಾಗಿ ಕಡೆದಿಡಬಲ್ಲ. ಸಂದರ್ಭದ ಒತ್ತಡದಲ್ಲಿ ಪಾತ್ರಗಳ ಮೂಲಗುಣವನ್ನು ನೈಜವಾಗಿ ಹೊರಹೊಮ್ಮಿಸುವ ಕಲೆಗಾರಿಕೆ ಇವನದು. ಮಹಾಪರಾಕ್ರಮಿಯಾದ ಅಭಿಮನ್ಯುವಿನ ಹೋರಾಟದ ಬಗ್ಗೆ ಸಾರಥಿ ಸಂದೇಹಿಸಿದಾಗ ಸಿಡಿಲಮರಿಯಾದ ಅಭಿಮನ್ಯು "ಬವರವಾದರೆ ಹರನ ವದನಕೆ ಬೆವರ ತಹೆನವಗಡಿಸಿದರೆ ವಾಸವನ ಸದೆವೆನು...." ಎನ್ನುತ್ತಾನೆ. ಪಾತ್ರ ಪೋಷಣೆಯೊಂದಿಗೆ ರಸಪೋಷಣೆಯನ್ನೂ ಮಾಡುವ ಅದ್ಭುತ ಕಲಾ ಶಕ್ತಿ ಕುಮಾರವ್ಯಾಸನಿಗಿದೆ. ಅವನು ಚಿತ್ರಿಸಿರುವ ಉತ್ತರನ ಪಾತ್ರ ಕನ್ನಡ ಸಾಹಿತ್ಯದಲ್ಲಿಯೇ ವಿಶಿಷ್ಟವಾದುದು. ಅಭಿಮನ್ಯುವಿನಲ್ಲಿ ಸಹಜವಾಗಿ ವೀರರಸ ಒಸರಿದರೆ ಉತ್ತರನಲ್ಲಿ ಹಾಸ್ಯರಸ ಚಿಮ್ಮುತ್ತದೆ. ಹೆಂಗಸರ ಮುಂದೆ ಬಾಯಿಗೆ ಬಂದಂತೆ ಬಡಾಯಿ ಕೊಚ್ಚಿದ ಉತ್ತರ ಎದುರಿಗೆ ಕೌರವನ ಸೈನ್ಯವನ್ನು ಕಂಡಾಗ ಹೆದರಿ ಓಡುತ್ತಾನೆ. ಅವನನ್ನು ತಡೆದ ಅರ್ಜುನ: "ಕೊಳುಗುಳದೊಳೋಡಿದೊಡೆ ಹಜ್ಜೆಗೆ ಫಲ ಮಹಾ ಪಾತಕವು" ಎಂದರೆ ಉತ್ತರ: "ಪಾತಕವ ಭೂಸುರರು ಕಳೆದಪರು" ಎನ್ನುತ್ತಾನೆ. "ಮುಂದಣಿಗೊಲಿದು ಹೆಜ್ಜೆಯನಿಡಲು ಹಜ್ಜೆಯೊಳಶ್ವಮೇಧ ಫಲ" ಎಂದು ಅರ್ಜುನನೆಂದರೆ "ಅಶ್ವಮೇಧವ ಧರಣಿಯಲಿ ಪ್ರತ್ಯಕ್ಷವಾಗಿಯೆ ಮಾಡಬಹುದು" ಎನ್ನುತ್ತಾನೆ ಉತ್ತರ. ಯುದ್ಧದಲ್ಲಿ "ಅಳಿದನಾದೊಡೆ ದೇವಲೋಕದ ಲಲನೆಯರು ತೊತ್ತಿರು" ಎಂದು ಅರ್ಜುನ ಹೇಳಿದರೆ "ಸುರರ ಸತಿಯರ ನೊಲ್ಲೆವೆಮಗೆಮ್ಮರಮನೆಯ ನಾರಿಯರೆ ಸಾಕು" ಎನ್ನುತ್ತಾನೆ ಉತ್ತರ ಕುಮಾರ. ಕುಮಾರವ್ಯಾಸನು ಅರಿಯದ ಹಾಸ್ಯದ ಪ್ರಕಾರವು ಒಂದೂ ಇಲ್ಲ. ಕಟಕಿ, ಬಿರುನುಡಿ, ಕಿರಿನುಡಿ, ವ್ಯಂಗ್ಯ, ಸರಸ, ವಕ್ರೋಕ್ತಿ, ಜಾಣ್ನುಡಿ, ಪರಿಹಾಸ ಎಲ್ಲವುಗಳೂ ಅವನ ಬತ್ತಳಿಕೆಯಲ್ಲಿವೆ. ಸರ್ವಜ್ಞನಂತೆಯೆ ಕುಮಾರವ್ಯಾಸನು ಮಾತುಗಾರಿಕೆಯಲ್ಲಿ ಎದೆಗಾರ.[೧೪] ಕುಮಾರವ್ಯಾಸ ಅಷ್ಟಾದಶ ವರ್ಣನೆಗಳಿಗೆ ಕುರುಡಾಗಿ ಕಟ್ಟು ಬಿದ್ದವನಲ್ಲ. ನವರಸಗಳನ್ನು ತರಬೇಕೆಂಬ ಉದ್ದೇಶವು ಅವನಿಗಿದ್ದಂತಿಲ್ಲ. ಆದರೆ ತನಗರಿವಿಲ್ಲದೆಯೇ ನವರಸಗಳ ಪ್ರತಿ

---

೧೪. ದ.ರಾ. ಬೇಂದ್ರೆ, ಕುಮಾರವ್ಯಾಸನ ಉತ್ತರ ಕುಮಾರ, ಕುಮಾರವ್ಯಾಸ ಪ್ರಶಸ್ತಿ, ಪು. ೨೨೬

ಪಾದನೆಯಲ್ಲಿ ಕುಮಾರವ್ಯಾಸನ ಪ್ರತಿಭೆ ಸಮಾನವಾಗಿ ಪ್ರವಹಿಸಿದೆ. ಮಹಾಭಾರತದಲ್ಲಿ "ವೀರ-ಕರುಣಗಳ ನಡುವೆ ಶಾಂತವೂ ಗುಪ್ತಗಾಮಿಯಾಗಿ ಹರಿಯುತ್ತಿದೆ. ಸೂಕ್ಷ್ಮರಸೈಕ ದೃಷ್ಟಿಗೆ ಗೋಚರವಾಗತಕ್ಕದ್ದು. ಅದು." ೧೫

ಒಟ್ಟಿನಲ್ಲಿ ಗದುಗಿನ ಭಾರತದ ಒಂದೊಂದು ಸಂಧಿಯೂ ರಸಸ್ಯಂದಿ, ರಸಮೂಲವಾದ ಭಾವನೆಗಳನ್ನು ಅರ್ಥಪೂರ್ಣವಾಗಿ ಪುಟಿಯುವಂತೆ ಮಾಡುವುದು ಅವನ ಹೆಗ್ಗಳಿಕೆ. ತಂದೆಯ ಶವದ ಬಳಿ ಬಂದ ಅಶ್ವತ್ಥಾಮ ದುಃಖ ಮತ್ತು ಕೋಪದ ಆಧಿಕ್ಯದಲ್ಲಿ 'ಕಾಣನು ಮುಂದೆ ಪರಬಲವ'. ಅಭಿಮನ್ಯುವಿನ ಸಾವನ್ನು ಕಂಡ ಅರ್ಜುನನ ಮುಂದೆ ಭೀತಿಗೊಂಡ 'ಸುರನಗರಿ ನಡುಗಿತ್ತು....ಯಮನ ಪಟ್ಟಣ ಸರಕು ದೆಗೆದುದು, ಮೃತ್ಯುಮರೆ ಹೊಕ್ಕಳು ಮಹೇಶ್ವರನ'. ಕೌರವರು ದ್ರೌಪದಿಯ ಸೀರೆ ಸೆಳೆಯುವ ಸಂದರ್ಭದಲ್ಲಿ ಭೀಮಾರ್ಜುನರು 'ಮನದೊಳಗೆ ಕೌರವನ ಕರುಳನು ತನಿರಕುತದಲ್ಲಿ ಕುದಿಸಿದರಂತೆ'. ಕವಿಯ ಉತ್ಸಾಹ ಭಾವುಕತೆಗಳು ಕಾವ್ಯದಲ್ಲಿ ಗುಣಗೊಂಡುದುಂಟು.

ಕುಮಾರವ್ಯಾಸನ ಭಾಷಾಶೈಲಿ ಅದ್ಭುತವಾದುದು; ಅನನುಕರಣೀಯವಾದುದು; ಅನುವಾದಿಸಲಸಾಧ್ಯವಾದುದು. ಕನ್ನಡದಲ್ಲಿ ಸಂಸ್ಕೃತವನ್ನು ಹದಕ್ಕೆ ಬೇಕಾದಷ್ಟು ಮಾತ್ರ ಬಳಸುವ ಕಲೆಗಾರಿಕೆ ಅವನದು. ಜೊತೆಗೆ ದೇಸಿಯ ಸೊಗಡನ್ನೆಲ್ಲ ಯಥೇಚ್ಛವಾಗಿ ಬಳಸಿಕೊಂಡ ..ಜಾಣನಾತ. ಗ್ರಾಮ್ಯದ ಸಶಕ್ತವಾದ ನುಡಿಕಟ್ಟುಗಳನ್ನೂ ಗಾದೆಮಾತುಗಳನ್ನೂ ಕುಮಾರವ್ಯಾಸ ಸಾಹಿತ್ಯಕಲೆಗೆ ಅರ್ಥವತ್ತಾಗಿ ಅಳವಡಿಸಿದ. ಗ್ರಾಮ ಜೀವನದ ಒರಟು ಸಂಸ್ಕೃತಿಯನ್ನೂ ಅವನು ಕಡೆಗಣಿಸಲಿಲ್ಲ. ಭೀಮ ದ್ರೌಪದಿ ಮುಂತಾದ ಪಾತ್ರಗಳಲ್ಲಿ ಸಮಯ ಬಂದಾಗ ಅದು ತಲೆಹಾಕಿದ್ದುಂಟು. ಬೈಯುವ ಸಂದರ್ಭಗಳು ಒದಗಿ ಬಂದಾಗಲಂತು ಕವಿ ಅಪ್ಪಟ ಹಳ್ಳಿಗನಾಗಿ ಜಾನಪದ ಭಾಷಾ ಭಂಡಾರವನ್ನು ಸೂರೆಗೊಳ್ಳುತ್ತಾನೆ. ವಿರಾಟಪರ್ವದಲ್ಲಿ ಕುರುಸೈನ್ಯ ಸಾಗರವನ್ನು ಕಂಡು ಬೆದರಿ ರಥದಿಂದಿಳಿದು ಬಿದ್ದು ಬೀಳ ಓಡುತ್ತಿದ್ದ ಉತ್ತರನನ್ನು ತಡೆದು ಪಾರ್ಥ: "ಹುಟ್ಟಿದೆಯೊ ಹಾದರಕೆ ಕ್ಷತ್ರಿಯ ಬೀಜವೊ ನೀನು" ಎನ್ನುತ್ತಾನೆ. ಶಿಶುಪಾಲ ಕೃಷ್ಣನನ್ನು "ಗೋವಳರ ಹೆಂಡಿರ ಹಾದರದ ಹಕ್ಕಳವ ಬಣ್ಣಿಸದಾದೆ" ಎನ್ನುತ್ತಾನೆ. "ನೀಗಳಹಿದೊಡೆ ಕಟವಾಯ ಕೊಯ್ವೆನು", "ಯಾದವ ಬಡಕರುವೆ", "ಒರಲಬೇಡವೋ ಕುನ್ನಿ" ಮುಂತಾದವು ಇಂತಹ ನಿದರ್ಶನಗಳು. ಬಸವಾದಿ ವಚನಕಾರರು, ಹರಿಹರನಂತಹ ಕ್ರಾಂತಿ ಕವಿಗಳು ಗ್ರಾಮೀಣರ ಆಡು ನುಡಿಗಳಿಗೆ ಲಗ್ಗ ಹಾಕಿದ್ದುಂಟು. ಆದರೆ ಅವರಾರೂ ಕುಮಾರವ್ಯಾಸನ ಹಾಗೆ ಭಾಷಾ ಮಡಿವಂತಿಕೆಯನ್ನು ತೂರೆಯಲಿಲ್ಲ. ಯಾವುದೇ ಶಬ್ದವನ್ನು ಅದು ಅಗತ್ಯ ಎಂದು ಕಂಡುಬಂದಾಗ ಮುಲಾಜಿಲ್ಲದೆ ಬಳಸುವ ಎದೆಗಾರಿಕೆ ಈತನದು. ಸರ್ವಜ್ಞನೆಂಬ ಮತ್ತೊಬ್ಬ ಕವಿ ಯಾವ ಸಿಗ್ಗಿಲ್ಲದೆ ಭಾಷೆಯನ್ನು ಬಳಸಿದ್ದಾನೆ. ಕಾವ್ಯದ ಬಂಧಕ್ಕೆ ಅತ್ಯಂತ ಶಕ್ತವಾಗಿ ಹೊಂದುವಂತಿದ್ದರೆ ಕುಮಾರವ್ಯಾಸ ಅಪಪ್ರಯೋಗಗಳನ್ನು ಪ್ರಯೋಗಿಸಲು ಹಿಂಜರಿಯ; ವ್ಯಾಕರಣ ದೋಷಗಳನ್ನು ಲೆಕ್ಕಿಸ. "ದುರಪದಿ", ವೀರನರಯಣ" ಮುಂತಾದ ಪದಗಳನ್ನು ಇಲ್ಲಿ ಗಮನಿಸಬಹುದು. ಆದರೆ ಇವು ದೋಷಗಳೆ? ಆನೆ ನಡೆದುದೆ ಮಾರ್ಗಂ ಎನ್ನುವ ಹಾಗೆ ಕುಮಾರವ್ಯಾಸ ಬಳಸಿದ ಮೇಲೆ ಆ ಪದಗಳು ವಿಶೇಷ ಆಕರ್ಷಣೆಯಿಂದ ಕಾಂತಿಗೊಂಡವು. ವ್ಯಂಗೋಕ್ತಿ ವಕ್ರೋಕ್ತಿಗಳನ್ನು ಲೀಲಾಜಾಲವಾಗಿ ಬಳಸಬಲ್ಲ ಈತ. ೧೫ನೆ ಶತಮಾನದ ಗದುಗಿನ ಪ್ರಾಂತದ ಗಂಡುಭಾಷೆಯ ಅವನ ವಾಗ್ವಿಹಾರ ಇಂದಿಗೂ ವಿಶಿಷ್ಟ ಆಕರ್ಷಣೆಯಿಂದ ಕೂಡಿದೆ. ಅವನ ಉಪಮೆಗಳಲ್ಲಿ ವಿಶೇಷ ಚೆಲುವಿದೆ. ಉಪಮೆಗಳನ್ನು ಬೆಸೆದು ರೂಪಕ ಮಾಡುವ, ರೂಪಕಗಳ ಇಟ್ಟಿಗೆಗಳ ಮೇಲೆ ಪ್ರತಿಮೆಗಳ ಸೌಧ ನಿರ್ಮಿಸುವ ಅನನ್ಯ ಪ್ರತಿಭೆಯ ಕಲೆಗಾರನೀತ. ಕೌರವ ಸೈನ್ಯ ಸಾಗರವನ್ನು ಕಂಡು ದಿಗ್ಭ್ರಾಂತನಾದ ಉತ್ತರ ಕುಮಾರ: "ಹಸಿದ ಮಾರಿಯ ಮಂದೆಯಲಿ ಕುರಿ ನುಸುಳಿದಂತಾದೆನು" ಎನ್ನುತ್ತಾನೆ. ಅಭಿಮನ್ಯು ಸತ್ತಾಗ "ಒಳಗುರಿವ ಹಸಿಮರದ ತುದಿಯಲಿ ಜಲವೊಗುವೊಲು" ಧರ್ಮರಾಯನ ದುಃಖವಿತ್ತಂತೆ. ಇನ್ನು ಕುಮಾರವ್ಯಾಸ ಮಹಾಕವಿಯನ್ನು ರೂಪಕ ಸಾಮ್ರಾಜ್ಯದ ಚಕ್ರವರ್ತಿಗೆ ಎಂದು ಕರೆಯದೆ ಇರುವ ಕನ್ನಡ ವಿಮರ್ಶಕರಿಲ್ಲ. ರೂಪಕಗಳಿಂದ ಪ್ರತಿಮೆಗಳನ್ನು ನಿರ್ಮಿಸುವುದಲ್ಲದೆ ಅವುಗಳನ್ನು ಸಮೀಕರಿಸುವುದರಲ್ಲೂ ಕುಮಾರವ್ಯಾಸ ಕಡುಜಾಣ. ಭೀಷ್ಮರ ಸಾವಿನ ಸಂದರ್ಭದಲ್ಲಿ "ಪಡುವಣ ಶೈಲ ವಿಪುಲಸ್ತಂಭ ದೀಪಿಕೆಯಂತೆ ರವಿಮರೆದ"ನಂತೆ. ಸುಪ್ರತೀಕ ಗಜದ ಸೊಂಡಿಲು "ಗಗನ ಗಂಗಾ ನದಿಯ ಕಾಲುವೆಯ ತೆಗೆದಂತೆ" ಕಾಣಿಸಿತಂತೆ. ಘಟೋತ್ಕಚ "ಕಾರಿರುಳ ಪಟ್ಟಣಕೆ ಚಂದ್ರನ ತೋರಣವ ಬಿಗಿದಂತೆ" ಕಂಡು ಬಂದನಂತೆ. "ದ್ಯುಮಣಿ ಸಹಿತಸ್ತಮಿಸೆ ಕಮಲಿನಿ ಕೌರವನ ಮುಖಕಮಲ ಬಾಡು"ತ್ತದೆ. ರೂಪಕಗಳ ಬಳಕೆ 'ಅವನ ನುಡಿಕಟ್ಟುಗಳ ಸಾಮಾನ್ಯ ಚಕ್ಕೆ'ಯಾಗಿದೆ. "ಸಿಡಿಲ ಪೊಟ್ಟಣಗಟ್ಟಿ ಶಾಖಿವ ಕುಡುವರೇ" "ನುಡಿಯ ಖಡ್ಗದಲೇಕೆ ಗಂಟಲು ಕೊಯ್ವೆ", "ಕೋಲ ಗುರುವಿನ ಮರಣ ವಾರ್ತಾ ಕಾಲ ಸರ್ಪನ ..ತಂದು ಸಂಜಯ ಹೇಳಿಗೆಯ ನೀಡಾದನು", "ಮಾತು ಹೊಲಸಿನ ಗಂಧವಾಗಿದೆ" ಮುಂತಾದವನ್ನು ಕುಮಾರವ್ಯಾಸನ ರೂಪಕಶಕ್ತಿಯ ಅಪರೂಪದ ವೈವಿಧ್ಯಕ್ಕಾಗಿ ನೆನೆಯಬಹುದಾಗಿದೆ. ಜನಸಾಮಾನ್ಯರ ಆಡುಮಾತಿನಲ್ಲಿ ಪ್ರಚಲಿತವಾಗಿದ್ದ ಗಾದೆಗಳು ಈ ಕವಿಯಲ್ಲಿ ಚೆಲೆಗೊಂಡಿವೆ: "ಬೆಂದ ಹುಣ್ಣಲಿ ಸಾಸಿವೆಯ ಬಳಿಯದಿರು", "ಕುರುಬರೂರಲಿ ಗಾಜು ಮಾಣಿಕ", ಬಡವರ ಕೋಪವಾಡಿಗೆ ಮೃತ್ಯು' ಮುಂತಾದವುಗಳಲ್ಲದೆ "ತಲೆಗೆ ತಾ ವೀಳಯವ," 'ನಿಮ್ಮಿಯ ಬಾಯ ತಂಬುಲ ತಿಂದವನು' ಇತ್ಯಾದಿ ನುಡಿಕಟ್ಟುಗಳು ಅವನ ಕಾವ್ಯದಲ್ಲಿ ಲೆಕ್ಕವಿಲ್ಲದಷ್ಟು ತುಂಬಿ ಶೋಭಿಸಿವೆ. ಆದ್ದರಿಂದಲೆ ಅವನಿಗೆ ಶಬ್ದ ಬ್ರಹ್ಮ ಎಂಬ ಬಿರುದು.

ಕುಮಾರವ್ಯಾಸ ಕನ್ನಡ ಸಾಹಿತ್ಯದ ಮಹಾಮೇರು. ಶ್ರೀ ಕುವೆಂಪು ಅವರು ಅವನನ್ನು ಕಂಡದ್ದು ಹೀಗೆ.... "ಪ್ರಕೃತಿ ಸಹಜವಾದ ಪರ್ವತಾರಣ್ಯಕ ರುಂದ್ರ ರೂಕ್ಷತಾ ಶಕ್ತಿಯಲ್ಲಿ, ಸರ್ವವನ್ನೂ ಸರ್ವರನ್ನೂ ಸರ್ವಕಾಲದಲ್ಲಿಯೂ ಸರ್ವಭಾವದಲ್ಲಿಯೂ ಭಗವಾನ್ ಭಕ್ತಿಯ ಶ್ರೀಮಂತ ಕಾಂತಿಯ ಕಣ್ಣಿನಿಂದಲೇ ಕಾಣುವ "ವಿರಾಡ್ ದರ್ಶನ"ದಲ್ಲಿ, ಲೌಕಿಕ ಆಗಮಿಕ, ಐಹಿಕ, ಆಮುಷ್ಮಿಕ ಎಂದು ಕವಲೊಡೆಯದೆ ಆಕಾಶೋನ್ನತವಾಗಿ ಬ್ರಾಹ್ಮಭೂಮವಾಗಿ ಪರಮ ಪುರುಷಾರ್ಥ ಸಂಸ್ಪರ್ಶಿಯಾಗಿ ಬದುಕಿಗೆ ಬೆಳಕಿತ್ತು, ಬಾಳನ್ನು ಹುರಿದುಂಬಿಸುವ ಆತ್ಮಶ್ರೀಯ ದಿವ್ಯಾಗ್ನಿಯಲ್ಲಿ ಆದಿಕವಿ ಪಂಪನಿಗೂ ಅದ್ವಿತೀಯನಾಗಿ ಆತನನ್ನೂ ದ್ವಿತೀಯನನ್ನಾಗಿ ಮಾಡುವ ಯೋಗಿಕವಿ ಪೂಜ್ಯ ನಾರಣಪ್ಪ...." ೧೬ ಈತನಿಗೆ ಬ್ರಹ್ಮದರ್ಶಿ ಎಂದೂ, ರಸದರ್ಶಿ ಎಂದೂ, ಕಾವ್ಯ ಬ್ರಹ್ಮನೆಂದೂ ವಿಮರ್ಶಕರ ಬಿರುದುಗಳು.

---

೧೫. ಎಂ. ವಿ. ಸೀತಾರಾಮಯ್ಯ, ಕನ್ನಡ ಸಾಹಿತ್ಯದಲ್ಲಿ ಶಾಂತರಸ, ಪು. ೫೨.

೧೬. ಕುವೆಂಪು, ತಪೋನಂದನ, ಪು. ೯೩.

# ಲಕ್ಷ್ಮೀಶ

ಡಾ. ಎಸ್. ಎನ್. ಲಕ್ಷ್ಮೀನಾರಾಯಣ ಭಟ್ಟ

ಆತ್ಮತೃಪ್ತಿಗಾಗಿ ಕಾವ್ಯ ಬರೆಯುತ್ತೇನೆನ್ನುವ ಕವಿಗಳಿದ್ದಾರೆ. ವಿದ್ವಾಂಸರ ಗೋಷ್ಠಿಯನ್ನು ಮೆಚ್ಚಿಸಿ ಭಲೆ ಎನಿಸಿಕೊಳ್ಳಲು ಬರೆದವರಿದ್ದಾರೆ. ಜನ ಬದುಕಲೆಂದು ಬರೆದವರಿದ್ದಾರೆ. ಇವುಗಳಲ್ಲಿ ಯಾವುದೊಂದನ್ನು ನಡೆಸಿಯೂ ಅಷ್ಟಕ್ಕೆ ಬರೆದವನ ಬದುಕು ಸಾರ್ಥಕವಾದೀತು. ಹಾಗಿರುತ್ತ ಒಂದು ಕೃತಿ ಈ ಮೂರನ್ನೂ ಒಟ್ಟಾಗಿ ಸಾಧಿಸಿ, ಜನ ಅದನ್ನು ತಲೆಯ ಮೇಲೆ ಹೊತ್ತು ಮೆರೆದರೆ ಅದನ್ನು ಸೃಷ್ಟಿಸಿದವನ ಪುಣ್ಯಕ್ಕೆ ಏನೆನ್ನಬೇಕು?

ಲಕ್ಷ್ಮೀಶ ಇಂಥ ಪುಣ್ಯವಂತ. ಅವನ ಕನ್ನಡ ಜೈಮಿನಿ ಭಾರತ ವಿದ್ವಾಂಸರಿರಲಿ ಅಕ್ಷರಸ್ಥರಲ್ಲದ ರಸಿಕರು ಕೂಡ ಮೆಚ್ಚಿ ಬಾಯ್ದೂಡಿಸಿಕೊಂಡ ಕೃತಿ. ಇದನ್ನು ಕೇಳಿದ್ದರೆ ರಸಿಕ ಓದಿದ್ದರೆ ವಿದ್ಯಾವಂತ, ಅರ್ಥ ಹೇಳಬಲ್ಲವನಾದರೆ ಪಂಡಿತೋತ್ತಮ ಎಂಬ ಮಾನ್ಯತೆ ಕರ್ನಾಟಕದ ಹಳ್ಳಿಗಳಲೆಲ್ಲ ಇದ್ದ ಕಾಲವಿತ್ತು. ಗಮಕರೂಪದ ಸಂಗೀತವಾಗಿ, ರಂಜಕ ಕಥಾಗುಚ್ಛವಾಗಿ, ಅಲೌಕಿಕ ಪುಣ್ಯ ಶ್ರವಣವಾಗಿ ಎಲ್ಲ ಕಡೆಯಿಂದ ಜನಗಳ ಬಾಳಿಗೆ ಲಗ್ಗೆಹಾಕಿದ ಕಾವ್ಯ ಇದು. ಹಾಡುವ ವಿದ್ಯಾವಂತ ಗಮಕಿ ತಪ್ಪಾಗಿ ವಾಚಿಸಿದಾಗ ಕೇಳುವ ಅನಕ್ಷರಸ್ಥ ಶ್ರೋತೃ ಅದನ್ನು ತಿದ್ದಿ ಕೊಟ್ಟ ಕಥೆಗಳು ಈ ಕೃತಿಗಳ ಸುತ್ತ ಇವೆ. ಕವಿರಾಜ ಮಾರ್ಗಕಾರ ಕನ್ನಡಿಗರನ್ನು ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್ ಎಂದು ಕರೆದದ್ದು ಸುಮ್ಮನೆ ಅಲ್ಲ. ಆದರೆ ಈ ಪ್ರಶಂಸೆ ಬರಿಯ ಜನಕ್ಕೆ ಮಾತ್ರ ಹೋಗುವಂಥದಲ್ಲ; ಶಾಲೆ ತೆಗೆಯದೆ, ಸಂಬಳ ಪಡೆಯದೆ ಆಬಾಲವೃದ್ಧರಿಗೆಲ್ಲ ವಿದ್ಯೆ ಕಲಿಸಿದ ಇಂಥ ನಾಡೋಜ ಕೃತಿಗಳಿಗೂ ಸಲ್ಲಬೇಕಾದದ್ದು.

ಇಂಥ ಕೃತಿ ಬರೆದವನ ಕಾಲ ಯಾವುದು. ಸ್ಥಳ ಯಾವುದು ಮತ ಯಾವುದು ಎನ್ನುವುದು ಜಿಜ್ಞಾಸೆಗೆ ಬಿದ್ದರೆ ಮುಗಿದೇ ಹೋಯಿತು. ಚಿಕ್ಕ ಪುಟ್ಟ ಆಧಾರಗಳ ಮೇಲೆ ಅವನನ್ನು ತಮಗೆ ಗಂಟು ಹಾಕಿಕೊಳ್ಳಲು ಸ್ಥಳ, ಮತಗಳು ಮುಂದಾಗುತ್ತವೆ. ವಿಷಯ ತಿಳಿಯುವ ಕುತೂಹಲಕ್ಕಾಗಿ, ಅವು ಕವಿಯ ಮೇಲೆ ಬೀರಿರಬಹುದಾದ ಪ್ರಭಾವ ತಿಳಿಯುವ ಕುತೂಹಲಕ್ಕಾಗಿ ಇಂಥ ಚರ್ಚೆಗಳು ನಡೆದೇ ನಡೆಯುತ್ತವೆ. ಅವನ್ನು ತಪ್ಪು ಎನ್ನುವಂತಿಲ್ಲ. ಪಂಡಿತರು ಗೊತ್ತು ಮಾಡಿರುವಂತೆ ಲಕ್ಷ್ಮೀಶನ ಕಾಲ ಹದಿನಾರನೆಯ ಶತಮಾನದ ಆದಿ ಭಾಗ; ಸ್ಥಳ ಕಡೂರಿನ ಬಳಿಯ ದೇವನೂರು; ಹುಟ್ಟಿನಿಂದ ಅವನು ಭಾರದ್ವಾಜ ಗೋತ್ರದ ಒಬ್ಬ ಬ್ರಾಹ್ಮಣ. ಆದರೆ ಲಕ್ಷ್ಮೀಶನಂಥ ಹಿರಿಯ ಚೇತನಗಳ ಮತ ಸ್ಥಳಗಳನ್ನು ಹುಟ್ಟಿನ ಮೇಲೆ ಗೊತ್ತು ಮಾಡುವುದಕ್ಕಿಂತ ಅವರ ಸಾಧನೆಯ ಮೇಲೆ ಗೊತ್ತು ಮಾಡುವುದು ಉತ್ತಮ. ಹಾಗೆ ನೋಡಿದಾಗ ಲಕ್ಷ್ಮೀಶ ಮತದಿಂದ ಭಕ್ತ, ಅರ್ಹತೆಯಿಂದ ಪಂಡಿತ, (ಮನೋ) ವೃತ್ತಿಯಿಂದ ಕವಿ. ಅವನ ಸ್ಥಳ ಕನ್ನಡ ಸಾಹಿತ್ಯ ತಿಳಿಯಬಲ್ಲ ಜನರಿರುವ ಎಲ್ಲ ಜಾಗ.

ಲಕ್ಷ್ಮೀಶನ ಕನ್ನಡ ಜೈಮಿನಿ ಭಾರತಕ್ಕೆ ಮೂಲವಾದ ಕೃತಿ ಸಂಸ್ಕೃತದ ಜೈಮಿನಿ ಭಾರತ. ವ್ಯಾಸಮುನಿಯ ಐದು ಜನ ಮುಖ್ಯ ಶಿಷ್ಯರಲ್ಲಿ ಒಬ್ಬನಾದ ಜೈಮಿನಿ ಇದನ್ನು ರಚಿಸಿದನೆಂದು ಪ್ರತೀತಿ. ಜನಮೇಜಯ ವ್ಯಾಸರಿಂದ ಭಾರತವನ್ನು ಕೇಳಿದಮೇಲೂ ಸರ್ಪ ಹತ್ಯಾದೋಷದಿಂದ ಅವನಿಗೆ ಅಂಟಿದ ಕುಷ್ಠ ರೋಗ ವಾಸಿಯಾಗದೆ ಹೋಗಲು ಜೈಮಿನಿಗಳು ತಾವೇ ಬೇರೆ ಭಾರತವೊಂದನ್ನು ರಚಿಸಿ ಜನಮೇಜಯನಿಗೆ ಅದನ್ನು ಹೇಳಲು ಆ ರೋಗ ವಾಸಿಯಾಯಿತೆಂದು ಕಥೆಯಿದೆ. ಇದು ಜೈಮಿನಿಭಾರತದ ಅಗ್ಗಳಿಕೆಯನ್ನು ಸಾರಲು ಹುಟ್ಟಿದ ಕಥೆ. ಇಷ್ಟರಿಂದ ಜೈಮಿನಿಭಾರತ ವ್ಯಾಸಭಾರತದಷ್ಟು ಮೇಲು ನೆಲೆಯದೆಂದಾಗಲೀ ಅದರಷ್ಟು ಪ್ರಾಚೀನವೆಂದಾಗಲೀ ತಿಳಿಯಬೇಕಿಲ್ಲ. ಸಂಸ್ಕೃತ ಜೈಮಿನಿ ಭಾರತದ ಕಾಲ ಕನ್ನಡದ ಕೃತಿಗಿಂತ ಸುಮಾರು ಇನ್ನೂರು ವರುಷಗಳಷ್ಟು ಹಿಂದಿರಬಹುದು, ಅಷ್ಟೆ.

ವ್ಯಾಸಭಾರತದ ಅಶ್ವಮೇಧಿಕ ಪರ್ವದಲ್ಲಿ ಪಾಂಡವರು ಅಶ್ವಮೇಧ ಯಾಗ ಮಾಡಿದ ವಿಷಯ ಬರುತ್ತದೆ. ಸಂಸ್ಕೃತ ಜೈಮಿನಿ ಭಾರತದ ಕಥಾ ವಸ್ತುವೂ ಇದೇ. ಆದರೆ ಎರಡಕ್ಕೂ ವ್ಯತ್ಯಾಸವಿದೆ. ವ್ಯಾಸಭಾರತದಲ್ಲಿ ಈ ಕಥೆ ಮುಖ್ಯ ಕಥೆಗೆ ಒಂದು ಅನುಬಂಧದಂತಿದೆ. ಜೈಮಿನಿಯಲ್ಲಿ ಇದೇ ಪ್ರಧಾನ ವಸ್ತು. ಇಲ್ಲಿ ಅದು ಸ್ವತಂತ್ರವಾದ ಬಿಡಿ ಕಾವ್ಯವಾಗಿ ವಿಸ್ತಾರವಾಗಿ ನಿರೂಪಿತವಾಗಿದೆ. ಅಶ್ವಮೇಧದ ಸಂಬಂಧದಲ್ಲಿ ಪಾಂಡವರು ನಡೆಸುವ ಯುದ್ಧ ಇಲ್ಲಿ ಮುಖ್ಯವಲ್ಲ. ಯುದ್ಧಕ್ಕಾಗಿ ಹೊರಟ ಅರ್ಜುನ, ಎದುರಿಸಿದ ಕೃಷ್ಣ ಭಕ್ತರು ಮತ್ತು ಅವರ ಭಕ್ತಿ ಶೌರ್ಯಗಳ ಅಗ್ಗಳಿಕೆ ಈ ಕಾವ್ಯದ ಮುಖ್ಯ ಲಕ್ಷ್ಯ. ಮಹಾಭಾರತದ ಕೆಲವು ಪಾತ್ರಗಳು ಇಲ್ಲಿ ಬಂದರೂ ಹಂಸಧ್ವಜ, ಸುಧನ್ವ, ತಾಮ್ರಧ್ವಜ, ವೀರವರ್ಮ ಮೊದಲಾದ ಹೊಸ ಪಾತ್ರಗಳು ಇಲ್ಲಿಯೇ ಮೊದಲು ಸಿಕ್ಕುವುದು. ಸಂಸ್ಕೃತ ಜೈಮಿನಿ ಭಾರತದ ನವೀನತೆ ಇರುವುದೇ ವೈಷ್ಣವ ಭಕ್ತಿಯ ಅಗ್ಗಳಿಕೆಯಲ್ಲಿ ಮತ್ತು ಇಂಥ ಪಾತ್ರಗಳ ಸೃಷ್ಟಿಯಲ್ಲಿ ಎನ್ನಬಹುದು.

ಲಕ್ಷ್ಮೀಶ ಮೇಲ್ಮಟ್ಟದ ನಿರೀಕ್ಷಣಾ ಶಕ್ತಿಯುಳ್ಳ ಕವಿ. ತನ್ನ ಕಾವ್ಯಕ್ಕೆ ಈ ವಸ್ತುವನ್ನು ಆಯ್ದುಕೊಂಡುದರಲ್ಲಿಯೇ ಇದು ಸ್ಪಷ್ಟವಾಗುತ್ತದೆ. ಕೃತಿ ರಚನೆಗೆ ಹೊರಟಾಗ ಅವ

ನಿಗೆ ಎದುರಾಗಿರಬಹುದಾದ ತೊಡಕನ್ನು ಊಹಿಸುವುದು ಕಷ್ಟವೇನಲ್ಲ. ಈ ದೇಶದ ಜನದ ಮನಸ್ಸನ್ನು ಸೆಳೆಯಲು ಕವಿಗಳು ಹಿಂದಿನಿಂದಲೂ ಆಯ್ದುಕೊಂಡು ಬಂದ ಕಥೆಗಳು ಎರಡೇ: ರಾಮಾಯಣ, ಮಹಾಭಾರತ. ಅನ್ಯಮತೀಯರಾದ ಪಂಪ, ರನ್ನ, ನಾಗಚಂದ್ರರು ಸಹ ತಮ್ಮ ಮುಖ್ಯ ಕೃತಿಗಳಿಗೆ ಈ ಕಥೆಗಳನ್ನೇ ವಸ್ತುವಾಗಿ ಸ್ವೀಕರಿಸಿದ್ದನ್ನು ಗಮನಿಸಬಹುದು. ಇವುಗಳಲ್ಲಿ ಮಹಾಭಾರತದ ವಿಸ್ತಾರ, ವೈವಿಧ್ಯ, ಸಂಕೀರ್ಣತೆ ರಾಮಾಯಣಕ್ಕೆ ಇಲ್ಲವಾಗಿ ಕವಿಗಳಿಗೆ ಮಹಾಭಾರತದ ಆಕರ್ಷಣೆಯೇ ಹೆಚ್ಚಾಗಿದ್ದುದು ಸಹಜ. ಲಕ್ಷ್ಮೀಶನ ಕಾಲಕ್ಕಾಗಲೇ ಪಂಪ, ಕುಮಾರವ್ಯಾಸರಂಥ ಪ್ರತಿಭಾಶಾಲಿಗಳು ಭಾರತದ ಹತ್ತು ಪರ್ವಗಳನ್ನು ವಸ್ತುವಾಗಿ ಬಳಸಿದ್ದಾಗಿತ್ತು. ಅದರ ಒಂದು ಪರ್ವವನ್ನು ಮುಖ್ಯವಾಗಿ ಆಧರಿಸಿ ಹಿಂದಿನ ಪರ್ವಗಳ ಕಥೆಯನ್ನು ಉದ್ದಕ್ಕೂ ನೆನಪಿಸುವಂಥ ಗದಾಯುದ್ಧವನ್ನು ರನ್ನ ರಚಿಸಿಯಾಗಿತ್ತು. (ಕುಮಾರವ್ಯಾಸ ಬರೆಯದೆ ಬಿಟ್ಟ ಭಾರತದ ಮುಂದಿನ ಎಂಟು ಪರ್ವಗಳ ಕಥೆಯನ್ನು ಸಹ ತಿಮ್ಮಣ್ಣ ಕವಿ ಬಹುಶಃ ಬರೆದು ಮುಗಿಸಿಯಾಗಿದ್ದಿರಬೇಕು). ಪುನಃ ಅದೇ ವಸ್ತುವನ್ನು ಬಳಸಿ ಪಂಪ ರನ್ನ ಕುಮಾರವ್ಯಾಸರನ್ನು ಸರಿಗಟ್ಟುವಂತೆ ಬರೆಯುವುದು ಕಷ್ಟ ಎಂದು ಅವನಿಗನ್ನಿಸಿರಬೇಕು. ಆದರೆ ಭಾರತದಂಥ ಕೃತಿಗಿರುವ ಮಾನ್ಯತೆಯನ್ನು ಉಪೇಕ್ಷಿಸುವಂತೆಯೂ ಇಲ್ಲ. ಹಾಗೆಂದೇ ಅವನು ಕನ್ನಡದಲ್ಲಿ ಬೇರೆ ಕವಿಗಳು ಇನ್ನೂ ಯತ್ನಿಸಿರದ, ಭಾರತದ ಒಂದು ಭಾಗವೇ ಆಗಿದ್ದೂ ಹೊಸ ಕಥೆಗಳ ನಿರೂಪಣೆಗೆ ಅವಕಾಶ ಕೊಡುವ ಮಹಾಭಾರತವನ್ನು ವಸ್ತುವಾಗಿ ಆಯ್ದುಕೊಂಡ. ಇಲ್ಲಿ ಕೃಷ್ಣ, ಅರ್ಜುನ, ಧರ್ಮರಾಯ – ಹೀಗೆ ಮಹಾಭಾರತದ ಪ್ರಸಿದ್ಧ ಪಾತ್ರಗಳು, ಚಿತ್ರಾಂಗದಾ, ಉಲೂಪಿ, ವೃಷಸೇನ, ಬಭ್ರುವಾಹನ ಮೊದಲಾದ ಉಪಪಾತ್ರಗಳು ಹಂಸಧ್ವಜ, ಸುಧನ್ವ, ತಾಮ್ರಧ್ವಜ ವೀರವರ್ಮ ಮೊದಲಾದ ಹೊಸ ಪಾತ್ರಗಳು ಬರುತ್ತವೆ. ಅಲ್ಲದೆ ಚಂಡಿ, ಜ್ವಾಲೆ ಮೊದಲಾದವರಿಗೆ ಸಂಬಂಧಿಸಿದ ಉಪಕತೆಗಳು ಒದಗುತ್ತವೆ. ರಾಮ, ಲವಕುಶರ ಕತೆ ಹೇಳುವಾಗ ರಾಮಾಯಣದ ಉತ್ತರ ಕಾಂಡದ ಕಥೆಯೂ ಗಮನಾರ್ಹ ಪ್ರಮಾಣದಲ್ಲಿ ಸೇರಿ ಜನಪ್ರಿಯವಾದ ಮತ್ತೊಂದು ಮಹಾ ಕಾವ್ಯದ ಸಂಪರ್ಕವೂ ಈ ಕೃತಿಗೆ ಲಭಿಸುತ್ತದೆ. ಹೀಗೆ ತೀರ ಅಪರಿಚಿತವೂ ಅಲ್ಲದ, ಪೂರ್ತಿ ಪರಿಚಿತವೂ ಅಲ್ಲದ ಒಂದು ನೆಲೆಯಲ್ಲಿ ನಿಂತ ಈ ಕೃತಿಯ ವಸ್ತು ತುಂಬ ಜನಪ್ರಿಯವಾಗುವ ಸಾಧ್ಯತೆಯನ್ನು ಲಕ್ಷ್ಮೀಶ ಗುರುತಿಸಿರಬೇಕು. ವೀರ, ಶೃಂಗಾರ ಮತ್ತು ಕರುಣ ಈ ಮೂರೂ ಪ್ರಧಾನ ರಸಗಳಿಗೆ ಎಡೆಕೊಡುವಂಥ ದೃಢವಾದ ವಸ್ತು ಇದಾಗಿತ್ತು. ಜೊತೆಗೆ ಭಕ್ತಿ ಮಾರ್ಗದ ಪ್ರಭಾವಕ್ಕೆ ಸಿಕ್ಕಿದ ತನ್ನ ಕಾಲದ ಜನಕ್ಕೆ ಕೃಷ್ಣ ಭಕ್ತಿಯ ಅಗ್ಗಳಿಕೆಯನ್ನು ಹೇಳಲು ನೇರವಾಗಿ ಈ ಕಥೆ ಕಾಲದ ಒಂದು ಅಗತ್ಯವನ್ನು ಪೂರೈಸುವಂಥದಾಯಿತು.

ಇದೆಲ್ಲ ಕಥಾ ವಸ್ತುವಿನ ಆಯ್ಕೆಯಲ್ಲಿ ಲಕ್ಷ್ಮೀಶ ತೋರಿದ ವಿವೇಕ. ಹೀಗೆ ಆಯ್ದುಕೊಂಡ ವಸ್ತುವನ್ನು ನಿರ್ವಹಿಸುವಲ್ಲಿ ಅವನ ಪ್ರತಿಭೆ ಚೆನ್ನಾಗಿ ಕೆಲಸ ಮಾಡಿದೆ. ಮೂಲಗ್ರಂಥ ಮೊದಲನೆಯದಾಗಿ ಒಂದು ಪುರಾಣ. ಕಥೆಯನ್ನು ಹೇಳುತ್ತ ಜೊತೆಗೇ ನೀತಿ ಧರ್ಮಗಳನ್ನು ಬೋಧಿಸುವುದು, ಪುಣ್ಯಕ್ಷೇತ್ರಗಳ ಮಹಾತ್ಮೆಯನ್ನು ವರ್ಣಿಸುವುದು, ಪಾಪ ಪುಣ್ಯಗಳ ಕಲ್ಪನೆಯನ್ನು ವಿಶದೀಕರಿಸುವುದು ಅದರ ಉದ್ದೇಶ. ಇದರ ಫಲವಾಗಿ ತೋರಿಕೆಗೆ ಪ್ರಾಸಂಗಿಕವಾದ, ವಾಸ್ತವವಾಗಿ ಅನುಚಿತವಾದ ಅನೇಕ ಉಪದೇಶ ವರ್ಣನೆಗಳು ಸೇರಿಕೊಂಡು ಮೂಲ ೫,೨೦೦ ಶ್ಲೋಕಗಳಿರುವ ೬೮ ಅಧ್ಯಾಯಗಳ ಗಾತ್ರಕ್ಕೆ ಬೆಳೆದಿದೆ. ಲಕ್ಷ್ಮೀಶ ಕಥೆಗೆ ಹೊರತಾದ ಅನೇಕ ಭಾಗಗಳನ್ನು ನಿರ್ದಾಕ್ಷಿಣ್ಯವಾಗಿ ಕತ್ತರಿಸಿ ಆ ಗಾತ್ರವನ್ನು ಅರ್ಧಕ್ಕೆ ಇಳಿಸಿದ್ದಾನೆ. ಕಾಶೀ ಮಹಿಮಾ ವರ್ಣನೆ, ಅಶ್ವಲಕ್ಷಣ, ಲವಕುಶರ ಉಪನಯನ, ರೋಗಗಳು ಮತ್ತು ಅವುಗಳ ನಿವಾರಣಾ ವಿಧಾನ– ಇಂಥ ಅನೇಕ ಭಾಗಗಳು ಕನ್ನಡ ಜೈಮಿನಿಯಲ್ಲಿ ಮಾಯವಾಗಿವೆ. ಇದರ ಫಲವಾಗಿ ಎಡ್ಡಾ ದಿಡ್ಡಿಯಾಗಿ ಗೊಂಡಾರಣ್ಯದಂತೆ ಬೆಳೆದಿದ್ದ ಸಂಸ್ಕೃತ ಮೂಲದಿಂದ ರಸಾಪೇಕ್ಷೆಯೊದ ಕಥನ ಭಾಗಗಳಷ್ಟೆ ಕನ್ನಡ ಅನುವಾದಕ್ಕೆ ಇಳಿದಿವೆ. ಮೂಲದ ಬೊಜ್ಜು ಕರಗಿದೆ. ಜೊತೆಗೆ ಅನುವಾದದಲ್ಲಿ ಚೆಲುವು ಹೆಚ್ಚಿದೆ. ಪರಿಣಾಮವಾಗಿ ಕನ್ನಡ ಕೃತಿ ಪ್ರಮಾಣಬದ್ಧವಾದ ಸುಂದರ ಶಿಲ್ಪವಾಗಿದೆ.

ಕನ್ನಡ ಜೈಮಿನಿಯಲ್ಲಿ ನಾವು ಗುರುತಿಸಬಹುದಾದ ಗುಣಗಳು ಪ್ರಧಾನವಾಗಿ ಮೂರು. ಅದರ ಕಥನ ಶಕ್ತಿ, ಉಪಮಾ ಸಮೃದ್ಧಿ ಮತ್ತು ಗೇಯತೆಗೆ ಪುಷ್ಟಿ ಕೊಡುವ ಆದರೆ ಅರ್ಥಮಾರಕವಲ್ಲದ ನಾದಮಯತೆ. “ಕತೆಯನ್ನು ಹೇಳ ಹೇಳುತ್ತ ಅವನು ಸೊಗಸಾದ ಚಿತ್ರಗಳನ್ನು ಬಿಡಿಸುತ್ತಾನೆ. ಉತ್ಪ್ರೇಕ್ಷೆಗಳ ಮಾಲೆಯನ್ನು ರಚಿಸುತ್ತಾನೆ. ಕುಣಿತದ ಗೆಜ್ಜೆಗಳಂತೆ ಮಧುರವಾದ ನುಡಿಗಡಣವನ್ನು ತೆರೆಯುತ್ತಾನೆ”೧ ಲಕ್ಷ್ಮೀಶ ಪ್ರಥಮ ಪಂಕ್ತಿಯ ಕಥನಕಾರ. ಹಾಗೆಂದು ಮಾಸ್ತಿಯವರಂಥ ಹಿರಿಯ ಕತೆಗಾರರೇ ಅವನನ್ನು ಕೈವಾರಿಸಿದ್ದಾರೆ.೨ ಕನ್ನಡ ಜೈಮಿನಿಯಲ್ಲಿರುವ ಕಥೆಗಳೆಲ್ಲ ಮೂಲದಲ್ಲಿಯೇ ಇದ್ದರೂ ಅವುಗಳನ್ನು ಹೇಳಿದ ರೀತಿಯಲ್ಲಿ ತುಂಬ ಅಂತರವುಂಟಾಗಿದೆ. ಮೂಲದಲ್ಲಿ ಬಂಡವಾಳವಿದೆ, ನಿರ್ವಹಣೆಯಿಲ್ಲ. ಕನ್ನಡದಲ್ಲಿಯಾದರೋ ಮೂಲದ ಒಡ್ಡು ಶಿಲ್ಪ ಉಚಿತ ಅವಯವಗಳನ್ನು ಮೂಡಿಸಿಕೊಂಡು ವ್ಯಂಜಕ ಗುಣಕ್ಕೆ ಎರವಾಗದ ಉಚಿತತೆಯನ್ನು ಕಾವ್ಯಶಿಲ್ಪಕ್ಕೆ ಕೊಟ್ಟಿದೆ. ಸುಧನ್ವ, ಬಭ್ರುವಾಹನ, ಸೀತಾ–ಲವಕುಶ, ಚಂದ್ರಹಾಸ–ಇವರ ಕಥೆಗಳ ನಿರೂಪಣೆಯಲ್ಲಿ ಕಾಣುವುದು ಘಟನೆಗಳ ಒಣ ವರದಿಯಲ್ಲ, ಸಣ್ಣ ಪುಟ್ಟ ಮಾತಿನ ಎಳೆಗಳೂ ಕಲಾತ್ಮಕವಾಗುತ್ತ ಮನೋಹರ ಭಾವಾವರಣದಲ್ಲಿ ತಾನಾಗಿ ತೆರೆದು ಕೊಳ್ಳುವ, ಮರುಕಳಿಸಿದ ಅನುಭವವೆನ್ನಿಸುವಂಥ ತೀವ್ರತೆಯಲ್ಲಿ ನಿರಾಯಾಸವಾಗಿ ಮೂಡುವ ಕಥಾ ವೃತ್ತಾಂತ. ಲಕ್ಷ್ಮೀಶನ ರಸ ನಿರ್ವಹಣಾ ಸಾಮರ್ಥ್ಯವೂ ಅಷ್ಟೆ. ಅವನ ಶೃಂಗಾರನಿರ್ವಹಣೆಯ ಔಚಿತ್ಯದ ಬಗ್ಗೆ ಎರಡು ಮಾತಿರಬಹುದು; ಆದರೆ ವೀರ ಕರುಣ ರಸಗಳ ಸೃಷ್ಟಿಯಲ್ಲಿ ಅವನು ಅಸಾಧಾರಣ ಶಕ್ತಿಯುಳ್ಳವನು. ಇದರ ಜೊತೆಗೆ ಪ್ರತ್ಯೇಕವಾದ ಹತ್ತಾರು ಕಥೆಗಳನ್ನು ಕೃಷ್ಣ ಭಕ್ತಿಯ ವಿಶಿಷ್ಟ ಸೂತ್ರದಲ್ಲಿ ಕೋದು ಆ ಮೂಲಕ ಅವುಗಳಿಗೆ ಒದಗಿಸಿದ ಭಕ್ತಿರಸದ ಏಕತೆ. ಲಕ್ಷ್ಮೀಶ ತನ್ನ ಕಾಲ ಮತ್ತು ಕೃತಿಗಳಿಗೆ ಒಟ್ಟಾಗಿಯೇ ನೀಡಿದ ಒಂದು “ಕಾಣಿಕೆ” ಎನ್ನಬಹುದು. ಭಾಗವತ ದೃಷ್ಟಿ, ಭಕ್ತಿ ಇವು ಆ ಕಾಲದ ಗಾಳಿ ಮಾತ್ರವಾಗದೆ ಕವಿಯ ಶೀಲದ ಪ್ರಮುಖ ಎಳೆಗಳೂ ಆಗಿದ್ದು ಅವುಗಳ ಬಲದಲ್ಲಿ ಕೃತಿ ಹತ್ತಾರು ಹರಳುಗಳಿಂದ ಜ್ವಲಿಸುವ ಸುಂದರ ರತ್ನಾಭರಣವಾಗಿದೆ.

ಲಕ್ಷ್ಮೀಶನನ್ನು ಉಪಮಾಲೋಲನೆಂದು ಕರೆಯಲಾಗಿದೆ. ನಿಸರ್ಗ, ಪುರಾಣ, ಪೂರ್ವಕಥೆ, ವ್ಯವಹಾರ ಜಗತ್ತು–ಹೀಗೆ ಎಲ್ಲ ಕ್ಷೇತ್ರಗಳಿಂದ ಒದಗುವ ಉಪಮೆಗಳು ಅವನಲ್ಲಿವೆ.

---

೧. ರಂ. ಶ್ರೀ ಮುಗಳಿ: ಕನ್ನಡ ಸಾಹಿತ್ಯ ಚರಿತ್ರೆ.

೨. ಮಾಸ್ತಿ ವೆಂಕಟೇಶ ಅಯ್ಯಂಗಾರ್: ಲಕ್ಷ್ಮೀಶನ ಕಾವ್ಯ: ವಿಮರ್ಶೆ.

ಅವುಗಳಲ್ಲಿ ಭಾವಬಲ ವಿಶೇಷವಾಗಿರುವ ಅಪ್ರತಿಮ ಉಪಮೆಗಳು ಕೆಲವು ಇದ್ದರೂ ಹೆಚ್ಚಿನವು ಪ್ರಜ್ಞೆಯ ನೆಲೆಯಲ್ಲಿ ಹುಟ್ಟಿ ಬಂದವು ಎನ್ನಬೇಕು. ಹಿಮದಿಂದ ಒದ್ದೆಯಾಗಿದ್ದ ಮಾಗಿಯನ್ನು ಸ್ವಲ್ಪ ಸ್ವಲ್ಪವೇ ಜಾರಿಸಿ ಬಿಸಿಲನ್ನು ಉಡುತ್ತ ಬರುವ ವಸಂತ ಋತುವಿನಂತೆ ಸ್ನಾನದಿಂದ ಒದ್ದೆಯಾದ ವಸ್ತ್ರವನ್ನು ಇಷ್ಟಿಷ್ಟೇ ಕಳಚುತ್ತ ಬಣ್ಣ ಬಣ್ಣದ ಒಣ ಬಟ್ಟೆಗಳನ್ನು ಪ್ರಮದೆಯರು ತೊಟ್ಟರಂತೆ, ಯೌವನಾಶ್ವನ ಹಿಂದೆ ಹೊರಟ ಸೇನಾಬಲ ಭಗೀರಥನನ್ನು ಅನುಸರಿಸಿ ಹರಿದ ಗಂಗಾ ಪ್ರವಾಹದಂತಿತ್ತು. ಮೇಘನಾದನು ಯೌವನಾಶ್ವನ ಬಿಳಿಗುದುರೆಯನ್ನು ಎತ್ತಿಕೊಂಡು ಹಾರುತ್ತಿರುವಾಗ ಗರುಡ ಅಮೃತಕಲಶವನ್ನು ಹಿಡಿದು ಹಾರುತ್ತಿರುವಂತೆ ಕಂಡಿತು. ಶೋಕಭಾರದಿಂದ ತಲೆಬಾಗಿದ್ದ ಧರ್ಮರಾಯ ಗಾಳಿ ಬೀಸದ ಉರಿಬೇಸಿಗೆಯ ದಿನದಲ್ಲಿ ಬಾಡಿದ ಚಿಗುರಿನ ಕೋಮಲ ರಸಾಲದಂತೆ ಇದ್ದ. ಕೊಲೆ ಪಾತಕರ ನಡುವೆ ಇದ್ದ ಪವಿತ್ರನಾದ ಚಂದ್ರಹಾಸ ಪಾತಕಿಗಳ ಒಡಲಲ್ಲಿರುವ ಪರಮಾತ್ಮನಂತೆ ಕಂಡ. ಇಂಥ ಉಪಮೆಗಳು ಅವನಲ್ಲಿ ಪ್ರತಿ ಪದ್ಯದಲ್ಲೆಂಬಂತೆ ಬರುತ್ತವೆ. ಕೆಲವು ಕಡೆ ಇಡಿಯ ಪದ್ಯ ಸಾಲಿಗೊಂದರಂತೆ ಅರಳುವ ಉಪಮೆಗಳ ಗೊಂಚಲಾಗಿ ಬಿಡುತ್ತದೆ. ಅವನ ಉಪಮಾನಗಳೆಂದರೆ "ಮೂಡುವ ಸೂರ್ಯನ ಎಳಬಿಸಿಲಿನ ಹೊಂಬೆಳಕಿನಲ್ಲಿ ನಳನಳಿಸಿ ತಣ್ಣನೆ ತೀಡುವ ತೆಳುಗಾಳಿಗೆ ತಲೆಯೊಲೆದು ನಲಿದಾಡುವ ಹಚ್ಚನೆಯ ಹೊಸ ಹಸುರಿನಲ್ಲಿ, ಗರಿಗೆದರಿ ಮಳೆಬಿಲ್ಲಿನ ಮರಿಗಳಂತೆ ಮನೋಹರವಾಗಿ ನರ್ತಿಸುವ ಮಯೂರಗಳು. ಅವುಗಳ ಸೊಬಗಿಗೆ ಸೆರೆಸಿಕ್ಕ ಪ್ರೇಕ್ಷಕನು ವನ ವಿಹಾರವನ್ನೇ ಮರೆಯುತ್ತಾನೆ.೧ ಆದರೆ ಇಲ್ಲಿ ಒಂದು ಮಾತು ಹೇಳಬೇಕು. ಉಪಮೆಯಂಥ ವಿಶಿಷ್ಟ ರೀತಿಯ ವಕ್ರೋಕ್ತಿಯನ್ನು ಅವಲಂಬಿಸಿ ಸಾಗುವ ಇಂಥ ನಿರೂಪಣಾ ವಿಧಾನ ವ್ಯಂಜಕ ಅಭಿವ್ಯಕ್ತಿಗೆ ಸಾರ್ಥವಾಗುವುದೇನೋ ನಿಜ. ಆದರೆ ಈ ಉಪಮೆಗಳು ಯಾವ ನೆಲೆಯವು ಎನ್ನುವುದನ್ನೂ ಗಮನಿಸಬೇಕಾಗುತ್ತದೆ. ಸಂಬಂಧವಿಲ್ಲದಂತೆ ತೋರುತ್ತಿದ್ದ ಎರಡು ಚಿತ್ರಗಳನ್ನು ವಿಶಿಷ್ಟವಾದ ಕಾಣ್ಕೆಯಲ್ಲಿ ಹಿಡಿದು, ನಮಗೆ ಹೊಳೆಯದಿದ್ದ ಅವುಗಳ ನಡುವಿನ ಸಂಬಂಧವನ್ನು ಹಠಾತ್ತನೆ ಬೆಳಗಿಬಿಡುವ ಉಪಮೆ ಪ್ರತಿಭೆಯ ಹೊಳೆಯಾಗಿ ಪರಿಣಮಿಸಿ ಧನ್ಯವೆನಿಸಿಕೊಳ್ಳುತ್ತದೆ. ಹಾಗಿಲ್ಲದಿದ್ದಾಗ ನೇರ ನಿರೂಪಣೆಯ ಶುಷ್ಕತೆಯನ್ನು ಕೊಂಚ ಕಡಿಮೆ ಮಾಡುವ ಒಂದು ಸಾಮಾನ್ಯ ಉಪಕರಣ ಮಾತ್ರವಾಗುತ್ತದೆ. ಇವು ಬುದ್ಧಿಯ ನೆಲೆಯಲ್ಲಿ ಹುಟ್ಟುವ ತರ್ಕಗಾಮಿಯಾದ ಅಲಂಕಾರಗಳಾಗಿರುತ್ತವೆ. ಲಕ್ಷ್ಮೀಶನಲ್ಲಿ ಎರಡನೆಯ ಬಗೆಯ ಉಪಮೆಗಳೇ ಜಾಸ್ತಿ ಎನ್ನಬಹುದು. ಈ ಮಾತು ಸ್ಪಷ್ಟವಾಗಲು ಕುಮಾರವ್ಯಾಸನಂಥ ಕವಿಯಲ್ಲಿ ಉಪಮೆ ರೂಪಕಗಳು ಹುಟ್ಟಿಬರುವ ರೀತಿಯನ್ನೂ ಆ ಚಿತ್ರಗಳ ಅನನ್ಯತೆ ಧ್ವನಿ ಸಂಪತ್ತುಗಳನ್ನೂ ಹಿನ್ನೆಲೆಗಿಟ್ಟುಕೊಂಡು ವಿಚಾರ ಮಾಡಬೇಕು.

ಲಕ್ಷ್ಮೀಶನಲ್ಲಿ ನಾವು ಕಾಣುವ ಮತ್ತೊಂದು ಸಾಮರ್ಥ್ಯವೆಂದರೆ ಅವನಲ್ಲಿ ತಾನೇತಾನಾಗಿ ಮೂಡುವ ನಾದಮಯ ವಚನಜಾಲ. ಜನಸಾಮಾನ್ಯರನ್ನು ಕೂಡಲೆ ಸೆಳೆಯುವ ಗುಣವಾಗಿ ಇದು ಅವನ ಕಾವ್ಯದ ಜನಪ್ರಿಯತೆಗೆ ಅವನ ಕಥನ ಶಕ್ತಿಯಷ್ಟೇ ದೊಡ್ಡ ಕಾರಣವಾಗಿದೆ. ನಿರಕ್ಷರಿಗಳಿಗೂ ಕೂಡ ಕನ್ನಡ ಜೈಮಿನಿ ಭಾರತ ಪ್ರಿಯ ಪರಿಚಿತವಾದುದಕ್ಕೆ ಅವನ ಈ ನಾದಮಯ ಮಾತುಗಾರಿಕೆ ಒಂದು ಕಾರಣವೆಂದು ವಿಮರ್ಶಕರು ಒಪ್ಪಿದ್ದಾರೆ.೨ ಮಾತಿನ ಅರ್ಥ ಮನಸ್ಸಿಗೆ ಹಾಯುವುದಕ್ಕಿಂತ ಮುಂಚೆ ಅದರ ನಾದ, ನಮ್ಮ ಕಿವಿಯನ್ನು ತುಂಬಿ ಬಿಡುತ್ತದೆ. ತನ್ನ ಕಾವ್ಯದ 'ಅಧಿದೈವವಾದ ಲಕ್ಷ್ಮೀಕಾಂತನನ್ನು ಕವಿ "ಸಂಗೀತ ಸುಕಲಾನಿಪುಣ"ನೆಂದು ಕರೆದು ಆ ದೈವ "ವೀಣೆಯಿಂ ಗಾನಮಂ ನುಡಿಸುವಂದದೊಳೆನ್ನ ವಾಣಿಯಿಂ ಕವಿತೆಯಂ" ಪೇಳಿಸಿತೆಂದು ಹೇಳುತ್ತಾನೆ.

ಲವಕುಶರು ರಾಮಾಯಣವನ್ನು ಹೇಗೆ ಹಾಡಿದರೆಂದು ವರ್ಣಿಸುವಾಗ ಜಾಣುಣ್ಮೆ ಜೋಕೆಯಿಂ ಜತಿ ರೀತಿ ತಾಳ ಪ್ರಮಾಣ ಕಂಪಿತ ಮೂರ್ಛೆ ರಸ ಪಾಡು ಬೆಡಗು ಬಿನ್ನಾಣಲಯಮಾಹತ ಪ್ರತ್ಯಾಹತವ್ಯಾಪ್ತಿಯರಿದು ಕೇಳಿಸಿದರವರು" ಎನ್ನುತ್ತಾರೆ. ತನ್ನ ಕಾವ್ಯವನ್ನಾದರೂ "ಗೇಯ ರಸಮೊಸರುವಂತೆ" ವಾಚಿಸಬೇಕೆಂದು ಅವನ ಅಭಿಪ್ರಾಯವಿದೆ. ಆದ್ದರಿಂದಲೇ ಅವನ ಕಾವ್ಯ ಶ್ರೋತೃಗಳ ಕಿವಿಯ ಮೂಲಕವೇ ಅವರ ಹೃದಯಕ್ಕೆ ಹಾಯಲೆಳಸುತ್ತದೆ. ಇದಕ್ಕೆ ಬೇಕಾದ ಸಾಮರ್ಥ್ಯ ಕವಿಯಲ್ಲಿ ಧಾರಾಳವಾಗಿದೆ. ಅವನ ಮನೋಧರ್ಮ ಎಷ್ಟು "ನಾದಲೋಲುಪ"ವಾದುದೆಂದರೆ ಷಟ್ಪದಿಗೆ ಅಗತ್ಯವಾದ ಆದಿ ಪ್ರಾಸದ ಜೊತೆಗೆ ಅನುಪ್ರಾಸ ಯಮಕ ವರ್ಣ ಪುನರಾವೃತ್ತಿಗಳನ್ನೂ ಅದು ಹೆಜ್ಜೆ ಹೆಜ್ಜೆಗೆ ತಳೆಯುತ್ತದೆ. ಅದರಲ್ಲಿ ಕಾಣುವ ನಿರಾಯಾಸತೆ ಆಶ್ಚರ್ಯ ಹುಟ್ಟಿಸುವಂಥದು. ಮಾತಿನ ಶಕ್ತಿಯನ್ನು ಕೊಡು ಎಂದು ಕವಿ ಶಾರದೆಯನ್ನು ಬೇಡುತ್ತಿರುವ ಪದ್ಯದಲ್ಲಿಯೇ ಈ ಶಬ್ದಶಕ್ತಿ ಹಠಾತ್ತಾಗಿ ಕಾಣಿಸಿಕೊಂಡಿದೆ. ಅವನು ನಾದಕ್ಕಾಗಿ ಶಬ್ದವನ್ನು ಕಿತ್ತಾಡಿದವನಲ್ಲ. ಅಗತ್ಯವಾದ ನಾದದ ಹೆಣಿಗೆಗೆ ಹೊಂದಿದಂತೆ ಅರ್ಥೋಚಿತವಾದ ಮಾತೇ ಕಾಣಿಸಿಕೊಳ್ಳುತ್ತದೆ.

ಮೂಡುದೆಸೆಯೊಳ್ ಕೆಂಪು ದೊರೆಯೆ ತಾರಗೆ ಮರೆಯೆ
ಕೂಡೆ ತಂಗಾಳಿ ಮುಂಬರಿಯೆ ಕಮಲಂ ಬಿರಿಯೆ
ಪಾಡುವಳಿದುಂಬಿಗಳ್ ಮೊರೆಯೆ ಚಕ್ರಂ ನೆರೆದು
ನೈದಿಲೆಯ ಸೊಂಪು ಮರೆಯೆ

ಎಂಬಂಥ ಪದ್ಯಗಳಲ್ಲಿ ಕಾಣುವ ನಾದಮಯತೆ ಅರ್ಥಪೋಷಕವಾದುದು. "ತಪ್ಪ ತಪ್ಪಲೊಳಲ್ಲಿಗಲ್ಲಿ ಮಂಜುಗಳೆಸೆವ ಕಪ್ಪ ಕಪ್ಪನೆಯ ಗಿರಿಗಳ ಪರ್ಬುಗಳಂತೆ ಬಪ್ಪ ಬಪ್ಪಳ ನಾಯ್ಗಳು" ಎಂಬಲ್ಲಿಯಾಗಲೀ "ಸುರ ನದಿಯ ತೆರೆ ತೆರೆಯ ನಡುನಡುವೆ ಬಿದ್ದುದ್ದು, ಬರಲಾರದಿರ್ದೊಡಂ ಗಂಗೆಯೊಳಲಿರ್ದರವಿಂದ ಗಂಧದತಿ ಭಾರಮಂ ಪೊರಲಾರದಿರ್ದೊಡಂ" ಎಂಬಲ್ಲಿಯಾಗಲೀ ಅಲಂಕಾರ ಗುಣಗಳ ವಿಮರ್ಶೆಗೆ ನಮ್ಮ ಮನಸ್ಸು ಹೋಗುವುದಿಲ್ಲ. ಬದಲಾಗಿ ಆ ಮೃದುವಾದ ಬಂಧವೂ, ಚಿತ್ರ ಬರೆದಂತೆ ವಸ್ತುಗಳನ್ನು ಕಣ್ಣುಮುಂದೆ ನಿಲ್ಲಿಸುವ ವರ್ಣನಾ ವೈಚಿತ್ರ್ಯವೂ ಪ್ರತಿಯೊಂದು ಮಾತಿನಲ್ಲಿಯೂ ಹೊಮ್ಮುತ್ತಾ ಬರುವ ಅನುಭವ ರಸಾಯನದ ಸವಿಯೂ ನಮ್ಮನ್ನು ಮೆಲ್ಲಗೆ ಓದುವ ಗ್ರಂಥದಿಂದ ಭಾವನಾರಾಜ್ಯಕ್ಕೆ ಎತ್ತಿ ಅಲ್ಲಿಂದ ನಿರ್ವಿಕಾರಾನಂದ ಶಿಖರಕ್ಕೇರಿಸುವುದು.೩ ಜ್ವಾಲೆಯ ಪಯಣದಲ್ಲಿ ಗಂಗಾನದಿ ಎದುರಾದಾಗ ಅದು ಹರಿಯುತ್ತಿದ್ದ ರೀತಿಯನ್ನು ಕವಿ ವರ್ಣಿಸಿರುವ ರೀತಿ ನಾದದ ಬಲದಿಂದಲೇ ಒಂದು ಕ್ರಿಯೆಯ ಅನುಭವವನ್ನು ಶ್ರೋತೃವಿನ ಮನಸ್ಸಿಗೆ ದಾಟಿಸಬಲ್ಲ ಶಕ್ತಿಗೆ ನಿದರ್ಶನವಾಗಿದೆ. "ಲಕ್ಷ್ಮೀಶನ ಕೃತಿ ಶ್ರುತಿ ಹಚ್ಚಿಟ್ಟ ವೀಣೆ.... ಅವನು ನಾದಧ್ವನಿ ಮಾರ್ಗದವನು. ಅವನ ಪ್ರಾಸಾನುಪ್ರಾಸಗಳು ಭಾವದ ಭಂಡಾರ

೧. ಕುವೆಂಪು: ಉಪಮಾಲೋಲ ಲಕ್ಷ್ಮೀಶ, ಕಾವ್ಯ ವಿಹಾರ.
೨. ಡಾ. ಆದ್ಯ ರಂಗಾಚಾರ್ಯ: ಲಕ್ಷ್ಮೀಶನ ಜೈಮಿನಿ ಭಾರತ, ಲಕ್ಷ್ಮೀಶ: ಟಿ.ಬಿ.ಎಚ್. ಪ್ರಕಾಶನ.
೩. ಕಡಂಗೋಡ್ಲು ಶಂಕರ ಭಟ್ಟ, ಕನ್ನಡ ಜೈಮಿನಿ ಲಕ್ಷ್ಮೀಶ.

ವನ್ನು ತೆರೆಯುವ ಬೀಗದ ಕೈಗಳು ಅವನ ಗಮಕಗಳು ಕವಿಹೃದಯದ ಗಮಕಗಳು. ಇದು ಪಾಮರರ ರಂಜನೆ ಇರಬಹುದು. ಆದರೆ ಪಂಡಿತರಿಗೂ ನೇತ್ರಾಂಜನವಾಗದೆ ಇಲ್ಲ" ಎಂಬ ಬೇಂದ್ರೆಯವರ ಮಾತುಗಳು ಲಕ್ಷ್ಮೀಶನ ನಾದನಿರ್ವಹಣೆಯನ್ನು ಕುರಿತು ನ್ಯಾಯವಾದ ವಿಮರ್ಶೆ ಎನಿಸುತ್ತದೆ.೧

ಹೀಗೆ ತನ್ನ ಮನೋಧರ್ಮಕ್ಕೂ ತನ್ನ ಕಾಲದ ಮನೋಧರ್ಮಕ್ಕೂ ಕೂಡಿಯೇ ಹೊಂದುವ ವಿಶಿಷ್ಟ ವಸ್ತುವಿನ ಆಯ್ಕೆಯಿಂದ, ತನಗೆ ವಸ್ತುವನ್ನು ನೀಡಿದ ಮೂಲಕ್ಕಿಂತಲೂ ಹೆಚ್ಚಿನ ಮಟ್ಟದಲ್ಲಿ ಆ ವಸ್ತುವನ್ನು ನಿರ್ವಹಿಸಬಲ್ಲ ಕಥನ ಶಕ್ತಿ ಮತ್ತು ಆಕರ್ಷಕ ಅಭಿವ್ಯಕ್ತಿ ವಿಧಾನಗಳಿಂದ ಲಕ್ಷ್ಮೀಶ ಪಂಡಿತ ಪಾಮರರಿಬ್ಬರನ್ನೂ ಸಮಾನ ರೀತಿಯಲ್ಲಿ ಸೆಳೆಯುವ ಪ್ರತಿಭಾಶೀಲ ಕವಿಯಾಗಿದ್ದಾನೆ.

---

೧. ದ. ರಾ. ಬೇಂದ್ರೆ: ನಾದ ಲೋಲ ಲಕ್ಷ್ಮೀಶ: ಸಾಹಿತ್ಯದ ವಿರಾಟ್ ಸ್ವರೂಪ.

# ರತ್ನಾಕರವರ್ಣಿ

ಎಸ್. ವಿ. ಪರಮೇಶ್ವರ ಭಟ್ಟ

ಕನ್ನಡದ ಸತ್ವ ಸ್ವತ್ವಗಳೆರಡನ್ನೂ ಸಮರ್ಪಕವಾಗಿಯೂ, ಸಮರ್ಥವಾಗಿಯೂ ಕನ್ನಡೇತರರಿಗೆ ಪರಿಚಯ ಮಾಡಿಸಿಕೊಡಬಲ್ಲ ಸಾಮರ್ಥ್ಯವಿರುವ ನಾಲ್ವರು ಹಳೆಯ ಮಹಾಕವಿಗಳಲ್ಲಿ ರತ್ನಾಕರವರ್ಣಿ ಒಬ್ಬ. ಇನ್ನುಳಿದ ಮೂವರಲ್ಲಿ ಒಬ್ಬ ಪಂಪ, ಮತ್ತೊಬ್ಬ ಹರಿಹರ, ಇನ್ನೊಬ್ಬ ಕುಮಾರವ್ಯಾಸ.

ರತ್ನಾಕರ ಹದಿನಾರನೆಯ ಶತಮಾನದವನು. ಈತ ಕ್ಷತ್ರಿಯ ವಂಶಜ, ಜೈನಮತಾನುಯಾಯಿ. ಸಾವಿರ ಕಂಬದ ಬಸದಿಯ ಹಿರಿಮೆಯ, ದಕ್ಷಿಣಕನ್ನಡ ಜಿಲ್ಲೆಯ ಮೂಡಬಿದಿರೆ ಈತನ ಜನ್ಮಸ್ಥಳ. ಕಾರ್ಕಳದ ಇಮ್ಮಡಿ ಭೈರರಸನ ಆಸ್ಥಾನ ಕವಿಯಾಗಿ ಈತ ಕೆಲಕಾಲ ಇದ್ದುದಾಗಿಯೂ ಹೇಳುತ್ತಾರೆ. ಆ ರಾಜನ ಮಗಳೊಡನೆ ಈ ಕವಿ ಪ್ರಣಯ ಸಂಬಂಧವನ್ನು ಹೊಂದಿದ್ದನೆಂದು ಸಹ ಹೇಳುವುದುಂಟು. ಸಂಸಾರದ ಸಾರಾಸಾರ ವಿಚಾರಗಳನ್ನು ಈತ ಪ್ರತ್ಯಕ್ಷವಾಗಿಯೂ, ಪರೋಕ್ಷವಾಗಿಯೂ ಅರಿತವನಾಗಿದ್ದ. ಸ್ವಾನುಭವ ಪರಾನುಭವಗಳಿಂದ ಒದಗಿ ಬಂದ ಈತನ ಪ್ರಾಪಂಚಿಕ ವಿಷಯಗಳ ಜ್ಞಾನ ಬಹುಮುಖವಾದುದಾಗಿತ್ತು.

ಸಾಹಿತ್ಯ, ಸಂಗೀತ, ಚಿತ್ರ, ನರ್ತನಾದಿ ಕಲೆಗಳ ಇವನ ಪರಿಚಯ ಗಾಢವಾದದ್ದು. ಯೋಗವಿದ್ಯೆಯಲ್ಲಿ ಈತನಿಗಿದ್ದ ಪರಿಣತಿ ಅಸಾಧಾರಣವಾದದ್ದು. ಈತ ಜೈನ ಸಿದ್ಧಾಂತದ ಗ್ರಂಥಗಳನ್ನು ಗುರುಮುಖದಿಂದ ಪಾಂಕ್ತವಾಗಿ ಕಲಿತವನಿದ್ದ. ಚಾರುಕೀರ್ತಿಗುರುವಿನಿಂದ ಈತ ಶ್ರೀಶುಚಿದೀಕ್ಷೆ ಪಡೆದವನಾಗಿದ್ದ. ಈತ ಹಂಸಕಲೆಯಲ್ಲಿ ನಿಷ್ಣಾತ. ಈಗ ಬಹಿರ್ಮುಖಿಯಾಗಿದ್ದವನು ಮರುಕ್ಷಣದಲ್ಲಿ ಅಂತರ್ಮುಖಿಯಾಗಿ ಆತ್ಮಲೀಲಾಲೋಲನಾಗಿ ಸಮಾಧಿಸ್ಥನಾಗಿ ಬಿಡುತ್ತಿದ್ದ ಮಹಾ ಮಹಿಮ ಈತ. ಈತ ಕವಿ, ಭೋಗಿ, ಯೋಗಿ. ಈತ ರಸಿಕ, ಸಹೃದಯಿ, ಉದಾರಿ. ಈತ ಭಕ್ತ, ಜ್ಞಾನಿ, ವಿರಾಗಿ. ಈತ ಕ್ರಾಂತದರ್ಶಿ, ನಿಷ್ಠುರವಾದಿ, ನಿರಾಡಂಬರ ಮೂರ್ತಿ.

ರತ್ನಾಕರನು ಅಪರಾಜಿತೇಶ್ವರ ಶತಕ, ರತ್ನಾಕರಾಧೀಶ್ವರ ಶತಕ ಮತ್ತು ತ್ರಿಲೋಕ ಶತಕಗಳೆಂಬ ಮೂರು ಶತಕ ಗ್ರಂಥಗಳನ್ನು ರಚಿಸಿದ್ದಾನೆ. ಮೊದಲಿನವೆರಡೂ ಕನ್ನಡದ ಖ್ಯಾತ ಶತಕಗಳ ಮಾಲಿಕೆಯಲ್ಲಿ ಸೇರ್ಪಡೆಗೊಳ್ಳುತ್ತವೆ. ಹೀಗೆ ಸೇರ್ಪಡೆಗೊಳ್ಳುವುದಕ್ಕೆ ಇವೆರಡರಲ್ಲಿಯೂ ಮೇಲ್ಮಟ್ಟದ ಸಾಹಿತ್ಯಾಂಶಗಳು ಕಾಣಬರುತ್ತವೆ ಎಂಬುದು ವಿದ್ವಾಂಸರ ಅಭಿಪ್ರಾಯ. ಸಾಹಿತ್ಯಜ್ಞರಿಗೆ ರತ್ನಾಕರಾಧೀಶ್ವರ ಶತಕವೇ ಹೆಚ್ಚು ಪ್ರಿಯವಾದದ್ದು. ಉನ್ನತ ಮಟ್ಟದಲ್ಲಿರುವ ಭಾವಗೀತಾಂಶಗಳು ಈ ಶತಕದ ಜನಪ್ರಿಯತೆಗೆ ಕಾರಣವಾಗಿವೆ. ನೀತಿ, ಭಕ್ತಿ, ಜ್ಞಾನ, ವೈರಾಗ್ಯ—ಈ ಕುರಿತು ಜನರಿಗೆ ತಿಳಿವಳಿಕೆ ಹೇಳುವುದು ಈ ಶತಕಗಳ ಉದ್ದೇಶ. ಸಂಸಾರದ ದಾರುಣ ಸ್ವರೂಪವನ್ನು ಲೌಕಿಕ ಸುಖದ ನಶ್ವರ ಸ್ವರೂಪವನ್ನೂ ಮನಮುಟ್ಟುವ ಹಾಗೆ ರತ್ನಾಕರ ಈ ಶತಕಗಳಲ್ಲಿ ವರ್ಣಿಸಿಕೊಂಡು ಹೋಗಿದ್ದಾನೆ. ತ್ರಿಲೋಕ ಶತಕದಲ್ಲಿ ನೂರಕ್ಕೆ ಮೇಲೆ ಕಂದ ಪದ್ಯಗಳಿವೆ. ಜೈನಧರ್ಮದ ಪ್ರಕಾರ ಮೂರು ಲೋಕಗಳ ಸ್ವರೂಪ ವರ್ಣನೆ ಇಲ್ಲಿ ದೊರೆಯುತ್ತದೆ.

ರತ್ನಾಕರ ಮೇಲೆ ಕಾಣಿಸಿದ ಶತಕಗಳನ್ನಲ್ಲದೆ ಕೆಲವು ಗೀತೆಗಳನ್ನೂ ರಚಿಸಿದ್ದಾನೆ. ಈ ಅಧ್ಯಾತ್ಮ ಗೀತೆಗಳು ಇನ್ನೂರಕ್ಕೂ ಹೆಚ್ಚು ದೊರೆಯುತ್ತಿವೆ. ಈ ಗೀತೆಗಳಲ್ಲಿ ತತ್ವದ ಪದಗಳು ಕೆಲವು, ಭಕ್ತಿಯ ಪದಗಳು ಕೆಲವು, ಕವಿಯ ಜೀವನದ ಘಟನೆಗಳಿಗೆ ಸಂಬಂಧಿಸಿದಂತೆ ಹಾಡಲಾಗಿರುವ ಭಾವಗೀತೆಗಳು ಕೆಲವು. ಹೀಗೆ ಬೇರೆ ಬೇರೆ ರೀತಿಯ ಹಲವಾರು ಭಾವಗೀತೆಗಳ ರಚಕನಾಗಿ ಮೆರೆದ ಜೈನ ಕವಿ ರತ್ನಾಕರನೊಬ್ಬನೇ.

## ಧ್ರುವ ತಾರೆ

ಹೀಗೆ ಮೊದಮೊದಲು ಶತಕಕಾರನಾಗಿ, ಗೀತಕಾರನಾಗಿ ಜಿನಮನವನ್ನೂ ಜನಮನವನ್ನೂ ಸೂರೆಗೊಂಡ ಈ ಕವಿ ಕನ್ನಡದ ಸಾಹಿತ್ಯಾಕಾಶದಲ್ಲಿ ಧ್ರುವತಾರೆಯಂತೆ ಬೆಳಗುತ್ತಿರುವುದು ತಾನು ರಚಿಸಿದ ಭರತೇಶವೈಭವದ ಕಾರಣದಿಂದಾಗಿ. ಭರತೇಶವೈಭವ ಈ ಕವಿಯ ಕೃತಿಮೇರು. ತಾನು ಕಂಡ ಪ್ರಕೃತಿಯ ಮಹಾವೈಭವಗಳಲ್ಲೊಂದಾದ ಆ ಪಶ್ಚಿಮ ರತ್ನಾಕರಕ್ಕೆ ಎದುರಾಗಿ ಈ ಕವಿ ಒಡ್ಡಿದ ಪ್ರತಿರತ್ನಾಕರವೇ ಈ ಕಾವ್ಯ ರತ್ನಾಕರ.

ಭರತೇಶ ಪ್ರಥಮ ತೀರ್ಥಂಕರನಾದ ಪುರು ಪರಮೇಶ್ವರನ ಹಿರಿಯ ಕುಮಾರ, ಪ್ರಥಮ ಚಕ್ರಿ, ಹದಿನಾರನೆಯ ಮನು, ಷಟ್ಖಂಡಗಳ ಒಡೆಯ, ತೊಂಭತ್ತಾರು ಸಾವಿರ ಧರ್ಮಪತ್ನಿಯರ ಪತಿದೈವ, ಬಹು ಪುತ್ರವಂತ, ಬಹು ಭಾಗ್ಯವಂತ, ರಾಗ ರಸಿಕ, ವೀತರಾಗ ರಸಿಕ, ರಾಜಯೋಗಿ, ಚರಮದೇಹಧಾರಿ ಜೊತೆಗೆ ಒಳ್ಳೆಯ ಶ್ರಾವಕ, ಒಳ್ಳೆಯ ತಂದೆ, ಒಳ್ಳೆಯ ಮಗ, ಒಳ್ಳೆಯ ಅಳಿಯ, ಒಳ್ಳೆಯ ಮಾವ, ಒಳ್ಳೆಯ ಭಾವ

ಒಳ್ಳೆಯ ಅಣ್ಣ ಎಂದು ತನ್ನ ಬಂಧುವರ್ಗದವರಿಂದ ಹೊಗಳಿಸಿಕೊಂಡು ತುಂಬುಬದುಕು ಬಾಳಿದ ಸುಖೀ ಸಂಸಾರಿ. ಇಂತಹ ಮಹಾನ್ ವ್ಯಕ್ತಿಯನ್ನು ರತ್ನಾಕರ ತನ್ನ ಕಾವ್ಯಕ್ಕೆ ನಾಯಕನನ್ನಾಗಿ ಆರಿಸಿಕೊಂಡಿದ್ದಾನೆ. ನಮ್ಮ ಖಂಡಕ್ಕೆ ಭರತ ಖಂಡ ಎಂಬ ಹೆಸರು ಬಂದದ್ದು ಈ ಭರತನಿಂದಲೇ. ಇಂತಹ ನಾಯಕಮಣಿಯ ವೈಭವಾತಿಶಯಗಳನ್ನೇ ಕವಿ ರತ್ನಾಕರ ಆಡಿ ಹಾಡಿ ಕೊಂಡಾಡಿ ಕುಂಬಿಟ್ಟು ಕುಕಿಲಿರಿದು ಕುಣಿದದ್ದು.

"ಗಣನೆಯಿಲ್ಲದ ರಾಜ್ಯ ಸುಖದೊಳೋಲಾಡಿ| ಧಾರಿಣಿ ಮೆಚ್ಚೆ ಜಿನಯೋಗಿಯಾಗಿ|| ಕ್ಷಣಕೆ ಕರ್ಮವ ಸುಟ್ಟು ಜಿನನಾದ ಭೂಭುಜಾಗ್ರಣಿಯ ವೈಭವವ ಲಾಲಿಸಿರೊ|| ಎಂದು ಕವಿ ಹೇಳಿದ್ದಾನೆ. ಭರತೇಶನ ಗಣನೆಯಿಲ್ಲದ ರಾಜ್ಯ ಸುಖಗಳು ಯಾವುವು? ಅವುಗಳಿಂದ ಆತನು ಹೇಗೆ ಹೇಗೆ ಮಹಿಮಾನ್ವಿತನಾದನು? ಆತ ಲೋಕವೇ ಮೆಚ್ಚುವ ಹಾಗೆ ಹೇಗೆ ಜಿನಯೋಗಿಯಾದನು? ಆತನ ಜಿನಯೋಗದ ವೈಭವಗಳ ಸ್ವರೂಪ ಎಂಥದು? ಇಂಥವನು ಕ್ಷಣ ಮಾತ್ರದಲ್ಲಿ ಕರ್ಮವನ್ನು ಸುಟ್ಟು ಜಿನನಾದ ಬಗೆ ಹೇಗೆ? ಅದರ ವೈಭವ ಏನು? ಎಂಬುಥವುಗಳನ್ನೆಲ್ಲ ಕವಿ ಸವಿಸ್ತಾರವಾಗಿ ವರ್ಣಿಸಿ ಒಟ್ಟಿನಲ್ಲಿ ತನ್ನ ಕಾವ್ಯದ ಮತ್ತು ಕಾವ್ಯನಾಯಕನ ನೆಲೆ ಬೆಲೆಗಳ ಬೃಹತ್ತು ಮಹತ್ತುಗಳನ್ನೂ ದಿವ್ಯತೆ ಭವ್ಯತೆಗಳನ್ನೂ ಕನ್ನಡ ಲೋಕಕ್ಕೆ ಎತ್ತಿ ತೋರಿಸಿದ್ದಾನೆ. ಇದರಿಂದಾಗಿ ಕವಿ ತನ್ನ ಮಹಿಮೋನ್ನತಿಯನ್ನು ಸಾರಿಕೊಂಡಿದ್ದಾನೆ.

**ಕಾವ್ಯ ಹೇಗಿರ ಬೇಕು ?**

"ಕಬ್ಬಿಗರೋದುಗಬ್ಬವ ಹಾಡುಗಬ್ಬವ| ಕಬ್ಬದೊಳೊರವರಿವರಡು|| ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇ| ಕಬ್ಬ ಹೇಳಲೆ ಸರಸ್ವತಿಯೆ" ಎಂದೂ, "ಅಯ್ಯಯ್ಯ ಚೆನ್ನಾದುದನೆ ಕನ್ನಡಿಗರು| ರಯ್ಯಾ ಮಂಚಿದಿಯನೆ ತೆಲುಗಾ| ಅಯ್ಯಯ್ಯ ಎಂಚಪೊರ್ಲಾಂಡೆಂದು ತುಳುವರು| ಮೆಯ್ಯುಬ್ಬಿ ಕೇಳೆ ಬೇಕಣ್ಣಾ|| ಎಂದೂ, ರಳಕುಳ ಶಿಥಿಲ ಸಮಾಸ ಮುಂತಾದವ| ರೊಳಗಿಲ್ಲಿ ಕೆಲವು ಳ್ಳರುಂಟು|| ಕೆಲವಿಲ್ಲಾದರುವಿಲ್ಲವೇಕೆಂದವರ ಕೋ| ಟಲೆಯೇಕೆ ಹಾಡು ಗಬ್ಬದೊಳು|| ಎಂದೂ, ಸಕಲ ಲಕ್ಷಣವು ವಸ್ತುಕಕೆ ವರ್ಣಕಕಿಷ್ಟು| ವಿಕಳವಾದರು ದೋಷವಿಲ್ಲ| ಸಕಲ ಲಕ್ಷಣಕ್ಕಾಗಿ ಬಿರುಸು ಮಾಡಿದರೆ ಪು| ಸ್ತಕದ ಬದನೆ ಕಾಯಹುದು||" ಎಂದೂ ಕವಿ ಘೋಷಿಸಿ ಕೊಂಡಿದ್ದಾನೆ. ಹೀಗೆ ಹೇಳಿ ತನ್ನಂತಹ ಹಾಡುಗಬ್ಬಿಗರನ್ನು ಪೋಷಿಸಿ ಕೊಂಡಿದ್ದಾನೆ. ನಿಜವಾದ ಕಾವ್ಯ ರಸಭರಿತವಾಗಿರಬೇಕು ಎಂಬ ಈ ದೃಷ್ಟಿ ಅತಿ ಸನಾತನವೂ ಹೌದು, ಅತಿ ನೂತನವೂ ಹೌದು.

ಇದರ ಮೇಲೆ ತನ್ನ ಕಾವ್ಯವನ್ನು ಕವಿ ಹೇಗೆ ಸೂಲ್ಲಿಸುತ್ತಾನಂತೆ? ಕವಿಯನ್ನೇ ಕೇಳಿ. "ಆಗಮವಧ್ಯಾತ್ಮ ವಳವಟ್ಟು ಶೃಂಗಾರ| ತ್ಯಾಗಭೋಗದ ಮೋಡಿ ಮೆರೆಯ|| ಭೋಗಿಯೋಗಿಗಳೆದ ಜುಮ್ಮಜುಮ್ಮೆನೆ ನೇಮ| ದಾಗಿ ಸೂಲ್ಲಿಸುವ ನಾಲಿಸಿರೊ" ಎಂದೂ "ಪ್ರಚುರದಿ ಪದಿನೆಂಟು ರಚನೆಯ ವಾಕ್ಯಕೆ| ರಚಿಸುವರಾನಂತು ಪೇಳೆ| ಉಚಿತಕೆ ತಕ್ಕಷ್ಟು ಪೇಳ್ವೆ ನಧ್ಯಾತ್ಮವ| ನಿಚಿತ ಪ್ರಯೋಜನವೆನಗೆ" ಕವಿಯ ರಸೈಕದೃಷ್ಟಿ, ಧರ್ಮೈಕ ನಿಷ್ಠೆ, ಔಚಿತ್ಯಪ್ರಜ್ಞೆ ಇವು ಈ ಕಾವ್ಯದಲ್ಲಿ ಮೇಲುಗೈಯಾಗಿವೆ.

ಕಾವ್ಯದ ಕೊನೆಯಲ್ಲಿ ಬರುವ ಮಾತುಗಳೂ ಮನನೀಯವಾಗಿವೆ. "ಶೃಂಗಾರಕಾಗಿ ಕಷ್ಟದ ಕಥೆ ಕೇಳ್ದು ಜ|ನಂಗಳು ಕೆಡಬೇಡವೆಂದು|| ಅಂಗ ಸುಖಿಯ ಮೋಕ್ಷ ಸುಖಿಯ ಕಾವ್ಯವ ನಿಷ್ಟು| ಶೃಂಗಾರ ಕಟ್ಟಿ ಪೇಳಿದೆನು|| ದುರುಳರ ಪಾದರಿಯರ ನೀಚ ಸತಿಯರ| ವಿರಚಿಸಿತಿಲ್ಲ ಸಿಂಗರಕೆ|| ಭರತ ಚಕ್ರಿಯ ಪೇಳ್ದೆನವರೆ ಪಂಡಿರ ಪೇಳ್ದೆ| ಸ್ಮರಿಸಿದೆಲ್ಲರ್ಗೆ ಪುಣ್ಯ|| "ಧ್ಯಾನಕೆ ಬೇಸರಾದಾಗ ನನ್ನಾತ್ಮ ಲೀ| ಲಾನುವೃದ್ಧಿಗೆ ಪೇಳ್ದೆನೈಸೆ|| ನಾನೊಬ್ಬರೊಡನೆ ಮತ್ಸರಕೆ ಪೇಳ್ದವನಲ್ಲ| ಮೋನದೊಳಿಹೆನದು ಸಾಕು||" ಬೇಕಾದರಾಲಿಸುವುದು ಬೇಡವಾಗೆ ಪ| ರಾಕು ಮಾಡುವುದನಗಲ್ಲಿ| ವ್ಯಾಕುಲವಿಲ್ಲ ಸಂತಸವಿಲ್ಲ ನಾನು ನಿ| ರಾಕಾಂಕ್ಷಿ ಸಾಕದಂತಿರಲಿ||".

ಕವಿ ರತ್ನಾಕರನ ಮುತ್ತಿನಂತಹ ಮಾತುಗಳಿವು!

ಮುಂದೆ ಈತ ಬಳಸಿಕೊಂಡಿರುವ ಛಂದಸ್ಸನ್ನೂ ಕುರಿತಾಗಿ ಒಂದು ಮಾತು. "ಭರತೇಶ ವೈಭವ"ದಲ್ಲಿ ಹತ್ತಿರ ಹತ್ತಿರ ಹತ್ತು ಸಹಸ್ರ ಸಾಂಗತ್ಯಗಳಿವೆ. ಸಾಂಗತ್ಯ ಅಂಶ ಗಣಗಳಿಂದ ಕೂಡಿ ಆದ ಛಂದೋರಚನೆ. ಹಾಡುಗಬ್ಬವಾದ ಈ ವೈಭವ ಕಾವ್ಯದ'ಲ್ಲಿ ಸಾಂಗತ್ಯರಚನೆಯ ಸರ್ವರೀತಿಯ ಸೊಗಸೂ ಪ್ರಕಟವಾಗುವ ಹಾಗೆ ಅದರ ಎಲ್ಲ ವೈಭವವೂ ತೆರೆದು ನಿಲ್ಲುವ ಹಾಗೆ ರತ್ನಾಕರ ಈ ಛಂದಸ್ಸನ್ನು ಮೆರೆದಿದ್ದಾನೆ. ಅಂಶ ಗಣ ಘಟಿತವಾದ ಈ ರಚನೆ ಹಾಡುವುದಕ್ಕೆ ಹೇಳಿ ಮಾಡಿಸಿದ ಛಂದೋರಚನೆ. ಸ್ವತಃ ಸಂಗೀತಜ್ಞನಾದ, ಹಾಡುಗಾರನಾದ, ಓತಪ್ರೋತವಾಗಿ ರಚನೆ ಮಾಡಬಲ್ಲ ದೈವದತ್ತವಾದ ಪ್ರತಿಭೆಯುಳ್ಳವನಾದ ರತ್ನಾಕರ ಈ ಛಂದಸ್ಸನ್ನು ಬಾಗಿಸಿ, ಬಳುಕಿಸಿ, ಕೊಂಕಿಸಿ, ಕೊನರಿಸಿ ಇಲ್ಲಿ ಹಾಸಿ, ಅಲ್ಲಿ ಬೀಸಿ, ಇಲ್ಲಿ ಎತ್ತಿ, ಅಲ್ಲಿ ಇರಿಸಿ, ಇಲ್ಲಿ ತೂಗಿ, ಅಲ್ಲಿ ತೊನೆದು, ಎಲ್ಲೆಲ್ಲೂ ತುಯ್ದು ನಡೆಯಿಸಿಕೊಂಡು ಹೋಗುವ ಮೋಡಿ ನಿಜವಾಗಿಯೂ ಅದ್ಭುತ.

ಪ್ರಾಸಾನುಪ್ರಾಸಗಳ ವರ್ಣಾನುರಣನಗಳ ರತ್ನಾಕರ ರಚನೆ "ಶ್ರವಣ ಸುಭಗ". ಶೈಲಿವಿಜ್ಞಾನದಲ್ಲಿ ಪರಿಣತರಾದವರು ರತ್ನಾಕರನ ಸಾಂಗತ್ಯ ರತ್ನಗಳನ್ನು ಬೆಲೆಗಟ್ಟುವ ಕಾಲ ಬೇಗ ಬರಬೇಕು. ಬಿಡಿ ಬಿಡಿಯಾದ ಆಡುನುಡಿಗಳ ಜೋಡಣೆ, ಪಡಿನುಡಿಗಳ ಹೆಣಿಗೆ, ಬಳಕೆಯ ಸಂಸ್ಕೃತ ಪದಗಳ ಸರಿಬೆರಕೆ, ಗಾದೆಗಳ ಅಳವಡಿಕೆ, ವಾಗ್ರೂಢಿಗಳ ಒಳನೆಯ್ಗೆ—ಇತ್ಯಾದಿಗಳ ಧಾರಾಳ ಬಳಕೆಯಿಂದಾಗಿ ಸಾಂಗತ್ಯಕ್ಕೆ ಕೂಡಿ ಬಂದ ಸಂಗೀತದ ರುಚಿರಮ್ಯತೆ ಅಪೂರ್ವ. ಪಾತ್ರ ಕಾಂತೆಯರ ಹಾವಭಾವ ವಿಲಾಸ ವಿಭ್ರಮಗಳು, ಗಾಯನ ರಾಣಿಯರ ರಾಗಾಲಾಪಗಳು, ಆನೆ ಕುದುರೆಗಳ ಪದಗತಿಗಳು—ಇತ್ಯಾದಿಗಳ ವ್ಯಾವರ್ಣನೆ ಛಂದೋ ರಚನೆಯಲ್ಲಿಯೆ ಕಣ್ಣಿಗೆ ಕಟ್ಟುವುದಲ್ಲದೆ ರತ್ನಾಕರನ ಸಾಂಗತ್ಯಗಳ ವಿಷ್ಣು ಬ್ರಹ್ಮರು ಅಘಟನ ಘಟನಾಸಮರ್ಥರು! ಪಂಪನ ವೃತ್ತ, ಹರಿಹರನ ರಗಳೆ, ಕುಮಾರವ್ಯಾಸನ ಷಟ್ಪದಿ ಇವುಗಳಿಗೆ ಹೆಗಲೆಣೆಯಾಗಿ ನಿಲ್ಲುತ್ತದೆ ರತ್ನಾಕರನ ಸಾಂಗತ್ಯ ರಚನೆ!

ಭರತೇಶವೈಭವದಲ್ಲಿ ಬರುವ ವರ್ಣನೆಗಳು ಕಣ್ಣಿಗೆ ಕಟ್ಟುವಂತೆ ಇರುತ್ತವೆ; ಮನಕ್ಕೆ ಮುಟ್ಟುವಂತೆ ಇರುತ್ತವೆ. ಅವಕ್ಕೆ ಸ್ಫಟಿಕ ಸ್ಪಷ್ಟತೆ, ದರ್ಪಣ ಥಾಳಥಳ್ಯ. ವರ್ಣನೆ ಬಣ್ಣ ಬಣ್ಣವಾಗಿಯೂ ಇರುತ್ತವೆ, ತಿಳಿತಿಳಿಯಾಗಿಯೂ ಇರುತ್ತವೆ. ಸೂಕ್ಷ್ಮಾತಿಸೂಕ್ಷ್ಮವಾಗಿಯೂ ಇರುತ್ತವೆ, ಸ್ಥೂಲಾತಿಸ್ಥೂಲವಾಗಿಯೂ ಇರುತ್ತವೆ. ಇವನ ಶಬ್ದ ಶಿಲ್ಪಗಳು ಚಿತ್ರಗಾರನಿಗೆ ಸ್ಫೂರ್ತಿಯೀಯುವಂಥವು, ಚಲಚ್ಚಿತ್ರ ದಿಗ್ದರ್ಶಕನಿಗೆ ಮಾರ್ಗದರ್ಶನ ನೀಡಬಲ್ಲಂಥವು. ಈ ಉದಾಹರಣೆಗಳು ಸಾಕು. "ಬಳ್ಳ ಬಾಯ್ದೆರೆಯದೆ ಭ್ರಾಂತುಗೊಂಡಂತೆ ಮೈಯಲ್ಲ ತೂಗಾಡದೊಂದಿನಿಸು ಅಲ್ಲಾಟವುಂಟೋಜೆಪಿಡಿದು ಬಾಯ್ದೆರೆಯುಂಟು ಸಲ್ಲಲಿತದೊಳು ಹಾಡಿದರು" "ನೋಟರಾಯನ ಮೇಲೆ ನೆನಹು ರಾಗದ ಮೇಲೆ ನೀಟ ತಂತಿಯ ಮೇಲೆ ಬೆರಳು ಚಾಟುಕಾತಿಯರು ಚಾಂದಸಿಕೆಯ ನೂಂಕಿ ಸಘಾಟಿಕೆಯಿಂದ ಪಾಡಿ

ದರು." ತೊಡೆಯ ಮೇಲಿಟ್ಟ ನಲ್ಲಳನು ನುಂಗೊರಳ ತನ್ನೆಡಗೈಯೊಳಾಂತು ತೆಳ್ವಸಿರಾ ತಡಹುವನಲ್ಲನ ಮುದ್ದುಲಾಲನೆಯ ಕನ್ನಡಿಸೆ ತಾವೀಣೆಯೊಂತೂಲವು" "ಒಳಗುಮ್ಮಿದಾನಂದರಸ ತನ್ನ ತನುತುಂಬಿ ತುಳುಕಿ ಹೊರಗೆ ಸೂಸುವಂತೆ ತೆಳುವಸಿರಿಂದಬಾಯ್ದೆರೆಯೊಳು ಸುಸ್ವರ ಹೊಳೆದು ಮೋಹಿಸು ತಿದ್ದಿತಾಗ"–ಇತ್ಯಾದಿ. ನೇತ್ರ ಮೋಹಿನಿ ಮಲ್ಲನೊಲಿದು ರಾಯನ ನೋಡಿ ನೇತ್ರ ಸುಖವ ಸೂಚಿಸಿದಳು. ಸೂತ್ರಿಸಿ ಚಿತ್ರ ಮೋಹಿನಿ ನೋಡಿ ಚಿತ್ತವ ಸೂತ್ರದಂತಲುಗಾಡಿಸಿದಳು." "ನೋಟದೊಳಗೆ ಕೊಂದರೊಮ್ಮೆ ನೋಟಕರನು ನಾಟಿಸಿ ನಸುನಗೆಯಿಂದ ಲೂಟಿ ಮಾಡಿದರು. ಮೈಯೊಲೆದಾಟದಿಂದೆದೆ ಗೋಟೆಯ ಕೊಂಡರೇನೆಂಬೆ"–ಇತ್ಯಾದಿ. ಉಂಡವ ತೇಗುವಂತಾತ್ಮನ ಭಾವಿಸಿ ಕಂಡವನದ ಪೇಳಬೇಕು ಕಂಡು ಪೇಳಿದರು ನಿರ್ಭವ್ಯರೊಪ್ಪರು ಭವ್ಯಪುಂಡರೀಕರು ಮೆಚ್ಚಬೇಕು. ಧೂಳರಾಶಿನೊಳೊಂದು ಸ್ಫಟಿಕದ ಪ್ರತಿಮೆಯ ಹೂಳಿದಂತೀ ದೇಹದೊಳಗೆ ಹೂಳಿರ್ದನೆನ್ನಾತ್ಮನೆಂದು ನೋಡಿದರಲ್ಲಿ ಥಾಳಿಸುತಾತ್ಮ ತೋರುವನು" ಇತ್ಯಾದಿ. ಮಳೆಯ ದಿನಗಳ ಈ ವರ್ಣನೆ ನೋಡಿ: ಕೊಡದ ಸಾಲಂದದ ಮುಗಿಲ ಕಾಮನ ಬಿಲ್ಲಬಡಿಗೆಯಿಂ ಬಡಿಯೆ ದೈವಗಳು ಒಡೆದಂತೆ ಗುಡುಗಾದುದೊಳಗಿದ್ದ ನೀರು ತೊಟ್ಟಿಡುವಂತೆ ಕರೆದುದು ವೃಷ್ಟಿ" ಎಳೆಮಿಂಚಿನಂತೆ ತಿಳಿದುಪ್ಪವೆರೆಗಳು ಬೆಳುಮುಗಿಲಂದದ ಮೊಸರ ಜಲಜದಂತೆಸೆವ ಬಟ್ಟಲುಗಳೊಳೆಡೆ ಮಾಡಿದಳು ಬಗೆಯರಿದುಲತಾಂಗಿ." ಇದು ಆರೋಗಣೆಗೆ ಸಂಬಂಧಿಸಿದ ಒಂದು ಪದ್ಯ. ಈ ಕಡಲ ವರ್ಣನೆ ನೋಡಿ:

ಕಡಲ ಮುನ್ನರಿಯದ ಪೆಂಗಳಚ್ಚರಿವಟ್ಟು| ನಿಡುಬೆರಳಿಟ್ಟು ನಾಸಿಕಕೆ|| ಮುಡಿಯೊಲೆದೊಲೆದು ನೋಡಿದರದರೊಂದುಬ| ಲ್ಗಡಣಗೆ ಬಗೆಯೊಳು ಮೆಚ್ಚಿ|| ದಿಟ್ಟೆಸೆ ಮಿಗೆ ಹಾಯ್ವುತೋರ್ಪ ಸಮುದ್ರದ| ಕಟ್ಟಳಲಿಗೆ ಚೋದ್ಯವಟ್ಟು|| ಅಟ್ಟಹಾಸವ ಮಾಡುತೊಬ್ಬರೊಬ್ಬರ ಮೈಯ| ತಟ್ಟುತ ತೋರಿ ನುಡಿದರು|| ಅಟ್ಟುವ ತೆರೆಯ ಮುಂದೋಡುವ ತೆರೆಯ ಪೆ| ರ್ಚಟ್ಟದಂತೇಳ್ವ ತೆರೆಗಳ|| ತೊಟ್ಟನೆ ಬಯಲಹ ತೆರೆಗಳನವರು ಕಣ್ಣಿಟ್ಟು ನೋಡಿದರರ್ತಿವಡುತ|| ಎಡೆಗುತ್ತಿಗಳನಲ್ಲಿಗಲ್ಲಿ ನಿಂದದ್ರಿಯ| ನಿಡುಗಲ್ಲುಗಳನದರೊಳಗೆ ಎಡೆಯೊಡುತಿಹ ದೋಣಿದುಗ್ಗಿ ಕಪ್ಪಲು ದೊಡ್ಡ| ಹಡಗುಗಳಿರವ ನೋಡಿದರು|| ತುಂತುರು ತೆರೆನೊರೆ ಸುಳಿ ಘುಳುಘುಳುರವ| ತೂಂತಿಟ್ಟು ಹೊಳೆವ ವಾರಿಧಿಯ".

**ನಾಟ್ಯದ ಮೋಡಿ**

ನಾಟ್ಯದ ಮೋಡಿಯನ್ನು ವರ್ಣಿಸುವ ಈ ಪದ್ಯಗಳನ್ನು ನೋಡಿ: ಎತ್ತ ನೀಡಿತು ಹಸ್ತವತ್ತ ದೃಷ್ಟಿಗಳೆಲ್ಲ ಚಿತ್ತವ| ಲ್ಲವು ಭಾವರಸವು ತತ್ತತ ತಿತ್ತಿತಿ ಯೊರೆಯೊರೆಯೆನುವಲತ್ತಿತ್ತಲೊಲೆದು ಹರಿವಳು." "ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ ಜಲಧಿಯ ಸುಳಿಯೊಯೆಂಬಂತೆ ಬಲಕೆಡಕೊಲೆದು ಹರಿವಳೆಳೆವಿಸಿಲಲ್ಲಿಯೆಳನಾಗ ಹರಿವಂತೆ ಮುರಿದು." ಭರತೇಶ ಗದ್ದುಗೆಯ ಮೇಲೆ ಕೂತ ಠೀವಿಯನ್ನು ಕನ್ನಡಿಸಿದ ಈ ಚಿತ್ರ ನೋಡಿ: ಆವಬಿಂಕವೊ ಎಡಗಾಲ ಗದ್ದುಗೆಯ ಮೇಲೋವಿ ಮಡಿದು ಮತ್ತೆ ಕೆಳಗೆ ಹಾವುಗೆಯೊಳು ಪೆಂಡೆಯದ ಬಲಗಾಲಿರಿಸಿ ಠೀವಿಯೊಳೆಸದನಾರಾಯ." ನೋಡುವ ಠೀವಿ ಹತ್ತೆಂಟಕೊಮ್ಮೊಮ್ಮೆ ಮಾತಾಡುವ ನುಡಿಯ ವಿಡಾಯೊ ಪಾಡರಿಮೋಲಗಗೊಟ್ಟಾಚೆ ಶಿರವನ್ನಾಲ್ಲಾಡಿಸುತಿಹನು ನೋಳ್ಪವರಾ|| ಅಣ್ಣನೊಡನೆ ಯುದ್ಧ ಬೇಡೆಂದು ತನ್ನ ಮಗನನ್ನು ತಿದ್ದಿ ಹೇಳುವ ಸಂದರ್ಭದ ಈ ತಾಯಿಯ ಮಾತು ಕೇಳಿ: ಅಣ್ಣನ ಕೂಡೆ ಕಾಳಗವ ಮಾಡೆಂದಾನು ಬೆಣ್ಣೆವಾಲೂಡಿ ಸಾಕಿದನೆ ತಣ್ಣನೆ ಮಾಡಬೇಕೆಮ್ಮೆಲ್ಲರುದರಕೆ ಪುಣ್ಣು ಮೊಳ್ವುದು ಲೇಸೆ ಮಗನೇ" ನಿಷ್ಪ್ರೇಮ ಭೋಗಿಯಾದ ಭರತೇಶನನ್ನು ರತ್ನಾಕರ ವರ್ಣಿಸಿದ ಪರಿಯಿದು: ಭೂಮಿಯೊಳಗೆ ಹೂಳ್ವ ಲೋಹ ಮಣ್ಬಿಡಿಯುವುದು ಹೇಮ ಮಣ್ಬಿಡಿಯುವುದೇ ನೃಪತಿ, ತಾಮಸಿ ಭೋಗಿಸುವಗೆ ಕರ್ಮಬಂಧ ನಿಷ್ಪ್ರೇಮ ಭೋಗಿಗೆ ಬಂಧನವುಂಟೇ?" ಮದುವೆಯಾದ ಕ್ಷಣವೇ ಭರತನ ವಿಷಯದಲ್ಲಿ ಮೊದಲಣ ಕೋಪ ಆರಿ ನಾಚಿಕೆ ಏರಿಬಂದ ಬಗೆ ನೋಡಿ: ಎಲ್ಲಿ ಹೋದುದೋ ಮೊದಲಾಡಿದ ನುಡಿನೋಟ ಚೆಲ್ಲಾಟ ನಗೆಯ ಸೊಲ್ಲುಗಳು ನಲ್ಲನೆ ನೋಡಲಂಜುತ ಲಜ್ಜೆಗೊಳುತ ಹುಲ್ಲೆಯಂತಿದ್ದಳೇನೆಂಬೆ" ಪರೇಂಗಿತ ಜ್ಞಾನಿಯಾದ ಪಂಡಿತೆಯ ಈ ಚಿತ್ರ ಹೇಗಿದೆ? "ಮೂಗಿನ ಮೇಲೆ ಬೆರಳನಿಟ್ಟು ಕಣ್ಬಿಟ್ಟು ತೂಗಾಡಿ ತಲೆಯನೊಂದಿನಿಸು ಯೋಗಿಗಳಂತಿಷ್ಟು ಜಾನಿಸಿ ಕಣ್ದೆರೆದಾಗಳೆ ನುಡಿದಳು ಕುಟಿಲೆ."

**ಮಾತು, ಅರ್ಥ**

ಅಡಿಕೆಯ ತೂಕದ ಮಾತು, ಆನೆಯ ತೂಕದ ಅರ್ಥ ಎಂಬಂತಹ ಪದಗಳ ಪೊಂಭಾವಣೆ ಈತನ ಶೈಲಿಯ ಒಂದು ಲಕ್ಷಣ. ಈ ಮಾತುಗಳನ್ನು ನೋಡಿ: "ಉಂಡುಪವಾಸಿ ಬಳಸಿ ಬ್ರಹ್ಮಚಾರಿ ಭೂಮಂಡಲವಿದ್ದು ನಿಸ್ಸಂಗ ಮಂಡೆ ಬೆಳೆಮ ಮನ ಬೋಳಾದ ತಪಸಿಯ ಕೊಂಡಾಡಲಳವೆ ಚಕ್ರಿಯನು." "ಹಿಡಿದರೆ ವ್ರತವ ಹಿಡಿಯಬೇಕು ಸರ್ಪನ ಹಿಡಿದಂತೆ ಕಡು ದೃಢವಾಗಿ, ಹಿಡಿದ ಮೇಲಳಿಮನಸಾದರೆ ವ್ರತ ತಾನೆ ಕಡಿವುದು ಫಣಿಯಂತೆ ತನ್ನ." ಇಂಥವು ಎಷ್ಟೋ. "ಬಲೆಯೆಂಬ ರಾಯಗೆ ತುಳಿಯೆಂಬ ಮಂತ್ರಿ". ಕಾಮಿನಿಯಿಲ್ಲ. ಕೈದಾರೆ ಮಂತ್ರವೇ? ಹರೆಗಳೆದರೆ ಸರ್ಪ ನಿರ್ವಿಷನೆ? ಇಂಥವನ್ನೂ ನೋಡಿ.

ಅರ್ಥವತ್ತಾದ ಉಪಮೆಗಳನ್ನು ಬಳ್ಳ ಬಳ್ಳಗಳಲ್ಲಿ ಸುರಿದು ಅಳೆಯ ಬಲ್ಲ ಈ ಕವಿ. ಈ ಉಪಮೆಗಳ ಅರ್ಥ ಸ್ವಾರಸ್ಯವನ್ನು ಪರಿಭಾವಿಸಿ: ಸೋನೆಯ ಮಳೆ ಸುರಿದಾಗ ಮೊಳಿಗೆಯಲ್ಲಿ ಮಾನವರಿಪ್ಪ ರೀತಿಯೊಳು ಏನೆಂದು ಹೊರಗನರಿಯ ಮೇಲಾತ್ಮವಿಜ್ಞಾನಲೋಕದೊಳಿರ್ದನಾಗ" ಇರುಹೆಗಳೆಂಟೆ ಸೋಂಕಿದ ನೇಣ ಮುತ್ತುವಂತೆರಗಿ ಹಿಡಿದುದಾಗ ಕಟಕ" "ಜಾಣೆ ಹೆಡ್ಡನು ಕೂಡಲಿಹುದದು ವೀಣೆಗೆ ನೇಣು ಬಿಗಿದು ಮಿಡಿದಂತೆ." "ತಂಗಾಳಿ ಪೂಗಂಧ ವಿಡಿದಂತೆ ರಾಯ ತನ್ನಂಗನೆಯಂಗುಲಿವಿಡಿದಾ." "ಬಡಿ ಬಡಿತೊಂಡರ ಬಾಯನೆಂದಸು ಚಕ್ರಿ, ಒಡನೆ ಮಾಗಧನ ಸೇವಕರು ಬಡಿದರು ಹಲ್ಲೆಲ್ಲ ಕವಡೆಯ ಚೀಲವ ಕೊಡಹಿದಂತುದುರಿದವು ಧರೆಗೆ." "ಬೇಕಾದರಾಡಿಸಿ ಗಾಳಿ ಪಟವನರ್ತಿಸಾಕಾಗೆ ಸುರುಳುವನಂತೆ ನೂಕಿ ಚಿತ್ತವ ಹೊರಗಾಡಿಸುವನು ತನ್ನೊಳೇಕವಾಗಿರಿಸುವನೊಮ್ಮೆ." ಇಂಥವು ಸಾವಿರಾರು.

ಈತನ ಶೈಲಿ ಸಹಜ, ಸರಳ, ಸುಂದರ. ಈತನ ಶೈಲಿ ಲಲಿತ, ಮಧುರ, ಮನೋಹರ. ಈತನ ಶೈಲಿ ಎಳೆಯ ಮಾವಿನ ಚಿಗುರಿನ ಹಾಗೆ. ಈತನ ಶೈಲಿ ಮುಟ್ಟಿದರೆ ಮಾಸುವ ಪಾರಿಜಾತದ ಹೂವಿನ ಹಾಗೆ. ಉದಾಹರಣೆಗಳು ಬೇಕೆ? ಈ ಮೇಲೆ ಬರೆದ, ಕಾವ್ಯದಿಂದ ಎತ್ತಿ ತೆಗೆದು ಬರೆದ ಸಾಂಗತ್ಯಗಳನ್ನು ಮನನ ಮಾಡಿ.

ರತ್ನಾಕರನ ನಾಟ್ಯ ಪ್ರತಿಭೆ ಸಹ ಮನಮೋಹಕವಾದದ್ದು. ಒಂದೇ ಉದಾಹರಣೆ ನೆನೆಯುವುದಾದರೆ ಮಕರಂದಾಜಿ ಮತ್ತು ಭಾವಾಜಿ (ಭರತ) ಯರ ನಡುವೆ ನಡೆಯುವ ಸರಸ ಸಲ್ಲಾಪವನ್ನು ನೆನೆಯಬೇಕು. ಹಿತವಾಗಿ, ಅಮಿತವಾದರೂ ಉಚಿತವಾಗಿ ಆಡುವ ಆ ಮಾತುಗಾರಿಕೆ ಬಲು ಮುದ್ದು. ಗಾಂಭೀ

ರ್ಯವನ್ನು ಉಳಿಸಿಕೊಂಡು ಆಡುವ ಆ ರೀತಿ ಶ್ಲಾಘನೀಯವಾದದ್ದು.

**ಪಾತ್ರಧಾರಿಗಳು**

ಭರತನ ಪತ್ನಿಯರು ಸರ್ವಸದ್ಗುಣ ಭೂಷಿತೆಯರು, ಪರಮ ಸುಂದರಿಯರು, ಪತಿಭಕ್ತಿ ವಿರಾಜಿತೆಯರು, ಸವತಿ ಮತ್ಸರ ವಿದೂರೆಯರು. ಲಲಿತ ಕಲಾ ಕೋವಿದೆಯರು, ಗೃಹಾಲಂಕರಣ ಸಮರ್ಥೆಯರು. ಕಾವ್ಯ ಶಾಸ್ತ್ರ ವಿನೋದೆಯರು, ಸರಸ ಸಂಭಾಷಣಾ ಚತುರೆಯರು. ಇವರೆಲ್ಲ ರಾಗರಸಿಕನೂ ವೀತರಾಗರಸಿಕನೂ ಆದ ಭರತ ಚಕ್ರಿಗೆ ತಕ್ಕ ಸತಿಯರು. ಇಂತಹ ತೊಂಭತ್ತಾರು ಸಾವಿರ ಸ್ತ್ರೀಯರಲ್ಲಿ ಅಚ್ಯುತವೂ, ಅನಂತವೂ, ಆಪ್ತವೂ, ಅಮರವೂ, ಆತ್ಮೀಯವೂ ಆದ ವೈಭವದ ಪ್ರೇಮಸುಖವನ್ನೂ, ವಿಕ್ರಿಯಾ ಬಲದಿಂದ ಅನುಭವಿಸುತ್ತಿದ್ದವನು ಭರತ. ಭರತೇಶನ ಈ ವೈಭವ, ಶೃಂಗಾರಕವಿ ಹಂಸರಾಜನ ಸೃಷ್ಟಿಯೆಂದ ಮೇಲೆ ಬೇರೆ ಮಾತೇನಿದೆ? ಬೆಡಗು, ಬಿನ್ನಾಣ, ಬಿಂಕ, ಬಡಿವಾರ, ಒನಪು, ಒಯ್ಯಾರ, ಚೇಷ್ಟೆ, ಚಾಪಲ್ಯ, ಕೋಪ, ಕೊಂಕು ಎಂಬೆಲ್ಲ ಬಗೆಯ ಪ್ರಮದೆಯರ ಚಿತ್ತವೃತ್ತಿಯ ಚಿತ್ರ ವಿಚಿತ್ರಗಳನ್ನೆಲ್ಲ ಈ ಕವಿ ಈ ಕಾವ್ಯದಲ್ಲಿ ಬಣ್ಣಿಸಿ ಬಣ್ಣಿಸಿ ತಾನು ಸೋತಿಲ್ಲ, ವಾಚಕರನ್ನೇ ಸೋಲಿಸಿದ್ದಾನೆ.

ರಾಗರಸಿಕನೂ, ವೀತರಾಗರಸಿಕನೂ ಆದ ಈ ಭರತ ನಿರಹಂತೆಯ ಮೂರ್ತಿಯಾಗಿ ಸ್ಥಿತ ಪ್ರಜ್ಞನಾಗಿರುತ್ತ ನಮಗೆ ಭಾಗವತದ ಶ್ರೀಕೃಷ್ಣ ಪಾತ್ರದ ವೈಭವದ ನೆನಪು ತಂದರೆ ಆಶ್ಚರ್ಯವೆ? ಹಂಸಕಲಾಯೋಗಿಯಾಗಿ ಮೆರೆದ ಈ ಭರತನ ಪಾತ್ರ ಲೋಕೋತ್ತರವಾಗಿರುವುದರಲ್ಲಿ ಬಲ್ಲವರಿಗೆ ಬೆರಗೆ? ಇದರ ಮೇಲೆ ಪುರಾಣ ಪ್ರಪಂಚದ ಅಲೌಕಿಕ ಘಟನಾವಳಿಗಳ ಅತಿಶಯ ವಿಶೇಷಗಳ ಚಿತ್ರಮಾಲೆಗಳಿಂದ ಅಲ್ಲಲ್ಲಿ ಮಿಂಚುವ ಜಾನಪದ ಸತ್ವಾಂಶಗಳ, ಮುಖ್ಯವಾಗಿ ಕಟಕವಿನೋದ ಸಂಧಿಯ ವೃತ್ತಾಂತ ಕಥನದಿಂದ ಈ ಕಾವ್ಯ ಉಬ್ಬೇರಿರುವುದು ಸತ್ಯ ದೂರವೆ? ಎಲ್ಲಕ್ಕೆ ಮಿಗಿಲಾಗಿ ಭರತ ಬಾಹುಬಲಿಗಳ ಯೋಗಪ್ರಸಂಗದಲ್ಲಿ ರತ್ನಾಕರ ಭರತ ಬಾಹುಬಲಿಗಳಿಬ್ಬರನ್ನೂ ಉದಾತ್ತೀಕರಿಸಿದ್ದಾನೆ, ಎಂದ ಮೇಲೆ ರತ್ನಾಕರನನ್ನು ಈ ಸಂದರ್ಭದಲ್ಲಿಯಾದರೂ ಮಹಾಕವಿಪಟ್ಟದಿಂದ ವಂಚಿತನನ್ನಾಗಿ ಮಾಡಬಹುದೆ? ಅಂತಹ ಕಾರ್ಯಕ್ಕೆ ಮನಸ್ಸಾದೀತೆ? ಜಿನಸೇನ ಪಂಪರಲ್ಲಿ ಕಾಣದ ಒಂದು ಹೊಸ ಸೊಗಸು ಇಲ್ಲಿದೆಯಲ್ಲವೆ? ಗ್ರೀಕ್ ಗಂಭೀರ ನಾಟಕವ ಸೊಗಸು ಇಲ್ಲಿ ಕಾಣಬರುತ್ತದೆಯಲ್ಲವೆ? ತನ್ನ ಶಾಂತಿ ಸಮಾಧಾನಗಳ ಸಾಂತ್ವನ ಸುಧಾವೃಷ್ಟಿಯಿಂದ ಭರತನು ಹೇಗೆ ಬಾಹುಬಲಿಯನ್ನು ತನ್ನ ಅಳ್ಕರೆಯ ತೋಳತಕ್ಕೆಗೆ ಸೆಳೆದುಕೊಳ್ಳುತ್ತಾನೆ ಎಂಬುದನ್ನು ನೋಡಬೇಕು. ಇದೇನು ಸಾಮಾನ್ಯದ ಸಂಗತಿಯೆ? ರಣಾಂಗಣದಲ್ಲಿ ನಿಂತ ಬಾಹುಬಲಿಗೆ ಭರತ ಹೇಳುವ "ನಿನಗಾನು ಪಗೆಯೆ ನೀನೆನಗೆ ಪಗೆಯೆ ಹೇಳು! ಜಿನಪುತ್ರರಿದನು ನಾವಿಂದು ನೆನೆದಾಗ ಮುಂದೆ ಸಮಸ್ತರ್ಗೆ ದ್ರೋಹ ಶಾಸನವ ಬರೆದು ಕೊಟ್ಟೆವಲ್ತೆ" ಈ ಮಾತು ತಾನೆ ಈಗ ಈ ಕಾಲಕ್ಕೆ ಮನನಯೋಗ್ಯವಾದದ್ದು. "ಕೌಶಲಿಯೊಳು ನೀನು ಸುಖಿಬಾಳು. ನನಗೊಂದು ದೇಶವ ಕೊಟ್ಟು ಬೇರಿರಿಸು. ಕ್ಲೇಶದ ಮಾತಲ್ಲ ಸಂತೋಷ ಪುರುಪರಮೇಶನ ಕೆಂಬಜ್ಜೆಯಾಣೆ" ಎಂಬಂತಹ ಔದಾರ್ಯಪೂರ್ಣವಾದ ವಾತ್ಸಲ್ಯಭರಿತವಾದ ಭರತನ ಮಾತುಗಳಿಂದ ತಮ್ಮ ಬಾಹುಬಲಿಯ ಹೃದಯ ಕರಗಿತು. "ಪಾಪಿನಾನೆನ್ನಣ್ಣಗಿದಿರಾಗಿ ಕುಲಕೆ ಲೋಕಾಪವಾದವ ತಂದೆ ಕೆಟ್ಟ ಕೋಪವರ್ಗಗಳಾರ ಕೆಡಿಸವೆಂದಾ ಪುಷ್ಪ ಚಾಪ ತನ್ನೊಳು ಮರುಗಿದನು." ಮುಂದೆ ಆತ ತಪಕ್ಕೆ ನಡೆಯುತ್ತಾನೆ.

ಭರತೇಶ ವೈಭವದಲ್ಲಿ ತ್ಯಾಗ ಭೋಗಗಳ ಸಮನ್ವಯದ ಯೋಗ ದರ್ಶನವನ್ನು ಕವಿ ಸುಂದರವಾಗಿ ಪ್ರತಿಮಿಸಿದ್ದಾನೆ" ಎಂದು ಡಾ. ಕೆ. ವಿ. ಪುಟ್ಟಪ್ಪನವರು ಹೇಳಿದ್ದಾರೆ. "ರತ್ನಾಕರನ ಭರತನು ಸಮ್ಯಕ್ ಸಂಪೂರ್ಣ ಪುರುಷ – ಇಹಕ್ಕೂ ಪರಕ್ಕೂ ಇದು ಸಾಂಗತ್ಯ, ಸಾಹಿತ್ಯ" ಎಂದು ದಿ. ದ. ರಾ. ಬೇಂದ್ರೆಯವರು ಹೇಳಿದ್ದಾರೆ. "ರತ್ನಾಕರನ ಕಾವ್ಯ ಕನ್ನಡದ ಮಕ್ಕಳ ಭಾವದ ಹಸಿವನ್ನು ತೀರಿಸಬಲ್ಲುದು. ನಾವು ಅವನ ಕಾವ್ಯದ ಕಡೆಗೆ ಹೆಚ್ಚು ಹೆಚ್ಚಾಗಿ ತಿರುಗಬೇಕು. ಅವನ ಭಾವನೆಯ ಸಂಪತ್ತು ಅಪಾರವಾದದ್ದು" ಎಂದು ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಹೇಳಿದ್ದಾರೆ. "ಯಾವ ಬಗೆಯ ಮಾತುಗಳನ್ನು ಬೇಕಾದರೂ ತೆಗೆದುಕೊಂಡು ಕೈಲಾಘವದಿಂದ ಪೋಣಿಸಿ ಮುದ್ದಾದ ವಾಕ್ಯಹಾರವನ್ನು ಕಟ್ಟಿಬಿಡುವ ಪ್ರವೀಣ ರತ್ನಾಕರ" ಎಂದು ಡಾ. ಎಸ್. ವಿ. ರಂಗಣ್ಣನವರು ಹೇಳಿದ್ದಾರೆ. "ಆದರೆ ಜೈನತತ್ವದ ಕನ್ನಡಿಯಲ್ಲಿ ವಿಶ್ವದರ್ಶನದ ಚಿತ್ರವನ್ನು ಕಂಡು ಅದಕ್ಕೆ ಅನುಗುಣವಾಗಿ ಆದರ್ಶ ಮಾನವನ ಸಮನ್ವಯ ಸಮ್ಯಕ್ತ್ವವನ್ನು ಬಣ್ಣಿಸುವುದರಲ್ಲಿ ರತ್ನಾಕರನ ಸ್ವಂತಿಕೆಯಿದೆ." ಎಂದು ರಂ. ಶ್ರೀ ಮುಗಳಿಯವರು ಹೇಳಿದ್ದಾರೆ. ಕನ್ನಡ ಸಾಹಿತ್ಯ ಸಾಮ್ರಾಜ್ಯದ ಆಧಾರ ಸ್ತಂಭಗಳಂತಿರುವ ಉತ್ತಮ ಕವಿಗಳ ಸಾಲಿನಲ್ಲಿ ಅವರ ಭುಜಕ್ಕೆ ಭುಜವಾನಿಸಿ ಕುಳಿತುಕೊಳ್ಳುವ ಯೋಗ್ಯತೆಯುಳ್ಳವ ನಮ್ಮ ಕವಿ ಎಂದು ಪ್ರೊ. ತ. ಸು. ಶಾಮರಾಯರು ಹೇಳಿದ್ದಾರೆ." ರತ್ನಾಕರನ ಜೈನದರ್ಶನವೆಂಬ ಗಂಡಭೇರುಂಡದ ಒಂದು ಮುಖ ಭೇದ ವಿಜ್ಞಾನವಾದರೆ ಇನ್ನೊಂದು ಮುಖ ಹಂಸಕಲೆಯಾಗಿದೆ. ಭೇದ ವಿಜ್ಞಾನವು ರತ್ನಾಕರನ ದರ್ಶನಕ್ಕೆ ಪೀಠವಾದರೆ ಹಂಸಕಲೆಯು ಕಿರೀಟವಾಗಿದೆ. ಈ ಎರಡು ಮುಖಗಳನ್ನು ರಸಮಯವಾಗಿ ಚಿತ್ರಿಸಿರುವುದರಿಂದಲೇ ಇವನು ವಿಶ್ವ ಕವಿಯೆನಿಸಿರುವುದು" ಎಂದು ಪ್ರೊ. ಜಿ. ಬ್ರಹ್ಮಪ್ಪನವರು ಹೇಳಿದ್ದಾರೆ. "ಭರತನ ಮಾನವೀಯ ವ್ಯಕ್ತಿತ್ವ ಎಲ್ಲ ಮತದವರಿಗೂ, ಅಭಿರುಚಿಯವರಿಗೂ ಸ್ಪೃಹಣೀಯವಾಗುವಂತೆ ಚಿತ್ರಿತವಾಗಿರುವುದು ರತ್ನಾಕರನಿಗೆ ಮಹಾಕವಿಯ ಪಟ್ಟವನ್ನು ಕೊಟ್ಟಿದೆ; ಭರತನ ನಡೆನುಡಿಗಳೂ ಬಂಧುವರ್ಗದವರ ಜತೆಯ ಆತನ ಮಧುರವೂ, ಮಮತಾಮಯವೂ ಆದ ಸಂಬಂಧ ಸಾಮರಸ್ಯಗಳೂ ಅಚ್ಚ ಮಾನವ ಸಹಜವಾದ ಭಾವನೆಗಳನ್ನು ಮಿಡಿಯುತ್ತಿರುವುದು ಕವಿಕೃತಿಗೆ ಸಾರ್ವಕಾಲಿಕ ಆಕರ್ಷಣೆಯನ್ನು ತಂದುಕೊಟ್ಟಿದೆ" ಎಂದು ಡಾ. ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರು ಹೇಳಿದ್ದಾರೆ. ಈ ಮೇಲಿನ ವಿದ್ವನ್ಮಣಿಗಳ ವಿಮರ್ಶೋಕ್ತಿಗಳಿಂದ ರತ್ನಾಕರನ ಮತ್ತು ಅವನ ಕಾವ್ಯದ ಸ್ಥಾನಮಾನಗಳನ್ನು ನಾವು ಸ್ಪಷ್ಟವಾಗಿ ಅರ್ಥೈಸಿಕೊಳ್ಳಬಹುದಾಗಿದೆ.

# ಕರ್ನಾಟಕದ ಸಂಸ್ಕೃತಿ

ಹಂಪನಾ

## ಸಂಸ್ಕೃತಿಯ ಅರ್ಥ

"ಪರಿಸರ, ಪರಂಪರೆ ಹಾಗೂ ಪ್ರತ್ಯಕ್ಷ ಜೀವನದ ಅನೇಕ ಸಂಸ್ಕಾರಗಳ ಮೂಲಕ ಮನುಷ್ಯನ ಅಂತರಂಗ ಪಡೆಯುವ ಪರಿಪಕ್ವತೆ"ಯೆಂಬುದು ಸಂಸ್ಕೃತಿಯ ಸ್ಥೂಲವಾದ ವ್ಯಾಖ್ಯೆ. ಇದು ವ್ಯಕ್ತಿವಾಚಕವಾಗಿದ್ದಂತೆ ದೇಶವಾಚಕವೂ ಆಗಿದೆ. ಒಂದು ನಾಡಿನ ಜನರ ಒಟ್ಟು ಸಂಸ್ಕೃತಿ ಅದರ ವಿವಿಧ ರಂಗಗಳಲ್ಲಿ ವ್ಯಕ್ತವಾಗುತ್ತಲೇ ಇರುತ್ತದೆ. ಈ ದೃಷ್ಟಿಯಿಂದ ಭರತ ಖಂಡಕ್ಕೆಲ್ಲ ಇರುವುದು ಒಂದು ಮಹೋನ್ನತವಾದ ಸಂಕೀರ್ಣ ಸಂಸ್ಕೃತಿ. ಈ ವಿಶಾಲವಾದ ರಾಷ್ಟ್ರದಲ್ಲಿ ಭೌಗೋಲಿಕ ಸ್ಥಿತಿ, ಭಾಷೆ, ಧರ್ಮ ಮುಂತಾದ ಅನೇಕ ಪ್ರಾದೇಶಿಕ ಭೇದಗಳು ಈ ಸಂಸ್ಕೃತಿಯ ಅಭಿವ್ಯಕ್ತಿಗೆ ವೈವಿಧ್ಯವನ್ನು ಒದಗಿಸಿವೆ.

## ಭಾರತೀಯ ಸಂಸ್ಕೃತಿ

ಕರ್ನಾಟಕ ಸಂಸ್ಕೃತಿ ಭಾರತೀಯವೇ ಆಗಿದ್ದರೂ ತನ್ನ ಪ್ರಾದೇಶಿಕ ವೈಶಿಷ್ಟ್ಯಗಳ ಪರಿಣಾಮವಾಗಿ ವಿಶೇಷ ರೂಪದಿಂದ ವ್ಯಕ್ತವಾಗುತ್ತದೆ. ಕೊಡವರು, ಕರಾವಳಿಯವರು, ಹಳೆಯ ಮೈಸೂರಿನವರು, ಉತ್ತರ ಕರ್ನಾಟಕದವರು–ಇವರೆಲ್ಲರ ವೇಷಭೂಷಣಗಳು, ಮತಾಚಾರಗಳು, ಹಬ್ಬಗಳು, ಆಟಪಾಟಗಳು, ಊಟತಿಂಡಿಗಳು, ಆಡುಮಾತಿನ ರೀತಿಗಳು ಒಂದಕ್ಕೊಂದು ಭಿನ್ನವಾಗಿ ಕಾಣುತ್ತವೆ ನಿಜ. ಆದರೆ ವಾಸ್ತವವಾಗಿ ಆಂತರಂಗಿಕವಾದ ಸಂಸ್ಕೃತಿ ಒಂದೇ ಆಗಿದೆ. ಉಳಿದ ನಡೆನುಡಿಗಳೆಲ್ಲ ಅದರ ವಿವಿಧ ಅಭಿವ್ಯಕ್ತಿಗಳಾಗಿವೆ. ಈ ಸಂಸ್ಕೃತಿಯ ಮೂಲ ಸ್ವರೂಪವನ್ನು ಗುರುತಿಸಬೇಕಾಗಿದ್ದರೆ ಈ ನಾಡಿನ ರಾಜಕೀಯ,ಧಾರ್ಮಿಕ ಸಾಮಾಜಿಕ ಚರಿತ್ರೆಗಳನ್ನೂ, ಸಾಹಿತ್ಯ, ಸಂಗೀತ, ನೃತ್ಯ, ಶಿಲ್ಪ ಮೊದಲಾದ ಕಲೆಗಳನ್ನೂ ಜನತೆಯ ವಿವಿಧ ವಿನೋದ ಸಾಮಗ್ರಿಗಳನ್ನೂ ಜೀವನದ ಸಮಸ್ತ ರಂಗಗಳನ್ನೂ ಪರಿಶೀಲಿಸಿ, ವಿಶ್ಲೇಷಿಸಿ ಸಮೀಕರಿಸಿ ನೋಡಬೇಕಾಗುತ್ತದೆ. ಈ ಬಗೆಯ ಒಟ್ಟು ಅಭ್ಯಾಸಗಳ ಸಮನ್ವಯದಿಂದ ಕಂಡುಬರುವ ಪ್ರಮುಖ ಅಂಶಗಳನ್ನು ಈ ಕೆಳಗೆ ಸಂಕ್ಷಿಪ್ತವಾಗಿ ನಿರೂಪಿಸಲಾಗಿದೆ.

ಆಂಡಯ್ಯ ಕವಿ, ಕಬ್ಬಿಗರ ಕಾವ್ಯವೆಂಬ ಕಾವ್ಯದಲ್ಲಿ ಕನ್ನಡನಾಡನ್ನು ವರ್ಣಿಸಿರುವುದು ಹೀಗಿದೆ:

ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ
ಬಣ್ಣಿಸಲ್ಕಾರನಾ
ನೆಲನಂ ಮತ್ತಿನ ಮಾನಿಸರ್ ಪೊಗಳಲೇನಂ
ಬಲ್ಲರೆಂಬೊಂದು ಬ
ಲ್ಲುಲಿಯಂ ನಟ್ಟನೆತಾಳ್ದು ಕನ್ನಡಮೆನಿಪ್ಪಾನಾಡು
ಚೆಲ್ವಾಯ್ತು ಮ
ಲ್ಲೆಲರಿಂ ಪೂತ ಕೊಳಂಗಳಿಂ ಕೆರೆಗಳಿಂ ಕಾಲೂರ್ಗಳಿಂ
ಕೆಯ್ಗಳಿಂ||

(ಆ ಭೂಮಿಯನ್ನು ಹಲವು ನಾಲಗೆಯ ಆದಿಶೇಷನೂ ಬಣ್ಣಿಸಲಾರ, ಅಂದ ಮೇಲೆ ಮನುಷ್ಯ ಮಾತ್ರದವರು ಏನೆಂದು ಹೇಳಬಲ್ಲರು? ಎಂಬ ಹೆಸರುವಾಸಿಯಾದ ಕನ್ನಡ ನಾಡು ತಂಗಾಳಿಯಿಂದಲೂ ಅರಳಿದ ಹೂಗಳಿಂದಲೂ ಸರೋವರಗಳಿಂದಲೂ ಕೆರೆಗಳಿಂದಲೂ ಚಿಕ್ಕ ಚಿಕ್ಕ ಹಳ್ಳಿಗಳಿಂದಲೂ ಹೊಲಗಳಿಂದಲೂ ಚೆಲುವಾಗಿತ್ತು.).

ಇಂಥ ಚೆಲುವ ಕನ್ನಡನಾಡು ರೂಢಿಸಿಕೊಂಡು ಬಂದಿರುವ ಸಂಸ್ಕೃತಿಯೂ ಮಹೋನ್ನತವಾದುದು.

## ಸನಾತನ ತತ್ವ

ಸನಾತನವಾದ ಮಹಾವೃಕ್ಷದಂತೆ ಆಳವಾಗಿ ಬೇರುಬಿಟ್ಟು ಸ್ಥಿರವಾಗಿ ನಿಂತಿರುವುದು ಈ ಸಂಸ್ಕೃತಿಯ ಮುಖ್ಯ ಲಕ್ಷಣ. ರಾಜ್ಯಸಾಮ್ರಾಜ್ಯಗಳು ಬಂದುಹೋದುವು; ನಾಡಿನೊಳಗೆ ಸಾವಿರಾರು ಕಾಳಗಗಳಲ್ಲದೆ, ಹೊರಗಿನಿಂದ ಹಲವಾರು ದಾಳಿಗಳೂ ಒದಗಿದುವು. ಧಾರ್ಮಿಕ ಕ್ರಾಂತಿಗಳಾದುವು. ಏನಾದರೂ ಜನತೆಯ ಮನೋಧರ್ಮ ಹಾಗೂ ಜೀವನದೃಷ್ಟಿ ಬದಲಾಗಲಿಲ್ಲ. ಹಣ್ಣೆಲೆಗಳನ್ನು ಕಳಚಿಕೊಂಡು ಹೊಸ ಚಿಗುರು ತಳೆಯುವ ಮರದಂತೆ ತನ್ನ ಅಂತಸ್ಸತ್ವದಿಂದ ಸಂಸ್ಕೃತಿ ಸದೃಢವಾಗಿಯೆ ಉಳಿದುಬಂದಿದೆ.

## ಸಮನ್ವಯ ಗುಣ

ಆದರೆ ಎಲ್ಲದರಿಂದ ಅಲಿಪ್ತವಾಗಿ ಉಳಿಯುವ ಪ್ರತ್ಯೇಕ ಸ್ವಭಾವ ಇದಕ್ಕಿಲ್ಲ. ಹೊಸದು ಬಂದಾಗ ಅದರ ಒಳ್ಳೆಯ ಅಂಶವನ್ನು ಅರಗಿಸಿಕೊಂಡು, ಅದನ್ನೂ ತನ್ನ ಮಡಿಲಲ್ಲಿ ಒಳಗೊಳ್ಳುವ ಔದಾರ್ಯ ಈ ಜನಕ್ಕೆ ಇದೆ. ಹೀಗೆ ಅನೇಕ ಮತಗಳು, ಧರ್ಮಗಳು, ಆಚರಣೆಗಳು ಇಲ್ಲಿ ಬಂದಮೇಲೆ ಇಲ್ಲಿಯವೆ ಆಗಿ ಪರಸ್ಪರವಾಗಿ ಹೊಂದಿಕೊಂಡು ನೆಮ್ಮದಿಯಿಂದ ಬಾಳುತ್ತಿವೆ. ಹೀಗೆ ಸಮನ್ವಯ ಈ ಸಂಸ್ಕೃತಿಯ ಇನ್ನೊಂದು ಗುಣ.

ಧರ್ಮ ಸಹಿಷ್ಣುತೆ ಕನ್ನಡಿಗರ ಪರಂಪರೆ. ಇದನ್ನು ಬೇಲೂರಿನ ಶಾಸನ ಕೂಗಿ ಹೇಳುತ್ತಿದೆ:

> ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾನ್ತಿನೋ
> ಬೌದ್ಧಾ ಬುದ್ಧ ಇತಿ ಪ್ರಮಾಣ ಪಟವ: ಕರ್ಮೇತಿ ನೈಯಾಯಿಕಾ:
> ಅರ್ಹಶ್ಚೇತಿಹ ಜೈನ ಶಾಸನ ಮತಿ: ಕರ್ಮೇತಿ ಮೀಮಾಂಸಕಾ:
> ಸೋ ಯಂ ವೋ ವಿದಧಾತು ವಾಂಛಿತಫಲಂ ಶ್ರೀ ಕೇಶವೇ ಶಸ್ಸದಾ||

(ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮನೆಂದೂ, ಬೌದ್ಧರು ಬುದ್ಧನೆಂದೂ, ಪ್ರಮಾಣಪಟುಗಳಾದ ನೈಯಾಯಿಕರು ಕರ್ತನೆಂದೂ ಜೈನರು ಅರ್ಹಂತನೆಂದೂ ಮೀಮಾಂಸಕರು ಕರ್ಮವೆಂದೂ ಯಾರನ್ನು ಉದ್ಯಾಪಿಸುವರೋ ಅವನೇ ಆದ ಈ ಶ್ರೀಕೇಶವನೆಂಬ ಈತನು ಸದಾ ನಮ್ಮ ಇಷ್ಟಾರ್ಥಫಲಗಳನ್ನು ಕೊಡಲಿ).

### ಸರ್ವ ಧರ್ಮ ಸಮಾನತೆಯ ದೃಷ್ಟಿ

ಅನೇಕ ಧರ್ಮಗಳ ವಿಷಯದಲ್ಲಿ ನಮ್ಮ ನಾಡು ತೋರುತ್ತ ಬಂದ ಒಂದು ಉದಾತ್ತ ಮನೋಭಾವವನ್ನು ನಾವು ಎತ್ತಿ ಹೇಳಬೇಕಾಗುವುದು. ಒಂದು ಧರ್ಮದಲ್ಲಿಯೆ ದರ್ಶನ ಭೇದದಿಂದ ಉಂಟಾಗುವ ಶಂಕರ, ಮಾಧ್ವ ಹಾಗೂ ರಾಮಾನುಜೀಯದಂತಹ ಪಂಥಗಳೆ ಆಗಲಿ ಅಥವಾ ರೂಢವಾದ ಸನಾತನ ಧರ್ಮವನ್ನು ಪ್ರತಿಭಟಿಸಿ ಬಂದ ಜೈನ ಬೌದ್ಧ ಧರ್ಮಗಳೆ ಆಗಲಿ ಹೊರಗಿನಿಂದ ಪ್ರವೇಶ ಮಾಡಿದ ಇಸ್ಲಾಂ, ಕ್ರೈಸ್ತ ಮೊದಲಾದ ಇತರ ಮತಗಳೇ ಆಗಲಿ, ಇಲ್ಲಿ ಬಂದ ಮೇಲೆ ಬೆಂಬಲಿಗರನ್ನು ಗಳಿಸಿಕೊಂಡರೂ ಜಗಳಕ್ಕೆ ನಿಲ್ಲಲಿಲ್ಲವೆಂಬುದು ಗಮನಾರ್ಹವಾದ ವಿಷಯ. ದುರಂತಮಯವಾದ ಮತೀಯ ಕಲಹ ಭಾರತದಲ್ಲಿ ಇತರತ್ರ ಕಾಣಬಹುದು. ಕರ್ನಾಟಕದಲ್ಲಿ ಅದು ಅಪರೂಪ. ಅವರವರ ಧರ್ಮ ಅವರವರಿಗೆ ಸೇರಿದ್ದು. ಇತರರು ಅದನ್ನು ವಿರೋಧಿಸುವಂತಿಲ್ಲ. ಇಷ್ಟೇ ಅಲ್ಲ, ಪರಸ್ಪರ ಪೋಷಣೆ ಸಹಾಯಗಳನ್ನೂ ಒದಗಿಸುತ್ತಾ ಬಂದಿರುವುದುಂಟು. ನಮ್ಮ ರಾಜಕೀಯ ಚರಿತ್ರೆಯ ಉದ್ದಕ್ಕೂ ಸರ್ವಧರ್ಮಗಳನ್ನು ಸಮಾನ ದೃಷ್ಟಿಯಿಂದ ಪೋಷಿಸಿದ ಉದಾಹರಣೆಗಳು ಸಾಕಷ್ಟು ಸಿಗುತ್ತವೆ. ಈ ಔದಾರ್ಯ ಬಂದದ್ದು ಧರ್ಮದ ಸಾರವನ್ನು ಕಂಡುಕೊಳ್ಳುವ ಅಂತರಂಗದ ದರ್ಶನದಿಂದಲೇ.

ಒಮ್ಮೊಮ್ಮೆ ವಿರಸ ಹೆಡೆಯೊಡೆದೊಡನೆ ಮುಂದಾಳುಗಳು ಒಡೆದ ಮನಸ್ಸುಗಳನ್ನು ಕೂಡಿಸಿ ಧಾರ್ಮಿಕ ಸಮನ್ವಯವನ್ನು ಕಾಪಾಡುತ್ತಿದ್ದುದುಂಟು. ೨೯-೮-೧೩೬೮ರಲ್ಲಾದ ವಿಜಯನಗರ ಕಾಲದ ಒಂದು ಘಟನೆ ಸ್ಮರಣೀಯವಾಗಿದೆ. ವೈಷ್ಣವರು ಪ್ರಬಲಗೊಂಡು ಜೈನರಿಗೆ ಕಿರುಕುಳ ಕೊಡತೊಡಗಿದಾಗ ಜೈನ ಮುಖಂಡರು ದೊರೆ ಬುಕ್ಕರಾಯನಲ್ಲಿ ದೂರುಕೊಂಡೊಯ್ದರು. "ವೈಷ್ಣವ ದರ್ಶನಕ್ಕೂ ಜೈನ ದರ್ಶನಕ್ಕೂ ಭೇದವಿಲ್ಲೆಂದು ರಾಯನು ವೈಷ್ಣವರ ಕೈಯಲ್ಲೂ ಜೈನರ ಕೈವಿಡಿದುಕೊಟ್ಟು ಈ ಜೈನದರ್ಶನಕ್ಕೆ ಪೂರ್ವ ಮರಿಯಾದೆಗಳು ಪಂಚ ಮಹಾವಾದ್ಯಗಳೂ ಕಲಶವೂ ಸಲ್ಲುವುದು. ಜೈನ ದರ್ಶನಕ್ಕೆ ಭಕ್ತರ ಹಾನಿ ವೃದ್ಧಿಯಾದರೂ ವೈಷ್ಣವ ಹಾನಿ ವೃದ್ಧಿಯಾಗಿ ಪಾಲಿಸುವುದು. ಈ ಮರ್ಯಾದೆಯಲು ಎಲ್ಲಾ ರಾಜ್ಯದೊಳಗುಳ್ಳಂತಹ ಬಸ್ತಿಗಳಿಗೆ ವೈಷ್ಣವರು ಶಾಸನವನ್ನಿಟ್ಟು ಪಾಲಿಸುವರು. ಚಂದ್ರಾರ್ಕಸ್ಥಾಯಿಯಾಗಿ ವೈಷ್ಣವ ಸಮಯವು ಜೈನದರ್ಶನವ ರಕ್ಷಿಸಿಕೊಂಡು ಬಹವು. ವೈಷ್ಣವರೂ ಜೈನರೂ ಒಂದು ಭೇದವಾಗಿ ಕಾಣಲಾಗದು", ಈ ಶಾಸನ ಇಂದಿಗೂ ಶ್ರವಣಬೆಳಗೊಳದ ಭಂಡಾರ ಬಸದಿಯಲ್ಲಿದೆ. (ಸಂಖ್ಯೆ ೪೭೫. ೩೪೪)

### ಧರ್ಮದ ಆಚರಣೆ

ಧರ್ಮವೆಂಬುದು ನಮ್ಮ ಜನತೆಯ ಜೀವನವನ್ನು ಸಮಗ್ರವಾಗಿ ತುಂಬಿಕೊಂಡಿರುವ ಸತ್ವ. ನಮ್ಮ ಸಾಹಿತ್ಯ, ನೃತ್ಯ, ಸಂಗೀತ, ಶಿಲ್ಪ, ಮೊದಲಾದ ಎಲ್ಲ ಕಲೆಗಳಿಗೂ ಧರ್ಮವೇ ಮೂಲ ಪ್ರೇರಣೆ ಹಾಗೂ ವಸ್ತು. ಧರ್ಮ ಕಲೆಗಳನ್ನು ಬೆಳೆಸಿತು; ಕಲೆಗಳು ಧರ್ಮವನ್ನು ಬೆಳೆಸಿದವು. ಧರ್ಮದ ಅರ್ಥವನ್ನು ಕೂಡ ಜನ ಬಹು ವಿಶಾಲವಾದ, ಸಾರವತ್ತಾದ ರೀತಿಯಲ್ಲಿ ಮನನ ಮಾಡಿಕೊಂಡಿದೆ. ಈ ವಿಶ್ವಕ್ಕೆಲ್ಲಾ ಕಾರಣವಾದ, ಇದನ್ನು ಕಾಪಾಡಿಕೊಂಡು ಹೋಗುವ ಪರಾತ್ಪರ ಶಕ್ತಿಯೊಂದಿದೆ. ಭಕ್ತಿಯಿಂದ, ಸದ್ವರ್ತನೆಯಿಂದ ಅದನ್ನು ಮೆಚ್ಚಿಸಿ ಸದ್ಗತಿ ಪಡೆಯಬಹುದು, ಅದೇ ದೇವರು. ದಾನ, ಪರೋಪಕಾರ ಶುಚಿಯಾದ ಶೀಲ, ಸೌಹಾರ್ದ, ಸತ್ಯವಂತಿಕೆ ಮೊದಲಾದ ಸದಾಚಾರಗಳು ಧರ್ಮ ಶ್ರೇಣಿಯ ಮೆಟ್ಟಿಲುಗಳು. ಈ ಬಗ್ಗೆಯಾದ ಅಲಿಖಿತ ಧರ್ಮಸೂತ್ರಗಳನ್ನು ಜನ ಮೈಗೂಡಿಸಿಕೊಂಡು ಬಾಳುತ್ತ ಬಂದಿದೆ. ಇದರ ಫಲವಾಗಿ ಊರೂರಿಗೆ ಸಾರ್ವಜನಿಕವಾದ ಬಾವಿ ಕೆರೆ, ಕಟ್ಟೆ, ಧರ್ಮಛತ್ರ, ಅರವಟ್ಟಿಗೆ, ದೇವಸ್ಥಾನ ಮೊದಲಾದವನ್ನು ರಾಜಮಹಾರಾಜರು ಮಾತ್ರವಲ್ಲ, ಸೆಟ್ಟಿಗಳು, ಅಧಿಕಾರಿಗಳು, ಕಸಬುದಾರರು, ಸಾಮಾನ್ಯರು, ವೇಶ್ಯೆಯರು ಕೂಡ ಕಟ್ಟಿಸುತ್ತಾ ಬಂದಿದ್ದಾರೆ. ತಾವೆ ಕಟ್ಟಿಸಿದುದಲ್ಲದೆ, ಬೇರೆಯವರು ಕಟ್ಟಿಸಿದ ಇಂತಹ ಕಟ್ಟೆ ಕಟ್ಟಡಗಳಿಗೆ ತಮ್ಮ ಪಾಲಿನ ಕರ್ತವ್ಯವೆಂದು, ದಾನವೆಂದು, ಸೇರಿಸುತ್ತಾ ಬಂದುದುಂಟು. ಕನ್ನಡನಾಡಿನ ಶಾಸನಗಳಲ್ಲಿ ಮುಕ್ಕಾಲು ಪಾಲು ಈ ದಾನಗಳ ವಿವರಣೆ ಹಾಗೂ ಪ್ರಶಸ್ತಿಗೆ ಮೀಸಲಾಗಿದೆ. ಕೇವಲ ಭೂಮಿಕಾಣಿಕೆಗಳಿಗೆ ಈ ದಾನ ಸೀಮಿತವಾಗಿಲ್ಲ. ಆಹಾರದಾನ, ವಸ್ತ್ರದಾನ, ಭೈಷಜ್ಯ (ಔಷಧಿ) ದಾನ, ಶಾಸ್ತ್ರದಾನ ಮುಂತಾದ ಅನೇಕ ದಾನಗಳು ಎಂದಿನಿಂದಲೂ ಪ್ರಚಾರದಲ್ಲಿವೆ. ಬಡಬಗ್ಗರಿಗೆ ಉಪಕಾರ ಮಾಡುವ ಔದಾರ್ಯ ಇದಕ್ಕೆ ಮೂಲ ಪ್ರೇರಣೆ. ದಾನದಿಂದ ಪುಣ್ಯಲಾಭವೆಂಬ ಧಾರ್ಮಿಕ ನಂಬುಗೆ ಇನ್ನೊಂದು ಕಾರಣವಾಗಿರಬಹುದು. ಆದರೆ ಇವೆರಡಕ್ಕಿಂತ ಮುಖ್ಯವಾಗಿ ವಿರಕ್ತರನ್ನು ಸಾಕುವ ಸಾಮಾಜಿಕ ಹೊಣೆಗಾರಿಕೆಯನ್ನು ಜನ ಹೊತ್ತುಕೊಂಡಿರುವರೆಂಬುದನ್ನು ನಾವು ಗಮನಿಸಬೇಕು. ಲೋಕದ ರೀತಿ ನೀತಿಗಳ ಲೋಪದೋಷಗಳನ್ನು ಟೀಕಿಸಿ ಧರ್ಮದ ತಿರುಳನ್ನು ಮನೆಮನೆಗೆ ತಂದು ಮುಟ್ಟಿಸುವ ನಿಸ್ಪೃಹವಾದ ತಮ್ಮ ಜೀವನದಿಂದ ಜನತೆಗೆ ಒಂದು ಆದರ್ಶವನ್ನು ಒದಗಿಸುವ ಜೋಗಿ, ಜಂಗಮ, ದಾಸಯ್ಯ ಮೊದಲಾದವರನ್ನು ಸಲಹುತ್ತ ಬಂದಿರುವುದು ಈ ದಾನ ಪರಂಪರೆ. (ಹಸಿವಾದರೆ ಊರೊಳಗೆ ಭಿಕ್ಷಾನ್ನಗಳುಂಟು. ತೃಷೆಯಾದರೆ ಕೆರೆಬಾವಿ ಹಳ್ಳಗಳುಂಟು. ಶಯನಕ್ಕೆ ಹಾಳು ದೇಗುಲಗಳುಂಟು" ಎಂಬ ಅಕ್ಕನ ವಚನ ಈ ಮಾತಿಗೆ ಒಂದು ಉದಾಹರಣೆ. ಹೀಗೆ ಅವರಿಗೆ ಅನ್ನ ವಸತಿಗಳ ಸಮಸ್ಯೆಯನ್ನು ಜನ ತಪ್ಪಿಸಿದ್ದರಿಂದ ಈ ಮಹಾತ್ಮರುಗಳು ಅಧ್ಯಾತ್ಮಕ್ಕೆ, ಲೋಕೋದ್ಧಾರಕ್ಕೆ ತಮ್ಮ ಸರ್ವಸ್ವವನ್ನು ಮುಡಿಪಿಡುವುದು ಸಾಧ್ಯವಾಯಿತು. ಭಿಕ್ಷುಕ ವೃತ್ತಿ ಹೆಚ್ಚಬೇಕೆಂದು ನಮ್ಮ ಜನ ಎಂದೂ ಬಯಸಲಿಲ್ಲ. ಭಿಕ್ಷುಕರು ಹೆಚ್ಚಾಗಿದ್ದರೆ ಅದಕ್ಕೆ ಕಾರಣಗಳು ಬೇರೆ.

### ವೀರ ಜೀವನ

ಇಡೀ ಭಾರತದ ಇತಿಹಾಸದಲ್ಲಿರುವಂತೆ ಕರ್ನಾಟಕ ರಾಜಕೀಯ ಚರಿತ್ರೆಯಲ್ಲಿಯೂ ಕಂಡುಬರುವ ಮುಖ್ಯವಾದ ಅಂಶ

ವೆಂದರೆ ಅಪರಿಮಿತವಾದ ಯುದ್ಧಗಳು. ರಾಜ್ಯ ರಕ್ಷಣೆ ಮತ್ತು ಸಾಹಸ ಮನೋವೃತ್ತಿ–ಈ ಎರಡೂ ಕಾರಣಗಳಿಂದ ಮೇಲಿಂದ ಮೇಲೆ ಯುದ್ಧಗಳು ರಾಜರಾಜರಲ್ಲಿ ನಡೆಯುತ್ತಿದ್ದುವು. ಯುದ್ಧ ಕೌಶಲ ಹಾಗೂ ಶೌರ್ಯಗಳಲ್ಲಿ ಕರ್ನಾಟಕ ವೀರರು ಅಖಿಲ ಭಾರತ ಖ್ಯಾತಿಯ ಮನ್ನಣೆಯನ್ನು ಪಡೆದುದುಂಟು. ಇಮ್ಮಡಿ ಪುಲಿಕೇಶಿ, ರಾಷ್ಟ್ರಕೂಟ, ಧ್ರುವ ಧಾರಾವರ್ಷ, ಮೂರನೆಯ ಗೋವಿಂದ, ಚಾಲುಕ್ಯ ವಂಶದ ಆರನೆಯ ವಿಕ್ರಮ ಮತ್ತು ವಿಜಯನಗರದ ಕೃಷ್ಣದೇವರಾಯ ಇಂತಹ ಹಲವು ಹೆಸರು ಚಾರಿತ್ರಿಕವಾಗಿವೆ. ಗಂಗಾ ನದಿಯಲ್ಲಿ ತಮ್ಮ ಕುದುರೆಗಳನ್ನು ಮೀಯಿಸಿ ನೇಪಾಳದ ತಪ್ಪಲಲ್ಲಿ ಮೇಯಿಸಿದೆವೆಂದು ನಮ್ಮ ಭೂಪತಿಗಳು ಹೇಳಿಕೊಂಡುದು ಅತಿಶಯೋಕ್ತಿಯಲ್ಲ. ನೇಪಾಳ, ಬಂಗಾಳ, ಜೋಧಪುರ, ಒರಿಸ್ಸ ಮತ್ತು ಗುಜರಾತ್‌ಗಳಲ್ಲಿ ಕನ್ನಡದ ರಾಜವಂಶಗಳು ತಮ್ಮ ಶಾಖೆಗಳನ್ನು ಹರಡಿದುದಕ್ಕೆ ಚಾರಿತ್ರಿಕ ಆಧಾರಗಳಿವೆ.

### ಔದಾರ್ಯ

ಈ ಪರಾಕ್ರಮ ಆಸುರೀವೃತ್ತಿಯದಾಗಿರಲಿಲ್ಲ. ಕನ್ನಡ ದಿಗ್ವಿಜಯಿಗಳು ಧರ್ಮವಿಜಯಿಗಳಾಗಿದ್ದರು. ಧರ್ಮಯುದ್ಧ ಮತ್ತು ಕ್ಷಮೆ ಅವರ ಗುಣಗಳಾಗಿದ್ದುವು. ಗೆದ್ದ ರಾಜ್ಯಗಳನ್ನು ಆಯಾ ರಾಜರಿಗೆ ಪುನ: ಒಪ್ಪಿಸಿ ತಮ್ಮ ಅಧಿಕಾರತ್ವವನ್ನು ಮಾತ್ರ ಅವರ ಮೇಲೆ ಹೊರಿಸುವುದು ಇವರ ದೃಷ್ಟಿಯಾಗಿತ್ತು. ತಮ್ಮ ರಾಜ್ಯದ ಸರಹದ್ದುಗಳನ್ನು ವಿಸ್ತರಿಸಿ ಇತರ ಭೂಮಿಯನ್ನು ಕಿತ್ತುಕೊಳ್ಳುವ ಬುದ್ಧಿ ಇವರಿಗೆ ಎಂದೂ ಬರಲಿಲ್ಲ. ಈ ಔದಾರ್ಯ ಅತಿಯಾಗಿ, ಕರ್ನಾಟಕ ತನ್ನದಾದ ಭೂಮಿಯನ್ನು ಕೂಡ ನೆರೆಹೊರೆಯ ರಾಜ್ಯಗಳಿಗೆ ಬಿಟ್ಟುಕೊಟ್ಟಿದೆಯೆಂಬ ಆರೋಪ ಕೂಡ ಇದೆ. ವಾದಗ್ರಸ್ತವಾದ ಈ ವಿಷಯ ಇಲ್ಲಿ ಅಪ್ರಸ್ತುತ.

ರಾಜರಿಗೆ ಅಥವಾ ಕೆಲವರು ಸೇನಾ ನಾಯಕರಿಗೆ ಮಾತ್ರ ಈ ಪರಾಕ್ರಮ ಮೀಸಲಾಗಿದ್ದಿಲ್ಲ. ಶೌರ್ಯವನ್ನು ಜೀವನದ ಒಂದು ಪ್ರಮುಖ ಮೌಲ್ಯವಾಗಿ ಎಣಿಸುವ ಜನತೆ ಅವರ ಬೆಂಬಲಕ್ಕಿತ್ತು. ವೀರಜೀವನ ಅಖಿಲ ಕರ್ನಾಟಕದ ಎಲ್ಲರನ್ನೂ ಒಳಗೊಂಡದ್ದು. ರಾಜರ ಯುದ್ಧಗಳಲ್ಲಿ ದಂಡಾಳುಗಳಾಗಿ ಹೋಗಿ ಹಗೆಗಳನ್ನು ಹೊಡೆಯುವವರು ಮಾತ್ರ ವೀರರಲ್ಲ. ಕಾಳಗವೆನ್ನುವುದು ನಮ್ಮ ಜನತೆಗೆ ಉಸಿರಾಟದಷ್ಟು ಸಹಜವಾಗಿತ್ತು. ಊರೂರಲ್ಲಿ ಸಾವಿರಾರು ಸಂಖ್ಯೆಯಲ್ಲಿ ದೊರೆಯುವ ವೀರಗಲ್ಲುಗಳು ಆ ವೀರ ಜೀವನದ ಸ್ಮಾರಕಗಳಾಗಿ ಇಂದಿಗೂ ನಿಂತಿವೆ. ತುರುಗೋಳು (ಗೋಗ್ರಹಣ) ಊರಳಿವು, ಪೆಣ್ಬುಯ್ಯಲ್ ಮುಂತಾದ ಪ್ರಸಂಗಗಳಲ್ಲಿ ಹೊಡೆದಾಡಿ ಸತ್ತು ಸ್ವರ್ಗವನ್ನು ಸೂರೆಗೊಳ್ಳುವುದು ಯುವಕರಿಗೊಂದು ಅಭಿಮಾನದ ವಿಷಯವಾಗಿತ್ತು. ದರೋಡೆಕೋರರು ಒಂದು ಊರ ದನಗಳನ್ನೆಲ್ಲ ಅಪಹರಿಸುವುದು ತುರುಗೋಳು; ಸ್ತ್ರೀಯರನ್ನು ಅವಮಾನಗೊಳಿಸುವುದು ಅಥವಾ ಅಪಹರಿಸುವುದು ಪೆಣ್ಬುಯ್ಯಲ್; ಊರನ್ನು ಲೂಟಿ ಮಾಡುವುದು ಊರಳಿವು ಈ ಎಲ್ಲ ಪ್ರಸಂಗಗಳಲ್ಲಿ ಊರಿನ ಹಿರಿಯರು ಶೂರನಾದವನಿಗೆ ವೀಳ್ಯ ಕೊಟ್ಟು ಊರಿನ ಮಾನರಕ್ಷಣೆಗೆ ಕಳಿಸುತ್ತಿದ್ದರು. ಆತ ಏಕಾಕಿಯಾಗಿ ಶತ್ರುಗಳನ್ನು ಎದುರಿಸಿ ಹೋರಾಡುತ್ತಿದ್ದ. ಆ ಕಾಳಗದಲ್ಲಿ ಆತ ಸತ್ತರೆ ಅವನ ಸ್ಥಾನದಲ್ಲಿ ಇನ್ನೊಬ್ಬ ಬಂದು ನಿಲ್ಲುತ್ತಿದ್ದ. ಹೀಗೆ ಎಕ್ಕಟಿಗಲಿಯಾಗಿ ಶತ್ರು ಸಮೂಹವನ್ನು ಎದುರಿಸುವ ಎದೆಗಾರಿಕೆ ಹಾಗೂ ಅವರನ್ನು ಹೊಡೆದೋಡಿಸುವ ಸಾಮರ್ಥ್ಯ ಅವನಿಗೆ ಎಲ್ಲಿಂದ ಬರುತ್ತಿತ್ತು? ತತ್ವನಿಷ್ಠೆಗಾಗಿ, ಊರ ಅಭಿಮಾನ ರಕ್ಷಣೆಗಾಗಿ ತನ್ನ ಪ್ರಾಣವನ್ನು ಪಣವಾಗಿಟ್ಟವನಿಗೆ ಸಾವಿನ ಅಥವಾ ಸೋಲಿನ ಭಯವಿರುವುದಿಲ್ಲ. ಗೆದ್ದು ಬಂದರೆ ಕೀರ್ತಿ, ಸತ್ತರೆ ಸ್ವರ್ಗ; (ಸೋತು ಬದುಕುವ ಮಾತೇ ಇಲ್ಲ) ಎಂದಿದ್ದರೂ ಬಿಟ್ಟುಹೋಗುವ ದೇಹ ಇದು. ಸತ್ಕಾರ್ಯಕ್ಕಾಗಿ ಸಂದರೆ ಶ್ರೇಯ. ಆದುದರಿಂದ ಮರಣಕ್ಕಾಗಲಿ ರಣಕ್ಕಾಗಲಿ ಭಯಪಡುವುದೇಕೆ? ವೀರಗಲ್ಲುಗಳಲ್ಲಿ ಪುನಃ ಪುನಃ ಉಕ್ತವಾದ ಈ ಬಗೆಯ ಆದರ್ಶ ವಾಕ್ಯಗಳು ಆ ವೀರರ ಮನೋಧರ್ಮವನ್ನು ಉಗ್ಗಡಿಸುತ್ತವೆ. ದೇಶಕ್ಕಾಗಿ, ರಾಜನಿಗಾಗಿ, ಊರಿನ ಗೌರವಕ್ಕಾಗಿ ತೋರುವ ಈ ಪ್ರಾಣತ್ಯಾಗ ಯುದ್ಧವಲ್ಲದ ಪ್ರಸಂಗಗಳಲ್ಲಿಯೂ ವ್ಯಕ್ತವಾದ ಉಲ್ಲೇಖಗಳಿವೆ.

### ಬಲಿದಾನ

ಅರಸನಿಗೆ ಗಂಡುಮಗುವಾದರೆ "ಸಿಡಿತಲೆ" ಕೊಟ್ಟು ಒಬ್ಬ ಪ್ರಾಣ ಬಿಟ್ಟದ್ದುಂಟು. ತನ್ನ ಒಡೆಯನೊಡನೆ ತಾನೂ ಸಾಯುವೆನೆಂದು ಪ್ರಮಾಣ ಮಾಡಿ (ವೇಳೆವಾಳಿ) ಆತ್ಮಹತ್ಯೆ ಮಾಡಿಕೊಂಡವರೂ ಉಂಟು. ಇಂತಹವರಿಗೆ ವೇಳವಡಿಚರೆಂದು ಹೆಸರು. ಒಡೆಯನ ಹೆಣದ ಕೆಳಗೆ ತನ್ನನ್ನು ಹುಗಿಸಿಕೊಂಡು "ಕೀಳ್ಗುಂಟೆ" ಯಾದವರ ಉಲ್ಲೇಖಗಳಿವೆ. ಗರುಡರೆಂದು ಸ್ವಾಮಿಭಕ್ತಿಯ ಪ್ರಮಾಣ ತೆಗೆದುಕೊಂಡವರು ಒಡೆಯನ ಮರಣವಾದೊಡನೆ ಬೆಂಕಿಗೆ ಬಿದ್ದು ಪ್ರಾಣತ್ಯಾಗ ಮಾಡುತ್ತಿದ್ದರು. ಇಂತಹ ಅನೇಕ ಆತ್ಮಬಲಿಗಳ ಉಲ್ಲೇಖ ಶಾಸನಗಳಲ್ಲಿ ದೊರೆಯುತ್ತವೆ. ಸ್ವಾಮಿ ಭಕ್ತಿಯ ಎದುರಲ್ಲಿ ಇವರಿಗೆ ತಮ್ಮ ಪ್ರಾಣ ತುಚ್ಛವಾದದ್ದು. ಸಹಗಮನ ಮಾಡುವ ಸ್ತ್ರೀಯರು ನಮ್ಮಲ್ಲಿ 'ಮಾಸ್ತಿ' (ಮಹಾಸತಿ)ಯರೆಂದು ಪ್ರಸಿದ್ಧರಾಗಿ ತಮ್ಮ ಸ್ಮಾರಕಗಳನ್ನು ನಿಲ್ಲಿಸಿಹೋಗಿದ್ದಾರೆ. ಸ್ವಾಮಿಭಕ್ತಿ ಮತ್ತು ಅದಕ್ಕೆ ತಮ್ಮ ಜೀವನವನ್ನು ಸಮರ್ಪಿಸುವ ಪರಂಪರೆ ನಮ್ಮ ಜನತೆಯಲ್ಲಿ ಇಂದಿಗೂ ಜೀವಂತವಾಗಿದೆ. ರಾಜಮಹಾರಾಜರು ಈಗ ಇಲ್ಲ. ಆದರೆ ಪ್ರಮುಖವಾದ ರಾಜಕೀಯ ಪಕ್ಷಗಳು ಉಳಿದಿರುವುದು ಇಂತಹ ನಿಷ್ಠೆಯ ಜನರಿಂದಲೇ ಎಂಬುದನ್ನು ನಾವು ಅರಿಯಬೇಕು. ನಾಯಕ ವ್ಯಕ್ತಿ ದೇವರಂತೆ ಕಂಡು ಆ ವ್ಯಕ್ತಿಗಾಗಿ ತಮ್ಮ ಸರ್ವಸ್ವವನ್ನು ಬಲಿ ಕೊಡುವುದಕ್ಕೆ ಇವರು ಸದಾ ಸಿದ್ಧರಾಗಿರುತ್ತಾರೆ.

ವೀರ ಜೀವನವೆಂದರೆ ಆಯುಧವನ್ನು ಹಿಡಿದು ಹೋರಾಡುವುದೆಂದಷ್ಟೆ ಅಲ್ಲ. ಒಂದು ತತ್ವಕ್ಕಾಗಿ, ಒಬ್ಬ ನಾಯಕನಿಗಾಗಿ, ಒಂದು ದೇಶಕ್ಕಾಗಿ ನಿಷ್ಠೆಯಿಂದ ಹೆಣಗುವುದೂ ವೀರ ಜೀವನವೆ. ಇಂತಹ ಜನ ಬೆಂಬಲಕ್ಕೆ ಇರುವಾಗ ನಾಯಕರು ಮಹತ್ಕಾರ್ಯಗಳನ್ನು ಸಾಧಿಸಬಲ್ಲರು. ನಾಡಿನ ಬಿಡುಗಡೆಯ (ಅಹಿಂಸಾತ್ಮಕ) ಹೋರಾಟದಲ್ಲಿ ಕರ್ನಾಟಕದ ಪಾಲು ಸಂಸ್ಮರಣೀಯವಾಗಿದೆ. ಅಖಿಲ ಭಾರತ ಮಟ್ಟದ ಮುಂದಾಳುಗಳನ್ನು ಕರ್ನಾಟಕ ಭಾರತಕ್ಕೆ ಒದಗಿಸುತ್ತಾ ಬಂದಿದೆ. ತಾನು ಒಪ್ಪಿಕೊಂಡ ಪಕ್ಷಕ್ಕೆ ಅಚಲವಾದ ನಿಷ್ಠೆಯನ್ನು ಸಲ್ಲಿಸುತ್ತಲೂ ಇದೆ. ಇದು ಈ ನೆಲದ ಗುಣ, ಈ ಜನದ ಸಾಂಸ್ಕೃತಿಕ ಪರಂಪರೆ.

ಒಂಭತ್ತನೆಯ ಶತಮಾನದ ಕವಿರಾಜಮಾರ್ಗದಲ್ಲಿ ಹೇಳಿರುವ ಕನ್ನಡಿಗರ ಸ್ವಭಾವವನ್ನು ಕುರಿತ ಪದ್ಯಗಳು ಇಂದಿಗೂ ಗಮನಾರ್ಹವೆನಿಸುತ್ತವೆ. ದಕ್ಷಿಣದ ಕಾವೇರಿಯಿಂದ ಉತ್ತರದ ಗೋದಾವರಿ ನದಿಯ ವರೆಗೆ ಹಬ್ಬಿರುವ ಪ್ರದೇಶದೊಳಗಿನ ಕನ್ನಡ ಜನಪದರು

ಪದನರಿದು ನುಡಿಯಲುಂ ನುಡಿ
ದುದನರಿದಾರಯಲುಮಾರ್ಪರಾ ನಾಡವರ್ಗಳ್

ಚದುರರ್ ನಿಜದಿಂ ಕುರಿತೋ
ದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್‖
ಕುರಿತವರಲ್ಲದೆ ಮತ್ತಂ
ಪೆರರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್
ಕಿರುವಕ್ಕಳುಮಾ ಮೂಗರು
ಮರಿಪಲ್ಕರಿವರ್ ವಿವೇಕಮಂ ಮಾತುಗಳಂ ‖
ಸುಭಟರ್ಕಳ್ ಕವಿಗಳ್ ಸು
ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್
ಅಭಿಮಾನಿಗಳತ್ಯುಗ್ರರ್
ಗಂಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್ ‖

(ಹದವರಿತು ಮಾತಾಡುತ್ತಾರೆ. ನುಡಿದುದನ್ನು ಅರಿತು ವಿಚಾರ ಕೂಡ ಮಾಡಬಲ್ಲರು. ಕನ್ನಡ ನಾಡಿನ ಜನ ಚತುರರು. ಕಾವ್ಯಗಳ ಪ್ರಯೋಗಗಳನ್ನು ಸಾಮಾನ್ಯರೂ ಉದಾಹರಿಸುವರು. ಎಲ್ಲರೂ ತಮ್ಮ ಮಾತುಗಳಲ್ಲಿ ಜಾಣರು. ಚಿಕ್ಕ ಮಕ್ಕಳೂ ಮೂಗರೂ ಕೂಡ ವಿವೇಕದ ಮಾತುಗಳಲ್ಲಿ ಹೇಳಬಲ್ಲರು. ಇಷ್ಟು ವಿವೇಕಿಗಳಾದ ಆ ಕನ್ನಡ ನಾಡಿನ ಜನತೆ ಸಾಮಾನ್ಯರಲ್ಲ. ಸುಭಟರು, ಕವಿಗಳು, ಸುಪ್ರಭುಗಳು, ಚೆಲುವರು, ಕೀರ್ತಿವಂತರು, ಗುಣಶಾಲಿಗಳು, ಸ್ವಾಭಿಮಾನಿಗಳು, ಅತ್ಯುಗ್ರರು, ಅಷ್ಟೇ ಗಂಭೀರ ಸ್ವಭಾವದವರು).

### ಜೀವನದ ಮೌಲ್ಯಗಳು

ಶಾಸನಗಳಲ್ಲಿಯೂ ಸಾಹಿತ್ಯದಲ್ಲಿಯೂ ಪುನಃ ಪುನಃ ಎತ್ತಿ ಹಿಡಿದ ಜೀವನ ಮೌಲ್ಯಗಳು ನಾಲ್ಕು: ಸತ್ಯ, ಶೌರ್ಯ, ವೀರ ಮತ್ತು ದಾನ. ಕರ್ಣನನ್ನು ಕುರಿತು ಪಂಪ ಹೇಳುವ ಈ ಮಾತುಗಳನ್ನು ಗಮನಿಸಬೇಕು: "ನೆನೆಯದಿರಣ್ಣ ಭಾರತದೊಳಿಂ ಪೆರರಾರುಮನೊಂದೆ ಚಿತ್ತದಿಂ ನೆನವೊಡೆ ಕರ್ಣನಂ ನೆನೆಯ ಕರ್ಣನೊಳಾರ್ದೊರೆ ಕರ್ಣನೇರು ಕರ್ಣನ ಪಡೆ ನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ" ಭಾರತ ವೀರರಲ್ಲಿ ಅವನು ಮೆಚ್ಚಿ ಹೇಳುವ ಗುಣಗಳು–ಚಲ, ನನ್ನಿ, ಗಂಡು, ಸಾಹಸ, ಧರ್ಮ, ಎಲ್ಲಕ್ಕೂ ಹೆಚ್ಚಾಗಿ ಅತ್ಯುನ್ನತಿ. ಇವುಗಳ ಹಿಂದೆ ಇರುವುದು ಮಹೋನ್ನತ ಜೀವನದ ಆದರ್ಶ. ಚೆನ್ನಾಗಿ ಬದುಕಬೇಕು. ಜೀವನದ ಸುಖವನ್ನು ಸಂಪೂರ್ಣವಾಗಿ ಪಡೆಯಬೇಕು. ಆದರೆ ಪರಲೋಕದ ಸಾಧನೆಯನ್ನೂ ಮರೆಯಬಾರದು. ಇದು ನಮ್ಮ ಜನತೆಯ ಬಾಳಿನ ಹದ. ಸಂಸಾರದ ಅಸಾರತೆಯನ್ನು ಬೋಧಿಸಿ, ವಿರಕ್ತರು ನಮ್ಮ ಜನತೆಯನ್ನು ಐಹಿಕ ಪ್ರಗತಿಗೆ ವಿಮುಖರಾಗುವಂತೆ ಮಾಡಿದ್ದಾರೆಂಬ ವಾದಕ್ಕೆ ಪ್ರತ್ಯಕ್ಷ ಆಧಾರ ದೊರೆಯುವುದಿಲ್ಲ. ಕರ್ಮತತ್ವಕ್ಕೆ ಅಂಟಿಕೊಂಡು ನಮ್ಮ ಜನ ಇನ್ನೂ ಪೌರುಷವನ್ನು ಕಡೆಗಣಿಸಿದರೆಂಬ ವಾದವೂ ಅಷ್ಟೇ ದುರ್ಬಲವಾಗಿದೆ. ನಮ್ಮ ಜನ ಈ ಲೋಕದಲ್ಲಿ ಆಸಕ್ತಿಯಿಲ್ಲದವರಾಗಿದ್ದಾರೆ. ರಾಜ್ಯ ಸಾಮ್ರಾಜ್ಯಗಳನ್ನೂ, ಗೊಮ್ಮಟನಂತಹ ಮಹೋನ್ನತ ಶಿಲ್ಪಗಳನ್ನೂ ನಿರ್ಮಿಸುತ್ತಿರಲಿಲ್ಲ. ದೇವಾಲಯಗಳಲ್ಲಿಯೂ ಕುಸುರಿಗೆಲಸ, ನಯಮನೋಹರವಾದ ಮೂರ್ತಿ ಶಿಲ್ಪ, ಆಕರ್ಷಕವಾಗಿ ಕೊರೆದಿಟ್ಟ ಸಂಸಾರದ ಚಿತ್ರಗಳು, ವಸ್ತ್ರಗಳಲ್ಲಿ ಕಸೂತಿ, ಪಾತ್ರಪಡಗಗಳಲ್ಲಿ ಅಲಂಕಾರ, ಆಭರಣಗಳ ವೈವಿಧ್ಯ. ಜಾನಪದ ಮಟ್ಟುಗಳಿಂದ ಹಿಡಿದು ಶಾಸ್ತ್ರೀಯ ಕಲಾ ಪರಿಣತೆಯವರೆಗಿನ ಸಂಗೀತ ನೃತ್ಯಗಳು, ಆಟಪಾಟಗಳು, ಕಲೆ, ಒಗಟು, ಗಾದೆ– ಇವೆಲ್ಲ ನಮ್ಮ ಜೀವನದ ರಸಿಕತೆಗೆ ಸೌಂದರ್ಯೋಪಾಸನೆಗೆ ನಿರಂತರ ಸಾಕ್ಷಿಗಳಾಗಿ ನಿಂತಿವೆ.

### ಜೀವನ ದೃಷ್ಟಿ

"ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗೆ ಆಗರವಾದ ಮಾನಸರ್" ಎಂದು ಜೀವನ ರಸಿಕತೆಯ ಆದರ್ಶವನ್ನು ಸಾವಿರ ವರ್ಷಗಳ ಹಿಂದೆಯೆ ನಮ್ಮ ಆದಿಕವಿ ಪಂಪ ಹೇಳಿದ್ದಾನೆ. ತ್ಯಾಗ ಭೋಗಗಳ ಸಮತೋಲನ ಕನ್ನಡ ಸಂಸ್ಕೃತಿಯ ಮುಖ್ಯ ಲಕ್ಷಣವಾಗಿದೆ. ತಾನು ಸುಖ ಪಡಬೇಕು; ಹಾಗಾಗಬೇಕಾದರೆ ತನ್ನ ಸುತ್ತಲಿನವರೆಲ್ಲ ಸುಖವಾಗಿರಬೇಕು, ಅದಕ್ಕೆ ತ್ಯಾಗ ಬೇಕೆಂಬುದು. ಗೇಯ ಗೋಷ್ಠಿಗಳು ಸಾಧ್ಯವಾಗುವುದು ಕೂಡ ಹೀಗೆ ಎಲ್ಲರಿಗೂ ನೆಮ್ಮದಿ ದೊರೆತಾಗಲೇ.

### ಸಂಸ್ಕೃತಿ ಪ್ರಸಾರ

ಅಕ್ಕರದ ಸುಖ ಎಷ್ಟು ಜನಕ್ಕೆ ಸಾಧ್ಯವೆಂಬ ಆಕ್ಷೇಪವೇಳಬಹುದು. ತಾನೇ ಓದಿ ತಿಳಿಯುವೆನೆಂಬುದು ಈಗಿನವರ ಮಾತು. ಹಿಂದಿನಿಂದ ನಡೆದುಬಂದ ಪರಂಪರೆಯೆಂದರೆ ಒಬ್ಬನು ಓದಿ, ಹಲವರು ಕೇಳುವುದು. ನಮ್ಮ ಕವಿಗಳಲ್ಲಿ ಒಬ್ಬನಾದರೂ ಕಾವ್ಯವನ್ನು 'ಬರೆದೆ'ನೆಂದು ಹೇಳಿಕೊಂಡಿಲ್ಲ. 'ಓದಿ' ಎಂದೂ ಹೇಳಿಲ್ಲ. ಬಲ್ಲವರು 'ಹೇಳಿಸಿ'ದರು, ನಾನು 'ಹೇಳಿದನು' ಎಂದೇ ಪ್ರತಿಯೊಬ್ಬ ಕವಿ ನುಡಿಯುತ್ತಾನೆ. ತನ್ನ ಕಾವ್ಯ 'ಸಕಲ ಜನ ಸುಶ್ರಾವ್ಯ'ವಾಗಲೆಂದು ಹಾರೈಸುತ್ತಾನೆ. ಓದಿ ಹೇಳಿದವನಿಗೆ ಕೇಳಿದವರಿಗೆ ಫಲಶ್ರುತಿಯನ್ನು ಹೇಳಲಾಗುತ್ತದೆ. ಇದು 'ಅಕ್ಕರ'ದ ಅಲಂಪು, ಕಾವ್ಯವಾಗಲೀ ಪುರಾಣವಾಗಲೀ ತತ್ವಬೋಧೆಯಾಗಲಿ ನಮ್ಮ ಜನಕ್ಕೆ ಒದಗುತ್ತಿದ್ದ ರೀತಿ ಇದು. ಹೀಗಾಗಿ ಓದದವರು ಕೂಡ ಈ ಎಲ್ಲದರ ಸಾರಾಂಶವನ್ನು ಗ್ರಹಿಸಿ ಅರಗಿಸಿಕೊಳ್ಳುವುದು ಸಾಧ್ಯವಾಯಿತು. ಜೈಮಿನಿ ಭಾರತ, ರಾಜಶೇಖರ ವಿಳಾಸ, ಗದುಗಿನ ಭಾರತ ಹಾಗೂ ಪ್ರಭುಲಿಂಗಲೀಲೆಯ ಪದ್ಯಗಳನ್ನು ಶುದ್ಧವಾಗಿ ಹೇಳಿ ಅರ್ಥ ವಿವರಣೆ ಮಾಡಬಲ್ಲ ನಿರಕ್ಷರ ಪಂಡಿತರು ಹಳ್ಳಿಗಳಲ್ಲಿ ಇಂದಿಗೂ ಕೆಲವೆಡೆ ಸಿಕ್ಕುತ್ತಾರೆ. ನಿಜಲಿಂಗ ಶತಕ, ಸೋಮೇಶ್ವರ ಶತಕ, ರತ್ನಾಕರವರ್ಣಿಯ ಶತಕಗಳು, ಸರ್ವಜ್ಞಪದಗಳು, ದಾಸರ, ಶರಣರ ಉಕ್ತಿಗಳು ಇವೆಲ್ಲವನ್ನು ಸಮಯೋಚಿತವಾಗಿ ಲೀಲಾಜಾಲವಾಗಿ ಉದಾಹರಿಸಬಲ್ಲವರು ಎಲ್ಲಾ ಕಡೆಗೆ ಇನ್ನೂ ಉಂಟು. ಮಹೋನ್ನತ ಸತ್ವಗಳಿಂದ ಹರಿದುಬಂದ ತಿಳಿವು ಈ ರೀತಿಯಾಗಿ ಸಮಾಜದ ಕೆಳಗಿನ ಸ್ತರಗಳ ವರೆಗೆ ಸೋಸಿ ಬರುತ್ತದೆ. ನಮ್ಮ ಸಂಸ್ಕೃತಿ ಪ್ರಸಾರವಾದದ್ದು ಹೀಗೆ. ಪರಂಪರೆಯಾಗಿ ಉಳಿದುಬಂದದ್ದೂ ಹೀಗೆ. ಇಂದಿಗೂ ಗಮಕಿಗಳು, ಕೀರ್ತನಕಾರರು ಕರ್ನಾಟಕ ಸಂಸ್ಕೃತಿಯ ಸಾರವನ್ನು ಜನತೆಯ ಬಳಿಗೆ ಕೊಂಡೊಯ್ಯುವ ಹರಿಕಾರರಾಗಿದ್ದಾರೆ.

ಇದಲ್ಲದೆ ಆಗಾಗ ನಡೆಯುವ ಜಾತ್ರೆ, ಉತ್ಸವಗಳಲ್ಲಿ ಸಾಮಾನ್ಯವಾಗಿ ನಡೆಯುವ ಪೂಜೆ, ಭಜನೆ, ಪುರಾಣ ಪ್ರವಚನ, ಹಾಡು, ಕುಣಿತ, ಕೋಲಾಟ, ಮೇಲಾಟ, ಮುಂತಾದ ಕಾರ್ಯಕ್ರಮಗಳಿಂದ ಮನೋರಂಜನೆಯೊಂದಿಗೆ ಧರ್ಮಜಾಗೃತಿ ಹಲವು ಜನರಲ್ಲಿ ಪರಸ್ಪರ ಸಂಪರ್ಕ, ಲಲಿತಕಲೆ ಹಾಗೂ ಜೀವನೋಪಯುಕ್ತ ಕಲೆಗಳಿಗೆ ಪ್ರೋತ್ಸಾಹಗಳೂ ದೊರೆಯುತ್ತಿದ್ದುವು. ಸಂಸ್ಕೃತಿ ಪ್ರಸಾರದ ಇನ್ನೊಂದು ಮಾಧ್ಯಮ ಇದು. ಊರೊಟ್ಟಿನ ಕಾರ್ಯಕ್ರಮಗಳಲ್ಲಿ ಜನತೆ ವಹಿಸುವ ಆಸಕ್ತಿ ಹಾಗೂ ಗ್ರಾಮ ಜೀವನದಲ್ಲಿ ಊರಿನ

'ದೈವದವ'ರು ವಹಿಸುವ ಪಾತ್ರ– ಇವೆರಡೂ ನಮ್ಮ ಸಾಮಾಜಿಕ ಮುಖ್ಯ ಅಂಶಗಳಾಗಿವೆ. ರಾಷ್ಟ್ರೀಯತೆಯೆಂಬುದು ನಮ್ಮ ಜನಕ್ಕೆ ಹೊಸತು. ಅದು ಬೇರು ಬಿಡುವುದಕ್ಕೆ ಇನ್ನೂ ಅವಕಾಶ ಬೇಕು.

**ಸಾಕಾರ ಸಂಸ್ಕೃತಿ**

ಮನುಷ್ಯತ್ವದ ಮಹೋನ್ನತಿಯೇನು, ಸುಸಂಸ್ಕೃತರ ಲಕ್ಷಣಗಳೇನು, ಜೀವನದ ಪರಮಾದರ್ಶ ಯಾವುದು– ಎಂಬ ವಿಷಯವಾಗಿ ಹಲವಾರು ಸೂತ್ರಗಳು, ವಚನಗಳು, ಪದಗಳು, ಗಾದೆಗಳು ಉಂಟು. ಇವೆಲ್ಲವುಗಳಿಗಿಂತ ಮಿಗಿಲಾಗಿ ಈ ಸಂಸ್ಕೃತಿಯನ್ನು ಅಳವಡಿಸಿಕೊಂಡ ವ್ಯಕ್ತಿಗಳ ಚಿತ್ರಣ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಕಥಾ ಪ್ರಧಾನವಾದ ಸಾಹಿತ್ಯ ಈ ರೀತಿಯಾಗಿ ಉದಾತ್ತ ವ್ಯಕ್ತಿಗಳನ್ನು ಚಿತ್ರಿಸುವ ಮೂಲಕ ಜನಮನದ ಎದುರಿಗೆ ಸಂಸ್ಕೃತಿಯನ್ನು ಸಾಕಾರವಾಗಿ ನಿಲ್ಲಿಸುತ್ತದೆ. ಇಂತಹ ಅನೇಕ ಆದರ್ಶ ಚಿತ್ರಗಳಲ್ಲಿ ರತ್ನಾಕರವರ್ಣಿಯ ಭರತೇಶನ ಚಿತ್ರ ತುಂಬ ಸಮಗ್ರವೂ, ಮನೋಹರವೂ ಆಗಿದೆ. ಭರತೇಶ ವೈಭವವೊಂದು ಸುಸಂಸ್ಕೃತ ಸಂಸಾರದ ವಿಶಾಲ ಚಿತ್ರವಾಗಿದೆ. ಸಂಸ್ಕೃತಿ ಸಂಪನ್ನನ ಲಕ್ಷಣವೇನೆಂಬುದನ್ನು ಈ ಕೆಳಗಿನ ಪದ್ಯಗಳಲ್ಲಿ ಆ ಕವಿ ಸಂಗ್ರಹವಾಗಿ ಸೂಚಿಸುತ್ತಾನೆ:

ಲೌಕಿಕ ಜಯವಂತರುಂಟು ಪೆಲಂಬರಾ ಲೌಕಿಕ
ಪರಮಾರ್ಥವೆರಡಾ|

ಭೂಕಾಂತರಲ್ಲಿ ಪಡೆವುದು ದುರ್ಲಭ ಸುವಿವೇಕ
ಜೀವದಕ್ ಚಕ್ರೇಶ||

ಭೋಗ ವಿಚಾರವು ಬೇಕು ನೃಪಗಾತ್ಮ ಯೋಗ
ವಿಚಾರವು ಬೇಕು|

ರಾಗ ರಸಿಕನಾಗಬೇಕು ಭಾವಿಸೆ ವೀತರಾಗ
ರಸಿಕನಾಗಬೇಕು||

ಶೃಂಗಾರ ಕೋವಿದನಾಗಬೇಕಾತ್ಮ ಸುಸಂಘ
ಸುಮುಖಿನಾಗಬೇಕು|

ಸಂಗರ ಸಂಮುಖಿನಾಗಬೇಕಾತ್ಮ ಯೋಗಾಂಗ
ಕೋವಿದನಾಗಬೇಕು||

ಇಹಲೋಕ ಸುಖವ ಭೋಗಿಸಬೇಕು ನೃಪತಿ
ಯುತ್ಸಹವಾ ಬೇಕು ಧರ್ಮದೊಳು|

ಬಹುಕಾಂಕ್ಷೆಯೊಳು ಸಿಕ್ಕದಂತಿರಬೇಕು
ನಿಸ್ಪೃಹನಾಗಬೇಕೆದೆಯೊಳಗೆ||

ಕೊಡಬೇಕು ಕೊಡುವಲ್ಲಿ ಪಾತ್ರವರಿಯಬೇಕು
ಮೌನವೂ ಬೇಕು|

ಬಡವರಂತಿರಬೇಕು ಪ್ರಭುವಂತಿರಬೇಕು ನಡೆಯಿಂತು
ಜಾತಿ ಕ್ಷತ್ರಿಯರ||

ಪ್ರಜೆ ಪರಿವಾರಕ್ಕೆ ಹಿತನಂತೆ ವೈರಿ ಭೂಭುಜರಿಗೆ
ಭುಜಗೇಂದ್ರನಂತೆ|

ನಿಜಗುರುವಿಗೆ ಭೃತ್ಯನಂತೆ ಧಾರ್ಮಿಕರಿಗೆ ನಿಜ
ಬಂಧುವಾಗಿರಬೇಕು||

ಪರವೆಂಗಳಿಗೆ ಹೇಡಿ ಕದನಕ್ಕೆ ಕಡುಗಲಿ
ಪರಮತಕ್ಕೊಡಂಬಡೆ ಮೂರ್ಖ|

ಅರುಹಕಾಗಮದೊಳತೀಶನಾತ್ಮ ಕಲೆಯೊಳಂ
ತರಸನಾಗಿರಬೇಕು ನೃಪತಿ||

ಹವಣಿಸಿಕೊಳ್ಳಬೇಕಿಂದ್ರಿಯ ವರ್ಗವನವಿಚಳನಾಗಿರ
ಬೇಕು|

ಭುವನಕಿಂದಿನರಾಯ ಸ್ವರ್ಗಕೆ ನಾಳಿನ ದಿವಿಜೇಂದ್ರ
ನೆನೆಸಿರಬೇಕು||

ಇಲ್ಲಿ 'ಜಾತಿ ಕ್ಷತ್ರಿಯ' 'ನೃಪತಿ' ಮೊದಲಾದ ಶಬ್ದಗಳು ಕಾವ್ಯದಲ್ಲಿಯ ಪ್ರಸಂಗಕ್ಕೆ ಉಚಿತವಾಗಿ ಬಂದಿದೆ. ಆದರೆ ಈ ಆದರ್ಶ ಅರಸನಿಗೆ ಹೇಳಿದ್ದಾದರೂ, ಎಲ್ಲರಿಗೂ ಅನ್ವಯಿಸುವಂತಹದು, ಕನ್ನಡದ ಜನ ಮೆಚ್ಚಿಕೊಂಡುದು ಈ ಸಂಸ್ಕೃತಿ.

# ಕರ್ನಾಟಕದ ಕೆಲವು ಸಂಸ್ಥೆಗಳು

ಜಿ. ವೆಂಕಟಸುಬ್ಬಯ್ಯ

ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿ – ಇವುಗ ಳನ್ನು ಕುರಿತು ಅಭ್ಯಾಸ, ಪ್ರಚಾರ ಮತ್ತು ಅಭಿವೃದ್ಧಿಗಳಿಗಾಗಿ ದುಡಿದ ಹಲವು ಸಂಸ್ಥೆಗಳು ಕನ್ನಡ ನಾಡಿನಲ್ಲಿ ಹೆಸರಾಗಿವೆ. ಕಳೆದ ಶತಮಾನದ ಕೊನೆಯ ಭಾಗದ ವೇಳೆಗೆ ಭಾರತದ ಎಲ್ಲ ಭಾಗಗಳಲ್ಲಿಯೂ ಜನರಿಗೆ ತಮ್ಮ ಭಾಷೆ, ಸಾಹಿತ್ಯ ಸಂಸ್ಕೃತಿ ಗಳ ಕಡೆಗೆ ದೃಷ್ಟಿ ಹರಿಯಿತು. ಇದಕ್ಕೆ ಮುಖ್ಯವಾಗಿ ಇಂಗ್ಲಿಷ್ ಭಾಷಾ ಸಾಹಿತ್ಯಗಳ ಆಳವಾದ ತಿಳುವಳಿಕೆಯೇ ಕಾರಣವಾಯಿತು. ಪಾಶ್ಚಾತ್ಯರು ಭಾರತೀಯರಿಗೆ ಯಾವ ಉದ್ದೇಶದಿಂದ ಇಂಗ್ಲಿಷ್ ಭಾಷೆಯನ್ನು ಕಲಿಸಿದರೋ ಅದಕ್ಕಿಂತಲೂ ನೂರು ಪಾಲು ಅಧಿಕವಾದ ಫಲವನ್ನು ಅದು ನಮ್ಮ ಜನರಿಗೆ ಉಂಟು ಮಾಡಿತು ಎಂಬ ಬಗ್ಗೆ ಈಗ ಯಾರಿಗೂ ಅನುಮಾನವಿಲ್ಲ. ಇಂಗ್ಲಿಷ್ ಭಾಷೆಯ ಮೂಲಕ ನಮ್ಮ ದೇಶದ ಜನರಿಗೆ ವಿಶ್ವವ್ಯಾಪಿಯಾದ ದೃಷ್ಟಿ ಒದಗಿದುದಲ್ಲದೆ ತಮ್ಮ ಪರಂಪರೆಯ ಅಭ್ಯಾಸವನ್ನು ಮಾಡಬೇಕೆಂಬ ಹಂಬಲ ಅಧಿಕವಾಯಿತು. ಪಾಶ್ಚಾತ್ಯ ವಿದ್ವಾಂಸರಾದ ಕೆಲವರು ದೇಶಭಾಷೆಗಳಲ್ಲಿ ಮಾಡಿದ ವಿದ್ವತ್ಕಾರ್ಯವೂ ಇದಕ್ಕೆ ಪ್ರೋತ್ಸಾಹಕವೂ ಮಾರ್ಗದರ್ಶಕವೂ ಆಯಿತು.

ಕನ್ನಡ ದೇಶದಲ್ಲಿ ರೀವ್, ಜೆಗ್ಲರ್, ಮ್ಯೂರ್, ಅಂಡರ್ಸನ್, ಮೋಗ್ಲಿಂಗ್, ಕಿಟ್ಟೆಲ್, ರೈಸ್ ಮುಂತಾದ ಪಾಶ್ಚಾತ್ಯ ವಿದ್ವಾಂಸರ ನೇತೃತ್ವದಲ್ಲಿ ಭಾಷಾ ಪ್ರಸಾರ ಕಾರ್ಯವು ಭರದಿಂದ ಸಾಗಿತು. ಮಂಗಳೂರಿನಲ್ಲಿ ಸ್ಥಾಪಿತವಾದ 'ಬಾಸೆಲ್ ಮಿಷನ್ ಪ್ರೆಸ್' ಎಂಬುದು ಕನ್ನಡ ಮುದ್ರಣವನ್ನು ಸುಂದರಗೊಳಿಸಿ ಜನಪ್ರಿಯತೆ ಗಳಿಸಿತು. ಶಿಕ್ಷಣ ಕ್ಷೇತ್ರದಲ್ಲಿ ಪಠ್ಯ ಪುಸ್ತಕಗಳೂ ಸಹಾಯಕ ಸಾಹಿತ್ಯ ಸಾಮಗ್ರಿಯೂ ಮುದ್ರಣಗೊಳ್ಳತೊಡಗಿದವು. ಮೈಸೂರಿನಲ್ಲಿ ಮುಮ್ಮಡಿ ಕೃಷ್ಣರಾಜರು ಸಾಧಿಸಿದ ರಾಜಾಸ್ಕೂಲು (೧೮೩೩) ನಡೆಸಿದ ಕಾರ್ಯ, ೧೮೫೮ ರಲ್ಲಿ ಬೆಂಗಳೂರಿನ ಹೈಸ್ಕೂಲು ಸೆಂಟ್ರಲ್ ಕಾಲೇಜಾಗಿ ಮಾರ್ಪಟ್ಟುದು, ೧೯೧೬ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪನೆ- ಇವು ಶಿಕ್ಷಣ ಕೇತ್ರದ ಮೈಲಿಗಲ್ಲುಗಳು. ಮೈಸೂರು ಅರಸರ ಪ್ರೋತ್ಸಾಹದಿಂದ ಸ್ಥಾಪಿತವಾದ ಕರ್ನಾಟಕ ಭಾಷೋಜ್ಜೀವಿನೀ ಸಭಾ (೧೮೮೬) ಸಂಸ್ಕೃತ ವಿದ್ಯಾಶಾಲೆ (೧೮೭೬) ಓರಿಯಂಟಲ್ ಲೈಬ್ರರಿ (೧೮೮೭) ಪ್ರಾಚ್ಯ ವಸ್ತು ಸಂಶೋಧನಾಲಯ (೧೮೮೮) ಇವುಗಳಿಂದ ಕನ್ನಡ ಜನರಲ್ಲಿ ತಮ್ಮ ಭಾಷೆ ಸಾಹಿತ್ಯಗಳ ಬಗ್ಗೆ ಕ್ರಮವಾಗಿ ಹೊಸ ಬಗೆಯ ಅಭಿಮಾನ ಮೂಡಿಬರಲು ಸಹಾಯವಾಯಿತು.

ಕ್ರೈಸ್ತ ಮಿಷನ್‌ಗಳೂ, ಮಿಷನರಿಗಳೂ ಮಾಡಿದ ಕ್ರೈಸ್ತ ಮತಪ್ರಚಾರ ಸಾಧಕವಾದ ಕನ್ನಡ ಗ್ರಂಥರಚನೆ ಮತ್ತು ಅವರ ಮತ ಸಂಸ್ಥೆ–ಇವುಗಳು ಕನ್ನಡ ಸಾಹಿತ್ಯದ ನವೋದಯಕ್ಕೆ ಪರೋಕ್ಷವಾಗಿ ಸಹಾಯ ಮಾಡಿದುವು. ಮೈಸೂರು ರಾಜರ ಆಸ್ಥಾನವೂ ಕೂಡ ಹೀಗೆಯೇ ಒಂದು ಸಂಸ್ಥೆಯಾಗಿ ಕನ್ನಡದ ಪುನರುದಯಕ್ಕೆ ಸಹಕಾರಿಯಾಯಿತು.

### ಕರ್ನಾಟಕದ ವಿದ್ಯಾವರ್ಧಕ ಸಂಘ

ಆದರೆ ನಿಜವಾಗಿ ವಿದ್ವಾಂಸರೇ ನಿಂತು ಜನತೆಯ ಕಡೆಯಿಂದ ಭಾಷಾ ಸಾಹಿತ್ಯಗಳಿಗೆ ಉತ್ತೇಜನ ಕೊಡಲು ಸಂಸ್ಥೆಗಳನ್ನು ಸ್ಥಾಪಿಸುವುದು ಕನ್ನಡ ನಾಡಿನಲ್ಲಿ ತಡವಾಗಿ ರೂಪುಗೊಂಡಿತೆನ್ನಬೇಕು. ಕರ್ಣಾಟಕ ಗ್ರಂಥಮಾಲೆ, ಕಾವ್ಯ ಮಂಜರಿ ಮುಂತಾದ ಪತ್ರಿಕೆಗಳಲ್ಲಿ ಹಳಗನ್ನಡ ಕಾವ್ಯಗಳು ಮುದ್ರಿತವಾಗುತ್ತಿದ್ದರೂ, ಗ್ರಾಜುವೇಟ್ಸ್ ಟ್ರೇಡಿಂಗ್ ಅಸೋಸಿಯೇಷನ್ ಪ್ರೆಸ್ (ಮೈಸೂರು), ಧಾರವಾಡ ಪ್ರೆಸ್, ವಿಚಾರದರ್ಪಣ ಪ್ರೆಸ್, ಸಿ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಮುಂತಾದ ಮುದ್ರಣಶಾಲೆಗಳಿಂದ ಪುಸ್ತಕಗಳು ಪ್ರಕಟವಾಗುತ್ತಿದ್ದರೂ ಅವುಗಳನ್ನು ಸಂಸ್ಥೆಗಳು ಎಂದು ಕರೆಯುವಂತಿಲ್ಲ. ಮೈಸೂರಿನಲ್ಲಿ ರಾಜ್ಯಾಡಳಿತವು ಸುಗಮವಾಗಿದ್ದು ಕನ್ನಡಕ್ಕೆ ತಕ್ಕಷ್ಟು ಪ್ರೋತ್ಸಾಹವಿತ್ತು. ಆದರೆ ಮುಂಬಯಿ ಕರ್ನಾಟಕದಲ್ಲಿ ಮರಾಠಿಯ ಆಕ್ರಮಣಶೀಲತೆಯಿಂದ ನೊಂದ ಕನ್ನಡಿಗರಲ್ಲಿ ಅಭಿಮಾನ ಪುಟಿದೆದ್ದು ಇಂಥದೊಂದು ಸಂಸ್ಥೆ ಮೊದಲು ಉದಯವಾಯಿತು. ಅದು ಕರ್ನಾಟಕ ವಿದ್ಯಾವರ್ಧಕ ಸಂಘ. ಇದು ಸ್ಥಾಪಿತವಾದುದು ೧೮೯೦ರಲ್ಲಿ. ಆದರೆ ಇಂಥ ಸಂಘದ ಸ್ಥಾಪನೆಯ ವಿಚಾರವಾಗಿ ರಾಮಚಂದ್ರ ಹಣಮಂತ ದೇಶಪಾಂಡೆ ಎಂಬವರು ೧೮೮೭ ರಲ್ಲೇ ಯೋಚಿಸಿ ಅದಕ್ಕಾಗಿ ನಿಧಿಯನ್ನು ಕೂಡಿಸಿದ್ದರು. ಕನ್ನಡದಲ್ಲಿ ಗ್ರಂಥ ರಚನೆ ಮಾಡುವವರಿಗೆ ಬಹುಮಾನ ಕೊಡುವ ಯೋಜನೆಯನ್ನು ಈ ಸಂಘ ಕೈಗೊಂಡಿತು. ಈ ಸಂಘದ ವರದಿಯಲ್ಲಿ ಬಹುಮಾನಗಳನ್ನು ಪ್ರಕಟಿಸಿರುವ ಪಟ್ಟಿಯಲ್ಲಿ ಕನ್ನಡಿಗರಲ್ಲಿ ದೇಶಾಭಿಮಾನ, ಭಾಷಾಭಿಮಾನ ಇತ್ಯಾದಿ ಪ್ರಚೋದಿಸುವಂಥ ೧೦೦ ಹಾಡುಗಳಿಗೆ ೨೫ ರೂಪಾಯಿಗಳ ಬಹುಮಾನವನ್ನು ರಾಮಚಂದ್ರ ಹಣಮಂತ ದೇಶಪಾಂಡೆಯವರೇ ನೀಡಿದ್ದುದನ್ನು ಉಲ್ಲೇಖಿಸಿದೆ. ಇದರಿಂದ ಆಗಿನ ಕಾಲದ ಕನ್ನಡದ ಸ್ಥಿತಿಯು ನಮಗೆ ಖಚಿತವಾಗಿ ವ್ಯಕ್ತವಾಗುತ್ತದೆ. ಈ ಸಂಘವು ಸ್ಥಾಪಿತವಾದ ಮೇಲೆ ಅದು ೧೮೯೬ ರಲ್ಲಿ "ವಾಗ್ಭೂಷಣ" ಎಂಬ ಪತ್ರಿಕೆಯನ್ನು ಪ್ರಾರಂಭಿಸಿತು. ಅದು ೨೩ ವರ್ಷಗಳ ಕಾಲ

ನಡೆದು ನಿಂತು ಹೋಯಿತೆಂಬುದು ಈಗ ಚರಿತ್ರೆಯ ಮಾತು. ಸಂಘದ ಮೊದಲ ಹತ್ತು ವರ್ಷಗಳಲ್ಲಿ ೨೫ ಪುಸ್ತಕಗಳು ಪ್ರಕಟವಾದವು. ಹಾಗೂ ವಾಗ್ಭೂಷಣದಲ್ಲಿ ಸುಮಾರು ೬೧ ಗ್ರಂಥಗಳು ಪ್ರಕಟವಾದುವು. ಈ ಸಂಘವನ್ನು ಕಟ್ಟಿ ಬೆಳೆಸಿದವರಲ್ಲಿ ರಾ. ಹ. ದೇಶಪಾಂಡೆ, ವೆಂಕಟರಂಗೋ ಕಟ್ಟಿ, ಫ. ಗು. ಹಳಕಟ್ಟಿ, ಶಾಂತಕವಿ (ಸಕ್ಕರೆ ಬಾಳಾಚಾರ್ಯ), ದೋ. ನ. ಮುಳಬಾಗಿಲ, ರಾ. ಹ. ದೇಶಪಾಂಡೆ ಮುಂತಾದವರು ಮುಖ್ಯರು. ಗಳಗನಾಥರು ತಮ್ಮ ಪ್ರಥಮ ಕಾದಂಬರಿಯಾದ "ಪದ್ಮನಯನಾ" ಗ್ರಂಥವನ್ನು ಸಂಘದ ಪಾರಿತೋಷಕ್ಕಾಗಿ ಬರೆದರೆಂಬುದು ಕುತೂಹಲದ ಸಂಗತಿಯಾಗಿದೆ.

ಕಾಲಕ್ರಮದಲ್ಲಿ ವಿದ್ಯಾವರ್ಧಕ ಸಂಘವು ಬೆಳೆಯಿತು. ಮೈಸೂರಿನ ರಾಜರಾದ ಚಾಮರಾಜ ವೊಡೆಯರು ಈ ಸಂಘಕ್ಕೆ ೬೦೦೦ ರೂಪಾಯಿಗಳ ಧನಸಹಾಯ ಮಾಡಿದುದರಿಂದ ವಿದ್ಯಾವರ್ಧಕ ಸಂಘದ ಕಟ್ಟಡಕ್ಕೆ ಶ್ರೀ ಜಯಚಾಮರಾಜ ಮಂದಿರ ಎಂದು ಅವರ ಹೆಸರನ್ನು ಕೊಡಲಾಗಿದೆ. ಈ ಸಂಘವು ಸ್ಥಾಪನೆಯಾದ ಮೇಲೆ ಮೈಸೂರಿನ ವಿದ್ವಾಂಸರು ಧಾರವಾಡಕ್ಕೆ ಹೋಗುವುದೂ ಅಲ್ಲಿಯ ವಿದ್ವಾಂಸರು ಮೈಸೂರು ರಾಜ್ಯಕ್ಕೆ ಬರುವುದೂ ಹೆಚ್ಚಾಯಿತು. ಎರಡೂ ಕಡೆಯವರೂ ಸೇರಿ ವಿಚಾರ ವಿನಿಮಯ ಮಾಡಿಕೊಂಡು ಕನ್ನಡದ ಅಭಿವೃದ್ಧಿ, ಕನ್ನಡ ನಾಡಿನ ಏಕೀಕರಣ ಇತ್ಯಾದಿಗಳ ಬಗ್ಗೆ ಜನರಲ್ಲಿ ಆಸಕ್ತಿಯನ್ನು ಹೆಚ್ಚಿಸಿದರು. ಹೀಗೆ ಕನ್ನಡದ ಬಗ್ಗೆ ಹಿತವನ್ನು ಸಾಧಿಸಿದ ಮೊದಲನೆಯ ಸಂಸ್ಥೆ ಈ ವಿದ್ಯಾವರ್ಧಕ ಸಂಘ. ಅದು ತನ್ನ ಶತಮಾನೋತ್ಸವವನ್ನು ನೆರವೇರಿಸುವ ಏರ್ಪಾಡಿನಲ್ಲಿದೆ. ಈ ಸಂಘದ ಕಾರ್ಯಗಳು ಕನ್ನಡ ನಾಡಿನ ಚರಿತ್ರೆಯಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದಿವೆ. ಸ್ವಲ್ಪ ಕಾಲ ಅದರ ಕಾರ್ಯ ಸ್ಥಗಿತಗೊಂಡಿದ್ದರೂ ಈಗ ಪೊರೆಯುಜ್ಜಿದ ಹಾವಿನಂತೆ ಕಾಂತಿಯುತವಾಗಿ ಸಶಕ್ತವಾಗಿ ಅದು ಕಾರ್ಯಮುಖವಾಗಿದೆ. ಇಂದಿನ ಕಾರ್ಯಕರ್ತರಲ್ಲಿ ಉತ್ಸಾಹಿಗಳೂ, ದಕ್ಷರೂ ಆದ ಯುವಕ ಮುಂದಾಳುಗಳು ಕಾಣಬರುತ್ತಿರುವುದು ಶುಭದ ಸಂಕೇತವಾಗಿದೆ.

**ಕನ್ನಡ ಸಾಹಿತ್ಯ ಪರಿಷತ್ತು**

ಹಳೆಯ ಮೈಸೂರು ಸಂಸ್ಥಾನದಲ್ಲಿ ಅಂಥ ಸಂಸ್ಥೆಯು ಇರಬೇಕೆಂಬ ಹಂಬಲ ಇಲ್ಲಿನ ಜನರಲ್ಲಿ ಕೂಡಿದ್ದರೂ ಅದು ರೂಪು ತಳೆಯ ಬೇಕಾದರೆ ಈ ಶತಮಾನದ ಮೊದಲ ದಶಕವೇ ಉರುಳಬೇಕಾಯಿತು. ಆಧುನಿಕ ಮೈಸೂರು ಸಂಸ್ಥಾನದ ನಿರ್ಮಾತೃಗಳೆಂದು ಕೀರ್ತಿ ಪಡೆದಿದ್ದ ಸರ್. ಎಂ. ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದಲ್ಲಿ ದಿವಾನರಾಗಿದ್ದಾಗ ಇಂಥ ಒಂದು ಯೋಜನೆ ಸಾಧ್ಯವಾಯಿತು. ಅವರ ಸೂಚನೆಯಂತೆ ಆಗಿನ ಕಾಲದಲ್ಲಿ ಪ್ರಸಿದ್ಧವಾಗಿದ್ದ ಸಂಪದಭ್ಯುದಯ ಸಮಾಜದ ೧೯೧೪ ನೇ ಇಸವಿಯ ವಾರ್ಷಿಕ ಅಧಿವೇಶನದಲ್ಲಿ ಒಂದು ನಿರ್ಣಯವನ್ನು ಸಭೆಯ ಮುಂದಿಟ್ಟು ಅದರ ಒಪ್ಪಿಗೆಯನ್ನು ಪಡೆಯಲಾಯಿತು. ಆ ನಿರ್ಣಯದ ಭಾಷೆ ಹೀಗಿದೆ:–

"ಕರ್ನಾಟಕ ಭಾಷೆಯಲ್ಲಿ ವಿವಿಧ ಗ್ರಂಥಗಳನ್ನು ರಚಿಸುವವರ ಪ್ರೋತ್ಸಾಹಕ್ಕಾಗಿ ಸ್ವತಂತ್ರಾಧಿಕಾರವುಳ್ಳ ಪರಿಷತ್ತೊಂದು ಇರಬೇಕು ಮತ್ತು ಸರ್ಕಾರದವರು ಆ ಪರಿಷತ್ತನ್ನು ಅಂಗೀಕರಿಸಿ ಅದಕ್ಕೆ ವಿಶೇಷ ಸಹಾಯ ಮಾಡುವುದು ಉಚಿತವೆಂದು ಸಂಪದಭ್ಯುದಯ ಸಮಾಜ ಸರ್ಕಾರಕ್ಕೆ ಶಿಫಾರಸು ಮಾಡಬೇಕು."

ಈ ನಿರ್ಣಯದಲ್ಲಿಯೇ "ಕರ್ಣಾಟಕ", "ಪರಿಷತ್ತು" ಎಂಬ ಎರಡು ಪದಗಳು ಇರುವುದೂ ಅವುಗಳಿಂದಲೇ "ಕರ್ಣಾಟಕ ಸಾಹಿತ್ಯ ಪರಿಷತ್ತು" ಉಗಮವಾದುದೂ ಇದರಿಂದ ಗೊತ್ತಾಗುತ್ತದೆ. ಈ ನಿರ್ಣಯವನ್ನು ಅನುಸರಿಸಿ ೧೯೧೫ ನೇ ಮೇ ತಿಂಗಳು ೫ನೆಯ ತಾರೀಖು ಬೆಂಗಳೂರಿನ ಗೌರ್ನ್‌ಮೆಂಟ್ ಹೈಸ್ಕೂಲಿನಲ್ಲಿ ಒಂದು ಸಭೆ ಸೇರಿತು. ಈ ಸಭೆಗೆ ಇಂಥ ಪರಿಷತ್ತಿನ ಸ್ಥಾಪನೆಯಲ್ಲಿ ಆಸಕ್ತಿ ಹೊಂದಿದ್ದ ಅನೇಕ ಜನರು ಕನ್ನಡ ನಾಡಿನ ಇತರ ಭಾಗಗಳಿಂದಲೂ ಬಂದಿದ್ದರು. ಬೆಳಗಾಂ, ಕಾರ್ವಾರ್, ಬೊಂಬಾಯಿ, ಮದರಾಸು, ಧಾರವಾಡ, ಬಳ್ಳಾರಿ, ಬೊಂಬಾಯಿಯ ದೇಶೀಯ ಸಂಸ್ಥಾನಗಳು, ಮದರಾಸಿನ ದಕ್ಷಿಣ ಕನ್ನಡ ಜಿಲ್ಲೆಗಳು ಮುಂತಾದ ಕಡೆಗಳಿಂದ ಜನರು ಪ್ರತಿನಿಧಿಗಳಾಗಿ ಉತ್ಸಾಹದಿಂದ ಬಂದಿದ್ದರು. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ, ಬೊಂಬಾಯಿಯ ಕರ್ಣಾಟಕ ಸಭೆ ಮುಂತಾದುವು ಪ್ರತಿನಿಧಿಗಳನ್ನು ಕಳುಹಿಸಿದ್ದವು. ಧಾರವಾಡದ "ಕರ್ಣಾಟಕ ವೃತ್ತ" ಮತ್ತು "ಧನಂಜಯ", ಹುಬ್ಬಳ್ಳಿಯ "ಸಚಿತ್ರ ಭಾರತ ಪತ್ರಿಕೆ", ಮಂಗಳೂರಿನ "ಸ್ವದೇಶಾಭಿಮಾನಿ" ಮತ್ತು ಮೈಸೂರಿನ "ವೃತ್ತಾಂತ ಪತ್ರಿಕೆ"–ಈ ಪತ್ರಿಕೆಗಳ ಸಂಪಾದಕರುಗಳು ಹಾಜರಿದ್ದರು. ಹೀಗಿದ್ದುದರಿಂದ ಕನ್ನಡ ನಾಡಿನ ಎಲ್ಲ ಕಡೆಗಳಿಂದಲೂ ಪ್ರತಿನಿಧಿಗಳು ಬಂದಹಾಗಾಯಿತು. ಅಂದು ಎಲ್ಲರ ಒಮ್ಮತದ ಉತ್ಸಾಹದ ಪ್ರೋತ್ಸಾಹದಿಂದ "ಕರ್ನಾಟಕ ಸಾಹಿತ್ಯ ಪರಿಷತ್ತು" ಸ್ಥಾಪಿತವಾಗಿ, ಕೆಲವು ದಿನಗಳಲ್ಲಿಯೇ ಪರಿಷತ್ತಿನ ನಿಬಂಧನೆಗಳು ರೂಪುಗೊಂಡವು. ಆ ಸಭೆಯಲ್ಲಿ ಒಪ್ಪಿಗೆ ಪಡೆದ ಪರಿಷತ್ತಿನ ಉದ್ದೇಶಗಳಿವು:

೧. ಕನ್ನಡ ಭಾಷೆಯಲ್ಲಿ ಪಂಡಿತ ಯೋಗ್ಯವಾದ ವ್ಯಾಕರಣ, ಚರಿತ್ರೆ, ನಿಘಂಟು ಈ ಮೂರನ್ನು ಬರೆಯಿಸುವುದು ಅಥವಾ ಬರೆಯುವುದಕ್ಕೆ ಸಹಾಯ ಮಾಡುವುದು.

೨. ನವೀನ ಶಾಸ್ತ್ರಗಳಿಗೆ ಸಂಬಂಧ ಪಟ್ಟ, ಕನ್ನಡ ಗ್ರಂಥಗಳಲ್ಲಿ ಉಪಯೋಗಿಸಲು ಯೋಗ್ಯವಾದ ಪಾರಿಭಾಷಿಕ ಶಬ್ದಗಳ ಕೋಶವನ್ನು ಪ್ರಕಟಿಸುವುದು.

೩. ತತ್ವಶಾಸ್ತ್ರ, ಪ್ರಕೃತಿ ವಿಜ್ಞಾನ, ಚರಿತ್ರೆ, ಸಾಹಿತ್ಯ ಇವೇ ಮೊದಲಾದ ವಿಷಯಗಳಿಗೆ ಸಂಬಂಧ ಪಡುವ ಗ್ರಂಥಗಳನ್ನು ಕನ್ನಡದಲ್ಲಿ ಬರೆಯುವುದಕ್ಕೆ ಪ್ರೋತ್ಸಾಹ ಕೊಟ್ಟು ಅವುಗಳನ್ನು ಪ್ರಚುರ ಪಡಿಸುವುದು.

೪. ಕನ್ನಡ ಭಾಷೆಗೂ ಕನ್ನಡ ಗ್ರಂಥಗಳಿಗೂ ಸಂಬಂಧ ಪಟ್ಟ ಎಲ್ಲಾ ಚರ್ಚಾಂಶಗಳನ್ನು ವಿಚಾರಮಾಡಿ ನಿರ್ಣಯಿಸುವುದು.

೫. ಕನ್ನಡವನ್ನುಳಿದ ಇತರ ಭಾಷೆಗಳಲ್ಲಿರುವ ಉತ್ತಮ ಗ್ರಂಥಗಳನ್ನು ಕನ್ನಡಿಸಿ ಪ್ರಕಟಿಸುವುದು.

೬. ಉತ್ಕೃಷ್ಟವಾದ ಪ್ರಾಚೀನ ಗ್ರಂಥಗಳನ್ನೂ ಕನ್ನಡ ದೇಶಗಳ ಚರಿತ್ರೆಯನ್ನೊಳಗೊಂಡ ಗ್ರಂಥಗಳನ್ನೂ ಸಂಗ್ರಹಿಸಿ, ಅವನ್ನು ಪರಿಷ್ಕರಿಸಿ ಪ್ರಕಟಿಸುವುದು ಅಲ್ಲದೆ ಕನ್ನಡ ನಾಡಿನ ಪೂರ್ವಸ್ಥಿತಿಯನ್ನು ವಿಶದಗೊಳಿಸುವ ವಸ್ತುಗಳನ್ನು ಕೂಡಿಟ್ಟು ಅವುಗಳನ್ನು ಕಾಪಾಡುವುದಕ್ಕಾಗಿ ಪ್ರಾಚೀನ ವಸ್ತು ಸಂಗ್ರಹಾಲಯವನ್ನೇರ್ಪಡಿಸುವುದು.

೭. ಕರ್ನಾಟಕದ ಗ್ರಂಥಕಾರರು ಬರೆದಿರುವ ಪುಸ್ತಕಗಳನ್ನು ಕೊಂಡುಕೊಳ್ಳುವುದರಿಂದಾಗಲಿ, ಬರೆದಿರುವ ಪುಸ್ತಕಗಳನ್ನು ಅಚ್ಚು ಹಾಕಿಸಿಕೊಳ್ಳುವುದರಿಂದಾಗಲಿ, ಬರೆದಿರುವ ಪುಸ್ತಕಗಳನ್ನು ಅಚ್ಚು ಹಾಕಿಸಿಕೊಳ್ಳುವುದಕ್ಕೆ ಮುಂಗಡವಾಗಿ ಹಣವನ್ನು ಕೊಡುವುದರಿಂದಾಗಲಿ, ಅವರ ಗ್ರಂಥಗಳ ಮುದ್ರಣಾಧಿಕಾರವನ್ನು (ಕೋಪಿ ರೈಟ್)

ಹಣಕೊಟ್ಟು ತೆಗೆದು ಕೊಳ್ಳುವುದರಿಂದಾಗಲಿ ಅವರಿಗೆ ಪ್ರೋತ್ಸಾಹಕೊಟ್ಟು, ಸ್ವತಂತ್ರ ಗ್ರಂಥಗಳನ್ನು ಬರೆದು ತಾವೇ ಹಣ ವೆಚ್ಚ ಮಾಡಿ ಪ್ರಕಟಿಸುವ ಗ್ರಂಥ ಕರ್ತರಿಗೆ ಬಿರುದನ್ನಾಗಲಿ ಸಂಭಾವನೆಯನ್ನಾಗಲಿ ಕೊಡುವುದು.

೯. ಕರ್ಣಾಟಕ ಭಾಷೆಗೂ ಸಾಹಿತ್ಯಕ್ಕೂ ಸಂಬಂಧಿಸಿದ ಅಪೂರ್ವ ಪರಿಶೋಧನ ಕಾರ್ಯದಲ್ಲಿ ನಿರತರಾಗಿರುವ ಕನ್ನಡ ಅಥವಾ ಸಂಸ್ಕೃತ ವಿದ್ವಾಂಸರಿಗೆ ಪಂಡಿತವೇತನಗಳನ್ನು ಕೊಡುವುದು.

೧೦. ಕರ್ಣಾಟಕ ಭಾಷೋನ್ನತಿಗೂ ಗ್ರಂಥಾಭಿವೃದ್ಧಿಗೂ ಸಂಬಂಧ ಪಡುವ ಸಮಸ್ತ ವಿಷಯಗಳನ್ನೂ ಆಯಾ ಸರ್ಕಾರದವರ ಪರಾಮರ್ಶಕ್ಕೆ ತಂದು ಅವನ್ನು ತೃಪ್ತಿಕರವಾಗಿ ವ್ಯವಸ್ಥೆ ಮಾಡಿಸಿ ಕೊಳ್ಳುವುದಕ್ಕೆ ತಕ್ಕ ಏರ್ಪಾಟುಗಳನ್ನು ಮಾಡುವುದು.

೧೧. ಕನ್ನಡ ಮಾತನಾಡುವ ಪ್ರದೇಶಗಳಲ್ಲಿ ಸಾಧ್ಯವಾದಷ್ಟು ಸ್ಥಳಗಳಲ್ಲಿ ಕನ್ನಡ ವಾಚನಾಲಯಗಳನ್ನೂ ಪುಸ್ತಕ ಭಂಡಾರಗಳನ್ನೂ ಸ್ಥಾಪಿಸುವುದು.

೧೨. ಕನ್ನಡ ನಾಡುಗಳ ಪ್ರಮುಖರನ್ನು ಸೇರಿಸಿ ಆಗಾಗ ಸಭೆಗಳನ್ನೇರ್ಪಡಿಸುವುದು ಮತ್ತು ಸಮರ್ಥರಾದ ವಿದ್ವಾಂಸರಿಂದ ಉಪನ್ಯಾಸಗಳನ್ನು ಮಾಡಿಸುವುದು.

ಕರ್ಣಾಟಕ ಸಾಹಿತ್ಯ ಪರಿಷತ್ತು ಇಂಥ ಆದಾತ್ತವಾದ 'ಧ್ಯೇಯಗಳನ್ನು ರೂಪಿಸುವುದಕ್ಕೆ ಸಹಾಯ ಮಾಡಿದ ಮಹನೀಯರನೇಕರು ಸರ್. ಎಂ. ವಿಶ್ವೇಶ್ವರಯ್ಯ, ಸರದಾರ್ ಎಂ ಕಾಂತರಾಜೇ ಅರಸು, ರಾಜಮಂತ್ರಪ್ರವೀಣ ಹೆಚ್ ವಿ. ನಂಜುಂಡಯ್ಯ, ರಾವ್ ಬಹದ್ದೂರ್ ಎಂ. ಶಾಮರಾವ್, ಆರ್. ರಘುನಾಥ ರಾವ್, ಎಂ. ಎಸ್ ಪುಟ್ಟಣ್ಣ, ಕೆ. ಪಿ. ಪುಟ್ಟಣ್ಣ ಶೆಟ್ಟಿ, ಎಂ. ಕೆ. ವೆಂಕಟಕೃಷ್ಣಯ್ಯ, ಹೆಚ್. ಲಿಂಗರಾಜ ಅರಸು, ಕರ್ಪೂರ ಶ್ರೀನಿವಾಸ ರಾವ್, ಎ. ಎಸ್. ಅಚ್ಯುತ ರಾವ್, ಬಿ. ಕೃಷ್ಣಪ್ಪ, ಆರ್. ನರಸಿಂಹಾಚಾರ್ಯ, ಚೆ. ವಾಸುದೇವಯ್ಯ, ಕವಿತಿಲಕ ಅಯ್ಯಾ ಶಾಸ್ತ್ರಿ, ಮುದವೀಡು ಕೃಷ್ಣರಾಯ, ಕೆರೂರು ವಾಸುದೇವಾಚಾರ್ಯ, ಹುರುಳಿ ಭೀಮರಾಯ, ಆಲೂರು ವೆಂಕಟರಾಯರು – ಇವರು ಅಂಥವರಲ್ಲಿ ಕೆಲವರು. ಇವರಲ್ಲದೆ ಆ ಸಭೆಗಳಲ್ಲಿ ಭಾಗಿಗಳಾಗಿದ್ದ ಎಲ್ಲರೂ ಒಂದೇ ಕೊರಳಿನಿಂದ ಇಂಥ ಪರಿಷತ್ತಿನ ಸ್ಥಾಪನೆಗೆ ಸಮರ್ಥನೆ ನೀಡಿದರು. ಈ ಸಭೆಯಲ್ಲಿ ಈ ಪರಿಷತ್ತು ಮೈಸೂರಿಗೆ ಮಾತ್ರ ಅನ್ವಯಿಸಬಾರದೆಂದೂ ಒಟ್ಟು ಕರ್ನಾಟಕ ದೇಶಕ್ಕೆ ಪ್ರತಿನಿಧಿಯಾಗಿರಬೇಕೆಂದು ನಿಶ್ಚಯವಾಯಿತು.

ಪರಿಷತ್ತು ಹುಟ್ಟಿ ಈ ವರ್ಷಕ್ಕೆ ಅರುವತ್ತೇಳು ವರ್ಷಗಳು ತುಂಬಿತು. ಅದು ತನ್ನ ಚಿನ್ನದ ಹಬ್ಬವನ್ನೂ ವಜ್ರಮಹೋತ್ಸವವನ್ನೂ ಆಚರಿಸಿದೆ. ಅದು ಹುಟ್ಟಿದಾಗ ಹೊಂದಿದ್ದ, ಎಲ್ಲ ಕನ್ನಡನಾಡನ್ನೂ ಪ್ರತಿನಿಧಿಸುವ ಅಧಿಕಾರವನ್ನು ಇಂದಿನವರೆಗೂ ಕಾಪಾಡಿಕೊಂಡು ಬಂದಿದೆ.

ಪರಿಷತ್ತು ಸಂಸ್ಥೆಯಾದ ಮೇಲೂ ಅದಕ್ಕೆ ಒಂದು ಕಟ್ಟಡವಿಲ್ಲದೆ ಅನೇಕ ವರ್ಷಗಳು ಬಾಡಿಗೆಯ ಕಟ್ಟಡಗಳಲ್ಲಿ ಇರಬೇಕಾಯಿತು. ಈ ಬಾಡಿಗೆಯ ಕಟ್ಟಡ ಹೇಗಿತ್ತು ಎಂಬುದರ ರೀತಿಯನ್ನು ತೋರಿಸುವುದಕ್ಕೆ ದಿ. ಬಿ. ಜಿ. ಎಲ್. ಸ್ವಾಮಿಯವರು ಒಂದು ಚಿತ್ರವನ್ನೇ ಬಿಡಿಸಿ ತೋರಿಸಿದ್ದಾರೆ.

ಶ್ರೀ ಕೃಷ್ಣರಾಜ ಪರಿಷನ್ಮಂದಿರ ಎಂಬ ಕಟ್ಟಡ ಎದ್ದು ನಿಲ್ಲಬೇಕಾದರೆ ಅನೇಕರ ಉದಾರ ಸಹಾಯ ಅಗತ್ಯವಾಗಿತ್ತು. ಹೀಗೆ ದಾನಮಾಡಿದವರನ್ನು ನೆನೆಯುವುದು ಸೂಕ್ತ. ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಕರ್ಪೂರ ಶ್ರೀನಿವಾಸರಾಯರು ಮಾಡಿದ ಪ್ರಯತ್ನದ ಫಲವಾಗಿ ಶ್ರೀ ಕೃಷ್ಣರಾಜ ಒಡೆಯರು ೫೦೦೦ ರೂಪಾಯಿಗಳನ್ನು ಶ್ರೀಮದ್ಯುವರಾಜರು ೩೦೦೦ ರೂಪಾಯಿಗಳನ್ನು ಶ್ರೀ ಎಂ. ಕಾಂತರಾಜ ಅರಸನವರು ೫೦೦೦ ರೂಪಾಯಿಗಳನ್ನು ಕೊಟ್ಟರು. ಪರಿಷತ್ತು ಸ್ವಂತವಾಗಿ ೩೦೦೦ ರೂಪಾಯಿಗಳನ್ನು ಕೂಡಿಸಿತು. ಸರ್. ಮಿರ್ಜಾ ಇಸ್ಮಾಯಿಲ್ ಅವರು ದಿವಾನರಾಗಿದ್ದಾಗ ಪರಿಷತ್ತಿಗೆ ಈಗಿರುವ ನಿವೇಶನವನ್ನು ಉಚಿತವಾಗಿ ಕೊಡಿಸಿ ಸರಕಾರದಿಂದ ೧೬೦೦೦ ರೂಪಾಯಿಗಳ ಸಹಾಯವನ್ನು ಒದಗಿಸಿಕೊಟ್ಟರು. ಹೀಗೆ ಕರ್ಪೂರ ಶ್ರೀನಿವಾಸರಾಯರ ನೇತೃತ್ವದಲ್ಲಿ ಇಂಜನೀಯರ್ ಶ್ರೀಕಾಡೋಣಿರಾಯರ ಮೇಲ್ವಿಚಾರಣೆಯಲ್ಲಿ ಶ್ರೀ ಕೃಷ್ಣರಾಜ ಪರಿಷನ್ಮಂದಿರವು ೧೯೩೩ರಲ್ಲಿ ಸಿದ್ಧವಾಯಿತು.

ಈಚೆಗೆ ಸುವರ್ಣಮಹೋತ್ಸವದ ಕಟ್ಟಡವೂ ವಜ್ರಮಹೋತ್ಸವದ ಕಟ್ಟಡವೂ ಲಕ್ಷಾಂತರ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣವಾಗಿ ಅವೆರಡು ಕಟ್ಟಡಗಳ ಮಧ್ಯೆ ಶ್ರೀ ಕೃಷ್ಣರಾಜ ಪರಿಷನ್ಮಂದಿರವು ಇರುತ್ತಿರುವಂತೆ ಕಾಣುತ್ತದೆ. ಆದರೆ ಆ ಸುಂದರವಾದ ಕಟ್ಟಡದ ಇತಿಹಾಸವನ್ನು ಬಲ್ಲವರಿಗೆ ಆ ಮಂದಿರ ಜಾತಕ ಫಲದಿಂದ ಈ ಎರಡು ಕಟ್ಟಡಗಳೂ ಎದ್ದು ನಿಲ್ಲುವುದು ಸಾಧ್ಯವಾಗಿದೆ ಎಂಬುದರ ಅರಿವಾಗದಿರದು. ಈಗಂತೂ ಪರಿಷತ್ತಿಗೆ ಸ್ಥಳಾವಕಾಶದ ಕೊರತೆ ಇಲ್ಲ. ಒಂದು ದೊಡ್ಡ ರಂಗಮಂದಿರದ ಸೃಷ್ಟಿಯಾದರೆ ಕನ್ನಡದ ಎಲ್ಲ ಕಾರ್ಯಗಳನ್ನು ಒಂದೆ ಸ್ಥಳದಿಂದ ನಿರ್ದೇಶಿಸಿ ಕೊಂಡುಹೋಗುವುದು ಸಾಧ್ಯವಾಗುತ್ತದೆ.

ಪರಿಷತ್ತಿನ ಅಂಗರಚನೆ ಕಾಲಕ್ರಮದಲ್ಲಿ ಅನೇಕ ಬದಲಾವಣೆಗಳನ್ನು ಪಡೆದಿದೆ. ಮೊದಲನೆಯದಾಗಿ ಕರ್ನಾಟಕ ಸಾಹಿತ್ಯ ಪರಿಷತ್ತು ಈಗ ಕನ್ನಡ ಸಾಹಿತ್ಯ ಪರಿಷತ್ತಾಗಿದೆ. ಈಗ ಕರ್ನಾಟಕದ ಏಕೀಕರಣವಾದ ಮೇಲೆ ಎಲ್ಲ ಜಿಲ್ಲೆಗಳಿಗೂ ಕಾರ್ಯ ಸಮಿತಿಯಲ್ಲಿ ಸ್ಥಾನ ಸಿಕ್ಕಿ ಅದು ವಿಸ್ತಾರಗೊಂಡಿದೆ. ಇಂದಿನ ವಿಸ್ತಾರವಾದ ಪ್ರಾತಿನಿಧ್ಯವುಳ್ಳ ಪರಿಷತ್ತಿನ ಅಂಗರಚನೆಯಿಂದ ಏಕೀಕರಣದ ಪರಿಣಾಮಗಳನ್ನು ಸಾರ್ವಜನಿಕವಾಗಿ ಅಳೆಯುವುದೂ ಅಭಿವೃದ್ಧಿ ಪಡಿಸುವುದೂ ಸಾಧ್ಯವಾಗಿದೆ. ಪರಿಷತ್ತಿನ ಕಾರ್ಯವ್ಯಾಪ್ತಿ ಈಗ ತುಂಬ ವಿಸ್ತಾರ ಗೊಂಡಿದೆ. ಕನ್ನಡದ ಯಾವ ಕಾರ್ಯಕ್ಕೂ ಜನರೂ ಸರ್ಕಾರವೂ ಪರಿಷತ್ತಿನ ಸಹಕಾರವನ್ನೂ ಕೋರುವ ಮಟ್ಟಕ್ಕೆ ಅದು ಬೆಳೆದಿರುವುದು ಸಂತಸದ ವಿಷಯ.

ಪರಿಷತ್ತು ಸಾಮಾನ್ಯವಾಗಿ ವಾರ್ಷಿಕ ಸಾಹಿತ್ಯದ ಸಮ್ಮೇಳನಗಳನ್ನು ಏರ್ಪಡಿಸಿ ಕನ್ನಡ ಹಿರಿಯ ವಿದ್ವಾಂಸರನ್ನೂ ಕವಿಗಳನ್ನೂ ಲೇಖಕರನ್ನೂ ಗೌರವಿಸುತ್ತಾ ಇದೆ. ಈ ಸಮ್ಮೇಳನಗಳು ದೇಶದ ವಿವಿಧ ಪ್ರಮುಖ ನಗರಗಳಲ್ಲಿ ಏರ್ಪಾಟಾಗುವುದರಿಂದ ಆಯಾ ಪ್ರದೇಶದ ಜನರಿಗೆ ಸಮ್ಮೇಳನಕ್ಕೆ ಬರುವ ಅನೇಕ ಸಾಹಿತಿಗಳ ಸಂದರ್ಶನವೂ ಸಾಹಿತಿಗಳ ಪರಸ್ಪರ ವಿಚಾರ ವಿನಿಮಯವೂ ಸಾಧ್ಯವಾಗಿ ಸಾಹಿತ್ಯಕಾರ್ಯಕ್ಕೆ ಇದರಿಂದ ತುಂಬ ಪ್ರಯೋಜನವಾಗುತ್ತಿದೆ. ಇಲ್ಲಿಯ ವರೆಗೆ ೫೪ ಸಮ್ಮೇಳನಗಳು ಜರುಗಿ ವಿದ್ವತ್ಕಾರ್ಯಕ್ಕೆ ಪ್ರೋತ್ಸಾಹ ದೊರಕಿದೆ. ಪರಿಷತ್ತಿನ ಸಮ್ಮೇಳನಗಳಲ್ಲಿ ನಡೆದ ಗೋಷ್ಠಿಗಳ ಕಾರ್ಯಕ್ರಮವು ಅನೇಕ ವೇಳೆ ಸಾಹಿತ್ಯದ ಚರಿತ್ರೆಗೆ ಪೂರಕ ವಿಷಯಗಳನ್ನು ಒದಗಿಸಿದೆ.

ಕನ್ನಡ ಸಾಹಿತ್ಯ ಪರೀಕ್ಷೆಗಳು, ಗಮಕ ಶಿಕ್ಷಣ, ಗಮಕ ಪ್ರೌಢ ಶಿಕ್ಷಣ, ಶೀಘ್ರಲಿಪಿ, ಬೆರಳಚ್ಚುಗಾರರ ತರಬೇತಿ, ಪ್ರತಿಕೋದ್ಯಮ ಶಿಕ್ಷಣ, ಜಾನಪದ ಕಲೆಯ ಸಮ್ಮೇಳನ, ಕೀರ್ತನಕಾರರ ಸಮ್ಮೇಳನ, ಪತ್ರಿಕಾಕರ್ತರ ಸಮ್ಮೇಳನ, ಕನ್ನಡ ಸಂಘಗಳ ಸಮ್ಮೇಳನ ಇತ್ಯಾದಿಯಾಗಿ ಅನೇಕ ಕಾರ್ಯಗಳು ಪರಿಷತ್ತಿನ ವ್ಯಾಪ್ತಿಗೆ ಸೇರಿವೆ.

ಪರಿಷತ್ತಿನಲ್ಲಿ ತುಂಬ ಉಪಯುಕ್ತ ಗ್ರಂಥಗಳ ಒಂದು ಹಳೆಯ ಗ್ರಂಥಭಂಡಾರವಿದೆ. ಸಂಶೋಧಕರಿಗೂ ಸಾಮಾನ್ಯ ವಾಚಕರಿಗೂ ಇದರಿಂದ ಬಹಳ ಪ್ರಯೋಜನವಾಗುತ್ತಿದೆ.

ಕನ್ನಡನಾಡಿನಲ್ಲಿ ಊರೂರುಗಳಲ್ಲಿಯೂ ಇರುವ ಕನ್ನಡ ಸಂಘಗಳೊಡನೆ ಪರಿಷತ್ತು ಸಂಪರ್ಕವನ್ನು ಇಟ್ಟುಕೊಂಡಿದೆ.

ಪರಿಷತ್ತಿನ ಪ್ರಭಾವದಿಂದ ಬೆಳೆದ ೧೪ ಇಂಥ ಸಂಘಗಳಲ್ಲಿ ಮೂರು ಸಂಘಗಳ ಬಗ್ಗೆ ವಿಶೇಷವಾಗಿ ಬರೆಯುವುದು ಯುಕ್ತವಾಗಿದೆ.

**ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ**

ಈ ಸಂಘವನ್ನು ೧೯೧೮ರಲ್ಲಿ ಸ್ಥಾಪಿಸಿದ ಕೀರ್ತಿ ದಿ. ಎ. ಆರ್. ಕೃಷ್ಣ ಶಾಸ್ತ್ರಿಗಳಿಗೆ ಸಲ್ಲಬೇಕು. ವಿದ್ಯಾರ್ಥಿಗಳಲ್ಲಿ ಕನ್ನಡದ ಬಗ್ಗೆ ಅಭಿಮಾನವನ್ನು ಬೆಳೆಸಿ ಅವರಲ್ಲಿ ಲೇಖನ ಕಲೆಯನ್ನೂ ಅಭಿವೃದ್ಧಿಗೊಳಿಸುವ ಉದ್ದೇಶದಿಂದ ಸ್ಥಾಪಿತವಾದ ಈ ಸಂಘದ ಕಾರ್ಯಗಳಲ್ಲಿ 'ಪ್ರಬುದ್ಧ ಕರ್ಣಾಟಕ'ದ ಪ್ರಕಟನೆ ಮುಖ್ಯವಾದುದು. ಈ ಪತ್ರಿಕೆಯೂ ಈಗ ಮೈಸೂರು ವಿಶ್ವವಿದ್ಯಾನಿಲಯದ ಮುಖಪತ್ರಿಕೆಯಾಗಿ ಸೇವೆ ಸಲ್ಲಿಸುತ್ತಾ ಇದೆ. ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾದ ಲೇಖನಗಳು, ಕವನಗಳು, ಕತೆಗಳು, ನಾಟಕಗಳು ಇವುಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸುವ ಕಾರ್ಯವನ್ನು ಈ ಸಂಘ ಮಾಡಿತು. ಡಿ.ವಿ.ಜಿ.ಯವರ ಕನ್ನಡ ಸಾಹಿತ್ಯ ಮತ್ತು ಜನಜೀವನ, ಬಿ.ಎಂ.ಶ್ರೀ.ಯವರ 'ಗದಾಯುದ್ಧ ನಾಟಕಂ' ಮತ್ತು "ಅಶ್ವತ್ಥಾಮನ್", ಮಾಸ್ತಿಯವರ "ಸುಬ್ಬಣ್ಣ" ಮುಂತಾದವು ಮುಖ್ಯವಾದವು. ಸುಮಾರು ೫೦ ಗ್ರಂಥಗಳನ್ನು ಈ ಸಂಘ ಪ್ರಕಟಿಸಿದೆ. ಎ. ಆರ್. ಕೃಷ್ಣಶಾಸ್ತ್ರಿಗಳ ಕಾರ್ಯವನ್ನು ದಕ್ಷತೆಯಿಂದ ಮುಂದುವರಿಸಿಕೊಂಡು ಹೋದವರು ದಿ. ಜಿ.ಪಿ. ರಾಜರತ್ನಂ. ಈಗ ಬೆಂಗಳೂರು ವಿಶ್ವವಿದ್ಯಾನಿಲಯದ ಪ್ರಕಟನ ಶಾಖೆಯಲ್ಲಿ ಅದು ಐಕ್ಯವಾಗಿ ಹೋಗಿದೆ.

**ಮಹಾರಾಜ ಕಾಲೇಜಿನ ಕರ್ನಾಟಕ ಸಂಘ**

೧೯೨೭ರಲ್ಲಿ ಈ ಸಂಘ ಸ್ಥಾಪಿತವಾಯಿತು. ಈ ಸಂಘವೂ ಯುವಕವಿಗಳ "ಕಿರಿಯ ಕಾಣಿಕೆ" (೧೯೨೮) ಮತ್ತು ತಳಿರು (೧೯೩೦) ಎಂಬ ಕವನಸಂಗ್ರಹಗಳನ್ನು ಪ್ರಕಟಿಸಿದೆ. ಈ ಕಾರ್ಯದಲ್ಲಿ ಪ್ರೊ. ಬಿ. ಎಸ್. ವೆಂಕಣ್ಣಯ್ಯನವರ ಪ್ರೋತ್ಸಾಹ ಅಧಿಕವಾಗಿತ್ತು. "ಕುಮಾರವ್ಯಾಸ ಪ್ರಶಸ್ತಿ" (೧೯೪೦) ಎಂಬ ಉತ್ತಮ ವಿಮರ್ಶನ ಗ್ರಂಥವನ್ನು ಪ್ರಕಟಿಸಿದ ಹಿರಿಮೆ ಈ ಸಂಘಕ್ಕೆ ಸಲ್ಲುತ್ತದೆ.

ಈ ಎರಡು ಸಂಘಗಳ ಪ್ರಭಾವದಿಂದ ನಾಡಿನ ಎಲ್ಲ ಶಾಲಾ ಕಾಲೇಜುಗಳಲ್ಲಿಯೂ ಕರ್ನಾಟಕ ಸಂಘಗಳು ಸ್ಥಾಪಿತವಾಗಿ ವಿದ್ಯಾರ್ಥಿಗಳಲ್ಲಿ ಸಾಹಿತ್ಯಾಸಕ್ತಿಯನ್ನು ಬೆಳೆಸಲು ಸಹಾಯ ಮಾಡಿವೆ.

**ಶಿವಮೊಗ್ಗ ಕರ್ನಾಟಕ ಸಂಘ**

ಇದು ಸ್ಥಾಪಿತವಾದದ್ದು ೧೯೩೦ರಲ್ಲಿ. ಈ ನಗರದ ಕೆಲವು ಪ್ರಮುಖರು ಸ್ವತಃ ಸಾಹಿತಿಗಳಾಗಿದ್ದು ಇಂಥ ಸಂಘದ ಪ್ರಾಧಾನ್ಯವನ್ನು ಬಲ್ಲವರಾಗಿದ್ದರು. ಇದಲ್ಲದರ ಶ್ರಮದ ಫಲವಾಗಿ ಈ ಐವತ್ತು ವರ್ಷಗಳಲ್ಲಿ ಈ ಸಂಘ ದೊಡ್ಡ ಪ್ರಮಾಣದ ಕೆಲಸ ಮಾಡಿದೆ. ಕೆ. ವಿ. ಪುಟ್ಟಪ್ಪನವರ "ರಕ್ತಾಕ್ಷಿ". "ಪಾಂಚಜನ್ಯ", ದಿ. ಜಿ. ಪಿ. ರಾಜರತ್ನಂ ಅವರ "ಗಂಡುಗೊಡಲಿ", ನಾ. ಕಸ್ತೂರಿಯವರ "ಪಾತಾಳದಲ್ಲಿ ಪಾಪಚ್ಚಿ" ಎ. ಎನ್. ಮೂರ್ತಿಯವರ "ಹಗಲುಗನಸುಗಳು" ಮುಂತಾದ ಗ್ರಂಥ ಪ್ರಕಟನೆಯನ್ನೂ ಮಾಡಿದೆ. ಎರಡು ಸಲ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿದೆ. ಈ ಸಂಘಕ್ಕೆ ಹೊಸೂಡಿ ವೆಂಕಟಶಾಸ್ತ್ರಿಗಳು ಸುಂದರವಾದ ಕಟ್ಟಡವನ್ನು ಕಟ್ಟಿಸಿಕೊಟ್ಟಿದ್ದಾರೆ.

ಹೀಗೆಯೇ ಮಂಡ್ಯ, ಚಿಕ್ಕಮಗಳೂರು, ನಾಗಪುರ, ಗುಲ್ಬರ್ಗ, ರಾಯಚೂರು, ಸುರಪುರ, ರಂಗಂಪೇಟೆ ಮುಂತಾಗಿ ದೇಶದ ಆದ್ಯಂತ ಅನೇಕ ಕರ್ನಾಟಕ ಸಂಘಗಳು ಕೆಲಸ ಮಾಡುತ್ತಿವೆ.

ಕನ್ನಡ ಸಾಹಿತ್ಯಪರಿಷತ್ತಿನಲ್ಲಿ ನಡೆದ ಕಾರ್ಯಗಳಿಂದ ಇಂಥ ಸಂಘಗಳು ಸ್ಥಾಪಿತವಾಗಲು ಪರೋಕ್ಷವಾಗಿ ಪ್ರೋತ್ಸಾಹ ದೊರಕಿತು. ಪರಿಷತ್ತು "ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ" ಎಂಬ ದ್ವೈವಾರ್ಷಿಕ ಪತ್ರಿಕೆಯನ್ನೂ, "ಕನ್ನಡನುಡಿ" ಎಂಬ ಪಕ್ಷ ಪತ್ರಿಕೆಯನ್ನೂ ಪ್ರಕಟಿಸುತ್ತಿದೆ. ಹಳಗನ್ನಡದ ಅನೇಕ ಗ್ರಂಥಗಳು ಹೊಸಗನ್ನಡಕ್ಕೆ ಅನುವಾದವಾಗಿವೆ. ಈಚೆಗೆ ಪರಿಷತ್ತಿನಿಂದ ಪ್ರಕಟವಾಗುತ್ತಿರುವ ಗ್ರಂಥಗಳ ಸಂಖ್ಯೆ ಹೆಚ್ಚಿದೆ. ಈ ಪುಸ್ತಕಗಳ ಬೆಲೆಯೂ ಕಡಿಮೆಯಾಗಿದೆ. ಈ ದೆಸೆಯಲ್ಲಿ ಸರಕಾರದ ಸಹಾಯವನ್ನೂ ನೆನೆಯುವುದು ಅಗತ್ಯ.

ದಿ| ಬಿ. ಎಂ. ಶ್ರೀಕಂಠಯ್ಯನವರು ದಾನಮಾಡಿದ ೫೦೦೦ ರೂಪಾಯಿಗಳಿಂದ ಸ್ಥಾಪಿತವಾದ ಅಚ್ಚುಕೂಟವು ಇಂದು ಅವರ ಹೆಸರನ್ನೇ ಪಡೆದಿದೆ. ಈಗ ಅದು ಅನೇಕ ಲಕ್ಷ ರೂಪಾಯಿ ಬೆಲೆಬಾಳುವ ಯಂತ್ರಸಾಮಗ್ರಿಗಳನ್ನೂ ಇತರ ಪರಿಕರಗಳನ್ನೂ ಹೊಂದಿದೆ.

ಕನ್ನಡನಾಡಿನ ಏಕೀಕರಣಕ್ಕೂ ಕನ್ನಡನಾಡಿಗೆ ಕರ್ನಾಟಕ ಎಂಬ ಹೆಸರು ಬರುವುದಕ್ಕೂ ಪರಿಷತ್ತು ಹೋರಾಡಿ ಯಶಸ್ಸನ್ನು ಗಳಿಸಿದೆ. ಈಗ ಕರ್ನಾಟಕದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಸಶಕ್ತವಾದ ಸಾಹಿತ್ಯ ಪ್ರಪಂಚದ ಮುಖವಾಣಿಯಾಗಿ ಶೋಭಿಸುತ್ತದೆ.

**ಮಿಥಿಕ್ ಸೊಸೈಟಿ**

ಈ ಸಂಸ್ಥೆಯನ್ನು ಪ್ರಾರಂಭಿಸಿದ ವಿದ್ವಾಂಸ ಎಫ್. ಹೆಚ್. ರಿಚ್‌ರ್ಡ್ಸ್ ಎಂಬವರು. ಅವರು ೧೯೯೯ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ, ಬೆಂಗಳೂರು ದಂಡಿನ ಪ್ರದೇಶದ ಜಿಲ್ಲೆಗೆ ಕಲೆಕ್ಟರ್ ಎಂಬ ಅಧಿಕಾರಿಯಾಗಿದ್ದರು. ಭಾರತೀಯರು ಬಾಳುವ ನಾಗರಿಕ ಜೀವನದ ಚರಿತ್ರೆ, ಅದರ ಮೂಲ ಮತ್ತು ಬೆಳವಣಿಗೆಗಳನ್ನು ಗುರುತಿಸಿ ಆ ತಿಳುವಳಿಕೆಯ ಪ್ರಯೋಜನವನ್ನು ಜನರಿಗೆ ಹಂಚಬೇಕೆಂಬುದು ಅವರ ಉದ್ದೇಶವಾಗಿತ್ತು. ಈ ಕಾರ್ಯದಲ್ಲಿ ಅನೇಕ ಐರೋಪ್ಯ ವಿದ್ವಾಂಸರೂ, ಭಾರತೀಯ ವಿದ್ವಾಂಸರೂ ಅವರಿಗೆ ಸಹಾಯ ಮಾಡಿದರು. ೫.೫.೧೯೦೯ ರಂದು ಅವರ ಮನೆಯಲ್ಲಿ ಕೆಲವರು ವಿದ್ವಾಂಸರು ಸೇರಿ ಈ ಸಂಸ್ಥೆ ಸ್ಥಾಪಿಸಿದರು. ದಕ್ಷಿಣಭಾರತದ ಚರಿತ್ರೆ, ಮಾನವಶಾಸ್ತ್ರ, ಮತಗಳು ಮುಂತಾದ ವಿಷಯಗಳನ್ನು ಕುರಿತು ಉಪನ್ಯಾಸಗಳನ್ನು ಮಾಡಿಸಿ, ಅವುಗಳನ್ನು ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟಿಸುವುದು ಅವರ ಉದ್ದೇಶವಾಗಿತ್ತು.

ಈ ಸಂಸ್ಥೆಯ ಪ್ರಾರಂಭ ಕಾಲದಲ್ಲಿ ಸೈಂಟ್‌ಪ್ಯಾಟ್ರಿಕ್ ಚರ್ಚಿಗೆ ಸಂಬಂಧಪಟ್ಟ ರೆವೆರೆಂಡ್ ಫಾದರ್ ಟಾಬರ್ಡ್ ಎಂ

ಬವರೂ ಪ್ರಸಿದ್ಧ ಚರಿತ್ರಕಾರರಾದ ಪ್ರೊ. ಎಸ್. ಕೃಷ್ಣಸ್ವಾಮಿ ಐಯ್ಯಂಗಾರ್ಯರೂ ಈ ಸಂಸ್ಥೆಗೆ ಆಧಾರವಾಗಿ ನಿಂತರು. ಸ್ವಲ್ಪ ಕಾಲದಲ್ಲಿಯೇ ಟಾಬರ್ಟ್ ಅವರು ಸಂಸ್ಥೆಯ ಅಧ್ಯಕ್ಷರಾಗಿ ೧೯೨೮ರ ತನಕ ಅದನ್ನೂ ನಡೆಸಿಕೊಂಡು ಬಂದರು. ಸಂಸ್ಥೆಗೂ ಅವರಿಗೂ ಅವಿನಾಭಾವವೆಂಬಂತೆ ಅವರು ನಡೆದುಕೊಂಡರೆಂದು ಉಲ್ಲೇಖಿಸಿದೆ.

ಇಂದಿನ ಡ್ಯಾಲಿಮಮೋರಿಯಲ್ ಎಂಬ ಸುಂದರವಾದ ಕಟ್ಟಡವನ್ನೂ ಕಟ್ಟಿ ೧೯೧೭ರಲ್ಲಿ ಅದರಲ್ಲಿ ಸಂಸ್ಥೆಯನ್ನೂ ಸ್ಥಾಪಿಸುವುದಕ್ಕೆ ಫಾದರ್ ಟಾಬರ್ಟ್ ಕಾರಣರು. ಮೈಸೂರಿನಲ್ಲಿ ರೆಸಿಡೆಂಟ್ ಆಗಿದ್ದ ಸರ್. ಹೂ ಡ್ಯಾಲಿ ಎಂಬುವವರ ಪ್ರಭಾವದಿಂದ ಕೇಂದ್ರ ಸರಕಾರದಿಂದಲೂ ಮೈಸೂರು ಸರಕಾರದಿಂದಲೂ ತಕ್ಕಷ್ಟು ಸಹಾಯವೊದಗಿ ಈ ಸಂಸ್ಥೆ ಶಾಶ್ವತವಾದ ಕಾರ್ಯಕ್ರಮಗಳನ್ನು ಕೈಗೊಳ್ಳುವುದಕ್ಕೆ ಅವಕಾಶವಾಯಿತು. ಆ ಕಟ್ಟಡಕ್ಕೆ ಅವರ ಹೆಸರನ್ನೇ ಇಡಲಾಗಿದೆ. ಅವರು ಸಂಸ್ಥೆಯ ಅಧ್ಯಕ್ಷರಾಗಿಯೂ ಇದ್ದರು.

ಈ ಸಂಸ್ಥೆಯಲ್ಲಿ ಅನೇಕ ವಿದ್ವಾಂಸರು ದುಡಿದಿದ್ದಾರೆ. ರಾವ್‌ಬಹದ್ದೂರ್ ಎಂ. ಶಾಮರಾವ್, ಶ್ರೀ ವಿ. ರಾಮನಾಥನ್ ಶ್ರೀ ಎಸ್. ಶ್ರೀಕಂಠಯ್ಯ, ಎನ್. ಎಸ್. ಸುಬ್ಬರಾವ್, ಆರ್. ನರಸಿಂಹಾಚಾರ್ಯ, ಪ್ರೊ. ರಾಧಾಕುಮುದ ಮುಖರ್ಜಿ, ಸಿ. ಹಯವದನರಾವ್, ಡಾ. ಹೆಚ್. ಕೃಷ್ಣಶಾಸ್ತ್ರಿ, ಡಾ. ಎ. ಕೃಷ್ಣ ಮುಂತಾದವರ ಹೆಸರುಗಳನ್ನು ಉಲ್ಲೇಖಿಸಬೇಕು.

ಸಂಸ್ಥೆಯ ಸದಸ್ಯರಿಂದಲೇ ದಾನವಾಗಿ ದೊರೆತ ಅನೇಕ ಅಪರೂಪದ ಪುಸ್ತಕಗಳಿಂದ ಪ್ರಾರಂಭವಾದ ಅಪೂರ್ವ ಗ್ರಂಥಗಳಿರುವ ಈ ಒಂದು ಪುಸ್ತಕ ಭಂಡಾರವು ಇಂದಿಗೂ ವಿದ್ವಾಂಸರಿಗೆ ಒಂದು ವರದಾನವಾಗಿದೆ.

ಈ ಸಂಸ್ಥೆಯು ಪ್ರಕಟಿಸುತ್ತಿರುವ ಮಿಥಿಕ್ ಸೊಸೈಟಿಯ ತ್ರೈಮಾಸಿಕ ಪತ್ರಿಕೆಯು ಅನೇಕ ವಿದ್ವಾಂಸರು ಬರೆದ ಪ್ರೌಢವಾದ ಲೇಖನಗಳನ್ನು ಪ್ರಕಟಿಸುತ್ತಾ ಇದೆ. ಚರಿತ್ರೆ, ಮಾನವಶಾಸ್ತ್ರ, ಮತ, ಸಾಹಿತ್ಯ, ಕಲೆಗಳು, ಜಾನಪದ ವಿಷಯಗಳು, ಪುಸ್ತಕ ವಿಮರ್ಶೆ, ಪತ್ರವ್ಯವಹಾರ ಮುಂತಾದ ಪಾಂಡಿತ್ಯ ಪೂರ್ಣ ವಿಷಯಗಳು ಅದರಲ್ಲಿ ಪ್ರಕಟವಾಗಿದೆ. ಇಂದಿಗೂ ಕ್ಯೂ.ಜೆ.ಎಮ್.ಎಸ್. ಎಂಬುದು ಆಧಾರ ಭೂತವಾದ ಪತ್ರಿಕೆಯಾಗಿದೆ. ಈ ಹಿಂದೆ ಅದರಲ್ಲಿ ಲೇಖನಗಳನ್ನು ಬರೆದಿರುವವರ ಪಟ್ಟಿಯನ್ನು ತಯಾರಿಸಿದರೆ ಭಾರತದವರ, ವಿದೇಶೀಯರ ಸಂಖ್ಯೆಯೂ ಅವರ ಸ್ಥಾನಮಾನಗಳೂ ಯಾವ ಪತ್ರಿಕೆಗಾದರೂ ಗೌರವ ತರುವಂಥದೆಂಬುದು ಪರಿಚಯವಾಗುತ್ತದೆ.

ಕೆಲವು ವರ್ಷಗಳ ಕಾಲ ನಿಷ್ಕ್ರಿಯವಾಗಬೇಕಾಗಿ ಬಂದ ಈ ಸಂಸ್ಥೆ ಈಗ ಮತ್ತೆ ಚೇತರಿಸಿಕೊಂಡು ಉತ್ತಮ ಕಾರ್ಯವನ್ನು ಮುಂದುವರಿಸುತ್ತಿದೆ. ಈಗ ಅದು "ಎನ್‌ಸೈಕ್ಲೋಪಿಡಿಯ ಆಫ್ ಇಂಡಿಯನ್ ಹಿಸ್ಟರಿ ಅಂಡ್ ಕಲ್ಚರ್" ಎಂಬ ಹೆಸರಿನಲ್ಲಿ ಪ್ರತಿ ಸಂಪುಟದಲ್ಲಿ ಒಂದು ಸಾವಿರ ಪುಟಗಳುಳ್ಳ ೧೨ ಸಂಪುಟಗಳ ವಿಶ್ವಕೋಶವನ್ನು ಪ್ರಕಟಿಸುವ ಕಾರ್ಯವನ್ನೂ ಕೈಗೊಂಡಿದೆ. ಇದು ಪ್ರಕಟವಾದಾಗ ಅನೇಕ ಅಸಂಬದ್ಧ ವಿಷಯಗಳೂ ಪೂರ್ವಗ್ರಹ ಪೀಡಿತವಾದ ಅಭಿಪ್ರಾಯಗಳೂ ನಾಶವಾಗಿ ಒಂದು ಆಧಾರಭೂತವಾದ ಸಂದರ್ಭ ಗ್ರಂಥ ಸಂಪುಟವು ನಮಗೆ ದೊರೆತಂತಾಗುತ್ತದೆ.

ಈಚೆಗೆ ಗ್ರಂಥ ಭಂಡಾರದಲ್ಲಿ ಏರ್ಪಾಟು ಸರಿಯಾಗಿದ್ದು ಸಂಸ್ಥೆಯ ಪ್ರಯೋಜನ ಹೆಚ್ಚುತ್ತಿದೆ. ಅನೇಕ ವಿದ್ವಾಂಸರಿಗ ಆಶ್ರಯವಾದ ಈ ಸಂಸ್ಥೆಯ ಚರಿತ್ರೆಯು ಕನ್ನಡನಾಡಿನ ಚರಿತ್ರೆಯಲ್ಲಿ ಒಂದು ರೋಮಾಂಚಕಾರಿಯಾದ ಅಧ್ಯಾಯವಾಗಿದೆ. ಇಂದಿನ ಅಧಿಕಾರಿಗಳ ಕಾರ್ಯೋತ್ಸಾಹವು ಮೆಚ್ಚಿಕೆಗೆ ಅರ್ಹವಾಗಿದೆ.

**ಗೋಖಲೆ ಸಾರ್ವಜನಿಕ ಸಂಸ್ಥೆ**

ಬೆಂಗಳೂರಿನ ನಾಗರಿಕರಿಗೆ ತುಂಬ ಪರಿಚಿತವಾಗಿರುವ ಮತ್ತೊಂದು ಸಂಸ್ಥೆಯೆಂದರೆ ಗೋಖಲೆ ಸಾರ್ವಜನಿಕ ಸಂಸ್ಥೆ. ಇದನ್ನು ಸ್ಥಾಪಿಸುವ ಯೋಚನೆ ಈ ಶತಮಾನದ ಆದಿಭಾಗದಿಂದಲೇ ಕೆಲವರ ಮನಸ್ಸಿನಲ್ಲಿ ಮೂಡಿತ್ತಾದರೂ ಅದಕ್ಕೆ ಚಾಲನೆ ಸಿಕ್ಕಿದ್ದು ೧೯೧೫ರಲ್ಲಿ, ಗಾಂಧೀಜಿಯವರು ಬೆಂಗಳೂರಿಗೆ ಬಂದಿದ್ದಾಗ. ಅವರು ಸಾರ್ವಜನಿಕರ ಪ್ರಾರ್ಥನೆಯ ಮೇರೆಗೆ ಬೆಂಗಳೂರಿನಲ್ಲಿ ಗೋಖಲೆಯವರ ಭಾವಚಿತ್ರವನ್ನು ಅನಾವರಣ ಮಾಡಿ, ತಾವು ಗೋಖಲೆಯವರ ಶಿಷ್ಯರೆಂದೂ ಭಾರತದಲ್ಲಿ ರಾಜಕಾರಣವನ್ನು ಅಧ್ಯಾತ್ಮಕ್ಕೆ ಅಡಿಯಾಳಾಗಿರುವಂತೆ ಮಾಡುವುದು ಗೋಖಲೆಯವರ ಉದ್ದೇಶವೆಂದೂ ವಿವರಿಸಿದರು. ಆ ಸಭೆಯು ತುಂಬ ಯಶಸ್ವಿಯಾಗಿ ನಡೆದರೂ ಗೋಖಲೆ ಸಾರ್ವಜನಿಕ ಸಂಸ್ಥೆಯು ಜನ್ಮತಾಳಲು ಇನ್ನೂ ತಡೆಯ ಬೇಕಾಯಿತು. ಡಿ. ವಿ. ಗುಂಡಪ್ಪನವರು ಅನೇಕರ ಮನಸ್ಸಿನ ಹದಕ್ಕೆ ತಂದು, ವಿ. ಎಸ್. ಶ್ರೀನಿವಾಸ ಶಾಸ್ತ್ರಿಗಳಂಥವರ ಸಲಹೆಗಳನ್ನೂ ಉಪಯೋಗಿಸಿಕೊಂಡು ಮಿತ್ರರನ್ನೂ ಕೂಡಿಸಿಕೊಂಡು ಸಂಸ್ಥೆಯನ್ನು ಕಟ್ಟಬೇಕಾದರೆ ೧೯೪೫ನೆಯ ಇಸವಿಯ ತನಕ ಕಾಯ ಬೇಕಾಯಿತು. ಈ ಸಂಸ್ಥೆಯು ೭-೪-೧೯೪೫ರಲ್ಲಿ ರಿಜಿಸ್ಟರಾದರೂ ಭಾರತಕ್ಕೆ ಸ್ವಾತಂತ್ರ್ಯ ಬಂದ ೧೫-೮-೧೯೪೭ನೆಯ ತಾರೀಖು ಈ ಸಂಸ್ಥೆಯ ಕಾರ್ಯ ತ್ವರಿತವಾಗಿ ಪ್ರಾರಂಭವಾಯಿತೆನ್ನಬೇಕು.

ಸಾರ್ವಜನಿಕ ಜೀವನದಲ್ಲಿ ಶುಭ್ರತೆಯನ್ನೂ ಕಾಯುವ ಒಂದು ಜನಸಮೂಹ ಇರಬೇಕು, ಅಂಥ ಸಮೂಹವನ್ನು ತಯಾರು ಮಾಡಬೇಕೆನ್ನುವುದು ಈ ಸಂಸ್ಥೆಯ ಉದ್ದೇಶದ ಮೂಲ ದೃಷ್ಟಿಯಾದರೂ ಕಾರ್ಯಕ್ರಮದಲ್ಲಿ ಪ್ರಪಂಚದ ಉದ್ಗ್ರಂಥಗಳ ಅಭ್ಯಾಸವನ್ನು ಅಳವಡಿಸಿದ್ದುದರಿಂದ ಅದು ಒಳ್ಳೆಯ ಸಾಹಿತ್ಯ ಸಂಸ್ಥೆಯಂತೆಯೇ ಕೆಲಸ ಮಾಡಿದೆ. ಅದರ ಆಶ್ರಯದಲ್ಲಿ ಜನರು ವ್ಯಾಸಂಗ ಮಾಡಿದ ಪುಸ್ತಕಗಳಲ್ಲಿ ರಾಮಾಯಣ, ಮಹಾಭಾರತ, ಉಪನಿಷತ್ತುಗಳು, ಶಾಕುಂತಲ, ಭರ್ತೃಹರಿಯ ಶತಕಗಳೂ, ಮತಧರ್ಮಶಾಸ್ತ್ರ, ಭಗವದ್ಗೀತೆ ಮುಂತಾದ ಗ್ರಂಥಗಳು ಕೂಡಿದ್ದುವು. ಸುಮಾರು ೫೦ ಪುಸ್ತಕಗಳ ಆಳವಾದ ಅಭ್ಯಾಸ ನಡೆಯಿತು. ಅನೇಕರು ಈ ಸಭೆಗಳಲ್ಲಿ ಭಾಗವಹಿಸಿದರು. ಭಗವದ್ಗೀತೆಯ ಮೇಲೆ ಡಿ. ವಿ. ಜಿ. ಅವರು ಮಾಡಿದ ಉಪನ್ಯಾಸಗಳು "ಜೀವನ ಧರ್ಮಯೋಗ" ಎಂಬ ಹೆಸರಿನಲ್ಲಿ ಬೃಹದ್ಗ್ರಂಥವಾಗಿ ಪ್ರಕಟವಾಯಿತು. ಅದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಬಹುಮಾನ ಬಂತು.

ಗಮಕ, ಸಾಹಿತ್ಯ ಉಪನ್ಯಾಸಗಳು, ನಾಟಕ ವಾಚನ. ಸ್ಪರ್ಧೆ ಮುಂತಾಗಿ ಸಾಹಿತ್ಯ ಕಾರ್ಯದಲ್ಲಿ ಆಸಕ್ತವಾಗಿರುವ ಈ ಸಂಸ್ಥೆಗೆ ಈಗ ವಿಸ್ತಾರವಾದ ಒಂದು ಕಟ್ಟಡವಿದೆ, ದೊಡ್ಡ ಗ್ರಂಥ ಭಂಡಾರವಿದೆ. ಅಪರೂಪದ ಗ್ರಂಥಗಳು ಈ ಭಂಡಾರದಲ್ಲಿವೆ. ಇದನ್ನು ಸ್ಥಾಪಿಸಿದ ಡಿ. ವಿ. ಜಿ. ಅವರು, ಕೊನೆಯ ತನಕ ಅದರ ಕಾರ್ಯದರ್ಶಿಯಾಗಿ ದುಡಿದರು. ಅವರ ಮಾರ್ಗದರ್ಶನದಲ್ಲಿ ಈ ಸಂಸ್ಥೆ ಬೆಳೆದು ಮಲ್ಲೇಶ್ವರದಲ್ಲಿ ಒಂದು ಶಾಖೆಯನ್ನೂ ಪಡೆದಿದೆ. ಇಂದಿಗೂ ಈ ಸಂಸ್ಥೆಯ ಕಾರ್ಯ ಸಾರ್ವಜನಿಕರ ಮೆಚ್ಚಿಕೆಗೆ ಪಾತ್ರವಾಗಿದೆ. ಸ್ವತಂತ್ರವಾದ

ಅಭಿಪ್ರಾಯಗಳನ್ನೂ ವ್ಯಕ್ತಪಡಿಸುವ ಪಕ್ಷಾತೀತವಾದ ಒಂದು ಹೊಸ ಪತ್ರಿಕೆಯನ್ನೂ ಅದು ಪ್ರಕಟಿಸುತ್ತಾ ಇದೆ. ಪತ್ರಿಕೆಯ ಹೆಸರು "ಪಬ್ಲಿಕ್ ಅಫೇರ್ಸ್".

**ಅಖಿಲ ಕರ್ನಾಟಕ ಮಕ್ಕಳ ಕೂಟ**

ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸಮೀಪದಲ್ಲಿಯೇ ಇರುವ "ಅಖಿಲ ಕರ್ನಾಟಕ ಮಕ್ಕಳ ಕೂಟ"ವು ಮಕ್ಕಳ ಮಾನಸಿಕ, ದೈಹಿಕ, ಬೌದ್ಧಿಕ ಬೆಳವಣಿಗೆಗಾಗಿ ದುಡಿಯುತ್ತಿರುವ ಒಂದು ಹಳೆಯ ಸಂಸ್ಥೆ. ಇದನ್ನು ದಿವಂಗತ ಆರ್. ಕಲ್ಯಾಣಮ್ಮನವರು ೧೯೨೩ರಲ್ಲಿ ಸ್ಥಾಪಿಸಿದರು. ದಿ. ಜಯಚಾಮರಾಜ ಒಡೆಯರ ಸಹೋದರಿ ವಿಜಯ ಲಕ್ಷ್ಮೀ ಅರಸು ಇದರ ಪ್ರಾರಂಭೋತ್ಸವವನ್ನು ನೆರವೇರಿಸಿದರು. ಇನ್ನೇನು ಅದು ತನ್ನ ಸುವರ್ಣ ಮಹೋತ್ಸವವನ್ನೂ ನೆರವೇರಿಸಬೇಕು.

ಬಾಲ್ಯದಲ್ಲಿಯೇ ವಿಧವೆಯಾದ ಆರ್. ಕಲ್ಯಾಣಮ್ಮನವರು ಈ ಸಂಸ್ಥೆಯನ್ನು ಸ್ಥಾಪಿಸಿ ತಮ್ಮ ಜೀವನವನ್ನು ಮಕ್ಕಳ ಪುರೋಭಿವೃದ್ಧಿಗಾಗಿ ದುಡಿಯಲು ಮೀಸಲಿಟ್ಟರು. ಪ್ರಾರಂಭದಲ್ಲಿ ಇದು ಚಾಮರಾಜ ಪೇಟೆಯ ಮೂನಗೇ ರಸ್ತೆಯಲ್ಲಿದ್ದ ಶ್ರೀಮತಿ ಲಕ್ಷ್ಮಮ್ಮ ಎಂಬಾಕೆಯ ಮನೆಯಲ್ಲಿ ನಡೆಯುತ್ತಿತ್ತು. ಆಕೆಗೂ ಮಕ್ಕಳಿರಲಿಲ್ಲ. ಹಿಂದೆ ಈ ಮನೆ ಕಿವುಡು ಮೂಗರ ಪಾಠಶಾಲೆಯಾಗಿತ್ತು. ಈ ಮಕ್ಕಳ ಆಟ ಪಾಟಗಳಿಗೆ ಪ್ರಾಧಾನ್ಯ ಕೊಟ್ಟು ಬೇರೆ ಬೇರೆ ಮಕ್ಕಳಲ್ಲಿ ಸುಪ್ತವಾಗಿರುವ ವಿವಿಧ ರೀತಿಯ ಪ್ರತಿಭೆಯ ಪ್ರಕಾಶಕ್ಕೆ ಅನುವು ಮಾಡಿಕೊಡುವುದೇ ಇದರ ಉದ್ದೇಶವಾಗಿತ್ತು. ಬೇರೆಯ ಮಕ್ಕಳೊಡನೆ ಕೂಡಿ ನಲಿಯುವ, ಹೊಸ ಸ್ನೇಹವನ್ನು ಬೆಳೆಸುವ, ಸ್ವಂತ ಆಸಕ್ತಿಯನ್ನು ಮೆರೆಯುವ ಅವಕಾಶವನ್ನು ಮಕ್ಕಳಿಗೆ ಒದಗಿಸುವ ಉದ್ದೇಶದಿಂದ ಮಕ್ಕಳ ಕೂಟದ ಸಮ್ಮೇಳನಗಳು ನಡೆದುವು. ಇವುಗಳಲ್ಲಿ ಮಕ್ಕಳೇ ಅಧ್ಯಕ್ಷರು. ಅವರೇ ಕಾರ್ಯದರ್ಶಿಗಳು, ಎಲ್ಲ ಕಾರ್ಯಕರ್ತರು. ನಿರ್ಣಯಗಳ ಮಂಡನೆ, ಸರಕಾರದೊಡನೆ ವ್ಯವಹಾರ – ಎಲ್ಲವನ್ನೂ ಮಕ್ಕಳೇ ಮಾಡುವಂತೆ ಪ್ರೋತ್ಸಾಹಿಸಿದ ಈ ಸಂಸ್ಥೆ ಈ ವರೆಗೆ ೨೫ ಸಮ್ಮೇಳನಗಳನ್ನೂ ನಡೆಸಿದೆ.

ಈಗಿರುವ ಈ ಸಂಸ್ಥೆಯ ಕಟ್ಟಡವು ಉದಾರವಾಗಿ ಸಹಾಯ ಮಾಡಿದ ದಾನಿಗಳ ದೆಸೆಯಿಂದ ಆದುದು. ಹಿಂದೆ ಅಲ್ಲಿ ಒಂದು ಹಳೇ ಕಾಗದಗಳನ್ನಿಡುವ ಕೊಠಡಿಯಿತ್ತು. ಅದನ್ನು ಕೋಟೆ ಹೈಸ್ಕೂಲಿನಿಂದ ಪಡೆಯಲು ಕಲ್ಯಾಣಮ್ಮನವರು ಅವಿರತವಾಗಿ ಶ್ರಮಿಸಿದರು. ಅಭಿಮಾನಿಗಳ ಸಹಾಯದಿಂದಲೇ ಈ ಸಂಸ್ಥೆ ಮುಂದುವರೆಯುತ್ತಿದೆ. ಈಗ ನಾಡಿನ ಅನೇಕ ಕೇಂದ್ರಗಳಲ್ಲಿ ಮಕ್ಕಳ ಕೂಟದ ಅಂಗಸಂಸ್ಥೆಗಳಿವೆ.

ಕಲ್ಯಾಣಮ್ಮನವರು ಈ ಕೂಟದ ಆಶ್ರಯದಲ್ಲಿ "ಸರಸ್ವತಿ" ಎಂಬ ಮಾಸ ಪತ್ರಿಕೆಯನ್ನು ನಡೆಸಿ ಅದರಲ್ಲಿ ಒಂದು ಭಾಗವನ್ನು "ಮಕ್ಕಳ ಬಾವುಟ" ಎಂಬ ಹೆಸರಿನಿಂದ ಮಕ್ಕಳ ಬರವಣಿಗೆಗೆ ಮೀಸಲಾಗಿಟ್ಟರು. ಕೆಲವು ಮಕ್ಕಳ ಪುಸ್ತಕಗಳೂ, ಈ ಬರವಣಿಗೆಯ ಪರಿಣಾಮವಾಗಿ ಹೊರಬಂದಿವೆ.

ಈಗ ಸ್ವಂತ ಕಟ್ಟಡ, "ಶ್ರೀಮತಿ ಆರ್. ಕಲ್ಯಾಣಮ್ಮನವರ ಆಟದ ಮೈದಾನ", ಬಯಲು ರಂಗ ಮಂದಿರ, ಒಳ್ಳೆಯ ಒಂದು ಮಕ್ಕಳ ಪುಸ್ತಕ ಭಂಡಾರ ಇವುಗಳನ್ನು ಹೊಂದಿರುವ ಮಕ್ಕಳ ಕೂಟ ಈಗ ಒಂದು ಮಾದರಿ ಸಂಸ್ಥೆಯಾಗಿ ಕೆಲಸ ಮಾಡುತ್ತಿದೆ. ಸಾರ್ವಜನಿಕರು ಇನ್ನಷ್ಟು ಸಹಕರಿಸಿದರೆ ಇದರಿಂದ ಇನ್ನೂ ಉತ್ತಮ ಕಾರ್ಯವನ್ನು ನಿರೀಕ್ಷಿಸಬಹುದು.

**ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್**

ಪ್ರಪಂಚದ ಸಂಸ್ಕೃತಿಯನ್ನು ಕುರಿತು ವಿಚಾರವಂತಿಕೆಯನ್ನು ಬೆಳೆಸುವ ಈ ಸಂಸ್ಥೆ ಬೆಂಗಳೂರಿನ ಬಹು ಪ್ರಧಾನವಾದ ಸಾಂಸ್ಕೃತಿಕ ಸಂಸ್ಥೆಗಳಲ್ಲಿ ಒಂದು. ಇದು ಬೆಂಗಳೂರಿನ ಬಸವನಗುಡಿ ಹರವಿನಲ್ಲಿದೆ. ೧೯೪೫ ನೇ ಆಗಸ್ಟ್ ೧೧ ನೆಯ ತಾರೀಖು ಇದು ಸ್ಥಾಪಿತವಾಯಿತು. ಎರಡನೆಯ ಮಹಾಯುದ್ಧವು ಆಗ ತಾನೇ ನಿಂತು ಪ್ರಪಂಚವು ಶಾಂತಿಯನ್ನು ಕಾಣಬಹುದು ಎನ್ನುವ ಸಮಯದಲ್ಲಿ ಈ ಸಂಸ್ಥೆ ಹುಟ್ಟಿಕೊಂಡುದು ಒಂದು ಯೋಗಾಯೋಗ.

ಪ್ರಪಂಚದ ಜನರು ವಿಶ್ವಮಾನವರೆಂಬ ಭಾವನೆಯಿಂದ ಬಾಳುವತನಕ ಹೊಸಬಾಳು ಪ್ರಪಂಚದಲ್ಲಿ ಅಸಾಧ್ಯ. ಜನತೆಯ ಆಸಕ್ತಿ ವಿಸ್ತಾರಗೊಳ್ಳಬೇಕು, ಅನುಕಂಪ ವಿಶ್ವವ್ಯಾಪಿಯಾಗಬೇಕು. ಯಾವೊಂದು ದೇಶದ, ಮತದ, ಜನಾಂಗದ ವಿಶಿಷ್ಟ ಸ್ವಾತಂತ್ರ್ಯದಂಥ ನೈತಿಕ ಸೂತ್ರವನ್ನು ಅನುಸರಿಸಿ ವಿಶ್ವ ಭ್ರಾತೃತ್ವವನ್ನೂ ಬೆಳೆಸಬೇಕು ಎಂಬಂಥ ದೃಷ್ಟಿ ಈ ಸಂಸ್ಥೆಯ ಬುನಾದಿ. ರಾಜಕಾರಣಕ್ಕೆ ಸೇರದ, ಜಾತೀಯವೂ ಕೋಮುವಾದಿಯೂ ಅಲ್ಲದ, ಈ ಸಂಸ್ಥೆಯಲ್ಲಿ ಸಾಂಸ್ಕೃತಿಕ ವಿಚಾರವಿನಿಮಯ, ಶಿಕ್ಷಣದ ಬಗ್ಗೆ ಚರ್ಚೆ, ಸಂಸ್ಕೃತಿಯ ನಿಯೋಗಗಳು, ಸಾಹಿತ್ಯ, ಚರಿತ್ರೆ, ವಿಜ್ಞಾನ, ಕುಶಲ ಕಲೆ ಮುಂತಾದುವುಗಳ ಆಳವಾದ ಅಭ್ಯಾಸ – ಇವು ಸತತವಾಗಿ ನಡೆಯುತ್ತಿವೆ.

ಇಲ್ಲಿಯ ಪುಸ್ತಕ ಭಂಡಾರದಲ್ಲಿ ೩೫೦೦ ಅಪರೂಪದ ಗ್ರಂಥಗಳಿವೆ. ಸುಮಾರು ೪೦೦ ಪತ್ರಿಕೆಗಳು ವಿನಿಮಯವಾಗಿ ಬರುತ್ತಿವೆ. ಈ ಪತ್ರಿಕೆಗಳು ಪ್ರಪಂಚದ ಎಲ್ಲ ಕಡೆಗಳಿಂದಲೂ ಬರುತ್ತಿವೆ. ಮಕ್ಕಳಿಗಾಗಿಯೇ ಬೇರೊಂದು ಪುಸ್ತಕ ಭಂಡಾರವಿದೆ. ಡಾ. ಬೆಹನಾನ್ಸ್ ಪುಸ್ತಕ ಭಂಡಾರ ಎಂಬ ವಿಶಿಷ್ಟ ವಿಭಾಗದಲ್ಲಿ ಬಹು ಮುಖ್ಯವಾದ ಸಾಂದರ್ಭಿಕ ಪುಸ್ತಕಗಳಿವೆ. ಇಲ್ಲಿನ ಪುಸ್ತಕಗಳ ಸಂಖ್ಯೆ ಬೆಳೆಯುತ್ತಾ ಇದೆ. ಅನೇಕ ದತ್ತಿ ಉಪನ್ಯಾಸಗಳು, ಆಹ್ವಾನಿತರಿಂದಾಗುವ ಉಪನ್ಯಾಸಗಳು ವಿಚಾರ ಸಂಕಿರಣಗಳು ಇವುಗಳಿಂದ ಈ ಸಂಸ್ಥೆ ನಗರದ ಸಾಂಸ್ಕೃತಿಕ ಕೇಂದ್ರಗಳಲ್ಲಿ ಹೆಸರುವಾಸಿಯಾದುದಾಗಿದೆ.

ಇದನ್ನು ಸ್ಥಾಪಿಸಿದವರು. ದಿ ಬಿ. ಪಿ. ವಾಡಿಯಾ ಅವರು. ೧೯೫೮ ರಲ್ಲಿ ಅವರು ನಿಧನ ಹೊಂದುವ ತನಕ ಅವರೇ ಅದರ ಸ್ಥಾಪಕ ಅಧ್ಯಕ್ಷರಾಗಿದ್ದರು. ಈ ಶ್ರೀಮತಿ ಸೋಫಿಯಾ ವಾಡಿಯಾ ಅವರು ಅದರ ಅಧ್ಯಕ್ಷಣಿಯಾಗಿ ಕಾರ್ಯ ನಿರ್ವಹಣೆ ಮಾಡುತ್ತಿದ್ದಾರೆ. ಈ ಸಂಸ್ಥೆಗೆ ಭೇಟಿಯಿತ್ತವರ ಪಟ್ಟಿಯಲ್ಲಿ ವಿಶ್ವವಿಖ್ಯಾತರಾದ ಜೂಲಿಯನ್ ಹಕ್ಸ್ಲೀ, ಲಾರ್ಡ್ ಬಾಯ್ಡ್ ಓರ್, ಡಾ. ಜಾರ್ಜ ಗಾಮೋ, ಡಾ. ಸಿ. ವಿ. ರಾಮನ್, ಸನ್‌ಚೇನ್‌ಲಾಮ, ಪ್ರೊ. ಲೂಯಿರೆನೊ, ಅರ್ನಾಲ್ಡ್ ಟಾಯ್ನಬೀ, ಮಾರ್ಟಿನ್ ಲೂಥರ್ ಕಿಂಗ್ ಮುಂತಾದವರಿದ್ದಾರೆ. ವರ್ಷದಲ್ಲಿ ಸುಮಾರು ೨೫,೦೦೦ ಜನ ಈ ಸಂಸ್ಥೆಯ ಮತ್ತು ಪುಸ್ತಕ ಭಂಡಾರದ ಪ್ರಯೋಜನವನ್ನು ಪಡೆಯುತ್ತಿದ್ದಾರೆ.

**ಕರ್ನಾಟಕ ಸಂಶೋಧಕ ಇತಿಹಾಸ ಮಂಡಳ**

ಈ ಸಂಸ್ಥೆಯನ್ನು ದಿ. ಆಲೂರು ವೆಂಕಟರಾಯರು ಸ್ಥಾಪಿಸಿ ಅದರ ಅಧ್ಯಕ್ಷರಾಗಿ ಕೆಲಸ ಮಾಡಿದರು. ಇದು ಮುಖ್ಯವಾಗಿ ಚಾರಿತ್ರಿಕ ವಿಷಯಗಳ ಸಂಶೋಧನೆಗೆ ದುಡಿಯುವ ಸಂಸ್ಥೆಯಾಗಿ ಇಂದಿಗೂ ಕೆಲಸ ಮಾಡುತ್ತಿದೆ. "ಪ್ರಾಚೀನ ಕರ್ನಾಟಕ" ಎಂಬ ಪತ್ರಿಕೆಯನ್ನು ಕೆಲವು ಕಾಲ ಪ್ರಕಟಿಸಿತು. ಇತಿಹಾಸ ಸಂಶೋಧನಕ್ಕೆ ಉತ್ತೇಜನವನ್ನು ನೀಡುವುದೂ ಕರ್ನಾಟಕ

ದೇಶದ ಇತಿಹಾಸದ ಬಗ್ಗೆ ಗ್ರಂಥಗಳನ್ನು ಬರೆಯಿಸುವುದೂ ಒಳ್ಳೆಯ ಪುಸ್ತಕ ಭಂಡಾರವನ್ನು ಸ್ಥಾಪಿಸುವುದೂ, ಶಾಸನಗಳನ್ನು ಸಂಗ್ರಹಿಸುವುದೂ ಈ ಮಂಡಳದ ಕಾರ್ಯವ್ಯಾಪ್ತಿಯಲ್ಲಿ ಸೇರಿದ್ದುವು. ಈ ಮಂಡಳದ ಪ್ರಕಟಣೆಗಳು ವಿದ್ವತ್ತಿನಿಂದ ಕೂಡಿದ್ದು ಪ್ರಖ್ಯಾತವಾಗಿವೆ.

**ಗಾಂಧೀ ಸಾಹಿತ್ಯ ಸಂಘ**

ಬೆಂಗಳೂರಿನ ಮಲ್ಲೇಶ್ವರದ ಹರವಿನಲ್ಲಿ ಸುಮಾರು ನಲವತ್ತು ವರುಷಗಳಿಂದಲೂ ಸಾಹಿತ್ಯಕಾರ್ಯವನ್ನು ನೆರವೇರಿಸುತ್ತಿರುವ ಗಾಂಧೀಸಾಹಿತ್ಯ ಸಂಘವು ಅತ್ಯುತ್ತಮವಾದ ಕಾರ್ಯವನ್ನು ಮಾಡಿದೆ. ಅದರ ಆಶ್ರಯದಲ್ಲಿ ಒಂದು ಉತ್ತಮ ಪುಸ್ತಕ ಭಂಡಾರವಿದೆ.

ದಿ. ಸಿದ್ಧವನಹಳ್ಳಿ ಕೃಷ್ಣ ಶರ್ಮರ ಪ್ರಖರವಾದ ಪ್ರಭಾವಕ್ಕೆ ಒಳಗಾದ ಈ ಸಂಸ್ಥೆಗೆ ದಿ. ಜಿ. ಪಿ. ರಾಜರತ್ನಂ ಸಹಾಯಕರಾಗಿದ್ದರು. ಇದರ ಆಶ್ರಯದಲ್ಲಿ ಗಮಕ ಉಪನ್ಯಾಸ, ಸಾಹಿತ್ಯೋತ್ಸವಗಳು ನೆರವೇರಿ ಆ ಸುತ್ತಣ ಜನಸಮುದಾಯಕ್ಕೆ ತುಂಬಾ ಉಪಕಾರವನ್ನೆಸಗಿದೆ. ಪ್ರತಿವಾರವೂ ಯಾವುದಾದರೂ ಕಾರ್ಯಕ್ರಮವನ್ನು ನಡೆಸುವ ಅದರ ಪ್ರಭಾವಕ್ಕೆ ಒಳಗಾದ ಅನೇಕ ಯುವಕರು ಇಂದು ಕನ್ನಡದ ಮುಂದಾಳುಗಳಲ್ಲಿ ಮುಖ್ಯರಾಗಿದ್ದಾರೆ.

**ಹತರ ಸಂಸ್ಥೆಗಳು**

ಕನ್ನಡ ನಾಡಿನ ಅನೇಕ ಕಡೆಗಳಲ್ಲಿ ಯಾವ ಕಟ್ಟಡವೂ ಇಲ್ಲದೆ ಕನ್ನಡದ ಕೆಲಸವನ್ನು ಮಾಡಿದ ಧಾರವಾಡದ ಗೆಳೆಯರ ಗುಂಪು, ಮೈಸೂರು ತರುಣರ ದಂಡು ಈಗ ಅಸ್ತಿತ್ವದಲ್ಲಿಲ್ಲದಿದ್ದರೂ ಅವುಗಳ ಪ್ರಭಾವವನ್ನು ಮರೆಯುವುದಕ್ಕಾಗುವುದಿಲ್ಲ.

ಕನ್ನಡ ನಾಡಿನ ಇನ್ನೂ ಕೆಲವೆಡೆಗಳಲ್ಲಿ ಉತ್ತಮವಾದ ಕನ್ನಡ ಸಂಸ್ಥೆಗಳು ಇಂದೂ ದುಡಿಯುತ್ತಿವೆ. ಗೋವಿಂದ ಪೈ ಸ್ಮಾರಕ ಸಂಶೋಧನ ಕೇಂದ್ರ, ಉಡುಪಿ, ಸಮಾಜ ಮಂದಿರ ಮೂಡಬಿದರೆ, ಅಲ್ಲದೆ ಕನ್ನಡ ಸಂಘ, ಮುಂಬಯಿ, ಕನ್ನಡ ಸಾಹಿತ್ಯ ಪರಿಷತ್ತು ಹೈದರಾಬಾದು, ಮುಂತಾದುವಲ್ಲದೆ ನ್ಯೂಯಾರ್ಕಿನ ಕನ್ನಡ ಕೂಟ ಕೂಡ ಇಂದಿಗೂ ಕನ್ನಡದ ಕೆಲಸದಲ್ಲಿ ಅವಿರತವಾಗಿ ದುಡಿಯುತ್ತಿವೆ.

ನಾಟಕ ತಂಡಗಳು, ವ್ಯಾಸಂಗ ಗೋಷ್ಠಿಗಳು, ಇವುಗಳ ಸಂಖ್ಯೆ ಅಪಾರವಾಗಿದೆ. ಯಾವ ನೆಲೆಯಿಲ್ಲದೆ, ಕಟ್ಟಡ, ಕಛೇರಿಗಳಿಲ್ಲದೆ ಇವು ಸಾಹಿತ್ಯ ಕಾರ್ಯವನ್ನೇ ಸತತವಾಗಿ ನಡೆಸುತ್ತಿವೆ.

ಇತ್ತೀಚೆಗೆ ಪ್ರಾರಂಭವಾದ "ಬಿ. ಎಂ. ಶ್ರೀ. ಪ್ರತಿಷ್ಠಾನ" ಎಂಬ ಸಂಶೋಧಕ ಮಂಡಲದ ಹೆಸರು ಹೇಳುವುದು ತುಂಬ ಉಚಿತ. ಶ್ರೀ ಎಂ ವಿ. ಸೀತಾರಾಮಯ್ಯನವರ ಅದಮ್ಯ ಚೇತನೋತ್ಸಾಹದ ಫಲವಾಗಿ ಹುಟ್ಟಿರುವ ಈ ಸಂಸ್ಥೆ ಭವ್ಯವಾಗಿ ಬೆಳೆಯುವ ಸೂಚನೆಗಳನ್ನು ಹೊಂದಿದೆ. ಇದಕ್ಕೆ ಬೇಕಾದ ಸ್ಥಳವನ್ನು ಶ್ರೀ. ಎಂ. ವಿ. ಸೀ. ಅವರೆ ಸದ್ಯಕ್ಕೆ ಬಿಟ್ಟುಕೊಟ್ಟಿದ್ದಾರೆ. ನಾಲ್ಕಾರು ಪ್ರಕಟನೆಗಳನ್ನು ಮಾಡಿರುವ ಈ ಸಂಸ್ಥೆ "ಮಣಿಹ" ಎಂಬ ಒಂದು ಪುಸ್ತಕವನ್ನು ದಿ. ಹಳಕಟ್ಟಿಯವರ ಸ್ಮರಣೆಗೆ ಅರ್ಪಿಸಿದೆ.

ಕೇಂದ್ರ ಸರ್ಕಾರದ ಸಹಾಯವನ್ನೂ, ರಾಜ್ಯ ಸಾಹಿತ್ಯ ಅಕಾಡೆಮಿಯ ಸಹಾಯವನ್ನೂ ಪಡೆದ ಈ ಸಂಸ್ಥೆ ಅಭಿವೃದ್ಧಿ ಹೊಂದುವುದರಲ್ಲಿ ಸಂದೇಹವಿಲ್ಲ.

ಕನ್ನಡ ಮಾತನಾಡುವ ಜನರೆಲ್ಲ ಒಂದೇ ರಾಜ್ಯದ ಆಡಳಿತಕ್ಕೆ ಸೇರಿರಬೇಕೆಂಬ ಧೋರಣೆ ರೂಪುಗೊಳ್ಳುವುದಕ್ಕೂ ರಾಜ್ಯದ ಹೆಸರು ಕರ್ನಾಟಕ ಎಂಬುದು ಮತ್ತೆ ಸ್ಥಾಪಿತವಾಗುವುದಕ್ಕೂ ಸಾಹಿತ್ಯದ ಬಹುಮುಖವಾದ ಕಾರ್ಯಗಳು ನೆರವೇರುವುದಕ್ಕೂ ಪುಸ್ತಕ ಪ್ರಕಟನೆ, ಪತ್ರಿಕಾ ಪ್ರಕಟನೆಗಳು ಕ್ರಮವಾಗಿ ನಡೆಯುವುದಕ್ಕೂ ಒಟ್ಟು ಕನ್ನಡ ಸಂಸ್ಕೃತಿಯ ಸಂವರ್ಧನೆಗೂ ಈ ಹಳೆಯ ಸಂಘಗಳು ಕೆಲಸ ಮಾಡಿದ್ದರೆ ಹೊಸದಾಗಿ ಹುಟ್ಟುತ್ತಿರುವ ಸಂಘ, ಕೂಟ, ಬಳಗ, ಇತ್ಯಾದಿಗಳು ಆ ಕೆಲಸವನ್ನೂ ಮುಂದುವರಿಸಿಕೊಂಡು ಹೋಗುತ್ತಿವೆ. ಈ ಕಾರ್ಯವಾಹಿನಿ ಸಂತೋಷಕರವಾದುದು.

# ಕರ್ನಾಟಕದ ಜಾನಪದ

ಜಿ. ಶಂ. ಪರಮಶಿವಯ್ಯ

**ಜಾನಪದ ಸ್ವರೂಪ**

ಯಾವುದೇ ಸಂಸ್ಕೃತಿಯ ಮೂಲನೆಲೆ ಜಾನಪದ. ಆದಿ ಮಾನವ ಯುಗದಿಂದಲೂ ಮಾನವನ ನಾನಾ ಮುಖವಾದ ಜೀವಾನುಭವಗಳು ಮಡುಗಟ್ಟುತ್ತಾ ಬಂದು ಜಾನಪದವೆನಿಸಿ ನಿಂತಿವೆ. ಅದು ಕಾಲದೇಶಗಳ ತನ್ನ ಯಾತ್ರೆಯಲ್ಲಿ ಅನೇಕ ರೂಪಗಳನ್ನು ಧರಿಸುತ್ತಾ ಅನೇಕ ಮಜಲುಗಳಲ್ಲಿ ವರ್ತಿಸುತ್ತಾ ಸದಾ ಪರಿವರ್ತನಶೀಲವಾಗಿ ಕಂಡು ಬರುತ್ತವೆ. ಆದಿ ಮಾನವ ಕಾಲದ ಅನೇಕ ಅನುಭವಗಳೂ ಆಶೋತ್ತರಗಳೂ ಆಧುನಿಕ ಕಾಲದಲ್ಲಿ ಲಭ್ಯವಾಗುವ ಜಾನಪದ ಪ್ರಕಾರಗಳಲ್ಲಿ ಗರ್ಭೀಕೃತವಾಗಿರುತ್ತವೆ. ಹೊಸ ಕಾಲದ ಅನುಭವಗಳು ಅದರ ಮೇಲ್ ಮುದ್ರೆಯೊತ್ತುತ್ತಿರುತ್ತವೆ. ಅದುದರಿಂದಲೇ ಜಾನಪದ ಎನ್ನುವುದು ಪ್ರೊಫೆಸರ್ ರಿಚರ್ಡ್ ಡಾರ್ಸನ್ ಹೇಳುವಂತೆ ಪ್ರಾಚೀನದ ಪ್ರತಿಧ್ವನಿಯೂ ಹೌದು. ಅರ್ವಾಚೀನದ ಆದಮ್ಯ ಶಕ್ತಿಯೂ ಹೌದು. ಇದು ಸಾವಿಲ್ಲದ, ಸೋಲಿಲ್ಲದ ಒಂದು ನಿರಂತರ ಶಕ್ತಿ. ಮಾನವ ಸಂಸ್ಕೃತಿಯ ಆರಂಭದಿಂದ ತನ್ನ ಆಗಮನವನ್ನು ಕಂಡುಕೊಂಡ ಜಾನಪದ ಮಾನವಕುಲ ಉಳಿದಿರುವವರೆಗೆ ಅವನ ಜೊತೆಯಲ್ಲಿ ಉಳಿಯುತ್ತದೆ. ಕೆಲವು ರೂಪಗಳು ಕಣ್ಮರೆಯಾದರೂ ಹೊಸರೀತಿಯಲ್ಲಿ ಅದು ಅಭಿವ್ಯಕ್ತಿಯನ್ನು ಪಡೆದುಕೊಳ್ಳುತ್ತಾ ಜನ್ಮಧಾರಣೆ ಮಾಡುತ್ತಲೇ ಇರುತ್ತದೆ.

ಜಾನಪದ ನಾಲ್ಕು ಮುಖಗಳಲ್ಲಿ ಪ್ರಧಾನವಾಗಿ ಗುರುತಿಸಲ್ಪಡುತ್ತದೆ. ೧ ಮೌಖಿಕಸಾಹಿತ್ಯ, ೨ ಪ್ರದರ್ಶನಾತ್ಮಕ ಜಾನಪದ ಕಲೆಗಳು ೩ ಸಾಮಾಜಿಕ ಜಾನಪದ ಸಂಪ್ರದಾಯಗಳು ೪ ಭೌತಿಕ ವಿಶೇಷಗಳು. ಇದು ತಲೆಮಾರಿಗೆ ಸಾಗಿ ಬರುವಾಗ ನೆನಪಿನ ಮೂಲಕ, ಬಾಯಿ ಮಾತಿನ ಮೂಲಕ, ಅನುಕರಣೆಗಳ ಮೂಲಕ ಉಳಿದುಬರುತ್ತದೆ. ಲೌಕಿಕ ಸಾಹಿತ್ಯದಲ್ಲಿ ಜಾನಪದ ಕಥೆ, ಕಾವ್ಯ, ಗೀತೆ, ಗಾದೆ, ಒಗಟು ಮೊದಲಾದ ಅನೇಕ ರೂಪಗಳು ಸೇರುತ್ತವೆ. ಪ್ರದರ್ಶನಾತ್ಮಕ ಕಲೆಗಳಲ್ಲಿ ಜನಪದ ನಾಟಕ, ಗೊಂಬೆಯಾಟಗಳು, ಜನಪದ ನೃತ್ಯಗಳು, ದೊಂಬರಾಟ, ಮೊದಲಾದ ಜಾನಪದ ಮನರಂಜನೆಗಳು ಸೇರುತ್ತವೆ. ಸಾಮಾಜಿಕ ಸಂಪ್ರದಾಯಗಳಲ್ಲಿ ಎಲ್ಲ ಬಗೆಯ ಧಾರ್ಮಿಕ ವಿಧಿಗಳು, ಮದುವೆ ಮೊದಲಾದ ಸಂಪ್ರದಾಯಗಳು, ಅಡುಗೆ, ವೈದ್ಯ ಮೊದಲಾದ ನಂಬಿಕೆ ಆಚರಣೆಗಳು ಸೇರುತ್ತವೆ. ಪರಂಪರೆಯಿಂದ ಉಳಿದುಬಂದ ಪ್ರಾಚೀನ ಕಾಲದ ನಾನಾ ವಸ್ತು ವಿಶೇಷಗಳು, ಸಾಧನ ಸಲಕರಣೆಗಳು, ಆಯುಧಾವಶೇಷಗಳು, ಊರು ಕೇರಿಗಳು ಭೌತಿಕ ಜಾನಪದದ ವ್ಯಾಪ್ತಿಯಲ್ಲಿ ಬರುತ್ತವೆ.

**ಕರ್ನಾಟಕದಲ್ಲಿ ಜಾನಪದ ಅಧ್ಯಯನ**

ಕರ್ನಾಟಕದಲ್ಲಿ ಜಾನಪದ ಅಧ್ಯಯನ ವ್ಯಾಪಕವಾಗಿ ವೈಜ್ಞಾನಿಕವಾಗಿ ಆರಂಭವಾದುದು ಇತ್ತೀಚಿನ ದಶಕಗಳಲ್ಲಿ, ಆದರೆ ಕಳೆದ ಶತಮಾನದ ಆದಿಭಾಗದಿಂದಲೂ ಕರ್ನಾಟಕ ಜಾನಪದ ಕ್ಷೇತ್ರದಲ್ಲಿ ಸಾಧಾರಣವಾದ ಸಂಗ್ರಹ ಕಾರ್ಯ ನಡೆಯುತ್ತಲೇ ಬಂದಿದೆ. ಜಾನ್ ಲೇಡನ್, ಅಬ್ಬಿಡುಬೋಯಿ, ಮೋಗಲಿಂಗ್ ಮೇರಿ ಫ್ರೀರೆ, ಚಾರ್ಲ್ಸ್ ಗೋವರ್, ರೆ. ಕಿಟ್ಟೆಲ್, ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಕಳೆದ ಶತಮಾನದಲ್ಲಿ ಗೀತ, ಲಾವಣಿ, ಕಥೆ , ಗಾದೆ ಮೊದಲಾದ ಜನಪದ ಸಾಹಿತ್ಯ ಪ್ರಕಾರಗಳನ್ನು ಗುರುತಿಸಿ ಪ್ರಕಟಿಸಿದ್ದಾರೆ. ಇವರ ಸಂಗ್ರಹ ಟಿಪ್ಪಣಿಗಳ ರೀತಿಯಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಲಭ್ಯವಾಗುತ್ತದೆ. ಜಗತ್ತಿನ ಜಾನಪದ ಅಧ್ಯಯನಕ್ಕೆ ಒಳ್ಳೆಯ ಸಾಮಗ್ರಿಯನ್ನು ಕರ್ನಾಟಕದ ಕಡೆಯಿಂದ ಒದಗಿಸಿದ ಕೀರ್ತಿ ಈ ವಿದ್ವಾಂಸರಿಗೆ ಸಲ್ಲಬೇಕು. ಇಪ್ಪತ್ತನೆಯ ಶತಮಾನದಲ್ಲಿ, ಭಾರತೀಯ ವಿದ್ವಾಂಸರು ಇತ್ತ ಗಮನ ಹರಿಸಿ ಬೇರೆ ಬೇರೆ ಪ್ರದೇಶಗಳಲ್ಲಿ ಸಂಗ್ರಹಗಳನ್ನು ಹೊರತಂದರು. ಸ್ವಾತಂತ್ರ್ಯ ಪೂರ್ವದಿನಗಳಲ್ಲಿ ಕೊಡಗಿನ ಭಾಗದಿಂದ ನಡಕೇರಿಯಂಡ ಚಿಣ್ಣಪ್ಪ, ಮೈಸೂರು ಭಾಗದಲ್ಲಿ ಅರ್ಚಕ ಬಿ. ರಂಗಸ್ವಾಮಿ, ಗೋರೂರು ರಾಮಸ್ವಾಮಿ ಅಯ್ಯಂಗಾರ್, ಬಿ. ಎನ್. ರಂಗಸ್ವಾಮಿ, ದೇವುಡು ನರಸಿಂಹಶಾಸ್ತ್ರಿ, ಮತಿಘಟ್ಟ ಕೃಷ್ಣಮೂರ್ತಿ ಮುಂತಾದವರು ಜನಪದ ಗೀತೆಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಉತ್ತರ ಕರ್ನಾಟಕದಲ್ಲಿ ಹಲಸಂಗಿ ಸೋದರರು, ಉತ್ತರ ಕನ್ನಡ ಜಿಲ್ಲೆಯಿಂದ ವಿವೆ ತೊರ್ಕೆಯವರು ಸಂಕಲನಗಳನ್ನು ಪ್ರಕಟಿಸಿ ಆಯಾ ಭಾಗದ ಜನಪದ ಗೀತರೂಪಗಳನ್ನು ಪರಿಚಯಿಸಿದ್ದಾರೆ. ಅರ್ಚಕ ರಂಗಸ್ವಾಮಿಯವರು "ಹುಟ್ಟಿದ ಹಳ್ಳಿ ಹಳ್ಳಿಯ ಹಾಡು" (೧೯೩೩) ನಡಕೇರಿಯಂಡ ಚಿಣ್ಣಪ್ಪನವರ "ಪಟ್ಟೋಲೆ ಪಳಮೆ" (೧೯೨೪), ನರಸಿಂಹಶಾಸ್ತ್ರಿಗಳ "ಕರ್ನಾಟಕ ಸಂಸ್ಕೃತಿ" (೧೦೩೬). ಈ ಗ್ರಂಥಗಳು ಕೇವಲ ಸಂಕಲನಗಳಾಗಿರದೆ ಜಾನಪದ ಸಕಲ ಮುಖಗಳ ಮೇಲೂ ಬೆಳಕು ಚೆಲ್ಲುವ ಗಮನಾರ್ಹ ಕೃತಿಗಳೂ ಆಗಿವೆ.

ಸ್ವಾತಂತ್ರ್ಯೋತ್ತರ ದಿನಗಳಲ್ಲಿ ನಮ್ಮ ಜಾನಪದ ಕಾರ್ಯಕ್ಕೆ ಒಳ್ಳೆಯ ತಳಹದಿಯನ್ನು ಹಾಕಿದವರು ಬಿ. ಎಸ್. ಗದ್ದಿಗಿಮಠ ಅವರು. ೧೯೫೦ರಿಂದೀಚೆಗೆ ಉತ್ತರ ಕರ್ನಾಟಕ ಭಾಗದಿಂದ ಅವರು ಉತ್ತಮ ಸಂಗ್ರಹ ಕಾರ್ಯವನ್ನು ನಡೆಸಿ ಕೃತಿಗಳನ್ನು ಹೊರತಂದರು. ಹಳೆಯ ಮೈಸೂರು ಭಾಗದಲ್ಲಿ ಕರಾಕೃ ಅವರು ವ್ಯಾಪಕ ಸಂಗ್ರಹವನ್ನು ನಡೆಸಿ ಇಪ್ಪತ್ತೈದಕ್ಕೂ ಹೆಚ್ಚು ಸಂಕಲನಗಳನ್ನು ಪ್ರಕಟಿಸಿದರು. ಮುಂದೆ ನಮ್ಮ ಜಾನಪದ ಸಂಗ್ರಹಕಾರ್ಯ ಅಧ್ಯಯನದ ರೂಪವನ್ನು ತಾಳಿ ವೈಜ್ಞಾನಿಕ ತಳಹದಿಯ ಮೇಲೆ ಹೊಸ ದಿಗಂತಗಳನ್ನು ತೆರೆಯತೊಡಗಿತು. ಪ್ರಕೃತ ಲೇಖಕ ಜಾನಪದದ ಎಲ್ಲ ಶಾಖೆಗಳ ಕಡೆ ತರುಣ ಪೀಳಿಗೆಯ ವಿದ್ವಾಂಸರ ಆಸಕ್ತಿಯನ್ನು ಸೆಳೆಯುವ ಲೇಖನಗಳನ್ನು ಪ್ರಕಟಿಸಿದುದಲ್ಲದೆ ಸ್ವತಃ ೧೯೫೦ರಿಂದಲೂ ಸಂಗ್ರಹ ಕಾರ್ಯವನ್ನು ನಡೆಸಿ ಜಾನಪದ ಪ್ರಚಾರಾತ್ಮಕ ಲೇಖನಗಳನ್ನು ಅಪಾರ ಸಂಖ್ಯೆಯಲ್ಲಿ ಪ್ರಕಟಿಸುತ್ತಾ ಬಂದುದು ಕರ್ನಾಟಕ ಜಾನಪದ ಅಧ್ಯಯನ ಗರಿಕಟ್ಟಿಕೊಳ್ಳಲು ಪ್ರೇರಕವಾಯಿತು. ಈ ಅಧ್ಯಯನಕ್ಕೆ ನಿಖರವಾದ ಶಾಸ್ತ್ರೀಯ ಚೌಕಟ್ಟನ್ನು ದೊರಕಿಸಲು ಪ್ರೇರಣೆಯನ್ನು ನೀಡಿದರು ಹಾ. ಮಾ. ನಾಯಕರು. ಜಾನಪದ ಶಬ್ದವನ್ನು ಫೋಕ್ಲೋರ್‌ಗೆ ಸಂವಾದಿಯಾಗಿ ಪ್ರಯೋಗಿಸಿ ಜಾನಪದ ರೂಪಗಳನ್ನು ಕುರಿತು ಚರ್ಚಿಸಿದ್ದಲ್ಲದೆ ಅದರ ವೈಜ್ಞಾನಿಕ ವರ್ಗೀಕರಣವನ್ನು ಪರಿಚಯಿಸಿದ ಮೊದಲ ಕೀರ್ತಿ ಅವರದ್ದು. ದೇ. ಜವರೇಗೌಡರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಜಾನಪದವನ್ನು ಒಂದು ಅಧ್ಯಯನ ವಿಷಯವಾಗಿ ಸೇರಿಸುವುದರ ಮೂಲಕ ಜಾನಪದಕ್ಕೆ ಒಂದು ಹೊಸ ನೆಲೆಯನ್ನು ಕಲ್ಪಿಸಿದರು. ಅಲ್ಲಿಂದೀಚೆಗೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಆರಂಭವಾದ ಜಾನಪದ ಚಟುವಟಿಕೆಗಳು ನಾಡಿನಾದ್ಯಂತ ಈ ಚಳುವಳಿಗೆ ಮೂಲ ಪ್ರೇರಣೆಯನ್ನು ಒದಗಿಸಿದುವು. ಪ್ರಕೃತ ಲೇಖಕ ಹಾಗೂ ಪಿ. ಆರ್. ತಿಪ್ಪೇಸ್ವಾಮಿ ಇವರ ಪರಿಶ್ರಮದ ಫಲವಾಗಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ದೊಡ್ಡ ಪ್ರಮಾಣದ ಜಾನಪದ ವಸ್ತು ಸಂಗ್ರಹಾಲಯವೊಂದು ರೂಪುಗೊಂಡು ಎಲ್ಲರ ಆಸಕ್ತಿಯನ್ನು ಸೆಳೆದಿದೆ.

ಕರ್ನಾಟಕದ ವಿಶ್ವವಿದ್ಯಾನಿಲಯಗಳು ಇಂದು ಜಾನಪದ ಅಧ್ಯಯನಕ್ಕೆ ಸಾಕಷ್ಟು ಅವಕಾಶವನ್ನು ಕಲ್ಪಿಸಿವೆ. ಜಾನಪದ ಪ್ರಕಟಣೆಗಳನ್ನು ಹೊರತರುತ್ತಿವೆ. ಕನ್ನಡ ಸಾಹಿತ್ಯ ಪರಿಷತ್ತು ತನ್ನದೇ ಆದ ಯೋಜನೆಗಳ ಮೂಲಕ ಈ ಕ್ಷೇತ್ರದಲ್ಲಿ ಗಣನೀಯ ಸಾಧನೆಯನ್ನು ತೋರಿದೆ. ಅನೇಕ ಸಂಘ ಸಂಸ್ಥೆಗಳೂ ಖಾಸಗಿ ಪ್ರಕಟಣ ಮಂದಿರಗಳೂ ಜಾನಪದ ಪ್ರಕಟನ ಕಾರ್ಯಕ್ಕೆ ಆದ್ಯತೆಯನ್ನು ನೀಡಿವೆ. ಕರ್ನಾಟಕ ಜಾನಪದ ಪರಿಷತ್ತು ಸ್ಥಾಪಿತವಾದ ಮೇಲೆ ಕರ್ನಾಟಕದ ಜಾನಪದ ವಿದ್ವಾಂಸರೆಲ್ಲ ಸಂಘಟನೆಗೊಂಡು ಈ ನಿಟ್ಟಿನಲ್ಲಿ ಒಂದು ಹೊಸ ಚೈತನ್ಯ ಮೂಡಲು ಪ್ರೇರಕರಾದರು. ಜಾನಪದ ಪರಿಷತ್ತು ಹೊರತಂದ "ಜಾನಪದ" ಪತ್ರಿಕೆ ಜನಪ್ರಿಯವಾಯಿತು. ಮುಂದೆ ಟ್ರಸ್ಟ್ ಎಚ್. ಎಲ್. ನಾಗೇಗೌಡರ ಪ್ರಯತ್ನದಿಂದ ಕರ್ನಾಟಕ ಜಾನಪದ ಸ್ಥಾಪಿತವಾಗಿ ಒಳ್ಳೆಯ ಕಾರ್ಯವನ್ನು ನಡೆಸುತ್ತಿರುವುದಲ್ಲದೆ "ಜಾನಪದ ಜಗತ್ತು" ಎಂಬ ಪತ್ರಿಕೆಯನ್ನು ಪ್ರಕಟಿಸುತ್ತಿದೆ. ಈ ಎಲ್ಲ ಚಟುವಟಿಕೆಗಳಿಗೆ ಕಿರೀಟಪ್ರಾಯವಾಗಿ ಕರ್ನಾಟಕ ಜಾನಪದ ಸಂವರ್ಧನ ಕಾರ್ಯಕ್ಕೆ ಪ್ರೇರಕವಾಗುವಂತೆ ರಾಜ್ಯ ಸರ್ಕಾರ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯನ್ನು ಸ್ಥಾಪಿಸಿ ಈ ನಿಟ್ಟಿನ ಕೆಲಸಗಳಿಗೆ ಒಳ್ಳೆಯ ತಿರುವನ್ನು ಕೊಟ್ಟಿದೆ. ಈಗ ಕರ್ನಾಟಕದಾದ್ಯಂತ ಜಾನಪದ ಸಂಗ್ರಹ ಅಧ್ಯಯನ ಹಾಗೂ ಸಂವರ್ಧನ ಕಾರ್ಯಗಳು ತುಂಬ ವ್ಯಾಪಕವಾದ ರೀತಿಯಲ್ಲಿ ನಡೆಯತೊಡಗಿವೆ. ಹಿರಿಯ ತಲೆಮಾರಿನ ವಿದ್ವಾಂಸರುಗಳಾದ ಶಿವರಾಮ ಕಾರಂತ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಮತಿಘಟ್ಟ ಕೃಷ್ಣಮೂರ್ತಿ, ಸಿಂಪಿ ಲಿಂಗಣ್ಣ, ಮೊದಲಾದವರು ಇನ್ನೂ, ಈ ಕ್ಷೇತ್ರದಲ್ಲಿ ಉತ್ಸಾಹದಿಂದ ಕೆಲಸಮಾಡುತ್ತಿರುವುದರ ಜೊತೆಗೆ ಎರಡನೆಯ ತಲೆಮಾರಿನ ವಿದ್ವಾಂಸರೂ, ಮೂರನೆಯ ತಲೆಮಾರಿನ ನೂರಾರು ಮಂದಿ ತರುಣಪೀಳಿಗೆಯ ಉತ್ಸಾಹಿಗಳೂ ನಮ್ಮ ಜಾನಪದ ಕ್ಷೇತ್ರದಲ್ಲಿ ಉತ್ತಮ ಸಾಧನೆಯನ್ನು ತೋರುತ್ತಿದ್ದಾರೆ.

**ಕರ್ನಾಟಕ ಜಾನಪದ ಬಗೆಗಳು : ಗದ್ಯಕಥೆಗಳು**

ಕರ್ನಾಟಕ ಜಾನಪದ ತನ್ನ ಬಹುಮುಖವಾದ ಶಾಖೆಗಳಲ್ಲಿ ಇತ್ತೀಚೆಗೆ ಗುರುತಿಸಲ್ಪಟ್ಟಿದೆ. ಜನಪದ ಸಾಹಿತ್ಯ ಕ್ಷೇತ್ರದ ಮುಖ್ಯ ಅಂಗವಾದ ಗದ್ಯಕಥೆಗಳ ಸಂಗ್ರಹ ಭಾರತದ ಇನ್ನಾವ ಭಾಗದಲ್ಲೂ ಆಗದಷ್ಟು ವ್ಯಾಪಕವಾಗಿ ಇಲ್ಲಿ ಆಗಿರುವುದನ್ನು ಗಮನಿಸಬಹುದು. ಕರ್ನಾಟಕದ ಎಲ್ಲ ಭಾಗಗಳಿಂದಲೂ ಗಣನೀಯ ಸಂಖ್ಯೆಯಲ್ಲಿ ಜಾನಪದ ಸಂಕಲನಗಳು ಪ್ರಕಟಗೊಳ್ಳುತ್ತಿವೆ. ಇದುವರೆಗೆ ಪ್ರಕಟವಾಗಿರುವ ಕಥಾಸಂಕಲನಗಳನ್ನು ಪರಿಶೀಲಿಸಿದರೆ ಜಗತ್ತಿನ ವಿದ್ವಾಂಸರು ವಿಂಗಡಿಸಿರುವ ಎಲ್ಲ ಗುಂಪುಗಳಿಗೂ ಕರ್ನಾಟಕದಿಂದ ಮಾದರಿಗಳು ಲಭ್ಯವಾಗುವುದಲ್ಲದೆ ಅನೇಕ ಸ್ವತಂತ್ರ ಕಥೆಗಳೂ ಇಲ್ಲಿ ಕಂಡುಬಂದಿವೆ. ಕರ್ನಾಟಕ ಜನಪದ ಕಥೆಗಳನ್ನು ಈ ಕೆಳಕಂಡ ಗುಂಪುಗಳಲ್ಲಿ ವಿಂಗಡಿಸಿಕೊಳ್ಳಬಹುದು.

೧ ಅತಿಮಾನುಷ ಕಥೆಗಳು ೨ ಮಾಂತ್ರಿಕ ಕಥೆಗಳು ೩ ರಮ್ಯ ಕಥೆಗಳು, ೪ ವಾಸ್ತವಿಕ ಕಥೆಗಳು ೫ ಬುದ್ಧಿವಂತಿಕೆ ಕಥೆಗಳು, ೬ ಪ್ರಾಣಿ ಕಥೆಗಳು, ೭ ವಿನೋದ ಕಥೆಗಳು, ೮ ಗಾದೆಯ ಕಥೆಗಳು, ೯ ಒಗಟಿನ ಕಥೆಗಳು, ೧೦ ಸೂತ್ರ ಕಥೆಗಳು, ೧೧ ಸಂಚಿನ ಕಥೆಗಳು, ೧೨ ವಿವರಣಾತ್ಮಕ ಕಥೆಗಳು, ೧೩ ಐತಿಹ್ಯಗಳು ೧೪ ಪುರಾಣಗಳು, ೧೫ ಮುಗಿಯದ ಕಥೆಗಳು ಕನ್ನಡ ಜನಪದ ಕಥೆಗಳಲ್ಲಿ ಸುದೀರ್ಘವಾದ ಕಥೆಗಳಂತೆಯೇ ತುಂಬ ಕಿರಿದಾದ ಕಥೆಗಳೂ ಕಂಡುಬರುತ್ತವೆ. "ದೊರೆಗಿಣಿ" ಈವರೆಗೆ ದೊರೆತ ಕಥೆಗಳಲ್ಲಿ ಅತ್ಯಂತ ವಿಶಿಷ್ಟವಾದುದು. ಕಥೆಯಲ್ಲಿ ಕಥೆಯನ್ನು ಅಳವಡಿಸಿರುವುದು ಆಶ್ಚರ್ಯಕರವಾಗಿದೆ. "ಹೂಕೊಟ್ಟ ಚದುರೆ" ಅಪೂರ್ವ ಕಥೆಗಳಲ್ಲಿ ಒಂದಾಗಿದೆ. ಶಿಲಾಪ್ರತಿಮೆಯ ಸೌಂದರ್ಯ ಒಂದನ್ನು ನೋಡಿ ನಾಯಕ ದಿವ್ಯಸುಂದರಿಯನ್ನು ಜೀವಂತವಾಗಿ ಕಾಣಲು ಇಚ್ಛಿಸುತ್ತಾನೆ. ಅವನ ಗೆಳೆಯ ನಾನಾ ಲೋಕಗಳನ್ನು ಸಂಚರಿಸಿ ಆ ಸುಂದರಿಯನ್ನು ಶೋಧಿಸಿ ತರುತ್ತಾನೆ. ಇಲ್ಲಿ ಬರುವ ಅಪೂರ್ವ ವರ್ಣನೆಗಳೂ ಅನನ್ಯವಾದ ಕಲ್ಪನೆಗಳೂ ನಮ್ಮ ಮನಸ್ಸನ್ನು ಸೂರೆಗೊಳ್ಳುತ್ತವೆ. ಇಂಥ ನೂರಾರು ಕಥೆಗಳು ಕನ್ನಡ ಜನಪದ ಸಾಹಿತ್ಯದ ಕಣಜವನ್ನು ತುಂಬಿವೆ. ಅವುಗಳಲ್ಲಿ ಕಂಡು ಬರುವ ವೈವಿಧ್ಯ ಬೆರಗುಗೊಳಿಸುವಂತಿದೆ. ಈಗಾಗಲೇ ಈ ಕ್ಷೇತ್ರದಲ್ಲಿ ಅಪಾರ ಸಂಖ್ಯೆಯ ಕಥಾ ಸಂಕಲನಗಳು ಪ್ರಕಟವಾಗಿರುವುದು ನಮ್ಮ ಕಥೆಗಳ ಬಾಹುಳ್ಯವನ್ನು ಸೂಚಿಸುತ್ತದೆ. ಅನೇಕ ಪ್ರತಿಭಾಶಾಲಿ ವೃದ್ಧೆಯರೂ, ವೃದ್ಧರೂ ಈ ಕಥೆಗಳ ದೊಡ್ಡ ಚೀಲುವೆಗಳಾಗಿದ್ದಾರೆ. ಇನ್ನೂ ಸಂಗ್ರಹಕಾರ್ಯ ಬೆಳೆದರೆ ಈ ನಿಟ್ಟಿನ ಅಧ್ಯಯನ ಪೂರ್ಣಗೊಳ್ಳುತ್ತದೆ.

ಪುರಾಣ ಮತ್ತು ಐತಿಹ್ಯಗಳು ಜನಪದ ಕಥೆಗಳ ಇನ್ನೆರಡು ಮುಖ್ಯವಾದ ವರ್ಗಗಳು. ಇವುಗಳಲ್ಲಿ ಗ್ರಾಮ ದೇವತೆಗೆ ಸಂಬಂಧಿಸಿದಂತೆ, ಸಾಂಸ್ಕೃತಿಕ ವೀರರಿಗೆ ಸಂಬಂಧಿಸಿದಂತೆ

ನೂರಾರು ಪುರಾಣಗಳು ನಮ್ಮಲ್ಲಿ ಕಂಡುಬರುತ್ತವೆ. ಪ್ರಕೃತಿಯ ಅದ್ಭುತಕ್ಕೆ ಆರೋಪಿಸಿ ಹೇಳುವ ಕಥೆಗಳೇ ಐತಿಹ್ಯಗಳು. ಇವು ಪ್ರತಿಯೊಂದು ಹಳ್ಳಿಯ ಸುತ್ತಣ ನಿಸರ್ಗದಲ್ಲಿ ಅಂಟಿಕೊಂಡಿರುತ್ತವೆ. ಕೆರೆಗೆ ಬಲಿಯಾದವರ ಕಥೆಗಳು ಸಾಕಷ್ಟು ಸಂಖ್ಯೆಯಲ್ಲಿ ಸಿಕ್ಕುತ್ತವೆ. ಮಹಾಭಾರತ, ರಾಮಾಯಣ ಮುಂತಾದ ಕಾವ್ಯಗಳ ಪ್ರಭಾವವೂ ಐತಿಹ್ಯಗಳ ಮೇಲೆ ಆಗಿದೆ. ರಾಮ ಲಕ್ಷ್ಮಣ ಸೀತೆಯರು ಸಂಚರಿಸಿದ ಸ್ಥಳಗಳಿಗೆ ಸಂಬಂಧಿಸಿದ ಕಥೆಗಳಂತೆಯೇ ಪಾಂಡವರಿಗೆ ಸಂಬಂಧಿಸಿದ ಕಥೆಗಳೂ ಸಿಕ್ಕುತ್ತವೆ. ಬಂಡೆಗಳಲ್ಲಿ, ಗುಹೆಗಳಲ್ಲಿ ಇವರು ಇದ್ದು ಹೋದರೆಂಬುದಕ್ಕೆ ಸಾಕಷ್ಟು ಕಲ್ಪನೆಯ ಕುಸುರಿ ಕೆಲಸದಿಂದ ಕೂಡಿದ ಮನೋಹರ ಕಥೆಗಳು ನಮ್ಮನ್ನು ಆಕರ್ಷಿಸುತ್ತವೆ. ಸಾಮಾನ್ಯ ಜನರ ಬದುಕಿಗೆ ಸಂಬಂಧಪಟ್ಟ ಕಥೆಗಳೂ ಐತಿಹ್ಯರೂಪದಲ್ಲಿ ಪ್ರಕೃತಿಯ ಮಡಿಲಲ್ಲಿ ಕಂಡುಬರುತ್ತವೆ. ಅಣ್ಣ ತಮ್ಮಂದಿರ ಗುಡ್ಡಗಳು, ಅಕ್ಕತಂಗಿಯರ ಬಾವಿಗಳು ಹೇರಳವಾಗಿವೆ. ಸಾಹಸದ ಪ್ರತೀಕವಾಗಿ ಮೂಡಿದ ಕಥೆಗಳಿಗೇನೂ ಕೊರತೆಯಿಲ್ಲ. 'ದೊಂಬರ ಕೊಡುಗೆ' ಐತಿಹ್ಯ ಇದಕ್ಕೆ ಒಳ್ಳೆಯ ಉದಾಹರಣೆ. ರೆಕ್ಕೆಯನ್ನು ಕಟ್ಟಿಕೊಂಡು ವಿಸ್ತಾರವಾದ ಪ್ರದೇಶದಲ್ಲಿ ಹಾರಾಡಿದ ಒಬ್ಬ ಸಾಹಸಿಯ ಐತಿಹ್ಯ ಇದು. ಗಿಡಮರಗಳಿಗೆ ಕೆರೆ ಕಟ್ಟೆಗಳಿಗೆ ಹೊಲಗದ್ದೆಗಳಿಗೆ ಬೆಟ್ಟಗುಡ್ಡಗಳಿಗೆ ಗುಡಿಗೋಪುರಗಳಿಗೆ ಆರೋಪಿಸಿ ಹೇಳಲ್ಪಡುವ ಈ ಕಥೆಗಳು ನಿಸರ್ಗದ ನಡುವೆ ಜನಸಾಮಾನ್ಯರಿಗೆ ಒಂದು ತೆರೆದ ಪುಸ್ತಕವಾಗಿ ಲಭ್ಯವಾಗುತ್ತವೆ. ಅವರು ಬರೆದ ಪುಸ್ತಕಗಳನ್ನು ಓದಬೇಕಾದುದಿಲ್ಲ. ತಮಗೆ ಬೇಕಾದ ಜೀವನ ಮೌಲ್ಯಗಳನ್ನು ಸ್ಫೂರ್ತಿ ಚೈತನ್ಯಗಳನ್ನು ಈ ಐತಿಹ್ಯಗಳಿಂದ ಪಡೆದುಕೊಳ್ಳಬಹುದು. ಕುಡಿಯುವ ನೀರಿನ ಬಾವಿ ಇಲ್ಲದ ಊರು ಇಲ್ಲದಿರಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಐತಿಹ್ಯವಿಲ್ಲದ ಊರು ಇಲ್ಲದಿರಲು ಸಾಧ್ಯವಿಲ್ಲ.

**ಜನಪದಗೀತೆ ಸಾಹಿತ್ಯ :**

ಕನ್ನಡ ಗದ್ಯ ಕಥನಗಳಂತೆಯೇ ಶ್ರೀಮಂತವಾದ ಜನಪದ ಸಾಹಿತ್ಯದ ಇನ್ನೊಂದು ಮುಖ ಗೀತ ಸಾಹಿತ್ಯಕ್ಕೆ ಸಂಬಂಧಪಡುತ್ತದೆ. ಇದರಲ್ಲಿ ಜನಪದ ಗೀತೆ, ಲಾವಣಿ, ಖಂಡಕಾವ್ಯ, ಮಹಾಕಾವ್ಯ ಮುಂತಾದವು ಸೇರುತ್ತವೆ. ಜನಪದ ಗೀತಗಳು ವಿವಿಧ ಸಂಪ್ರದಾಯಗಳಲ್ಲಿ ಗುರುತಿಸಲ್ಪಟ್ಟಿವೆ. ೧. ಬೀಸುವ ಪದಗಳು, ೨. ಕುಟ್ಟುವ ಪದಗಳು, ೩. ಲಾಲಿ ಪದಗಳು., ೪. ಮದುವೆ ಪದಗಳು, ೫. ದೇವರ ಪದಗಳು, ೬. ಕಗ್ಗದ ಪದಗಳು, ೭. ಕುಣಿತದ ಪದಗಳು, ೮. ತಿಂಗಳು ಮಾವನ ಪದಗಳು, ೯. ಕೊಂತಿಯ ಪದಗಳು, ೧೦. ಭಾಗವಂತಿಕೆ ಪದಗಳು, ೧೧. ಅಂಟಿಕೆ ಪಂಟಿಕೆ ಪದಗಳು, ೧೨. ಅಚ್ಚೆಯ ಪದಗಳು, ೧೩. ಹೊಸಿಗೆ ಪದಗಳು, ೧೪. ಶಿಶುಪ್ರಾಸಗಳು, ೧೫. ಸವಾಲ್ ಜವಾಬ್ ಪದಗಳು, ೧೬. ಮೊರ್ನೊಮಿ ಪದಗಳು ಮುಂತಾಗಿ ಅನೇಕ ವರ್ಗದ ಹಾಡುಗಳು ಲಭ್ಯವಾಗುತ್ತವೆ. ಬೀಸುವ ಹಾಡುಗಳು ಗರತಿಯ ಪರಿಶುದ್ಧವಾದ ಬದುಕಿನ ವೈಶಿಷ್ಟ್ಯವನ್ನು ಚಿತ್ರಿಸುತ್ತವೆ. ತನ್ನ ಬದುಕಿನ ಆಶೋತ್ತರಗಳನ್ನು ಅವಳು ಇಲ್ಲಿ ತೋಡಿಕೊಳ್ಳುತ್ತಾಳೆ. ತನ್ನ ಬಂಧು ಬಳಗ, ತೌರಿನ ಸಿರಿ, ಮುಂತಾದವನ್ನು ಅವಳು ನೆನೆದು ಹಾಡುವಲ್ಲಿ ಕೊಟ್ಟ ಮನೆ ಮತ್ತು ಹುಟ್ಟಿದ ಮನೆಗಳ ನಡುವಿನ ಒಂದು ರಸದ ಸೇತುವೆಯನ್ನು ಕಟ್ಟುತ್ತಾಳೆ.

ಹಾಲುಂಡ ತವರೀಗೆ ಏನೆಂದು ಹಾಡಲಿ
ಹೊಳೆದಂಡೆಲಿರುವ ಕರಿಕೆಯ–ಕುಡಿಹಂಗೆ
ಹಬ್ಬಲಿ ಅವರ ರಸಬಳ್ಳಿ

ತೌರಿನ ಬಗ್ಗೆ ಅಪಾರವಾದ ಪ್ರೀತಿ ಮಮತೆಗಳನ್ನು ತುಂಬಿಕೊಂಡ ಅವಳು ತಾನು ಹಾಲುಂಡು ಬೆಳೆದ ಮನೆಗೆ ಶುಭವನ್ನು ಹಾರೈಸುವ ರೀತಿ ಇಲ್ಲಿ ಹೃದಯಸ್ಪರ್ಶಿಯಾಗಿ ಮೂಡಿಬಂದಿದೆ.

ಕಾಶಿಗೆ ಹೋಗಲಿಕೆ ಏಸೊಂದು ದಿನಬೇಕು
ತಾಸೊತ್ತಿನ ಹಾದಿ ತವರೂರು–ಮನೆಯಲ್ಲಿ
ಕಾಶಿ ಕುಂತವಳೆ ಹಡೆದವ್ವ

ಹೆತ್ತ ತಾಯಿಯ ಪಾವಿತ್ರ್ಯವನ್ನು ಪ್ರಾಶಸ್ತ್ಯವನ್ನು ಇದಕ್ಕಿಂತ ಸೊಗಸಾದ ರೀತಿಯಲ್ಲಿ ಚಿತ್ರಿಸಲು ಅಸಾಧ್ಯವೆಂಬಂತೆ ಈ ತ್ರಿಪದಿ ಮೂಡಿ ಬಂದಿದೆ.

ಹೀಗೆಯೇ ಕನ್ನಡ ಜನಪದ ಗೀತೆಗಳ ಎಲ್ಲ ಸಂಪ್ರದಾಯದ ಸಾಹಿತ್ಯವೂ ಕರ್ನಾಟಕ ಸಂಸ್ಕೃತಿಯ ಸಾರವನ್ನು ತನ್ನಲ್ಲಿ ಅಂತರ್ಗತಗೊಳಿಸಿಕೊಂಡಿದೆ. ಉನ್ನತ ಕಾವ್ಯಮೌಲದಿಂದಲೂ ಇದು ತುಂಬಿ ತುಳುಕುತ್ತದೆ. ಈ ಲಾಲಿಯ ಪದವನ್ನು ನೋಡಿ–

ಆಡಿ ಬಾ ನನ್ನಯ್ಯ ಅಂಗಾಲ ತೊಳೆದೇನು
ತೆಂಗಿನ ಕಾಯ ತಿಳಿನೀರ–ತಕ್ಕೊಂಡು
ನಿನ್ನ ಬಂಗಾರ ಪಾದ ತೊಳೆದೇನು

ಕನ್ನಡ ಲಾಲಿಯ ಪದಗಳ ಒಂದು ಮಾದರಿ ಇದು. ಯಾವ ಕವಿಕಲ್ಪನೆಯ ಎತ್ತರದಲ್ಲಾದರೂ ಈ ತ್ರಿಪದಿಯನ್ನು ಇಟ್ಟು ನೋಡಬಹುದು. ತನ್ನ ಕಂದನ ಬಗ್ಗೆ ತಾಯಿಯಾದವಳು ಎಂಥ ಸೊಗಸಾದ ಭಾವನೆಗಳನ್ನು ತನ್ನ ಹೃದಯದಲ್ಲಿ ತುಂಬಿಕೊಂಡಿರುತ್ತಾಳೆ ಎಂಬುದಕ್ಕೆ ಈ ಹಾಡು ನಿದರ್ಶನವಾಗಿದೆ. ಇಂಥ ಕಾವ್ಯೋತ್ಕರ್ಷದಿಂದ ಕೂಡಿದ ನೂರಾರು ಲಾಲಿಯ ಪದಗಳು ನಮ್ಮಲ್ಲಿ ಕಂಡುಬರುತ್ತವೆ.

ಮೊರ್ನವಮಿಯ ಪದಗಳೂ ಚೌಪದಿ ರೂಪದ ಹಾಡುಗಳಾಗಿವೆ. ಇವು ಬಹುಮಟ್ಟಿಗೆ ಮಕ್ಕಳು ಹಾಡುವ ಪದಗಳು. ಪೋಷಕ–ಶಿಕ್ಷಕ ಸಂಬಂಧವನ್ನು ಕುದುರಿಸುವ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಈ ಹಾಡುಗಳನ್ನು ಮೊರ್ನವಮಿಯ ಕಾಲದಲ್ಲಿ ಮಕ್ಕಳು ಹಾಡಿಕೊಂಡು ಊರಾಡಲು ಹೋಗುತ್ತಿದ್ದ ಸಂದರ್ಭವನ್ನು ಇವು ಸೂಚಿಸುತ್ತವೆ. ಕಗ್ಗದ ಪದಗಳು ಜನಪದ ಸಾಹಿತ್ಯದಲ್ಲಿ ಕಂಡುಬರುವ ವಿನೋದ ಗೀತಗಳು. ಕುರಿಯ ಮಂದೆಗಳ ಬಳಿ, ರಾತ್ರಿಯ ಕಾಲದಲ್ಲಿ ಬಂಡಿಯ ಪಯಣವನ್ನು ಕೈಗೊಳ್ಳುವಾಗ ಹಾಗೂ ಇತರ ಸಂದರ್ಭಗಳಲ್ಲಿ ಇವುಗಳನ್ನು ಹಾಡಲಾಗುತ್ತದೆ. ಸಾಮಾನ್ಯವಾಗಿ ಪುರುಷ ವರ್ಗದಲ್ಲಿ ಈ ಹಾಡುಗಳು ಹೆಚ್ಚು. ಏಕತಾನತೆಯ ಬೇಸರವನ್ನು ನೀಗಿಕೊಳ್ಳಲು ಇವುಗಳನ್ನು ಹಾಡಲಾಗುತ್ತದೆ.

ಬ್ರಾಹ್ಮಣ ಹಾಗೂ ಜೈನ ಸಮಾಜಗಳಂಥ ಮುಂದುವರಿದ ವರ್ಗಗಳಲ್ಲೂ ಜನಪದ ಸಾಹಿತ್ಯ ಕಂಡುಬರುತ್ತದೆ. ಇಲ್ಲಿ ಸಾಮಾನ್ಯವಾಗಿ ಸ್ತ್ರೀವರ್ಗದ ಹಾಡುಗಳೇ ಹೆಚ್ಚು; ದೈವಭಕ್ತಿ ಪ್ರಧಾನವಾದ ಗೀತೆಗಳಿಗೆ ಪ್ರಾಶಸ್ತ್ಯವಿದೆ.

ಜನಪದ ಸಾಹಿತ್ಯದ ಸತ್ವಯುತವಾದ ಭಾಗ ಹಾಡ್ಗತೆಗಳಿಗೆ ಸಂಬಂಧಪಡುತ್ತದೆ. ಪುರುಷರೂ ಸ್ತ್ರೀಯರೂ ಹಾಡುವ ಅನೇಕ ಬಗೆಯ ಹಾಡ್ಗತೆಗಳು ನಮ್ಮಲ್ಲಿ ಕಂಡುಬರುತ್ತವೆ. ಇಂಥ ಕತೆಗಳನ್ನು ಲಾವಣಿಗಳೆಂದು ಕರೆಯಲಾಗಿದೆ. ಲಾವಣಿಗಳು ಬಹುಮಟ್ಟಿಗೆ ಎಂದೂ ನಡೆದ ವಾಸ್ತವಿಕ ಘಟನೆಯನ್ನು ಆಧರಿಸಿ ರಚಿತವಾಗಿರುತ್ತವೆ. ಸಮಾಜಕ್ಕಾಗಿ ನಾನಾ ಬಗೆಯ ತ್ಯಾಗ ಬಲಿದಾನಗಳನ್ನು ಮಾಡಿದ ವ್ಯಕ್ತಿಗಳನ್ನು ಕುರಿತು, ಬದುಕಿನಲ್ಲಿ ನಾನಾ ರೀತಿಯ ಸಂಕಷ್ಟಗಳಿಗೆ ಈಡಾದ, ದುರಂತ

ಗಳಿಗೆ ಒಳಗಾದ ಇತರರ ಕ್ರೌರ್ಯಕ್ಕೆ, ಸ್ವಾರ್ಥಕ್ಕೆ ಅಕಾರಣವಾಗಿ ತಮ್ಮ ಬದುಕನ್ನು ಬಲಿಕೊಟ್ಟ ವ್ಯಕ್ತಿಗಳನ್ನು ಕುರಿತು ಹುಟ್ಟಿಕೊಂಡ ಲಾವಣಿಗಳೇ ಹೆಚ್ಚು. ಉತ್ತರದೇವಿ, ಈರೋಬಿ, ನಾಗವ್ವ, ಹುಳಿಯೂರು ಕೆಂಚಮ್ಮ, ಹಿರಿದಿಮ್ಮಿ, ಈ ಹಾಡ್ಗತ್ತೆ ಒಬ್ಬೊಬ್ಬರ ಬದುಕಿನಲ್ಲಿ ಕಂಡುಬರುವ ದುರಂತದ ಚಿತ್ರಗಳಾಗಿವೆ. ಈ ದುರಂತ ಕಥೆಗಳ ಜೊತೆಗೆ ವಿಡಂಬನಾತ್ಮಕ ಲಾವಣಿಗಳೂ ರಮ್ಯ ಲಾವಣಿಗಳೂ ಪ್ರೇಮ ಕಥೆಗಳೂ ಇತಿಹಾಸಿಕ ಕಥೆಗಳು ವಿನೋದ ಕಥೆಗಳೂ ಹಾಡ್ಗತೆಗಳ ರೂಪದಲ್ಲಿ ಕಂಡುಬರುತ್ತವೆ. ಈಗಾಗಲೇ ಕನ್ನಡದಲ್ಲಿ ನೂರಾರು ಹಾಡ್ಗತೆಗಳು ಲಭ್ಯವಾಗಿವೆ. ಹಾಡ್ಗತೆಗಳಿಗಿಂತ ವ್ಯಾಪಕವಾಗಿ ಕಂಡುಬರುವ ದೀರ್ಘ ರಚನೆಗಳು, ಖಂಡಕಾವ್ಯಗಳೆನಿಸುತ್ತವೆ. ಇವು ಮೂರು ನಾಲ್ಕು ಗಂಟೆಗಳ ಕಾಲ ಹಾಡಬಹುದಾದ ನೀಳ್ಗತೆಗಳು. ಹಿಮ್ಮೇಳಗಳನ್ನು ರಚಿಸಿಕೊಂಡು ಜನಪದ ಗಾಯಕರು ಈ ಕಥೆಗಳನ್ನು ವಿಶೇಷ ಸಂದರ್ಭಗಳಲ್ಲಿ ಹಾಡುತ್ತಾರೆ. ಇವನ್ನು ಕೇಳುವುದಕ್ಕಾಗಿಯೇ ಜನ ನೆರೆದಿರುತ್ತಾರೆ. ಮನೆಯಲ್ಲಿ ಇದಕ್ಕಾಗಿಯೇ ಪೂಜೆಯನ್ನು ನಡೆಸಿ ರಾತ್ರಿಯೆಲ್ಲಾ ಗಾಯಕರಿಂದ ಕಥೆಗಳನ್ನು ಹಾಡಿಸುವುದುಂಟು. ಇವು ಪುಣ್ಯಕಥೆಗಳೆಂದು ಜನ ಭಾವಿಸುತ್ತಾರೆ. ಈ ಕಥೆಗಳನ್ನು ಹಾಡಿಸುವುದರಿಂದ– ಹಾಡಿಸಿದವರಿಗೆ ಕೇಳುವವರಿಗೆ ಪುಣ್ಯ ಪ್ರಾಪ್ತಿ ಆಗುವ ನಂಬಿಕೆಯೂ ಇದೆ. ಇಂಥ ಕತೆಗಳಲ್ಲಿ ಮುಖ್ಯವಾದವು ೧. ಬಾಲನಾಗಮ್ಮ, ೨. ಗುಣಸಾಗರಿ, ೩. ಕಾಳಿಂಗರಾಯ, ೪. ಕಾಡಸಿದ್ಧಮ್ಮ, ೫. ನೀಲಕಂಠ ರೂಪಾಪತಿ, ೬. ಬಸವಕುಮಾರ, ೭. ಲೋಹಿತ ಕುಮಾರ, ೮. ಶಿವಯೋಗಿ, ೯. ಪರಂತೋಗಿ, ೧೦ ಲಕ್ಷಾಪತಿರಾಜ, ೧೧. ಗಜಾವತಿ, ೧೨. ರುದ್ರಕುವಾರು, ೧೩. ಶಿವಶಂಕರರಾಜ, ೧೪. ಗಂಗಗೌರಿ, ೧೫. ಪುಣ್ಯವಂತೆ ಗುಣವಂತೆ, ೧೬. ನಿಂಗಣ್ಣ ಗೌಡ, ೧೭. ಚನ್ನಬಸವಣ್ಣ, ೧೮. ಮಡಿವಾಳ ಮಾಚಯ್ಯ, ೧೯. ಕೆರೆ ಹೊನ್ನಮ್ಮ, ೨೦. ಭುವನಮ್ಮ. ಈ ಕಥೆಗಳು ಬದುಕಿನ ನಾನಾ ಸಮಸ್ಯೆಗಳ ಸುತ್ತ ಹೆಣೆದುಕೊಂಡಿರುತ್ತವೆ. ದುಷ್ಟರು, ದುರ್ಜನರು ಮುಂತಾದವರ ಕಾರಣದಿಂದಾಗಿ ದುರ್ವಿಧಿಯಿಂದಾಗಿ ಮುಗ್ಧರು, ಸತ್ಯಸಂಧರು, ಪುಣ್ಯಶೀಲರು ನಿರುಪಾಧಿಕ ಜೀವಿಗಳು ಕಷ್ಟಪರಂಪರೆಗಳಿಗೆ ಸಿಲುಕಿ ನೋವನ್ನು ಅನುಭವಿಸುವ ಚಿತ್ರಗಳು ಇಲ್ಲಿ ಬರುತ್ತವೆ. ಕೊನೆಗೆ ಅಸತ್ಯಕ್ಕೆ ಸೋಲಾಗಿ ಸತ್ಯಕ್ಕೆ ಜಯ ಲಭಿಸುತ್ತದೆ. ದುಷ್ಟರಿಗೆ ಶಿಕ್ಷೆಯೂ ಶಿಷ್ಟರಿಗೆ ರಕ್ಷಣೆ ದೊರೆಯುತ್ತಿದೆ.

ಮೇಲಿನ ಕಥೆಗಳ ಜೊತೆಗೆ ರಾಮಾಯಣ, ಮಹಾಭಾರತಗಳಿಗೆ ಸಂಬಂಧಿಸಿದ ದೀರ್ಘ ಕಾವ್ಯಗಳೂ ನಮ್ಮಲ್ಲಿ ದೊರೆಯುತ್ತವೆ. ಅಲ್ಲದೆ 'ಪಿರಿಯಾ ಪಟ್ಟಣದ ಕಾಳಗ', 'ಶರ್ಜಾಪ್ಪ ನಾಯಕ', 'ಸೀರಾ ರಂಗಪ್ಪ ನಾಯಕ', 'ಮಾಗಡಿ ಕೆಂಪೇಗೌಡ', 'ಸಂಗೊಳ್ಳಿ ರಾಯಣ್ಣ', 'ಕಾರುಗಹಳ್ಳಿ ಕಾಳಗ'ಮೊದಲಾದ ಕಾವ್ಯಗಳೂ ಸಿಕ್ಕುತ್ತವೆ. ಇವೆಲ್ಲಾ ವೀರರಸ ಪ್ರಧಾನವಾಗಿದ್ದು ಸಾಹಸಕ್ಕೆ ಕೆಚ್ಚಿಗೆ ಒಳ್ಳೆಯ ಪ್ರತೀಕಗಳಾಗಿ ನಿಲ್ಲುತ್ತವೆ. ಕನ್ನಡ ಜನಪದ ಕಾವ್ಯಗಳಲ್ಲಿ ಪ್ರಮುಖ ದೈವಗಳಿಗೆ ಸಂಬಂಧಿಸಿದ ಸುಂದರ ಪ್ರೇಮ ಕಥೆಗಳೂ ಲಭ್ಯವಾಗುತ್ತವೆ. 'ಸಂಜಯ್ಯ–ಚಾಮುಂಡಿ', 'ಬಿಳಿಗಿರಿರಂಗ–ಕುಸುಮಾಲಿ', 'ಮುಡುತೊರೆ ಮಲ್ಲಿಕಾರ್ಜುನ–ಪಾರ್ವತಿ', 'ಚುಂಚನಗಿರಿ ಭೈರುವ–ಮಾಳವ್ವ', 'ಮೇಲುಕೋಟೆ ಚೆಲುವರಾಯ–ವರನಂದಿ', 'ಶಿವಗಂಗೆ ಗಂಗಾಧರ–ಹೊನ್ನಲದೇವಿ', 'ಮೈಲಾರಲಿಂಗ–ಕೋಮಲೆ' ಮುಂತಾದುವು ಮುಖ್ಯವಾದವು. ಈ ರಸಿಕ ದೈವಗಳು ಕೂಡಿದ ಹೆಂಡತಿಯರ ಜೊತೆಗೆ ಮೆಚ್ಚಿನ ನಲ್ಲೆಯರನ್ನು ಕರೆತರುವ ಸ್ವಾರಸ್ಯ ಪ್ರಸಂಗಗಳು ಈ ಕಾವ್ಯಗಳಲ್ಲಿ ಚಿತ್ರಿತವಾಗಿರುತ್ತವೆ. ಸ್ಥಳೀಯ ಹೆಣ್ಣೊಂದನ್ನು ವರಿಸುವುದರ ಮೂಲಕ ತನ್ನ ಭಕ್ತವರ್ಗದ ಬಂಧುವಾಗಿ ಈ ದೇವರುಗಳು ಕಲ್ಪಿತವಾಗುತ್ತಾರೆ.

ಕನ್ನಡ ಜನಪದ ಸಾಹಿತ್ಯದ ತೂಕವನ್ನು ಹೆಚ್ಚಿಸಿರುವ ಕಾವ್ಯಗಳಲ್ಲಿ ಮಲೆಯ ಮಾದೇಶ್ವರ, 'ಮಂಟೆಸ್ವಾಮಿ', 'ಜುಂಜಪ್ಪ', 'ಯಲ್ಲಮ್ಮ' ಮುಂತಾದ ಧಾರ್ಮಿಕ ಕಾವ್ಯಗಳು ಮುಖ್ಯವಾದವು. ಇವುಗಳು ಮಹಾಕಾವ್ಯದ ಸ್ವರೂಪವನ್ನು ಪಡೆದುಕೊಂಡಿವೆ.

ನಮ್ಮ ಜನಪದ ಕಾವ್ಯಗಳನ್ನು ಹಾಡುವ ಸಾಮಾನ್ಯ ಗಾಯಕರನ್ನು ಬಿಟ್ಟರೆ ಸುಮಾರು ಹದಿನೈದಕ್ಕೂ ಹೆಚ್ಚು ವೃತ್ತಿಗಾಯಕ ವರ್ಗಗಳು ಕರ್ನಾಟಕದಲ್ಲಿ ಕಂಡುಬಂದಿವೆ. ಈ ವೃತ್ತಿಗಾಯಕರು ಜನಪದ ಕಾವ್ಯಗಳನ್ನು ಅನೇಕ ತಲೆಮಾರುಗಳಿಂದ ಹಾಡಿಕೊಂಡು ಬಂದವರು. ಅದೇ ಇವರ ಪ್ರಧಾನ ವೃತ್ತಿ. ಮೇಳಗಳನ್ನು ನಡೆಸುತ್ತಾ ಇವರು ಜನರಿಗೆ ಮನರಂಜನೆಯನ್ನು ಒದಗಿಸುವವರು, ಇವರದೇ ಆದ ವೇಷಭೂಷಣ, ವಾದ್ಯವಿಶೇಷ ಮುಂತಾದುವುಗಳು ಇರುತ್ತವೆ. ಕೆಲವರು ಕುಳಿತು ಕಥೆಗಳನ್ನು ಹಾಡಿದರೆ ಕೆಲವರು ಕುಣಿತವನ್ನು ಅಳವಡಿಸಿಕೊಂಡಿದ್ದಾರೆ. ಕಂಸಾಳೆಯವರು, ನೀಲಗಾರರು, ಕಣಿಯವರು, ಗೊರವರು, ಚಾಡಿಕೆಯವರು, ಗೊಂದಲಿಗರು, ಕರಪಾಲವರು, ತಂಬೂರಿಯವರು, ದೊಂಬಿದಾಸರು, ಹೆಳವರು, ಕಿನ್ನರಿ ಜೋಗಿಗಳು, ಸಾರಿಂದದವರು, ಅಸಾದಿಗಳು, ಬುರ್ರ ಕಥೆಯವರು, ಭೂತೇರರು ಮುಂತಾದ ಅನೇಕ ಬಗೆಯ ವೃತ್ತಿಗಾಯಕ ಪರಂಪರೆಗಳು ನಮ್ಮ ಜನಪದ ಕಾವ್ಯ ಸಂಪ್ರದಾಯಗಳ ಕಲ್ಪತರುಗಳೆನಿದ್ದರೆ ಕಲ್ಗಿತುರ ಸಂಪ್ರದಾಯ, ಗೀಗೀ ಸಂಪ್ರದಾಯ, ಪಾಡ್ದನ ಸಂಪ್ರದಾಯ, ಗುಮ್ಮಟೆ ಸಂಪ್ರದಾಯ, ಭಾಗವಂತಿಕೆ ಸಂಪ್ರದಾಯ, ಅಂಟಿಕೆ – ಪಂಟಿಕೆ ಸಂಪ್ರದಾಯ, ಡೊಳ್ಳು ಸಂಪ್ರದಾಯ ಮುಂತಾದ ಕೆಲವು ಪ್ರಾದೇಶಿಕ ಕಾವ್ಯ ಸಂಪ್ರದಾಯಗಳಲ್ಲಿ ಹಾಡ್ಗತೆಗಳ ಮೇಳಗಳನ್ನು ಕಾಣಬಹುದು. ಕಲ್ಗಿತುರಾ ಸಂಪ್ರದಾಯ ಉತ್ತರ ಭಾರತದಿಂದ ಮಹಾರಾಷ್ಟ್ರವನ್ನು ಪ್ರವೇಶಿಸಿ ಕರ್ನಾಟಕದಲ್ಲೂ ಬೇರುಬಿಟ್ಟ ಕಲೆಯಾಗಿದೆ. ತಮಿಳುನಾಡು ಮುಂತಾದ ಕಡೆಗಳಿಗೂ ಇದು ವ್ಯಾಪಿಸಿದೆ. ಎರಡು ತಂಡಗಳು ಪರಸ್ಪರ ಗೀತೆಗಳ ಮೇಲಾಟದಲ್ಲಿ ತೊಡಗುವುದೇ ಇಲ್ಲಿನ ವೈಶಿಷ್ಟ್ಯ. ಪಾಡ್ದನಗಳು ತುಳುಮೂಲದ ಭೂತಾರಾಧನೆಯ ಕತೆಗಳು, ಗುಮ್ಮಟೆ ಕಾವ್ಯಗಳು ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಗೌಡರ ಸಂಪ್ರದಾಯ. ಅಂಟಿಕೆ ಪಂಟಿಕೆ ಮಲೆನಾಡಿನ ಸಂಪ್ರದಾಯವಾದರೆ ಭಾಗವಂತಿಕೆ ಮೇಳ ಬಯಲುನಾಡಿನ ಸಂಪ್ರದಾಯ.

ಕನ್ನಡ ಜನಪದ ಸಾಹಿತ್ಯ ಕ್ಷೇತ್ರದಲ್ಲಿ ಒಗಟು, ಒಡಪು, ಗಾದೆ ಮುಂತಾದ ಶಾಬ್ದಿಕ ರಚನೆಗಳನ್ನು ನಿರ್ಲಕ್ಷಿಸುವಂತಿಲ್ಲ; ಒಗಟು ಮತ್ತು ಗಾದೆಗಳು ಜನಪ್ರಿಯ ರೂಪಗಳಾಗಿ ಪ್ರಚಲಿತವಾಗಿವೆ. ಆದರೆ ಗಂಡು ಹೆಣ್ಣುಗಳು ತಮ್ಮ ತಮ್ಮ ಹೆಸರುಗಳನ್ನು ಮದುವೆಯ ಸಂದರ್ಭದಲ್ಲಿ ಹೇಳುವ ಸಂಪ್ರದಾಯಗಳನ್ನು ಪ್ರತಿನಿಧಿಸುವ ಒಡಪುಗಳು ಈಗ ವಿರಳವಾಗುತ್ತಿವೆ. ಇವುಗಳ ಜೊತೆಗೆ 'ಒಡಬು' ಎಂಬ ಇನ್ನೊಂದು ಬಗೆಯ ರಚನೆಗಳು ಕಂಡುಬರುತ್ತವೆ. ಇವುಗಳನ್ನು ಖಡ್ಗ ಹೇಳುವುದು ಎನ್ನಲಾಗುತ್ತದೆ. ಭಲರ್‌ಬೀರ ಎಂಬ ವೀರಭದ್ರನ ಖಡ್ಗ ಪ್ರಸಿದ್ಧವಾದುದು.

### ಜನಪದ ರಂಗಭೂಮಿ

ಕರ್ನಾಟಕ ಜನಪದ ರಂಗಭೂಮಿ ಅತ್ಯಂತ ಪ್ರಾಚೀನ

ಕಾಲದಿಂದಲೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿದೆ. ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಕರಾವಳಿ ಈ ಪ್ರಾದೇಶಿಕ ಭಾಗಗಳಿಗೆ ಅನುಗುಣವಾಗಿ ಯಕ್ಷಗಾನ ಬಯಲಾಟಗಳ ವರ್ಗೀಕರಣವನ್ನು ಮಾಡಿಕೊಳ್ಳಬಹುದು. ಬಯಲು ಸೀಮೆಯಾದ್ಯಂತ ಎಂದರೆ ಮೈಸೂರು ಜಿಲ್ಲೆಯಿಂದ ಬೀದರ್ ಜಿಲ್ಲೆಯ ವರೆಗೆ ಕಂಡುಬರುವ ಯಕ್ಷಗಾನ ಬಯಲಾಟಗಳನ್ನು ಮೂಡಲಪಾಯ ಎಂದೂ, ಕರಾವಳಿಯ ಭಾಗದ ಯಕ್ಷಗಾನ ಬಯಲಾಟಗಳನ್ನು ಪಡುವಲಪಾಯ ಎಂದು ಗುರುತಿಸಲಾಗುತ್ತದೆ. ಇವುಗಳ ಜೊತೆಗೆ ಬೆಟ್ಟದ ಕೋರೆ, ಲೇಪಾಕ್ಷಿ ಮುಂತಾದ ಸಂಪ್ರದಾಯಗಳೂ ಕಾಣಬರುತ್ತವೆ. ಸೂತ್ರದ ಗೊಂಬೆಯಾಟ, ತೊಗಲು ಗೊಂಬೆಯಾಟ ಇವೂ ಸಹ ಯಕ್ಷಗಾನ ಸಂಪ್ರದಾಯಕ್ಕೆ ಸೇರಿದ ಕಲೆಗಳೇ. ಇವುಗಳ ಜೊತೆಗೆ ಸಣ್ಣಾಟಗಳೂ ಸೇರುತ್ತವೆ. ಸಾಮಗಾನ ನಾಟಕಗಳೆಂಬ ವಿಶಿಷ್ಟ ಬಗೆಯ ನಾಟಕಗಳೂ ಕಾಣಬರುತ್ತವೆ. ವೈವಿಧ್ಯಮಯವಾದ ನಮ್ಮ ಜನಪದ ರಂಗಭೂಮಿಯನ್ನು ಹೀಗೆ ವಿಭಾಗಿಸಿಕೊಳ್ಳಬಹುದು:–

ಜನಪದ ರಂಗಭೂಮಿ

ಯಕ್ಷಗಾನ ಬಯಲಾಟಗಳು.
ಗೊಂಬೆಯಾಟಗಳು.
ಸಣ್ಣಾಟಗಳು.
ಸಾಮಗಾನ ನಾಟಕಗಳು.
ಮರಾಠಿ ನಾಟಕಗಳು.
ದೊಂಬಿದಾಸರ ನಾಟಕಗಳು.

ಯಕ್ಷಗಾನ ಬಯಲಾಟಗಳು ಮೂಲದ್ರಾವಿಡ ನೃತ್ಯ ನಾಟಕವೊಂದರಿಂದ ಕವಲೊಡೆದು ದಕ್ಷಿಣ ಭಾರತದ ನಾಲ್ಕು ಪ್ರಮುಖ ದ್ರಾವಿಡ ದೇಶಗಳಲ್ಲೂ ಪ್ರಾದೇಶಿಕ ವೈವಿಧ್ಯವನ್ನು ರೂಢಿಸಿಕೊಂಡು ಬೆಳೆದಿವೆ. ಆ ರೂಪಗಳು: ಕರ್ನಾಟಕದ ಬಯಲಾಟ; ಆಂಧ್ರದ ವೀಧಿ ನಾಟಕ; ತಮಿಳು ನಾಡಿನ ತೆರುಕೂತು ಮತ್ತು ಕೇರಳದ ಕಥಕ್ಕಳಿ. ಇದರಲ್ಲಿ ಕಥಕ್ಕಳಿ ಮಾತ್ರ ಪರಿಷ್ಕಾರಗೊಂಡು ತುಂಬ ಪ್ರೌಢಿಮೆಯನ್ನು ಸಾಧಿಸಿಕೊಂಡಿದೆ.

ಯಕ್ಷಗಾನ ಬಯಲಾಟ ಜಾನಪದ ಮೂಲದಿಂದ, ಪುರಾಣ ಮೂಲದಿಂದ ವಸ್ತುವನ್ನು ಸ್ವೀಕರಿಸಿ ಸಂಗೀತ, ನೃತ್ಯ, ವೇಷ ಭೂಷಣ, ವರ್ಣಗಾರಿಕೆಗಳಿಂದ ಸಮರಸಗೊಂಡ ಅಪೂರ್ವವಾದ ಕಲೆಯಾಗಿದೆ. ಭಾಗವತ, ಕಥೆಯೊಂದನ್ನು ಹಾಡಿ ಸಾಗಿದಂತೆ ವೇಷಧಾರಿಗಳು ಅದಕ್ಕೆ ಅನುಗುಣವಾಗಿ ನರ್ತಿಸಿ ಅಭಿನಯಿಸಿ ಅದನ್ನು ಅರ್ಥೈಸುತ್ತಾರೆ. ಮೂಲತಃ ಕೇವಲ ಹಾಡುಗಬ್ಬವಾಗಿ ಉಳಿದಿದ್ದ ಯಕ್ಷಗಾನ ಇತರ ಅಂಗಗಳನ್ನು ಸ್ವೀಕರಿಸಿ ನಾಟಕಕ್ಕೆ ಅಳವಟ್ಟಿದೆ. ಯಕ್ಷಗಾನ ಶಬ್ದಕ್ಕೆ ಏನಿಲ್ಲ ಎಂದರೂ ಸಾವಿರ ವರ್ಷದ ಇತಿಹಾಸ ಕಂಡುಬರುತ್ತದೆ. ಯಕ್ಷಗಾನ ಕೃತಿಗಳು ಐನೂರು ವರ್ಷಗಳ ಹಿಂದಿನಿಂದ ಲಭ್ಯವಾಗುತ್ತವೆ, ಹಗರಣ, ನಾಡಾಡಿಗಳ ನಾಟಕ, ನಾಟಕದ ಘಣ ಮುಂತಾದ ಶಬ್ದಗಳು ನಮ್ಮ ಹಳೆಯ ಕಾವ್ಯಗಳಲ್ಲಿ ಲಭ್ಯವಾಗುತ್ತವೆ. ಹಿನ್ನೆಲೆಯಲ್ಲಿ ಯಕ್ಷಗಾನ ಬಯಲಾಟ ಕರ್ನಾಟಕದ ನಾಟಕ ಕಲೆಯ ಪ್ರಾಚೀನತೆಗೆ ಸಾಕ್ಷಿಯಾಗಿ ನಿಲ್ಲುತ್ತವೆ.

ಪಡುವಲ ಪಾಯ ಯಕ್ಷಗಾನ ಸಂಪ್ರದಾಯದಲ್ಲಿ ಬಳಕೆಯಾಗುವ ಯಕ್ಷಗಾನ ಕೃತಿಗಳಲ್ಲಿ ಅನೇಕವಕ್ಕೆ ಮೂಲ ಕರ್ತೃವಿನ ಹೆಸರು ಲಭ್ಯವಾಗುತ್ತದೆ. ಪಾರ್ತಿಸುಬ್ಬ ಈ ಕ್ಷೇತ್ರದ ಪ್ರಸಿದ್ಧ ಕವಿ. ಮುದ್ದಣ, ಅಳಿಯ ಲಿಂಗರಾಜರಂಥ ಪ್ರೌಢ ಕವಿಗಳೂ ಯಕ್ಷಗಾನ ಕೃತಿಗಳ ರಚನೆಗೆ ಕೈಹಚ್ಚುವಷ್ಟರ ಮಟ್ಟಿಗೆ ಇದರ ಪ್ರಾಚುರ್ಯ ಕಂಡುಬರುತ್ತದೆ. ಹಳೆಯ ಮೈಸೂರು ಭಾಗದಲ್ಲಿ ಕೆಂಪಣ್ಣ ಗೌಡನೆಂಬ ಹದಿನಾಲ್ಕನೇ ಶತಮಾನದ ಕವಿ "ಕರಿಬಂಟನ ಕಾಳಗ" ಎಂಬ ಯಕ್ಷಗಾನ ಕೃತಿಯನ್ನು ರಚಿಸಿದ್ದಾನೆ. ಬಹುಶಃ ನಮ್ಮ ಯಕ್ಷಗಾನ ಕವಿಗಳಲ್ಲೆಲ್ಲ ಇವನೇ ಹೆಚ್ಚು ಹಿಂದಿನವನು ಎಂದ ಮಾತ್ರಕ್ಕೆ ಅವನಿಗೂ ಮೊದಲು ಯಕ್ಷಗಾನ ಕಾವ್ಯಗಳು ಇರಲಿಲ್ಲ ಎಂದಲ್ಲ. ಕವಿಯ ಹೆಸರು ನಿರ್ದಿಷ್ಟವಾಗಿ ಲಭ್ಯವಾಗುವುದು ಇಲ್ಲಿಂದೀಚೆಗೆ. ನೂರಾರು ಯಕ್ಷಗಾನ ಪ್ರತಿಗಳು ಕರ್ನಾಟಕದಲ್ಲಿ ಈಗ ಲಭ್ಯವಾಗುತ್ತವೆ. ಕರಾವಳಿಯ ಯಕ್ಷಗಾನ ಪ್ರತಿಗಳಲ್ಲಿ ಸಂಭಾಷಣೆ ಇರುವುದಿಲ್ಲ. ಮೂಡಲ ಪಾಯ ಯಕ್ಷಗಾನಗಳಲ್ಲಿ ಸಂಭಾಷಣೆ ಮೂಲ ಪ್ರತಿಗಳಲ್ಲೇ ಬರೆದಿರುತ್ತದೆ. ಪಡುವಲ ಪಾಯದ ಕಲಾವಿದರು ತಾವೇ ಸಮಯ ಸ್ಫೂರ್ತಿಯಿಂದ ಸಂಭಾಷಣೆಗಳನ್ನು ಕಲ್ಪಿಸಿಕೊಳುತ್ತಾರೆ.

ಯಕ್ಷಗಾನ ಬಯಲಾಟಗಳ "ಸಂಗೀತ" ತನ್ನದೇ ಆದ ವೈವಿಧ್ಯದಿಂದ ಕೂಡಿದೆ. ಕರ್ನಾಟಕ ಸಂಗೀತಕ್ಕೆ ಸರಿಸಮನಾಗಿ ಬೆಳೆದುಕೊಂಡ ಸ್ವತಂತ್ರ ಸಂಗೀತ ಮಾರ್ಗವಿದು. ಈ ನಾಟಕಗಳ ವೇಷಭೂಷಣ, ವೈಭವ ಅನುಪಮವಾದುದು. ಕಿರೀಟ, ಭುಜಕೀರ್ತಿ, ಎದೆಹಾರ, ವೀರಗಾಸೆ, ಕೈಕಟ್ಟು, ಕಾಲ್ಗಡಗ, ನಡುಪಟ್ಟಿಗಳ ಜೊತೆಗೆ ಕಾಸೆಯನ್ನು ಹಾಕಿ, ಬಣ್ಣಬಣ್ಣದ ನಿಲುವಂಗಿ ಅಥವಾ ತುಂಡಂಗಿಗಳನ್ನು ಧರಿಸಿ, ಅಡ್ಡವಸ್ತ್ರಗಳನ್ನು ಹಾಕಿ ಪಾತ್ರ ಶೋಭಾಯಮಾನವಾಗುವಂತೆ ಮಾಡಲಾಗುತ್ತದೆ. ಮುಖಕ್ಕೆ ಹಾಕುವ ಬಣ್ಣದಲ್ಲೂ ನಾನಾ ವೈವಿಧ್ಯಗಳಿವೆ. ರಾಕ್ಷಸ ಪಾತ್ರಗಳ ವೇಷ, ವರ್ಣಗಾರಿಕೆ ಅದ್ಭುತವಾಗಿರುತ್ತದೆ. ಹೀಗೆ ಕಣ್ಣು ಸೆಳೆಯುವ ವೇಷವನ್ನು ಧರಿಸಿ ರಂಗವೇರಿದ ಪಾತ್ರಧಾರಿಗಳು ವಿಶಿಷ್ಟ ಶೈಲಿಯಲ್ಲಿ ನರ್ತಿಸುತ್ತಾರೆ. ಬಯಲಾಟದ ನೃತ್ಯ ಸಂಪ್ರದಾಯವೊಂದು ಎಲ್ಲ ಪ್ರದೇಶಗಳಲ್ಲೂ, ಅಲ್ಪ ಸ್ವಲ್ಪ ವ್ಯತ್ಯಾಸದೊಡನೆ ಉಳಿದು ಬಂದಿದೆ.

ಯಕ್ಷಗಾನ ಬಯಲಾಟಗಳಲ್ಲಿ ಭಾಗವತನದು ಸಂಗೀತವಾದರೆ, ಕುಣಿತ ಹಾಗೂ ಸಂಭಾಷಣೆ ಪಾತ್ರಧಾರಿಗಳದು. ಹಾಸ್ಯಪ್ರಚೋದನೆ ಹನುಮಂತ ನಾಯಕನದು. ದೈತ್ಯ ಪಾತ್ರಗಳು ನಡುರಾತ್ರಿಯ ಅನಂತರ ರಂಗದ ಹೊರಗಿನಿಂದ ಆರ್ಭಟಿಸಿಕೊಂಡು ಬಂದು, ಪ್ರೇಕ್ಷಕರ ನಿದ್ರೆಯ ಜಡವನ್ನು ಹೋಗಲಾಡಿಸುತ್ತವೆ.

ಯಕ್ಷಗಾನ ಬಯಲಾಟಗಳ ವಾದ್ಯಗಳಲ್ಲಿ ತಾಳ ಮತ್ತು ಮದ್ದಲೆ ಮುಖ್ಯವಾದುವು. ಇವುಗಳ ಜೊತೆಗೆ ಪಡವಲ ಪಾಯದಲ್ಲಿ ಚಂಡೆಯನ್ನು ಬಳಸುತ್ತಾರೆ. ಇದು ಬಯಲಾಟಗಳಲ್ಲಿ ಅದ್ಭುತ ಆವರಣವನ್ನು ಸೃಷ್ಟಿಸುವುದಲ್ಲದೆ ಸಂಗೀತ ಮತ್ತು ನೃತ್ಯಗಳಿಗೆ ಒಳ್ಳೆಯ ಗತ್ತನ್ನು ಒದಗಿಸುತ್ತದೆ. ಮೂಡಲ ಪಾಯದಲ್ಲಿ ಚಂಡೆಯ ಸ್ಥಾನವನ್ನು ಮುಖವೀಣೆ ಎಂಬ ಊದುವ ವಾದ್ಯ ವಹಿಸುತ್ತದೆ. ಈ ಚೋಟುದ್ದ ವಾದ್ಯ ಬಯಲಾಟಗಳಲ್ಲಿ ಅಪೂರ್ವ ಮೆರುಗನ್ನು ತರುತ್ತದೆ.

ಯಕ್ಷಗಾನ ಸಂಪ್ರದಾಯದಲ್ಲೇ ಬೆಳೆದು ಬಂದ, ಬಯಲಾಟಗಳಿಗಿಂತ, ಪ್ರಾಚೀನವಾದ ಕಲೆ ಸೂತ್ರದ ಗೊಂಬೆಯಾಟ. ಇದಕ್ಕೆ ಏನಿಲ್ಲ ಎಂದರೂ ಎರಡು ಸಾವಿರ ವರ್ಷದ ಇತಿಹಾಸವಿದೆ. ತೂಕವಾದ ಮರದ ಗೊಂಬೆಗಳಿಗೆ ಸೊಗಸಾಗಿ ಬಣ್ಣ ಬಳಿದು, ಯಕ್ಷಗಾನದ ವೇಷಭೂಷಣಗಳನ್ನು ಧರಿಸಿ ಸೂತ್ರಗಳ ನೆರವಿನಿಂದ ಅವುಗಳನ್ನು ಒಂದು ಕಪ್ಪು ಪರದೆಯ ಹೊರಗೆ ಕುಣಿಸಲಾಗುವುದು. ಕಲಾವಿದರು ರಂಗದ ಒಳಗೆ ಸೇರಿ

ಕೊಳ್ಳುತ್ತಾರೆ. ಗೊಂಬೆಗಳು ಮಾತ್ರ ಹೊರಗೆ ಕಾಣಿಸಿಕೊಳ್ಳುತ್ತವೆ. ತೆರೆಯ ಹಿಂದೆ ಕಲಾವಿದರು ಕಾಣದಂತೆ ಇವು ತೆರೆಯ ಹೊರಗೆ ಕುಣಿಯುತ್ತವೆ. ಮಾನವರೇ ಮಾತಾಡಿದರೂ ಗೊಂಬೆಗಳೇ ಮಾತಾಡಿದಂತೆ, ಹಾಡಿದಂತೆ ತೋರುತ್ತದೆ. ಕೈ ಕಾಲುಗಳನ್ನು ಆಡಿಸುವುದರ ಜೊತೆಗೆ ಕೆಲವು ಗೊಂಬೆಗಳು ತುಟಿಯನ್ನೂ ಅಲುಗಿಸಬಲ್ಲವು. ಒಟ್ಟಿನಲ್ಲಿ ಇದೊಂದು ಮಾಯಾ ಸೃಷ್ಟಿ. ಸೂತ್ರದ ಗೊಂಬೆಯಾಟದ ಅನೇಕ ತಂಡಗಳು ಈಗ ಕಣ್ಮರೆಯಾಗಿದ್ದರೂ ಕೆಲವು ತಂಡಗಳು ಈಗಲೂ ಪ್ರದರ್ಶನವನ್ನು ನೀಡುತ್ತಾ ಬಂದಿವೆ. ಕುಂದಾಪುರ, ಶಿವಮೊಗ್ಗ, ಧಾರವಾಡ, ಮಂಡ್ಯ, ಮೈಸೂರು ಜಿಲ್ಲೆಗಳಲ್ಲಿ ಈ ಕಲೆ ಇನ್ನೂ ಬದುಕಿದೆ. ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕಿನ ನಲ್ಲಿಗೆರೆಯ ಪ್ರಸಿದ್ಧ ಕಲಾವಿದ ತಿಮ್ಮಪ್ಪಾಚಾರ್ಯರಿಗೆ ೧೯೮೮ರ ನಾಟಕ ಅಕಾಡೆಮಿಯ ಪ್ರಶಸ್ತಿ ಲಭ್ಯವಾಗಿದೆ.

ತೊಗಲು ಗೊಂಬೆಯಾಟವೂ ಯಕ್ಷಗಾನ ಸಂಪ್ರದಾಯದ ಕಲೆಯೇ ಕಿಳ್ಳಿಕ್ಯಾತರು ಅಥವಾ ಗೊಂಬೆರಾಮರು ಎಂಬ ಜನಾಂಗ ಹಿಂದಿನಿಂದಲೂ ಈ ಕಲೆಯನ್ನು ಅವಲಂಬಿಸಿ ಜೀವನ ಮಾಡುತ್ತಾ ಬಂದಿದ್ದಾರೆ. ಇಡೀ ಕುಟುಂಬವೇ ಪ್ರದರ್ಶನದಲ್ಲಿ ಭಾಗವಹಿಸುತ್ತದೆ. ವರ್ಣರಂಜಿತವಾದ ಚರ್ಮದ ಗೊಂಬೆಗಳನ್ನು ಇಲ್ಲಿ ಪರದೆಯ ಹಿಂದೆ ಕುಣಿಸಲಾಗುತ್ತದೆ. ಸುತ್ತಲೂ ಮುಚ್ಚಿದ ಚಿಕ್ಕ ರಂಗಮಂದಿರದ ಒಳಗೆ ಎಲ್ಲ ಕಲಾವಿದರೂ ಸೇರಿಕೊಳ್ಳುತ್ತಾರೆ. ಇಬ್ಬರು ಗೊಂಬೆಗಳನ್ನು ಕುಣಿಸಿದರೆ, ಉಳಿದವರು ಗೊಂಬೆಗಳನ್ನು ಒದಗಿಸುತ್ತ, ವಾದ್ಯಗಳನ್ನು ನುಡಿಸುತ್ತ ಹಿಮ್ಮೇಳ ಹಾಡುತ್ತ ತಮ್ಮ ಪಾತ್ರವನ್ನು ನಿರ್ವಹಿಸುತ್ತಾರೆ. ಈ ಸಂಪ್ರದಾಯದ ಕಲೆ ಕರ್ನಾಟಕದಲ್ಲಿ ಜೀವಂತವಾಗಿ ಉಳಿದಿದೆ. ನಾಗಮಂಗಲ ತಾಲ್ಲೂಕಿನ ಇಬ್ಬರು ಕಲಾವಿದರಿಗೆ ಕೇಂದ್ರ ಹಾಗೂ ರಾಜ್ಯ ಅಕಾಡೆಮಿಯ ಪ್ರಶಸ್ತಿಗಳು ಬಂದಿವೆ. ಜನಪದ ರಂಗಭೂಮಿಯ ವೈಶಿಷ್ಟ್ಯವನ್ನು ಸಾರುವ ಈ ಯಕ್ಷಗಾನ ನಾಟಕಗಳ ಜೊತೆಗೆ ಸಣ್ಣಾಟಗಳೆಂಬ ಸಂಗೀತ ಪ್ರಧಾನ ನಾಟಕಗಳು ಉತ್ತರ ಕರ್ನಾಟಕದಲ್ಲಿ ಕಂಡುಬರುತ್ತವೆ. ಇವು ಇತ್ತೀಚಿನ ನಾಟಕಗಳಾದರೂ ತುಂಬ ಜನಪ್ರಿಯತೆಯನ್ನು ಸಾಧಿಸಿಕೊಂಡಿವೆ. ಶ್ರೀಕೃಷ್ಣ ಪಾರಿಜಾತ, ಸಂಗ್ಯ-ಬಾಳ್ಯ ಮುಂತಾದ ಸಣ್ಣಾಟಗಳು ತುಂಬ ಜನಪ್ರಿಯವಾಗಿವೆ. ಸಣ್ಣಾಟಗಳಂತೆಯೇ ಸಂಗೀತ ಪ್ರಧಾನವಾದ ಸಾಮಗಾನ ನಾಟಕಗಳ ಒಂದು ಪರಂಪರೆಯೂ ಈಗ ಕಂಡುಬರುತ್ತಿದೆ. ಇಲ್ಲಿ ನೃತ್ಯವಿಲ್ಲ. ಪಾತ್ರಗಳು ತಾವೇ ಹಾಡಿ, ಅಭಿನಯಿಸುತ್ತವೆ.

ಜನಪದ ನಾಟಕಗಳ ಅಭಿನಯವನ್ನು ವೃತ್ತಿಯನ್ನಾಗಿ ಮಾಡಿಕೊಂಡು ಕೆಲವು ಜನಾಂಗಗಳೂ ಇವೆ. ದೊಂಬಿದಾಸರು ಮತ್ತು ಮರಾಟಿಯವರು ಇಂಥ ಕಲಾ ಸಂಪ್ರದಾಯಕ್ಕೆ ಹೆಸರಾದವರು. ಇವರು ಅಲೆಮಾರಿಗಳು. ಊರೂರುಗಳಲ್ಲಿ ಪ್ರದರ್ಶನ ನೀಡುತ್ತ ಸಾಗುವವರು. ಕುಮಾರವ್ಯಾಸ ಬಹುಶಃ ಇಂಥ ಜನರ ಕಲೆಯನ್ನೇ ನೋಡಿ "ನಾಡಾಡಿಗಳ ನಾಟಕ" ಎಂದು ಕರೆದಿರಬಹುದು. ಒಟ್ಟಿನಲ್ಲಿ ಕರ್ನಾಟಕ ಜನಪದ ರಂಗಭೂಮಿ ತನ್ನ ಸಮೃದ್ಧಿಯಿಂದ ವೈವಿಧ್ಯದಿಂದ ಉನ್ನತಿಯನ್ನು ಸಾಧಿಸಿಕೊಂಡಿದೆ. ತನ್ನೆಲ್ಲ ಆಕರ್ಷಣೆಗಳಿಂದ ಜನತೆಯಲ್ಲಿ ಸಹಸ್ರಾರು ವರ್ಷಗಳಿಂದ ಕಲಾಶ್ರದ್ಧೆಯನ್ನು ಉಳಿಸಿಕೊಂಡು ಬಂದಿವೆ.

### ಜನಪದ ನೃತ್ಯಗಳು

ಕರ್ನಾಟಕದಲ್ಲಿ ಆಚಾರ ವೈವಿಧ್ಯದ ಜನಪದ ನೃತ್ಯಗಳು ಕಂಡುಬರುತ್ತವೆ. ಇವುಗಳೆಲ್ಲ ಬಹುಮಟ್ಟಿಗೆ ಧಾರ್ಮಿಕ ಹಿನ್ನೆಲೆಯಿಂದ ಕೂಡಿವೆ. ಈ ನೃತ್ಯಗಳ ಕೆಲವು ಪ್ರಮುಖ ಬಗೆಗಳನ್ನು ಇಲ್ಲಿ ಹೆಸರಿಸಬಹುದು:

ದಕ್ಷಿಣ ಕರ್ನಾಟಕ:

ಬೀಸು ಕಂಸಾಳೆ, ಗೊರವರ ನೃತ್ಯ, ಸೋಮನ ಕುಣಿತ, ಪಟ ಕುಣಿತ, ಪೂಜಾ ಕುಣಿತ, ಕೋಲುಮೇಳ, ರಂಗದ ಕುಣಿತ, ಚಿಟ್ ಮೇಳ, ವೀರಗಾಸೆ, ಡೊಳ್ಳು ಕುಣಿತ, ಮಾರಿ ಕುಣಿತ, ನಂದಿಕೋಲು ಕುಣಿತ, ಗಾರುಡಿ ಕುಣಿತ, ಲಿಂಗದ ಬೀರರ ಕುಣಿತ, ಲಂಬಾಣಿ ಕುಣಿತ.

ಉತ್ತರ ಕರ್ನಾಟಕ:

ದಟ್ಟಿ ಕುಣಿತ, ಹಾಲಾವಿ ಕುಣಿತ, ಡೊಳ್ಳು ಕುಣಿತ, ಕರಡೆ ಮಜಲು, ಕೊಡದ ಕುಣಿತ, ಕೋಲಾಟ, ಗೊಂದಲಿಗರ ಮೇಳ, ಪುರವಂತಿಕೆ, ಹಲಗೆ ಕುಣಿತ, ವಾಘ್ ಮುರಳಿ, ಹೆಜ್ಜೆ ಮೇಳ.

ಕೊಡಗು ಜಿಲ್ಲೆ:

ಹುತ್ತರಿ ಕುಣಿತ, ಉಮತ್ತಾಟ, ಕೊರಗರ ಕುಣಿತ, ನಾಮೇಳ, ವಾಲಗತ್ತಾಟ, ಬಳುಕಾಟ.

ದಕ್ಷಿಣ ಕನ್ನಡ ಜಿಲ್ಲೆ:

ಭೂತನೃತ್ಯ, ವೈದ್ಯ ನೃತ್ಯ, ಆಟಿಕೊಡಿಂಜ, ಹೊಲ ಕುಣಿತ, ಕಾಂಗ್ಲ ನೃತ್ಯ, ಕೋರ್ ತನಿಯ, ದುಡಿ ಕುಣಿತ.

ಉತ್ತರ ಕನ್ನಡ ಜಿಲ್ಲೆ:

ಹಾಲಕ್ಕಿ ಗೌಡರ ಕುಣಿತ, ಸಿಂಹ ನೃತ್ಯ, ಪ್ರೇತ ನೃತ್ಯ, ಗುಮ್ಮಟೆ ಕುಣಿತ.

ಕರ್ನಾಟಕದ ವಿವಿಧ ಭಾಗಗಳಲ್ಲಿ ಇನ್ನೂರಕ್ಕೂ ಹೆಚ್ಚು ಜನಪದ ನೃತ್ಯಗಳೂ ಮೇಳಗಳೂ ಕಂಡುಬರುತ್ತವೆ. ಕೋಲಾಟ ಕರ್ನಾಟಕದಾದ್ಯಂತ ಕಂಡುಬರುವ ಒಂದು ಪ್ರಮುಖ ಕಲೆ. ಇದರಲ್ಲಿ ಕುಣಿತದಷ್ಟೇ ಪ್ರಧಾನವಾದುದು ಅದರ ಸಾಹಿತ್ಯ ಮತ್ತು ಸಂಗೀತ. ಹತ್ತಾರು ಬಗೆಯ ಕೋಲಾಟಗಳಲ್ಲಿ ಹಲವಾರು ಬಗೆಯ ಧಾಟಿಗಳು ಕಂಡುಬರುತ್ತವೆ. ಭಕ್ತಿಗೀತೆಗಳು, ಪ್ರೇಮಗೀತೆಗಳು ವೀರಗೀತೆಗಳು ವಿನೋದ ಗೀತೆಗಳು ಕೋಲಾಟದ ಸಾಹಿತ್ಯದ ನಾಲ್ಕು ಮುಖಗಳು. ಸಾಧಾರಣವಾದ ಕೋಲಾಟ ಯಾವ ವೇಷಭೂಷಣವನ್ನೂ ನಿರೀಕ್ಷಿಸುವುದಿಲ್ಲ. ಕೋಲುಗಳ ಜೊತೆಗೆ ತಾಳ, ದಮ್ಮಡಿಗಳು ಇರುತ್ತವೆ. ಕೊಡಗಿನ ಹುತ್ತರಿ ಕುಣಿತ ದಕ್ಷಿಣ ಕನ್ನಡದ ಮರಾಠಿ ಅಥವಾ ಹೋಳಿ ಕುಣಿತ, ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಗೌಡರ ಕುಣಿತ ಇವು ಕೋಲಾಟಗಳೇ.

ಕರ್ನಾಟಕದ ಏಕಮಾತ್ರ ಮುಖವಾಡದ ನೃತ್ಯ, ಸೋಮನ ಕುಣಿತ, ಇದರಲ್ಲಿ ಕುಣಿತದವರು ದೊಡ್ಡ ಮರದ ಮುಖವಾಡವನ್ನು ಧರಿಸಿ ಸ್ತ್ರೀ ದೇವತೆಯ ಎದುರಿನಲ್ಲಿ ವಿವಿಧ ವಿನ್ಯಾಸದ ನೃತ್ಯವನ್ನು ಮಾಡುತ್ತಾರೆ. ಕೆಂಚರಾಯ ಮತ್ತು ಕರಿರಾಯ ಎಂಬ ಈ ಎರಡು ಸೋಮುಗಳು ದೇವತೆಯ ಬಂಟರು. ಹರೆ, ಡೋಲು, ಮಾರಿ, ತಮಟೆ ಮೊದಲಾದ ವಾದ್ಯಗಳ ಗತ್ತಿಗೆ ಇವರು ಹೆಜ್ಜೆ ಹಾಕುತ್ತಾ ಕುಣಿಯುತ್ತಾರೆ.

ನಂದಿಕೋಲು ಮತ್ತು ಪಟ ಕುಣಿತಗಳು ಶೈವ ಮತ್ತು ವೈಷ್ಣವ ಸಂಪ್ರದಾಯಗಳನ್ನು ಪ್ರತಿನಿಧಿಸುವ ಕುಣಿತಗಳಾಗಿವೆ. ನಂದೀ ಧ್ವಜ ಶಿವನ ಸಂಕೇತ, ಪಟ ವಿಷ್ಣುವಿನ ಸಂಕೇತ, ಉದ್ದವಾದ ಗಳುವಿಗೆ ನಾನಾ ರೀತಿಯ ಲೋಹದ ಸಾಧನಗಳನ್ನು ಅಳವಡಿಸಿ ಬಣ್ಣ ಬಣ್ಣದ ವಸ್ತುಗಳನ್ನು ಸುತ್ತಿ ಅದನ್ನು ಹಿಡಿದು ಕುಣಿಯುವಾಗ ಸಾಕಷ್ಟು ಬಾಹುಬಲ ಬೇಕಾಗುತ್ತದೆ. ಡೊಳ್ಳು ಕುಣಿತ ಬೀರೇಶ್ವರನ ಸಂಪ್ರದಾಯಕ್ಕೆ ಸೇರಿದ ದೊಡ್ಡ ದೊಡ್ಡ ಚರ್ಮವಾದ್ಯಗಳನ್ನು

ತಮ್ಮ ಸೊಂಟಕ್ಕೆ ಕಟ್ಟಿಕೊಂಡು ಸಾಮೂಹಿಕವಾಗಿ ಬೀರೇಶ್ವರ ಭಕ್ತರು ಕುಣಿಯುತ್ತಾರೆ. ಡೊಳ್ಳಿನ ಮೇಲೆ ಹಾಡುಗಳನ್ನೂ ಹೇಳಲಾಗುವುದು. ವೀರಗಾಸೆ ಮತ್ತು ರಂಗದಬೀರನ ಕುಣಿತಗಳು ವೀರಭದ್ರನ ಸಂಪ್ರದಾಯಕ್ಕೆ ಸೇರುತ್ತದೆ. ವೀರಭದ್ರನ ಬಿರುದುಗಳನ್ನು ಧರಿಸಿ ದಕ್ಷಯಜ್ಞ ಕಥೆಯನ್ನು ನಿರೂಪಿಸುತ್ತಾ ಇವರು ಕುಣಿಯುತ್ತಾರೆ. ಬೀಸು ಕಂಸಾಳೆ ಮಹದೇಶ್ವರ ಸಂಪ್ರದಾಯದ ಕುಣಿತ. ಮಹದೇಶ್ವರನ ಗುಡ್ಡರು ಕೈಯಲ್ಲಿ ಕಂಸಾಳೆಯನ್ನು ಬೀಸುತ್ತಾ ಬಡಿಯುತ್ತಾ ಕುಣಿಯುವುದರಿಂದ ಇದು ಬೀಸು ಕಂಸಾಳೆ ನೃತ್ಯ ಎನಿಸಿದೆ. ದಟ್ಟಿ ಕುಣಿತ ಕರ್ನಾಟಕ ವೀರ ಕುಣಿತಗಳಲ್ಲಿ ಒಂದಾಗಿದೆ. ಬೆಳಗಾಂ ಜಿಲ್ಲೆಯ ವಿಶೇಷ ಕಲೆ ಇದು. ಪೂಜಾ ಮತ್ತು ಕರಗಗಳು ಸ್ತ್ರೀದೇವತೆಗೆ ಸಂಬಂಧಿಸಿದ ಕುಣಿತಗಳೇ ಆಗಿವೆ. ಇವೆಲ್ಲ ದೇವರ ಹಬ್ಬಗಳಲ್ಲಿ ಕಂಡುಬರುವ ಸಾಮೂಹಿಕ ಕುಣಿತಗಳು. ಭೂತ ನೃತ್ಯ ದಕ್ಷಿಣ ಕನ್ನಡ ಜಿಲ್ಲೆಯ ಭೂತಾರಾಧನೆಗೆ ಸಂಬಂಧಿಸಿದ ಕಲೆಯಾಗಿದೆ. ಅಪೂರ್ವ ವೇಷಭೂಷಣ ಚೆಂಡೆಯ ಗತ್ತು ರೋಮಾಂಚನವನ್ನು ತರುತ್ತವೆ. ಗಾರುಡಿ ಗೊಂಬೆಯ ಕುಣಿತ ಅದರ ಅದ್ಭುತ ಆಕಾರದಿಂದ ಮೋಹಕವೆನಿಸುತ್ತದೆ. ಬಿದಿರಿನ ದಬ್ಬೆಗಳಲ್ಲಿ ಹನ್ನೆರಡು ಅಡಿ ಎತ್ತರದ ತಡಿಕೆಯಿಂದ ಒಂದು ದೈತ್ಯ ಮಾನವನ ಆಕಾರವನ್ನು ಸೃಷ್ಟಿಸಿ ಮನುಷ್ಯ ಅದರಲ್ಲೇ ಸೇರಿಕೊಂಡು ಕುಣಿಯುತ್ತಾನೆ. ಬೃಹದಾಕಾರದ ಗೊಂಬೆಯೇ ಇಲ್ಲಿ ಕುಣಿಯುವಂತೆ ತೋರಿಬರುತ್ತದೆ. ಗೊರವರ ಕುಣಿತ ಅದರ ಅದ್ಭುತ ವೇಷಗಾರಿಕೆಗೆ ಹೆಸರಾದುದು. ಕವಡೆ ಸರ, ಕಂಬಳಿಯ ನಿಲುವಂಗಿ ಹಾಗೂ ಕರಡಿಯ ಕೂದಲನ್ನು ತಲೆಗೆ ಧರಿಸಿ ಗೊರವರು ಗುಂಪಾಗಿ ಕುಣಿಯುತ್ತಾರೆ. ಕರ್ನಾಟಕದಲ್ಲಿ ಹೆಂಗಸರ ಕುಣಿತಗಳು ಬೆರಳೆಣಿಕೆಯಷ್ಟು ಮಾತ್ರ ಕಂಡುಬರುತ್ತವೆ. ಕೊಡಗಿನ ಉಮ್ಮತ್ತಾಟ, ಲಂಬಾಣಿ ಜನಾಂಗದ ದೀವಳಿಗೆ ಕುಣಿತ, ಬಳವನ ಅಷ್ಟಮಿಯ ಕೋಲಾಟ, ಎರವರ ಕುಣಿತ ಇವುಗಳನ್ನು ಇಲ್ಲಿ ಹೆಸರಿಸಬಹುದು. ನಮ್ಮ ಜನಪದ ನೃತ್ಯಗಳಲ್ಲಿ ಸಂಗೀತ, ವೇಷ ಭೂಷಣ ಹಾಗೂ ವಾದ್ಯ ವಿಶೇಷಗಳ ವೈಭವವನ್ನು ಕಾಣಬಹುದು. ತಾಳವಾದ್ಯ, ಚರ್ಮವಾದ್ಯ ಹಾಗೂ ಊದು ವಾದ್ಯಗಳ ಬಳಕೆ ಇಲ್ಲಿ ವಿಶೇಷವಾಗಿ ಕಂಡುಬರುತ್ತದೆ. ತಂತಿ ವಾದ್ಯಗಳನ್ನು ಸರಳವಾದ ಮೇಳಗಳಲ್ಲಿ ಮಾತ್ರ ಬಳಸುತ್ತಾರೆ. ವೈವಿಧ್ಯಮಯವಾದ ಈ ಕುಣಿತಗಳಲ್ಲಿ ಮತೀಯ ಸಾಮರಸ್ಯಗಳು ಎದ್ದು ಕಾಣುತ್ತವೆ. ಜಾತಿಮತಗಳನ್ನು ಮರೆತು ಜನ ಒಟ್ಟಾಗಿ ಸಾಮೂಹಿಕ ನೃತ್ಯಗಳಲ್ಲಿ ಭಾಗಗೊಳ್ಳುತ್ತಾರೆ. ಪರಸ್ಪರ ದ್ವೇಷಾಸೂಯೆಗಳನ್ನು ದೂರ ಮಾಡಿ ಸ್ನೇಹ ವಾತ್ಸಲ್ಯಗಳನ್ನು ಕುದುರಿಸಲು ಇವು ಸಹಕಾರಿಯಾಗಿವೆ.

**ಇತರ ಜನಪದ ಕಲೆಗಳು :**

ಕನ್ನಡ ನಾಡಿನಲ್ಲಿ ಅನೇಕ ಬಗೆಯ ಜನಪದ ಮನೋರಂಜಕರು ಕಂಡುಬಂದಿದ್ದಾರೆ. ಇವರಲ್ಲಿ ಮುಖ್ಯರಾದವರು ದೊಂಬರು, ಮೋಡಿಯವರು, ಕೋಲೆ ಬಸವನವರು, ಕರಡಿ ಕೋತಿಗಳನ್ನು ಆಡಿಸುವವರು, ಹಾವಾಡಿಗರು. ಬಹುರೂಪಿಗಳು, ಕೀಲುಗೊಂಬೆ ಆಟದವರು ಮುಂತಾದವರು. ಇವರು ತಮ್ಮ ಕಲೆಗಳಿಂದ ಜನರಿಗೆ ಮನರಂಜನೆಯನ್ನು ಒದಗಿಸುತ್ತಾ ಅವರನ್ನು ಅವಲಂಬಿಸಿ ಜೀವಿಸುತ್ತಾರೆ. ಎಷ್ಟೋ ಶತಮಾನಗಳಿಂದ ಈ ವೃತ್ತಿ ಕಲಾವಿದರು ಕರ್ನಾಟಕದ ಕಲಾ ವೈವಿಧ್ಯವನ್ನು ಹೆಚ್ಚಿಸುವುದರಲ್ಲಿ ತಮ್ಮ ಗಣ್ಯ ಪಾತ್ರವನ್ನು ಮೆರೆದಿದ್ದಾರೆ. ಬುಡುಬುಡುಕೆಯವರು ಪುರಗೂವನವರು, ಕೊರವಂಜಿಯವರು ಜನಕ್ಕೆ ಭವಿಷ್ಯವನ್ನು ಹೇಳಿ ಜೀವಿಸಿದರೆ, ಕಂಚುಗಾರರು, ಮಡಿವಾಳ್ತಿಯರು, ಕುಂಬಾರರು, ಕಮ್ಮಾರರು, ಕ್ಷೌರಿಕರು, ಬಡಗಿಗಳು, ಅಕ್ಕಸಾಲಿಗರು, ಮುಂತಾದವರು ವರ್ಷಕ್ಕೊಮ್ಮೆ ತಮ್ಮಸೇವೆಗಾಗಿ ಆಯವನ್ನು ಪಡೆಯುವ ಆಯಗಾರರಾಗಿದ್ದಾರೆ. ತಮ್ಮ ತಮ್ಮಮನೆಯಲ್ಲಿ ಇವರು ಔಪಯೋಗಿಕ ದೃಷ್ಟಿಯ ಜೊತೆಗೆ ಕಲೆಗಾರಿಕೆಯನ್ನೂ ಸಾಧಿಸಿಕೊಂಡಿದ್ದಾರೆ. ಕುಂಬಾರರ ಮಡಿಕೆ ಕುಡಿಕೆಗಳ ವಿನ್ಯಾಸ, ಅಕ್ಕಸಾಲಿಗರ ಆಭರಣಗಳ, ವಿನ್ಯಾಸ, ಬಡಗಿಗಳ ಮರಮಟ್ಟುಗಳ ವಿನ್ಯಾಸ, ಕಮ್ಮಾರರ ಸಾಧನ ಸಲಕರಣಗಳ ವಿನ್ಯಾಸ, ಕಂಚುಗಾರರ ಪಾತ್ರ ಪರಡಿಗಳ ವಿನ್ಯಾಸ ನಮ್ಮ ಪರಂಪರಾನುಗತ ಕಲೆಯ ವೈಶಿಷ್ಟ್ಯಕ್ಕೆ ಉತ್ತಮ ನಿದರ್ಶನಗಳಾಗಿವೆ. ಹಿಂದೆ ಕೇಶಾಲಂಕಾರದ ನೈಪುಣ್ಯವನ್ನು ಸಾಧಿಸಿದ್ದ ಕ್ಷೌರಿಕರ ಕಲೆಯನ್ನೂ ನಿರ್ಲಕ್ಷಿಸುವಂತಿಲ್ಲ. ಮೀಸೆಗಳ ವಿನ್ಯಾಸ. ನಾನಾ ಬಗೆಯಲ್ಲಿ ತಲೆಕೂದಲುಗಳ ವೈಖರಿಗಳನ್ನು ತರುವಲ್ಲಿ ಇವರು ಕಲೆಗಾರಿಕೆಯನ್ನು ಮೆರೆಯುವ ಕಾಲವೊಂದಿತ್ತು. ಜನಪದ ಕಲೆಗಳಲ್ಲಿ ರಂಗವಲ್ಲಿಯ ಕಲೆ ಅಪೂರ್ವವಾದುದು. ಪ್ರತಿ ನಿತ್ಯವೂ ಮನೆಯ ಮುಂದಣ ಅಟ್ಟೆಯನ್ನು ಗುಡಿಸಿ ಸಾರಿಸಿ ವಿವಿಧ ರೀತಿಯ ರಂಗವಲ್ಲಿಯನ್ನು ಬಿಡುವ ಕುಶಲ ಕಲೆಗಾರ್ತಿಯರಾಗಿ ತಮ್ಮ ಹೆಂಗಸರು ಕಂಡು ಬಂದಿದ್ದಾರೆ. ಇದರ ಜೊತೆಗೆ ಗೋಡೆಗಳ ಮೇಲೆ, ಮಡಿಕೆ ಕುಡಿಕೆಗಳ ಮೇಲೆ ಅವರು ಬಿಡಿಸುವ ಕಲೆ ಅಪೂರ್ವವಾದುದು. ಮೂರ್ತಿಶಿಲ್ಪದಲ್ಲಿ ಅದ್ಭುತ ಸಾಧನೆಯನ್ನು ನಮ್ಮ ಶಿಲ್ಪಿಗಳು ತೋರಿದ್ದಾರೆ. ನಾಗಮಂಗಲ, ತುರುವೇಕೆರೆ, ತಿಪಟೂರು, ಚನ್ನರಾಯ ಪಟ್ಟಣ, ಸುತ್ತಿಂ ಗ್ರಾಮದೇವತೆಯಂತಹ ವಿಗ್ರಹ ಅತ್ಯಂತ ಆಕರ್ಷಕವಾದ ಶಿಲ್ಪಕಲಾ ಶೈಲಿಯಿಂದ ಕೂಡಿದ್ದರೆ, ಗುಡಿಯ ಒಳಭಾಗದ ಭಿತ್ತಿಯಲ್ಲಿ ರೂಪಿಸಿದ ಸುಮಾರು ಹತ್ತು ಅಡಿ ಎತ್ತರದ ಭೂತಗಳ ವಿಗ್ರಹಗಳು ತಮ್ಮ ಅದ್ಭುತ ಆಕಾರದಿಂದ ನಮ್ಮ ಕಣ್ಣನ್ನು ಸೆಳೆದುಕೊಳ್ಳುತ್ತವೆ. ದೇವತೆಯ ರಕ್ಷಕರೆಂದು ಭಾವಿಸಲಾದ ಈ ಭೂತ ವಿಗ್ರಹಗಳು ಒಂದೇ ದೇವಾಲಯದಲ್ಲಿ ಒಂದೊಂದು ಬಗೆಯ ಆಕೃತಿಗಳಿಂದ ಕಡೆಯಲ್ಪಟ್ಟಿವೆ. ಇವುಗಳ ವರ್ಣ ವೈಭವವಂತೂ ಅಮೋಘವಾದುದು. ಮೂಲ ದೇವತೆಯ ಮುಖದಲ್ಲಿ ಸೌಮ್ಯ ಹಾಗೂ ಪ್ರಸನ್ನ ಭಾವಗಳ ಸಮರಸತೆಯನ್ನು ಕಂಡರೆ ಈ ದೈತ್ಯ ಮೂರ್ತಿಗಳಲ್ಲಿ ರೌದ್ರ ಭಾವವನ್ನು ಕಾಣುತ್ತೇವೆ. ಮೂಲ ದೇವತೆಗೆ ಜನ ಚೊಕ್ಕ ಭೋಜನವನ್ನು (ಸಸ್ಯಾಹಾರ) ಅರ್ಪಿಸಿದರೆ ಈ ಭೂತ ಮೂರ್ತಿಗಳಿಗೆ ಮಾಂಸಾಹಾರದ ಎಡೆ ಆಗಬೇಕು.

**ಅಡುಗೆಗಳು :**

ಜನಪದ ಜೀವನದಲ್ಲಿ ಕಂಡುಬರುವ ಅಡುಗೆಯ ವೈವಿಧ್ಯ ಈಗಲೂ ತನ್ನ ನೈಜತೆಯನ್ನು ಉಳಿಸಿಕೊಂಡಿದೆ. ತಮ್ಮ ಸುತ್ತಣ ನಿಸರ್ಗದಲ್ಲಿ ದೊರೆಯುವ ಸಸ್ಯಗಳನ್ನು ಜನ ಸಾರ್ಥಕವಾದ ರೀತಿಯಲ್ಲಿ ಬೆಳೆಸಿಕೊಳ್ಳುತ್ತಾರೆ. ಸರಳ ರೀತಿಯ ಅಡುಗೆಗಳಲ್ಲಿ ರುಚಿ ವೈವಿಧ್ಯವನ್ನು ಸಾಧಿಸಿರುವ ದೊಡ್ಡ ಕಲೆಗಾರಿಕೆ ಇವರದು. ಒಂದೊಂದು ಕಾಲಕ್ಕೆ ಒಂದೊಂದು ಬಗೆಯ ಅಡುಗೆಗಳು ಕಂಡುಬರುತ್ತವೆ.

ಒಂದೊಂದು ಹಬ್ಬಕ್ಕೆ ಒಂದೊಂದು ರೀತಿಯ ಭಕ್ಷ್ಯ ಭೋಜ್ಯಗಳು. ಇವಕ್ಕೆಲ್ಲಾ ತಮ್ಮದೇ ಆದ ರುಚಿಕಟ್ಟು. ಗ್ರಾಮೀಣ ಜೀವನದ ಅಡುಗೆಗಳನ್ನು ಕುರಿತು ಅಭ್ಯಾಸ ಮಾಡಿದರೆ ಅದರಿಂದ ಹೆಚ್ಚು ಪ್ರಯೋಜನ ಲಭ್ಯವಾಗುತ್ತದೆ.

**ಜನಪದ ವೈದ್ಯ :**

ಜನಪದ ವೈದ್ಯ ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ತನ್ನ ಪ್ರಭಾವವನ್ನು ಉಳಿಸಿಕೊಂಡಿದೆ. ಎಷ್ಟೋ ತಲೆಮಾರುಗಳಿಂದ ರೋಗರುಜಿನಗಳಿಗೆ ನಮ್ಮ ಜನ ಪ್ರಕೃತಿಯ ಮಡಿಲಲ್ಲಿ ಮದ್ದುಗಳನ್ನು ಹುಡುಕಿದ್ದಾರೆ. ಅವರ ದೃಷ್ಟಿಯಲ್ಲಿ

ಎಲ್ಲ ರೀತಿಯ ಸಸ್ಯಗಳೂ ಒಂದೊಂದು ರೀತಿಯ ಮೂಲಿಕೆಗಳಾಗಿವೆ. ಅರಿಸಿನ ಮುಂಡಿಗೆ, ಪಾರ್ಶ್ವ ವಾಯು ಮೊದಲಾದ ಕೆಲವು ರೋಗಗಳಿಗೆ ಅತ್ಯಂತ ಪರಿಣಾಮಕಾರಿಯಾಗಿ ಔಷಧಿಗಳು ಜನಪದ ವೈದ್ಯರಲ್ಲಿ ಗುರುತಿಸಲ್ಪಟ್ಟಿವೆ. ನಮ್ಮ ಜನ ಮಂತ್ರ ಹಾಕಿ ಉಳುಕನ್ನು ತೆಗೆಯಬಲ್ಲರು, ಹಾವಿನ ವಿಷವನ್ನು ಇಳಿಸಬಲ್ಲರು. ಪಶುವೈದ್ಯ, ಶಿಶುವೈದ್ಯ, ಪುರುಷವೈದ್ಯ, ಸ್ತ್ರೀವೈದ್ಯ ಹೀಗೆ ಹಲವು ಬಗೆಗಳಲ್ಲಿ ಜನಪದ ವೈದ್ಯ ಕಂಡುಬರುತ್ತದೆ. ಈ ವೈದ್ಯವನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಿ ಅದರ ಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳುವುದು ನಮ್ಮ ಹೊಣೆಗಾರಿಕೆಯಾಗಿದೆ.

ನಮ್ಮ ಜನಪದ ಕ್ರೀಡೆಗಳು, ನಂಬಿಕೆ ಸಂಪ್ರದಾಯಗಳು ಮತ್ತು ನಾನಾ ರೀತಿಯ ವಸ್ತು ವಿಶೇಷಗಳು ಇವುಗಳಿಗೆ ಸಂಬಂಧಿಸಿದಂತೆಯೂ ಸಾಕಷ್ಟು ವ್ಯಾಪಕ ಸಾಮಗ್ರಿ ಲಭ್ಯವಾಗುತ್ತದೆ. ಇವುಗಳನ್ನು ಕುರಿತ ಪರಿವೀಕ್ಷಣೆ ಹಾಗೂ ಅಧ್ಯಯನ ಈಗೀಗ ಗರಿಗಟ್ಟಿಕೊಳ್ಳುತ್ತಿವೆ. ಇವೆಲ್ಲ ಕರ್ನಾಟಕ ಜನಪದ ಸಂಸ್ಕೃತಿಯನ್ನು ರೂಪಿಸುವ ಒಂದೊಂದು ಮಜಲುಗಳಾಗಿವೆ. ಅಪಾರ ಸಮೃದ್ಧಿಯಿಂದ ತುಂಬಿ ತುಳುಕುವ ಕರ್ನಾಟಕ ಜನಪದ ಇಂದಿಗೂ ತನ್ನ ಸತ್ವವನ್ನು ಉಳಿಸಿಕೊಂಡಿದೆ. ಅದರ ಎಲ್ಲ ತರಗಳನ್ನೂ ಸ್ಪರ್ಶಿಸುವ ಪ್ರಯತ್ನಗಳು ಈಗೀಗ ನಡೆಯುತ್ತಿರುವುದು ಸಂತೋಷದ ವಿಷಯ. ಎಲ್ಲ ನಿಟ್ಟಿನ ಅಧ್ಯಯನಗಳೂ ಒಂದು ನೆಲೆಯನ್ನು ಮುಟ್ಟಿದಾಗ ಎಷ್ಟೋ ಅದ್ಭುತಗಳು, ಆಶ್ಚರ್ಯಗಳು ನಮ್ಮನ್ನು ಎದುರುಗೊಳ್ಳುತ್ತವೆ. ಆ ದಿನ ಬೇಗ ಬರಲಿ ಎಂದು ಹಾರೈಸಬಹುದಾಗಿದೆ.

# ಕರಾವಳಿ ಕರ್ನಾಟಕದ ಯಕ್ಷಗಾನ

ಕು. ಶಿ. ಹರಿದಾಸ ಭಟ್ಟ

ಜನಸಾಮಾನ್ಯರ ಪರಿಭಾಷೆಯಲ್ಲಿ ಬಯಲಾಟ, ಆಟ, ದೊಡ್ಡಾಟ, ಸಣ್ಣಾಟ, ಮೇಳ ಇತ್ಯಾದಿ ಹೆಸರುಗಳನ್ನು ಹೊತ್ತಿರುವ ರಂಗಕಲೆಯ ಒಂದು ಪ್ರಕಾರಕ್ಕೆ 'ಯಕ್ಷಗಾನ'ವೆಂಬ ಹೆಸರು ಬಂದದ್ದು ಇತ್ತೀಚೆಗೆ. ಅಖಿಲ ಕರ್ನಾಟಕದಲ್ಲಿ ಎಲ್ಲ ಕಡೆಗೂ ಪ್ರಚಾರದಲ್ಲಿದ್ದು ಒಂದಾನೊಂದು ಕಾಲಕ್ಕೆ ಜನಪ್ರಿಯವೂ ಆಗಿದ್ದ ಈ ಆಟಗಳು ಈಗ ಒಂದು ರಂಗಪರಂಪರೆಯನ್ನು ಉಳಿಸಿ ಬೆಳೆಸಿಕೊಂಡಿರುವುದು ಕರಾವಳಿಯಲ್ಲಿ. ಅಲ್ಲಿ ಯಕ್ಷಗಾನಕ್ಕೆ ಮುಖ್ಯ ಜಿಲ್ಲೆಗಳೆನಿಸಿರುವ ಉತ್ತರ ಮತ್ತು ದಕ್ಷಿಣ ಕನ್ನಡಗಳಲ್ಲಿ. ಹಾಗೆ ನೋಡಿದರೆ ಯಕ್ಷಗಾನದ ರಂಗಸಂಪ್ರದಾಯ ಬರಿಯ ಕರ್ನಾಟಕಕ್ಕೆ ಮಾತ್ರವೇ ಸೀಮಿತವಾದುದಲ್ಲ; ಆಂಧ್ರದಲ್ಲಿ ವೀಧಿನಾಟಕಮು ಎಂಬ ಹೆಸರಿನಿಂದಲೂ, ತಮಿಳ್ನಾಡಿನಲ್ಲಿ ತೆರ್‍ಕ್ಕೂತ್ತು (ಬೀದಿ ನಾಟಕ) ಹಾಗೂ 'ಭಾಗವತರಾಟ' ಎಂಬ ಹೆಸರಿನಿಂದಲೂ ಯಕ್ಷಗಾನವೇ ಒಂದು ಜನರಂಜಕ ರಂಗಭೂಮಿಯಾಗಿ ಉಳಿದಿದೆ. ಕೇರಳ ರಾಜ್ಯದ 'ಕಥಕ್ಕಳಿ'ಯಲ್ಲೂ ಕಥೆ ಮತ್ತು ಆಟ ಹೀಗೆ ಎರಡರ್ಥ ಹೊರಡುತ್ತದೆ. ಇದೂ ಯಕ್ಷಗಾನದಲ್ಲಿರುವಂಥ ಚೌಕಟ್ಟನ್ನೇ ಬಳಸಿಕೊಂಡಿರುವಂಥಾದ್ದು. ಮಾತುಗಾರಿಕೆಯ ಬದಲು 'ಮುದ್ರೆ'ಗಳ ಮೂಲಕ ಅರ್ಥಾಭಿವ್ಯಕ್ತಿಯನ್ನು ಮಾಡುವ ತಂತ್ರ ಬಳಸುವಂಥಾದ್ದು. ದಕ್ಷಿಣ ಭಾರತದಲ್ಲಿ ಈ ರೀತಿಯಾಗಿ ಸರ್ವಪ್ರಚುರವಾಗಿರುವ ಸಾಮಾನ್ಯ ರಂಗಪರಂಪರೆಗೆ ಶತಮಾನಗಳ ಇತಿಹಾಸ ಉಂಟು. ಕರ್ನಾಟಕದಲ್ಲಿಯೇ ಯಕ್ಷಗಾನ ನಾಲ್ಕು ನೂರು ಐದು ನೂರು ವರ್ಷಗಳಷ್ಟು ಹಳೆಯದು ಎನ್ನುತ್ತಾರೆ.

ನಾಟಕವೆಂದು ನಾವು ಕರೆಯುವ ಸಾಹಿತ್ಯ ಪ್ರಕಾರ ಕನ್ನಡದಲ್ಲಿಯೂ ದೀರ್ಘ ಇತಿಹಾಸವುಳ್ಳದ್ದಲ್ಲ ಅಂದರೆ ಸಾಹಿತ್ಯ ರಚನೆ ಎಂಬರ್ಥದಲ್ಲಿ. ಮೊದಲ ನಾಟಕ 'ಮಿತ್ರವಿಂದಾ ಗೋವಿಂದ' ಎಂದು ಕವಿಚರಿತಕಾರರ ಅಭಿಪ್ರಾಯ. ಇಂಥ ಬರೆದ ನಾಟಕಗಳನ್ನು ಎಷ್ಟು ಮಂದಿ ಆಡುತ್ತಿದ್ದರೋ, ನೋಡುತ್ತಿದ್ದರೋ ತಿಳಿಯದು. ಆದರೆ ಜಾನಪದ ಲೋಕದಲ್ಲಿ ನಾಟಕಗಳಿಂದಲೇ ನಮ್ಮ ಜನರಿಗೆ ಮನರಂಜನೆಯೂ, ಶಿಕ್ಷಣವೂ ಏಕ ಕಾಲಕ್ಕೆ ಒದಗಿಸುವ ಸಾಧ್ಯತೆಯನ್ನು ಕಂಡ ನಮ್ಮ ಜನ ನಿಜಕ್ಕೂ ಜಾಣರು. ಇಂಥವರೇ ಜಾನಪದವಾಗಿ ಯಕ್ಷಗಾನವನ್ನು ಮುನ್ನಡೆಸಿದವರು. ಶಾಲೆಗಳಲ್ಲಿ ಶಿಕ್ಷಣವನ್ನು ಕೊಡುವ ಪದ್ಧತಿ ಜಾರಿಗೆ ಬಂದು ೧೫೦ ವರ್ಷಗಳೂ ಸಂದಿಲ್ಲ. ಅದಕ್ಕೆ ಮುನ್ನ ಸಾರ್ವತ್ರಿಕ ಶಿಕ್ಷಣ ಮತ್ತು ಸಂಸ್ಕೃತಿ ಪ್ರಸಾರದ ಕಾರ್ಯವನ್ನು ಬಯಲಾಟದಿಂದಲೇ ಸಾಧಿಸುವ ಅನಿವಾರ್ಯತೆ ಇತ್ತು. ಈಗ ಅನೌಪಚಾರಿಕ ಶಿಕ್ಷಣವೆಂದು ಹೊಸ ಹೆಸರು ಕೊಟ್ಟು ಯಾವುದನ್ನು ನಾವು ಕರೆಯುತ್ತೇವೋ ಅದು ಬಯಲಾಟಗಳ ಮೂಲಕ ಆಗ ಸಾಧ್ಯವಾಗುತ್ತಿತ್ತು. ಮಹಾಭಾರತ, ಭಾಗವತ, ರಾಮಾಯಣಗಳಲ್ಲಿ ಹುದುಗಿರುವ ಭಾರತೀಯ ಸಂಸ್ಕೃತಿಯ ಮೌಲ್ಯಗಳನ್ನು ಎಲ್ಲ ಸ್ತರದ ಜನವರ್ಗಕ್ಕೂ ಮುಟ್ಟಿಸುವ ಹೊಣೆಗಾರಿಕೆಯನ್ನು ಮನರಂಜನೆಯೇ ಮುಖ್ಯವೆನಿಸಿದ ಯಕ್ಷಗಾನ ಬಯಲಾಟದ ಮೂಲಕ ಸಮಾಜ ನಿರ್ವಹಿಸುತ್ತಿತ್ತು. ಯಾವುದೇ ವಿಶೇಷ ರಂಗಪರಿಕರಗಳಿಲ್ಲದೆ ಸುಲಭದಲ್ಲಿ ನಿರ್ಮಿಸಲಾಗುವ ರಂಗಸ್ಥಳ (ಉದಾ: ೧೬×೧೬ ಅಡಿಗಳ ಒಂದು ಚೌಕ), ದೊಂದಿದೀಪ, ಚಿಕ್ಕದಾದ ಒಂದು ಅಡ್ಡತೆರೆ, ಆಕರ್ಷಕವಾದ ಹಿಮ್ಮೇಳ ಹಾಡುಗಾರನ ಜತೆ ಶ್ರುತಿ. ಮದ್ದಳೆ, ಚಂಡೆ. ತಾಳ, ಇತ್ಯಾದಿ, ಹಳ್ಳಿಯ ಕಸಬುದಾರರೇ ಕಟ್ಟಬಹುದಾದ ವೇಷಭೂಷಣಗಳು ಇಷ್ಟಿದ್ದು ಹತ್ತಾರು ಜನ ಉತ್ಸಾಹಿಗಳು ಜತೆಗೂಡಿ ನಿರ್ಣಯಿಸಿದರೆ ಸಾಕು, ಪ್ರದರ್ಶನ ಸಿದ್ಧವಾಗಿ ಬಿಡುತ್ತಿತ್ತು. ಕುಣಿಯುವ ಹುಮ್ಮಸ್ಸುಳ್ಳವರು ಕುಣಿದರು, ಹಾಡುವವರು ಹಾಡಿದರು; ತಿಳಿದಷ್ಟನ್ನು ಮಾತನಾಡಿದರು. ಇದಾವುದಕ್ಕೂ ಯಾವುದೇ ವಿಶೇಷ ತರಬೇತಿ ಇಲ್ಲದಿದ್ದರೂ ಪರಂಪರೆಯ ಬೆಂಬಲ ಇದ್ದೇ ಇರುತ್ತಿತ್ತು. ಅವರು ಹಾಡಿದ್ದು, ಬಾಯಾಡಿಸಿದ್ದು ಎಲ್ಲವೂ ಹಿಂದಿನವರು ಏನು ಮಾಡಿದರೋ ಅದೇ ಆಗಿತ್ತು. ಚಿಕ್ಕವರು ದೊಡ್ಡವರನ್ನು ನೋಡಿ ಕಲಿತವರು; ದೊಡ್ಡವರಾದ ಮೇಲೆ ಅದನ್ನೇ ಮಾಡಿ ತೋರಿಸಿದರು. ಪುಸ್ತಕ ವಿದ್ಯೆ ಬರುವುದರ ಮುನ್ನವೇ ಯಕ್ಷಗಾನ ತನ್ನ ಶೈಲಿಯನ್ನೂ, ಚೌಕಟ್ಟನ್ನೂ ಭದ್ರಗೊಳಿಸಿಕೊಂಡು ಒಂದು ಉನ್ನತ ಮಟ್ಟವನ್ನು ಆರ್ಜಿಸಿಕೊಂಡಿತು. ಜನಪ್ರಿಯತೆಯನ್ನು ಗಳಿಸಿಕೊಂಡಿತು.

ಉತ್ತರ ಕರ್ನಾಟಕದ ಪಾರಿಜಾತ, ದೊಡ್ಡಾಟ, ಸಣ್ಣಾಟಗಳು, ದಕ್ಷಿಣ ಕರ್ನಾಟಕದ ಬಯಲು ನಾಟಕಗಳು ಇವು ರೇಖೆಯ ಮಟ್ಟಿಗೆ ಯಕ್ಷಗಾನದ ಚೌಕಟ್ಟನ್ನೇ ಬಳಸಿಕೊಂಡು ಬಂದಿವೆ. ವೇಷಭೂಷಣಗಳಲ್ಲಿ ಮತ್ತು ವೈಖರಿಯಲ್ಲಿ ವ್ಯತ್ಯಾಸಗಳಿವೆ. ಇತ್ತೀಚಿನ ವರ್ಷಗಳಲ್ಲಿ, ಮುಖ್ಯವಾಗಿ ನಾಟಕ ಸಿನೇಮಾಗಳ ಹಾವಳಿ ತೊಡಗಿದ ಮೇಲೆ ಹಳ್ಳಿಗಳಲ್ಲೂ ಅವುಗಳನ್ನು ಆಡಿಸಿ ನೋಡುವ ರೂಢಿ ಕಡಿಮೆಯಾಗುತ್ತಿದೆ. ಪೇಟೆಯ ಗಾಳಿ ತಗಲಿದ ನವಕುಲೀನ ವರ್ಗದವರು ಇಂಥವನ್ನು ನೋಡಲು ಹೋಗುವುದು ತಮ್ಮ ಆಢ್ಯತೆಗೆ ಕುಂದೆಂದು ಅವಗಣಿಸಿದ್ದರಿಂದ ಈ ಎರಡು ಭಾಗಗಳ

'ಆಟಗಳು' ಕರಾವಳಿಯ ಯಕ್ಷಗಾನದಷ್ಟು ಸಮೃದ್ಧವಾಗಿ ತೋರುವುದಿಲ್ಲ ಜನಮಾನ್ಯತೆಯ ದೃಷ್ಟಿಯಿಂದ. ಆದರೆ ಅವುಗಳಲ್ಲಿ ಪುಟಿಯುವ ಜೀವಂತಿಕೆ, ಲವಲವಿಕೆ, ಸ್ವೋಪಜ್ಞತೆಗೆ ವಿಶಿಷ್ಟವಾದ ಸೊಬಗಿದ್ದೇ ಇದೆ. ಜಾನಪದ ಜೀವನ ಕ್ರಮದ ಒಂದು ಭಾಗವಾಗಿದ್ದ ಇಂಥ ಆಟಗಳು ನಶಿಸುವುದನ್ನು ತಡೆಗಟ್ಟಿ, ಅವುಗಳ ರಸಸ್ಥಾನಗಳನ್ನು ಗುರುತಿಸಿ, ಅವನ್ನು ಮತ್ತೆ ಜನಪ್ರಿಯವಾಗಿಸುವ ಹೊಣೆ ವಿದ್ಯಾವಂತ ವರ್ಗದ ಮೇಲೆ ಇದೆ. ಈ ದೃಷ್ಟಿಯಿಂದ ಕರಾವಳಿ ಕರ್ನಾಟಕ ಯಕ್ಷಗಾನವನ್ನು ಉಳಿಸಿಕೊಂಡ ರೀತಿ ಸ್ತುಹಣೀಯವಾದ್ದಾಗಿದೆ.

ಕರಾವಳಿ ಯಕ್ಷಗಾನದ ಮಹಾಪೋಷಕರು ಅಲ್ಲಿನ ಜನಸಾಮಾನ್ಯರು ಎಂಬುದು ನಿಜವಾದರೂ ಈ ನಡುವೆ ವಿದ್ಯಾವಂತ ವರ್ಗವೂ ಪ್ರೇಕ್ಷಕ ವರ್ಗವಾಗಿ ಸೇರಿಕೊಂಡದ್ದು ಅದರ ಶ್ರೇಯಸ್ಸಿಗೆ ಮುಖ್ಯ ಕಾರಣವಾಯಿತು. ಇನ್ನೊಂದು ಕಾರಣ ಇಲ್ಲಿನ ಜನರ ಸಂಘಟನಾ ಚಾತುರ್ಯ. ಮೊದಲು ದೇವಸ್ಥಾನಗಳ ಬೆಂಬಲದಿಂದ ಮೇಳಗಳು ಹೊರಡುತ್ತಿದ್ದರೆ ಇಂದು ಖಾಸಗೀ ಪ್ರವರ್ತಕರು ವ್ಯಾಪಾರದ ದೃಷ್ಟಿಯಿಂದ ೭೦, ೮೦ ಜನರನ್ನು ಕೂಡಿಸಿ ಮೇಳಗಳನ್ನು ಕಟ್ಟಿ, ಆರು ತಿಂಗಳ ಕಾಲ ೧೫೦ ಪ್ರದರ್ಶನಗಳನ್ನು ಕೊಡುತ್ತ ನೂರಾರು ಗ್ರಾಮ ಕೇಂದ್ರಗಳನ್ನು ಸಂಚರಿಸಲು ತಕ್ಕ ಏರ್ಪಾಟುಗಳನ್ನು ಮಾಡಿಕೊಂಡಿದ್ದಾರೆ. ಲಾಭ ನಷ್ಟದ ಲೆಕ್ಕಾಚಾರಕ್ಕೆ ಸಿಗುವ ಒಂದು ಕಲೆಯಾಗಿ ಯಕ್ಷಗಾನ ತೇರ್ಗಡೆ ಹೊಂದಿದೆ. ಈಗಲೂ ದೇವಸ್ಥಾನದ ಮೇಳಗಳು 'ಹರಕೆ' ಆಟಗಳನ್ನು ಆಡುತ್ತ ಸಂಚರಿಸುವುದುಂಟು. ಆದರೆ ಅವುಗಳಿಗಿಂತ ಹೆಚ್ಚು ಆರ್ಥಿಕ ಪುಷ್ಟಿ ವ್ಯಾಪಾರೀ ಮೇಳ (ಡೇರೆಮೇಳ)ಗಳಿಗೆ ಸಿಗುವುದರಿಂದ ದೊಡ್ಡ ಕಲಾವಿದರೂ ಇಲ್ಲಿಗೇ ಸಾಲು ಹಿಡಿಯುತ್ತಾರೆ. ತಮಿಳ್ನಾಡಿನಲ್ಲಿ ಟೂರಿಂಗ್ ಟಾಕಿಗಳ ಹಾವಳಿಯಿಂದ ಈ ಶತಮಾನದ ೧೯೩೦ರ ದಶಕಕ್ಕೇನೆ ಅಲ್ಲಿನ ತೆರ್‍ಕೂತ್ತು ಹಿಂದೇಟು ಹೊಡೆಯಿತೆಂದು ಹೇಳುತ್ತಾರೆ. ಪುಣ್ಯವಶಾತ್ ಅಂಥ ದುರ್ಗತಿ ಕರಾವಳಿ ಯಕ್ಷಗಾನಕ್ಕೆ ಪ್ರಾಪ್ತವಾಗಲಿಲ್ಲ. ಇಂದು ಹೆಚ್ಚು ಸಿನೀಮಾಪ್ರಿಯರು ಹುಟ್ಟಿಕೊಂಡರೂ ಸಿನೇಮ ಒಡ್ಡುವ ಸ್ಪರ್ಧೆಯನ್ನೆದಿರಿಸಿ ಯಕ್ಷಗಾನದ ಮೇಳಗಳು ಪ್ರವರ್ಧಮಾನವಾಗಿವೆ. ವರ್ಷದಿಂದ ವರ್ಷಕ್ಕೆ ಅವುಗಳ ಸಂಖ್ಯೆ ಹೆಚ್ಚುತ್ತಿದೆ. ಪ್ರೇಕ್ಷಕ ವರ್ಗವೂ ಬೆಳೆಯುತ್ತಿದೆ. ಗೋಷ್ಠಿಗಳು, ಸನ್ಮಾನೋತ್ಸವಗಳು, ಪತ್ರಿಕಾ ಲೇಖನಗಳು, ವಿಮರ್ಶೆಗಳು ಮುಂತಾದ ಸಂಭ್ರಮಗಳನ್ನು ನೋಡುವಾಗಲಂತೂ ಯಕ್ಷಗಾನದ ಉಲ್ಲಾಸಕ್ಕೆ ಮಹಾಪೂರವೇ ಬಂದಂತೆ ಕಾಣಿಸುತ್ತದೆ.

### ಹಿಂದೆ ಹೀಗಿರಲಿಲ್ಲ

ಯಾವತ್ತೂ ಹೀಗೆ ಇತ್ತೆಂದು ಯಾರೂ ಭಾವಿಸಬಾರದು. ೧೯೪೧ ರವರೆಗೂ ಬಡಸ್ಥಿತಿಯಲ್ಲೇ ಇದ್ದ ಕಲೆ ಈ ನಲ್ವತ್ತು ವರ್ಷಗಳಲ್ಲಿ ಸಂಘಟನೆಯ ದೃಷ್ಟಿಯಿಂದ ಹೊಸತೇನನ್ನೋ ಸಾಧಿಸಿದ್ದರಿಂದ ಶ್ರೇಯ: ಸಾಧನೆಯಾಗಿದೆ. ೧೯೪೦ರ ಹಿಂದಿನ ಪರಿಸ್ಥಿಯನ್ನು ಪರಿಶೀಲಿಸಿದರೆ ಗಮನೀಯ ವ್ಯತ್ಯಾಸ ಕಂಡು ಬರುತ್ತದೆ; ಅದರೆ ಈ ಬಡ ಸಂಘಟನೆಯೇ ಯಕ್ಷಗಾನವನ್ನು ನಿರಂತರವಾಗಿ ಗಮನೀಯವಾಗಿ ಬೆಳೆಸಿ ಜೀವಂತವಾಗಿರಿಸಿದ್ದು ಎಂಬಂಶವನ್ನು ನಾವು ಮರೆಯುವಂತಿಲ್ಲ. ಯಕ್ಷಗಾನ ಕೇಂದ್ರದ ಭಾಗವತ ಶ್ರೀ ನೀಲಾವರ ರಾಮಕೃಷ್ಣಯ್ಯನವರು ಹಳೆಯ ಕಾಲದ ಹರಕೆ ಮೇಳದ ಒಂದು ಸೊಗಸಾದ ಚಿತ್ರವನ್ನು ತಮ್ಮ "ಯಕ್ಷಗಾನ ಪಾಠಗಳು", ಎಂಬ ಗ್ರಂಥದಲ್ಲಿ ಕೊಟ್ಟಿದ್ದಾರೆ. ಅದರ ಉಲ್ಲೇಖ ಹೀಗಿದೆ:

ಬಯಲಾಟವನ್ನು ಆಡುವವರ ಸಂಘಟನೆಗೆ ಮೇಳವೆಂದು ಹೆಸರು. ಹಿಂದೆ, ಸಾಮಾನ್ಯವಾಗಿ ಈ ಕೆಳಗಿನಂತೆ ವೇಷಧಾರಿಗಳು, ಹಿಮ್ಮೇಳದವರು ಮತ್ತು ಸಹಾಯಕರು ಮೇಳಗಳಲ್ಲಿ ಇರುತ್ತಿದ್ದರು:

ವೇಷಧಾರಿಗಳು: ಎರಡನೆಯ ವೇಷ ೧, ಪುರುಷ ವೇಷ ೧, ಮುಂಡಾಸು ವೇಷ ೨, ಬಣ್ಣದ ವೇಷ ೧, ಒತ್ತು ಬಣ್ಣದ ವೇಷ ೧, ಹಾಸ್ಯಗಾರ ವೇಷ ೧, ಮೂರನೆಯ ವೇಷ ೧, ಮುಖ್ಯ ಸ್ತ್ರೀ ವೇಷ ೧, ಸಖಿ ಸ್ತ್ರೀ ವೇಷ ೧, ಬಾಲಗೋಪಾಲ ವೇಷ ೨, ಕೋಡಂಗಿ ಹುಡುಗರು ೨, (ಒಟ್ಟು೧೪).

ಹಿಮ್ಮೇಳ: ಭಾಗವತ, ಮದ್ದಲೆಗಾರ, ಸಂಗೀತಗಾರ (ಒಟ್ಟು ಮೂರು ೩).

ಇತರ : ಹೊರೆ ಆಳುಗಳು ೧೦, ಅಡುಗೆಭಟ್ಟ ೧ (ಒಟ್ಟು೧೧).

ಹೀಗೆ ಒಟ್ಟಿಗೆ ೨೮ ಜನರ ಕೂಟವು ಮೇಳ ಎನಿಸುತ್ತಿತ್ತು. ಚಂಡೆ ನುಡಿಸಲು ಪ್ರತ್ಯೇಕವಾಗಿ ಒಬ್ಬನಿರುತ್ತಿರಲಿಲ್ಲ. ಸಂಗೀತಗಾರ, ಹಾಸ್ಯಗಾರ, ಸಖೀ ಸ್ತ್ರೀ ವೇಷಧಾರಿ ಈ ಮೂವರೇ ಆಗಾಗ ಬದಲುಗೊಂಡು ಚಂಡೆ ನುಡಿಸುವ ಕ್ರಮವಿದ್ದಿತ್ತು. ಆಟದ ಆರಂಭಕ್ಕೆ ಎಂದರೆ ಸಭಾಲಕ್ಷಣ, ಬಾಲಗೋಪಾಲರ ಕುಣಿತಕ್ಕೆ ಯಾರಾದರೂ ವೇಷಧಾರಿಗಳು ಅಥವಾ ಹಾಸ್ಯಗಾರರು ಮದ್ದಲೆ ನುಡಿಸುತ್ತಿದ್ದರು. ಪ್ರಸಂಗ ಪೀಠಿಕೆಯ ಹೊತ್ತಿಗೆ ಮದ್ದಲೆಗಾರರು ಬರುತ್ತಿದ್ದರು. ಬಯಲಾಟದಲ್ಲಿ ಸಭಾಲಕ್ಷಣ, ಎಂದರೆ ಬಾಲಗೋಪಾಲ, ಪ್ರಸಂಗ ಪೀಠಿಕೆ, ಸ್ತ್ರೀವೇಷ ಒಡ್ಡೋಲಗ ಮೊದಲಾದವುಗಳು ಮೂರು ಗಂಟೆಗೂ ಹೆಚ್ಚು ಹೊತ್ತು ನಡೆದು ಆಮೇಲೆ ಕಥಾನಕ ಆರಂಭವಾಗುತ್ತಿತ್ತು. ಕಥಾರಂಭದಲ್ಲಿ ಭಾಗವತರು ಬಂದು ಬೆಳಗಿನ ತನಕ ಕಥೆಯ ಸೂತ್ರಧಾರರಾಗಿ ಆಟ ನಡೆಸುವ ಪದ್ಧತಿ ಇತ್ತು. ಇದು ಹೆಚ್ಚಾಗಿ ಈಗಲೂ ಹೀಗೆಯೇ ಇದೆ. ಅತೀ ಹಿಂದೆ, ಅಂದರೆ ೮೦ ವರ್ಷಗಳಿಗೂ ಹಿಂದೆ, ಸಭಾಲಕ್ಷಣದಲ್ಲಿ ಪೀಠಿಕೆ, ಸ್ತ್ರೀ ವೇಷದ ಅನಂತರ ಹಾಸ್ಯಗಾರನ ವಿನೋದ ಇದ್ದಿತಂತೆ. ಕೊಕ್ಕೆ ಚಿಕ್ಕನ ಹಾಸ್ಯ, ವೈದ್ಯರ ಹಾಸ್ಯ ಹೀಗೆ ಹಲವು ರೀತಿಯ ಹಾಸ್ಯಗಳು ಬಂದು ಅರ್ಧ ತಾಸು ಮನರಂಜನೆ ನೀಡುವ ಪದ್ಧತಿ ಇದ್ದಿತ್ತಂತೆ. ಈಚೆಗೆ ಅದು ನಿಂತಿದೆ.

ಹಿಂದೆ ಬಯಲಾಟದ ಮೇಳಗಳು ನಾಲ್ಕಾರು ಇರುತ್ತಿದ್ದು, ಎಲ್ಲಾ ಮೇಳಗಳೂ ಊರಿನ ಮಹನೀಯರ ಆಶ್ರಯದಿಂದಲೇ ಬದುಕಿ ಬಾಳಿದವು. ಮೇಳವನ್ನು ವಹಿಸಿಕೊಂಡು ಯಜಮಾನನೆಂಬುವನು ಮೊದಲಿನ ದಿನವೇ ಮರುದಿನ ಹೋಗುವ ಊರಿಗೆ ಹೋಗಿ ಆಶ್ರಯಾತದಾತರನ್ನು ಕಂಡು 'ನಾಳೆ ನಿಮ್ಮಲ್ಲಿಗೆ ಬರುತ್ತೇವೆ. ಒಂದು ಆಟ ಆಡಿಸಿ ನಮ್ಮನ್ನು ಪ್ರೋತ್ಸಾಹಿಸಬೇಕು' ಎಂದು ಕೇಳುತ್ತಿದ್ದ. ಅವರೂ ಸಂತೋಷದಿಂದ ಒಪ್ಪಿ ಆಡಿಸುವ ಪದ್ಧತಿ ಇತ್ತು. ಹಾಗೆ ಬರಬರುತ್ತ ಒಬ್ಬನೇ ಆಟ ಆಡಿಸುವ ರೂಢಿಯೂ ಬಂತು. ಇತ್ತೀಚೆಗೆ ಬಡಗುತಿಟ್ಟಿನಲ್ಲಿ ಮಂದರ್ತಿ, ಮಾರಣಕಟ್ಟೆ ಮೇಳಗಳು ಪುರಾತನದ್ದಾಗಿದ್ದು, ಅವುಗಳಿಗೆ ಹರಕೆ ಆಟಗಳೇ ನಡೆಯುವುದು ಹೆಚ್ಚು. ತೆಂಕುತಿಟ್ಟಿನಲ್ಲಿ ಕಟೀಲು, ಧರ್ಮಸ್ಥಳ ಮೇಳಗಳೂ ಹೀಗೆ ಹರಕೆಯಲ್ಲೇ ನಡೆಯುತ್ತವೆ.

ಹಿಂದೆ ಮೇಳಗಳಲ್ಲಿ ೯ ಯಾ ೧೦ ಜನ ಆಳುಗಳು ತಲೆ ಹೊರೆಯಲ್ಲಿ ಇಡೀ ಮೇಳದ ಸಾಮಾನುಗಳನ್ನು ದೊಡ್ಡ ದೊಡ್ಡ ಚೆತ್ತದ ಪೆಟ್ಟಿಗೆಗಳಲ್ಲಿ ತುಂಬಿ ಊರಿಂದೂರಿಗೆ ಸಾಗಿಸುತ್ತಿದ್ದರು. ಇವುಗಳಲ್ಲಿ ಗಣಪತಿ ಪೆಟ್ಟಿಗೆ, ಶ್ರುತಿ ಪೆಟ್ಟಿಗೆ, ಅಡ್ಡ ಪೆಟ್ಟಿಗೆ ಈ ಮೂರು ಹೊರೆಗಳು ಮುಖ್ಯವಾದವುಗಳು.

ಗಣಪತಿ ಪೆಟ್ಟಿಗೆಯಲ್ಲಿ ವೇಷದ ಕಿರೀಟಗಳೂ, ದೇವರ ಕಾಣಿಕೆ ಡಬ್ಬಿ ಇತ್ಯಾದಿಗಳು ಮಾತ್ರ ಇರುತ್ತಿದ್ದವು. ಶ್ರುತಿ ಪೆಟ್ಟಿಗೆಯಲ್ಲಿ ಹಿಮ್ಮೇಳದವರ ಬಟ್ಟೆಬರೆ, ಶ್ರುತಿ, ಮದ್ದಳೆ, ಸ್ತ್ರೀ ವೇಷದ ಬೆಲೆ ಬಾಳುವ ಸೀರೆಗಳು ಇರುತ್ತಿದ್ದುವು. ಅಡ್ಡಪೆಟ್ಟಿಗೆಯಲ್ಲಿ ಅಡಿಗೆ ಊಟದ ಸಾಮಾನುಗಳು ಇರುತ್ತಿದ್ದುವು. ಅಲ್ಲದೆ ಇನ್ನಿತರ ವೇಷಭೂಷಣಗಳ ಸಾಮಾನುಗಳೂ ಎರಡು ಯಾ ಮೂರು ದೊಡ್ಡ ಪೆಟ್ಟಿಗೆಗಳಲ್ಲಿರುತ್ತಿದ್ದು, ಇದಕ್ಕೆ ಸರಕಿನ ಪೆಟ್ಟಿಗೆ ಎಂಬ ಹೆಸರಿದ್ದಿತ್ತು. ಅಲ್ಲದೆ, ಎರಡು ಜವಳಿ ಗಂಟು ಹೊರೆ, ಇನ್ನೊಂದು ರಥದ ಹೊರೆ, ಎಂದರೆ ರಂಗಸ್ಥಳದಲ್ಲಿ ಇಡುವ ರಥ. ಗಾಲಿಯಿಂದ ಕೂಡಿದ ಈ ವಾಹನವನ್ನು ಹಗಲು ಕಳಚಿ ಹೊತ್ತುಕೊಳ್ಳುವುದು, ರಾತ್ರಿ ಜೋಡಿಸಿ ಬಿಗಿದು ಇಡುವುದು. ಇದು ಒಂದು ಹೊರೆ. ಇದರ ಒಟ್ಟಿಗೆ ಅನ್ನದ ಚೆರಿಗೆ ಕಟ್ಟಿ ಹೊರುವ ಪದ್ಧತಿ ಇತ್ತು. ಇನ್ನು ಹೆಚ್ಚಿಗೆ ಗಂಟು ಅಂತ ಒಂದು ಹೊರೆ ಇದ್ದಿತ್ತು. ೯ ಯಾ ೧೦ ಹೊರೆ ಆಳುಗಳು ಹೊರೆ ಹೊರುವುದು ಮಾತ್ರವಲ್ಲದೆ, ಇತರ ಕೆಲಸಗಳನ್ನೂ ಮಾಡಬೇಕಿತ್ತು. ಗಣಪತಿ ಪೆಟ್ಟಿಗೆಯವನು ಆ ದಿನ ಆಟ ಆಗುವ ಸ್ಥಳಕ್ಕೆ ಪೆಟ್ಟಿಗೆ ಹೊತ್ತುಕೊಂಡು ಹೋಗಿ, ಬಿಡಾರದ ಮನೆ ಹಿಡಿದೊಡನೆ ಅಡಿಗೆಗೆ ಒಲೆ ತಯಾರಿಸಿಕೊಡಬೇಕು. ಅನಂತರ ರಾತ್ರಿಯಿಡೀ ಎಚ್ಚರವಾಗಿದ್ದು ಮುಖ್ಯ ವೇಷಧಾರಿಗಳಿಗೆ ವೇಷಕ್ಕೆ ಸಹಕರಿಸಬೇಕು. ಮುಂಡಾಸಿಗೆ ಹುಲ್ಲು ಜಡೆ ಹಿಡಿಯುವುದೇ ಮೊದಲಾದ ಎಲ್ಲಾ ಕೆಲಸದ ಜವಾಬ್ದಾರಿ ನೋಡಿಕೊಳ್ಳಬೇಕಿತ್ತು. ಶ್ರುತಿ ಪೆಟ್ಟಿಗೆಯವನು ರಾತ್ರಿ ಬೆಳಗಿನ ತನಕ ಬುರುಡೆ ಶ್ರುತಿಯನ್ನು ಊದುತ್ತ ಭಾಗವತನೇ ಮೊದಲಾದ ಹಿಮ್ಮೇಳದವರೊಡನೆ ಸಹಕರಿಸಬೇಕಿತ್ತು. ಅಡ್ಡ ಪೆಟ್ಟಿಗೆಯವನು ಅಡುಗೆಗೆ ಬೇಕಾದಷ್ಟು ಸಾಮಾನುಗಳನ್ನು ಅಡುಗೆ ಭಟ್ಟರಿಗೆ ಕೊಡುವುದು, ಅಲ್ಲಿ ಉಳಿದದ್ದನ್ನು ಪೆಟ್ಟಿಗೆಯಲ್ಲಿಟ್ಟು ಜೋಪಾನಮಾಡುವುದು ಮತ್ತು ಆಟದ ರಂಗಸ್ಥಳಕ್ಕೆ ಸ್ವಲ್ಪ ದೂರದಲ್ಲಿ ಚೌಕಿ ಹತ್ತಿರ ಪೆಟ್ಟಿಗೆಯನ್ನಿಟ್ಟುಕೊಂಡು ಬಾಯಾರಿಕೆಗೆ ಬೆಲ್ಲ ನೀರನ್ನು ಇಡಿಸುವುದು ಮುಂತಾದ ಕೆಲಸ ನಿರ್ವಹಿಸಬೇಕಿತ್ತು. ಉಳಿದ ಆಳುಗಳು ಸರದಿಯಂತೆ ರಾತ್ರಿ ಆಟದ ಕಾಲದಲ್ಲಿ ತೆರೆ ಹಿಡಿಯುವುದು, ಕಥಾನಕಗಳಿಗೆ ಬೇಕಾದ ಸೊಪ್ಪು, ದೊಂದಿ, ವಗೈರೆಗಳನ್ನು ತಯಾರಿಸಿಕೊಡುವುದು, ರಂಗಸ್ಥಳದ ಹಿಂದೆ ಅಡ್ಡ ಚೌಕ ಎಂತ ನಾಲ್ಕು ಮಡಲು ಹಾಸಿ, ಹುಲ್ಲು ಇತ್ಯಾದಿಗಳನ್ನು ಸಿದ್ಧಪಡಿಸಿ ಇಡುವುದೇ ಮೊದಲಾದ ಕೆಲಸಗಳನ್ನು ಮಾಡಬೇಕಾಗಿತ್ತು. ರಂಗಸ್ಥಳದಲ್ಲಿ ಕುಣಿದು ಬಿಡುವಿದ್ದಾಗ ವಿಶ್ರಾಂತಿ ಪಡೆಯಲು ಈ ಅಡ್ಡಚೌಕ ಸ್ಥಳ. ಹಿಂದೆ, ದೀವಟಿಗೆ ಹಿಡಿಯಲು ಆಟ ಆಡಿಸುವವರೇ ಜನರನ್ನು ಒದಗಿಸಿ ಕೊಡುತ್ತಿದ್ದರು. ಇದಕ್ಕೆ ಬೇರೆ ಜನ ದೊರೆಯದಿದ್ದಾಗ, ಮೇಳದ ಹೊರೆ ಆಳುಗಳೇ ಆಟ ಆಡಿಸುವವರಿಂದ ಪ್ರತಿಫಲ ಪಡೆದು ಆ ಕೆಲಸವನ್ನು ನಿರ್ವಹಿಸುತ್ತಿದ್ದರು.

ಬಯಲಾಟದ ಮೇಳವನ್ನು ಊರಿನ ಮಹನೀಯರು "ಇಂಥ ದಿನ ನಮ್ಮಲ್ಲಿಗೆ ಬಂದು ಆಟ ಆಡಬೇಕು" ಎಂದು ವೀಳ್ಯ ಕೊಟ್ಟು ಕೇಳುವುದೂ ಇದ್ದಿತ್ತು. ಆ ದಿನ ಆಟ ನಿಶ್ಚಯವಾದ ಮೇಲೆ, ಹಿಮ್ಮೇಳದವರು ಆಟ ಆಡಿಸುವ ಮನೆಯಲ್ಲೊ ಅಥವಾ ಅಲ್ಲಿನ ದೇವಸ್ಥಾನದಲ್ಲಿ ತಾಳಮದ್ದಳೆ ಮಾಡಿದ ಮೇಲೆ ಪಡಿಸಾಹಿತ್ಯ ಅಂದರೆ ಮೇಳದವರಿಗೆ ಊಟಕ್ಕೆ ಬೇಕಾದ ಅಕ್ಕಿ ಬೇಳೆಯಾದಿಯಾಗಿ ಎಲ್ಲಾ ಸಾಮಾನುಗಳನ್ನು ಬಿಡಾರಕ್ಕೆ ಕೊಂಡುಹೋಗುತ್ತಾರೆ. ಅಲ್ಲಿ ಎಲ್ಲರೂ ವಿಶ್ರಮಿಸಿ ಮಧ್ಯಾಹ್ನ ಊಟಮಾಡಿ, ಮತ್ತೆ ಸಂಜೆಯವರೆಗೆ ನಿದ್ರೆ ಮಾಡಿ, ಕತ್ತಲಾಗುತ್ತಲೇ ಎದ್ದು ಊಟಮಾಡಿ ಮತ್ತೆ ಆಟದ ಸ್ಥಳಕ್ಕೆ ಹೋಗುತ್ತಾರೆ. ಇಷ್ಟರಲ್ಲಿ ಆಡಿಸುವವರು ಗದ್ದೆಯಲ್ಲಿ ಸುಮಾರು ೬ ಕೋಲು ಉದ್ದ, ೪.೫ ಕೋಲು ಅಗಲವ ರಂಗಸ್ಥಳ ತಯಾರಿಸುತ್ತಾರೆ. ನಾಲ್ಕು ಮೂಲೆಗೂ ಬಿದಿರಿನ ಕಂಬ ನೆಟ್ಟು ಅದಕ್ಕೆ ಮಾವಿನ ತೋರಣ ಕಟ್ಟಿ, ನಾಗಸಂಪಿಗೆ ಹೂಗಳಿಂದ ಶೃಂಗರಿಸುತ್ತಾರೆ. ರಂಗಸ್ಥಳದ ಹಿಂದೆ ಸ್ವಲ್ಪ ದೂರದಲ್ಲಿ ವೇಷಕಟ್ಟುವ ಸ್ಥಳ 'ಚೌಕಿ' ಮಾಡುತ್ತಾರೆ. ಗಣಪತಿಗೆ ಪೂಜೆ ಮಾಡಿ ಮಂಗಳಾರತಿ ಆಗುತ್ತದೆ. ಪೂಜೆಯ ಕಾಲಕ್ಕೆ ಸಂಗೀತಗಾರರು 'ಗಜಮುಖದವಗೆ' ಎಂಬ ಪ್ರಾರ್ಥನೆಯನ್ನು ಚೌಕಿಯಲ್ಲಿ ಪೂರೈಸಿ ಕೋಡಂಗಿ, ಚಂಡೆ ಸಮೇತ ರಂಗಸ್ಥಳಕ್ಕೆ ಬರುತ್ತಾರೆ. ಆಮೇಲೆ ಸುಮಾರು ೩ ಗಂಟೆಗಳ ಕಾಲ ಸಭಾಲಕ್ಷಣ, ಬಾಲಗೋಪಾಲ, ಗಣಪತಿ ಪೂಜೆ, ಪ್ರಸಂಗ ಪೀಠಿಕೆ, ಕಾರ್ಯಕ್ರಮ ಪೀಠಿಕೆ, ಸ್ತ್ರೀವೇಷಗಳು ಮುಗಿದ ಬಳಿಕ ಪಾಂಡವರ ಒಡ್ಡೋಲಗ, ಅಥವಾ ಕಥೆಗೆ ಅನುಸರಿಸಿ, ದೇವೇಂದ್ರನ ಒಡ್ಡೋಲಗ, ರಾಮಾಯಣ ಪ್ರಸಂಗಗಳಾದರೆ ರಾಮಲಕ್ಷಣರ ಒಡ್ಡೋಲಗವಾದ ಬಳಿಕ ಕಥೆ ಪ್ರಾರಂಭವಾಗುತ್ತದೆ. ಅಲ್ಲಿಂದ ಬೆಳಗಿನ ತನಕ ಆಟ ನಡೆದು ಭಾಗವತರು ಮಂಗಲ ಹಾಡಿದ ಬಳಿಕ ಆಟ ಆಡಿಸುವವರಿಂದ ವೀಳ್ಯ ಪಡೆದು ಉಪಚಾರದ ಮಾತುಗಳನ್ನು ಆಡಿ, ಅಲ್ಲಿಂದ ಚೌಕಿಗೆ ಬಂದು, ಅಲ್ಲಿ ಗಣಪತಿಗೆ ಆರತಿ ಎತ್ತಿ ಮಂಗಲ ಹಾಡಿ ಮುಗಿಸುತ್ತಾರೆ. ದೇವಾಸ್ಥಾನದ ಹತ್ತಿರ ಆಟವಾದರೆ ಬೆಳಿಗ್ಗೆ ಮಂಗಲಕ್ಕೆ ಸ್ತ್ರೀವೇಷ ಸಹಿತ ದೇವಸ್ಥಾನಕ್ಕೆ ಹೋಗಿ ಮಂಗಲ ಕುಣಿದು ಬರುವ ಪದ್ಧತಿಯೂ ಇತ್ತು. ಹೀಗೆ ಒಂದು ಹಳ್ಳಿಯಲ್ಲಿ ನಡೆಯುವ ಬಯಲಾಟ ಎಂದರೆ ಒಂದು ಚಿಕ್ಕ ಉತ್ಸವದಂತೆಯೇ ಊರಿನವರೆಲ್ಲರೂ ಭಾಗವಹಿಸುತ್ತಿದ್ದರು.

### ಸಭಾಲಕ್ಷಣ

ಯಕ್ಷಗಾನ ಶುದ್ಧ 'ದೇಸಿ' ಕಲೆಯಾಗಿರುವುದರಿಂದ ಅದರ ಮೂಲವನ್ನು ಭರತಮುನಿ ಬರೆದಿರುವ ನಾಟ್ಯಶಾಸ್ತ್ರದಲ್ಲಿ ಅರಸುವುದು ಅನಗತ್ಯ. ಭರತನ ಉದ್ದೇಶ, ಆದೇಶದಂತೆ ನಡೆಯುವ ಸಂಸ್ಕೃತ ನಾಟಕಗಳಲ್ಲಿ 'ಸೂತ್ರಧಾರ' ನಿಲ್ಲದೆ ಸಾಧ್ಯವಿಲ್ಲ. ಆತನೇ ನಾಟಕವನ್ನು ಪ್ರೇಕ್ಷಕರಿಗೆ ಪರಿಚಯಿಸಿಕೊಡುವವನು. ಯಕ್ಷಗಾನದಲ್ಲಿ ಇಂಥ ಉಪೋದ್ಘಾತ ಸಂದರ್ಭದಲ್ಲಿ ಭಾಗವತನೇ ಸೂತ್ರಧಾರನ ಕೆಲಸ ಮಾಡುತ್ತಾನೆ. ಪಾತ್ರಗಳನ್ನು ಪರಿಚಯ ಮಾಡಿಸಿ ಕೊಡುವುದು, ಅವುಗಳ ಜತೆಗೆ ಸಂಭಾಷಣೆ ಮಾಡುವುದು, ಸಂದರ್ಭಾನುಸಾರ ಪ್ರತಿಕ್ರಿಯೆ ತೋರುವುದು ಇಂಥ ಕರ್ತವ್ಯಗಳನ್ನು ಮಾಡುವ ಭಾಗವತನನ್ನು ಯಕ್ಷಗಾನ ಬರೇ ಹಾಡುಗಾರನಾಗಿ ಪರಿಗಣಿಸಿಲ್ಲ. ಆಟದಲ್ಲಿ ಅವನೂ ಒಬ್ಬ ಪಾತ್ರಧಾರಿ ಎಂದೇ ತಿಳಿವಳಿಕೆ, ಆತನಿಗೆ ಪ್ರಥಮ ವೇಷವೆಂಬ ಬಿರುದು. ಅಂದರೆ ನಾಟಕದಲ್ಲಿ ನಾಯಕನೆಂದು ಕರೆಯಿಸಿಕೊಳ್ಳುವ ಪಾತ್ರ ಯಕ್ಷಗಾನದಲ್ಲಿ ಎರಡನೆಯ ವೇಷವೆಂದು ಕರೆಯಿಸಿಕೊಳ್ಳುತ್ತದೆ. ಭಾಗವತನಿಗೆ ಮೇಳದಲ್ಲಿ ಅತ್ಯುನ್ನತ ಸ್ಥಾನವನ್ನು ಕಲ್ಪಿಸಿದ್ದಾರೆ. ಏಕೆಂದರೆ ಆತ ಬಯಲಾಟದ ನಿರ್ದೇಶಕ. ರಂಗಸ್ಥಳದ ಮೇಲಿದ್ದುಕೊಂಡು ನಾಟಕವನ್ನು ಇಚ್ಛಾನುಸಾರ ನಿರ್ದೇಶಿಸುವ ಹಕ್ಕು ಆತನಿಗಿದೆ. ತನ್ನ ಹಾಡುಗಳ ಮೂಲಕ ನಟವರ್ಗವನ್ನು ಎಷ್ಟು ಬೇಕೋ ಅಷ್ಟು ಕುಣಿಸಬಹುದು. ಎಲ್ಲ ನಟರೂ ಭಾಗವತನ ಆದೇಶವನ್ನು ಪಾಲಿಸಬೇಕೆಂಬುದು ನಿಯಮ. 'ಆಟ' ಅಥವಾ ಅವತ್ತಿನ ಪ್ರಸಂಗ ಆರಂಭವಾಗುವುದಕ್ಕೆ ಮೊದಲು ಸುಮಾರು ಎರಡು ತಾಸುಗಳ ಕಾಲ ನಡೆಯುವ ಪೂರ್ವರಂಗದ ನಾಟ್ಯಗಳಿಗೆ ಯಕ್ಷಗಾನದಲ್ಲಿ ಸಭಾಲಕ್ಷಣವೆಂದು ಕರೆಯುತ್ತಾರೆ. ಈ ಕುರಿತು ಈ ಶತಮಾನದ ಆದಿಯಲ್ಲಿ ದಿವಂ. ಕಡಂದಲೆ ರಾಮರಾಯರು

ಒಂದು ಆಧಾರ ಗ್ರಂಥ ರಚಿಸಿದ್ದಾರೆ. ಬಹುಶಃ ಯಕ್ಷಗಾನದ ಸ್ವರೂಪ ತಿಳಿಸಲು ರಚಿತವಾದ ಗ್ರಂಥವೇ ಇದು ಎನ್ನಬಹುದು.

ಈ ಗ್ರಂಥದ ಹೆಸರು 'ಯಕ್ಷಗಾನ ಸಭಾಲಕ್ಷಣ ಮತ್ತು ಪ್ರಸಂಗ ಪೀಠಿಕೆ'. ಐವತ್ತು ವರ್ಷಗಳಿಗೂ ಹಿಂದೆ ಇದನ್ನು ಉಡುಪಿಯ ಪಾವಂಜೆ ಗುರುರಾವ್ ಎಂಡ್ ಸನ್ಸ್ ಇವರು ಮುದ್ರಿಸಿದರು. (ಕರಾವಳಿ ಕರ್ನಾಟಕದಲ್ಲಿ ಯಕ್ಷಗಾನವನ್ನು ತಾಡವಾಲೆಗಳಿಂದ ಕಾಗದಕ್ಕೆ ಇಳಿಸಿ ಮುದ್ರಿಸಿದವರಲ್ಲಿ ಪಾವಂಜೆ ಗುರುರಾಯರೇ ಆದ್ಯರು). "ಪ್ರಸಂಗಗಳು ಎಂದರೆ ಆಯಾ ದಿನ ಆಡುವ ಆಟಕ್ಕೆ ಸಂಬಂಧಿಸಿದ ಕಥಾಭಾಗಗಳು. ಉದಾ: 'ಅಂಗದ ಸಂಧಾನ' ಎಂದರೆ ರಾಮಾಯಣದಲ್ಲಿ ಅಂಗದ ರಾವಣನ ಬಳಿ ಸಂಧಾನಕ್ಕೆ ಬರುವಷ್ಟು ಕಥಾಭಾಗ; ಇದನ್ನು ಯಕ್ಷಗಾನದ ಜಾನಪದ ಕವಿಯೊಬ್ಬ ಉಚಿತ ರಾಗ ತಾಳಗಳೊಡನೆ ಹಾಡುಗಳಾಗಿ ರಚಿಸಿಕೊಟ್ಟಿರುತ್ತಾನೆ; ಭಾಗವತರು ಇದನ್ನು ಬಾಯಿಪಾಠ ಮಾಡಿರುತ್ತಾರೆ. ಆಡಿಸುವ ಯಜಮಾನರು ಯಾವ ಪ್ರಸಂಗ ಬೇಕು ಎನ್ನುತ್ತಾರೋ ಅದನ್ನು ಮೇಳದವರು ಆಡಿತೋರಿಸಬೇಕಾದ್ದು ನಿಯಮ. ಹಿಂದಿನ ಭಾಗವತರಿಗೆ ಕನಿಷ್ಠ ೨೦, ೩೦ ಪ್ರಸಂಗಗಳಾದರೂ ಬಾಯಿಗೇ ಬರುತ್ತಿದ್ದವಂತೆ. ಈಗ ಬರುವ ಅಗತ್ಯವಿಲ್ಲ, ಸಾಧ್ಯವೂ ಇಲ್ಲ. ಪುಸ್ತಕ ಇಟ್ಟುಕೊಂಡು ಹಾಡುತ್ತಾರೆ, ವರ್ಷ ವರ್ಷ ಹೊಸ ಪ್ರಸಂಗಗಳು ರಚಿತವಾಗುತ್ತವೆ. ಕಥಾಭಾಗದಲ್ಲಿ ಒಂದು ರಾತ್ರಿಗೆ ಎರಡು ಪ್ರಸಂಗಗಳನ್ನು ಆಡಿಸುವುದೂ ಉಂಟು. ಪ್ರಸಂಗಗಳು ತೊಡಗುವ ಮುನ್ನ ಪೀಠಿಕೆಯ ರೂಪದಲ್ಲಿ ಕೆಲವು ವಿವಿಧ ನೃತ್ಯಗಳನ್ನೊಳಗೊಂಡ ಪೂರ್ವರಂಗವೇ ಯಕ್ಷಗಾನದ 'ಸಭಾಲಕ್ಷಣ'. ಒಂದು ರಾತ್ರಿಯ ಆಟದಲ್ಲಿ ಸಮಯದ ವಿಂಗಡನೆ ಹೀಗಿರುತ್ತದೆ:

ಸಭಾಲಕ್ಷಣ ಅಥವಾ ಪೀಠಿಕೆ: ರಾತ್ರಿ ೮ರಿಂದ ೧೧
ಒಂದನೆಯ ಪ್ರಸಂಗ: ರಾತ್ರಿ ೧೧ರಿಂದ ೩ ಗಂಟೆ
ಎರಡನೆಯ ಪ್ರಸಂಗ: ರಾತ್ರಿ ೩ರಿಂದ ಬೆಳಗಿನ ತನಕ

ಪೀಠಿಕೆಯ ಭಾಗ ಇಂದಿನ ವ್ಯಾಪಾರೀ ಮೇಳಗಳಲ್ಲಿ ಒಂದೋ ಪೂರ್ತಿ ಬಿಟ್ಟು ಹೋಗಿರುತ್ತದೆ ಅಥವಾ ಹರಕೆ ಸಂಪ್ರದಾಯದಂತೆ ಏನೋ ಒಂದಿಷ್ಟು ನಡೆಯುತ್ತದೆ. ಆದರೆ ಸಾಂಪ್ರದಾಯಿಕ ಶೈಲಿಯಲ್ಲಿ ಹಿಂದಿನ ಕಾಲದಲ್ಲಿ ಬಯಲಾಟಗಳು ನಡೆಯುತ್ತಿದ್ದ ಸಾಮಾಜಿಕ ಸಂದರ್ಭದಲ್ಲಿ ಪೀಠಿಕೆ ಅಥವಾ ಸಭಾಲಕ್ಷಣ ಭಾಗ ಅತ್ಯಂತ ಸುಂದರವಾಗಿ ಪ್ರಕಟವಾಗುತ್ತಿತ್ತು. ಅದರಿಂದ ಮೇಳದಲ್ಲಿ ಸೇರಿಕೊಂಡ ತರುಣ, ಅರುಣಪ್ರತಿಭೆಗಳಿಗೆ ರಂಗಸ್ಥಳದ ಅನುಭವ ಸಿಗುತ್ತಿತ್ತು. 'ಮಾಡಿಯೇ ಕಲಿ', ಎನ್ನುವ ತತ್ವದ ಮೇಲೆ ಶಿಕ್ಷಣ ಅವಲಂಬಿಸಿದ್ದ ಕಾಲದಲ್ಲಿ, ಚಿಕ್ಕ ಹುಡುಗರು ಎಂತಾದರೂ ಬಂದು ನರ್ತಿಸಲು ಪೀಠಿಕಾ ಪ್ರಸಂಗದಲ್ಲಿ ಕೋಡಂಗಿಯ ಪಾತ್ರ ಇರುತ್ತಿತ್ತು. ಬಾಲಗೋಪಾಲ, ಸ್ತ್ರೀವೇಷ, ಒಡ್ಡೋಲಗ ಇವುಗಳ ಪ್ರವೇಶವೆಂದರೆ ಮುಂಬರುವ ಕಥಾಪ್ರಸಂಗಕ್ಕೆ ಪ್ರೇಕ್ಷಕರ ಮನವನ್ನೊಲಿಸಿಕೊಳ್ಳುವ ತೀರ ವೈಜ್ಞಾನಿಕವಾದ ಒಂದು ಅಂಶವೇ ಸರಿ. ಇಲ್ಲಿ ನೃತ್ಯವು ಮಾತ್ರವಲ್ಲದೆ, ಜನರಂಜನೆಯ ಸಲುವಾಗಿ ಹಾಸ್ಯವೂ ಇರುತ್ತಿತ್ತು. ಜಾನಪದದ ಗುಣಧರ್ಮದಂತೆ ಈ ಹಾಸ್ಯಕ್ಕೆ ಅಶ್ಲೀಲತೆ ಎಂಬ ಗಡಿ ಇರಲಿಲ್ಲ. (ಹಾಸ್ಯಗಾರ)ನ ನಾಲಗೆಗೆ ಕಡಿವಾಣವಿಲ್ಲ. ಜಾತಿವಾದ ಇನ್ನೂ ರಾಜಕೀಯ ಪ್ರತಿಷ್ಠೆಯನ್ನು ಪಡೆಯದೆ ಇದ್ದುದರಿಂದ ಆ ನಿರ್ಬೋಧ ಯುಗದಲ್ಲಿ ರಂಗಸ್ಥಳದ ಮೇಲೆ ಜಾತಿವಾಚಕಗಳಾದ ಲೇವಡಿಗಳೂ ಬರುತ್ತಿದ್ದವು. ಯಾರೂ ಆಕ್ಷೇಪವೆತ್ತುತ್ತಿರಲಿಲ್ಲ.

ಸಭಾಲಕ್ಷಣ ಭಾಗದಲ್ಲಿ ಏನೆಲ್ಲ ಇರಬೇಕೆಂಬುದನ್ನು ಕಡಂದಲೆಯವರ ಗ್ರಂಥದಲ್ಲಿ ವಿವರವಾಗಿ ಸೋದಾಹರಣವಾಗಿ ಕೊಟ್ಟಿದ್ದಾರೆ. ಮೊದಲನೆಯ ಭಾಗದಲ್ಲಿ ಮೇಳದವರು ಆದಿನ ಆಟವಾಡುವ ಊರಿಗೆ ಬಂದ ಕೂಡಲೆ ಆಯಾ ದೇವಸ್ಥಾನದಲ್ಲಿಯೋ ಅಥವಾ ಮನೆಯಲ್ಲಿಯೋ ಹಾಡಬೇಕಾದ ತುಂಡು ಪದಗಳನ್ನು ಕೊಟ್ಟಿದ್ದಾರೆ. ಶಂಕರಾಭರಣ, ಆದಿ ತಾಳದಲ್ಲಿ 'ವಾರಣವದನ ತ್ರೈಲೋಕ್ಯ ಸುಮೋಹನ' ಎಂಬ ಗಣಪತಿ ಪ್ರಾರ್ಥನೆ, ಹಾಗೆಯೇ ನಾಟಿರಾಗದಲ್ಲಿ ವಿಷ್ಣು ಕೀರ್ತನೆ, ಮೋಹನದಲ್ಲಿ ವೆಂಕಟೇಶ ಕೀರ್ತನೆ, ನಾಟಿಯಲ್ಲಿ ಪರಮೇಶ್ವರ ಕೀರ್ತನೆ, ನಾಟಿಯಲ್ಲಿ ದುರ್ಗಾ ಕೀರ್ತನೆ, ನಾಟಿಯಲ್ಲಿ ಶ್ರೀರಾಮ ದೇವರ ಕೀರ್ತನೆ, ಮೋಹನದಲ್ಲಿ ಹನುಮಂತ ಕೀರ್ತನೆ ಇತ್ಯಾದಿ. ಸಾಯಂಕಾಲ ಅಬ್ಬರಬಿಡ್ತಿಗೆ (ಚಂಡೆಯನ್ನು ಉದ್ರೇಕ ಬಾರಿಸುತ್ತ ಜನರಿಗೆ ಇಲ್ಲಿ ಆಟವಿದೆ) ಎಂದು ಸೂಚನೆ ಕೊಡುವುದು) ಮುಗಿಸಿ ಚೌಕದಲ್ಲಿ ಗಣಪತಿ ಪೂಜೆ ಮಾಡುವಾಗ ಹಾಡುವ ಸೌರಾಷ್ಟ್ರ ರಾಗದ 'ಗಜಮುಖದವಗೆ ಗಣಪಗೆ' ಎಂಬ ಪ್ರಸಿದ್ಧ ಹಾಡನ್ನು ಕೊಡಲಾಗಿದೆ. ಮುಂದೆ ಸಭಾಲಕ್ಷಣ ಸಭೆಯ ಲಕ್ಷಣಗಳೇನೆಂದು ನಿರೂಪಿಸಲಾಗಿದೆ. ಸಭೆ ಸಾಮಾನ್ಯವಾದದ್ದಲ್ಲವೆಂದು ಭಾಗವತರು ಹಾಡಬೇಕು. ಇದು 'ಸತ್ವಾಚಾರಸಭಾ, ಗುಣೋಜ್ವಲಸಭಾ, ಸದ್ಧರ್ಮಕೀರ್ತಿಸಭಾ, ವೇದಾಲಂಕೃತ ಶಾಸ್ತ್ರಪೂರಿತ ಸಭಾ' ಇತ್ಯಾದಿ.

ಬಾಲಗೋಪಾಲರು ಎಂದರೆ, ಬಲರಾಮ ಕೃಷ್ಣರು ಎಂದರ್ಥ. ಮೇಳದಲ್ಲಿರುವ ಚಿಕ್ಕ ಮಕ್ಕಳಿಗೆ ಕೇದಗೆ ಮುಂದಲೆ ವೇಷ ಕಟ್ಟಿ ಯಥೇಚ್ಛವಾಗಿ ಕುಣಿಯಲು ಬಿಡುತ್ತಾರೆ. ಈ ಕುಣಿತ ಸುಮಾರು ಅರ್ಧ ತಾಸು ನಡೆಯಬಹುದು. ನಡುನಡುವೆ ಕೋಡಂಗಿಗಳ ಹಾಸ್ಯವೂ ಬರುವುದರಿಂದ ಇದರಲ್ಲಿ ಬೇಸರವೆಂಬುದಿಲ್ಲ. ಬಾಲಗೋಪಾಲರು ತೆರಳಿದ ಮೇಲೆ ಬರುವ ವೇಷವೇ ಎರಡು ಸ್ತ್ರೀ ವೇಷಗಳು. ರುಕ್ಮಿಣೀ ಸತ್ಯಭಾಮೆಯರ ಪ್ರತಿರೂಪವಾಗಿ ಬರುವ ಈ ವೇಷಗಳ ನೃತ್ಯದಲ್ಲಿ ಯಕ್ಷಗಾನದ ಲಾಸ್ಯದ ಪರಾಕಾಷ್ಠೆಯನ್ನು ತೋರಿಸಬಹುದಾಗಿದೆ. ಈ ಎರಡರ ಮಧ್ಯೆ 'ಕೌತುಕ'ವೆಂಬ ಒಂದು ವಿಶೇಷ ನೃತ್ಯಭಾಗವೂ ಹಿಂದೆ ಇದ್ದಿತು. ಸ್ತ್ರೀ ವೇಷಕ್ಕೆ ಸಭಾಲಕ್ಷಣ ಗ್ರಂಥದಲ್ಲಿ ಮಧ್ಯಮಾವತಿ, ನೀಲಾಂಬರಿ, ಶೃಂಗಾರಿ, ಸೌರಾಷ್ಟ್ರ, ವಸಂತ, ತೋಡಿ, ಕಲ್ಯಾಣಿ, ಭೈರವಿ, ನಾಟಿ ಕಾಂಬೋಧಿ, ಸುರಟಿ ಮುಂತಾದ ಹಲವಾರು ರಾಗಗಳಲ್ಲಿ ಹಾಡುಗಳನ್ನು ರಚಿಸಿಕೊಟ್ಟಿದ್ದನ್ನು ಸಭಾಲಕ್ಷಣದಲ್ಲಿ ಕಾಣುತ್ತೇವೆ.

ಸ್ತ್ರೀವೇಷದ ಕುಣಿತ ಮುಗಿದ ತಕ್ಷಣ ಬರುವುದೇ ಒಡ್ಡೋಲಗ. ಸಂಪ್ರದಾಯ ಬಯಲಾಟದಲ್ಲಿ ಸುಂದರವಾದ ರಂಗಲೇಖನ 'ಕೊರಿಯೊಗ್ರಫಿ' ಎಂದರೆ ಇದು. ಪ್ರಸಂಗದ ಮುಖ್ಯ ಪಾತ್ರಗಳು ೩ರಿಂದ ೫ ಮಂದಿ ತೆರೆಯ ಹಿಂದೆ ನಿಂತು ಮೊದಲು ಹಿಮ್ಮುಖವಾಗಿ ಆಮೇಲೆ ಸಭಿಕರೆಡೆಗೆ ಮುಖ ತೋರಿಸಿಕೊಂಡು ವಿಧ ವಿಧ ಭಂಗಿಯಲ್ಲಿ ನಿಲ್ಲುತ್ತಾ, ಪದಗತಿಗಳನ್ನು ಪ್ರದರ್ಶಿಸುತ್ತಾ ರಂಗಸ್ಥಳವನ್ನೆಲ್ಲಾ ತುಂಬಿ, ಪ್ರೇಕ್ಷಕರ ಕಣ್ತುಂಬಿ, ಎದೆ ತುಂಬಿ ಬಿಡುತ್ತಾರೆ. ಇದಕ್ಕೇ ಸುಮಾರು ೪೫ ಮಿನಿಟುಗಳು ಹಿಡಿಯಬಹುದು.

ಮುಂದಕ್ಕೆ ಕಥೆ ಪ್ರಾರಂಭವಾಗುತ್ತದೆ. ಭಾಗವತರ ಹಾಡು, ಹಾಡಿನ ಕಾಲದಲ್ಲಿ ನೃತ್ಯ, ತದನಂತರ ಸಂವಾದ: ಮತ್ತೆ ಹಾಡು. ಹಿಮ್ಮೇಳದಲ್ಲಿ ಮದ್ದಳೆ ಮತ್ತು ವೀರರಸ ಪೋಷಕವಾದ ಚಂಡೆ ಸೃಷ್ಟಿ ಮಾಡುವ ನಾದಪ್ರಪಂಚ. ಸಂಗೀತ, ನೃತ್ಯ ಮತ್ತು ಸಂವಾದದ ಆವರ್ತದಲ್ಲಿ ಉಂಟಾ

ಗುವ ರಸಸೃಷ್ಟಿ ಯಕ್ಷಗಾನಕ್ಕೆ ಒಂದು ಭದ್ರವಾದ ಚೌಕಟ್ಟನ್ನು ಒದಗಿಸಿಕೊಟ್ಟಿರುವುದು ಆಶ್ಚರ್ಯ.

**ಪ್ರಸಂಗಗಳ ರಚನೆ**

ಆಧುನಿಕ ಪರಿಭಾಷೆಯಲ್ಲಿ ಹೇಳಬೇಕೆಂದರೆ ಯಕ್ಷಗಾನ ಒಂದು ಅಪೆರಾ; ವಿಶಿಷ್ಟ ತೆರನಾದ್ದು, ಸಂವಾದವನ್ನೂ ಒಳಗೊಂಡಿರುವಂಥಾದ್ದು. ಒಂದು ಪ್ರದರ್ಶನಕ್ಕೆ ಬೇಕನಿತು ಕಥಾಭಾಗವನ್ನು ಆಯ್ದು ಪೋಣಿಸಿ ಗೀತರಚನೆಮಾಡುವ ಪ್ರಸಂಗಕರ್ತರು ಇಲ್ಲಿನ ನಾಟಕಕಾರರು. ಈ ಪ್ರಸಂಗಗಳಾದರೋ ಮೂಲದಲ್ಲಿ ಭಾರತ, ರಾಮಾಯಣ, ಭಾಗವತದಂಥ ಮೂರು ಮಹಾಗ್ರಂಥಗಳ ಆಧಾರದಿಂದ ರಚಿತವಾದುವು. ಕುಮಾರ ವ್ಯಾಸ ಭಾರತ, ತೊರವೆ ಹಾಗೂ ಬತ್ತಲೇಶ್ವರ ವಿರಚಿತ ಕೌಶಿಕ ರಾಮಾಯಣ, ಕನ್ನಡ ಭಾಗವತಗಳೇ ಮೂಲಪ್ರಸಂಗಕರ್ತರ ಆಕರ ಗ್ರಂಥಗಳು.

ಡಾ. ಶಿವರಾಮ ಕಾರಂತರು ಹಳೆಯ ಯಕ್ಷಗಾನ ಪ್ರಸಂಗಗಳನ್ನು ಈ ಮೂರು ಆಕರ ಗ್ರಂಥಗಳ ಆಧಾರದಿಂದ ದಿಂದ ಮೂರು ಭಾಗಗಳಾಗಿ ವಿಂಗಡಿಸಿದ್ದಾರೆ.

೧. ಭಾರತದೊಳಗಣ ಯಕ್ಷಗಾನ ಪ್ರಸಂಗಗಳು,
೨. ರಾಮಾಯಣದ ಯಕ್ಷಗಾನ ಪ್ರಸಂಗಗಳು,
೩. ಭಾಗವತದ ಯಕ್ಷಗಾನ ಪ್ರಸಂಗಗಳು.

ಯಕ್ಷಗಾನ ಪ್ರಸಂಗಗಳು ಗೀತಮಾಧ್ಯಮದಲ್ಲಿರುವುದರಿಂದ ರಸ ಸಂವೇದನೆಗೆ ಎಷ್ಟು ಉಪಕಾರವಾಗಿದೆ ಎಂಬುದನ್ನು ಡಾ. ಕಾರಂತರು ಗುರುತಿಸಿ 'ಮಾತು ಅಥವಾ ಭಾಷೆ ಎಷ್ಟೇ ಚೆನ್ನಾಗಿ ಭಾವಬಿಂಬವನ್ನು ಕೊಡಲು ಹೋದರೂ ಅವೇ ಭಾವರಸಗಳಿಗೆ ತೀಕ್ಷ್ಣತೆ ಮತ್ತು ಆಳಗಳನ್ನೊದಗಿಸುವುದರಲ್ಲಿ ಸಂಗೀತಕ್ಕಿರುವ ಶಕ್ತಿ ಇಲ್ಲಿನ ಸಾಧನಗಳಿಗೆ ಬರಲಾರದು. ದುಃಖದ ತೀಕ್ಷ್ಣತೆಯನ್ನು ನಾದದ ಕೆಲವು ಇರಿತಗಳಿಂದ ಗೀತವು ಚುಚ್ಚಿ ತೋರಿಸಬಲ್ಲುದು. ಇತರ ರಸಗಳ ಪ್ರತಿಪಾದನೆಗೂ ಗೀತ ತುಂಬಾ ಸಹಾಯಕವಾಗಿದೆ. ನಮ್ಮ ಪೂರ್ಗಪದ್ಧತಿಯ ಸಂಗೀತ ಶೈಲಿಗಳು ಮಾಡಿದ ಕೆಲಸಕ್ಕಿಂತಲೂ ಹೆಚ್ಚಾಗಿ ಆವೇಶ, ರೌದ್ರ, ಕೋಪಾಟೋಪ, ವಿಸ್ಮಯ ಮೊದಲಾದ ಭಾವರಸಗಳನ್ನು ಚಿತ್ರಿಸುವಲ್ಲಿ ಯಕ್ಷಗಾನ ವಿಶೇಷ ಕೆಲಸವನ್ನು ಸಾಧಿಸಿದೆ. ಅದರಲ್ಲಿ ಮಾತಿಗೂ, ಗೀತಕ್ಕೂ ಇರುವ ಮೇಳವು ಇನ್ನಷ್ಟು ನಿಕಟವಾದದ್ದು' ಎಂದು ಬರೆದಿದ್ದಾರೆ.

ಪ್ರಸಂಗ ರಚಯಿತರು ಜಾನಪದ ಕವಿಗಳು. ಅವರ ಪಾಂಡಿತ್ಯ ವಿಶೇಷವಾದ್ದೇನೂ ಅಲ್ಲ ಎಂಬುದೇ ಯಕ್ಷಗಾನ ರಚನೆಗಳ ಸೊಗಸಿಗೆ ಕಾರಣವೆಂದು ಹೇಳಬಹುದು. ಪಾಂಡಿತ್ಯವನ್ನು ಮರೆಯಿಸುವ ಮುದ್ದಣ ಕವಿಯ 'ಕುಮಾರ ವಿಜಯ' ಹಾಗೂ "ರತ್ನಾವತೀ ಕಲ್ಯಾಣ" ಮೇಳಗಳಲ್ಲಿ ಜನಪ್ರಿಯತೆ ಗಳಿಸಲಿಲ್ಲ. ಗೀತರಚನೆಗೆ ಬೇಕಾಗುವಷ್ಟು ಸ್ವರಜ್ಞಾನ, ತಾಳಜ್ಞಾನ, ಪ್ರತಿಯೊಬ್ಬ ರಚಕನಿಗೂ ಇದ್ದಿರಲೇಬೇಕು, ಎಲ್ಲಕ್ಕೂ ಮಿಗಿಲಾಗಿ ನಾಟಕದ ಕಲ್ಪನೆ ಆತನ ಮನಸ್ಸಿನಲ್ಲಿ ಮೂಡಿರಬೇಕು. ವಾಲ್ಮೀಕಿ ರಾಮಾಯಣವನ್ನೇ ತೆಗೆದುಕೊಳ್ಳಿ. ರಾಮಾಯಣದ ಶ್ಲೋಕಗಳನ್ನು ಆರಿಸಿ "ಪಂಚವಟಿಯನ್ನು ಭರತನಾಟ್ಯದ ಶಾಲೆಯಲ್ಲಿ ನೃತ್ಯ ರೂಪಕವಾಗಿ ಹೆಣೆದಿದ್ದಾರೆ. ಅದಕ್ಕಿಂತ ಯಕ್ಷಗಾನ ಜಾನಪದ ಕವಿಯ ಪಂಚವಟಿ ಶ್ರೇಷ್ಠ ತರವಾದ ನಾಟಕವಾಗಲು ಕವಿ ನಾಟಕಕ್ಕೆಂದೇ ತನ್ನ ಹಾಡುಗಳನ್ನು ಬರೆದದ್ದು ಕಾರಣ. ನೇರ ಮಾತು, ಸರಳ ಮಾತು, ನಿತ್ಯದ ಆಡುಮಾತೇ ಪ್ರಸಂಗಗಳ ಶಕ್ತಿಯನ್ನು ಬಿಂಬಿಸುತ್ತವೆ.

ಹಳೆಯ ಪ್ರಸಂಗಗಳ ಚೆಲುವನ್ನು ವಿಮರ್ಶಕರು ಕೊಂಡಾಡುತ್ತಾರೆ. ಹಳೆಯದರ ಜಾಡಿನಲ್ಲೇ ಹೊಸತು ಬರುತ್ತಾ ಇವೆ. ಬಹುಶಃ ೧೬-೧೭-೧೮ನೆಯ ಶತಮಾನದ ಕವಿಗಳು ವಿರಚಿಸಿದ ಪ್ರಸಂಗಗಳ ಗೇಯತೆ ಮುಂದಿನವಕ್ಕೆ ಬರಲಾರದೋ ಏನೋ. ಆದರೂ ಇಂದಿಗೂ ಯಕ್ಷಗಾನ ಕವಿಗಳು ತಮ್ಮ ರಚನೆಗಳನ್ನು ಮಾಡುತ್ತಿದ್ದಾರೆ. ಜಾನಪದ ಕಥೆಗಳನ್ನೂ, ತುಳುವ ಸಂಸ್ಕೃತಿಯ ಭೂತಗಳ ಕಥೆಗಳನ್ನೂ ಪ್ರಸಂಗಗಳಾಗಿ ಪರಿವರ್ತಿಸಿ ಮೇಳದಲ್ಲಿ ಪರೀಕ್ಷೆಗೆ ಒಡ್ಡುತ್ತಾರೆ. ಯಶಸ್ವಿಯಾಗಿ ನೂರಾರು ಪ್ರದರ್ಶನಗಳಲ್ಲಿ ಮೆರೆದಾಡುವಂಥ ಪ್ರಸಂಗಗಳೂ ಇವೆ. ಆದರೆ ಇವುಗಳ ಅಂತಿಮ ಮೌಲ್ಯ ನಿರ್ಣಯಕ್ಕೆ ಇನ್ನೂ ಕಾಲ ಬಂದಿಲ್ಲ. ಒಂದೆರಡು ವರ್ಷಗಳಲ್ಲೇ ಹಳೆಯವೆನಿಸಿ ತಿರೋಹಿತವಾಗುವ ಪ್ರಸಂಗಗಳೂ ಇಲ್ಲಿ ಸೇರಿಕೊಂಡಿರುತ್ತವೆ.

**ತಿಟ್ಟುಗಳ ಪ್ರಭೇದ**

ಕರಾವಳಿ ಕರ್ನಾಟಕದಲ್ಲಿ ಮುಖ್ಯವಾಗಿ ಎರಡು ತಿಟ್ಟುಗಳು. ದಕ್ಷಿಣ ಕನ್ನಡ ಜಿಲ್ಲೆಯ ಮೂಲ್ಕಿ ಹೊಳೆಯ ತೆಂಕಣದಲ್ಲಿರುವ ಪ್ರದೇಶ ಹಾಗೂ ಕಾಸರಗೋಡು ತಾಲೂಕು ಇವಿಷ್ಟು ತೆಂಕುತಿಟ್ಟಿನ ಮೇಳಗಳನ್ನು ಹೊರಡಿಸಿ ಪ್ರೋತ್ಸಾಹಿಸುವ ಭೂಭಾಗವೆನಿಸಿದರೆ ಮೂಲ್ಕಿಯಿಂದ ಕಾಳಿ ನದಿಯವರೆಗೆ ಇರುವ ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆ ಬಡಗು ತಿಟ್ಟಿನ ಯಕ್ಷಗಾನದಲ್ಲಿ ಸಂಲಗ್ನವಾಗಿದೆ. ಇದಲ್ಲದೆ ಹೊನ್ನಾವರವೇ ಕೇಂದ್ರವಾಗಿ ಇನ್ನೂ ಒಂದು ತಿಟ್ಟನ್ನು (ಬಡಬಡಗು) ನಿರ್ದೇಶಿಸಲು ತವಕ ಪಡುವವರಿದ್ದಾರೆ. ಮೀಸೆ ಕಟ್ಟುವುದರಲ್ಲಿ, ಕುಣಿತದಲ್ಲೇನೋ ತುಸು ವ್ಯತ್ಯಾಸವಿದ್ದ ಮಾತ್ರಕ್ಕೆ ತಿಟ್ಟು ಬದಲಾಗದೆಂದು ನನಗೆ ತೋರುತ್ತದೆ.

ಕುಂಬಳೆ ಸೀಮೆಯ ಇಚ್ಲಂಪಾಡಿ ಮತ್ತು ಕೂಡ್ಲು ಮೇಳ, ಮಂಗಳೂರಿನ ಕದ್ರಿ, ಪಾವಂಜೆ, ಮುಚ್ಚೂರು, ವೇಣೂರು, ಕಾರ್ಕಳ, ಮೂಲ್ಕಿ, ಕಟೀಲು, ಧರ್ಮಸ್ಥಳ, ಕುಂಜಾಲು, ಕೊರಕೋಡು, ಆಡೂರು ಇವೆಲ್ಲವೂ ತೆಂಕುತಿಟ್ಟಿನ ಮೇಳಗಳನ್ನು ಹಿಂದೆ ಹೊರಡಿಸಿದ ಸ್ಥಳಗಳು. ಇವುಗಳಲ್ಲಿ ಉಳಿದುಕೊಂಡದ್ದು ಧರ್ಮಸ್ಥಳ, ಕಟೀಲು, ಕರ್ನಾಟಕ ಸಭಾ (ಮಂಗಳೂರು), ಕುಂಡಾವು, ಸುರತ್ಕಲ್, ಸುಂಕದಕಟ್ಟೆ, ಸುಬ್ರಹ್ಮಣ್ಯ. ಬಡಗು ತಿಟ್ಟಿನಲ್ಲಿ ಹಿಂದೆ ಸೌಕೂರು, ಪೆರ್ಡೂರು, ಮಂದರ್ತಿ, ಅಮೃತೇಶ್ವರಿ, ಸಾಲಿಗ್ರಾಮ, ಮಾರಣಕಟ್ಟೆ, ಹಿರಿಯಡ್ಕಗಳು ಮೇಳಗಳನ್ನು ಕಟ್ಟಿದ್ದರು. ಈಗ ಅವುಗಳ ಜತೆ ಕಮಲಶಿಲೆಯನ್ನೂ ಸೇರಿಸಬೇಕು. ಉತ್ತರ ಕನ್ನಡ ಜಿಲ್ಲೆಯಲ್ಲಿ ಹಿಂದೆ ಪ್ರಸಿದ್ಧವಾಗಿದ್ದ ಕರ್ಕಿ ಹಾಸ್ಯಗಾರರ ಮೇಳ ಈಗ ವ್ಯವಸಾಯ ಮೇಳವಾಗಿ ಉಳಿದಿಲ್ಲ. ಪರಂಪರೆಯನ್ನು ಬಳುವಳಿಯಾಗಿ ಪಡೆದ ಕರ್ಕಿ ಕುಟುಂಬದವರು ಮಾತ್ರ ಯಕ್ಷಗಾನದಲ್ಲಿ ಇನ್ನೂ ಇದ್ದಾರೆ ನಿಜ. ಆದರೆ ಮೇಳವಿಲ್ಲ. ಬದಲು ಅಲ್ಲಿನ ಕೆರೆಮನೆ ಕುಟುಂಬದವರು ಮೇಳ ಕಟ್ಟಿ ಡೇರೆ ಆಟವನ್ನಾಡುತ್ತಿದ್ದಾರೆ.

ತೆಂಕಿರಲಿ ಬಡಗಿರಲಿ ಮೇಳಗಳ ಸಂಘಟನೆ ಒಂದೇ ತೆರನಾಗಿದೆ. ದೇವಸ್ಥಾನದ ಹೆಸರಲ್ಲಿ ಮೇಳವನ್ನು ಕಟ್ಟಿ, ದೇವಸ್ಥಾನವೇ ಮೇಳದ ಒಂದು ಋತುವಿನ ತಿರುಗಾಟವನ್ನು ಏಲಂ ಹಾಕಿ, ಹೊರಡಿಸುವ ಹರಕೆ ಮೇಳಗಳದ್ದೊಂದು ರೀತಿ. ತಿರುಗಾಟದ ಅವಧಿ ದೀಪಾವಳಿಯಿಂದ ಮುಂದಿನ ಮಳೆ ಬೀಳುವವರೆಗಿನ ಆರು ತಿಂಗಳು. ಪ್ರತಿನಿತ್ಯವೂ ಆಟ ಆಡಬೇಕು. ಒಟ್ಟು

ಆಟಗಳ ಹಕ್ಕನ್ನು ಏಲಂನಲ್ಲಿ ಪಡೆದ ಮೇಲೆ ಪ್ರತಿ ಆಟಕ್ಕೂ "ವೀಳೆಯ" (ದರ) ನಿಗದಿ ಮಾಡಿ ಆಯಾ ಊರಿಗೆ ಹೋಗಿ "ಆಟ" ಕೊಡುವುದು ಮೇಳದ ಕರ್ತವ್ಯವೆನಿಸುತ್ತದೆ. ಏಲಂ ಹಣ ಹೆಚ್ಚಿದಂತೆ ಹರಕೆಯ ಆಟದ ದರವೂ ಏರುತ್ತದೆ. ಈಗ ೨,೦೦೦.೦೦ ರೂಪಾಯಿಗಳವರೆಗೂ ಮುಟ್ಟಿದೆ. (೧೯೩೦ಕ್ಕೆ ಹಿಂದೆ ಬರೇ ಹತ್ತಿಪ್ಪತ್ತು ರೂಪಾಯಿಗೆ ಈ ಆಟ ಸಿಗುತ್ತಿತ್ತು.

ದೇವಸ್ಥಾನದ ಹೆಸರು ಹೇಳಿಕೊಂಡದ್ದಕ್ಕೆ ಮೊದಲ ಸೇವೆ ಆಟವನ್ನೂ ಕೊನೆಯ ಮುಗಿತಾಯದ ಸೇವೆಯನ್ನೂ ಅಲ್ಲಿಯೇ ಆಡಬೇಕೆಂಬುದು ನಿಯಮ. ಬಡಗು–ತೆಂಕು ಎರಡರಲ್ಲೂ, ಹರಕೆಯ ಆಟಗಳನ್ನು ಮುಂಚಿತವಾಗಿ ದೇವಸ್ಥಾನದಲ್ಲಿ ದಾಖಲೆ ಮಾಡಿ ಮುಂಗಡ ಕೊಡಬೇಕು. ಈಗಲೂ ಹಾಗೆಯೇ.

ಹರಕೆಯಲ್ಲದೆ ಬೇರೆ ಕಲಾ ಪ್ರದರ್ಶನವೆಂಬ ನಿಟ್ಟಿನಲ್ಲಿ ಬಯಲಾಟ ಕೊಡುವ ಸಂಸ್ಥೆಗಳು ಇತ್ತೀಚಿನ ೨೦–೩೦ ವರ್ಷಗಳಲ್ಲಿ ಹುಟ್ಟಿಕೊಂಡಿವೆ. ಇವುಗಳಿಗೂ ಒಂದೊಂದು ಊರಿನ ಗ್ರಾಮಾಧಿ ದೇವತೆ ಇರುತ್ತದೆ. ಉದಾ: ಇಡಗುಂಜಿಯ ಮೇಳಕ್ಕೆ ಇಡಗುಂಜಿಯ ಮಹಾಗಣಪತಿ, ಕದಿರೆ ಮೇಳಕ್ಕೆ ಕದಿರೆಯ ಮಂಜುನಾಥ, ಧರ್ಮಸ್ಥಳ ಮೇಳಕ್ಕೆ ಅಲ್ಲಿನ ಮಂಜುನಾಥ. ಇಂಥ ಮೇಳಗಳ ವ್ಯವಹಾರ ಒಂದು ವ್ಯಾಪಾರಿ ಸಂಸ್ಥೆಯಂತೆ ಸುಸಂಘಟಿತವಾಗಿ ನಡೆಯುತ್ತ ಇರುವುದರಿಂದ ಇವನ್ನು ವ್ಯಾಪಾರೀ ಮೇಳ ಎಂತಲೂ, ಇವು ಡೇರೆಯೊಳಗೆ ಆಟವಾಡುವದರಿಂದ "ಡೇರೆಮೇಳ" ಎಂತಲೂ ಕರೆಯಬಹುದು. ಹರಕೆ ಮೇಳದ ಆಟಗಳು ಪ್ರಾಚೀನ ಪರಂಪರೆಯಂತೆ ಧರ್ಮಾರ್ಥ ಪ್ರದರ್ಶನವಾಗಿ ಇನ್ನೂ ಉಳಿದಿವೆ, ಡೇರೆ ಮೇಳಗಳ ಆಟಕ್ಕೆ ತಿಕೀಟಿಗೆ – ಸಾಮಾನ್ಯವಾಗಿ ೧ ರೂಪಾಯಿಯಿಂದ ೫ ರೂಪಾಯಿ (೫ ರೂಪಾಯಿಗೆ ಆರಾಮಕುರ್ಚಿ). ಇದುವೇ ಸಹಾಯಾರ್ಥ ಪ್ರದರ್ಶನವಾದಲ್ಲಿ ೫ ರೂಪಾಯಿಯಿಂದ ೨೫ ರವರೆಗೂ ಟಿಕೇಟು ಇಡಬಹುದು. ಡೇರೆ ಮೇಳಗಳ ಕಲಾವಿದರಿಗೆ ಹೆಚ್ಚು ಸಂಬಳ ಕೊಡುವ ಸಾಧ್ಯತೆ ಇರುವುದರಿಂದ ದೊಡ್ಡ ಕಲಾವಿದರನ್ನು ಕಾಣಬೇಕಾದರೆ ಅಲ್ಲಿಗೇ ಹೋಗಬೇಕು.

ವೇಷಗಾರಿಕೆಯ ದೃಷ್ಟಿಯಿಂದ ತೆಂಕು – ಬಡಗುಗಳ ನಡುವೆ ಒಂದು ದೊಡ್ಡ ವ್ಯತ್ಯಾಸವಿದೆ. ಬಹುಶಃ ಬಡಗು ತನ್ನ ಹಳೆಯ ಮುಂಡಾಸು ಮತ್ತು ಕಸೆಗಳನ್ನು ಬಿಡದೆ ಬಲವಾಗಿ ಹಿಡಿದದ್ದರಿಂದಲೂ ಭಾಗವತಿಕೆಯಲ್ಲಿ ಹಳೇ ಸಂಪ್ರದಾಯವನ್ನು ಇನ್ನೂ ಅನುಸರಿಸುತ್ತಿರುವುದರಿಂದಲೂ ಹೆಚ್ಚು ಪಾರಂಪರಿಕ ಗುಣಗಳನ್ನು ಉಳಿಸಿಕೊಂಡಂತೆ ತೋರುತ್ತದೆ. ಅಲ್ಲದೆ ಮುಖ್ಯವಾಗಿ ಕುಣಿತದಲ್ಲಿ ಪರಂಪರೆಯ ಕೊಡುಗೆಯನ್ನು ಅಲ್ಲಗಳೆಯದೆ ಸಾಕಷ್ಟನ್ನು ಇನ್ನೂ ಪೋಷಿಸಿ ಬೆಳೆಸಿಕೊಳ್ಳುತ್ತಿದೆ. ತೆಂಕಿನಲ್ಲೂ ಬಡಗಿನಲ್ಲಿರುವಂಥಾ ಮರದಿಂದ ಮಾಡಿದ ವೇಷಭೂಷಣಗಳು ಒಂದಾನೊಂದು ಕಾಲದಲ್ಲಿ ಅಂದರೆ ಈಗ ೬೦–೭೦ ವರ್ಷಕ್ಕೆ ಮುನ್ನ ಇದ್ದದಕ್ಕೆ ದಾಖಲೆಗಳಿವೆ. ಆದರೆ ಆಮೇಲೆ ಸೌಕರ್ಯಕ್ಕೋಸ್ಕರ ಭಾರವಾದ ಈ ಸಲಕರಣೆಗಳನ್ನು ತ್ಯಜಿಸಿ ಟೊಪ್ಪಿಯಂತೆ ಸುಲಭದಲ್ಲಿ ಧರಿಸಲಾಗುವಂಥ ಪಗಡಿಗಳನ್ನೇ ಬಳಕೆಗೆ ತರಲಾಯಿತು. ಅದರಂತೆ ನೃತ್ಯವನ್ನು ಸುಲಭೀಕರಿಸಿದ್ದಾಯಿತು. ಈ ಕೊರತೆಗಳನ್ನು ಅತಿಶಯವಾದ ಮಾತುಗಾರಿಕೆಯಿಂದ ತುಂಬಿಸಿಕೊಳ್ಳಲಾಯಿತು. ರುದ್ರ ಸುಂದರವಾದ ರಾಕ್ಷಸ ವೇಷವನ್ನು ಮಾತ್ರ ಇಂದಿನವರೆಗೂ ತ್ಯಜಿಸದೆ ಇರುವುದರಿಂದ ಹಳೆಯ ಒಂದು ಒಳ್ಳೆಯ ವೇಷವಾದರೂ ನೋಡಲು ಸಿಗುವಂತಾಗಿದೆ. ಬಡಗಿನ ರಕ್ಕಸನ ಮುಖವರ್ಣಿಕೆಯಲ್ಲಿ, ಏಕತಾನತೆ ಇದ್ದರೆ, ತೆಂಕಿನದರಲ್ಲಿ, ಹೆಚ್ಚು ವೈವಿಧ್ಯ ತರಿಸಲು ಸಾಧ್ಯವುಂಟು. ತೆಂಕುತಿಟ್ಟಿನ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆಯುತ್ತಿವೆ. ಇತ್ತೀಚೆಗೆ ಅದರ ವೇಷಗಳ ಬಗ್ಗೆ, ಉಳ್ಳಾಲದಲ್ಲಿ ೫ ದಿನಗಳ ಗೋಷ್ಠಿ ನಡೆಯಿತು. ಹತ್ತು ಹನ್ನೆರಡು ವರ್ಷ ಹಿಂದೆ ತೆಂಕಿನ ಸಂಗೀತದ ಬಗ್ಗೆಯೂ ಮಂಚಿಯಲ್ಲಿ ಗೋಷ್ಠಿ ನಡೆದಿತ್ತು. ಹೆಚ್ಚು ಹೆಚ್ಚು ಆಳವಾಗಿ ವಿಚಾರ ಮಾಡಿ ಕುಣಿತ, ವೇಷಭೂಷಣ, ಸಂಗೀತ–ಈ ಮೂರನ್ನೂ ತೆಂಕಿನಲ್ಲೂ ಸ್ಥಿರೀಕರಿಸಲು ಸಾಧ್ಯವುಂಟು. ಇದು ಅತ್ಯಾವಶ್ಯಕವಾದ ಕರ್ತವ್ಯವೂ ಹೌದು. ಯಜಮಾನರ ಇಚ್ಛಾನುಸಾರ ಕೆಲವೊಮ್ಮೆ ಕಲಾವಿದನ ಸ್ವಂತ ಇಚ್ಛಾನುಸಾರ ನಡೆಯುವುದೇ ಒಂದು ತಿಟ್ಟಿನ ವಿಶೇಷತೆ ಎಂದಾಗಿಬಿಟ್ಟರೆ ಪರಂಪರೆಯ ಲಕ್ಷಣಗಳು ಯಾವುದೂ ಮುಂದೆ ಉಳಿಯಲಾರವು ಎಂಬ ಭೀತಿ ಎಲ್ಲವರ ಮನಸ್ಸಿನಲ್ಲಿ ಮೂಡಬೇಕು. ಬಡಗು ತೆಂಕು ಎರಡರಲ್ಲೂ ಕಲಾತ್ಮಕ ಅಂಶಗಳು ಪ್ರತ್ಯೇಕ ಪ್ರತ್ಯೇಕವಾಗಿ ಇರುವುದರಿಂದ ಇವನ್ನು ಆಯಾ ತಿಟ್ಟಿನ ಮರ್ಮವೆಂಬ ನಿಟ್ಟಿನಲ್ಲಿ ಜತನದಿಂದ ಕಾಪಾಡಬೇಕೇ ವಿನಾ ಇಂದು ನಾವು ಕಾಣುವಂಥಾ ತಿಟ್ಟು ಸಂಕರಗಳಿಂದ ಪರಿಸ್ಥಿತಿ ತೀರ ಗೋಜಲಾಗಿ ಬಿಟ್ಟೀತು. ಯಕ್ಷಗಾನ ಜಾನಪದವಾದ್ದರಿಂದ ಅದು (ಕೆಟ್ಟ) ಬದಲಾವಣೆಗಳಿಗೆ ಇಂಬು ಕೊಡಬೇಕೆಂದು ವಾದಿಸುವುದು ಯಾವ ತಿಟ್ಟಿಗೂ ಕ್ಷೇಮಕರವಾದುದಲ್ಲ. ಕೌರವರು ಬಡಗುತಿಟ್ಟಿನ ವೇಷದಲ್ಲೂ, ಪಾಂಡವರು ತೆಂಕುತಿಟ್ಟಿನ ವೇಷದಲ್ಲೂ ಕಾಣಿಸಿಕೊಳ್ಳುವುದು, ಬಡಗು ಮತ್ತು ತೆಂಕಿನ ಭಾಗವತರು ಒಂದೇ ವೇದಿಕೆಯಲ್ಲಿ ಅವರವರ ಹಾಡುಗಾರಿಕೆ ಮಾಡುವುದು, ಈ ಕಲೆಯನ್ನು ನೋಡುವ ದೃಷ್ಟಿ ಆಧುನಿಕ ಕಾಲದಲ್ಲಿ ಎಷ್ಟು ವಿಕೃತವಾಗಿ ಹೋಗಿದೆ ಎಂಬುದನ್ನು ಎತ್ತಿ ತೋರಿಸುತ್ತದೆ.

ತೆಂಕು–ಬಡಗು, ಹರಕೆ–ಡೇರೆ ಎಂಬ ಪರಿಭೇದವಿಲ್ಲದೆ ಎಲ್ಲ ಮೇಳಗಳಿಗೂ ಇತ್ತೀಚೆಗಿನ ಐದಾರು ವರ್ಷಗಳಲ್ಲಿ ಕರಾವಳಿ ಪ್ರದೇಶದಲ್ಲಿ ಅತಿಶಯವಾದ ಪ್ರೋತ್ಸಾಹ ಚೆಲ್ಲುವರಿಯುತ್ತದೆ. ಹೆಚ್ಚು ಹೆಚ್ಚು ಮಂದಿ ವಿದ್ಯಾವಂತರೂ, ಹಾಗೆಯೇ ಅವಿದ್ಯಾವಂತರೂ ಯಕ್ಷಗಾನಕ್ಕೆ ಮುಗಿಬೀಳುತ್ತಿದ್ದಾರೆ. ಆರು ತಿಂಗಳ ಕಾಲ ಇಲ್ಲಿ ಬಯಲಾಟಗಳ ಸುಗ್ಗಿ. ರಾತ್ರಿ ಕಾಲದಲ್ಲಿ ಈ ಪರಿಯಾಗಿ ಹತ್ತು ಹನ್ನೆರಡು ಮೇಳಗಳು ಏಕಕಾಲಕ್ಕೆ ಬರೇ ಎರಡು ಜಿಲ್ಲೆಗಳಲ್ಲಿ ಪ್ರದರ್ಶನ ನೀಡುವಂಥ ಜಾನಪದ ಕಲಾ ಸನ್ನಿವೇಶ ಕರ್ನಾಟಕ ರಾಜ್ಯದಲ್ಲಿ ಬೇರೆ ಕಡೆ ಇಲ್ಲದಿರುವುದಕ್ಕೆ ಇಲ್ಲಿ ಯಾವುದೇ ರೀತಿಯಲ್ಲಾದರೂ ಯಕ್ಷಗಾನ ಸಂಘಟಿತವಾಗಿ ಮುಂದುವರಿಯುತ್ತಿರುವುದು ಕಾರಣ. ವಿದ್ವಾಂಸರು ಪರಸ್ಪರ ವಿಮರ್ಶಾ ಬಾಣಗಳನ್ನು ಎಸೆಯುತ್ತಿದ್ದರಾದರೂ ಕೂಡ ಜನಸಾಮಾನ್ಯರ ದೃಷ್ಟಿಯಲ್ಲಿ ಇಂದಿನ ಮೇಳಗಳು ಒಂಭತ್ತು ತಾಸಿನ ಮೃಷ್ಟಾನ್ನ ಭೋಜನ ಉಣಬಡಿಸುತ್ತಿದ್ದಾರೆಂಬ ಖಚಿತ ಅಭಿಪ್ರಾಯವಿದೆ.

**ಪರಂಪರೆಯ ತರಬೇತಿ ಕ್ರಮ**

ಹಿರಿಯ ಭಾಗವತ ಶ್ರೀನಿವಾಸ ನಾಯಕರು ೧೯೭೭ರಲ್ಲಿ ಪ್ರಕಟಿಸಿದ "ಆತ್ಮ ಚರಿತ್ರೆ"ಯಲ್ಲಿ ತಮ್ಮ ವೃತ್ತಿ ಜೀವನದ ೬೬ ವರ್ಷಗಳ ಅವಧಿಯಲ್ಲಿ ಹೇಗೆ ಹಾಡುಗಾರಿಕೆಯ ಕಲೆಯನ್ನು ಪಳಗಿಸಿಕೊಂಡವೆಂದು ವಿವರಿಸುತ್ತಾರೆ. ಹದಿನಾರರ ಹರೆಯದಲ್ಲಿ ಮೇಳ ಸೇರಿದ ಅವರು ಎಲ್ಲ ಏಳು ವ್ಯವಸಾಯೀ ಮೇಳಗಳಲ್ಲಿ ಸಾಲಿಗ್ರಾಮ, ಸೌಕೂರು, ಮಾರಣಕಟ್ಟೆ, ಮಂದರ್ತಿ, ಆನಗುಡ್ಡೆ, ಪೆರ್ಡೂರು, ಅಮೃತೇಶ್ವರಿ–ದುಡಿದಿದ್ದಾರೆ. ೧೯೫೭–೫೮ರಲ್ಲಿ ಅವರು ಡಾ. ಶಿವರಾಮ ಕಾರಂತರೊಡನೆಯೂ ಯಕ್ಷಗಾನ ಸಂಶೋಧನೆಯಲ್ಲಿ ಸಹಭಾಗಿಯಾಗಿದ್ದರು.

ಶ್ರೀನಿವಾಸ ನಾಯಕರು ಭಾಗವತಿಕೆಗೆ ಸೇರಿದ್ದು ಆಕಸ್ಮಿಕವಾಗಿ. ಒಂದು ಸಂಜೆ ಭಾಗವತರೊಬ್ಬರು ಸಭಾಲಕ್ಷಣದಲ್ಲಿ

ಹಾಡುತ್ತಿದ್ದಾಗ ನಾಯಕರು ಕಿವಿಗೊಟ್ಟು ಕೇಳುತ್ತಿದ್ದರಂತೆ. ಅವರ ಆಸಕ್ತಿಯನ್ನು ಕಂಡ ಭಾಗವತರು ತಾವು ಹಾಡುತ್ತಿದ್ದ ನಾಂದೀ ಶ್ಲೋಕದ ಉತ್ತರಾರ್ಧವನ್ನು ಹಾಡುವಂತೆ ಒತ್ತಾಯಿಸಿದರಂತೆ. ಅಳುಕಿನಲ್ಲಿ ಮೆಲುದನಿಯಲ್ಲಿ ತೊಡಗಿದ ನಾಯಕರನ್ನು ಹುರಿದುಂಬಿಸಿ ಏರು ದನಿಯಲ್ಲಿ ಹಾಡುವಂತೆ ಪುಸಲಾಯಿಸಿದರಂತೆ. ಇದೇ ಅವರು ಈ ಅಜ್ಞಾತ ಗುರುವಿನಿಂದ ಪಡೆದ ಮೊದಲ ಹಾಡುಗಾರಿಕೆಯ ಪಾಠವಂತೆ.

ಯಕ್ಷಗಾನದ ವಿವಿಧ ಜ್ಞಾನಭಾಗಗಳು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಇಳಿದು ಬರುತ್ತಿದ್ದುದು ಇದೇ ರೀತಿ. ಯಕ್ಷಗಾನ ಕಲಿಸಲು ಶಾಲೆಗಳು ಆರಂಭವಾದದ್ದು ಇತ್ತೀಚೆಗೆ. ಈ ಶತಮಾನದ ನಾಲ್ಕನೆಯ ದಶಕದವರೆಗೂ "ನೋಡಿ ಮಾಡಿ ಕಲಿ" ಯಾವುದೇ ಯಕ್ಷಗಾನ ಕಲಿಯುವ ಮಂತ್ರವಾಗಿತ್ತು. ಯಕ್ಷಗಾನ ಶಿಕ್ಷಣಕ್ಕೆ ಇಂದಿಗೂ ಶಾಸ್ತ್ರೀಯವಾದ ರೂಪ ಬಂದಿಲ್ಲ. ಯಕ್ಷಗಾನದ ಹಾಡುಗಳು ರಂಗಸ್ಥಳದಿಂದ ಸಭೆಗೆ, ಸಭೆಯಿಂದ ಊರಿಗೆ ಮಾರ್ದನಿಗೊಳ್ಳುತ್ತಿದ್ದುವಷ್ಟೆ. ಆಸಕ್ತರು ಬಿಡುವಾದಾಗ ಈ ಧಾಟಿಯನ್ನು ಅನುಸರಿಸಿ ತಮ್ಮಷ್ಟಕ್ಕೆ ಹಾಡುತ್ತಿದ್ದರು. "ತಾಳಮದ್ದಲೆ" ಕೂಟಗಳಲ್ಲಿ ಒಮ್ಮೊಮ್ಮೆ ಸಾರ್ವಜನಿಕವಾಗಿ ಅಭ್ಯಾಸ ಮಾಡಲು ಅವಕಾಶ ಸಿಗುತ್ತಿತ್ತು. ದಸರೆಯ ಸಮಯ "ಹೂವಿನ ಕೋಲಿ"ನ ತಂಡದಲ್ಲಿ ಹಾಡಲು ಅವಕಾಶ, ಮಳೆಗಾಲದ ನಾಲ್ಕು ತಿಂಗಳು ಒಬ್ಬರಿಂದ ಇನ್ನೊಬ್ಬರಿಗೆ ತರಬೇತಿ, ಅಭ್ಯಾಸ. ಓದು ಬರಹ ಬಲ್ಲವರು ಪ್ರಸಂಗಗಳನ್ನು ಓಲೆಗರಿಯಿಂದ ಪ್ರತಿ ಮಾಡುವಾಗ ಪ್ರಸಂಗಗಳನ್ನು ಹಾಡಲು ಅಭ್ಯಾಸ ಮಾಡಿದರು. ಉತ್ಸಾಹಿ ತರುಣರು ಬಿಡುವಿನ ತಿಂಗಳುಗಳಲ್ಲಿ ಕಲಾವಿದರ ಮನೆಯಲ್ಲಿ ವಾಸವಾಗಿದ್ದು ಅವರ ಚಾಕರಿ ಮಾಡಿ ಜೊತೆಗೆ ಅವರಿಂದ ಹಾಡುಗಾರಿಕೆ, ಕುಣಿತಗಳಲ್ಲಿ ತರಬೇತಿ ಪಡೆಯುವುದು ಸಾಮಾನ್ಯವಾಗಿತ್ತು. ಇದಕ್ಕೆ ಸಮಯದ ಮಿತಿ ಇರಲಿಲ್ಲ. ಪಾಠ ಪಟ್ಟಿಯ ಚೌಕಟ್ಟು ಇರಲಿಲ್ಲ. ಈ ಕಲೆಯ ಚೌಕಿಯೊಳಗೆ ಜಾತಿ-ಭೇದ ಹರಿದು ಹೋದುವು. ಬ್ರಾಹ್ಮಣ ಶ್ರೀನಿವಾಸ ನಾಯಕರು ಬ್ರಾಹ್ಮಣರಲ್ಲದ ಮಟ್ಪಾಡಿ ನಾರಾಯಣ ನಾಯಕರಿಂದ ಭಾಗವತಿಕೆ ಕಲಿತರು.

ಯಕ್ಷಗಾನ ಶಿಕ್ಷಣ ಅವಿರತ ಸಾಗುತ್ತಿತ್ತು ಆಗ. ಸ್ವಲ್ಪ ಮಟ್ಟಿಗೆ ಮನೆಯಲ್ಲಿ ಅಭ್ಯಾಸ. ಆಮೇಲೆ ತಿರುಗಾಟದ ವೇಳೆ ಭಾಗವತರ ಹಿಂದೆ. ರಂಗಸ್ಥಳದಲ್ಲಿ ಭಾಗವತರಿಗೆ ಸಹಾಯಕರು ಅಂದರೆ ಸಂಗೀತಗಾರರಾಗಿ ತೇರ್ಗಡೆ. ಈ ರಂಗದಲ್ಲಿ, ಶಿಕ್ಷಣ ಉದ್ಯಮಾಂತರ್ಗತ ತರಬೇತಿ ಎರಡೂ ಒಂದೇ. ಶಾಲೆ ರಂಗಸ್ಥಳ ಒಂದೇ ಆಗಿದ್ದುವು. ಯಕ್ಷಗಾನದಲ್ಲಿ ಉಪಭಾಗವತನ ನೆಲೆ ಗಮನಿಸಿದರೆ ವ್ಯಾವಹಾರಿಕವಾಗಿ ಯಕ್ಷಗಾನವು ತನ್ನನ್ನೆ ತಾನು ಬೆಳೆಸಿಕೊಂಡಂತೆ ಕಾಣುತ್ತದೆ. ಮೇಳದ "ಸಂಗೀತಗಾರ" ರಂಗಕ್ಕೆ ಮೊದಲು ಬರುತ್ತಾನೆ. ಸಭಾಲಕ್ಷಣದ ಹಾಡುಗಳನ್ನು ಅವನೇ ಹಾಡುವುದು. ಒಡ್ಡೋಲಗಕ್ಕೆ ಆಗುವಾಗ ಭಾಗವತರು ಬಂದು ಕುಳಿತುಕೊಳ್ಳುತ್ತಾರೆ. ಅಲ್ಲಿನವರೆಗೆ ರಂಗಸ್ಥಳದ ನಿರ್ದೇಶನ ಸಂಗೀತಗಾರನದ್ದು, ಕೋಡಂಗಿ ವೇಷ, ಬಾಲಗೋಪಾಲರು, ಸ್ತ್ರೀ ವೇಷ, ಒಡ್ಡೋಲಗ – ಈ ಪೂರ್ವ ರಂಗಗಳಲ್ಲಿ ತರಬೇತಿಗೊಳ್ಳುತ್ತಿರುವ ಕಲಾವಿದರ ಪಾತ್ರ ಹೆಚ್ಚು. ಅಲ್ಲೇ ಉಪಭಾಗವತ ನಿರ್ದೇಶಕ. ಭಾಗವತರು ಯಾವುದೇ ಕಾರಣದಿಂದ ಗೈರು ಹಾಜರಾದರೆ ಅವನ ಸ್ಥಾನವನ್ನು ಇಡೀ ರಾತ್ರಿ ತುಂಬುತ್ತಾನೆ ಆತ.

ಈ ರಂಗಾಂತರ್ಗತ ತರಬೇತಿಯ ಕೆಲವು ಲಕ್ಷಣಗಳೆಂದರೆ ಇವು:

ಯಕ್ಷಗಾನವನ್ನು ಅನುಕರಣೆಯಿಂದಲೇ ಕಲಿಯಲಾಗುತ್ತಿತ್ತು. ಅನುಕರಣೆ ಎಳವೆಯಲ್ಲೆ ಮೊದಲಾಗುತ್ತಿತ್ತು. ಈ ಶಿಕ್ಷಣ ವ್ಯವಸ್ಥಿತವಾಗಿ ಶಾಸ್ತ್ರೀಯವಾಗಿ ಇರಲಿಲ್ಲ. ಹುಡುಗರು ಮೇಳದಲ್ಲಿ ಪೆಟ್ಟಿಗೆ ಹೊರುವವರಾಗಿ ಸೇರಿದವರು ರಂಗದಲ್ಲಿ ಒಂದೊಂದೇ ಪಾತ್ರವನ್ನು ಹಂತ ಹಂತವಾಗಿ ವಹಿಸಿ ಕಲೆಯನ್ನು ಕರಗತ ಮಾಡಿಕೊಳ್ಳುತ್ತಿದ್ದರು. ಎಂಟು ಹತ್ತು ವರ್ಷಗಳ ಬಾಲಕರಿಗೆ ಮೊದಲಲ್ಲಿ ಸಿಗುತ್ತಿದ್ದುದು ಧರ್ಮಾರ್ಥ ಊಟ ಮಾತ್ರ. ಕೆಲವರು ಆಟದ ವೇಷಧಾರಿಗಳ ಮಕ್ಕಳೋ, ಸಂಬಂಧಿಕರೋ ಆಗಿದ್ದವರಿಗೆ ಸವಲತ್ತು ಹೆಚ್ಚು. ಅವರು ಚಾಕರಿ ಮಾಡಬೇಕಾಗಿಲ್ಲ. ಇತರ ಹುಡುಗರು ಸೇವಕರು. ಕೆಲವೊಮ್ಮೆ ವೇಷಧಾರಿಯೇ ಅವನನ್ನು ತನ್ನ ಚಾಕರಿಗೆ ನೇಮಿಸುತ್ತಿದ್ದ. ಹಿರಿಯ ಕಲಾವಿದರು ತಮಗೆ ಪುರುಸೊತ್ತಿದ್ದಾಗ ಒಂದು ಊರಿನಿಂದ ಇನ್ನೊಂದೂರಿಗೆ ಕಾಲ್ನಡೆಯಲ್ಲಿ ಹೋಗುತ್ತಿದ್ದಾಗ, ಇತರ ಬಿಡುವಿನ ವೇಳೆಯಲ್ಲಿ ರಾಗ ತಾಳಗಳ ಜ್ಞಾನ ಹೇಳಿಕೊಡುತ್ತಿದ್ದರು. ಮಾತುಗಾರಿಕೆಯ ಅನುಭವವೂ ಈ ರೀತಿ ಹಿರಿಯರಿಂದ ಕಿರಿಯರಿಗೆ ಹರಿದು ಬರುತ್ತಿತ್ತು. ಹೀಗೆ ಕಲಿತ ವಿದ್ಯಾರ್ಥಿಗಳಲ್ಲಿ ಅನುಕೂಲವಂತರು ಒಮ್ಮೊಮ್ಮೆ "ಗುರು"ಗಳಿಗೆ "ಕಾಣಿಕೆ" ಕೊಡುವುದಿತ್ತು. ಇತರರು ಅವರ ಬಟ್ಟೆ ಒಗೆದೋ ,ಪೆಟ್ಟಿಗೆ ಹೊತ್ತೋ, ರಾತ್ರಿ ಕಾಲೊತ್ತುತ್ತಲೋ ಸೇವೆ ಸಲ್ಲಿಸಿ ತಮ್ಮ ಗುರು ಋಣ ತೀರಿಸುತ್ತಿದ್ದರು. ಆದರೆ ರಂಗಸ್ಥಳದಲ್ಲಿ ನಿಜವಾದ ತರಬೇತಿ ಸಭಾಲಕ್ಷಣದಲ್ಲಿ. ಕೋಡಂಗಿ, ಬಾಲಗೋಪಾಲ ಪಾತ್ರಧಾರಿಗಳು ಸ್ತ್ರೀ ವೇಷದವರು ಇವರು ಹೊಸಬರಾಗಿಯೇ ಇದ್ದರು. ಹೊಸದಾಗಿ ಸೇರಿದ ಹುಡುಗರು ಕೋಡಂಗಿ ಕುಣಿಯುತ್ತಿದ್ದರು. ಕೋಡಂಗಿಗಳ ಸಂಖ್ಯೆ ೬–೭ರವರೆಗೂ ಹೋಗಬಹುದಿತ್ತು. ಅವರದ್ದು ಮುಖ್ಯ ಕೆಲಸ ಕುಣಿತ, ಸುಲಭವಾದ ಹೆಜ್ಜೆಗಳು. ಬಾಲಗೋಪಾಲರೂ ಕುಣಿಯುತ್ತಾರೆ. ಕೋಡಂಗಿಗಳು ಕೆಲವೊಮ್ಮೆ ಅವರನ್ನು ಸೇರುವುದುಂಟು. ಹಿರಿಯ ಹುಡುಗರ ಜೊತೆಗೆ ಕಿರಿಯರು ಕಲಿಯುತ್ತಿದ್ದರು. ಸ್ತ್ರೀ ವೇಷ ಸಭಾಲಕ್ಷಣದ ಮುಂದಿನ ಭಾಗ ಸ್ತ್ರೀ ವೇಷದ ಕುಣಿತ ಹೆಚ್ಚು ಸಂಕೀರ್ಣವಾದದ್ದು. ಕೋಡಂಗಿ, ಬಾಲಗೋಪಾಲಕರಾಗಿ ನುರಿತವರು ಸ್ತ್ರೀ ವೇಷ ಹಂತಕ್ಕೆ ಏರುತ್ತಿದ್ದರು. ಸ್ತ್ರೀ ವೇಷದಲ್ಲಿ ಕುಣಿತ, ಅಭಿನಯ, ಭಾವ ಪ್ರದರ್ಶನಗಳು ಸಮಾನವಾಗಿ ಸಮನ್ವಯಗೊಳ್ಳಬೇಕು. ಪ್ರಸಂಗ ತೊಡುಗುವಾಗ ಒಡ್ಡೋಲಗ ಕುಣಿತದಲ್ಲಿ ಎಳೆಯ ಕಲಾವಿದರಿಗೆ ಹಿರಿಯ ಕಲಾವಿದರೊಂದಿಗೆ ಕುಣಿಯಲು ಮೊತ್ತ ಮೊದಲ ಅವಕಾಶ. ಕೆಳಗಿನ ಹಂತಗಳಿಂದ ಮೇಲೇರಿದ ಹುಡುಗರು ಇಲ್ಲಿ ಸಾಮೂಹಿಕವಾಗಿ ಒಂದರ್ಧ ಗಂಟೆ ಕುಣಿಯುತ್ತಾರೆ. ವೃತ್ತಾಕಾರವಾಗಿ ನಿಂತು ಒಬ್ಬರ ಹಿಂದೆ ಒಬ್ಬರು ಕುಣಿಯುವಾಗ ಅನುಭವಿಗಳ ಸರದಿ ಮೊದಲು. ಅವರನ್ನು ಅನುಸರಿಸಿ ಕಲಿಯುವ ಕಲಾವಿದರು ಕುಣಿಯುತ್ತಾರೆ. ಭಾಗವತರು ತಕ್ಕ ಸಲಹೆ ಕೊಡುತ್ತಾರೆ. ಹೀಗೆ ಹೊರ ನೋಟಕ್ಕೆ ಯಾವುದೇ ವ್ಯವಸ್ಥೆ ಕಾಣದಿದ್ದರೂ ನಿಜದಲ್ಲಿ ವ್ಯವಸ್ಥೆ ಇದ್ದೇ ಇದೆ. ಆದರೆ ರಂಗ ತರಬೇತಿ ರಂಗಕ್ರಿಯೆಯ ಅಂಗವಾಗಿಯೇ ಬರುತ್ತದೆ. ಈ ಕಲೆಯ ಜಾನಪದ ಲಕ್ಷಣಕ್ಕೆ ಅನುಗುಣವಾಗಿದೆ ಇದು.

"ಸಭಾಲಕ್ಷಣ"ವೆಂದು ಕರೆಯಲ್ಪಡುವ ಪೂರ್ವರಂಗದ ಪ್ರಮುಖ ಉದ್ದೇಶವೇ ಯುವ ಕಲಾವಿದರಿಗೆ ಕುಣಿತದಲ್ಲಿ ತರಬೇತಿ ಕೊಡುವುದು ಎಂದರೂ ಸಲ್ಲುತ್ತದೆ. ಈ ಸಮಯದಲ್ಲಿ ಪ್ರೇಕ್ಷಕರಾಗಿರುವವರೂ ಮಕ್ಕಳೇ ಹೆಚ್ಚು. ಇದರಲ್ಲಿ ಕುಣಿತವೇ ಮುಖ್ಯ. ಹಾಸ್ಯಗಾರನ ಪ್ರವೇಶವೂ ಆಗುತ್ತದೆ ಇಲ್ಲಿ. ಅಂತೂ ಯಕ್ಷಗಾನದ ಎಲ್ಲಾ ತರದ ಕುಣಿತಗಳೂ, ಬಾಲ

ಗೋಪಾಲ, ಸ್ತ್ರೀ ವೇಷ, ಒಡ್ಡೋಲಗದಲ್ಲಿ ಅಂತರ್ಗತವಾಗಿವೆ. ಪ್ರತಿನಿತ್ಯವೂ ನಡೆಯುವ ಸಭಾಲಕ್ಷಣದಲ್ಲಿ ಹೀಗೆ ಅನುಕರಣೆಯ ಮೂಲಕ ಕಲಿಕೆ ನಿರಂತರ ಸಾಗುತ್ತದೆ. ಅನುಭವಕ್ಕೆ ಅನುಗುಣವಾಗಿ ಕಲಾವಿದರ ವರ್ಗೀಕರಣ. ಕೆಳಗಿನ ಮಟ್ಟದಲ್ಲಿ ಕೋಡಂಗಿ. ಆಮೇಲೆ ಕ್ರಮವಾಗಿ ಬಾಲಗೋಪಾಲ (ಕಟ್ಟು ವೇಷ), ಸ್ತ್ರೀ ವೇಷ, ಪುಂಡು ವೇಷ, ಪುರುಷ ವೇಷ, ಎರಡನೇ ವೇಷ. ಎರಡನೇ ವೇಷವನ್ನು ಮೇಳದ ಪ್ರಮುಖ ಕಲಾವಿದರು ವಹಿಸುತ್ತಾರೆ. ಭಾಗವತರ ನಂತರ ಅತಿ ಹೆಚ್ಚಿನ ಸಂಭಾವನೆ ಪಡೆಯುವ ಕಲಾವಿದ ಎರಡನೇ ವೇಷದವನು. ಕಲಾವಿದನೊಬ್ಬ ವೇಷಧಾರಿ ಎನ್ನಿಸಬೇಕಾದರೆ ಕನಿಷ್ಠ ಪಕ್ಷ ಸ್ತ್ರೀ ವೇಷದ ಹಂತಕ್ಕೆ ಏರಬೇಕು. ತಮ್ಮ ತಮ್ಮ ಪ್ರತಿಭೆಗನುಗುಣವಾಗಿ ಮೇಲೇರುತ್ತ ಬಂದ ಕಲಾವಿದರು ಪುಂಡು ವೇಷ ಹಂತದಲ್ಲಿ ನಿಂತುಬಿಡುವುದುಂಟು. ಮೂವತ್ತು ನಲುವತ್ತು ಹರೆಯದ ಪ್ರತಿಭಾವಂತ ಕಲಾವಿದರು ಎರಡನೇ ವೇಷದ ಅಂತಸ್ತನ್ನು ತಲುಪುತ್ತಾರೆ. ಆದರೆ ಒಂದು ಮೇಳದಲ್ಲಿ ಎರಡನೇ ವೇಷದವರು ಒಬ್ಬರೇ ಇರುತ್ತಾರೆ.

ಪ್ರಸಂಗದ ವೇಳೆ ಕಿರಾತ ಪಡೆಯಂಥ ದೃಶ್ಯಗಳಲ್ಲಿ ಪ್ರಯಾಣ ಕುಣಿತ ಮತ್ತಿತರ ಹೆಜ್ಜೆಗಳನ್ನು ಅಭ್ಯಾಸ ಮಾಡಲು ಅವಕಾಶ ಸಿಗುತ್ತದೆ.

ಬಣ್ಣಗಾರಿಕೆ ಮತ್ತು ವೇಷ ಕಟ್ಟುವುದು ಅತ್ಯಂತ ಕ್ಲಿಷ್ಟವಾದ ಕಲೆ. ಆದರೆ ಅದರಲ್ಲೂ ಪ್ರತ್ಯೇಕ ಶಿಕ್ಷಣ ಕ್ರಮವಿಲ್ಲ. ಚೌಕಿಯಲ್ಲಿ ಇತರ ಕಲಾವಿದರು ವೇಷ ಹಾಕುತ್ತಿರುವಾಗ ಅವರಿಗೆ ಸಹಾಯಕರಾಗಿ ಹುಡುಗರು ಕೆಲಸ ಮಾಡುವುದು ಸಾಮಾನ್ಯ. ಉಡುಗೆ ತೊಡುಗೆಗಳ ಪರಿಚಯ, ಅವುಗಳನ್ನು ತೊಡುವ ಕ್ರಮ ಚಿಟ್ಟೆಗಳನ್ನು ಮುಖದ ಮೇಲೆ ಬರೆಯುವ ವಿಧಾನ ಇವೆಲ್ಲ ಅವರಿಗೆ ನೋಡಿದುದರ ಆಧಾರದಿಂದ ತಿಳಿಯಬೇಕು. ವೇಷಗಾರಿಕೆ ಪ್ರಾರಂಭಿಸಿದಂದಿನಿಂದ ತನ್ನ ವೇಷವನ್ನು ತಾನೇ ಅನುಭವಿಕರ ಸಲಹೆ ಮೇರೆಗೆ ಹಾಕುವುದರಿಂದ ಇಲ್ಲೂ ಅಭ್ಯಾಸ, ಪ್ರದರ್ಶನ ಏಕಕಾಲದಲ್ಲಿ ನಡೆಯುತ್ತದೆ. ಹೀಗೆ ಹಂತ ಹಂತವಾಗಿ ಕಲಿಯುವ ವ್ಯವಸ್ಥೆ ಇರುವುದರಿಂದ ಯಾವುದೇ ಕಲಿಯುವಿಕೆ ಇಲ್ಲದ ಹುಡುಗರು ಮೇಳಕ್ಕೆ ಸೇರುವುದು ಸಾಧ್ಯವಿತ್ತು.

ಭಾಗವತರು, ಮದ್ದಳೆಗಾರರು ತಕ್ಕ ಮಟ್ಟಿನ ವ್ಯವಸ್ಥಿತ ಉಪದೇಶವನ್ನು ಮಳೆಗಾಲದ ಬಿಡುವಿನ ಸಮಯದಲ್ಲಿ ಎಳೆಯರಿಗೆ ಕೊಡುತ್ತಿದ್ದರು. ಗುರುಗಳು ಸಂಬಂಧಿಕರಾಗಿರದಿದ್ದರೆ ಅವರಿಗೆ "ಕಾಣಿಕೆ"ಯೂ ಸಿಗುತ್ತದೆ. ಸ್ವಲ್ಪ ಮಟ್ಟಿನ ಅನುಭವವಾದರೆ ಮೇಳದಲ್ಲಿ ಸಂಗೀತಗಾರನಾಗಿ ಇಲ್ಲವೆ ಒತ್ತು ಮದ್ದಳೆಗಾರನಾಗಿ ಸೇರಲು ಅವಕಾಶ ಸಿಗುತ್ತದೆ. ಒಡ್ಡೋಲಗಕ್ಕಾಗುವಾಗ ಭಾಗವತರ ಪ್ರವೇಶವಾದ ಮೇಲೂ ಅವರ ಜೊತೆಗೆ ಸಂಗೀತಗಾರನು ದನಿಗೂಡಿಸಬಹುದು. ರಾಗಜ್ಞಾನ, ಆಟವನ್ನು ನಿರ್ದೇಶಿಸುವ ಕ್ರಮ ಹೀಗೆ ತಿಳಿಯುತ್ತದೆ. ಆತನಿಗೆ. ಭಾಗವತನಾಗಿ ಮೇಳ ಸೇರಬೇಕಾದರೆ ಕೆಲವಾದರೂ ಪ್ರಸಂಗಗಳು ಬಾಯಿಪಾಠ ಬರಬೇಕು.

"ಚಂಡೆ"ಯು ಹಿಂದೆ ಹಿಮ್ಮೇಳದ ಮುಖ್ಯ ಪರಿಕರವಾಗಿರಲಿಲ್ಲ. ಪ್ರತ್ಯೇಕ ಚಂಡೆವಾದಕರು ಇದ್ದುದು ಅಪರೂಪ. ಅಗತ್ಯ ಬಿದ್ದಾಗ ಬಿಡುವಿದ್ದ ಸ್ತ್ರೀ ವೇಷದ ಪಾತ್ರಧಾರಿಯೋ ಹಾಸ್ಯಗಾರನೋ ಚಂಡೆ ಬಾರಿಸುತ್ತಿದ್ದ. ತಾಳ ಗೊತ್ತಿದ್ದಯಾರೂ ಇದನ್ನು ಸ್ವಲ್ಪ ಅಭ್ಯಾಸದಿಂದ ಕಲಿಯಬಹುದಿತ್ತು.

ಒಮ್ಮೊಮ್ಮೆ ಶ್ರೀಮಂತ ಜಮೀನುದಾರರು ಬಿಡುವಿನ ವೇಳೆಯಲ್ಲಿ ಕಲಾವಿದರನ್ನು ಮನೆಗೆ ಕರೆಸಿ ಆಯಾ ಊರಿನ ಆಸಕ್ತರಿಗೆ ಕಲಿಸುವಂತೆ ವ್ಯವಸ್ಥೆ ಮಾಡುವುದಿತ್ತು. ಇಂತಹ ಪೋಷಣೆ ಕಲೆಯ ಉಳಿವಿಗೆ ಸಹಾಯ ಮಾಡಿತು.

೧೯೪೦ರ ಬಳಿಕ ಬಿಡುವಿನ ವೇಳೆ ಯಕ್ಷಗಾನವನ್ನು ಕಲಿಸುವ ಕಾರ್ಯಕ್ರಮ ಹೆಚ್ಚು ವ್ಯವಸ್ಥಿತವಾಗಿ ರೂಪಗೊಳ್ಳಲು ತೊಡಗಿತು. ಹವ್ಯಾಸೀ ಕಲಾವಿದರನೇಕರು, ವೃತ್ತಿಯಲ್ಲಿ ಶಿಕ್ಷಕರಾಗಿದ್ದವರು, ಯಕ್ಷಗಾನದ ನೃತ್ಯವನ್ನು ಕಲಿಸಲು ತರಗತಿಗಳನ್ನು ತೆರೆದರು. ಇದರಲ್ಲಿ ತರಬೇತಿಗೊಂಡ ಯುವಕರು ಬಳಿಕ ಮೇಳವನ್ನು ಸೇರಿದರು. ಅನೇಕ ಹವ್ಯಾಸೀ ಯಕ್ಷಗಾನ ಸಂಘಗಳು ಹುಟ್ಟಿಕೊಂಡವು. ಶಿಕ್ಷಿತರೂ ಯಕ್ಷಗಾನದಲ್ಲಿ ಆಸಕ್ತರಾದರು. ಯಕ್ಷಗಾನವೂ ಹೆಚ್ಚು ಜನಪ್ರಿಯವಾಯಿತು.

ಇತ್ತೀಚೆಗೆ ಯಕ್ಷಗಾನ ಶಾಲೆಗಳು ಪ್ರಾರಂಭವಾಗಿ ಕ್ರಮವಾದ ಶಿಕ್ಷಣ ನೀಡಲು ತೊಡಗಿವೆ. ಉಡುಪಿ, ಹಂಗಾರಕಟ್ಟೆ, ಧರ್ಮಸ್ಥಳಗಳಲ್ಲಿ ಶಿಕ್ಷಣ ಪರಂಪರೆ ಬೆಳೆದು ಬಂದಿದೆ.

ಯಕ್ಷಗಾನ ರಂಗಕ್ಕೆ ಪೂರಕವಾಗಿರುವ ಕೆಲವು ಸಂಪ್ರದಾಯಗಳಿಂದಲೂ ಪರೋಕ್ಷವಾಗಿ ಕಲಾವಿದರಿಗೆ ತರಬೇತಿ ದೊರೆಯುತ್ತದೆ. ಯಕ್ಷಗಾನದಲ್ಲಿ ಮಾತುಗಾರಿಕೆಯೂ ಒಂದು ಪ್ರಮುಖ ಅಂಗ. ಹೆಚ್ಚು ವಿದ್ಯಾವಂತರಲ್ಲದ ವೇಷಧಾರಿಗಳಿಗೆ ಮಾತಿನ ಕಲೆ ಕರಗತವಾಗುವುದು ಸುಲಭವಲ್ಲ. ತಾಳಮದ್ದಳೆ ಇಲ್ಲಿ ನೆರವಿಗೆ ಬಂದಿತು. ಯಕ್ಷಗಾನಕ್ಕೆ ಸಮರ್ಥವಾದ ಬದಲಿ ಎಂದರೆ ತಾಳಮದ್ದಲೆ. ಮಳೆಗಾಲದಲ್ಲಿ ಆಟದ ಸಂಚಾರ ನಿಂತಾಗ, ಬೇಸಾಯ ಕಳೆದ ದಿನಗಳೆಂದರೆ ಬಿಡುವಿನ ದಿನಗಳೇ. ಯಕ್ಷಗಾನದ ಕಲಾವಿದರು ಸಂಜೆ ವೇಳೆ ಒಂದುಗೂಡಿ ತಾಳಮದ್ದಳೆ ಕೂಟ ನಡೆಸುತ್ತಾರೆ. ಭಾಗವತರು ಹಿಮ್ಮೇಳದೊಂದಿಗೆ ಹಾಡುವುದು. ಪಾತ್ರಧಾರಿಗಳು ಸಂಭಾಷಣೆಯ ಮೂಲಕ ಹಾಡಿನ ಅರ್ಥ ಹೇಳಿ ಶ್ರಾವಕರನ್ನು ರಂಜಿಸುತ್ತಾರೆ. ದೇವಸ್ಥಾನದ ಪೌಳಿ ಇಂಥ ಚಟುವಟಿಕೆಗಳಿಗೆ ಅವಕಾಶ ನೀಡುತ್ತದೆ. ಇಂಗ್ಲಿಷ್ ಮಾದರಿಯ ಶಿಕ್ಷಣ ಪ್ರಾರಂಭವಾಗುವ ಹಿಂದಿನ ದಿನಗಳಲ್ಲಿ ಐಗಳ ಮಠವೆಂದು ಶಾಲೆಯ ಕ್ರಮವೊಂದು ರೂಢಿಯಲ್ಲಿತ್ತು. ಗುರುಗಳೊಬ್ಬರು ದೇವಸ್ಥಾನದಲ್ಲೋ, ತಮ್ಮ ಮನೆಯಲ್ಲೋ ಓದು ಬರಹ ಕಲಿಸುತ್ತಿದ್ದರು. ಇದಕ್ಕೆ ವಾಸ್ತವಿಕವಾದ ವಸ್ತುವಾಗಿದ್ದುದು ಯಕ್ಷಗಾನ ಪ್ರಸಂಗಗಳು. ಪ್ರಸಂಗಗಳನ್ನು ಬಾಯಿಪಾಠ ಕಲಿಯುವುದು, ಅವನ್ನು ತಾಳೆಗರಿಯಲ್ಲಾಗಲಿ, ಕಾಗದದಲ್ಲಾಗಲೀ ಬರೆಯುವುದು ಶಿಕ್ಷಣವಾಗಿತ್ತು. ಯಕ್ಷಗಾನ ಪ್ರಸಂಗಜ್ಞನು ಈ ರೀತಿ ಶಿಕ್ಷಿತ ವ್ಯಕ್ತಿ. ಭಾರತದ ಪುರಾಣಾದಿಗಳ ಪರಿಚಯ ಅವಿಭಾಜ್ಯ ಅಂಗವಾಗಿತ್ತು.

"ಹೂವಿನ ಕೋಲು" ಎಂಬ ಇನ್ನೊಂದು ಸಂಪ್ರದಾಯವೂ ಯಕ್ಷಗಾನದ ಒಂದು ಶಾಖೆ. ನವರಾತ್ರಿಯಲ್ಲಿ ನಾಲ್ಕೈದು ಮಂದಿ ಯುವ ಕಲಾವಿದರು ಮನೆಮನೆಗೆ ಹೋಗಿ ಒಂದೆರಡು ಪದಗಳನ್ನು ಹಾಡಿ, ಅರ್ಥ ಹೇಳಿ ಸ್ವಲ್ಪ ಅಕ್ಕಿ, ತೆಂಗಿನಕಾಯಿಗಳನ್ನು ಪ್ರತಿಫಲವಾಗಿ ಪಡೆಯುತ್ತಿದ್ದರು. ಆ ದಿನಗಳ ತಿರುಗಾಟದಿಂದ ಯಜಮಾನನಿಗೆ ಸ್ವಲ್ಪ ಉತ್ಪತ್ತಿಯೂ ಗುಂಪಿನ ಹೊಸಬರಿಗೆ ಯಕ್ಷಗಾನದಲ್ಲಿ ಅಭ್ಯಾಸವೂ ದೊರಕುತ್ತಿತ್ತು.

ಪುರಾಣವಾಚನ, ಹರಿಕಥೆಗಳೂ ಜನಸಾಮಾನ್ಯರಿಗೆ ಪುರಾಣಕಥೆಗಳನ್ನು ಪರಿಚಯ ಮಾಡಿಸುವ ಮಾಧ್ಯಮಗಳಾಗಿದ್ದುವು. ಗದುಗು ಭಾರತ, ತೊರವೆ ರಾಮಾಯಣಗಳ ವಿದ್ವಾಂಸರೊಬ್ಬರು ಓದಿ ಅರ್ಥ ಹೇಳುತ್ತಿದ್ದುದು ಪುರಾಣ ವಾಚನ, ಕೆಲವೊಮ್ಮೆ ಯಕ್ಷಗಾನ ಕಲಾವಿದರೇ ವಾಚನ ಮಾಡುತ್ತಿದ್ದರು. ಹರಿಕಥೆ ಹಾಡು, ಪ್ರವಚನ, ಶ್ಲೋಕಗಳ ಮೂಲಕ ರಸ

ವತ್ತಾಗಿ ಪುರಾಣ ಕಥೆಗಳನ್ನು ವಿಸ್ತರಿಸುವ ಕಲೆ. ಇವೆರಡರಿಂದಲೂ ಯಕ್ಷಗಾನದಲ್ಲಿ ಹೊಸತಾಗಿ ಸೇರಿದ ಕಲಾವಿದರಿಗೆ ಬೇಕಷ್ಟು ಸಾಹಿತ್ಯ ಜ್ಞಾನ ದೊರಕುತ್ತಿತ್ತು. ಒಂದು ದೃಷ್ಟಿಯಿಂದ ಯಕ್ಷಗಾನದ ಪ್ರೇಕ್ಷಕರನ್ನೂ ಇವು ತರಬೇತಿಗೊಳಿಸಾತ್ತಿದ್ದುವು.

ಯಕ್ಷಗಾನ ಸಂಪ್ರದಾಯದಲ್ಲಿ "ತಜ್ಞತೆ" (ಸ್ಪೆಶಲೈಸೇಷನ್) ಇಂದಿನಷ್ಟು ಮೊದಲು ಇರಲಿಲ್ಲ. ಭಾಗವತರಿಗೆ ಚಂಡೆ ಮದ್ದಳೆ ನುಡಿಸಲೂ ಬರುತ್ತಿತ್ತು. ವೇಷಧಾರಿಗಳೂ ಹಾಡಲು ಸಮರ್ಥರಾಗಿದ್ದರು. ಯಕ್ಷಗಾನದ ಪಾರಂಪರಿಕ ಶಿಕ್ಷಣ ಯಾವುದೇ ಒಂದು ರಂಗಕ್ಕೆ ಸೀಮಿತವಾಗಿರಲಿಲ್ಲ. ಯಾವುದಕ್ಕೆ ಅವಕಾಶವಿತ್ತೋ, ಯಾವುದಕ್ಕೆ ಮನಸ್ಸು ಒಲಿಯಿತೋ ಅದನ್ನು ಆಸಕ್ತರು ಕಲಿಯುತ್ತಿದ್ದರು. ಉದಾಹರಣೆಗೆ ಶ್ರೀ ನೀಲಾವರ ರಾಮಕೃಷ್ಣಯ್ಯನವರು ಹಾಡಲೂ ಬಲ್ಲರು, ಮದ್ದಳೆ ನುಡಿಸಲೂ ಬಲ್ಲರು.

ಹೀಗೆ ಹೊರಗೆ ಆಗಾಗ ಪಡೆದುಕೊಂಡ ಜ್ಞಾನವು ಪಕ್ವವಾಗಲು ಯಕ್ಷಗಾನದ ರಂಗಸ್ಥಳವೇ ಬೇಕಾಗಿತ್ತು. ಈ ರಂಗಸ್ಥಳವೇ ಶಿಕ್ಷಣ ರಂಗವೂ ಆಗಿತ್ತು.

**ಇಂದು**

ಇಂದೂ ಯಕ್ಷಗಾನ ಮೇಳಗಳಲ್ಲಿ ತರಬೇತಿ ಮೇಲೆ ವಿವರಿಸಿದಂತೆಯೇ ನಡೆಯುತ್ತಿದೆ. ಆದರೆ ಅದರ ತೀವ್ರತೆ, ಸಾಮರ್ಥ್ಯ ಕಡಿಮೆಯಾಗಿದೆ. ಹೆಚ್ಚುತ್ತಿರುವ ಮೇಳಗಳಲ್ಲಿನ ಯುವ ಕಲಾವಿದರಿಗೆ ಯಕ್ಷಗಾನದಲ್ಲಿ ಶಿಕ್ಷಣ ಕೊಡತಕ್ಕ ಶಾಲೆಗಳ ಸಂಖ್ಯೆ ಕಡಿಮೆ. ಯಕ್ಷಗಾನದ ಶುದ್ಧ ಸಂಪ್ರದಾಯವೂ ಇಂದು ಉಳಿದಿಲ್ಲ. ಅಲ್ಲದೆ ಕಲಾವಿದರಿಗೆ ಇಂದು ಬಿಡುವು ಕಡಿಮೆಯಾಗಿದೆ. ಮಳೆಗಾಲದಲ್ಲೂ ಮುಂಬಯಿಯಂಥ ದೂರದೂರುಗಳಲ್ಲಿ ತಿರುಗಾಟ ಇರುತ್ತದೆ. ಕಲಿಸಲು ಅವರಿಗೆ ಹಿಂದಿನಷ್ಟು ಬಿಡುವಿಲ್ಲ. ಇಂದು ಸಾರ್ವಜನಿಕ ಮನರಂಜನೆಯ, ಸಂಸ್ಕಾರದ ಮಾಧ್ಯಮದಿಂದಾಗಿ ರೇಡಿಯೋ, ಸಿನಿಮಾ, ಸಂಗೀತ ಕಚೇರಿಗಳಿರುವಾಗ ಯಕ್ಷಗಾನದ ಪ್ರಾಮುಖ್ಯತೆ ಸ್ವಲ್ಪ ಮಟ್ಟಿಗೆ ಕುಸಿದಿದೆ. ಈ ನೆಲೆಯಲ್ಲಿ ಯಕ್ಷಗಾನವನ್ನು ವ್ಯವಸ್ಥಿತವಾಗಿ ಕಲಿಸುವ ಶಾಲೆಗಳ ಮಹತ್ವ ಹೆಚ್ಚಿದೆ. ಉಡುಪಿಯ ಯಕ್ಷಗಾನ ಕೇಂದ್ರವು ಡಾ. ಕೋಟ ಶಿವರಾಮ ಕಾರಂತರ ನೇತೃತ್ವದಲ್ಲಿ ೧೯೭೧ರಲ್ಲಿ ಸ್ಥಾಪಿತವಾಯಿತು. ಯಕ್ಷಗಾನದ ಪರಂಪರೆಯನ್ನು ಉಳಿಸುವುದೊಂದು, ಅದರಲ್ಲಿ ಕಲಾತ್ಮಕ ಸೃಷ್ಟಿಯ ಸಾಧ್ಯತೆಗಳನ್ನು ಆವಿಷ್ಕರಿಸುವುದು ಇನ್ನೊಂದು ಹೀಗೆ ಎರಡು ಉದ್ದೇಶಗಳನ್ನಿರಿಸಿಕೊಂಡ ಡಾ. ಕಾರಂತರು ಕೇಂದ್ರದ ಕಾರ್ಯಕ್ರಮದ ರೂಪರೇಷೆಗಳನ್ನು ಹಾಕಿಕೊಟ್ಟರು. ಪ್ರತಿ ವರ್ಷ ೧೦–೧೨ ಹುಡುಗರಿಗೆ ವಿದ್ಯಾರ್ಥಿವೇತನ ಕೊಟ್ಟು ತರಬೇತಿ ನೀಡಲಾಗುತ್ತದೆ. ಎರಡು ವರ್ಷದ ತರಬೇತಿ ಅವಧಿಯೆಂದು ನಿಗದಿಗೊಳಿಸಿದ್ದರೂ ಒಂದು ವರ್ಷದ ಮೇಲೆ ಕಲಿಯುವ ಹುಡುಗರ ಸಂಖ್ಯೆ ಕಮ್ಮಿ. ಇದಕ್ಕೆ ಮೇಳಗಳಲ್ಲಿ ಅವಕಾಶ ಸಿಗುವಷ್ಟು ತರಬೇತಿ ಆಗಲೇ ದೊರಕಿರುವುದು ಒಂದು ಕಾರಣ. ರೂ ೧೦೦ ವಿದ್ಯಾರ್ಥಿವೇತನ ಅತ್ಯಲ್ಪವಾಗಿರುವುದು ಇನ್ನೊಂದು ಕಾರಣ. ಹಂಗಾರಕಟ್ಟೆಯಲ್ಲಿ ವರ್ಷಕ್ಕೆ ನಾಲ್ಕು ತಿಂಗಳು ಭಾಗವತಿಕೆಯ ಶಾಲೆ ನಡೆಯುತ್ತಿದೆ. ತಿರುಗಾಟದ ಸಮಯದಲ್ಲಿ ಭಾಗವತರು ಮೇಳಕ್ಕೆ ಹೋಗಿರುತ್ತಾರೆ. ಧರ್ಮಸ್ಥಳದ ದೇವಸ್ಥಾನದ ವತಿಯಿಂದ ತೆಂಕು ತಿಟ್ಟಿನ ಯಕ್ಷಗಾನ ಕಲಿಸಲು ತರಗತಿಗಳ ವ್ಯವಸ್ಥೆಯಿದೆ. ಯಕ್ಷಗಾನ ಪ್ರದರ್ಶನಗಳಲ್ಲಿ ಜನರ ಆಸಕ್ತಿ ಯಥೇಷ್ಟವಾಗಿದ್ದರೂ, ವ್ಯವಸ್ಥಿತ ತರಬೇತಿಯ ಅಗತ್ಯವನ್ನು ನಮ್ಮ ಸಮಾಜ ಇನ್ನೂ ಮನಗಂಡಿಲ್ಲ. ಉಡುಪಿಯ ಯಕ್ಷಗಾನ ಕೇದ್ರವೊಂದೇ ಇಷ್ಟರ ವರೆಗೆ ೧೦ ವರ್ಷಗಳ ಮೇಲ್ಪಟ್ಟು ಅವ್ಯಾಹತವಾಗಿ ತರಬೇತಿ ಕೊಟ್ಟ ಸಂಸ್ಥೆ. ಇಲ್ಲಿ ಕಲಿತ ಸುಮಾರು ನೂರು ವಿದ್ಯಾರ್ಥಿಗಳಲ್ಲಿ ೫೦–೬೦ ಜನ ಮೇಳ ಸೇರಿದ್ದಾರೆ. ಕೆಲವರು ಸಂಗೀತಗಾರರಾಗಿದ್ದಾರೆ. ವ್ಯವಸ್ಥಿತ ಶಿಕ್ಷಣದ ಅಗತ್ಯ ಈ ಕ್ಷೇತ್ರದಲ್ಲಿದೆ. ಆದರೆ ಇರುವ ವ್ಯವಸ್ಥೆ ಸಾಲದು. ಸರಕಾರದ ಕೃಪೆ ಹೆಚ್ಚು ಉದಾರವಾದರೆ ವ್ಯವಸ್ಥೆ ಉತ್ತಮಗೊಳ್ಳಲು ಸಾಧ್ಯ.

**ಯಕ್ಷಗಾನ ಬಯಲಾಟ**

ಡಾ. ಶಿವರಾಮ ಕಾರಂತರು ೧೯೫೭ರಲ್ಲಿ ತಮ್ಮ 'ಯಕ್ಷಗಾನ ಬಯಲಾಟ'ವೆಂಬ ಸಂಶೋಧಕ ಪ್ರಬಂಧವನ್ನು ಪ್ರಕಟಿಸಿದಾಗ ಅದು ಯಕ್ಷಗಾನದ ಶುಭೋದಯದ ನಾಂದಿಯಾಗಿ ಪರಿಣಮಿಸಿದ್ದು ಭಾರತದಾದ್ಯಂತ ಹಾಗೂ ಜಗದಗಲ ಅವರ ಕೆಲಸಗಳಿಂದಲೇ ಕಲಾವಿಮರ್ಶಕರಿಗೂ ರಂಗತಜ್ಞರಿಗೂ ಯಕ್ಷಗಾನದ ಪರಿಚಯವಾದದ್ದು ಚರಿತ್ರೆಗೆ ಸೇರಿದ ವಿಷಯವಾಗಿದೆ. ೧೯೫೭ಕ್ಕೆ ಮುನ್ನ ಹತ್ತು ವರ್ಷಗಳ ಪರಿಶ್ರಮದಿಂದ ಕಾರಂತರ 'ಯಕ್ಷಗಾನ ಬಯಲಾಟ' ಸೃಷ್ಟಿಯಾಯಿತು. ೨೭೨ ಪುಟಗಳ ಮಿತಿಯೊಳಗೆ ಕಾರಂತರು ಅಡಕಗೊಳಿಸಿದ ವಿಷಯ ಮೌಲಿಕವಾದದ್ದು ಹಾಗೂ ಯಕ್ಷಗಾನದ ತಿಳಿವಿಗೆ ಮೂಲಭೂತವಾದದ್ದು ಎನಿಸಿದೆ. ಪ್ರಸಂಗಗಳ ಬೇಟೆಗೆ ಹೊರಟ ಕಾರಂತರು ಮಲೆನಾಡಿನ ಸೆರಗಿನ ಯಕ್ಷಗಾನಾಭಿಮಾನಿಗಳ ಮನೆಗಳ ಎಷ್ಟೋ ಅಟ್ಟಗಳಲ್ಲಿ ಸಂಶೋಧನೆಯ ಕೆಲಸ ನಡೆಸಿದ್ದರು. ಸಾಹಿತ್ಯದ ಕೆಲಸವನ್ನೂ, ಯಕ್ಷಗಾನ ಸಂಶೋಧನೆಯ ಕರ್ತವ್ಯವನ್ನೂ ಸಮಾನಾಂತರವಾಗಿ ೧೯೫೭ಕ್ಕೆ ಮೊದಲ ಹತ್ತು ವರುಷ ಹಾಗೂ ಅನಂತರದ ೨೦ ವರ್ಷ ನಡೆಸಿ ಬಯಲಾಟದ ಮರುಮುದ್ರಣ (೧೯೬೩)ವನ್ನು ತೆಗೆದರು. ಮೈಸೂರು ವಿಶ್ವವಿದ್ಯಾನಿಲಯದ ನೆರವಿನಿಂದ 'ಯಕ್ಷಗಾನ' ಎಂಬ ಹೆಸರಿನಲ್ಲಿ ಒಂದು ಇಂಗ್ಲೀಷ್, ಒಂದು ಕನ್ನಡ ಹೀಗೆ ಎರಡು ತಿದ್ದಿದ ಆವೃತ್ತಿಗಳನ್ನು ಹೊರತಂದರು. ಜ. ೧೯೭೪) ಹೀಗೆ ಅವರ ಸಂಶೋಧನೆ ಯಕ್ಷಗಾನವನ್ನು ಭಾರತದ ಒಂದು ವಿಶಿಷ್ಟ ರಂಗಭೂಮಿ ಪ್ರಕಾರವೆಂಬುದಾಗಿ ಪ್ರತಿಷ್ಠಾಪಿಸುವುದರಲ್ಲಿ ಯಶಸ್ವಿಯಾಯಿತು. ಅವರ ಮಾರ್ಗದರ್ಶನದಲ್ಲಿಯೇ ಮಿಚಿಗನ್ ವಿಶ್ವವಿದ್ಯಾನಿಲಯದ ಶ್ರೀಮತಿ ಮಾರ್ಥ ಬುಶ್ ಆ್ಯಶ್ಟನ್ ತಮ್ಮ ಸಂಶೋಧಕ ಪ್ರಬಂಧವನ್ನು ರಚಿಸಿದರು. ಅಲ್ಲದೆ ೧೯೫೮ರಿಂದಲೂ ಕಾರಂತರು ಕಾಲಕಾಲಕ್ಕೆ ನಡೆಯಿಸಿದ ಗೋಷ್ಠಿಗಳ ಪರಿಣಾಮ ಅವರ ಬರವಣಿಗೆಯಲ್ಲಿಯೂ ಮೂಡಿಬಂದವು. ಉದಾ. "ಯಕ್ಷಗಾನ" ಕನ್ನಡ ಆವೃತ್ತಿಯಲ್ಲಿ ಯಕ್ಷಗಾನದ ವಿಶಿಷ್ಟ ರಾಗಗಳಿಗೆ ಸ್ವರ ಪ್ರಸ್ತಾರ ಹಾಕಿ ಅವುಗಳನ್ನು ಸ್ಥಿರೀಕರಿಸಿದ್ದಾರೆ. ಅಲ್ಲದೆ ವೇಷಭೂಷಣ ಗೋಷ್ಠಿಯಲ್ಲಿ ದೃಢೀಕರಿಸಿದ ಹಳೇ ಹೊಸ ವೇಷಗಳ ವರ್ಣಚಿತ್ರವನ್ನು ಸೇರಿಸಿದ್ದಾರೆ.

**ಬದಲಾಗುತ್ತಿರುವ ಸಂಪ್ರದಾಯ**

ಈಗ ಐವತ್ತು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಪ್ರಚಲಿತವಾಗುತ್ತಿದ್ದ ಪರಂಪರೆಯ ಯಕ್ಷಗಾನದ ಕಿಂಚಿತ್ ರೂಪರೇಖೆ ಬರೆಯೋಣ.

ಕಸಬುದಾರರು: ಹಳ್ಳಿಯ ರೈತರು ಅಥವಾ ಗ್ರಾಮೋದ್ಯೋಗ ನಿರತರು, ಕಾಯಕವೇ ಕೈಲಾಸವೆನ್ನಬೇಕಾದ ಕಡ್ಡಾಯಕ್ಕೆ ತುತ್ತಾಗುವ ಜಾನಪದರು.

ಭಾಗವತರು: ಇವರಿಗಿಂತ ಸ್ವಲ್ಪ ಉತ್ತಮ ಮಟ್ಟದವರು, ಅರ್ಥಶಕ್ತಿಯಲ್ಲಿಲ್ಲವಾದರೆ ಕೊನೆಗೆ ಜಾತಿಯಲ್ಲಾದರೂ ಆಗಿನ ಕಾಲಕ್ಕೆ ಉತ್ತಮವೆನಿಸಿದಾು.

ಆಡಿಸುವವರು: ಧನಿಗಳು, ಭೂಪತಿಗಳು, ಮಠಾಧಿಪತಿಗಳು.

ಮೇಳ ಹೊರಡಿಸುವವರು: ಅಂದರೆ ವೇಷಭೂಷಣಗಳಿಗೆ ಬಂಡವಲು ಹಾಕಿ ಕಂತು ಕಂತಾಗಿ ಪ್ರದರ್ಶನಗಳ ಮೂಲಕ ಅದನ್ನು ವಸೂಲು ಮಾಡುವ ದೇವಸ್ಥಾನಗಳ ಆಡಳಿತದವರು. ಪರಂಪರೆಯ ಮೇಳಗಳು ಯಾವುದೋ ಹಳ್ಳಿಯ ದೇವಸ್ಥಾನದಲ್ಲಿ ಸೇವೆಯಾಟ ಆಡುವುದು ರೂಢಿ. ಮಾರನಕಟ್ಟೆ, ಮಂದರ್ತಿ, ಸೌಕೂರು, ಅಮೃತೇಶ್ವರಿ, ಕರ್ಕಿ ಇಡಗುಂಜಿ ಮುಂತಾದ ಬಡಗುತಿಟ್ಟಿನ ಮೇಳಗಳು ಊರಿನ ದೈವತದ ಆಶೀರ್ವಾದ ಬಲದಿಂದ ಹೊರಡುವಂಥವು.

ಪ್ರೇಕ್ಷಕರು: ಶಾಲೆ ಕಾಲೇಜುಗಳೆಂಬ ಯಾವುದೇ ಸರೆಮನೆಗಳಿಗೆ ಈಡಾಗದೆ ಬದುಕಿನ ಶಿಕ್ಷಣಗೊಳಗಾಗಿ ಬಾಳುವ ಹಳ್ಳಿಯ ಜನಸಾಮಾನ್ಯರು ಸ್ತ್ರೀ ಪುರುಷ ವಿಭೇದವಿಲ್ಲದೆ ಎಲ್ಲರೂ ಯಕ್ಷಗಾನದ ಪ್ರೇಕ್ಷಕರು. ಊರಿನ ಪ್ರತಿಷ್ಠಿತರ ಕೃಪೆಯಿಂದ ಧರ್ಮಾರ್ಥವಾಗಿ ಒದಗಬಲ ಯಕ್ಷಗಾನ ನಿಮ್ನ ಆರ್ಥಿಕ ಸ್ಥಿತಿಯಲ್ಲಿರುವಾತನಿಗೂ ಲಭಿಸುವಂತಾಗಿತ್ತು. ಒಂದೇ ಹಳ್ಳಿಗೆ ಬರುವ ನಾಲ್ಕಾರು ಮೇಳಗಳ ದೆಸೆಯಿಂದಾಗಿ ವೇಷಗಾರಿಕೆ, ಸಂಗೀತ, ನೃತ್ಯ, ಅಭಿನಯಗಳನ್ನು ತುಲನಾತ್ಮಕವಾಗಿ ನೋಡಿ ಆಸ್ವಾದಿಸುವ, ವಿಮರ್ಶಿಸುವ ಪ್ರಜ್ಞೆಯೂ ಯಕ್ಷಗಾನದ ಶ್ರೀಸಾಮಾನ್ಯ ಪ್ರೇಕ್ಷಕನಿಗೆ ವಶವಾಗಿತ್ತು.

ಬದಲಾಗುತ್ತಿರುವ ಆರ್ಥಿಕ, ಸಾಮಾಜಿಕ ಪದ್ಧತಿಯಲ್ಲಿ ಯಕ್ಷಗಾನವೂ ಯಥಾ ಸ್ಥಿತಿಯಲ್ಲಿ ಬದುಕುವುದು ಸಾಧ್ಯವಿರಲಿಲ್ಲ.

೧) ದೇವಸ್ಥಾನದ ಹೆಸರಿನಲ್ಲಿ ನಡೆಯುತ್ತ ಹರಕೆ ಆಟಗಳನ್ನಾಡುತ್ತ ಜನಸಾಮಾನ್ಯರಿಗೆ ಧರ್ಮಾರ್ಥ ಮನರಂಜನೆ ನೀಡುವ ಮೇಳಗಳು ಹಿಂದಾಗಿ, ಅವುಗಳ ಸ್ಥಾನದಲ್ಲಿ ಸರ್ಕಸ್ಸಿನಂಥ ಡೇರೆಗಳನ್ನು ಸ್ಥಾಪಿಸಿ, ಲಾರಿಯಲ್ಲಿ ದೂರ ದೂರದ ಊರುಗಳಿಗೆ ತೆರಳಿ, ಜಾಹೀರಾತು, ಪ್ರಕಟಣೆ ಇತ್ಯಾದಿಗಳ ಮೂಲಕವಾಗಿ ಪ್ರಚಾರಿಸುತ್ತಾ, ಗೇಟು ಟಿಕೇಟುಗಳನ್ನಿಟ್ಟು ಧನ ಸಂಗ್ರಹ ಮಾಡುವ ವ್ಯವಸಾಯ ಮೇಳಗಳು ಮೊದಲು ತೆಂಕುತಿಟ್ಟಿನಲ್ಲಿಯೂ (ಸು. ೧೯೪೦ರ ಸಂದಿನಲ್ಲಿ), ಆ ಬಳಿಕ (೧೯೬೦ರ ಸಂದಿನಲ್ಲಿ) ಬಡಗುತಿಟ್ಟಿನಲ್ಲಿಯೂ ಉದಯಿಸಿದುವು.

೨) ಇಂಥ ಮೇಳಗಳನ್ನು ಎಬ್ಬಿಸುವುದಕ್ಕಾಗಿ ಇಂದು ಬ್ಯಾಂಕುಗಳು ಸಾಲ ನೀಡುವಷ್ಟು ಆರ್ಥಿಕ ಪ್ರಾಬಲ್ಯ ಯಕ್ಷಗಾನ ರಂಗಭೂಮಿಗೆ ಒದಗಿಬಂದಿದೆ.

೩) ರಂಗಸ್ಥಳದಲ್ಲಿ ಬದಲಾವಣೆಗಳಾಗಿವೆ. ರಂಗಸ್ಥಳ ಹಿಂದಿನ ಸರಳತೆ ಕಳೆದುಕೊಂಡು ಪರದೆ ಸಹಿತವಾದ ನಾಟಕದ ರಂಗಭೂಮಿಯಾಗಿದೆ. ವಿದ್ಯುದ್ದೀಪದ ಬೆಳ್ಳಿಬೆಳಕು ವೇಷಗಳು ಉಪಯೋಗಿಸುವ ಬಣ್ಣದಲ್ಲಿ ವ್ಯತ್ಯಾಸವನ್ನು ತಂದಿದೆ. ಟ್ಯೂಬ್ ಲೈಟುಗಳ ದೆಸೆಯಿಂದ ಭೂಷಣಗಳ ನೈಜ ವರ್ಣವನ್ನು ಗೊತ್ತು ಹಚ್ಚುವುದು ಕಷ್ಟವಾಗಿದೆ.

೪) ಮೇಳದ ವೇಷಧಾರಿಗಳ ಸಂಬಳದಲ್ಲಿ ಹೆಚ್ಚಳ ಒದಗಿದೆ. ಮುಖ್ಯ ಪಾತ್ರಧಾರಿಗಳಿಗೆ ಆಟದ ಋತುವಿನಲ್ಲಿ ತಿಂಗಳೊಂದರ ೧೦೦೦–೨೦೦೦ ರೂಪಾಯಿಗಳಿಂದ ನಾಲ್ಕೈದು ಸಾವಿರ ರೂಪಾಯಿಗಳವರೆಗೂ ಕೂಡಿ ಬರುವ ಸಂಭವವಿದೆ. ಇಂಥ ಮೂರು ನಾಲ್ಕು ಮೇಳಗಳು (ಧರ್ಮಸ್ಥಳ, ಸೋಮನಾಥೇಶ್ವರ, ಕರ್ನಾಟಕ ಯಕ್ಷಗಾನ ನಾಟಕ ಸಭಾ) ತೆಂಕುತಿಟ್ಟಿನಲ್ಲೂ, ಅಮೃತೇಶ್ವರಿ, ಸಾಲಿಗ್ರಾಮ, ಇಡಗುಂಜಿ, ಪೆರ್ಡೂರು ಮೇಳಗಳು ಬಡಗುತಿಟ್ಟಿನಲ್ಲೂ ಸಾಕಷ್ಟು ಆರ್ಥಿಕತೆಯನ್ನು ಕಾಯ್ದುಕೊಂಡು ನಡೆಯುತ್ತಿರುವುದರಿಂದ ಮುಂದಿನ ಮೇ ವರೆಗಿನ ಯಕ್ಷಗಾನದ ಋತುವಿನಲ್ಲಿ ಇಂಥ ಹತ್ತಾರು ಮೇಳಗಳ ಆಟಗಳು ಪ್ರತಿ ರಾತ್ರಿ ನಡೆಯುತ್ತಲೇ ಇರುತ್ತವೆ.

೫) ವೇಷಧಾರಿಗಳ ಸಾಮಾನ್ಯ ತಿಳುವಳಿಕೆಯ ಮಟ್ಟ ಈಗ ಉತ್ತಮ ಸ್ಥಿತಿಯಲ್ಲಿದೆ. ಈಗೆರಡು ದಶಕಗಳಿಂದ ಕೆಲವು ವಾಕ್ಚತುರರಾದ ಪಂಡಿತವರೇಣ್ಯರೂ ಮೇಳಗಳಿಗೆ ಸೇರಿದ್ದಾರೆ. ಇಷ್ಟಲ್ಲದೆ ಪತ್ರಿಕೆಗಳನ್ನು ಓದಿ ಜಾನವೃದ್ಧಿಮಾಡಿಕೊಂಡವರಂತೂ ಹೇಗೂ ಎಲ್ಲರೂ ಇದ್ದಾರೆ. ಶಾಲೆಯ ಕನ್ನಡ ಪತ್ರಿಕಗಳ ಕನ್ನಡ ಪದಗಳೂ, ನುಡಿಗಟ್ಟುಗಳೂ ಯಕ್ಷಗಾನದ ಮಾತುಗಾರಿಕೆಯಲ್ಲಿ ಸೇರಿಕೊಂಡಿವೆ ಯಾದರೂ ಮಾತುಗಾರಿಕೆಯ ಧಾಟಿ “ಅಥೆಂಟಿಕ್” ಯಕ್ಷಗಾನದ್ದೇ ಆಗಿ ಉಳಿದಿದೆ.

೬) ಹರಕೆ ಮೇಳಗಳಲ್ಲಿ ಹಿಂದೆ ಹತ್ತಾರು ಪ್ರಸಂಗಗಳನ್ನು ಆಡಿಸುವ ಸೌಲಭ್ಯವಿರುತ್ತಿತ್ತು; ಈಗ ಹಾಗಿಲ್ಲ. ಅದೂ ಅಲ್ಲದೆ ಪ್ರಸಂಗಗಳು ಮಹಾಭಾರತ, ರಾಮಾಯಣ, ಭಾಗವತಗಳಷ್ಟೇ ಅಲ್ಲದೆ ತುಳುನಾಡಿನ ಭೂತಾರಾಧನೆಗೆ ಸಂಬಂಧಪಟ್ಟ ಕಥೆಗಳಾಗಿ ಪರಿವರ್ತಿತವಾಗಿವೆ. ಕೋಟಿ ಚೆನ್ನಯ, ಕೊರ್ದಬ್ಬುಬಾರಗ, ತನ್ನಿಮಾನಿಗ, ಬಪ್ಪನಾಡು ಮಹಾತ್ಮೆ, ಧರ್ಮಸ್ಥಳ ಮಹಾತ್ಮೆ, ಸತ್ಯದಪ್ಪೆ ಚೆನ್ನಮ್ಮ ಮುಂತಾದ ಪ್ರಸಿದ್ಧ ಜಾನಪದ ಕಥೆಗಳನ್ನು ಪ್ರಸಂಗ ರೂಪದಲ್ಲಿ ಆಡುವುದನ್ನು ತೆಂಕುತಿಟ್ಟಿನವರು ಆರಂಭಿಸಿದ್ದಾರೆ. ತೆಂಕುತಿಟ್ಟು ತುಳು ಭಾಷೆಯಲ್ಲಿ ಯಕ್ಷಗಾನವನ್ನು ನಿರ್ವಹಿಸುತ್ತಿದೆ. ಬಡಗುತಿಟ್ಟಿನವರು ರಾಮಾಯಣ ಮಹಾಭಾರತದ ಹಿಂದಿನ ಪ್ರಸಿದ್ಧ ಪ್ರಸಂಗಗಳನ್ನು ಬಿಟ್ಟು ಮಹಾಶ್ವೇತ, ವಸಂತಸೇನ, ಚಿರವಿರಹಿ ಮುಂತಾದ ಹೊಸ ಹೊಸ ಪ್ರಸಂಗಗಳನ್ನು ಹೊಸದು ಆಡುತ್ತಿದ್ದಾರೆ. ಅಲ್ಲದೆ ಪ್ರತಿ ಮೇಳನೂ ಈಗ ಒಂದೆರಡು ಹೊಸ ಆಟಗಳನ್ನು ಹೊಸದು ಅದನ್ನೇ ನೂರನೇ ಪ್ರಯೋಗ ಎಂದು ಹೇಳುವುದರಲ್ಲಿ ಆತ್ಮಸಂತೋಷಪಡುತ್ತಿದೆ.

ಕುಣಿಯುವುದನ್ನು ಕಡಿಮೆ ಮಾಡಿ, ಅಥವಾ ದೇಹದಂಡನೆಯಾಗದಂತೆ ಸುಲಭೀಕರಿಸಿ, ಜಿಹ್ವಾ ಚಾತುರ್ಯದಿಂದಲೇ ರಸವೃದ್ಧಿ ಮಾಡುವ ಕೌಶಲವನ್ನು ತೆಂಕುತಿಟ್ಟಿನ ಮೇಳಗಳು ಸಂಪೂರ್ಣವಾಗಿ ಸಾಧಿಸಿಕೊಂಡಿವೆ. ವೇಷದಲ್ಲಿ ತೆಂಕುತಿಟ್ಟು ಕಥಕ್ಕಳಿಯ ವೇಷದ ಆವೃತ್ತಿಯಂತೆ ಕಾಣಲು ತೊಡಗಿದ್ದು ಬಹುಶಃ ಈ ಶತಮಾನದ ಆದಿಭಾಗದಿಂದ ಇರಬೇಕು. ಕುಣಿತದ ಹ್ರಸ್ವತೆಯೂ ಈ ತಲೆಮಾರಿಗೆ ಸಂದ ವಿಷಯ. ಬಡಗುತಿಟ್ಟೂ ಬದಲಾಗುತ್ತಿದೆ. ತೆಂಕಿನವರು ಮಾತಿನ ರಂಜನೆಯಿಂದ ಜನರನ್ನು ರಂಜಿಸಿದರೆ ನಮಗೂ ಸಾಧ್ಯವಿಲ್ಲವೇ ಎಂದು ಮಾತನ್ನೇ ಯಕ್ಷಗಾನದ ಉತ್ಕರ್ಷವೆಂದು ತಿಳಿಯುವ ರೂಢಿ ಬೆಳೆಯುತ್ತಿದೆ. ಆದರೂ ಬಡಗು ಇನ್ನೂ ಕುಣಿತಕ್ಕೆ ಮಹತ್ವ ನೀಡಿದೆ; ಅಲ್ಲದೆ ಅನೇಕ ಅಸಂಗತಗಳಿದ್ದರೂ ಮೂಲ ವೇಷಗಾರಿಕೆಯನ್ನು ಮರೆತಿಲ್ಲ.

೭) ಸಮಯಾವಧಿ: ಆಟದ ಸಮಯಾವಧಿ ಮಾತ್ರ ಯಾವುದೇ ಹ್ರಸ್ವತೆಯನ್ನೂ ಪಡೆಯದೆ ರಾತ್ರಿ ೯ರಿಂದ ಮುಂಜಾವಿನ ವರೆಗೂ ನಡೆದಿದೆ. ನಾಲ್ಕು ಗಂಟೆಗೆ ಇಳಿಸಬೇಕೆನ್ನುವ ಯತ್ನ ಇನ್ನೂ ಸಫಲವಾಗಿಲ್ಲ. ಜನರು ಪೂರ್ತಿ

ಎಚ್ಚರವಾಗಿದ್ದು ನೋಡಬೇಕಾದರೆ ನಾಲ್ಕು ತಾಸಿಗಿಂತ ಹೆಚ್ಚು ಅಗತ್ಯವಿಲ್ಲವೆಂಬ ತೀರ್ಮಾನಕ್ಕೆ ಬಂದರೆ ಯಜಮಾನರು ಅಷ್ಟಕ್ಕೆ ಅದನ್ನು ಇಳಿಸಬಹುದು ಸ್ವಲ್ಪ ಕಾಲ ಹೋದ ಮೇಲೆ.

೯) ಸ್ತ್ರೀ ವೇಷಗಳನ್ನು ಸ್ತ್ರೀಯರೇ ಮಾಡುವ ಕಾಲ ಇನ್ನೂ ಬಂದಿಲ್ಲ. ಕಾರಣ: ಇನ್ನೂ ಯಕ್ಷಗಾನ ಕಲಾವಿದರು ಕಾಯಕಷ್ಟ ಮಾಡಬೇಕಾಗಿದೆ. ಅಷ್ಟೊಂದು ಪರಿಶ್ರಮ, ಪ್ರತಿ ರಾತ್ರಿಯ ಪರಿಶ್ರಮ ಸ್ತ್ರೀಯರಿಗೆ ಸುಲಭ ಸಾಧ್ಯವಿಲ್ಲವೇನೋ. ಪ್ರತಿರಾತ್ರಿ ಎಂಟೊಂಬತ್ತು ತಾಸು ರಂಗಸ್ಥಳದಲ್ಲಿ ದುಡಿಯುವ ಬಲ ಸ್ತ್ರೀಯರಿಗಿಲ್ಲವೇನೋ.

೧೦) ಹೊಸ ಪ್ರಸಂಗಗಳು: ವಿಷಯದ ಬದಲಾವಣೆ ಮಾಡಿಕೊಂಡ ಪ್ರಸಂಗಗಳ ರಚಯಿತರು ಹೆಚ್ಚಾಗಿ ಸ್ವರ ಜ್ಞಾನವುಳ್ಳವರಲ್ಲ. ಆದರೆ ಪ್ರತಿಕೃತಿಯಾಗಿ ಸಾಕಷ್ಟು ಒಳ್ಳೆಯ ಕೃತಿ ರಚಿಸಿದವರೂ ಇದ್ದಾರೆ. ಇವುಗಳನ್ನಾಡುವಾಗ ಕೆಲವೊಮ್ಮೆ ದೇವತೆಗಳು ಕನ್ನಡದಲ್ಲೂ ಭೂತಗಳು ತುಳುವಿನಲ್ಲೂ, ಮಾತನಾಡುವ ಉಭಯ ಭಾಷಾಸುಗಂಧ ಒಂದು ವಿಚಿತ್ರ ಅನುಭವವನ್ನು ಕೊಡಬಲ್ಲದು ಉಭಯ ಭಾಷಾ ವಿಶಾರದರಿಗೆ.

**ಯಕ್ಷಗಾನದ ಗತಿಚಿತ್ರ**

ಹಳ್ಳಿಗಮಾರರ ಕಲೆಯೆಂದು ತಾತ್ಸಾರಕ್ಕೊಳಗಾಗಿದ್ದ ಯಕ್ಷಗಾನಕ್ಕೆ ಸಮಾಜದ ಧುರೀಣರು, ಶಿಕ್ಷಿತರು, ವಿಮರ್ಶಕರು, ಪಂಡಿತ ವರ್ಗದವರು ಮುಂತಾದವರ ಗೌರವವನ್ನು ಹುಟ್ಟಿಸಲು ಕಾರಣಪುರುಷರಾದವರು ಶಿವರಾಮ ಕಾರಂತರೆಂದು ಯಕ್ಷಗಾನದ ಇತಿಹಾಸ ನುಡಿಯುತ್ತದೆ. ಡಾ. ಕಾರಂತರ ಸ್ಪರ್ಶದಿಂದಾಗಿ ಯಕ್ಷಗಾನದ ಸಾಮಾಜಿಕ ಸ್ಥಿತಿ ಹೇಗೆ ಉತ್ತಮಗೊಂಡಿತೋ ಹಾಗೇ ಅದರ ಕಲೋನ್ನತಿಯೂ ಸಾಧಿತವಾಯಿತು ಎಂಬ ಮಾತಿಗೆ ಇತ್ತೀಚೆಗೆ ಕೆಲವರು ಆಕ್ಷೇಪ ಎತ್ತಿ ಹೊರಟಿದ್ದಾರೆ. ಅಂಥವರೂ ಕಾರಂತರು ಯಕ್ಷಗಾನಕ್ಕೆ ಮಾಡಿದ ಸೇವೆಯ ಮಹತ್ವವನ್ನು ಅರಿಯದವರಲ್ಲ. ಈ ಸಮಷ್ಟಿ ಕಲೆಗೆ ಕಾರಂತರು ನೀಡಿದ ಕಾಯಕಲ್ಪ ಚಿಕಿತ್ಸೆಯೂ ಸಮಷ್ಟಿರೂಪದಲ್ಲೇ ಇದೆ. ಒಂದು ಸಂಸ್ಥೆ ಮಾಡುವಷ್ಟು ಕೆಲಸವನ್ನು ಕಾರಂತರೊಬ್ಬರೇ ತಮ್ಮ ಸ್ವಂತ ಕಾಯಕದಿಂದಲೂ, ಸ್ವಂತ ಬಲದಿಂದಲೂ, ಮುಖ್ಯವಾಗಿ ಸ್ವಪ್ರತಿಭೆಯಿಂದಲೂ ಕೈಗೂಡಿಸಿದರೆಂದರೆ ಯಾರಿಗೂ ಆಶ್ಚರ್ಯವಾಗಬೇಕು. ಅನುಭವೀ ಕಲಾವಿದರನ್ನು ಈಗ್ಗೆ ಮೂವತ್ತು ವರ್ಷಗಳಿಂದಲೂ ಕರೆದು, ಮನ್ನಿಸಿ, ಅವರೊಡನೆ ವಿಚಾರ ವಿನಿಮಯ ನಡೆಸಿ, ರಾಗಸ್ವರಗಳನ್ನು ನಿರ್ದಿಷ್ಟಗೊಳಿಸಿ, ವೇಷಗಳನ್ನು ಸಂಪ್ರದಾಯದ ಚೌಕಟ್ಟಿನೊಳಗೇ ನಿಲ್ಲಿಸಿ, ಅಮುಖ್ಯ ವೇಷಗಳಿಗೆ ಸಲ್ಲುವ ಉಡುಗೆತೊಡುಗೆ ಸೃಷ್ಟಿಸಿ, ಪರಂಪರೆಯಲ್ಲಿ ಒತ್ತುಬೀಳದ ಭಾವನೆಗಳಿಗೆ ಸಮನಾದ ಸಂಗೀತ ಶೈಲಿಯನ್ನು ಭಾಗವತರಲ್ಲಿ ಹೊಂದಿಸಿ ಎಲ್ಲಕ್ಕೂ ಮಿಗಿಲಾಗಿ ಶ್ರೀಮಂತ ಯಕ್ಷಗಾನದ ಪಾರಂಪರಿಕ ಭೂಮಿಕೆಯ ಎಲ್ಲೆಯೊಳಗೆ ಪರಮ ಸುಂದರವಾದ ರಂಗ ಚಲನೆಗಳನ್ನು ಸೃಷ್ಟಿಸಿ, ಯಕ್ಷಗಾನದ ಸಾಂಪ್ರದಾಯಿಕ ಸುವರ್ಣದ ಚೌಕಟ್ಟಿನಲ್ಲಿ ತಮ್ಮ ನೃತ್ಯನಾಟಕದ ಅಸಾಮಾನ್ಯ ಚಿತ್ರವನ್ನು ಬರೆದವರು ಡಾ. ಶಿವರಾಮ ಕಾರಂತರು.

ಸಂಗೀತದಲ್ಲಿರುವ ಕನ್ನಡ ಮಾತು ಕನ್ನಡಿಗರಿಗೆ ಸಾಕೆಂದೂ, ಅದರೊಳಗಿನ ಸಂಗೀತಾಂಶ ಉಳಿದವರಿಗೆ ಸಾಕೆಂದೂ ವಾದಿಸುವ ಕಾರಂತರು ತಮ್ಮ ನಟರ ಬಾಯಿ ಮುಚ್ಚಿಸಿ ಕೇವಲ ಅಭಿನಯ ಮತ್ತು ನೃತ್ಯಗಳಿಂದಲೇ ಭಾವರಸಪೋಷಣೆ ಮಾಡುವುದನ್ನು ಕಲಿಸಿದ್ದಾರೆ. ಕಲಾವಿದರು ಅದನ್ನು ಕಲಿತು ಯಕ್ಷಗಾನ ಪ್ರದೇಶದ ಹೊರಗಿನ ಭಾರತದ ರಾಜ್ಯಗಳಲ್ಲಿ ಅಪಾರ ರಸಿಕವೃಂದವನ್ನು ಗಳಿಸಿದ್ದಾರೆ. ೧೯೩೨ರಲ್ಲೇ ತೊಡಗಿದ ಕಾರಂತರ ಈ ತಪಸ್ಸು ಫಲಿಸಿದ್ದು ಇತ್ತೀಚೆಗೆ. ೧೯೭೧ರಲ್ಲಿ ಉಡುಪಿಯಲ್ಲಿ ಒಂದು 'ರಾಷ್ಟ್ರೀಯ ಯಕ್ಷಗಾನ ಕೇಂದ್ರದ ಸ್ಥಾಪನೆ. ೧೯೭೫ರಲ್ಲಿ 'ಯಕ್ಷರಂಗ'ದ ಸಂಘಟನೆ ಈ ಎರಡಕ್ಕೂ ಇಂಡಿಯಾ ಸರ್ಕಾರದ ನೆರವು ದೊರೆತು ಕರ್ನಾಟಕದ (ಹೆಚ್ಚಾಗಿ ಜನಜನಿತ ದಕ್ಷಿಣೋತ್ತರ ಕನ್ನಡಗಳ) ಸೊತ್ತಾಗಿದ್ದ ಯಕ್ಷಗಾನ ಇಂದು ಅಖಿಲ ಭಾರತೀಯ ರಂಗಭೂಮಿಯ ಒಂದು ಪ್ರಮುಖ ಶಕ್ತಿಶಾಲಿ ಅಂಗಭಾಗವೆಂದು ಸಕಲ ಭಾರತಕ್ಕೂ ತಿಳಿದಿದೆ. ೧೯೭೫–೭೮ರ ಅವಧಿಯಲ್ಲಿ ಭಾರತದ ಆರು ರಾಜ್ಯಗಳಲ್ಲಿ ಒಟ್ಟು ೧೫೫ ಪ್ರದರ್ಶನಗಳನ್ನು ನೀಡಿದ "ಯಕ್ಷರಂಗ" ಮೇಳಾಲಯದಿಂದ ತಮಿಳುನಾಡಿನವರೆಗಿನ ರಸಿಕರ ಮನ ತಣಿಸಿ ಬಂದಿರುತ್ತದೆ. ಫ್ರೆಂಚ್ ಕಲಾವಿದರೊಬ್ಬರು ಯಕ್ಷರಂಗದ 'ನಳದಮಯಂತಿ' ಪ್ರಸಂಗವನ್ನು ನೋಡಿ, ಇದು ಇಂದು ಭಾರತದಲ್ಲಿ ಲಭ್ಯವಾಗುವ ನೃತ್ಯನಾಟಕಗಳಲ್ಲಿ ಪರಮಶ್ರೇಷ್ಠವಾದದ್ದೆಂದು ಅಭಿಪ್ರಾಯ ಕೊಟ್ಟಿದ್ದಾರೆ. ಮುಂಬಯಿಯ ಮತ್ತು ಮದರಾಸಿನ ಪ್ರಮುಖ ದೈನಿಕಗಳು ಮುಕ್ತಕಂಠದಿಂದ ಪ್ರಶಂಸೆ ಮಾಡಿವೆ. ಜಾಗತಿಕ ರಂಗಭೂಮಿಯ ಒಳಹೊರಗನ್ನು ಬಲ್ಲ ಅನೇಕ ವಿದ್ವಾಂಸರು ಕಾರಂತರ ಸೃಷ್ಟಿ ಯಕ್ಷಗಾನದ ಭವಿಷ್ಯವನ್ನು ಉಜ್ವಲಗೊಳಿಸಿ ವಿಶ್ವದ ರಂಗವೇದಿಕೆಯಲ್ಲಿ ನಿಲ್ಲಿಸ ಬಲ್ಲ ಸಮರ್ಥ ಪ್ರಯೋಗವೆಂಬುದಾಗಿ ಕೊಂಡಾಡಿದ್ದಾರೆ. ಬಹಳ ಹಿಂದೆ ಕಾರಂತರು ಸೃಷ್ಟಿಸಿದ 'ಗಯಚರಿತ್ರೆ' ಎಂಬ ನೃತ್ಯ ನಾಟಕವನ್ನು ನೋಡಿದ ಅಮೆರಿಕನ್ ವಿದುಷಿ ಶ್ರೀಮತಿ ಮಾರ್ತಾ ಆ್ಯಷ್ಟನ್ 'ಯಕ್ಷಗಾನ'ದ ಬಡಗುತಿಟ್ಟಿನ ಸೌಂದರ್ಯವೇನೆಂದು ನನಗೆ ಕಾರಂತರ ಈ ನಾಟಕ ನೋಡಿದಾಗ ತಿಳಿಯಿತು. ಅದರ ನೃತ್ಯ ಮತ್ತು ವೇಷ ಭೂಷಣಗಳ ನಡುವೆ ನಾನೊಂದು ಕಲ್ಪನಾ ಲೋಕದಲ್ಲಿ ವಿಹರಿಸುತ್ತಿದ್ದೆ. ಇಂಥ ಕಲೆ ಪತನೋನ್ಮುಖವಾಗುತ್ತಿದೆ ಎಂದಾಗ ನನಗೆ ದುಃಖವಾಯಿತು. ಅದರಲ್ಲಿರುವ ಒಂದೊಂದು ಅಂಗವೂ ಸಂಗೀತ, ನೃತ್ಯ, ಸಂವಾದ ಪ್ರತ್ಯೇಕವಾಗಿ ಕಲಾಸಾಧ್ಯತೆ ಬೆಳೆಸಬಲ್ಲಂಥಾದ್ದು. ಅಂದಾಗ ಇವೆಲ್ಲ ಮೇಳವಿಸಿದರೆ ಆ ಸೃಷ್ಟಿ ಎಷ್ಟು ಮಹೋನ್ನತವಾಗಿರಬೇಕು" ಎಂದು ಉದ್ಗಾರ ತೆಗೆದದ್ದುಂಟು.

ಕಾರಂತರ ಬ್ಯಾಲೆಯಲ್ಲಿ ಸಂಪ್ರದಾಯದ ಪ್ರಸಂಗವಿದೆ, ಸಂಪ್ರದಾಯದ್ದೇ ಭಾಗವತರಿದ್ದಾರೆ, ಸಂಪ್ರದಾಯ ಮೂಲವಾದ ನೃತ್ಯದ ತರಂಗವಿಸ್ತಾರವಿದೆ, ಅಭಿನಯದ ಆವರ್ತವಿದೆ; ನೃತ್ಯದ ವೈವಿಧ್ಯವಿದೆ. ಅರ್ಥವಾಗುವುದಿಲ್ಲ ಎಂಬುದು ಇನ್ನೊಂದು ಆಕ್ಷೇಪ. ಮಾತು ಮಾತ್ರ ಅರ್ಥವೋ ಹಾಗಾದರೆ ವೀಣಾವಾದನಕ್ಕೋ, ವೇಣುವಾದನಕ್ಕೋ ಅರ್ಥವೇನು? ಸಂಗೀತದ ಆಲಾಪ ಸಂಚಾರಗಳಿಗೆ ಅರ್ಥವೇನು?

ಯಕ್ಷರಂಗದ ಕಲಾವಿದನಿಗೆ ಕಾರಂತರು ಒದಗಿಸಿರುವ ಸೃಷ್ಟಿ ಶೀಲತೆಯ ಪಾಠದಿಂದ ಆತನಲ್ಲಿ ಕಲಾವಿಷ್ಕಾರವಾಗಿದೆ. ಆತ ಬೆಳೆಯುತ್ತಿದ್ದಾನೆ. ಸೃಷ್ಟಿಮುಖವಾಗಿ, ಒಬ್ಬ ಸಾಮಾನ್ಯ ಹಳ್ಳಿಯ ಕಲಾವಿದನನ್ನು ಶ್ರೇಷ್ಠ ನೃತ್ಯಾಭಿನಯ ವಿಶಾರದನಾಗಿ ಮಾಡಿದ ಕಾರಂತ ಸ್ಪರ್ಶ, ಮಡುಗಟ್ಟಿದ ಪರಂಪರೆಯನ್ನು ನವೀಕರಿಸಿದ ಸಂಜೀವಿನಿ ಎಂದು ಅಖಿಲಭಾರತ ಒಪ್ಪಿಕೊಳ್ಳುತ್ತದೆ. ಸಾಂಪ್ರದಾಯಿಕ ಯಕ್ಷಗಾನದ ಪರಿಕರಗಳನ್ನೇ ಸಮುಚಿತವಾಗಿ ಬಳಸಿ ಕಾರಂತರು ವಿರಚಿಸಿದ ಪರಿಣಾಮ ರಮಣೀಯವಾದ ನೃತ್ಯನಾಟಕ ಪದ್ಧತಿ ಸೌಂದರ್ಯವೇತ್ತರಿಂದ ಈಗಾಗಲೇ ಸ್ವೀಕೃತವಾಗಿರುವುದು ಕರ್ನಾಟಕಕ್ಕೆ ಹೆಮ್ಮೆಯ ವಿಷಯ.

# ಕನ್ನಡ ರಂಗಭೂಮಿ

ಡಾ. ಹೆಚ್. ಕೆ. ರಂಗನಾಥ್

**ಅರಿವಿನ ಕೊರತೆ**

ಕನ್ನಡ ನಾಡು ಶತಶತಮಾನಗಳಿಂದ ಲಲಿತಕಲೆಗಳನ್ನು ಆಸ್ಥೆಯಿಂದ ಬೆಳೆಸಿಕೊಂಡ ನೆಲ. ಕರ್ನಾಟಕ ಸಂಗೀತ, ಕರ್ನಾಟಕ ಶಿಲ್ಪ ತಮ್ಮ ಪರಂಪರಾನುಗತ ವೈಭವ ಉತ್ಕೃಷ್ಟತೆಗಳಿಂದ ಜಗತ್ತನ್ನೇ ಬೆರಗುಗೊಳಿಸಿವೆ. ಹನುಮ ಹುಟ್ಟಿದ ಈ ನಾಡು ದೇವದೇವತೆಗಳ ಆಡುಂಬೊಲ. ದಾರ್ಶನಿಕರೂ ಲೆಕ್ಕಿಗ ಮಿತಾಕ್ಷರರೂ ಬೆಳೆದು ಮೆರೆದ ನಾಡು. ಜಕ್ಕಣನ ಶಿಲ್ಪಕಲೆಯಂತಹ ಅದ್ಭುತ ರಮ್ಯ ಸೃಷ್ಟಿಗೆ ಆಶ್ರಯದಾತರಾಗಿ ಓಜೆಯಿಂದ ಮೆರೆದ ಅರಸುಗಳ ಬೀಡು. ಪಾವನೆಯರಾದ ಕೃಷ್ಣೆ ಭೀಮೆಯರು ಕಾವೇರಿ ಗೋದೆಯರು ಹರಿದು ನೆಲಕ್ಕೆ ನೀರುಣಿಸಿ ಹಸಿರು ಹಬ್ಬಿದ ನಲುನಾಡು. ನೂರಾರು ದೇಗುಲಗಳು, ಹತ್ತಾರು ಗಿರಿಗಳು, ಶೃಂಗತರಂಗಗಳು, ಕರಾವಳಿಯ ಆ ಗುಡುಗು, ಸಿಡಿಲು, ಭೋರೆಂಬ ಆ ಮಳೆ, ಪ್ರಕೃತಿ ಮಾತೆ ಮೈದುಂಬಿ ನಿಂತ ಈ ನೆಲ ಹಾಡುಪಾಡುಗಳಿಗೆ, ದೇವದೇವತೆಗಳ ಕುಣಿತ ಮಣಿತಕ್ಕೆ, ಚಿತ್ರಕ್ಕೆ, ನೃತ್ಯಕ್ಕೆ, ಶಿಲ್ಪಕ್ಕೆ, ಸಂಗೀತಕ್ಕೆ ಮಾತೃಸ್ಥಾನ. ಈ ಎಲ್ಲಾ ಕಲೆಗಳ ಸಂಗಮ ಕ್ಷೇತ್ರವಾದ ಈ ನೆಲ ತನ್ನದೇ ವೈಶಿಷ್ಟ್ಯಪೂರ್ಣವಾದ ರಂಗಭೂಮಿಯನ್ನು ಸಾವಿರಾರು ವರ್ಷಗಳ ಕಾಲದಿಂದ ಬೆಳೆಸಿಕೊಂಡು ಬಂದಿದೆ. ಸುತ್ತಮುತ್ತಣ ಪ್ರಾದೇಶಿಕ ರಂಗಭೂಮಿ ವಿಶೇಷವಾದ ಪ್ರಭಾವ ಬೀರಿದೆ. ಇಲ್ಲಿಯ ನಾಯಕನಟರು ತಮ್ಮ ಮಂಡಳಿಗಳೊಡನೆ ನಾಟಕವಾಡುತ್ತಾ ಹತ್ತು ಹಲವಾರು ಬಾರಿ ದಕ್ಷಿಣ ಭಾರತದಲ್ಲಿ ಪ್ರವಾಸ ಮಾಡಿದ್ದಾರೆ.

ನಮ್ಮ ಜಾನಪದ ರಂಗಭೂಮಿಯ ಯಕ್ಷಗಾನ, ವೃತ್ತಿ ರಂಗಭೂಮಿಯ ಪೌರಾಣಿಕ, ಐತಿಹಾಸಿಕ ನಾಟಕಗಳು, ವಿಲಾಸೀ ರಂಗಭೂಮಿಯ "ಬುದ್ಧಿಯ ನಾಟಕ"ಗಳು ಹೊರಗಿನವರ ಮನಸ್ಸನ್ನು ಸೆರೆ ಹಿಡಿದು ಕಟ್ಟಿವೆ ಎಂಬುದು ಸತ್ಯದ ಮಾತಾದರೂ, ನಮ್ಮ ನಾಟ್ಯ ಕಲೆಯ ಬಗೆಗೆ ನಾವು ಬರೆದು ತಿಳಿಸುವ ಹವ್ಯಾಸಕ್ಕೆ ಹೋಗಲಿಲ್ಲ. ನಮ್ಮ ರಂಗಕಲೆಯ ಸಿರಿಸಂಪತ್ತನ್ನು ಕಂಡ ಹೊರಗಿನವರೂ ಈ ಬಗೆಗೆ ಬರೆಯಲಿಲ್ಲ ಎಂಬುದು ಆಶ್ಚರ್ಯದ ಮಾತು. ನಮ್ಮ ಶಿಲ್ಪಕಲೆ ಮೈ ಅರಳಿಸಿ ನಿಂತು ಜಗತ್ತನ್ನೇ ಆಹ್ವಾನಿಸಿ ಬೆರಗು ಮಾಡುತ್ತಿರುವುದರಿಂದ ನಮ್ಮ ಸಂಗೀತ ತನ್ನ ಉತ್ಕೃಷ್ಟತೆಯಿಂದಾಗಿ ಜಗತ್ತಿಗೇ ಒಂದು ಸವಾಲು ಹಾಕಿ ನಿಂತಿರುವುದರಿಂದ ಅವುಗಳನ್ನು ಕಡೆಗಣಿಸಲು ಸಾಧ್ಯವೇ ಇಲ್ಲ. ಆದರೆ ನಮ್ಮ ನಾಟ್ಯಕಲೆಯ ಕತೆ ಬೇರೆಯದು.

ಹೊರಗಿನವರು ಒಂದು ದಿನ ಇಲ್ಲಿ ಬಂದಾಗ, ಒಂದು ನಾಟಕ ನೋಡಸಿಗದಿದ್ದರೆ ಇಲ್ಲಿ ರಂಗಭೂಮಿಯೇ ಇಲ್ಲ, ಎಂಬ ತಾತ್ಪರ್ಯಕ್ಕೆ ಬಂದಂತಿದೆ. ಅದರಿಂದ ಭಾರತೀಯ ರಂಗಭೂಮಿಯ ಬಗೆಗೆ ಇಂಗ್ಲೀಷಿನಲ್ಲಿ ಮೊದಲು ಬರೆದು ಬಂದ ಹತ್ತಾರು ಪುಸ್ತಕಗಳಲ್ಲಿ ಉಳಿದೆಲ್ಲ ಪ್ರಾದೇಶಿಕ ಹಾಗೂ ಭಾಷಾ ರಂಗಭೂಮಿಗಳ ಬಗೆಗೆ ವಿವರವಾದ ಒಕ್ಕಣೆ ಇದ್ದರೂ, ಕನ್ನಡ ರಂಗ ಮಂಚದ ಬಗೆಗೆ ಮಾತಿಲ್ಲ. ವಿಷಯವನ್ನು ಹೇಗೋ ಹೆಕ್ಕಿ ಒಂದೆರಡು ಮಾತು ಬರೆದವರು ತಪ್ಪು ತಪ್ಪೇ ಬರೆದಿದ್ದಾರೆ. ಮಲ್ಕರಾಜ ಆನಂದ ಅವರು ಬರೆದು ಇಂಗ್ಲೆಂಡಿನಲ್ಲಿ ಪ್ರಕಟಿಸಿದ "ದಿ ಇಂಡಿಯನ್ ಥಿಯೇಟರ್" ಎಂಬ ಪುಸ್ತಕದಲ್ಲಿ ಕನ್ನಡ ನಾಟ್ಯಕಲೆಯ ಬಗೆಗೆ ಒಂದೂ ಮಾತಿಲ್ಲ. ಡಾ. ಆರ್. ಕೆ. ಯಾಜ್ಞಿಕ್ ಅವರು ೧೯೩೩ರಲ್ಲಿ ಬರೆದ "ದಿ ಇಂಡಿಯನ್ ಥಿಯೇಟರ್" ಎಂಬ ಪುಸ್ತಕದಲ್ಲಿ ಕನ್ನಡ ಜಾನಪದ ರಂಗಭೂಮಿಯ ಮುಖ್ಯ ಪ್ರಕಾರವಾದ ಭಾಗವತರ ಆಟವೇ ಮರಾಠೀ ವೃತ್ತಿರಂಗಭೂಮಿಯ ಹುಟ್ಟಿಗೆ ಕಾರಣವಾಯಿತೆಂಬ ಮಾತನ್ನು ಉಲ್ಲೇಖಿಸಿದ್ದರೂ, "ಕನ್ನಡ ರಂಗಭೂಮಿ ಮೈಸೂರು ಪಟ್ಟಣದಲ್ಲಿದೆ" ಎಂಬ ಅಭಿಪ್ರಾಯದ ಮಾತನ್ನು ಬರೆದುದರಿಂದ ಕರಾವಳಿಯ ಅದ್ಭುತ ರಮ್ಯವಾದ ಜಾನಪದ ರಂಗಭೂಮಿಗೂ ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯ ಪ್ರಭಾವಶಾಲೀ ಪರಂಪರೆಗೂ ಅನ್ಯಾಯವಾಗಿದೆ. ಮೇಲಾಗಿ ಅವರು ಕನ್ನಡ ನಾಟ್ಯಕಲೆಯನ್ನು "ಮದರಾಸು ರಂಗಭೂಮಿ" ಎಂದು ತಪ್ಪಾಗಿ ಭಾವಿಸಿ ಬರೆದಿದ್ದಾರೆ.

ತಪ್ಪು ಅರ್ಥ ಕೊಡುವ ಅವರ ಇನ್ನೊಂದು ಮಾತು ಎಂದರೆ, ದಕ್ಷಿಣ ಭಾರತದಲ್ಲಿ ಕನ್ನಡ ನಾಟ್ಯಕಲೆ ಅತ್ಯಂತ ಎಳೆಯದು ಎಂಬುದು. ಈ ಎಲ್ಲಕ್ಕಿಂತ ಹಾಸ್ಯಾಸ್ಪದವಾದ ಉಲ್ಲೇಖ, ಹೇಮೇಂದ್ರನಾಥ ಗುಪ್ತರ "ದಿ ಇಂಡಿಯನ್ ಸ್ಟೇಜ್" ಎಂಬ ಗ್ರಂಥದಲ್ಲಿದೆ. ದಾಸಗುಪ್ತರು ಐದು ಭಾಗಗಳಲ್ಲಿ ತಮ್ಮ ಮಹಾ ಗ್ರಂಥವನ್ನು ಪ್ರಕಟಿಸಿದರು. ಮುಖ್ಯವಾಗಿ ಬಂಗಾಳದ ರಂಗಭೂಮಿಯ ಬಗೆಗೆ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿದರು. ಆದರೂ ಭಾರತದ ಪ್ರಾದೇಶಿಕ ರಂಗಭೂಮಿಗಳ ಬಗೆಗೆ ಸಂಕ್ಷಿಪ್ತ ವಿಚಾರಗಳನ್ನು ಸಂಗ್ರಹಿಸಿ ಪ್ರಕಟಿಸುವಲ್ಲಿ ಕನ್ನಡ ರಂಗಭೂಮಿಯ ವಿಷಯಕ್ಕೆ ಅವರು ಬರೆದ ಒಂದೇ ಮಾತು ಎಂದರೆ "ದಿ ಕೇರಳ ಸ್ಟೇಜ್ ಆಫ್ ಮೈಸೂರ್ ಈಸ್ ನೌ ಮೇಕಿಂಗ್ ಪ್ರೊಗ್ರೆಸ್ ಥ್ರೂ ದಿ ಪ್ಯಾಟ್ರೋನೇಜ್ ಆಫ್ ದಿ ರೂಲಿಂಗ್ ಪೀಪಲ್" (ದಿ ಇಂಡಿಯನ್ ಸ್ಟೇಜ್ ೧೯೪೪. ಭಾಗ ೪, ಪುಟ ೨೪೬) ಎಂಬುದು.

ಹೀಗೆಂದರೆ ನಮ್ಮ ರಂಗಭೂಮಿಯ ಬಗೆಗೆ ಮಾಹಿತಿಯೇ ಇಲ್ಲ ಎಂಬ ಅರ್ಥವಲ್ಲ. ಕನ್ನಡ ಕಾವ್ಯಗಳು "ನಾಟಕ" ಎಂಬ ಮಾತನ್ನು ಅಡಿಗಡಿಗೂ ಉಪಯೋಗಿಸಿ ವಿವರ ಕೊಡುವ ಸಂದರ್ಭವನ್ನು ಪರಿಶೀಲಿಸಿದಾಗ ಪ್ರಾಚೀನ ಕನ್ನಡ ನಾಟ್ಯ ಕಲೆಯ ರೂಪರೇಖೆಗಳು ಕಣ್ಣ ಮುಂದೆ ಬರುತ್ತವೆ. ಗೋವಿಂದ ಪೈ ಅವರೂ ಮುಳಿಯ ತಿಮ್ಮಪ್ಪಯ್ಯ, ತಿ. ತಾ. ಶರ್ಮ, ಕೆ.ಜಿ. ಕುಂದಣಗಾರ, ಕಾರಂತ ಮೊದಲಾದವರೂ, ಪ್ರಾಚೀನ ಕನ್ನಡ ನಾಟಕ ಪರಂಪರೆಯ ಬಗೆಗೆ ಮಾಡಿದ ಸಂಶೋಧನೆಗಳು ಹೊಸ ಬೆಳಕು ಚೆಲ್ಲುತ್ತಿವೆ. ಕನ್ನಡ ಸಾಹಿತ್ಯ ಸಮ್ಮೇಳನಗಳ ಅಂಗವಾಗಿ ವರ್ಷ ವರ್ಷವೂ ನಡೆಯುತ್ತಿರುವ ನಾಟಕ ಗೋಷ್ಠಿಗಳ ಅಧ್ಯಕ್ಷ ಭಾಷಣಗಳೂ, ಗುಬ್ಬಿ ನಾಟಕ ಸಂಸ್ಥೆಯವರು ಪ್ರಕಟಿಸಿದ ಉತ್ಸವ ಗ್ರಂಥಗಳೂ ಟಿ. ರಾಘವ ಅವರ ಪ್ರಚಾರೋಪನ್ಯಾಸವೂ "ರಂಗಭೂಮಿ", "ಕಲಾ" ಪತ್ರಿಕೆಗಳೂ ನಮ್ಮ ನಾಟಕ ಕಲೆಯ ಬಗೆಗೆ ಆಶ್ಚರ್ಯಕರವಾದ ಗಟ್ಟಿ ಮಾಹಿತಿಯನ್ನು ಒದಗಿಸಿವೆ. ಕನ್ನಡ ರಂಗಭೂಮಿಯ ಸಲುವಾಗಿ ೧೯೨೮ರಿಂದ ೧೯೩೭ರವರೆಗೆ ಮೀಸಲು ನಿಂತ ರಂಗಭೂಮಿ ಮಾಸಿಕ ಪತ್ರಿಕೆಯ ಪುಟಗಳು ಆ ಕಾಲದ ರಂಗಭೂಮಿಯ ಚಿತ್ರವನ್ನೂ ನಾಟಕಗಳ ವಿಮರ್ಶೆಗಳನ್ನೂ ಕೊಟ್ಟಿವೆ. ಈ ಎಲ್ಲವನ್ನೂ ಅವಲೋಕಿಸಿದಲ್ಲಿ ಆ ಕಾಲದಲ್ಲಿಯೇ ನಿಂತು ಆ ಸಮಯದ ರಂಗಭೂಮಿಯ ಕಲ್ಪನೆಯನ್ನು ಮಾಡಿಕೊಂಡಲ್ಲಿ, ಮಧ್ಯ ಮಧ್ಯ ಅನಿವಾರ್ಯವಾಗಿ ಬರುವ ಅಂತರಗಳನ್ನು ಊಹಿಸಿ ಹಣೆದಲ್ಲಿ, ನಮ್ಮ ರಂಗಭೂಮಿ ಕನ್ನಡ ನಾಟ್ಯಕಲೆ ಮತ್ತು ನಮ್ಮ ನಟರು ಹಾಗೂ ನಾಟಕಗಳನ್ನು ಕುರಿತು ತುಂಬ ಅಭಿಮಾನವೆನಿಸುತ್ತದೆ.

### ಕವಲು ರಂಗ

ಕನ್ನಡ ರಂಗಭೂಮಿ ಮೊದಲಿಗೆ ಎರಡು ಶಾಖೆಗಳಲ್ಲಿ ಬೆಳೆದು ಬಂದದ್ದು. ಒಂದು ರಾಜಾಶ್ರಯದ ರಂಗಭೂಮಿ, ಎರಡನೆಯದು ಜನಪದ ರಂಗಭೂಮಿ. ಅರಮನೆಯಲ್ಲಿ ಬೆಳೆದು ಬಂದ ರಂಗಭೂಮಿಯ ಕತೆಯನ್ನು ಅವಲೋಕಿಸುವಲ್ಲಿ "ನಾಟಕಶಾಲೆ" ಮತ್ತು ನಾಟಕ ಎಂಬ ಮಾತುಗಳು ಕನ್ನಡ ಸಾಹಿತ್ಯದಲ್ಲಿ ಶಿಲಾಶಾಸನಗಳಲ್ಲಿ ಸಾವಿರ ವರ್ಷಗಳಿಂದ ಕಾಣಸಿಗುತ್ತದೆ. ನಾಟಕ ಶಾಲೆ ಎಂಬ ಮಾತು ಮೊದಲಿಗೆ ಕಂಡು ಬಂದದ್ದು ಕ್ರಿ.ಶ. ೧೦೪೫ರಲ್ಲಿ ಕೊರೆದು ಧಾರವಾಡದ ಹತ್ತಿರದ ಮುಗದ ಗ್ರಾಮದಲ್ಲಿ ನಿಲ್ಲಿಸಿರುವ ಶಿಲಾಫಲಕ. ಅದರಲ್ಲಿನ ಒಕ್ಕಣೆ ಹೀಗೆ: "ಶ್ರೀಮನ್ಮಹಾಸಾಮನ್ತಂ ಮಾರ್ತಾನ್ಡಯ್ಯಂ ತಮ್ಮ ಮುತ್ತಯ್ಯಂ ಮಾಡಿಸಿದ ಬಸದಿಯಂ ಪಡಿಸಲಿಸಿ ನಾಟಕ ಶಾಲೆಯಂ ಮಾಡಿಸಿ, ತನ್ನ ಕೀರ್ತಿ ಶಿಲಾಸ್ತಂಭಮಂ ಆಚಂದ್ರಾರ್ಕ ತಾರಂಬರಂ ನಿಲಿಸಿದಂ"

ಇಂತಹ "ನಾಟಕ ಶಾಲೆ"ಗಳಲ್ಲಿ ಅಭಿನಯಗೊಳ್ಳುತ್ತಿದ್ದ "ನಾಟಕ"ಗಳ ಮಾತು ಕನ್ನಡ ಪ್ರಾಚೀನ ಸಾಹಿತ್ಯದಲ್ಲಿ ಅಡಿಗಡಿಗೂ ಕಂಡುಬರುತ್ತದೆ. ಈ ನಾಟಕ ಪ್ರದರ್ಶನದ ರೂಪರೇಖೆಗಳನ್ನು ಕುರಿತು ಕೂಲಂಕಷವಾಗಿ ವಿವೇಚಿಸಿದಾಗ ಅದು ಆಡುಮಾತನ್ನು ಒಳಗೊಳ್ಳದೆ ನೃತ್ಯ ಪ್ರಧಾನವಾದ ಅಭಿನಯ ಪೂರ್ಣವಾದ ಪ್ರದರ್ಶನ ಎನಿಸುತ್ತದೆ. "ಭರತೇಶ ವೈಭವ"ದ ನಾಟಕ ಸಂಧಿಯಲ್ಲಿಯ ಪ್ರದರ್ಶನಗಳಂತೆ. ನಾಟಕ ನಿಜವಾಗಿ ನೃತ್ಯ ನಾಟಕ. ಕೇರಳದ ಕಥಕ್ಕಳಿಯಂತೆ. ಭಾಗವತನಾದ ನಾಟಕ ಪಂಡಿತನ ಗೀತಾ ಪ್ರಬಂಧವನ್ನು ಅರ್ಥೈಸುತ್ತಾ ಪ್ರೇಕ್ಷಕನ ಮನಸ್ಸನ್ನು ಸೂರೆಗೊಳ್ಳುವಂಥ ಕಲಾಪ್ರದರ್ಶನ. ಅಭಿನವ ಮಂಗರಾಜ ಕ್ರಿ. ಶ. ೧೩೯೮ರಲ್ಲಿ ರಚಿಸಿದ "ಅಭಿನವಾಭಿದಾನ" ಎಂಬ ನಿಘಂಟಿನಲ್ಲಿ "ನಾಟಕ" ಎಂಬ ಮಾತಿನ ಖಚಿತವಾದ ಅರ್ಥವನ್ನು ಹೀಗೆ ಉಲ್ಲೇಖಿಸಿದ್ದಾನೆ: "ನೃತ್ಯದೊಳು ಹಸ್ತಾಂಗ ದೃಷ್ಟಿಗತಿ ಪದ್ಧತಿಯೊಳಾಡೆ ನಾಟಕಮೆನಿಕ್ಕುಂ".

ರಾಜಾಶ್ರಯದಲ್ಲಿ ಹೀಗೆ ಬೆಳೆದು ಬಂದ ನಾಟಕದ ಸಂಪ್ರದಾಯ ಮೈಸೂರಿನ ಅರಮನೆಯಲ್ಲಿಯೂ ಪುಷ್ಟಿಗೊಂಡಿತು. ೧೮೧೨ರಲ್ಲಿ ಮುಮ್ಮಡಿ ಕೃಷ್ಣರಾಜರು ಧರ್ಮಸ್ಥಳದಿಂದ ಬರಮಾಡಿಕೊಂಡ ದಶಾವತಾರದ ಮೇಳ ಅರಮನೆಯ ಆಶ್ರಯದಲ್ಲಿಯೇ ನಿಂತು ಹೆಸರಾಂತ ಗಾಯಕ ಬಿಡಾರ ಕೃಷ್ಣಪ್ಪನವರ ನಿರ್ದೇಶನದಲ್ಲಿ ಏಕಪ್ರಕಾರವಾಗಿ ಪ್ರದರ್ಶನಗಳನ್ನು ಕೊಟ್ಟಿದ್ದುಂಟು. ಮುಂದೆ ೧೮೮೪ರಿಂದ ಈಚೆಗೆ ಪಾರ್ಸಿ ಮತ್ತು ಮರಾಠಿ ಮಂಡಳಿಗಳಿಗೂ ಅರಮನೆಯ ಆಶ್ರಯದಲ್ಲಿ ನಾಟಕಗಳನ್ನು ಅಭಿನಯಿಸಿದಾಗ, ಮೊದಲಿನಿಂದ ಬಂದಿದ್ದ ಭಾಗವತರಾಟಕ್ಕೆ ಹೊಸದೊಂದು ಆಯಾಮ ಸಿಕ್ಕಿ, ಅರಮನೆಯ ನಾಟಕದ ಹುಟ್ಟಿಗೆ ಕಾರಣವಾಯಿತು. ಅರಮನೆಯ ರಂಗಭೂಮಿ ಜನಸಾಮಾನ್ಯರ ನಿಲುಕಿಗೆ ಮೀರಿದ್ದು. ಪಂಡಿತರ, ಅಧಿಕಾರಿಗಳ, ಆಹ್ವಾನಿತರ ಮನರಂಜನೆಗೆ ಮೀಸಲಾದದ್ದು

ಇದಕ್ಕೆ ವ್ಯತಿರಿಕ್ತವಾಗಿ ಜನಸಾಮಾನ್ಯರ ನಿಲುವಿನಲ್ಲಿ ಬೆಳೆದುಬಂದ ಪ್ರದರ್ಶನ ಪರಂಪರೆ ಎಂದರೆ ಜಾನಪದ ರಂಗಭೂಮಿ. ಅಲ್ಲಿನ ದಾಸರಾಟ, ರಾಜಾನ್ ಆಟ, ಬಯಲಾಟ, ಕೃಷ್ಣ ಪಾರಿಜಾತ, ಸಣ್ಣಾಟ, ಯಕ್ಷಗಾನ, ತಾಳಮದ್ದಲೆ ಮೊದಲಾದವು ಕನ್ನಡ ಭೂಮಿಯ ವೈಭವವನ್ನು ಮೈ ಉಂಡು ಜನ ಸಾಮಾನ್ಯರ ಮೈಮರೆಯಿಸುತ್ತಿದ್ದ ಕಲಾ ಪ್ರಕಾರಗಳು.

### ವೃತ್ತಿ ರಂಗ

ಈ ಎರಡು ಪ್ರದರ್ಶನಗಳ ಪ್ರಕಾರಗಳ ನಡುವೆ ಈ ಶತಮಾನದ ಮೊದಲ ಭಾಗದಲ್ಲಿ ಹುಟ್ಟಿ ಬೆಳೆದದ್ದು ನಮ್ಮ ವೃತ್ತಿರಂಗಭೂಮಿ. ಹತ್ತು ಹಲವಾರು ಕಾರಣಗಳಿಂದ ನಗರಗಳಿಗೆ ವಲಸೆ ಬಂದ ಜನಕ್ಕಾಗಿ ಮೈ ತಳೆದು ಬಂದ ರಂಗ ಪ್ರಕಾರ ಇದು. ಬೇರೆ ಯಾವ ಹಂಗಿಗೂ ಒಳಗಾಗದೆ ದುಡ್ಡು ಕೊಟ್ಟು ಮನರಂಜನೆ ಪಡೆದುಕೊಳ್ಳುವ ಜನಸಾಧನ ಇದು. ಕನ್ನಡ ನಾಡಿನಲ್ಲಿ ವೃತ್ತಿರಂಗದ ಕಥೆ ನೂರು ವರ್ಷಗಳ ಇತಿಹಾಸವಾಗುತ್ತದೆ. ಈ ಮಹಾ ಸಂಸ್ಥೆ ಇಂಗ್ಲೀಷ್, ಸಂಸ್ಕೃತ, ಮರಾಠಿ, ಬಂಗಾಳಿ ಹಾಗೂ ತೆಲುಗು ಮುಂತಾದ ಭಾಷೆಗಳಿಂದ ನೂರಾರು ರಂಗನಾಟಕಗಳನ್ನು ಒಳಗೊಂಡಿತು. ಎಂತಹ ರಾಷ್ಟ್ರಕ್ಕೂ ಕೀರ್ತಿ ತರುವಂತಹ ನಾಯಕ ನಟ ನಟಿಯರನ್ನು ರಂಗದ ಮೇಲೆ ತಂದಿತು. ಆಯಾ ಕಾಲಕ್ಕೆ ಕ್ರಾಂತಿಕಾರಕವೆನಿಸುವ ಪ್ರದರ್ಶನ ತಂತ್ರಗಳನ್ನೂ ಧ್ವನಿ ಬೆಳಕು ಹಾಗೂ ರಂಗ ಸಾಧನ ಸೃಷ್ಟಿಯಲ್ಲಿ ಆಶ್ಚರ್ಯಗೊಳಿಸುವಂಥ ಸಾಧನೆಗಳನ್ನೂ ಗಳಿಸಿತು. ಸುಮಾರು ೧೯೧೦ರಿಂದ, ೩೦ ವರ್ಷಗಳ ಕಾಲ ಕನ್ನಡ ನಾಟಕ ಸಂಸ್ಕೃತಿಯ ಪ್ರಮುಖ ಪ್ರತಿನಿಧಿಯಾಗಿ ದಕ್ಷಿಣ ಭಾರತದ ಉದ್ದಗಲದಲ್ಲಿ ಅಲ್ಲದೆ ದೂರದ ಕಲ್ಕತ್ತ ಮತ್ತು ಸಾಗರದ ಆಚೆಯ ರಂಗೂನ್ ನಗರದ ವರೆಗೆ ತನ್ನ ವರ್ಚಸ್ಸನ್ನು ಬಿತ್ತಿತ್ತು. ರಾಷ್ಟ್ರದ ಇತರ ಭಾಗಗಳಲ್ಲಿಯಂತೆ ಕರ್ನಾಟಕದಲ್ಲಿಯೂ ದರೂ, ..ವೃತ್ತಿರಂಗಕ್ಕೆ ಈಗ ಅತ್ಯಂತ ಹೀನದೆಸೆ. ಅದನ್ನುಎತ್ತಿ ನಿಲ್ಲಿಸಲು ಮಾಡಿದ, ಮಾಡುತ್ತಿರುವ ಎಲ್ಲಾ ಪ್ರಯತ್ನ ನೀರಿನಲ್ಲಿ ಹೋಮ. ಇದೀಗ ಬೆಳೆದು ಬಲಿಯುತ್ತಿರುವ ಹವ್ಯಾಸಿ ರಂಗಗಳು ಮುಂದೆ ವೃತ್ತಿರಂಗದ ಸ್ಥಾನವನ್ನು ತುಂಬಬೇಕಾಗಿದೆ.

### ದಕ್ಷಿಣ ಭಾರತದಲ್ಲಿ ಹಿರಿಮೆಯ ಸ್ಥಾನ

ದಕ್ಷಿಣ ಭಾರತದಲ್ಲಿಯೂ ದರೂ ನಮ್ಮ ರಂಗಭೂಮಿಯ ಸ್ಥಾನಮಾನಗಳನ್ನು ಗಟ್ಟಿ ಆಧಾರದ ಮೇಲೆ ನಿರ್ಧರಿಸುವಾಗ ಅದರ ಸಾಧನೆ ಸಿದ್ಧಿಗಳನ್ನು ಕಂಡು ಆಶ್ಚರ್ಯವೆನಿಸುತ್ತದೆ.

ಕನ್ನಡ ಕರಾವಳಿಯ ಯಕ್ಷಗಾನವೂ ಕೇರಳದ ಕಥಕ್ಕಳಿಯೂ ಒಂದೇ ತಾಯಿ ಬೇರಿನಿಂದ ಕವಲೊಡೆದ ಶಾಖೆಗಳು. ಯಕ್ಷಗಾನದ ಹಿರಿಮೆಯೆಂದರೆ ನಿಂತ ನೆಲದ ಮೇಲೆ ಪಾತ್ರಧಾರಿಗಳು ಹುಟ್ಟಿಸಿ ಆಡುವ ವಿಸ್ಮಯಕಾರಿ ಮಾತುಗಾರಿಕೆ. ಕಥಕ್ಕಳಿಯಲ್ಲಿ ಇದರ ಸ್ಥಾನ ಅಭಿನಯ ಹಾಗೂ ಮುದ್ರೆಗಳಿಗೆ. ಮೂಲದಲ್ಲಿ ಒಂದೇ ಆಗಿದ್ದ ಈ ಎರಡು ಕಲಾಪ್ರಕಾರಗಳು ಕ್ರಿ.ಶ. ಸುಮಾರು ೮೦೦ರಲ್ಲಿ ಕವಲೊಡೆದು ಪಶ್ಚಿಮ ಕರಾವಳಿಯ ಉದ್ದಕ್ಕೂ ಉತ್ಕೃಷ್ಟವಾಗಿ ಬೆಳೆದುಕೊಂಡವು. ಕಥಾ ದ್ರವ್ಯದಲ್ಲಿ, ವೇಷ ಭೂಷಣಗಳಲ್ಲಿ, ಮುಖ ವರ್ಣಿಕೆಯಲ್ಲಿ, ನೃತ್ಯಗತಿ ಹಾಗೂ ರಾಗಭಾವ ಪ್ರತಿಪಾದನೆಯಲ್ಲಿ, ಹಾವಭಾವ ವಿಲಾಸ ವೈಭವಗಳಲ್ಲಿ ತೆಂಕು ತಿಟ್ಟಿನ ಯಕ್ಷಗಾನದ ಪ್ರಕಾರಕ್ಕೂ ಕೇರಳದ ಕಥಕ್ಕಳಿಗೂ ಇರುವ ಹೋಲಿಕೆ ಅಸಾಮಾನ್ಯವಾದದ್ದು. ಹೀಗೆ ಕೇರಳ ಕರ್ನಾಟಕಗಳ ಸಂಬಂಧ ಪ್ರದರ್ಶನ ಕಲೆಯಲ್ಲಿ ಒಂದೇ ಮೂಲದಿಂದ ಬೆಳೆದುಬಂದದ್ದು.

ಆಂಧ್ರದ ವೃತ್ತಿರಂಗ ಭೂಮಿಯ ಹುಟ್ಟು, ಬೆಳವಣಿಗೆಯಲ್ಲಿ ಕನ್ನಡ ರಂಗಭೂಮಿಯು ಮಹತ್ತರವಾದ ಪಾತ್ರ ವಹಿಸಿದೆಯೆಂದು ಅಲ್ಲಿನ ಡಾ. ಸಿ. ನಾರಾಯಣ ರಾವ್ ಮೊದಲಾದ ಸಂಶೋಧಕ ವಿಮರ್ಶಕರು ಹೇಳಿದ್ದಾರೆ. ೧೮೮೦ರಲ್ಲಿಯೇ "ಧಾರವಾಡದ ಕಡೆಯಿಂದ" ಆಂಧ್ರಕ್ಕೆ ಸಂಚಾರ ಬಂದ ನಾಟಕ ಸಂಸ್ಥೆಯೊಂದು ಅಲ್ಲಿನ ಮುಖ್ಯ ಪಟ್ಟಣಗಳಲ್ಲಿ ಪ್ರಭಾವಪೂರ್ಣವಾದ ಪ್ರದರ್ಶನಗಳನ್ನಿತ್ತು, ಅಲ್ಲಿ ಜನರನ್ನು ವಿಸ್ಮಯಗೊಳಿಸಿತೆಂದು ಡಾ. ನಾರಾಯಣ ರಾವ್ ಬರೆದಿದ್ದಾರೆ. ಈ ಕನ್ನಡ ನಾಟಕ ಸಂಸ್ಥೆ ಧಾರವಾಡದ ತಂತು ಪುರಸ್ಥ ಮಂಡಳಿಯೆಂದು ಮುದವೀಡು ಕೃಷ್ಣರಾಯರು ಸ್ಪಷ್ಟಪಡಿಸಿದ್ದಾರೆ. ಪರಿಣತರಾದ ಕಲಾವಿದರಿಂದ ಗಮಕಿಗಳಿಂದ ಕೂಡಿದ, ಈ ಸಂಸ್ಥೆ ಭೀಮಾಚಾರ್ಯ ಐರಿ ಹಾಗೂ ಗೋಪೀನಾಥ ರಾವ್ ಜೋಷಿ ಇವರ ನೇತೃತ್ವದಲ್ಲಿ ಸುಮಾರು ಎರಡು ವರ್ಷಗಳ ಕಾಲ ಕನ್ನಡ, ಹಿಂದಿ, ಮರಾಠಿ ಹಾಗೂ ತೆಲುಗು ಭಾಷೆಗಳಲ್ಲಿ ನಾಟಕಗಳನ್ನಾಡುತ್ತ, ಮಹಾರಾಷ್ಟ್ರ, ಗುಜರಾತ್, ವಿದರ್ಭ, ಮಧ್ಯಭಾರತ ಹಾಗೂ ಆಂಧ್ರಪ್ರದೇಶಗಳಲ್ಲಿ ಸಂಚರಿಸಿ, ಕೀರ್ತಿಯನ್ನು, ಧನವನ್ನು ಗಳಿಸಿತು. ಅತ್ತ ಮೈಸೂರಿನಿಂದಲೂ ಅರಮನೆಯ ನಾಟಕ ಸಂಘ ಆಂಧ್ರ ಪ್ರದೇಶದ ಮುಖ್ಯ ಪಟ್ಟಣಗಳಿಗೆ ಭೇಟಿಯಿತ್ತು, ನಾಟಕಗಳನ್ನು ಅಭಿನಯಿಸಿತು. ಈ ಎಲ್ಲದರ ಪರಿಣಾಮ "ಆಂಧ್ರ ನಾಟಕ ಪಿತಾಮಹ"ರೆನಿಸಿದ ಧರ್ಮಾವರಂ ಕೃಷ್ಣಮಾಚಾರ್ಲು ಅವರ ಮೇಲೆ ಆಯಿತು. ಅವರು ತಮ್ಮ ಮೊದಲ ನಾಟಕವಾದ "ಸ್ವಪ್ನಅನಿರುದ್ಧ"ವನ್ನು ಕನ್ನಡದಲ್ಲಿ ಬರೆದರು. ಆ ನಾಟಕದ ಮುನ್ನುಡಿಯಲ್ಲಿ, ತಾವು ತೆಲುಗರೇ ಆದರೂ, ನಾಟಕ ರಚನೆಗೆ ಅತ್ಯುತ್ತಮವಾಗಿ ಅಳವಡುವ ಭಾಷೆ ಕನ್ನಡವೇ ಎಂದು ತಮ್ಮ ಗೆಳೆಯರು ಅಭಿಪ್ರಾಯಪಟ್ಟುದರಿಂದ ತಮ್ಮ ಮೊದಲ ನಾಟಕವನ್ನು ಕನ್ನಡದಲ್ಲಿಯೇ ರಚಿಸಿರುವುದಾಗಿ ತಿಳಿಸಿದ್ದಾರೆ.

ಮುಂದೆ, ಅನೇಕ ಕನ್ನಡ ನಾಟ್ಯ ಸಂಘಗಳು ಆಂಧ್ರ ಪ್ರದೇಶದ ಮುಖ್ಯ ಪಟ್ಟಣಗಳಲ್ಲೂ, ತೆಲುಗು ನಾಟಕ ಸಂಘಗಳು ಕನ್ನಡ ನಾಡಿನಲ್ಲೂ ಸಂಚರಿಸಿ ನಾಟಕ ಆಡತೊಡಗಿದವು. ತೆಲುಗರೇ ಆದ ಬಳ್ಳಾರಿಯ ತಾಡಪತ್ರಿ ರಾಘವಾಚಾರ್ಯರು ಕನ್ನಡ ರಂಗಭೂಮಿಯ ಕಳೆಯನ್ನು ಹೆಚ್ಚಿಸಲು ಕಾರಣರಾದರು. ವರದಾಚಾರ್ಯರ ರತ್ನಾವಳಿ ಸಂಘವೂ, ವೀರಣ್ಣನವರ ಗುಬ್ಬಿ ನಾಟಕ ಸಂಸ್ಥೆಯೂ, ಮಹಮದ್ ಪೀರ್ ಅವರ ಚಂದ್ರಕಲಾ ನಾಟಕ ಸಂಸ್ಥೆಯೂ ಆಂಧ್ರ ಪ್ರದೇಶದ ನಗರಗಳಿಗೆಲ್ಲಾ ಭೇಟಿ ಕೊಟ್ಟವು. ಅದರಲ್ಲಿಯೂ, "ಕರ್ನಾಟಕಾಂಧ್ರ ನಾಟಕ ಸಾರ್ವಭೌಮ"ರೆಂದು ಆಂಧ್ರಪ್ರದೇಶದಲ್ಲಿ ಜನತಾ ಪ್ರಶಸ್ತಿ ಪಡೆದ ವೀರಣ್ಣನವರ ಗುಬ್ಬಿ ನಾಟಕ ಸಂಘವಂತೂ ಆಂಧ್ರದಲ್ಲಿ ಮನೆಮಾತಾಗುವಷ್ಟು ಯಶಸ್ಸು ಗಳಿಸಿತು. ಆಂಧ್ರ ರಂಗಭೂಮಿಯ ಹೆಸರಾಂತ ನಟರಾದ ಸ್ಥಾನಂ ನರಸಿಂಹರಾಯರು ಅನೇಕ ಬಾರಿ ಕನ್ನಡ ನಾಡಿನಲ್ಲಿ ಪ್ರವಾಸ ಮಾಡಿ ನಾಟಕಗಳನ್ನಾಡಿ ಇಲ್ಲಿಯ ಜನಮನವನ್ನು ಸೂರೆಗೊಂಡರು. ಕನ್ನಡ ಜನದ ರಸಿಕತೆ, ಕಲಾ ಪಕ್ಷಪಾತಿತ್ವವನ್ನು ಮನಸಾರೆ ಮೆಚ್ಚಿಕೊಂಡರು. ಮೈಸೂರಿನ ಆಸ್ಥಾನ ವಿದ್ವಾಂಸರಾಗಿದ್ದ ನಂಜನಗೂಡು ಶ್ರೀಕಂಠ ಶಾಸ್ತ್ರಿಗಳು ಹೆಸರಾಂತ ತೆಲುಗು ನಾಟಕಗಳನ್ನೆಲ್ಲ ಕನ್ನಡಕ್ಕೆ ಅನುವಾದಿಸಿದರು.

ತಮಿಳು ರಂಗಭೂಮಿಯ ಮೇಲೆಯೂ ಪ್ರತ್ಯಕ್ಷವಾಗಿ ಹಾಗೂ ಅದಕ್ಕಿಂತ ಹೆಚ್ಚಾಗಿ ಪರೋಕ್ಷವಾಗಿ ಕನ್ನಡ ರಂಗ ಮಂಟಪದ ಪ್ರಭಾವ ಬಿದ್ದಿದೆ. ಕನ್ನಡ ರಂಗ ನಾಟಕಗಳಿಂದ ಸ್ಫೂರ್ತಿಗೊಂಡ ಧರ್ಮಾವರಂ ಕೃಷ್ಣಮಾಚಾರ್ಯರು ತಮ್ಮ ಸರಸ ವಿನೋದಿನಿ ನಾಟಕ ಸಭೆಯೊಂದಿಗೆ ತಮಿಳುನಾಡಿನಲ್ಲಿ ಸಂಚರಿಸಿ ನಾಟಕಗಳನ್ನು ಪ್ರದರ್ಶಿಸಿದರು. ಅವುಗಳನ್ನೂ ಕನ್ನಡ ನಾಡಿನಿಂದಲೇ ನೇರವಾಗಿ ಬಂದ ಕನ್ನಡ ನಾಟಕ ಸಂಘಗಳು ಅಭಿನಯಿಸಿದ ನಾಟಕಗಳನ್ನೂ ನೋಡಿ ಪ್ರಭಾವಿತರಾದ ಸಂಬಂಧಂ ಮೊದಲಿಯಾರರು ಆಧುನಿಕ ತಮಿಳು ನಾಟಕದ ಪಿತಾಮಹರೆನಿಸಿಕೊಂಡರು. ಇವರಿಗಿಂತ ಮೊದಲು ತಮಿಳು ರಂಗಭೂಮಿಗಾಗಿ ನಾಟಕಗಳನ್ನು ರಚಿಸಿದ ಗೋವಿಂದ ಸ್ವಾಮಿ ರಾಜಾರವರು ಅನೇಕ ಕಾಲ ಕನ್ನಡ ನಾಡಿನಲ್ಲಿ ಹಾಗೂ ಮಹಾರಾಷ್ಟ್ರದಲ್ಲಿ ಇದ್ದವರು. ಇಲ್ಲಿಯ ರಂಗಭೂಮಿಯ ರೀತಿ ನೀತಿಗಳನ್ನೂ, ಪ್ರಕಾರಗಳನ್ನೂ, ನಾಟಕಕಾರರನ್ನೂ, ಸಂಸ್ಥೆಗಳನ್ನೂ ಅರಿತವರು. ಮುಂದೆ ಮುಖ್ಯವಾಗಿ ವರದಾಚಾರ್ಯರೂ ಅನಂತರ ವೀರಣ್ಣನವರೂ ಅನೇಕ ಸಲ ತಮಿಳುನಾಡಿಗೆ ಭೇಟಿ ಕೊಟ್ಟು ತಮ್ಮ ಕಲಾ ಪ್ರೌಢಿಮೆಯಿಂದ ಕನ್ನಡ ನಾಡಿಗೆ, ಅದರ ರಂಗಭೂಮಿಗೆ ಕೀರ್ತಿ ತಂದರು. ವರದಾಚಾರ್ಯರಂತು ತಮಿಳುನಾಡಿನ ಕಣ್ಮಣಿಗಳು. ೧೯೧೫ರ ಅನಂತರ ಅವರು, ಈರೋಡು, ಕೊಯಮತ್ತೂರು, ಕಾರೈಕುಡಿ, ಸೇಲಂ, ಕುಂಭಕೋಣಂ, ಮಧುರೈ, ಮದರಾಸುಗಳಲ್ಲಿ ಅನೇಕ ನಾಟಕಗಳನ್ನಾಡಿ ಜನತೆಯ ಪ್ರೇಮ ಗೌರವಗಳನ್ನು ಗಳಿಸಿದರು. ೧೯೧೭ರಲ್ಲಿ ತಿರುಚ್ಚಿಯಲ್ಲಿ ಸಮಾವೇಶವಾದ ತಮಿಳು ಜನತೆಯ ಮಹಾಸಭೆ ಕನ್ನಡದ ಕಲಾವಂತ ನಟರಾದ ವರದಾಚಾರ್ಯರನ್ನು ಸಮ್ಮಾನದಿಂದ ಸತ್ಕರಿಸಿ ಡಾ. ಅನಿಬೆಸಂಟರ ಹಸ್ತದಿಂದ ಅವರಿಗೆ "ನಾಟಕ ಶಿರೋಮಣಿ" ಎಂಬ ಪ್ರಶಸ್ತಿಯನ್ನು ಕೊಟ್ಟಿತು. ತಮ್ಮ ಕಡೆಯ ಗಳಿಗೆಯವರೆಗೂ ವರದಾಚಾರ್ಯರು ತಮ್ಮೆದೆಯ ಮೇಲೆ ಹೆಮ್ಮೆಯಿಂದ ಧರಿಸಿಕೊಂಡ ಪ್ರಶಸ್ತಿ ಅದೊಂದೇ, ತಮಿಳು ಬಾಂಧವರಿತ್ತ "ನಾಟಕ ಶಿರೋಮಣಿ".

ಇನ್ನು ಕರ್ನಾಟಕ ಹಾಗೂ ಮಹಾರಾಷ್ಟ್ರ ರಂಗಭೂಮಿಗಳ ಬಂಧ-ಸಂಬಂಧಗಳು ಅತ್ಯಂತ ಗಾಢವಾದವು. ಮಹಾರಾಷ್ಟ್ರದ ವೃತ್ತಿರಂಗದ ಹುಟ್ಟಿಗೆ ಉತ್ತರ ಕರ್ನಾಟಕದ ಜಾನಪದ ರಂಗ ಕಾರಣವಾಯಿತು. ನಮ್ಮಲ್ಲಿಯ ದಾಸರಾಟಕ್ಕೆ ಮಣಿದ ಮಹಾರಾಷ್ಟ್ರೀಯರು ಅದನ್ನು ಪರಿಷ್ಕಾರಗೊಳಿಸಿದಾಗ ಇಂದಿನ ಅವರ ಹೆಸರಾಂತ 'ತಮಾಷಾ' ಹುಟ್ಟಿ ಬೆಳೆದು ಬಂದಿತು. ಅದನ್ನು ಮತ್ತೆ ನೋಡಿದ ಕನ್ನಡಿಗರು ಅದನ್ನೇ ಹೋಲುವಂತಹ "ರಾಧಾನ ಆಟ" ಅಥವಾ "ರಾಜಾನ ಆಟ"ವನ್ನು ಬೆಳೆಸಿಕೊಂಡರು. ಉತ್ತರ ಕನ್ನಡ ಜಿಲ್ಲೆಯ ಯಕ್ಷಗಾನ ಮೇಳಗಳೂ ಮಹಾರಾಷ್ಟ್ರದ ಸೆರಗಿನ ಪ್ರದೇಶಗಳಲ್ಲಿ

ಸಂಚರಿಸುತ್ತ ಕನ್ನಡದಲ್ಲಿ ಪ್ರದರ್ಶನಗಳನ್ನು ಕೊಡುತ್ತಿದ್ದವು. ಹೀಗೆ ೧೮೪೩ರಲ್ಲಿ ಕಾರವಾರ ಜಿಲ್ಲೆಯ ಕರ್ಕಿಯ ಹಾಸ್ಯಗಾರ ಮೇಳವು ಸಾಂಗ್ಲಿಯ ಅರಮನೆಯಲ್ಲಿ ಆಟ ಕಟ್ಟಿದಾಗ ಶ್ರೀಮಂತ ಅಪ್ಪಾಸಾಹೇಬ ಪಟ್ಟವರ್ಧನರು ತುಂಬ ತೃಪ್ತಿಗೊಂಡು ತಮ್ಮ ಆಶ್ರಯದಲ್ಲಿದ್ದ ಚುರುಕು ಬುದ್ಧಿಯ ಕರಣಿಕ ವಿಷ್ಣುದಾಸ ಭಾವೆಯವರನ್ನು ಕುರಿತು ಮರಾಠಿಯಲ್ಲಿಯೂ ಆ ಬಗೆಯ ಪ್ರದರ್ಶನಗಳನ್ನು ರಚಿಸಬೇಕೆಂದು ಹೇಳಿದರು. ಭಾವೆಯವರು ಕನ್ನಡ ಯಕ್ಷಗಾನದ ಚೌಕಟ್ಟಿನಲ್ಲಿ ರಚಿಸಿದ ಮೊದಲ ಮರಾಠಿ ನಾಟಕವೆಂದರೆ “ಸೀತಾಸ್ವಯಂವರ”. ಮಹಾರಾಷ್ಟ್ರದ ವೃತ್ತಿರಂಗದ ನಾಂದಿಯನ್ನು ಹಾಡಿದ ನಾಟಕ ಇದು. ಅನಂತರ ಭಾವೆಯವರು ಇನ್ನೂ ಮೂರು ನಾಟಕಗಳನ್ನು ರಚಿಸಿ, ತಮ್ಮದೇ ಸಾಂಗ್ಲೀಕರ್ ನಾಟಕ ಮಂಡಳಿಯನ್ನು ಕಟ್ಟಿ ಉತ್ತರ ಕರ್ನಾಟಕಕ್ಕೆ ಬಂದು ಅಭಿನಯಿಸಿದಾಗ ಕನ್ನಡ ಜನತೆ ಮೂರುಹೋಯಿತು. ಈ ಪ್ರದರ್ಶನಗಳಿಂದ ಉತ್ಸಾಹಗೊಂಡ ಕನ್ನಡದ ಕಟ್ಟಾಳು ಸಕ್ಕರಿ ಬಾಳಾಚಾರ್ಯರು ಶಿರಾವಳಿಯ ಭಾಗವತರಾಟದ ನೆಲೆನಿಟ್ಟುಗಳನ್ನೇ ಅನುಸರಿಸಿ ಹುರುಡು ಕಟ್ಟಿ ಕನ್ನಡದಲ್ಲಿಯೂ ಅನೇಕ ನಾಟಕಗಳನ್ನು ರಚಿಸಿ “ಕರ್ನಾಟಕ ನಾಟಕ ಪ್ರಥಮ ಗುರು” ಎನಿಸಿಕೊಂಡರು.

ಕನ್ನಡ ಹಾಗೂ ಮರಾಠಿ ಭಾಷೆಗಳಿಗೆ ಅನುವಾದಗೊಂಡ ಕಾಳಿದಾಸನ “ಶಾಕುಂತಲಾ”ವೂ ಎರಡೂ ಭಾಷಾರಾಜ್ಯಗಳ ಬಂಧವನ್ನು ಬಿಗಿಯಿತು. ಗುರ್ಲಹೊಸೂರಿನ ಚುರಮುರಿ ಶೇಷಗಿರಿರಾಯರು ೧೮೬೯ರಲ್ಲಿ ಶಾಕುಂತಲವನ್ನು ಕನ್ನಡದ ಆಡುಮಾತಿಗೆ ಅಳವಡಿಸಿ ಮನೆಮಟ್ಟುಗಳ ಸಂಗೀತ ಧಾಟಿಗಳನ್ನು ಒಳಗೊಳಿಸಿದರು. ಶೇಷಗಿರಿರಾಯರ ಸ್ನೇಹಿತರೂ ಅದೇ ಊರಿನವರೂ, ಕನ್ನಡ ಬಲ್ಲವರೂ ಆಗಿದ್ದ ಅಣ್ಣಾ ಸಾಹೇಬ್ ಕಿರ್ಲೋಸ್ಕರ್ ಅವರು ಹತ್ತು ವರ್ಷಗಳ ಅನಂತರ ೧೮೭೮ರಲ್ಲಿ ಶಾಕುಂತಲವನ್ನು ಮರಾಠಿಗೆ ಪರಿವರ್ತಿಸಿ ಚುರಮುರಿಯವರು ಅಳವಡಿಸಿದ್ದ ಕನ್ನಡ ಸಾಂಪ್ರದಾಯಿಕ ಗೀತೆಗಳ ಧಾಟಿಗಳನ್ನೇ ತೊಡಿಸಿ, ತಮ್ಮದೇ ಮಂಡಳಿಯನ್ನು ಕಟ್ಟಿ ಮೊದಲು ಮುಂಬೈಯಲ್ಲಿ ಅನಂತರ ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕದ ಎಲ್ಲ ಮುಖ್ಯ ನಗರಗಳಲ್ಲಿ ಅಭಿನಯಿಸಿ, ಕಿಕ್ಕಿರಿದು ನೋಡಿದ ಜನತೆಯನ್ನು ಮರುಳುಗೊಳಿಸಿದರು.

ಸಾಂಗ್ಲೀಕರ್ ಹಾಗೂ ಕಿರ್ಲೋಸ್ಕರ್ ನಾಟಕ ಮಂಡಳಿಗಳು ಮೈಸೂರು ಅರಮನೆಯ ಆಶ್ರಯದಲ್ಲಿಯೂ ಮರಾಠಿ ನಾಟಕಗಳನ್ನು ಅಭಿನಯಿಸಿದವು. ಹಲವು ತಿಂಗಳುಗಳ ಕಾಲ ಮೈಸೂರು ನಗರದಲ್ಲಿ ವಾಸ್ತವ್ಯ ಮಾಡಿದ ಈ ಮಂಡಳಿಗಳ ನಟರೂ ಗಾಯಕರೂ ಕಾಲವನ್ನು ವ್ಯರ್ಥಗೊಳಿಸದೆ, ಅರಮನೆಯ ಸಂಗೀತ ವಿದ್ವಾಂಸರ ಆಶ್ರಯ ಮಾಡಿ ತ್ಯಾಗರಾಜ, ಪಟ್ಣಂ ಸುಬ್ರಹ್ಮಣ್ಯ ಅಯ್ಯರ್, ರಾಮನಾಡು ಶ್ರೀನಿವಾಸ ಅಯ್ಯಂಗಾರ್ ಮೊದಲಾದ ಹೆಸರಾಂತ ವಾಗ್ಗೇಯಕಾರರ ಸುಪ್ರಸಿದ್ಧ ಕೃತಿಗಳ “ಮಟ್ಟುಧಾಟಿ”ಯನ್ನು ಅಭ್ಯಾಸ ಮಾಡಿ, ಮುಂದೆ ಅವುಗಳಿಗೆ ಮರಾಠಿ ಮಾತುಗಳನ್ನು ತೊಡಿಸಿ “ಮಾನಾಪಮಾನ” ಮೊದಲಾದ ರಂಗನಾಟಕಗಳಲ್ಲಿನ ರಂಗಗೀತೆಗಳನ್ನಾಗಿ ಮಾಡಿದ್ದುಂಟು. ಇವುಗಳನ್ನು ಕೇಳಿದ ವಾಮನ ರಾವ್ ಮಾಸ್ತರರಂತಹ ಗಾಯಕ ನಟರು ಬೆರಗುಗೊಂಡು ಅದೇ ಧಾಟಿಗಳನ್ನು ಕೊಂಡು ತಂದು, ಅದಕ್ಕೆ ಕನ್ನಡ ಮಾತುಗಳನ್ನು ತೊಡಿಸಿ ತಮ್ಮ ನಾಟಕಗಳಲ್ಲಿನ ರಂಗಗೀತೆಗಳಾಗಿ ಮಾರ್ಪಡಿಸಿದರು. ಕನ್ನಡ ದಾಸರ ಪದ, ಜಾವಡಿ, ಹಬ್ಬದ ಹಾಡು, ಮದುವೆ ಹಾಡುಗಳ ಧಾಟಿಗಳೂ, ಮರಾಠಿ ರಂಗಗೀತೆಗಳಾದದ್ದು ನಿಜ. ಈ ಮೊತ್ತಕ್ಕೆ ಕರ್ನಾಟಕ ಶಾಸ್ತ್ರೀಯ ಸಂಗೀತದ ಹೆಸರಾಂತ ಕೃತಿಗಳ ಧಾಟಿಗಳೂ ಪರಿಷ್ಕಾರಗೊಂಡು ಈ ರಂಗಗೀತೆಗಳಾದ ಮಾತು ವಿಸ್ಮಯ ತರುವಂಥಹದು. ಅಂದಿನಿಂದ ಇಂದಿನವರೆಗೂ ವೃತ್ತಿ ಮಂಡಳಿಗಳ ವಿನಿಮಯ ಎರಡೂ ರಾಜ್ಯಗಳಲ್ಲಿ ನಡೆದಿವೆ. ನಾಟಕಗಳು ಅನುವಾದಗೊಂಡಿವೆ. ಬಾಲಗಂಧರ್ವರಿಂದ ಶ್ರೀರಾಮಲಾಗೂವರೆಗೆ, ಗರುಡ ಸದಾಶಿವರಾಯರಿಂದ ಹೀರರವರೆಗೆ, ನಾಯಕ ನಟನಟಿಯರು ಎರಡೂ ಭಾಷಾ ರಾಜ್ಯಗಳಲ್ಲಿ ಜನಮನವನ್ನು ಗೆದ್ದುಕೊಂಡಿದ್ದಾರೆ.

**ರಂಗಭೂಮಿಯ ಸ್ತರಗಳು**

ಕನ್ನಡ ರಂಗದ ವೈಭವದ ಕಥೆ ಇದು. ನಮ್ಮ ಜನಪದ ರಂಗದ ಪ್ರತಿನಿಧಿ ಪ್ರಕಾರವಾದ ಯಕ್ಷಗಾನ, ಕೃಷ್ಣ ಪಾರಿಜಾತಗಳು ಶಿವರಾಮ ಕಾರಂತ, ಚಂದ್ರಶೇಖರ ಕಂಬಾರ ಅಂತಹವರ ಮೋಡಿಗೈಯಲ್ಲಿ ಪುಟಗೊಂಡು ಇಂದಿಗೂ, ಎಂದಿಗೂ ಜನಮನ್ನಣೆ ಪಡೆಯುತ್ತಿವೆ. ಎಲ್ಲಾ ದೃಷ್ಟಿಯಿಂದಲೂ ನಮ್ಮ ಜಾನಪದ ರಂಗದ ಈ ಪ್ರಕಾರಗಳು “ಟೋಟಲ್ ಥಿಯೇಟರ್” ಎಂಬ ಪರಿಪೂರ್ಣ ರಂಗ ಸಂಪ್ರದಾಯದ ನಾಡಿಯನ್ನು ಮಿಡಿಯುವಂಥದ್ದು. ಅಲ್ಲಿಯ ವೇಷಭೂಷಣ, ಮುಖ ವರ್ಣಿಕೆ, ಶೃಂಗಾರ, ಆಭರಣ, ನೃತ್ಯಗೀತೆ, ಹಾವಭಾವ, ವಿಲಾಸ, ವಾದ್ಯೋಪಕರಣಗಳು ಸ್ವರ್ಗದಲ್ಲಿಯ ಅತಿಮಾನವರನ್ನು ಇಲ್ಲಿಯ ನೆಲದ ಮೇಲೆ ಮತ್ತೆ ತಂದು, ಅವರ ವೀರಾಟ್ಟಹಾಸಗಳನ್ನು ಮೊಳಗಿಸಿ, ಸಂಘರ್ಷಗಳ ವಿರಾಟ ಲೀಲೆಯನ್ನು ಪ್ರದರ್ಶಿಸಿ ಜನರನ್ನು ಬೆರಗುಗೊಳಿಸುತ್ತಿವೆ.

ವೃತ್ತಿರಂಗದಲ್ಲಿ ನಟನೇ ನಾಟಕ. ಹೆಸರಾಂತ ಒಬ್ಬ ಕಲಾವಿದ ಬೇರೆ ಬೇರೆ ಪಾತ್ರಗಳಿಗೆ ಕೊಡುವ ಆಯಾಮಗಳನ್ನು ಕಾಣುವ ಸಲುವಾಗಿ ಜನ ವೃತ್ತಿರಂಗದ ಸೆಳೆವಿಗೆ ಸಿಕ್ಕಿದ್ದು. ಕನ್ನಡಕ್ಕೆ ಕೀರ್ತಿ ತಂದ ವರದಾಚಾರ್ಯರು, ವೀರಣ್ಣನವರು, ಗಂಗೂಬಾಯಿ, ಜಯಮ್ಮ, ಹಿರಣ್ಯಯ್ಯ, ಸುಬ್ಬಯ್ಯನಾಯ್ಡು, ಹೀರ್, ಹಂದಿಗನೂರು, ಮಲ್ಲಪ್ಪ, ಕೊಟ್ಟೂರಪ್ಪನವರು, ನರಸಿಂಹರಾಜು, ಶಾಂತಕುಮಾರ್, ಬಾಲಕೃಷ್ಣರು ತಾವು ನಿರ್ವಹಿಸಿದ ಹತ್ತು ಹಲವಾರು ಭೂಮಿಕೆಗಳಿಗೆ ತುಂಬಿದ ವೈಭವ ಅಸದೃಶವಾದದ್ದು.

ರಂಗದ ಮುಂದಿನ ಘಟ್ಟದಲ್ಲಿ ನಾಟಕಕಾರನ ಹಿರಿಮೆ ಮೆರೆಯಿತು. ಬುದ್ಧಿ ನಾಟಕದ ಯುಗವದು–ಕ್ರಾಂತಿಯುಗ. ಅನುಭವವೇ ಮನೋರಂಜನೆಯಾಗಿ ಪರಿವರ್ತನೆಗೊಂಡ ಕಾಲ. ಪಾಶ್ಚಾತ್ಯ ರಂಗಭೂಮಿ ಹಾಗೂ ನಾಟಕಗಳಿಂದ ಪ್ರೇರಣೆ ಪಡೆದ ಸಮಯ. ಈ ಯುಗದ ಮೊದಲ ನಾಟಕಕಾರರು ಹೊಸ ಹಾದಿಯನ್ನು ತುಳಿದ ಬಿ. ಎಮ್. ಶ್ರೀ., ಮಾಸ್ತಿ, ಕುವೆಂಪು, ಎಮ್.ಆರ್. ಶ್ರೀ. ಸಂಸ, ಕೆರೂರ, ಹುಯಿಲ್‌ಗೋಳ ಮೊದಲಾಗಿ ಕನ್ನಡ ರಂಗದ ನಡೆಯಲ್ಲಿ ಹೊಸ ಜಾಡುಗಳನ್ನು ಕಂಡವರು. ಅನಂತರ ಆಯ್ದು ಬಂದ ಕ್ರಾಂತಿಯ ಅಲೆಯನ್ನು ತೂಗಿ ಬಿಟ್ಟವರು ಕೈಲಾಸಂ, ಕಾರಂತ, ಶ್ರೀರಂಗರು. ಅವರು ಸೂಚಿಸಿದ ಜಾಡಿನಲ್ಲಿ ಹೆದ್ದಾರಿಯನ್ನು ಕಡಿದವರು ರಾಜರತ್ನಂ, ಪರ್ವತವಾಣಿ, ಎಲ್. ಜೆ. ಬೇಂದ್ರೆ ಮೊದಲಾದವರು. ಕಳೆದ ಹತ್ತು ಹದಿನೈದು ವರ್ಷಗಳಲ್ಲಿ ಕನ್ನಡದ ಹವ್ಯಾಸಿ ರಂಗಕ್ಕೆ ಹೊಸತೆನಿಸಿದ ವರ್ಚಸ್ಸನ್ನೂ ಬಲವನ್ನೂ ತುಂಬಿದವರು ಕಾರ್ನಾಡು, ಕಂಬಾರ, ಲಂಕೇಶ, ಪಾಟೀಲ, ಕುಸನೂರ, ರತ್ನ ಮೊದಲಾದವರು. ಆಧುನಿಕ ರಂಗದ ಅಧ್ವರ್ಯುವೆಂದರೆ ನಾಟಕಕಾರ. ರಂಗದಲ್ಲಿ ಉಳಿದವರೆಲ್ಲಾ ಗೌಣ.

ನಾಟಕಕಾರರನ್ನೂ ಮರೆಯಿಸಿ ತನ್ನ ಪ್ರತಿಭೆಯಿಂದ ರಂಗಕ್ಕೆ ಹೊಸದೊಂದು ಆಕರ್ಷಣೆಯನ್ನು ತಂದು ಕೊಟ್ಟವನು ನಿರ್ದೇಶಕ. ಈ ಸಾಲಿನಲ್ಲಿ ಕನ್ನಡಕ್ಕೆ ಕೀರ್ತಿ ತಂದ ಬಿ. ವಿ. ಕಾರಂತ, ಬಿ. ಚಂದ್ರಶೇಖರ, ಸುಬ್ಬಣ್ಣ, ಸತ್ಯು ಮೊದಲಿಗರು.

ಅವರ ಕಾಣ್ಕೆಯ ಕಾರಣ ಹಳೆಯ ನಾಟಕಗಳಿಗೆ ಹೊಸ ಜೀವ. ಪ್ರದರ್ಶನಕ್ಕೆ ಹೊಸದೊಂದು ಆಯಾಮ.

ಇಂಥ ನಿರ್ದೇಶಕರ ನೆರವಿಗೆ ನಿಂತವರು ಬೆಳಕು ಧ್ವನಿಗಳ ತಂತ್ರಜ್ಞರು. ಹಿಂದೆ ಎಂದೂ ಇಲ್ಲದ ತಂತ್ರಜ್ಞಾನದ ಒತ್ತಾಸೆ ಕನ್ನಡ ರಂಗಭೂಮಿಗೆ ಹೊಸ ಚೇತನ ಕೊಟ್ಟಿತು. ರಾಮಮೂರ್ತಿ, ಶ್ರೀನಿವಾಸರಂಥ ನಿಶಿತ ಬುದ್ಧಿಯ ತಂತ್ರಜ್ಞರು ರಂಗವನ್ನು ಟೆಕ್ನಾಲಜಿಯ ಮಾಯೆಗೆ ಸಿಲುಕಿಸಿದ್ದುಂಟು.

**ಹಿರಿಮೆ:**

ಹೀಗೆ ಕನ್ನಡ ರಂಗಭೂಮಿ ತನ್ನದೇ ಉತ್ಕೃಷ್ಟ ವ್ಯಕ್ತಿತ್ವವನ್ನು ಜಾನಪದ ವೃತ್ತಿ ಹಾಗೂ ಹವ್ಯಾಸೀ ರಂಗಗಳಲ್ಲಿ ಅದ್ಭುತ ರಮ್ಯವಾಗಿ ಬೆಳೆಸಿ ತೋರಿದೆ. ಕನ್ನಡ ರಂಗಭೂಮಿಯ ಹೆಸರಾಂತ ನಾಟಕಕಾರರು, ನಟನಟಿಯರು, ನಿರ್ದೇಶಕರು, ತಂತ್ರಜ್ಞರು ಒಟ್ಟು ರಾಷ್ಟ್ರದ ನಿಟ್ಟಿನಿಂದಲೂ ಮಾನ್ಯತೆ ಗಳಿಸಿದ್ದಾರೆ. ಕಳೆದ ನಾಲ್ಕು ದಶಕಗಳಲ್ಲಿ ರಂಗಭೂಮಿಯ ಹತ್ತು ಹಲವಾರು ಪ್ರಕಾರಗಳು ಗೀತ ನಾಟಕ, ಆಶು ನಾಟಕ, ನೆರಳು ನಾಟಕ, ಮೂಕ ನಾಟಕ, ಮಕ್ಕಳ ನಾಟಕ, ಮೊದಲಾದವು ರಂಗದ ಅದಮ್ಯ ಕಲಾ ಪ್ರಕಾರವಾದ ಬೊಂಬೆಯಾಟ, ನೃತ್ಯ ನಾಟಕಗಳೊಂದಿಗೆ ಸಮರಸವಾಗಿ ಬೆರೆತು ಕಂಗೊಳಿಸುತ್ತವೆ. ಇದೀಗ ಕನ್ನಡ ರಂಗಭೂಮಿ, ಭಾರತದ ಯಾವುದೇ ಪ್ರಾದೇಶಿಕ ರಂಗದೊಡನೆಯೂ ಹುರುಡುಗಟ್ಟಿ ನಿಲ್ಲುವುದಲ್ಲದೆ, ತನ್ನ ಹಳೆಯ-ಹಿರಿಮೆಗಳಿಂದಾಗಿ ರಾಷ್ಟ್ರದಲ್ಲಿಯೇ ಉನ್ನತ ಸ್ಥಾನವನ್ನು ಗಳಿಸಿಕೊಂಡಿದೆಯೆಂಬ ನೆಚ್ಚು ಮೂಡುತ್ತದೆ.

# ಕರ್ನಾಟಕದ ಚಿತ್ರಕಲೆ

ಪಿ. ಆರ್. ತಿಪ್ಪೇಸ್ವಾಮಿ

ಚಿತ್ರಕಲೆ ಒಂದು ನಾಡಿನ, ಒಂದು ಜನಾಂಗದ ಇತಿಹಾಸವನ್ನು ತಿಳಿಸುವ ಒಂದು ಸಾಧನ. ಅದು ಪ್ರಾಚೀನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಜೊತೆಗೆ ಆನಂದವನ್ನೂ ನೀಡುತ್ತದೆ. ಒಂದು ಚಿತ್ರ ಇಲ್ಲವೆ ಶಿಲ್ಪಕೃತಿ ಸಾವಿರಾರು ವರ್ಷಗಳ ಇತಿಹಾಸವನ್ನು ಸಾರಬಲ್ಲದು. ಮಾನವನ ಮೊದಲ ಪಾಠ ಚಿತ್ರಕಲೆಯಲ್ಲಿಯೇ ಆರಂಭವಾಯಿತು. ಲಿಪಿ ಹುಟ್ಟುವುದಕ್ಕಿಂತ ಮೊದಲೇ ಚಿತ್ರ ಕಲೆ ಬಳಕೆಯಲ್ಲಿತ್ತೆಂದು ಹೇಳಬಹುದು. ಚೀನಾ ದೇಶದ ಲಿಪಿಗಳು ಚಿತ್ರಮಯವಾಗಿರುವುದನ್ನು ಇಂದಿಗೂ ಕಾಣಬಹುದು. ಅವರ ಮಾತುಕತೆಗಳೂ ಈ ಕಲೆಯ ಆಶ್ರಯದಲ್ಲಿಯೇ ನಡೆದುಬಂದುವು. ಕ್ರಮೇಣ ಭಾಷೆ ಸಾಹಿತ್ಯಗಳು ಉದ್ಭವವಾಗಿ ಪ್ರವರ್ಧಮಾನಕ್ಕೆ ಬಂದಂತೆ ಚಿತ್ರಕಲೆಯೂ ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡು ಬೆಳೆಸಿಕೊಂಡಿದೆ. ಈ ಶತಮಾನಗಳ ಅವಧಿಯಲ್ಲಿ ರೂಪಗೊಳ್ಳುತ್ತಾ ಅನೇಕ ಪ್ರಕಾರಗಳಲ್ಲಿ ತನ್ನ ಬಳ್ಳಿಗಳನ್ನೂ ಚಾಚಿ ವೈವಿಧ್ಯಪೂರ್ಣವಾಗಿ ಚಿತ್ರಕಲೆಯೂ ವಿಶೇಷವಾದ ಪ್ರಭಾವವನ್ನು ಬೀರುತ್ತಾ ಬಂದಿದೆ. ಪ್ರಾಚೀನ ಭಾರತದ, ಅದರಲ್ಲೂ ಕರ್ನಾಟಕದ, ಚಿತ್ರಕಲೆಯ ಪ್ರಗತಿ ವಿಶ್ವದ ಕಣ್ಣನ್ನು ತನ್ನೆಡೆಗೆ ಸೆಳೆದುಕೊಂಡಿದೆ.

ಭಾರತೀಯ ಚಿತ್ರಕಲೆ ಬಹು ಪ್ರಾಚೀನವಾದುದು. ಈ ಬಗ್ಗೆ ಪುರಾಣ, ಕಾವ್ಯ, ಶಾಸ್ತ್ರಗಳಲ್ಲಿ ಅನೇಕ ಉಲ್ಲೇಖಗಳಿವೆ. ಹರಪ್ಪ, ಮೊಹೆಂಜೋದಾರೋವಿನ ಕಾಲದ ಶಿಲಾಗೃಹಗಳ ಮೇಲಣ ಚಿತ್ರಗಳೂ ದೊರೆತಿವೆ. ಇವು ಶಿಲಾಯುಗದ ಚಿತ್ರಗಳೆಂದೂ ಕರೆಯುವುದುಂಟು. ಮಧ್ಯಪ್ರದೇಶದ ರಾಮಘಡ ಬೆಟ್ಟದ ಜೋಗಿಮಾರ ಗುಹೆಯಲ್ಲಿ ಆ ಬಗೆಯ ಚಿತ್ರಗಳು ಮೊದಲು ಕಂಡುವು. ಅವುಗಳಲ್ಲಿ ಪ್ರಾಣಿಗಳ, ಕಟ್ಟಡಗಳ ಚಿತ್ರಗಳಿವೆ. ಇಂಥ ಎಷ್ಟೋ ಗುಹೆಗಳಲ್ಲಿ ಚಿತ್ರಗಳು ನಾಶವಾಗಿರಲು ಸಾಧ್ಯ. ಹೈದರಾಬಾದ್ ಬಳಿಯ ಅಜಂತ, ಗ್ವಾಲಿಯರ್‌ನ ಬಾಗ್, ಪುದುಕೋಟೆಯ ಸಿತ್ತನವಾಸಿಲ್, ಸಿಂಹಳದ ಸಿಗಿರಿಯ ಗುಹೆಗಳ ಭಿತ್ತಿ ಚಿತ್ರಗಳು ಕ್ರಿ. ಶ.೧ನೆಯ ಶತಮಾನದಿಂದ ೨ ನೆಯ ಶತಮಾನದವರೆಗಿನ ಅವಧಿಯಲ್ಲಿ ರಚಿತವಾದವುಗಳು. ಇವು ೧೯ನೆ ಶತಮಾನದಲ್ಲಿ ಐರೋಪ್ಯ ಶೋಧಕರಿಂದ ಮೊದಲು ಬೆಳಕಿಗೆ ಬಂದುವು.

ಮುಂದೆ ಕಲಾವಿದರು ತಾಳೆಗರಿಗಳ ಮೇಲೆ ಪುರಾಣ ಪುಣ್ಯಕಥೆಗಳ ಜೊತೆಯಲ್ಲಿ ರೇಖೆಗಳನ್ನು ಚಿತ್ರಿಸತೊಡಗಿದರು. ದೇಶೀ ಕಾಗದದ ಮೇಲೆ ರೂಪಗೊಂಡ ಚಿತ್ರಗಳು ನೋಡಸಿಗುತ್ತವೆ. "ವಸಂತ ಮಿಲನ" ಎಂಬ ಸುಂದರ ಚಿತ್ರ ಬಟ್ಟೆಯ ಮೇಲೆ ಚಿತ್ರಿತವಾಗಿದೆ. ಮೂಡಬಿದರೆಯ ಬಸದಿಯಲ್ಲಿ "ಜಯಧವಳ" ಹಸ್ತಪ್ರತಿಯಲ್ಲಿ ಅಪೂರ್ವಚಿತ್ರಗಳನ್ನು ಕಾಣಬಹುದು. ಮೊಗಲರ ಕಾಲದ ಅನೇಕ ಕಲಾತ್ಮಕ ಗ್ರಂಥಗಳೂ ಸಿಕ್ಕಿವೆ.

ಮೊಗಲರ ಕಾಲದಲ್ಲಿದ್ದ ಪಾರಸೀ ಸಂಪ್ರದಾಯದಲ್ಲಿ ಭಾರತೀಯ ಚಿತ್ರಕಲೆ ಮಿಶ್ರವಾಗಿ ಭಾರತೀಯ ರಜಪೂತ ಪದ್ಧತಿ ಮತ್ತು ಮೊಗಲ್ ಪದ್ಧತಿ ಎಂದಾದುದು. ಆದರೂ ಭಾರತೀಯ ಚಿತ್ರಕಲೆ ತನ್ನತನವನ್ನು ಉಳಿಸಿಕೊಂಡು ದಕ್ಷಿಣ ಭಾರತದ ಪ್ರಾಂತ್ಯಗಳಲ್ಲಿ ಬೆಳೆಯಿತು. ಇದರ ಕುರುಹಾಗಿ ವಿಜಯನಗರ, ಲೇಪಾಕ್ಷಿ, ಮೈಸೂರು, ಶ್ರೀರಂಗಪಟ್ಟಣ, ಸೀಬೆ, ತಿರುವಾಂಕೂರು, ಮಧುರೆ, ಚಿನಕಂಜಿ, ತಿರುಚಿನಾಪಳ್ಳಿ ಮುಂತಾದ ಕಡೆ ಭಿತ್ತಿಪತ್ರಗಳನ್ನು ಈಕ್ಷಿಸಬಹುದು.

## ಉಗಮ

ಕರ್ನಾಟಕದ ಚಿತ್ರಕಲೆಯ ಇತಿಹಾಸದ ಪ್ರಾರಂಭ ಶಿಲಾಯುಗದಿಂದಲೇ ಎಂದು ತಿಳಿದು ಬರುತ್ತದೆ. ಕರ್ನಾಟಕದ ಚಿತ್ರಕಲೆ ಈಗ ಉಳಿದು ಬಂದಿರುವ ಬಗ್ಗೆ ಕರ್ನಾಟಕದ ಉತ್ತರ ಭಾಗದ ಹಲವು ಕಡೆ ನೋಡಲು ಸಿಗುವ ಗವಿಚಿತ್ರಗಳು ಬಹು ಪ್ರಾಚೀನವಾದುವುಗಳು. ಈ ಶಿಲಾಯುಗದ ಜನ ಗುಡ್ಡಗಳಲ್ಲೋ, ಗವಿಗಳಲ್ಲೋ ಇಳಿಜಾರು ಬಂಡೆಗಳ ಬುಡದಲ್ಲೋ ನೆಲೆಸಲಾರಂಭಿಸಿದರು. ಹಾಗೆ ನೆಲಸಿದ ಪ್ರಾಗೈತಿಹಾಸಿಕ ಮಾನವ ಚಿತ್ರಗಳನ್ನು ರಚಿಸುವ ಪ್ರವೃತ್ತಿಯುಳ್ಳವನಾಗಿದ್ದನೆಂಬುದು ಅವನು ಚಿತ್ರಿಸಿ ಬಿಟ್ಟು ಹೋದವುಗಳಿಂದ ವ್ಯಕ್ತವಾಗುತ್ತದೆ. ನಮ್ಮ ಪ್ರಾಚ್ಯ ಶೋಧಕರ ಶ್ರಮದಿಂದ ಪ್ರತ್ಯಕ್ಷ ಪ್ರಮಾಣದ ಚಿತ್ರಗಳನ್ನು ಇಂದಿಗೂ ಅನೇಕ ಗುಹೆಗಳಲ್ಲಿ ಭಿತ್ತಿಗಳ ಮೇಲೆ ಕಾಣಬಹುದು.

ಬಾಗಿಂ ಬಂಡೆಗಳ ಕೆಳಗೆ ಕೆಮ್ಮಣ್ಣಿನ ರೇಖಾಚಿತ್ರಗಳನ್ನು ಕಾಣಬಹುದು. ಜಿಂಕೆ, ಗೂಳಿ, ಮಾನವರ ಚಿತ್ರಗಳನ್ನು ಹೆಚ್ಚಾಗಿ ಇಲ್ಲಿ ಗಮನಿಸಬಹುದು. ಈ ಚಿತ್ರಗಳಲ್ಲಿ ಸಮತೋಲ ಶಕ್ತಿ ಇಲ್ಲದುದು ಸ್ಪಷ್ಟವಿದ್ದರೂ ಅವು ಅಸುಂದರವಾದರೂ ಚರಿತ್ರೆಯ ಬೆಳವಣಿಗೆಯಲ್ಲಿ ಅವು ಮುಖ್ಯವಾದುವುಗಳು. ಈ ಬಗೆಯ ಚಿತ್ರಗಳು ಬಳ್ಳಾರಿ, ಬಿಜಾಪುರ, ಗುಲ್ಬರ್ಗ, ರಾಯಚೂರು ಜಿಲ್ಲೆಗಳಲ್ಲಿ ಹೇರಳವಾಗಿ ಕಂಡುಬಂದಿವೆ. ಇಲ್ಲಿರುವ ಚಿತ್ರಗಳೆಲ್ಲಾ ಗೀರು ಚಿತ್ರಗಳು. ಮಾನವನಲ್ಲದೆ ಪ್ರಾಣಿಗಳ ಆಕಾರ

ಗಳನ್ನು ನೂತ್ರ ಸಾಂಕೇತಿಕವಾಗಿ ಬಣ್ಣದ ರೇಖೆಗಳಲ್ಲಿ ತೋರಿಸಿ ಕಣ್ಣು ಮೂಗುಗಳನ್ನು ಬಿಡಿಸದೆ ಉಳಿದೆಲ್ಲಾ ಚಪ್ಪಟೆಯಾಗಿ ವರ್ಣ ತುಂಬಿರುವುದೇ ಇವುಗಳ ವೈಖರಿ. ಬೆಣಕಲ್, ತೆಕ್ಕಲಕೋಟೆ, ಸನಗನಕಲ್ಲು, ತಾವರಗೇರಿ, ಗೊಂಬಿಗುಡ್ಡ, ವಾಲದಿಬ್ಬ, ಸಿಡಿಲುಗುಂಡಿ, ಮುಂತಾದ ಕಡೆ ಈಗಾಗಲೇ ಅಳಿದುಳಿದು ಬಂದಿರುವ ಚಿತ್ರಗಳು ಆದಿಮಾನವನ ಕಲಾಶಕ್ತಿಯನ್ನು ಸೂಚಿಸುತ್ತವೆ. ಇಲ್ಲಿ ಬಹುಮಟ್ಟಿಗೆ ಕೈ ಕೈ ಹಿಡಿದು ನೃತ್ಯದಲ್ಲಿರುವ, ಇಲ್ಲವೆ ಬೇಟೆಯಲ್ಲಿ ತೊಡಗಿರುವ ಮಾನವಾಕೃತಿಗಳನ್ನು ಗಮನಿಸಬಹುದು.

ಈ ಬಗೆಯ ಚಿತ್ರಕಲೆ ಬಹಳ ಕಾಲ ಬೆಳೆದು ಬಂತು. ಬೃಹತ್ ಶಿಲಾ ಸಮಾಧಿಗಳ ಬಳಿ ಇರುವ ಭಿತ್ತಿ ಚಿತ್ರಗಳಲ್ಲಿ ಕುದುರೆ ಸವಾರಿಯಲ್ಲಿರುವ ಬೇಟೆಗಾರರು ಕತ್ತಿ, ಈಟಿ, ಬಿಲ್ಲು ಬಾಣಗಳನ್ನು ಹೊಂದಿರುತ್ತಾರೆ. ಕುದುರೆಯ ಮೇಲೆ ಕೂತು ಹುಲಿ ಬೇಟೆಯಾಡುವುದು, ಕೈ ಕೈ ಹಿಡಿದು ಬೇಟೆಯಲ್ಲಿ ತೊಡಗಿರುವುದು ಮುಂತಾದ ಚಿತ್ರಗಳು ಹಿರೇ ಬೆನಕಲ್ಲಿನ ಬಾಚು ಬಂಡೆಗಳಲ್ಲಿವೆ. ಬಲಚಕ್ರ ಎಂಬಲ್ಲಿ ಕುದುರೆ ಸವಾರನ ಚಿತ್ರವಿದೆ. ಇದು ಸೊಗಸಾದ ಚಿತ್ರ. ಈ ಎಲ್ಲ ಚಿತ್ರಗಳು ಸುಂದರವೂ, ಸತ್ವಪೂರ್ಣವೂ ಆಗಿದೆ.

ಆದಿಮಾನವ ಗುಡಿಸಲು ಕಟ್ಟಿಕೊಂಡು ಮಡಕೆ ಕುಡಿಕೆಗಳನ್ನು ರಚಿಸುವಂತಾಗಿ ಒಂದೆಡೆ ನಿಲ್ಲುವಂತಾದಾಗ ಕಲೆಯ ಕಡೆ ಹೆಚ್ಚಿನ ಗಮನ ಹರಿಸಿರಬಹುದು. ಈ ಜನಕ್ಕೆ ಚಿತ್ರಕಲೆಯಲ್ಲಿ ಅಭಿರುಚಿ ಇತ್ತು ಎಂಬುದು ಅವರು ರೂಪಿಸಿ ಬಿಟ್ಟು ಹೋದ ಮಣ್ಣಿನ ಪಾತ್ರೆಗಳಿಂದ ವ್ಯಕ್ತವಾಗುತ್ತದೆ. ಮೊದಲು ಕೆಂಪು ವರ್ಣದ ಪಾತ್ರೆಗಳ ಮೇಲೆ ನೇರಳೆ ಇಲ್ಲವೆ ಕಪ್ಪನೆ ಬಣ್ಣದ ದಪ್ಪಗೆರೆಯ ಚಿತ್ರಗಳಿವೆ. ಇಂಥ ಸಚಿತ್ರ ಮಡಕೆಗಳು ಉತ್ತರ ಕರ್ನಾಟಕದ ಭಾಗಗಳಲ್ಲಿ ದೊರೆತಿವೆ. ಹೊಳಪಿನ ಮಡಕೆಗಳ ಮೇಲೆ ಬಿಳಿ ಬಣ್ಣದ ರೇಖೆಗಳನ್ನು ಅಡ್ಡಾದಿಡ್ಡಿಯಾಗಿ ಅಲೆಅಲೆಯಾಗಿ ಎಳೆದು ಚಿಕ್ಕ ಹಾಗೂ ದಪ್ಪ ಚುಕ್ಕೆಗಳಿಂದ ಪುಷ್ಪಗಳ ವಿವಿಧ ಆಕಾರಗಳನ್ನು ಚಿತ್ರಿಸಿ ಕೆಂಪಿನ ಲೇಪನ ಬಳಸಿರುವುದು ಕಂಡುಬರುತ್ತದೆ. ಇಂಥವು ಚಂದ್ರವಳ್ಳಿ, ಮಾಸ್ಕಿ, ಹೆಮ್ಮಿಗೆ, ಹರಕಲ್ಲು, ಬ್ರಹ್ಮಗಿರಿ, ಮಾಧವಪುರ, ಬೆಂಗಳೂರು, ವಡಗಾಂವ ಮೊದಲಾದ ಕಡೆ ದೊರೆಯುತ್ತವೆ. ಮುಂದಿನ ಜನಾಂಗದವರು ತಮ್ಮ ಮನೆಗಳ ಗೋಡೆಗಳ ಮೇಲೆ ಕೆಮ್ಮಣ್ಣಿನಲ್ಲಿ ಇಲ್ಲವೇ ಸುಣ್ಣದಲ್ಲಿ ಚಿತ್ರಗಳನ್ನು ಬಿಡಿಸುವುದು, ಅನಂತರ ರಂಗವಲ್ಲಿ ಹಾಕುವುದು ರೂಢಿಯಾದಂತೆ ತೋರುತ್ತದೆ.

ನಮ್ಮ ಚಿತ್ರಕಲೆಯ ಪ್ರಾಚೀನತೆಯ ಬಗ್ಗೆ ಪುರಾಣ, ಕಾವ್ಯ, ಶಾಸ್ತ್ರಗಳಲ್ಲಿ ಅನೇಕ ಉಲ್ಲೇಖಗಳಿವೆ. "ಚಿತ್ರಶಾಲೆ", "ಚಿತ್ರ ಗೃಹಗಳು" ಬಹಳ ಹಿಂದೆಯೇ ಇದ್ದವೆಂದು ರಾಮಾಯಣ, ಮಹಾಭಾರತದ ಕಾವ್ಯಗಳಲ್ಲಿ ವ್ಯಕ್ತವಾಗಿವೆ. ಭಾಸನ ನಾಟಕಗಳಲ್ಲಿ "ಚಿತ್ರಕರ್ಮ"ದ ಪ್ರಸ್ತಾಪ ಅನೇಕ ಬಾರಿ ಬಂದಿದೆ. ಹಿಂದಿನಿಂದಲೂ ಕಲಾಕೋವಿದರಿಗೆ ರಾಜಾಶ್ರಯವಿದ್ದಿತು. ಅವರು ಇಂದಿನ ಪ್ರಮುಖ ಘಟನೆಗಳನ್ನು ಚಿತ್ರಗಳಲ್ಲಿ ರೂಪಿಸುತ್ತಾ ಬಂದರು.

ಕನ್ನಡದ ಆದಿಕವಿ ಪಂಪನ (ಕ್ರಿ. ಶ. ೯೪೧) ಕೃತಿಗಳಲ್ಲೂ ಚಿತ್ರಕಲೆಯ ಪ್ರಸ್ತಾಪ ಒಂದೆರಡು ಸಂದರ್ಭಗಳಲ್ಲಿ ಬಂದಿದೆ. ರಾಮಚಂದ್ರ ಪುರಾಣದಲ್ಲಿ ನಾರದ ಸೀತೆಯ ರೂಪವನ್ನು ಚಿತ್ರಿಸಿದ ವರ್ಣನೆಯೂ ಬರುತ್ತದೆ. ಆ ಕಾಲದಲ್ಲಿ "ಭಿತ್ತಿ" ಹಾಗೂ "ಫಲಕ"ಗಳ ಮೇಲೆ ಅಲ್ಲದೆ "ದುಕುಳಪಟ"ದ (ಬಟ್ಟೆ) ಮೇಲೂ ಅಪೂರ್ವ ಚಿತ್ರ ರಚಿಸಲಾಗುತ್ತಿತ್ತು. "ಭರತೇಶ ವೈಭವ" ದಲ್ಲಿ ರತ್ನಾಕರವರ್ಣಿ (ಕ್ರಿ. ಶ. ೧೫೫೭) ನಾಟ್ಯಶಾಲೆಯ ಚಿತ್ರಗಳನ್ನು ವರ್ಣಿಸಿದ್ದಾನೆ.

**ಅಜಂತ**

ಕನ್ನಡ ನಾಡಿನಲ್ಲಿ ಚಿತ್ರಕಲೆ ಬೆಳೆದು ಬಂದ ಕುರುಹು ಕ್ರಿ. ಪೂ. ೨ ನೆಯ ಶತಮಾನದಿಂದಲೇ ಕಾಣುತ್ತದೆ. "ಅಜಂತ"ದ ಭಿತ್ತಿಚಿತ್ರಗಳು ಕ್ರಿ. ಪೂ. ೨ನೆಯ ಶತಮಾನದಿಂದಲೇ ಆರಂಭವಾಗಿ ೭ ನೆಯ ಶತಮಾನದ ತನಕ ಬೆಳೆದು ಬಂದುವು. ಅಜಂತದ ಚಿತ್ರಗಳನ್ನು ಬರೆಸಿದ ಚಾಲುಕ್ಯವಂಶ ದೀಪಕರನ್ನು ಕನ್ನಡಿಗರು ಎಂದೆಂದೂ ಮರೆಯುವಂತಿಲ್ಲ. ಅಜಂತ ಗುಹೆಗಳ ಗೋಡೆ, ಕಂಬ, ಉಪ್ಪರಿಗೆ, ಒಳಭಾಗಗಳಲ್ಲಿನ ಭಿತ್ತಿಚಿತ್ರಗಳನ್ನು ಆಗಿನ ಕಾಲದ ಬೌದ್ಧ ಸನ್ಯಾಸಿಗಳು ಮತ್ತು ಅರಸರುಗಳು ತಮ್ಮ ಧರ್ಮ ಪ್ರಚಾರಕ್ಕಾಗಿ ಬರೆಂಬಿಸಿದರು. ಆಗಿನ ಚಿತ್ರಕಾರರು ಗುಹೆಗಳ ಕಲ್ಲಿನ ಭಿತ್ತಿಗಳ ಮೇಲೆ ಪಾವಲಿಯಷ್ಟು ದಪ್ಪವಾದ ಸುಣ್ಣದ ಗಚ್ಚನ್ನು ನಯ ಮಾಡಿ, ಈ ಗಚ್ಚು ನೀರಿನಲ್ಲಿ ನೆನೆದಿರುವಾಗ ಇದರ ಮೇಲೆ ಕುಂಚದಿಂದ ಕೆಂಪುವರ್ಣದಲ್ಲಿ ಸುತ್ತುಗೆರೆಗಳನ್ನು ಹಾಕಿ ತರುವಾಯ ಚಿತ್ರದ ಆಯಾಭಾಗಕ್ಕೆ ಜಲವರ್ಣಗಳನ್ನು ಬಳಸುತ್ತಿದ್ದರು. ಅಲ್ಲಿಯ ಚಿತ್ರಗಳಲ್ಲಿ ಭಾವ, ಭಂಗಿ, ಮುದ್ರೆಗಳು, ಹಸ್ತಗಳು, ಕೇಶಾಲಂಕರಣ, ಉಡಿಗೆ ತೊಡಿಗೆ, ಆಭರಣ, ಗಿಡ ಮರ ಬಳ್ಳಿ, ಹೂ, ಹಣ್ಣು, ಹಂಸ, ಹಕ್ಕಿಗಳು, ಹಾವು, ಹುಲ್ಲೆಗಳು – ಇತ್ಯಾದಿ ಮಾನವ ದೃಷ್ಟಿಗೆ ದೊರಕುವ, ಊಹೆಗೆ ತೋರುವ, ಎಲ್ಲಾ ಜೀವರಾಶಿಗಳು ರಮ್ಯವಾಗಿ ಚಿತ್ರಿತವಾಗಿವೆ. ಇವುಗಳಲ್ಲಿ ಸ್ವಭಾವ ಸುಂದರತೆ, ರಸಭಾವಗಳು ಸ್ಪಷ್ಟವಾಗಿ ವ್ಯಕ್ತವಾಗುವುವು. ಪ್ರಕೃತಿದತ್ತವಾದ ಸಾಮ್ಯತೆ ಸಂಯೋಜನೆಗಳನ್ನು ಈ ಚಿತ್ರಗಳಲ್ಲಿ ಕಾಣಬಹುದು. ಪ್ರತಿ ವ್ಯಕ್ತಿಯ ಚಿತ್ರವೂ ಲಾಲಿತ್ಯ, ಸೌಂದರ್ಯ, ಭಾವಪೂರ್ಣತೆಗಳಿಂದ ಕೂಡಿದೆ. ಅಜಂತದ ಚಿತ್ರಕಾರರು ತಮ್ಮ ಚಿತ್ರರಚನಾ ಸಂವಿಧಾನದಲ್ಲಿ ಆಂತರಿಕ ಭಾವನಾಲೋಲರಾಗಿ ಪರಮಾರ್ಥದ ಕಡೆಗೆ ಸಾಗಿದ್ದಾರೆ. ಅವರು ರಚಿಸಿರುವ ಚಿತ್ರಗಳು ಅವರ ಕುಂಚದಿಂದಾದ ಕಾವ್ಯ. ಅವರ ಕೀರ್ತಿ ವಿಶ್ವಕೀರ್ತಿ. ಈ ಚಿತ್ರಗಳ ರೂಪರೇಖಾವಿನ್ಯಾಸ, ಬಣ್ಣ, ನಿಲುವು ಒಲವುಗಳು ಯಾರ ಹೃದಯವನ್ನಾದರೂ ಸೆರೆಹಿಡಿಯದಿರವು. ಈ ಚಿತ್ರಗಳಲ್ಲಿನ ಸೌಮ್ಯತೆ, ಪ್ರಸನ್ನತೆ, ಜೀವಂತಿಕೆ ಸಾಮರಸ್ಯಗಳನ್ನೂ ಕರಚರಣವಿನ್ಯಾಸವನ್ನೂ ಶರೀರ ಭಂಗಿಗಗಳನ್ನೂ ಮುಖ ಮುದ್ರೆಗಳನ್ನೂ ವೀಕ್ಷಿಸಿದರೆ ಆ ಚಿತ್ರಕಾರರ ಕುಂಚ ಕುಶಲತೆ ಅಜರಾಮರವಾದುದು ಎಂಬುದು ವ್ಯಕ್ತವಾಗುತ್ತದೆ. ಅಲ್ಲಿ ಬಳಸಲಾಗಿರುವ ದೇಶೀಯ ವರ್ಣಗಳು, ಮನಸ್ಸನ್ನು ಎಂದಿಗೂ ಮಾಸದ ಆ ವರ್ಣಗಳ ವೈಖರಿ ತಿಳಿಯಲಾಗದ ಮರ್ಮ ಕಥೆಯಾಗಿದೆ.

"ಪರಮೇಶ್ವರ" ಎಂಬ ಬಿರುದನ್ನು ಪಡೆದ ಕನ್ನಡಿಗನಾದ ಚಾಲುಕ್ಯವಂಶದ ಎರಡನೆಯ ಪುಲಿಕೇಶಿಯ ಕಾಲದಲ್ಲಿ, ಇರಾಣದ ರಾಯಭಾರಿಗಳು ಅವನ ಒಡ್ಡೋಲಗಕ್ಕೆ ಬಾದಿದ್ದರೆಂಬುದು ಈ ಭಿತ್ತಿ ಚಿತ್ರಗಳಿಂದ ವ್ಯಕ್ತವಾಗುತ್ತದೆ. ಪುಲಿಕೇಶಿಯ ಚಿತ್ರ ನಮಗೆ ಇಲ್ಲಿ ದೊರೆತಿದೆ. ನಮ್ಮ ದುರ್ದೈವದಿಂದಾಗಿ ಈ ಚಿತ್ರದಲ್ಲಿ ಪುಲಿಕೇಶಿಯ ಮುಖವನ್ನು ಕೆಡಿಸಲಾಗಿದೆ. ಇಲ್ಲಿಯ ಮತ್ತೊಂದು ಗುಹೆಯಲ್ಲಿ ರಾಜವಿಲಾಸ ಎಂಬ ನೌಕೆಯ ಚಿತ್ರವಿದ್ದು ಅದರಲ್ಲಿಯ ವ್ಯಕ್ತಿಚಿತ್ರ ಪುಲಿಕೇಶಿಯಾವೇ ಎಂದು ಹೇಳಲಾಗಿದೆ. ಕನ್ನಡಿಗರ ಚಿತ್ರಕಲೆಯ ಕೀರ್ತಿಯನ್ನು ದಶದಿಕ್ಕುಗಳಿಗೂ ಪ್ರಸರಿಸುವಂತೆ ಮಾಡಿದವರು ಚಾಲುಕ್ಯರು. ಇಂಥ ವರ್ಣದ ಸುಂದರ ಭಿತ್ತಿ ಚಿತ್ರಗಳು

ಧಾರ್ಮಿಕ ದರ್ಶನ ಕೇಂದ್ರವಾದ ಬಾದಾಮಿ ಗುಹೆಗಳಲ್ಲೂ ಇವೆ. ಇಲ್ಲಿಯ ವೈಷ್ಣವ ಗುಹೆಯನ್ನು ೨ನೆಯ ಪುಲಿಕೇಶಿಯ ಚಿಕ್ಕಪ್ಪನಾದ ಮಂಗಲೇಶನೆಂಬುವನು ೫೦೦ನೆಯ ಶತಕದಲ್ಲಿ ಕೊರೆಸಿದ. ಇಲ್ಲಿಯೂ ಅಜಂತದ ಚಿತ್ರಕಲೆಯ ವೈಶಿಷ್ಟ್ಯವನ್ನೇ ಕಾಣಬಹುದು. ೬ನೆಯ ಶತಮಾನಕ್ಕೆ ಸೇರಿದ ಚಿತ್ರಕಲೆ ಬಾದಾಮಿಯಲ್ಲಿ ಕಂಡು ಬರುತ್ತದೆ. ಬಾದಾಮಿಯ ಚಾಲುಕ್ಯ ಅರಸರು ಚಿತ್ರಕಲೆಗೆ ಕೊಟ್ಟ ಪ್ರೋತ್ಸಾಹ ಮರೆಯುವಂಥದಲ್ಲ. ಮೊದಲನೆಯ ಗುಹೆಯ ಭಿತ್ತಿ ಇಮ್ಮಡಿ ಪುಲಿಕೇಶಿಯ ಚಿತ್ರದಿಂದ ಕೂಡಿದೆ. ಮೂರನೆಯ ಗುಹೆಯಲ್ಲೂ ಭಿತ್ತಿಚಿತ್ರಗಳಿವೆ. ಇವು ಅಜಂತದ ಚಿತ್ರಗಳ ಪದ್ಧತಿಗೆ ಸೇರಿದವು. ರಾಜನ ಒಡ್ಡೋಲಗದ ಚಿತ್ರಗಳಲ್ಲಿ ರಾಜನ ಪಕ್ಕದಲ್ಲಿ ಕುಳಿತಿರುವಂತೆ ವಾದ್ಯಗಾರರ, ಪರಿವಾರದವರ, ಆಸ್ಥಾನಿಕರ ನಡುವೆ ನರ್ತಕಿಯರು ಇರುವಂತೆ ರಚಿಸಿರುವ ಯೋಜನೆ ಚಿತ್ತಮೋಹಕವಾಗಿದೆ. ಆದರೆ ಇದರ ಬಣ್ಣ ಕಳೆದು ಹೋಗಿ ಅಸ್ಪಷ್ಟವಾಗಿ ಕಾಣುತ್ತಿದೆ. ಕೀರ್ತಿವರ್ಮ ಮತ್ತು ಅವನ ರಾಣಿಯರು ಇರುವ ಮತ್ತೊಂದು ಚಿತ್ರ ಅಲ್ಲಿದೆ. ಈ ಚಿತ್ರಗಳನ್ನು ರಚಿಸಿದ ಕಲಾಕಾರರ ಕಲಾಸಾಧನೆ ಸಿದ್ಧಿ ಯಾರಾದರೂ ಮೆಚ್ಚುವಂತಹದು.

ಸಾಹಿತ್ಯದಲ್ಲಿ ಶಾಸನಗಳಲ್ಲಿ ಚಿತ್ರಕಾರರ ಬಗ್ಗೆ ವಿವರಗಳು ಕಂಡುಬರುತ್ತವೆ. ೬ನೆಯ ಶತಮಾನದ ಅನಂತರ ಶಿಲಾದೇವಾಲಯಗಳಲ್ಲಿ ಮೂರ್ತಿಶಿಲ್ಪಕ್ಕೆ ಪ್ರಾಧಾನ್ಯ ಬಂದು ವರ್ಣಚಿತ್ರ ಕಲೆಗೆ ಅವಕಾಶ ಇಲ್ಲದಂತಾಗಿರಬಹುದು. ಅದರ ಬದಲು ಇಟ್ಟಿಗೆ ಮರಗಳಿಂದ ನಿರ್ಮಿಸಿದ ಅರಮನೆ ಗುರುಮನೆಗಳಲ್ಲಿ ಇಂಥ ಚಿತ್ರಗಳನ್ನು ರಚಿಸುತ್ತ ಬಂದಿರಬೇಕು. ಹೊಯ್ಸಳರ ಕಾಲದ ದೇಗುಲಗಳಲ್ಲಿ ಒಳಛಾವಣಿಯಲ್ಲಿ ರೇಖಾಚಿತ್ರಗಳು ಉಳಿದು ಬಂದಿವೆ. ವಿಷ್ಣುವರ್ಧನನ ಕಾಲದಲ್ಲಿ ಶ್ರವಣಬೆಳಗೊಳದ ಶಾಂತಿನಾಥ ಬಸದಿಯ ಭಿತ್ತಿಗಳು ಹಾಗೂ ಚಾವಣಿಗಳು ಚಿತ್ರಗಳಿಂದ ಕೂಡಿದ್ದ ಕುರುಹುಗಳು ಕಂಡುಬರುತ್ತವೆ.

## ವಿಜಯ ನಗರ

ವಿಜಯ ನಗರದ ರಾಜರ ಕಾಲದಲ್ಲಿ ವರ್ಣಚಿತ್ರಕಲೆ ಅತ್ಯಂತ ಹಿರಿಮೆಯನ್ನು ಸಾಧಿಸಿತು. ಕಲ್ಲಿನ ದೇವಾಲಯಗಳ ಚಾವಣಿಗಳ ಚಿತ್ರಗಳನ್ನು ಗಮನಿಸಬಹುದು. ಹಂಪೆಯ ವಿರೂಪಾಕ್ಷ ದೇವಾಲಯದ ಮುಂದೆ ಕೃಷ್ಣದೇವರಾಯ ಕಟ್ಟಿಸಿದ ರಂಗಮಂಟಪದ ಚಾವಣಿ ಹಾಗೂ ತೊಲೆಗಳ ಮೇಲೆ ಹಲವಾರು ವರ್ಣಚಿತ್ರಗಳನ್ನು ಕಾಣಬಹುದಾಗಿದೆ. ಇಲ್ಲಿ ಗಿರಿಜಾಕಲ್ಯಾಣ, ತ್ರಿಪುರಾಸುರ ಸಂಹಾರ, ಅರ್ಜುನ ಮತ್ಸ್ಯಭೇದ, ವಿಷ್ಣುವಿನ ದಶಾವತಾರ ಮುಂತಾದವು ಇವೆ. ಈಚೆಗೆ ಈ ಚಿತ್ರಗಳನ್ನು ಬಣ್ಣಕೊಟ್ಟು ತಿದ್ದಿಸಲಾಗಿದೆ. ಇದರಿಂದಾಗಿ ಮೂಲ ವರ್ಣಗಳ ಸೊಬಗಿಗೆ ಅನ್ಯಾಯ ಮಾಡಿದಂತಾಗಿದೆ. ಇದೇ ಕಾಲದ ಚಿತ್ರಗಳು ಆನೆಗೊಂದಿಯಲ್ಲಿ ಮಂಟಪವೊಂದರ ಚಾವಣಿಯಲ್ಲಿವೆ. ಆದರೆ ಅವು ಅಸ್ಪಷ್ಟವಾಗಿವೆ. ಈ ಕಾಲಕ್ಕೆ ಸೇರುವ ಚಿತ್ರಗಳು ಆಂಧ್ರ ಪ್ರದೇಶದಲ್ಲಿ ಹಿಂದೂಪುರಕ್ಕೆ ಸಮೀಪದಲ್ಲಿರುವ ಲೇಪಾಕ್ಷಿಯಲ್ಲಿವೆ. ವಿಜಯನಗರದ ಒಸಿನುಗೊಂಡದಲ್ಲಿದ್ದ ವಿರುಪಣ್ಣನೆಂಬ ಭಂಡಾರಿ ತನ್ನ ಅಭಿಮಾನ ದೇವರಾದ ವೀರಭದ್ರ ಸ್ವಾಮಿಯ ಗುಡಿಯನ್ನು ಲೇಪಾಕ್ಷಿ ಎಂಬ ಗ್ರಾಮದಲ್ಲಿ ಕಲಾತ್ಮಕವಾಗಿ ಕಟ್ಟಿಸಿದ. ವಿಜಯನಗರ ಕಾಲದ ಶಿಲ್ಪ ಹಾಗೂ ಚಿತ್ರಕಲೆ ಇಲ್ಲಿ ಉನ್ನತಿ ಮುಟ್ಟಿದೆ. ಶಿಲ್ಪಕಲೆಗೆ ಕೊಟ್ಟ ಪ್ರಾಶಸ್ತ್ಯವನ್ನು ವಿರುಪಣ್ಣ ಇಲ್ಲಿ ಚಿತ್ರಕಲೆಗೆ ನೀಡಿದ್ದಾರೆ. ಲೇಪಾಕ್ಷಿಯದು ಅಜಂತ ಕಲೆಗೆ ಸರಿಮಿಗಿಲಾದುದು. ದೇವಾಲಯದ ಚಾವಣಿಗಳಲ್ಲಿ ಚಿತ್ರಗಳು ಮಸುಕಾಗಿದ್ದವು. ಈ ಚಿತ್ರಗಳನ್ನು ಈಚೆಗೆ ಸರ್ಕಾರದವರು ಸ್ವಚ್ಛಗೊಳಿಸಿ ಸ್ಪಷ್ಟವಾಗಿ ಕಾಣುವಂತೆ ಮಾಡಿದ್ದಾರೆ. ಆಗಿನ ವರ್ಣ ಚಿತ್ರಗಳು ಇನ್ನೂ ಹೊಚ್ಚ ಹೊಸದಾಗಿ ತೋರುತ್ತಿವೆ. ಒಂದೊಂದು ಚಿತ್ರವೂ ಒಂದೊಂದು ವೈಶಿಷ್ಟ್ಯದಿಂದ ಕೂಡಿ ತನ್ನದೇ ಆದ ಸೊಬಗನ್ನು ಬೀರುತ್ತಿದೆ. ಹದಿನಾರು ಸ್ತಂಭಗಳ ಮೂಲಾಂಕಣದ ಚಾವಣಿಯಲ್ಲಿ ೧೦–೨೦ ಅಡಿಯ ಬೃಹದಾಕಾರದ ವೀರಭದ್ರ ಸ್ವಾಮಿಯ ಚಿತ್ರ ಯಾರನ್ನಾದರೂ ಬೆರಗುಗೊಳಿಸದಿರದು.

ಶ್ರೀ ರಾಮಚಂದ್ರನ ದೇವಾಲಯದಲ್ಲಿ ದಶಾವತಾರದ ಚಿತ್ರಗಳನ್ನು ಬಹು ರಮ್ಯವಾಗಿ ಬಿಡಿಸಲಾಗಿದೆ. ಅಗಸ್ತ್ಯರು ತಪಸ್ಸು ಮಾಡಿದ್ದ ಸ್ಥಳವೆಂದು ನಿರ್ದೇಶಿಸಲಾದ ದೇವಾಲಯದ ಮೂಲೆಯ ಕತ್ತಲು ಕೋಣೆಯ ಚಾವಣಿಯಲ್ಲೂ ವಿವಿಧ ಕೃತಿಗಳನ್ನು, ಪಲ್ಲವಗಳನ್ನು ಕಾಣಬಹುದು. ದೇವಾಲಯದ ಹೊರಾಂಗಣದ ಚಾವಣಿಯಲ್ಲೂ ಸ್ಕಾಂದ ಪುರಾಣದಲ್ಲಿನ ಶಿವಲೀಲೆ, ವಿನೋದವನ್ನು ಮೋಹಕವಾಗಿ ಚಿತ್ರಿಸಲಾಗಿದೆ.

ಇಲ್ಲಿನ ಚಿತ್ರಗಳಲ್ಲಿ ಕೆಲವು ಗಮನಾರ್ಹ ವೈಚಿತ್ರ್ಯಗಳನ್ನು ಕಾಣಬಹುದಾಗಿದೆ. ಮಾನವಾಕೃತಿಗಳಲ್ಲೂ ಮುಖ ಓರೆಯಾಗಿರಲಿ ನೇರವಾಗಿರಲಿ ಎರಡು ಕಣ್ಣುಗಳನ್ನು ಚಿತ್ರಿಸಿರುವುದನ್ನು ಇಲ್ಲಿ ಮಾತ್ರ ಕಾಣಬಹುದು. ಎಲ್ಲಾ ಪುರುಷರ ಚಿತ್ರಗಳಲ್ಲೂ ಮೀಸೆಯ ಅಂಚನ್ನು ಕೆಳಮುಖವಾಗಿ ಬಿಡಿಸಿದ್ದರೆ, ವೀರಭದ್ರನ ಮೀಸೆಯನ್ನು ಮಾತ್ರ ಮೇಲುಮುಖವಾಗಿ ಬಿಡಿಸಲಾಗಿದೆ. ಪ್ರತಿ ಸ್ತ್ರೀ ಚಿತ್ರದ ವಸ್ತ್ರಾಭರಣ ಸೌಂದರ್ಯದ ವರ್ಣವೈಖರಿ, ಕುಸುರಿನ ಕಲೆ ಮೋಹಕವಾಗಿದೆ. ಅಲ್ಲಿ ಕಾಣುವ ಚಿತ್ತಾಕರ್ಷಕ ಸೌಂದರ್ಯ – ನಾಲ್ಕು ನೂರು ವರ್ಷಗಳ ಹಿಂದಿನದು – ಕರ್ನಾಟಕದ ಚಿತ್ರಕಲೆಯ ಹಿರಿಮೆಯನ್ನು ಸಾರುವಂತಿದೆ.

ಲೇಪಾಕ್ಷಿಯ ಚಿತ್ರಗಳ ರಚನೆಯಲ್ಲಿ ಕಲಾವಿದರು ಅತ್ಯಂತ ಕೌಶಲವನ್ನು ಮೆರೆದಿದ್ದಾರೆ. ವಿಶಿಷ್ಟ ಕಲ್ಪನಾಶಕ್ತಿಯನ್ನು ತೋರಿದ್ದಾರೆ. ಪರಂಪರಾಗತವಾಗಿ ಬಂದ ನಮ್ಮ ಸಂಪ್ರದಾಯಗಳಲ್ಲಿ ಅರಿತು ನುರಿತ ಅದ್ಭುತಕಲೆಯನ್ನು ಸೃಷ್ಟಿಸಿದ್ದಾರೆ. ಈ ಚಿತ್ರಗಳೆಲ್ಲಾ ಕಲ್ಲಿನ ಮೇಲೆ ಕಟುವಾಗಿ ಮೆತ್ತಿರುವ ನಯವಾದ ಗಾರೆಯ ಮೇಲೆ ರಚಿತವಾಗಿದೆ. ವರ್ಣಗಳ ವೈಖರಿಯೂ ಕುಂಚಗಳ ಸೂಕ್ಷ್ಮತೆಯೂ ಗಮನಾರ್ಹವಾದುವು. ಮೂಲವರ್ಣಗಳಾದ ಬಿಳುಪು, ಹಳದಿ, ಕೆಂಪು, ನೀಲಿ–ಇವುಗಳ ಪರಸ್ಪರ ಮಿಶ್ರಣದಿಂದ ನಾನಾ ವರ್ಣಗಳನ್ನು ಕಲಾವಿದರು ಪಡೆದುಕೊಂಡಿದ್ದಾರೆ. ೧೬ ನೆಯ ಶತಮಾನದ ಗ್ರಂಥವಾದ "ಶಿಲ್ಪರತ್ನ"ದಲ್ಲಿ ಬರುವ ಎಲ್ಲಾ ಲಕ್ಷಣಗಳು ಈ ಕಲಾಪ್ರಪಂಚದಲ್ಲಿ ಚೆನ್ನಾಗಿ ವ್ಯಕ್ತವಾಗುತ್ತವೆ. ನೂರಾರು ವರ್ಷಗಳಿಂದ ಅಚ್ಚಳಿಯದ ಈ ವರ್ಣಗಳ ರಹಸ್ಯ ಅಚ್ಚರಿಯನ್ನುಂಟುಮಾಡುತ್ತದೆ. ವರ್ಣಮಿಶ್ರಣದಲ್ಲಿ ನಮ್ಮ ಹಿರಿಯರು ಎಷ್ಟೋ ಪ್ರಯೋಗಗಳನ್ನು ಆಗಲೇ ನಡೆಸಿ ಹೋಗಿದ್ದಾರೆ. ಅವುಗಳ ಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳಲು ಸರಿಯಾಗಿ ಸಂಶೋಧನೆ ಅಗತ್ಯವಾಗಿದೆ.

ಲೇಪಾಕ್ಷಿಯ ಕಲಾವೈಭವವನ್ನು ನೋಡಿ ಕನ್ನಡಿಗರು ಹೆಮ್ಮೆ ಪಡಬೇಕು. ಇಂಥ ಅಪೂರ್ವ ಕಲೆಯನ್ನು ಸೃಜಿಸಲು ಪ್ರೇರಕಶಕ್ತಿಯಾದ ಕನ್ನಡದ ವಿರುಪಣ್ಣನ ಕಲಾಪ್ರೇಮ ಅತಿ ದೊಡ್ಡದು. ಶಿಲ್ಪ ಹಾಗೂ ಚಿತ್ರಕಲೆಗಳ ಒಂದು ಅಪೂರ್ವ ಸಂಗಮವನ್ನು ನಾವು ಇಲ್ಲಿ ಮಾತ್ರ ಕಾಣುವೆವು. ಈ ಕಲಾವೈಭವ ಇದುವರೆಗೂ ಉಳಿದು ಬಂದಿರುವುದು ನಮ್ಮ ಪುಣ್ಯ ವಿಶೇಷ. (ಇದೇ ಕಾಲದ್ದೆನ್ನಬಹುದಾದ ಚಿತ್ರದುರ್ಗದ ಅಂಕಳಿಸ್ವಾಮಿ ಗುಹೆಯ ವರ್ಣಚಿತ್ರಗಳನ್ನು ನೆನೆಯಬಹುದು).

## ಮೈಸೂರು ಒಡೆಯರ ಕಾಲ

ವಿಜಯನಗರದ ಕಾಲದ ಅನಂತರ ಚಿತ್ರಕಲೆಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟವರು ಮೈಸೂರು ಅರಸರು. ಇವರ ಕಾಲದಲ್ಲಿ ಅನೇಕ ದೇವಾಲಯಗಳು ಮತ್ತು ಕಟ್ಟಡಗಳಲ್ಲಿ ಭಿತ್ತಿ ಚಿತ್ರಗಳ ರಚನೆಯಾಗಿದೆ.

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಿರ್ಮಿತವಾದ ಶ್ರವಣಬೆಳಗೊಳದ ಕಲ್ಯಾಣಿಯ ಮಂಟಪದಲ್ಲಿ ಆ ಕಾಲದ ಚಿತ್ರಗಳಿಂದ ಕೂಡಿದ ಕುರುಹುಗಳು ಮಾತ್ರ ಕಾಣಸಿಗುತ್ತವೆ. ಎಡೆಯೂರಿನ ತೋಂಟದ ಸಿದ್ಧಲಿಂಗೇಶ್ವರ ದೇವಸ್ಥಾನದ ಮುಖ ಮಂಟಪದಲ್ಲಿ ಪಂಚವಿಂಶತಿ ಲೀಲಾಮೂರ್ತಿಗಳೂ ಸಿದ್ಧಲಿಂಗಯತಿಯ ಜೀವಿತಕ್ಕೆ ಸೇರಿದ ಚಿತ್ರಗಳೂ ಇವೆ. ಬೆಳವಾಡಿಯ ಮಂಟೇಸ್ವಾಮಿ ಮಠದ ಹಜಾರದಲ್ಲಿ ರಾಮಾಯಣ ಮತ್ತು ಶಿವಲೀಲೆಗಳ ಚಿತ್ರಗಳಿವೆ. ಗುಬ್ಬಿಯ ಮೈಲಪ್ಪಂಗುಡಿಯ ಮುಖಮಂಟಪದಲ್ಲಿಯೂ ಶಿವನ ಪಂಚವಿಂಶತಿ ಲೀಲಾಮೂರ್ತಿಗಳ ಸುಂದರ ಚಿತ್ರಗಳಿವೆ.

## ದರಿಯು ದೌಲತ

ಟಿಪ್ಪುವಿನ ಕಾಲದಲ್ಲಿ ಕಟ್ಟಿದ ಶ್ರೀರಂಗಪಟ್ಟಣದ ದರಿಯಾದೌಲತ್‌ನಲ್ಲಿ ಭಿತ್ತಿಚಿತ್ರಗಳು ಇಂದಿಗೂ ಆ ಕಾಲದ ಚಿತ್ರಕಲೆಯ ಹಗ್ಗುರುತನ್ನು ಸಾರುತ್ತಿವೆ. ಹೈದರಾಲಿ ಪಶ್ಚಿಮ ಸಮುದ್ರ ತೀರದ ಮಂಗಳೂರು ಮುಂತಾದ ಪ್ರಾಂತಗಳನ್ನು ಜಯಿಸಿ ಲಕ್ಷದೀಪವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಪೆರಂಬಾಕಂ ಬಳಿ ಯುದ್ಧದಲ್ಲಿ ಬ್ರಿಟಿಷ್ ಸೈನ್ಯವನ್ನು ಹೈದರಾಲಿ ಸೋಲಿಸಿ ಅಲ್ಲಿಂದ ಮದರಾಸಿನವರೆಗೂ ಹೋಗಿ ಅಲ್ಲಿಯೂ ವಿಜಯ ಸ್ಥಾಪಿಸಿದ. ಹೀಗೆ ದೊಡ್ಡ ನವಾಬನ ದೌಲತ್ತು ಸಮುದ್ರದ ಮೇಲೆ ಕೂಡ ಪ್ರಸರಿಸಿದ ಸಂತೋಷಕ್ಕಾಗಿ ಅದರ ಜ್ಞಾಪಕಾರ್ಥವಾಗಿ ಈ ಮಹಲನ್ನು ಕಟ್ಟಿಸಿ ಇದಕ್ಕೆ "ದರಿಯಾದೌಲತ್" ಎಂದರೆ ಸಮುದ್ರದ ಮೇಲಿನ ರಾಜ್ಯ ಎಂದು ಹೆಸರಿಟ್ಟ. ಇದರ ಸುತ್ತಲೂ ರಮ್ಯ ಉದ್ಯಾನವನ್ನು ನಿರ್ಮಿಸಿ ಬಂಗಾರದೊಡ್ಡಿ ನಾಲೆಯಿಂದ ನೀರು ಬರುವಂತೆ ಮಾಡಿದ. ಮುಸ್ಲಿಂ ವಾಸ್ತುಕಲೆಯ ಈ ಮಹಲಿನಲ್ಲಿ ಸುಲ್ತಾನ ಬೇಸಗೆಯಲ್ಲಿ ವಿಶ್ರಾಂತಿ ಪಡೆಯುತ್ತಿದ್ದ. ಈ ಅರಮನೆಯನ್ನು ಎತ್ತರವಾದ ಜಗಲಿಯ ಮೇಲೆ ಕಟ್ಟಲಾಗಿದೆ. ಇದರ ಸುತ್ತಲೂ ನೀಳವಾದ ಕಲಾತ್ಮಕವಾದ ಕಂಬಗಳಿಂದ ಕೂಡಿದ ಕೈಸಾಲೆ ಇದೆ. ಮೇಲಕ್ಕೆ ಹತ್ತಿಹೋಗುವುದಕ್ಕೂ ಹಂತಗಳಿವೆ. ಕೆಳಗಡೆ ವಿಶಾಲವಾದ ದರ್ಬಾರು ನಡೆಸುವ ಸಭಾಂಗಣ ಇದೆ. ಇಲ್ಲಿಯ ಗೋಡೆಗಳ ಮೇಲೆ ಆಗಿನ ಕಾಲದ ಪ್ರಮುಖ ಘಟನೆಗಳನ್ನೂ ಸಮಕಾಲೀನ ರಾಜ, ಪಾಳೆಯಗಾರರನ್ನೂ ಸೂಚಿಸುವ ವರ್ಣಚಿತ್ರಗಳನ್ನು ಬರೆಸಲಾಗಿದೆ.

ಒಳಗಿನ ಗೋಡೆಗಳ ಕಂಬಗಳ ಕೆಳಭಾಗದಲ್ಲಿ ಎಲ್ಲೂ ಖಾಲಿ ಜಾಗ ಬಿಡದೆ ಅಲ್ಲೆಲ್ಲಾ ವಿವಿಧ ವರ್ಣದಿಂದಲೂ ಚಿನ್ನದ ಮುಲಾಮಿನಿಂದಲೂ ರಚಿತವಾದ ಚಿತ್ರಗಳಿವೆ. ಇಲ್ಲಿ ಚಿತ್ರಿಸಿರುವ ಪ್ರತಿಯೊಂದು ಎಲೆ, ಬಳ್ಳಿ, ಹೂ, ಮೃಗ, ನಿಸರ್ಗಸಹಜವಾಗಿವೆ. ಗಾಳಿಗೂ ಬಿಸಿಲಿನ ತಾಪಕ್ಕೂ ಅಳಿಸಿ ಹೋದ ಇವುಗಳ ಕೆಲವು ಭಾಗಗಳನ್ನು ೧೯೩೦ ರಲ್ಲಿ ಮತ್ತೆ ಸರಿಪಡಿಸುವ ಕೆಲಸ ಆರಂಭವಾಯಿತು. ಈ ಭಿತ್ತಿಚಿತ್ರಗಳನ್ನು ೧೭೯೯ ರ ಸುಮಾರಿನಲ್ಲಿ ಬಿಡಿಸಿರಬಹುದೆಂದು ತಿಳಿದು ಬರುತ್ತದೆ.

ಇಲ್ಲಿಯ ಚಿತ್ರಗಳಲ್ಲಿನ ವರ್ಣಗಳು ಈಗಲೂ ತಮ್ಮ ಹೊಳಪನ್ನು ಕಳೆದುಕೊಳ್ಳದೆ ಬಹುಜನರ ಗಮನ ಸೆಳೆಯುತ್ತಿವೆ. ಸಂಶೋಧಕ ಬೆಂಜಮಿನ್ ಹ್ಯಾನಿ ಇವುಗಳ ಪರೀಕ್ಷೆ ನಡೆಸಿ ಈ ವರ್ಣಗಳನ್ನು ಹೇಗೆ ತಯಾರಿಸಿಕೊಳ್ಳಲಾಯಿತು ಎಂಬುದರ ಬಗ್ಗೆ ಅನೇಕ ವಿವರಗಳನ್ನು ಕೊಟ್ಟಿದ್ದಾನೆ.

ಇಲ್ಲಿಯ ಭಿತ್ತಿ ಚಿತ್ರಗಳು ವೈಶಿಷ್ಟ್ಯಪೂರ್ಣವಾದುವು. ಅವುಗಳಲ್ಲಿ ಅಂದಿನ ಕಾಲದ ಜೀವನವನ್ನು ಪ್ರತಿಬಿಂಬಿಸುವ ನಡೆನುಡಿಗಳು, ಉಡಿಗೆ ತೊಡಿಗೆಗಳು, ಅಲಂಕಾರ ಪದ್ಧತಿಗಳು, ಆಭರಣಗಳು, ಆಯುಧ ಸಾಮಗ್ರಿಗಳು ಚಿತ್ರಕಾರರ ಕುಂಚದಿಂದ ಸುಂದರವಾಗಿ ಹೊಮ್ಮಿವೆ.

ಈ ಚಿತ್ರಗಳಲ್ಲಿಯ ಮಾನವರ ಅಂಗಾಗಗಳೂ ಹಾವಭಾವ ಭಂಗಿಗಳೂ ಸ್ವಾಭಾವಿಕವಾಗಿವೆ. ಕಲಾವಿದರ ಚಿತ್ರಶೈಲಿ, ವರ್ಣಗಳ ಜೋಡಣೆ, ಎಲ್ಲವೂ ವಿಶ್ವದ ಚಿತ್ರಕಾರರನ್ನು ಸೋಜಿಗ ಪಡಿಸುತ್ತವೆ. ಕರ್ನಾಟಕ ಚಿತ್ರಕಾರರ ಈ ಕಲೆಗಾರಿಕೆಯ ಮೇಲೆ ಪಾಶ್ಚಾತ್ಯ ಚಿತ್ರಕಲೆಯ ಪ್ರಭಾವ ಬಿದ್ದಂತೆ ಭಾಸವಾಗುತ್ತದೆ.

ಇಲ್ಲಿಯ ಪಶ್ಚಿಮ ದಿಕ್ಕಿನ ಭಿತ್ತಿಯ ಚಿತ್ರಗಳಲ್ಲಿ ಅಂದಿನ ಯುದ್ಧಗಳ ಸನ್ನಿವೇಶಗಳನ್ನು ರೂಪಿಸಲಾಗಿದೆ. ಹೈದರಾಲಿ, ಹೈದರಾಬಾದ್ ನಿಜಾಮನ ಜೊತೆ ಬ್ರಿಟಿಷರನ್ನು ಎದುರಿಸಿದ ಚಿತ್ರಣ ಅಪೂರ್ವವಾದುದು. ಮಿತ್ರನಾದ ನಿಜಾಮ ಮತ್ತೆ ಬ್ರಿಟಿಷರ ಕಡೆಗೆ ಹೋದದ್ದರಿಂದ ಟಿಪ್ಪುವಿಗೆ ಅಸಮಾಧಾನವೂ ಕೋಪವೂ ಉಂಟಾದವು. ಅದರ ಸಂಕೇತವಾಗಿ ಒಂದು ಚಿತ್ರವನ್ನೇ ಬರೆಸಿದ. ನಿಜಾಮನ ಸೈನ್ಯದ ದಂಡನಾಯಕ ಕುದುರೆಯ ಮೇಲೆ ಕುಳಿತಿರುವಂತೆ ಚಿತ್ರಿಸಿ ಅವನ ಕೆಳಗೆ ಹಸು ಮತ್ತು ಹಂದಿಗಳನ್ನು ಚಿತ್ರಿಸಲಾಗಿದೆ. ನಿಜಾಮನ ಸೈನ್ಯ ಹಸುವಿನಂತೆ ಬಂದು ಹಂದಿಯಂತೆ ಬ್ರಿಟಿಷರ ಕಡೆ ಸೇರಿಕೊಂಡಿತು ಎಂಬುದರ ಸಂಕೇತವಾಗಿ ಟಿಪ್ಪು ಹೀಗೆ ಚಿತ್ರ ಬರೆಯಿಸಿದನಂತೆ.

ಮತ್ತೊಂದು ಯುದ್ಧದ ಚಿತ್ರದಲ್ಲಿ ಹೈದರಾಲಿ ಆನೆಯ ಮೇಲಿರುವ ಅಂಬಾರಿಯಲ್ಲಿ ಕುಳಿತು ಸವಾರಿ ಮಾಡುವಂತೆ ರಚಿಸಲಾಗಿದೆ. ಅವನ ಹಿಂದೆ ಐದು ಆನೆಗಳ ಸೈನ್ಯದಳವಿದೆ. ಅವನ ಮುಂದೆ ಕತ್ತಿ ಹಿಡಿದ ಕುದುರೆ ಸವಾರರು ಬಟ್ಟೆ, ಶಿರಸ್ತ್ರಾಣ, ಉದ್ದನೆ ಕೋಟು, ಶರಾಯಿ ಮತ್ತು ಮೆಟ್ಟುಗಳನ್ನು ಧರಿಸಿದ್ದಾರೆ. ಕಾಲಾಳುಗಳು ಜೋಡುಪಟ್ಟೆ, ರುಮಾಲು ಮತ್ತು ಕರವಸ್ತ್ರಗಳನ್ನು ಧರಿಸಿದಂತೆ ಚಿತ್ರಿತವಾಗಿದೆ.

ಈ ಚಿತ್ರದ ಪಕ್ಕದಲ್ಲಿ ಹೈದರಾಬಾದ್ ನಿಜಾಮ ಕುದುರೆಯ ಮೇಲಿರುವಂತೆ ಅವನ ಹಿಂಭಾಗದಲ್ಲಿ ಆನೆಸಾಲು ಮುಂದೆ ಕಾಲಾಳುಗಳೂ ಇರುವಂತೆ ಚಿತ್ರಿಸಲಾಗಿದೆ. ಇದು ಎರಡನೆಯ ಮೈಸೂರು ಯುದ್ಧವನ್ನು ಸೂಚಿಸುವ ಚಿತ್ರ. ಇಲ್ಲಿ ಟಿಪ್ಪು ಕುದುರೆಯ ಮೇಲೆ ಕುಳಿತಿದ್ದಾನೆ. ಅವನ ಜೊತೆ ವಿಶ್ವಾಸಘಾತಕನಾದ ಕಾರ್ಯದರ್ಶಿ ಮೀರ್ ಸಾದಕ್ ಮಾತಾಡುತ್ತಿರುವಂತೆ ಕಾಲಾಳುಗಳು ಹಿಂದುಗಡೆಯಲ್ಲಿಯೂ ಉಕ್ಕಿನ ಕವಚದಲ್ಲಿರುವ ಕುದುರೆ ಸೈನ್ಯ ಮುಂದುಗಡೆಯೂ ಹುಲಿಪಟ್ಟೆಯ ಧ್ವಜವನ್ನು ಹಿಡಿದು ಸಾಗುವ ಮೂರು ಆನೆ ಮತ್ತು ಎರಡು ಒಂಟೆಗಳ ಸೈನಿಕರನ್ನೂ ಕಾಣಬಹುದು. ಧ್ವಜವನ್ನು ಹಿಡಿದು ಫ್ರೆಂಚ್ ಕುದುರೆ ಸೈನ್ಯ ಲಾಲಿಯ ನಿರ್ದೇಶನದಲ್ಲಿ ಮುನ್ನಡೆವಂತೆ ಕಾಣಿಸಲಾಗಿದೆ.

ಇಲ್ಲಿಯ ಮತ್ತೊಂದು ಅಪೂರ್ವ ಭಿತ್ತಿಚಿತ್ರ ಕಾಂಚೀಪುರದ ಬಳಿ ನಡೆದ ಯುದ್ಧದಲ್ಲಿ ಮೈಸೂರಿಗೆ ಜಯವಾಗುವ ಸನ್ನಿವೇಶದ್ದು. ಗಜಾರೋಹಿಗಳಾಗಿ ಹೈದರ್ ಮತ್ತು ಟಿಪ್ಪು ಇವರಿಬ್ಬರೂ ತಮ್ಮ ಪಡೆಗಳನ್ನು ನಿರ್ದೇಶಿಸುತ್ತಿರುವಂತೆ ಚಿತ್ರಿಸಲಾಗಿದೆ. ಮೈಸೂರಿನ ಕುದುರೆ ಸವಾರ ಸೈನಿಕರು ಬ್ರಿಟಿಷ್ ಸೈನ್ಯವನ್ನು ಮುಂದೆ ಹಾಗೂ ಹಿಂದೆ ಎರಡೂ ಕಡೆಗಳಿಂದ ಮುತ್ತಿದ್ದಾರೆ. ಫ್ರೆಂಚ್ ಫಿರಂಗಿ ದಳದವರೂ ಕೆಂಚಿನ ಟೋಪಿ,

ರುಮಾಲು, ವಜ್ರಕವಚ, ಇಜಾರ ಧರಿಸಿರುವ ಮೈಸೂರು ಸೈನ್ಯದ ದಂಡನಾಯಕ ಇವರೂ ಯುದ್ಧದಲ್ಲಿ ಪರಿಣಾಮ ಕಾರಿಯಾಗಿ ಪಾತ್ರ ನಿರ್ವಹಿಸುತ್ತಿದ್ದಾರೆ. ಕಂದು ಕೋಟು ಧರಿಸಿದ ಇಂಗ್ಲಿಷ್ ಸೈನಿಕರು ತಮ್ಮ ಮದ್ದುಗುಂಡುಗಳನ್ನು ಹಾಗೂ ತಮ್ಮ ಮುಖ್ಯಸ್ಥ ಕರ್ನಲ್ ಬೇಲಿಯನ್ನು ರಕ್ಷಿಸಲು ವ್ಯೂಹ ರಚಿಸಿರುವುದನ್ನು ಸೊಗಸಾಗಿ ಚಿತ್ರಿಸಲಾಗಿದೆ. ಚಿಂತಾಕ್ರಾಂತನಾಗಿ ಕೈಬೆರಳುಗಳನ್ನು ತುಟಿಯ ಮೇಲಿರಿಸಿಕೊಂಡು ಮೇನೆಯಲ್ಲಿ ಕುಳಿತಿದ್ದಾನೆ. ಇಲ್ಲಿ ಕೈಗೆ ಕೈ ಕೊಟ್ಟು ಯುದ್ಧಕ್ಕೆ ತೊಡಗಿರುವ ದೃಶ್ಯ ಮನೋಜ್ಞವಾದುದು.

ದರಿಯಾ ದೌಲತ್ ಅರಮನೆಯ ಪೂರ್ವದಿಕ್ಕಿನ ಭಿತ್ತಿಯಲ್ಲಿ ಅನೇಕ ರಾಜರ, ನವಾಬರ ಪಾಳೆಯಗಾರರ ಚಿತ್ರಗಳನ್ನು ಬಿಡಿಸಲಾಗಿದೆ. ಚಿತ್ತೂರಿನ ಹಿಂದೂ ರಾಣಿ, ಮೊಹಮ್ಮದ್ ಆಲಿ, ಬಾಲಾಜಿ ಮತ್ತು ಅವರ ರಾಣಿ, ತಂಜಾವೂರಿನ ರಾಜ, ಕೊಡಗಿನ ವೀರರಾಜ, ಸಿಂದ್ ಸಾಮಂತ, ಆರ್ಕಾಟ – ಕಡಪಾ ನವಾಬರು, ಪೇಶ್ವೆ ಮನೆತನದ ೨ನೇ ಬಾಲಾಜಿ, ಮುಮ್ಮಡಿ ಕೃಷ್ಣರಾಜ ಒಡೆಯರು (ಅನಂತರ ಚಿತ್ರಿಸಿದ ಚಿತ್ರವೆಂದು ಹೇಳಲಾಗಿದೆ). ಚಿತ್ರದುರ್ಗದ ಮದಕರಿನಾಯಕ, ಕಿತ್ತೂರು ರಾಣಿ ಚೆನ್ನಮ್ಮ ಮುಂತಾದವರ ಚಿತ್ರಗಳು ಇವುಗಳಲ್ಲಿ ಮುಖ್ಯವಾದುವು. ನವಾಬರು ಮುನಿದರೆ ಅದನ್ನು ಚಿತ್ರದಲ್ಲಿ ಮೂಡುವಂತೆ ಮಾಡುತ್ತಿದ್ದರು. ಇದಕ್ಕೆ ಒಂದು ಉದಾಹರಣೆಯಾಗಿ ಮದರಾಸಿನಲ್ಲಿ ಬ್ರಿಟಿಷರೊಡನೆ ಕರಾರು ಮಾಡಿಕೊಂಡ ಸಂದರ್ಭದಲ್ಲಿ ಹೈದರಾಲಿ ಮದರಾಸಿನಲ್ಲಿ ನಡೆದ ಯುದ್ಧದ ಸನ್ನಿವೇಶ ನೆನಪಿಗೆ ಬರುತ್ತದೆ. ಇದೇ ಸಂದರ್ಭದಲ್ಲಿ ಹೈದರಾಲಿ ಮದರಾಸಿನಲ್ಲಿ ಬ್ರಿಟಿಷರೊಡನೆ ಕರಾರು ಮಾಡಿಕೊಂಡ ಸಂದರ್ಭದಲ್ಲಿ, ಒಂದು ಅಣಕ ಚಿತ್ರವನ್ನು ಮದರಾಸಿನ ಕೋಟೆಯ ಬಾಗಿಲಲ್ಲಿ ಚಿತ್ರಿಸಿದ್ದ. ಮದರಾಸು ಗೌರ್ನರ್ ಡ್ಯೂಪ್ಲೆ ಮತ್ತು ಅವನ ಕಡೆಯವರೆಲ್ಲ ಒಂದು ಕಡೆ ನಗುತ್ತಿರುವಂತೆಯೂ, ಸೇನಾಧಿಕಾರಿ ಸ್ಮಿತ್ ಕರಾರುಪತ್ರವನ್ನು ಒಂದು ಕೈಲಿ ಹಿಡಿದು ಇರುವಂತೆಯೂ ಮತ್ತೊಂದು ಕೈಯಲ್ಲಿ ಕತ್ತಿಯನ್ನು ಮುಂದು ಹಾಕುತ್ತಿರುವಂತೆಯೂ ಚಿತ್ರಿಸಲಾಗಿತ್ತು. ಆದರೆ ಈ ಚಿತ್ರ ಈಗ ಇಲ್ಲವಾಗಿದೆ. ಅಂದಿನ ಮಾರ್ಕ್ ವಿಲ್ಕ್ಸ ಈ ಸಂಗತಿಯನ್ನು ಬರೆದು ತಿಳಿಸದಿದ್ದರೆ ನಮಗೆ ಇದು ಗೊತ್ತಾಗುತ್ತಲೇ ಇರಲಿಲ್ಲ.

ದರಿಯಾದೌಲತ್ ಅರಮನೆ ಹೀಗೆ ಒಂದು ಕಲಾ ಸಂಗ್ರಹಾಲಯವೂ ಆಗಿದೆ. ೧೯೫೯ ರಲ್ಲಿ ಇದನ್ನು ರಾಷ್ಟ್ರೀಯ ಸ್ಮಾರಕ ಎಂದು ಸಾರಲಾಯಿತು. ಹೈದರ್ ಹಾಗೂ ಟಿಪ್ಪುವಿಗೆ ಸೇರಿದ ವರ್ಣಚಿತ್ರಗಳು, ಛಾಯಾ ಚಿತ್ರಗಳು, ಕಲ್ಲಚ್ಚು ಚಿತ್ರಗಳು ಮತ್ತು ಅವರು ಬಳಸುತ್ತಿದ್ದ ಬಟ್ಟೆಬರೆಗಳು ಮತ್ತು ಇತರ ವಸ್ತುಗಳನ್ನು ಮಹಡಿಯಲ್ಲಿ ಜೋಡಿಸಲಾಗಿದೆ.

ಇಲ್ಲಿ ಪ್ರದರ್ಶಿಸಿರುವ ಚಿತ್ರಗಳಲ್ಲಿ ಹುಲಿಯೂರು ದುರ್ಗ, ಸಾವನದುರ್ಗ, ರಾಮಗಿರಿ, ಹೊಸೂರುದುರ್ಗ, ನಂದೀ ದುರ್ಗ, ಮುಂತಾದುವುಗಳ ನಿಸರ್ಗದ ಸೊಬಗನ್ನು ಕಾಣಬಹುದಾಗಿದೆ. ಅಲ್ಲದೆ ಬೆಂಗಳೂರಿನ ಉತ್ತರದ್ವಾರ, ಟಿಪ್ಪುವಿನ ಬೆಂಗಳೂರು ಅರಮನೆ, ಅಂದಿನ ಬೆಂಗಳೂರು, ಬೆಂಗಳೂರಿನ ದಿಲ್ಲಿ ದ್ವಾರ ಈ ಚಿತ್ರಗಳೂ ಮನೋಜ್ಞವಾಗಿವೆ. ಇಷ್ಟೇ ಅಲ್ಲದೆ ಹೈದರಾಲಿ, ಟಿಪ್ಪುವಿನ ಕೊನೆ ಪ್ರಯತ್ನ ಹಾಗೂ ಪತನ, ಶ್ರೀರಂಗಪಟ್ಟಣದ ಮುತ್ತಿಗೆ, ಟಿಪ್ಪುವಿನ ಇಬ್ಬರು ಮಕ್ಕಳನ್ನು ಬ್ರಿಟಿಷರ ವಶಕ್ಕೆ ಒಪ್ಪಿಸುತ್ತಿರುವುದು ಮುಂತಾದ ಕಲ್ಲಚ್ಚು ಚಿತ್ರಗಳು ಅಂದಿನ ಪರಿಸರವನ್ನು ಸೂಚಿಸುತ್ತವೆ.

ಬೃಹದಾಕಾರವಾದ ಟಿಪ್ಪುವಿನ ತೈಲವರ್ಣದ ಭಾವಚಿತ್ರ ಪಾಶ್ಚಾತ್ಯ ಕಲಾಶೈಲಿಯಲ್ಲಿದ್ದು ಬಹು ಆಕರ್ಷಕವಾಗಿದೆ. ೧೪–೧೮ ಅಳತೆಯ ಸುಮಾರು ೧೬ ರೇಖಾಚಿತ್ರಗಳಿವೆ. ಇವುಗಳಲ್ಲಿ ಟಿಪ್ಪುವಿನ ಕಾಲದ ಕೋಟೆಗಳ ರಕ್ಷಣಾನಾಯಕ ಗುಲಾಮ್ ಆಲಿಖಾನ್, ಮುಮ್ಮಡಿ ಕೃಷ್ಣರಾಜ ಒಡೆಯರ್, ತಾತ ನಂಜರಾಜ, ಟಿಪ್ಪುವಿನ ಹಿರಿಯ ಕಂಚುಕಿ (ದ್ವಾರಪಾಲಕ) ಫಿರೋಜ್‌ನೂಟಿ ಮತ್ತು ಈತನ ವಕೀಲ ಆಲಿ ರೆಝಾಖಾನ್, ಧಾರವಾಡ ಕೋಟೆಯ ಸೈನ್ಯಾಧಿಕಾರಿ ಬದ್ರೂಸ್‌ಜಮಾನಖಾನ್, ಟಿಪ್ಪುವಿನ ಮಿತ್ರ ರಾಜಾಖಾನ್ ಮತ್ತು ಇವನ ದಿವಾನ ಗುಲಾಮ್ ಆಲಿಖಾನ್ ಇವರಲ್ಲದೆ ಟಿಪ್ಪುವಿನ ಏಳು ಜನ ಗಂಡು ಮಕ್ಕಳ ಚಿತ್ರಗಳನ್ನೂ ಇಲ್ಲಿ ಪ್ರದರ್ಶಿಸಲಾಗಿದೆ.

ದರಿಯಾದೌಲತ್ ಅರಮನೆ ಕಲಾಕೃತಿಗಳ ಆಗರವಾಗಿದ್ದು, ಟಿಪ್ಪುವಿನ ಕಲಾಪ್ರಿಯತೆಗೆ ಸಾಕ್ಷಿಯಾಗಿದೆ. ಕಟ್ಟಡದ ಭಾಗಗಳನ್ನೆಲ್ಲಾ ಮುಚ್ಚುವಂತೆ ಬಹು ವಿಶಾಲವಾಗಿ ಚಿತ್ರಿಸಿರುವುದನ್ನು ಕನ್ನಡ ನಾಡಿನಲ್ಲಿ ಮತ್ತೆಲ್ಲೂ ಕಾಣಲಾರೆವು. ಬೆಂಗಳೂರಿನ ಟಿಪ್ಪು ಅರಮನೆಯಲ್ಲೂ ಚಿತ್ರಗಳಿದ್ದುದರ ಗುರುತು ಇದೆ. ಇದೇ ಕಾಲಕ್ಕೆ ಬಹುಶಃ ಸೇರಿರಬಹುದಾದ ಸಿಟಿಯ ನರಸಿಂಹಸ್ವಾಮಿ ದೇವಾಲಯದ ಮುಖಮಂಟಪ ಮತ್ತು ವಿಷ್ಣುವಿನ ದಶಾವತಾರಗಳು, ರಾಮಾಯಣ ಮಹಾಭಾರತದ ಕೆಲವು ಮುಖ್ಯ ಘಟನೆಗಳು, ವಿಶ್ವರೂಪದರ್ಶನ ಮೊದಲಾದವು ಮುಖಮಂಟಪದಲ್ಲೂ ನರಸಿಂಹ ಚೆಂಚುಲಕ್ಷ್ಮಿಯರ ಕಥೆ, ಗೋವರ್ಧನೋದ್ಧಾರಗಳು ಮಹಾದ್ವಾರಗಳಲ್ಲೂ ಇವೆ. ಇವುಗಳ ಜೊತೆಗೆ ಟಿಪ್ಪುವಿನ, ಅವನ ಕಾಲದಲ್ಲಿದ್ದ ಮಹಮ್ಮದೀಯ ಹಾಗೂ ಹಿಂದೂ ಗಣ್ಯರ ಚಿತ್ರಗಳನ್ನು, ಸೈನ್ಯಗಳನ್ನು ಒಂದೆಡೆ ಚಿತ್ರಿಸಲಾಗಿದೆ.

ಕರ್ನಾಟಕದ ಉಳಿದ ಭಾಗಗಳಲ್ಲಿ ಶ್ರೀಮಂತ ರಾಜವಾಡೆಗಳಲ್ಲಿ ಚಿತ್ರಗಳನ್ನು ಬರೆಸುತ್ತಿದ್ದುದು ಕಾಣಬರುತ್ತದೆ. ಅಥಣಿಯ ವೀರಶೈವ ಮಠ, ನಿಪ್ಪಾಣಿಯ ರಾಜವಾಡೆ, ಮತ್ತು ನಿಪ್ಪಾಣಿ, ಕರವಾಡೆ, ನರಗುಂದದ ಕೋಟೆಯೊಳಗಿನ ರಾಜನ ಅರಮನೆ ಇವುಗಳಲ್ಲಿ ಕೆಲವು ರೀತಿಯ ಚಿತ್ರಗಳು ಅರೆಬರೆಯಾಗಿ ಉಳಿದಿರುವುದು ಕಂಡುಬರುತ್ತದೆ.

### ಟಿಪ್ಪುವಿನ ಅನಂತರ

ಮೈಸೂರು ಅರಸರು ವರ್ಣಕಲೆಗೆ ಹೆಚ್ಚು ಪ್ರೋತ್ಸಾಹ ಹಾಗೂ ಪುರಸ್ಕಾರ ನೀಡಿದರು. ಅವರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಪ್ರಮುಖರು. ಟಿಪ್ಪುವಿನ ಕಾಲದ ಚಿತ್ರಣ ರೀತಿ ಇವರ ಕಾಲದಲ್ಲಿ ಮುಂದುವರಿಯಿತೆನ್ನಬಹುದು. ಮುಮ್ಮಡಿಯವರು ತಮ್ಮ ಪಿತೃಗಳಾದ ಚಾಮರಾಜ ಒಡೆಯರ ಹೆಸರಿನಲ್ಲಿ ಚಾಮರಾಜ ನಗರದಲ್ಲಿ ೧೮೨೬ ರಲ್ಲಿ ಕಟ್ಟಿಸಿದ ಚಾಮರಾಜೇಶ್ವರ ಗುಡಿಯ ಜನ್ಮಮಂಟಪದ ಅನೇಕ ಭಿತ್ತಿಚಿತ್ರಗಳು. ವೆಂಕಟರಮಣ ಸ್ವಾಮಿ ದೇವಾಲಯದಲ್ಲಿ ಪೌರಾಣಿಕ ಚಿತ್ರ ಇವರ ಉನ್ನತ ಕಲಾದೃಷ್ಟಿಯನ್ನು ಸಾರುತ್ತವೆ. ಮೈಸೂರಿನ ವೆಂಕಟರಮಣಸ್ವಾಮಿ ದೇವಾಲಯದಲ್ಲಿ ಪಠಾಣರ ಚಿತ್ರಗಳೂ, ಪ್ರಕೃತಿ ಚಿತ್ರಗಳೂ, ಅಂದಿನ ಕೆಲವು ರಾಜರುಗಳು, ಪೂರ್ಣಯ್ಯ, ಸುಬ್ಬರಾಯದಾಸ ಮುಂತಾದವರ ..ರೂಪಚಿತ್ರಗಳೂ ಇವೆ. ತಲಕಾಡಿನ ಬಳಿಯ ಮುಡುಕುತೊರೆ ಮಲ್ಲಿಕಾರ್ಜುನ ಸ್ವಾಮಿ ದೇವಾಲಯದಲ್ಲಿ ಶೈವ ಚಿತ್ರಗಳಿಂದ ತುಂಬಿದ ಚಿತ್ರಮಂಟಪವೂ ಇದೆ. ಇದರ ಕೆಳಗೆ ಇದೇ ಕಾಲಕ್ಕೆ ಸೇರಿದಂತೆ ಶ್ರವಣಬೆಳಗೊಳದ ಜೈನಮಠದಲ್ಲಿ ಜೈನರ ಚಕ್ರವರ್ತಿಗಳ ಜೀವನವನ್ನು ಚಿತ್ರಿಸುವ ಭಿತ್ತಿ ಚಿತ್ರಗಳು ಇವೆ. ತೀರ್ಥಂಕರರು, ಪಾರ್ಶ್ವನಾಥನ ಸಮವಸರಣ, ಯಕ್ಷ

ಯಕ್ಷಿಯರು, ಪಂಚಪರಮೇಷ್ಠಿಗಳು, ಭರತ ಚಕ್ರವರ್ತಿಯ ಜೀವನ ಚಿತ್ರ ಮುಂತಾದವು ಅಪರೂಪವಾದುವುಗಳು. ಇಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ರೂಪಚಿತ್ರ ಗಮನಾರ್ಹ.

ಮೈಸೂರು ಪ್ರಭುಗಳ ಕಲಾಪ್ರೇಮದಿಂದ ಉಳಿದಿರುವ ಕನ್ನಡದ ಅಪೂರ್ವ ಕಲಾಕೃತಿಗಳಲ್ಲಿ "ಶ್ರೀ ತತ್ವನಿಧಿ" ಎಂಬ ಬೃಹತ್ ಗ್ರಂಥವೂ ಒಂದು. ಇದರಲ್ಲಿ ಸಾವಿರಾರು ವರ್ಣ ರಂಜಿತ ಚಿತ್ರಗಳಿವೆ. ಇದು ಮುಮ್ಮಡಿ ಕೃಷ್ಣರಾಜ ಒಡೆಯರ ಧ್ಯಾನ ಶ್ಲೋಕಗಳಿಗೆ ಅನುಸಾರವಾಗಿ ಸುಂದರ ಚಿತ್ರಗಳನ್ನು ಬರೆದು "ಶ್ರೀ ತತ್ವ ನಿಧಿ" ಎಂದು ಸಚಿತ್ರಗೊಳಿಸಿದ ಕಲಾ ಕೋವಿದರು ಮುಮ್ಮಡಿಯವರೇ ಎಂದಿದೆ. ಇಂಥ ಪ್ರತಿಗಳು ಎರಡಿವೆ. ಚಿತ್ರಕಾರರು ಮುಮ್ಮಡಿಯವರಾಗಿರಲಿಕ್ಕಿಲ್ಲವೆಂದು ಅನಿಸುತ್ತದೆ. ಆದರೆ ಆ ಸಚಿತ್ರ ಅಪೂರ್ವ ಗಂಥರಚನೆಗೆ ಪ್ರೋತ್ಸಾಹವಂತೂ ಅವರಿಂದ ದೊರಕಿರಬೇಕು.

"ಶ್ರೀ ತತ್ತ್ವನಿಧಿ" ಗ್ರಂಥದಲ್ಲಿ ಸಾಹಿತ್ಯದ ಜೊತೆಗೆ ಚಿತ್ರಗಳನ್ನು ಬಹು ಜಾಣ್ಮೆಯಿಂದ ಚಿತ್ರಿಸಲಾಗಿದೆ. ಒಂದು ಸಾವಿರದ ನೂರರುವತ್ತು ಪುಟಗಳ ಹಬ್ಬೊತ್ತಿಗೆ ಇದು. ಇಲ್ಲಿ ಶಕ್ತಿನಿಧಿ, ವಿಷ್ಣುನಿಧಿ, ಶಿವನಿಧಿ, ಬ್ರಹ್ಮನಿಧಿ, ಗ್ರಹನಿಧಿ; ವೈಷ್ಣವನಿಧಿ, ಶೈವನಿಧಿ, ಆಗಮನಿಧಿ, ಕೌತುಕನಿಧಿ ಎಂದು ಒಂಭತ್ತು ದಳಗಳಿವೆ. ಶಕ್ತಿನಿಧಿಯಲ್ಲಿ ಶ್ರೀ ಚಾಮುಂಡೇಶ್ವರಿಯ ಸುವರ್ಣ ರಂಜಿತ ಚಿತ್ರ ಸೊಗಸಾಗಿದೆ. ವಿಷ್ಣುನಿಧಿಯಲ್ಲಿ ವಿರಾಟ್ಪುರುಷನ ಧ್ಯಾನ ಮತ್ತು ಸ್ವರೂಪಕ್ಕೆ ಪ್ರಥಮ ಸ್ಥಾನ. ವಿಷ್ಣುದೇವರಿಗೆ ಸಂಬಂಧಪಟ್ಟ ಚಿತ್ರಗಳೇ ಇಲ್ಲಿ ಹೆಚ್ಚು. ಅಷ್ಟಮುಖಿ ಗಂಡಭೇರುಂಡ, ನರಸಿಂಹ, ಶೇಷಶಾಯಿ, ತಾರಕರಾಮ, ಪಟ್ಟಾಭಿರಾಮ, ದಶಾವತಾರ, ಅಲ್ಲದೆ ಮುದ್ದು ಬಾಲಕೃಷ್ಣ, ವೇಣುಗೋಪಾಲ, ವಟಪತ್ರಶಾಯಿ, ಮುಕುಂದ, ಈ ಎಲ್ಲರನ್ನೂ ಸಹಜವಾದ ರೂಪ, ವೇಷ ಭೂಷಣ ಮುಖಮುದ್ರೆಯಿಂದ ಚಿತ್ರಿಸಲಾಗಿದೆ. ೧೨೨ ಸುವರ್ಣರಂಜಿತ ಚಿತ್ರಗಳಿವೆ. ಈ ಶಿವನಿಧಿಯಲ್ಲಿ ಕೈಲಾಸಮೂರ್ತಿಯ ವಿವಿಧ ಭಂಗಿಗಳು, ಗಣೇಶ್ವರನ ಕೆಲವು ನಾಮರೂಪಗಳು, ಕುಮಾರ ಸ್ವಾಮಿ, ವೀರಭದ್ರ, ಅಘೋರ ವೀರಭದ್ರ ಇವೇ ಮೊದಲಾದ ಶಿವನ ಸಂಬಂಧ ಚಿತ್ರಗಳು ಇವೆ. ಕೊನೆಯಲ್ಲಿ ವಿಶ್ವೇಶ್ವರ ಚಿತ್ರವೂ ಇದೆ. ಒಟ್ಟು ೧೫೫ ಚಿತ್ರಗಳು ಶಿವನಿಧಿಯಲ್ಲಿವೆ. ಬ್ರಹ್ಮನಿಧಿಯಲ್ಲಿ ಬ್ರಹ್ಮಲೋಕದ ಚಿತ್ರಗಳು ಹೆಚ್ಚಾಗಿವೆ. ಚತುರ್ಮುಖಿ ಬ್ರಹ್ಮನ ಸ್ವರೂಪದ ಚಿತ್ರ, ಸರಸ್ವತಿ, ಬ್ರಹ್ಮರು, ಸಪ್ತಋಷಿಗಳು, ಅಷ್ಟವಸುಗಳು, ಅಷ್ಟನದಿಗಳು, ಚತುರ್ದಶ ಲೋಕಗಳು ಮತ್ತು ಇಂದ್ರರು, ಸಪ್ತಮಾರುತಗಳು, ಅಷ್ಟ ದಿಕ್ಕುಗಳು ಮತ್ತು ಅವುಗಳ ಪಾಲಕರು, ಗಜನಾಗಗಳು, ವೇದಗಳ ಸ್ವರೂಪ ಮತ್ತು ದೇವತೆಗಳ ಬಗೆಬಗೆಯ ಆಯುಧೋಪಕರಣಗಳ ಹೆಸರು ಮತ್ತು ಚಿತ್ರ. ಇಷ್ಟೇ ಅಲ್ಲದೆ ಸಂಗೀತದ ಸಪ್ತ ಸ್ವರಗಳು ಮತ್ತು ಮೂವತ್ತಾರು ರಾಗಗಳ ಲಕ್ಷಣ ಮತ್ತು ಬಣ್ಣನೆಯ, ಧ್ರುವಾದಿಸಪ್ತ ತಾಳಗಳ ಸ್ವರೂಪದ ಚಿತ್ರಗಳು ಅಮೋಘವಾದುದು. "ಗ್ರಹನಿಧಿಯು ಜ್ಯೋತಿಶ್ಶಾಸ್ತ್ರದ ನಿಘಂಟುವಿದ್ದಂತೆ. ಕಾಲಪುರುಷ, ಯುಗಗಳು, ಮನ್ವಂತರಗಳು, ಅರವತ್ತು ವರುಷಗಳು. ಅಯನ, ಋತು. ಮಾಸ, ಪಕ್ಷ, ತಿಥಿ. ವಾರ, ಗ್ರಹ, ರಾಶಿ, ನಕ್ಷತ್ರ ಪ್ರತಿಯೊಂದಕ್ಕೂ ಸ್ವರೂಪ ಚಿತ್ರ ಮತ್ತು ಅಭಿಮಾನ ದೇವತೆಯ ಚಿತ್ರಗಳು, ಜೊತೆಗೆ ಮೃಗಪಕ್ಷಿ, ಜಲಜಂತು. ಕ್ರಿಮಿಕೀಟಾದಿ ಜೀವಗಳು ಮತ್ತು ಅವುಗಳ ಹೆಸರುಗಳಿವೆ. ಈ ಭಾಗದಲ್ಲಿ ಒಟ್ಟು ೯೫೦ ಚಿತ್ರಗಳಿವೆ. ಬರೀ ರೇಖಾ ಪತ್ರಗಳ "ವೈಷ್ಣವ ನಿಧಿ" ಯಲ್ಲಿ ೨೨ ಭಾಷ್ಯಕಾರರು ಮತ್ತು ಆಳ್ವಾರುಗಳು ಇದ್ದಾರೆ "ಶೈವನಿಧಿ"ಯಲ್ಲಿ ಲಿಂಗಗಳ, ಯೋಗಾಸನಗಳ ೨೯ ಚಿತ್ರಗಳಿವೆ. "ಆಗಮ ನಿಧಿ" ಯಲ್ಲಿ ೫೯ ಚಿತ್ರಗಳೂ "ಕೌತುಕನಿಧಿ" ಯಲ್ಲಿ ೪೮ ಚಿತ್ರಗಳೂ ಇವೆ.

ಒಟ್ಟು ೧೮೮೬ ವರ್ಣರಂಜಿತ ರೇಖಾಚಿತ್ರಗಳೂ ಇರುವ ಈ ಗ್ರಂಥ ಅಪೂರ್ವವೆನಿಸಿದೆ. ಇಲ್ಲಿಯ ಚಿತ್ರಗಳ ಹಿನ್ನೆಲೆಯಲ್ಲಿ ಗಳಿಸಿರುವ ಹಾಣತ ಗಣ್ಣ, ವರ್ಣಗಳ ಸಮ್ಮಿಳನ, ತೆಳುವರ್ಣ, ದಪ್ಪ ವರ್ಣಗಳ ಬಳಕೆ, ರೇಖಾವಿನ್ಯಾಸ ಮೆಚ್ಚುವಂತಹವು. ಇಂಥ ಚಿತ್ರಗಳ ನಿಧಿಯಾದ ಗ್ರಂಥದ ಎರಡು ಪ್ರತಿಗಳಿವೆ. ಒಂದು ಅರಮನೆಯಲ್ಲೂ, ಮತ್ತೊಂದು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯ ವಿದ್ಯಾ ಸಂಶೋಧನ ಮಂದಿರದಲ್ಲೂ ಇದೆ. ಈ ಪ್ರತಿಗಳು ಕನ್ನಡಿಗರ ಕಲಾರತ್ನಗಳಾಗಿ ಉಳಿದು ಕಲಾವಿದರ ಜಾಣ್ಮೆಯನ್ನೂ ರಾಜರ ಕಲಾದೃಷ್ಟಿಯನ್ನೂ ಸಾರುತ್ತಿವೆ.

## ಜಗನ್ಮೋಹನ ಅರಮನೆಯ ಚಿತ್ರ ಶಾಲೆ

೧೮೬೧ ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನಲ್ಲಿ ಜಗನ್ಮೋಹನ ಅರಮನೆಯನ್ನು ಕಟ್ಟಿಸಲು ಮೊದಲು ಮಾಡಿದರು. ೧೮೭೫ ರ ವೇಳೆಗೆ ಅದು ಚಿತ್ರಶಾಲೆಯಾಗಿ ಪರಿವರ್ತನೆಗೊಂಡಿತು. ಈ ಕಲಾಸಂಗ್ರಹದಲ್ಲಿ ಕೆಲವು ಭಿತ್ತಿಚಿತ್ರಗಳಿವೆ. ೧೯ನೇ ಶತಮಾನದ ಕಲಾವಿದರು ಬರೆದ ಭಿತ್ತಿಚಿತ್ರಗಳಲ್ಲಿ ಮುಮ್ಮಡಿಯವರ ವಂಶವೃಕ್ಷ, ಮೈಸೂರು ಅರಸರ ವಂಶಾವಳಿಯನ್ನು ತೋರುವ "ಸಂತಾನಾಂಬುಜ", ಆನೆಗಳನ್ನು ಕಟ್ಟಿರುವ ರಥದಲ್ಲಿ ರಾಜರ ಮೆರವಣಿಗೆ ಹೊರಟಿರುವ ಚಿತ್ರ ಸೊಗಸಾಗಿದೆ. ಅಲ್ಲದೆ ಪ್ರಸನ್ನ ಪಾರ್ವತಿ, ದುರದುಂಡಿ, ಸರ್ವಮಂಗಲ, ಜಗದಂಬ, ಪುಟ್ಟಚಾಮುಂಡಿ, ವರ ಚಾಮುಂಡಿ, ಚೆಲುವ ಚಾಮುಂಡಿಯರೆಂಬ ಪಟ್ಟದ ಹಸುಗಳು, ವಿಜಯ ಎಂಬ ಪಟ್ಟದ ಕುದುರೆ, ಸರ್ವಚಿತ್ತರಂಜಿನಿ, ಸರ್ವಾಂಗಸುಂದರಿ ಎಂಬ ಮೋಹಕ ಕನ್ಯೆಯರು ಚಿತ್ರಿತರಾಗಿದ್ದಾರೆ. ಮತ್ತೊಂದು ಭಿತ್ತಿಯಲ್ಲಿ ಮುಮ್ಮಡಿಯವರ ಸಮಕಾಲೀನ ನವಾಬರ, ಭಕ್ತಿಗಳ, ಪರಿವಾರದವರ ರೂಪ ಚಿತ್ರಗಳನ್ನು ಚಿತ್ರಿಸಲಾಗಿದೆ. ಮುಮ್ಮಡಿಯವರ ವಸಂತೋತ್ಸವದ ನೋಟ, ಚದುರಂಗದಾಟ ಮುಂತಾದವನ್ನು ಬಹು ಸೊಗಸಾಗಿ ಬಿಡಿಸಲಾಗಿದೆ. ೧೮೯೯ ರಲ್ಲಿ ಶಿಕಾರಿಪುರದ ತಿಪ್ಪಯ್ಯ ಬರೆದ ಭೀಷ್ಮಾರ್ಜುನರ ಯುದ್ಧದ ಸುಂದರ ರೇಖಾಚಿತ್ರವೂ ಇಲ್ಲಿದೆ. ಈ ಅರಸರ ಕಾಲದಲ್ಲಿ ವೀರಣ್ಣ, ಯಲ್ಲಪ್ಪ, ಬಸಣ್ಣ ಮುಂತಾದ ಕಲಾವಿದರಿದ್ದರೆಂದು ವ್ಯಕ್ತವಾಗುತ್ತದೆ.

## ಮುಮ್ಮಡಿಯ ಅನಂತರ

ಚಾಮರಾಜ ಒಡೆಯರ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿಯೂ ಪ್ರಾಚೀನ ಸಂಪ್ರದಾಯದ ವರ್ಣಚಿತ್ರ ಕಲೆಗೆ ಸಾಕಷ್ಟು ಪ್ರೋತ್ಸಾಹ ದೊರೆತಿದೆ. ಈ ಅರಸರ ಕಾಲದಲ್ಲಿ ಬೆಳೆದ ಮೈಸೂರು ದೇಶೀಯ ಶೈಲಿಯ ಅನೇಕ ಅಪೂರ್ವ ಚಿತ್ರಪಟಗಳು ಮನೆಮನೆಗಳಲ್ಲೂ, ರಾಮಮಂದಿರಗಳಲ್ಲೂ, ಅರಮನೆ ಗುರುಮನೆಗಳಲ್ಲೂ ದೊರೆಯುತ್ತವೆ. ಈ ಸಂಪ್ರದಾಯವನ್ನು ಇನ್ನೂ ಬೆಳೆಸಿಕೊಂಡು ಬಂದಿರುವ ಕಲಾವಿದರು ಎಲ್ಲೋ ಅಪರೂಪವಾಗಿ ದೊರೆಯುತ್ತಾರೆ. ಕಾಗದದ ಮೇಲೆ ಬಟ್ಟೆಯ ಮೇಲೆ ಇಲ್ಲವೆ ಗಾಜಿನ ಮೇಲೆ ಜಲವರ್ಣ ಅಥವಾ ತೈಲ ವರ್ಣಗಳಲ್ಲಿ ರಾಜಮಹಾರಾಜರ ರೂಪಚಿತ್ರಗಳನ್ನೂ ದೇವದೇವರುಗಳ ಹಾಗೂ ಅನೇಕ ಪೌರಾಣಿಕ ಸನ್ನಿವೇಶಗಳ ಸಂಯೋಜನಾ ಚಿತ್ರಗಳನ್ನೂ ರಚಿಸುವುದು ಈ ಸಂಪ್ರದಾಯದಲ್ಲಿ ವಿಶೇಷ. ಸುವರ್ಣಲೇಪನದ ಹಾಗೂ ದೇಶೀಯ ಮೂಲವರ್ಣಗಳ ಉಪಯೋಗ ಕಾಣುತ್ತದೆ. ಮೊದಲು

ಸೀಸದ ಕಡ್ಡಿಯಲ್ಲಿ ಆಕೃತಿಯನ್ನು ರೂಪಿಸಿಕೊಂಡು ಅನಂತರ ವರ್ಣಗಳನ್ನು ಹಾಕಿ, ಅಲಂಕಾರ ವೈಖರಿ ತರುವೆಡೆಗಳ ಲ್ಲೆಲ್ಲಾ ಭಯ ಸೀಸದಲ್ಲಿ ರೇಖೆಗಳನ್ನು ಎಳೆದು, ಅದರ ಮೇಲೆ ವಜ್ರದ ಅಂಟನ್ನು ಸವರಿ, ಅದರ ಮೇಲೆ ಚಿನ್ನದ ರೇಖೆಯನ್ನು ಲೇಪಿಸುವುದು; ಬುಟೆ ಕುಸುರಿನ ಕೆಲಸ ಮಾಡು ವಾಗ ವಿವಿಧ ವರ್ಣಗಳನ್ನು ಬಳಸಿ ಆಯಾ ಭಾಗಗಳಿಗೆ ಸುವರ್ಣ ಲೇಪುವಿನ ಲೇಪನ ಮಾಡುವುದು – ಇಲ್ಲಿಯ ತಂತ್ರ. ಕೃತಿ ಗಳು ಪೂಜಾಚಿತ್ರಗಳಾದುದರಿಂದ ಚಿತ್ರಕಾರರ ಹೆಸರು ಇವು ಗಳಲ್ಲಿ ಸಾಮಾನ್ಯವಾಗಿ ಕಂಡುಬರುವುದಿಲ್ಲ.

**ಆಧುನಿಕ ಕಾಲ**

ಭಾರತ ಪಾಶ್ಚಿಮಾತ್ಯರ ಆಳ್ವಿಕೆಗೆ ವಶವಾದ ಮೇಲೆ ಭಾರತೀಯ ಪದ್ಧತಿಯ ಚಿತ್ರಕಲೆಗೆ ಅಪಾರ ಪೆಟ್ಟು ಬಿತ್ತು. ಅವರ ದೃಷ್ಟಿಕೋನದ ನೆಳಲಲ್ಲಿ ಮುಂಬಯಿ, ಕಲ್ಕತ್ತ, ಮದರಾಸು, ಮೈಸೂರು ಮುಂತಾದ ಕಡೆ ಕಲಾಶಾಲೆಗಳು ತಲೆ ಎತ್ತಿಕೊಂಡವು. ಭಾರತೀಯ ಹಾಗೂ ಪಾಶ್ಚಾತ್ಯ ಮಿಶ್ರ ಕಲಾ ಸಂಪ್ರದಾಯದ ಚಿತ್ರಕಾರರೂ ಬೆಳೆದುಬಂದರು. ಮುಂಬಯಿಯ ಜೆ. ಜೆ. ಕಲಾಶಾಲೆ ಸಾವಿರಾರು ಚಿತ್ರಕಾರರನ್ನು ಬೆಳಕಿಗೆ ತಂದಿತು. ಇದರಲ್ಲಿ ಕನ್ನಡಿಗರು ಸಿಂಹಪಾಲು. ಪಾಶ್ಚಾತ್ಯ ಚಿತ್ರಕಲೆಯ ಪ್ರಭಾವ ಕರ್ನಾಟಕದಲ್ಲೂ ಕಾಣಿಸಿಕೊಳ್ಳ ಲಾರಂಭಿಸಿತು.

೧೯ – ೨೦ ನೆಯ ಶತಮಾನದಲ್ಲಿ ಪಾಶ್ಚಾತ್ಯ ದೇಶಗ ಳಲ್ಲಿ ಚಿತ್ರಕಲಾರಂಗದಲ್ಲಿ ಬೆಳೆದ ಅನೇಕ ಸಂಪ್ರದಾಯಗ ಳನ್ನು ಅನುಸರಿಸುವ ಅವೇ ತಂತ್ರಗಳನ್ನು ಉಪಯೋಗಿಸಿ ದೇಶೀ ವಸ್ತುಗಳನ್ನು ಪ್ರತಿಪಾದಿಸುವ ಪಂಥಗಳು ಕರ್ನಾಟಕದಲ್ಲಿ ಕಾಣಿಸಿಕೊಂಡಿವೆ. ಕರ್ನಾಟಕದ ಚಿತ್ರ ಕಲಾ ಇತಿಹಾಸದಲ್ಲಿ ಈ ಆಧುನಿಕ ಯುಗ ಸಂಕೀರ್ಣ ತೆಯ ಕಾಲ. ಪಾಶ್ಚಾತ್ಯರಲ್ಲಿ ಬೆಳೆದ ವೈವಿಧ್ಯಮಯವಾದ ಚಿತ್ರರಚನಾ ತಂತ್ರಗಳು ತತ್ಸಂಬಂಧದ ಅನೇಕ ರೀತಿಯ ಹಿನ್ನೆಲೆಯ ವಸ್ತುಗಳು ಮತ್ತು ಕೃತಕ ವರ್ಣಗಳು – ಇವು ಗಳನ್ನು ಬಳಸುವುದು ಈ ಕಾಲದಲ್ಲಿ ಕಂಡುಬಂದ ಮುಖ್ಯ ಬದ ಲಾವಣೆ. ಪ್ರಾಚೀನ ಚಿತ್ರಕಲೆ ಹೆಚ್ಚುಮಟ್ಟಿಗೆ ಧಾರ್ಮಿಕ ವಸ್ತುಗಳನ್ನು ಅಭಿವ್ಯಕ್ತಗೊಳಿಸುತ್ತಿದ್ದರೆ ಈ ಕಾಲದಲ್ಲಿ ಅನೇಕ ಲೌಕಿಕ ಸನ್ನಿವೇಶಗಳನ್ನು ಮತ್ತು ಭಾವನೆಗಳನ್ನು ರೂಪಿಸುವುದು ಮತ್ತೊಂದು ಪ್ರಮುಖ ವ್ಯತ್ಯಾಸ. ೧೯ ನೆಯ ಶತಮಾನದ ಆದಿಯಿಂದ ಸುಮಾರು ನಾಲ್ಕು ದಶಕಗಳ ಕಾಲ ಚಿತ್ರಕಲೆಯ ಪ್ರಗತಿ ನಿಂತು ಹೋಯಿತು. ೧೮೪೪ ರಲ್ಲಿ ಮೇಜರ್‌ಗಿಲ್, ೧೮೭೨ ರಲ್ಲಿ ಗ್ರಿಫಿಕ್ಸ್, ೧೯೦೬ ರಲ್ಲಿ ಲೇಡಿ ಹೆರಿಂಗ್‌ಹ್ಯಾಮ್ ಅವರು ಚಿತ್ರಕಾರರ ತಂಡದೊಂದಿಗೆ ಅಜಂತಾ ಗೆ ಹೋಗಿ ಕೃತಿಗಳನ್ನು ನಕಲು ತೆಗೆದಾಗ ಮತ್ತೆ ಕರ್ನಾಟಕ ಚಿತ್ರಕಲೆ ತಲೆ ಎತ್ತುವಂತಾಯಿತು. ನಿವೇದಿತ ಭಾರತೀಯ ಚಿತ್ರಕಲೆಗೆ ಹೊಸ ದೃಷ್ಟಿ ಕೊಟ್ಟವರಲ್ಲಿ ಪ್ರಥಮರು. ೧೮೫೪ ರಲ್ಲಿ ಕಲ್ಕತ್ತೆಯ ಕಲಾಶಾಲೆ ಪ್ರಾರಂಭವಾಯಿತು. ಇ. ಬಿ. ಹ್ಯಾವೆಲರು ನಮ್ಮ ಚಿತ್ರಗಾರರ ಅನುಕರಣ ಮನೋ ವೃತ್ತಿಯನ್ನು ಖಂಡಿಸಿ ಇವರಿಗೆ ನಮ್ಮ ಪರಂಪರೆಯ ದರ್ಶನ ಮಾಡಿಸಿಕೊಟ್ಟರು. ಅವರ ನೆರವಿನಿಂದ ಅವನೀಂದ್ರನಾಥ ಠಾಕೂರರು ನೂತನ ಸಂಪ್ರದಾಯವನ್ನು ಪ್ರಾರಂಭಿಸಿದರು. ಇವರ ಶಿಷ್ಯ ನಂದಲಾಲ್‌ಬಸು ಮುಂತಾದವರು ನಮ್ಮ ಚಿತ್ರ ಕಲೆಗೆ ನಾವೀನ್ಯವನ್ನು ಬೆಳೆಸಿಕೊಟ್ಟರು. ಅನಂತರ ಅದು ಜನಪದ ಕಲೆಯನ್ನು ಮೈಗೂಡಿಸಿಕೊಂಡು ಬೆಳೆಯಿತು. ಈ ಅನುಕರಣಗಳ ಜೊತೆಗೆ ಬಂಗಾಳದಲ್ಲಿ ಅವನೀಂದ್ರನಾಥ ಠಾಕೂರ್ ಮೊದಲಾದವರಿಂದ ನಿರ್ಮಿತವಾದ ದೇಶೀ ಪ್ರತಿ ಕ್ರಿಯೆಯ ಧಾಟಿ ಕರ್ನಾಟಕದಲ್ಲೂ ಕಾಣಿಸಿಕೊಂಡಿತು. ಈ ವಿವಿಧ ಧಾಟಿಗಳಲ್ಲಿ ಚಿತ್ರರಚನೆ ಮಾಡಿರುವ ಮತ್ತು ಮಾಡುತ್ತಿರುವ ಕಲಾಕಾರರು ಕರ್ನಾಟಕದ ಕಲಾಸಂಪತ್ತನ್ನು ಸುಪುಷ್ಟಗೊಳಿ ಸಿದ್ದಾರೆ. ದಿ. ಕೆ. ವೆಂಕಟಪ್ಪನವರು ಕರ್ನಾಟಕದಲ್ಲಿ, ಏಕೆ ಭಾರತದಲ್ಲಿಯೇ ಅಗ್ರಗಣ್ಯಸ್ಥಾನ ಪಡೆದರು. ಕೆ. ಕೆ. ಹೆಬ್ಬಾ ರರು ಕ್ರಮ ಬದ್ಧವಾದ ಸಂಪ್ರದಾಯ ಕಲೆಯಲ್ಲಿ ಅಭ್ಯಾಸ ಮಾಡಿದರಾದರೂ ಕ್ರಮೇಣ ತಮ್ಮ ಕಲೆಯಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಮೆರೆಯುತ್ತಾ ಬಂದು ಹೊಸ ಸಂಪ್ರದಾಯ ದ ಪ್ರಮುಖರಲ್ಲಿ ಒಬ್ಬರೆಂದು ಖ್ಯಾತಿ ಗಳಿಸಿದ್ದಾರೆ. ಭಾರತೀಯ ವಸ್ತುನಿಷ್ಠೆ ಇವರ ಕೃತಿಗಳಲ್ಲಿ ಎದ್ದು ತೋರುತ್ತದೆ.

ನಾಲ್ವಡಿ ಕೃಷ್ಣರಾಜ ಒಡೆಯರ ಪ್ರೋತ್ಸಾಹದಿಂದ ಚಿತ್ರ ಕಲೆ ಮತ್ತಷ್ಟು ಬೆಳೆಯಿತು. ಇವರ ಕಾಲದಲ್ಲಿ ಕೇರಳದ ಪ್ರಖ್ಯಾತ ಕಲಾವಿದ ರಾಜಾ ರವಿವರ್ಮರು ಮೈಸೂರು ಅರ ಮನೆಯ ಆಶ್ರಯದಲ್ಲಿದ್ದು ಕೆಲವು ತೈಲಚಿತ್ರಗಳನ್ನು ರಚಿಸಿ ಕೊಟ್ಟಿದ್ದಾರೆ. ಇವು ಜಗನ್ಮೋಹನ ಚಿತ್ರಶಾಲೆ (ಈಗ ಜಯ ಚಾಮರಾಜೇಂದ್ರ ಚಿತ್ರಶಾಲೆ) ಯಲ್ಲಿವೆ. ಈ ಎಲ್ಲಾ ಕೃತಿಗಳೂ ಶುದ್ಧ ಪಾಶ್ಚಾತ್ಯ ತಂತ್ರದಲ್ಲಿವೆ. ವೆಂಕಟಪ್ಪ, ಕೇಶವಯ್ಯ, ಅಜೀಜ್, ಎಸ್. ನಂಜುಂಡಸ್ವಾಮಿ, ಸಿದ್ಧಲಿಂಗಸ್ವಾಮಿ ಮೊದ ಲಾದವರಿಂದ ಅನೇಕರ ಚಿತ್ರಗಳನ್ನು ನಾಲ್ವಡಿಯವರು ಬರೆಸಿ ಪ್ರೋತ್ಸಾಹಿಸಿದರು. ಅರಮನೆಯ ಕಲ್ಯಾಣಮಂಟಪದಲ್ಲಿ ರುವ ರಾಜರ ದಸರಾ ಮೆರವಣಿಗೆಯ ಬೃಹದಾಕಾರದ ತೈಲ ವರ್ಣ ಚಿತ್ರಣಗಳನ್ನು ಪಾಶ್ಚಾತ್ಯ ಶೈಲಿಯಲ್ಲಿ ನಂಜುಂಡ ಸ್ವಾಮಿ, ನಾಗರಾಜು, ಸುಬ್ರಹ್ಮಣ್ಯರಾಜು, ಎಸ್. ಆರ್. ಅಯ್ಯಂ ಗಾರ್ ಮತ್ತು ಶಂಕರರಾಜು ಮುಂತಾದ ಕಲಾವಿದರಿಂದ ಬರೆ ಯಿಸಿ ಪ್ರೋತ್ಸಾಹಿಸಿದರು. ಇವರ ಕಾಲದಲ್ಲಿ ಮೈಸೂರು ದಸರಾ ಕಲಾಪ್ರದರ್ಶನಕ್ಕೆ ಬರುತ್ತಿದ್ದ ಕಲಾಕೃತಿಗಳಲ್ಲಿ ಉತ್ತಮ ವೆಂದು ತೋರುವ ಚಿತ್ರಗಳನ್ನು ಕೊಂಡು ಜಗನ್ಮೋಹನ ಚಿತ್ರಶಾಲೆಗೆ ಸೇರಿಸುತ್ತಾ ಬಂದರು. ಈ ಕನ್ನಡನಾಡಿನ ಕಲೆಗೆ ಪ್ರೋತ್ಸಾಹ ನೀಡುವ ಸಲುವಾಗಿ ಮೈಸೂರಿನಲ್ಲಿ ೧೯೧೩ ರಲ್ಲಿ ಚಾಮರಾಜ ಒಡೆಯರ ಸವಿನೆನಪಿನಲ್ಲಿ ಒಂದು ಕಲಾಶಾಲೆ ಯನ್ನು ತೆರೆಯಲಾಯಿತು. ಕಲಾಶಾಲೆಯ ಕಟ್ಟಡದ ಶಂಕು ಸ್ಥಾಪನೆಯನ್ನು ಜಾರ್ಜ್ ಚಕ್ರವರ್ತಿಗಳು ನೆರವೇರಿಸಿದರು. ಈ ಕಲಾಶಾಲೆ ಎಸ್. ನಂಜುಂಡಸ್ವಾಮಿ, ಕೆ. ವೆಂಕಟಪ್ಪ, ಎಸ್. ಎನ್. ಸ್ವಾಮಿ, ಕೆ. ಕೆ. ಹೆಬ್ಬಾರ್ ಹೀಗೆ ಅನೇಕಾನೇಕ ವರ್ಣ ಶಿಲ್ಪಿಗಳನ್ನು ನೀಡಿದೆ. ಕನ್ನಡ ನಾಡಿನ ಅನೇಕ ಖಾಸಗಿ ಕಲಾ ಶಾಲೆಗಳಲ್ಲಿ ಮತ್ತು ಸರ್ಕಾರಿ ವಿದ್ಯಾಶಾಲೆಗಳಲ್ಲಿ ವಿದ್ಯಾರ್ಥಿ ಗಳಿಗೆ ಕಲಾಶಿಕ್ಷಣ ನೀಡಲಾಗುತ್ತಿದೆ. ಈಗ ಕರ್ನಾಟಕದ ಮೊತ್ತಮೊದಲನೆಯ ಚಿತ್ರ ಕಲಾ ವಿದ್ಯಾಲಯ ಮೈಸೂರಿನಲ್ಲಿ ರೂಪಗೊಳ್ಳಲಿದೆ. ಇಲ್ಲಿ ಚಿತ್ರ – ಕಲೆಗಳ ಅಭ್ಯಾಸಕ್ಕೆ ಒಳ್ಳೆ ಯ ದಾರಿ ಮಾಡಿಕೊಡಲಿದೆ. ಇದರ ಪ್ರಥಮ ಪ್ರಾಚಾರ್ಯರಾಗಿ ಕನ್ನಡಿಗರಾದ ಶ್ರೀ ಸೋಲಾಪುರ್‌ಕರ್ ಅವರು ನೇಮಕಗೊಂಡಿ ದ್ದಾರೆ. ಇದು ಸಂತೋಷದ ಸಂಗತಿಯಾಗಿದೆ.

ಪಾಶ್ಚಾತ್ಯ ಸಂಪ್ರದಾಯ ಸಂಪರ್ಕದಿಂದ ಹೊಸ ಹೊಸ ಪ್ರಯೋಗಗಳು ನಡೆಯುತ್ತಿವೆ. ನೂತನ ಕಲಾಪಂಥ ೨೦ ನೆಯ ಶತಮಾನದಲ್ಲಿ ಬೆಳೆದು ಬಂದಿದೆ. ಇಲ್ಲಿ ನವ್ಯ ಕಲಾ ವಿದನ ಮನೋಧರ್ಮ, ಕೃತಿಗಳ ಹಾದಿ ಬದಲಾಗುತ್ತಾ ಬಂದಿ ದೆ. ಕಲಾ ವಸ್ತುವಿನ ಆಯ್ಕೆ, ನಿರೂಪಣೆ, ಶೈಲಿಯ ನೂತನ ತೆಯನ್ನು ಕಾಣಬಹುದಾಗಿದೆ. ಕಳೆದ ಮಹಾಯುದ್ಧಗಳ

ಅನಂತರ ಉಂಟಾದ ಧಾರ್ಮಿಕ, ಸಾಮಾಜಿಕ ಮತ್ತು ಲೌಕಿಕ ಏರುಪೇರುಗಳು ನೂತನ ಕಲೆಯ ಮೇಲೆ ಪ್ರತಿಬಿಂಬಿತವಾಗಿವೆ. ಈ ಪ್ರಭಾವ ಸಮಕಾಲೀನ ಜಾಣ್ಮೆಯುಳ್ಳ ಸೂಕ್ಷ್ಮ ಮತಿಗಳಾದ ನವ್ಯ ಕಲಾವಿದರ ಮೇಲೂ ಗಾಢವಾಗಿ ಆವರಿಸಿತು. ಇದರಿಂದಾಗಿ ಕಲಾವಿದ ತನ್ನ ಬಯಕೆಗಳನ್ನು ಪ್ರತಿಬಿಂಬಿಸಲು ಹೊಸ ರೀತಿಯ ಶೈಲಿಯನ್ನು ಕಂಡುಕೊಳ್ಳಲು ಪ್ರಯತ್ನಿಸಿದ.

ಈ ದಾರಿಯಲ್ಲಿ ನೂತನ ಕಲೆ ವ್ಯಕ್ತಿನಿಷ್ಠವಾಯಿತು. ಇದರಿಂದಾಗಿ ಕ್ಯೂಬಿಸಂ, ಡಾಡಾಯಿಸಂ, ಫ್ಯೂಚರಿಸಂ, ಇಂಪ್ರೆಷನಿಸಂ, ಕೋಲೇಜ್ ಮೊದಲಾದ ಪಂಥಗಳು ಹುಟ್ಟಿಕೊಂಡವು. ಇದು ಕ್ರಮೇಣ ಲೋಕಪ್ರಸಿದ್ಧವಾಯಿತು. ಪಾಶ್ಚಾತ್ಯ ದೇಶಗಳಲ್ಲಿ ನವ್ಯಕಲೆ ಬೆಳೆದಂತೆ ಭಾರತದಲ್ಲೂ ಸಾಕಷ್ಟು ಬೆಳೆಯತೊಡಗಿದೆ.

೨೫ ವರ್ಷಗಳಿಂದ ಈಚೆಗೆ ಕಂಡುಬಂದಿರುವ ಮಹತ್ತರ ಬದಲಾವಣೆ ಎಂದರೆ ರಾಜಕೀಯ ಸ್ವಾತಂತ್ರ್ಯದ ಜೊತೆಗೆ ಕಲೆಯಲ್ಲೂ ಸ್ವಾತಂತ್ರ್ಯ. ನವ್ಯಕಲಾ ಸಂಪ್ರದಾಯ ಈ ಕಾಲದಲ್ಲಿ ವಿಶೇಷವಾಗಿ ಬೆಳೆದುಬಂದಿದೆ. ಕೇಂದ್ರ ಲಲಿತಕಲಾ ಅಕಾಡಮಿಯ ಸ್ಥಾಪನೆ ಇದಕ್ಕೆ ಪುಟ ಕೊಟ್ಟಿದೆ. ರಾಜ್ಯ ಅಕಾಡೆಮಿಗಳು ಈ ದಿಕ್ಕಿನಲ್ಲೇ ಮುಂದುವರಿದಿವೆ. ಅನೇಕ ಖ್ಯಾತ ಕಲಾವಿದರು ಪಾಶ್ಚಾತ್ಯ ದೇಶಗಳಲ್ಲಿ ಪ್ರವಾಸ ಮಾಡಿ ಬಂದಿದ್ದಾರೆ. ಅಲ್ಲಿಯ ಪ್ರಭಾವ ಇವರ ಮೇಲೂ ಬಿದ್ದಿದೆ. ನವ್ಯ ಶೈಲಿಯ ಕಲಾವಿದರನೇಕರು ಇಂದು ಆಚಾರ್ಯ ಸ್ಥಾನದಲ್ಲಿದ್ದಾರೆ. ಪಾಶ್ಚಾತ್ಯ ಸಾಂಪ್ರದಾಯಿಕ ಶೈಲಿಯನ್ನು ಅಭ್ಯಾಸ ಮಾಡಿದ ಈ ಕಲಾವಿದರು ನವ್ಯ ಮಾರ್ಗವನ್ನು ಹಿಡಿದಿದ್ದಾರೆ. ಪರಿಣಾಮ ಎಂದರೆ ಇವೆರಡರ ಸಮನ್ವಯ.

ಶುದ್ಧ ಭಾರತೀಯ ಸಂಪ್ರದಾಯವನ್ನೇ ಅನುಸರಿಸಿದ ಕಲಾವಿದರೂ ಮುಂದುವರಿದಿದ್ದಾರೆ. ಆದರೆ ಅರಮನೆಯ ಪ್ರೋತ್ಸಾಹ ತಪ್ಪಿದ್ದರಿಂದ ಇವರು ಬೇರುಕಿತ್ತ ಸಸಿಯಂತಾಗಿದ್ದಾರೆ. ಇಲ್ಲಿ ಪ್ರತಿಭೆಗಿಂತ ಕೌಶಲದ ಕೈಮೇಲಾಗಿದೆಯೇನೋ ಎನಿಸುತ್ತದೆ. ಬದಲಾದ ವಾತಾವರಣಕ್ಕೆ ತಕ್ಕ ರೀತಿಯಲ್ಲಿ ಇವರು ಮಾರ್ಪಾಡುಗಳನ್ನು ಮಾಡಿಕೊಂಡರೆ ಇವರ ಕಲೆಗೆ ಮತ್ತೆ ಜೀವಂತತೆ ದೊರಕಿದಂತಾಗಬಹುದು.

ಬೊಂಬಾಯಿ, ಮದರಾಸು ಕಲಾಶಾಲೆಗಳಲ್ಲಿ ಅಭ್ಯಾಸ ಮಾಡಿ ಬಂದ ಯುವಕರು ಬೆಂಗಳೂರು, ದಾವಣಗೆರೆ, ಗುಲ್ಬರ್ಗ ಮುಂತಾದ ಕಡೆಗಳಲ್ಲಿ ಅಧ್ಯಾಪಕರಾಗಿ ಸೃಜನಾತ್ಮಕ ಕಲೆಯ ಕಡೆಗೆ ಹೆಚ್ಚು ದೃಷ್ಟಿ ಹರಿಸುವಂತಾಗಿದೆ. ಸರ್ಕಾರದ ಪ್ರೋತ್ಸಾಹ ಈಗ ಮೊದಲಿಗಿಂತ ಹೆಚ್ಚಾಗಿದೆ. ಆದರೆ ಸರ್ಕಾರದ ಕಲಾ ಶಾಲೆಗಳು ಸರಿಯಾದ ದಾರಿಯಲ್ಲಿ ಕೆಲಸಮಾಡುತ್ತಿಲ್ಲ.

ಕರ್ನಾಟಕದ ಕಲೆಯ ಬೆಳವಣಿಗೆಯಲ್ಲಿ ನಿಶ್ಚಿತ ಕಲಾ ಚಟುವಟಿಕೆಗಳನ್ನು ಗುರುತಿಸಲು ಸಾಧ್ಯವಿದೆ. ಸರ್ಕಾರ ಹಿಂದಿನಿಂದಲೂ ದಸರಾ ಕಲಾ ಪ್ರದರ್ಶನವನ್ನು ನಡೆಸಿಕೊಂಡು ಬಂದಿದೆ. ಈಗ ರಾಜ್ಯ ಲಲಿತಕಲಾ ಅಕಾಡೆಮಿಯ ಪ್ರೋತ್ಸಾಹದಿಂದ ಕಲಾವಿದರಲ್ಲಿ ಜಾಗೃತಿಯುಂಟಾಗಿದೆ. ವಾರ್ಷಿಕ ಕಲಾ ಪ್ರದರ್ಶನ, ಭಿತ್ತಿಚಿತ್ರಗಳ ನಕಲು ಮಾಡುವಿಕೆ, ಏಕ ವ್ಯಕ್ತಿ ಕಲಾ ಪ್ರದರ್ಶನ, ಹಿರಿಯ ಕಲಾವಿದರ ಮಾರ್ಗದರ್ಶನದಲ್ಲಿ ಕಲಾಭ್ಯಾಸಿಗಳಿಗೆ ದೇಶದ ಒಳಗೂ ಕಲಾಶಿಕ್ಷಣಕ್ಕಾಗಿ ವಿದ್ಯಾರ್ಥಿವೇತನ ಕೊಡುವುದು, ಬಹುಮಾನಿತ ಕೃತಿಗಳನ್ನು ಕೊಳ್ಳುವುದು ಮುಂದುವರಿದಿದೆ. ರಾಜ್ಯದ ಹಲವೆಡೆಗಳಲ್ಲಿ ಮಕ್ಕಳು ಚಿತ್ರ ಬಿಡಿಸುವ ಚಟುವಟಿಕೆ ಅಧಿಕವಾಗಿವೆ. ಇದರಿಂದ ಜನಸಾಮಾನ್ಯರ ಮಟ್ಟಕ್ಕೆ ಕಲೆಯನ್ನು ತರಲೂ ಸಾಧ್ಯವಾಗಿದೆ.

ಕಲೆಯಲ್ಲಿ ನಿಜಕ್ಕೂ ಕರ್ನಾಟಕದ್ದೇ ಆದ ಒಂದು ಪಂಥ ಇದೆ. ಮೈಸೂರು ಸಂಪ್ರದಾಯದ ಚಿತ್ರಕಲೆ ಅತ್ಯಂತ ಪ್ರಾಚೀನವಾದುದು. ತಂಜಾವೂರಿನ ಕಲೆಯಂತೆ ಇದಕ್ಕೂ ರಾಜರ ಕಾಲದಲ್ಲಿ ಹೆಚ್ಚಿನ ಪ್ರೋತ್ಸಾಹ ದೊರಕಿತು. ಆಗ ರಚಿತವಾದ ಅನೇಕ ಚಿತ್ರಗಳು ಈಗಲೂ ಸಿಗುತ್ತವೆ. ಬ್ರಿಟಿಷ್ ಆಳ್ವಿಕೆಯೊಂದಿಗೆ ಈ ಕಲೆಯತ್ತ ಗಮನ ಕಡಿಮೆಯಾಗಿ ಇದರ ಬೆಳವಣಿಗೆ ನಿಂತಿತು.

ಈಗ ಇಂಥ ಕಲಾವಿದರು ಇಲ್ಲೊಬ್ಬರು ಅಲ್ಲೊಬ್ಬರು ಇದ್ದಾರೆ. ಈ ಸಂಪ್ರದಾಯ ಕಲೆಯನ್ನು ಉಳಿಸಲು ಚಿತ್ರಕಲಾ ಪರಿಷತ್ತು ಹೊರತಂದಿರುವ ಗ್ರಂಥ ಈ ಮಾತಿಗೆ ಸಾಕ್ಷಿ.

ಕರ್ನಾಟಕ ಏಕೀಕರಣಕ್ಕೆ ಮುಂಚೆ ಕನ್ನಡದ ಭಾಗಗಳು ಬೇರೆ ಬೇರೆ ಆಡಳಿತಗಳ ಅಡಿಯಲ್ಲಿ ಹಂಚಿಹೋಗಿದ್ದವು. ಆಯಾ ಪ್ರಾಂತ್ಯಗಳ ಕಲಾ ಶಾಲೆಗಳಲ್ಲಿ ಅಭ್ಯಾಸ ಮಾಡಿದ ಕಲಾವಿದರು ಅಲ್ಲಲ್ಲಿಯ ಸಂಪ್ರದಾಯಗಳಿಂದ ಪ್ರಭಾವಿತರಾದರು. ಹೀಗಾಗಿ ಇಡೀ ಕರ್ನಾಟಕಕ್ಕೆ ಅನ್ವಯಿಸುವಂತೆ ಏಕರೂಪದ ಕಲೆ ಬೆಳೆಯಲಿಲ್ಲ. ಏಕೀಕರಣದಿಂದ ಈಚೆಗೆ ನಿಧಾನವಾಗಿಯಾದರೂ ಈ ನಿಟ್ಟಿನಲ್ಲಿ ಪ್ರಯತ್ನ ನಡೆದಿದೆ ಎನ್ನಬಹುದು.

ನಮ್ಮ ಪಾರಂಪರ್ಯ ಶಿಲ್ಪ ಮತ್ತು ಚಿತ್ರಕಲೆಗಳ ಚೌಕಟ್ಟಿನಲ್ಲಿ ಹೊಸ ಹೊಸ ಪ್ರಯೋಗಗಳಿಗೆ, ಅಭಿವ್ಯಕ್ತಿಗೆ ಇನ್ನೂ ಅವಕಾಶ ಖಂಡಿತ ಇದೆ. ಇದಕ್ಕಾಗಿ ಜಾನಪದ ಕಲಾ ಸಂಪ್ರದಾಯದ ತಳಹದಿಯ ಮೇಲೆ ಇದು ಬೆಳೆಯಬೇಕಾಗುತ್ತದೆ.. ಆಗಲೇ ಇದು ಜನತೆಯ ಅಭಿವ್ಯಕ್ತಿಯ ಮಾಧ್ಯಮವಾಗುತ್ತದೆ. ಬಂಗಾಳದಲ್ಲಿ ಜಮಿನಿರಾಯರ ಪ್ರಯೋಗ ಯಶಸ್ವಿಯಾಗಿದೆ. ಇಂಥಪ್ರಯೋಗಕ್ಕೆ ಕರ್ನಾಟಕದಲ್ಲಿ ವಿಶೇಷವಾದ ಅವಕಾಶವಿದೆ.

ಸ್ವಾತಂತ್ರ್ಯಕ್ಕೆ ಮುಂಚೆ ಸ್ವಾಭಾವಿಕ ಕಲೆಗೆ ಎಲ್ಲರೂ ಕೈಹಚ್ಚಿ ಸೈ ಎನ್ನಿಸಿಕೊಳ್ಳುವುದು ಕಷ್ಟವಿತ್ತು. ಇಲ್ಲಿ ಬಹುಬೇಗ ತಪ್ಪುಗಳನ್ನು ಗುರುತಿಸಬಹುದು. ನಿರ್ದಿಷ್ಟ ಕಲಾ ನಿಯಮಗಳು ಇರುವುದರಿಂದ ಈ ಕಾರ್ಯ ಸುಲಭ. ನವ್ಯ ಕಲೆಯಲ್ಲಿ ತಪ್ಪು ಶೋಧಿಸುವುದು ಕಷ್ಟ. ಹಲವರ ಕೃತಿಗಳಲ್ಲಿ ವಿದೇಶೀ ಚಿತ್ರಗಳ ಅನುಕರಣೆಯನ್ನು ಗಮನಿಸಬಹುದು. ಕೆಲವರು ಮಾತ್ರವೇ ಕ್ರಮಬದ್ಧವಾದ ಕಲಾಭ್ಯಾಸ ಮಾಡಿ ಸ್ವಂತಿಕೆಯನ್ನು ಬೆಳೆಸಿಕೊಂಡಿದ್ದಾರೆ.

ಶಾಸ್ತ್ರೀಯ ಪರಂಪರೆಯಲ್ಲಿ ಕೆಲಸ ಮಾಡುತ್ತಿರುವ ಹಳೆಯ ಪೀಳಿಗೆಯ ಕಲಾವಿದರು ಮತ್ತು ತರುಣ ನವ್ಯ ಕಲಾವಿದರ ನಡುವೆ ಸ್ಪರ್ಧೆ ಅನಗತ್ಯ. ಏಕೆಂದರೆ ಹಿಂದಿನ ಕಲೆಗೆ ಜನಸಾಮಾನ್ಯರ ಒಲವು ಇದೆ. ನವ್ಯಕಲೆ ಕೇವಲ ಬುದ್ಧಿಜೀವಿಗಳಿಗೆ ಸೀಮಿತವಾದುದು. ಜನರಲ್ಲಿ ಶಿಕ್ಷಣ ಹೆಚ್ಚಿದಂತೆ ಇದನ್ನು ಹೆಚ್ಚು ಹೆಚ್ಚು ಅರ್ಥ ಮಾಡಿಕೊಳ್ಳಬಹುದು. ಎರಡು ಸಂಪ್ರದಾಯಗಳ ಕಲಾವಿದರೂ ಅಭ್ಯಾಸದ ಕಡೆಗೆ ಗಮನ ಕೊಡಬೇಕು. ಎರಡೂ ಬೆಳೆಯಬೇಕು.

ಸಂಪೂರ್ಣ ದೃಶ್ಯ ಮಾಧ್ಯಮದ ಕಲೆ ಸಾಹಿತ್ಯ ರೂಪಗಳನ್ನು ಉಳಿಸುವ ದೃಷ್ಟಿಯಿಂದಲೇ ಅಲ್ಲದೆ ನಮ್ಮ ಸಂಸ್ಕೃತಿ ಸಂಪ್ರದಾಯಗಳನ್ನು ಉಳಿಸುವ ದೃಷ್ಟಿಯಿಂದಲೂ ಅಗತ್ಯ.

ಕರ್ನಾಟಕದಲ್ಲಿ ಕಲಾವಿಮರ್ಶೆ ಅಷ್ಟಾಗಿ ಬೆಳೆದಿಲ್ಲವೆಂಬುದು ನಿಜ. ಕಲಾ ಪ್ರದರ್ಶನ ಈಗ ಹೆಚ್ಚಾಗಿ ನಡೆಯುತ್ತಿದೆ.

ಪತ್ರಿಕೆಗಳ ಪ್ರೋತ್ಸಾಹವೂ ದೊರಕಿದೆ. ಕಲಾವಿಮರ್ಶೆಗಳು ಬರುತ್ತಿವೆ. ಇತರ ರಾಜ್ಯಗಳಂತೆ ಇಲ್ಲೂ ಪಕ್ಷವೂ ಇಲ್ಲದಿಲ್ಲ. ಇಲ್ಲೂ ನಾನಾ ಬಗೆಯ ಗುಂಪುಗಾರಿಕೆಗಳುಂಟು. ನಿಜವಾದ ಕಲಾ ವಿಮರ್ಶಕರಿಗೆ ಯಾವ ಗುಂಪುಗಾರಿಕೆಯೂ ಸಲ್ಲದು. ವಿಮರ್ಶೆಯಲ್ಲಿ ವಸ್ತುನಿಷ್ಠ ಅಗತ್ಯ. ಅವನು ಭಾರತೀಯ ಕಲೆ ಸಾಹಿತ್ಯಗಳನ್ನು ಅಭ್ಯಾಸ ಮಾಡಿದವನಿರಬೇಕು. ಪಂಥ ಯಾವುದೇ ಇರಲಿ, ಅದರಲ್ಲಿಯ ಒಳ್ಳೆಯದನ್ನು ಗುರುತಿಸುವ ಹಾಗೂ ದೋಷಗಳನ್ನು ಎತ್ತಿತೋರಿಸುವ ನಿಷ್ಪಕ್ಷಪಾತ ದೃಷ್ಟಿ ಬೆಳೆದಾಗ ಮಾತ್ರ ಒಳ್ಳೆಯ ವಿಮರ್ಶಾ ಪದ್ಧತಿ ರೂಪುಗೊಳ್ಳಬಹುದು.

ವಿಮರ್ಶೆಯನ್ನು ಸರಿಯಾದ ದೃಷ್ಟಿಯಿಂದ ಸ್ವೀಕರಿಸುವ ಮನೋಧರ್ಮ ಕಲಾವಿದನಲ್ಲಿ ಬೆಳೆಯಬೇಕು. ವಿಮರ್ಶಕನ ಅಭಿಪ್ರಾಯ ಏನೇ ಇರಲಿ, ಕಲಾವಿದ ತನ್ನ ಸ್ವಂತಿಕೆಯನ್ನು ಉಳಿಸಿ ಬೆಳೆಸಿಕೊಳ್ಳುವುದು ಇಂದು ಅಗತ್ಯ. ಸರಿಯಾದ ದಾರಿಯು ನಿರ್ಮಾಣವಾಗುವ ವರೆವಿಗೂ ಕಲಾವಿದ ಈ ನಿಟ್ಟಿನಲ್ಲಿ ಸ್ಥೈರ್ಯದಿಂದ ಹೋರಾಟ ನಡೆಸುವುದು ಅತ್ಯಗತ್ಯವಾಗಿದೆ.

# ಕರ್ನಾಟಕದಲ್ಲಿ ಸಂಗೀತ

ಬಿ. ವಿ. ಕೆ. ಶಾಸ್ತ್ರಿ

ಕನ್ನಡದ ಅತ್ಯಂತ ಪ್ರಾಚೀನ (ಕ್ರಿ. ಶ.೮೫೦) ಕೃತಿ "ಕವಿರಾಜ ಮಾರ್ಗ"ದಲ್ಲಿ ಕರ್ನಾಟಕ ಅಥವಾ ಕನ್ನಡ ನಾಡನ್ನು ಕಾವೇರಿ ಮತ್ತು ಗೋದಾವರೀ ನಡುವಣ ಪ್ರದೇಶವೆಂದು ಹೇಳಲಾಗಿದೆ ಹಾಗೂ ಈ ಪ್ರದೇಶದಲ್ಲಿನ ಜನರ ಅನೇಕ ಸಾಧನೆಗಳನ್ನು ಅದರಲ್ಲಿ ವಿವರಿಸಲಾಗಿದೆ. ಈ ಸಾಧನೆಗಳಲ್ಲಿ ಸಂಗೀತವನ್ನು ಕುರಿತು ನಿರ್ದಿಷ್ಟವಾಗಿ ಏನನ್ನೂ ಹೇಳದಿದ್ದರೂ ಈ ವಿಷಯದ ಬಗ್ಗೆ ಅಲ್ಲಲ್ಲಿ ಅನುದ್ದಿಷ್ಟ ಪ್ರಸ್ತಾಪವಿದೆ. ಈ ನಾಡಿನ ಸಂಗೀತದ ಬಗೆಗೆ ಹೆಚ್ಚು ನಿರ್ದಿಷ್ಟವಾದ ಪ್ರಸ್ತಾಪ ಕದಂಬ ದೊರೆ ಕಾಕುಸ್ಥವರ್ಮನ (ಕ್ರಿ. ಶ. ೪೫೦) ತಾಳಗುಂದ ಶಾಸನದಲ್ಲಿ ಕಂಡುಬಂದಿದೆ. ಕನ್ನಡದ ಪುರಾತನ ಶಾಸನಗಳಲ್ಲಿ ಹಾಗೂ ಗಣ್ಯ ಗ್ರಂಥಗಳಲ್ಲಿ ಮಾತ್ರವಲ್ಲದೆ ಇತರ ಭಾಷಾ ಸಾಹಿತ್ಯದಲ್ಲೂ ಈ ಬಗೆಯ ಪ್ರಸ್ತಾಪವಿದೆ.

ತಮಿಳಿನ ಪ್ರಸಿದ್ಧ ಗಣ್ಯ ಗ್ರಂಥ ಶಿಲಪ್ಪದಿಕಾರಂನಲ್ಲಿ ಕರುಣತರ ಅಥವಾ ಕರ್ನಾಟಕದ ಜನರ ಬಗ್ಗೆ ಪ್ರಸ್ತಾಪಗಳಿವೆ. ಈ ನಾಡಿನಿಂದ ಬಂದ ಸಂಗೀತಗಾರರು ಹಾಗೂ ನರ್ತಕರು ಚೇರ ದೊರೆ ಸೆನ್‌ಗಟ್ಟುವಾನನ ಸಮ್ಮುಖದಲ್ಲಿ ಕಚೇರಿ ಹಾಗೂ ನಾಟ್ಯ ಮಾಡಿದರೆಂದೂ ಹೇಳಲಾಗಿದೆ. ಮತಂಗನ ಪ್ರಸಿದ್ಧ ಸಂಗೀತ ಗ್ರಂಥ "ಬೃಹದ್ದೇಶಿ" ಯಲ್ಲಿ ಕರ್ನಾಟಕ ಮತ್ತು ಕರ್ನಾಟ ಭಾಷೆಯ ಕುರಿತು, ಅದರಲ್ಲೂ ಪ್ರಬಂಧ ಮತ್ತು ಕೃತಿಗಳಿಗೆ ಸಂಬಂಧಿಸಿದಂತೆ ಸ್ಪಷ್ಟವಾದ ನೇರ ಪ್ರಸ್ತಾಪವಿದೆ. ಹೀಗೆಯೇ ಸಂಸ್ಕೃತದ ಗದ್ಯ ಕೃತಿ ವಿಕ್ರಮಾಂಕಾಭ್ಯುದಯದಲ್ಲಿ ಚಾಳುಕ್ಯ ದೊರೆ ವಿಕ್ರಮಾದಿತ್ಯನ ಆಡಳಿತ ಮತ್ತು ದಂಡಯಾತ್ರೆಗಳ ವಿವರದ ಜತೆಗೆ ಅವನ ರಾಜಧಾನಿ ಕಲ್ಯಾಣದಲ್ಲಿ ಸಂಗೀತದ ಅಭಿವೃದ್ಧಿಯ ಬಗ್ಗೆ ಅನೇಕ ಸಂಗತಿಗಳಿವೆ.

ಸಂಗೀತವು ಜನರ ಸಾಮಾಜಿಕ ಹಾಗೂ ಆಧ್ಯಾತ್ಮಿಕ ಜೀವನದ ಒಂದು ಅಂಗವಾಗಿತ್ತು. ಗಣ್ಯ ಗ್ರಂಥಗಳಲ್ಲಿ ದೇವಾಲಯ, ಅರಮನೆ ಹಾಗೂ ವಾರಾಂಗನೆಯರ ವಿಷಯ ಬಂದಾಗಲೆಲ್ಲ ಸಂಗೀತದ ಪ್ರಸ್ತಾಪವಿದೆ. ದೇವಾಲಯಗಳಲ್ಲಿ ಸಂಗೀತವು ನಿತ್ಯಪೂಜೆಯ ಹಾಗೂ ಧಾರ್ಮಿಕ ವಿಧಿಗಳ ಒಂದು ಅನಿವಾರ್ಯ ಅಂಶವೆನಿಸಿತ್ತು. ಅರಮನೆಗಳಲ್ಲಿ ಅದೊಂದು ಶಿಷ್ಟಾಚಾರ ಹಾಗೂ ಮನರಂಜನೆಯ ಸಾಧನವಾಗಿದ್ದಿತು. ಶಿಕ್ಷಣದಲ್ಲೂ ಸಂಗೀತಕ್ಕೆ ಪ್ರಮುಖ ಸ್ಥಾನವಿತ್ತು. ರಾಜಕುಮಾರರು ಹಾಗೂ ರಾಜಕುಮಾರಿಯರು ಸಂಗೀತದಲ್ಲಿ ತರಬೇತಿ ಹಾಗೂ ಅಭಿರುಚಿ ಬೆಳೆಸಿಕೊಳ್ಳಬೇಕೆಂಬ ಪರಿಪಾಠವಿತ್ತು. ಸ್ವಲ್ಪಮಟ್ಟಿಗಾದರೂ ಅರ್ಥಮಾಡಿಕೊಂಡು ತಲೆದೂಗುವಷ್ಟು ಸಂಗೀತವನ್ನು ಬಲ್ಲವನು ಸುಸಂಸ್ಕೃತನೆನಿಸುತ್ತಿದ್ದ. ಪುರಾತನ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಸಂಗೀತದ, ಹಾಗೂ ಅದರ ಅನೇಕ ಅಂಶಗಳ ಬಗ್ಗೆ ವಿವರವಾದ ಪ್ರಸ್ತಾಪವಿರುವುದನ್ನು ಕಂಡಾಗ ಸಾಹಿತ್ಯದಲ್ಲಿ ಪರಿಣತರಾದ ಗ್ರಂಥಕರ್ತರಿಗೆ ಸಂಗೀತದ ಬಗ್ಗೆ ಆಳವಾದ ಜ್ಞಾನವಿತ್ತೆಂಬುದು ಸ್ಪಷ್ಟವಾಗುತ್ತದೆ.

ಇಂಥ ಅನೇಕ ಗ್ರಂಥಗಳು ಸಂಗೀತ ಕಚೇರಿಗಳನ್ನು ವಿವರಿಸಿವೆ. ಈ ವಿವರಗಳಿಂದಾಗಿ ಆ ಕಾಲದಲ್ಲಿ ಸಂಗೀತವು ವಿಕಾಸವಾಗುತ್ತಿದ್ದ ಬಗೆಯನ್ನು ತಿಳಿಯಲು ಸಾಧ್ಯವಾಗುತ್ತದೆ. ಆಗಿನ ಕಾಲದಲ್ಲಿ ತಂಬೂರಿ ಗೊತ್ತೇ ಇರಲಿಲ್ಲ. ಆಧಾರ ಷಡ್ಜಕ್ಕೆ ಅಥವಾ ಶ್ರುತಿಗೆ ಕೊಳಲನ್ನೆ ಬಳಸುತ್ತಿದ್ದರು. ಬಗೆಬಗೆಯ ಹಾಡುಗಾರರಿದ್ದರು. ಏಕ ವ್ಯಕ್ತಿಯ ಹಾಡಿಕೆಯನ್ನು "ಏಕಲ" ವೆನ್ನುತ್ತಿದ್ದರು. ಇಬ್ಬರು ಹಾಡುವುದನ್ನು ಯಮಳ ಗಾಯನವೆಂದೂ, ಗುಂಪಾಗಿ ಹಾಡುವವರನ್ನು ವೃಂದಗಾಯಕರೆಂದೂ ಕರೆಯುತ್ತಿದ್ದರು. ವಾಗ್ಗೇಯಕಾರರೂ (ಸಂಗೀತ ಕೃತಿ ರಚಿಸುವವರು) ಇದ್ದರು. ಬರಬರುತ್ತಾ ಬಯಕಾರರು ಹುಟ್ಟಿಕೊಂಡರು. ಇವರು ಸಂಗೀತ ಹಾಗೂ ಸಾಹಿತ್ಯ ಎರಡರಲ್ಲೂ ಪರಿಣತರಾಗಿದ್ದು, ಎರಡನ್ನೂ ಮೇಳವಿಸಿ ಸಂಗೀತ ಕೃತಿ ರಚಿಸಲಾರಂಭಿಸಿದರು.

ಹಾಡಿಕೆಯ ಕಚೇರಿಗಳಲ್ಲಿ ಕೊಳಲು, ಮೃದಂಗ ಮತ್ತು ಹುದುಕ್ಕಗಳನ್ನು ಪಕ್ಕವಾದ್ಯಗಳಾಗಿ ಬಳಸುತ್ತಿದ್ದರು. ಕರ್ನಾಟಕದಲ್ಲಿ ವೀಣೆಯ ಜತೆಗೆ ಕಿನ್ನರಿ ಅತ್ಯಂತ ಜನಪ್ರಿಯ ವಾದ್ಯವಾಗಿದ್ದಂತೆ ಕಂಡುಬರುತ್ತದೆ. ನಾನಾ ಬಗೆಯ ವೀಣೆಗಳೂ ಬಳಕೆಯಲ್ಲಿದ್ದವು. ಬಸವ ಪುರಾಣ ಮತ್ತು ಪದ್ಮರಾಜ ಪುರಾಣದಲ್ಲಿ ಅನೇಕ ವಿಧದ ವೀಣೆಗಳ ಪ್ರಸ್ತಾಪವಿದೆ. ಸಂಗೀತಗಾರರು ಅನೇಕ ರಾಗಗಳನ್ನೂ ಪ್ರಬಂಧಗಳನ್ನೂ ಹಾಡುತ್ತಿದ್ದರು. ಬಹು ಹಿಂದೆಯೇ ಇವು ತೀರ ಹಳತಾಗಿಬಿಟ್ಟವು. ಈ ಸಂಬಂಧವಾಗಿ ಬಳಸಲಾದ ತಾಂತ್ರಿಕ ಪದಗಳು ಸಂಗೀತದಲ್ಲೂ ಸ್ಥಳೀಯ ಸಂಪ್ರದಾಯವಿತ್ತೆಂಬುದನ್ನು ವ್ಯಕ್ತಪಡಿಸುತ್ತದೆ.

**ಕರ್ನಾಟಕದ ಕೊಡುಗೆ**

ಭಾರತದ ಇತರ ಪ್ರದೇಶಗಳಲ್ಲಿನಂತೆ ಕರ್ನಾಟಕದ ಜನರಿಗೂ ಸಂಗೀತದಲ್ಲಿ ನಿಸ್ಸಂಶಯವಾಗಿ ಅಮಿತಾಸಕ್ತಿ ಇತ್ತು. ಈ ಕಲೆಗೆ ಹಾಗೂ ಅದರ ಬೆಳವಣಿಗೆಗೆ ಉದಾರ ಪ್ರೋತ್ಸಾಹವಿತ್ತರು. ಎಲ್ಲಕ್ಕಿಂತ ಹೆಚ್ಚಾಗಿ ಸಂಗೀತದ ಬೆಳವಣಿಗೆಗೆ ಅನ

ರಿತ್ತು ಹೊಸ ಆಯಾಮ ಮಹತ್ತರ ಕೊಡುಗೆ ಎನಿಸಿತು. ಭೌಗೋಳಿಕವಾಗಿ ಉತ್ತರ ಮತ್ತು ದಕ್ಷಿಣ ಭಾರತದ ನಡುವಣ ಸಂಚಾರ ಹಾಗೂ ಸಂಪರ್ಕ ಕರ್ನಾಟಕದ ಮೂಲಕವೇ ಸಾಗಬೇಕಿತ್ತು. ಇದರಿಂದಾಗಿ ಹೊಸ ಭಾವನೆಗಳಿಗೆ, ರೀತಿ ನೀತಿಗಳಿಗೆ ಇವರ ದೃಷ್ಟಿ ಹರಿಯಲು ಸಾಧ್ಯವಾಯಿತು. ಪರಿಣಾಮವಾಗಿ ಪ್ರಚಲಿತ ಸಂಗೀತಕ್ಕೆ ಹೊಸ ಸ್ವರೂಪ ಕೊಟ್ಟರು. ಪುರಾತನ ಪದ್ಧತಿ ಮತ್ತು ರೀತಿಗಳನ್ನು ಹೊಸ ಮಾರ್ಗದತ್ತ ಕೊಂಡೊಯ್ಯುವುದರಲ್ಲಿ ಕರ್ನಾಟಕ ವಹಿಸಿದ ಪಾತ್ರ ಗಣನೀಯ. ಸಂಗೀತದ ಬಗ್ಗೆ ಪ್ರಾಚೀನ ಸಾಹಿತ್ಯವನ್ನು ಗಮನಿಸಿದಾಗ ಇದು ಸ್ಪಷ್ಟವಾಗುತ್ತದೆ. ಇಲ್ಲಿ ನಾವೊಂದು ವಿಷಯವನ್ನು ಮರೆಯುವಂತಿಲ್ಲ. ಸಂಗೀತದ ಬಗ್ಗೆ ಕೆಲವು ಅಧಿಕೃತ ಪ್ರಾಚೀನ ಗ್ರಂಥಗಳು ಕರ್ನಾಟಕದಲ್ಲಿಯೇ ರಚಿತವಾದವು ಅಥವಾ ಬೇರೆಡೆಗಳಲ್ಲಿ ರಚಿತವಾಗಿದ್ದರೂ ಕರ್ನಾಟಕದಿಂದ ಬಂದವರಿಂದಲೇ ರಚಿತವಾದವು. ಈ ಕೆಳಗೆ ಸಂಗೀತ ಮತ್ತು ನೃತ್ಯಗಳ ಬಗ್ಗೆ ಕರ್ನಾಟಕದಲ್ಲಿ ಬರೆದ ಕೆಲವು ಪ್ರಮುಖ ಕೃತಿಗಳನ್ನು ಹೆಸರಿಸಲಾಗಿದೆ.

**1) ರಾಜಮಾನಸೋಲ್ಲಾಸ ಅಥವಾ ಅಭಿಲಾಷಿತಾರ್ಥ ಚಿಂತಾಮಣಿ**

ಕ್ರಿ. ಶ. ೧೧೨೬–೩೮ರ ಅವಧಿಯಲ್ಲಿ ಆಳಿದ ಚಾಳುಕ್ಯ ದೊರೆ ಮುಮ್ಮಡಿ ಭೂಲೋಕಮಲ್ಲ ಸೋಮೇಶ್ವರನು ಸಂಗೀತ ಮತ್ತು ನೃತ್ಯಗಳ ಬಗ್ಗೆ ವಿವರ ಪೂರ್ಣವಾಗಿ ಬರೆದ ಅಧ್ಯಾಯಗಳನ್ನೊಳಗೊಂಡ ಸಮಗ್ರ ಕೋಶ.

**2) ಸಂಗೀತ ಚೂಡಾಮಣಿ**

ಮುಮ್ಮಡಿ ಸೋಮೇಶ್ವರನ ಮಗ ಪ್ರತಾಪ ಚಕ್ರವರ್ತಿ ಅಥವಾ ಜಗದೇಕಮಲ್ಲನ ಕೃತಿ. ಈತ ಚಾಲುಕ್ಯ ಸಾಮ್ರಾಜ್ಯವನ್ನು ಕ್ರಿ. ಶ. ೧೧೩೮ರಿಂದ ೫೦ರವರೆಗೆ ಆಳಿದ ದೊರೆ.

**3) ಸಂಗೀತ ರತ್ನಾಕರ**

ದೇವಗಿರಿಯ ಯಾದವ ದೊರೆ ಸಿಂಘಣ (ಕ್ರಿ.ಶ. ೧೧೩೨–೬೯)ನ ಬಳಿ ಲೆಕ್ಕ ಪತ್ರಾಧಿಕಾರಿಯಾಗಿದ್ದ ಕರಣಿಕಾಗ್ರಣಿ ಸಾರಂಗದೇವ ಸೂರಿಯ ಈ ಕೃತಿಯನ್ನು ಸಂಗೀತ ಮತ್ತು ನೃತ್ಯದ ಬಗ್ಗೆ ಅತ್ಯಂತ ಗಣನೀಯ ಗ್ರಂಥವೆನ್ನಲಾಗಿದೆ.

**4) ಕಳಾನಿಧಿ**

"ಸಂಗೀತ ರತ್ನಾಕರ"ದ ಬಗ್ಗೆ ಇಮ್ಮಡಿ ದೇವರಾಯನ ಆಸ್ಥಾನದಲ್ಲಿದ್ದ (ಕ್ರಿ. ಶ. ೧೪೪೬–೬೫) ಕಲ್ಲಿನಾಥ ಅಥವಾ ಕಲ್ಲಪ್ಪ ದೇಶಿಕನಿಂದ ರಚಿತವಾದ ಉಜ್ವಲ ಭಾಷ್ಯ.

**5) ಸಂಗೀತ ಸೂರ್ಯೋದಯ**

ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ (ಕ್ರಿ. ಶ.೧೫೦೩–೩೦) ಬಂಡಾರು ಲಕ್ಷ್ಮೀನಾರಾಯಣ ವಿರಚಿತ ಗ್ರಂಥ.

**6) ಸ್ವರಮೇಳ ಕಳಾನಿಧಿ**

ವಿಜಯನಗರದ ಆಸ್ಥಾನದಲ್ಲಿದ್ದ ರಾಮಾಮಾತ್ಯನ (ಕಾಲ: ಸುಮಾರು ೧೫೫೦) ಕೃತಿ: ಈ ಗ್ರಂಥವನ್ನು ಈತ ಅಳಿಯ ರಾಮರಾಯನ ಅಪೇಕ್ಷೆಯಂತೆ ರಚಿಸಿದ.

**7) ಶಿವತತ್ವ ರತ್ನಾಕರ**

ಕೆಳದಿಯ ವಂಶಕ್ಕೆ ಸೇರಿದ ಇಮ್ಮಡಿ ಬಸಪ್ಪನಾಯಕ (ಕ್ರಿ. ಶ. ೧೭೨೯–೧೭೩೪) ರಚಿಸಿದ ಸಂಗೀತ ಮತ್ತು ನೃತ್ಯಗಳ ಬಗ್ಗೆ ವಿವರಪೂರ್ಣ ಗ್ರಂಥ.

**8) ಕಿತಾಬ್– ಇ–ನವರಸ್**

ಬಿಜಾಪುರದ ಸುಲ್ತಾನ ಇಮ್ಮಡಿ ಇಬ್ರಾಹಿಂ ಆದಿಲ್‌ಖಾನ್ (ಕ್ರಿ. ಶ. ೧೫೭೦) ಕೃತಿ. ಈ ಗ್ರಂಥದಲ್ಲಿ ಹಿಂದುಸ್ತಾನಿ ರಾಗಗಳ ಸೊಗಸಾದ ಧ್ರುಪದ್‌ಗಳಿವೆ.

**9) ಅಭಿನವ ಭರತಸಾರ ಸಂಗ್ರಹ**

ಬಿಜ್ಜವರದ ಮುಮ್ಮಡಿ ಚಿಕ್ಕಭೂಪಾಲನ ಕೃತಿ. ಈತನ ಕಾಲ ೧೭ನೇ ಶತಮಾನ.

**10) ಶ್ರೀತತ್ವನಿಧಿ**

ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಈ ಗ್ರಂಥ ಸಂಗೀತ ಕೋಶ. ಕಾಲ ಕ್ರಿ. ಶ. ೧೮೨೫. ಈ ಗ್ರಂಥದಲ್ಲಿ ಚಿತ್ರಗಳೂ ಇವೆ.

ಭಾರತದ ಬೇರೆ ಕಡೆಗಳಲ್ಲಿ ನೆಲೆಸಿದ್ದ ಕರ್ನಾಟಕ ಸಂಜಾತ ವಿದ್ವಾಂಸರು ಬರೆದ ಪ್ರಬಂಧಗಳು:

**1) ಭರತ ಭಾಷ್ಯ ಅಥವಾ ಸರಸ್ವತೀ ಹೃದಯಾಲಂಕಾರ**

ಮಿಥಿಲೆಯ ದೊರೆ ಮಾನ್ಯದೇವ (ಕ್ರಿ. ಶ. ೧೦೯೭–೧೧೩೩) ಬರೆದುದು. ೧೦,೦೦೦ಕ್ಕಿಂತ ಹೆಚ್ಚು ಪದ್ಯಗಳನ್ನೊಳಗೊಂಡ ಇದೊಂದು ಸ್ಮರಣೀಯ ಕೃತಿ. ರಾಷ್ಟ್ರಕೂಟ ವಂಶಸ್ಥನಾದ ಮಾನ್ಯದೇವನು ತನ್ನನ್ನು "ಕರ್ನಾಟಕ ಕುಲಭೂಷಣ"ನೆಂದು ಅನೇಕ ಬಾರಿ ಕರೆದುಕೊಂಡಿದ್ದಾನೆ.

**2) ಸದ್ರಾಗ ಚಂದ್ರೋದಯ, ರಾಗಮಂಜರಿ, ರಾಗಮೇಳ, ನರ್ತನ ನಿರ್ಣಯ.**

ಈ ನಾಲ್ಕು ಭಾಷ್ಯಗಳನ್ನು ಬರೆದವನು ಪುಂಡರೀಕ ವಿಠಲ. ಕಾಲ ಸುಮಾರು ೧೫೫೦–೯೦. ಮಾಗಡಿಯ ಹತ್ತಿರದ ಸಾತನೂರಿನವನಾದ ಪುಂಡರೀಕ ವಿಠಲ ಅಹಮದ್‌ನಗರ, ಗ್ವಾಲಿಯರ್, ಅನಂತರ ದೆಹಲಿಯಲ್ಲಿ ಅಕ್ಬರನ ಆಸ್ಥಾನದಲ್ಲಿದ್ದ. "ಕರ್ನಾಟಕ ಜಾತಿಯಹ" ಎಂದು ತನ್ನನ್ನು ಕರೆದುಕೊಂಡಿರುವ ಈತ ಈ ಕೃತಿಗಳಲ್ಲಿ ದಾಕ್ಷಿಣಾತ್ಯ ಮತ್ತು ಔತ್ತರೇಯ ಸಂಗೀತ ಪದ್ಧತಿಗಳ ಹಾಗೂ ಪ್ರಮುಖವಾಗಿ ಪ್ರಾದೇಶಿಕ ನೃತ್ಯ ಶೈಲಿಗಳ ಬಗ್ಗೆ ಬರೆದಿದ್ದಾನೆ. ಈ ಕೃತಿಗಳು ಮಧ್ಯಯುಗ ಹಾಗೂ ೧೬ನೇ ಶತಮಾನದ ನಡುವೆ ಸಂಪರ್ಕ ಕಲ್ಪಿಸುವ ಪ್ರಮುಖ ರಚನೆಗಳೆನಿಸಿವೆ.

**3) ಸಂಗೀತ ಸುಧಾ**

ಸುಮಾರು ಕ್ರಿ.ಶ. ೧೬೧೦ರ ಅವಧಿಯಲ್ಲಿ ತಂಜಾವೂರಿನ ದೊರೆ ರಘುನಾಥ ನಾಯಕನ ಮುಖ್ಯಮಂತ್ರಿಯಾಗಿದ್ದ ಗೋವಿಂದ ದೀಕ್ಷಿತ ಬರೆದುದು. ಇವನು ಕರ್ನಾಟಕ ಮೂಲದವನು.

**4) ಚತುರ್ದಂಡಿ ಪ್ರಕಾಶಿಕಾ**

ಗೋವಿಂದ ದೀಕ್ಷಿತನ ಮಗ ವೆಂಕಟಮುಖಿಯ (ಕ್ರಿ.ಶ. ೧೬೬೦) ಕೃತಿ. ದಾಕ್ಷಿಣಾತ್ಯ ಸಂಗೀತದ ಬಗ್ಗೆ ಇದು ಅತ್ಯಂತ ಅಧಿಕಾರಯುತ ರಚನೆ. ಕರ್ನಾಟಕ ಸಂಗೀತದಲ್ಲಿ ಇಂದು ಜನಕರಾಗಗಳೆಂದು ಭಾವಿಸಲಾಗಿರುವ ೭೨ ಮೇಳಗಳಿಗೆ ಆಧಾರವನ್ನು ನಿರೂಪಿಸಿದ್ದಾನೆ.

**ಬೆಳವಣಿಗೆಯ ಹಂತಗಳು**

ಈ ಚಾರಿತ್ರಿಕ ದೃಷ್ಟಿಯಿಂದ ನೋಡಿದಾಗ ಕರ್ನಾಟಕದಲ್ಲಿ ಸಂಗೀತದ ಮುನ್ನಡೆ ಏಕಪ್ರಕಾರವಾಗಿ ನಡೆದು ಬಂದಂತೆ ಕಾಣುವುದಿಲ್ಲ. ಅದು ಅನೇಕ ಹಂತಗಳಲ್ಲಿ ಸಾಗಿಬಂದಿದೆ.

ಭಾರತೀಯ ಸಂಗೀತದಲ್ಲಿ ಈಗ ಎರಡು ಪ್ರಮುಖ ಪದ್ಧತಿ ಗಳಿವೆ. ಅವು ಕರ್ನಾಟಕ ಮತ್ತು ಹಿಂದುಸ್ತಾನಿ. ಹೀಗೆ ವಿಂಗಡಿಸಿರುವುದನ್ನು ಸಂಗೀತವನ್ನು ಕುರಿತ ಯಾವ ಅಧಿಕಾರಯುತ ಭಾಷ್ಯದಲ್ಲೂ ಹೇಳಿಲ್ಲ, ನಿಜ. ಆದರೆ ಇದು ಬಹು ಕಾಲದಿಂದ ನಡೆದು ಬಂದಿರುವ ಒಂದು ಸಂಪ್ರದಾಯ. ಕರ್ನಾಟಕದ ವೈಶಿಷ್ಟ್ಯವೆಂದರೆ ಇಲ್ಲಿ ಈ ಎರಡೂ ಪದ್ಧತಿಗಳ ಏಳಿಗೆಯಾಗುತ್ತಿರುವುದು. ಭಾರತೀಯ ಸಂಗೀತ ಹೀಗೆ ಎರಡು ಶಾಖೆಗಳಾದುದು ಬಹುಶಃ ಮಧ್ಯಯುಗದಲ್ಲಿ; ವಿದೇಶೀ ಪ್ರಭಾವದಿಂದ ಅಥವಾ ಈ ಬಗೆಯ ವಿವಿಧ ಶೈಲಿಗಳು ಕರ್ನಾಟಕದಲ್ಲಿ ಪ್ರಾಚೀನ ಕಾಲದಲ್ಲೇ ಯಶಸ್ಸನ್ನು ಕಂಡಿದ್ದವೋ ಏನೋ. ಹೆಸರು ಒಂದೇ ಇದ್ದರೂ ರಾಗಗಳ ವಿನ್ಯಾಸ ಮತ್ತು ಭಾವದಲ್ಲಿ ಹಾಗೂ ಅವುಗಳ ನಿರೂಪಣೆಯಲ್ಲಿ ಭೇದವಿದ್ದರೂ ಈ ಎರಡೂ ಸಂಗೀತ ಪದ್ಧತಿಗಳಲ್ಲಿನ ಒಂದು ಪ್ರಮುಖ ಭಿನ್ನತೆಯೆಂದರೆ ರಾಗಗಳ ವರ್ಗೀಕರಣ. ಹಿಂದೂಸ್ತಾನಿ ಪದ್ಧತಿಯಲ್ಲಿ ರಾಗ–ರಾಗಿಣಿಗಳೆಂದು ವರ್ಗೀಕರಿಸಿದರೆ, ಕರ್ನಾಟಕ ಪದ್ಧತಿಯಲ್ಲಿ ಈ ವರ್ಗೀಕರಣ ಮೇಳ ಕ್ರಮವನ್ನು ಅನುಸರಿಸಿದೆ.

ಕನ್ನಡದ ಪುರಾತನ ಶಾಸ್ತ್ರೀಯ ಗ್ರಂಥಗಳಲ್ಲಿ ಸಂಗೀತ ಸಂದರ್ಭಗಳನ್ನು ಪುರುಷ (ಗಂಡು) ಮತ್ತು ಸ್ತ್ರೀ (ಹೆಣ್ಣು) ರಾಗಗಳೆಂದು ಎರಡು ಸ್ಥೂಲ ವರ್ಗಗಳಾಗಿ ವಿಭಾಗಿಸಿರುವುದನ್ನು ಕಾಣುತ್ತೇವೆ. ಗ್ರಾಮರಾಗವೆಂಬ ವಿಭಾಗವೂ ಇದೆ. ಈ ವಿಭಾಗದಲ್ಲಿ ಶುದ್ಧ, ಭಿನ್ನ, ಛಾಯಾಂಗ ಇತ್ಯಾದಿ ಅಥವಾ ರಾಗಾಂಗ, ಚತುಷ್ಟಯ–ರಾಗಾಂಗ, ಭಾಷಾಂಗ, ಕ್ರಿಯಾಂಗ ಮತ್ತು ಉಪಾಂಗ ವರ್ಗೀಕರಣವೂ ಇದೆ. ರಾಗ–ರಾಗಿಣಿ ಮತ್ತು ಮೇಳ ಕ್ರಮದ ವರ್ಗೀಕರಣಕ್ಕೆ ಇವೇ ಮಾರ್ಗಸೂಚಿ. ಕರ್ನಾಟಕದಲ್ಲಿ ಸಂಗೀತದ ಬೆಳವಣಿಗೆಯ ಹಂತಗಳನ್ನು ನಾವು ಸ್ಥೂಲವಾಗಿ ಈ ಕೆಳಕಂಡಂತೆ ಗುರುತಿಸಬಹುದು.

ಮೊದಲನೆಯ ಹಂತ: ಪ್ರಾಚೀನ ಕಾಲದಿಂದ–೧೪ನೇ ಶತಮಾನ
ಎರಡನೇ ಹಂತ: ೧೪ರಿಂದ ೧೭ನೇ ಶತಮಾನ
ಮೂರನೇ ಹಂತ: ೧೭ರಿಂದ ೧೯ನೇ ಶತಮಾನ
ನಾಲ್ಕನೇ ಹಂತ: ೨೦ನೇ ಶತಮಾನ

ಮೊದಲನೇ ಹಂತದಲ್ಲಿ ನಾವು ಮಾರ್ಗ, ದೇಸಿ, ಪುರಾತನ ಜತಿಗಳು, ಗ್ರಾಮ ರಾಗಗಳು ಹಾಗೂ ಮೇಲೆ ಹೇಳಿದ ವರ್ಗೀಕರಣಗಳ ಪ್ರಸ್ತಾಪವನ್ನು ಕಾಣಬಹುದು. ಅಲ್ಲದೆ ಇದರ ಜೊತೆಗೆ ಪ್ರಾಚೀನ ೧೦೧ ಅಥವಾ ೧೦೪ ತಾಳಗಳ ಹಾಗೂ ಅನಂತರ ಹುಟ್ಟಿಕೊಂಡು ಈಗ ಪ್ರಚಲಿತವಿರುವ ತಾಳಗಳಿಗೆ ಆಧಾರವಾದ ಶುದ್ಧ ತಾಳಗಳ ಬಗ್ಗೆಯೂ ಪ್ರಸ್ತಾಪ ಸಿಗುತ್ತದೆ. ಇಷ್ಟೇ ಅಲ್ಲದೆ ಬತ್ತೀಸ ರಾಗ ಅಥವಾ ೩೨ ರಾಗಗಳ ಒಂದು ಗುಂಪಿನ ಇನ್ನೊಂದು ಪದ್ಧತಿಯನ್ನೂ ಕಾಣುತ್ತೇವೆ. ಇದು ಪ್ರಾದೇಶಿಕ ಸಂಪ್ರದಾಯಕ್ಕೆ ಸೇರಿದ್ದೆಂಬುದು ನಿಸ್ಸಂಶಯ. ಏಕೆಂದರೆ ಸಂಗೀತದ ಬಗ್ಗೆ ಸಂಸ್ಕೃತದಲ್ಲಿನ ಭಾಷ್ಯಗಳಲ್ಲೆಲ್ಲೂ ಬತ್ತೀಸ ರಾಗದ ಹೆಸರೇ ಇಲ್ಲ. ಆದರೆ ೧೨ ಮತ್ತು ೧೭ನೇ ಶತಮಾನಗಳ ನಡುವಣ ಕನ್ನಡದ ಶಾಸ್ತ್ರೀಯ ಗ್ರಂಥಗಳಲ್ಲಿ ಬತ್ತೀಸ್ ರಾಗದ ವಿಷಯ ಬರುತ್ತದೆ.

ಎರಡನೆ ಹಂತದಲ್ಲಿ ಮೇಳ, ಪದ ಬಳಕೆಯಾಗಿದೆ. ರಾಗಗಳನ್ನು ಈ ರೀತಿ ವರ್ಗೀಕರಿಸಿದ ಮೊದಲನೆಯವರು ವಿದ್ಯಾರಣ್ಯರು ಎಂದು ಹೇಳಲಾಗಿದೆ. ಆದರೆ ಈ ಒಂದು ಕಲ್ಪನೆ ಇನ್ನೂ ಮುಂಚೆಯೇ ಅಂಕುರವಾಗಿರಬೇಕು. ಅಥವಾ ಚತುಷ್ಟಯ ಪದ್ಧತಿಯ ಪರಿಣಾಮವಾಗಿ ಮೊಳೆತಿರಬೇಕು. ೧೧ ಮತ್ತು ೧೨ನೆಯ ಶತಮಾನಗಳಲ್ಲಿ ವೀಣೆಯಲ್ಲಿ ಸಾರಿಕೆಗಳ ಬಳಕೆಯಿಂದಾಗಿ ಸಂಗೀತದ ಸ್ವರ ಶ್ರೇಣಿಗೆ ದೃಶ್ಯ ಆಯಾಮ ಬಂದಿತು. ಈ ಬಗೆಯ ಮೆಟ್ಟಿಲುಗಳಿರುವ ವೀಣೆಯ ಪ್ರಾಚೀನ ಮಾದರಿಗಳು ಬೇಲೂರಿನ ಶಿಲ್ಪಗಳಲ್ಲಿರುವುದು ಗಮನಾರ್ಹ. ಇದು ರಾಗಗಳನ್ನು ಸಮರೂಪದ ಮತ್ತು ಹೆಚ್ಚು ಕ್ರಮಬದ್ಧವಾದ ರೀತಿಯಲ್ಲಿ ವರ್ಗೀಕರಿಸುವುದಕ್ಕೆ ಪ್ರಚೋದನೆ ನೀಡಿರಬಹುದು. ಇದರ ಜತೆಗೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಮತ್ತು ಅಲ್ಲಿ ಕಲೆಗೆ ದೊರೆತ ಏಕಪ್ರಕಾರದ ಪ್ರೋತ್ಸಾಹ ಸರ್ವಾಂಗೀಣ ಚಟುವಟಿಕೆಗೆ ದಾರಿ ಮಾಡಿಕೊಟ್ಟಿತು. ವಿದೇಶದ ಮತ್ತು ಭಾರತದ ವಿವಿಧ ಭಾಗಗಳ ಜನರ ಭೇಟಿಯಿಂದಾಗಿ ಹೊಸ ಸಂಪರ್ಕ ಬೆಳೆದು ಕಲೆಗಾರರು ಮತ್ತು ವಿದ್ವಾಂಸರಿಗೆ ಹೊಸ ಅನುಭವವಾಯಿತು. ಹೊಸ ಭಾವನೆಗಳು ಮೂಡಿದುವು. ಇದರ ಫಲವಾಗಿ, ನವದೃಷ್ಟಿ, ನವಮಾರ್ಗ ಮತ್ತು ಪ್ರಯೋಗಶೀಲತೆಗೆ ಅವಕಾಶವಾಯಿತು. ಸಂಗೀತವು ಹೊಸ ದೃಷ್ಟಿಕೋನ ಬೆಳೆಸಿಕೊಂಡಿತು. ಇದು ನಿಸ್ಸಂಶಯವಾಗಿ ಸಂಗೀತದ ವಿಕಾಸ ಹಾಗೂ ಭವಿಷ್ಯದ ಮೇಲೆ ಮಹತ್ತರವಾದ ಪರಿಣಾಮ ಬೀರಿತು. ವಿಜಯನಗರ ಸಾಮ್ರಾಜ್ಯದ ಪತನದೊಂದಿಗೆ ಕರ್ನಾಟಕ ಸಂಗೀತ ಮೂರನೆಯ ಹಂತ ಮುಟ್ಟಿತು. ವಿಜಯನಗರದಲ್ಲಿ ಆಶ್ರಯ ಪಡೆದಿದ್ದ ಅನೇಕ ಮಂದಿ ವಿದ್ವಾಂಸರು, ಕಲಾವಿದರು ಹೊಸ ಸ್ಥಳಗಳನ್ನು ಹುಡುಕಿಕೊಂಡು ಹೊರಡಬೇಕಾಯಿತು. ಇವರೆಲ್ಲ ಮೈಸೂರು, ತಂಜಾವೂರು, ತಿರುವನಂತಪುರ, ರಾಜಸ್ಥಾನಗಳಲ್ಲಿ ಹಾಗೂ ವಿಜಯನಗರ ಸಾಮ್ರಾಜ್ಯ ಛಿದ್ರವಾದ್ದರಿಂದ ತಲೆಯೆತ್ತಿದ ಅನೇಕ ಪಾಳೆಯಪಟ್ಟುಗಳಲ್ಲಿ ಆಶ್ರಯಕಾಗಿ ದಕ್ಷಿಣಾದ್ಯಂತ ಚದುರಿದರು.

ಈ ವಲಸೆ ಹೊಸ ಭಾವನೆಗಳ ಪ್ರಭಾವದಿಂದ ಪ್ರಾದೇಶಿಕ ಸಂಪ್ರದಾಯವನ್ನೇ ಶ್ರೀಮಂತವಾಗಿಸುವುದಕ್ಕೆ ಕಾರಣವಾಯಿತಲ್ಲದೆ ಒಂದು ಏಕ ಸ್ವರೂಪವನ್ನು ಮೂಡಿಸುವುದಕ್ಕೆ ಸಹಾಯಕವಾಯಿತು. ಇದಕ್ಕೂ ಮುಂಚೆಯೇ ದಕ್ಷಿಣ ಭಾರತದ ಸಂಗೀತದಲ್ಲಿ ಸಮಾನ ಲಕ್ಷಣಗಳಿದ್ದುದೇನೋ ನಿಜ. ಆದರೆ ಹೀಗೆ ವಿಜಯನಗರದಿಂದ ವಲಸೆ ಬಂದ ಕಲಾವಿದರು ಮತ್ತು ವಿದ್ವಾಂಸರು ಕಳಿಂಗದ ಗಡಿಯಿಂದ ಕೇರಳದ ತುದಿಯವರೆಗೆ ಸಂಗೀತಕ್ಕೆ ಹೊಸ ದೃಷ್ಟಿ ಹೊಸ ಶಕ್ತಿ ತುಂಬಿದರು. ಇದೇ ಕರ್ನಾಟಕ ಸಂಗೀತವೆಂದು ಹೆಸರು ಪಡೆಯಿತು.

ಭಾರತೀಯ ಸಂಗೀತದ ಎರಡು ಶಾಖೆಗಳನ್ನು ಗುರುತಿಸುವ ಹಿಂದೂಸ್ಥಾನೀ ಮತ್ತು ಕರ್ನಾಟಕ ಪದ್ಧತಿಗಳಿಗೆ ಆ ಹೆಸರು ಬಂದ ಬಗೆಗೆ ಇಲ್ಲಿ ಚರ್ಚಿಸುವುದು ಅವಶ್ಯಕವೆನಿಸುತ್ತದೆ. ಈಗಾಗಲೇ ಹೇಳಿದಂತೆ ಈ ರೀತಿಯ ನಾಮಕರಣ ಅಥವಾ ವರ್ಗೀಕರಣ ಪಂಡಿತ "ಅಪ್ಪಾ ತುಳಸಿ" ಅವರ "ಸಂಗೀತ ಸುಧಾಕರ"ವನ್ನು ಬಿಟ್ಟರೆ ಬೇರಾವ ಸಂಗೀತ ಗ್ರಂಥದಲ್ಲಿಯೂ ಕಂಡುಬರುವುದಿಲ್ಲ. ಈ ಗ್ರಂಥ ರಚಿತವಾದುದು ಇಪ್ಪತ್ತನೆಯ ಶತಮಾನದಲ್ಲಿ. ಈ ಹೆಸರುಗಳು ಜನಸಾಮಾನ್ಯರಲ್ಲಿ ಬಹಳ ಬಳಕೆಯಲ್ಲಿವೆ. ಹಿಂದೀ ಭಾಷಾ ಪ್ರದೇಶದಲ್ಲಿ ಮಾತ್ರವಲ್ಲದೆ ಕೃಷ್ಣಾ ನದಿಯ ಉತ್ತರಕ್ಕಿರುವ ಭಾಗಗಳಲ್ಲೆಲ್ಲಾ ಬೆಳೆಯುತ್ತಿರುವ ಸಂಗೀತ ಪದ್ಧತಿಯನ್ನು ಹಿಂದೂಸ್ತಾನಿ ಎಂದು ಗುರುತಿಸಲಾಗುತ್ತಿದೆ. ಕರ್ನಾಟಕ ಸಂಗೀತವೆಂದೊಡನೆ ಕರ್ನಾಟಕದಲ್ಲಿನ ಸಂಗೀತವೆಂಬ ಭಾವನೆ ಬಂದರೂ ಅದು ಕರ್ನಾಟಕಕ್ಕೇ ಸೀಮಿತವಾಗುವುದಿಲ್ಲ. ಅದು ದಕ್ಷಿಣ ಭಾರತದ ನಾಲ್ಕು ಭಾಷಾ ಪ್ರದೇಶಗಳು ಹಾಗೂ ಒರಿಸ್ಸಾದ ದಕ್ಷಿಣ ಭಾಗವನ್ನೂ ಒಳಗೊಳ್ಳುತ್ತದೆ.

ಉತ್ತರದಿಂದ ಬಂದ ಪ್ರವಾಸಿಗರು ಹಾಗೂ ದಂಡಯಾತ್ರೆ ಮಾಡಿ ಗೆದ್ದವರು ಎಲ್ಲರೂ ಭಾರತವನ್ನು ಹಿಂದೂಸ್ತಾನ್

ಎಂದೇ ಕರೆದಿದ್ದಾರೆ. ಆದ್ದರಿಂದ ಈ ದೇಶದ ಸಂಗೀತಕ್ಕೆ ಹಿಂದೂಸ್ತಾನದ ಸಂಗೀತವೆಂದು ಹೆಸರಾದುದರಲ್ಲಿ ಅಚ್ಚರಿಯೇನಿಲ್ಲ. ನಾಡಿನ ಸಂಗೀತವನ್ನು ಹಿಂದೂಸ್ತಾನದ ಸಂಗೀತವೆಂದೇ ಅಮೀರ್ ಖುಸ್ರು ಉಲ್ಲೇಖಿಸಿದ್ದಾನೆ. ಅಲ್ಲದೆ ಮುಸ್ಲಿಂ ದಾಖಲೆಕಾರರಲ್ಲಿ ಬಹುಮಂದಿ ಹಾಗೂ ಐರೋಪ್ಯ ಪ್ರವಾಸಿಗರು ಭಾರತದ ಸಂಗೀತವನ್ನು ಹಿಂದೂಸ್ತಾನದ ಸಂಗೀತವೆಂದೇ ಹೇಳಿದ್ದಾರೆ. ಅವರಿಗೆಲ್ಲ ಪರಿಚಯವಾದುದು ಭಾರತದ ಉತ್ತರ ಭಾಗದಲ್ಲಿ ಪ್ರಚಲಿತವಿದ್ದ ಸಂಗೀತ. ಆದ್ದರಿಂದ ಉತ್ತರ ಭಾರತದ ಜನತೆಯ ಸ್ವಭಾವಕ್ಕೆ ಅನುಗುಣವಾದ ಹಿಂದೂಸ್ತಾನದ ಸಂಗೀತಕ್ಕೆ ಅದರ ನಿರ್ದಿಷ್ಟ ಸ್ವರೂಪ, ಭಾವ, ಮಾಧುರ್ಯ ಸೇರಿದಂತೆ ಹಿಂದೂಸ್ತಾನಿ ಸಂಗೀತವೆಂಬ ಹೆಸರು ಬಂದಿತೆಂದು ನಾವು ಭಾವಿಸಬಹುದು.

**ಕರ್ನಾಟಕ ಸಂಗೀತ ವಿಕಾಸ**

ಕರ್ನಾಟಕ ಸಂಗೀತಕ್ಕೂ ತನ್ನದೇ ಆದ ಇಂಥದೊಂದು ಮೂಲವಿದ್ದಿರಲೇಬೇಕು. ಇದರಿಂದಾಗಿಯೇ ದಕ್ಷಿಣದ ನಾಲ್ಕು ಭಾಷೆಗಳಾದ ಕನ್ನಡ, ತೆಲುಗು, ತಮಿಳು, ಮಲೆಯಾಳ ಪ್ರದೇಶಗಳ ಜನತೆಯಲ್ಲಿ ಕರ್ನಾಟಕ ಸಂಗೀತವೆಂದು ಹೆಸರು ಬಳಕೆಯಲ್ಲಿ ಬಂದಿರಬೇಕು. ಇತ್ತೀಚಿನ ದಿನಗಳಲ್ಲಿ ದಕ್ಷಿಣದ ಕೆಲವು ವರ್ಗಗಳವರು ಈ ಸಂಗೀತ ಪದ್ಧತಿಯನ್ನು ಕರ್ನಾಟಕ ಸಂಗೀತ, ದಕ್ಷಿಣ ಭಾರತದ ಸಂಗೀತ, ತೆನ್ನಾಟ್ಟು ಸಂಗೀತ, ಇತ್ಯಾದಿ ಹೆಸರುಗಳಿಂದ ಕರೆಯಲೆತ್ನಿಸಿದ್ದಾರೆ. ಆದರೆ ಜನತೆ ಮಾತ್ರ ಹಿಂದಿನಿಂದ ಬಳಕೆಯಲ್ಲಿರುವ ಕರ್ನಾಟಕ ಸಂಗೀತ ಎಂಬ ಹೆಸರಿಗೆ ಅಂಟಿಕೊಂಡಿದ್ದಾರೆ. ಈ ರೂಢನಾಮದ ಬಗ್ಗೆ ಅನೇಕ ಊಹಾಪೋಹಗಳಿವೆ. ಇವುಗಳಲ್ಲಿ ಮುಖ್ಯವಾದುದೆಂದರೆ ಕರ್ನಾಟಕ ಸಾಮ್ರಾಜ್ಯವೆಂದೇ ಪ್ರಸಿದ್ಧವಾಗಿದ್ದ ವಿಜಯನಗರದ ಗಾಢ ಪ್ರಭಾವಕ್ಕೆ ಇಂದಿನ ದಕ್ಷಿಣ ಭಾರತ ಸಂಗೀತ ಒಳಗಾದುದು. ಹೀಗೆ ಪ್ರಭಾವ ಬೀರಿದ ಪ್ರಮುಖರಲ್ಲಿ ಪ್ರಸಿದ್ಧರಾದವರೆಂದರೆ ಕರ್ನಾಟಕ ಸಂಗೀತ ಪಿತಾಮಹರೆನಿಸಿದ ಪುರಂದರದಾಸರು.

ಹಾಗೆ ನೋಡಿದರೆ ಪುರಂದರದಾಸರ ಜೀವಿತ ಕಾಲದಲ್ಲಿ ಅಥವಾ ಅನಂತರ ರಚಿತವಾದ ಸಂಗೀತ ಗ್ರಂಥಗಳಲ್ಲಿ ಅವರಪ್ರಸ್ತಾಪವೇ ಇಲ್ಲ. ಅವರ ಹೆಸರನ್ನೆತ್ತಿರುವ ಒಂದೇ ಒಂದು ಗ್ರಂಥವೆಂದರೆ ೧೮ನೆಯ ಶತಮಾನದಲ್ಲಿ ತುಳಸಾಜಿ ಬರೆದ "ಸಂಗೀತ ಸಾರಾಮೃತ". ಅವರಿಗೆ ಕರ್ನಾಟಕ ಸಂಗೀತ ಪಿತಾಮಹರೆಂಬ ಅಭಿದಾನವೇ ಹೆಚ್ಚು ಪ್ರಚಲಿತವಾಗಿದೆ. ಸಂಗೀತ ಕಲೆಯಲ್ಲಿ ಅವರು ಅನೇಕ ಹೊಸ ವಿನ್ಯಾಸಗಳನ್ನು ಆಚರಣೆಗೆ ತಂದರೆಂದೂ, ಹೊಸ ಸ್ವರೂಪವಿತ್ತರೆಂದೂ ಹೇಳಲಾಗಿದೆ. ಆದರೆ ಪುರಂದರದಾಸರ ಈ ಕೊಡುಗೆಯ ಬಗ್ಗೆ ಕರ್ನಾಟಕದಲ್ಲಿಯೇ ಕ್ರಮಬದ್ಧ ಅಧ್ಯಯನ ನಡೆದಿಲ್ಲ. ಅವರನ್ನು ಸಂಗೀತ ಪಿತಾಮಹನೆಂದು ಹೇಳಿ, ಕೇವಲ ಅವರ ಸಾಹಿತ್ಯ, ಭಕ್ತಿ, ಉಪದೇಶ ಇತ್ಯಾದಿಗಳ ಬಗ್ಗೆ ಮಾತ್ರ ಗಮನ ಕೊಡಲಾಗುತ್ತಿದೆ. ಸಂಗೀತ ವಿದ್ವಾಂಸರೆಂದು ಭಾವಿಸುವುದಕ್ಕಿಂತ ಹೆಚ್ಚಾಗಿ ಅವರೊಬ್ಬ ಆಧ್ಯಾತ್ಮಿಕ ಚೇತನವೆಂದು ಪರಿಗಣಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಕೇವಲ ಒಂದೇ ಗ್ರಂಥದಲ್ಲಿ ಅವರ ಹೆಸರು ಕಾಣಿಸಿರುವುದೂ ಅತ್ಯಂತ ಗಮನಾರ್ಹವೆನಿಸುತ್ತದೆ. ಇದು ಸಂಗೀತದ ಅಭಿವೃದ್ಧಿಯಲ್ಲಿ ಅವರು ವಹಿಸಿದ ಪಾತ್ರಕ್ಕೆ ದೊರೆತ ಮನ್ನಣೆ. ಸಂಗೀತ ಕ್ಷೇತ್ರದಲ್ಲಿ ಆಗಿನ ಅವರ ಸ್ಥಾನ ಅವರ ಕೊಡುಗೆಗಳ ಬಗ್ಗೆ ನಮಗೇನೂ ಖಚಿತವಾಗಿ ತಿಳಿಯದು. ಎಲ್ಲವೂ ಕೇವಲ ಊಹಾಪೋಹ. ಪುರಂದರದಾಸರ ಬಗ್ಗೆ ಅರಿಯಬೇಕಾದರೆ ಅವರ ಕಾಲಕ್ಕೆ ಮುಂಚಿನ ಹಾಗೂ ಅನಂತರದ ದಿನಗಳ ದಕ್ಷಿಣ ಭಾರತ ಸಂಗೀತದ ಬಗ್ಗೆ ಸೂಕ್ಷ್ಮ ಅವಲೋಕನ ಅಗತ್ಯ. ವಿಜಯನಗರ ಸಾಮ್ರಾಜ್ಯದ ಅಳಿವೂ ಇವರೊಂದಿಗೇ ಕೂಡಿಕೊಳ್ಳುತ್ತದೆ.

ವಲಸೆ ಹೋದ ಕಲಾವಿದರು ಮತ್ತು ವಿದ್ವಾಂಸರು ವಿಜಯನಗರದಲ್ಲಿ ಚಿಗುರಿ ಬೆಳೆದ ಅನೇಕ ಹೊಸ ಭಾವನೆಗಳನ್ನು, ಕಲ್ಪನೆಗಳನ್ನು ದಕ್ಷಿಣಾದ್ಯಂತ ಹರಡಿದರು. ಇವುಗಳಲ್ಲಿ ಮುಖ್ಯವಾದುದು ಕರ್ನಾಟಕದ ಸಂಗೀತಕ್ಕೆ ಆಧಾರವಾದ ಮೇಳ ಪದ್ಧತಿ. ಈಗಾಗಲೇ ಹೇಳಿರುವಂತೆ ಈ ಕ್ರಮದ ಪ್ರಸ್ತಾಪ ಮಾಡಿದ ಮೊದಲಿಗರು ವಿಜಯನಗರ ದೊರೆಗಳ ಗುರು ವಿದ್ಯಾರಣ್ಯರು. ಕಾಲಕ್ರಮೇಣ ಈ ಕ್ರಮ ಹೆಚ್ಚು ಅಭಿವೃದ್ಧಿಗೊಂಡಿತು. ಇದರಲ್ಲಿ ವೀಣೆ ವಹಿಸಿದ ಪಾತ್ರ ಮಹತ್ವವಾದುದು. ೯೦ ಮೇಳಗಳ ಒಂದು ಕ್ರಮವನ್ನು ಪುಂಡರೀಕ ವಿಠ್ಠಲ ಸೂಚಿಸಿದನೆಂದು ಹೇಳಲಾಗಿದೆ. ವೆಂಕಟಮುಖಿಯ ೭೨ ಮೇಳ ಪದ್ಧತಿಗಿಂತಲೂ ವೀಣೆಯ ಸಾರಿಕೆಗಳ ಸ್ವರ ಸ್ಥಾನವನ್ನು ಅವಲಂಬಿಸಿದ ಪುಂಡರೀಕ ವಿಠಲನ ಕ್ರಮವೇ ಹೆಚ್ಚು ತರ್ಕಬದ್ಧವೆನಿಸುತ್ತದೆ. ಈ ಪದ್ಧತಿ ಮುಂದೆ ಸೋಮನಾಥನಿಂದ ಇನ್ನೂ ಹೆಚ್ಚು ವಿಕಾಸಗೊಂಡಿತು. ೨೨ ಶ್ರುತಿಗಳನ್ನು ಆಧರಿಸಿದ ಮೇಳ ಕ್ರಮದ ಚೌಕಟ್ಟಿನಲ್ಲಿಯೇ ಅನೇಕ ಬದಲಾವಣೆಗಳನ್ನು ಈತ ರೂಪಿಸಿದ. ಇವುಗಳ ಒಟ್ಟು ಸಂಖ್ಯೆ ೯೬೦. ಆದರೆ ಇದಕ್ಕೆ ವೆಂಕಟಮುಖಿ ೭೨ ಮೇಳಗಳ ಪದ್ಧತಿಯಿಂದ ಹೆಚ್ಚು ತರ್ಕಬದ್ಧವಾದ ಹಾಗೂ ಅನುಷ್ಠಾನ ಸಾಧ್ಯವಾದ ರೂಪವನ್ನು ಕೊಟ್ಟ. ವೀಣೆಗೆ ಸಂಬಂಧಿಸಿದಂತೆ ಹೊಸ ಹೊಸ ಭಾವನೆಗಳ ಅಭಿವ್ಯಕ್ತಿ ಸಾಧ್ಯವಾಗುವಂತೆ ಅನೇಕ ಪ್ರಯೋಗಗಳನ್ನು ಮಾಡಲಾಯಿತು. ರಾಮಾಮಾತ್ಯನು ರೂಪಿಸಿದ ವೀಣೆಗಳ ವಿಷಯವನ್ನು ನಾವು ಕೇಳಿದ್ದೇವೆ. ಇವನ ಬಳಿಕ ಗೋವಿಂದ ದೀಕ್ಷಿತನೂ ಸಹ ಬಗೆಬಗೆಯ ವೀಣೆಗಳನ್ನು ರೂಪಿಸಿದ. ಈ ಎಲ್ಲ ಪ್ರಯೋಗ ಹಾಗೂ ಪ್ರಯತ್ನಗಳ ಫಲವೇ ೧೭ ಹಾಗೂ ೧೮ನೆಯ ಶತಮಾನದಲ್ಲಿ ರೂಪು ತಳೆದು ಈಗಲೂ ಬಳಕೆಯಲ್ಲಿರುವ ಸರಸ್ವತೀ ವೀಣೆ.

ಮೇಳ ಪದ್ಧತಿಯ ಜತೆಗೇ, ವಿಜಯನಗರ ಚಕ್ರಾಧಿಪತ್ಯದ ನಂತರ ಹಿಂದಿನಿಂದಲೂ ಬಳಕೆಯಲ್ಲಿದ್ದ ಹಾಗೂ ಹೊಸ ಪದ್ಧತಿಗಿಂತಲೂ ನವೀನವಾದ ಅನೇಕ ಹೊಸ ರಾಗಗಳು ಪ್ರಯೋಗ ಕಂಡವಲ್ಲದೆ ಜನಪ್ರಿಯತೆಯನ್ನೂ ಗಳಿಸಿದುವು. ಇವು ಕರ್ನಾಟಕದಲ್ಲಿ ಬಹುಕಾಲದಿಂದಲೂ ಬಳಕೆಯಲ್ಲಿದ್ದುವೆಂಬುದು ನಿಜವಾಗಿಯೂ ಕುತೂಹಲದ ಸಂಗತಿ. ೧೭ನೇ ಶತಮಾನದ ದಕ್ಷಿಣದ ಸಂಗೀತ ಗ್ರಂಥಗಳನ್ನು ಅವಲೋಕಿಸಿದಾಗಕೂಡ ಅನೇಕ ಹೊಸ ರಾಗಗಳನ್ನು ಸಂಪ್ರದಾಯ ಶರಣರು ವಿರೋಧಿಸಿ ಇವು ಗಂಭೀರ ಸಂಗೀತಕ್ಕೆ ಅಯೋಗ್ಯವೆಂದು ಖಂಡಿಸಿದುದು ಗೋಚರವಾಗುತ್ತದೆ. ಆದರೆ ಈ ರಾಗಗಳು ಶತಮಾನಗಳಷ್ಟು ಹಿಂದೆಯೇ ವಿಜಯನಗರದಲ್ಲಿ ಜನಪ್ರಿಯವಾಗಿದ್ದುವಲ್ಲದೆ ಶಾಸ್ತ್ರೀಯ ಸಂಪ್ರದಾಯಕ್ಕೆ ಸೇರಿದ್ದೆಂದೂ ಅಂಗೀಕೃತವಾಗಿದ್ದುದು ವಾಸ್ತವ ಸಂಗತಿ. ಪ್ರವಾಸೀ ಗಾಯಕರಾಗಿ ಪುರಂದರದಾಸರು ದಕ್ಷಿಣದ ಮೂಲೆ ಮೂಲೆಗಳಲ್ಲೂ ಸಂಚರಿಸಿ ಭಕ್ತಿ ಹಾಗೂ ಉದಾತ್ತ ಜೀವನದ ಬೋಧೆ ಮಾಡಿದರಲ್ಲದೆ ಹೊಸ ರಾಗಗಳಿಂದ, ಸರಳಗೊಳಿಸಿದ ಸುಳಾದಿ ತಾಳಗಳಿಂದ, ಅನೇಕ ಪ್ರಬಂಧ ಹಾಗೂ ಕೀರ್ತನೆಗಳಿಂದ ವಿಜಯನಗರದಲ್ಲಿ ವಿಕಾಸ ಹೊಂದಿ ಶ್ರೀಮಂತಗೊಂಡ ಸಂಗೀತವನ್ನೂ ಪ್ರಸಾರ ಮಾಡಿದರು. ಪುರಂದರದಾಸರು ಮಾಡಿದ ಈ ಕಾರ್ಯದಿಂದಲೇ ಅವರಿಗೆ ಕರ್ನಾಟಕ ಸಂಗೀತ ಪಿತಾಮಹನೆಂಬ ಹೆಸರು, ಕೀರ್ತಿ ಬಂದುದು.

ಭಕ್ತಿಪಂಥದ ಪ್ರಮುಖ ವ್ಯಕ್ತಿಗಳಲ್ಲಿ ಪುರಂದರ ದಾಸರು ಒಬ್ಬರು. ಸಂಗೀತದ ಸ್ವರೂಪಕ್ಕೆ ಹಾಗೂ ವಿನ್ಯಾಸಗಳಲ್ಲಿ ಮಹತ್ವಪೂರ್ಣ ಮಾರ್ಪಾಡಿಗೆ ಭಕ್ತಿಪಂಥದ ಚಳುವಳಿಯೇ ಕಾರಣ. ಈ ಸಂಗೀತಗಾರ ಸಂತರು ಮತ ತತ್ವಗಳ ಪ್ರಚಾರ ಮಾಡಿದರಲ್ಲದೆ ಜೀವನದಲ್ಲಿ ದೈವಭಕ್ತಿ ಹಾಗೂ ಉದಾತ್ತತೆಗಳನ್ನು ರೂಢಿಸಿಕೊಳ್ಳುವಂತೆ ಕರೆಯಿತ್ತರು. ತಮ್ಮ ಅಭಿಪ್ರಾಯಗಳನ್ನು ಜನರು ಸುಲಭವಾಗಿ ಅರ್ಥಮಾಡಿಕೊಳ್ಳುವಂಥ ಸರಳ ಗೀತೆಗಳ ಹಾಗೂ ಸಂಗೀತದ ಮೂಲಕ ತಿಳಿಸಿದರು. ಕಾಲಾನಂತರ ಸಂಗೀತವನ್ನು ರೂಪಿಸುವುದರಲ್ಲಿ ಇವರ ಗೀತೆಗಳ ಪಾತ್ರ ಗಮನಾರ್ಹವಾದುದು. ಹೊಸ ರಾಗಗಳ ಅಳವಡಿಕೆಯಿಂದ ತಮ್ಮ ಗೀತೆಗಳು ಆಕರ್ಷಕವಾಗುವಂತೆ ಮಾಡುವುದರ ಜತೆಗೆ ಶಾಸ್ತ್ರೀಯ ಮೌಲ್ಯಗಳಿಗೆ ಧಕ್ಕೆಯಾಗದಂತೆ ಅವುಗಳ ರೂಪಗಳನ್ನು ಸರಳಗೊಳಿಸಿದರು. ಈ ಹೊಸ ರಚನೆಗಳು ಉಚ್ಚಾರಣೆಗೆ ಕಷ್ಟವಾದ ಪ್ರಾಚೀನ ಪ್ರಬಂಧಗಳಿಗಿಂತ ಭಿನ್ನವಾಗಿದ್ದುದಲ್ಲದೆ ಬಹು ಬೇಗ ಜನಪ್ರಿಯವಾದುವು. ಕರ್ನಾಟಕ ಸಂಗೀತ ಪ್ರಚಲಿತವಾಗಿರುವ ಪ್ರದೇಶಗಳಲ್ಲೆಲ್ಲ ಹೆಸರಾಂತ ಸಂತ ಗಾಯಕರಲ್ಲಿ ಒಬ್ಬರು ಪುರಂದರದಾಸರು.

ಕರ್ನಾಟಕ ಸಂಗೀತ ಅಭಿವೃದ್ಧಿಗೊಂಡ ಮೂರನೇ ಮಜಲಿನ ವೈಶಿಷ್ಟ್ಯವೆಂದರೆ ತೀವ್ರ ಚಟುವಟಿಕೆ. ಸಮರದ ಹಾವಳಿಯಿಂದ ತತ್ತರಿಸಿದ ನಾಡಿನಲ್ಲಿ ನಿಧಾನವಾಗಿ ಶಾಂತಿ ನೆಲೆಸಿತು. ಜನರು ರಚನಾತ್ಮಕ ಕಾರ್ಯಗಳತ್ತ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳತ್ತ ಗಮನ ಹರಿಸಲಾರಂಭಿಸಿದರು. ವಿಜಯನಗರದಲ್ಲಿ ಹೊತ್ತಿ ಬೆಳಗಿದ ಜ್ಯೋತಿಯನ್ನು ಮೈಸೂರು ಕೈಗೆತ್ತಿಕೊಂಡಿತು. ವಿದ್ವಾಂಸರಿಗೆ ಮತ್ತು ಕಲಾವಿದರಿಗೆ ಆಶ್ರಯ ಹಾಗೂ ಪ್ರೋತ್ಸಾಹ ಕೊಡುವುದರ ಮೂಲಕ ಸೃಜನಾತ್ಮಕ ಚಟುವಟಿಕೆಗೆ ಪ್ರಚೋದನೆಯಿತ್ತ ಮೈಸೂರು ಕಲೆ ಮತ್ತು ಸಂಸ್ಕೃತಿಗಳ ಪ್ರಮುಖ ಕೇಂದ್ರವೆನಿಸಿತು. ಅದು ಯಕ್ಷಗಾನದ ಕಾಲ. ಮೈಸೂರಿನ ದೊರೆಗಳಾದ ಚಿಕ್ಕದೇವರಾಜ (ಕ್ರಿ.ಶ. ೧೬೭೩–೧೭೦೪) ಮತ್ತು ಕಂಠೀರವ ರಾಜರು ಸ್ವತಃ ಸಂಗೀತಗಾರರೂ, ಪ್ರಬಂಧಕಾರರೂ ಆಗಿದ್ದರು. ಕೆಳದಿ. ಪುರಂದರಗಳಂಥ ಸಣ್ಣ ರಾಜ್ಯಗಳೂ ಸಾಹಿತ್ಯ ಮತ್ತು ಕಲೆಗಳಿಗೆ ಪ್ರೋತ್ಸಾಹವಿತ್ತವು. ಸಂಗೀತ ಹಾಗೂ ನೃತ್ಯಗಾರರನ್ನು ಪುರಸ್ಕರಿಸಿದುವು. ಇದರ ಜತೆಗೆ ಪ್ರಾಚೀನ ಧಾರ್ಮಿಕ ಕೇಂದ್ರಗಳು ಮತ್ತು ಪ್ರಸಿದ್ಧ ಪುರಾತನ ದೇವಾಲಯಗಳು ಕಲೆಯ ಬೆಳವಣಿಗೆಗೆ ನೆರವಾದವು. ಅನೇಕ ಯಕ್ಷಗಾನ ಪ್ರಸಂಗಗಳ ರಚನೆಗೆ ಬೆಂಬಲ ನೀಡಿದುವು. ಇವುಗಳನ್ನು ರಚಿಸಿದ ವಿವಿಧ ಪಂಥಗಳಿಗೆ ಸೇರಿದ ಕವಿಗಳು, ಕಲಾವಿದರು ಅದನ್ನು ತಾವು ನಂಬಿದ ದೇವರುಗಳಿಗೆ ಅರ್ಪಿಸಿದರು. ಈ ಅವಧಿಯಲ್ಲಿ ಯಕ್ಷಗಾನ ಹಾಗೂ ಸಂಗೀತದ ಒಂದು ಮಹ ಕ್ರಾಂತಿಯೇ ಆಯಿತೆನ್ನಬಹುದು. ಇದರ ಪರಿಣಾಮವಾಗಿ ಸಂಗೀತ ಮತ್ತು ಇತರ ಪ್ರದರ್ಶಕ ಕಲೆಗಳಿಗೆ ಜನಮನ್ನಣೆ ದೊರೆಯಿತು.

### ಕೃತಿಗಳು

ಕ್ರಿ. ಶ. ೧೬೦೧ರಿಂದ ೧೭೦೦ರವರೆಗಿನ ಅವಧಿಯಲ್ಲಿ ಕರ್ನಾಟಕದಲ್ಲಿ ಮಾತ್ರವೇ ಅಲ್ಲದೆ ದಕ್ಷಿಣ ಭಾರತದ ಎಲ್ಲೆಡೆಯಲ್ಲೂ ಯಕ್ಷಗಾನ ಹುಲುಸಾಗಿ ಬೆಳೆಯಿತು. ಯಕ್ಷಗಾನ ಆ ಕಾಲದ ಗಣ್ಯ ಪ್ರಕಾರವಾಗಿದ್ದುದರಿಂದ ಕನ್ನಡದ ಜತೆಗೆ ತೆಲುಗಿನಲ್ಲೂ ರಚಿತವಾದುವು. ಇವುಗಳಲ್ಲಿ ಬಹಳ ಹಳೆಯ ಯಕ್ಷಗಾನವೆಂದರೆ ಬೆಂಗಳೂರನ್ನು ಕಟ್ಟಿದ ಕೆಂಪೇಗೌಡನ ಮೊಮ್ಮಗ ಇಮ್ಮಡಿ ಕೆಂಪೇಗೌಡ ರಚಿಸಿದ. "ಗಂಗಾಗೌರೀ ವಿಲಾಸಮು". ಇದು ತೆಲುಗು ಭಾಷೆಯಲ್ಲಿದೆ. ಆಂಧ್ರದಲ್ಲಿ ದೊರತಿರುವ ಅತ್ಯಂತ ಹಳೆಯ ಯಕ್ಷಗಾನವೆಂದರೆ ಕಂಡಕೂರಿ ವೀರಭದ್ರ ಕವಿಯ "ಸುಗ್ರೀವ ವಿಜಯಮು". ಐವತ್ತು ವರ್ಷಗಳ ಬಳಿಕ ಕೆಂಪೇಗೌಡ ತನ್ನ "ಗಂಗಾಗೌರಿ ವಿಲಾಸಮು" ಕೃತಿ ಬರೆದ. ಬಳಿಕ ನಮಗೆ ಸಿಕ್ಕುವುದೆಂದರೆ ಚಿಕ್ಕದೇವರಾಜ ಒಡೆಯರ ಮಗ ಕಂಠೀರವ ರಾಜನ ಹನ್ನೆರಡಕ್ಕೂ ಹೆಚ್ಚು ಯಕ್ಷಗಾನಗಳು. ಇವು ಕೇವಲ ಕನ್ನಡ ಭಾಷೆಯಲ್ಲೆ ಅಲ್ಲದೆ ತೆಲುಗು, ತಮಿಳು, ಮತ್ತು ಪ್ರಾಕೃತಗಳಲ್ಲೂ ಇವೆ. ಅನಂತರ ಯಕ್ಷಗಾನ ಪ್ರವಾಹವೇ ಹರಿಯಿತು. ಕಲಾವಿದರ ತಂಡಗಳು ಪ್ರದರ್ಶಿಸುತ್ತಿದ್ದ ಹಾಗೂ ಹಬ್ಬ ಹರಿದಿನಗಳಲ್ಲಿ ಹಳ್ಳಿಗಾಡಿನ ಹೆಂಗಸರು ಹಾಡುತ್ತಿದ್ದ ಯಕ್ಷಗಾನ ಭಂಡಾರವೇ ಸೃಷ್ಟಿಯಾಯಿತು.

ಯಕ್ಷಗಾನದ ಜೊತೆ ಜೊತೆಯಲ್ಲೇ ಗೀತಗೋವಿಂದ ಮಾದರಿಯ ಗೇಯ ಪ್ರಬಂಧಗಳೂ ರಚಿತವಾದುವು. ಇವು ಹಾಡುಗಾರಿಕೆಗೆ ಹಾಗೂ ರಂಗದ ಮೇಲೆ ಪ್ರದರ್ಶನಕ್ಕೆ ಸುಲಭವಾಗಿ ಹೊಂದಿಕೊಂಡವು. ಇವುಗಳಲ್ಲಿ ಪ್ರಮುಖವಾದುದೆಂದರೆ ಚಿಕ್ಕದೇವರಾಜ ಒಡೆಯರ ಗೀತಗೋಪಾಲ. ಇದನ್ನು ಗೀತಗೋವಿಂದವನ್ನು ದೃಷ್ಟಿಯಲ್ಲಿಟ್ಟುಕೊಂಡೇ ರಚಿಸಿದ್ದರೂ ಒಡೆಯರು ತಮ್ಮದೇ ಆದ ಬದಲಾವಣೆಗಳನ್ನು ಮಾಡಿದ್ದರು. ಯಕ್ಷಗಾನವಲ್ಲದೆ ಅಂಥ ಇನ್ನೂ ಅನೇಕ ಕೃತಿಗಳೂ ಆ ಕಾಲದಲ್ಲಿ ಬೆಳಕಿಗೆ ಬಂದವು. ಅವನ್ನೆಲ್ಲ ಇಲ್ಲಿ ವಿವರವಾಗಿ ಪಟ್ಟಿ ಮಾಡುವುದು ಕಷ್ಟ. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಜಾವಳಿ ಎಂಬ ಗೀತರೂಪ ದಕ್ಷಿಣ ಭಾರತದಲ್ಲಿ ಸಂಗೀತ ಮತ್ತು ನೃತ್ಯರಂಗದಲ್ಲಿ ಜನಪ್ರಿಯವಾಯಿತು. ಕರ್ನಾಟಕದಲ್ಲಿ ಹುಟ್ಟಿದ ಈ ಜಾವಳಿ ಇಂದಿನ ಚಿತ್ರಸಂಗೀತವಾದಂತೆ ಬಹು ಬೇಗ ಜನರ ಮನಸ್ಸನ್ನು ಆಕರ್ಷಿಸಿತು.

### ಮೈಸೂರಿನ ಕೀರ್ತಿ

ದಕ್ಷಿಣ ಭಾರತದಲ್ಲಿ ಮೈಸೂರು ಪ್ರಖ್ಯಾತ ಸಾಂಸ್ಕೃತಿಕ ಕೇಂದ್ರವೆನಿಸಿಕೊಂಡಿತು. ಮೈಸೂರು ಪ್ರದೇಶದಲ್ಲಿ ಕರ್ನಾಟಕ ಸಂಗೀತಕ್ಕೆ ಪ್ರಾಧಾನ್ಯವಿದ್ದರೂ ಹಿಂದೂಸ್ತಾನೀ ಸಂಗೀತಕ್ಕೂ ಪ್ರೋತ್ಸಾಹ ದೊರೆಯಿತು. ಮೈಸೂರಿನ ವೈಶಿಷ್ಟ್ಯವೆಂದರೆ ವೀಣೆ. ವಿಜಯನಗರದ ದೊರೆಗಳು ಈಗಿನ ಸಕಲೇಶಪುರ ತಾಲ್ಲೂಕಿನ ಪ್ರದೇಶವನ್ನು ವೀಣಾ ರಾಮಯ್ಯ ಎಂಬುವರಿಗೆ ಜಹಗೀರಾಗಿ ಕೊಟ್ಟಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ನಾಲ್ವರು ಮಹಾರಾಜರುಗಳು ಆಡಳಿತ ನಡೆಸಿದ ಒಂದು ಶತಮಾನಕ್ಕೂ ಹೆಚ್ಚು ಕಾಲಾವಧಿಯಲ್ಲಿ ಮೈಸೂರು ಸಂಗೀತದ ಸ್ವರ್ಣ ಯುಗವನ್ನೇ ಕಂಡಿತೆನ್ನಬಹುದು. ಬಕ್ಷಿ ವೆಂಕಟಸುಬ್ಬಯ್ಯ, ಶಾಂಬಯ್ಯ, ಬಂಗಾರಸ್ವಾಮಯ್ಯ, ಶೇಷಣ್ಣ, ಸುಬ್ಬಣ್ಣ, ಶಾಮಣ್ಣ, ವೆಂಕಟರಮಣಯ್ಯ, ವೆಂಕಟಗಿರಿಯಪ್ಪ ಮೊದಲಾದ ನಿಷ್ಣಾತ ವೈಣಿಕರು ಈ ಕಾಲದಲ್ಲಿದ್ದರು. ಮೈಸೂರು ಸದಾಶಿವರಾವ್, ಲಾಲ್‌ಗುಡಿ ರಾಮಯ್ಯರ್, ಮುಗೂರು ಸುಬ್ಬಣ್ಣ, ಬಿಡಾರದ ಕೃಷ್ಣಪ್ಪ, ವಾಸುದೇವಾಚಾರ್ ಮೊದಲಾದ ವಾಗ್ಗೇಯಕಾರರು ಮತ್ತು ಹಾಡುಗಾರರು ಈ ಕಾಲದ ಪ್ರಸಿದ್ಧರು. ಪ್ರವೀಣ ಪಿಟೀಲುವಾದಕ ಟಿ. ಚೌಡಯ್ಯ, ಮತ್ತು ಅವರು ರೂಪಿಸಿದ ಏಳು ತಂತಿಗಳ ಪಿಟೀಲು ಕರ್ನಾಟಕ ಸಂಗೀತ ಇತಿಹಾಸದ ಒಂದು ಅಂಗ. ರಾಜ್ಯದ ಹೊರಗೆ ನೆಲೆಸಿ ಖ್ಯಾತರಾಗಿದ್ದ ಕರ್ನಾಟಕದ ಸಂಗೀತಗಾರರಲ್ಲಿ ಬೆಂಗಳೂರು ನಾಗರತ್ನಮ್ಮ, ಕೋಲಾರ ನಾಗರತ್ನ, ಬೆಂಗಳೂರು ತಾಯಮ್ಮ ಮುಖ್ಯರು. ತ್ಯಾಗರಾಜರ ಸಮಾಧಿಯ ಜೀರ್ಣೋದ್ಧಾರಕ್ಕಾಗಿ

ತನ್ನ ಸಂಪತ್ತೆಲ್ಲವನ್ನೂ ಅರ್ಪಿಸಿ ಅಲ್ಲಿ ನಡೆಯುವ ವಾರ್ಷಿಕ ಸಂಗೀತೋತ್ಸವಕ್ಕೆ ನಾಂದಿಯೊಗುವುದರ ಮೂಲಕ ಸಂಗೀತ ಪ್ರಪಂಚದಲ್ಲಿ ಬೆಂಗಳೂರು ನಾಗರತ್ನಮ್ಮನ ಹೆಸರು ಚಿರ ಸ್ಥಾಯಿಯಾಯಿತು.

ಮೈಸೂರು ಮಹಾರಾಜರ ಆಸ್ಥಾನವನ್ನು ಬೆಳಗಿದ ಹಿಂದೂಸ್ಥಾನೀ ಸಂಗೀತಕ್ಕೆ ಮೈಸೂರು ಆಸ್ಥಾನದಲ್ಲಿ ದೊರೆಯುತ್ತಿದ್ದ ಪ್ರೋತ್ಸಾಹ ಎಷ್ಟು ಖ್ಯಾತಿ ಪಡೆದಿತ್ತೆಂದರೆ ತಮ್ಮ ಆಸ್ಥಾನಕ್ಕೆ ಕೆಲವು ಹಿಂದೂಸ್ತಾನೀ ಸಂಗೀತಗಾರರನ್ನು ಕಳುಹಿಸಿಕೊಡುವಂತೆ ತಿರುವಾಂಕೂರು ಮಹಾರಾಜರು ಕೋರಿದರು. ಇದಕ್ಕೆ ಮನ್ನಣೆಯಿತ್ತು ಮೈಸೂರು ಮಹಾರಾಜರು ತಮ್ಮ ಆಸ್ಥಾನದಲ್ಲಿದ್ದ ನಾಥೂರಾಮ್ ಮತ್ತು ನಂದರಾಮ್ ಎಂಬ ಇಬ್ಬರು ಸಂಗೀತ ವಿದ್ವಾಂಸರನ್ನು ಕಳುಹಿಸಿಕೊಟ್ಟರು. ಮೈಸೂರು ದರ್ಬಾರಿನಲ್ಲಿದ್ದ ಹೆಸರಾಂತ ಹಿಂದೂಸ್ತಾನೀ ಸಂಗೀತಗಾರರಲ್ಲಿ ಮೌಲಾ ಬಕ್ಷ, ನಾಥನ್ ಖಾನ್, ಹಫೀಸ್ ಖಾನ್, ಬರ್ಕತುಲ್ಲಾ (ಸಿತಾರ್) ವಿಲಾಯತ್ ಖಾನ್, ಗೋವಿಂದರಾವ್ ಟೇಂಬೆ ಇವರನ್ನು ಹೆಸರಿಸಬಹುದು. ಅರಮನೆಯಲ್ಲಿ ನಡೆಯುತ್ತಿದ್ದ ವಿಶೇಷ ಸಮಾರಂಭಗಳಿಗೆಂದೇ ಪ್ರಖ್ಯಾತ ಹಿಂದೂಸ್ತಾನಿ ಗಾಯಕರನ್ನು ಕರೆಸಲಾಗುತ್ತಿತ್ತು. ಅಂಥವರಲ್ಲಿ ಉಸ್ತಾದ್ ಫಯಾಜ್ ಖಾನ್ ಅಗ್ರಗಣ್ಯರು.

**ಉತ್ತರ ಕರ್ನಾಟಕ**

ಇದೇ ಅವಧಿಯಲ್ಲಿ ಉತ್ತರ ಕರ್ನಾಟಕದ ಸಂಗೀತ ಕ್ಷೇತ್ರದಲ್ಲಿ ಕ್ರಮೇಣ ಮಾರ್ಪಾಡಾಯಿತು. ಅಲ್ಲಿ ಕರ್ನಾಟಕ ಸಂಗೀತದ ಬದಲು ಹಿಂದೂಸ್ತಾನಿ ಸಂಗೀತ ಬೆಳೆಯತೊಡಗಿತು. ಈ ಪ್ರದೇಶ ಮುಂಬೈ ಪ್ರಾಂತಕ್ಕೆ ಸೇರಿದ್ದು ಅಲ್ಲಿನ ಸಂದರ್ಭಗಳು ಕರ್ನಾಟಕ ಸಂಗೀತದ ಗುಣಮಟ್ಟ ಇಳಿಯಲು ಕಾರಣವಾದುದರಿಂದ ಜನತೆ ಹೆಚ್ಚು ಮಧುರವಾದ ಹಿಂದೂಸ್ತಾನಿ ಸಂಗೀತದತ್ತ ಬೇಗನೆ ಆಕರ್ಷಿತರಾದರು. ಅಲ್ಲದೆ, ಅಲ್ಲಲ್ಲೇ ಹಿಂದೂಸ್ತಾನಿ ಸಂಗೀತವೇ ಪ್ರಧಾನವಾಗಿದ್ದ ರಾಮದುರ್ಗ, ಜಮಖಂಡಿಯಂಥ ಪಾಳೆಯಪಟ್ಟುಗಳೂ ಇದ್ದುವು. ಅಂತುಬಾ ಆಪ್ಟೆ ಮತ್ತು ಬಲವಂತರಾವ್ ಕೇತ್ಕರ್ ರಾಮದುರ್ಗದ ಆಸ್ಥಾನದಲ್ಲೂ, ಚಿನ್ನಾರ ದತ್ತೋಪಂತ ಪಡ್ಕೆ, ಬಲವಂತರಾವ್ ವೈದ್ಯ, ದಾದಾ ಖರೆ, ಬಂಡೋಪಂತ ಜೋಗಳೇಕರ್, ಗಣಪತಿರಾವ್ ರಾಸ್ತೆ ಮೊದಲಾದವರು ಜಮಖಂಡಿ ದರ್ಬಾರ್‌ನಲ್ಲೂ ಇದ್ದರು. ಆದರೆ ಈ ಮಾರ್ಪಾಡಿಗೆ ಪ್ರಬಲ ಕಾರಣವೆಂದರೆ ಧಾರವಾಡದ ತರಬೇತಿ ಕಾಲೇಜಿಗೆ ಅಧ್ಯಾಪಕರಾಗಿ ಬಂದ ಹೆಸರಾಂತ ಸಂಗೀತಗಾರ ಭಾಸ್ಕರರಾವ್ ಭಾಕಳೆ. ಮೈಸೂರಿಗೆ ಭೇಟಿ ಕೊಡುತ್ತಿದ್ದ ಹೆಚ್ಚು ಕಡಿಮೆ ಎಲ್ಲ ಹಿಂದೂಸ್ತಾನೀ ಗಾಯಕರೂ ಹುಬ್ಬಳ್ಳಿ–ಧಾರವಾಡಗಳ ಮೂಲಕ ಉತ್ತರ ಭಾರತಕ್ಕೆ ಹೋಗುವ ಮಾರ್ಗದಲ್ಲಿ ಈ ಎರಡು ಪಟ್ಟಣಗಳಲ್ಲಿ ಉಳಿದು ಭಾಕಳೆಯವರೊಡನೆ ಸ್ವಲ್ಪ ಸಮಯ ಕಳೆದ ಬಳಿಕವೇ ಪ್ರಯಾಣ ಮಾಡುತ್ತಿದ್ದರು. ಭಾಕಳೆಯವರದು ಅಂಥ ಕೀರ್ತಿ. ಕ್ರಮೇಣ ಇಲ್ಲಿ ಹಿಂದೂಸ್ತಾನಿ ಸಂಗೀತ ರಸಿಕರ ಸಂಖ್ಯೆ ಹೆಚ್ಚಿತು. ರಹೆಮತ್ ಖಾನ್ ಅಬ್ದುಲ್ ಕರೀಂ ಖಾನ್ ಮತ್ತು ಅಲ್ಲಾದಿಯಾ ಖಾನ್ ಮೊದಲಾದ ಪ್ರಖ್ಯಾತ ಗಾಯಕರು ಹುಬ್ಬಳ್ಳಿಗೆ ಆಗಾಗ ಬಂದು ಹೋಗುತ್ತಿದ್ದರೂ ಸಂಗೀತ ಶಾಸ್ತ್ರಜ್ಞರು ಅಧಿಕಾರ ಸ್ಥಾನಗಳಲ್ಲಿದ್ದರೂ ಸ್ವಲ್ಪ ಸಮಯದಲ್ಲೇ ಕರ್ನಾಟಕ ಸಂಗೀತದ ಸ್ಥಾನವನ್ನು ಹಿಂದೂಸ್ತಾನಿ ಸಂಗೀತ ಆಕ್ರಮಿಸಿಕೊಳ್ಳುವುದಕ್ಕೆ ಸಾಧ್ಯವಾಯಿತು. ಅಲ್ಲದೆ ಇಲ್ಲಿನ ಹಿಂದೂಸ್ತಾನಿ ಸಂಗೀತ ವಿದ್ವಾಂಸರು ರಾಷ್ಟ್ರ ಮಟ್ಟದಲ್ಲಿ ಕರ್ನಾಟಕಕ್ಕೆ ಒಂದು ಪ್ರಮುಖ ಸ್ಥಾನ ಗಳಿಸಿಕೊಟ್ಟರು.

ಭಾರತದ ಎರಡು ಸಂಗೀತ ಪದ್ಧತಿಗಳೂ ಜತೆಜತೆಯಲ್ಲೇ ಬೆಳೆಯುತ್ತಿರುವುದು ಕರ್ನಾಟಕದ ಒಂದು ವೈಶಿಷ್ಟ್ಯ. ಹಾಗೆ ನೋಡಿದರೆ ಇಡೀ ದೇಶದಲ್ಲೇ ಭಾರತೀಯ ಸಂಗೀತ ನಿಜವಾಗಿ ಅಭಿವೃದ್ಧಿಯಾಗುತ್ತಿರುವುದು ಈ ರಾಜ್ಯದಲ್ಲಿ ಮಾತ್ರ ಎಂದು ಧಾರಾಳವಾಗಿ ಹೇಳಬಹುದು. ಆದರೂ ಈ ಚಿರಸ್ಮರಣೀಯ ಸಮ್ಮೇಳನದ ಸಂದರ್ಭದಲ್ಲಿ ಕನ್ನಡದ ಎಲ್ಲ ವಿಭಾಗಗಳತ್ತ ದೃಷ್ಟಿ ಹರಿಸುವುದು ಅತ್ಯಗತ್ಯ.

**ಮುಂದಿನ ಕರ್ತವ್ಯ**

ಮೊದಲನೆಯದಾಗಿ ನಮ್ಮ ಸಂಗೀತ ಪರಂಪರೆಯ ವೈಶಿಷ್ಟ್ಯವನ್ನು ಹಾಗೂ ಅದು ಇಂದಿಗೂ ಮುಂದುವರಿಯುತ್ತಿರುವುದನ್ನು ಜನ ಅರಿಯುವಂತಾಗಬೇಕು. ಕರ್ನಾಟಕದ ವಿವಿಧ ಭಾಗಗಳ ನಡುವೆ ಪರಸ್ಪರ ಉತ್ತಮ ಸಂಪರ್ಕ ಹಾಗೂ ವಿಚಾರ ವಿನಿಮಯ ವ್ಯವಸ್ಥೆಯಿಂದ ಇಂಥ ಅರಿವು, ಆಸಕ್ತಿ ವೃದ್ಧಿಯಾಗಲು ಸಾಧ್ಯ. ಶತಮಾನಗಳ ಕಾಲ ಛಿದ್ರ ಛಿದ್ರವಾಗಿ ಹೋಗಿದ್ದ ಕನ್ನಡ ನಾಡು ೨೫ ವರ್ಷಗಳ ಹಿಂದಷ್ಟೆ ಒಂದಾಯಿತು. ಹೀಗೆ ಒಂದುಗೂಡಿದ ಪ್ರದೇಶಗಳ ನಡುವೆ ಕಾಲು ಶತಮಾನದ ನಂತರವೂ ಭಾವೈಕ್ಯವಾಗದಿರುವುದೊಂದು ದುಃಖದ ಸಂಗತಿ. ನಮ್ಮ ಶ್ರೀಮಂತ ಪರಂಪರೆ ಜನಕ್ಕೆ ಗೊತ್ತಾಗಬೇಕಾದರೆ, ಕರ್ನಾಟಕದ ಸಂಗೀತ ನಡೆದು ಬಂದ ದಾರಿಗೆ ಸಂಬಂಧಿಸಿದ ಎಲ್ಲ ಅಂಶಗಳ ಕೂಲಂಕಷ ಸಮೀಕ್ಷೆಯಾಗಬೇಕು. ವಾಗ್ಗೇಯಕಾರರು, ಅವರ ರಚನೆಗಳು, ಚಿತ್ರಗಳು, ಗ್ರಂಥಗಳು, ಭಾಷ್ಯಗಳು, ಹಸ್ತಪ್ರತಿಗಳು, ಶಿಲ್ಪಗಳು, ಸ್ಮಾರಕಗಳು, ಇವೆಲ್ಲವೂ ಈ ಸಮೀಕ್ಷೆಯ ವ್ಯಾಪ್ತಿಗೊಳಪಡಬೇಕು. ಇದರಿಂದ ಮಾತ್ರ ಕರ್ನಾಟಕದಲ್ಲಿ ಸಂಗೀತ ಬೆಳೆದು ಬಂದ ಬಗೆ ಬೆಳಕಿಗೆ ಬಂದೀತು. ಉದಾಹರಣೆಗೆ ಹೇಳುವುದಾದರೆ ರಾಗಗಳನ್ನು ಚಿತ್ರರೂಪದಲ್ಲಿ ಪ್ರತಿಬಿಂಬಿಸಿರುವ ಉತ್ತರ ಭಾರತದ ರಾಗಾಮಾಲಾ ಚಿತ್ರಗಳಲ್ಲೂ ವಿವಿಧ ಶೈಲಿಗಳಿವೆ. ಇವೆಲ್ಲ ಉತ್ತರ ಭಾರತಕ್ಕೇ ಸೇರಿದ್ದು. ಬಿಜಾಪುರ ಮಾತ್ರ ಇದಕ್ಕೆ ಹೊರತು. ದಕ್ಷಿಣ ಭಾರತದಲ್ಲಿ ಈ ರಾಗಗಳ ವಿಶಿಷ್ಟ ಪ್ರತಿಮಾ ಶಿಲ್ಪಗಳಿರುವ ವಿಷಯ ಅನೇಕರಿಗೆ ತಿಳಿಯದು. ಈ ಪ್ರತಿಮಾ ಶಿಲ್ಪಗಳಿರುವುದು ಕರ್ನಾಟಕದಲ್ಲಿ ಮಾತ್ರ. ಹಸ್ತಪ್ರತಿಗಳು, ಚಿತ್ರಗಳು, ಧ್ವನಿಮುದ್ರಿಕೆಗಳು ಹಾಗೂ ಬೆಳಕು ಕಾಣದ ರಚನೆಗಳು ನಾಶವಾಗುವ ಮೊದಲೇ ನಮ್ಮ ಶ್ರೀಮಂತ ಪ್ರಾಚೀನ ಸಂಪತ್ತಿನ ಬಗ್ಗೆ ಅಧ್ಯಯನ, ಸಂಶೋಧನೆ ಆಗಬೇಕು. ಇಂಥ ಅಧ್ಯಯನ ಹಾಗೂ ಸಂಶೋಧನೆಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಬೇಕು. ಪುಸ್ತಕ ಭಂಡಾರಗಳಲ್ಲಿ ನಿದ್ರಿಸಿರುವ ವ್ಯಾಖ್ಯಾನ ಗ್ರಂಥಗಳೂ ಬೆಳಕಿಗೆ ಬರಬೇಕು. ಖ್ಯಾತನಾಮ ಸಂಗೀತ ವಿದ್ವಾಂಸರ ಚಿತ್ರಗಳನ್ನು ಹಾಗೂ ಅವರು ಬೀರಿದ ಪ್ರಭಾವದ ದಾಖಲೆಗಳನ್ನು ಹುಡುಕಿಕೊಂಡು ಹೋಗಿ ಸಂಗ್ರಹಿಸಬೇಕು. ಈ ಸಂಗ್ರಹವನ್ನು ಕರ್ನಾಟಕ ಸಂಗೀತ ಪರಂಪರೆಗೇ ಮೀಸಲಾದ ಪ್ರತ್ಯೇಕ ವಸ್ತು ಭಂಡಾರದಲ್ಲಿ ಪ್ರದರ್ಶಿಸಬೇಕು. ಕರ್ನಾಟಕ ಸಂಗೀತ ಮತ್ತು ಹಿರಿಮೆಯನ್ನು ನಮ್ಮ ಜನ ತಿಳಿಯುವಂತಾಗಲು, ಅದರ ಅಭಿವೃದ್ಧಿಯ ಬಗ್ಗೆ ಅವರಲ್ಲಿ ಆಸಕ್ತಿ ಕೆರಳುವಂತಾಗಲು ಈ ಕ್ರಮಗಳು ಅತ್ಯಂತ ಸಹಾಯಕ.

**ಕನ್ನಡ ಅನುವಾದ: ಕೆ. ಎಸ್. ನಾರಾಯಣ ಸ್ವಾಮಿ**

# ಕರ್ನಾಟಕದ ಹಬ್ಬಗಳು

ಸಿಂಪಿ ಲಿಂಗಣ್ಣ

ಹಬ್ಬವೆಂದರೆ ಅದೊಂದು ಪರ್ವಕಾಲ. ಸಂದರ್ಭ ಒದಗಿದಾಗ ಸುಂದರವಾದ ಪರಿಸರ, ಆಹ್ಲಾದಕರವಾದ ಸೊಬಗು ಕಂಗೊಳಿಸುವುದು ನಿಸರ್ಗದ ಧರ್ಮವೇ ಆಗಿದೆ. ಭೂಮಿತಾಯಿಯ ಚೊಚ್ಚಿಲ ಮಗನೆನಿಸಿ, ನಿಸರ್ಗದ ಒಡಲಿನಲ್ಲಿ ಪವಡಿಸುವ ಒಕ್ಕಲ ಮಗ ಚಳಿ, ಮಳೆ, ಬಿಸಿಲುಗಳ ಸವಿಯುಂಡು ಸಚೇತನನಾಗಿ ಆನಂದದಿಂದ ಹಾಡಿ ಕುಣಿದು ನಲಿಯುವುದಕ್ಕೆ ಪುಷ್ಟಿಕರವಾದ ಸವಿಯಡಿಗೆಯನ್ನು ಸಿದ್ಧಗೊಳಿಸಿ, ಗೃಹದೇವತೆ, ಗ್ರಾಮದೇವತೆ, ಕುಲದೇವತೆಗಳಿಗೆ ನೈವೇದ್ಯ ಮಾಡಿ, ಪ್ರಸಾದವನ್ನುಂಡು ಪ್ರೀತನಾಗಲು ಒದಗಿಕೊಂಡ ಹಲವು ಸಂದರ್ಭಗಳೇ ಹಬ್ಬಗಳು.

ಕನ್ನಡನಾಡಿನ ಹಬ್ಬಗಳು ಬಹುತರವಾಗಿ ಹುಣ್ಣಿಮೆಗೇ ಬರುವುದರಿಂದ ಹಬ್ಬ ಹುಣ್ಣಿಮೆಗಳೆಂದು ಹೇಳಲಾಗುತ್ತದೆ. ನಮ್ಮ ನಾಡಿನಲ್ಲಿ ಹಬ್ಬಹುಣ್ಣಿಮೆಗಳನ್ನು ನಿರ್ಮಿಸಿಕೊಂಡವರು ಒಕ್ಕಲಿಗರೆಂದೇ ಹೇಳಬಹುದಾಗಿದೆ. ಕಾರ ಹುಣ್ಣಿಮೆಗೆ ವರ್ಷಾರಂಭದ ಮಳೆಯನ್ನು ಸ್ವಾಗತಿಸಿ, ಕೃಷಿ ಉದ್ಯಮದ ಆರಂಭದ ಪೂಜೆಯನ್ನುವಂತೆ, ಎತ್ತುಗಳ ಮೈತೊಳೆದು, ಮೈಗೆ ಜೂಲು, ಬಣ್ಣ ಬಳಿದ ಕೋಡುಗಳಿಗೆ ಕೊಂಬಣಸು, ಬಣ್ಣದ ಪುಗ್ಗಗಳಿಂದ ಶೃಂಗರಿಸಲಾಗುವುದು. ಹೊನ್ನುಗ್ಗಿಯೆನಿಸುವ ಮುನ್ನಾದಿನವೇ ಎತ್ತುಗಳಿಗೆ ಕಿಚ್ಚಡಿ ಬೆಲ್ಲಗಳನ್ನು ತಿನ್ನಕೊಡುವರು. ಹುಣ್ಣಿಮೆಯ ದಿನ ಹೋಳಿಗೆ ಊಟ ಉಂಡು, ಹೋರಿಗಳನ್ನು ಓಲಗಾಡಿಗೆ ಹೂಡಿ ಓಡಾಡಿಸುವರು. ಎತ್ತುಗಳನ್ನು ಸ್ಪರ್ಧೆಗೆ ಅಣಿಗೊಳಿಸಿ ಕೆರಳಿಸಿದರೆ ಅವು ಓಟ ಕೊಡುವುವು. ಅದಕ್ಕೆ ಕರಿಹರಿಯುವುದು ಎನ್ನುತ್ತಾರೆ. ಅವುಗಳಿಂದ ಮುಂಗಾರಿ ಹಿಂಗಾರಿ ಮಳೆಬೆಳೆಗಳ ಭವಿಷ್ಯವನ್ನು ಲೆಕ್ಕಿಸುತ್ತಾರೆ. ಹುಣ್ಣಿಮೆಯ ಮರುದಿನವೇ ಕರಿ. ಅಂದು ಕೋಡುಬಳೆಯಂಬ ಬೆಲ್ಲ ಖಾರಗಳ ತಿನಿಸನ್ನು ಇಬ್ಬಗೆಯಲ್ಲಿ ರಚಿಸಿ, ಎಣ್ಣೆಯಲ್ಲಿ ಕರಿದು ತಿನ್ನುವರು.

ಮಳೆಗಾಲ ಆರಂಭವಾಗುತ್ತಲೆ ಹಳ್ಳಕ್ಕೆ ನೀರು ಬಂದು ತೀರದಲ್ಲಿ ಹರಡಿದ ಕೆಸರು ಕಂಡರೆ ಹಳ್ಳಿಯ ಬಾಲಿಕೆಯರ ಪ್ರತಿಭೆ ಸಹಜವಾಗಿ ಉಕ್ಕಿ ಬರುವಂತೆ ತೋರುತ್ತದೆ. ಬಾಲಿಕೆಯರು ಗುಳ್ಳವ್ವ, ಗೌರಿ, ಬಸವಣ್ಣ ಮಾಡಿ ಪೂಜಿಸಿ, ಹಾಡು ಹೇಳಿ ಹರುಷಪಡುವರು. ಆಷಾಢ ತಿಂಗಳ ನಾಲ್ಕು ಮಂಗಳವಾರ ಗುಳ್ಳವ್ವನ ಹಬ್ಬ. ಆ ಪ್ರತಿ ಬುಧವಾರ ಗುಳ್ಳವ್ವನನ್ನು ಕಳಿಸಿಕೊಡುವ ನೆಪದಿಂದ ವನಭೋಜನ. ಅಲ್ಲಿ ಕೇಳಿಯ ಸಡಗರ, ಮಣ್ಣೆತ್ತಿನ ಅಮಾಸಿಯ ಹೆಸರೇ ಹೇಳಿಕೊಡುತ್ತದೆ ಅದೆಂಥ ಹಬ್ಬವೆನ್ನುವುದನ್ನು.

ಗುಳ್ಳವ್ವ, ಗೌರಿಯಿಂದ ಆರಂಭವಾಗಿ ಮಣ್ಣೆತ್ತು, ಹೀಗೆ ಗಣಪತಿಯ ವರೆಗೆ ಅರಲಿನ ಮೂರ್ತಿಗಳನ್ನು ರಚಿಸಿ ಪೂಜೋತ್ಸವ ನಡೆಸುವುದುಂಟು. ನಾಗಚೌತಿ, ನಾಗಪಂಚಮಿ, ಸಿರಿಯಾಳ ಷಷ್ಠಿ ಇವು ಆ ಸಂದರ್ಭದಲ್ಲಿಯೇ ಅನುಕ್ರಮವಾಗಿ ಬರುವುವು. ನಾಗಚೌತಿಗೆ ಹಣತಿ ಪೂಜೆ, ಗಂಡನ ಮನೆಗೆ ಹೋದ ಮೊದಲಗಿತ್ತಿಯರು ಹಬ್ಬಕ್ಕೆಂದು ತವರಿಗೆ ಬಂದಾಗ, "ತವರೇರಿ ನೋಡುವ ತವರ ಮನೆಯ ದೀಪ"ದ ಹಣತಿಯನ್ನು ಪೂಜಿಸಿ, ತವರವರ ಹಂಗಪಾಲನ್ನು ಕೊರಳಿಗೆ ಹಾಕಿಕೊಳ್ಳುವರು. ನಾಗರಪಂಚಮಿಯ ದಿವಸ ಅರಲು ಅಥವಾ ಕಣಕಿನಿಂದ ಮಾಡಿದ ಇಲ್ಲವೆ, ಧಾತುವಿನಿಂದ ಮಾಡಿಸಿದ ನಾಗೇಶನನ್ನು ಪೂಜಿಸಿ, ಕಾಸೋಲಿ ಎಂಬ ಬೇಯಿಸಿದ ಹೂರಣ ಕಡಬಿನ ನೈವೇದ್ಯ ಹಿಡಿಯುವರು. ನೂತನ ವಸ್ತ್ರಾಭರಣಗಳನ್ನು ಧರಿಸಿಕೊಂಡು ಜೋಕಾಲಿ, ಚಿಣಿಗಾಣ ಆಡಿ, ಹೆಣ್ಣು ಗಂಡು ಮಕ್ಕಳು ಉಲ್ಲಾಸಪಡುವರು. ಸಿರಿಯಾಳ ಷಷ್ಠಿಯ ದಿನ ಗ್ರಾಮದ ಗೌಡ ಕುಲಕರ್ಣಿಯವರ ಮನೆಯಲ್ಲಿ ಕುಳ್ಳಿರಿಸಿದ ಗೌರಿಯನ್ನು ನೋಡಹೋಗುವುದೂ, ವನಭೋಜನಕ್ಕೆ ಹೋಗಿಬರುವುದೂ ಅಂದಿನ ಮುಖ್ಯ ಕೆಲಸ. ಗ್ರಾಮಸ್ಥರ ಪಡಸಾಲೆಯಲ್ಲಿ ಹೆಣ್ಣುಮಕ್ಕಳ ಜಾನಪದ ಗೀತೆ ಗೋಷ್ಠಿ ನಡೆದರೆ, ತಲೆವಾಗಿಲ ಮುಂದಿನ ಬಯಲಲ್ಲಿ ಗಂಡು ಮಕ್ಕಳ ದಪ್ಪಿನ ಹಾಡುಗಳ ಗೋಷ್ಠಿ ನಡೆಯುವುದು.

ವಿಘ್ನೇಶ್ವರನೂ, ಗಣನಾಯಕನೂ ಆದ ಗಣೇಶನನ್ನು ಭಾದ್ರಪದ ಚೌತಿಯ ದಿವಸ ಪ್ರತಿಯೊಂದು ಮನೆಯಲ್ಲಿಯೂ ಸ್ಥಾಪಿಸಿ, ಕರ್ಣಪತ್ರಿ, ಕಣಗಿಲ ಹೂಗಳಿಂದ ಪೂಜಿಸಿ, ಹೂರಣ ಕಡುಬಿನ ನೈವೇದ್ಯ ತೋರಿಸುವರು. ಹೀಗೆ, ತಮತಮಗೆ ಅನುಕೂಲವಾಗುವಂತೆ ಆರೇಳು ದಿವಸ ವೈಯಕ್ತಿಕವಾಗಿ ಸಾರ್ವಜನಿಕವಾಗಿ ಗಣಪತಿಯನ್ನು ಪೂಜಿಸಿ, ಪಟಾಕ್ಷಿ, ಸುರಬತ್ತಿ ಮೊದಲಾದ ಮದ್ದು ಹಾರಿಸುತ್ತ, ಊದಿಸುತ್ತ, ಬಾರಿಸುತ್ತ ಮೆರವಣಿಗೆಯೊಂದಿಗೆ ನೀರಮಡುವಿನಲ್ಲಾಗಲಿ, ಬಾವಿಯಲ್ಲಾಗಲೀ ವಿಸರ್ಜಿಸುವರು.

ಅದೇ ತಿಂಗಳ ಅಷ್ಟಮಿಯ ದಿವಸ ಜೋಕುಮಾರನು ಬಡವರ ಬಂಧುವಿನಂತೆ ಹುಟ್ಟಿ ಬರುವನು. ಅವನನ್ನು ಬುಟ್ಟಿಯಲ್ಲಿ ಕುಳ್ಳಿರಿಸಿ, ತಳವಾರ ಹೆಂಗಸರು ಮನೆ ಮನೆಗೆ ಸಾಗಿ ಆತನ ಮಹಿಮೆಯನ್ನು ಹಾಡುತ್ತ, ನೀಡಿದ ಧಾನ್ಯ, ಬಟ್ಟೆ ಸ್ವೀಕರಿಸುವರು. ಮುಂದೆ ಬರುವ ಹುಣ್ಣಿಮೆಗೆ ಜೋಕುಮಾರನ ಅಂತ್ಯವಾದ ಬಳಿಕ ೨-೩ ದಿನಗಳಲ್ಲಿ ಎಳೆಬಿದ ಮಳೆ ಬಂದು ಒಕ್ಕಲಿಗನಿಗೆ ಪರಮ ಸಂತೋಷವನ್ನುಂಟುಮಾಡು

ವುದು. ಆ ಹುಣ್ಣಿಮೆಗೆ ಜೋಕುಮಾರನ ಹುಣ್ಣಿಮೆ ಎನ್ನುತ್ತಾರೆ.

ಆಶ್ವೀಜ ಶುದ್ಧ ಪ್ರತಿಪದೆಗೆ ದೇವಿಯ ಉಪಾಸನೆ ನಡೆಯುವುದು. ಎಲ್ಲಮ್ಮ, ಅಂಬಾಬಾಯಿ ಮೊದಲಾದ ಹೆಸರುಗಳಿಂದ ಭಕ್ತರು ಒಪ್ಪೊತ್ತಿನ ಊಟ ಅಥವಾ ಪೂರ್ಣ ಉಪವಾಸ ಮಾಡುತ್ತ ದೇವಿಯನ್ನು ಪ್ರಸನ್ನಗೊಳಿಸುವ ನೋಂಪಿ ಮಾಡುವರು. ನವರಾತ್ರಿಯ ಒಂಬತ್ತು ದಿನ ನಂದಾದೀಪ ಉರಿಸುತ್ತ, ತಾಬಾಣದಲ್ಲಿ ತುಂಬಿದ ಹುತ್ತಿನ ಮಣ್ಣಿನಲ್ಲಿ ಸಸಿಯನ್ನು ಬೆಳೆಸುತ್ತ ಮಹಾನವಮಿಯ ದಿವಸ ಇಬ್ಬರೋ, ಐವರೋ ಮುತ್ತೈದೆಯರನ್ನು ಉಣಿಸಿ, ಸಂಸಾರ ಜೀವನಕ್ಕೆ ನೆಮ್ಮದಿಯನ್ನು ಪಡೆಯುವರು. ಸಾಮೂಹಿಕ ದೇವಿ ಆರಾಧನೆಯೂ ಹಲವು ಕಡೆ ನಡೆಯುವುದು. ದಸರೆಯ ದಿವಸ ಊದಿಸುತ್ತ, ಬಾರಿಸುತ್ತ ಸಾರ್ವಜನಿಕರು ಸೀಮೋಲ್ಲಂಘನ ಮಾಡಿ, ಬನ್ನಿಗಿಡವನ್ನು ಪೂಜಿಸಿ, ಅದನ್ನು ಮನೆಗೆ ತಂದು. ಬಂಗಾರವೆಂದು ಆಪ್ತೇಷ್ಟರಿಗೆ ವಂದನೆಗಳೊಂದಿಗೆ ಪರಸ್ಪರ ಹಂಚಿ, ಹಿಂದಿನ ದ್ವೇಷ ಛಲಗಳನ್ನು ಮರೆಯುವರು.

ಆಶ್ವೀಜ ಶುದ್ಧ ಚತುರ್ದಶಿಗೆ ಆರಂಭವಾದ ದೀಪಾವಳಿ ಹಬ್ಬವು ಕಾರ್ತಿಕ ಶುದ್ಧ ಪಂಚಮಿಗೆ ಕೊನೆಗೊಳ್ಳುವುದು. ಅಕ್ಕ ತಂಗಿಯರಿಂದ ಆರತಿ ಬೆಳಗಿಸಿಕೊಂಡು ಅವರಿಗೆ ಉಡುಗೊರೆ ನೀಡುವರು. ಅಂಗಡಿಕಾರರು ಹೊಸ ವರ್ಷವೆಂದು ಲಕ್ಷ್ಮಿ ಸರಸ್ವತಿಯರನ್ನು ವಿಜೃಂಭಣೆಯಿಂದ ಪೂಜಿಸುವರು. ಸಿಹಿಸಿಹಿ ತಿಂಡಿ, ಹುಗ್ಗಿಹೋಳಿಗೆಯಂಥ ಸುಗ್ರಾಸ ಭೋಜನ ಮಾಡಿ, ಆನಂದದಿಂದ ದಿನಕಳೆಯುವರು.

ಒಕ್ಕಲಿಗರು ಶೀಗೀ ಹುಣ್ಣಿಮೆ ಎಳ್ಳಮಾವಾಸ್ಯೆಗಳ ದಿವಸ ಸಜ್ಜೆಯ ಕಡಬು, ಹಿಂಡಿಪಲ್ಲೆ, ಹೋಳಿಗೆ, ಅನ್ನ, ಸಾರು, ಮೊಸರುಗಳನ್ನು ಬುಟ್ಟಿಯಲ್ಲಿ ತುಂಬಿಕೊಂಡು. ಹೊಲಕ್ಕೆ ಹೋಗಿ ಹೊಲದ ಲಕ್ಷ್ಮಿಯನ್ನು ಪೂಜಿಸಿ, ಚಾಗು ಭಲೆ ಚಾಗುಭಲೆಯೆನ್ನುತ್ತ ಹೊಲದ ತುಂಬ ಬೆಳೆಯಲ್ಲಿ ಓಡಾಡಿ ನೈವೇದ್ಯವನ್ನು, ನೀರನ್ನೂ ತೂರಾಡಿ ಎರಚುವರು. ಆ ಬಳಿಕ ಸಮೀಚೀನವಾದ ಊಟ, "ಎಳ್ಳಮಾಸೆಯ ದಿನ ಉಳ್ಳಿಕ್ಕೆ ಕರೆಯದವರಾರು" ಎಂಬ ಗಾದೆಯುಂಟಾಗುವಂತೆ. ಪರಸ್ಪರ ಮಿತ್ರಬಾಂಧವರನ್ನು ಹೊಲದ ಊಟಕ್ಕೆ ಕರೆದೊಯ್ಯುವರು.

ಪೌಷ್ಯ ಮಾಘಗಳಲ್ಲಿ ಹೊಲದ ಬೆಳೆ ಭರಕ್ಕೆ ಬಂದಾಗ ಒಕ್ಕಲಿಗರು ಹೊಲದಲ್ಲಿಯೇ ವಸತಿ ಮಾಡಿ, ಹಕ್ಕಿಕಾಯುತ್ತ, ಸೀತನೆ, ಉಮ್ಮಗಿ, ಸುಲಗಾಯಿ ತಿನ್ನುತ್ತ ರಾತ್ರಿ ಒಲೆಗುಣಿಯ ಮುಂದೆ ಬೆಂಕಿ ಕಾಯಿಸಿಕೊಳ್ಳುತ್ತ, ಕುಳಿತುಕೊಂಡು ಹಾಡುವರು, ಕೇಕೆ ಹಾಕುವರು. ಬೆಳೆ ಹದಕ್ಕೆ ಬರಲು, ಅದನ್ನೆಲ್ಲ ಕಿತ್ತು ತಂದು ತೆನೆ ಮುರಿದು, ಕಣದಲ್ಲಿ ಹರಡಿ, ಎತ್ತುಗಳಿಂದ ತುಳಿಸುವರು. ಅದೇ ಹಂತಿ ಕಟ್ಟುವುದು ಅನಿಸುತ್ತದೆ. ನೆರೆಹೊರೆಯ ಹೊಲದವರೊಡನೆ ಬೆಳ್ಳಂಬೆಳೆ ತನಕ ಹಂತಿಯ ಹಾಡುಗಳನ್ನು ಹಾಡುತ್ತ ಬೆಳಗಾದ ಬಳಿಕ ಮದ ಮಲಗಿಸುವರು. ಅಂದು ಸಾಯಂಕಾಲಕ್ಕೆ ಹಂತಿಯಂಬಲಿಯ ಎಡೆ, ಹೋಳಿಗೆ, ಹುಳಿಬಾನು, ಅಂಬಲಿ, ಸಾರು ಮೊದಲಾದ ಉಣಿಸುಗಳನ್ನುಂಡ ತೃಪ್ತಿಯನ್ನು ಉಂಡವನೇ ಬಲ್ಲನು. ಅದೊಂದು ಹರ್ಷದ ಹಬ್ಬ. ಬಳಿಕ ಮದತೂರಿ ಕಾಳು ಬೇರೆ ಮಾಡುವರು. ಕಾಳನ್ನು ಚೀಲ ತುಂಬಿ ಎತ್ತಿನ ಗಾಡಿಯಲ್ಲಿ, ಮನೆಗೆ ತಂದು ಒಟ್ಟುವರು. ಇದು ಹೊಲದ ಲಕ್ಷ್ಮಿಯನ್ನು ಮನೆಗೆ ಕರೆತರುವ ಹಬ್ಬ.

ಇದಾಗುತ್ತಲೆ ಶಿವರಾತ್ರಿಯ ಒಂದೊತ್ತು, ರಾತ್ರಿಯ ಭಜನೆ, ಶ್ರಾವಣದಲ್ಲಿ ಗುಡಿ ಮಠಗಳಲ್ಲಿ ಪುರಾಣ ಪುಣ್ಯ ಕಥೆ ನಡೆದಂತೆ, ಶಿವರಾತ್ರಿಯಲ್ಲಿ ಸಾಮೂಹಿಕವಾಗಿ ಶಿವನ ಪೂಜೆ, ಭಜನೆ ನಡೆಯುವುದು. ಮನೆ ಮನೆಗಳಲ್ಲಿಯೂ ಆ ಪೂಜೆ ನಡೆಯುವುದು. ಉಪವಾಸದ ಹಬ್ಬ ಮುಗಿಯುತ್ತಲೇ ಹೊಯ್ಕೊಳ್ಳುವ ಹಬ್ಬ ಕಾಲಿರಿಸುತ್ತದೆ. ಹೊಯ್ಕೊಳ್ಳುವುದೆಂದರೆ ಉತ್ಸಾಹದ. ಪರಮಾವಧಿ. ಹೋಳಿ ಹುಣ್ಣಿಮೆಯ ದಿನ ಕಾಮನನ್ನು ಸುಡುವ ಬೆಂಕಿಯನ್ನು ಹೊತ್ತಿಸುವರು. ಅದಕ್ಕೆ ಹೋಳಿ ಸುಡುವುದು ಅನ್ನುತ್ತಾರೆ. ಸಾರ್ವಜನಿಕರು ಓಕಳಿಯ ಎರಚಾಟ, ಅಪಶಬ್ದಗಳ ಕೂಗಾಟ, ಅಸತ್ಯ ವಿನೋದಗಳನ್ನು ಪ್ರದರ್ಶಿಸುವರು. ಫಾಲ್ಗುಣವದ್ಯ ಪ್ರತಿಪದೆಯಿಂದ ಯುಗಾದಿಯವರೆಗೆ ಹದಿನೈದು ದಿನ ಓಣಿಓಣಿಯವರು, ವಿವಿಧ ಸೋಗುಗಳನ್ನು ಹಾಕಿ, ಊರಬಯಲುಗಳಲ್ಲಿ ಅದನ್ನು ಪ್ರದರ್ಶಿಸಿ, ಜನರನೆಲ್ಲ ನಗಿಸುವರು. ಪ್ರತಿಫಲ ಕೇಳಿ ಇಸಗೊಳ್ಳುವರು. ಅಷ್ಟಾಗುವುದಕ್ಕೆ ಚೈತ್ರ ಶುದ್ಧ ಪ್ರತಿಪದೆ ಬರುತ್ತದೆ, ಅದೇ ಯುಗಾದಿ.

ಬೇವು-ಬೆಲ್ಲಗಳನ್ನು ಸವಿದು ಜೀವನದಲ್ಲಿ ಸಮತೂಕ ಕಾಪಾಡಿಕೊಳ್ಳುವ ಕ್ರಮ ನಡೆಸುವರೋ ಎನ್ನುವಂತೆ ಅಂದಿನ ಹೋಳಿಗೆ ತುಪ್ಪದ ಊಟಕ್ಕೂ ಮಿಗಿಲಾಗಿ ಶಾವಿಗೆ ಸುರಿದು ಬೇರೆ ಕಚ್ಚುವರು. ಅಕ್ಷಯ ತೃತೀಯ, ರಾಮನವಮಿ, ಕೃಷ್ಣ ಜನ್ಮಾಷ್ಟಮಿ ಮೊದಲಾದುವುಗಳು ಪುರಾಣ ಕಾಲದಿಂದ ಬಂದ ಪರ್ವಕಾಲಗಳು. ಬನದ ಹುಣ್ಣಿಮೆಗೆ ಬನಶಂಕರಿಯ ಜಾತ್ರೆ. ಗೌರಿ-ಶೀಗೀ ಹುಣ್ಣಿಮೆಗೆ ಹೆಣ್ಣುಮಕ್ಕಳು ನಡೆಸುವ ಪೂಜೋತ್ಸವದ ವೈಭವ, ಇವೆಲ್ಲ ಹಬ್ಬಗಳೇ, ಹಬ್ಬದೂಟ ಒದಗಿಸುವ ಕಾಮಧೇನುಗಳೇ. ಭಾರತ ಹುಣ್ಣಿಮೆ ಎಲ್ಲರಿಗೂ ಅನುಕೂಲವಾದ ಹಬ್ಬವೆನಿಸುವುದು. ಅಷ್ಟರಲ್ಲಿ ಗೋಧಿ-ಕಡಲೆಗಳ ರಾಸಿ ಮುಗಿದಿರುತ್ತದೆ. ಕೂಲಿಕಾರರ ಮನೆಯಲ್ಲಿ ಸಹ ಗೋಧಿಯಡಿಗೆ ಮಾಡಿ, ಹಬ್ಬದೂಟ ಉಂಡು ಉಬ್ಬಿನಲ್ಲಿ ಕಾಲ ಕಳೆಯುತ್ತಾರೆ.

ಜಾನಪದದ ಹಬ್ಬಗಳಂತೆ, ಕೆಲವೊಂದು ರಾಷ್ಟ್ರೀಯ ಹಬ್ಬಗಳೂ ಸಾರ್ವಜನಿಕರ ಬಳಕೆಯಲ್ಲಿ ಬರತೊಡಗಿವೆ. ಭಾರತ ಸ್ವಾತಂತ್ರ್ಯ ದಿನೋತ್ಸವ, ಕರ್ನಾಟಕ ರಾಜ್ಯೋತ್ಸವ ಪ್ರಜಾ ರಾಜ್ಯೋತ್ಸವ ಮುಂತಾದವುಗಳ ಹೆಸರು ಇಲ್ಲಿ ಹೇಳಬಹುದು. ಅವು ಬರೀ ಪ್ರಾದೇಶಿಕ ಹಬ್ಬಗಳಾಗಿರದೆ, ಇಡೀ ರಾಷ್ಟ್ರಕ್ಕೇ ಸಂಬಂಧಿಸಿದ ಹಬ್ಬಗಳಾಗಿವೆ. ಆದರೆ ಅವಿನ್ನೂ ಜನಪದದಿಂದ ತುಸುದೂರದಲ್ಲಿಯೇ ಉಳಿಯುತ್ತ ಬಂದಿವೆ.

ತವರು ಮನೆಗೆ ಬರುವುದೇ ಹೆಣ್ಣುಮಕ್ಕಳಿಗೆ ಒಂದು ಹಬ್ಬ. ಹೊಸ ಮದಲಗಿತ್ತಿಯರು ನಾಗರಪಂಚಮಿಗೆ ಬರುವುದು, ತವರು ಮನೆಯ ಹಣತಿಗಳನ್ನು ಪೂಜಿಸಿ ಹಂಗನೂಲು ಧರಿಸುವುದಕ್ಕೆ. ದೀಪಾವಳಿಗೆ ಸೋದರಿಯರನ್ನು ಕರೆತರುವುದು ನರಕ ಚತುರ್ದಶಿ ಹಾಗೂ ಪಾಡ್ಯದ ದಿವಸ ಆರತಿ ಬೆಳಗಿಸಿಕೊಂಡು, ಉಡುಗೊರೆ ನೀಡಲಿಕ್ಕೆ. ಹೊಸ ವರ್ಷವೆಂದು ಯುಗಾದಿಗೆ, ಮಾವಿನ ಹಣ್ಣಿನ ಸುಗ್ಗಿಯೆಂದು ವೈಶಾಖದಲ್ಲಿ ಸಹೋದರಿಯರನ್ನು ಕರೆತರುವುದೂ ಒಂದು ಹಬ್ಬದ ಪ್ರಸಂಗವೇ. ಸಹೋದರಿ, ಗಂಡನ ಮನೆಯಲ್ಲಿ ನಾಲ್ಕಾರು ಸೊಸೆಯಂದಿರನ್ನು ನಡೆಯಿಸಿಕೊಳ್ಳುವ ಅತ್ತೆಯಾದರೂ ತವರು ಮನೆಗೆ ಹೋಗುವ ಹಂಬಲ ಅದೆಷ್ಟೂ ಕಡಿಮೆಯಾಗಿರುವುದಿಲ್ಲ.

ಮಗಳೆ ಮಾವ ಬಂದ ಸೊಸೆಯ ಅಪ್ಪ ಬಂದ
ಯೊರ್‍ಬಿಟ್ಟು ಯಾರ ಕಳುಹಲೇ? ನನ್ನಣ್ಣ
ಮಗಳಿಗಸೊಸಿಯ ಕರೆದೊಯ್ಯೋ.

ಅಣ್ಣನ ಮಗನಿಗೆ ಮಗಳನ್ನು ಕೊಟ್ಟು, ತನ್ನ ಮಗನಿಗೆ ಅಣ್ಣನ ಮಗಳನ್ನು ತೆಗೆದುಕೊಂಡು ಇದಿರುಗುಪ್ಪಸ ಮಾಡಿದ ನಂಟುತನವೆಂದು ತೋರುತ್ತದೆ. ಮಗಳೂ ಸೊಸೆಯೂ ಅದಾವ ಕಾರಣದಿಂದಲೋ ತಂಗಿಯ ಮನೆಯಲ್ಲಿಯೇ ಉಳಿದಿರುತ್ತಾರೆ. ಹಬ್ಬಕ್ಕಾಗಿ ಅಣ್ಣ ಕರೆಯಲು ಬರುತ್ತಾನೆ. ಆತನು ಯಾರನ್ನಿಟ್ಟು ಯಾರನ್ನು ಕರಕೊಂಡು ಹೋಗಬೇಕು? ತಿಳಿಯದಾದಾಗ ತಂಗಿ ಹೇಳುತ್ತಾಳೆ: ಮಗಳಿಟ್ಟು ಸೊಸಿಯ ಕರೆದೊಯ್ಯೋ ಎಂದು. ಆದರೆ ಯಾರ ಮಗಳನ್ನಿಡುವುದು? ಯಾರ ಸೊಸೆಯನ್ನು ಕರೆದೊಯ್ಯುವುದು? ಈ ಮಾತು ಸ್ಪಷ್ಟವಾಗಲಿಲ್ಲ. ತನ್ನ ಮಗಳನ್ನೋ ತಂಗಿಯ ಮಗಳನ್ನೋ? ಇದು ಸಹ ಒಂದು ಹಬ್ಬವೇ. ಅಂಥ ಅಣ್ಣನು ಯಾವಾಗ ಬಂದರೂ ನಿತ್ಯ ದೀಪಾವಳಿಯೇ ಸೈ. ಯಾಕೆಂದರೆ ಅವನು ಅತ್ತಿಗೆಯ ಅರಸು, ತಾಯಿಯ ಕುಮಾರ, ಮಕ್ಕಳಿಗೆ ಮಾವ, ತಂಗಿಗೆ ಅಣ್ಣ. ಅವನೊಡನೆ ದೀಪಾವಳಿ ಹಿಂಬಾಲಿಸಿ ಬರುವುದೆಂದು ಗರತಿ ಹೇಳುತ್ತಾಳೆ.

ದಿನದ ಜೀವನವನ್ನು ನಿತ್ಯ ದೀಪಾವಳಿ ಮಾಡಿಕೊಳ್ಳುವ ಸಲುವಾಗಿಯೇ ವರ್ಷದಲ್ಲಿ ಲೆಕ್ಕವಿಲ್ಲದಷ್ಟು ಹಬ್ಬ ಹುಣ್ಣಿವೆಗಳು ಬರುತ್ತಿರುವಾಗ ಅವುಗಳ ಪ್ರಯೋಜನ ಪಡೆಯುವುದು ಜನಾಂಗದ ಕರ್ತವ್ಯವೇ ಆಗಿದೆ. ಇದರಲ್ಲಿ ಕರಕೊಂಡು ತಿನ್ನುವ ಬುದ್ಧಿ ನಮಗೆಲ್ಲರಿಗೆ ಬಂದರಂತೂ ಹಬ್ಬಗಳು ಸಮಸ್ತ ಜೀವರಿಗೆ ಪರಿಪೂರ್ಣ ದೀಪಾವಳಿಯಾಗಿ ಪರಿಣಮಿಸಬಲ್ಲವು.

# ಕನ್ನಡ ಪತ್ರಿಕೋದ್ಯಮ

ನಾಡಿಗ ಕೃಷ್ಣಮೂರ್ತಿ

ಕನ್ನಡ ಪತ್ರಿಕೋದ್ಯಮದ ಉಗಮವೇ ವಿವಾದಾಸ್ಪದ. ಆದರೆ ಇತ್ತೀಚಿನ ದಾಖಲೆಗಳ ಪ್ರಕಾರ ಮೊದಲ ಕನ್ನಡ ಪತ್ರಿಕೆ ಅಸ್ತಿತ್ವಕ್ಕೆ ಬಂದದ್ದು ೧೮೪೩ರಲ್ಲಿ, ಮಂಗಳೂರಿನಲ್ಲಿ, ಹೆರ್ಮನ್ ಮೋಗ್ಲಿಂಗನ ಈ ಪತ್ರಿಕೆ ಒಂದು ಪಾಕ್ಷಿಕವಾಗಿ ಉದಯವಾಯಿತು. ಇದಕ್ಕೂ ಹಿಂದೆಯೇ ಪತ್ರಿಕೆಗಳು ಇದ್ದಿರ ಬಹುದಾದರೂ ಸರಿಯೊದ ಪುರಾವೆಗಳು ದೊರೆತಿಲ್ಲ. ಆದ್ದ ರಿಂದಲೇ ಮಂಗಳೂರ ಸಮಾಚಾರವನ್ನು ಮೊದಲ ಕನ್ನಡ ಪತ್ರಿಕೆ ಎನ್ನಲು ಯಾವ ಅಡ್ಡಿಯೂ ಇಲ್ಲ.

ಬಾಸೆಲ್ ಮಿಷನ್ನಿನ ಕ್ರೈಸ್ತ ಪಾದ್ರಿಗಳಿಂದ ಆರಂಭ ವಾದ ಮಂಗಳೂರ ಸಮಾಚಾರ ಧಾರ್ಮಿಕ ಚಿಂತನೆಯನ್ನೇ ಅಲ್ಲದೆ ಸುದ್ದಿಯನ್ನು ನೀಡುತ್ತಿತ್ತು. ಸ್ವಲ್ಪ ಕಾಲದ ಅನಂತರ ಬಳ್ಳಾರಿಗೆ ಈ ಪತ್ರಿಕೆ ವರ್ಗವಾಯಿತು. ಇದರ ಹೆಸರು ಕಂನಡ ಸಮಾಚಾರ ಎಂದು ಬದಲಾಯಿತು. ಅಲ್ಲಿ ಸ್ವಲ್ಪ ಕಾಲ ಮಾತ್ರ ಜೀವಿಸಿದ್ದ ಪತ್ರಿಕೆ ವೈವಿಧ್ಯದಿಂದ ಕೂಡಿತ್ತು. ಸಾಕಷ್ಟು ಮಂದಿ ಚಂದಾದಾರರಿಲ್ಲದೆ, ಓದುಗರ ದಿವ್ಯ ನಿರ್ಲಕ್ಷ್ಯಕ್ಕೆ ಒಳಗಾಗಿ ಈ ಪತ್ರಿಕೆ ಅಕಾಲ ಮರಣಕ್ಕೆ ತುತ್ತಾಯಿತು.

**ಕನ್ನಡ ಮುದ್ರಣದ ಆದ್ಯ ಪ್ರವರ್ತಕರು**

ಕ್ರೈಸ್ತ ಪಾದ್ರಿಗಳು ಕನ್ನಡ ಪ್ರದೇಶದಲ್ಲಿ ಬಂದಿಳಿ ದದ್ದು ಮತಪ್ರಚಾರಕ್ಕಾಗಿ. ಅದಕ್ಕಾಗಿ ಅವರು ಸಾಹಿತ್ಯ ಸೃಷ್ಟಿಸಬೇಕಿತ್ತು. ಆ ಸಾಹಿತ್ಯದ ಸಮೂಹ ಪ್ರಸಾರಕ್ಕೆ ಮುದ್ರಣಾಲಯದ ಆವಶ್ಯಕತೆ ಕಾಣಿಸಿಕೊಂಡಿತು. ಹೀಗೆ ಅವ ರೊಡನೆ ಮುದ್ರಣದ ತಂತ್ರಜ್ಞಾನವೂ ಕನ್ನಡ ನೆಲದಲ್ಲಿ ಬಂದಿಳಿಯಿತು. ತಮ್ಮ ಧಾರ್ಮಿಕ ಸಾಹಿತ್ಯದೊಡನೆ ಪಾದ್ರಿಗಳು ಭಾರತೀಯ ಧರ್ಮಗ್ರಂಥಗಳ ಪ್ರಕಟಣೆಯನ್ನು ಕೈಗೊಂ ಡದ್ದು ಅಚ್ಚರಿಯ ಸಂಗತಿ. ಹೀಗೆ ಕನ್ನಡ ಮುದ್ರಣದ ಆದ್ಯಪ್ರವರ್ತಕರು ಕ್ರೈಸ್ತ ಮಿಷನರಿಗಳು. ಕ್ರೈಸ್ತ ಪಾದ್ರಿ ಗಳು ವಿವಿಧ ಕನ್ನಡ ಪ್ರದೇಶಗಳಲ್ಲಿ ಶಾಲೆಗಳು ಮತ್ತು ಆಸ್ಪತ್ರೆಗಳನ್ನು ತೆರೆದರು. ಪುಸ್ತಕಗಳನ್ನು ಮುದ್ರಿಸಿ ಜ್ಞಾನಪ್ರಸಾರಕ್ಕೂ ನೆರವಾದರು.

**ಕಲ್ಲಚ್ಚು ಮುದ್ರಣ**

ಮುದ್ರಣದ ಮೊದಲ ಹಂತ ಕಲ್ಲಚ್ಚು. ಹದಿನಾರನೆಯ ಶತಮಾನದಲ್ಲಿ ಜೆ. ಗೊನ್ಸಾಲ್ವೆಸ್ ಕನ್ನಡದ ಮುದ್ರಣ ಮೊಳೆಗಳನ್ನು ಎರಕ ಹೊಯ್ಯುವ ಪ್ರಥಮ ಪ್ರಯತ್ನಕ್ಕೆ ಕೈಹಾಕಿದ. ಅವನ ಅನಂತರ ಕ್ರೈಸ್ತ ಪಾದ್ರಿ ಜಾನ್ ಗಿಲ್ ಕ್ರಿಸ್ಟ್ ಸ್ವಲ್ಪ ಮಟ್ಟಿನ ಯಶಸ್ಸನ್ನು ಗಳಿಸಿದ. ಸುಮಾರು ೧೮೨೦ರ ವೇಳೆಗೆ ಬಂಗಾಳದ ಸೆರಾಂಪೂರ್ (ಶ್ರೀರಾಂಪುರ) ಮುದ್ರಣಾಲಯ ಕನ್ನಡ ಭಾಷೆಯಲ್ಲಿ ಪುಸ್ತಕಗಳನ್ನು ಮುದ್ರಿಸಲು ಆರಂಭಿಸಿತು. ಜಾನ್ ಹ್ಯಾಂಡ್ಸ್ ಮತ್ತು ರೆವ ರೆಂಡ್ ವಿಲಿಯಂ ಕ್ಯಾರಿ ಇದಕ್ಕೆ ಮುಖ್ಯ ಕಾರಣರು. ಕನ್ನಡ ಮುದ್ರಣಕ್ಷೇತ್ರ ಹೀಗೆ ಸ್ವಲ್ಪಸ್ವಲ್ಪವಾಗಿ ವಿಸ್ತಾರವಾಗತೊಡ ಗಿತು. ಸೇಂಟ್ ಜಾರ್ಜ್ ಪ್ರೆಸ್ ಮತ್ತು ಬಾಂಬೆ ಕ್ಯಾಸಲ್ ಮುದ್ರಣಾಲಯ ಸರಕಾರೀ ಸೂಚನೆಗಳನ್ನು ಮುದ್ರಿಸಲು ಅಚ್ಚುಮೊಳೆಗಳನ್ನು ಬಳಸತೊಡಗಿದವು. ೧೮೪೩ರಲ್ಲಿ ಲಂಡನ್ ಮಿಷನ್ನಿನ ರೆವರೆಂಡ್ ಹ್ಯಾಂಡ್ಸ್ ವೈದ್ಯಕೀಯ ಚಿಕಿತ್ಸೆಗೆಂದು ಲಂಡನ್ನಿಗೆ ತೆರಳಿದಾಗ ಅಲ್ಲಿಂದ ಕನ್ನಡ ಅಚ್ಚುಮೊಳೆ ಗಳನ್ನು ಸಿದ್ಧಪಡಿಸಿ ತಂದನಂತೆ.

ಸರಕಾರದ ಕಾರ್ಯಕ್ಷೇತ್ರ ವಿಶಾಲವಾದಂತೆ ಅಧಿಕೃತ ಮುದ್ರಣ ಕಾರ್ಯಕ್ಕಾಗಿ ಮೈಸೂರು ಸರಕಾರ ಸ್ವಂತ ಮುದ್ರ ಣಾಯವನ್ನು ಆರಂಭಿಸಿತು. ಇದರ ಜೊತೆಯಲ್ಲಿಯೇ ಅಥವಾ ಸ್ವಲ್ಪ ಮುನ್ನ ಬೆಳಗಾವಿ, ಹುಬ್ಬಳ್ಳಿ, ಕಾರವಾರ ಮತ್ತಿತರ ಸ್ಥಳಗಳಲ್ಲೂ ಕ್ರೈಸ್ತ ಪಾದ್ರಿಗಳು ಧಾರ್ಮಿಕ ಸಾಹಿತ್ಯ ಮುದ್ರಿಸಲು ಮುದ್ರಣಾಲಯಗಳನ್ನು ಸ್ಥಾಪಿಸಿದರು. ಮೈಸೂ ರಿನಲ್ಲಿ ೧೮೪೮ರಲ್ಲಿ ವೆಸ್ಲಿಯನ್ ಮಿಷನ್ ಮುದ್ರಣಾಲಯ ಪ್ರಾರಂಭವಾಯಿತು. ಬಾಸೆಲ್ ಮಿಷನ್ನಿನವರ ಅಚ್ಚುಕೂಟ ೧೮೩೮ರಷ್ಟು ಹಿಂದೆಯೇ ಮಂಗಳೂರಿನಲ್ಲಿ ಅಸ್ತಿತ್ವದಲ್ಲಿತ್ತು. ಪಾಂಡುರಂಗ ಸೆಟ್ಟಿ ಎಂಬವರು ಈ ಜರ್ಮನ್ ಪಾದ್ರಿಗಳಿಗೆ ಕನ್ನಡದ ಅಚ್ಚುಮೊಳೆಗಳನ್ನು ರೂಪಿಸುವಲ್ಲಿ ನೆರವಾದರು. ಮಂಗಳೂರಿಗೆ ಇಟಾಲಿಯನ್ ರೋಮನ್ ಕ್ಯಾಥೊಲಿಕ್ ಪಾದ್ರಿ ಗಳು ಬಂದಿಳಿದಾಗ ಅವರಿಗೂ ಒಂದು ಅಚ್ಚುಕೂಟ ಆವಶ್ಯಕ ಎನಿ ಸಿತು. ಅದಕ್ಕಾಗಿ ಮೊಳೆಗಳನ್ನು ರೂಪಿಸಲು ಅತ್ತಾವರ ಅನಂತಾಚಾರಿ ಎಂಬವರನ್ನು ಅವರು ನೇಮಿಸಿದರು.

ತಾನು ತಯಾರಿಸಿದ ಅಚ್ಚುಮೊಳೆಗಳನ್ನು ಜನಪ್ರಿಯ ಗೊಳಿಸಲು ಅನಂತಾಚಾರಿ ಕನ್ನಡ ಪ್ರದೇಶಗಳಲ್ಲೆಲ್ಲ ಸಂಚ ರಿಸಿದರು. ಅವರು ಮಂಗಳೂರಿನ ಕೊಡಿಯಾಳಬೈಲ್ ಮತ್ತು ಶಾರದ ಮುದ್ರಣಾಲಯಗಳಿಗೆ ಅಚ್ಚುಮೊಳೆಗಳನ್ನು ತಯಾ ರಿಸಿಕೊಟ್ಟರು. ಅವರು ನೆರವಾದ ಇತರ ಮುದ್ರಣಾಲಯ ಗಳು ಬಾಂಬೆ ಪ್ರೆಸ್, ಗುಜರಾತಿ ಟೈಪ್ ಫೌಂಡ್ರಿ ಮತ್ತು ಧಾರ ವಾಡದ ಕರ್ನಾಟಕ ಮುದ್ರಣಾಲಯ. ತಮ್ಮ ಸಂಚಾರವನ್ನು ಪೂರೈಸಿದ ಅನಂತರ ಅನಂತಾಚಾರಿ ಮಂಗಳೂರಿಗೆ ಹಿಂದಿರುಗಿ ಬಾಸೆಲ್ ಮಿಷನ್ ಪ್ರೆಸ್, ಉಡುಪಿಯ ಪ್ರಭಾಕರ

ಮತ್ತು ಮುಂಬಯಿಯ ನಿರ್ಣಯಸಾಗರ ಮುದ್ರಣಾಲಯಗಳಿಗೆ ಅಚ್ಚುಮೊಳೆಗಳನ್ನು ಸರಬರಾಜು ಮಾಡಿದರು. ಹೀಗೆ ಕಲ್ಲಚ್ಚಿನ ಹಂತದಿಂದ ಅಚ್ಚುಮೊಳೆಯ ಹಂತಕ್ಕೆ ಕನ್ನಡ ಪತ್ರಿಕೋದ್ಯಮ ನಿಧಾನವಾಗಿ ಏರಿತು.

### ಪತ್ರಿಕೋದ್ಯಮ- ಒಂದು ಸಾಹಸ

ಆಗಿನ ಕಾಲದಲ್ಲಿ ಪತ್ರಿಕೋದ್ಯಮ ಒಂದು ಹುಚ್ಚು ಸಾಹಸವೇ ಸರಿ. ಆಗ ಕೇವಲ ಕೆಲವೇ ಮಂದಿ ಅಕ್ಷರಸ್ಥರು. ಸಂಪರ್ಕ ಸಾಧನಗಳ ಕೊರತೆಯ ಜೊತೆಗೆ ಬಡತನವೂ ವ್ಯಾಪಕವಾಗಿತ್ತು. ಆಡಳಿತಶಾಹಿಯೂ ಸ್ವತಂತ್ರ ಪತ್ರಿಕೋದ್ಯಮಕ್ಕೆ ಅವಕಾಶ ನೀಡಲಿಲ್ಲ. ಆ ಕಾಲದಲ್ಲಿ ಸರಕಾರವನ್ನು ಎದುರಿಸುವುದೆಂದರೆ ಬೆಂಕಿಯೊಡನೆ ಸರಸವಾಡಿದಂತೆ. ಅತ್ಯಂತ ಉತ್ಸಾಹದಿಂದ ಪತ್ರಿಕೆಗಳನ್ನು ಸ್ಥಾಪಿಸಿದರೂ ಸ್ವಲ್ಪ ಕಾಲದಲ್ಲೇ ಅವು ಆರ್ಥಿಕ ಸಂಕಷ್ಟಕ್ಕೆ ಈಡಾಗಿ ಮುರುಟಿ ಹೋಗುತ್ತಿದ್ದವು. ಒಟ್ಟಿನಲ್ಲಿ ಪತ್ರಿಕೋದ್ಯಮದ ಬೆಳವಣಿಗೆಗೆ ಯೋಗ್ಯವಾದ ಪರಿಸರ ಇರಲಿಲ್ಲ. ಇದೇ ಅಲ್ಲದೆ, ಪತ್ರಿಕೆಗಳನ್ನು ಆರಂಭಿಸಿದವರಲ್ಲಿ ಬಹುತೇಕ ಮಂದಿ ಉಪಾಧ್ಯಾಯರು ಇಲ್ಲವೇ ಸಾಹಿತ್ಯಾಕಾಂಕ್ಷೆ ಉಳ್ಳವರು. ತಮ್ಮ ಪಾಂಡಿತ್ಯ ಇಲ್ಲವೇ ಧಾರ್ಮಿಕ ವಿಚಾರಗಳನ್ನು ಇತರರಿಗೆ ಅಭಿವ್ಯಕ್ತಿಸಬೇಕೆಂಬ ಮಾನಸಿಕ ಒತ್ತಡಕ್ಕೆ ಒಳಗಾದವರು. ಆದ್ದರಿಂದಲೇ ಕನ್ನಡ ಪತ್ರಿಕೋದ್ಯಮದ ಆರಂಭಕಾಲದಲ್ಲಿ ಧಾರ್ಮಿಕ ಇಲ್ಲವೇ ಸಾಹಿತ್ಯಿಕ ನಿಯತಕಾಲಿಕಗಳೇ ಹೆಚ್ಚಾಗಿದ್ದುವು. ಇವು ಬಹುತೇಕ ಮಾಸಪತ್ರಿಕೆಗಳು. ಸುದ್ದಿ ಪತ್ರಿಕೆಗಳ ಸಂಖ್ಯೆ ತೀರಾ ಕಡಿಮೆ.

### ಸೂರ್ಯೋದಯ ಪ್ರಕಾಶಿಕಾ

ಕನ್ನಡದಲ್ಲಿ ಮೊದಲ ದಿನಪತ್ರಿಕೆ ಸೂರ್ಯೋದಯ ಪ್ರಕಾಶಿಕಾ ಆರಂಭವಾದದ್ದು ೧೮೮೮ರಲ್ಲಿ. ಅದು ಮಂಗಳೂರಿನಿಂದ ಪ್ರಕಟವಾಗುತ್ತಿತ್ತು. ಸಂಪಾದಕರು ಬಿ. ನರಸಿಂಹ ರಾವ್. ಸ್ವಲ್ಪ ಕಾಲದ ಮೇಲೆ ಇದು ವಾರಪತ್ರಿಕೆ ಆಯಿತು. ಆಮೇಲೆ ಬೆಂಗಳೂರಿಗೆ ವರ್ಗವಾಯಿತು. ಅಲ್ಲಿ ಹಾಗೂ ಹೀಗೂ ಕುಂಟುತ್ತ ನಡೆದ ಪತ್ರಿಕೆ ಇಪ್ಪತ್ತನೆಯ ಶತಮಾನದ ಆರಂಭದ ವರ್ಷಗಳಲ್ಲಿ ಅವಸಾನ ಹೊಂದಿತು.

೧೮೫೭ರಲ್ಲಿ ನಡೆದ ಮೊದಲನೆಯ ಸ್ವಾತಂತ್ರ್ಯ ಸಮರದಿಂದ ಕನ್ನಡ ಪತ್ರಿಕೋದ್ಯಮದ ಮೇಲೆ ಹೆಚ್ಚಿನ ಪರಿಣಾಮವೇನೂ ಆದಂತೆ ಕಾಣುವುದಿಲ್ಲ. ಪತ್ರಿಕೆಗಳ ಸಂಖ್ಯೆಯಲ್ಲಾಗಲಿ ಅವುಗಳ ಮಾರಾಟದಲ್ಲಾಗಲಿ ಏರಿಕೆಯಾದ ಬಗ್ಗೆ ಯಾವ ಮಾಹಿತಿಯೂ ದೊರಕುವುದಿಲ್ಲ. ಮಂಗಳೂರ ಸಮಾಚಾರ ವಿದೇಶೀ ಯುದ್ಧ ವಾರ್ತೆಗಳನ್ನು ನೀಡುತ್ತಿತ್ತಾದರೂ ಅದರ ಪ್ರಭಾವಕ್ಕೆ ಓದುಗರು ಎಷ್ಟರ ಮಟ್ಟಿಗೆ ಒಳಗಾಗಿದ್ದರು ಎಂಬುದು ಸಂದೇಹಾಸ್ಪದ.

### ಸುಬುದ್ಧಿ ಪ್ರಕಾಶ

ಕರಾವಳಿಯಿಂದ ಉತ್ತರ ಕರ್ನಾಟಕಕ್ಕೆ ಪತ್ರಿಕೋದ್ಯಮ ಹಬ್ಬಿತು. ಮರಾಠಿಗರ ಪ್ರಭಾವ ವಲಯದಲ್ಲಿದ್ದ ಈ ಪ್ರದೇಶದಲ್ಲಿ ಕನ್ನಡ ಪತ್ರಿಕೆಗಳು ಹಳೆಯ ಮೈಸೂರು ಪ್ರದೇಶಕ್ಕಿಂತ ಮೊದಲು ಆರಂಭವಾದ್ದು ವಿಸ್ಮಯವೇ ಸರಿ. ಬೆಳಗಾವಿಯಲ್ಲಿ ೧೮೪೯ರಲ್ಲಿ ಸುಬುದ್ಧಿ ಪ್ರಕಾಶ ಎಂಬ ಮಾಸಪತ್ರಿಕೆ ಪ್ರಕಟವಾಗುತ್ತಿತ್ತು. ಅದು ೧೮೫೭ರಲ್ಲೂ ಜೀವಿಸಿತ್ತು ಎನ್ನುವುದಕ್ಕೆ ಸಾಕ್ಷ್ಯವಿದೆ. ಈ ಪತ್ರಿಕೆಯ ಮುದ್ರಣಕ್ಕಾಗಿ ಸಾಂಗ್ಲಿಯ ಅರಸ ಅಪ್ಪಾ ಸಾಹೇಬ್ ಸಾಂಗ್ಲಿಕರ್ ಸುಬುದ್ಧಿ ಪ್ರಕಾಶ ಮುದ್ರಣಾಲಯವನ್ನು ದಾನ ನೀಡಿದರೆಂಬ ಉಲ್ಲೇಖವಿದೆ. ೧೮೫೭ರಲ್ಲಿ ಖಿರೂ ಶೇಷೂ ಎಂಬುವರು ಅದರ ಸಂಪಾದಕರಾಗಿದ್ದರು. ಈ ಮೊದಲು ಪತ್ರಿಕೆಯನ್ನು ನಡೆಸಿದವರು ಯಾರು ಎನ್ನುವುದು ತಿಳಿದುಬಂದಿಲ್ಲ. ರಾಜಾಶ್ರಯ ಇಲ್ಲದಿದ್ದರೆ ಈ ಪತ್ರಿಕೆ ಅಷ್ಟು ಕಾಲ ನಡೆಯುವುದು ಕಷ್ಟಕರವಾಗಿರುತ್ತಿತ್ತು. ಜ್ಞಾನ ಪ್ರಕಾಶವೆಂಬ ಇನ್ನೊಂದು ಪತ್ರಿಕೆ ೧೮೫೫ರಲ್ಲಿ ಪ್ರಕಟವಾಗುತ್ತಿತ್ತು.

### ಮೈಸೂರು ವೃತ್ತಾಂತ ಬೋಧಿನಿ

ಹಳೆಯ ಮೈಸೂರಿನಲ್ಲಿ ಇತರ ಭಾಗಗಳಿಗಿಂತ ಸ್ವಲ್ಪ ತಡವಾಗಿ ಪತ್ರಿಕೋದ್ಯಮ ಆರಂಭವಾಯಿತು. ಬೆಂಗಳೂರಿನಲ್ಲಿ ಪ್ರಕಟವಾಗುತ್ತಿದ್ದ ಮೈಸೂರು ವೃತ್ತಾಂತ ಬೋಧಿನಿ ಈ ಭಾಗದ ಮೊದಲ ಪತ್ರಿಕೆ ಎನ್ನಲಾಗಿದೆ. ಸರಿಸುಮಾರು ೧೮೫೯ರಲ್ಲಿ ಯುರೋಪಿಯನ್ನರ ಪ್ರಯತ್ನದಿಂದ ಉದಯವಾದ ಈ ಪತ್ರಿಕೆ ಸ್ವಲ್ಪ ಕಾಲದ ಅನಂತರ ಭಾರತೀಯ ಮಾಲೀಕತ್ವಕ್ಕೆ ಒಳಪಟ್ಟಿತು. ಎರಡನೆಯ ಪತ್ರಿಕೆ ಕರ್ನಾಟಕ ಪ್ರಕಾಶಿಕಾ. ಇವೆರಡೂ ಮೊದಲಲ್ಲಿ ರಾಜಾಶ್ರಯದಲ್ಲಿದ್ದ ಪತ್ರಿಕೆಗಳು. ಅನಂತರ ಪ್ರಕಾಶಿಕಾ, ಅಧಿಕಾರಿಗಳ ಅವಕೃಪೆಗೆ ಈಡಾಗಿ ಏಳುಬೀಳುಗಳಿಗೆ ಒಳಗಾಗಿ ಆ ಶತಮಾನದ ಅಂತ್ಯದ ವೇಳೆಗೆ ನಿಂತುಹೋಯಿತು. ಭಾಷ್ಯಂ ತಿರುಮಲಾಚಾರ್ಯ ಮತ್ತು ಭಾಷ್ಯಂ ಭಾಷ್ಯಾಚಾರ್ಯರು ಇದರ ಹಿಂದಿದ್ದ ಶಕ್ತಿಗಳು.

ಸ್ವಲ್ಪ ಕಾಲದ ಅನಂತರ ಕ್ರೈಸ್ತ ಪಾದ್ರಿಗಳು ಮತ್ತೆ ಕನ್ನಡ ಪತ್ರಿಕಾರಂಗವನ್ನು ಪ್ರವೇಶಿಸಿದರು. ಹರ್ಮನ್ ಮೋಗ್ಲಿಂಗ್ ನೇತೃತ್ವದ "ಕನ್ನಡ ವಾರ್ತಿಕ" ವಾರಪತ್ರಿಕೆ ೧೮೫೭ರಲ್ಲಿ ಮಂಗಳೂರಿನಲ್ಲಿ ಸ್ಥಾಪಿತವಾಯಿತು. ಅಚ್ಚಿನ ಮೊಳೆಗಳನ್ನು ಮೊದಲಬಾರಿಗೆ ಮುದ್ರಣಕ್ಕಾಗಿ ಬಳಸಿದ ಕೀರ್ತಿ ಈ ಪತ್ರಿಕೆಗೆ ಸಲ್ಲಬೇಕು. ವಾರ್ತಿಕ ಒಂದನೆಯ ಮಹಾಯುದ್ಧದ ಕಾಲದಲ್ಲಿ ಹುಟ್ಟಿದ್ದರಿಂದ ಇದರ ಮೂಲ ಉದ್ದೇಶ ಯುದ್ಧದ ಸುದ್ದಿಗಳ ಪ್ರಕಟಣೆಯೇ ಆಗಿದ್ದಿರಬಹುದು. ಹೊಸ ಮಾದರಿಯ ಮುದ್ರಣದಿಂದ ಪತ್ರಿಕೆ ಸ್ವಲ್ಪ ಭಿನ್ನವಾಗಿಯೇ ಕಾಣಿಸಿದರೂ ಇದು ಬಹಳ ಕಾಲ ಉಳಿಯಲಿಲ್ಲ. ಮೋಗ್ಲಿಂಗನ ಮೇಲೆ ಧಾರ್ಮಿಕ ಚಟುವಟಿಕೆಗಳ ಒತ್ತಡ ಇದ್ದುದೇ ಇದಕ್ಕೆ ಕಾರಣ ಇರಬಹುದು. ೧೮೮೮ರ ವೇಳೆಗೆ ಕನ್ನಡ ಪ್ರದೇಶದ ಇತರ ನಗರಗಳಾದ ಮಂಗಳೂರು, ಮೈಸೂರು, ಧಾರವಾಡ, ಬೆಳಗಾವಿ ಮತ್ತು ಬೆಂಗಳೂರುಗಳಲ್ಲಿ ಪರಿಮಿತ ಸಂಖ್ಯೆಯಲ್ಲಿ ಪತ್ರಿಕೆಗಳು ಕಾಣಿಸಿಕೊಂಡವು. ಬೆಳಗಾವಿಯಲ್ಲಿ ಪ್ರಕಟವಾಗುತ್ತಿದ್ದ ಜ್ಞಾನಬೋಧಕದ ಮುದ್ರಣ ನಡೆಯುತ್ತಿದ್ದುದು ಧಾರವಾಡದ ಗೋವಿಂದ ಪ್ರಭಾಕರ ಜೋಷಿಯವರ ಸನ್ಮಾರ್ಗದರ್ಶಕ ಮುದ್ರಣಾಲಯದಲ್ಲಿ. ಈ ಕಲ್ಲಚ್ಚಿನ ಪತ್ರಿಕೆಯ ಸಾಹಸದ ಹಿಂದೆ ಸೂತ್ರಧಾರರಾಗಿದ್ದವರು ವೆಂಕಟರಂಗೋ ಕಟ್ಟಿ. ಇದರಲ್ಲಿ ಮರಾಠಿ ಲೇಖನಗಳೂ ಇರುತ್ತಿದ್ದವು. ಸುಮಾರು ೧೮೬೩ರ ವೇಳೆಗೆ ಮುದ್ರಣಕಾರ್ಯ ಬೆಳಗಾವಿಗೆ ವರ್ಗವಾಯಿತು.

ಆ ಕಾಲದಲ್ಲಿ ಬೆಳಗಾವಿಯ ಶಿಕ್ಷಕರ ತರಬೇತಿ ಕಾಲೇಜು ಎಲ್ಲ ಬಗೆಯ ಸಾಹಿತ್ಯ ಚಟುವಟಿಕೆಗಳ ಕೇಂದ್ರವಾಗಿತ್ತು. ಅಲ್ಲಿ ಪತ್ರಿಕೋದ್ಯಮದ ಪ್ರಯೋಗವೂ ನಡೆಯಿತು. ವೃತ್ತಿಯಿಂದ ಶಿಕ್ಷಕರಾದವರು ವೆಂಕಟರಂಗೋ ಕಟ್ಟಿ.

ಮಂಗಳೂರಿನಲ್ಲಿ ೧೮೬೩ರಲ್ಲಿ ಪ್ರಾರಂಭವಾದ ಪತ್ರಿಕೆ ಪಶ್ಚಿಮ ವರ್ತಮಾನ ಸಂಗ್ರಹ. ಅಲ್ಪಾಯುವಾದ ಈ ಪತ್ರಿಕೆಗೆ ರೆವರೆಂಡ್ ಜಾನ್ ಮಾಡ್ ಸಂಪಾದಕರಾಗಿದ್ದರು. ಕ್ರೈಸ್ತ ಪಾದ್ರಿಗಳ ಮತ್ತೊಂದು ಪತ್ರಿಕೆ 'ವೃತ್ತಾಂತ

ಪತ್ರಿಕೆ' ೧೮೮೭ರಲ್ಲಿ ಮೈಸೂರಿನಲ್ಲಿ ಆರಂಭಗೊಂಡ ಈ ಪತ್ರಿಕೆ ಅರ್ಧಶತಮಾನಕ್ಕೂ ಹೆಚ್ಚು ಕಾಲ ಬದುಕಿತ್ತು.

## ಕನ್ನಡ ಶಾಲಾ ಪತ್ರಿಕೆ

ಉತ್ತರ ಕರ್ನಾಟಕದಲ್ಲಿ ಪತ್ರಿಕಾರಂಗವನ್ನು ಪ್ರವೇಶಿಸಿದ ಮತ್ತೊಬ್ಬ ವ್ಯಕ್ತಿ ಡೆಪ್ಯೂಟಿ ಚನ್ನಬಸಪ್ಪ. ಅವರ "ಕನ್ನಡ ಶಾಲಾ ಪತ್ರಿಕೆ" ೧೮೬೫ರಲ್ಲಿ ಬೆಳಗಾವಿಯಲ್ಲಿ ಜನ್ಮ ತಳೆದು ಪದೇ ಪದೇ ಬೇರೆ ಬೇರೆ ಹೆಸರು ಪಡೆದ ಈ ಪತ್ರಿಕೆ ಇಂದಿಗೂ 'ಜೀವನ ಶಿಕ್ಷಣ' ಎಂಬ ಅಭಿಧಾನದಿಂದ ನಡೆಯುತ್ತಿದೆ. ಬಾಸೆಲ್ ಮಿಷನ್ನಿನವರ 'ಸಭಾಪತ್ರ' ೧೮೭೮ರಲ್ಲಿ ಉಡುಪಿಯಲ್ಲಿ ಆರಂಭವಾಯಿತು. ಅವರದೇ ಮತ್ತೊಂದು ಪತ್ರಿಕೆ "ಸತ್ಯದೀಪಿಕೆ". ಬೆಳಗಾವಿಯಲ್ಲಿ ೧೮೭೪ರಲ್ಲಿ ಕಾಣಿಸಿಕೊಂಡ ಪತ್ರಿಕೆ 'ಕರ್ನಾಟಕ ಜ್ಞಾನಮಂಜರಿ'. ಉತ್ತಮ ದರ್ಜೆಯ ಲೇಖನಗಳನ್ನು ಪ್ರಕಟಿಸಿದ ಖ್ಯಾತಿ ಇದರದು.

## ಹಿತಬೋಧಿನಿ

ಹಳೆಯ ಮೈಸೂರಿನಲ್ಲಿ ಹೆಸರು ಗಳಿಸಿದ ಪತ್ರಿಕೆ 'ಹಿತಬೋಧಿನಿ'. ಎಂ. ಎಸ್. ಪುಟ್ಟಣ್ಣನವರ ಈ ಮಾಸಪತ್ರಿಕೆಯ ಸ್ಥಾಪನೆ ಆದದ್ದು ೧೮೮೩ರಲ್ಲಿ. ಕೆಲವು ತಿಂಗಳುಗಳ ಮೇಲೆ ಪತ್ರಿಕೆ ನಡೆಸುವ ಜವಾಬ್ದಾರಿ ವೃದ್ಧಪಿತಾಮಹ ಎಂ. ವೆಂಕಟಕೃಷ್ಣಯ್ಯನವರ ಹೆಗಲಿಗೇರಿತು. ಅವರು ಬಹಳ ಶ್ರಮವಹಿಸಿ ಪತ್ರಿಕೆಯನ್ನು ನಡೆಸಿದರು. ಈ ಮುನ್ನ ೧೮೭೯ರಷ್ಟು ಹಿಂದೆಯೇ ಧಾರವಾಡದಲ್ಲಿ 'ಚಂದ್ರೋದಯ' ಪ್ರಕಟವಾಗುತ್ತಿತ್ತು. ಸಂಪಾದಕ ಗದಿಗೆಯ್ಯ ಹುಚ್ಚಯ್ಯ. ಪರಿಸರ ರಕ್ಷಣೆಗೆ ಹೋರಾಡಿದ ಪತ್ರಿಕೆಯಿದು. ಪ್ರತಿ ಶನಿವಾರ ಪ್ರಕಟವಾಗುತ್ತಿದ್ದ ಇದರಲ್ಲಿ ಜ್ಯೋತಿಷ್ಯ ಮತ್ತು ಸಮಕಾಲೀನ ಸಾಮಾಜಿಕ ನಿಯಮಗಳ ವಿಮರ್ಶೆ ಇರುತ್ತಿದ್ದುವು. ಆಲೂರು ವೆಂಕಟರಾಯರೂ ಇದಕ್ಕೆ ಲೇಖನಗಳನ್ನು ಬರೆಯುತ್ತಿದ್ದರು. ಗದಿಗೆಯ್ಯ ಹುಚ್ಚಯ್ಯನವರ ನಿಧನಾನಂತರ ಅವರ ಮಗ ಗದಿಗೆಯ್ಯ ಹುಚ್ಚಯ್ಯ ಹೊನ್ನಾಪುರ ಮಠ ಎಂಬುವರು ಪತ್ರಿಕೆಯನ್ನು ನಡೆಸಿದರು.

## ರಾಷ್ಟ್ರೀಯ ಪತ್ರಿಕೋದ್ಯಮ

ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಸ್ಥಾಪನೆಯಿಂದ ರಾಷ್ಟ್ರೀಯ ಪತ್ರಿಕೋದ್ಯಮದ ಬೆಳವಣಿಗೆಗೆ ಉತ್ತೇಜನ ದೊರಕಿತು. ಆದರೂ ಕನ್ನಡ ಪ್ರದೇಶದಲ್ಲಿ ತತ್‌ಕ್ಷಣದ ಪರಿಣಾಮವೇನೂ ಆಗಲಿಲ್ಲ. ಹತ್ತೊಂಭತ್ತನೆಯ ಶತಮಾನದ ಅಂತ್ಯದಲ್ಲಿ ರಾಷ್ಟ್ರೀಯವಾದಿ ಪತ್ರಿಕೆಗಳು ಹುಟ್ಟಿಕೊಂಡವು. ಮುದವೀಡು ಕೃಷ್ಣರಾಯರ ಕರ್ನಾಟಕ ವೈಭವ ಮತ್ತು ಬಿ. ಸಿ. ಶ್ರೀನಿವಾಸ ಅಯ್ಯಂಗಾರ್ಯರ ಮೈಸೂರು ದೇಶಾಭಿಮಾನಿ, ಇವು ಆಳರಸರ ವಿರುದ್ಧ ಸೆಣಸಿದ ಪತ್ರಿಕೆಗಳು. ಕರ್ನಾಟಕ ವೈಭವ ಪತ್ರಿಕೆ ಬ್ರಿಟಿಷ್ ಆಧಿಪತ್ಯದ ಪ್ರಾಂತ್ಯದಲ್ಲಿ ಇದ್ದುದರಿಂದ ಪಾರಾಯಿತು. ಆದರೆ ದೇಶಾಭಿಮಾನಿ ಆಗಿನ ಮೈಸೂರಿನ ದಿವಾನ್ ಶೇಷಾದ್ರಿ ಅಯ್ಯರ್ ಅವರ ಆಗ್ರಹಕ್ಕೆ ಪಕ್ಕಾಯಿತು. ಮುದ್ರಣಕೂಟ ಸರಕಾರದ ಪಾಲಾಯಿತು. ಮತ್ತೆ ಪತ್ರಿಕೆ ಆರಂಭಿಸಲು ಶ್ರೀನಿವಾಸ ಅಯ್ಯಂಗಾರ್ಯರು ಮಾಡಿದ ಪ್ರಯತ್ನಗಳನ್ನೆಲ್ಲ ಸರಕಾರ ವಿಫಲಗೊಳಿಸಿತು. ಅಧಿಕಾರಿಶಾಹಿಯ ಹಿಡಿತ ಪ್ರಬಲವಾಗಿದ್ದ ಆಡಳಿತ ಆಗಿನದು. ಸೊಲ್ಲೆತ್ತಿದವರ ದಮನ ಖಂಡಿತವಾಗಿತ್ತು. ಎಂ. ಬಿ. ಶ್ರೀನಿವಾಸ ಅಯ್ಯಂಗಾರ್ ಮತ್ತು ಎಂ. ಬಿ. ಗೋಪಾಲ ಅಯ್ಯಂಗಾರ್ ಅವರ 'ನಡಗನ್ನಡಿ' ಅರ್ಧವಾರ ಪತ್ರಿಕೆ. ಸರಕಾರದ ವಿರುದ್ಧ ಹೋರಾಡಿದ ಈ ಪತ್ರಿಕೆಯನ್ನು ಬಹಳ ಕಾಲ ಉಳಿಯಲು ಅಧಿಕಾರಿಗಳು ಬಿಡಲಿಲ್ಲ. ಬಿ. ಸಿ. ಶ್ರೀನಿವಾಸ ಅಯ್ಯಂಗಾರ್ ಅವರು ಸ್ವಲ್ಪ ಕಾಲ ತುರಂಗವಾಸವನ್ನೂ ಅನುಭವಿಸಿದರು.

## ತಾತಯ್ಯನವರು

ಸರಕಾರದ ವಿರುದ್ಧ ಸಡ್ಡು ಹೊಡೆದ ಮತ್ತೊಬ್ಬ ಧೀರವ್ಯಕ್ತಿ ವೃದ್ಧಪಿತಾಮಹ ಎಂ. ವೆಂಕಟಕೃಷ್ಣಯ್ಯನವರು. ಅವರು ೧೮೮೫ರಲ್ಲಿ "ವೃತ್ತಾಂತ ಚಿಂತಾಮಣಿ" ಎಂಬ ಪತ್ರಿಕೆಯನ್ನು ನಡೆಸಿದರು. ಅವರ ಇತರ ಪತ್ರಿಕೆಗಳು ಸಾಧ್ವಿ, ಪೌರ ಸಾಮಾಜಿಕ ಪತ್ರಿಕೆ ಮತ್ತು ಸಂಪದಭ್ಯುದಯ. ಇವು ಅನೇಕ ತರುಣ ಪತ್ರಕರ್ತರನ್ನು ತಯಾರಿಸಿದವು. ಪತ್ರಿಕೋದ್ಯಮ ಶಿಕ್ಷಣದಲ್ಲಿ ತಾತಯ್ಯನವರಿಗೆ ಅತೀವ ಆಸಕ್ತಿಯಿತ್ತು. ಪತ್ರಿಕೋದ್ಯಮ ಶಿಕ್ಷಣ ಆರಂಭಿಸಲು ಅವರು ಮೈಸೂರು ವಿಶ್ವವಿದ್ಯಾನಿಲಯವನ್ನು ಒತ್ತಾಯಿಸಿದರಲ್ಲದೆ ಅದಕ್ಕಾಗಿ ೨೦೦೦ ರೂಪಾಯಿಗಳನ್ನು ದಾನ ಮಾಡಿದರು. ಅದರಿಂದ ಬರುವ ಬಡ್ಡಿಯಿಂದ ಪ್ರತಿವರ್ಷ ಈ ವಿಷಯದಲ್ಲಿ ಅತ್ಯಧಿಕ ಅಂಕ ಗಳಿಸುವ ವಿದ್ಯಾರ್ಥಿಗೆ ಬಹುಮಾನ ನೀಡಬೇಕು ಎಂದು ಕೋರಿದರು. ಅವರ ಬೆಂಬಲಕ್ಕೆ ನಿಂತವರಲ್ಲಿ ಡಿ. ವಿ. ಗುಂಡಪ್ಪ, ಪಿ. ಆರ್. ರಾಮಯ್ಯ, ತಿರುಮಲೆ ತಾತಾಚಾರ್ಯ ಶರ್ಮ, ವೀರಕೇಸರಿ ಸೀತಾರಾಮ ಶಾಸ್ತ್ರಿ, ಸಿದ್ಧವನ ಹಳ್ಳಿ ಕೃಷ್ಣಶರ್ಮ, ಬಿ. ಎನ್. ಗುಪ್ತ ಇವರು ಮುಖ್ಯರು. ಅವರೆಲ್ಲರ ಸತತ ಒತ್ತಡದ ಫಲವಾಗಿ ೧೯೫೦ರಲ್ಲಿ ಮಹಾರಾಜಾ ಕಾಲೇಜಿನಲ್ಲಿ ಪತ್ರಿಕೋದ್ಯಮ ಶಾಸ್ತ್ರವನ್ನು ಐಚ್ಛಿಕ ವಿಷಯವಾಗಿ ಆರಂಭಿಸಲಾಯಿತು.

## ವೃತ್ತ ಪತ್ರಿಕಾ ಶಾಸನ

ಇಪ್ಪತ್ತನೆಯ ಶತಮಾನದ ಮೊದಲ ವರ್ಷಗಳಲ್ಲಿ, ಪತ್ರಿಕೆಗಳು ಮತ್ತು ನಿಯತಕಾಲಿಕಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಳ್ಳಲಾರಂಭಿಸಿದವು. ಸರಕಾರದ ವಿರುದ್ಧ ಜನಮತ ರೂಪಿಸಲು ಪತ್ರಿಕೆಗಳು ಯತ್ನಿಸಬಹುದೆಂಬ ಶಂಕೆ ಅಧಿಕಾರಿಗಳಿಗೆ ಇದ್ದೇ ಇತ್ತು. ಆದ್ದರಿಂದ ಮೊಳಕೆಯಲ್ಲೇ ಬಂಡಾಯ ಪ್ರವೃತ್ತಿಯನ್ನು ಚಿವುಟಿ ಹಾಕಲು ಅವರು ಯತ್ನಿಸಿದರು. ಪರಿಣಾಮವಾಗಿ ೧೯೦೮ರ ವೃತ್ತಪತ್ರಿಕಾ ಶಾಸನ ಜಾರಿಗೆ ಬಂತು. ಸುದ್ದಿಪತ್ರಿಕೆ ಪ್ರಕಟಿಸಲು ಪೂರ್ವ ಅನುಮತಿ ಅಗತ್ಯ ಎಂಬ ಕಠಿಣ ನಿಯಮ ಹಾಕಲಾಯಿತು. ಸರಕಾರ ಯಾವಾಗ ಬೇಕಾದರೂ ಅನುಮತಿಯನ್ನು ಹಿಂತೆಗೆದುಕೊಳ್ಳಬಹುದಿತ್ತು. ಹೀಗಾಗಿ ದೆಮಾಕ್ಲೀಸನ ಕತ್ತಿ ಯಾವಾಗಲೂ ಪತ್ರಕರ್ತರ ತಲೆಯ ಮೇಲೆ ತೂಗುತ್ತಿತ್ತು.

ಈ ಕರಾಳ ಪತ್ರಿಕಾ ಶಾಸನವನ್ನು ಪ್ರತಿಭಟಿಸಿ ಹಳೆಯ ಮೈಸೂರಿನ ಬಹುತೇಕ ಪತ್ರಿಕೆಗಳು ಪ್ರಕಟಣೆಯನ್ನು ನಿಲ್ಲಿಸಿದವು. ಯಜಮಾನ್ ವೀರಸಂಗಪ್ಪನವರ ಮೈಸೂರು ಸ್ಟಾರ್ ಮತ್ತು ಕ್ರೈಸ್ತ ಪಾದ್ರಿಗಳ ವೃತ್ತಾಂತ ಪತ್ರಿಕೆ ಆಗಿನ ಅಧಿಕಾರೀಪರ ಪತ್ರಿಕೆಗಳು. ಇವೆರಡನ್ನು ಬಿಟ್ಟರೆ ಉಳಿದೆಲ್ಲ ಪತ್ರಿಕೆಗಳು ಒಂದೇ ನಿಲುವನ್ನು ತಳೆದವು. ಆದರೂ ಸರ್ಕಾರ ಜಗ್ಗಲಿಲ್ಲ. ಪತ್ರಿಕೆಗಳು ಮತ್ತು ಸರ್ಕಾರದ ನಡುವಣ ಬಾಂಧವ್ಯ ಹಳಸಿತು. ಪತ್ರಿಕಾ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅಗ್ರಗಣ್ಯರಲ್ಲಿ ಎಂ. ವೆಂಕಟಕೃಷ್ಣಯ್ಯನವರ (ತಾತಯ್ಯ) ಪಾತ್ರ ದೊಡ್ಡದು. ಕರಾವಳಿಯ ಶ್ರೀಕೃಷ್ಣಸೂಕ್ತಿ ಸಹ ಮೈಸೂರು ಸರಕಾರದ ಶಾಸನವನ್ನು ಖಂಡಿಸಿತು. ಉತ್ತರ

ಕರ್ನಾಟಕದ ಪತ್ರಿಕೆಗಳೇನೂ ಇದರಲ್ಲಿ ಹಿಂದೆ ಬೀಳಲಿಲ್ಲ. ಮೈಸೂರಿನ ಸರ್ಕಾರ ವಿರೋಧೀ ಪತ್ರಿಕೆಗಳಿಗೆ ಅವೂ ಬೆಂಬಲ ಸೂಚಿಸಿದವು.

೧೯ನೆಯ ಶತಮಾನದಲ್ಲಿ ಸೂರ್ಯೋದಯ ಪ್ರಕಾಶಿಕಾ ವನ್ನು ಬಿಟ್ಟರೆ ದೈನಿಕವನ್ನು ಆರಂಭಿಸುವ ಸಾಹಸದ ಗೋಜಿಗೆ ಯಾರೂ ಹೋಗಿರಲಿಲ್ಲ. ಡಿ. ವಿ. ಗುಂಡಪ್ಪನವರು ಬೆಂಗಳೂರಿನಲ್ಲಿ 'ಭಾರತಿ' ದಿನಪತ್ರಿಕೆಯನ್ನು ಆರಂಭಿಸಿದರು. ಆದರೆ ಅದೂ ವೃತ್ತಪತ್ರಿಕಾ ನಿಯಂತ್ರಣ ಶಾಸನದಡಿಯಲ್ಲಿ, ಸೂತುಹೋಯಿತು.

ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ೧೯೧೨ರಲ್ಲಿ ಮೈಸೂರಿನ ದಿವಾನರಾದರು. ಸಂವೇದನಾಶೀಲರೂ ಮತ್ತು ಜನತಂತ್ರ ವಾದಿಯೂ ಆಗಿದ್ದ ಅವರು ಪತ್ರಿಕೆಗಳ ವಿಷಯದಲ್ಲಿ ಉದಾರ ಭಾವನೆ ಹೊಂದಿದ್ದರು. ಸರಕಾರದ ಆಜ್ಞೆಯ ವಿರುದ್ಧ ಪತ್ರಿಕೆಗಳು ಅರೆ ನ್ಯಾಯಾಂಗ ಮನವಿಮಾಡಿ ಕೊಳ್ಳಲು ಅವರು ಅವಕಾಶ ನೀಡಿದರು. ಅವರ ಕಾಲದಲ್ಲಿ, ಅನೇಕ ಪತ್ರಿಕೆಗಳು ಪುನರುಜ್ಜೀವಗೊಂಡವು.

## ಹಳೇ ಮೈಸೂರಿನ ಪತ್ರಿಕೆಗಳು

ಹಳೆಯ ಮೈಸೂರು ಪ್ರದೇಶದಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆ ಪೂರ್ಣಪ್ರಮಾಣದಲ್ಲಿ ಬೆಳೆದಿರಲಿಲ್ಲ. ಮೈಸೂರು ಕಾಂಗ್ರೆಸ್ಸಿನ ಸ್ಥಾಪನೆ ಆದದ್ದೇ ೧೯೩೮ರಲ್ಲಿ. ಅಲ್ಲಿಯ ವರೆಗೂ ರಾಷ್ಟ್ರೀಯ ಕಾಂಗ್ರೆಸ್ ಇಲ್ಲಿ ಸಣ್ಣ ಪ್ರಮಾಣದಲ್ಲಿ ಜಿಲ್ಲಾ ಸಮಿತಿಯ ಮಟ್ಟದಲ್ಲಿ ಕಾರ್ಯ ನಡೆಸುತ್ತಿತ್ತು. ೧೯೨೦ರಿಂದ ಅಸ್ತಿತ್ವದಲ್ಲಿದ್ದ, ತುಮಕೂರಿನಿಂದ ಪ್ರಕಟವಾಗುತ್ತಿದ್ದ ಕೆ. ರಂಗ ಅಯ್ಯಂಗಾರ್ ಅವರ ಮೈಸೂರು ಕ್ರಾನಿಕಲ್ ಕಾಂಗ್ರೆಸ್ಸಿನ ಧ್ಯೇಯೋದ್ದೇಶಗಳನ್ನು ಬಿಂಬಿಸುತ್ತಿದ್ದ ಇಂಗ್ಲಿಷ್ ಕನ್ನಡ ಪತ್ರಿಕೆ. ಅದನ್ನು ತಮ್ಮ ಸ್ವಾಮ್ಯಕ್ಕೆ ಪಡೆದುಕೊಂಡ ತಿ.ತಾ. ಶರ್ಮ ವಿಶ್ವ ಕರ್ನಾಟಕ ಎಂದು ಅದಕ್ಕೆ ಹೆಸರಿಟ್ಟರು. ಈ ವಾರ ಪತ್ರಿಕೆ ಮುಂದೆ ದಿನಪತ್ರಿಕೆ ಆವೃತ್ತಿಯನ್ನೂ ಹೊರಡಿಸಿತು. ವಿಶ್ವ ಕರ್ನಾಟಕ ಪತ್ರಿಕೆ ತಿ. ತಾ. ಶರ್ಮ ಮತ್ತು ಸಿದ್ದವನಹಳ್ಳಿ ಕೃಷ್ಣಶರ್ಮರ ನೇತೃತ್ವದಲ್ಲಿ ರಾಷ್ಟ್ರೀಯ ಆಂದೋಲನದಲ್ಲಿ ಮುಖ್ಯ ಭೂಮಿಕೆಯನ್ನು ನಿರ್ಮಿಸಿತು. ಕನ್ನಡ ಪತ್ರಿಕೋದ್ಯಮಕ್ಕೆ ವಿಶ್ವಕರ್ನಾಟಕದ ಕಾಣಿಕೆ ಅದ್ಭುತವಾದದ್ದು.

ಅದೇ ಕಾಲಕ್ಕೆ ಪ್ರಾರಂಭವಾದ ತಾಯಿನಾಡು ದಿನಪತ್ರಿಕೆ ಕನ್ನಡ ಪತ್ರಿಕೋದ್ಯಮದಲ್ಲಿ ಒಂದು ಮೈಲಿಗಲ್ಲು. ಪಿ. ಆರ್. ರಾಮಯ್ಯನವರ ಸಂಪಾದಕತ್ವದಲ್ಲಿ ಬೆಂಗಳೂರಿನಲ್ಲಿ ದಿನಪತ್ರಿಕೆಯಾಗಿ ಪ್ರಕಟವಾಗುತ್ತಿದ್ದ ತಾಯಿನಾಡು ಹಳೇ ಮೈಸೂರಿನ ಜನಪ್ರಿಯ ಪತ್ರಿಕೆಯಾಗಿತ್ತು. ಮೂರು ದಶಕಗಳ ಕಾಲ ಪ್ರಕಟವಾದ ಪತ್ರಿಕೆ ಅನೇಕ ವಿಷಯಗಳಲ್ಲಿ ವೈಶಿಷ್ಟ್ಯ ಪಡೆದಿತ್ತು.

ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯ ಪಾತ್ರ ವಹಿಸಿದ ಮತ್ತೊಂದು ಪತ್ರಿಕೆ ಪ್ರಜಾಮತ. ಅದರ ಹುಟ್ಟು ಮದರಾಸಿನಲ್ಲಿ. ಆಮೇಲೆ ಅದು ಬೆಂಗಳೂರಿಗೆ ವರ್ಗವಾಯಿತು. ಅದರ ಸಂಪಾದಕ-ಪ್ರಕಾಶಕ ಬಿ. ಎನ್. ಗುಪ್ತರನ್ನು ಮೈಸೂರು ಪ್ರದೇಶದವರಲ್ಲವೆಂಬ ನೆವದಿಂದ ಬೆಂಗಳೂರಿನಿಂದ ಗಡೀಪಾರು ಮಾಡಲಾಯಿತು. ಹುಬ್ಬಳ್ಳಿಗೆ ಗುಳೆಹೋದ ಗುಪ್ತಾ ಅಲ್ಲಿಂದ ಪತ್ರಿಕೆ ಪ್ರಕಟಿಸಿದರು. ಮೈಸೂರು ಪ್ರದೇಶದಲ್ಲಿ ಪತ್ರಿಕೆ ಪ್ರಸಾರ ನಡೆಯಿತು. ಸರಕಾರ ಅದನ್ನು ನಿರ್ಬಂಧಿಸಿತು. ವಾತಾವರಣ ತಿಳಿಯಾದ ಅನಂತರ ಬೆಂಗಳೂರಿಗೆ ವಾಪಸಾಗಲೂ ಅವರಿಗೆ ಅನುಮತಿ ನೀಡಲಾಯಿತು.

ಪ್ರಜಾಮತವೇ ಅಲ್ಲದೆ 'ಜನವಾಣಿ' ದಿನಪತ್ರಿಕೆ, ಜನಪ್ರಗತಿ, ಎಂಬ ವಾರಪತ್ರಿಕೆ ಮತ್ತು 'ಮಲ್ಲಿಗೆ' ಮಾಸಿಕಗಳನ್ನು ನಡೆಸಿದ ಬಿ. ಎನ್. ಗುಪ್ತಾ ವೆಂಕಟಕೃಷ್ಣಯ್ಯನವರಂತೆಯೇ ಪತ್ರಿಕೋದ್ಯಮ ಶಿಕ್ಷಣದಲ್ಲಿ ಅಪಾರ ಆಸಕ್ತಿ ತಳೆದವರು. ಅವರ ಜನ್ಮಭೂಮಿ ಟ್ರಸ್ಟ್ ಮೈಸೂರು ವಿಶ್ವವಿದ್ಯಾನಿಲಯಕ್ಕೆ ವಿಶೇಷ ಉಪನ್ಯಾಸಗಳನ್ನು ಏರ್ಪಡಿಸಲು ದೇಣಿಗೆ ನೀಡಿದೆ. ವೀರಕೇಸರಿ ಸೀತಾರಾಮ ಶಾಸ್ತ್ರಿಗಳ ವೀರಕೇಸರಿ, ಹೆಚ್. ಕೆ. ವೀರಣ್ಣ ಗೌಡರ ವಾರ್ತಾ ದಿನಪತ್ರಿಕೆಗಳು ರಾಷ್ಟ್ರೀಯ ಆಂದೋಳನದಲ್ಲಿ ಹುಟ್ಟಿದ ಕೆಚ್ಚೆದೆಯ ದಿನಪತ್ರಿಕೆಗಳು.

## ಸಂಯುಕ್ತ ಕರ್ನಾಟಕ

ಮೈಸೂರಿಗಿಂತ ಮುಂಚೆ ಉತ್ತರ ಕರ್ನಾಟಕದಲ್ಲಿ ಕಾಂಗ್ರೆಸ್ಸಿನ ಗಾಳಿ ಹಬ್ಬಿತ್ತು. ತಮ್ಮ "ಕರ್ಮವೀರ" ಪತ್ರಿಕೆಯಿಂದ ಬ್ರಿಟಿಷರ ವಿರುದ್ಧ ಪ್ರಬಲವಾಗಿ ಸೆಣಸಿದವರು ರಂಗನಾಥ ರಾಮಚಂದ್ರ ದಿವಾಕರ ಮತ್ತು ಮೊಹರೆ ಹಣಮಂತರಾಯರು. ಇವರಿಗೆ ಬೆಂಬಲವಾಗಿದ್ದವರು ಕೌಜಲಗಿ ಶ್ರೀನಿವಾಸರಾಯರು, ರಾಮರಾವ್ ಹುಕ್ಕೇರಿಕರ್ ಮತ್ತು ಬಿ. ಎನ್. ದಾತಾರರು. ದಿವಾಕರರು ಬೆಳಗಾವಿಯಲ್ಲಿದ್ದ ಸಂಯುಕ್ತ ಕರ್ನಾಕವನ್ನು ತೆಗೆದುಕೊಂಡು ದೈನಿಕವಾಗಿ ಬದಲಿಸಿದರು. ಇಂದಿಗೂ ಉತ್ತರ ಕರ್ನಾಟಕ ಪ್ರದೇಶದ ಅಗ್ರಮಾನ್ಯ ಪತ್ರಿಕೆ ಸಂಯುಕ್ತ ಕರ್ನಾಟಕ. ಅದೇ ಬಳಗದಲ್ಲಿ ಪ್ರಕಟವಾದ ಕಸ್ತೂರಿ ಮಾಸಪತ್ರಿಕೆ ಅತ್ಯಂತ ಜನಪ್ರಿಯವಾಯಿತು. ಆಲೂರರ ಜಯಕರ್ನಾಟಕ ಮತ್ತು ಮಂಗಳವೇಢೆ ಶ್ರೀನಿವಾಸರಾಯರ "ಕನ್ನಡಿಗ" ಇವು ರಾಷ್ಟ್ರೀಯ ಚಳುವಳಿಯ ಮುಂಚೂಣಿಯಲ್ಲಿದ್ದ ಪತ್ರಿಕೆಗಳು. ಸ್ವಾತಂತ್ರ್ಯಕ್ಕಾಗಿ ಸರ್ವ ಸಮರ್ಪಣ ಮಾಡಿದಂಥವು.

## ಜಯಕರ್ನಾಟಕ

ಆಲೂರವರ "ಜಯಕರ್ನಾಟಕ" ಕನ್ನಡ ಪತ್ರಿಕೆಗೆ ಕನ್ನಡ ಪತ್ರಿಕೋದ್ಯಮದಲ್ಲಿ ವಿಶಿಷ್ಟ ಸ್ಥಾನವಿದೆ. ಕರ್ನಾಟಕ ಏಕೀಕರಣಕ್ಕಾಗಿ ೧೯೧೨ರಲ್ಲೇ ಹೋರಾಟ ಆರಂಭಿಸಿದ ಕೀರ್ತಿ ಇದಕ್ಕೆ ಸಲ್ಲಬೇಕು. ಇದು ಮೈಸೂರಿನ ವೃತ್ತಪತ್ರಿಕಾ ಶಾಸನವನ್ನು ಕಟುವಾಗಿ ಟೀಕಿಸಿತು. ಆರ್ಥಿಕ ಸಂಕಷ್ಟ ತೀವ್ರವಾದಾಗ ಪತ್ರಿಕೆ ಆಲೂರ ವೆಂಕಟರಾಯರಿಂದ ಗೆಳೆಯರ ಗುಂಪಿನ ವಶಕ್ಕೆ ಬಂತು. ಅನಂತರ ಬೆಳಗಾವಿ ರಾಮಚಂದ್ರರಾಯರು ಸ್ವಲ್ಪ ಕಾಲ ಅದನ್ನು ನಡೆಸಿದರು.

## ದಕ್ಷಿಣ ಕನ್ನಡದ ಮಾಸಿಕಗಳು

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, 'ಶ್ರೀಕೃಷ್ಣಸೂಕ್ತಿ'ಯನ್ನು (೧೯೦೬) ಕೆರೋಡಿ ಸುಬ್ಬರಾಯರು ಸ್ಥಾಪಿಸಿದರು. ೧೯೧೭ರಲ್ಲಿ ಹನುಮಾನ್‌ದಾಸರ ಸಂಪಾದಕತ್ವದಲ್ಲಿ ಆರಂಭವಾದ 'ಮಧುರವಾಣಿ', ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರ 'ಜೀವನ', ಅಗಡಿಯ ಗಳಗನಾಥರ ಸದ್ಬೋಧ ಚಂದ್ರಿಕೆ (೧೯೦೭) ಇವು ಕನ್ನಡದಲ್ಲಿ ಪ್ರಕಟವಾಗುತ್ತಿದ್ದ ಕೆಲವು ಪ್ರಮುಖ ಮಾಸಪತ್ರಿಕೆಗಳು. ಮಹಿಳಾ ಪತ್ರಕರ್ತರ ಪೈಕಿ ತಿರುಮಲಾಂಬ (ಕರ್ನಾಟಕ ನಂದಿನಿ ಮತ್ತು ಸನ್ಮಾರ್ಗ ದರ್ಶಿ) ಮತ್ತು ಆರ್. ಕಲ್ಯಾಣಮ್ಮ (ಸರಸ್ವತಿ) ಪ್ರಸಿದ್ಧರು.

ತಾರಾನಾಥರ 'ಪ್ರೇಮಾ' ಕನ್ನಡ ನಿಯತಕಾಲಿಕ ಪತ್ರಿಕೋದ್ಯಮದಲ್ಲಿ ಹೆಸರು ಗಳಿಸಿದ ಮಾಸಪತ್ರಿಕೆ. 'ಜೀವನ' ಮತ್ತು 'ಜಯಂತಿ' ಉನ್ನತ ಮಟ್ಟದ ಇನ್ನೂ ಎರಡೂ ನಿಯತ ಕಾಲಿಕಗಳು. ಜಿ. ಎಸ್. ಕೃಷ್ಣರಾಯರ 'ನಗುವ-ನಂದ',

‘ಕಥಾಚಂದ್ರಿಕೆ’, ‘ವೃತ್ತಾಂತ’ ಮತ್ತು ‘ಆನಂದಕಂದ’ ಅವರ ಎಂದಿಗೂ ಒತ್ತದ ಉತ್ಸಾಹಕ್ಕೆ ಸಾಕ್ಷಿ. ಹರ್ಡೇಕರ ಮಂಜಪ್ಪನವರ“ಧನುರ್ಧಾರಿ” ಮತ್ತು “ಖಾದಿ ವಿಜಯ” ಆಳರಸರನ್ನು ಕೋಪಗೊಳಿಸಿದ ಪತ್ರಿಕೆಗಳು.

## ಸ್ವಾತಂತ್ರ್ಯಾನಂತರ ಕನ್ನಡ ಪತ್ರಿಕೋದ್ಯಮ

ಸ್ವಾತಂತ್ರ್ಯ ನಂತರದ ಕನ್ನಡ ಪತ್ರಿಕೋದ್ಯಮದ ಇತಿಹಾಸ ಎಲ್ಲರಿಗೂ ತಿಳಿದದ್ದೇ. ಪ್ರಜಾವಾಣಿ ಲಕ್ಷ ಪ್ರತಿಗಳ ಪ್ರಸಾರವನ್ನು ದಾಟಿ ನಡೆದರೆ ಕನ್ನಡಪ್ರಭೆ ಮತ್ತು ಉದಯವಾಣಿ ಹಾಗೂ ಸಂಯುಕ್ತ ಕರ್ನಾಟಕ ಲಕ್ಷದ ಗೆರೆಯತ್ತ ಮುನ್ನುಗ್ಗುತ್ತಿವೆ. ಇತ್ತೀಚೆಗೆ ಪ್ರಾರಂಭವಾದ ಇನ್ನೊಂದು ದಿನಪತ್ರಿಕೆ, ಲೋಕವಾಣಿ, ನಿಯತಕಾಲಿಕಗಳಲ್ಲಿ ಸುಧಾ ಮತ್ತು ಪ್ರಜಾಮತ ತಲಾ ಲಕ್ಷಕ್ಕೂ ಹೆಚ್ಚು ಪ್ರತಿಗಳ ಪ್ರಸಾರ ಪಡೆದಿವೆ. ಅಸಂಖ್ಯ ವಾರಪತ್ರಿಕೆಗಳು ಮತ್ತು ಇತರ ಬಗೆಯ ನಿಯತಕಾಲಿಕಗಳು ಪ್ರಸಾರದಲ್ಲಿವೆ. ಸಂಯುಕ್ತ ಕರ್ನಾಟಕ ಬೆಂಗಳೂರು ಆವೃತ್ತಿಯನ್ನು ಹೊರಡಿಸಿತು. ಅದೇ ಪ್ರಯತ್ನ ನಡೆಸಿದ ವಿಶಾಲ ಕರ್ನಾಟಕ ಸಫಲವಾಗಲಿಲ್ಲ. ಹುಬ್ಬಳ್ಳಿಯಲ್ಲಿ ೧೯೪೨ರ ನಂತರ ಟಿ. ಆರ್. ನೆಸ್ವಿ ಅವರ ಸಂಪಾದಕತ್ವದಲ್ಲಿ ನವಯುಗ ಪ್ರಾರಂಭವಾಯಿತು.

೧೯೪೭ರ ನಂತರದ ಕನ್ನಡ ಪತ್ರಿಕೋದ್ಯಮದ ಮೊದಲ ಪ್ರವೃತ್ತಿ ಸಾಹುಕಾರೀ ಪತ್ರಿಕೆಗಳ ಉದಯ. ಹಳೆಯ ತಲೆಮಾರಿನ ಪತ್ರಿಕೆಗಳು ಹಣದ ಚೀಲಗಳನ್ನೇ ಹೊತ್ತುತಂದ ಹೊಸ ಪತ್ರಿಕೆಗಳೊಡನೆ ಸ್ಪರ್ಧಿಸಲಾರದೆ ಕರಗಿಹೋದವು. ತಿರುಮಲೆ ತಾತಾಚಾರ್ಯ ಶರ್ಮರ ವಿಶ್ವಕರ್ನಾಟಕ ಸಹಾ ಬದುಕಲಿಲ್ಲ. ದೊಡ್ಡ ಪತ್ರಿಕೆಗಳೆಲ್ಲ ನಗರಗಳಲ್ಲಿ ಕೇಂದ್ರೀಕೃತವಾದವು. ಜಿಲ್ಲಾ ಪತ್ರಿಕೆಗಳಲ್ಲಿ ಹಾಸನದ ಜನಮಿತ್ರ, ಬೆಳಗಾವಿಯ ನಾಡೋಜ, ಕನ್ನಡಮ್ಮ ಮತ್ತು ಲೋಕದರ್ಶನ ಉತ್ತಮಮಟ್ಟ ಕಾಯ್ದುಕೊಳ್ಳಲು ಶ್ರಮಿಸುತ್ತಿರುವ ಪತ್ರಿಕೆಗಳು. ಪಾಟೀಲ ಪುಟ್ಟಪ್ಪನವರ ‘ವಿಶ್ವವಾಣಿ’ ಮತ್ತು ‘ಪ್ರಪಂಚ’ ಉತ್ತರ ಕರ್ನಾಟಕದಲ್ಲೇ ಅಲ್ಲದೇ ಇಡೀ ಕನ್ನಡ ನಾಡಿನಲ್ಲೇ ಖ್ಯಾತಿ ಗಳಿಸಿರುವ ಪತ್ರಿಕೆಗಳು. ಇವು ಏಕವ್ಯಕ್ತಿ ಉದ್ಯಮದ ಉಜ್ವಲ ಸಂಕೇತಗಳು. ಧೀರೋದಾತ್ತ ಪತ್ರಿಕೋದ್ಯಮಕ್ಕೆ ಹೆಸರಾದ ಪುಟ್ಟಪ್ಪ ತಮ್ಮದೇ ಆದ ವಿಶಿಷ್ಟ ಪತ್ರಿಕೋದ್ಯಮ ಸಾಹಿತ್ಯ ಶೈಲಿಯನ್ನು ಸೃಷ್ಟಿಸಿದ ಧೀಮಂತ.

ಕರಾವಳಿಯ ನವಭಾರತ ಮತ್ತೊಂದು ದಿನಪತ್ರಿಕೆ ಉದಯವಾಣಿಯೊಡನೆ ಸ್ಪರ್ಧಿಸುತ್ತಿದೆ. ಉತ್ತರ ಕರ್ನಾಟಕ ಪ್ರದೇಶದಲ್ಲಿ ಬೆಳಗಾವಿ, ಗದಗ, ಹುಬ್ಬಳ್ಳಿ ಬಿಟ್ಟರೆ ಉಳಿದ ಕಡೆ ಪತ್ರಿಕೋದ್ಯಮ ಅಷ್ಟಾಗಿ ಪ್ರಗತಿ ಸಾಧಿಸಿಲ್ಲ. ಹೈದರಾಬಾದ್ ಕರ್ನಾಟಕದಲ್ಲಿ ಅಂತೂ ಕ್ರಮಿಸಬೇಕಾದ ಹಾದಿ ಬಹಳ ಇದೆ. ಅದೇ ರೀತಿ ಸ್ವಲ್ಪ ಹಿಂದೆ ಬಿದ್ದಿರುವುದು ಕರಾವಳಿಯ ಉತ್ತರ ಕನ್ನಡ ಜಿಲ್ಲೆ. ಮಲೆನಾಡಿನಲ್ಲೂ ಹೆಚ್ಚು ಕಡಿಮೆ ಇದೇ ಪರಿಸ್ಥಿತಿಯಿದೆ. ಪಕ್ಕದ ಕೇರಳ, ಮಹಾರಾಷ್ಟ್ರ ಮತ್ತು ತಮಿಳುನಾಡು ರಾಜ್ಯಗಳಿಗೆ ಹೋಲಿಸಿದಲ್ಲಿ ಸಾಧಿಸಬೇಕಾದ್ದು ಬಹಳ ಇದೆ.

ಸಣ್ಣ ಪತ್ರಿಕೆಗಳ ಸಂಖ್ಯೆ ಬೆಳೆಯುತ್ತಿದೆ. ಆದರೆ ಅವುಗಳಲ್ಲಿ ಅನೇಕವುಗಳಿಗೆ ಆರ್ಥಿಕ ಚೈತನ್ಯ ಇಲ್ಲ. ಸರಕಾರದ ಜಾಹೀರಾತೇ ಅವುಗಳಿಗೆ ಜೀವರಕ್ತ. ಮೈಸೂರು ನಗರದಲ್ಲಿ ೨೦ಕ್ಕೂ ಹೆಚ್ಚು ದಿನಪತ್ರಿಕೆಗಳಿವೆ ಎಂದರೆ ವಿಸ್ಮಯವಾದೀತು. ಇವು ಬಹುತೇಕ ಸಂಜೆ ಪತ್ರಿಕೆಗಳು. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಪತ್ರಿಕೆಗಳೂ ಸಂಖ್ಯೆಯಲ್ಲಿ ಬೆಳೆಯುತ್ತಿವೆ. ಅವಕ್ಕೆ ಸೂಕ್ತ ಪರಿಸರ ಸೃಷ್ಟಿ ಆದಲ್ಲಿ ಅವು ಬದುಕಬಲ್ಲವು, ವಿಕಾಸ ಹೊಂದಬಲ್ಲವು.

## ಪತ್ರಿಕೋದ್ಯಮ ಶಿಕ್ಷಣ

ಪತ್ರಕರ್ತರ ತರಬೇತಿಗಾಗಿ ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳು ಸ್ನಾತಕಪೂರ್ವ ಮತ್ತು ಸ್ನಾತಕೋತ್ತರ ಪದವಿ ತರಗತಿಗಳನ್ನು ನಡೆಸುತ್ತಿವೆ. ಮೈಸೂರು ವಿಶ್ವವಿದ್ಯಾನಿಲಯ ೧೯೭೧ರಲ್ಲಿ ಸ್ನಾತಕೋತ್ತರ ಪದವೀ ಶಿಕ್ಷಣ ಆರಂಭಿಸಿ ಭಾರತದ ಪತ್ರಿಕೋದ್ಯಮ ಶಿಕ್ಷಣ ಇತಿಹಾಸದಲ್ಲೇ ಹೊಸ ಮಜಲನ್ನು ಸ್ಥಾಪಿಸಿತು. ಮೂರು ವರ್ಷಗಳ ಅನಂತರ ಬೆಂಗಳೂರು ವಿಶ್ವವಿದ್ಯಾನಿಲಯ ಈ ಶಿಕ್ಷಣವನ್ನು ಆರಂಭಿಸಿತು. ಕರ್ನಾಟಕ ವಿಶ್ವವಿದ್ಯಾಲಯವೂ ಈ ದಿಸೆಯಲ್ಲಿ ಗಮನ ಹರಿಸಿದೆ. ನೂರಾರು ಮಂದಿ ತರಬೇತಿ ಹೊಂದಿದ ವಿದ್ಯಾರ್ಥಿಗಳು ದೇಶದ ವಿವಿಧ ಪತ್ರಿಕಾಲಯಗಳಲ್ಲಿ, ಸಮೂಹ ಸಂಪರ್ಕ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ.

## ಗದ್ಯದ ಹೊಸ ಶೈಲಿ

ಕನ್ನಡ ಗದ್ಯಕ್ಕೆ ಹೊಸ ಶೈಲಿ ನೀಡಿದ ಕೀರ್ತಿ ಪತ್ರಿಕೆಗಳಿಗೇ ಸಲ್ಲಬೇಕು. ತರುಣ ಬರಹಗಾರರನ್ನು ಪ್ರೋತ್ಸಾಹಿಸಿ ಅವರನ್ನು ಮುಂದೆ ತರುವಲ್ಲಿ ಪತ್ರಿಕೆಗಳ ಪಾತ್ರವನ್ನು ಮೆಚ್ಚತಕ್ಕದ್ದು. ಕಾದಂಬರಿ ಮತ್ತು ಸಣ್ಣ ಕಥೆಗಳಿಗೆ ನೂತನ ಆಯಾಮವನ್ನು ಪತ್ರಿಕೆಗಳೇ ನೀಡಿದ್ದು ಎಂದರೆ ತಪ್ಪಲ್ಲ. ಕನ್ನಡ ಶಬ್ದ ಭಾಂಡಾರಕ್ಕೆ ಅನೇಕ ಹೊಸ ಪದಗಳನ್ನು ಪತ್ರಿಕೆಗಳು ನೀಡಿವೆ. ಡಿ. ವಿ. ಗುಂಡಪ್ಪ, ತಿ. ತಾ. ಶರ್ಮಾ ಮತ್ತು ಸಿದ್ಧವನ ಹಳ್ಳಿ ಕೃಷ್ಣ ಶರ್ಮರು ಇತ್ತ ಕಡೆ ತಮ್ಮ ತೀವ್ರ ಗಮನವನ್ನು ಹರಿಸಿದ್ದವರು. ಪ್ರಗತಿಶೀಲ ಸಾಹಿತ್ಯಕ್ಕೆ ಒತ್ತಾಸೆ ಕೊಟ್ಟದ್ದೂ ಪತ್ರಿಕೆಗಳೇ.

## ಶಾಶ್ವತ ಸಾಹಿತ್ಯ

ಕನ್ನಡ ಪತ್ರಿಕೋದ್ಯಮ ಪ್ರವೇಶಿಸುವವರಿಗೆ ಕೇವಲ ಕನ್ನಡ ಭಾಷೆಯಲ್ಲಿ ಪ್ರಭುತ್ವ ಇದ್ದರೆ ಸಾಲದು. ಇಂಗ್ಲಿಷ್ ಭಾಷೆಯನ್ನು ಚೆನ್ನಾಗಿ ಅರಿತಿರಬೇಕು. ಇಂಗ್ಲಿಷ್‌ನಲ್ಲಿ ಸುದ್ದಿ ಸಂಸ್ಥೆಗಳು ಕಳುಹಿಸುವ ಸುದ್ದಿಯನ್ನು ಯಥಾವತ್ತಾಗಿ ಭಾಷಾಂತರಿಸುವ ಕಲೆ ಸಿದ್ಧಿಸಿರಬೇಕು. ಪತ್ರಿಕೋದ್ಯಮ ಶಿಕ್ಷಣ ಪಠ್ಯಕ್ರಮದಲ್ಲಿ ಭಾಷಾಂತರ ವಿಷಯವನ್ನು ಸೇರಿಸುವುದು ಉತ್ತಮ. ಇಂತಹ ಭಾಷಾಂತರ ಸಂದರ್ಭಗಳಲ್ಲಿ, ಹೊಸ ಶೈಲಿ, ಹೊಸ ಪದಗಳು ಸೃಷ್ಟಿಯಾಗುತ್ತವೆ. ಭಾಷೆ ಶ್ರೀಮಂತವಾಗುತ್ತದೆ. ಪತ್ರಿಕೋದ್ಯಮ ಕೇವಲ ‘ಅವಸರ ಸಾಹಿತ್ಯ’ವಾಗಿ ಉಳಿಯದೆ ಶಾಶ್ವತ ಸಾಹಿತ್ಯವಾಗಲು ಸಾಧ್ಯವಾಗುತ್ತದೆ.

## ತಾಂತ್ರಿಕ ಸಾಧನೆ

ತಾತ್ರಿಕವಾಗಿಯೂ ದೊಡ್ಡ ಪತ್ರಿಕೆಗಳು ಪ್ರಗತಿ ಸಾಧಿಸಿವೆ. ಲೈನೋಟೈಪ್ ಮತ್ತು ಮೊನೋಟೈಪ್ ಅಕ್ಷರ ಜೋಡಣೆ ಯಂತ್ರಗಳು, ಆಫ್‌ಸೆಟ್ ಮುದ್ರಣ ಇವೆಲ್ಲ ಕನ್ನಡ ಪತ್ರಿಕಾರಂಗವನ್ನು ಪ್ರವೇಶಿಸಿವೆ. ಇಷ್ಟಾದರೂ ಸಣ್ಣ ಮತ್ತು ಮಧ್ಯಮ ಗಾತ್ರದ ಪತ್ರಿಕೆಗಳು ಮುದ್ರಣ ಕ್ಷೇತ್ರದ ಪ್ರಗತಿಯ ಲಾಭವನ್ನು ಪಡೆದುಕೊಳ್ಳಲು ಆಗಿಲ್ಲ. ಹಳೆಯ ಮುದ್ರಣ ಯಂತ್ರಗಳು ಮತ್ತು ಸಲಕರಣೆಗಳೇ ಉಳಿದಿವೆ. ಈ ಪರಿಸ್ಥಿತಿ ಬದಲಾಗಬೇಕು. ಸರಕಾರ ಪತ್ರಿಕಾ

ಅರ್ಥವ್ಯವಸ್ಥೆಗೆ ಕಾಯಕಲ್ಪ ನೀಡಲು ಸ್ವಾಯತ್ತ ನೆರವು ಸಂಸ್ಥೆಯೊಂದನ್ನು ಸ್ಥಾಪಿಸುವುದು ಸೂಕ್ತ. ಪತ್ರಿಕಾ ಅಕಾಡೆಮಿಯಂತಹ ಸಂಸ್ಥೆ ಇದರ ಬಗ್ಗೆ ಸವಿವರ ಅಧ್ಯಯನ ನಡೆಸಿ ಸಲಹೆಗಳನ್ನು ನೀಡಬಹುದು.

ಕರ್ನಾಟಕದಲ್ಲಿ ಕನ್ನಡ ಪತ್ರಿಕೆಗಳಲ್ಲದೇ ಬೇರೆ ಬೇರೆ ಭಾಷಾ ಪತ್ರಿಕೆಗಳು ಇವೆ. ಸಂಸ್ಕೃತ ದೈನಿಕ 'ಸುಧರ್ಮ' ಮೈಸೂರಿನಿಂದ ಪ್ರಕಟವಾಗುತ್ತಿದೆ. ಇಂಗ್ಲಿಷ್ ಪತ್ರಿಕೆಗಳ ವಿಚಾರವನ್ನು ಹೇಳುವುದು ಅನಗತ್ಯ. ಉರ್ದು ಮತ್ತು ಮರಾಠಿ ಪತ್ರಿಕೆಗಳೂ ಇವೆ. ಈಚೆಗೆ ತುಳು ಮತ್ತು ಕೊಡವ ಭಾಷಾ ಪತ್ರಿಕೆಗಳೂ ಪ್ರಾರಂಭವಾಗಿವೆ. ಪತ್ರಿಕೋದ್ಯಮವನ್ನು ಉನ್ನತಮಟ್ಟದಲ್ಲಿ ನಡೆಸಲು ಅದರಲ್ಲೂ ವಿಶೇಷವಾಗಿ ಗ್ರಾಮಾಂತರ ವರದಿಗಾರರು ಮತ್ತು ಪತ್ರಕರ್ತರಿಗಾಗಿ ತರಬೇತಿ ನೀಡುವ ವ್ಯವಸ್ಥೆ ಆಗಬೇಕು. ಸಾಕ್ಷರತೆ ಹೆಚ್ಚಿದಂತೆ, ಆರ್ಥಿಕ ಪ್ರಗತಿಯಾದಂತೆ ಕನ್ನಡ ಪತ್ರಿಕೋದ್ಯಮದ ಭವಿಷ್ಯವೂ ಉಜ್ವಲವಾಗುವುದರಲ್ಲಿ ಸಂದೇಹವಿಲ್ಲ.

# ಕರ್ನಾಟಕದ ಆರ್ಥಿಕ ಪ್ರಗತಿ

ಡಾ. ಎನ್. ಎಸ್. ಹಿರೇಮಠ

ಕರ್ನಾಟಕ ರಾಜ್ಯದ ಆದಾಯಕ್ಕೆ ಪ್ರಾಥಮಿಕ ವಿಭಾಗದ ಕೊಡುಗೆ ಶೇಕಡ ೫೦ನ್ನು ಮೀರಿದೆ ಮತ್ತು (೧೯೮೧ರ ಜನಗಣತಿಯ ಪ್ರಕಾರ) ರಾಜ್ಯದ ಪ್ರಜೆಗಳಲ್ಲಿ ಶೇಕಡಾ ೭೧.೯ರಷ್ಟು ಪಾಲು ವಾಸಿಸುವುದು ಗ್ರಾಮೀಣ ಪ್ರದೇಶದಲ್ಲಿ. ಆದ್ದರಿಂದ ಕರ್ನಾಟಕದ ಆರ್ಥಿಕ ಸ್ಥಿತಿ ಪ್ರಧಾನವಾಗಿ ಕೃಷಿಯನ್ನು ಹೊಂದಿಕೊಂಡದ್ದು ಮತ್ತು ಗ್ರಾಮವನ್ನು ಅವಲಂಬಿಸಿದ್ದು. ರಾಜ್ಯದ ಆದಾಯದಲ್ಲಿ ಪ್ರಾಥಮಿಕ ವಿಭಾಗದ ಪಾಲು ೧೯೬೦–೬೧ರಲ್ಲಿ ಶೇಕಡ ೬೧.೦೭, ೧೯೭೦–೭೧ರಲ್ಲಿ ಶೇಕಡಾ ೬೩.೦೫, ಆದರೆ ೧೯೭೯–೮೦ರಲ್ಲಿ ಇದು ಶೇಕಡಾ ೫೨.೩೬ಕ್ಕೆ ಇಳಿಯಿತು. ೧೯ ಜಿಲ್ಲೆಗಳ ಪೈಕಿ ೧೬ ಜಿಲ್ಲೆಗಳಲ್ಲಿ ಗ್ರಾಮೀಣ ಜನಸಂಖ್ಯೆ ರಾಜ್ಯದ ಸರಾಸರಿಗಿಂತ ಹೆಚ್ಚಾಗಿದೆ. ಬಳ್ಳಾರಿ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಗ್ರಾಮೀಣ ಜನಸಂಖ್ಯೆಯೇ ಹೆಚ್ಚಾಗಿದ್ದರೂ (ಕ್ರಮವಾಗಿ ಶೇಕಡ ೬೬.೯೮ ಮತ್ತು ೬೪.೭೪) ಅವು ರಾಜ್ಯದ ಸರಾಸರಿಗಿಂತ ಕೆಳಗಿವೆ. ಬೆಂಗಳೂರು ಜಿಲ್ಲೆಯ ಜನಸಂಖ್ಯೆಯಲ್ಲಿ ಶೇಕಡ ೬೪.೭೧ ಭಾಗ ನಗರವಾಸಿಗಳಾಗಿದ್ದು ಇದರದು ಪ್ರಧಾನವಾಗಿ ನಗರದ ಆರ್ಥಿಕ ಸ್ಥಿತಿ (೧೯೮೧ ರ ಜನಗಣತಿಯ ಪ್ರಕಾರ) ಕರ್ನಾಟಕದಲ್ಲಿ ದುಡಿಮೆಗಾರರ ಸಮುದಾಯ ೧೩೬.೩೮ ಲಕ್ಷ; ಇದು ಒಟ್ಟು ಜನಸಂಖ್ಯೆಯ ಶೇಕಡ ೩೬.೮೨ ಆಗುತ್ತದೆ. ಒಟ್ಟು ಶ್ರಮಜೀವಿಗಳಲ್ಲಿ ೧೦೦ಕ್ಕೆ ೩೮.೪೬ ಭಾಗ ಕೃಷಿಕರು, ೨೬.೬೬ ಭಾಗ ಕೃಷಿ ಕೂಲಿಗಾರರು ಮತ್ತು ೪.೫೮ ಭಾಗ ಗೃಹ ಕೈಗಾರಿಕೆಗಳಲ್ಲಿ ನಿರತರಾದವರು; ಉಳಿದವರು ಇತರ ವಿಭಾಗಗಳಲ್ಲಿ ಕೆಲಸ ಮಾಡುವವರು.

### ಯೋಜನೆಗಳ ಯುಗ

ಸಮಯದ ಕಟ್ಟಳೆ ಇರುವ ಕಾರ್ಯಕ್ರಮಗಳನ್ನು ಕಾರ್ಯಗತ ಮಾಡುವುದರಿಂದ ಯೋಜನೆಯು ಸಾಮಾಜಿಕ - ಆರ್ಥಿಕ ಬದಲಾವಣೆಯ ಪರಿಣಾಮಕಾರೀ ಸಾಧನ ಎಂದು ಪ್ರಪಂಚದ ಎಲ್ಲೆಡೆಗಳಲ್ಲಿಯೂ ಒಪ್ಪಿಕೊಳ್ಳಲಾಗಿದೆ. ೧೯೫೧ ರ ಎಪ್ರಿಲ್ ೧ ರಂದು ಪಂಚವಾರ್ಷಿಕ ಯೋಜನೆಗಳನ್ನು ಪ್ರಾರಂಭಿಸಿದಾಗ ಭಾರತದಲ್ಲೂ ಕರ್ನಾಟಕದಲ್ಲೂ ಈ ಯುಗದ ಉದಯವಾಯಿತು. ಕರ್ನಾಟಕದ ಉಳಿದ ಪ್ರದೇಶವು ಮುಂಬಯಿ, ಮದರಾಸು, ಹೈದರಾಬಾದ್ ಮೊದಲಾದ ನೆರೆಯ ರಾಜ್ಯಗಳಲ್ಲಿ ಸೇರಿಹೋಗಿದ್ದುದರಿಂದ ಕರ್ನಾಟಕದ ಪ್ರಥಮ ಯೋಜನೆಯು ಹಿಂದಿನ ಮೈಸೂರು ರಾಜ್ಯಕ್ಕೆ ಸೀಮಿತಗಿತ್ತು. ೧೯೫೬ರ ನವೆಂಬರ್ ೧ರಂದು ರಾಜ್ಯದ ಪುನರ್ವ್ಯವಸ್ಥೆ ಕಾರ್ಯಗತವಾಗುವುದಕ್ಕೆ ಏಳು ತಿಂಗಳ ಕಾಲ ಮೊದಲು ಎರಡನೆಯ ಯೋಜನೆಯನ್ನು ರೂಪಿಸಲಾಯಿತು. ಬೇರೆ ಬೇರೆ ಪ್ರದೇಶಗಳ ವಿಲೀನೀಕರಣವು ಹಲವು ಆಡಳಿತ ಸಮಸ್ಯೆಗಳನ್ನು ಉಂಟುಮಾಡಿತು; ಎರಡನೆಯ ಯೋಜನೆಯ ಸ್ಪಷ್ಟ ಚಿತ್ರಕ್ಕಾಗಿ ೧೯೫೭ರ ಸೆಪ್ಟೆಂಬರ್‌ವರೆಗೆ ಕಾಯಬೇಕಾಯಿತು. ೧೯೬೧ರಲ್ಲಿ ಮೂರನೆಯ ಯೋಜನೆಯನ್ನು ರೂಪಿಸಿ ಕಾರ್ಯಗತ ಮಾಡಿದಾಗ ಸಮಗ್ರ ರಾಜ್ಯದ ವ್ಯಾಪಕ ಯೋಜನಾಬದ್ಧ ಪ್ರಯತ್ನಗಳು ವಾಸ್ತವವಾಗಿ ಪ್ರಾರಂಭವಾದವು. ರಾಜ್ಯಕ್ಕೆ ಈಗ ಯೋಜನೆಗಳನ್ನು ರೂಪಿಸುವುದರಲ್ಲಿ ಮೂರು ದಶಕಗಳನ್ನು ಮೀರಿದ ಅನುಭವ ಲಭ್ಯವಾಗಿದೆ. ಅಲ್ಲದೆ ಆರನೆಯ ಪಂಚವಾರ್ಷಿಕ ಯೋಜನೆಯ ಮೂರನೆಯ ವರ್ಷ ಇನ್ನೇನು ಪ್ರಾರಂಭವಾಗುವುದರಲ್ಲಿದೆ. ಸಾರ್ವಜನಿಕ ಕ್ಷೇತ್ರದಲ್ಲೆ ರಾಜ್ಯವು ಸುಮಾರು ೨೫೦೦ ಕೋಟಿ ರೂಪಾಯಿಗಳ ಬಂಡವಾಳವನ್ನು ಹೂಡಿದೆ. (ಮೊದಲನೆಯ, ಎರಡನೆಯ, ಮೂರನೆಯ, ನಾಲ್ಕನೆಯ ಮತ್ತು ಐದನೆಯ ಪಂಚವಾರ್ಷಿಕ ಯೋಜನೆಗಳ ಅವಧಿಗಳಲ್ಲಿ ಕ್ರಮವಾಗಿ ೪೦.೫೨ ಕೋಟಿ ರೂಪಾಯಿಗಳು, ೧೪೨.೨೭ ಕೋಟಿ ರೂಪಾಯಿಗಳು, ೨೬೪.೧೪ ಕೋಟಿ ರೂಪಾಯಿಗಳು, ೩೪೯.೮೫ ಕೋಟಿ ರೂಪಾಯಿಗಳು ಮತ್ತು ೮೫೨.೩೯ ಕೋಟಿ ರೂಪಾಯಿಗಳನ್ನು ತೊಡಗಿಸಿದೆ. ಐದು ವಾರ್ಷಿಕ ಯೋಜನೆಗಳಲ್ಲಿ ಸರಕಾರವು ೮೩೨.೧೧ ಕೋಟಿ ರೂಪಾಯಿಗಳನ್ನು ಖರ್ಚು ಮಾಡಿದೆ). ರಾಜ್ಯದ ಪುನರ್ವ್ಯವಸ್ಥೆಯಾದಾಗ ಆರ್ಥಿಕವಾಗಿ ರಾಜ್ಯವು ಹಿಂದುಳಿದಿದ್ದುದರಿಂದ ಸರ್ಕಾರವು ಜನತೆಯ ಸರ್ವತೋಮುಖ ಮುನ್ನಡೆಗಾಗಿ ಪ್ರಗತಿಶೀಲ ಧೋರಣೆಗಳನ್ನು ಕಾರ್ಯಗತ ಮಾಡುವುದರ ಮೂಲಕ ಆರ್ಥಿಕ ಕ್ಷೇತ್ರದ ಎಲ್ಲ ವಿಭಾಗಗಳಲ್ಲಿ ಸೌಲಭ್ಯ ಜಾಲಗಳ ಮತ್ತು ಸಾಂಸ್ಥಿಕ ಆಧಾರವನ್ನು ಗಟ್ಟಿಗೊಳಿಸಲು ಸರ್ಕಾರವು ಸಂಘಟಿತ ಪ್ರಯತ್ನಗಳನ್ನೂ ಮಾಡುತ್ತ ಬಂದಿದೆ. ಎಲ್ಲ ಯೋಜನೆಗಳಲ್ಲಿ ಕೃಷಿ ಮತ್ತು ವಿದ್ಯುಚ್ಛಕ್ತಿ ಪ್ರಥಮ ಆದ್ಯತೆ ಪಡೆದಿದೆ. ಒಟ್ಟು ವೆಚ್ಚದಲ್ಲಿ ಹತ್ತಿರ ಹತ್ತಿರ ಶೇಕಡ ೫೦ರಷ್ಟನ್ನು ಇದಕ್ಕಾಗಿ ಮಾಡಲಾಗುತ್ತಿದೆ. ಇವುಗಳ ನಂತರ ಸಾಮಾಜಿಕ ಮತ್ತು ಸಾಮುದಾಯಿಕ ಸೇವೆಗಳಿಗೆ ಹೆಚ್ಚು ವೆಚ್ಚ–ಒಟ್ಟು ಖರ್ಚಿನಲ್ಲಿ ೧೦೦ಕ್ಕೆ ೧೮ರಷ್ಟು; ಅದರಲ್ಲಿ ಶೇಕಡ ೧೭ಕ್ಕಿಂತ ಹೆಚ್ಚು ಕೃಷಿ ಮತ್ತು ಅದಕ್ಕೆ ಸಂಬಂಧಿಸಿದ ಕೆಲಸಗಳಲ್ಲಿ ವಿನಿಯೋಗವಾಗುತ್ತದೆ. ಆರ್ಥಿಕ ಜೀವನದ ಹಲವು ಮುಖ್ಯ ರಂಗಗಳಲ್ಲಿ ರಾಜ್ಯವು ಒಳ್ಳೆಯ ಫಲವನ್ನು ಸಾಧಿಸಿದೆ.

ಆಗಿನ ಬೆಲೆಗಳ ಪ್ರಕಾರ ರಾಜ್ಯದ ಒಳಗಿನ ನಿವ್ವಳ ಉತ್ಪನ್ನ (ರಾಜ್ಯದ ಆದಾಯ) ೧೯೫೬-೫೭ರಲ್ಲಿ ೪೯೫.೧೭ ಕೋಟಿ ರೂಪಾಯಿಗಳು. ಇದು ೧೯೭೯-೮೦ರಲ್ಲಿ ೪೩೯೩.೪೫ ಕೋಟಿ ರೂಪಾಯಿಗಳಿಗೆ ಏರಿತು. ೧೯೮೦-೮೧ರಲ್ಲಿ ಇದು ೪೭೯೫.೫೯ ಕೋಟಿ ರೂಪಾಯಿಗಳಾಗಿರಬಹುದೆಂದು ಅಂದಾಜು ಮಾಡಲಾಗಿದೆ, ಎಂದರೆ ಹಿಂದಿನ ವರ್ಷಕ್ಕಿಂತ ಶೇಕಡ ಏಳರಷ್ಟು ಹೆಚ್ಚಾಗಿದೆಯೆಂತಾಯಿತು.

ಆಗಿದ್ದ ಬೆಲೆಗಳ ಪ್ರಕಾರ ರಾಜ್ಯವು ೧೯೬೦-೬೧ರಿಂದ ೧೯೭೪-೭೫ರವರೆಗಿನ ಅವಧಿಯಲ್ಲಿ ತನ್ನ ಒಳಗಿನ ಉತ್ಪನ್ನದಲ್ಲಿ ವರ್ಷಕ್ಕೆ ಶೇಕಡ ೧೦ರಷ್ಟರ ಬೆಳವಣಿಗೆಯನ್ನು ಸಾಧಿಸಿತು. ಇದೇ ಅವಧಿಯಲ್ಲಿ ಸ್ಥಿರ ಬೆಲೆಗಳ ಪ್ರಕಾರ ಬೆಳವಣಿಗೆಯ ಪ್ರಮಾಣ ವರ್ಷಕ್ಕೆ ಶೇಕಡ ೫ ರಷ್ಟಿತ್ತು. ಇದೇ ಗರಿಷ್ಠ ಎಂದು ಭಾವಿಸಲಾಗಿದೆ. ೧೯೭೦-೭೧ ರಿಂದ ೧೯೭೪-೭೫ ರ ವರೆಗಿನ ಅವಧಿಯಲ್ಲಿ ಬೆಳವಣಿಗೆಯ ಪ್ರಮಾಣ ೧೦೦ಕ್ಕೆ ೬ರಷ್ಟಿತ್ತು. ಆರನೆಯ ಪಂಚವಾರ್ಷಿಕ ಯೋಜನೆಯ ಮುಖ್ಯ ಗುರಿಗಳಲ್ಲಿ ಒಂದು ವರ್ಷಕ್ಕೆ ಶೇಕಡ ೬.೫ರಷ್ಟು ಬೆಳವಣಿಗೆಯ ಪ್ರಮಾಣವನ್ನು ಸಾಧಿಸುವುದು.

ರಾಜ್ಯದ ಆದಾಯದಲ್ಲಿ ರೂಢಿಯಲ್ಲಿದ್ದ ಬೆಲೆಗಳ ಪ್ರಕಾರ ೧೯೭೯-೮೦ರಲ್ಲಿ ಕೃಷಿ ಚಟುವಟಿಕೆಗಳ ಪಾಲು ಶೇಕಡ ೫೨.೩೬ರಷ್ಟಿತ್ತು. ದ್ವಿತೀಯ ಮತ್ತು ತೃತೀಯ ವಲಯಗಳ ಪಾಲು ಕ್ರಮವಾಗಿ ೨೧.೧೩ ಆಗಿತ್ತು. ಬರುವ ದಶಕಗಳಲ್ಲಿ ಬೇರೆ ಬೇರೆ ವಲಯಗಳಲ್ಲಿ ಸಮತೋಲನವನ್ನು ಸಾಧಿಸುವ ಉದ್ದೇಶವಿರುವುದರಿಂದ ಆರನೆಯ ಪಂಚವಾರ್ಷಿಕ ಯೋಜನೆಯ ಅಂತ್ಯದ ವೇಳೆಗೆ ಉತ್ಪಾದನೆಯಲ್ಲಿ ಪ್ರಾಥಮಿಕ ವಲಯದ ಪಾಲನ್ನು ಶೇಕಡ ೪೮ಕ್ಕೆ ಇಳಿಸಲು ಯೋಚಿಸಲಾಗಿದೆ.

### ಕೃಷಿ ಬೆಳವಣಿಗೆ

೧೯೫೬-೫೭ರಲ್ಲಿ ಒಟ್ಟು ಆಹಾರ ಧಾನ್ಯ ಉತ್ಪನ್ನ ೩೩.೩೦ ಲಕ್ಷ ಟನ್‌ಗಳಿದ್ದು ೧೯೭೮-೭೯ರಲ್ಲಿ ೭೨.೪೩ ಲಕ್ಷ ಟನ್‌ಗಳಿಗೆ ಏರಿತು (ಕೋಷ್ಟಕ-೨). ಉತ್ಪನ್ನ ಹೆಚ್ಚಿದುದಕ್ಕೆ ಮುಖ್ಯ ಕಾರಣ ಉಳುವ ನೆಲದ ವಿಸ್ತೀರ್ಣವೂ ಉತ್ಪಾದನಾ ಶಕ್ತಿಯೂ ಹೆಚ್ಚಿದುದು. ಆದರೆ ಹಿಂದಿನ ವರ್ಷದೊಡನೆ ಹೋಲಿಸಿದರೆ ೧೯೭೯-೮೦ರಲ್ಲಿ ರಾಜ್ಯದಲ್ಲಿ ಆಹಾರ ಉತ್ಪನ್ನ ಶೇಕಡ ೨.೫೬ರಷ್ಟು ಇಳಿಯಿತು. ಇದಕ್ಕೆ ಕಾರಣ: ಹಲವು ಜಿಲ್ಲೆಗಳಲ್ಲಿ ಋತುಗಳಲ್ಲಿ ಅಸಮರ್ಪಕ ಹವಾಮಾನ ಸ್ಥಿತಿ ಮತ್ತು ಅಭಾವ ಪರಿಸ್ಥಿತಿ. ೧೯೭೮-೭೯ರೊಂದಿಗೆ ಹೋಲಿಸಿದರೆ ೧೯೭೯-೮೦ರಲ್ಲಿ ತೆಂಗಿನಕಾಯಿ, ಕಾಫಿ, ಅಡಿಕೆ ಮತ್ತು ಎಣ್ಣೆಯ ಧಾನ್ಯಗಳ ಉತ್ಪನ್ನ ಉತ್ತಮವಾಗಿತ್ತು. ಕಬ್ಬು, ಮೆಣಸಿನಕಾಯಿ, ಹೊಗೆಸೊಪ್ಪು ಮತ್ತು ಬೇಳೆಗಳ ಬೆಳೆ ಅದೇ ವರ್ಷ ಇಳಿಮುಖವಾಗಿತ್ತು. ಅನಾನುಕೂಲ ಹವಾಮಾನ ಪರಿಸ್ಥಿತಿ ಮುಂದುವರಿದ್ದರಿಂದ ೧೯೮೦-೮೧ರಲ್ಲಿ ಆಹಾರಧಾನ್ಯಗಳ ಬೆಳೆಗೆ ಇನ್ನೂ ಧಕ್ಕೆ ಬಂದಿತು. ಬೆಳೆಯ ನಿರೀಕ್ಷಣೆ ೫೪.೫೨ ಲಕ್ಷ ಟನ್‌ಗಳಷ್ಟು ಮಾತ್ರ ಆಯಿತು. ಆರನೆಯ ಯೋಜನೆ ೯೫ ಲಕ್ಷ ಟನ್‌ಗಳಷ್ಟು ಆಹಾರ ಧಾನ್ಯಗಳ ಉತ್ಪಾದನೆಯ ಗುರಿಯನ್ನು ಇಟ್ಟುಕೊಂಡಿದೆ. ಕಬ್ಬು, ಹತ್ತಿ, ಎಣ್ಣೆಯ ಧಾನ್ಯಗಳು ಮತ್ತು ಹೊಗೆಸೊಪ್ಪಿನ ಬೆಳೆ ೧೯೮೦-೮೧ರಲ್ಲಿ ಹೆಚ್ಚುವುದೆಂಬ ನಿರೀಕ್ಷಣೆ ಇತ್ತು. ಆರನೆಯ ಯೋಜನೆ ಕಬ್ಬಿನ ಬೆಳೆಗೆ ನಿರ್ಧರಿಸಿದ್ದ ಗುರಿ ೨೧೫ ಲಕ್ಷ ಟನ್.

ಬೇಸಾಯಗಾರರು ಉತ್ಪಾದನೆಯನ್ನೂ ಉತ್ಪಾದನಾ ಸಾಮರ್ಥ್ಯವನ್ನೂ ಹೆಚ್ಚಿಸಿಕೊಳ್ಳಲು ನೆರವಾಗುವ ಮಾಮೂಲು ಕಾರ್ಯಕ್ರಮಗಳಲ್ಲದೆ, "ತರಬೇತಿ ಮತ್ತು ಸಂದರ್ಶನ" ಎಂಬ ಹೊಸ ವಿಸ್ತರಣಾ ಕಾರ್ಯಕ್ರಮವನ್ನು ರಾಜ್ಯಾದ್ಯಂತ ಪ್ರಾರಂಭಿಸಲಾಗಿದೆ. ಇದರ ಉದ್ದೇಶ ಬೆಳೆ ಉತ್ಪಾದನೆಯ ತಂತ್ರಗಳಲ್ಲಿ ಇತ್ತೀಚಿಗಿನ ಬೆಳವಣಿಗೆಗಳ ವಿಷಯ ರೈತರಿಗೆ ತಿಳುವಳಿಕೆ ಕೊಡುವುದು. ರೈತರನ್ನು ಬೆಳೆಯ ವೈಫಲ್ಯದ ಅಪಾಯದಿಂದ ರಕ್ಷಿಸಲು ಆಯ್ದ ಕೆಲವು ಪ್ರದೇಶಗಳಲ್ಲಿ ಬೆಳೆ ಬೆಳೆಯುವ ಯೋಜನೆಯನ್ನು ಮುನ್ಸೂಚಕ ಕ್ರಮವೆಂದು ಪ್ರಾರಂಭಿಸಿದೆ.

### ಕೈಗಾರಿಕಾ ಪ್ರಗತಿ

ಕೈಗಾರಿಕಾ ಕ್ಷೇತ್ರದಲ್ಲಿ ಇಡೀ ದೇಶದಲ್ಲಿ ಮುಂದಿನ ಪಂಕ್ತಿಯಲ್ಲಿ ನಿಂತ ರಾಜ್ಯಗಳಲ್ಲಿ ಕರ್ನಾಟಕ ಒಂದು. ರಾಜ್ಯದಲ್ಲಿ ಆಯ್ದ ಕೈಗರಿಕಾ ಉತ್ಪನ್ನಗಳ ಉತ್ಪಾದನೆಯಲ್ಲಿ ಏರಿಳಿತಗಳ ಚರಕೆಯನ್ನು ಕಾಣಬಹುದಾದರೂ ೧೯೭೦ರ ನಂತರ ಒಟ್ಟಿನಲ್ಲಿ ಕೈಗಾರಿಕಾ ಉತ್ಪಾದನೆಯಲ್ಲಿ ಏರಿಕೆಯ ಪ್ರವೃತ್ತಿ ತೋರಿಬರುತ್ತದೆ. ಹಿಂದಿನ ವರ್ಷಕ್ಕೆ ಹೋಲಿಸಿದರೆ ೧೯೭೯-೮೦ರಲ್ಲಿ ಕಬ್ಬಿಣ, ಉಕ್ಕು, ಸಿಮೆಂಟ್, ಸಕ್ಕರೆ ಮತ್ತು ಕಾಗದಗಳ ಉತ್ಪಾದನೆ ಇಳಿದಿದೆ. (ಮೂರನೆ ಕೋಷ್ಟಕ) ಆದರೆ ವನಸ್ಪತಿ, ಸಾಬೂನು ಮೊದಲಾದವುಗಳ ಉತ್ಪಾದನೆ ಹೆಚ್ಚಿದೆ.

೧೯೭೮ರ ಜೂನ್‌ನ ಮುಕ್ತಾಯದ ಹೊತ್ತಿಗೆ ರಾಜ್ಯದಲ್ಲಿ ನೋಂದಣಿ ಮಾಡಿಸಿಕೊಂಡ ೯೩೨ ಕಾರ್ಖಾನೆಗಳಿದ್ದವು. ಇವುಗಳಲ್ಲಿ ೪.೯೨ ಲಕ್ಷ ಮಂದಿ ಕೆಲಸ ಮಾಡುತ್ತಿದ್ದರು. ರಾಜ್ಯದ ಕೈಗಾರಿಕಾ ರಚನೆಯಲ್ಲಿ ಇಂಜಿನಿಯರಿಂಗ್ ಕೈಗಾರಿಕೆಯದು ಸಿಂಹಪಾಲು, ಅದರ ನಂತರ ಮಹತ್ವದ ದೃಷ್ಟಿಯಿಂದ ಕ್ರಮವಾಗಿ ಸಂಸ್ಕರಣ (ಪ್ರೋಸೆಸಿಂಗ್), ಜವಳಿ ಮತ್ತು ಆಹಾರ ಉತ್ಪನ್ನಗಳ ಕೈಗಾರಿಕೆಗಳು ಬರುತ್ತವೆ. ಮೇಲಿನ ಆರು ಕೈಗಾರಿಕೆಗಳು – ಆಹಾರ ಉತ್ಪನ್ನಗಳು, ವಿದ್ಯುಚ್ಛಕ್ತಿ ಯಂತ್ರ ಸಾಮಾನು, ಉಪಕರಣಗಳು, ಪರಿಕರಗಳು ಇತ್ಯಾದಿ ಇತ್ಯಾದಿ, ಮೂಲ ಲೋಹ ಮತ್ತು ಮಿಶ್ರಣಗಳು, ಹತ್ತಿ ಜವಳಿ, ವಿದ್ಯುಚ್ಛಕ್ತಿ ಮತ್ತು ಮಣಸು ಮತ್ತು ಮಣಸಿನ ಉತ್ಪನ್ನಗಳು ಇವೇ– ರಾಜ್ಯದ ಒಟ್ಟು ಉತ್ಪಾದನೆಯ ಮೌಲ್ಯದಲ್ಲಿ ನೂರಕ್ಕೆ ೬೪ರಷ್ಟು ಆಗುತ್ತವೆ.

ರಾಜ್ಯದ ಖನಿಜ ಸಂಪನ್ಮೂಲಗಳ ಪೈಕಿ ಕಬ್ಬಿಣಕ್ಕೆ ಪ್ರಮುಖ ಸ್ಥಾನ. ಖನಿಜ ಆಧಾರಿತ ಕೈಗಾರಿಕೆಗಳಲ್ಲಿ ಕೋಲಾರ ಗಣಿ ಪ್ರದೇಶವೇ ಅತ್ಯಂತ ಹಳೆಯದು. ೧೯೮೧ರ ಮಾರ್ಚ್ ತಿಂಗಳ ಕೊನೆಯ ಹೊತ್ತಿಗೆ ರಾಜ್ಯದಲ್ಲಿ ನೋಂದಣಿಯ ಪ್ರಕಾರ ೨೭,೧೩೧ ಸಣ್ಣ ಪ್ರಮಾಣದ ಕೈಗಾರಿಕೆಗಳಿದ್ದವು. ಬೆಂಗಳೂರು, ದಕ್ಷಿಣ ಕನ್ನಡ ಮತ್ತು ಧಾರವಾಡ ಈ ಮೂರು ಜಿಲ್ಲೆಗಳಿಗೇ ಒಟ್ಟು ಕಾರ್ಖಾನೆಗಳ ಸಂಖ್ಯೆಯಲ್ಲಿ ಮತ್ತು ಅವುಗಳಿಂದ ಉದ್ಯೋಗ ಪಡೆದವರ ಸಂಖ್ಯೆಯಲ್ಲಿ ಸಿಂಹಪಾಲು – ಹತ್ತಿರ ಹತ್ತಿರ ಶೇಕಡ ೬೦ರಷ್ಟು. ಪ್ರಾದೇಶಿಕ ಅಸಮತೋಲನವನ್ನು ಸರಿಪಡಿಸಲು ಹೊಸ ಕೈಗಾರಿಕಾ ಧೋರಣೆಯು ಹಿಂದುಳಿದ ಪ್ರದೇಶಗಳಲ್ಲಿ, ಅದರಲ್ಲಿಯೂ ಗ್ರಾಮಗಳಲ್ಲಿ, ಕೈಗಾರಿಕೆಗಳ ಬೆಳವಣಿಗೆಯ ಅಗತ್ಯವನ್ನು ಒತ್ತಿ ಹೇಳಿದೆ. ವಿವಿಧ ಪ್ರದೇಶಗಳ ಕೈಗಾರಿಕಾ ಪ್ರಗತಿಯಲ್ಲಿ ಸಮತೋಲನವನ್ನು ಸ್ಥಾಪಿಸಲು ರಾಜ್ಯದಲ್ಲಿ ಪ್ರೋತ್ಸಾಹಕಗಳ ಸಮೂಹವನ್ನ ಪ್ರಾರಂಭಿಸಲಾಗಿದೆ.

### ಸೌಲಭ್ಯ ಜಾಲದ ಬೆಳವಣಿಗೆ

ಕೃಷಿರಂಗ ಮತ್ತು ಕೈಗಾರಿಕಾರಂಗ ಎರಡರ ಅಭಿವೃದ್ಧಿಯಲ್ಲಿ ಸಮತೋಲನವನ್ನು ಸಾಧಿಸುವುದು ಮತ್ತು

ಪ್ರಾದೇಶಿಕ ಅಸಮತೋಲನವನ್ನು ಕಡಿಮೆಮಾಡುವುದು ಅಗತ್ಯವಾಗಿದೆ; ಆದ್ದರಿಂದ ಸೌಲಭ್ಯಗಳ ಜಾಲ ಆರ್ಥಿಕ ಮತ್ತು ಸಾಮಾಜಿಕ ತಳಹದಿಯನ್ನು ಸಂಸ್ಥೆಗಳ ತಳಹದಿಯನ್ನೂ ಬಲಗೊಳಿಸಲಾಯಿತು. ರಾಜ್ಯದಲ್ಲಿ ಸೌಲಭ್ಯ ಜಾಲದ ಅನುಕೂಲಗಳು ಸಾಕಷ್ಟಿವೆ. (ನಾಲ್ಕನೆಯ ಕೋಷ್ಟಕ).

ಉಳಿದೆಲ್ಲ ವಲಯಗಳಿಗೆ ಮುಖ್ಯವಾದ ಒಂದು ಅಂಶವನ್ನು ಒದಗಿಸುವ ಕೃಷಿ ಮತ್ತು ವಿದ್ಯುಚ್ಛಕ್ತಿ (ಶಕ್ತಿ) ವಲಯಗಳು ಎಲ್ಲ ಪಂಚವಾರ್ಷಿಕ ಯೋಜನೆಗಳಲ್ಲಿ ಗರಿಷ್ಠ ಹಣ ಹೂಡಿಕೆಯನ್ನು ಪಡೆದಿವೆ. ರಾಜ್ಯದಲ್ಲಿ ಬೇಸಾಯವಾದ ಪ್ರದೇಶದ ವಿಸ್ತೀರ್ಣವು ೧೯೫೬–೫೭ರಲ್ಲಿ ೭.೪೯ ಲಕ್ಷ ಹೆಕ್ಟೇರುಗಳಿಗೇರಿತು; ಎಂದರೆ ಶೇಕಡ ೨೦೦ಕ್ಕಿಂತ ಹೆಚ್ಚು ಬೆಳವಣಿಗೆ ಆದಂತಾಯಿತು. ನೀರ್ವಾಳಿ ಬೆಳೆಯ ಪ್ರದೇಶವನ್ನು ಕೃಷಿ ಮಾಡಿದ ಪ್ರದೇಶದ ಶತಾಂಶವಾಗಿ ಪರಿಗಣಿಸಿದಾಗ ೧೯೫೬–೫೭ರಲ್ಲಿ ೭.೪೦ ಇದ್ದದ್ದು ೧೯೭೯–೮೦ರಲ್ಲಿ ೨೧.೬೪ ಆಯಿತು. ಆರನೆಯ ಅವಧಿಯ ಕೊನೆಗೆ ಬೇಸಾಯದ ಪ್ರದೇಶದಲ್ಲಿ ೧೦ ಲಕ್ಷ ಹೆಕ್ಟೇರುಗಳಷ್ಟು ಏರಿಕೆಯಾಗುವ ನಿರೀಕ್ಷಣೆಯಿದೆ.

ಶಕ್ತಿ ಉತ್ಪಾದನೆಯ ವಲಯದಲ್ಲಿ ಪೂರ್ಣ ಸಾಮರ್ಥ್ಯವು ೧೯೫೬–೫೭ ರಲ್ಲಿ ೧೮೫.೬ ಮೆ. ವಾ. ಇದ್ದುದ್ದು ೧೯೭೬–೮೦ ರಲ್ಲಿ ೧೩೩೫ ಮೆ. ವಾ. ಆಯಿತು, ೧೯೮೦–೮೧ ರಲ್ಲಿ ೧೪೪೫.೬ ಮೆ. ವಾ. ಗಳಿಗೆ ಏರುವ ನಿರೀಕ್ಷಣೆಯಿದೆ. ಆರನೆಯ ಯೋಜನೆಯಲ್ಲಿ ಪೂರ್ಣ ಪ್ರಮಾಣದ ಗುರಿ ೨೨೩೦.೬ ಮೆ. ವಾ.

೧೯೫೬–೫೭ರಲ್ಲಿ ೮೧ ಕೋಟಿ ಘಟಕಗಳಷ್ಟು (ಯುನಿಟ್ಸ್) ವಿದ್ಯುಚ್ಛಕ್ತಿಯನ್ನು ಉತ್ಪಾದನೆ ಮಾಡಲಾಯಿತು. ೧೯೭೯–೮೦ ರಲ್ಲಿ ಇದು ೫೫೮.೪ ಕೋಟಿ ಘಟಕಗಳಿಗೇರಿತು. ೧೯೮೦–೮೧ರಲ್ಲಿ ೬೨೪.೬ ಕೋಟಿ ಘಟಕಗಳಷ್ಟು ಉತ್ಪಾದನೆಯಾಗುವ ನಿರೀಕ್ಷಣೆಯಿದೆ; ಎಂದರೆ ಹಿಂದಿನ ವರ್ಷಕ್ಕಿಂತ ಶೇಕಡ ೧೨ರಷ್ಟು ಏರಿದಂತಾಗುತ್ತದೆ. ೧೯೮೫ರ ಮಾರ್ಚ್ ತಿಂಗಳ ಕೊನೆಯ ಹೊತ್ತಿಗೆ ರಾಜ್ಯವು ೯೬೦.೨ ಕೋಟಿ ಘಟಕಗಳ ಗುರಿಯನ್ನು ಮುಟ್ಟುವ ನಿರೀಕ್ಷಣೆಯಿದೆ. ೧೯೮೦ರ ನವಂಬರ್ ೩೦ರ ಹೊತ್ತಿಗೆ ರಾಜ್ಯದಲ್ಲಿ ಶೇಕಡ ೬೧.೪ ಹಳ್ಳಿಗಳಿಗೆ ವಿದ್ಯುಚ್ಛಕ್ತಿಯ ಸೌಲಭ್ಯ ದೊರೆತಿತ್ತು; ಇದನ್ನು ಅಖಿಲ ಭಾರತದ ಸರಾಸರಿಯಾದ ಶೇಕಡ ೪೫.೧ರ ಜೊತೆಗೆ ಹೋಲಿಸಬೇಕು. ಗ್ರಾಮೀಣ ವಿದ್ಯುದೀಕರಣ ಯೋಜನೆಯ ಪ್ರಕಾರ ೧೯೮೧ ರ ಅಕ್ಟೋಬರ್ ಕೊನೆಗೆ ೧೭೨೩೩ ಹಳ್ಳಿಗಳಿಗೆ (ಶೇಕಡ ೬೪.೫೫) ವಿದ್ಯುಚ್ಛಕ್ತಿ ಪಡೆಯುತ್ತವೆ.

ಐಪಿ ಸೆಟ್ಟುಗಳನ್ನು ಚೈತನ್ಯಗೊಳಿಸುವ ಕಾರ್ಯಕ್ರಮಕ್ಕೆ ಈಚೆಗಿನ ವರ್ಷಗಳಲ್ಲಿ ತುಂಬ ಪ್ರೋತ್ಸಾಹ ದೊರೆತಿದೆ. ೧೯೫೬–೫೭ ರಲ್ಲಿ ೯೦೦೦ ಐಪಿ ಸೆಟ್ಟುಗಳನ್ನು ಚೈತನ್ಯಗೊಳಿಸಿದ್ದರೆ ಆ ಸಂಖ್ಯೆ ೧೯೮೦ರಲ್ಲಿ ೨.೮೭ ಲಕ್ಷಕ್ಕೂ ಏರಿತು; ೧೯೮೧ರ ಅಕ್ಟೋಬರ್ ಕೊನೆಗೆ ಚೈತನ್ಯ ಪಡೆದ ಐಪಿ ಸೆಟ್ಟುಗಳ ಸಂಖ್ಯೆ ೩.೧೯ ಲಕ್ಷಗಳನ್ನು ಮೀರಿತು.

ಭಾಗ್ಯಜ್ಯೋತಿ ಯೋಜನೆಯಲ್ಲಿ ಸಮಾಜದ ಆರ್ಥಿಕ ದುರ್ಬಲ ವರ್ಗದವರ ಪ್ರತಿಮನೆಗೂ ಒಂದು ದೀಪದ ಪಾಯಿಂಟನ್ನು ಕೊಡಲು ಯೋಚಿಸಿದೆ ೧೯೮೧–೮೨ರಲ್ಲಿ ೨೦,೦೦೦ ಮನೆಗಳಿಗೆ ಒಂದು ಬಲ್ಬಿನ ಸೌಲಭ್ಯ ಕೊಡುವ ಗುರಿಯಿದ್ದು, ೧೯೮೧ರ ಆಕ್ಟೋಬರ್ ಕೊನೆಯ ಹೊತ್ತಿಗೆ ೧೫,೦೦೦ ಮನೆಗಳಿಗೆ ಈ ಸೌಲಭ್ಯ ದೊರೆತಿತ್ತು.

ಅಕ್ಷರಸ್ಥರ ಸಂಖ್ಯೆ ಶೇಕಡ ೨೫.೪ ಇದ್ದದ್ದು ೧೯೭೧ ರಲ್ಲಿ ಇದು ೩೧.೫೨ಕ್ಕೆ ಏರಿತು. ೧೯೮೧ರ ಜನಗಣತಿಯ ಪ್ರಕಾರ ಈ ಸಂಖ್ಯೆ ೩೮.೪೧. ೧೯೫೬ರಿಂದ ಪ್ರಾಥಮಿಕ ಮತ್ತು ಸೆಕೆಂಡರಿ ಶಾಲೆಗಳ ಸಂಖ್ಯೆಯಲ್ಲಿ ಕಣ್ಣಿಗೆ ಕಾಣುವಷ್ಟು ಹೆಚ್ಚಳವಾಗಿದೆ. ೧೯೫೬–೫೭ರಲ್ಲಿ ಪ್ರಾಥಮಿಕ ಶಾಲೆಗಳ ಸಂಖ್ಯೆ ೧೬೦೭೯ ಇದ್ದದ್ದು ೧೯೭೯–೮೦ರಲ್ಲಿ ೩೪೪೩೧ ಆಯಿತು. ೧೯೫೬–೫೭ರಿಂದ ಸೆಕೆಂಡರಿ ಶಾಲೆಗಳ ಸಂಖ್ಯೆ ಶೇಕಡ ೬೦೦ರಷ್ಟು ಏರಿದೆ. ೧೯೫೬–೫೭ರಲ್ಲಿ ಪ್ರಾಥಮಿಕ ಶಾಲೆಗಳಲ್ಲಿದ್ದವರ ಸಂಖ್ಯೆ ೧೪.೬೮ ಲಕ್ಷವಾದರೆ ೧೯೭೯–೮೦ರಲ್ಲಿ ಈ ಸಂಖ್ಯೆ ೬೮.೬೦ ಲಕ್ಷಕ್ಕೇರಿತು. ಇದೇ ಅವಧಿಯಲ್ಲಿ ಸೆಕೆಂಡರಿ ಶಾಲೆಗಳಲ್ಲಿದ್ದವರ ಸಂಖ್ಯೆ ಶೇಕಡ ೨೫೦೦ರಷ್ಟು ಏರಿತು.

೧೯೫೬–೫೭ರ ಸಂಖ್ಯೆಯೊಂದಿಗೆ ಹೋಲಿಸಿದರೆ, ೧೯೭೯–೮೦ರ ಹೊತ್ತಿಗೆ ಆರೋಗ್ಯ ಸಂಸ್ಥೆಗಳ ಸಂಖ್ಯೆಯಲ್ಲಿ ಗಮನಾರ್ಹವಾದ ಹೆಚ್ಚಳವಾಗಿತ್ತು. ೧೯೫೬–೫೭ರಲ್ಲಿ ಸುಮಾರು ೯೭ ಆಸ್ಪತ್ರೆಗಳಿದ್ದವು, ೧೫೧ ಔಷಧಾಲಯಗಳು ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳಿದ್ದವು ಮತ್ತು ೧೦೫೯೦ ರೋಗಿಗಳಿಗೆ ಹಾಸಿಗೆಗಳಿದ್ದವು. ೧೯೭೯–೮೦ರ ಹೊತ್ತಿಗೆ ಈ ಸಂಖ್ಯೆಗಳು ಕ್ರಮವಾಗಿ ೨೪೫, ೧೭೬೫ ಮತ್ತು ೩೫೦೯ ಆಗಿದ್ದವು.

ಸಾಗಾಣಿಕೆ ಮತ್ತು ಸಂಪರ್ಕ ಸೌಲಭ್ಯಗಳಲ್ಲಿ ರಾಜ್ಯವು ಸಾಕಷ್ಟು ಪ್ರಗತಿಯನ್ನು ಸಾಧಿಸಿದೆ. ೧೯೫೬–೫೭ರಲ್ಲಿ ೪೩,೩೫೦ ಕಿಲೋ ಮೀಟರ್‌ಗಳಷ್ಟು ಉದ್ದದ ರಸ್ತೆಗಳಿದ್ದವು, ೧೯೭೯–೮೦ರಲ್ಲಿ ರಸ್ತೆಗಳ ಒಟ್ಟು ಉದ್ದ ೬೬,೬೦೦ ಕಿಲೋ ಮೀಟರ್‌ನಷ್ಟಿತ್ತು ಎಂದರೆ ಶೇಕಡ ೫೨ಕ್ಕಿಂತ ಹೆಚ್ಚು ಏರಿಕೆಯಾಯಿತು. ೧೯೭೯ರ ಮಾರ್ಚ್ ತಿಂಗಳ ಕೊನೆಗೆ ರಾಜ್ಯದಲ್ಲಿ ಪ್ರತಿ ೧೦೦ ಚದರ ಕಿಲೋ ಮೀಟರ್ ವಿಸ್ತೀರ್ಣಕ್ಕೆ ಇದ್ದ ರಸ್ತೆಯ ಉದ್ದ (೫೫ ಕಿಲೋ ಮೀಟರ್) ಅಖಿಲ ಭಾರತದ ಸರಾಸರಿಯಾದ ೪೯ ಕಿಲೋ ಮೀಟರ್‌ಗಿಂತ ಹೆಚ್ಚಾಗಿತ್ತು. ೧೯೭೮–೭೯ರ ಅಂತ್ಯದ ಹೊತ್ತಿಗೆ ರಾಜ್ಯದಲ್ಲಿ ೨೯೬೦ ಕಿಲೋ ಮೀಟರ್ ರೈಲ್ವೆ ಮಾರ್ಗ ಇದ್ದಿತು. ಅಂಚೆ ಕಛೇರಿಗಳ ಸಂಖ್ಯೆ ಸ್ವಲ್ಪ ಹೆಚ್ಚು ಕಡಿಮೆ ಎರಡರಷ್ಟಾಗಿದೆ, ದೂರವಾಣಿಗಳ ಸಂಖ್ಯೆ ಏಳರಷ್ಟು ಮತ್ತು ರೇಡಿಯೋಗಳ ಸಂಖ್ಯೆ ೯ರಷ್ಟು ಏರಿದೆ.

೧೯೫೬ರಿಂದ ಈಚೆಗೆ ರಾಜ್ಯದಲ್ಲಿ ಆರ್ಥಿಕ ಸೌಲಭ್ಯ ಜಾಲ ಉತ್ತಮಗೊಂಡಿದೆ. ೧೯೮೦ರ ಜೂನ್ ಕೊನೆಗೆ ಒಂದು ಲಕ್ಷ ಜನಸಂಖ್ಯೆಗೆ ಬ್ಯಾಂಕುಗಳ ಸಂಖ್ಯೆಯು ಅಖಿಲ ಭಾರತ ಸರಾಸರಿ ೫. ರಾಜ್ಯದ ಸರಾಸರಿ ೮. ೧೯೫೬–೫೭ರಿಂದ ವಾಣಿಜ್ಯ ಬ್ಯಾಂಕುಗಳ ಸಂಖ್ಯೆ ೪ರಷ್ಟಕ್ಕಿಂತಲೂ ಹೆಚ್ಚಾಗಿದೆ. ೧೯೮೦ರ ಮಾರ್ಚ್ ಕೊನೆಗೆ ರಾಜ್ಯದಲ್ಲಿ ೨೬೦೩ ಬ್ಯಾಂಕ್ ಕಛೇರಿಗಳಿದ್ದವು. ಸಹಕಾರೀ ಸಂಸ್ಥೆಗಳ ಸದಸ್ಯರ ಸಂಖ್ಯೆ ೩ರಷ್ಟು ಬೆಳೆದಿದೆ.

**ಸಮಸ್ಯೆಗಳು**

ಕೃಷಿ, ಕೈಗಾರಿಕೆ, ಸಾರಿಗೆ ಮತ್ತು ಸಂಪರ್ಕ ಮೊದಲಾದ ರಂಗಗಳಲ್ಲಿ ಗಮನಾರ್ಹವಾದ ಪ್ರಗತಿ ಸಾಧಿಸಿದ್ದರೂ ರಾಜ್ಯ ಹಲವು ಸಮಸ್ಯೆಗಳನ್ನು ಎದುರಿಸುತ್ತಿದೆ; ನಿರುದ್ಯೋಗ, ಸಾಕಷ್ಟು ಉದ್ಯೋಗವಿಲ್ಲದಿರುವುದು, ಪೂರ್ಣ ಸಾಮರ್ಥ್ಯವನ್ನೂ ಸಂಪನ್ಮೂಲಗಳನ್ನೂ ಸಾಕಷ್ಟು ಬಳಸಿಕೊಳ್ಳದೆ ಇರುವುದು, ಉದ್ಯೋಗ ಮತ್ತು ಆದಾಯದ ಸೃಷ್ಟಿಗಳಿಗೆ ಆಗಾಗ ತೀವ್ರ ಅಭಾವದಿಂದ ಬಳಲುವ ಕೃಷಿವಲಯವನ್ನೇ ಬಹುವಾಗಿ ನೆಚ್ಚಿಕೊಂಡಿರುವುದು, ಕೃಷಿಯ ಸಾಧ್ಯತೆಯನ್ನು ಪೂರ್ಣವಾಗಿ ಬಳಸಿಕೊಳ್ಳದಿರುವುದು, ಬೆಳವಣಿಗೆಯಲ್ಲಿ ಪ್ರಾದೇಶಿಕ

ಅಸಮತೋಲನ, ಜೀವನದ ಕನಿಷ್ಟ ಅಗತ್ಯಗಳು ಪೂರೈಸದಿರುವುದು, ಇವು ಇಂತಹ ಕೆಲವು ಸಮಸ್ಯೆಗಳು. (೧೯೭೭-೭೮ರಲ್ಲಿ) ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೪೮.೩ರಷ್ಟು ಮಂದಿ ದಾರಿದ್ರ್ಯರೇಖೆಯ ಕೆಳಗಿದ್ದರೆಂಬುದು ಈ ತೀವ್ರ ಸಮಸ್ಯೆಗಳ ಪರಿಣಾಮವನ್ನೂ ಪ್ರತಿಬಿಂಬಿಸುತ್ತದೆ. ಗ್ರಾಮೀಣ ವಲಯದಲ್ಲೂ, ನಗರ ವಲಯದಲ್ಲೂ ವಿದ್ಯಾವಂತ ನಿರುದ್ಯೋಗಿಗಳೂ ಸೇರಿದಂತೆ ನಿರುದ್ಯೋಗಿಗಳ ಸಂಖ್ಯೆ ಬೆಳೆಯುತ್ತಿದೆ; ಇದರಿಂದ ರಾಜ್ಯದಲ್ಲಿ ಯೋಜನೆಗಳನ್ನು ಸಿದ್ಧಗೊಳಿಸುವವರಿಗೆ ತೀವ್ರ ಆತಂಕವುಂಟಾಗಿದೆ. ಆದ್ದರಿಂದ ಆರನೆಯ ಪಂಚವಾರ್ಷಿಕ ಅವಧಿಯಲ್ಲಿ (ಸುಮಾರು ೭ ಲಕ್ಷಗಳಷ್ಟು ಹೊಸ ಉದ್ಯೋಗಗಳೂ ಸೇರಿದಂತೆ) ೮೦ ಲಕ್ಷ ಮಂದಿಗೆ ಹೊಸ ಉದ್ಯೋಗ ಅವಕಾಶಗಳನ್ನು ಕಲ್ಪಿಸಲು ತೀರ್ಮಾನ ಮಾಡಲಾಗಿದೆ.

ಉದ್ದೇಶಪೂರ್ವಕವಾಗಿ ಧೋರಣೆಯ ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಗತ ಮಾಡಲೇಬೇಕು, ಇಲ್ಲವಾದರೆ ಬೆಳವಣಿಗೆಯ ಪ್ರತಿಕ್ರಿಯೆಯಾಗುವಾಗ ಪ್ರಾದೇಶಿಕ ಅಸಮಾನತೆಗಳು ತಲೆದೋರಿಯೇ ತೋರುವುವು. ಏಕಮಾತ್ರ ಸೂಚಿಯಿಂದ ಪ್ರಾದೇಶಿಕ ಅಸಮತೋಲನವನ್ನು ಗುರುತಿಸುವುದರಿಂದ ಒಂದು ಪ್ರದೇಶದ ಸಮಗ್ರ ಬೆಳವಣಿಗೆಯ ಸ್ಪಷ್ಟ ಚಿತ್ರ ಸಿಕ್ಕಲಾರದು. ಇದರಿಂದ ಯೋಜನಾ ಇಲಾಖೆಯು ಬೇರೆ ಬೇರೆ ಪ್ರದೇಶಗಳು ಬೇರೆ ಬೇರೆ ಕಾಲಗಳಲ್ಲಿ ಎಷ್ಟು ಪ್ರಗತಿ ಹೊಂದಿದೆ ಎಂದು ನಿರ್ಧರಿಸಲು ಒಂದು ಸಂಘಟಿತ ಸೂಚಿಯನ್ನು ಸಿದ್ಧಗೊಳಿಸಿದೆ; ಇದರಲ್ಲಿ ೨೨ ಸೂಚಿಗಳನ್ನು ಆರು ವರ್ಗಗಳಾಗಿ ವಿಭಾಗಿಸಲಾಗಿದೆ. ಈ ಆರು ವರ್ಗಗಳು ಜನಸಂಖ್ಯೆಯ ಅಂಶಗಳು, ಔದ್ಯೋಗಿಕ ವಿನ್ಯಾಸ, ಭೂಮಿಯ ಬಳಕೆ, ಕೃಷಿ ಬೆಳವಣಿಗೆ, ಕೈಗಾರಿಕಾ ಬೆಳವಣಿಗೆ ಮತ್ತು ಸೌಲಭ್ಯ ಜಾಲದ ಬೆಳವಣಿಗೆ, ಪ್ರತಿಯೊಂದು ವಿಭಾಗಕ್ಕೂ, ಸೂಕ್ತ ಪ್ರಾಧಾನ್ಯವನ್ನು ಕೊಟ್ಟಿದೆ. (೫ನೆಯ ಕೋಷ್ಟಕ). ೧೯೬೦-೬೧ರಲ್ಲಿ ಹೆಚ್ಚಿನ ಬೆಳವಣಿಗೆ ಸಾಧಿಸಿದ್ದ ಜಿಲ್ಲೆ ದಕ್ಷಿಣ ಕನ್ನಡ. ಇದರ ಬೆಳವಣಿಗೆಯ ಸೂಚಿ ೨೩೦.೨೧ ಮತ್ತು ಬಹಳ ಹಿಂದುಳಿದ ಜಿಲ್ಲೆ ಗುಲ್ಬರ್ಗ, ಇದರ ಬೆಳವಣಿಗೆಯ ಸೂಚಿ ೬೦.೧೦ ಇವೆರಡರ ನಡುವಣ ವ್ಯತ್ಯಾಸ ೧೭೦.೧೧. ಜಿಲ್ಲೆಗಳ ಬೆಳವಣಿಗೆಯಲ್ಲಿ ಎಷ್ಟು ತೀವ್ರವಾದ ವ್ಯತ್ಯಾಸಗಳಿವೆ ಎನ್ನುವುದನ್ನು ಇವು ತೋರಿಸುತ್ತವೆ. ೧೯೭೦-೭೧ರ ಹೊತ್ತಿಗೆ ಈ ವ್ಯತ್ಯಾಸವನ್ನು ೧೨೮.೭೫ಕ್ಕೆ ಇಳಿಸಲಾಗಿತ್ತು, ಪ್ರಾದೇಶಿಕ ಅಸಮತೋಲನದ ಇಳಿಮುಖವನ್ನು ಇದು ತೋರಿಸುತ್ತದೆ. ಆದರೆ ಸರಿಪಡಿಸುವ ಕ್ರಮಗಳನ್ನು ಕೈಗೊಂಡರೂ ೧೯೭೯ರ ಹೊತ್ತಿಗೆ ಪ್ರಾದೇಶಿಕ ಅಸಮತೋಲನದಲ್ಲಿ ಏರುವ ಪ್ರವೃತ್ತಿ ಕಂಡು ಬರುತ್ತಿತ್ತು, ವ್ಯತ್ಯಾಸದ ಪರಿಮಿತಿ ೧೩೨.೮ ಆಗಿತ್ತು.

### ಸರಿಪಡಿಸುವ ಕ್ರಮಗಳು

ಪ್ರಾದೇಶಿಕ ಬೆಳವಣಿಗೆಯಲ್ಲಿ ಸಮತೋಲನವನ್ನು ಸಾಧಿಸುವ ಉದ್ದೇಶದಿಂದ ಕರ್ನಾಟಕ ಸರ್ಕಾರವು ೧೯೭೮-೭೯ರಿಂದ ರಾಜ್ಯ ಮತ್ತು ಜಿಲ್ಲೆ ಈ ಎರಡು ಮಟ್ಟಗಳಲ್ಲಿ ಎರಡು ಹಂತಗಳ ಯೋಜನಾ ಸಿದ್ಧತೆಯ ಕ್ರಮವನ್ನು ಪ್ರಾರಂಭಿಸಿದೆ. ಈ ಹೊಸ ವಿನ್ಯಾಸದಲ್ಲಿ ಯೋಜನೆಯು ಒಳಗೊಳ್ಳುವ ಉಪಯೋಜನೆಗಳನ್ನು ರಾಜ್ಯ ಮತ್ತು ಜಿಲ್ಲಾ ವಲಯ ಉಪಯೋಜನೆಗಳೆಂದು ವಿಂಗಡಿಸುತ್ತಾರೆ; ಯೋಜನಾ ಇಲಾಖೆಯು ರೂಪಿಸಿರುವ ವಸ್ತುನಿಷ್ಠ ನಿರ್ಣಯಾಂಶಗಳ ಆಧಾರದ ಮೇಲೆ (ಸೂಕ್ತ ಪ್ರಾಧಾನ್ಯದೊಂದಿಗೆ) ವಿವಿಧ ಜಿಲ್ಲೆಗಳಿಗೆ ತೊಡಗಿಸುವ ಹಣವನ್ನು ಹಂಚಲಾಗುತ್ತದೆ. ತಾಲ್ಲೂಕು ಯೋಜನೆಗಳನ್ನು ಸಿದ್ಧಗೊಳಿಸಿ ಅವನ್ನು ಜಿಲ್ಲೆಯ ಯೋಜನೆಗಳಲ್ಲಿ ಅಳವಡಿಸುವುದರ ಮೂಲಕ ಕೆಳಮಟ್ಟದಿಂದ ಪ್ರಾರಂಭಿಸಿ ಯೋಜನೆಯನ್ನು ಸಿದ್ಧಗೊಳಿಸುವ ವಿಧಾನವನ್ನು ಸಾರ್ಥಕ ಮಾಡಲಾಗಿದೆ. ಧೋರಣೆಗಳ ಸಮುಚ್ಚಯವು ಇವನ್ನಲ್ಲದೆ ಗುಡ್ಡಗಾಡು ಪ್ರದೇಶ, ಬುಡಕಟ್ಟುಗಳ ಪ್ರದೇಶ ಮತ್ತು ಹಿಂದುಳಿದ ಪ್ರದೇಶಗಳ ಸುಧಾರಣೆಗಾಗಿ ನಿರ್ದಿಷ್ಟ ಕಾರ್ಯಕ್ರಮಗಳನ್ನು ಒಳಗೊಂಡಿದೆ.

ಬಡತನ, ನಿರುದ್ಯೋಗ, ಸಾಕಷ್ಟು ಉದ್ಯೋಗವಿಲ್ಲದಿರುವುದು ಮತ್ತು ಇತರ ಸಾಮಾಜಿಕ-ಆರ್ಥಿಕ ಸಮಸ್ಯೆಗಳನ್ನು ಪರಿಹರಿಸಲು ನಾಲ್ಕನೆಯ ಪಂಚವಾರ್ಷಿಕ ಯೋಜನೆಯ ಪ್ರಾರಂಭದಿಂದ ರಾಜ್ಯದಲ್ಲಿ ಹಲವಾರು ವಿಶೇಷ ಕಾರ್ಯಕ್ರಮಗಳನ್ನು ಪ್ರಾರಂಭಿಸಲಾಗಿದೆ, ಇದರಿಂದ ಜನತೆಯ ದುರ್ಬಲ ವರ್ಗದವರು ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಪಾಲುಗೊಳ್ಳಲು ಸಾಧ್ಯವಾಗಿರುವುದಲ್ಲದೆ ಇದರ ಫಲವನ್ನು ಪಡೆದುಕೊಳ್ಳಲು ಸಾಧ್ಯವಾಗಿದೆ. ಸಣ್ಣ ರೈತರು, ಕೃಷಿಕ ಕಾರ್ಮಿಕರು, ಅಭಾವಪೀಡಿತ ಪ್ರದೇಶದ ಕಾರ್ಯಕ್ರಮ, ಗ್ರಾಮೀಣ ಉದ್ಯೋಗಗಳಿಗಾಗಿ ತುರ್ತು ಯೋಜನೆ, (ಉದ್ಯೋಗ ಸ್ಥಿರೀಕರಣ ಯೋಜನೆ, ಸ್ವಪಂಡರಿ ಉದ್ಯೋಗ ಯೋಜನೆ, (ಉದ್ಯೋಗ ಸ್ಥಿರೀಕರಣ ಯೋಜನೆಯು ಸೇರಿದಂತೆ) ರಾಷ್ಟ್ರೀಯ ಗ್ರಾಮೋದ್ಯೋಗ ಯೋಜನೆ, ಸಮಗ್ರ ಗ್ರಾಮೀಣ ಬೆಳವಣಿಗೆ ಯೋಜನೆ ಇವು ಈ ವಿಶೇಷ ಕಾರ್ಯಕ್ರಮಗಳಲ್ಲಿ ಕೆಲವು. ಈ ಯೋಜನೆಗಳನ್ನು ಪರಿಣಾಮಕಾರಿಯಾಗಿ ಸಂಘಟಿಸಿ ಕಾರ್ಯಗತಮಾಡಲು ರಾಜ್ಯವು ಪ್ರತಿ ಜಿಲ್ಲೆಯಲ್ಲಿ ಒಂದು ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸೊಸೈಟಿಯನ್ನು ರಚಿಸಿದೆ; ಇದರಿಂದ ಹಲವು ಸಂಸ್ಥೆಗಳಿಂದ ಆಗುವ ಗೊಂದಲವನ್ನು ತಪ್ಪಿಸಲು ಸಾಧ್ಯವಾಗಿದೆ.

ತೀವ್ರಗಾಮಿ ಸಾಮಾಜಿಕ- ಆರ್ಥಿಕ ಕಾರ್ಯಕ್ರಮಗಳನ್ನು ಸಾಮಾನ್ಯ ಮನುಷ್ಯನಿಗೆ ಪ್ರಯೋಜನಕಾರಿಯಾಗುವಂತೆ ಸುಗಮವಾಗಿ ಕಾರ್ಯಗತ ಮಾಡುವ ಮುಖ್ಯ ಉದ್ದೇಶದಿಂದ ರಾಜ್ಯದಲ್ಲಿ ಸಂಸ್ಥೆಗಳ ಮತ್ತು ವ್ಯವಸ್ಥಾಪಕ ಆಧಾರ ಚೌಕಟ್ಟಿನ ಪುನರ್ದಿಗ್ದರ್ಶನ ಮಾಡಿದುದಲ್ಲದೆ ಸಂಸ್ಥೆಗಳಿಗೆ ಸಂಬಂಧಪಟ್ಟಂತೆ ಹಲವಾರು ಹೊಸ ಪ್ರಯೋಗಗಳನ್ನು ಮಾಡಲಾಗಿದೆ.

ಸಹಕಾರ ಸಂಸ್ಥೆಗಳ ಸದಸ್ಯತ್ವ ಎಲ್ಲರಿಗೂ ದೊರೆವಂತೆ ಮಾಡಿ ಸರಳಗೊಳಿಸಿರುವುದು, ನಿರ್ದೇಶಕರಲ್ಲಿ ಬಹುಮಂದಿಯನ್ನು ಅಧ್ಯಕ್ಷರನ್ನೂ ಸಣ್ಣ ಪ್ರಮಾಣದ ಮತ್ತು ರೈತರಿಂದಲೇ ಆರು ವರ್ಷಗಳ ನಿಯಮಿತ ಅವಧಿಗೆ ಆರಿಸಿರುವುದು ಇಂತಹ ಕ್ರಮಗಳಿಂದ ಅವು ವಾಸ್ತವವಾಗಿ ದುರ್ಬಲ ವರ್ಗದವರಿಗೆ ನೆರವಾಗುವಂತೆ ಪುನರ್‌ವ್ಯವಸ್ಥೆ ಮಾಡಲಾಗಿದೆ.

ಪ್ರತಿ ತಾಲೂಕಿನಲ್ಲೂ ಭೂನ್ಯಾಯ ಮಂಡಲಿಯನ್ನು ನೇಮಕ ಮಾಡುವುದು ಸಂಸ್ಥೆಗಳ ಕೆಲಸದಲ್ಲಿ ನಡೆಸಿದ ಒಂದು ಮುಖ್ಯ ಪ್ರಯೋಗ. ೧೯೮೧ರ ಸೆಪ್ಟೆಂಬರ್ ಹೊತ್ತಿಗೆ ಕರ್ನಾಟಕ ಭೂಸುಧಾರಣಾ ಕಾಯಿದೆಯ ಪ್ರಕಾರ ೪೫.೯೭ ಲಕ್ಷ ಎಕರೆಗಳಿಗೆ ಸಂಬಂಧಿಸಿದಂತೆ ೮.೧೦೦ ಲಕ್ಷ ಅರ್ಜಿಗಳು ಬಂದಿದ್ದವು. ಇವುಗಳಲ್ಲಿ ೧೭.೪೬ ಲಕ್ಷ ಎಕರೆಗಳಿಗೆ ಸಂಬಂಧಿಸಿದಂತೆ ೭.೩೮ ಲಕ್ಷ ಅರ್ಜಿಗಳನ್ನು ವಿಲೇವಾರಿ ಮಾಡಲಾಯಿತು. ೩.೧೪ ಲಕ್ಷ ಮಾಜಿ ಗೇಣಿದಾರರಿಗೆ ಗೇಣಿಪತ್ರಗಳನ್ನು ಕೊಡಲಾಯಿತು.

ಹಿಂದುಳಿದ ವರ್ಗಗಳು ಮತ್ತು ಅಲ್ಪ ಸಂಖ್ಯಾಕರಲ್ಲಿ ವಿದ್ಯಾಭ್ಯಾಸವನ್ನು ಬೆಳೆಸಲು ಒಂದು ಹಿಂದುಳಿದ ವರ್ಗಗಳ

ಮತ್ತು ಅಲ್ಪ ಸಂಖ್ಯಾಕರ ನಿರ್ದೇಶನಾಲಯವನ್ನು ಪ್ರಾರಂಭಿಸಲಾಯಿತು. ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಬುಡಕಟ್ಟುಗಳ ಆರ್ಥಿಕ ಸುಧಾರಣೆಯ ಪ್ರಯತ್ನಗಳಲ್ಲಿ ನೆರವಾಗಲು ಕರ್ನಾಟಕವು ಪರಿಶಿಷ್ಟ ಜಾತಿಗಳ ಮತ್ತು ಪರಿಶಿಷ್ಟ ಬುಡಕಟ್ಟುಗಳ ಅಭಿವೃದ್ಧಿ ನಿಗಮವನ್ನು ರಚಿಸಿದೆ.

ರೇಷ್ಮೆ ಕೈಗಾರಿಕೆಯನ್ನು ೨೫೦ ಮಂದಿ ಖಾಸಗಿ ವರ್ತಕರ ಕ್ರೂರ ಹಿಡಿತದಿಂದ ತಪ್ಪಿಸಲು ಮತ್ತು ರೇಷ್ಮೆ ನೂಲು ತೆಗೆಯುವವರನ್ನು ಅಮಾನುಷ ಶೋಷಣೆಯಿಂದ ರಕ್ಷಿಸಲು ವ್ಯವಸ್ಥಿತ ರೆಗ್ಯುಲೇಟೆಡ್ ಮಾರ್ಕೆಟ್ ಆಗಿ ೧೯೭೮ರ ಡಿಸೆಂಬರ್‌ನಲ್ಲಿ ಒಂದು ರೇಷ್ಮೆ ವಿನಿಮಯ ಕೇಂದ್ರವನ್ನು ಸ್ಥಾಪಿಸಲಾಯಿತು.

ಈವರೆಗಿನ ವಿಶ್ಲೇಷಣೆಯಿಂದ ೧೯೫೬ರಲ್ಲಿ ಪುನರ್ವ್ಯವಸ್ಥೆಯಾದ ನಂತರ ರಾಜ್ಯವು ಹಲವು ವಲಯಗಳಲ್ಲಿ ವಿಶೇಷ ಪ್ರಗತಿಯನ್ನು ಸಾಧಿಸಿದೆ ಎನ್ನುವುದು ಸ್ಪಷ್ಟವಾಗಿದೆ. ಕೆಲವು ರಂಗಗಳಲ್ಲಿನ ದೌರ್ಬಲ್ಯವನ್ನು ಕೊನೆಗಾಣಿಸಲು ಮತ್ತು ಭವಿಷ್ಯದಲ್ಲಿನ ಅಭಿವೃದ್ಧಿಗೆ ಗಟ್ಟಿಯಾದ ಬುನಾದಿಯನ್ನು ನಿರ್ಮಿಸಲು ಕರ್ನಾಟಕ ಸರ್ಕಾರವು ೨೫೦೦ ಕೋಟಿ ರೂಪಾಯಿಗಳ ವೆಚ್ಚವಾಗುವ ಒಂದು ಮಹದಾಕಾಂಕ್ಷೆಯ ಯೋಜನೆಯನ್ನು ಸಿದ್ಧಗೊಳಿಸಿದೆ. ಹಲವು ವಲಯಗಳಿಗೆ ಈ ಹಣವನ್ನು ಸೂಕ್ತವಾಗಿ ವಿತರಣೆ ಮಾಡಲಾಗಿದೆ. ಈಗಾಗಲೇ ಸೃಷ್ಟಿಯಾಗಿರುವ ಸಂಸ್ಥೆಗಳ ಮತ್ತು ವ್ಯವಸ್ಥೆಯ ಚೌಕಟ್ಟು ಮತ್ತು ಸೌಲಭ್ಯ ಜಾಲದ ಬೆಳವಣಿಗೆ ಇರುವುದರಿಂದ ರಾಜ್ಯವು ಅಭಿವೃದ್ಧಿ ಪ್ರಯತ್ನಗಳಲ್ಲಿ ಮುಂದೆ ಸಾಗುವ ಮತ್ತು ಜನಸಾಮಾನ್ಯರ ಜೀವನ ಮಟ್ಟವನ್ನು ಮತ್ತಷ್ಟು ಮೇಲಕ್ಕೆತ್ತುವ ಭರವಸೆಯನ್ನು ಹೊಂದಿದೆ. ಹೀಗೆ ಜೀವನ ಮಟ್ಟವನ್ನು ಸುಧಾರಿಸುವುದೇ ಅಭಿವೃದ್ಧಿಯ ಕಟ್ಟಕಡೆಯ ಗುರಿ.

**ಕನ್ನಡ ಅನುವಾದ: ಎಲ್. ಎಸ್. ಶೇಷಗಿರಿ ರಾವ್**

ಕೋಷ್ಟಕ – 1

## ಕೆಲವು ಆಯ್ದ ಅಭಿವೃದ್ಧಿ ಸೂಚಿಗಳು

| ಕ್ರಮ ಸಂಖ್ಯೆ ವಿವರಗಳು | ಸಂಬಂಧಿಸಿದ ವರ್ಷ | ಘಟಕ | ಕರ್ನಾಟಕ | ಅಖಿಲ ಭಾರತ |
|---|---|---|---|---|
| 1. ಸಾಮಾನ್ಯ: | | | | |
| ಜನಸಂಖ್ಯೆ | 1981 ಜನಗಣತಿ | ಲಕ್ಷಗಳು | 337.43 | 838.10 |
| ಜನಸಾಂದ್ರತೆ | ,, | ಚದರ ಕಿ. ಮೀ. | 193 | 221 |
| ಅಕ್ಷರಸ್ಥರ ಪ್ರಮಾಣ | ,, | ಶೇಕಡಾ | 38.41 | 36.17 |
| 2. ದಾರಿದ್ರ್ಯ ರೇಖೆಯ ಕೆಳಗಿರುವ ಜನರ ಸಂಖ್ಯೆ | | | | |
| ಅಂದಾಜು ಒಟ್ಟು ಜನಸಂಖ್ಯೆಯ ಶತಾಂಶವಾಗಿ ದಾರಿದ್ರ್ಯ | 1977–78 | ಶೇಕಡಾ | 48.34 | 48.13 |
| ಅ) ಗ್ರಾಮೀಣ | 1977–78 | ಶೇಕಡಾ | 49.88 | 50.82 |
| ಆ) ನಗರ ಪ್ರದೇಶ | 1977–78 | ಶೇಕಡಾ | 43.97 | 38.19 |
| 3. ರಾಜ್ಯ / ರಾಷ್ಟ್ರ ವರಮಾನ (ರೂಢಿಯಲ್ಲಿದ್ದ ಬೆಲೆಗಳ ಪ್ರಕಾರ) | 1979–80 | ಕೋಟಿ ರೂ.ಗಳು | 4,393 | 90,374 |
| ಸರಾಸರಿ ರಾಜ್ಯ/ರಾಷ್ಟ್ರ ವರಮಾನ (ರೂಢಿಯಲ್ಲಿದ್ದ ಪ್ರಕಾರ) | 1979–80 | ರೂ.ಗಳು | 1,267 | 1,379 |
| ಸರಾಸರಿ ರಾಜ್ಯ ವರಮಾನದ ಬೆಳವಣಿಗೆಯ ಪ್ರಮಾಣ (1970–71ರ ಬೆಲೆಗಳ ಪ್ರಕಾರ) | 1970–71 ಮತ್ತು 1979–80ರ ನಡುವೆ | ಶತಾಂಶ | 0.5 | 0.8 |
| ರಾಜ್ಯ/ರಾಷ್ಟ್ರ ವರಮಾನದ ರಚನೆ (ರೂಢಿಯಲ್ಲಿದ್ದ ಬೆಲೆಗಳ ಪ್ರಕಾರ) | | | | |
| ರಾಜ್ಯ/ರಾಷ್ಟ್ರ ಒಳ ಉತ್ಪನ್ನದಲ್ಲಿ ಭಾಗ (ರೂಢಿಯಲ್ಲಿದ್ದ ಬೆಲೆಯ ಪ್ರಕಾರ) | 1977–78 | ಶತಾಂಶ | | |
| ಅ) ಕೃಷಿ ಮತ್ತು ಪಶುಸಂಗೋಪನೆ | | | 48.6 | 40.5 |
| ಆ) ತಯಾರಿಕೆ | | | 1.9 | 15.2 |
| ಇ) ಸಾರ್ವಜನಿಕ ಆಡಳಿತ ಮತ್ತು ಇತರ ಸೇವೆಗಳು | | | 7.7 | 9.8 |
| 4. ನಿರುದ್ಯೋಗ (ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಉದ್ಯೋಗಗಳಿಗಾಗಿ ನೋಂದಣಿ ಮಾಡಿಸಿಕೊಂಡವರು) | | | | |
| ನಿರುದ್ಯೋಗಿಗಳು | 1980ರ ಸೆಪ್ಟೆಂಬರ 30 | '000 ಸಂಖ್ಯೆ | 597 | 16,200 |
| ವಿದ್ಯಾವಂತ ನಿರುದ್ಯೋಗಿಗಳು | 1980ರ ಜೂನ್ 30 | '000 ಸಂಖ್ಯೆ | 363.3 | 7297.0 |
| 5. ಆರೋಗ್ಯ: | | | | |
| '000 ಜನಸಂಖ್ಯೆಗೆ ಆಸ್ಪತ್ರೆಗಳಲ್ಲಿ ಹಾಸಿಗೆಗಳ ಸಂಖ್ಯೆ | 1977 ಡಿಸೆಂಬರ್ ಅಂತ್ಯ | ಸಂಖ್ಯೆ | 94.5 | 79.0 |
| ವಿಸ್ತೀರ್ಣದ '000 ಚ. ಕಿ. ಮೀ.ಗೆ ಆಸ್ಪತ್ರೆಗಳ ಸಂಖ್ಯೆ | 1977 | ಸಂಖ್ಯೆ | 1.1 | 1.6 |
| 6. ಲಭ್ಯವಿರುವದರ ಸರಾಸರಿ: | | | | |
| ಅ) ಆಹಾರ ಕಾಳುಗಳು | 1979–80 | ದಿನಕ್ಕೆ ಗ್ರಾಂ | 515 | 384 |
| ಆ) ದ್ವಿದಳ ಧಾನ್ಯಗಳು | 1979–80 | ,, | 47 | 30 |
| ಇ) ಹಾಲು | 1977–78 | ವರ್ಷಕ್ಕೆ ಕೆ. ಜಿ. | 41 | 45 |

ಕೋಷ್ಟಕ 1 (ಮುಂದುವರಿದುದು)

| | | | | |
|---|---|---|---|---|
| 7. ಸರಾಸರಿ: | | | | |
| ಅ) ಆಸ್ತಿ | 1971–72 | ರೂ.ಗಳು | 10,031 | 11,345 |
| ಆ) ಸಾಲ | 1971–72 | ರೂ.ಗಳು | 1,515 | 1,167 |
| 8. ನೀರಾವರಿ: | | | | |
| ನಿವ್ವಳ ಬಿತ್ತನೆ ವಿಸ್ತೀರ್ಣಕ್ಕೆ ನಿವ್ವಳ ನೀರಾವರಿ ವಿಸ್ತೀರ್ಣದ ಶತಾಂಶ | 1976–77 | ಶತಾಂಶ | 13.2 | 24.6 |
| 9. ಶಕ್ತಿ: | | | | |
| ಸರಾಸರಿ ಶಕ್ತಿ ಬಳಕೆ | | | | |
| ಒಟ್ಟು | 1980 | ಕೆ. ಡಬ್ಲ್ಯು. ಎಚ್. | 153 | 134 |
| ಕೈಗಾರಿಕೆಗಳಿಗಾಗಿ | 1978–79 | ಕೆ. ಡಬ್ಲ್ಯು. ಎಚ್. | 132 | 87 |
| ಒಟ್ಟು ಹಳ್ಳಿಗಳ ಸಂಖ್ಯೆಯಲ್ಲಿ ವಿದ್ಯುಚ್ಛಕ್ತಿ ಪಡೆದ ಹಳ್ಳಿಗಳ ಶತಾಂಶ | 30ನೇ ನವೆಂಬರ್ | ಶತಾಂಶ | 61.4 | 45.1 |
| 10. ಸಾರಿಗೆ ಮತ್ತು ಸಂಪರ್ಕ: | | | | |
| ವಿಸ್ತೀರ್ಣದ ಪ್ರತಿ 100 ಚ.ಕಿ.ಮೀ.ಗೆ ರಸ್ತೆ ಉದ್ದ (ಕಿ.ಮೀ.ಗಳಲ್ಲಿ) | 1979ರ ಮಾರ್ಚ್ 31 | ಕಿ. ಮೀ. | 55 | 49 |
| ಜನಸಂಖ್ಯೆಯಲ್ಲಿ ಪ್ರತಿ ಲಕ್ಷಕ್ಕೆ ಸಾಮಾನು ಸಾಗಾಣಿಕೆ ವಾಹನಗಳು | 1978 ಮಾರ್ಚ್ 31 | ಸಂಖ್ಯೆ | 71 | 6 |
| ವಿಸ್ತೀರ್ಣದ '000 ಚ.ಕಿ.ಮೀ.ಗೆ ರೈಲ್ವೆ ಮಾರ್ಗ, ಕಿ.ಮೀ.ಗಳಲ್ಲಿ | 1979ರ ಮಾರ್ಚ್ 31 | ಕಿ. ಮೀ. | 15 | 18 |
| ವಿಸ್ತೀರ್ಣದ '000 ಚ.ಕಿ.ಮೀ.ಗೆ ರಾಷ್ಟ್ರೀಯ ಹೆದ್ದಾರಿಯ ಉದ್ದ | 1979ರ ಮಾರ್ಚ್ 31 | ಕಿ. ಮೀ. | 110.3 | 88.8 |
| ಜನಸಂಖ್ಯೆಯ ಪ್ರತಿ ಲಕ್ಷಕ್ಕೆ ಅಂಚೆ ಕಚೇರಿಗಳ ಸಂಖ್ಯೆ | 1980ರ ಮಾರ್ಚ್ 31 | ಸಂಖ್ಯೆ | 26.6 | 22.1 |
| ಒಂದು ಅಂಚೆ ಕಚೇರಿಯ ಸೇವೆ ಪಡೆಯುವ ಪ್ರದೇಶ | 1979ರ ಮಾರ್ಚ್ 31 | ಚ. ಕಿ.ಮೀ. | 21.3 | 25.1 |
| ದೂರವಾಣಿ – ಕಾರ್ಯನಿರತವಾಗಿರುವ ಜೋಡಣೆಗಳು | 1977ರ ಮಾರ್ಚ್ 31 | ಜನಸಂಖ್ಯೆಯ ಪ್ರತಿ '000 | 2.8 | 2.7 |
| 11. ವಿದ್ಯಾಭ್ಯಾಸ: | | | | |
| ಶಿಕ್ಷಣ ಸೌಲಭ್ಯಗಳು (ಸೇರುವಿಕೆ) – ಸ್ಟಾಂಡರ್ಡ್‌ನಲ್ಲಿ ವಯೋಮಿತಿಯ ಶತಾಂಶ | 1976–77 | | | |
| ಅ) 1ರಿಂದ 5 | | ಶತಾಂಶ | 78.2 | 80.9 |
| ಆ) 6ರಿಂದ 8 | | ,, | 43.1 | 37.0 |
| ಇ) 9ರಿಂದ 12 | | ,, | 26.4 | 20.9 |
| 12. ಬ್ಯಾಂಕ್ ವ್ಯವಹಾರ: | | | | |
| ಜನಸಂಖ್ಯೆಯಲ್ಲಿ ಲಕ್ಷಕ್ಕೆ ಬ್ಯಾಂಕ್ ಕಚೇರಿಗಳು | 1981 ಏಪ್ರಿಲ್ ಕೊನೆ | ಸಂಖ್ಯೆ | 7.5 | 5.1 |
| ಸರಾಸರಿ ಬ್ಯಾಂಕ್ ಠೇವಣಾತಿ | 1979ರ ಡಿಸೆಂಬರ್ ಕೊನೆ | ರೂ.ಗಳು | 467 | 483 |
| ಸರಾಸರಿ ಬ್ಯಾಂಕ್ ಸಾಲ | ಡಿಸೆಂಬರ್ ಕೊನೆ | ರೂ.ಗಳು | 361 | 330 |
| ಆದ್ಯತೆಯ ವಲಯಗಳಿಗೆ ಬ್ಯಾಂಕ್ ಸಾಲದಲ್ಲಿ ಪಾಲು | 1979ರ ಡಿಸೆಂಬರ್ ಕೊನೆ | ಶತಾಂಶ | 44.3 | 33.5 |

ಕೋಷ್ಟಕ – 2

ಕರ್ನಾಟಕದಲ್ಲಿ ಆಯ್ದ ಬೆಳೆಗಳ ವಿಸ್ತೀರ್ಣ ಮತ್ತು ಉತ್ಪಾದನೆ

ವಿಸ್ತೀರ್ಣ: ಲಕ್ಷ ಹೆಕ್ಟೇರುಗಳಲ್ಲಿ
ಉತ್ಪಾದನೆ: ಲಕ್ಷ ಟನ್ನುಗಳಲ್ಲಿ

| ಕ್ರಮ ಸಂಖ್ಯೆ | ಬೆಳೆ | 1960 – 61 | | 1971 – 72 | | 1979 – 80 | | 1980 – 81 | |
|---|---|---|---|---|---|---|---|---|---|
| | | ವಿಸ್ತೀರ್ಣ | ಬೆಳೆ | ವಿಸ್ತೀರ್ಣ | ಬೆಳೆ | ವಿಸ್ತೀರ್ಣ | ಬೆಳೆ | ವಿಸ್ತೀರ್ಣ | ಬೆಳೆ |
| 1. | ಆಹಾರ ಧಾನ್ಯಗಳು | 75.80 | 39.30 | 74.64 | 60.25 | 70.93 | 70.79 | | 59.60 |
| 2. | ಕಬ್ಬು | 00.72 | 51.84 | 1.04 | 91.81 | 1.49 | 98.40 | | 120.96 |
| 3. | ಹತ್ತಿ | 9.84 | 4.05 | 11.25 | 6.16 | 9.85 | 7.06 | | 9.00 |
| 4. | ಎಣ್ಣೆ ಬೀಜಗಳು | 12.47 | 5.10 | 14.29 | 8.76 | 13.24 | 8.43 | | 10.60 |
| 5. | ಬೇಳೆಗಳು | 13.06 | 3.52 | 14.18 | 5.46 | 13.79 | 5.89 | | 6.21 |
| 6. | ಹೊಗೆಸೊಪ್ಪು | 00.39 | 0.23 | 00.34 | 0.23 | 00.45 | 0.27 | | 0.45 |

ಪ್ರತಿಯೊಂದೂ 170 ಕೆ. ಜಿ. ಗಳ ಬೇಲ್‌ನಲ್ಲಿ.

ಕೋಷ್ಟಕ – 3

ಕರ್ನಾಟಕದಲ್ಲಿ ಆಯ್ದ ಉತ್ಪನ್ನಗಳ ಉತ್ಪಾದನೆ (ಟನ್‌ಗಳಲ್ಲಿ)

| ಕ್ರಮ ಸಂಖ್ಯೆ | ವಿವರಗಳು | 1960 – 61 | 1971 – 72 | 1978 – 79 | 1979 – 80 |
|---|---|---|---|---|---|
| 1. | ಕಬ್ಬಿಣ ಮತ್ತು ಉಕ್ಕು (ಬೀಡು ಕಬ್ಬಿಣ, ಮಾರಾಟದ ಉಕ್ಕು ಮತ್ತು ಉಕ್ಕು ಗಟ್ಟಿಗಳು) | 1,67,131 | 4,10,710 | 2,95,938 | 2,84,701 |
| 2. | ಸಿಮೆಂಟು | 7,25,200 | 12,42,439 | 17,25,527 | 14,71,953 |
| 3. | ಸಕ್ಕರೆ | 1,23,383 | 2,57,851 | 5,38,504 | 2,84,090 |
| 4. | ಕಾಗದ | 33,735 | 73,277 | 93,811 | 65,827 |
| 5. | ವನಸ್ಪತಿ | 4,029 | 5,465 | 1,779 | 1,965 |
| 6. | ಕಬ್ಬಿಣದ ಅದುರು | — | — | 31,26,000 | 31,09,000 |
| 7. | ಬಂಗಾರ (ಕೆ. ಜಿ.ಗಳು) | — | — | 2,497 | 2,531 |
| 8. | ಸಾಬೂನು | — | — | 7,441 | 8,023 |
| 9. | ರೇಷ್ಮೆ ಬಟ್ಟೆಗಳು ('000 ಮೀಟರ್‌ಗಳು) | 77.7 | 91.0 | — | 90.3 |
| 10. | ಗಂಧದೆಣ್ಣೆ (ಕೆ. ಜಿ.ಗಳು) | 78,300 | 1,48,700 | — | 44,271 |

ಕೋಷ್ಟಕ – 4

ಕರ್ನಾಟಕ : ಸೌಲಭ್ಯಜಾಲದ ಅಭಿವೃದ್ಧಿ

| ಕ್ರಮ ಸಂಖ್ಯೆ | ವಿವರಗಳು | ಘಟಕಗಳು | 1956 – 57 | 1973 – 74 | 1979 – 80 |
|---|---|---|---|---|---|
| 1. | ನೀರಾವರಿ : | | | | |
| | ಅ) ನೀರಾವರಿ ದೊರೆತ ಪ್ರದೇಶ | ಲಕ್ಷ ಹೆಕ್ಟೇರು | 7.49 | 15.94 | 22.94 |
| | ಆ) ನಿವ್ವಳ ಬೆಳೆ ಬೆಳೆದ ಪ್ರದೇಶದ ಶತಾಂಶವಾಗಿ ನಿವ್ವಳ ನೀರಾವರಿ ದೊರೆತ ಪ್ರದೇಶ | ಶತಾಂಶ | 7.40 | 15.59 | 21.64 |
| 2. | ಶಕ್ತಿಯ ಅಭಿವೃದ್ಧಿ: | | | | |
| | ಅ) ಪೂರ್ಣ ಸಾಮರ್ಥ್ಯ | ಎಂ. ಡಬ್ಲ್ಯು. | 185.6 | 966.5 | 1334.8 |
| | ಆ) ಉತ್ಪಾದಿಸಿದ ವಿದ್ಯುಚ್ಛಕ್ತಿ | ದಶಲಕ್ಷ ಘಟಕಗಳು | 810 | 4579 | 5584 |
| | ಆ) ವಿದ್ಯುಚ್ಛಕ್ತಿ ಪಡೆದ ಹಳ್ಳಿಗಳು | ಸಂಖ್ಯೆ | 1311 | 15,472 | 19,916 |
| | ಈ) ಚೈತನ್ಯಗೊಳಿಸಿದ ಐ. ಪಿ. ಸೆಟ್‌ಗಳು | ಲಕ್ಷಗಳಲ್ಲಿ ಸಂಖ್ಯೆ | 0.08 | 1.88 | 2.86 |
| 3. | ಸಾರಿಗೆ ಮತ್ತು ಸಂಪರ್ಕ : | | | | |
| | ಅ) ರಸ್ತೆಯ ಉದ್ದ | '000 ಕಿ. ಮಿ. | 43.45 | 51.49 | 666.60 |
| | ಆ) ನೋಂದಣಿಯಾದ ಮೋಟರ್ ವಾಹನಗಳು | ಲಕ್ಷಗಳಲ್ಲಿ | 0.26 | 1.79 | 22.99 |
| | ಇ) ಅಂಚೆ ಕಚೇರಿಗಳು | '000ಗಳು | 4.57 | 8.58 | 99.01 |
| | ಈ) ದೂರವಾಣಿಗಳು | '000ಗಳು | 16.04 | 68.32 | 125.91 |
| | ಉ) ರೇಡಿಯೋ ಲೈಸೆನ್ಸ್‌ಗಳು | ಲಕ್ಷಗಳಲ್ಲಿ | 1.04 | — | 10.80 |
| 4. | ವಿದ್ಯಾಭ್ಯಾಸ : | | | | |
| | ಅ) ಪ್ರಾಥಮಿಕ ವಿದ್ಯಾಶಾಲೆಗಳು | ಸಂಖ್ಯೆ | 16,079 | 32,840 | 34,431 |
| | ಸೇರಿಕೆ | ಲಕ್ಷಗಳಲ್ಲಿ ಸಂಖ್ಯೆ | 14.68 | 42.12 | 48.60 |
| | ಆ) ಸೆಕೆಂಡರಿ ವಿದ್ಯಾಶಾಲೆಗಳು | ಸಂಖ್ಯೆ | 358 | 2,203 | 2,497 |
| | ಸೇರಿಕೆ | ಲಕ್ಷಗಳಲ್ಲಿ ಸಂಖ್ಯೆ | 1.79 | 5.36 | 6.56 |
| 5. | ಆರೋಗ್ಯ ಸೌಕರ್ಯಗಳು : | | | | |
| | ಅ) ಆಸ್ಪತ್ರೆಗಳು | ಸಂಖ್ಯೆ | 97 | 193 | 245 |
| | ಆ) ಔಷಧಾಲಯಗಳು, ಪ್ರಾಥಮಿಕ ಆರೋಗ್ಯ ಘಟಕಗಳು/ಕೇಂದ್ರಗಳು | ಸಂಖ್ಯೆ | 151 | 1,506 | 1,765 |
| | ಇ) ಆಸ್ಪತ್ರೆಯಲ್ಲಿ ಹಾಸಿಗೆಗಳು | ಸಂಖ್ಯೆ | 10,590 | 31,271 | 35,039 |

ಕೋಷ್ಟಕ – 5

ವಿವಿಧ ಜಿಲ್ಲೆಗಳ ಅಭಿವೃದ್ಧಿಯ ಸಂಘಟಿತ ಸೂಚಿ

| ಕ್ರಮ ಸಂಖ್ಯೆ | ಜಿಲ್ಲೆ | 1960–61 | 1970–71 | 1979–80 |
|---|---|---|---|---|
| 1. | ಬೆಂಗಳೂರು | 218.00 | 200.57 | 198.57 |
| 2. | ಬೆಳಗಾವಿ | 91.12 | 93.48 | 91.97 |
| 3. | ಬಳ್ಳಾರಿ | 89.23 | 86.93 | 94.98 |
| 4. | ಬಿದರೆ | 64.28 | 81.92 | 82.11 |
| 5. | ಬಿಜಾಪುರ | 76.66 | 75.91 | 87.02 |
| 6. | ಚಿಕ್ಕಮಗಳೂರು | 123.74 | 90.99 | 90.16 |
| 7. | ಚಿತ್ರದುರ್ಗ | 100.24 | 1000.38 | 101.36 |
| 8. | ಕೊಡಗು | 124.15 | 105.15 | 105.84 |
| 9. | ಧಾರವಾಡ | 118.54 | 101.10 | 96 28 |
| 10 | ಗುಲ್ಬರ್ಗಾ | 60.10 | 71.82 | 65.77 |
| 11. | ಹಾಸನ | 90.03 | 92.00 | 91.91 |
| 12. | ಕೋಲಾರ | 136.53 | 120.94 | 103.81 |
| 13. | ಮಂಡ್ಯ | 114.70 | 116.64 | 118.87 |
| 14. | ಮೈಸೂರು | 124.60 | 120.01 | 124.45 |
| 15. | ಉತ್ತರ ಕನ್ನಡ | 118.24 | 103.07 | 106.00 |
| 16. | ರಾಯಚೂರು | 63.04 | 82.81 | 80.72 |
| 17. | ಶಿವಮೊಗ್ಗಾ | 180.15 | 140.95 | 120.44 |
| 18. | ದಕ್ಷಿಣ ಕನ್ನಡ | 230.21 | 188.78 | 176.69 |
| 19. | ತುಮಕೂರು | 84.52 | 87.00 | 85.91 |
| | ರಾಜ್ಯ | 100.00 | 100.00 | 100.00 |

# ಕರ್ನಾಟಕದ ಕರಕುಶಲ ಕಲೆಗಳು

ಬಿ. ಎಸ್. ಭಟ್ಟ

ಕರಕೌಶಲದಿಂದ ಉಪಯುಕ್ತ ಹಾಗೂ ಆಕರ್ಷಕ ವಸ್ತುಗಳನ್ನು ತಯಾರಿಸುವ ಕಲೆ ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ. ಕೈಗಾರಿಕಾ ಕ್ರಾಂತಿ ಆಗುವ ವರೆಗೂ ಕರಕುಶಲ ಕಲೆ ಈಗ ಸರ್ಕಾರದಿಂದ ಪೋಷಿತವಾಗುತ್ತಿದೆ.ಕರ್ನಾಟಕದಲ್ಲಿ ಕುಶಲಕರ್ಮಿಗಳಿದ್ದ ಬಗ್ಗೆ ಪ್ರಾಚೀನ ಶಾಸನಗಳಲ್ಲಿ ಉಲ್ಲೇಖಗಳಿವೆ. ಅಕ್ಕಸಾಲಿಗರು, ಕಂಚುಗಾರರು, ನೇಕಾರರು, ಕಮ್ಮಾರರು ಮೊದಲಾದವರ ಕಲಾನೈಪುಣ್ಯದ ಬಗ್ಗೆ ಶಾಸನಗಳಲ್ಲಿ ಮೆಚ್ಚುನುಡಿಗಳಿವೆ. ಸರ್ವಸಿದ್ಧಿ ಆಚಾರ್ಯ ಎಂಬಾತ ಆಸನ, ಶಯನ, ಮಣಿ, ಮುಕುಟ ಕಟ್ಟುವುದರಲ್ಲಿ ಪ್ರಸಿದ್ಧವಾಗಿದ್ದನೆಂಬ ಉಲ್ಲೇಖ ಪಟ್ಟದಕಲ್ಲಿನ ಶಾಸನದಲ್ಲಿದೆ. ಅತ್ತಿಮಬ್ಬೆ ಮಣಿಖಚಿತವಾದ ಸಾವಿರದೈನೂರು ಜಿನ ಪ್ರತಿಮೆಗಳನ್ನು ಮಾಡಿಸಿದ ಸಂಗತಿ ಲಕ್ಕುಂಡಿ ಶಾಸನದಲ್ಲಿದೆ.

ಗಿಡದ ಎಲೆಗಳನ್ನೂ ಕೊಂಬೆಗಳನ್ನೂ ಬೇರೆ ಬೇರೆ ಆಕಾರಗಳಲ್ಲಿ ಕತ್ತರಿಸುವ "ಪತ್ರಚ್ಛೇದ" ಎಂಬ ಕಲೆ ಪ್ರಾಚೀನ ಕರ್ನಾಟಕದಲ್ಲಿ ಇತ್ತೆಂಬುದನ್ನು ಡಾ. ಎಂ. ಚಿದಾನಂದಮೂರ್ತಿ ಅವರು ಉಲ್ಲೇಖಿಸಿದ್ದಾರೆ. ಶಾಸನವೊಂದರಲ್ಲಿ "ತರ್ಕ, ವ್ಯಾಕರಣ, ಚಿತ್ರ ಪತ್ರ ಭರತಾದ್ಯನೇಕ ಚೌಷಷ್ಟಿಕಳಾ ಸಮಗ್ರ ಚಾತುರ್ಯ ಚತುರಾನನ" ಎಂದು ಒಬ್ಬನನ್ನು ಶಾಸನವೊಂದರಲ್ಲಿ ಬಣ್ಣಿಸಲಾಗಿದೆ. ಹೀಗೆ ಪರಂಪರಾನುಗತವಾಗಿ ಬೆಳೆದು ಬಂದ ಕರ್ನಾಟಕದ ಕುಶಲಕಲೆಗಳನ್ನಿಲ್ಲಿ ಸಮೀಕ್ಷಿಸಲಾಗಿದೆ.

**ಗುಡಿಗಾರಿಕೆ**

ಗಂಧದ ಕಟ್ಟಿಗೆ ಮತ್ತು ಬೆಂಡುಗಳಲ್ಲಿ ಸಿದ್ಧಪಡಿಸುವ ಕುಶಲ ವಸ್ತುಗಳಿಗೆ ಗುಡಿಗಾರಿಕೆಯ ಸಾಮಾನುಗಳೆಂದು ಹೆಸರು. ಇವುಗಳನ್ನು ಸಿದ್ಧಪಡಿಸುವಲ್ಲಿ ನಮ್ಮ ನಾಡಿನ ಗುಡಿಗಾರರು ಸಿದ್ಧಿಯನ್ನೂ, ಪ್ರಸಿದ್ಧಿಯನ್ನೂ ಪಡೆದಿದ್ದಾರೆ. ಅರಮನೆ, ದೇವಾಲಯಗಳ ಹೆಬ್ಬಾಗಿಲು, ರಥ, ಮನೆಗಳ ಬಾಗಿಲು- ಇವುಗಳನ್ನು ಕೆತ್ತಿ ಅಲಂಕರಿಸುವುದರಲ್ಲಿ ಅವರದು ಪಳಗಿದ ಕೈ. ಇದಲ್ಲದೆ ಗಂಧದಲ್ಲಿ ನಯವಾಗಿ ಮೂರ್ತಿಗಳನ್ನೂ ಗೊಂಬೆಗಳನ್ನೂ ಇವರು ಸಿದ್ಧಪಡಿಸುತ್ತಾರೆ. ಊರುಗೋಲುಗಳು, ಬೀಸಣಿಗೆ, ವ್ಯಾಸಪೀಠ, ಆಭರಣಗಳ ಪೆಟ್ಟಿಗೆ ಇವುಗಳ ತಯಾರಿಕೆಯಲ್ಲೂ ಅವರು ಪ್ರಾವೀಣ್ಯತೆ ಪಡೆದಿದ್ದಾರೆ. ರಾಮಾಯಣ, ಮಹಾಭಾರತ ಮತ್ತು ಭಾಗವತಗಳಪ್ರಸಂಗಗಳು ಇವರ ಕೆತ್ತನೆಗೆ ಆಧಾರಗಳಾಗಿವೆ. ಗೀತೋಪದೇಶ, ಕರ್ಣಾರ್ಜುನ ಕಾಳಗ, ಕುರುಕ್ಷೇತ್ರ, ರಾಧಾ ಕೃಷ್ಣರ ಮಿಲನ ಇವೆಲ್ಲವುಗಳನ್ನು ಗಂಧದಲ್ಲಿ ಅವರು ಸಜೀವವಾಗಿ ಮೂಡಿಸಿದ್ದಾರೆ. ಗುಡಿಗಾರರಲ್ಲಿ ಗಂಡಸರು ಗಂಧದ ಕೆಲಸ ಮಾಡಿದರೆ ಹೆಂಗಸರು ಬೆಂಡಿನ ಕೆಲಸ ಮಾಡುತ್ತಾರೆ. ಬೆಂಡನ್ನು ಬಣ್ಣದಲ್ಲಿ ಅದ್ದಿ ಅದಕ್ಕೆ ಬೇಗಡೆ ಸುತ್ತಿ ಮದುಮಕ್ಕಳಿಗೆ ಆಕರ್ಷಕ ಬಾಸಿಂಗ, ಸುಗ್ಗಿ ಕುಣಿತದವರಿಗೆ ತಲೆಯ ಪಗಡೆ, ಹೂದೊಡಿಗೆ – ಇವು ತುಂಬಾ ಅಂದವಾಗಿರುತ್ತವೆ. ಯಕ್ಷಗಾನದ ಕಿರೀಟ, ಎದೆಕವಚ ಭುಜಕೀರ್ತಿ, ಸುಗ್ಗಿ ಕುಣಿತ ಕಾಮನಹಬ್ಬಗಳಲ್ಲಿ ಧರಿಸುವ ಮುಖವಾಡ ಇವನ್ನೂ ಇವರು ಸಿದ್ಧಪಡಿಸುತ್ತಾರೆ.

ಗಣೇಶ ಚೌತಿಯ ಸಂದರ್ಭದಲ್ಲಿ ಗುಡಿಗಾರರು ಗಣಪತಿ ತಯಾರಿಸುತ್ತಾರೆ. ಅಚ್ಚುಗಳನ್ನು ಬಳಸದೆ ಗಣಪತಿ ಮತ್ತು ಗೌರಿಯರ ಮಣ್ಣಿನ ಸುಂದರ ಮೂರ್ತಿಗಳನ್ನು ಮಾಡುವುದು ಗುಡಿಗಾರರ ವೈಶಿಷ್ಟ್ಯವಾಗಿದೆ.

ಗುಡಿಗಾರರ ಕೆತ್ತನೆಗಳಿಗೆ ಬ್ರಿಟಿಷರ ಆಳ್ವಿಕೆಯಲ್ಲಿ ಅಪಾರದೇ ಬೇಡಿಕೆ ಇತ್ತು. ಈಗ ಡಾಲರ್ ಗಳಿಸುವ ಕುಶಲ ಕಲೆ ಇದಾಗಿದೆ. ಕರ್ನಾಟಕದ ಗುಡಿಗಾರರು ಗಂಧದಲ್ಲಿ ಕಂಡರಿಸಿದ ಹಲವಾರು ಅಮೂಲ್ಯ ವಸ್ತುಗಳು ಇಂದು ದೇಶ ವಿದೇಶಗಳ ಗಣ್ಯರ ಗೃಹಗಳನ್ನು ಅಲಂಕರಿಸಿವೆ. ಅವುಗಳಲ್ಲಿ ಕೆಲವನ್ನು ಉದಾಹರಿಸಬಹುದಾಗಿದೆ: ಅಮೆರಿಕದ ಮಾಜಿ ಅಧ್ಯಕ್ಷ ಐಸೆನ್ ಹಾವರ್ ಭಾರತಕ್ಕೆ ಭೇಟಿ ನೀಡಿದಾಗ ಉತ್ತರ ಕನ್ನಡ ಜಿಲ್ಲೆಯ ಗುಡಿಗಾರರು ಸಿದ್ಧಪಡಿಸಿದ್ದ ಕರ್ಣಾರ್ಜುನ ಕಾಳಗದ ಕೆತ್ತನೆಯೊಂದನ್ನು ನೀಡಲಾಯಿತು. ಇಂಗ್ಲೆಂಡಿನ ರಾಣಿ ಎಲಿಜಬೆತ್ ಅವರಿಗೂ ಇಂತಹದೇ ಕಾಣಿಕೆ ಸಂದಿದೆ. ಪೋಪ್ ಪಾಲರು ಭಾರತಕ್ಕೆ ಬಂದಾಗ (೧೯೬೪) ಅವರಿಗೆ ಉತ್ತರ ಕನ್ನಡದ ಗುಡಿಗಾರರು ಸಿದ್ಧಪಡಿಸಿದ ಗೀತೋಪದೇಶದ ಅಂದದ ಕೆತ್ತನೆಯನ್ನು ನೀಡಲಾಯಿತು. ೧೯೬೭ರಲ್ಲಿ ಪ್ಯಾರಿಸ್ ಸಮ್ಮೇಳನದಲ್ಲಿ ಕೆಲವು ಕೆತ್ತನೆಯ ವಸ್ತುಗಳನ್ನು ಪ್ರದರ್ಶನಕ್ಕೆ ಇರಿಸಿದ್ದ ಗುಡಿಗಾರರಿಗೆ ಬಹುಮಾನ ಬಂತು. ಭಾಸ್ಕರಪ್ಪ ಎಂಬುವರು ಲಂಡನ್ನಿನಲ್ಲಿ ೧೮೮೬ರಲ್ಲಿ ಜರಗಿದ ಪ್ರದರ್ಶನಕ್ಕೆ ತಮ್ಮ ಕೆತ್ತನೆ ಕಳುಹಿಸಿ ಪ್ರಶಸ್ತಿ ಪಡೆದರು. ಶಿರಸಿಯ ಜಡೆ ಮಂಜುನಾಥಪ್ಪನವರು ಸಿದ್ಧಪಡಿಸಿದ ಧರ್ಮಸ್ಥಳದ ದ್ವಾರ ಆಕರ್ಷಕವಾಗಿದೆ. ಕುಮಟೆಯ ದತ್ತ ಈರಯ್ಯಶೇಠ ಅವರು ಸಿದ್ಧಪಡಿಸಿದ "ಗೀತಾ ಸಂದೇಶ"ವನ್ನು ಹುಬ್ಬಳ್ಳಿ ಕಾರ್ಪೋರೇಷನ್ನಿನವರು ಪ್ರಧಾನಿ ನೆಹರೂ ಅವರಿಗೆ ನೀಡಿದರು. ಇವರು ಸಿದ್ಧಪಡಿಸಿದ ಅನೇಕ ಕೆತ್ತನೆ

ಸಾಮಾನುಗಳು ರಷ್ಯಕ್ಕೆ ರವಾನೆಯಾಗಿದೆ. ಇಂದು ರಾಷ್ಟ್ರಪತಿ ಭವನದಲ್ಲಿರುವ ಮೇಜು, ಕುರ್ಚಿ, ಟೀಪಾಯ್, ಪಟದ ಕಟ್ಟುಗಳು – ಇವನ್ನೆಲ್ಲ ಸಿದ್ಧಪಡಿಸಿದವರು ಉತ್ತರ ಕನ್ನಡ ಜಿಲ್ಲೆಯ ಕುಮಟೆಯ ಗುಡಿಗಾರರು ಎಂಬುದು ಹೆಮ್ಮೆಯ ಸಂಗತಿ.

ಕರ್ನಾಟಕದ ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ, ಉತ್ತರ ಕನ್ನಡ ಜಿಲ್ಲೆಯ ಶಿರಸಿ, ಸಿದ್ಧಾಪುರ, ಕುಮಟ, ಹೊನ್ನಾವರ, ಅಂಕೋಲ ತಾಲ್ಲೂಕುಗಳಲ್ಲಿಯೂ ಮೈಸೂರಿನಲ್ಲೂ ಗುಡಿಗಾರರಿದ್ದಾರೆ. ಗುಡಿಗಾರರ ತರಬೇತಿಗಾಗಿ ಶಿವಮೊಗ್ಗ ಮತ್ತು ಕುಮಟಾಗಳಲ್ಲಿ ತರಬೇತಿ ಸಂಸ್ಥೆಗಳಿವೆ. ಮೈಸೂರಿನ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಸಂಸ್ಥೆಯಲ್ಲೂ ಗುಡಿಗಾರಿಕೆಯ ಅಧ್ಯಯನಕ್ಕೆ ಅವಕಾಶ ಕಲ್ಪಿಸಲಾಗಿದೆ.
ತೇರು ತಯಾರಿಕೆ

**ತೇರು ತಯಾರಿಕೆ**

ದೇವರ ಉತ್ಸವ ಮತ್ತು ಜಾತ್ರೆಗಳಲ್ಲಿ ದೇವರನ್ನು ಕೂಡಿಸಿಕೊಂಡು ಎಳೆಯುವ ಬಂಡಿಯೇ ತೇರು. ನಮ್ಮ ನಾಡಿನ ಪ್ರಮುಖ ದೇವಾಲಯಗಳಲ್ಲೆಲ್ಲ ತೇರುಗಳಿವೆ. ಅಂದವಾದ ವಿನ್ಯಾಸವನ್ನು ಬಡಿಗರೂ, ಗುಡಿಗಾರರೂ ಸಿದ್ಧಪಡಿಸುತ್ತಾರೆ. ಕದಂಬ, ಗಂಗ, ಚಾಳುಕ್ಯ, ಹೊಯ್ಸಳ, ವಿಜಯನಗರದ ಅರಸರ ಕಾಲದಲ್ಲಿ ಸುಂದರ ತೇರುಗಳು ನಿರ್ಮಾಣವಾದವು. ಮರದಿಂದ ತೇರುಗಳನ್ನು ಸಿದ್ಧಪಡಿಸುತ್ತಾರೆ. ತೇರಿನ ಸುತ್ತಲೂ ದಶಾವತಾರ, ಪಂಚತಂತ್ರದ ಕಥೆ, ಗಂಧರ್ವ ದೇವತೆಗಳು, ಕಾಮಶಾಸ್ತ್ರ, ದ್ವಾರಪಾಲಕ, ನಂದಿ, ಗರುಡ, ನಾಗ, ಹನುಮಂತ–ಇವುಗಳನ್ನೆಲ್ಲ ಅತ್ಯಂತ ಸುಂದರವಾಗಿ ಕಂಡರಿಸಲಾಗಿದೆ. ಈ ಕಲಾತ್ಮಕ ಕೆತ್ತನೆ ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿತ್ತು. ಇಂದಿಗೂ ಕುಶಲ ಮರಗೆಲಸದವರು ಹಳತಾದ ತೇರುಗಳನ್ನುಹೊಸದಾಗಿ ಮಾಡಿಕೊಡುತ್ತಾರೆ. ಬನವಾಸಿಯ ೧೫೦ ವರ್ಷಗಳಷ್ಟು ಹಳೆಯ ರಥ ಸುಂದರವಾದದ್ದು.

ಹಿಂದಿನಿಂದಲೂ ಅರಮನೆ, ಗುರುಮನೆ ಮತ್ತು ಸಾರ್ವಜನಿಕ ವಾಸಗೃಹಗಳು ಮರದ ಕೆತ್ತನೆಯ ಆಗರಗಳಾಗಿವೆ. ಬಡಗಿಗಳು ಇಂದಿಗೂ ವಿವಿಧ ಆಸನಗಳು, ಗಾಡಿ, ದೋಣಿ ಮತ್ತು ಹಡಗುಗಳನ್ನು ಕಟ್ಟುವುದರಲ್ಲಿ ನಿಷ್ಣಾತರಾಗಿದ್ದಾರೆ.

**ದಂತದ ಕೆತ್ತನೆ**

ದಂತದ ಕೆತ್ತನೆಯ ಕೆಲಸ ಬಲು ನಾಜೂಕಿನದು. ದಂತದಿಂದ ಗುಂಡಿ, ಕುಂಕುಮದ ಕರಡಿಗೆ, ಪೌಡರ್ ಕರಡಿಗೆಗಳು, ಸೂಜಿ ಮತ್ತು ದೇವರ ಮೂರ್ತಿಗಳನ್ನು ಸಿದ್ಧಪಡಿಸುತ್ತಾರೆ.

ಮೈಸೂರಿನ ಕುಂದಣ ಕೆಲಸದ ವಸ್ತುಗಳು (ಇನ್‌ಲೇ) ಜಗತ್ಪ್ರಸಿದ್ಧವಾಗಿದೆ. ಭಾರತದ ಯಾವ ಭಾಗದಲ್ಲೂ ಇಲ್ಲದಷ್ಟು ಕುಶಲ ಕಲೆಗಾರರು ಈ ಸಾಂಸ್ಕೃತಿಕ ಕೇಂದ್ರದಲ್ಲಿದ್ದಾರೆ. ಮೇಜು, ಕುರ್ಚಿ, ಟೀಪಾಯ್, ಮಡಿಸುವ ತೆರೆ, ಕಟ್ಟಿಗೆಯ ಫಲಕಗಳು, ಚೌಕಟ್ಟು–ಇವು ವಿಶ್ವಮಾನ್ಯತೆ ಪಡೆದಿವೆ. ಇವಕ್ಕೆ ವಿದೇಶಗಳಿಂದಲೂ ಅಪಾರ ಬೇಡಿಕೆ. ಜಪಾನಿನಲ್ಲಿ ನಡೆದ 'ಎಕ್ಸ್‌ಪೊ ೭೦' ವಸ್ತುಪ್ರದರ್ಶನದಲ್ಲಿ ಕರ್ನಾಟಕದ ದಂತ ಕೆತ್ತನೆ ಮತ್ತು ಕುಂದಣ ಒಡವೆ ವಸ್ತುಗಳ ಪ್ರದರ್ಶನ ವಿದೇಶೀಯರ ಅಪಾರ ಮೆಚ್ಚುಗೆಗೆ ಒಳಗಾದವು. ಸಾರಂಗಿ, ಸಿತಾರ, ತಂಬೂರಿ, ಮತ್ತು ವೀಣೆಗಳಲ್ಲಿ ಹಸ್ತಿ ದಂತದ ಸುಂದರ ಕೆತ್ತನೆಗಳಿವೆ. ಇತ್ತೀಚೆಗೆ ಹಸ್ತಿದಂತದಲ್ಲೂ ನವ್ಯ ಕಲೆ ಬಂದಿದೆ. ಮೈಸೂರು, ಸೊರಬ, ಸಾಗರ, ಶಿವಮೊಗ್ಗ, ಹೊನ್ನಾವರ, ಕುಮಟ–ಇವು ಹಸ್ತಿದಂತದ ಕೆತ್ತನೆಗೆ ಪ್ರಸಿದ್ಧವಾಗಿವೆ. ಮೈಸೂರಿನ ಚಾಮರಾಜೇಂದ್ರ ವೃತ್ತಿಶಿಕ್ಷಣ ಶಾಲೆಯಲ್ಲೂ ಮತ್ತು ಬೆಂಗಳೂರಿನ ಡಿಸೈನ್ ಸೆಂಟರಿನಲ್ಲೂ ಇದನ್ನು ಕಲಿಸಲಾಗುತ್ತದೆ. ಹಸ್ತಿದಂತದ ಸಿದ್ಧವಸ್ತುಗಳಿಗೆ ಯೋಗ್ಯ ಮಾರುಕಟ್ಟೆಯನ್ನು ಕರ್ನಾಟಕ ಸರ್ಕಾರ ಒದಗಿಸಿಕೊಟ್ಟಿದೆ.

**ಕೊಂಬಿನ ಸಾಮಾನು**

ದನಗಳ ಕೊಂಬಿನಿಂದ ಅತ್ಯಂತ ಸುಂದರವೂ ನಾಜೂಕೂ ಆದ ಸಾಮಾನುಗಳನ್ನು ತಯಾರಿಸುವ ಕುಶಲ ಕಲೆ ನಮ್ಮ ನಾಡಿನಲ್ಲಿದೆ. ಬಹಳ ಕಾಲದಿಂದಲೂ ಇದು ಕೈಕಸುಬಾಗಿ ಬೆಳೆದು ಬಂದಿದ್ದರೂ ಇದಕ್ಕೆ ದೊರೆಯಬೇಕಾದಷ್ಟು ಪ್ರೋತ್ಸಾಹ ದೊರೆತಿಲ್ಲ. ಕೊಂಬಿನಿಂದ ಬಾಚಣಿಗೆ, ಹೂದಾನಿ ಮತ್ತು ಪ್ರಾಣಿ ಪಕ್ಷಿಗಳ ವಿವಿಧ ಮಾದರಿಗಳನ್ನು ತಯಾರಿಸಲಾಗುತ್ತಿದೆ. ಗೋಡೆಯ ಅಲಂಕಾರಕ್ಕಾಗಿ ಸಿದ್ಧಪಡಿಸುವ ಕಾಡೆಮ್ಮೆ ಮತ್ತು ಜಿಂಕೆಯ ಮುಖಗಳಿಗೆ ಸಾಕಷ್ಟು ಬೇಡಿಕೆಗಳಿವೆ. ಉತ್ತರ ಕನ್ನಡ ಜಿಲ್ಲೆಯ ಕುಮಟಾ ಮತ್ತು ಹೊನ್ನಾವರ, ಬೆಳಗಾವಿ ಜಿಲ್ಲೆಯ ಖಾನಾಪುರ ಇವು ಕೊಂಬಿನ ಕಲಾತ್ಮಕ ಸಾಮಾನುಗಳನ್ನು ಸಿದ್ಧಪಡಿಸುವ ಕೇಂದ್ರಗಳಾಗಿವೆ. ೧೯೩೮ರಲ್ಲಿ ಹೊನ್ನಾವರದಲ್ಲಿ ಒಂದು ತರಬೇತಿ ಸಂಸ್ಥೆ ಸ್ಥಾಪಿಸಲಾಗಿತ್ತು. ಇದಕ್ಕೆ ಆಗ ಬರ್ಮದಿಂದ ಅಧ್ಯಾಪಕರನ್ನು ಕರೆಸಲಾಗಿತ್ತೆಂದು ಹೇಳಲಾಗಿದೆ. ಹೀಗೇ ತರಬೇತಿ ಪಡೆದ ಕುಶಲಕರ್ಮಿಗಳು ಸಹಕಾರಿ ಸಂಘವೊಂದನ್ನು ಸ್ಥಾಪಿಸಿಕೊಂಡರು. ಈ ಸಂಘ ಕೊಂಬಿನಿಂದ ಸಿದ್ಧಪಡಿಸಿದ ಸಾಮಾನುಗಳನ್ನು ಸರ್ಕಾರದ ಮಾರಾಟ ಮಳಿಗೆಗಳ ಮೂಲಕ ಮಾರುಕಟ್ಟೆಗೆ ಕಳಿಸಿತು. ಹಿಂದೆ ವಿದೇಶೀ ಬೇಡಿಕೆ ಬಹಳವಾಗಿದ್ದ ಕೊಂಬಿನ ಸಾಮಾನುಗಳಿಗೆ ಈಗ ಬೇಡಿಕೆ ಕಡಿಮೆಯಾಗಿದೆ. ಆದರೂ ಸರ್ಕಾರ ಈ ಕಲೆಗೆ ಈಗ ಪ್ರೋತ್ಸಾಹ ನೀಡುತ್ತಿದೆ.

**ಗೊಂಬೆ ತಯಾರಿಕೆ**

ವಿವಿಧಬಗೆಯ ಆಕರ್ಷಕವೂ ಅಂದವೂ ಆದ ಗೊಂಬೆಗಳ ತಯಾರಿಕೆ ಕರ್ನಾಟಕದಲ್ಲಿ ಬೆಳೆದು ಬಂದ ಕುಶಲ ವೃತ್ತಿ. ಚೆನ್ನಪಟ್ಟಣ, ಗೋಕಾಕ, ನೆಲಮಂಗಲ, ಚಿಕ್ಕಮಗಳೂರು, ಶಿವಮೊಗ್ಗ ಗೊಂಬೆಗಳ ತಯಾರಿಕೆಯ ಕೇಂದ್ರಗಳಾಗಿವೆ. ಚೆನ್ನಪಟ್ಟಣದಲ್ಲಿ ಮೆದುವಾದ ಅತ್ತಿ ಮರದಿಂದ ತಯಾರಿಸುವ ಬಣ್ಣ ಬಣ್ಣದ ಆಟಿಕೆ ಮತ್ತು ಗೊಂಬೆಗಳು ತುಂಬ ಪ್ರಸಿದ್ಧಿ ಪಡೆದಿವೆ. ಚೆನ್ನಪಟ್ಟಣದಲ್ಲಿ ಗ್ರಾಮೀಣ ಕರಕುಶಲ ಕೇಂದ್ರವೊಂದಿದೆ. ಗೋಕಾಕದಲ್ಲಿ ಸಿದ್ಧವಾಗುವ ಬಣ್ಣದ ಆಟಿಕೆಗಳಿಗೆ ಮುಖ್ಯ ಮಾರುಕಟ್ಟೆ ಅಮೆರಿಕ. ಅಲ್ಲಿಯ ಈ ಕುಶಲ ಕಲೆ ೧೫೦ ವರ್ಷಗಳಷ್ಟು ಕಾಲ ಹಳೆಯದೆನ್ನಲಾಗಿದೆ. ಆಟಿಕೆ ತಯಾರಿಸುವ ಕುಶಲಕರ್ಮಿಗಳಿಗೆ ಆರ್ಥಿಕ ನೆರವು ನೀಡಲು ಅಲ್ಲೊಂದು ಸಹಕಾರ ಸಂಘವಿದೆ.

ಕರ್ನಾಟಕದ ಜನಪದ ಕಲೆ ತೊಗಲು ಗೊಂಬೆ. ಅದಕ್ಕೆ ಬೇಕಾಗುವ ತೊಗಲುಗಳನ್ನು ಜಿಂಕೆ ಅಥವಾ ಎಳೆ ಆಡಿನ ಚರ್ಮದಿಂದ ಸಿದ್ಧಪಡಿಸುವರು. ಇವಲ್ಲದೆ ಕತ್ತೆ, ಕುರಿ, ಎಮ್ಮೆಯ ಚರ್ಮಗಳನ್ನೂ ಉಪಯೋಗಿಸುತ್ತಾರೆ. ಹದ ಮಾಡಿದ ಚರ್ಮದ ಮೇಲೆ ಚಿತ್ರ ಬರೆದು ಬಣ್ಣ ತುಂಬುತ್ತಾರೆ. ಗೊಂಬೆಗಳು ಮೃದುವಾಗಿರುವಂತೆ ಒಂದು ತರಹದ ಎಣ್ಣೆ ಲೇಪಿಸುತ್ತಾರೆ. ಕರ್ನಾಟಕದ ಕರಾವಳಿ ಮತ್ತು ಮಲೆನಾಡಿನ ಪ್ರದೇಶಗಳಲ್ಲಿ ಹೆಚ್ಚು ಪ್ರಚಾರದಲ್ಲಿರುವ ಈ ಕಲೆಗಾಗಿ ತೊಗಲು ಗೊಂಬೆಯನ್ನು ಸಿದ್ಧಪಡಿಸುವ ಕಲೆಗಾರರು ಇರುವುದು ಆ ಪ್ರದೇಶದಲ್ಲೇ.

ಯಕ್ಷಗಾನದ ದಟ್ಟ ಪ್ರಭಾವವಿರುವ ಸೂತ್ರದ ಗೊಂಬೆಗಳನ್ನು ಮರದಿಂದ ಸಿದ್ಧಪಡಿಸುವರು. ದಕ್ಷಿಣ ಕರ್ನಾಟಕ ಮತ್ತು ಕರಾವಳಿಗಳಲ್ಲಿ ಈ ಗೊಂಬೆಗಳನ್ನು ಸಿದ್ಧಪಡಿಸುವರು. ನವರಾತ್ರಿ ಸಂದರ್ಭದಲ್ಲಿ ಕೂಡಿಸುವ ವಿವಿಧ ವೈವಿಧ್ಯಮಯ ಗೊಂಬೆಗಳನ್ನು ತಯಾರಿಸುವುದು ಕರ್ನಾಟಕದ ಕುಶಲ ಕಲೆಯಾಗಿದೆ. ಭೂತಪೂಜೆಯ ಅಂಗವಾಗಿ ಹಲವು ಬಗೆಯ ಪ್ರಾಣಿ ಮತ್ತು ಮಾನವರ ಮರದ ಮೂರ್ತಿಗಳನ್ನು ನಿರ್ಮಿಸಿ ಅವಕ್ಕೆ ಬಣ್ಣ ಹಾಕುವ ಕಲೆ ಉದ್ಯಾವರ, ಪೊಳಲಿ, ಮೂಡಬಿದರೆ, ಬಾರಕೂರು–ಈ ಊರುಗಳಲ್ಲಿ ಬೆಳೆದುಬಂದಿದೆ. ಮರದ ಬೃಹನ್ಮೂರ್ತಿಗಳಿಗೆ ಹೆಸರಾದದ್ದು ಉಡುಪಿಯ ಮಕ್ಕಿಕಟ್ಟೆ. ಪೊಳಲಿಯಲ್ಲಿ ತಯಾರಾಗುವ ಮೃಣ್ಮೂರ್ತಿಗಳು ಸುಂದರವಾಗಿವೆ. ಕರ್ನಾಟಕದ ಹಲವು ಜನಪದ ಕಲಾನೃತ್ಯಗಳಾದ ಸೋಮನ ಕುಣಿತ, ಹೋಳಿ ಹಬ್ಬದ ವೇಷಗಳನ್ನು ಸಿದ್ಧಪಡಿಸುವ ಕಲೆಗಾರಿಕೆ ಕರ್ನಾಟಕದ ಹಲವು ಭಾಗಗಳಲ್ಲಿವೆ.

**ಬಿದರಿ ಕೆಲಸ**

ಕರ್ನಾಟಕದ ಪ್ರಸಿದ್ಧ ಕುಶಲ ಕಲೆ ಬಿದರಿ. ಇದರ ಕೇಂದ್ರ ಬೀದರ್. ಕಲಾತ್ಮಕವಾದ ಬಿದರಿ ವಸ್ತುಗಳಿಗೆ ಭಾರತದಲ್ಲೂ ವಿದೇಶಗಳಲ್ಲೂ ಅಪಾರ ಬೇಡಿಕೆ ಇದೆ. ಈ ಕುಶಲ ಕಲೆ ಬೀದರಿಗೆ ಬಂದದ್ದು ಬಹಮನಿ ದೊರೆಗಳ ಕಾಲದಲ್ಲಿ. ಬಹಮನಿ ದೊರೆ ಅಹಮದ್ ಶಾ ವಾಲಿ "ರಂಗೀನ್ ಮಹಲ್"ನ್ನು ನಿರ್ಮಿಸಲು ಇರಾನಿನಿಂದ ಕುಶಲ ಕರ್ಮಿಗಳನ್ನು ಕರೆಯಿಸಿದನೆಂದು ಹೇಳಲಾಗಿದೆ. ಹೀಗೆ ಬಂದ ಕುಶಲಕರ್ಮಿಗಳಲ್ಲಿ ಹಲವರು ಬಂಗಾರ ಮತ್ತು ಬೆಳ್ಳಿಯಲ್ಲಿ ತಮ್ಮ ಕಲಾನೈಪುಣ್ಯ ಸಾಧಿಸಿದವರೂ ಇದ್ದರು. ಇಂಥ ವಸ್ತುಗಳ ತಯಾರಿಕೆಯಲ್ಲಿ ಸುಲ್ತಾನ್ ಆಸಕ್ತಿ ತಳೆದ. ಈ ಕಲೆಯಲ್ಲಿ ತರಬೇತು ನೀಡುವುದಕ್ಕಾಗಿಯೇ ಈತ ಮಹಮದ್ ಗವಾನ್ ಮದರಸಾ (ವಿದ್ಯಾಲಯ) ಒಂದನ್ನು ಪ್ರಾರಂಭಿಸಿದ. ಈ ಕಲೆಯಲ್ಲಿ ತರಬೇತಿ ಪಡೆದ ಸ್ಥಳೀಯರಲ್ಲಿ ಅನೇಕರು ಈ ಉದ್ಯೋಗವನ್ನು ತಮ್ಮ ಜೀವನ ನಿರ್ವಹಣೆಗೆ ಬಳಸಿಕೊಂಡರು. ಹೀಗೆ ಬಹಮನಿ ಸುಲ್ತಾನರ ರಾಜಾಶ್ರಯ ಮತ್ತು ಆ ಕಾಲದ ಸಿರಿವಂತರ ಪ್ರೋತ್ಸಾಹದಿಂದ ಈ ಕಲೆ ಪ್ರವರ್ಧಮಾನಕ್ಕೆ ಬಂತು.

ಬಿದರಿ ವಸ್ತುಗಳ ಮಾದರಿಗಳನ್ನು ನೋಡುವುದೇ ಕಣ್ಣಿಗೊಂದು ಹಬ್ಬ. ಹೂಬಳ್ಳಿಗಳು, ಗೊಂಬೆಗಳು ಹಾಗೂ ನಾನಾ ರೀತಿಯ ಚಿತ್ರಗಳು, ನೀರಿನ ಹೂಜಿ, ಹೂದಾನಿ, ಸಿಗರೇಟು ಬೂದಿ ಹಾಕುವ ತಟ್ಟೆ, ಕಿವಿಯ ಆಭರಣಗಳು, ಸರ, ಸಂಪುಟ, ಮೇಜುದೀಪ, ಗೋಡೆಯನ್ನು ಅಲಂಕರಿಸುವ ಚಿತ್ರಪಟ, ಅಡಿಕೆ ಡಬ್ಬ, ಸುಣ್ಣದ ಡಬ್ಬ, ಪಾದಪೀಠ, ಶೇರ್‌ದಾನಿ, ಅಂಗಿಗೆ ಹಾಕುವ ಗುಂಡಿ, ಪಾನ್ದಾನ್ (ಎಲೆಪೆಟ್ಟಿಗೆ), ಹೂಬುಟ್ಟಿ ಇತ್ಯಾದಿ ೧೫೦ಕ್ಕೂ ಹೆಚ್ಚು ವೈವಿಧ್ಯಮಯ ವಸ್ತುಗಳನ್ನು ತಯಾರಿಸಲಾಗುತ್ತಿದೆ. ಬೀದರಿನ ಬಿದರಿ ಸಾಮಾನುಗಳನ್ನು ಕರ್ನಾಟಕದ ಕರಕುಶಲ ಕೈಗಾರಿಕಾ ಅಭಿವೃದ್ಧಿ ನಿಗಮದ ಮೂಲಕ ಮಾರಲಾಗುತ್ತದೆ. ಬೆಂಗಳೂರು, ನವದೆಹಲಿ, ಹೈದರಾಬಾದ್, ಕಲ್ಕತ್ತ, ಮದರಾಸುಗಳಲ್ಲಿನ ಮಾರುಕಟ್ಟೆಗಳಲ್ಲಿ ಇವು ದೊರೆಯುತ್ತವೆ. ಬೀದರಿನಲ್ಲಿ ಬಿದರಿ ಕೈಗಾರಿಕೆಯ ೨೫ ಕೇಂದ್ರಗಳಿವೆ. ಇವುಗಳಲ್ಲಿ ಎರಡು ಸಹಕಾರಿ ಸಂಘಗಳು. ೧೯೫೦ಕ್ಕೆ ಮುಂಚಿತವಾಗಿ ಕುಶಲಕರ್ಮಿಗಳು ಮನೆಗಳಲ್ಲಿಯೇ ವಸ್ತುಗಳನ್ನು ಸಿದ್ಧಪಡಿಸುತ್ತಿದ್ದರು. ಸರ್ಕಾರದ ಪ್ರೋತ್ಸಾಹದಿಂದಾಗಿ ಇದಕ್ಕೊಂದು ಪ್ರತ್ಯೇಕ ಕೈಗಾರಿಕಾ ಘಟಕ ದೊರೆಯಿತು. ಸಾಮಾನ್ಯವಾಗಿ ಬಿದರೆ ಸಾಮಾನು ಮಾಡುವ ಕಲೆಯನ್ನು ಮಕ್ಕಳು ತಂದೆಯಿಂದ ಕಲಿಯುತ್ತಿದ್ದರು. ಈಗ ಇದಕ್ಕಾಗಿ ಸರ್ಕಾರದ ತರಬೇತಿ ಕೇಂದ್ರವೊಂದಿದೆ. ಇಲ್ಲಿ ಎರಡು ವರ್ಷಗಳ ಕಾಲ ತರಬೇತಿ ನೀಡಲಾಗುವುದು. ೧೬ರಿಂದ ೩೦ರವರೆಗಿನ ವಯಸ್ಸಿನ ಸ್ತ್ರೀಪುರುಷರು ತರಬೇತಿ ಪಡೆಯುವ ಅವಕಾಶ ಕಲ್ಪಿಸಲಾಗಿದೆ.

**ಬಳೆ ತಯಾರಿಕೆ**

ಕನ್ನಡದ ರತ್ನತ್ರಯರಲ್ಲೊಬ್ಬರಾದ ರನ್ನ ಬಳೆಗಾರ ವಂಶದವನಾಗಿದ್ದ. ಮಲಾರ ಹೊರುವ ಕೈ ಮಹಾ ಕಾವ್ಯ ರಚಿಸಿತು. ಗಾಜಿನ ಬಳೆಗಳನ್ನು ಸಿದ್ಧಪಡಿಸುವ ಕುಶಲ ಕಲೆ ಹಿಂದೆ ಚಿತ್ರದುರ್ಗದ ಮೊಳಕಾಲ್ಮೂರಿನಲ್ಲಿತ್ತು. ಚನ್ನಪಟ್ಟಣದಲ್ಲೂ ಈ ಕಲೆ ಇತ್ತು. ಒಂದು ಕಾಲದಲ್ಲಿ ಇಲ್ಲಿ ಸಿದ್ಧವಾಗುತ್ತಿದ್ದ ಬಳೆಗಳು ಪ್ರಸಿದ್ಧವಾಗಿದ್ದವು.

**ಕಸೂತಿ**

ಬಟ್ಟೆಯ ಮೇಲೆ ಸೂಜಿದಾರ ಅಥವಾ ತಂತಿಯಿಂದ ಮೂಡುವ ಅಲಂಕಾರ ಕರ್ನಾಟಕದಲ್ಲಿ ಬಹಳ ಕಾಲದಿಂದಲೂ ಇದೆ. ೬೪ ಕಲೆಗಳಲ್ಲಿ ಒಂದೆಂದು ಕಸೂತಿಯನ್ನು ಪರಿಗಣಿಸಲಾಗಿದೆ. ಮೈಸೂರು ಅರಸರ ಕಾಲದಲ್ಲಿ ೬೪ ಕಲೆಗಳನ್ನೂ ಬಲ್ಲ ಸ್ತ್ರೀಪುರುಷರಿದ್ದರೆಂದು ಸಂಚಿ ಹೊನ್ನಮ್ಮ ಹೇಳಿದ್ದಾಳೆ. ತಮ್ಮ ಮತ್ತು ತಮ್ಮ ಮಕ್ಕಳ ಬಟ್ಟೆಗಳನ್ನು ಕಸೂತಿಯಿಂದ ಅಲಂಕರಿಸುವುದು ಪ್ರಾಚೀನ ಕರ್ನಾಟಕದ ಮಹಿಳೆಯರ ಹವ್ಯಾಸವಾಗಿತ್ತು. ದೇವಾಲಯದ ಗೋಪುರ, ಆನೆ, ಗಿಳಿ, ತುಳಸಿಕಟ್ಟೆ; ಹೂಬಳ್ಳಿ ಇವನ್ನೆಲ್ಲ ಅಂದವಾಗಿ ಕಸೂತಿಯಲ್ಲಿ ಮೂಡಿಸುತ್ತಿದ್ದರು. ಕೆಂಪು, ಬಿಳಿ, ಹಳದಿ ಮತ್ತು ಹಸಿರು ಬಣ್ಣಗಳ ದಾರಗಳ ಬಳಕೆ ಕರ್ನಾಟಕದಲ್ಲಿತ್ತು.

ಲಂಬಾಣಿ ಮಹಿಳೆಯರು ಸಣ್ಣ ಕನ್ನಡಿ ತುಂಡುಗಳನ್ನು ಸೇರಿಸಿ ಸರಪಳಿ ಹೊಲಿಗೆ ಹಾಕಿ ಸಿದ್ಧಪಡಿಸಿದ ಉಡುಗೆಗಳು ಬಲು ಅಂದ ಹಾಗೂ ಆಕರ್ಷಕ. ಈ ಕಲೆ ಅವರಿಗೆ ಕರಗತವಾಗಿ ಬಂದಿರುವುದು ವಂಶಪಾರಂಪರ್ಯವಾಗಿ.

**ಕಲಾಬತು**

ಬಟ್ಟೆಗಳ ಮೇಲ್ ಅಲಂಕಾರಕ್ಕಾಗಿ ಉಪಯೋಗಿಸುವ ಪಟ್ಟಿಯೇ ಕಲಾಬತು. ಇದನ್ನು ಸಿದ್ಧಪಡಿಸುವುದು ಉಣ್ಣೆ, ರೇಶ್ಮೆ, ಹತ್ತಿ, ಲೋಹ, ನಾರು–ಇವುಗಳ ದಾರಗಳಿಂದ. ಇದು ಕಸೂತಿಯ ಇನ್ನೊಂದು ಬಗೆಯಾಗಿದೆ. ಜರಿ ಇಲ್ಲವೆ ಸಿಂಗಾರ ಪಟ್ಟಿಕೆಗಳನ್ನು ಸೇರಿಸುವುದರಿಂದ ಇದನ್ನು ಕಲಾಬತ್ತೆಂದು ಹೆಸರಿಸಲಾಗಿದೆ. ಕೈಯಿಂದ ಸಿದ್ಧಪಡಿಸಿದ ನಯವಾದ ಕಲಾಬತು ಕರ್ನಾಟಕದ ವೈಶಿಷ್ಟ್ಯವಾಗಿತ್ತು. ಈಗ ಇದೊಂದು ಹವ್ಯಾಸವಾಗಿ ಉಳಿದುಬಂದಿದೆ.

**ನೇಯ್ಗೆ**

ವಂಶಪಾರಂಪರ್ಯವಾಗಿ ಬಂದ ಇನ್ನೊಂದು ಕಸುಬು ನೇಯ್ಗೆ. ಈ ಪ್ರಾಚೀನ ಕಸುಬಿನ ಬಗ್ಗೆ ಕರ್ನಾಟಕದ ಹಲವು ಶಾಸನಗಳಲ್ಲಿ ಉಲ್ಲೇಖವಿದೆ. ಆ ಕಾಲದಲ್ಲಿ ಇದು ಸಾಕಷ್ಟು ಅಭಿವೃದ್ಧಿ ಹೊಂದಿತ್ತು. "ಉಂಕಿಯ ನಿಗುಚಿ ಸರಿಗೆಯ ಸಮಗೊಳಿಸಿ ಸಮಗಾಲನಿಕ್ಕಿ ಅಣಿಯೊಳು ತಾಳ ಮೆಟ್ಟಿದೆ. ಹಿಡಿವ ಲಾಳಿಯ ಮುಳ್ಳಿಕಂಡಿಕೆಯ ನುಂಗಿತ್ತು. ಈ ಸೀರೆಯ ನೈದವ ನಾನೋ ನೀನೋ ರಾಮನಾಥಾ" ಎಂಬ ಅಂಕಿತದ ಜೇಡರದಾಸಿಮಯ್ಯ ನೇಯ್ಗೆಯ ಕಾಯಕದವನಾಗಿದ್ದ. ಉತ್ತಮ ದರ್ಜೆಯ ನೇಯ್ಗೆ ಬಟ್ಟೆ ಕರ್ನಾಟಕದಲ್ಲಿ ಸಿದ್ಧವಾಗುತ್ತಿತ್ತು. ಸೋಮೇಶ್ವರ ಎಂಬುವನು ಕಲ್ಯಾಣ ಪಟ್ಟಣದ ಪೇಟೆಯಲ್ಲಿ ದೊರೆಯುತ್ತಿದ್ದ ಬಟ್ಟೆಗಳ ಬಗ್ಗೆ ಹೇಳುತ್ತಾ

ಅಲ್ಲಿಯ ಬಟ್ಟೆಗಳು ದೃಷ್ಟಿಗಗೋಚರ, ಕೇವಲ ಸ್ಪರ್ಶದಿಂದ ಮಾತ್ರ ತಿಳಿಯಲು ಸಾಧ್ಯ. ಅವು ಹಗುರವಾಗಿದ್ದಾಗ್ಯೂ ಬಹಳ ಬೆಲೆಬಾಳುವ ಈ ಬಟ್ಟೆಗಳನ್ನು ಧರಿಸಿದವರ ಅಂಗಾಂಗಗಳು ಸ್ಪಷ್ಟವಾಗಿ ಕಾಣುವಷ್ಟು ಪಾರದರ್ಶಕವಾಗಿದ್ದವು ಎಂದು ವರ್ಣಿಸಿದ್ದಾನೆ. ಬುಕಾನಿನ್ ಎಂಬ ಪ್ರವಾಸಿ ಕರ್ನಾಟಕದ ನೇಯ್ಗೆ ಉತ್ಕೃಷ್ಟಮಟ್ಟದ್ದಾಗಿತ್ತೆಂದು ಬಣ್ಣಿಸಿದ್ದಾನೆ. ಹತ್ತಿ, ರೇಷ್ಮೆ ಬಟ್ಟೆಗಳ ನೇಯ್ಗೆಗೆ ಕರ್ನಾಟಕ ಪ್ರಸಿದ್ಧವಾಗಿತ್ತು. ಬೋಳೂರು, ಹಾವೂರುಗಳು ರೇಷ್ಮೆ ಬಟ್ಟೆಗೆ ಪ್ರಸಿದ್ಧವಾಗಿದ್ದವು. ಬಹಮನೀ ಸುಲ್ತಾನರ ಕಾಲದಲ್ಲಿ ಗುಲ್ಬರ್ಗ ಅಂದವಾದ ನೇಯ್ಗೆ ಬಟ್ಟೆಗಳಿಗೆ ಹೆಸರಾಗಿತ್ತು. ಬಿಜಾಪುರ, ರಾಯಚೂರುಗಳಲ್ಲಿ ಸಿದ್ಧವಾದ ಬಟ್ಟೆಗಳಿಗೆ ತುಂಬ ಬೇಡಿಕೆ ಇತ್ತು. ಮಸ್ಲಿನ್ ಬಟ್ಟೆಗಳು, ಪರ್ಶಿಯ, ಅರೇಬಿಯ, ಪೂರ್ವ ಆಫ್ರಿಕಗಳಿಗೆ ರಫ್ತಾಗುತ್ತಿದ್ದುವೆಂದು ಒಬ್ಬ ಪ್ರವಾಸಿ ಉಲ್ಲೇಖಿಸಿದ್ದಾನೆ. ಪೋರ್ಚುಗೀಸ್ ವ್ಯಾಪಾರಿಗಳು ಬಟ್ಟೆ ಖರೀದಿಸಲು ಬಿಜಾಪುರಕ್ಕೆ ಬರುತ್ತಿದ್ದರಂತೆ. ಇಂದಿಗೂ ಇಳಕಲ್ ಮತ್ತು ಶಹಾಪುರದ ನೇಯ್ಗೆ ಸೀರೆಗಳು ಪ್ರಸಿದ್ಧವಾಗಿವೆ.

**ಕಂಬಳಿ, ಚಾಪೆ, ಜಮಖಾನೆ**

ಕಂಬಳಿ ತಯಾರಿಕೆಯೂ ಕರ್ನಾಟಕದ ಪುರಾತನ ಕಸುಬು. ೧೨ನೆಯ ಶತಮಾನದ ವಚನಗಳಲ್ಲಿ ಕಂಬಳಿ ದಾನದ ಬಗ್ಗೆ ಉಲ್ಲೇಖವಿದೆ. ಪಾಯಸ್ ಎಂಬ ಪ್ರವಾಸಿ ವಿಜಯನಗರದ ಅಕ್ಕಪಕ್ಕದ ಮೈದಾನಗಳಲ್ಲಿ ಹುಡುಗರು ಕುರಿಗಳ ಮೇಲೆ ಸವಾರಿ ಮಾಡುತ್ತಿದ್ದುದನ್ನು ಬಣ್ಣಿಸಿದ್ದಾನೆ. ಮೈಸೂರು ಅರಸರ ಕಾಲದಲ್ಲೂ ಕುರಿಸಾಕಣೆ ಮತ್ತು ಉಣ್ಣೆ ಉದ್ಯಮಕ್ಕೆ ಸಾಕಷ್ಟು ಪ್ರೋತ್ಸಾಹ ದೊರೆಯಿತು. ಕಂಬಳಿ ನೇಯುವುದಷ್ಟೇ ಅಲ್ಲ, ಅದಕ್ಕೆ ಕರೆ ಕಟ್ಟುವುದೂ ಒಂದು ಕುಶಲ ಕಲೆ. ದಾವಣಗೆರೆ, ಚಿಕ್ಕಬಳ್ಳಾಪುರಗಳು ಕಂಬಳಿ ನೇಯ್ಗೆಯ ಕೇಂದ್ರಗಳಾಗಿದ್ದವು. ಇಂದಿಗೂ ಕರ್ನಾಟಕದ ಹಲವು ಗ್ರಾಮಾಂತರ ಪ್ರದೇಶಗಳಲ್ಲಿ ಈ ಕಲೆ ಉಳಿದು ಬಂದಿದೆ.

ಸುಂದರವಾದ ಚಾಪೆಗಳನ್ನು ಕೆಂಗೇರಿ, ಅಮೃತೂರು, ನಾಗಮಂಗಲ, ಹಾಸನ, ಆನಂದಾಪುರ, ಹಿರಿಯೂರುಗಳಲ್ಲಿ ಹೆಣೆಯುತ್ತಾರೆ.

ಅಂದವೂ ಆಕರ್ಷಕವೂ ಆದ ಜಮಖಾನೆಗಳ ತಯಾರಿಕೆ ಬಹಳ ಕಾಲದಿಂದಲೂ ಇದೆ. ಒಂದು ಕಾಲದಲ್ಲಿ ಬೆಂಗಳೂರಿನ ಜಮಖಾನೆಗಳು ಪ್ರಸಿದ್ಧವಾಗಿದ್ದವು. ಅದಕ್ಕೆ ಇಂಗ್ಲೆಂಡು, ಅಮೆರಿಕ, ಆಸ್ಟ್ರೇಲಿಯಾಗಳಿಂದ ಬೇಡಿಕೆ ಇತ್ತು. ಇಂದೂ ಬೆಂಗಳೂರಿನ ಕೇಂದ್ರ ಕಾರಾಗೃಹದಲ್ಲಿ ಕೈದಿಗಳು ಅಂದವಾದ ಜಮಖಾನೆ ಸಿದ್ಧಪಡಿಸುತ್ತಾರೆ. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ಜಮಖಾನೆಗೆ ಹೆಸರಾದದ್ದು.

**ಚಿನ್ನ ಬೆಳ್ಳಿ ಕೆತ್ತನೆ**

ಅಪೂರ್ವ ಲೋಹಗಳಾದ ಬೆಳ್ಳಿ ಮತ್ತು ಚಿನ್ನಗಳಿಂದ ಆಭರಣ ಮತ್ತು ಮೂರ್ತಿಗಳನ್ನು ತಯಾರಿಸುವ ಕಲೆ ಬಹಳ ಕಾಲದಿಂದಲೂ ಇದೆ. ಇದನ್ನು ಸಿದ್ಧಪಡಿಸುವವರು ಅಕ್ಕಸಾಲಿಗರು. ಇವರಿಗೆ ಸೋನಾರರು, ಚಿನಿವಾರರು, ಸುವರ್ಣಕಾರರು ದೈವಜ್ಞ ಬ್ರಾಹ್ಮಣರು ಎಂದು ಹೆಸರುಗಳಿವೆ. ಇಂದಿನ ಬದಲಾದ ಪರಿಸ್ಥಿತಿಗೆ ಅನುಗುಣವಾಗಿ ಆಧುನಿಕ ಆಭರಣಗಳನ್ನು ಸಿದ್ಧಪಡಿಸುವಲ್ಲಿ ಇವರು ಸಿದ್ಧಹಸ್ತರು. ಚಿನ್ನ, ಬೆಳ್ಳಿ ಕೆತ್ತನೆ ಕೇವಲ ಕುಶಲ ಕಲೆಯಷ್ಟೇ ಅಲ್ಲ ಉಪಯುಕ್ತ ಕಲೆಯೂ ಹೌದು. ಜಡೆಬಿಲ್ಲೆ, ಕಂಕಣ, ಬಾಜೂಬಂದಿ, ಕಾಲುಗೆಜ್ಜೆ, ಕಂಠಾಭರಣ, ಕಾಲುಂಗುರ, ಉಂಗುರ, ಗುಂಡು, ಮಾಂಗಲ್ಯ, ಲೋಲಾಕು, ಗಡಿಯಾರ ಸರಪಳಿ, ಗಂಡಸರ, ಗುಂಡುಸರ, ಮೂಗುತಿ, ಅಡ್ಡಿಕೆ, ಶಿರಾಭರಣ–ಇವೆಲ್ಲ ಅವರು ಸಿದ್ಧಪಡಿಸುವ ವೈವಿಧ್ಯಮಯ ಆಭರಣಗಳು. ಬೆಳ್ಳಿಯ ಮೂರ್ತಿಗಳು, ಹರಿವಾಣಗಳನ್ನೂ ಅಕ್ಕಸಾಲಿಗರು ಮಾಡುತ್ತಾರೆ.

**ಕುಂದಣಗಾರಿಕೆ**

ಒಡವೆಗಳಲ್ಲಿ ಹರಳುಗಳನ್ನು ಕೂರಿಸುವ ಕಲೆ ಕುಂದಣಗಾರಿಕೆ ಎನಿಸಿದೆ. ಮೇಲುಕೋಟೆಯ ವೈರಮುಡಿ (ರತ್ನಖಚಿತವಾದದ್ದು) ಕರ್ನಾಟಕದ ಕುಶಲಕರ್ಮಿಗಳ ಕಲೆ ಎಷ್ಟು ಉನ್ನತ ಮಟ್ಟದ್ದೆಂಬುದಕ್ಕೆ ಒಂದು ಉದಾಹರಣೆ. ಹಿಂದೆ ರಾಜಮಹಾರಾಜರು ಧರಿಸುತ್ತಿದ್ದ ಉಂಗುರಗಳಲ್ಲಿ ಕೂಡಿಸುವ ವಜ್ರದ ಪರಿಶೀಲನೆಗಾಗಿ ಮತ್ತು ಅವುಗಳನ್ನು ಕೂಡಿಸಲೋಸುಗವೇ ಪರಿಣತರಿರುತ್ತಿದ್ದರು. ಕುಂದಣಗಾರಿಕೆಯೂ ಅಕ್ಕಸಾಲಿಗರಿಗೆ ಸಿದ್ಧಿಸಿದ ಕಲೆಯಾಗಿದೆ.

**ಇತರ ಕಲೆಗಳು**

ಹಿತ್ತಾಳೆ ಪಾತ್ರೆಗಳನ್ನು ತಯಾರಿಸುವ ಕರ ಕುಶಲ ಕಲೆ ನಾಗಮಂಗಲದಲ್ಲಿದೆ. ಅಲ್ಲಿ ಸಿದ್ಧವಾಗುವ ಹಿತ್ತಾಳೆ ಪಾತ್ರೆಗಳು ಅಂದವಷ್ಟೇ ಅಲ್ಲ ತುಂಬ ಬಾಳಿಕೆ ಬರುವಂತಹವಾಗಿವೆ.

ಚೆತ್ತದಿಂದ ಅಂದವಾದ ಕುರ್ಚಿ, ಮೇಜು, ಟೀಪಾಯಿ, ಬುಟ್ಟಿಗಳನ್ನು ತಯಾರಿಸುವ ಕೇಂದ್ರಗಳು ಮೈಸೂರು, ಚಿಕ್ಕಮಗಳೂರು, ಶಿವಮೊಗ್ಗ, ಮತ್ತು ಸಾಗರ. ಉತ್ತರ ಕನ್ನಡ ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಕೂಗಲ ಬಳ್ಳಿಯಿಂದ ಬುಟ್ಟಿ, ಪೆಟ್ಟಿಗೆ ತಯಾರಿಸುತ್ತಾರೆ. ಇದು ತುಂಬ ಬಾಳಿಕೆ ಬರುವಂಥದ್ದಾಗಿದೆ. ಅಂದವಾದ ಚರ್ಮದ ವಸ್ತುಗಳನ್ನು ಸಿದ್ಧಪಡಿಸುವ ಕಲೆ ಹಲವು ಊರುಗಳಲ್ಲಿದೆ. ಶಿವಮೊಗ್ಗದ ಕಾಲ್ದುರ್ಗದಲ್ಲಿ ಬಳಪದ ಕಲ್ಲಿನಿಂದ ವಿವಿಧ ಸಾಮಾನುಗಳನ್ನು ಸಿದ್ಧಪಡಿಸುತ್ತಾರೆ. ಕೋರಾ ರೇಷ್ಮೆ ಮತ್ತು ರೇಷ್ಮೆ ಶಿಕಸ್ತಿನಿಂದ ಉಡಿದಾರ ಸಿದ್ಧವಾಗುವುದು ಕೃಷ್ಣರಾಜಪೇಟೆಯಲ್ಲಿ.

ಮಡಿಕೆ ಕುಡಿಕೆಗಳನ್ನು ಸಿದ್ಧಪಡಿಸುವುದಾದರೂ ತುಂಬ ಪ್ರಾಚೀನ ಕಸುಬು. ಹಿಂದೆ ಮಣ್ಣಿನ ಪಾತ್ರೆಗಳ ಬಳಕೆಯೇ ಹೆಚ್ಚಾಗಿತ್ತು. ಮಣ್ಣಿನ ಮಡಕೆಗಳನ್ನು ವಿವಿಧ ಮಾದರಿಗಳಲ್ಲಿ ಸಿದ್ಧಪಡಿಸಿ ಅವುಗಳ ಮೇಲೆ ಅಂದವಾಗಿ ಚಿತ್ರ ಬರೆಯುವ ಸಮರ್ಥ ಕುಶಲಕರ್ಮಿಗಳು ಕರ್ನಾಟಕದಲ್ಲಿದ್ದಾರೆ. ರಾಮನಗರ, ಖಾನ್‌ಪುರ, ಕೃಷ್ಣರಾಜಪುರಗಳು ಮಡಿಕೆ ತಯಾರಿಕೆಯ ಕೇಂದ್ರಗಳಾಗಿವೆ.

ಮನುಷ್ಯನ ಶರೀರದ ಅಲಂಕಾರಕ್ಕಾಗಿ ಹಚ್ಚೆ ಹಾಕುವ ಪದ್ಧತಿಯೂ ಕರ್ನಾಟಕದಲ್ಲಿದೆ. ಆದಿವಾಸಿಗಳಲ್ಲಿ ಈ ಪದ್ಧತಿ ಹೆಚ್ಚು ಆಚರಣೆಯಲ್ಲಿದೆ. ಮೈಮೇಲೆ ಅಳಿಸಲಾಗದಂತಹ ಹೆಸರು, ಚಿತ್ರಗಳನ್ನು ಮೂಡಿಸುವ ಕಲೆ ಇದು. ವನಸ್ಪತಿ ಎಲೆಗಳಿಂದ ಸಿದ್ಧಪಡಿಸಿದ ಬಣ್ಣದಿಂದ ಹಚ್ಚೆ ಹಾಕುವರು.

**ಯೋಜನೆಗಳು**

ಕುಶಲ ಕೈಗಾರಿಕೆಗಳನ್ನು ಪ್ರೋತ್ಸಾಹಿಸಲು ಸರ್ಕಾರ ಹಲವು ಯೋಜನೆಗಳನ್ನು ಜಾರಿಗೆ ತಂದಿದೆ. ೧೯೫೯ರಲ್ಲಿ ಸಣ್ಣ ಕೈಗಾರಿಕೆ ಮತ್ತು ಕರಕುಶಲ ಮಂಡಳಿಯನ್ನು ರಚಿಸಲಾಯಿತು. ಕರಕುಶಲ ಕಸುಬುಗಳಿಗೆ ಉತ್ತೇಜನ ನೀಡಲು ಸಾಲ ಸೌಲಭ್ಯಗಳನ್ನೊದಗಿಸಲು ಸಹಕಾರಿ ಸಂಘಗಳ ಸ್ಥಾಪನೆಯಾಗಿದೆ.

ಬಿದರಿ, ಗುಡಿಗಾರಿಕೆ, ಗೊಂಬೆ ತಯಾರಿಕೆ ಮುಂತಾದ ಕುಶಲ ಕಲೆಗಳು ಬೆಳೆದು ಬರಲು ಕರ್ನಾಟಕ ಸರ್ಕಾರ ಸಾಕಷ್ಟು ಶ್ರಮಿಸಿದೆ. ಕುಶಲ ಕಲೆಗಳ ತರಬೇತಿ ಕೇಂದ್ರ ಸ್ಥಾಪಿಸಿದ್ದಲ್ಲದೆ ಅಲ್ಲಿ ಅಧ್ಯಯನ ಮಾಡುವವರಿಗೆ ವಿದ್ಯಾರ್ಥಿ ವೇತನ ನೀಡಲಾಗುತ್ತಿದೆ. ಕುಶಲ ಕರ್ಮಿಗಳು ಸಿದ್ಧಪಡಿಸಿದ ವಸ್ತುಗಳಿಗೆ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಾರುಕಟ್ಟೆ ಒದಗಿಸುವುದರೊಂದಿಗೆ ಅವರಿಗೆ ಅಗತ್ಯವಾದ ಕಚ್ಚಾ ಸಾಮಗ್ರಿಗಳನ್ನು ನ್ಯಾಯವಾದ ಬೆಲೆಗೆ ಕರ್ನಾಟಕ ಸರ್ಕಾರ ಒದಗಿಸಿದೆ. ಈ ನಿಟ್ಟಿನಲ್ಲಿ ಕರ್ನಾಟಕ ಭಾರತಕ್ಕೆ ಮಾದರಿ ರಾಜ್ಯ ಎನಿಸಿದೆ.

# ಕರ್ನಾಟಕದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಮುನ್ನಡೆ

ಡಾ. ಯು. ಆರ್. ರಾವ್

ಆಧುನಿಕ ಕರ್ನಾಟಕದ ಅಸ್ತಿವಾರವನ್ನು ಮಹಾನ್ ಇಂಜಿನಿಯರ್ ಮುತ್ಸದ್ದಿಯೂದ ಸರ್. ಎಂ. ವಿಶ್ವೇಶ್ವರಯ್ಯನವರು ಹಾಕಿದರು. ಅವರ ರಚನಾತ್ಮಕ ಕಾರ್ಯಗಳಾದ ಕೆ. ಆರ್. ಸಾಗರ ಅಣೆಕಟ್ಟು, ಸುಂದರವಾದ ಬೃಂದಾವನ, ಭದ್ರಾವತಿಯಲ್ಲಿರುವ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ, ಇನ್ನೂ ಹಲವಾರು ಕಾರ್ಖಾನೆಗಳು, ಬ್ಯಾಂಕ್‌ಗಳು ಮತ್ತು ಕೈಗಾರಿಕೆಗಳು ಅವರಿಗೆ ಜೀವಂತ ಸ್ಮಾರಕವಾಗಿರುವುದಷ್ಟೇ ಅಲ್ಲ, ಅವು ಕರ್ನಾಟಕಕ್ಕೇ ಅಲ್ಲದೆ ಇಡೀ ದೇಶಕ್ಕೇ ಅನುಸರಣೀಯವಾಗಿವೆ. ಕರ್ನಾಟಕದಲ್ಲಿ ವೈಜ್ಞಾನಿಕ ಪರಿಸರ ಮತ್ತು ವಾತಾವರಣವನ್ನು ನಿರ್ಮಿಸುವುದಕ್ಕೆ ಕಾರಣರಾದವರು ಸರ್. ಸಿ. ವಿ. ರಾಮನ್. ಈ ಮಹಾನ್ ವಿಜ್ಞಾನಿ ತನ್ನ ಜೀವಿತದ ಬಹುಮುಖ್ಯ ಭಾಗವನ್ನು, ವಿಜ್ಞಾನ ಎಂದರೇನು ಮತ್ತು ವಿಜ್ಞಾನ ಏನು ಮಾಡಬಲ್ಲದು ಎಂಬುದಕ್ಕೆ ಜೀವಂತ ಉದಾಹರಣೆಯನ್ನು ಒದಗಿಸುವುದರಲ್ಲೇ ಕಳೆದರು. ವಿಜ್ಞಾನ ಮತ್ತು ಇಂಜಿನಿಯರಿಂಗ್ ಉನ್ನತ ಶಿಕ್ಷಣ ಸಂಸ್ಥೆಯೂದ ಭಾರತೀಯ ವಿಜ್ಞಾನ ಸಂಸ್ಥೆಯನ್ನು ಜೆ. ಎನ್. ಟಾಟಾರವರ ಉದಾರ ದೇಣಿಗೆಯಿಂದ ೧೯೦೯ರಲ್ಲಿ ಸ್ಥಾಪಿಸಿದಾಗ, ಬೆಂಗಳೂರಿನಲ್ಲಿ ಅಂತಹ ಸಂಸ್ಥೆಯ ಸ್ಥಾಪನೆಗೆ ಆವಶ್ಯಕವಾದ ಸಿದ್ಧಪರಂಪರೆ ಮತ್ತು ಆದರ್ಶ ವಾತಾವರಣಗಳಿವೆ ಎಂಬ ಅಂಶವನ್ನು ಸಾಧಿಸಿ ತೋರಿಸಿದಂತೆ ಆಯಿತು.

## ಸಂಸ್ಥೆಗಳ ಬೆಳವಣಿಗೆ

ಕಳೆದೆರಡು ದಶಕಗಳಲ್ಲಿ ಕರ್ನಾಟಕದಲ್ಲಿ ವೈಜ್ಞಾನಿಕ ಮತ್ತು ವೃತ್ತಿಪರ ಸಂಸ್ಥೆಗಳ ಬೆಳವಣಿಗೆ ಪರಿಣಾಮಕಾರಿಯೂಗಿದೆ. ಕರ್ನಾಟಕ ರಾಜ್ಯದ ೩೭೦ ಲಕ್ಷ ಜನರಿಗೆ ಪ್ರಾಥಮಿಕ ಮಟ್ಟದ ತರಬೇತಿಗೆ ಆವಶ್ಯಕವಾದ ನೆಲೆಯನ್ನು ಒದಗಿಸುವುದರಲ್ಲಿ ಏಳು ವಿಶ್ವವಿದ್ಯಾಲಯಗಳೂ, ಒಂದು ನೂರಕ್ಕೂ ಮಿಕ್ಕ ವೃತ್ತಿ ತರಬೇತಿ ಸಂಸ್ಥೆಗಳೂ ನಿರತವಾಗಿವೆ. ವೈಜ್ಞಾನಿಕ ಮತ್ತು ತಾಂತ್ರಿಕ ಶಾಲೆಗಳಲ್ಲಿ ನಡೆಸಲಾಗುತ್ತಿರುವ ಶುದ್ಧ ಮತ್ತು ಆನ್ವಯಿಕ ಸಂಶೋಧನೆಯೂ ಪರಿಣಾಮಕಾರಿ ಬೆಳವಣಿಗೆಯನ್ನು ಕಳೆದೆರಡು ದಶಕಗಳಲ್ಲಿ ತೋರಿಸಿದೆ. ಮೂಲವಿಜ್ಞಾನಗಳಲ್ಲಿ ಭೌತಿಕ, ರಾಸಾಯನಿಕ, ಜೈವಿಕ ಮತ್ತು ವಸ್ತು ವಿಜ್ಞಾನಗಳಲ್ಲಿ ಸಂಶೋಧನೆ ನಡೆಸುವ ಭಾರತೀಯ ವಿಜ್ಞಾನ ಸಂಸ್ಥೆಯೇ ಅಲ್ಲದೆ, ರಾಮನ್ ಸಂಸ್ಥೆಯಂತಹ ಹೊಸ ಸಂಸ್ಥೆಗಳೂ ಸ್ಥಾಪಿಸಲ್ಪಟ್ಟಿವೆ. ರಾಮನ್ ಸಂಸ್ಥೆ ಸೌರ ರೇಡಿಯೋ, ಖಗೋಳ ವಿಜ್ಞಾನ ಮಿಲಿಮೀಟರ್ ತರಂಗ ಖಗೋಳ ವಿಜ್ಞಾನ, ದ್ರವ, ಹರಳು ಮತ್ತು ಸೈದ್ಧಾಂತಿಕ ಖಭೌತ ವಿಜ್ಞಾನಗಳಲ್ಲಿ ಸಾಕಷ್ಟು ಸಂಶೋಧನೆ ನಡೆಸುತ್ತಿದೆ. ಬೆಂಗಳೂರಿನಲ್ಲಿರುವ ಖಭೌತ ವಿಜ್ಞಾನ ಸಂಸ್ಥೆ, ಖಭೌತ ವಿಜ್ಞಾನ ಕ್ಷೇತ್ರದಲ್ಲಿ ಸಂಶೋಧನೆ ನಡೆಸುತ್ತಿರುವ ಮತ್ತೊಂದು ಸಂಸ್ಥೆ. ಇದು ಮುಖ್ಯವಾಗಿ ಚಾಕ್ಷುಷ ಖಭೌತ ವಿಜ್ಞಾನದಲ್ಲಿ ಸಂಶೋಧನೆ ನಡೆಸುತ್ತಿದ್ದು, ಯುರೇನಸ್ ಸುತ್ತಲೂ ಇರುವ ಉಂಗುರಗಳನ್ನು ಕಂಡುಹಿಡಿಯುವುದಕ್ಕೆ ಈ ಸಂಶೋಧನೆಯೇ ಕಾರಣವಾಯಿತು. ಬೆಂಗಳೂರಿನಲ್ಲಿರುವ ಇಸ್ರೋ ಉಪಗ್ರಹ ಕೇಂದ್ರ ೧೯೭೨ರಲ್ಲಿ ಸ್ಥಾಪಿತವಾಯಿತು. ಈ ಸಂಸ್ಥೆಯಲ್ಲಿ ವಿಲಕ್ಷಣ ನಕ್ಷತ್ರಗಳ ನಡವಳಿಕೆ ಮತ್ತು ನಕ್ಷತ್ರ ವ್ಯವಸ್ಥೆಗಳ ಅಧ್ಯಯನ ಕೈಗೊಳ್ಳಲಾಗುತ್ತಿದೆ. ಈ ನಕ್ಷತ್ರಗಳು ಹೊರ ಸೂಸುವ ಎಕ್ಸ್ ಕಿರಣ, ಗಾಮಾಕಿರಣ ಮತ್ತು ರಕ್ತಾತೀತ ಕಿರಣಗಳನ್ನು ಅಭ್ಯಾಸ ಮಾಡುವುದರಲ್ಲಿ ಆಸಕ್ತರಾದ, ಪ್ರಬಲ ಶಕ್ತಿಯ ಖಭೌತ ವಿಜ್ಞಾನಿಗಳ ತಂಡವೊಂದಿದೆ.

## ಆನ್ವಯಿಕ ವಿಜ್ಞಾನಗಳು

ಕೃಷಿ ವಿಜ್ಞಾನ, ತೋಟಗಾರಿಕೆಗೆ ಸಂಬಂಧಿಸಿದ ಸಂಶೋಧನೆಗಳು, ರೇಷ್ಮೆ ಕೃಷಿ, ಪಶುಸಂಗೋಪನೆ ಮತ್ತು ಮೀನು ಕೃಷಿಯಂತಹ ಆನ್ವಯಿಕ ವಿಜ್ಞಾನ ಕ್ಷೇತ್ರದ ಸಂಶೋಧನೆಗಳನ್ನು ಬೆಂಗಳೂರಿನಲ್ಲಿರುವ ಕೃಷಿ ವಿಶ್ವವಿದ್ಯಾಲಯ, ಪಶುಸಂಗೋಪನಾ ಇಲಾಖೆ ಮತ್ತು ಪಶು ವೈದ್ಯ ಇಲಾಖೆ ಮತ್ತು ಮೈಸೂರಿನಲ್ಲಿರುವ ಕೇಂದ್ರ ಆಹಾರ ಸಂಶೋಧನ ಸಂಸ್ಥೆಗಳಲ್ಲಿ ನಡೆಸಲಾಗುತ್ತಿದೆ. ಈ ನಿರ್ಣಾಯಕ ಕ್ಷೇತ್ರಗಳ ಸರ್ವಾಂಗೀಣ ಬೆಳವಣಿಗೆಗೆ ಸಹಾಯಕವಾದ, ತತ್ ಸಂಬಂಧೀ ಕೈಗಾರಿಕೆಗಳ ಬೆಳವಣಿಗೆಗೆ ಅವಶ್ಯವಾದ ಮೂಲ ಸಾಮಗ್ರಿಗಳ ಉತ್ಪನ್ನ ಇಮ್ಮಡಿಯೂಗಿ, ಈಗ ಸುಮಾರು ೧.೫ ಲಕ್ಷ ಟನ್‌ಗಳಷ್ಟಿದೆ. ಇಷ್ಟಾದರೂ ಇದು ರಾಷ್ಟ್ರೀಯ ಉತ್ಪನ್ನದ ಶೇ. ೧೦ ಕ್ಕಿಂತ ಕಡಿಮೆಯೂಗಿದೆ. (ರಾಷ್ಟ್ರೀಯ ಉತ್ಪನ್ನವು ಅತ್ಯಂತ ಕಡಿಮೆಯೂಗಿದೆ ಎನ್ನುವುದೂ ನಿಜ.) ಬರಲಿರುವ ವರ್ಷಗಳಲ್ಲಿ ಕಾರವಾರ, ಮಂಗಳೂರು, ಮಲ್ಪೆ ಮತ್ತು ಹೊನ್ನಾವರಗಳನ್ನು ಸಣ್ಣ ಬಂದರು ಹಾಗೂ ಮೀನು ಕೃಷಿ ಬಂದರುಗಳನ್ನಾಗಿ ಅಭಿವೃದ್ಧಿಪಡಿಸುವುದರಿಂದ ಈ ಪರಿಸ್ಥಿತಿಯನ್ನು ತಕ್ಕಷ್ಟು ಉತ್ತಮ ಪಡಿಸಬಹುದಾಗಿದೆ. ಕಳೆದ ಐದು ವರ್ಷಗಳಲ್ಲಿ ಕರ್ನಾಟಕದಲ್ಲಿ ಒಟ್ಟು ಆಹಾರ ಬೆಳೆಗಳ ಉತ್ಪನ್ನ ಶೇ. ೨೦ ರಷ್ಟು ಅಧಿಕವಾಗಿದೆ. ಇಡೀ ರಾಷ್ಟ್ರದ ಉತ್ಪನ್ನ ೧೫ ಕೋಟಿ ಟನ್‌ಗಳಾಗಿದ್ದರೆ, ಕರ್ನಾಟಕದ ಉತ್ಪನ್ನ ಕೇವಲ ೮–೧೦ ದಶಲಕ್ಷ ಟನ್‌ಗಳಾಗಿವೆ. ಕರ್ನಾಟಕದ

ಪ್ರಮುಖ ಉದ್ದಿಮೆಗಳಲ್ಲಿ ಒಂದಾದ ರೇಷ್ಮೆಯ ಉತ್ಪನ್ನ ಐದು ವರ್ಷಕ್ಕಿಂತ ಕಡಿಮೆ ಅವಧಿಯಲ್ಲಿ ಎರಡರಷ್ಟಾಗಿದೆ. ಇಡೀ ದೇಶದಲ್ಲಿ ತಯಾರಿಸಲಾಗುತ್ತಿರುವ ರೇಷ್ಮೆಯಲ್ಲಿ ಶೇ. ೮೦ ರಷ್ಟು ಕರ್ನಾಟಕದಲ್ಲಿ ಉತ್ಪಾದನೆಯಾಗುತ್ತಿದೆ. ಆದರೂ ಅಕ್ಕಿ ಮತ್ತು ಗೋಧಿಗಳ ಉತ್ಪನ್ನ ಹರ್‍ಯಾಣದಂತಹ ರಾಜ್ಯದೊಂದಿಗೆ ಹೋಲಿಸಿದಾಗ ಬಹಳ ಕಡಿಮೆಯಾಗಿದೆ. ಹರಿಯಾಣದಲ್ಲಿ ಹೆಕ್ಟೇರ್ ಒಂದಕ್ಕೆ ೨೪೦೦ ಕೆ.ಜಿ. ಅಕ್ಕಿ ಬೆಳೆದರೆ, ನಮ್ಮಲ್ಲಿ ಹೆಕ್ಟೇರಿಗೆ ೧,೮೫೦ ಕೆ.ಜಿ. ಮಾತ್ರ ಬೆಳೆಯಲಾಗುತ್ತಿದೆ. ನಾವು ಹೆಕ್ಟೇರಿಗೆ ೭೦೦ ಕೆ.ಜಿ. ಗೋದಿ ಬೆಳೆದರೆ, ಹರಿಯಾಣದಲ್ಲಿ ೨,೧೦೦ ಕೆ.ಜಿ. ಬೆಳೆಯಲಾಗುತ್ತಿದೆ. ಒಟ್ಟಿನಲ್ಲಿ ಕರ್ನಾಟಕದಲ್ಲಿ ಹಸಿರು ಕ್ರಾಂತಿ ತನ್ನ ಪ್ರಭಾವವನ್ನು ಇನ್ನೂ ಬೀರಿಲ್ಲ.

### ವಿಮಾನ ಸಂಚಾರದಲ್ಲಿ ವಿದ್ಯುತ್ ಮತ್ತು ಇಲೆಕ್ಟ್ರಾನಿಕ್ ತಂತ್ರಶಾಸ್ತ್ರ

ಹಿತಕರವಾದ ವಾತಾವರಣ ಮತ್ತು ಸಾಕಷ್ಟು ಸುದೃಢ ಆಂತರಿಕ ಬೆಳವಣಿಗೆಗಳು ಬೆಂಗಳೂರನ್ನು ವಿಮಾನ ಸಂಚಾರದಲ್ಲಿ ವಿದ್ಯುತ್ ಮತ್ತು ಇಲೆಕ್ಟ್ರಾನಿಕ್ ತಂತ್ರೋದ್ಯಮದ ರಾಜಧಾನಿಯನ್ನಾಗಿ ಮಾಡಿವೆ. ರಾಷ್ಟ್ರೀಯ ವೈಮಾನಿಕ ಪ್ರಯೋಗಶಾಲೆ, ವೈಮಾನಿಕ ಅಭಿವೃದ್ಧಿ ಸಂಸ್ಥೆ, ಗ್ಯಾಸ್‌ಟರ್ಬೈನ್ ಸಂಶೋಧನಾ ಸಂಸ್ಥೆ, ಇಲೆಕ್ಟ್ರಾನಿಕ್ ಮತ್ತು ರೇಡಾರ್ ಅಭಿವೃದ್ಧಿ, ಇಸ್ರೋ ಉಪಗ್ರಹ ಕೇಂದ್ರ ಮತ್ತು ಕಂಟ್ರೋಲ್ ರೇಟ್ ಆಫ್ ಇನ್‌ಸ್ಪೆಕ್ಷನ್ ಮತ್ತು ಇಲೆಕ್ಟ್ರಾನಿಕ್ಸ್ – ಇವು ಮೂಲಭೂತವಾದ ಸಂಶೋಧನೆ ಮತ್ತು ಅಭಿವೃದ್ಧಿಯ ಪರಿಕರಗಳನ್ನು ಒದಗಿಸುತ್ತಿವೆ. ಹಿಂದೂಸ್ತಾನ್ ಏರೋನಾಟಿಕ್ಸ್ ಲಿ., ನಲ್ಲಿ ನಡೆಯುವ ಏರೋನಾಟಿಕ್ಸ್ ಚಟುವಟಿಕೆ ಮತ್ತು ಭಾರತ್ ಇಲೆಕ್ಟ್ರಾನಿಕ್ಸ್‌ನ ಇಲೆಕ್ಟ್ರಾನಿಕ್ಸ್ ತಯಾರಿಕೆ ಮತ್ತು ಭಾರತೀಯ ಟೆಲಿಫೋನ್ ಕೈಗಾರಿಕೆ ಇವು ಕರ್ನಾಟಕದಲ್ಲಷ್ಟೇ ಅಲ್ಲ, ಭಾರತದಲ್ಲೇ ಅತ್ಯಂತ ಮಹತ್ವದ ಸ್ಥಾನ ಪಡೆದಿವೆ. ಬಿ.ಎಚ್.ಇ.ಎಲ್., ಎನ್.ಜಿ.ಇ.ಎಫ್. ಗಳ ಜತೆಯಲ್ಲಿ ಹಲವಾರು ಸಣ್ಣ ಮತ್ತು ದೊಡ್ಡ ಕೈಗಾರಿಕೆಗಳು, ಉಪಕೈಗಾರಿಕೆಗಳು, ಬೆಂಗಳೂರನ್ನು ಭಾರತದ ಇಲೆಕ್ಟ್ರಾನಿಕ್ ರಾಜಧಾನಿಯಾಗುವುದಕ್ಕೆ ಎಲ್ಲ ಅರ್ಹತೆಯನ್ನು ಒದಗಿಸಿವೆ. ಇದೇ ರೀತಿ ಬೆಂಗಳೂರು ಹಿಂದೂಸ್ತಾನ್ ಮೆಷಿನ್‌ಟೂಲ್ಸ್ ಸಂಸ್ಥೆಯ ಹುಟ್ಟೂರಾಗಿದೆ. ಯಂತ್ರೋಪಕರಣಗಳನ್ನೂ ಕೈಗಡಿಯಾರಗಳನ್ನೂ ಈ ಸಂಸ್ಥೆ ತಯಾರು ಮಾಡುತ್ತದೆ. ಈ ಸಂಸ್ಥೆಗೆ ಬೆಂಗಳೂರಿನಲ್ಲೇ ಇರುವ ಸೆಂಟ್ರಲ್ ಮೆಷಿನ್ ಟೂಲ್ಸ್ ಇನ್ಸ್ಟಿಟ್ಯೂಟ್, ಮೂಲ ಸಂಶೋಧನ ಕೇಂದ್ರವಾಗಿದೆ. ಈ ಬೃಹತ್ ಕೈಗಾರಿಕೆಗಳ ಸ್ಥಾಪನೆಯ ಗಣನೀಯ ಪರಿಣಾಮವೆಂದರೆ, ಬೆಂಗಳೂರಿನಲ್ಲಿಯೇ ವಿಪುಲ ಸಂಖ್ಯೆಯ ಸಣ್ಣ ಮತ್ತು ಉಪ ಕೈಗಾರಿಕೆಗಳು ಉದ್ಭವಿಸಿರುವುದು. ಈ ಸಣ್ಣ ಮತ್ತು ಉಪಕೈಗಾರಿಕೆಗಳು ಆವಶ್ಯಕ ವಸ್ತುಗಳನ್ನು ದೊಡ್ಡ ಕೈಗಾರಿಕೆಗಳಿಗೆ ಪೂರೈಸುತ್ತವೆ. ಅದೇ ರೀತಿ ದೊಡ್ಡ ಪರಿಮಾಣದಲ್ಲಿ ಉದ್ಯೋಗಾವಕಾಶಗಳನ್ನೂ ಒದಗಿಸುತ್ತಿವೆ.

### ಬಾಹ್ಯಾಕಾಶ ಸಂಶೋಧನೆ

ಏವಿಯಾನಿಕ್ಸ್‌ನ (ವಿಮಾನಯಾನದಲ್ಲಿ ವಿದ್ಯುತ್ ಮತ್ತು ಇಲೆಕ್ಟ್ರಾನಿಕ್ ತಂತ್ರ ಬಳಸುವ ಶಾಸ್ತ್ರ) ತೀಕ್ಷ್ಣ ಚಟುವಟಿಕೆಯ ಪರಿಣಾಮವಾಗಿ ಉಂಟಾದ ಸುದೃಢ ಆಂತರಿಕ ವ್ಯವಸ್ಥೆ ಮತ್ತು ಅನುಕೂಲತೆಗಳಿರುವುದರಿಂದ, ಇಂಡಿಯನ್ ಸ್ಪೇಸ್ ರಿಸರ್ಚ್ ಆರ್ಗನೈಸೇಷನ್ (ಇಸ್ರೋ) (ಭಾರತೀಯ ಬಾಹ್ಯಾಕಾಶ ಸಂಶೋಧನ ಸಂಸ್ಥೆ) ಬೆಂಗಳೂರಿನಲ್ಲಿ ಇಸ್ರೋ ಉಪಗ್ರಹ ಕೇಂದ್ರವನ್ನು ಸ್ಥಾಪಿಸಿದ್ದು ಸಹಜವಾಗಿಯೇ ಇದೆ. ಪೀಣ್ಯದಲ್ಲಿ ವಿಶಾಲವಾಗಿ ಹರಡಿರುವ ಕೈಗಾರಿಕಾ ಸಂಕೀರ್ಣದಲ್ಲಿ ಸ್ಥಾಪಿತವಾಗಿರುವ ಇಸ್ರೋ ಉಪಗ್ರಹ ಕೇಂದ್ರದ ವಿಶಿಷ್ಟ ಸಾಧನೆ ಬೆಂಗಳೂರಿನಲ್ಲಿರುವ ಇಲೆಕ್ಟ್ರಾನಿಕ್ಸ್ ಕೈಗಾರಿಕೆಗಳಿಗೆ ಹೊಸ ಪ್ರಭಾವ ಬೀರಿ, ಬೆಂಗಳೂರನ್ನು ಬಾಹ್ಯಾಕಾಶ ತಂತ್ರಜ್ಞಾನದ ಅತ್ಯಂತ ಮುಖ್ಯಕೇಂದ್ರಗಳಲ್ಲಿ ಒಂದನ್ನಾಗಿ ಮಾಡಿದೆ. ಅತ್ಯಂತ ಸೂಕ್ಷ್ಮ ಸಲಕರಣೆಗಳ ಬೆಳವಣಿಗೆ. ಬಿ.ಎಚ್.ಇ.ಎಲ್., ಮತ್ತು ಬಿ.ಇ.ಎಲ್. ಗಳಲ್ಲಿ ದೇಶೀಯ ಸಂದರ್ಭಕ್ಕೆ ಹೊಂದಿಕೊಳ್ಳುವಂತಹ ಬಾಹ್ಯಾಕಾಶ ಸೌರ ವಿದ್ಯುತ್ ಕೋಶಗಳ ಅಳವಡಿಕೆ ಮತ್ತು ಬಿ.ಇ.ಎಲ್. ಮತ್ತು ಐ.ಟಿ.ಐ.ಗಳಲ್ಲಿ ಕೈಗೊಂಡಿರುವ ಸೂಕ್ಷ್ಮ ಪ್ಯಾಕೇಜಿಂಗ್ ಚಟುವಟಿಕೆ–ಇವು ನಮ್ಮ ದೇಶದ ಇಲೆಕ್ಟ್ರಾನಿಕ್ ಸ್ಥಿತಿಗತಿಗಳ ಮೇಲೆ ಪರಿಣಾಮವುಂಟು ಮಾಡುವಷ್ಟು ಶಕ್ತಿಯುತವಾಗಿವೆ. ಕೇವಲ ಎಂಟು ವರ್ಷಗಳ ಅಲ್ಪಕಾಲಾವಧಿಯಲ್ಲಿ ಇಸ್ರೋ ಉಪಗ್ರಹ ಕೇಂದ್ರ ಆರು ಉಪಗ್ರಹಗಳನ್ನು ರೂಪಿಸಿ, ತಯಾರಿಸಿ, ಉಡಾವಣೆ ಮಾಡುವಷ್ಟು ಬೆಳವಣಿಗೆಯನ್ನು ತೋರಿಸಿದೆ. ಮೊತ್ತಮೊದಲ ಭಾರತೀಯ ಉಪಗ್ರಹವಾದ 'ಆರ್ಯಭಟ'ದಿಂದ ಆರಂಭಿಸಿ ಇಸ್ರೋ ಉಪಗ್ರಹ ಕೇಂದ್ರ ದೂರ ಸಂವೇದನಾ ಉಪಗ್ರಹಗಳಾದ 'ಭಾಸ್ಕರ' ೧ ಮತ್ತು ೨ ರಂತಹ ಉಪಗ್ರಹಗಳನ್ನೂ, ಅಕ್ಷರೇಖಾ ಸ್ಥಿರೀಕೃತ ನಿಶ್ಚಲ ಭೂ ಸಂಪರ್ಕ ಉಪಗ್ರಹವಾದ ಆಪಲ್ ನಂತಹ ಮೂರು ಉಪಗ್ರಹಗಳನ್ನೂ ಉಡಾಯಿಸಿದೆ. ಹಾಸನದಲ್ಲಿ ಪರಿಪೂರ್ಣವಾದ ಒಂದು ನಿಯಂತ್ರಣ ಕೇಂದ್ರದ ಸ್ಥಾಪನೆಯೊಂದಿಗೆ, ಕರ್ನಾಟಕ ಭಾರತೀಯ ಉಪಗ್ರಹ ಸಂಪರ್ಕ ಜಾಲದ ಪ್ರಜ್ಞಾ ಕೇಂದ್ರವಾಗುತ್ತದೆ. ಮುಂದೆ ಉಡಾಯಿಸಲಾಗುವ ಎಲ್ಲ ಪ್ರಾಯೋಗಿಕ ಸಂಪರ್ಕ ಉಪಗ್ರಹಗಳನ್ನೂ ನಿಯಂತ್ರಿಸುವ ಶಕ್ತಿಯನ್ನು ಈ ಕೇಂದ್ರ ಪಡೆದಿದೆ.

### ತಂತ್ರಜ್ಞಾನ ಮತ್ತು ಅಭಿವೃದ್ಧಿ

ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಶೀಲ ರಾಷ್ಟ್ರಗಳ ನಡುವೆ ಇರುವ ತಂತ್ರಜ್ಞಾನದ ಅಂತರವೇ, ಈ ರಾಷ್ಟ್ರಗಳ ನಡುವಿನ ಕಂದಕವಾಗಿರುವುದು, ಈ ಯುಗದ ವೈಶಿಷ್ಟ್ಯವಾಗಿದೆ. ಈ ಯುಗದ ಇನ್ನೊಂದು ವೈಶಿಷ್ಟ್ಯವೆಂದರೆ, ವಿಜ್ಞಾನ ಮತ್ತು ತಂತ್ರಜ್ಞಾನಗಳ ಬೆಳವಣಿಗೆಯ ಸ್ಫೋಟ. ಈ ಹಿನ್ನೆಲೆಯಲ್ಲಿ ಸದಾ ಬೆಳೆಯುತ್ತಿರುವ ಜನಸಂಖ್ಯೆಯ ಕನಿಷ್ಠ ಆವಶ್ಯಕತೆಯನ್ನು ಪೂರೈಸುವ ಏಕೈಕ ಮಾರ್ಗವೆಂದರೆ, ಅತ್ಯುಚ್ಚಮಟ್ಟದ ಸೂಕ್ಷ್ಮ ತಂತ್ರಜ್ಞಾನವನ್ನು ಬಳಸಿಕೊಳ್ಳುವುದು. ಈ ತಂತ್ರಜ್ಞಾನ, ಪರಿಸ್ಥಿತಿಯ ಆರ್ಥಿಕ ಮತ್ತು ವೈಜ್ಞಾನಿಕವಾದ ನೈಜ ಮೌಲ್ಯಮಾಪನವನ್ನು ಅವಲಂಬಿಸಿರಬೇಕು. ತೀವ್ರ ಔದ್ಯೋಗೀಕರಣ, ಆಹಾರ ಮತ್ತಿತರ ಸಂಪನ್ಮೂಲಗಳ ಹೆಚ್ಚಳ ಮತ್ತು ಜನಸಂಖ್ಯೆಯನ್ನು ಹತ್ತಿಕ್ಕುವ ಕ್ರಮವನ್ನು ಕಟ್ಟುನಿಟ್ಟಾಗಿ ಜಾರಿಗೆ ತರುವುದು ಇವೇ ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ಪ್ರಥಮ ಆದ್ಯತೆಯ ಮೇಲೆ ನಡೆಯಬೇಕಾದ ಕೆಲಸಗಳಾಗಿವೆ. ಹಳ್ಳಿಗಾಡಿನ ಮೂಲೆಮೂಲೆಗೂ ಸಮರ್ಥ ಸಂಪರ್ಕಸಾಧನವನ್ನು ಒದಗಿಸುವುದರಲ್ಲಿ ತನ್ನ ಶಕ್ತಿಯನ್ನು ಬಾಹ್ಯಾಕಾಶ ತಂತ್ರಜ್ಞಾನ ಈಗಾಗಲೇ ಪ್ರದರ್ಶಿಸಿದೆ. ಇದರ ಜತೆಯಲ್ಲಿಯೇ ಕೃಷಿ, ಅರಣ್ಯ, ಜಲ ಮತ್ತು ಖನಿಜಗಳ ಕ್ಷೇತ್ರಗಳಲ್ಲಿ ಹೊಸ ಸಂಪನ್ಮೂಲವನ್ನು ಗುರುತಿಸುವುದರಲ್ಲಿಯೂ ಈ ಬಾಹ್ಯಾಕಾಶ ತಂತ್ರಜ್ಞಾನ ಯಶಸ್ವಿಯಾಗಿದೆ. ಮಂಡ್ಯದ ಮೇಲೆ ನಡೆಸಿದ ಆಕಾಶಸ್ಥಿತ ಸರ್ವೇಕ್ಷಣೆಯ ಪ್ರಯೋಗದಲ್ಲಿ ದೊರೆತ ಹಲವು ವರ್ಣಫಲಕದ ಚಿತ್ರ, ಕಬ್ಬು ಮತ್ತು ಬತ್ತವನ್ನು ವಿಂಗಡಿಸುವ ಸಾಧ್ಯತೆಯನ್ನೇ ಅಲ್ಲದೆ, ರಕ್ತಾತೀತ ವರ್ಣ ಚಿತ್ರದ ಮೂಲಕ,

ಕಬ್ಬಿನ ಎಲೆಗೆ ತಗಲುವ ರೋಗವನ್ನು ಗುರುತಿಸುವುದರಲ್ಲಿಯೂ ಯಶಸ್ವಿಯಾಗಿರುವುದನ್ನು ಸಿದ್ಧಪಡಿಸಿದೆ.

### ಭವಿಷ್ಯ

ಬರುವ ದಶಕಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳಲ್ಲಿ ಅತ್ಯಂತ ಶೀಘ್ರಗತಿಯ ಬೆಳವಣಿಗೆಯಾಗುವುದಿದೆ. ಕರ್ನಾಟಕ ರಾಜ್ಯ ಈ ಬೆಳವಣಿಗೆಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ಪ್ರಯತ್ನಿಸದಿದ್ದರೆ, ಹೊಸ ಸವಾಲುಗಳನ್ನು ಎದುರಿಸಲು ಸಿದ್ಧವಾಗದಿದ್ದರೆ, ನಾವು ಹಿಂದೆ ಬೀಳುತ್ತೇವೆ. ಕಳೆದೆರಡು ದಶಕಗಳಲ್ಲಿ ಕರ್ನಾಟಕ ರಾಜ್ಯ ಗಮನಾರ್ಹ ಬೆಳವಣಿಗೆಯನ್ನು ಸಾಧಿಸಿದ್ದರೂ, ಬೆಳವಣಿಗೆಯ ವೇಗ ಇನ್ನೂ ಹೆಚ್ಚಾಗಿರಬಹುದಿತ್ತು. ಕೋಷ್ಟಕ ೧ ರಿಂದ ವ್ಯಕ್ತವಾಗುವಂತೆ ಆಹಾರ ಉತ್ಪಾದನೆ, ಉದ್ಯಮಗಳಲ್ಲಿನ ಉತ್ಪಾದನೆ, ತಲಾ ಆದಾಯ ಗ್ರಾಮೀಣ ಅಭಿವೃದ್ಧಿ ಮತ್ತು ತಲಾ ವಿದ್ಯುತ್ ಬಳಕೆಗಳಲ್ಲಿ, ಭಾರತದಲ್ಲಿನ ಇತರ ರಾಜ್ಯಗಳೊಂದಿಗೆ ಹೋಲಿಸಿದಾಗ, ನಮ್ಮ ರಾಜ್ಯ ಹಿಂದೆ ಬಿದ್ದಿದೆ. ೧೯೦೨ ರಷ್ಟು ಹಿಂದೆಯೇ ಕರ್ನಾಟಕ ಇಡೀ ರಾಷ್ಟ್ರದಲ್ಲೇ ಮೊದಲ ಬಾರಿಗೆ ಜಲವಿದ್ಯುತ್ತನ್ನು ಉತ್ಪಾದಿಸಿ ಬಳಸುವುದರಲ್ಲಿ ಮಾರ್ಗದರ್ಶನ ಮಾಡಿತು ಎನ್ನುವುದನ್ನು ಗಮನಿಸಿದಾಗ, ಅಲ್ಲಿಂದೀಚೆಗೆ ಸಾಕಷ್ಟು ಬೆಳವಣಿಗೆ ಆಗದೆ ಇರುವುದಕ್ಕೆ ಕಾರಣ ನಮ್ಮ ತಪ್ಪುತಪ್ಪಾದ ಯೋಜನೆಗಳೇ ಎಂದು ಹೇಳಬೇಕು. ಮಹಾನ್ ದಾರ್ಶನಿಕ ಎಂ. ವಿಶ್ವೇಶ್ವರಯ್ಯನವರು ಜಲವಿದ್ಯುತ್‌ಜನಕಗಳು ಮತ್ತು ಆಧುನಿಕ ಕಾರ್ಖಾನೆಗಳನ್ನು ಸ್ಥಾಪಿಸಿ, ಆಧುನಿಕ ನಿರ್ವಹಣ ತಂತ್ರಜ್ಞಾನಗಳನ್ನು ನಮಗೆ ಪರಿಚಯಿಸಿದರು. ಇಡೀ ರಾಷ್ಟ್ರಕ್ಕೆ ಮಾದರಿಯಾಗಬಲ್ಲಂತಹ, ತಮ್ಮ ನೀತಿಪಾಲನೆಯನ್ನು ಉಜ್ವಲವಾಗಿ ಪ್ರತಿಪಾದಿಸುವ "ಭಾರತಕ್ಕೆ ಯೋಜಿತ ಅರ್ಥವ್ಯವಸ್ಥೆ" ಎಂಬ ಪುಸ್ತಕವನ್ನು ಬರೆದಿರುವ ಸರ್ ಎಂ. ವಿಶ್ವೇಶ್ವರಯ್ಯನವರು ಔದ್ಯೋಗಿಕ-ಆರ್ಥಿಕ ಕ್ಷೇತ್ರಗಳಲ್ಲಿನ ಚಟುವಟಿಕೆಗೆ ಶಕ್ತಿಯುತವಾದ ಪುಟವನ್ನು ಕೊಟ್ಟರು. ಆದರೆ ಇವೆಲ್ಲವುಗಳ ಲಾಭವನ್ನು ಕರ್ನಾಟಕದಲ್ಲಿಯೇ ಪಡೆಯಲಾಗಿಲ್ಲ. ಬೇರೆ ರಾಜ್ಯಗಳಿಗೆ ಹೋಲಿಸಿದಾಗ, ಕರ್ನಾಟಕದಲ್ಲಿ ಕೇಂದ್ರೀಕೃತವಾಗಿರುವ ವೈಜ್ಞಾನಿಕ ಸಂಸ್ಥೆಗಳು ಹಾಗೂ ಮಾನವ ಶಕ್ತಿಗಳನ್ನೇ ಬಂಡವಾಳವನ್ನಾಗಿ ಭಾವಿಸಿದಾಗ, ಅದು ಎಷ್ಟರ ಮಟ್ಟಿಗೆ ಹೆಚ್ಚಿನ ಲಾಭಕ್ಕೆ ಬಳಸಲ್ಪಡಬೇಕಾಗಿತ್ತೋ ಅಷ್ಟರ ಮಟ್ಟಿಗೆ ಆಗಿಲ್ಲ. ವಿಶಾಲ ತಳಹದಿಯ ಒಂದು ರಾಜ್ಯ ವಿಜ್ಞಾನ ಪರಿಷತ್ ಇಲ್ಲದಿರುವುದು, ರಾಜ್ಯವಿಜ್ಞಾನ ಮತ್ತು ತಂತ್ರಜ್ಞಾನ ಮಂಡಲಿಯ ನಿರ್ಲಕ್ಷ್ಯ-ಇವುಗಳಿಂದ ಕೊರತೆ ಉಂಟಾಗಿದೆ. ಈ ಕೊರತೆಯನ್ನು ನಿವಾರಿಸಿ ಲಭ್ಯವಿರುವ ವೈಜ್ಞಾನಿಕ ಸಾಮರ್ಥ್ಯವನ್ನು ಬೆಳಸಿ, ಅದರ ಲಾಭಗಳಿಸಲು ರಾಜ್ಯ ಸರ್ಕಾರ ದೃಢನಿರ್ಧಾರ ಮಾಡಿದಾಗ, ರಾಜ್ಯದ ವೈಜ್ಞಾನಿಕ ಮತ್ತು ತಾಂತ್ರಿಕ ಮುನ್ನಡೆ ಗಮನಾರ್ಹವಾಗಿ ಆಗದೇ ಇರಲು ಸಾಧ್ಯವೇ ಇಲ್ಲ.

ಜೀವನ ಮಟ್ಟವನ್ನು ಅಳೆಯುವುದಕ್ಕೆ ಶಕ್ತಿಯನ್ನು ಒಂದು ಮಾಪಕವನ್ನಾಗಿ ಪರಿಗಣಿಸಲಾಗುತ್ತಿದೆ. ಎಲ್ಲ ಬಗೆಯ ಪ್ರಗತಿ ಮತ್ತು ಯಾಂತ್ರೀಕರಣಗಳಿಗೆ ಶಕ್ತಿ ಅತ್ಯಂತ ಆವಶ್ಯಕ. ಭಾರತದಲ್ಲಿ ತಲೆಯೊಂದಕ್ಕೆ ಶಕ್ತಿಯ ಬಳಕೆ ೧೪೦ ಕಿಲೊ ವ್ಯಾಟ್ ಗಂಟೆ ಆಗಿದೆ. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿಯಾದರೋ ತಲಾ ವರಮಾನ ನಮ್ಮ ವರಮಾನಕ್ಕಿಂತ ೫೦ರಷ್ಟು ಹೆಚ್ಚಿಗೆ ಇರುವಂತೆಯೇ, ಶಕ್ತಿ ಬಳಕೆ ಕೂಡ ೮೦೦೦ ಕಿಲೋವಾಟ್ ಗಂಟೆ ಆಗಿದೆ. ಕರ್ನಾಟಕದ ತಲಾ ಶಕ್ತಿ ಬಳಕೆ ೧೬೦ ಕಿಲೊವ್ಯಾಟ್ ಗಂಟೆ ಆಗಿದೆ. ಇದು ಭಾರತದ ತಲಾ ಬಳಕೆಗಿಂತ ಬಹಳ ಹೆಚ್ಚಲ್ಲ. ಆದರೆ ಹರಿಯಾಣ ಮತ್ತು ಪಂಜಾಬ್‌ಗಳಲ್ಲಿಯ ತಲಾ ಶಕ್ತಿ ಬಳಕೆ ಇದರ ಎರಡರಷ್ಟಿದೆ. ಕರ್ನಾಟಕದಲ್ಲಿ ಕೃಷಿ ಹಾಗೂ ಕೈಗಾರಿಕೆಗಳ ಉತ್ಪನ್ನ ಕಡಿಮೆ ಆಗಿರುವುದಕ್ಕೆ, ಗ್ರಾಮೀಣ ಅಭಿವೃದ್ಧಿ ಸಾಕಷ್ಟು ಆಗದಿರುವುದಕ್ಕೆ ಶಕ್ತಿಯ ಪೂರೈಕೆಯ ಅಸಮರ್ಪಕ ಸ್ಥಿತಿಯೇ ಕಾರಣ. ಕರ್ನಾಟಕದಲ್ಲಿ ಜಲವಿದ್ಯುತ್ತೇ ಶಕ್ತಿಮೂಲವಾಗಿದೆ. ಜಲವಿದ್ಯುತ್ತಿನ ಪೂರೈಕೆಯಾದರೋ ಮುಂಗಾರಿನ ತಿಕ್ಕಲು ಸ್ವಭಾವದ ಕೃಪೆಗೆ ಒಳಗಾಗಿದೆ. ಸಮರ್ಪಕವಾದ ಶಕ್ತಿ ಪೂರೈಕೆಗೆ ಬೇಕಾದ ನೈಜವಾದ ಹಾಗೂ ದೀರ್ಘಾವಧಿಯ ಯೋಜನೆಯನ್ನು ತತ್‌ಕ್ಷಣವೇ ಹಾಕಿಕೊಳ್ಳದಿದ್ದಲ್ಲಿ ಇದರ ಜತೆಯಲ್ಲಿಯೇ ಜಲ ವಿದ್ಯುತ್, ಶಾಖೋತ್ಪನ್ನ ಮತ್ತು ಅಣುವಿದ್ಯುತ್‌ಗಳನ್ನು ಬೇರೆ ಬೇರೆ ರೀತಿಯಲ್ಲಿ, ಆದರೆ ಬುದ್ಧಿವಂತಿಕೆಯಿಂದ ಹೊಂದಾಣಿಕೆ ಮಾಡಿ ಕೊಳ್ಳದಿದ್ದಲ್ಲಿ ಕರ್ನಾಟಕ ರಾಜ್ಯ ಹಿಂದೆ ಬೀಳುತ್ತದೆ. ಇಷ್ಟೇ ಅಲ್ಲದೆ ಗ್ರಾಮೀಣ ಪರಿಸರಕ್ಕೆ ತಕ್ಕಂತೆ ಜೈವಿಕ ಶಕ್ತಿ ವ್ಯವಸ್ಥೆಯ ಬೆಂಬಲವನ್ನೂ ಪಡೆಯಬೇಕು. ಇನ್ನೆರಡು ದಶಕಗಳಲ್ಲಿ ವಿದ್ಯುತ್ ಪೂರೈಕೆಯನ್ನು ಕನಿಷ್ಠ ಹತ್ತುಪಟ್ಟು ಹೆಚ್ಚು ಮಾಡುವುದೇ ಗುರಿಯಾಗಬೇಕು. ಹಾಗೆ ಮಾಡಿದರೆ ಮಾತ್ರವೇ ಸಾಮಾನ್ಯ ಜನರ ಜೀವನ ಮಟ್ಟವನ್ನು ಸುಧಾರಿಸಲು ಸಾಧ್ಯವಾಗುತ್ತದೆ.

ಕರ್ನಾಟಕದಲ್ಲಿ ಅರಣ್ಯ, ಖನಿಜ ಮತ್ತು ಜಲ ಸಂಪತ್ತು ವಿಪುಲವಾಗಿದೆ. ಇದಕ್ಕೆ ಪೂರಕವಾಗಿ ಆದರ್ಶ ವಾತಾವರಣ, ವಿಸ್ತೃತವಾದ ವೈಜ್ಞಾನಿಕ ಮತ್ತು ತಾಂತ್ರಿಕ ತಳಹದಿಯಿದೆ. ಶ್ರೀಮಂತವಾದ ಪರಂಪರೆಯೂ ಇದೆ. ಇವನ್ನೆಲ್ಲ ಹೊಂದಿರುವ ಕರ್ನಾಟಕ ಶೀಘ್ರ ಪ್ರಗತಿಗೆ ಬೇಕಾದ ಎಲ್ಲ ಸೌಲಭ್ಯಗಳನ್ನೂ ಹೊಂದಿದೆ. ಈಗ ಅವಶ್ಯವಾಗಿರುವುದೆಂದರೆ, ಸಮತೋಲ ಬೆಳವಣಿಗೆಗೆ ಬೇಕಾದ ಯೋಜನೆಯನ್ನು ರೂಪಿಸಿ ವಿಜ್ಞಾನ ಮತ್ತು ತಂತ್ರಜ್ಞಾನದ ಲಾಭ ಎಲ್ಲರಿಗೂ ತಲಪುವಂತೆ ಮಾಡುವುದೇ ಆಗಿದೆ.

**ಕನ್ನಡ ಅನುವಾದ: ವೇಣುಗೋಪಾಲ ಸೊರಬ**

ಕೋಷ್ಟಕ 1

ಕೆಲವು ನಿರ್ಣಾಯಕ ಕ್ಷೇತ್ರಗಳಲ್ಲಿ, ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಪ್ರಗತಿ

| | ವಿವರ | ಕರ್ನಾಟಕ | ಅತ್ಯುಚ್ಚ ಮಟ್ಟ ಸಾಧಿಸಿದ ರಾಜ್ಯ | ಸಮಗ್ರ ಭಾರತ |
|---|---|---|---|---|
| 1. | ಒಟ್ಟು ಕೃಷಿ ಭೂಮಿಯಲ್ಲಿ, ನೀರಾವರಿಗೆ ಒಳಪಟ್ಟಿರುವುದು | 15 ಶೇ. | 50 ಶೇ. (ಹರ್‍ಯಾಣ) | 25 ಶೇ. |
| 2. | ತಲಾ ವಾರ್ಷಿಕ ವರಮಾನ (ರೂಪಾಯಿಗಳಲ್ಲಿ) (1975 – 76) | 1050 ಶೇ. | 1700 (ಪಂಜಾಬು) | 1080 |
| 3. | ಶಾಲೆಗೆ ಹೋಗುವ ಮಕ್ಕಳ ಶೇಕಡಾವಾರು | 87 | 100 (ಕೇರಳ) | 83 |
| 4. | ಆಸ್ಪತ್ರೆಯಲ್ಲಿನ ಒಳರೋಗಿಗಳು ( ಹಾಸಿಗೆಯೊಂದಕ್ಕೆ ) | 1050 | 450 ( ಕೇರಳ ) | 1250 |
| 5. | ಒಟ್ಟು ಭಾರತೀಯ ಉತ್ಪನ್ನದಲ್ಲಿ ಅಕ್ಕಿ ಬೆಳೆ ಶೇಕಡಾವಾರು | 4.27 | 14 (ಪ. ಬಂಗಾಳ) | — |
| 6. | ಒಟ್ಟು ಭಾರತೀಯ ಉತ್ಪನ್ನದಲ್ಲಿ ಗೋಧಿ ಬೆಳೆ ಶೇಕಡಾವಾರು | 0.87 | 30 (ಉ. ಪ್ರದೇಶ) | — |
| 7. | ಒಟ್ಟು ಭಾರತೀಯ ಉತ್ಪನ್ನದಲ್ಲಿ ಎಲ್ಲ ಆಹಾರಧಾನ್ಯ ಶೇಕಡಾವಾರು | 5.3 | 17 (ಉ. ಪ್ರದೇಶ) | — |
| 8. | ಒಂದು ಹೆಕ್ಟೇರಿಗೆ ಫಸಲು : ಅಕ್ಕಿ | 1850 ಕೆ. ಜಿ. | 2400 ಕೆ. ಜಿ. ( ಹರ್‍ಯಾಣ ) | 1250 ಕೆ. ಜಿ. |
| | ಗೋಧಿ | 700 ಕೆ. ಜಿ. | 2100 ಕೆ. ಜಿ. ( ಹರ್‍ಯಾಣ ) | 1450 ಕೆ. ಜಿ. |
| 9. | ವಿದ್ಯುದೀಕರಣಗೊಂಡ ಹಳ್ಳಿಗಳು | 60 | 100 ( ಹರ್‍ಯಾಣ ) | 40 |
| 10. | ತಲಾ ವಿದ್ಯುತ್ ಬಳಕೆ ( ಕಿಲೋ ವಾಟ್ ಗಂಟೆಗಳಲ್ಲಿ ) | 170 | 370 ( ಪಂಜಾಬು ) | 140 |
| 11. | ರಾಷ್ಟ್ರೀಯ ಉತ್ಪನ್ನದಲ್ಲಿ ಒಟ್ಟು ಕೈಗಾರಿಕಾ ಉತ್ಪಾದನೆ ಶೇಕಡಾವಾರು | 4 | 24 ( ಮಹಾರಾಷ್ಟ್ರ ) | — |

ವಿ. ಸೂ. : ಕರ್ನಾಟಕದ ಜನಸಂಖ್ಯೆ ಭಾರತದ ಜನಸಂಖ್ಯೆಯ ಶೇ. 5.2ರಷ್ಟು.

# ಭಾರತದಲ್ಲಿ ಕರ್ನಾಟಕದ ಸ್ಥಾನ

ಜಯಕುಮಾರ್ ಅನಗೋಳ್

ಭಾರತದ ೧೫ ಪ್ರಮುಖ ರಾಜ್ಯಗಳಲ್ಲಿ ಕರ್ನಾಟಕದ ಸ್ಥಾನ ಯಾವುದು? ನಮ್ಮ ರಾಜ್ಯಕ್ಕೆ ವರಪ್ರದವಾಗಿದ್ದ ನೈಸ ಗಿಕ ಕೊಡುಗೆಗಳಾವುವು? ಅವುಗಳಲ್ಲಿಯ ಕೊರತೆಗಳೇನು? ಉಳಿದ ರಾಜ್ಯಗಳೊಡನೆ ಹೋಲಿಸಿದರೆ ನಮ್ಮ ರಾಜ್ಯದ ಆರ್ಥಿಕ ಔದ್ಯೋಗಿಕ, ಶೈಕ್ಷಣಿಕ ಮಟ್ಟ ಹೇಗಿದೆ? ಅದರಲ್ಲೂ ನಮ್ಮ ನೆರೆಯ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು ಹಾಗೂ ಕೇರಳ ನಮಗಿಂತ ಮುಂದಾಗಿವೆಯೇ? ಹಾಗಾಗಿದ್ದಲ್ಲಿ ಈ ಯಶಸ್ಸಿನ ಗುಟ್ಟೇನು? ನಾವು ಇತರರಿಗಿಂತ ಕೆಲ ರಂಗಗಳಲ್ಲಿ ಮುಂದಿದ್ದೇವೆಯೇ? ಹಾಗಿದ್ದಲ್ಲಿ ಈ ಯಶಸ್ಸಿನ ಗುಟ್ಟೇನು? ನಾವು ಹಿಂದೆ ಬಿದ್ದ ಕ್ಷೇತ್ರಗಳಾವುವು? ಇದಕ್ಕೆ ಕಾರಣ ನೈಸರ್ಗಿಕ ಸಂಪನ್ಮೂಲಗಳ ಕೊರತೆಯೋ ಇಲ್ಲವೆ ನಮ್ಮ ಯೋಜನೆಯಲ್ಲಿಯ ಲೋಪದೋಷಗಳೋ?

ಭಾರತದಲ್ಲಿಯ ಕರ್ನಾಟಕದ ಸ್ಥಾನವನ್ನು ಈ ರೀತಿ ತುಲನಾತ್ಮಕವಾಗಿ ಪರಿಶೀಲಿಸುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ. ಸಾಧ್ಯವಿದ್ದಲ್ಲೆಲ್ಲ ಅಂಕಿ ಸಂಖ್ಯೆಗಳ ಆಧಾರ ಪಡೆಯಲಾಗಿದೆ. ಅಂಕಿ ಸಂಖ್ಯೆಗಳ ಅಭಾವವಿದ್ದಲ್ಲೆಲ್ಲ ಅನಿವಾರ್ಯವಾಗಿ ವೈಯಕ್ತಿಕ ನಿರೀಕ್ಷಣೆಯನ್ನಾಧರಿಸಲಾಗಿದೆ.

**ಕರ್ನಾಟಕದ ವಿಸ್ತಾರ**

ಭಾರತದ ವಿಸ್ತಾರ ೩೨.೮೭ ಲಕ್ಷ ಚ. ಕಿ. ಮಿ. ಇದ್ದರೆ, ಕರ್ನಾಟಕದ ವಿಸ್ತಾರ ೧.೯೨ ಲಕ್ಷ ಚ.ಕಿ.ಮಿ. ಅಥವಾ ಭಾರತದ ವಿಸ್ತಾರದ ಶೇ. ೫.೮೪. ಭಾರತವು ಕರ್ನಾಟಕದ ೧೭ ಪಟ್ಟು ವಿಸ್ತೀರ್ಣವಾಗಿದೆ. ಗಾತ್ರದಲ್ಲಿ ಚಿಕ್ಕದಾದರೂ, ಕರ್ನಾಟಕದಲ್ಲಿ ಕಡಲ ತೀರವಿದೆ. ಚಿರಾಪುಂಜಿಯಲ್ಲಿ ೫೦೦ ಅಂಗುಲ ಮಳೆಯಾದರೆ, ನಮ್ಮ ಆಗುಂಬೆಯಲ್ಲಿ ೨೫೦ – ೩೦೦ ಅಂಗುಲ ಮಳೆ ಹೊಯ್ಯುತ್ತದೆ. ಮಲೆನಾಡಿನಲ್ಲಿ ಪರ್ವತ ಶ್ರೇಣಿಗಳು ಸಮುದ್ರ ಪಾತಳಿಯಿಂದ ೫,೦೦೦ ಅಡಿ ಎತ್ತರವಾಗಿವೆ. ಹಿಮಾಚ್ಛಾದಿತ ಪರ್ವತ ಶ್ರೇಣಿಗಳು ಹಾಗೂ ರಾಜಸ್ಥಾನದಂಥ ಮರಳು ಭೂಮಿಯನ್ನು ಬಿಟ್ಟರೆ ಭಾರತದ ವೈವಿಧ್ಯತೆಯನ್ನು ಕರ್ನಾಟಕದಲ್ಲಿ ಕಾಣಬಹುದು.

**ಜನಸಂಖ್ಯೆ**

ಭಾರತದ ಜನಸಂಖ್ಯೆ ೧೯೮೧ರ ಜನಗಣತಿಯಂತೆ ೬೮.೪೦ ಕೋಟಿಯಾದರೆ ಕರ್ನಾಟಕದ ಜನಸಂಖ್ಯೆ ೩.೭೧ ಕೋಟಿ. ನಮ್ಮ ಜನಸಂಖ್ಯೆ ಭಾರತದ ಜನಸಂಖ್ಯೆಯ ಶೇ. ೫.೪೦. ೧೮ ಭಾರತೀಯರಲ್ಲಿ ಒಬ್ಬ ಕರ್ನಾಟಕದವನು. ಭಾರತದ ಜನಸಂಖ್ಯೆ ೧೯೭೧–೮೧ರ ದಶಕದಲ್ಲಿ ಶೇ. ೨೪.೭೫ರಷ್ಟು ಹೆಚ್ಚಾದರೆ ಕರ್ನಾಟಕದ ಜನಸಂಖ್ಯೆ ಅದೇ ಕಾಲದಲ್ಲಿ ಶೇ. ೨೬.೭೫ರಷ್ಟು ಹೆಚ್ಚಾಯಿತು. ನಮ್ಮ ನೆರೆಯ ರಾಜ್ಯಗಳಾದ ಕೇರಳದಲ್ಲಿ ಶೇ. ೧೯.೧೬, ತಮಿಳುನಾಡಿನಲ್ಲಿ ಶೇ. ೧೭.೩೭, ಆಂಧ್ರಪ್ರದೇಶದಲ್ಲಿ ಶೇ. ೨೩.೩೯ ಹಾಗೂ ಮಹಾರಾಷ್ಟ್ರದಲ್ಲಿ ಶೇ. ೨೪.೬೧ ಜನಸಂಖ್ಯೆಯ ಬೆಳವಣಿಗೆ ಕಂಡು ಬಂತು. ಎಂದರೆ ನಮ್ಮ ರಾಜ್ಯದ ಜನಸಂಖ್ಯಾ ವೃದ್ಧಿ ನಮ್ಮ ನೆರೆಯ ಎಲ್ಲ ರಾಜ್ಯಗಳಿಗಿಂತ ಹಾಗೂ ಭಾರತದ ಸರಾಸರಿ ಜನಸಂಖ್ಯಾವೃದ್ಧಿಗಿಂತ ಹೆಚ್ಚಾಯಿತು. ೧೯೬೧ – ೭೧ ರ ದಶಕದಲ್ಲಿ ೨೬.೭೫ ರಷ್ಟು ಬೆಳೆಯಿತು. ಇದಕ್ಕೆ ನಮ್ಮ ರಾಜ್ಯದಲ್ಲಿ ಉಳಿದ ರಾಜ್ಯಗಳಿಗಿಂತ ಜನಸಂಖ್ಯಾ ನಿಯಂತ್ರಣ ಯೋಜನೆ ಹಿಂದೆ ಬಿದ್ದುದು ಒಂದು ಕಾರಣವಾದರೆ, ಇನ್ನೊಂದು ಮಹತ್ವದ ಕಾರಣ ಬೇರೆ ರಾಜ್ಯಗಳಿಂದ ಈ ರಾಜ್ಯಕ್ಕೆ ಹೆಚ್ಚು ಜನ ವಲಸೆ ಬಂದದ್ದು. ಈ ಎರಡು ಕಾರಣಗಳಲ್ಲಿ ಯಾವುದರ ಪರಿಣಾಮ ಎಷ್ಟರಮಟ್ಟಿಗೆ ಆಗಿದೆ ಎಂಬುದನ್ನು ಕಂಡುಹಿಡಿಯಲು ಹೆಚ್ಚಿನ ಸಂಶೋಧನೆ ಅಗತ್ಯ.

ಭಾರತದಲ್ಲಿ ಶೇ. ೨೩.೭೩ರಷ್ಟು ಜನ ನಗರವಾಸಿಗಳಾಗಿದ್ದಾರೆ, ಕರ್ನಾಟಕದಲ್ಲಿ ಈ ಪ್ರಮಾಣ ಶೇ. ೨೮.೯೧. ನಮ್ಮ ನೆರೆಯ ರಾಜ್ಯಗಳಾದ ಮಹಾರಾಷ್ಟ್ರದಲ್ಲಿ ಶೇ. ೩೫.೦೩, ತಮಿಳುನಾಡಿನಲ್ಲಿ ಶೇ. ೩೨.೯೮ ಜನ ನಗರವಾಸಿಗಳು. ಆಂಧ್ರಪ್ರದೇಶ, ಕೇರಳಗಳಲ್ಲಿ ನಗರವಾಸಿಗಳ ಪ್ರಮಾಣ ಭಾರತದ ಸರಾಸರಿಗಿಂತಲೂ ಕಡಿಮೆಯಾಗಿದೆ. ನಗರವಾಸಿಗಳ ಜನಸಂಖ್ಯೆಯ ದೃಷ್ಟಿಯಿಂದ, ದೇಶದಲ್ಲಿ ಮಹಾರಾಷ್ಟ್ರ, ತಮಿಳುನಾಡು ಹಾಗೂ ಗುಜರಾತಿನ ನಂತರ ಕರ್ನಾಟಕ ನಾಲ್ಕನೆಯ ಸ್ಥಾನದಲ್ಲಿದೆ.

ಭಾರತದಲ್ಲಿ ೧,೦೦೦ ಗಂಡಸರಿಗೆ ೯೩೫ ಹೆಂಗಸ ೨೨೧. ಕರ್ನಾಟಕದಲ್ಲಿ ಅದು ೧೯೩. ನಮ್ಮ ನೆರೆಯ ರಾಜ್ಯಗಳಾದ ಕೇರಳದಲ್ಲಿ ೬೫೪, ತಮಿಳುನಾಡಿನಲ್ಲಿ ೩೭೧, ಆಂಧ್ರಪ್ರದೇಶದಲ್ಲಿ ೧೯೪ ಹಾಗೂ ಮಹಾರಾಷ್ಟ್ರದಲ್ಲಿ ೨೦೪. ೧೯೫೧ ರಿಂದ ೧೯೮೧ ರ ವರೆಗೆ ಭಾರತದ ಜನಸಂಖ್ಯೆ ಶೇ. ೮೯ ರಷ್ಟು ಬೆಳೆದಿದ್ದು ಅದೇ ಕಾಲದಲ್ಲಿ ಕರ್ನಾಟಕದ ಜನಸಂಖ್ಯೆ ಶೇ. ೯೧ರಷ್ಟು ಬೆಳೆಯಿತು.

ಭಾರತದಲ್ಲಿ ೧,೦೦೦ ಗಂಡಸರಿಗೆ ೯೩೫ ಹೆಂಗಸರಿದ್ದರೆ, ಕರ್ನಾಟಕದಲ್ಲಿ ೯೬೩. ೧೯೭೧ ರಲ್ಲೇ ಈ ಪ್ರಮಾಣ

ಭಾರತದಲ್ಲಿ ೯೩೦ ಹಾಗೂ ಕರ್ನಾಟಕದಲ್ಲಿ ೯೫೭. ದೇಶದಲ್ಲಿ ಹಾಗೂ ರಾಜ್ಯದಲ್ಲಿ ಹೆಂಗಸರ ಪ್ರಮಾಣ ಸ್ವಲ್ಪ ಮಟ್ಟಿಗಾದರೂ ಹೆಚ್ಚಾಗುತ್ತಿರುವುದು ಸಮಾಧಾನದ ಸಂಗತಿ.

**ಕನ್ನಡ ಮಾತೃ ಭಾಷೆ**

ಭಾರತದ ಜನಸಂಖ್ಯೆಯಲ್ಲಿ ಕರ್ನಾಟಕದ ಜನಸಂಖ್ಯೆ ಶೇ. ೫.೯. ಆದರೆ ಕನ್ನಡ ಮಾತೃ ಭಾಷೆಯಾಗಿರುವವರ ಜನಸಂಖ್ಯೆ ಶೇ. ೪ ಮಾತ್ರ. ತಮಿಳುನಾಡಿನಲ್ಲಿ ತಮಿಳು ಮಾತೃ ಭಾಷೆಯಿದ್ದವರು ಶೇ. ೮೧.೫, ಕೇರಳದಲ್ಲಿ ಮಲಯಾಳಂ ಭಾಷೆಯವರು ಶೇ. ೮೫ ಮತ್ತು ಮಹಾರಾಷ್ಟ್ರದಲ್ಲಿ ಮರಾಠಿ ಭಾಷೆಯವರು ಶೇ. ೭೭. ಆದರೆ ಕರ್ನಾಟಕದಲ್ಲಿ ಕನ್ನಡ ಭಾಷೆಯವರು ಶೇ. ೬೬. ಕರ್ನಾಟಕದಲ್ಲಿ ಬೇರೆ ಮಾತೃ ಭಾಷೆಯಾಗಿರುವವರ ಶೇಕಡಾವಾರು ಜನಸಂಖ್ಯೆ ಉರ್ದು ೯, ತೆಲುಗು ೮.೨, ತಮಿಳು ೩.೪, ಮರಾಠಿ ೪.೧, ಮಲಯಾಳಂ ೧.೫ ಮತ್ತು ಹಿಂದಿ ೧.೮. ಇದಲ್ಲದೆ ತುಳು ಹಾಗೂ ಕೊಂಕಣಿ ಮಾತಾಡುವವರೂ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ಕನ್ನಡ ಮಾತೃ ಭಾಷೆಯುಳ್ಳವರ ಸಂಖ್ಯೆ ೧೯೧೧ ರಿಂದ ೧೯೩೧ ರವರೆಗೆ ಶೇ. ೬೩.೦೩ ರಿಂದ ಶೇ. ೬೧.೭೭ ಕ್ಕೆ ಕಡಿಮೆಯಾದರೆ, ೧೯೩೧ ರಿಂದ ೧೯೭೧ ರ ವರೆಗೆ ಶೇ. ೬೫.೯೪ಕ್ಕೆ ಹೆಚ್ಚಿತು. ಅದೇ ರೀತಿ ಕನ್ನಡಿಗರ ಸಂಖ್ಯೆ ಬೆಂಗಳೂರಿನಲ್ಲಿ ೧೯೫೧ ರಲ್ಲಿ ಶೇ. ೨೩.೭ ಇದ್ದದ್ದು ೧೯೭೧ ರಲ್ಲಿ ಶೇ. ೩೨.೭೦ ಆಯಿತು. ಬೆಳಗಾವಿಯಲ್ಲಿ ಹಾಗೂ ರಾಜ್ಯದ ಕೆಲ ಪಟ್ಟಣಗಳಲ್ಲಿ ಕನ್ನಡಿಗರ ಸಂಖ್ಯೆ ಕಡಿಮೆಯಾಗುತ್ತಿದೆಯೆಂಬ ಶಂಕೆಗೆ ಯಾವ ಆಧಾರವೂ ಇಲ್ಲವೆಂಬುದು ಖಚಿತವಾಗುತ್ತದೆ.

**ಅರಣ್ಯ ಸಂಪತ್ತು**

ಭಾರತದ ಭೌಗೋಳಿಕ ಪ್ರದೇಶದಲ್ಲಿ ತೇ. ೨೩ ರಷ್ಟು ಅರಣ್ಯವಿದ್ದರೆ, ಕರ್ನಾಟಕದಲ್ಲಿ ಅದು ಶೇಕಡಾ ೧೯. ದೇಶದಲ್ಲಿ ಪ್ರತಿ ವ್ಯಕ್ತಿಗೆ ೦.೧೩ ಹೆಕ್ಟೇರ್ ಅರಣ್ಯ ಪ್ರದೇಶವಾದರೆ ಕರ್ನಾಟಕದಲ್ಲಿ ಅದು ೦.೧೨ ಹೆಕ್ಟೇರ್. ನಮ್ಮ ನೆರೆಯ ರಾಜ್ಯಗಳಾದ ತಮಿಳುನಾಡಿನಲ್ಲಿ ೦.೦೫, ಆಂಧ್ರಪ್ರದೇಶದಲ್ಲಿ ೦.೧೪, ಕೇರಳದಲ್ಲಿ ೦.೦೫, ಮಹಾರಾಷ್ಟ್ರದಲ್ಲಿ ೦.೧೨. ಕರ್ನಾಟಕದಲ್ಲಿರುವ ಅರಣ್ಯ ಸಂಪತ್ತು ಬಹಳ ಶ್ರೇಷ್ಠ ಮಟ್ಟದ್ದಾಗಿದೆ. ಇಲ್ಲಿಯ ತೇಗ, ರೋಜ್‌ವುಡ್ ಹಾಗೂ ಶ್ರೀಗಂಧ ದೇಶದಲ್ಲೆಲ್ಲ ಪ್ರಖ್ಯಾತವಾಗಿವೆ. ನಮ್ಮ ರಾಜ್ಯದಲ್ಲಿಯ ಅರಣ್ಯ ಪ್ರದೇಶ ದೇಶದ ಅರಣ್ಯ ಪ್ರದೇಶದ ಕೇವಲ ೧/೨೫ ರಷ್ಟಿದ್ದರೂ ನಮ್ಮ ಅರಣ್ಯ ಸಂಪತ್ತಿನ ಉತ್ಪನ್ನ ದೇಶದ ಅರಣ್ಯ ಸಂಪತ್ತಿನ ಉತ್ಪನ್ನದ ೧/೮ ರಷ್ಟಿದೆ. ದೇಶದ ರಾಜ್ಯಗಳ ಹಿರಿಯ ಅರಣ್ಯ ಉತ್ಪತ್ತಿಯಲ್ಲಿ (ಮೇಜರ್ ಫೋರೆಸ್ಟ್ ಪ್ರೊಡ್ಯೂಸ್) ಕರ್ನಾಟಕ ರಾಜ್ಯದ ಅರಣ್ಯ ಉತ್ಪತ್ತಿಗಳ ಮೌಲ್ಯ ೧೯೭೪–೭೫ ರಲ್ಲಿ ರೂ. ೩೦ ಕೋಟಿ ಇದ್ದು ಅದು ಉಳಿದ ಎಲ್ಲ ರಾಜ್ಯಗಳ ಹಿರಿಯ ಅರಣ್ಯ ಉತ್ಪತ್ತಿಗಿಂತ ಮುಂದಿತ್ತು. ಕಿರಿಯ (ಮೈನರ್) ಅರಣ್ಯ ಉತ್ಪತ್ತಿಯ ಮೌಲ್ಯವನ್ನು ಸೇರಿಸಿದರೆ, ಅದು ಮಧ್ಯಪ್ರದೇಶ ಹಾಗೂ ಉತ್ತರ ಪ್ರದೇಶಗಳ ನಂತರ ಮೂರನೆಯ ಸ್ಥಾನದಲ್ಲಿತ್ತು. ಜನಸಂಖ್ಯೆಯ ಹೆಚ್ಚಳದಿಂದ ಇಮಾರತಿ ಕಟ್ಟಿಗೆ ಹಾಗೂ ಉರುವಲ ಕಟ್ಟಿಗೆಗೆ ಬಂದ ಬೇಡಿಕೆ, ಕಾಗದದ ಕಾರ್ಖಾನೆಗಳು, ರೇಯಾನ್ ಕಾರ್ಖಾನೆ, ಪ್ಲಾಯ್‌ವುಡ್ ಕಾರ್ಖಾನೆಗಳಿಗೆ ಬೇಕಾದ ಕಟ್ಟಿಗೆಯ ಅಗತ್ಯ ಇವುಗಳಿಂದ ನಮ್ಮ ಅರಣ್ಯ ಸಂಪತ್ತಿನ ಮೇಲೆ ದೊಡ್ಡ ಒತ್ತಡ ಬಿದ್ದರೆ, ನಮ್ಮ ನೀರಾವರಿ ಹಾಗೂ ವಿದ್ಯುತ್ ಯೋಜನೆಗಳು ಕೂಡ ಹೆಚ್ಚಾಗಿ ಸಿರಿವಂತ ದಟ್ಟ ಅರಣ್ಯವುಳ್ಳ ಪಶ್ಚಿಮ ಘಟ್ಟಗಳ ಪ್ರದೇಶದಲ್ಲಿ ನಿರ್ಮಾಣವಾಗುತ್ತಿರುವುದು ಇನ್ನೊಂದು ದೊಡ್ಡ ಆಘಾತವಾಗಿದೆ. ಇದರಿಂದ ಅರಣ್ಯ ಸಂಪತ್ತು ಕಡಿಮೆಯಾಗುವುದಲ್ಲದೆ. ಪರಿಸರದ ಮೇಲೆ ಅನಿಷ್ಟ ಪರಿಣಾಮವಾಗದಿರದು. ಈ ದೃಷ್ಟಿಯಿಂದ ಕರ್ನಾಟಕ ಸರಕಾರವು ಬೃಹತ್ ಯೋಜನೆಗಳಿಂದ ಅರಣ್ಯ ಪ್ರದೇಶ ಕ್ಷೀಣವಾದಲ್ಲಿ, ಆ ಯೋಜನೆಯ ಅಂಗವಾಗಿ ಪರ್ಯಾಯವಾದ (ಕಂಪನ್‌ಸೇಟರಿ) ಅರಣ್ಯವನ್ನು ಬೆಳೆಸಲು ಹಣ ಒದಗಿಸಿಕೊಡಲು ಪ್ರಾರಂಭಿಸಿದ್ದು, ದೇಶಕ್ಕೆ ಒಂದು ಮಾದರಿಯಾಗಿದೆ. ಅಲ್ಲದೆ ಹಿಂದೆ ಅರಣ್ಯ ವಸ್ತುಗಳನ್ನು ಕೈಗಾರಿಕೆಗಳಿಗೆ ಬಹಳ ಕಡಿಮೆ ಬೆಲೆಗೆ ಕೊಡುವ ಕಂಟ್ರ್ಯಾಕ್ಟುಗಳನ್ನು ಹೊಸ ಕಾನೂನು ಮಾಡಿ ರದ್ದುಪಡಿಸಿರುವುದು ಇನ್ನೊಂದು ದಿಟ್ಟ ಹೆಜ್ಜೆಯಾಗಿದೆ. ಇದರ ಪರಿಣಾಮವಾಗಿ ಬೆಲೆ ಹೆಚ್ಚಾಗುವುದರಿಂದ, ಕೈಗಾರಿಕೆಗಳು ತಮಗೆ ಬೇಕಾಗುವ ಅರಣ್ಯ ವಸ್ತುಗಳನ್ನು ತಾವೇ ಬೆಳೆಸಲು ಮುಂದೆ ಬರುತ್ತಿವೆ. ಸರಕಾರ ಅವರಿಗೆ ಭೂಮಿಯನ್ನು ಈ ಉದ್ದೇಶಕ್ಕಾಗಿ ಒದಗಿಸಿಕೊಡುತ್ತಿದೆ. ಜನರಿಗೆ ಉರುವಲು ಹಾಗೂ ರಾಸುಗಳಿಗೆ ಮೇವು ಮತ್ತು ವ್ಯವಸಾಯಕ್ಕೆ ಬೇಕಾಗುವ ಕಟ್ಟಿಗೆ ಒದಗಿಸಲು ಸಾಮಾಜಿಕ ಅರಣ್ಯ ಬೆಳೆಸಲು ಕ್ರಮ ಕೈಕೊಳ್ಳಲಾಗಿರುವುದು ಸಂತೋಷದ ಸಂಗತಿ. ಇದರ ಜೊತೆಗೆ ಉರುವಲಿನ ಮೇಲಿನ ಒತ್ತಡವನ್ನು ಕಡಿಮೆ ಮಾಡಲು ಸೌರಶಕ್ತಿ ಬಳಸಲು ಉಪಕರಣಗಳ ಹಾಗೂ ಉರುವಲು ಬಳಕೆಯನ್ನು ಮಿತಗೊಳಿಸುವ ಒಲೆಗಳ ಪ್ರಚಾರ ಮಾಡಲು ಯೋಜನೆಗಳನ್ನು ಆರಂಭಿಸಲಾಗಿದೆ.

ನಮ್ಮ ರಾಜ್ಯದಲ್ಲಿ ಈ ೩೦ ವರ್ಷಗಳಲ್ಲಿ ಅರಣ್ಯ ಪ್ರದೇಶವನ್ನು ವಿಸ್ತರಿಸಿದ್ದು ಹಾಗೂ ವ್ಯವಸಾಯಕ್ಕೆ ಯೋಗ್ಯವಲ್ಲದ ಕೆಲವು ರೆವಿನ್ಯೂ ಜಮೀನುಗಳನ್ನು ಅರಣ್ಯ ಇಲಾಖೆಗೆ ವರ್ಗಾಯಿಸಿರುವುದು ಯೋಗ್ಯ ದಿಕ್ಕಿನಲ್ಲಿಯ ಹೆಜ್ಜೆಯಾಗಿದೆ.

ಆರನೆಯ ಪಂಚವಾರ್ಷಿಕ ಯೋಜನೆಯಲ್ಲಿ ನಾವು ಅರಣ್ಯಾಭಿವೃದ್ಧಿಗೆ ರೂ. ೩೦.೭೫ ಕೋಟಿ ಒದಗಿಸಿದ್ದರೆ, ಮಹಾರಾಷ್ಟ್ರ ರೂ. ೪೮.೭೫ ಕೋಟಿ, ತಮಿಳುನಾಡು ರೂ. ೫೯.೦೦ ಕೋಟಿ ಒದಗಿಸಿವೆ. ಅರಣ್ಯ ಪ್ರದೇಶ ಹಾಗೂ ಅರಣ್ಯ ಉತ್ಪನ್ನ ಅತಿ ಕಡಿಮೆ ಇರುವ ಗುಜರಾತ್ ರಾಜ್ಯ ಮುಂದಾಲೋಚನೆಯಿಂದ ಈ ಯೋಜನೆಗೆ ಹೆಚ್ಚು ಹಣ ಒದಗಿಸಿದೆ. ನೀರಾವರಿ ಹಾಗೂ ವಿದ್ಯುಚ್ಛಕ್ತಿಯಷ್ಟೆ ಮಹತ್ವ ಅರಣಾಭಿವೃದ್ಧಿಗೂ ಇದೆ ಎಂದು ಮನಗಂಡು ಈ ಕ್ಷೇತ್ರವನ್ನು ಕೂಡ ಯೋಜನೆಯ ಕೆಚ್ಚು ವಿಭಾಗದಲ್ಲಿ (ಕೋರ್ ಸೆಕ್ಟರ್) ಸೇರಿಸುವುದು ದೇಶಕ್ಕೂ ಕ್ಷೇಮಕರ. ಭೂಮಿಯ ಫಲವತ್ತಾದ ಮೇಲ್ಮಣ್ಣಿನ ಸಂರಕ್ಷಣೆ ನದಿಗಳ ನೆರೆಹಾವಳಿ ತಡೆಯುವುದು. ಕೆರೆ, ಸರೋವರಗಳ ಆಯಸ್ಸು ಕಡಿಮೆಯಾಗದಂತೆ ರಕ್ಷಿಸುವುದು, ವಾತಾವರಣದ ಮಾಲಿನ್ಯವನ್ನು ತೊಡೆದುಹಾಕುವುದು, ಔಷಧಿಗಾಗಿ ಗಿಡಮೂಲಿಕೆ ಸರಬರಾಜು, ಇಮಾರತಿ ಕಟ್ಟಿಗೆ, ಉರುವಲಿನ ಹಾಗೂ ಮರಮಟ್ಟುಗಳ ಪೂರೈಕೆ, ಕಾಗದ, ನ್ಯೂಸ್‌ಪ್ರಿಂಟ್. ಪ್ಲೈವುಡ್, ರೇಯಾನ್, ಫರ್ನಿಚರ್ ಇತ್ಯಾದಿ ಉದ್ಯೋಗಗಳಿಗೆ ಕಚ್ಚಾಮಾಲು ಒದಗಿಸುವುದು ಹಾಗೂ ಕಲ್ಲಿದ್ದಲೇ ಇಲ್ಲದಂಥ ರಾಜ್ಯಗಳಲ್ಲಿ ವಿದ್ಯುತ್ ಉತ್ಪಾದನೆ ಈ ಎಲ್ಲ ಫಲಗಳನ್ನು ಅರಣ್ಯಗಳು ಹಾಗೂ ಮರಗಳು ಮಾತ್ರ ಕೊಡಬಲ್ಲವಾದ್ದರಿಂದ ನಮ್ಮ ಯೋಜನೆಯಲ್ಲಿ ಶೇ. ೫ರಷ್ಟು ಭಾಗವನ್ನಾದರೂ ಈ ಕ್ಷೇತ್ರಕ್ಕೆ ಒದಗಿಸುವುದು ಅವಶ್ಯ. ಇದನ್ನು ವಿದ್ಯುಚ್ಛಕ್ತಿಯ ಶೇ. ೨೩ ಮತ್ತು ನೀರಾವರಿಯ ಶೇ. ೨೨ಕ್ಕೆ ಹೋಲಿಸಿದರೆ ಹೆಚ್ಚೇನೂ ಅಲ್ಲ. ಈ ಹಣವನ್ನು ಕೇವಲ ಅರಣ್ಯ ಇಲಾಖೆಗೆ ಮೀಸಲಾಗಿಡಬೇಕಿಲ್ಲ. ಅರಣ್ಯ ಪ್ರದೇಶದ ಹೊರಗಡೆ ಇರುವ ಪಾಳು ಹಾಗೂ ಸಾರ್ವಜನಿಕ ಭೂಮಿಗಳಲ್ಲಿ ಹಾಗೂ ರೈತರ ಹೊಲಗಳಲ್ಲಿ ಮರಗಳನ್ನು ಬೆಳೆಸುವ ಸಾಮಾಜಿಕ ಅರಣ್ಯಗಳ

ಯೋಜನೆಗಾಗಿ ಬಹುಪಾಲು ಹಣವನ್ನು ಬಳಸಬಹುದು. ಇದಲ್ಲದೆ ಬ್ಯಾಂಕುಗಳಿಂದ ಧನಸಹಾಯವನ್ನೂ ಪಡೆಯಬೇಕು. ಪರಿಶಿಷ್ಟ ಜನಾಂಗದವರಿಗೆ, ಭೂಹೀನರಿಗೆ ಸರಕಾರಿ ಜಮೀನನ್ನು ಮರ ಬೆಳೆಸುವ ಕಾರ್ಯಕ್ರಮಕ್ಕಾಗಿ ಗುಜರಾತು ಸರಕಾರ ಮಾಡಿರುವ ಕಾರ್ಯಕ್ರಮದ ಮಾದರಿಯಲ್ಲಿ ಹಂಚಬೇಕು. ಮರಗಳ ಫಸಲು ಬರಲು ಅನೇಕ ವರ್ಷ ಕಾಯಬೇಕಾಗುವುದರಿಂದ ಈ ಅವಧಿಯಲ್ಲಿ ಜೀವನೋಪಾಯಕ್ಕಾಗಿ ಅವರು ತಮ್ಮ ಜಮೀನಿನಲ್ಲಿ ಮರ ನೆಡಲು ಹಾಗೂ ಸಂರಕ್ಷಿಸಲು ಮಾಡುವ ಕೆಲಸಕ್ಕಾಗಿ ಕೂಲಿ ಕೊಡುವ ವ್ಯವಸ್ಥೆ ಮಾಡಬೇಕು.

**ವ್ಯವಸಾಯ**

ಭಾರತದಲ್ಲಿ ಒಟ್ಟು ೩೦.೫೦ ಕೋಟಿ ಹೆಕ್ಟೇರು ವ್ಯವಸಾಯದ ಜಮೀನಿದ್ದರೆ ಕರ್ನಾಟಕದಲ್ಲಿ ಸುಮಾರು ೧.೯೦ ಕೋಟಿ. ಪ್ರತಿ ರೈತ ಕುಟುಂಬಕ್ಕೆ ದೇಶದಲ್ಲಿ ಸರಾಸರಿ ೧.೯ ಹೆಕ್ಟೇರು ಜಮೀನಾದರೆ ಕರ್ನಾಟಕದಲ್ಲಿ ೨.೫ ಹೆಕ್ಟೇರು. ಪ್ರತಿ ರೈತ ಕುಟುಂಬಕ್ಕೆ ನಮ್ಮ ರಾಜ್ಯದಲ್ಲಿ ಜಮೀನಿನ ಪ್ರಮಾಣ ಹೆಚ್ಚಾದರೂ ನಮ್ಮ ರಾಜ್ಯದಲ್ಲಿ ಭಾರತದ ಯಾವುದೇ ರಾಜ್ಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಬರಗಾಲದ ಪ್ರವೃತ್ತಿ (ಡ್ರೂವುಟ್ ಪ್ರೋನ್) ಇರುವ ಜಮೀನಿದೆ. (ರಾಜಸ್ಥಾನದಂಥ ರಾಜ್ಯದಲ್ಲಿರುವ ಮರಳುಗಾಡಿನ ಪ್ರದೇಶ ಇದರಲ್ಲಿ ಗಣನೆಗೆ ತೆಗೆದುಕೊಂಡಿಲ್ಲ). ಅಲ್ಲದೆ ನೀರಾವರಿ ಪ್ರದೇಶದ ಪ್ರಮಾಣ ಭಾರತದಲ್ಲಿ ಶೇ. ೩೮ರಷ್ಟಿದ್ದರೆ ಕರ್ನಾಟಕದಲ್ಲಿ ಶೇ. ೨೦ ಮಾತ್ರ. ನಮ್ಮ ರಾಜ್ಯ ೧೯೫೬ರಲ್ಲಿ ಆಹಾರ ಧಾನ್ಯದಲ್ಲಿ ಕೊರತೆಯ ರಾಜ್ಯವಿದ್ದರೂ ಈಗ ಸಾಮಾನ್ಯ ವರ್ಷಗಳಲ್ಲಿ ಸಮೃದ್ಧಿಯ ಪ್ರದೇಶವಾದದ್ದು ಈ ಕ್ಷೇತ್ರದಲ್ಲಿ ತೋರಿದ ಪ್ರಗತಿಯ ದ್ಯೋತಕವಾಗಿದೆ. ಇದಕ್ಕೆ ಕಾರಣಗಳು ನೀರಾವರಿ ಯೋಜನೆಗಳ ಅನುಷ್ಠಾನ, ರಾಜ್ಯವು ಈ ಕ್ಷೇತ್ರದಲ್ಲಿ ವಹಿಸಿದ ಆಸಕ್ತಿ, ಆಡಳಿತ ಕ್ಷಮತೆ ಹಾಗೂ ವೈಜ್ಞಾನಿಕ ವ್ಯವಸಾಯದ ಬೆಳವಣಿಗೆ. ನಮ್ಮ ರಾಜ್ಯದಲ್ಲಿ ಆಹಾರಧಾನ್ಯ ಹಾಗೂ ಇತರ ಬೆಳೆಗಳ ಅಭಿವೃದ್ಧಿ, ಸಾಗುವಳಿ ಕ್ಷೇತ್ರದ ಹೆಚ್ಚಳದಿಂದಾಗಿಲ್ಲ, ಆದರೆ ಪ್ರತಿ ಹೆಕ್ಟೇರಿಗೆ ಪಡೆಯುತ್ತಿದ್ದ ಫಸಲಿನ ಹೆಚ್ಚಳದಿಂದ ಎಂಬುದು ಗಮನಾರ್ಹವಾದ ಅಂಶ. ಭತ್ತ, ರಾಗಿ, ಕಬ್ಬು, ಮಕ್ಕೆಜೋಳ ಈ ಬೆಳೆಗಳಲ್ಲಿ ನಮ್ಮ ರಾಜ್ಯ ದೇಶದ ಸರಾಸರಿ ಹೆಕ್ಟೇರುವಾರು ಫಸಲಿಗಿಂತ ಬಹಳಷ್ಟು ಮುಂದಾಗಿದೆ. ಮಕ್ಕೆಜೋಳ ಹಾಗೂ ರಾಗಿಯ ಹೆಕ್ಟೇರುವಾರು ಫಸಲಿನಲ್ಲಿ ಭಾರತದಲ್ಲೇ ಕರ್ನಾಟಕ ಪ್ರಥಮ ಸ್ಥಾನದಲ್ಲಿದೆ. ರಾಗಿ ಬೆಳೆಯ ಅಭಿವೃದ್ಧಿಯ ಗತಿ ಒಂದು ಮಹತ್ವದ ಕ್ರಾಂತಿಕಾರಿ ಘಟನೆ. ಈ ಬೆಳೆ ಸಾಮಾನ್ಯವಾಗಿ ಒಣ ಬೇಸಾಯದ ಕ್ಷೇತ್ರದ ಬೆಳೆಯಾದುದರಿಂದ ಒಣ ಬೇಸಾಯಗಾರನ ಆರ್ಥಿಕ ಸ್ಥಿತಿ ಸುಧಾರಿಸುವದಲ್ಲದೆ, ಬಡವರ ಹಸಿವೆ ನೀಗುವಲ್ಲಿ ಇದು ಮಹತ್ವದ ಪಾತ್ರ ವಹಿಸುತ್ತದೆ. ನಮ್ಮ ರಾಜ್ಯದಲ್ಲೇ ನಡೆದ ಸಂಶೋಧನೆಯಿಂದ ಫಲಿಸಿದ ಇಂಡಾಫ್ ತಳಿಗಳು ಈ ಬೆಳೆಯ ಕ್ರಾಂತಿಕಾರಿ ಬೆಳವಣಿಗೆಗೆ ಕಾರಣ.

ಕಬ್ಬಿನ ಬೆಳೆಯಲ್ಲಿ ನಮ್ಮ ರಾಜ್ಯ ಹೆಕ್ಟೇರುವಾರು ಉತ್ಪಾದನೆಯಲ್ಲಿ ದೇಶದಲ್ಲಿ ಎರಡನೆಯ – ಮೂರನೆಯ ಸ್ಥಾನದಲ್ಲಿದೆ. ಅತಿ ಉದ್ದ ನೂಲು ಉತ್ಪಾದಿಸುವ ಹತ್ತಿಯ ಕೃಷಿಯಲ್ಲಿ ಕೂಡ ಕರ್ನಾಟಕದ ಪಾತ್ರ ಗಣನೀಯವಾಗಿದೆ. ವರಲಕ್ಷ್ಮಿ ಹತ್ತಿ ಅತಿ ಉದ್ದ ನೂಲಿನ ಹತ್ತಿಯ ಬೆಳೆಯಲ್ಲಿ ಭಾರತ ಸ್ವಯಂಪೂರ್ಣತೆ ಮುಟ್ಟಲು ಮಹತ್ವದ ಕೊಡುಗೆ ನೀಡಿದೆ. ಈ ಹತ್ತಿಯ ಸಂಶೋಧನೆಯಾದದ್ದು ನಮ್ಮ ರಾಜ್ಯದಲ್ಲೇ.

ತೋಟಗಾರಿಕೆಯ ಬೆಳೆಗಳಲ್ಲಿ ಕರ್ನಾಟಕ ದೇಶದಲ್ಲೇ ಹೆಸರುವಾಸಿಯಾಗಿದೆ. ದೇಶದ ಕಾಫಿ ಹಾಗೂ ಅಡಿಕೆ ಬೆಳೆಗಳಲ್ಲಿ ಅದು ಪ್ರಥಮ ಸ್ಥಾನದಲ್ಲಿದೆ. ತೆಂಗಿನ ಬೆಳೆಯಲ್ಲಿ ದ್ವಿತೀಯ ಸ್ಥಾನದಲ್ಲಿದೆ. ಹಿಪ್ಪನೇರಳೆ (ಮಲ್ ಬರಿ) ಬೆಳೆಯಲ್ಲೂ ರಾಜ್ಯ ದೇಶದಲ್ಲೆ ಮೊದಲ ಸ್ಥಾನದಲ್ಲಿದೆ. ಕಾಫಿ ಮತ್ತು ಅಡಿಕೆ ಬೆಳೆಗಳಿಂದ ಕೆಲವೇ ತೋಟಗಾರರಿಗೆ ಹೆಚ್ಚಿನ ಸಂಪಾದನೆಯಾದರೆ ಮಲ್ಬರಿ ಬೆಳೆ ರೇಷ್ಮೆ ವ್ಯವಸಾಯದಲ್ಲಿರುವ ಬಹಳಷ್ಟು ಸಂಖ್ಯೆಯ ಸಣ್ಣ ರೈತರಿಗೆ ಜೀವನದ ಆಧಾರವಾಗಿದೆ. ಹಿಂದೆ ರೇಷ್ಮೆ ಬೆಳೆಯಲ್ಲಿ ಗಳಿಸಿದ ಸಂಪತ್ತು ಜಪಾನ್ ದೇಶದ ಔದ್ಯೋಗಿಕ ಅಭಿವೃದ್ಧಿಗೆ ಆಧಾರವಾಗಿತ್ತೆಂಬುದನ್ನು ನೆನೆದರೆ ಕರ್ನಾಟಕಕ್ಕೆ ಈ ಬೆಳೆಯ ಮಹತ್ವದ ಪಾತ್ರ ಮನದಟ್ಟಾಗುವುದು. ಈ ಬೆಳೆಯನ್ನು ಕರ್ನಾಟಕದ ಅನೇಕ ಹೊಸ ಪ್ರದೇಶಗಳಿಗೆ ವಿಸ್ತರಿಸುವ ಅವಕಾಶವಿದೆ.

ಹೈನುಗಾರಿಕೆ ಗ್ರಾಮಾಂತರ ಪ್ರದೇಶದ ಬಹುಳಷ್ಟು ಭೂಹೀನ ಬಡವರಿಗೆ ಉದ್ಯೋಗಾವಕಾಶ ಕಲ್ಪಿಸಿಕೊಡುವ ವಿಶೇಷ ಸಾಧನವಾಗಿದೆ. ಕರ್ನಾಟಕದಲ್ಲಿ ಈಗ ಅನೇಕ ವರ್ಷಗಳಿಂದ ಮಿಶ್ರ ತಳಿಯ ಹಸುಗಳ ಸಂಗೋಪನೆ ಪ್ರಚಾರದಲ್ಲಿರುವುದರಿಂದ ನಾವು ಈ ಕ್ಷೇತ್ರದಲ್ಲಿ ದೇಶದ ಉಳಿದ ಭಾಗಗಳಿಗಿಂತ ಹೆಚ್ಚಿನ ಪ್ರಗತಿ ಸಾಧಿಸಬಲ್ಲೆವು.

ನಮ್ಮಲ್ಲಿ ಒಳನಾಡಿನ ಹಾಗೂ ಸಮುದ್ರದ ಮೀನುಗಾರಿಕೆಗಳೆರಡಕ್ಕೂ ಅವಕಾಶವಿದೆ. ಸಮುದ್ರ ಮೀನಿನ ಮೊತ್ತ ದೇಶದ ಶೇ. ೧೧. ಆದರೆ ಒಳನಾಡ ಮೀನಿನದು ಶೇ. ೪.೫. ನಮ್ಮಲ್ಲಿರುವ ಬಹಳಷ್ಟು ಕೆರೆಕುಂಟೆಗಳನ್ನು ವೈಜ್ಞಾನಿಕ ರೀತಿಯಲ್ಲಿ ಉಪಯೋಗಿಸಿದರೆ ನಾವು ಒಳನಾಡ ಮೀನಿನ ಉತ್ಪತ್ತಿಯನ್ನು ಈಗಿನ ಅನೇಕ ಪಟ್ಟು ಬೆಳೆಸಬಹುದು. ಒಳನಾಡಿನ ಮೀನುಗಾರಿಕೆ ಸ್ಥಳೀಯ ಜನರ ಆಹಾರಾಂಶ ಹೆಚ್ಚಿಸುವುದಲ್ಲದೆ, ಅತಿ ಸಣ್ಣ ಪ್ರಮಾಣದ ಉದ್ಯೋಗವಾದ್ದರಿಂದ ಇದರ ಆರ್ಥಿಕ ಲಾಭ ಬಡ ಮೀನುಗಾರರಿಗೆ ವರಪ್ರದವಾಗುವುದು. ಈ ದೃಷ್ಟಿಯಿಂದ ನಾವು ಒಳನಾಡ ಮೀನುಗಾರರಿಗೆ ಹೆಚ್ಚಿನ ಆದ್ಯತೆ ಕೊಡಬೇಕು.

ನಮ್ಮ ರಾಜ್ಯ, ನೈಸರ್ಗಿಕ ಅಡೆತಡೆಗಳಿದ್ದರೂ ಈ ಕಳೆದ ಎರಡು ದಶಕಗಳಲ್ಲಿ ವ್ಯವಸಾಯದ ಅಭಿವೃದ್ಧಿಯಲ್ಲಿ ಪಂಜಾಬ,-ಹರ್ಯಾಣ ಹಾಗೂ ಗುಜರಾತ್ ರಾಜ್ಯಗಳ ನಂತರ ದೇಶದಲ್ಲಿ ನಾಲ್ಕನೆ ಸ್ಥಾನದಲ್ಲಿರುವುದು ನಮ್ಮ ಯೋಜನೆಯ ಯಶಸ್ಸಿನ ದ್ಯೋತಕವಾಗಿದೆ. ಆದರೆ ಇನ್ನೂ ಹೆಚ್ಚಿನ ಯಶಸ್ಸು ಪಡೆಯಲು ನಮಗೆ ಅವಕಾಶವಿದೆ. ಒಣ ಬೆಳೆಗಳಾದ ಜೋಳ, ಹತ್ತಿ, ಎಣ್ಣೆಕಾಳುಗಳು ಹಾಗೂ ಬೇಳೆಕಾಳುಗಳ ಹೆಕ್ಟೇರುವಾರು ಫಸಲು ಅತೃಪ್ತಿಕರವಾಗಿಯೇ ಇದೆ. ರಾಜ್ಯದಲ್ಲಿ ಒಣ ಬೇಸಾಯದ ಹಾಗೂ ಬರಗಾಲ ಪ್ರವೃತ್ತಿಯ ಪ್ರದೇಶಗಳಲ್ಲಿ ಹೊಸ ವೈಜ್ಞಾನಿಕ ಸಂಶೋಧನೆಗಳನ್ನು ಬಳಸಿಕೊಂಡು ಬರಗಾಲದ ಬವಣೆಗೆ ತುತ್ತಾಗುವ ಜನರ ಕೃಷಿ ಉತ್ಪತ್ತಿ ರಕ್ಷಿಸುವುದು ನಮಗಿರುವ ಸವಾಲಾಗಿದೆ.

**ನೀರಾವರಿ**

ಸ್ವಾತಂತ್ರ್ಯ ಪೂರ್ವದಲ್ಲಿ ಕರ್ನಾಟಕದಲ್ಲಿ ಕೇವಲ ಒಂದೇ ಒಂದು ಬೃಹತ್ ನೀರಾವರಿ ಯೋಜನೆಯ ನಿರ್ಮಾಣವಾಯಿತು. ಎಲ್ಲರಿಗೂ ತಿಳಿದಂತೆ ಅದು ಸರ್. ಎಮ್. ವಿಶ್ವೇಶ್ವರಯ್ಯನವರ ಮುಂದಾಲೋಚನೆಯಿಂದ ನಿರ್ಮಿತವಾದ ಕೃಷ್ಣರಾಜಸಾಗರ. ದೇಶ ಸ್ವತಂತ್ರವಾಗಿ ಕರ್ನಾಟಕ ರಾಜ್ಯ ನಿರ್ಮಾಣವಾದ ನಂತರ ಈ ಕ್ಷೇತ್ರದ ಅಭಿವೃದ್ಧಿಗೆ ಹೆಚ್ಚಿನ ಚಾಲನೆ ದೊರೆಯಿತು. ೨೫ ವರ್ಷಗಳಲ್ಲಿ ತುಂಗಭದ್ರಾ, ಭದ್ರಾ, ಘಟಪ್ರಭಾ, ಮಲಪ್ರಭಾ, ಕಬಿನಿ, ಹಾರಂಗಿ, ಹೇಮಾವತಿ ಹಾಗೂ ಕೃಷ್ಣ ಮೇಲ್ದಂಡೆಯಂಥ ಬೃಹತ್

ಯೋಜನೆಗಳನ್ನು ತೆಗೆದುಕೊಂಡಿದ್ದರಿಂದ, ನಮ್ಮ ರಾಜ್ಯದಲ್ಲಿ ೧೯೫೬ ರಲ್ಲಿ ನೀರಾವರಿ ಪ್ರದೇಶ ಕೇವಲ ಶೇ. ೮ ರಷ್ಟು ಇದ್ದದ್ದು ಈಗ ಶೇ. ೨೦ಕ್ಕೆ ತಲುಪಿದೆ. ಹಾಗೂ ರಾಜ್ಯ ಆಹಾರ ಧಾನ್ಯದಲ್ಲಿ ಸ್ವಯಂಪೂರ್ಣತೆ ಮುಟ್ಟಿರುವುದಲ್ಲದೆ ಇತರ ವ್ಯವಸಾಯ ಹಾಗೂ ತೋಟದ ಬೆಳೆಗಳಲ್ಲಿ ಗಮನಾರ್ಹವಾದ ಪ್ರಗತಿ ಸಾಧಿಸಿದೆ. ನಮ್ಮ ನೆರೆ ರಾಜ್ಯಗಳಾದ ಆಂಧ್ರಪ್ರದೇಶ ಹಾಗೂ ತಮಿಳುನಾಡಿನಲ್ಲಿ ನೀರಾವರಿಯ ಪ್ರದೇಶ ಕ್ರಮವಾಗಿ ಶೇ. ೪೧ ಹಾಗೂ ಶೇ. ೪೩ ರಷ್ಟು ಇರುವುದನ್ನು ಗಮನಿಸಿದರೆ ನಮ್ಮ ಪ್ರಗತಿಯ ಬಗ್ಗೆ ನಾವು ಸ್ವಸಂತುಷ್ಟರಾಗಲಾರೆವು. ನಮ್ಮ ರಾಷ್ಟ್ರದಲ್ಲಿ ಈಗಾಗಲೇ ಶೇ. ೩೪ ರಷ್ಟು ವ್ಯವಸಾಯ ಪ್ರದೇಶದಲ್ಲಿ ನೀರಾವರಿಯಿರುವುದು ಗಮನಾರ್ಹ.

ನಮ್ಮ ರಾಜ್ಯದಲ್ಲಿ ಶೇ. ೭೫ರಷ್ಟು ಪ್ರದೇಶ ಬರಗಾಲ ಪ್ರವೃತ್ತಿಯಿರುವ ಪ್ರದೇಶವಾದ್ದರಿಂದ (ಡ್ರಾಟ್ ಪ್ರೋನ್ ಏರಿಯೂ) ನೀರಾವರಿಯ ಆವಶ್ಯಕತೆ, ಮಳೆ ಚೆನ್ನಾಗಿರುವ ರಾಜ್ಯಗಳಿಗಿಂತ ನಮಗೆ ಹೆಚ್ಚಾಗಿದೆ. ನಮ್ಮ ಜಲಸಂಪತ್ತನ್ನು ಪೂರ್ತಿಯಾಗಿ ಬಳಸಿಕೊಂಡರೆ ನಾವು ರಾಜ್ಯದ ಸುಮಾರು ಅರ್ಧದಷ್ಟು ಭಾಗಕ್ಕೆ ನೀರಾವರಿ ಸೌಕರ್ಯ ಒದಗಿಸಿಕೊಡಬಲ್ಲೆವು. ಇದರಲ್ಲಿ ಬೃಹತ್, ಮಧ್ಯಮ, ಸಣ್ಣ ಹಾಗೂ ಭಾರಿ ನೀರಾವರಿ ಸೇರಿವೆ.

ನಮ್ಮ ರಾಜ್ಯದಲ್ಲಿ ಜಲಸಂಪತ್ತು ಕಡಿಮೆಯಾದದ್ದರಿಂದ, ನಾವು ಈಗ ನಿರ್ಮಿಸುತ್ತಿರುವ ನೀರಾವರಿ ಯೋಜನೆಗಳಿಂದ ವರ್ಷಕ್ಕೆ ಒಂದೇ ಅಲ್ಪ ನೀರಾವರಿ ಬೆಳೆ (ಲೈಟ್ ಇರಿಗೇಟೆಡ್ ಕ್ರಾಪ್ಸ್) ಉತ್ಪಾದಿಸಲು ಅವಕಾಶ ನೀಡಿದ್ದೇವೆ. ಅಲ್ಪ ನೀರಾವರಿ ಬೆಳೆಗಳಾದ ಜೋಳ, ರಾಗಿ, ಶೇಂಗಾ, ಹತ್ತಿಯಂಥ ಬೆಳೆಗಳಿಗೆ ಬೇಕಾಗುವ ನೀರಿನ ಪ್ರಮಾಣ ಕಬ್ಬು ಹಾಗೂ ಬತ್ತದಂಥ ಬೆಳೆಗಳಿಗೆ ಬೇಕಾಗುವ ನೀರಿನ ಪ್ರಮಾಣದ ಅರ್ಧಕ್ಕಿಂತ ಕಡಿಮೆ. ಇದರಿಂದಾಗಿ ನಮ್ಮ ಜಲ ಸಂಪತ್ತಿನಿಂದ ಹೆಚ್ಚು ಪ್ರದೇಶಕ್ಕೆ ನೀರಾವರಿ ಒದಗಿಸಿ ಬರಗಾಲದ ಬವಣೆಯಿಂದ ರಕ್ಷಣೆ ಕೊಡಬಹುದು. ಈ ದೃಷ್ಟಿಯಿಂದ ನೀರಾವರಿ ಯೋಜನೆಗಳಿಗೆ ಸಂರಕ್ಷಕ ನೀರಾವರಿ ಯೋಜನೆಗಳೆಂದು (ಪ್ರೊಟೆಕ್ಟಿವ್ ಇರಿಗೇಷನ್ ಪ್ರೊಜೆಕ್ಟ್ಸ್) ಕರೆಯುತ್ತೇವೆ. ಆದರೆ ಈ ಸಂರಕ್ಷಕ ನೀರಾವರಿ ಯೋಜನೆಗಳನ್ನು ಮೂಲ ಉದ್ದೇಶಕ್ಕೆ ಭಂಗ ಬರದಂತೆ ಉತ್ಪಾದಕ ನೀರಾವರಿ ಯೋಜನೆಗಳನ್ನಾಗಿ (ಪ್ರೊಡಕ್ಟಿವ್ ಇರಿಗೇಶನ್ ಪ್ರೊಜೆಕ್ಟ್ಸ್) ಪರಿವರ್ತಿಸುವುದರಲ್ಲಿ ನಮ್ಮ ಬುದ್ಧಿವಂತಿಕೆಯಿದೆ. ಈ ಪರಿವರ್ತನೆ ಮಾಡಲು ನಾವು ಖರೀಫ ಭೂಮಿಯಲ್ಲಿ ಮಳೆಗಾಲದಲ್ಲಿ ಒಂದೆರಡು ಮಾತ್ರ ಪೂರಕ ನೀರಾವರಿಗಳನ್ನು ಕೊಟ್ಟು ಪ್ರಾಮುಖ್ಯವಾಗಿ ಮಳೆ ಆಧಾರಿತ ಮೊದಲನೆಯ ಬೆಳೆ ತೆಗೆದುಕೊಂಡು ರಬ್ಬಿಕಾಲದಲ್ಲಿ ಪೂರ್ತಿ ನೀರಾವರಿ ಆಧಾರಿತ ಎರಡನೆ ಬೆಳೆ ಬೆಳೆಯಬಹುದು. ಅದೇ ರೀತಿ ಯೋಗ್ಯ ಪರಿವರ್ತನೆಯೊಡನೆ ರಬ್ಬಿ ಕ್ಷೇತ್ರದಲ್ಲೂ ಎರಡು ಅಲ್ಪ ನೀರಾವರಿ ಬೆಳೆಗಳನ್ನು ಬೆಳೆಯಬಹುದು. ಈ ಗುರಿಯನ್ನು ಮುಂದಿಟ್ಟುಕೊಂಡು ನಾವು ಕಾಲುವೆ ಉಪಕಾಲುವೆಗಳ ಜಾಲವನ್ನು ನಿರ್ಮಿಸಬೇಕು.

ನೀರಾವರಿ ಕಾರ್ಯಕ್ಕೆ ಬೇಕಾಗುವ ಧನಸಂಪತ್ತು ಅಪಾರ. ನಾವು ನಮ್ಮ ಈಗಿನ ಯೋಜನೆಯಲ್ಲಿ ನೀರಾವರಿಗೆ ರೂ. ೫೪೨ ಕೋಟಿ ಗೊತ್ತು ಮಾಡಿದ್ದೇವೆ. ಅಂದರೆ ನಮ್ಮ ಯೋಜನಾ ವೆಚ್ಚದಲ್ಲಿ ಶೇ. ೨೧.೬ ಈ ಕಾರ್ಯಕ್ಕೆ ನಿಗದಿಯಾಗಿದೆ. ಇನ್ನು ಮುಂದಿನ ವರ್ಷಗಳಲ್ಲಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಹಣ ತೊಡಗಿಸಬೇಕಾಗುತ್ತದೆ. ಏಕೆಂದರೆ ಈ ಮೊದಲಿನ ಯೋಜನೆಗಳು ಸುಲಭವಾದ ಯೋಜನೆಗಳಾಗಿದ್ದರಿಂದ ಕಡಿಮೆ ವೆಚ್ಚದವಾಗಿದ್ದವು. ಇನ್ನು ಮುಂದಿನ ಯೋಜನೆಗಳು ಕಷ್ಟಸಾಧ್ಯವಾದವುಗಳಾದ್ದರಿಂದ, ಇನ್ನೂ ದುಬಾರಿ ಹಣ ಬೇಕಾಗುತ್ತದೆ. ಆದರೆ ಈ ಯೋಜನೆಗಳಲ್ಲಿ ನೀರಾವರಿ ದರದಿಂದ (ವಾಟರ್ ರೇಟ್) ಸರಕಾರಕ್ಕೆ ತೊಡಗಿಸಿದ ಹಣದ ಮೇಲೆ ಬಡ್ಡಿ ಬರುವುದಿಲ್ಲವಷ್ಟೇ ಅಲ್ಲ ಆ ಯೋಜನೆಗಳ ನಿರ್ವಹಣೆಗೆ (ಮೈಂಟೆನೆನ್ಸ್) ಪ್ರತಿ ವರ್ಷ ಮಾಡುವ ವೆಚ್ಚದ ಕಾಲು ಭಾಗವೂ ಬರುವುದಿಲ್ಲ. ಇದರಿಂದ ರಾಜ್ಯಕ್ಕೆ ಈ ಬಾಬಿಗೆ ಹಣ ಒದಗಿಸುವುದು ಕಷ್ಟಕರವಾಗುತ್ತದೆ. ಇದನ್ನರಿತು ರೈತರು ಸ್ವಹಿತದ ದೃಷ್ಟಿಯಿಂದಾದರೂ ಹೆಚ್ಚಿನ ನೀರಾವರಿ ದರಗಳನ್ನು ಕೊಡುವುದು ವಿಹಿತ. ಹಾಗಾದರೆ ಮಾತ್ರ ನಾವು ನಮ್ಮ ರಾಜ್ಯದ ಸುವರ್ಣಮಹೋತ್ಸವದ ವೇಳೆಗಾದರೂ (ಕ್ರಿ. ಶ. ೨೦೦೬) ನಮ್ಮ ರಾಜ್ಯದಲ್ಲಿರುವ ಪೂರ್ಣ ನೀರನ್ನು ಉಪಯೋಗಿಸಬಹುದು. ಕಾವೇರಿ ನೀರಿನ ಬಳಕೆಯ ಬಗ್ಗೆ ಅಂತರರಾಜ್ಯ ವಿವಾದವಿರುವ ದೃಷ್ಟಿಯಿಂದ ಕೂಡ ಆದಷ್ಟು ಬೇಗ ನಮ್ಮ ನೀರಾವರಿ ಅಭಿವೃದ್ಧಿ ಮಾಡುವುದು ಜಾಣ್ಮೆಯ ಹೆಜ್ಜೆ.

೧೯೭೮–೧೯೭೯ರಲ್ಲಿ ಭಾರತದಲ್ಲಿ ಪ್ರತಿ ವ್ಯಕ್ತಿಗೆ ವರ್ಷಕ್ಕೆ ಸರಾಸರಿ ೧೩೧ ಯುನಿಟ್ ವಿದ್ಯುತ್ ದೊರೆತರೆ ಕರ್ನಾಟಕದಲ್ಲಿ ೧೫೧, ಮಹಾರಾಷ್ಟ್ರದಲ್ಲಿ ೨೨೮, ತಮಿಳುನಾಡಿನಲ್ಲಿ ೧೮೫, ಕೇರಳದಲ್ಲಿ ೧೧೧, ಆಂಧ್ರಪ್ರದೇಶದಲ್ಲಿ ೯೧ ಯುನಿಟ್‌ಗಳಾಗಿದ್ದವು. ಔದ್ಯೋಗೀಕರಣದಲ್ಲಿ ವೇಗದಿಂದ ಪ್ರಗತಿ ಸಾಧಿಸುತ್ತಿದ್ದ ಪಂಜಾಬಿನಲ್ಲಿ ಅದು ೩೦೮ ಯುನಿಟ್ ಇದ್ದರೆ ಗುಜರಾತದಲ್ಲಿ ೨೩೦ ಯುನಿಟ್ ಆಗಿತ್ತು. ಕರ್ನಾಟಕದಲ್ಲಿ ಪ್ರತಿ ವ್ಯಕ್ತಿಗೆ ೧೫೧ ಯುನಿಟ್ ದೊರೆಯುವುದು ಮೇಲ್ನೋಟಕ್ಕೆ ಹೊಳೆಯುವಷ್ಟು ಮಹತ್ವದ್ದಲ್ಲ. ಏಕೆಂದರೆ ನಮ್ಮ ರಾಜ್ಯದಲ್ಲಿ ಇಲ್ಲಿಯವರೆಗೆ ನಾವು ವಿದ್ಯುತ್ ಹೆಚ್ಚಾಗಿ ಬೇಕಾಗುವ ಉದ್ದಿಮೆಗಳಿಗೆ, ಉದಾಹರಣೆಗೆ ಅಲ್ಯೂಮಿನಿಯಂ ಹಾಗೂ ಮಿನಿ ಸ್ಟೀಲ್ ಪ್ಲಾಂಟ್‌ಗಳಿಗೆ, ವಿದ್ಯುತ್ ಕೊಡುತ್ತಿದೇವೆ. ಇಂಥ ಉದ್ದಿಮೆಗಳಿಂದ ಹೆಚ್ಚು ಜನರಿಗೆ ನೌಕರಿ ಸಿಗುವುದಿಲ್ಲವಲ್ಲದೆ ರಾಜ್ಯಕ್ಕೆ ಕೂಡ ಮಾರಾಟಕರದಂಥ ತೆರಿಗೆಗಳಿಂದ ವಿಶೇಷ ಆದಾಯವೂ ದೊರಕುವುದಿಲ್ಲ. ಇನ್ನು ಮುಂದೆಯಾದರೂ ನಾವು ನಮ್ಮ ಮಿತವಾದ ವಿದ್ಯುತ್ ಮೂಲಗಳನ್ನು ಗಮನಿಸಿ ಹೆಚ್ಚು ನೌಕರಿ ಒದಗಿಸುವ ಹಾಗೂ ಕರ ಲಭಿಸುವ ಉದ್ದಿಮೆಗಳಿಗೆ ಮತ್ತು ವ್ಯವಸಾಯಕ್ಕೆ ವಿದ್ಯುತ್ ಬಳಸಬೇಕು. ಇಲ್ಲವಾದರೆ ನಮ್ಮ ರಾಜ್ಯಕ್ಕೆ ಶಾಶ್ವತವಾದ ವಿದ್ಯುತ್ ಬರದ ಬವಣೆ ತಪ್ಪಿದ್ದಲ್ಲ.

ತಮಿಳು ನಾಡಿನಲ್ಲಿ ಸುಮಾರು ೧೦ ಲಕ್ಷ, ಆಂಧ್ರಪ್ರದೇಶದಲ್ಲಿ ೬ ಲಕ್ಷ, ಮಹಾರಾಷ್ಟ್ರದಲ್ಲಿ ೫ ಲಕ್ಷ ಪಂಪಸೆಟ್ಟುಗಳಿದ್ದರೆ ನಮ್ಮಲ್ಲಿ ಕೇವಲ ೩ ಲಕ್ಷ ಮಾತ್ರ. ನಾವು ಉತ್ಪಾದಿಸುವ ವಿದ್ಯುಚ್ಛಕ್ತಿಯಲ್ಲಿ ಶೇ. ೭.೪ರಷ್ಟು ಮಾತ್ರ ವ್ಯವಸಾಯಕ್ಕೆ ಉಪಯೋಗವಾದರೆ, ತಮಿಳುನಾಡಿನಲ್ಲಿ ಶೇ. ೨೭ ರಷ್ಟು, ಆಂಧ್ರಪ್ರದೇಶದಲ್ಲಿ ಶೇ. ೨೦ ರಷ್ಟು ಉಪಯೋಗವಾಗುತ್ತದೆ. ಈ ದಿಶೆಯಲ್ಲಿ ನಮ್ಮ ಪ್ರಗತಿ ಏನೂ ಸಾಲದು. ಪಂಪುಸೆಟ್ಟುಗಳಿಗೆ ಮೀಟರ್ ರದ್ದುಪಡಿಸಿ ಕಮ್ಮಿ ದರ ನಿಗದಿ ಮಾಡಿದ್ದರಿಂದ ಇನ್ನು ಮುಂದೆ ಅವುಗಳ ಸಂಖ್ಯೆ ಬೆಳೆಯಬಹುದು.

ಹಳ್ಳಿಗಳ ವಿದ್ಯುದ್ದೀಕರಣದಲ್ಲಿ ತಮಿಳುನಾಡು ಹಾಗೂ ಕೇರಳದ ಎಲ್ಲ ಹಳ್ಳಿಗಳಿಗೂ ವಿದ್ಯುತ್ ಪೂರೈಸಿದ್ದರೆ ನಮ್ಮಲ್ಲಿ ಶೇ. ೭೫ ಹಳ್ಳಿಗಳಿಗೆ ಮಾತ್ರ ಪೂರೈಕೆಯಾಗಿದೆ. ಆದರೆ ಇದಕ್ಕೆ ಒಂದು ಮಹತ್ವದ ಕಾರಣವಿದೆ. ಕೇರಳದಲ್ಲಿ ಒಟ್ಟು ಹಳ್ಳಿಗಳ ಸಂಖ್ಯೆ ಕೇವಲ ೧೨೬೮, ತಮಿಳುನಾಡಿನಲ್ಲಿ ೧೬,೦೦೦, ನಮ್ಮ ರಾಜ್ಯದಲ್ಲಿ ೨೬,೦೦೦. ತಮಿಳುನಾಡಿಗಿಂತ ನಾವು

ಹೆಚ್ಚು ಹಳ್ಳಿಗಳಿಗೆ ಈಗಾಗಲೇ ವಿದ್ಯುತ್ ಪೂರೈಸಿರುವುದು ಗಮನಾರ್ಹ.

ಕೆಲವು ವರ್ಷಗಳ ಕೆಳಗೆ ಕರ್ನಾಟಕದಲ್ಲಿ ನಮಗೆ ಬೇಕಾದಷ್ಟು ಜಲ ವಿದ್ಯುತ್ ಉತ್ಪಾದನೆಗೆ ಅವಕಾಶವಿದೆಯೆಂಬ ಭಾವನೆ ಇತ್ತು. ಈಗಲೂ ನಾವು ದೇಶದ ಜಲ ವಿದ್ಯುತ್ ಉತ್ಪಾದನೆಯಲ್ಲಿ ಮೊದಲನೆ ಸ್ಥಾನದಲ್ಲಿದ್ದೇವೆ. ಆದರೆ ಉದ್ಯಮಗಳ ಬೆಳವಣಿಗೆಯೊದಂತೆ ಜಲ ವಿದ್ಯುತ್ ಸಂಪತ್ತು ನಮ್ಮ ಬೆಳೆಯುತ್ತಿರುವ ಆವಶ್ಯಕತೆಗೆ ಹೋಲಿಸಿದರೆ ಸೀಮಿತವಾದದ್ದೆಂದೇ ಹೇಳಬೇಕು. ಈಗ ನಾವು ವರ್ಷಕ್ಕೆ ಸುಮಾರು ೬೦೦೦ ದಶಲಕ್ಷ ಯುನಿಟ್ ಜಲವಿದ್ಯುತ್ ಉತ್ಪಾದಿಸುತ್ತಿದ್ದರೆ, ನಮ್ಮ ಎಲ್ಲ ಜಲ ವಿದ್ಯುತ್ ಮೂಲಗಳನ್ನು ಉಪಯೋಗಿಸಿ ಸುಮಾರು ೨೦,೦೦೦ ದಶಲಕ್ಷ ಯುನಿಟ್ ಮಾತ್ರ ಉತ್ಪಾದಿಸಬಹುದು. ನಮ್ಮ ರಾಜ್ಯದಲ್ಲಿ ಕಲ್ಲಿದ್ದಲಾಗಲಿ ಪೆಟ್ರೋಲಿಯಂ ಆಗಲಿ ಇಲ್ಲದಿರುವುದು ನಮ್ಮ ಇನ್ನೊಂದು ವಿಶೇಷ ನ್ಯೂನತೆ ಈ ಸನ್ನಿವೇಶದಲ್ಲಿ ನಾವು ನಮ್ಮ ಜಲವಿದ್ಯುತ್ ಸಂಪತ್ತನ್ನು ಮಿತವಾಗಿ ಬಳಸಿಕೊಳ್ಳುವದಲ್ಲದೆ, ಕಲ್ಲಿದ್ದಲನ್ನು ಬೇರೆ ರಾಜ್ಯಗಳಿಂದ ಆಮದು ಮಾಡಿಕೊಂಡು ವಿದ್ಯುತ್ ಉತ್ಪಾದನೆ ಮಾಡಬೇಕು. ಬೇರೆ ಸಂಪನ್ಮೂಲಗಳಾದ ಸೌರ, ವಾಯು, ವೃಕ್ಷಗಳಿಂದಲೂ ವಿದ್ಯುತ್ ಕೇಂದ್ರವನ್ನು ಕರ್ನಾಟಕದಲ್ಲಿ ಸ್ಥಾಪಿಸಲು ಕೇಂದ್ರದ ಮನ ಒಲಿಸಬೇಕು.

**ಖನಿಜಗಳು**

"ಚಿನ್ನದ ನಾಡದು ಮೈಸೂರು" ಎಂದ ಕವಿ ಏಕೀಕೃತ ಕರ್ನಾಟಕವಾಗುವುದಕ್ಕೆ ಮೊದಲು ಹೇಳಿದ್ದರೆ, ಈಗ ಕರ್ನಾಟಕ ರಾಜ್ಯ ಭಾರತದ ಎಲ್ಲ ಚಿನ್ನವನ್ನು ಉತ್ಪಾದಿಸುವ ಏಕೈಕ ರಾಜ್ಯವಾಗಿದೆ. ಏಕೆಂದರೆ ಕೋಲಾರ ಚಿನ್ನದ ಗಣಿಯ ಜೊತೆಗೆ ಮೊದಲು ಹೈದರಾಬಾದ್ ಸಂಸ್ಥಾನದಲ್ಲಿದ್ದ ಹಟ್ಟಿ ಚಿನ್ನದ ಗಣಿ ಸಹ ಕರ್ನಾಟಕದಲ್ಲಿ ಸೇರಿದೆ. ಸಿಮೆಂಟ್ ತಯಾರಿಕೆಗೆ ಬೇಕಾದ ಸುಣ್ಣದ ಕಲ್ಲು ಮತ್ತು ಮ್ಯಾಂಗನೀಜ್ ಅದುರುಗಳಲ್ಲೂ ಕರ್ನಾಟಕ ದೇಶದಲ್ಲಿ ಮೊದಲಸ್ಥಾನದಲ್ಲಿದೆ. ಕಬ್ಬಿಣದ ಅದುರಿನಲ್ಲಿ ಅದು ಬಿಹಾರ ಮತ್ತು ಒರಿಸ್ಸಾ ರಾಜ್ಯಗಳ ನಂತರ ತೃತೀಯ ಸ್ಥಾನದಲ್ಲಿದೆ. ನಮ್ಮ ರಾಜ್ಯದಲ್ಲಿ ಎರಡು ಮಹತ್ವದ ಖನಿಜಗಳು ಇಲ್ಲದಿರುವುದನ್ನು ನಾವು ಗಮನಿಸಬೇಕು. ಅವೆಂದರೆ ಇಂಧನ ಹಾಗೂ ರಾಸಾಯನಿಕ ಉದ್ದಿಮೆಗಳಿಗೆ ಬೇಕಾಗುವ ಕಲ್ಲಿದ್ದಲು ಹಾಗೂ ಪೆಟ್ರೋಲಿಯಂ.

ಸಿಮೆಂಟು ತಯಾರಿಸುವ ಕೆಲವು ಕಾರ್ಖಾನೆಗಳಿದ್ದು ಇನ್ನೂ ಕೆಲವು ಕಾರ್ಖಾನೆಗಳು ಯೋಜನೆಯ ಹಂತದಲ್ಲಿವೆ. ಆದರೆ ಕಬ್ಬಿಣದ ಅದುರನ್ನು ಮಾತ್ರ ಕೇವಲ ಭದ್ರಾವತಿಯಲ್ಲಿ ಸಣ್ಣ ಪ್ರಮಾಣದಲ್ಲಿ ಕಬ್ಬಿಣ ಹಾಗೂ ಉಕ್ಕು ಉತ್ಪಾದಿಸಲು ಉಪಯೋಗಿಸಲಾಗುತ್ತಿದೆ. ನಮ್ಮ ರಾಜ್ಯದಲ್ಲಿ ಕಬ್ಬಿಣದ ಅದಿರು ಯಥೇಚ್ಛವಾಗಿರುವುದಲ್ಲದೆ ಅತಿ ಹೆಚ್ಚಿನ ಗುಣಮಟ್ಟದ್ದೂ ಆಗಿದೆ. ಈ ಅದುರನ್ನು ಉಪಯೋಗಿಸಲು ವಿಜಯನಗರ ಬೃಹತ್ ಕಾರ್ಖಾನೆಯಿಂದ ಮಾತ್ರ ಸಾಧ್ಯ. ಅದುರಿನ ಬೃಹತ್ ಪ್ರಮಾಣದ ನಿರ್ಯಾತಕ್ಕೆ ಹೊಸಪೇಟೆ ಕಾರವಾರ ರೈಲು ಸಂಬಂಧ ಇಲ್ಲದಿದ್ದುದು ಒಂದು ದೊಡ್ಡ ತೊಡಕಾಗಿದೆ.

**ಔದ್ಯೋಗೀಕರಣ**

ದೇಶದಲ್ಲಿರುವ ೬೦ ಲಕ್ಷ ಕಾರ್ಖಾನೆ ಕಾರ್ಮಿಕರ ಪೈಕಿ ಕರ್ನಾಟಕದಲ್ಲಿ ೩.೪೪ ಲಕ್ಷ (ಶೇ. ೫.೭೩) ಕಾರ್ಮಿಕರಿದ್ದಾರೆ. ಕಾರ್ಖಾನೆಗಳಿಂದಾಗುವ ಮೌಲ್ಯ ಉತ್ಪತ್ತಿ (ವೇಲ್ಯೂ ಏಡೆಡ್) ದೇಶದಲ್ಲಿ ಒಟ್ಟು ೭೩೫೫ ಕೋಟಿ ರೂಪಾಯಿಗಳು. ಅದರಲ್ಲಿ ಕರ್ನಾಟಕದ ಪಾಲು ರೂ. ೩೫೯ ಕೋಟಿ (ಶೇ. ೪.೮೮), ತಮಿಳುನಾಡಿನದು ರೂ. ೬೯೦ ಕೋಟಿ (ಶೇ. ೯.೩), ಆಂಧ್ರ ಪ್ರದೇಶದ್ದು ರೂ. ೩೭೦ ಕೋಟಿ (ಶೇ. ೫), ಮಹಾರಾಷ್ಟ್ರದ್ದು ರೂ. ೧,೭೮೭ ಕೋಟಿ (ಶೇ. ೨೪.೨). ಈ ಕ್ಷೇತ್ರದಲ್ಲಿ ನಾವು ಅತಿ ಹಿಂದೆಯೂ ಇಲ್ಲ ಅತಿ ಮುಂದೂ ಇಲ್ಲ.

ನಮ್ಮ ರಾಜ್ಯದಲ್ಲಿರುವ ಉದ್ಯೋಗಗಳೆಂದರೆ ಅಲ್ಯೂಮಿನಿಯಂ, ಕಬ್ಬಿಣ ಮತ್ತು ಉಕ್ಕು, ಚಿನ್ನ, ಸಿಮೆಂಟು, ಕಾಗದ, ಸಕ್ಕರೆ, ಮಶಿನ್ ಟೂಲ್ಸ್, ಟೆಲಿಫೋನ್,, ಎಲೆಕ್ಟ್ರಾನಿಕ್ಸ್ ಮತ್ತು ಎಲೆಕ್ಟ್ರಿಕಲ್ ಸಾಮಾನು, ಹತ್ತಿಯ ನೂಲು ಮತ್ತು ಬಟ್ಟೆ, ರೇಶ್ಮೆ, ವಿಮಾನ, ಶ್ರೀಗಂಧ, ಸಾಬೂನು, ರಸಗೊಬ್ಬರ, ಕೈಗಡಿಯಾರ, ಸಿಗರೇಟು ಮತ್ತು ಬೀಡಿ ಇತ್ಯಾದಿ. ಕೈಗಡಿಯಾರಗಳು, ಎಲೆಕ್ಟ್ರಾನಿಕ್ಸ್, ಟೆಲಿಫೋನ್ ಹಾಗೂ ಮಶಿನ್ ಟೂಲ್ಸ್ ಮತ್ತು ವಿಮಾನಗಳ ಉತ್ಪಾದನೆಯಲ್ಲಿ ರಾಜ್ಯ ದೇಶದಲ್ಲೇ ಮೊದಲನೆಯ ಸ್ಥಾನದಲ್ಲಿದೆ. ಖನಿಜಾಧಾರಿತ ಉದ್ಯೋಗಗಳಲ್ಲಿ ಬೃಹತ್ ಕಬ್ಬಿಣದ ಕಾರ್ಖಾನೆ (ವಿಜಯನಗರ) ಹಾಗೂ ಅನೇಕ ಸಿಮೆಂಟು ಕಾರ್ಖಾನೆ ನಿರ್ಮಿಸುವ ಸೌಲಭ್ಯ ರಾಜ್ಯಕ್ಕಿದೆ. ಹಾಗೆಯೇ ಗ್ರಾಮಾಂತರ ಪ್ರದೇಶದಲ್ಲಿ ಇನ್ನೂ ಅನೇಕ ನೂಲಿನ ಗಿರಣಿಗಳನ್ನು, ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು ಬೇಕಾಗುವ ವ್ಯವಸಾಯೋತ್ಪತ್ತಿ ನಮ್ಮ ರಾಜ್ಯದಲ್ಲಿದೆ.

ದೊಡ್ಡ ಉದ್ದಿಮೆಗಳ ಅಭಿವೃದ್ಧಿಯ ಅಳತೆಗೋಲೆಂದರೆ, ಆ ರಾಜ್ಯದಲ್ಲಿ ಸ್ಥಾಪಿಸಬೇಕೆಂದಿರುವ ಉದ್ಯೋಗಗಳಿಗೆ ಕೇಂದ್ರ ಸರಕಾರವು ಕೊಟ್ಟ ಲೈಸನ್ಸ್‌ಗಳ ಸಂಖ್ಯೆ. ೧೯೭೬ – ೮೦ ರ ಅವಧಿಯಲ್ಲಿ ದೇಶದಲ್ಲಿ ಒಟ್ಟು ೨,೩೬೮ ಉದ್ದಿಮೆಗಳಿಗೆ ಲೈಸನ್ಸ್ ಕೊಟ್ಟಿದ್ದರಲ್ಲಿ ಕರ್ನಾಟಕದ ಪಾಲು ೧೭೮ (ಶೇ. ೭.೫).ಮಹಾರಾಷ್ಟ್ರ, ಗುಜರಾತ್, ಉತ್ತರ ಪ್ರದೇಶ ಮತ್ತು ತಮಿಳುನಾಡಿನ ನಂತರ ಕರ್ನಾಟಕ ಐದನೆಯ ಸ್ಥಾನದಲ್ಲಿತ್ತು. ಅಖಿಲ ಭಾರತ ಬ್ಯಾಂಕೇತರ ಹಣಕಾಸು ಸಂಸ್ಥೆಗಳಾದ ಟಿ.ಡಿ.ಬಿ.ಐ., ಎಲ್.ಐ.ಸಿ., ಯು.ಟಿ.ಐ. ಇತ್ಯಾದಿ ಸಂಸ್ಥೆಗಳು ೧೯೮೦ರ ವರೆಗೆ ದೇಶದಲ್ಲಿ ಪ್ರತಿ ವ್ಯಕ್ತಿಗೆ ಮಾಡಿದ ಸರಾಸರಿ ಧನಸಹಾಯ ರೂ. ೯೫.೬. ಆದರೆ ಕರ್ನಾಟಕದಲ್ಲಿ ರೂ. ೧೩೬.೫. ಗುಜರಾತ್, ಮಹಾರಾಷ್ಟ್ರ, ಹರ್ಯಾಣಗಳ ನಂತರ ಕರ್ನಾಟಕ ದೇಶದಲ್ಲಿ ಈ ಕ್ಷೇತ್ರದಲ್ಲಿ ನಾಲ್ಕನೆ ಸ್ಥಾನದಲ್ಲಿತ್ತು. ನಮ್ಮ ಜನಸಂಖ್ಯೆಯ ಪ್ರಮಾಣದಿಂದ ಈ ಸಾಧನೆಗಳು ಪ್ರಶಂಸನೀಯವಾಗಿವೆ.

ನಮ್ಮ ರಾಜ್ಯದಲ್ಲಿ ಔದ್ಯೋಗೀಕರಣಕ್ಕೆ ಬೇಕಾಗುವ ಅದೃಶ್ಯ (ಇನ್‌ವಿಸಿಬಲ್) ಸೌಲಭ್ಯಗಳು ಅನೇಕವಾಗಿವೆ. ಉದಾಹರಣೆಗೆ ಭಾರತದಲ್ಲಿ ಒಂದು ಲಕ್ಷ ಜನರಿಗೆ ೫.೨ ಬ್ಯಾಂಕ್ ಶಾಖೆಗಳಾದರೆ ಕರ್ನಾಟಕದಲ್ಲಿ ೭.೫. ಈ ಕ್ಷೇತ್ರದಲ್ಲಿ ಪಂಜಾಬ್, ಕೇರಳದ ನಂತರ ಕರ್ನಾಟಕ ಮೂರನೆಯ ಸ್ಥಾನದಲ್ಲಿ ಇದೆ. ಕಾರ್ಮಿಕ ರಂಗದಲ್ಲಿ ಸಾಮಾನ್ಯವಾಗಿ ಶಾಂತಿಯ ವಾತಾವರಣವಿದೆ. ಪರಿಣತ ಇಂಜನಿಯರುಗಳು, ಟೆಕ್ನಿಶಿಯನ್ನರು ರಾಜ್ಯದ ಎಲ್ಲ ಭಾಗಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಬೆಂಗಳೂರಲ್ಲದೆ, ಹುಬ್ಬಳ್ಳಿ – ಧಾರವಾಡ, ಮೈಸೂರು, ಮಂಗಳೂರು, ಬೆಳಗಾವಿ, ಶಿವಮೊಗ್ಗ – ಭದ್ರಾವತಿ, ದಾವಣಗೆರೆ – ಹರಿಹರದಂಥ ಎಲ್ಲ ಸೌಲಭ್ಯಗಳಿದ್ದ ಪಟ್ಟಣಗಳಿವೆ. ಈ ಸೌಲಭ್ಯಗಳನ್ನು ನಾವು ಜಾಣ್ಮೆಯಿಂದ ಉಪಯೋಗಿಸಿದರೆ ರಾಜ್ಯವು ಈ ಕ್ಷೇತ್ರದಲ್ಲಿ ಇನ್ನೂ ವೇಗದ ಪ್ರಗತಿ ಸಾಧಿಸಬಲ್ಲದು.

ನಮ್ಮ ರಾಜ್ಯದಲ್ಲಿ ಕಲ್ಲಿದ್ದಲು ..ಹಾಗೂ ಪೆಟ್ರೋಲಿಯಂಗಳ ಅಭಾವವಿರುವುದರಿಂದ ನಾವು ಹೆಚ್ಚು ವಿದ್ಯುತ್ ಉಪಯೋಗಿಸುವಂಥ ಉದ್ದಿಮೆಗಳ ಬೆಳವಣಿಗೆಗೆ ಗಮನ ಕೊಡುವುದು ಬುದ್ಧಿವಂತಿಕೆ. ರಾಜ್ಯದಲ್ಲಿ ಈ ವರೆಗೆ ನಾವು ವಿದ್ಯುತ್ ಉತ್ಪಾದನೆ ಹೆಚ್ಚಾದ ವರ್ಷಗಳಲ್ಲಿ ಅದನ್ನು ತಕ್ಷಣ ಉಪಯೋಗಿಸುವ ದೃಷ್ಟಿಯಿಂದ ಬಹಳಷ್ಟು ವಿದ್ಯುತ್ ಬೇಕಾಗುವ ಉದ್ದಿಮೆಗಳಾದ ಅಲ್ಯೂಮಿನಿಯಂ, ಮಿನಿಸ್ಟೀಲ್ ಫೆರೋ ಮ್ಯಾಂಗನೀಸ್, ವಿದ್ಯುತ್ ಚಾಲಿತ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ (ಭದ್ರಾವತಿ)ಗಳನ್ನು ಸ್ಥಾಪಿಸಿ ನಮ್ಮ ಮಿತ ಸಂಪತ್ತಾದ ವಿದ್ಯುತ್ತನ್ನು ಅದೂರದೃಷ್ಟಿಯಿಂದ ಬಳಸಿದ್ದೇವೆ. ಉದ್ದಿಮೆಗಳಲ್ಲಿ ವಿದ್ಯುತ್ತಿನ ಆವಶ್ಯಕತೆಯಲ್ಲಿ ಅಜಗಜಾಂತರವಿರುತ್ತದೆ. ಉದಾಹರಣೆಗೆ ಸುಮಾರು ೨೫,೦೦೦ ಜನರಿಗೆ ಕೆಲಸ ಒದಗಿಸಿಕೊಡುವ ಹೆಚ್.ಎ.ಎಲ್.ನ ಎರಡು ಪಟ್ಟು ವಿದ್ಯುತ್ತನ್ನು ಕೇವಲ ೫೦೦ ಜನರಿಗೆ ಕೆಲಸ ಒದಗಿಸಿಕೊಡುವ ಮಿನಿಸ್ಟೀಲ್ ಪ್ಲಾಂಟ್ ನುಂಗುತ್ತದೆ.

ಗ್ರಾಮೋದ್ಯೋಗ ಹಾಗೂ ಗುಡಿ ಕೈಗಾರಿಕೆಗಳು ಗ್ರಾಮಾಂತರ ಪ್ರದೇಶದಲ್ಲಿರುವ ಅತಿ ಬಡವರಿಗೆ ಉದ್ಯೋಗಾವಕಾಶ ಕಲ್ಪಿಸುವುದರಿಂದ ಅವುಗಳ ಬೆಳವಣಿಗೆಗೆ ಮೊದಲ ಪ್ರಾಶಸ್ತ್ಯ ನೀಡಬೇಕೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

**ಸಾರಿಗೆ, ಸಂಪರ್ಕ**

ಭಾರತದಲ್ಲಿ ೧೦೦ ಚ. ಕಿ.ಮಿ.ಗೆ ೪೯ ಕಿ.ಮಿ. ರಸ್ತೆಯಿದ್ದರೆ ಕರ್ನಾಟಕದಲ್ಲಿ ೫೫ ಕಿ. ಮಿ. ರಾಷ್ಟ್ರೀಯ ಹೆದ್ದಾರಿ ಭಾರತದಲ್ಲಿ ೧,೦೦೦ ಚ. ಕಿ. ಮಿ. ಗೆ ೬೬ ಕಿ. ಮಿ. ಆದರೆ ೭೧ ಕಿ.ಮಿ. ಕರ್ನಾಟಕದಲ್ಲಿ ರಸ್ತೆ ಸಂಪರ್ಕ ಸಮರ್ಪಕವಾಗಿದೆಯಾದರೂ ರೈಲ್ವೆ ಸಂಪರ್ಕದಲ್ಲಿ ಅದು ಬಹಳ ಹಿಂದಿದೆ. ಭಾರತದಲ್ಲಿ ರೈಲ್ವೆ ದಾರಿ ೧,೦೦೦ ಚ. ಕಿ. ಮಿ. ಗೆ ೧೮ ಕಿ.ಮಿ. ಆದರೆ ಕರ್ನಾಟಕದಲ್ಲಿ ೧೫ ಮಾತ್ರ. ನೆರೆ ರಾಜ್ಯಗಳಾದ ಕೇರಳದಲ್ಲಿ ೨೩ ಕಿ. ಮಿ., ತಮಿಳುನಾಡಿನಲ್ಲಿ ೨೯, ಆಂಧ್ರಪ್ರದೇಶದಲ್ಲಿ ೧೭. ಕರ್ನಾಟಕದಲ್ಲಿ ರೇಲ್ವೆದಾರಿಯ ಉದ್ದ ತೀರ ಕಮ್ಮಿ. ಅಲ್ಲದೆ ನಮ್ಮ ರಾಜ್ಯದಲ್ಲಿ ನಾಲ್ಕರಲ್ಲಿ ಮೂರು ಭಾಗ ಮೀಟರ್‌ಗೇಜ್. ಮೀಟರ್‌ಗೇಜ್ ರೈಲು ಕೈಗಾರಿಕಾ ವಸ್ತುಗಳ ಸಾಗಾಣಿಕೆಯ ದೃಷ್ಟಿಯಿಂದ ಒಂದು ಆಟದ ರೈಲಿದ್ದಂತೆ. ಕಬ್ಬಿಣ, ಕಲ್ಲಿದ್ದಲು ಇತ್ಯಾದಿ ಉದ್ಯೋಗಾಭಿವೃದ್ಧಿಗೆ ಬೇಕಾಗುವ ವಸ್ತುಗಳ ಸಮರ್ಪಕ ಸಾಗಾಣಿಕೆ ಬ್ರಾಡ್‌ಗೇಜ್ ರೈಲಿನಿಂದ ಮಾತ್ರ ಸಾಧ್ಯ. ಬ್ರಾಡ್‌ಗೇಜ್ ರೈಲು ದೇಶದ ಮೂಲೆ ಮೂಲೆಗೂ ಗೇಜ್ ಬದಲಾಯಿಸದೆ ಸಂಪರ್ಕ ಒದಗಿಸುತ್ತದೆ. ನಮ್ಮ ನಾಡಿನ ಉತ್ತರದ ತುದಿಗಿರುವ ಮೀರಜ್‌ನಿಂದ ದಕ್ಷಿಣದ ತುದಿಯ ಬೆಂಗಳೂರು ವರೆಗೆ ಮೀಟರ್‌ಗೇಜ್ ರೇಲ್ವೆ ಇರುವುದು. ಕರ್ನಾಟಕದ ಕೇಂದ್ರದಲ್ಲಿರುವ ಹುಬ್ಬಳ್ಳಿಗೆ ಹೊಸಪೇಟೆ ವರೆಗಿರುವ ಬ್ರಾಡ್‌ಗೇಜನ್ನು ತಕ್ಷಣ ವಿಸ್ತರಿಸಿದರೆ ಅಲ್ಲಿಯವರಿಗೆ ಕಲ್ಲಿದ್ದಲು, ಕಬ್ಬಿಣ ಇತ್ಯಾದಿ ವಸ್ತುಗಳನ್ನು ತರಿಸಿ ಉದ್ಯೋಗಾಭಿವೃದ್ಧಿಗೆ ಚಲನೆ ಕೊಡಬಹುದು. ಅದರ ಮುಂದಿನ ಹಂತದಲ್ಲಿ ಹುಬ್ಬಳ್ಳಿಯಿಂದ ಕಾರವಾರದ ವರೆಗೆ ಬ್ರಾಡ್‌ಗೇಜ್ ರೈಲು ನಿರ್ಮಿಸಬೇಕು ಮತ್ತು ಮೀರಜ್ ಬೆಂಗಳೂರು ಹಾಗೂ ಹುಬ್ಬಳ್ಳಿ, ಗೋವಾ ಮೀಟರ್‌ಗೇಜ್ ರೈಲನ್ನು ಬ್ರಾಡ್‌ಗೇಜಿಗೆ ಪರಿವರ್ತಿಸಬೇಕು. ಹೀಗಾದರೆ ಮಾತ್ರ ಕರ್ನಾಟಕದ ತ್ವರಿತ ಉದ್ಯೋಗಾಭಿವೃದ್ಧಿ ಸಾಧ್ಯ.

ಕರ್ನಾಟಕಕ್ಕೆ ಕರಾವಳಿಯಿದ್ದರೂ ಮಂಗಳೂರನ್ನು ಸರ್ವಋತು ಬಂದರವಾಗಿ ನಿರ್ಮಿಸುವ ವರೆಗೆ ಇದರ ಪ್ರಯೋಜನ ಪಡೆಯಲಾಗಲಿಲ್ಲ. ನಿಸರ್ಗದತ್ತವಾದ ಕಾರವಾರ ಬಂದರನ್ನು ಬೃಹತ್ ಬಂದರವಾಗಿ ಕಟ್ಟುವ ಕೆಲಸ ಇನ್ನೂ ಆಗಬೇಕಾಗಿದೆ. ಈಗ ಅಲ್ಲಿ ಮಧ್ಯಮ ವರ್ಗದ ಬಂದರಿನ ನಿರ್ಮಾಣವಾಗುತ್ತಿದೆ.

**ಶಿಕ್ಷಣ**

ಭಾರತದಲ್ಲಿ ೧೯೮೧ರಲ್ಲಿ ಅಕ್ಷರಸ್ಥರ ಸಂಖ್ಯೆ ನೂರಕ್ಕೆ ೩೬.೧೭ ಆದರೆ ಕರ್ನಾಟಕದಲ್ಲಿ ೩೮.೪೧. ಇದು ವಿಶೇಷ ಹೆಮ್ಮೆಯ ವಿಷಯವಲ್ಲ. ಏಕೆಂದರೆ ಅಕ್ಷರತೆಯಲ್ಲಿ ನಾವು ದೇಶದಲ್ಲಿ ೧೯೭೧ ರಲ್ಲಿ ೯ನೆಯ ಸ್ಥಾನದಲ್ಲಿದ್ದವರು ೧೯೮೧ ರಲ್ಲಿ ೧೦ ನೆಯ ಸ್ಥಾನಕ್ಕೆ ಇಳಿದಿದ್ದೇವೆ. ನಮ್ಮ ನೆರೆಯ ರಾಜ್ಯಗಳಾದ ಕೇರಳದಲ್ಲಿ ಶೇ. ೬೯.೧೭, ತಮಿಳುನಾಡಿನಲ್ಲಿ ಶೇ. ೪೫.೭೮, ಮಹಾರಾಷ್ಟ್ರದಲ್ಲಿ ಶೇ. ೪೭.೩೭ ಅಕ್ಷರತೆ ಇದೆ. ಇದಕ್ಕೆ ಕಾರಣ ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಕಡೆಗಣಿಸಿ ಹೈಸ್ಕೂಲ್ ಹಾಗೂ ಉಚ್ಚ ಅಭ್ಯಾಸದ ವಿಸ್ತರಣೆಗೆ ಪ್ರಾಶಸ್ತ್ಯ ಕೊಟ್ಟಿದ್ದೇ ಆಗಿದೆ. ಉದಾಹರಣೆಗೆ ೬ – ೧೧ ವಯಸ್ಸಿನ ಮಕ್ಕಳಲ್ಲಿ ೧೯೭೯ – ೮೦ ರಲ್ಲಿ ಕೇವಲ ಶೇ. ೮೧.೪ ಮಕ್ಕಳು ಕರ್ನಾಟಕದಲ್ಲಿ ಪ್ರಾಥಮಿಕ ಶಾಲೆಗೆ ಹೋಗುತ್ತಿದ್ದರೆ, ಭಾರತದಲ್ಲಿ ಶೇ. ೮೩.೪ ಕೇರಳದಲ್ಲಿ ಶೇ. ೧೦೨.೮, ತಮಿಳುನಾಡಿನಲ್ಲಿ ಶೇ. ೧೧೨.೨, ಮಹಾರಾಷ್ಟ್ರದಲ್ಲಿ ಶೇ. ೧೧೧.೪ ಮಕ್ಕಳು ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಾಗಿದ್ದರು. ೧೯೮೪–೮೫ರ ವೇಳೆಗೆ ೬ನೆಯ ಪಂಚವಾರ್ಷಿಕ ಯೋಜನೆಯಂತೆ ಭಾರತದಲ್ಲಿ ಶೇ. ೯೫ರಷ್ಟು ಮಕ್ಕಳು ಪ್ರಾಥಮಿಕ ಶಾಲೆಗೆ ಹೋಗುವ ಗುರಿ ಇದ್ದರೆ ನಾವು ಕೇವಲ ಶೇ. ೮೬.೨ ಮಕ್ಕಳನ್ನು ಶಾಲೆಗೆ ಕಳುಹಿಸುವ ಗುರಿ ಹೊಂದಿದ್ದೇವೆ. ದೇಶದ ಯಾವ ರಾಜ್ಯವೂ ಇಷ್ಟು ನಿಕೃಷ್ಟ ಗುರಿ ಹೊಂದಿಲ್ಲ. ಇದರ ಮುಂದಿನ ಅಂತಸ್ತುಗಳಲ್ಲಿ ಅಂದರೆ ೬ ರಿಂದ ೮ ನೆಯ ತರಗತಿಗಳು, ಹೈಸ್ಕೂಲು, ಕಾಲೇಜು ಕ್ಷೇತ್ರಗಳಲ್ಲಿ ನಾವು ದೇಶದ ಸರಾಸರಿಗಿಂತ ಮುಂದಿದ್ದೇವೆ. ೧೯೮೪ – ೮೫ ರಲ್ಲಿ ದೇಶದಲ್ಲಿ ಶೇ. ೫೦.೩ ಮಕ್ಕಳನ್ನು ಈ ತರಗತಿಗಳಿಗೆ ಕಳಿಸುವ ಗುರಿ ಇದ್ದರೆ ನಮ್ಮ ಗುರಿ ಶೇ. ೫೩.೯ ಇದೆ. ಇದು ಸ್ತುತ್ಯವಾದರೂ ಪ್ರಾಥಮಿಕ ವಿದ್ಯಾಭ್ಯಾಸವನ್ನು ನಾವು ಅಕ್ಷಮ್ಯವಾಗಿ ನಿರ್ಲಕ್ಷಿಸಿದ್ದೇವೆಂಬುದು ನಿರ್ವಿವಾದ.

ಉಚ್ಚ ಶಿಕ್ಷಣದಲ್ಲಿ ಅದರಲ್ಲೂ, ಇಂಜಿನಿಯರಿಂಗ್ ಹಾಗೂ ಮೆಡಿಕಲ್ ಶಿಕ್ಷಣದಲ್ಲಿ ನಮ್ಮ ರಾಜ್ಯ ಸಂಖ್ಯೆಯಲ್ಲಿ ಬಹಳ ಮುಂದೋಡಿದೆ. ನಮ್ಮ ರಾಜ್ಯದಲ್ಲಿ ಇಂಜಿನಿಯರಿಂಗ್ ಕಾಲೇಜುಗಳ ಸಂಖ್ಯೆ ೪೩. ಅವುಗಳಲ್ಲಿ ಸುಮಾರು ೯,೦೦೧ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶವಿದೆ. ಮೆಡಿಕಲ್ ಕಾಲೇಜುಗಳ ಸಂಖ್ಯೆ ೧೨ ಹಾಗೂ ಸೀಟುಗಳು ೧,೫೦೦. ನಮ್ಮ ರಾಜ್ಯದ ಜನಸಂಖ್ಯೆಯ ಪ್ರಮಾಣದಿಂದ ಇಡೀ ದೇಶದಲ್ಲಿ ಈ ಕ್ಷೇತ್ರದಲ್ಲಿ ಕರ್ನಾಟಕ ಮೊದಲನೆಯ ಕ್ರಮಾಂಕದಲ್ಲಿದೆ.

**ಕನಿಷ್ಟ ಅವಶ್ಯಕತೆಗಳ ಕಾರ್ಯಕ್ರಮಗಳು**

ಪ್ರಾಥಮಿಕ ಶಿಕ್ಷಣ, ಗ್ರಾಮಾಂತರ ಆರೋಗ್ಯ, ಗ್ರಾಮಾಂತರ ಕುಡಿಯುವ ನೀರಿನ ಪೂರೈಕೆ, ಗ್ರಾಮಾಂತರ ರಸ್ತೆಗಳು, ಗ್ರಾಮಾಂತರ ವಿದ್ಯುತ್ ಪೂರೈಕೆ, ಭೂರಹಿತರಿಗೆ ಸೈಟುಗಳು ಮತ್ತು ಗ್ರಾಮಾಂತರ ಮನೆ ಕಟ್ಟುವುದಕ್ಕೆ ಸಹಾಯ, ಪಟ್ಟಣಗಳಲ್ಲಿನ ಕೊಳಚೆ ಪ್ರದೇಶಗಳ ಸುಧಾರಣೆ ಮತ್ತು ಪೌಷ್ಟಿಕ ಆಹಾರ ಇವು ಈ ಕಾರ್ಯಕ್ರಮದಲ್ಲಿ ಸೇರಿವೆ. ಗ್ರಾಮಾಂತರ ಪ್ರದೇಶದಲ್ಲಿನ ಬಡ ಜನರ ಬಾಳ್ವೆ

ಸುಧಾರಿಸುವಲ್ಲಿ ಈ ಕಾರ್ಯಕ್ರಮಗಳ ವಿಶೇಷ ಪಾತ್ರ ಸ್ಪಷ್ಟ ವಾಗಿದೆ.

ಪ್ರಾಥಮಿಕ ಶಿಕ್ಷಣ, ಗ್ರಾಮಾಂತರ ರಸ್ತೆಗಳು ಮತ್ತು ಗ್ರಾಮಾಂತರ ವಿದ್ಯುತ್ ಪೂರೈಕೆಯ ಬಗ್ಗೆ ಬೇರೆಡೆ ವಿವರಗಳು ಬಂದಿವೆ. ಉಳಿದ ಕಾರ್ಯಕ್ರಮಗಳ ಬಗ್ಗೆ ಈಗಾಗಲೇ ಬೇರೆ ರಾಜ್ಯಗಳಲ್ಲಿ ಆದ ತುಲನಾತ್ಮಕ ಪ್ರಗತಿಯ ವಿವರಗಳು ಸುಲಭವಾಗಿ ದೊರೆಯುವುದಿಲ್ಲ. ಗ್ರಾಮಾಂತರ ಕುಡಿಯುವ ನೀರಿನ ಬಗ್ಗೆ ನಮ್ಮ ರಾಜ್ಯದಲ್ಲಿ ಇಲ್ಲಿಯವರೆಗೆ ಒಳ್ಳೆಯ ಪ್ರಗತಿಯಾದದ್ದು ನಿಜವಾದರೂ ಈಗಿನ ಪಂಚವಾರ್ಷಿಕ ಯೋಜನೆಯಲ್ಲಿ ನಮ್ಮ ನೆರೆ ರಾಜ್ಯಗಳಾದ ಆಂಧ್ರ ಪ್ರದೇಶ ರೂ. ೯೫ ಕೋಟಿ, ಮಹಾರಾಷ್ಟ್ರ ರೂ. ೨೩೦ ಕೋಟಿ, ತಮಿಳುನಾಡು ರೂ. ೫೦ ಕೋಟಿ ಹಾಗೂ ಕೇರಳ ರೂ. ೪೫ ಕೋಟಿ ಹಣ ತೊಡಗಿಸಬೇಕೆಂದಿದ್ದರೆ ನಮ್ಮ ರಾಜ್ಯದಲ್ಲಿ ಅದು ಕೇವಲ ರೂ. ೧೯ ಕೋಟಿ ಇರುವುದು ಸಾಲದೆಂದೇ ಹೇಳಬೇಕು. ಆದರೆ ಗ್ರಾಮಾಂತರ ಆರೋಗ್ಯಕ್ಕಾಗಿ ನಾವು ಸಾಕಷ್ಟು ಹಣ ನಿಗದಿ ಮಾಡಿದ್ದೇವೆ.

ಗ್ರಾಮಾಂತರ ಪ್ರದೇಶದಲ್ಲಿ ನಿವೇಶನಗಳನ್ನು ಕೊಡುವ ಯೋಜನೆಯಲ್ಲಿ ನಮ್ಮ ರಾಜ್ಯ ಬೇರೆಯವರಿಗೆ ಮಾದರಿಯಾಗಿದೆಯೆಂದರೆ ಅತಿಶಯೋಕ್ತಿ ಆಗಲಾರದು. ಈಗ ಕೆಲ ವರ್ಷಗಳ ಹಿಂದೆ ಹಳ್ಳಿಗಳಲ್ಲಿರುವ ಭೂಹೀನ ಹಾಗೂ ನಿವೇಶನವಿರುವ ಬಡ ಕುಟುಂಬಗಳ ಸಮೀಕ್ಷೆ ಮಾಡಿ ಆಗ ಗುರುತಿಸಿದ ೧೦ ಲಕ್ಷ ಕುಟುಂಬಗಳಿಗೆ ಈಗಾಗಲೇ ನಿವೇಶನಗಳನ್ನು ಹಂಚಲಾಗಿದೆ ಹಾಗೂ ಎರಡನೇ ಸುತ್ತಿನ ಸಮೀಕ್ಷೆ ಮಾಡಿ ಅವರಿಗೂ ನಿವೇಶನ ಕೊಡುವ ಯೋಜನೆ ಹಾಕಿಕೊಳ್ಳಲಾಗಿದೆ. ನಿವೇಶನ ಪಡೆದವರಲ್ಲಿ ಸುಮಾರು ೩ ಲಕ್ಷ ಜನರಿಗೆ ಮನೆ ಕಟ್ಟಿಸಿಕೊಳ್ಳಲು ಹಣ ಸೌಲಭ್ಯ ಒದಗಿಸಿರುವುದು ಕೂಡ ದೇಶದಲ್ಲೇ ಒಂದು ದಾಖಲೆ ಎಂದು ಹೇಳಬಹುದು. ಈ ಕಾರ್ಯಕ್ಕಾಗಿ ಈಗಿನ ಪಂಚವಾರ್ಷಿಕ ಯೋಜನೆಯಲ್ಲಿ ರೂ. ೫೫ ಕೋಟಿ ನಿಗದಿಮಾಡಿ ನಮ್ಮ ರಾಜ್ಯ ದೇಶದ ಎಲ್ಲ ರಾಜ್ಯಗಳಲ್ಲಿ ಎರಡನೆಯ ಕ್ರಮಾಂಕದಲ್ಲಿದೆ. ಈ ಯೋಜನೆಯ ಪ್ರಗತಿ ನೋಡಿದರೆ ನಮ್ಮ ರಾಜ್ಯ ಆರನೆಯ ಯೋಜನೆಯ ಕೊನೆಯ ವೇಳೆಗೆ ದೇಶದಲ್ಲಿ ಎಲ್ಲ ರಾಜ್ಯಗಳಿಗಿಂತ ಮುಂದಿರುವ ಸಾಧ್ಯತೆ ಇದೆ. ಮಾಡಲಾಗಿದೆ. ಪೌಷ್ಟಿಕ ಆಹಾರದ ಕ್ಷೇತ್ರದಲ್ಲಿ ನಮ್ಮ ನೆರೆಯ ರಾಜ್ಯಗಳಾದ ತಮಿಳುನಾಡು ಹಾಗೂ ಕೇರಳಗಳು ನಮ್ಮ ರಾಜ್ಯವಷ್ಟೇ ಅಲ್ಲ, ಉಳಿದೆಲ್ಲ ರಾಜ್ಯಗಳಿಗಿಂತಲೂ ಮುಂದಾಗಿವೆ.

**ಆರ್ಥಿಕ ಸ್ಥಿತಿ ಗತಿ**

೧೯೭೭-೭೮ರಲ್ಲಿ ಭಾರತದಲ್ಲಿ ಪ್ರತಿ ವ್ಯಕ್ತಿಯ ಸರಾಸರಿ ವಾರ್ಷಿಕ ವರಮಾನ ರೂ. ೧,೧೬೩ ಆಗಿದ್ದರೆ ಕರ್ನಾಟಕದಲ್ಲಿ ಅದು ರೂ. ೧,೧೪೧, ಮಹಾರಾಷ್ಟ್ರದಲ್ಲಿ ರೂ. ೧,೬೨೮, ಆಂಧ್ರಪ್ರದೇಶದಲ್ಲಿ ರೂ. ೧.೦೦೨, ಕೇರಳದಲ್ಲಿ ರೂ. ೯೬೮ ಇತ್ತು. ಅತಿ ಹೆಚ್ಚು ವರಮಾನ ಪಂಜಾಬಿನಲ್ಲಿ ರೂ. ೧,೯೯೧ ಇದ್ದರೆ ಅತಿ ಕಡಿಮೆ ಬಿಹಾರದಲ್ಲಿ ರೂ. ೭೩೭ ಆಗಿತ್ತು. ಸರಾಸರಿ ವರಮಾನಕ್ಕಿಂತ ಮಹತ್ವದ ಸಂಗತಿಯೆಂದರೆ ಕಡುಬಡವರ ಸಂಖ್ಯೆ; ಬಡತನದ ರೇಖೆಯ ಕೆಳಗೆ ಬರುವ ಶೇಕಡಾವಾರು ಸಂಖ್ಯೆ ಭಾರತದಲ್ಲಿ ೪೮.೧೩ ಇದ್ದರೆ, ಕರ್ನಾಟಕದಲ್ಲಿ ಅದು ೪೮.೩೪, ಮಹಾರಾಷ್ಟ್ರದಲ್ಲಿ ೪೭.೭೩, ಆಂಧ್ರಪ್ರದೇಶದಲ್ಲಿ ೪೨.೧೮, ಕೇರಳದಲ್ಲಿ ೪೬.೯೫ ಹಾಗೂ ತಮಿಳುನಾಡಿನಲ್ಲಿ ೫೨.೧೨ ಉಳಿದ ರಾಜ್ಯಗಳೊಡನೆ ಹೋಲಿಸಿದರೆ ಕರ್ನಾಟಕ ಮಧ್ಯ ಸ್ಥಾನದಲ್ಲಿ ಇದೆಯೆಂದು ಹೇಳಬಹುದು.

ಜನಜೀವನದ ಗುಣಮಟ್ಟವನ್ನು ಅಳೆಯಲು ವ್ಯಕ್ತಿಯ ಸರಾಸರಿ ವರಮಾನದಿಂದ ಮಾತ್ರ ಸಾಧ್ಯವಿಲ್ಲವೆಂದು ಮನವರಿಕೆಯಾಗಿದ್ದರಿಂದ, ಬೇರೆ ಅಳತೆಗೋಲಿನ ಶೋಧನೆ ನಡೆದಿದೆ. ಶಿಶುಮರಣದಿಂದ ರಕ್ಷಣೆ, ಸಾಕ್ಷರತೆ ಹಾಗೂ ಆಯುರ್ಮರ್ಯಾದೆಯನ್ನು ಗಣನೆಗೆ ತೆಗೆದುಕೊಂಡು, ರಚಿಸಿದ ಜೀವನಗುಣ ಸೂಚ್ಯಂಕದ (ಕ್ವಾಲಿಟಿ ಆಫ್ ಲೈಫ್ ಇನ್‌ಡೆಕ್ಸ್) ಮೂಲಕ ಜನಜೀವವದ ಗುಣಮಟ್ಟವನ್ನು ನಿರ್ಧರಿಸಲು ಯತ್ನ ನಡೆದಿದೆ. ಈ ಜೀ. ಗು. ಸೂ.ದ (ಕ್ಯೂಎಲ್‌ಟಿ) ಪ್ರಕಾರ ೧೫ ಪ್ರಮುಖ ರಾಜ್ಯಗಳಲ್ಲಿ ಕೇರಳ, ಪಂಜಾಬ್, ಮಹಾರಾಷ್ಟ್ರ, ಹರ್ಯಾಣ, ಪಶ್ಚಿಮ ಬಂಗಾಳಗಳ ನಂತರ ಕರ್ನಾಟಕ ೬ನೆಯ ಸ್ಥಾನದಲ್ಲಿ ಬರುವುದು ಸಮಾಧಾನದ ಸಂಗತಿ.

ಬಡತನದಿಂದ ಬಳಲುವವರ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಭೂ ಸುಧಾರಣೆ, ವ್ಯವಸಾಯದ ಹಾಗೂ ನೀರಾವರಿಯ ಬೆಳವಣಿಗೆ, ಅಸಂಘಟಿತ (ಅನ್‌ಆರ್ಗನೈಸ್ಡ್) ಕ್ಷೇತ್ರದಲ್ಲಿರುವ ಕೂಲಿಕಾರರಿಗೆ ಕನಿಷ್ಠ ಕೂಲಿ ಸಿಗುವಂತೆ ಮಾಡುವುದು, ಕನಿಷ್ಠ ಕೂಲಿಯಲ್ಲಿ ಸುಧಾರಣೆ ಹಾಗೂ ವಿಕೇಂದ್ರೀಕೃತ ಉದ್ಯೋಗಗಳ ಬೆಳವಣಿಗೆ ಮುಖ್ಯವಾದವು. ಭೂ ಸುಧಾರಣೆಯಲ್ಲಿ ಕರ್ನಾಟಕ ಈ ೪-೫ ವರ್ಷಗಳಲ್ಲಿ ಗಣನೀಯ ಪ್ರಗತಿ ಸಾಧಿಸಿದೆ. ಸಂಯೋಜಿತ ಗ್ರಾಮಾಂತರ ಅಭಿವೃದ್ಧಿ ಯೋಜನೆ (ಐಆರ್‌ಡಿಪಿ) ರಾಷ್ಟ್ರೀಯ ಗ್ರಾಮಾಂತರ ಉದ್ಯೋಗ ಯೋಜನೆ (ಎನ್‌ಆರ್‌ಈಪಿ) ಈ ದಿಶೆಯಲ್ಲಿ ಮುಖ್ಯ ಸಾಧನೆಗಳಾಗಿವೆ. ಅದೇ ರೀತಿ ಕನಿಷ್ಠ ಆವಶ್ಯಕತೆಗಳ ಯೋಜನೆ ಕೂಡ ಮಹತ್ವದ್ದು.

ಬಡತನ ಹೋಗಲಾಡಿಸಲು ಎರಡು ಮಾರ್ಗಗಳು. ಒಂದು: ಇದ್ದ ಸಂಪತ್ತನ್ನು ನ್ಯಾಯವಾಗಿ ಹಂಚುವುದು, ಎರಡನೆಯದು: ಸಂಪದಭಿವೃದ್ಧಿ ಮಾಡುವುದು. ಈ ಎರಡನೆಯ ಗುರಿ ಸಾಧಿಸಲು ನಾವು ನಮ್ಮ ಯೋಜನೆಗಳಿಗಾಗಿ ತೊಡಗಿಸುವ ಹಣ ಮಹತ್ವದ್ದು. ಈ ದೃಷ್ಟಿಯಿಂದ ದೇಶದಲ್ಲಿಯ ರಾಜ್ಯಗಳು (ಇದರಲ್ಲಿ ಕೇಂದ್ರ ಸರ್ಕಾರದ ಯೋಜನೆಯ ಹಣವನ್ನು ಸೇರಿಸಿಲ್ಲ.) ೬ನೆಯ ಪಂಚವಾರ್ಷಿಕ ಯೋಜನೆಯಲ್ಲಿ ಒಟ್ಟು ನಿಗದಿ ಮಾಡಿದ ಹಣ ರೂ. ೪೮,೬೦೦ ಕೋಟಿ ಎಂದರೆ ಪ್ರತಿ ವ್ಯಕ್ತಿಗೆ ರೂ. ೭೧೦. ಕರ್ನಾಟಕ ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ರೂ. ೨,೨೬೫ ಕೋಟಿ ಗುರಿ ಇಟ್ಟುಕೊಂಡಿದೆ. ಅಂದರೆ ತಲಾ ರೂ. ೬೧೨, ಮಹಾರಾಷ್ಟ್ರ ರೂ. ೯೪೬, ತಮಿಳುನಾಡು ರೂ. ೬೫೩, ಕೇರಳ ರೂ. ೬೧೦, ಆಂಧ್ರ ಪ್ರದೇಶ ರೂ. ೫೪೦, ಗುಜರಾತ್ ರೂ. ೧,೦೫೫, ಪಂಜಾಬ್ ರೂ. ೧,೧೧೮. ಪ್ರತಿ ವ್ಯಕ್ತಿಯ ಮೇಲಿನ ನಮ್ಮ ಯೋಜನಾ ವೆಚ್ಚ ಪಂಜಾಬ್, ಗುಜರಾತ್, ಮಹಾರಾಷ್ಟ್ರಗಳ ರಾಜ್ಯಗಳಿಗಿಂತ ಬಹಳ ಕಡಿಮೆ ಇದೆಯಲ್ಲದೆ ಎಲ್ಲ ರಾಜ್ಯಗಳ ಸರಾಸರಿಗಿಂತಲೂ ಕಡಿಮೆಯಾಗಿದೆ. ಐತಿಹಾಸಿಕವಾಗಿ ಸಮೀಕ್ಷಿಸಿದರೆ ೨ನೆಯ ಪಂಚವಾರ್ಷಿಕ ಯೋಜನೆಯಲ್ಲಿ ದೇಶದ ಎಲ್ಲ ರಾಜ್ಯಗಳ) ಯೋಜನಾ ವೆಚ್ಚ ಪ್ರತಿ ವ್ಯಕ್ತಿಗೆ ರೂ. ೫೧. ಆದರೆ ಕರ್ನಾಟಕದ ವೆಚ್ಚ ರೂ. ೬೨. ತೃತೀಯ ಯೋಜನೆಯಲ್ಲಿ ಕ್ರಮಶ: ರೂ. ೯೨, ರೂ. ೧೦೦, ೧೯೬೬-೬೯ರಲ್ಲಿ ರೂ.೬೧, ರೂ. ೭೦; ಐದನೆಯ ಯೋಜನೆಯಲ್ಲಿ ರೂ. ೨೬೨, ರೂ. ೨೭೬; ಎಂದರೆ ಈ ಅವಧಿಯಲ್ಲಿ ಕರ್ನಾಟಕದಲ್ಲಿ ಪ್ರತಿ ವ್ಯಕ್ತಿಯ ಮೇಲಿನ ಯೋಜನಾ ವೆಚ್ಚ ಎಲ್ಲಾ ರಾಜ್ಯಗಳ ಸರಾಸರಿಗಿಂತ ಹೆಚ್ಚಾಗಿತ್ತು. ಆದರೆ ೪ನೆಯ ಪಂಚವಾರ್ಷಿಕ ಯೋಜನೆಯಲ್ಲಿ

ಅದು ಕ್ರಮಶಃ ರೂ. ೧೪೨ ಹಾಗೂ ರೂ.೧೨೮ ಹಾಗೂ ಈಗಿನ (೧೯೮೦–೮೫) ಯೋಜನೆಯಲ್ಲಿ ರೂ. ೯೮೭ ಮತ್ತು ರೂ. ೬೧೪ ಇರುವುದು ನಮ್ಮ ಆರ್ಥಿಕಾಭಿವೃದ್ಧಿಯ ದೃಷ್ಟಿಯಿಂದ ಒಳಿತಲ್ಲ.

ಕೇಂದ್ರ ಸರ್ಕಾರದ ಬಂಡವಾಳ ಹೂಡಿಕೆಯನ್ನು ನಮ್ಮ ರಾಜ್ಯಕ್ಕೆ ಆಕರ್ಷಿಸುವುದು ಒಂದು ಮಹತ್ವದ ಕಾರ್ಯ. ಕೇಂದ್ರ ಸರ್ಕಾರ ಒಟ್ಟು ರೂ. ೧೫,೬೬೭ ಕೋಟಿ ಉದ್ದಿಮೆಗಳಲ್ಲಿ (ನೋನ್–ಡಿಪಾರ್ಟ್‌ಮೆಂಟಲ್ ಅಂಡರ್‌ಟೇಕಿಂಗ್) ತೊಡಗಿಸಿದ್ದರೆ, ಕರ್ನಾಟಕದ ಪಾಲು ಅದರಲ್ಲಿ ಕೇವಲ ರೂ. ೫೩೦ ಕೋಟಿ ಅಥವಾ ಶೇ. ೩.೪, ತಮಿಳುನಾಡಿನದು ರೂ. ೬೧೬ ಕೋಟಿ (ಶೇ. ೩.೯)ರಾಜ್ಯದಲ್ಲಿ ಅನೇಕ ಸೌಲಭ್ಯಗಳಿರುವುದರಿಂದ ನಾವು ಪ್ರಯತ್ನಪಟ್ಟರೆ ಹೆಚ್ಚು ಕೇಂದ್ರೀಯ ಬಂಡವಾಳವನ್ನು ಉಪಯೋಗಿಸಬಲ್ಲೆವು.

ಯೋಜನಾ ವೆಚ್ಚ ಹೆಚ್ಚಿಸುವುದಲ್ಲದೆ ನಾವು ತೊಡಗಿಸುವ ಬಂಡವಾಳದಿಂದ ಹೆಚ್ಚು ಬಡಜನರಿಗೆ ಪ್ರಯೋಜನವಾಗುವಂತೆ ನಾವು ನಮ್ಮ ಕಾರ್ಯಕ್ರಮಗಳನ್ನು ಆಯ್ದು ಕೊಳ್ಳಬೇಕು. ಈ ದೃಷ್ಟಿಯಿಂದ ನೀರಾವರಿ ಅಭಿವೃದ್ಧಿ ಗ್ರಾಮಾಂತರ ಪ್ರದೇಶಗಳಲ್ಲಿ ಉತ್ಪಾದನೆ ಹೆಚ್ಚಿಸುವುದಲ್ಲದೆ ಹೆಚ್ಚು ಜನರನ್ನು ಬಡತನ ರೇಖೆಯಿಂದ ಮೇಲೆತ್ತುವುದು. ಈಗಿನ ಪಂಚವಾರ್ಷಿಕ ಯೋಜನೆಯಲ್ಲಿ ನಾವು ವಿದ್ಯುತ್ ಉತ್ಪಾದನೆಗೆ ರೂ. ೫೭೨ ಕೋಟಿ ಮತ್ತು ನೀರಾವರಿ ಅಭಿವೃದ್ಧಿಗೆ ರೂ. ೫೪೨ ಕೋಟಿ ಹಣ ತೊಡಗಿಸುವ ಗುರಿ ಹೊಂದಿದ್ದೇವೆ. ನೀರಾವರಿಯ ಮೇಲಿನ ಬಂಡವಾಳದ ಹೂಡಿಕೆಯ ಪ್ರಮಾಣವನ್ನು ಈಗಿನಕ್ಕಿಂತ ಗಣನೀಯವಾಗಿ ಹೆಚ್ಚಿಸುವುದರಿಂದ ಬರಗಾಲದ ಬವಣೆ ತಗ್ಗಿಸಬಲ್ಲೆವು, ಹೆಚ್ಚು ಜನರ ಬಡತನ ನೀಗಿಸಬಲ್ಲೆವು ಹಾಗೂ ಅಂತರರಾಜ್ಯ ವಿವಾದಕ್ಕೆ ಒಳಗಾದ ನದಿ ನೀರುಗಳಲ್ಲಿ ನಮ್ಮ ನ್ಯಾಯವಾದ ಪಾಲು ಪಡೆದುಕೊಳ್ಳಬಲ್ಲೆವು. ಯೋಜನಾ ವೆಚ್ಚದಲ್ಲಿ ಇನ್ನೂ ಅಧಿಕ ಭಾಗವನ್ನು ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿಗೆ ವಿನಿಯೋಗಿಸಬೇಕು. ಔದ್ಯೋಗೀಕರಣ ಕ್ಷೇತ್ರದಲ್ಲಿ ರಾಜ್ಯ ಸರ್ಕಾರವು ಕಡಿಮೆ ಬಂಡವಾಳ ಬೇಕಾಗುವ ಹಾಗೂ ಹೆಚ್ಚು ಜನರಿಗೆ ಉದ್ಯೋಗ ಕಲ್ಪಿಸಿಕೊಡಬಲ್ಲ ಕ್ಷೇತ್ರಗಳಿಗೆ ಆದ್ಯತೆ ಕೊಡಬೇಕು. ಬಂಡವಾಳ ಜಾಸ್ತಿ ಬೇಕಾಗುವ ಕ್ಷೇತ್ರಗಳಲ್ಲಿ ಕೇಂದ್ರ ಸರ್ಕಾರ ಹಾಗೂ ಖಾಸಗಿ ಸಂಸ್ಥೆಗಳು ಹಣ ತೊಡಗಿಸುವ ವಾತಾವರಣ ಕಲ್ಪಿಸಬೇಕು.

೨೦೦೬ರಲ್ಲಿ ಕರ್ನಾಟಕ ಸುವರ್ಣ ಮಹೋತ್ಸವವನ್ನು ವನ್ನು ಆಚರಿಸುವಾಗ ಈ ರಾಜ್ಯದ ಯಾವ ಪ್ರಜೆಯೂ ಹಸಿವೆಯಿಂದ, ಕಡುಬಡತನದಿಂದ ಬಳಲಬಾರದು. ಬರಗಾಲದ ಬವಣೆ ಪೂರ್ತಿಯಾಗಿ ಮಾಯವಾಗಿರಬೇಕು. ಶೇ. ೯೦ ಜನರಾದರೂ ಅಕ್ಷರಸ್ಥರಾಗಿರಬೇಕು. ಗ್ರಾಮಾಂತರ ಪ್ರದೇಶದಲ್ಲಿದ್ದ ಎಲ್ಲರಿಗೂ ಸ್ವಂತದ ಮನೆಗಳಿರಬೇಕು. ಸಾಂಕ್ರಾಮಿಕ ರೋಗಗಳು ಕಾಣೆಯಾಗಿರಬೇಕು. ವ್ಯಕ್ತಿಯ ಸರಾಸರಿ ವಯಸ್ಸು ೬೫ ವರ್ಷಗಳಾದರೂ ಇರಬೇಕು. ಈ ಬಯಕೆಗಳನ್ನು ಅನುಷ್ಠಾನಕ್ಕೆ ತರುವ ಕಾರ್ಯ ಗುರುತರವಾದದ್ದು. ಈ ದಿಶೆಯಲ್ಲಿ ಕೆಲವು ಸಲಹೆಗಳನ್ನು ಮಾಡಲು ಈ ಲೇಖನದಲ್ಲಿ ಪ್ರಯತ್ನಿಸಲಾಗಿದೆ. ಅವು ರಾಜ್ಯ ಸರ್ಕಾರದ ಕ್ಷೇತ್ರಕ್ಕೆ ಮಾತ್ರ ಅನ್ವಯಿಸುವವು. ಕೇಂದ್ರಸರಕಾರ ಹಾಗೂ ಜನತೆಯ ಪಾತ್ರ ಇದರಲ್ಲಿ ಅಷ್ಟೇ ಮಹತ್ವದ್ದಾಗಿವೆ. ರಾಜ್ಯ ಸರಕಾರ, ಕೇಂದ್ರ ಸರಕಾರ ಹಾಗೂ ಜನತೆ ಪ್ರಯತ್ನಪಟ್ಟರೆ ಇವೇನು ಕೈಗೆಟುಕದ ಬಯಕೆಗಳಲ್ಲ.

# ಕರ್ನಾಟಕದಲ್ಲಿ ಆಡಳಿತ ವಿಕಾಸ

ಎ. ರವೀಂದ್ರ

"ಸಹಾಯದಿಂದ ಮಾತ್ರವೇ ಸಾರ್ವಭೌಮತ್ವ ಸಾಧ್ಯ; ಏಕೆಂದರೆ, ಒಂದೇ ಒಂದು ಚಕ್ರ ಎಂದಿಗೂ ಚಲಿಸಲಾರದು". – ಕೌಟಿಲ್ಯ

ರಾಜಪ್ರಭುತ್ವ ಜಾರಿಯಲ್ಲಿದ್ದ ಪ್ರಾಚೀನ ಕಾಲದಿಂದ ಹಿಡಿದು ಪ್ರಜಾಪ್ರಭುತ್ವ ಜಾರಿಯಲ್ಲಿರುವ ಇಂದಿನ ಕಾಲದವರೆಗೆ, ಆಡಳಿತಾತ್ಮಕ ಬದಲಾವಣೆಗಳ ಸ್ವಾರಸ್ಯಪೂರ್ಣ ಸರಣಿಯನ್ನು ಕರ್ನಾಟಕ ಕಂಡಿದೆ. ಭಾರತದ ಇತರ ಭಾಗಗಳಲ್ಲಿದ್ದಂತೆಯೇ, ಬ್ರಿಟಿಷರ ಆಡಳಿತ ಆರಂಭಗೊಳ್ಳುವವರೆಗೆ ಇಲ್ಲಿಯೂ ರಾಜರುಗಳೇ ಆಳುತ್ತಿದ್ದರು. ಅಶೋಕ ಚಕ್ರವರ್ತಿಯ ಸಾಮ್ರಾಜ್ಯ ಕರ್ನಾಟಕದ ಉತ್ತರ ಭಾಗಗಳನ್ನು ಒಳಗೊಂಡಿತ್ತು. ಯಾರ ಪರಾಕ್ರಮದ ಎದುರಿನಲ್ಲಿ ನಿಲ್ಲಲಾಗದೆ ಸುವಿಖ್ಯಾತನಾಗಿದ್ದ ಹರ್ಷವರ್ಧನನೂ ಹಿಮ್ಮೆಟ್ಟಬೇಕಾಯಿತೋ ಆ ದುರ್ಜೇಯ ಚಾಲುಕ್ಯ ಸಾಮ್ರಾಟನಾದ ಇಮ್ಮಡಿ ಪುಲಕೇಶಿ ಈ ಪ್ರದೇಶವನ್ನು ಆಳಿದ. ರಾಜನಾಗಿ ಮಾತ್ರವಲ್ಲದೆ ಯೋಧನೂ, ರಾಜನೀತಿಜ್ಞನೂ, ಆಡಳಿತಗಾರನೂ ಆಗಿ ತೊಳಗಿ ಬೆಳಗಿದ ಬಲಾಢ್ಯ ಅರಸು ಕೃಷ್ಣದೇವರಾಯನ ತಾಯ್ನಾಡು ಇದು. ಬ್ರಿಟಿಷರ ಆಕ್ರಮಣವನ್ನು ಧೈರ್ಯವಾಗಿ ಎದುರಿಸಿನಿಂತ ಹೈದರ್ ಮತ್ತು ಟಿಪ್ಪು ಆಳಿದ್ದೂ ಇಲ್ಲಿಯೇ.

ಪ್ರಾಚೀನ ಕಾಲದಲ್ಲಿ ರಾಜನನ್ನು ಬಹುಮಟ್ಟಿಗೆ ರಾಜ್ಯದೊಂದಿಗೆ ಸಮೀಕರಿಸಲಾಗುತ್ತಿತ್ತು. ಹೀಗೆಂದ ಮಾತ್ರಕ್ಕೆ ಅವನಿಗೆ ಪರಮಾಧಿಕಾರ ಹಾಗೂ ನಿರಂಕುಶಾಧಿಕಾರಗಳು ಲಭ್ಯವಾಗಿದ್ದುವೆಂದು ಅರ್ಥೈಸುವಂತಿಲ್ಲ. ಎಲ್ಲ ಆಡಳಿತಾತ್ಮಕ ಕಾರ್ಯಗಳಿಗೂ ಧರ್ಮದ ಪರಿಕಲ್ಪನೆಯೇ ಮಾರ್ಗದರ್ಶಿಯಾಗಿತ್ತು. ರಾಜ ಎಷ್ಟೇ ಬಲಾಢ್ಯನಾಗಿದ್ದರೂ ಸ್ವತಃ ಈ ಧರ್ಮವೇ ಅವನನ್ನು ನಿಯಂತ್ರಿಸುವ ಶಕ್ತಿಯಾಗಿತ್ತು. ಪ್ರಾಚೀನ ಕಾಲದ ರಾಜರುಗಳಿಗೆ ಒಂದು ಬಗೆಯ ಆಡಳಿತದ ಕೈಪಿಡಿಯಾಗಿದ್ದ ಕೌಟಿಲ್ಯನ "ಅರ್ಥಶಾಸ್ತ್ರ" ರಾಜ ತನ್ನ ಪ್ರಜೆಗಳನ್ನು ತನಗಿಂತಲೂ ಮೇಲಿನವರೆಂದು ಭಾವಿಸಬೇಕೆಂದು ವಿಧಿಸಿದೆ. "ಪ್ರಜೆಗಳ ಸುಖದಲ್ಲಿಯೇ ರಾಜನ ಸುಖ ಅಡಗಿರುತ್ತದೆ; ಅವರ ಹಿತದಲ್ಲಿಯೇ ಅವನ ಹಿತ ಅಡಗಿರುತ್ತದೆ; ತನಗೆ ಯಾವುದು ಇಷ್ಟವಾಗುತ್ತದೆಯೋ ಅದೇ ಒಳಿತಾದುದೆಂದು ಅವನು ಪರಿಗಣಿಸಬಾರದು; ತನ್ನ ಪ್ರಜೆಗಳಿಗೆ ಯಾವುದು ಇಷ್ಟವಾಗುತ್ತದೆಯೋ ಅದನ್ನೇ ಒಳಿತಾದುದೆಂದು ಅವನು ಪರಿಗಣಿಸಬೇಕು–" ರಾಜರುಗಳಿಗೆ ಮಾರ್ಗದರ್ಶಕವಾಗಿದ್ದ ತತ್ವ ಇದು. "ತನ್ನ ಪ್ರಜೆಗಳ ಸುಖ–ದುಃಖಗಳಲ್ಲಿ ಒಂದಾಗಿದ್ದ" ಶಾತವಾಹನ ಚಕ್ರವರ್ತಿ ಗೌತಮೀಪುತ್ರ ಶಾತಕರ್ಣಿಯನ್ನು ಆದರ್ಶ ರಾಜನೆಂದು ವರ್ಣಿಸಲಾಗಿದೆ.

ರಾಜನಿಗೆ ಸಲಹೆಗಾರರು ಇರುತ್ತಿದ್ದು, ಅವರು ಅವನಿಗೆ ದೈನಂದಿನ ಆಡಳಿತದಲ್ಲಿ ನೆರವಾಗುತ್ತಿದ್ದರು. ಉದಾಹರಣೆಗೆ ಮೌರ್ಯ ಚಕ್ರವರ್ತಿಗೆ ಮಹಾಮಾತ್ಯರು ನೆರವು ನೀಡುತ್ತಿದ್ದರು. ಅವರು ಸರ್ಕಾರದ ವಿವಿಧ ಇಲಾಖೆಗಳನ್ನು ನೋಡಿಕೊಳ್ಳುತ್ತಿದ್ದರು. ರಾಷ್ಟ್ರಕೂಟ ರಾಜರು ಮತ್ತು ಚಾಲುಕ್ಯ ದೊರೆಗಳು ಮಹಾಮಾತ್ಯ ಅಥವಾ ಮುಖ್ಯ ಮಂತ್ರಿಯನ್ನು ನೇಮಿಸಿಕೊಂಡಿದ್ದರು. "ಕರುಣ"ರೆಂದು ಕರೆಯಲಾಗುತ್ತಿದ್ದ ಇತರ ಸಚಿವರೂ ಇರುತ್ತಿದ್ದರು. ಕಳಚೂರ್ಯರ ಮತ್ತು ಹೊಯ್ಸಳರ ಆಳ್ವಿಕೆಯಲ್ಲಿ ಈ "ಕರುಣ"ರನ್ನು "ಕರಣಮ್"ಗಳೆಂದು ಕರೆಯಲಾಯಿತು. ಕಳಚೂರ್ಯ ರಾಜರ ಅಧೀನದಲ್ಲಿದ್ದ "ಪಂಚಕರಣಮ್"ಗಳನ್ನು "ಸಮುದ್ರದಂತೆ ಸಬಲರೂ, ಆಡಳಿತ ಕೌಶಲದಲ್ಲಿ ಅಸಮಾನರೂ, ಧೈರ್ಯದಲ್ಲಿ ಸಿಂಹಸಮಾನರೂ, ಮೋಸ–ಕಪಟಗಳನ್ನು ಗುರುತಿಸುವುದರಲ್ಲಿ ಸಮರ್ಥರೂ" ಆಗಿದ್ದರೆಂದೂ, "ಬಿಜ್ಜಳದೇವನ ಪಂಚೇಂದ್ರಿಯಗಳಂತೆ" ಬೆಳಗುತ್ತಿದ್ದರೆಂದೂ ವರ್ಣಿಸಲಾಗಿದೆ. ಬಸವೇಶ್ವರನಂಥ ಮಹಾ ವ್ಯಕ್ತಿಯೇ ಬಿಜ್ಜಳನ ಆಸ್ಥಾನವನ್ನು ಅಲಂಕರಿಸಿದ್ದ. ಆತನ ಪ್ರಭಾವವನ್ನು ಇಂದೂ ನಾವು ಮನಗಾಣುತ್ತಿದ್ದೇವೆ. ಸಂತನೂ ವಿದ್ವಾಂಸನೂ ವೀರಶೈವ ಧರ್ಮದ ಪ್ರವರ್ತಕನೂ ಆಗಿದ್ದ ಬಸವೇಶ್ವರ ಮಹಾಮಾತ್ಯನೂ, ಸೇನಾಧಿಪತಿಯೂ, ಕೋಶಾಧ್ಯಕ್ಷನೂ ಆಗಿದ್ದ. ಕೃಷ್ಣದೇವರಾಯನ ಮಹಾಮಾತ್ಯನಾಗಿದ್ದ ಸಾಳುವತಿಮ್ಮ ಆಡಳಿತದ ಮೇಲೆ ಎಂಥ ಬಿಗಿ ಹಿಡಿತವನ್ನಿರಿಸಿಕೊಂಡಿದ್ದನೆಂದರೆ ವಿಜಯನಗರ ಸಾಮ್ರಾಜ್ಯವನ್ನು ಸಂದರ್ಶಿಸಿದ ಪೋರ್ಚುಗೀಸ್ ಪ್ರವಾಸಿ ಪೇಸ್, ಆತ ರಾಜನ ಇಡೀ ಗೃಹಕೃತ್ಯದ ಮೇಲೆ ನಿಯಂತ್ರಣವನ್ನಿರಿಸಿಕೊಂಡಿದ್ದನೆಂದೂ, ಸಾಮ್ರಾಜ್ಯದ ಸಾಮಂತ ರಾಜರೆಲ್ಲ ಸಾಮ್ರಾಟನ ವಿಷಯದಲ್ಲಿ ನಡೆದುಕೊಳ್ಳುತ್ತಿದ್ದಂತೆಯೇ ಅವನ ವಿಷಯದಲ್ಲಿಯೂ ಭಯಭಕ್ತಿಗಳಿಂದ ನಡೆದುಕೊಳ್ಳುತ್ತಿದ್ದರೆಂದು ಹೇಳಿದ್ದಾನೆ. ಒಟ್ಟಿನಲ್ಲಿ ಸಚಿವ ಸಂಪುಟ ಗಣನೀಯವಾದ ಅಧಿಕಾರ ಹೊಂದಿದ್ದು, ರಾಜನ ಯಾದೃಚ್ಛಿಕ ಅಧಿಕಾರವನ್ನು ನಿಯಂತ್ರಿಸುವ ಪ್ರಭಾವವೆಂಬಂತೆ ಕಾರ್ಯಶೀಲವಾಗಿತ್ತು.

ಕರ್ನಾಟಕದ ವಿವಿಧ ಭಾಗಗಳನ್ನು ತಮ್ಮ ಅಂಕೆಯಲ್ಲಿರಿಸಿಕೊಂಡಿದ್ದ ಹಲವಾರು ರಾಜವಂಶಗಳು ವಿಕೇಂದ್ರೀಕರಣದ

ತತ್ವವನ್ನು ಚೆನ್ನಾಗಿಯೇ ಮಾನ್ಯ ಮಾಡಿದ್ದಂತೆ ತೋರುತ್ತದೆ. ಮೌರ್ಯರ ಆಳ್ವಿಕೆಯಲ್ಲಿ "ಹಲವು ನೂರು ಸಾವಿರ ವ್ಯಕ್ತಿ"ಗಳ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುತ್ತಿದ್ದ "ರಾಜುಕ"ನೆಂಬ ಅಧಿಕಾರಿಯನ್ನು ನೇಮಿಸಲಾಗಿದ್ದು, ಆತ ಕಂದಾಯ ಮತ್ತು ನ್ಯಾಯಾಂಗೀಯ ಕಾರ್ತವ್ಯಗಳನ್ನು ನಿರ್ವಹಿಸುತ್ತಿದ್ದ. ಇಂದಿನ ಜಿಲ್ಲಾಧಿಕಾರಿಗಳ ಹುದ್ದೆಯನ್ನು ಹೋಲುವಂಥ ಹುದ್ದೆ ಅದಾಗಿತ್ತು.

ಶಾತವಾಹನರು ತಮ್ಮ ರಾಜ್ಯವನ್ನು "ಅಹರ"ಗಳು "ನಿಗಮ"ಗಳು ಹಾಗೂ "ಗಮ"ಗಳು ಎಂದು ವರ್ಗೀಕರಿಸಿದ್ದರು. ಕದಂಬ ಮತ್ತು ಗಂಗ ಸಾಮ್ರಾಜ್ಯಗಳು ಹಲವು ನಾಡುಗಳಾಗಿ ವರ್ಗೀಕೃತವಾಗಿದ್ದು, ಅಂಥ ಪ್ರತಿಯೊಂದು ನಾಡೂ ಹಲವಾರು ಹಳ್ಳಿಗಳನ್ನೊಳಗೊಂಡಿರುತ್ತಿತ್ತು. ರಾಷ್ಟ್ರಕೂಟ ಸಾಮ್ರಾಜ್ಯವನ್ನು "ರಾಷ್ಟ್ರ"ಗಳು "ವಿಷಯ"ಗಳು ಹಾಗೂ "ಭುಕ್ತಿ"ಗಳೆಂಬುದಾಗಿ ವರ್ಗೀಕರಿಸಲಾಗಿತ್ತು. ಈ ವಿಭಜನೆ ಕ್ರಮಶಃ ಪ್ರದೇಶ, ವಿಭಾಗ, ಜಿಲ್ಲೆ ಮತ್ತು ತಹಶೀಲುಗಳನ್ನು ಹೋಲುವಂಥದು. ಇಷ್ಟಾಗಿಯೂ, ಕರ್ನಾಟಕದ ದಕ್ಷಿಣ ಭಾಗದಲ್ಲಿ ಆಳಿದ ಚೋಳರ ಆಳ್ವಿಕೆಯಲ್ಲಿ ಮಾತ್ರವೇ ವಿಕೇಂದ್ರಿಕರಣದ ತತ್ವ ಎದ್ದು ಕಾಣುವಂತೆ ಕಾರ್ಯಶೀಲವಾಗಿದ್ದುದು. ರಾಜ ರಾಜಕೀಯ ಮತ್ತು ಸೈನಿಕ ವ್ಯವಹಾರಗಳ ಮುಖ್ಯಸ್ಥನಾಗಿದ್ದರೂ, ಜಿಲ್ಲಾಕೂಟ, ಗ್ರಾಮಪಂಚಾಯಿತಿಯೇ ಮೊದಲಾದ ಸಣ್ಣಪುಟ್ಟ ಘಟಕಗಳ ಕೈಯಲ್ಲಿ ನಾಡಿನ ಆಡಳಿತವಿತ್ತು. ಇಂದಿನ ಆಡಳಿತದ ಚಿರಪರಿಚಿತ ಲಕ್ಷಣವಾಗಿರುವ ಸಮಿತಿ ವ್ಯವಸ್ಥೆಯೂ ಚೋಳರಿಗೆ ತಿಳಿದಿತ್ತು. ಈ ಜನಪ್ರಿಯ ಕೂಟಗಳು ರಾಜನ ಪರಮಾಧಿಕಾರಕ್ಕೆ ಒಡ್ಡಿದ ಅಡೆತಡೆಗಳೇ ಆಗಿದ್ದುವು.

ಹಣಕಾಸು ಆಡಳಿತದ ಮೂಲತತ್ವಗಳ ಅರಿವು ನಮ್ಮ ಪ್ರಾಚೀನರಿಗೂ ಇದ್ದಿತೆಂಬುದು ಸ್ವಾರಸ್ಯಕರವಾದ ಸಂಗತಿ. ಹೊಯ್ಸಳರ ಕಾಲದಲ್ಲಿ ಕಂದಾಯ ವಸೂಲಿಯನ್ನೂ ಆದಾಯ ವೆಚ್ಚಗಳ ಲೆಕ್ಕ ಹಿಡಿಯುವುದನ್ನೂ, ಪ್ರತ್ಯೇಕಿಸಿರುವುದನ್ನು ಕಾಣುತ್ತೇವೆ. ಹಣಕಾಸಿನ ನಿಯಂತ್ರಣ ಮತ್ತು ನಿರ್ವಹಣೆಯ ಅಧಿಕಾರಗಳು ಪಂಚಪ್ರಧಾನರಲ್ಲಿ ಒಬ್ಬರಾದ "ಹಿರಿಯ ಭಂಡಾರಿ" ಮತ್ತು "ಶ್ರೀಕರ್ಣ ಸರ್ವಾಧಿಕಾರಿಗಳಿಗೆ" ಸೇರಿತ್ತು. ಇವರಲ್ಲಿ ಹಿರಿಯಭಂಡಾರಿಗಳು ಆಯ–ವ್ಯಯ ಲೆಕ್ಕಪತ್ರಗಳ ಹೊಣೆಗಾರಿಕೆಯನ್ನು ನಿರ್ವಹಿಸುತ್ತಿದ್ದರು. ಆಡಳಿತಕ್ಕೆ ಈ ವ್ಯವಸ್ಥೆ ಹೆಚ್ಚಿನ ಋಜುತ್ವವನ್ನು ತಂದುಕೊಟ್ಟಿದ್ದಂತೆಯೂ, ನಿಧಿಗಳ ದುರುಪಯೋಗವನ್ನು ತಪ್ಪಿಸುವಲ್ಲಿ ನೆರವಾಗಿದ್ದಂತೆಯೂ ತೋರುತ್ತದೆ.

ಶುದ್ಧ ಹಾಗೂ ಸುಭದ್ರ ಆಡಳಿತ ವ್ಯವಸ್ಥೆಯನ್ನು ಒದಗಿಸಿದ ವಿಜಯನಗರದ ದೊರೆಗಳು ಅಧಿಕಾರ ನಿಯೋಗದ ಮಹತ್ವವನ್ನು ಮನಗಂಡಿದ್ದರು. "ಅಮುಕ್ತ ಮಾಲ್ಯ"ದಲ್ಲಿನ ಕೃಷ್ಣದೇವರಾಯನ ಈ ಮಾತುಗಳು ಅಚ್ಚರಿಯೆನಿಸುವಷ್ಟು ಆಧುನಿಕವಾಗಿವೆ. "ಒಬ್ಬ 'ಅಧೀನ' ಅಧಿಕಾರಿಯ ಕಾರ್ಯವನ್ನು ಅನೇಕ ವ್ಯಕ್ತಿಗಳಿಗೆ ವಹಿಸಿದಾಗ ಹಾಗೂ ಅಂಥ ಪ್ರತಿಯೊಬ್ಬ ವ್ಯಕ್ತಿಗೂ ಹಲವಾರು ಸ್ನೇಹಿತರು ನೆರವಾದಾಗ, ರಾಜ್ಯದ ಕಾರ್ಯ ಸುಲಭವಾಗಿ ನೆರವೇರಿದಂತಾಗುತ್ತದೆ. ಹಲವಾರು ಅಧಿಕಾರಿಗಳ ಹೃತ್ಪೂರ್ವಕ ಸಹಾಯವಿಲ್ಲದೆ ಏನನ್ನೂ ಸಾಧಿಸಲಾಗುವುದಿಲ್ಲ". "ನಾಯಕ"ರೆಂದು ಕರೆಯಲಾಗುತ್ತಿದ್ದ ಸಾಮಂತರುಗಳ ಮೂಲಕ ವಿಜಯನಗರದ ಅರಸರು ತಮ್ಮ ಅಧೀನದಲ್ಲಿದ್ದ ಪ್ರಾಂತ್ಯಗಳನ್ನು ಆಳುತ್ತಿದ್ದರು. ವಾಸ್ತವವಾಗಿ, ವಿಜಯನಗರ ಸಾಮ್ರಾಜ್ಯದ ಆಡಳಿತ ವಿಕೇಂದ್ರೀಕರಣ ವ್ಯವಸ್ಥೆಯೇ ಸಾಮ್ರಾಜ್ಯದ ಹೊರ ಎಲ್ಲೆಗಳಲ್ಲಿ ಅನೇಕ ಪಾಳೆಯಪಟ್ಟುಗಳು ತಲೆ ಎತ್ತಲು ಅವಕಾಶ ಮಾಡಿಕೊಟ್ಟಿತು. ಇವುಗಳಲ್ಲಿ ಮೈಸೂರು ಸಹ ಒಂದಾಗಿದ್ದು ೧೬ನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯ ಅಂತಿಮವಾಗಿ ಹರಿದು ಹಂಚಿಹೋದಾಗ ಒಡೆಯರ ವಂಶದ ಆಳ್ವಿಕೆಯಲ್ಲಿ ಸ್ವತಂತ್ರ ರಾಜ್ಯವಾಗಿ ರೂಪುಗೊಂಡಿತು.

೧೭ನೆಯ ಶತಮಾನದ ಆರಂಭದಿಂದ ಮೈಸೂರಿನ ಅರಸುಗಳು ಕರ್ನಾಟಕದ ಆಡಳಿತಕ್ಕೆ ನೀಡಿರುವ ಕೊಡುಗೆ ಮಹತ್ವಪೂರ್ಣವಾದುದು. ಮೈಸೂರಿನ ಮೊದಲ ಮಹಾರಾಜರೂ ಸುವಿಖ್ಯಾತ ಆಡಳಿತಗಾರರೂ ಆದ ಚಿಕ್ಕದೇವರಾಜ ಒಡೆಯರು (೧೬೭೩–೧೭೦೪) ಸರ್ಕಾರದ ಕಾರ್ಯಗಳನ್ನು ಹದಿನೆಂಟು ಇಲಾಖೆಗಳಾಗಿ (ಅಠಾರಹ್ ಕಛೇರಿ–ಅಠಾರಾ ಕಛೇರಿ) ವರ್ಗೀಕರಿಸಿದರೆಂದು ಹೇಳಲಾಗಿದೆ. ಮಿತವ್ಯಯ ಕ್ರಮಗಳನ್ನು ಕೈಗೊಳ್ಳುವುದರ ಮೂಲಕ ಹಾಗೂ ಮನೆಗಂದಾಯ, ಮಗ್ಗದ ತೆರಿಗೆ, ಅಂಗಡಿ ತೆರಿಗೆ ಹಾಗೂ ಆಶ್ಚರ್ಯಕರವೆನ್ನಿಸುವಂಥ ವಿವಾಹ ತೆರಿಗೆ ಇವೇ ಮೊದಲಾದ ಹಲವಾರು ತೆರಿಗೆಗಳನ್ನು ವಿಧಿಸುವುದರ ಮೂಲಕ ಅವರು ರಾಜ್ಯದ ಆದಾಯ ಹೆಚ್ಚುವಂತೆ ಮಾಡಿದರು. ವ್ಯಾಪಾರ ಮತ್ತು ವಾಣಿಜ್ಯವನ್ನೂ ಅವರು ನಿಯಂತ್ರಿಸಿದರು. ಕಬ್ಬಿಣದ ಉತ್ಪಾದನೆಗಾಗಿ ಒಂದು ಇಲಾಖೆಯನ್ನೂ, ಹೊಗೆಸೊಪ್ಪಿನ ಉತ್ಪಾದನೆ ಮತ್ತು ಮಾರಾಟಕ್ಕಾಗಿ ಮತ್ತೊಂದು ಇಲಾಖೆಯನ್ನೂ ಅವರು ಸ್ಥಾಪಿಸಿದರು. ಸ್ವಂತ ಸಾಮರ್ಥ್ಯ ಮತ್ತು ಚಾಣಾಕ್ಷತೆಯಿಂದ ವಿಶಾಲ ಸಾಮ್ರಾಜ್ಯವನ್ನು ಕಟ್ಟಿ ನಿಲ್ಲಿಸಿದ ಹೈದರ್ ಆಲಿ ಆ ಮೊದಲೇ ನೆಲೆಗೊಂಡಿದ್ದ ಕ್ರಮಗಳನ್ನು ಅನುಸರಿಸಿಕೊಂಡು ಬಂದರು. ದೂರುಗಳಿಗೆ ಅವರ ಮಹಲಿನ ಬಾಗಿಲು ಸದಾ ತೆರೆದಿರುತ್ತಿತ್ತೆಂದೂ ಎಲ್ಲ ದೂರುಗಳ ಬಗ್ಗೆ ವಿಚಾರಣೆ ನಡೆಸಿ ವರದಿ ಸಲ್ಲಿಸುವುದು ಪ್ರತಿಯೊಂದು ತಾಲ್ಲೂಕಿನಲ್ಲಿ ವಾಸಿಸುತ್ತಿದ್ದ ಇಬ್ಬರು ಬ್ರಾಹ್ಮಣರ (ಹರಿಕಾರ) ಕರ್ತವ್ಯವಾಗಿತ್ತೆಂದೂ ಹೇಳಲಾಗಿದೆ. ಹೈದರಾಲಿಯ ತರುವಾಯ ಸಿಂಹಾಸನವನ್ನೇರಿದ ಟಿಪ್ಪು ಸುಲ್ತಾನ್ ತಮ್ಮ ರಾಜ್ಯವನ್ನು "ತುಕಡಿ"ಗಳಾಗಿ ವರ್ಗೀಕರಿಸಿ, ಪ್ರತಿಯೊಂದು "ತುಕಡಿ"ಯ ಮೇಲ್ವಿಚಾರಣೆಗೆ ಒಬ್ಬೊಬ್ಬ ಅಮಲ್ದಾರನನ್ನು ನೇಮಿಸಿದ್ದರು. ತಮ್ಮ "ಬಖೈರಿ"ನಲ್ಲಿ ಟಿಪ್ಪು ತಮ್ಮ ಸೈನಿಕ, ನೌಕಾ ಹಾಗೂ ವಾಣಿಜ್ಯ ಇಲಾಖೆಗಳ ವಿಚಾರವನ್ನು ಉಲ್ಲೇಖಿಸಿ, ಅವುಗಳನ್ನು "ಅಸಮಾನ ಉಪಜ್ಞೆಗಳು ಹಾಗೂ ನೀತಿ–ನಿಯಮಗಳು" ಎಂದು ವರ್ಣಿಸಿದ್ದಾರೆ. ಸ್ವಾರಸ್ಯಕರವಾದ ಸಂಗತಿಯೆಂದರೆ ಚಿನ್ನ, ಗಂಧದ ಮರ, ಅಡಿಕೆ, ಮೆಣಸು ಏಲಕ್ಕಿ, ಮತ್ತು ರೇಷ್ಮೆಗಳ ವಿಷಯದಲ್ಲಿ ರಾಜ್ಯದ ಏಕಸ್ವಾಮ್ಯವನ್ನು ಸ್ಥಾಪಿಸಿದ್ದು. ರಾಜ್ಯದ ನಿಯಂತ್ರಣಕ್ಕೆ ಒಳಪಟ್ಟಿದ್ದ ವ್ಯಾಪಾರ ಕೇಂದ್ರಗಳು ದೇಶೀಯ ಹಾಗೂ ವಿದೇಶೀಯ ವ್ಯಾಪಾರಿಗಳೊಂದಿಗೆ ಸ್ಪರ್ಧಿಸುತ್ತಿದ್ದುವೆಂದು ಹೇಳಲಾಗಿದೆ. ಟಿಪ್ಪು "ಕ್ಷೋಭೆಗೆ ಒಳಗಾಗದೆ ಇದ್ದಿದ್ದರೆ, ಮೈಸೂರಿನಲ್ಲಿ ಕೈಗಾರಿಕಾ ಕ್ರಾಂತಿಗೆ ನಾಂದಿಯನ್ನು ಹಾಡುತ್ತಿದ್ದ"ರೆಂದೂ ಊಹಿಸಲಾಗಿದೆ.

ಟಿಪ್ಪುವಿನ ಪತನ ಹಾಗೂ ಆಂಗ್ಲರ ಆಳ್ವಿಕೆಯ ಉದಯದೊಂದಿಗೆ ಮೈಸೂರಿನ ಇತಿಹಾಸದಲ್ಲಿ ಹೊಸ ಶಕೆಯೊಂದು ಆರಂಭಗೊಂಡಿತೆಂದು ಹೇಳಲಾಗಿದೆ. ೧೭೯೯ರಿಂದ ೧೮೧೧ರವರೆಗಿನ ಅವಧಿಯಲ್ಲಿ ಸಮರ್ಥ ಹಾಗೂ ಚಾಣಾಕ್ಷ ಆಡಳಿತಗಾರರಾಗಿದ್ದ ದಿವಾನ್ ಪೂರ್ಣಯ್ಯನವರ ರಾಜ ಪ್ರತಿನಿಧಿತ್ವ ಸ್ವರೂಪದ ಆಳ್ವಿಕೆ ಎದ್ದು ಕಾಣುತ್ತದೆ. ರಾಜ್ಯದ

ಬಹುತೇಕ ಭಾಗಗಳಲ್ಲಿ ಶಾಸನೋಲ್ಲಂಘನೆಯ ಪುಂಡಾಟವನ್ನು ಹತ್ತಿಕ್ಕುವಲ್ಲಿ ಹಾಗೂ ಶಾಂತಿಯನ್ನು ಮತ್ತೆ ನೆಲೆಗೊಳಿಸುವಲ್ಲಿ ಅವರು ಬಹುಮಟ್ಟಿಗೆ ಯಶಸ್ವಿಯಾದರು. ರಾಜ್ಯದ ಆದಾಯವನ್ನು ಗಮನಾರ್ಹವಾಗಿ ಹೆಚ್ಚಿಸುವುದೂ ಅವರಿಗೆ ಸಾಧ್ಯವಾಯಿತು. ಆಗ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಮಿಂಟೋ ಕೂಡ "ಚಾಣಾಕ್ಷತೆ, ಋಜುತ್ವ ಮತ್ತು ಸಾಮರ್ಥ್ಯಗಳಿಂದೊಡಗೂಡಿದ್ದ ಅವರ ವಿಶಿಷ್ಟ ಹಾಗೂ ಉಜ್ವಲ ಆಡಳಿತ" ಸಲ್ಲಿಸಿದ ಘನತರವಾದ ಸೇವೆಯ ವಿಚಾರ ವನ್ನುಉಲ್ಲೇಖಿಸಿದ್ದಾರೆ. ಆದರೆ, ಪೂರ್ಣಯ್ಯನವರ ತರುವಾಯ ಆಡಳಿತ ಕುಲಗೆಟ್ಟು ಹೋಯಿತು. ಜನಸಾಮಾನ್ಯರು ನಡೆಸಿದ ಒಂದು ಕ್ರಾಂತಿಯಿಂದಾಗಿ ಆಂಗ್ಲರು ಆಡಳಿತವನ್ನು ತಮ್ಮ ಕೈಗೆ ತೆಗೆದುಕೊಳ್ಳುವಂತಾಯಿತು.

೧೮೩೧ರಿಂದ ೧೮೮೧ರವರೆಗೆ ಮೈಸೂರು ರಾಜ್ಯ ಆಂಗ್ಲ ಆಯುಕ್ತ ಮಂಡಳಿಯ ಆಳ್ವಿಕೆಗೆ ಒಳಪಟ್ಟಿತ್ತು. ಮುಖ್ಯ ಆಯುಕ್ತರ ಮೂಲಕ ಈ ಅವಧಿಯಲ್ಲಿ ಆಡಳಿತ ನಡೆಯುತ್ತಿತ್ತು. ಅವರಲ್ಲಿ ಗಮನಾರ್ಹರಾದವರೆಂದರೆ ಸರ್ ಮಾರ್ಕ್ ಕಬ್ಬನ್ ಮತ್ತು ಲಾರ್ಡ್ ಬೌರಿಂಗ್. ಸುಮಾರು ೫೦ ವರ್ಷಗಳವರೆಗೆ ನಡೆದ ಈ ಆಯುಕ್ತರ ಆಳ್ವಿಕೆ ಆಡಳಿತಕ್ಕೆ ಒಂದು ಸ್ಥಿರತೆಯನ್ನು ತಂದುಕೊಟ್ಟಿತು ಹಾಗೂ ಮೈಸೂರಿನಲ್ಲಿ ಆಧುನಿಕ ವಿಕಾಸಕ್ಕೆ ಅಡಿಗಲ್ಲನ್ನೂ ಹಾಕಿತು ಎಂದು ಹೇಳಬಹುದಾಗಿದೆ. ರಾಜ್ಯಾದಾಯ ಆಡಳಿತ ವ್ಯವಸ್ಥೆಯಲ್ಲಿ ಕಬ್ಬನ್ ಮಹತ್ವಪೂರ್ಣ ಸುಧಾರಣೆಗಳನ್ನು ಜಾರಿಗೆ ತಂದರು. ಅನೇಕ ಕ್ಷುಲ್ಲಕ ತೆರಿಗೆಗಳನ್ನೂ (ಕಿರುಕುಳಗಳನ್ನು) ಕೈ ಬಿಡಲಾಯಿತಾದರೂ, ಒಟ್ಟಾರೆ ರಾಜ್ಯಾದಾಯ ಹೆಚ್ಚುವಂತೆ ಕಟ್ಟುನಿಟ್ಟಿನ ಕ್ರಮಗಳನ್ನು ಕೈಗೊಳ್ಳಲಾಯಿತು. ವ್ಯಾಪಾರ, ಸುಧಾರಿತ ಬೇಸಾಯ ಮತ್ತು ಹೊಸ ಕೈಗಾರಿಕೆಗಳ ಸ್ಥಾಪನೆಗೆ ಉತ್ತೇಜನ ದೊರೆಯಿತು. ಬೌರಿಂಗ್ ಅವರ ಅಧಿಕಾರಾವಧಿಯಲ್ಲಿ, ಇತರ ಪ್ರಾಂತ್ಯಗಳಲ್ಲಿ ಜಾರಿಯಲ್ಲಿದ್ದ ಆಡಳಿತ ವ್ಯವಸ್ಥೆಯ ಮಟ್ಟಗಳಿಗನುಗುಣವಾಗಿ ಮೈಸೂರಿನ ಆಡಳಿತವನ್ನು ಪುನರ್ವ್ಯವಸ್ಥೆಗೊಳಿಸಲಾಯಿತು. ರಾಜ್ಯವನ್ನು ಎಂಟು ಜಿಲ್ಲೆಗಳಾಗಿ ವಿಭಜಿಸಿ, ಒಂದೊಂದು ಜಿಲ್ಲೆಗೂ ಒಬ್ಬೊಬ್ಬ ಉಪ-ಅಧೀಕ್ಷಕನನ್ನು (ಡೆಪ್ಯೂಟಿ ಸೂಪರಿಂಟೆಂಡೆಂಟ್ ನೇಮಿಸಲಾಯಿತು. ಅಪರಾಧಿಕ (ಕ್ರಿಮಿನಲ್) ಸ್ವರೂಪದ ವಿಷಯಗಳಲ್ಲಿ ಅವರು ಜಿಲ್ಲಾ ನ್ಯಾಯಾಧೀಶರೂ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಈ ಜಿಲ್ಲೆಗಳನ್ನು ಮೂರು ವಿಭಾಗಗಳಾಗಿ ವಿಂಗಡಿಸಿ, ಒಂದೊಂದು ವಿಭಾಗಕ್ಕೂ ಒಬ್ಬೊಬ್ಬ ಅಧೀಕ್ಷಕನನ್ನು (ಸೂಪರಿಂಟೆಂಡೆಂಟ್) ನೇಮಿಸಲಾಯಿತು. ಭೂಕಂದಾಯ ಆಡಳಿತವನ್ನು ಸುಭದ್ರವಾದ ನೆಲೆಗಟ್ಟಿನ ಮೇಲೆ ಸ್ಥಾಪಿಸಲಾಯಿತು. ನಿಯಮಗಳನ್ನು ರೂಪಿಸುವ, ಏಕರೂಪದ ನಿಯತಕಾಲಿಕ-ವರದಿಗಳನ್ನು ಸಲ್ಲಿಸುವ ಹಾಗೂ ರಿಜಿಸ್ಟರುಗಳನ್ನು ಇರಿಸುವ ವಿಧಾನಗಳನ್ನು ಅಳವಡಿಸುವ ಬಗ್ಗೆ ಕ್ರಮಗಳನ್ನು ಕೈಗೊಳ್ಳಲಾಯಿತು. ೧೮೭೦ರಲ್ಲಿ ಭೂಕಂದಾಯ ಸರ್ವೇಕ್ಷಣೆ ಮತ್ತು ಇತ್ಯರ್ಥದ ಕಾರ್ಯವನ್ನು ಆರಂಭಿಸಲಾಯಿತು. ರಸ್ತೆಗಳ ನಿರ್ಮಾಣ, ನೀರಾವರಿಯನ್ನು ಉತ್ತಮಪಡಿಸುವುದು ವಾಣಿಜ್ಯ-ಕೃಷಿಗೆ ಪ್ರೋತ್ಸಾಹ ನೀಡಿಕೆ, ರೈಲು ಮಾರ್ಗಗಳನ್ನು ಆರಂಭಿಸುವುದು-ಇವೇ ಮೊದಲಾದ ಹಲವಾರು ಕ್ಷೇಮಾಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲಾಯಿತು. ಈ ಅವಧಿಯಲ್ಲಿ ನಡೆದ ಶೈಕ್ಷಣಿಕ ವಿಕಾಸ ಮೈಸೂರಿನಲ್ಲಿ ಆಧುನಿಕ ಗಣ್ಯ ಸಮಾಜದ ವಿಕಾಸಕ್ಕೆ ಕಾರಣವಾದ ಅತಿ ಮುಖ್ಯ ಸಂಗತಿಯೂ ಆಯಿತು.

೧೮೮೧ರಲ್ಲಿ ಮೈಸೂರು ಮತ್ತೆ ಮಹಾರಾಜರ ಆಳ್ವಿಕೆಗೆ ಒಳಪಟ್ಟಿತು. ಆಂಗ್ಲ ಆಯುಕ್ತರ ಆಳ್ವಿಕೆಯಲ್ಲಿ ಇದ್ದಂಥ ಆಡಳಿತದ ಸ್ವರೂಪವೇ ಯಥಾವತ್ತಾಗಿ ಮುಂದುವರಿಯಿತಾದರೂ ಕಾರ್ಯಪಾಲಕ ಆಡಳಿತದ ಮೇಲು ತುದಿಯಲ್ಲಿ ದಿವಾನರಿದ್ದು, ಅವರ ಅಧೀನದಲ್ಲಿ ಮೂರು ಮಂದಿಯನ್ನೊಳಗೊಂಡ ಸಚಿವ ಸಂಪುಟವೊಂದಿತ್ತು. ಇಲ್ಲಿ ಪ್ರಜಾ ಪ್ರತಿನಿಧಿ ಸಭೆಯ ವಿಚಾರವನ್ನು ಉಲ್ಲೇಖಿಸಬೇಕು. ಇದು ನಮ್ಮ ನಾಡಿನಲ್ಲಿಯೇ ಮೊತ್ತಮೊದಲ ಪ್ರಜಾ ಸಂಸ್ಥೆಯಾಗಿದ್ದು, ೧೮೮೧ರಲ್ಲಿ ಕಾರ್ಯಾರಂಭ ಮಾಡಿತು. ಅದು "ಮೈಸೂರು ಸಂಸ್ಥಾನದ ಎಲ್ಲ ತಾಲ್ಲೂಕುಗಳ ರೈತರ ಮತ್ತು ವ್ಯಾಪಾರಿಗಳ ಪ್ರತಿನಿಧಿ ಸಭೆ"ಯಾಗಿತ್ತು. "ಸರ್ಕಾರದ ಕಾರ್ಯ ಮತ್ತು ಜನತೆಯ ಇಚ್ಛೆ ಹಾಗೂ ಹಿತಾಸಕ್ತಿಗಳ ನಡುವೆ ಹೆಚ್ಚಿನ ಸಾಮರಸ್ಯವನ್ನು ಉಂಟುಮಾಡುವಂಥ" ವ್ಯವಸ್ಥೆಯನ್ನು ರೂಪಿಸುವುದೇ ಆ ಸಭೆಯ ಮುಖ್ಯೋದ್ದೇಶವಾಗಿತ್ತು. ರಾಜ್ಯದ ಪ್ರಜೆಗಳಿಗೆ ತಮ್ಮ ಬೇಡಿಕೆಗಳು ಮತ್ತು ಕುಂದು ಕೊರತೆಗಳನ್ನು ಮುಂದಿರಿಸುವ ಅವಕಾಶವನ್ನು ಈ ಸಭೆ ಕಲ್ಪಿಸಿಕೊಟ್ಟಿತಾದರೂ, ಆಡಳಿತದ ಮೇಲೆ ಅವರಿಗೆ ಯಾವ ನಿಯಂತ್ರಣ ಅಥವಾ ಹತೋಟಿಯನ್ನು, ಅದು ಒದಗಿಸಿ ಕೊಡಲಿಲ್ಲ. ೧೯೨೩ರಲ್ಲಿ ಅದರ ಅಂಗರಚನೆಯನ್ನು, ಅಧಿಕಾರ ಮತ್ತು ಕಾರ್ಯಗಳನ್ನು ವಿವರಿಸುವ ಆಜ್ಞೆಯೊಂದನ್ನು ಘೋಷಿಸಿದಾಗ, ಅದಕ್ಕೆ ಕಾನೂನುಬದ್ಧವಾದ ನೆಲೆ ದೊರೆತಂತಾಯಿತು. ಶಾಸನಗಳ ರಚನೆ, ತೆರಿಗೆ, ಆಯವ್ಯಯವನ್ನು ಕುರಿತಂಥ ಚರ್ಚೆ ಹಾಗೂ ಸಾರ್ವಜನಿಕ ಹಿತಾಸಕ್ತಿಯ ವಿಷಯಗಳ ಬಗ್ಗೆ ಮನವಿಯನ್ನು ಸಲ್ಲಿಸುವುದು-ಇಂಥ ಕೆಲವೊಂದು ಕಾರ್ಯಗಳನ್ನು ಅದು ನಿರ್ವಹಿಸಿತು. ಶಾಸನಗಳನ್ನು ಹಾಗೂ ವಿನಿಮಯಗಳನ್ನು ರೂಪಿಸುವಲ್ಲಿ ಸರ್ಕಾರಕ್ಕೆ ನೆರವಾಗುವ ಮುಖ್ಯೋದ್ದೇಶದಿಂದ ೧೯೦೭ರಲ್ಲಿ ಮೈಸೂರು ನ್ಯಾಯ ವಿಧಾಯಕ ಸಭೆಯನ್ನು ಅಸ್ತಿತ್ವಕ್ಕೆ ತರಲಾಯಿತು. ಭಾರತೀಯ ವಿಧಾನ ಮಂಡಲಗಳಲ್ಲಿನ ಮಾದರಿಯ ಆಧಾರದ ಮೇಲೆ, ನ್ಯಾಯ ವಿಧಾಯಕ ಸಭೆಯ ಹಾಗೂ ಪ್ರಜಾಪ್ರತಿನಿಧಿ ಸಭೆಯ ಸದಸ್ಯರುಗಳನ್ನೊಳಗೊಂಡಿದ್ದ ಸ್ಥಾಯೀ ಸಮಿತಿಗಳನ್ನು ನೇಮಿಸಲಾಯಿತು. ಆರ್ಥಿಕ ವಿಕಾಸಕ್ಕೆ ಸಂಬಂಧಿಸಿದಂತೆ ಸಲಹಾ ಮಂಡಳಿಗಳನ್ನೂ ಸ್ಥಾಪಿಸಲಾಯಿತು. ಜಿಲ್ಲಾ ಆಡಳಿತ ವ್ಯವಸ್ಥೆ ತನ್ನ ಇಂದಿನ ಸ್ವರೂಪವನ್ನು ಪಡೆದುಕೊಂಡದ್ದು ಈ ಅವಧಿಯಲ್ಲಿಯೇ. ಜಿಲ್ಲೆಗಳೇ ಅತ್ಯುನ್ನತ ಆಡಳಿತ ಘಟಕಗಳಾಗಿದ್ದುವು. ಜಿಲ್ಲಾಧಿಕಾರಿ ಜಿಲ್ಲೆಯ ಮುಖ್ಯಸ್ಥರಾದರೆ ಉಪವಿಭಾಗಕ್ಕೆ ಉಪವಿಭಾಗಾಧಿಕಾರಿಯೂ, ತಾಲ್ಲೂಕಿಗೆ ತಹಶೀಲ್ದಾರ್ ಅಥವಾ ಅಮಲ್ದಾರ್ ಅವರೂ ಮುಖ್ಯಸ್ಥರಾದರು.

೧೮೮೧ರಿಂದ ೧೯೪೭ರವರೆಗೆ ಮೂವರು ಮಹಾ ರಾಜರು ಮೈಸೂರನ್ನು ಆಳಿದರು. ಅವರು ಚಾಮರಾಜ ಒಡೆಯರ್ (೧೮೮೧-೧೮೯೪), ಕೃಷ್ಣರಾಜ ಒಡೆಯರ್ (೧೯೦೨-೧೯೪೦) ಮತ್ತು ಜಯಚಾಮರಾಜ ಒಡೆಯರ್ (೧೯೪೦-೪೭). 'ಅವರಿಗೆ ಸಹಾಯಕರಾಗಿದ್ದ ದಿವಾನರುಗಳೇ ವಾಸ್ತವವಾಗಿ ಆಡಳಿತವನ್ನು ನಡೆಸಿಕೊಂಡು ಹೋಗುತ್ತಿದ್ದರು. ಸಮರ್ಥರೂ ಮೇಧಾವಿಗಳೂ, ದೂರದೃಷ್ಟಿಯುಳ್ಳವರೂ ಆಗಿದ್ದ ಅನೇಕ ದಿವಾನರುಗಳ ಆಳ್ವಿಕೆಯಲ್ಲಿ ಮೈಸೂರು ಸರ್ವತೋಮುಖಿಯಾದ ಪ್ರಗತಿಯನ್ನು ಸಾಧಿಸಿತು. ರಂಗಾಚಾರ್ಲು, ಶೇಷಾದ್ರಿ ಅಯ್ಯರ್, ವಿಶ್ವೇಶ್ವರಯ್ಯ ಮತ್ತು ಮಿರ್ಜಾ ಇಸ್ಮಾಯಿಲ್ ಅವರಂಥ ಕೆಲವು ಮಂದಿ ದಿವಾನರು ಗಮನಾರ್ಹ ಪ್ರಮಾಣದಲ್ಲಿ ಅಧಿಕಾರವನ್ನು ಚಲಾಯಿಸಿದ್ದು ಮಾತ್ರವಲ್ಲದೆ, ಹೊಸ ಹಾದಿಯಲ್ಲಿ ಮೈಸೂರು ವಿಕಾಸವನ್ನು ಸಾಧಿಸಲೂ ಕಾರಣರಾದರು. ಅಷ್ಟೇ ಅಲ್ಲ, ವಿಕಾಸ ಅಥವಾ ಅಭಿವೃದ್ಧಿಯ ಒಂದು "ಮೈಸೂರು ಮಾದರಿ" ಯೇ ರೂಪುಗೊಂಡಿತ್ತೆಂದು ಹೇಳಬಹುದು.

ಹೊಸ ಆಡಳಿತ ವ್ಯವಸ್ಥೆ ಎದುರಿಸಬೇಕಾಗಿ ಬಂದ ಮೊದಮೊದಲಿನ ಸಮಸ್ಯೆಗಳಲ್ಲಿ ಕ್ಷಾಮ ನಿಯಂತ್ರಣವೂ ಒಂದಾಗಿತ್ತೆಂಬುದು ಮಹತ್ವದ ಸಂಗತಿಯಾಗಿದೆ. ಕೆರೆಯ ಪಾತ್ರದ ಹೂಳನ್ನು ತೆಗೆಯುವುದು, ತಕಾವಿ ಸಾಲಗಳನ್ನು ಮಂಜೂರು ಮಾಡುವುದು–ಇವೇ ಮೊದಲಾದ ಅಲ್ಪಾವಧಿ ಕಾರ್ಯಕ್ರಮಗಳನ್ನು ಕೈಗೊಂಡದ್ದು ಮಾತ್ರವಲ್ಲದೆ, ಕೆಲವೊಂದು ದೀರ್ಘಾವಧಿ ಕಾರ್ಯಕ್ರಮಗಳನ್ನೂ ಕೈಗೊಳ್ಳಲಾಯಿತು. ೧೮೮೧ರಲ್ಲಿ ಪ್ರಜಾಪ್ರತಿನಿಧಿ ಸಭೆಯನ್ನುದ್ದೇಶಿಸಿ ದಿವಾನರು ಹೀಗೆಂದು ಹೇಳಿದರು: "ಸಂರಕ್ಷಣೆಯ ಕ್ರಮಗಳಲ್ಲಿ ಮೊದಲ ಸ್ಥಾನ ದೊರೆಯುವುದು, ನಿಸ್ಸಂದೇಹವಾಗಿ ನೀರಾವರಿಯ ಕಾರ್ಯಗಳಿಗೆ." ಈ ಮಾತಿಗೆ ಅನುಗುಣವಾಗಿ, ನೀರಾವರಿಯ ಬಗೆಗಿನ ವೆಚ್ಚವನ್ನು ಗಮನಾರ್ಹವಾಗಿ ಹೆಚ್ಚಿಸಲಾಯಿತು. ಹಲವಾರು ಅಧೋರಚನೆಗಳ ವಿಕಾಸಕ್ಕೂ ನಾಂದಿಯಾಯಿತು. ಶಿವನ ಸಮುದ್ರದ ಬಳಿಯ ಕಾವೇರಿಯ ಜಲಪಾತವನ್ನು ಬಳಸಿಕೊಂಡು ೧೯೦೨ರಲ್ಲಿ ಮೊಟ್ಟ ಮೊದಲ ಜಲ ವಿದ್ಯುತ್ ಯೋಜನೆಯನ್ನು ಆರಂಭಿಸಲಾಯಿತು. ರೈಲು ಮಾರ್ಗದ ಜಾಲಕ್ಕೆ ಮೈಸೂರು ಸಂಸ್ಥಾನವೂ ಒಳಪಟ್ಟಿತು. ರಸ್ತೆಗಳ ಉದ್ದ ಹೆಚ್ಚಿತು. ವಿಶ್ವೇಶ್ವರಯ್ಯನವರು (೧೯೧೨–೧೮) ಮೈಸೂರನ್ನು ಆಧುನಿಕ ಭಾರತದ ನಕ್ಷೆಯಲ್ಲಿ ಇರಿಸುವಂಥ ಅಭಿವೃದ್ಧಿ ತಂತ್ರವೊಂದನ್ನು ಆರಂಭಿಸಿದರು. ವಿಕಾಸ ಅಥವಾ ಅಭಿವೃದ್ಧಿಯ ಮೂರು ಕ್ಷೇತ್ರಗಳ ಮೇಲೆ–ಅಂದರೆ ಶಿಕ್ಷಣ, ಕೈಗಾರಿಕೀಕರಣ ಹಾಗೂ ಹಳ್ಳಿಗಳ ಆಧುನಿಕೀಕರಣದ ಮೇಲೆ ಅವರು ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆಗೂ ಅವರು ಕಾರಣರಾದರು. ಇದು ವಾಸ್ತವವಾಗಿ ಭಾರತೀಯ ಸಂಸ್ಥಾನವೊಂದರಲ್ಲಿ ಸ್ಥಾಪಿತವಾದ ಮೊಟ್ಟಮೊದಲನೆಯ ವಿಶ್ವವಿದ್ಯಾನಿಲಯವಾಗಿತ್ತು. ಆರ್ಥಿಕ ಕ್ಲೇಶಗಳಿಗೆಲ್ಲ ವಿದ್ಯಾಭ್ಯಾಸವೇ ದಿವ್ಯೌಷಧವೆಂದು ಅವರು ಪರಿಗಣಿಸಿದ್ದರು. ಗಂಧದೆಣ್ಣೆ ಕಾರ್ಖಾನೆ, ಮೈಸೂರು ಸಾಬೂನು ಕಾರ್ಖಾನೆ, ಕಬ್ಬಿಣ ಮತ್ತು ಮರದ ಬಟ್ಟಿ ಇಳಿಸುವ ಯಂತ್ರಗಳು– ಈ ಹೊಸ ಕೈಗಾರಿಕೆಗಳ ಸ್ಥಾಪನೆಯೊಂದಿಗೆ ಮೈಸೂರು ಕೈಗಾರಿಕೀಕರಣದ ಹಾದಿಯಲ್ಲಿ ಹೆಜ್ಜೆ ಹಾಕತೊಡಗಿತು. ಮಿರ್ಜಾ ಇಸ್ಮಾಯಿಲ್ ಅವರ ಕಾಲದಲ್ಲಿ ಮೈಸೂರು ಮತ್ತಷ್ಟು ಕೈಗಾರಿಕಾಭಿವೃದ್ಧಿಯನ್ನು ಕಂಡಿತು. ಭಾರತದ ಮೊಟ್ಟಮೊದಲ ಸ್ವತಂತ್ರ ಗೊಬ್ಬರ ಕಾರ್ಖಾನೆಯನ್ನು ಬೆಳಗೊಳದಲ್ಲಿ ೧೯೩೮ರಲ್ಲಿ ಸ್ಥಾಪಿಸಲಾಯಿತು. ಈ ಕಾರ್ಖಾನೆ ಅಮೋನಿಯಮ್ ಸಲ್ಫೇಟನ್ನು ಉತ್ಪಾದಿಸತೊಡಗಿತು. ೧೯೪೦ರ ಹೊತ್ತಿಗೆ ಮೈಸೂರು ಸಂಸ್ಥಾನ ಉಕ್ಕು, ಸಿಮೆಂಟ್, ಕಾಗದ ಮತ್ತು ರಾಸಾಯನಿಕಗಳನ್ನು ಉತ್ಪಾದಿಸತೊಡಗಿತ್ತು. ಶುದ್ಧ ವಸಾಹತು ಸ್ವರೂಪ ಆರ್ಥಿಕತೆಯ ಮೈಸೂರು ಕೈಗಾರಿಕಾ ರಾಜ್ಯವಾಗಿ ಹೊಮ್ಮಿತು.

೧೯೪೭ರ ಭಾರತೀಯ ಸ್ವಾತಂತ್ರ್ಯ ಅಧಿನಿಯಮದೊಂದಿಗೆ ಭಾರತದ ಎಲ್ಲ ದೇಶೀಯ ಸಂಸ್ಥಾನಗಳೂ ಪ್ರತ್ಯೇಕ ಅಸ್ತಿತ್ವದ ಸ್ವತಂತ್ರ ಘಟಕಗಳಾದುವು. ಕಾಲ ಪ್ರವಾಹದೊಂದಿಗೆ ಹೆಜ್ಜೆ ಹಾಕಿದ ಮೈಸೂರಿನ ಮಹಾರಾಜರು ಭಾರತ ಸರ್ಕಾರ ಅನುಸರಿಸಿದ ಏಕೀಕರಣ ನೀತಿಯನ್ನು ಅನುಮೋದಿಸಿದರು. ಹೀಗಾಗಿ, ೧೯೪೭ರ ಅಗಸ್ಟ್ ೧೫ರಂದು ಮೈಸೂರು ರಾಜ್ಯ ಭಾರತ ಪ್ರಭುತ್ವದ ಅಂಗವಾಗಿ ಸೇರಿಕೊಂಡಿತು. ೧೯೪೯ರ ನವೆಂಬರ್ ೨೫ರಂದು ಹೊರಡಿಸಿದ ಘೋಷಣೆಯಲ್ಲಿ, ಸಂವಿಧಾನ ರಚನಾ ಸಭೆ ಅಂಗೀಕರಿಸಲಿರುವ ಭಾರತದ ಸಂವಿಧಾನವೇ, ಭಾರತದ ಇನ್ನಿತರ ಭಾಗಗಳಿಗೆ ಸಂಬಂಧಿಸಿದಂತೆ, ಮೈಸೂರು ರಾಜ್ಯದ ಸಂವಿಧಾನವೂ ಆಗಿರುತ್ತದೆಂದು ಮಹಾರಾಜರು ಆದೇಶ ಹೊರಡಿಸಿದರು. ೧೯೫೦ರ ಜನವರಿ ೨೬ರಂದು ಮೈಸೂರು ರಾಜ್ಯವೂ ಭಾರತೀಯ ಒಕ್ಕೂಟದ ಸಂಯುಕ್ತ ಘಟಕಗಳಲ್ಲಿ ಒಂದಾಯಿತು. ೧೯೪೯ರ ಅಗಸ್ಟ್ ತಿಂಗಳಿನಲ್ಲಿ ದಿವಾನ್ ಹುದ್ದೆಯನ್ನು ರದ್ದುಗೊಳಿಸಲಾಯಿತು. ೧೯೫೧ರಲ್ಲಿ ಮಹಾರಾಜರು ಮೈಸೂರು ರಾಜ್ಯದ ಗವರ್ನರ್ ಅಥವಾ ರಾಜಪ್ರಮುಖರಾಗಿ ನೇಮಕಗೊಂಡರು ಹಾಗೂ ೧೯೫೬ರ ವರೆಗೆ ಆ ಹುದ್ದೆಯಲ್ಲಿ ಮುಂದುವರಿದರು. ೧೯೫೬ರಲ್ಲಿ ರಾಜ್ಯಗಳ ಭಾಷಾನುಗುಣ ಪುನರ್ ವಿಂಗಡಣೆ ನಡೆದಾಗ ನೆರೆಯ ರಾಜ್ಯಗಳಾದ ಮದ್ರಾಸ್, ಹೈದರಾಬಾದ್, ಆಂಧ್ರಪ್ರದೇಶ ಮತ್ತು ಮುಂಬಯಿಯ ಕನ್ನಡ ಮಾತಾಡುವ ಪ್ರದೇಶಗಳನ್ನು ಹಾಗೂ ಕೊಡಗು ರಾಜ್ಯವನ್ನು, ಮೈಸೂರು ರಾಜ್ಯದಲ್ಲಿ ವಿಲೀನಗೊಳಿಸಲಾಯಿತು ಹಾಗೂ ಕರ್ನಾಟಕ ರಾಜ್ಯದ ಉದಯವಾಯಿತು. ವಿಶಾಲ ಪ್ರದೇಶ ಹಾಗೂ ಹೆಚ್ಚಿನ ಜನ ಸಂಖ್ಯೆಯನ್ನು ಹೊತ್ತು ತಂದ ರಾಜ್ಯದ ಪುನರ್ವಿಂಗಡಣೆ ಹಲವಾರು ಆಡಳಿತಾತ್ಮಕ ಸಮಸ್ಯೆಗಳನ್ನೂ ತಂದಿತು. ಹೊಸ ರಾಜ್ಯ ವಿವಿಧ ಪ್ರದೇಶಗಳ ವಿವಿಧ ಆಡಳಿತ ವ್ಯವಸ್ಥೆಗಳನ್ನು ಬಳುವಳಿಯಾಗಿ ಪಡೆದಿತ್ತು. ಕಾನೂನುಗಳು, ನಿಯಮಗಳು, ವಿನಿಯಮಗಳು ಸರ್ಕಾರಿ ನೌಕರರ ವೇತನ ಶ್ರೇಣಿಗಳು ಹಾಗೂ ಸೇವಾನಿಯಮಗಳು ಹಾಗೂ ಸ್ಥಳೀಯ ಆಡಳಿತ ಪದ್ಧತಿಗಳು ಇವುಗಳಲ್ಲಿ ಸ್ಥಳೀಯ ಏಕರೂಪತೆಯನ್ನು ತರುವುದು ಸುಲಭದ ಕೆಲಸವೇನೂ ಆಗಿರಲಿಲ್ಲ. ಈ ಸಮಸ್ಯೆಗಳನ್ನು ಹಾಗೂ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದೇವೆ ಎಂಬುದು ಆಡಳಿತಾಂಗಕ್ಕೆ ಕೀರ್ತಿಯನ್ನು ತಂದು ಕೊಟ್ಟಿರುವ ಸಂಗತಿ.

ಭಾರತ ಸಂವಿಧಾನದ ಅವಕಾಶಗಳಿಗೆ ಅನುಗುಣವಾಗಿ ಕರ್ನಾಟಕದಲ್ಲಿ ಇಂದು ಆಡಳಿತ ನಡೆಯುತ್ತಿದೆ. ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳು ಸಂಸದೀಯ ಪ್ರಜಾಸತ್ತೆಯ ಮೂರು ಸ್ತಂಭಗಳೆಂದು ಹೇಳಲಾಗಿದೆ. ಕರ್ನಾಟಕದಲ್ಲಿ ದ್ವಿಸದನ ಶಾಸಕಾಂಗ ವ್ಯವಸ್ಥೆಯಿದೆ– ಇವುಗಳ ಪೈಕಿ ವಿಧಾನ ಸಭೆಯಲ್ಲಿ ೨೨೪ ಮಂದಿ ಸದಸ್ಯರು ವಿಧಾನ ಪರಿಷತ್ತಿನಲ್ಲಿ ೭೫ ಮಂದಿ ಸದಸ್ಯರೂ ಇದ್ದಾರೆ. ರಾಜ್ಯದ ಕಾರ್ಯಾಂಗದಲ್ಲಿ ರಾಜ್ಯಪಾಲರು ಸಂವಿಧಾನಾತ್ಮಕ ಪ್ರಥಮರಾಗಿದ್ದು, ರಾಜ್ಯದ ವಿಧಾನಮಂಡಲದ ಸದಸ್ಯರನ್ನೊಳಗೊಂಡಿರುವ ಮಂತ್ರಿ ಮಂಡಲವೊಂದಿರುತ್ತದೆ. ಮುಖ್ಯಮಂತ್ರಿಯ ನೇತೃತ್ವ ಹೊಂದಿರುವ ಮಂತ್ರಿ ಮಂಡಲ ರಾಜ್ಯಪಾಲರಿಗೆ ಅವರ ಕರ್ತವ್ಯ ನಿರ್ವಹಣೆಯಲ್ಲಿ ನೆರವಾಗುತ್ತದೆ. ಹಾಗೂ ಸಲಹೆ ನೀಡುತ್ತದೆ. ರಾಜ್ಯದ ವಿಧಾನಸಭೆಗೆ ಮಂತ್ರಿ ಮಂಡಲ ಸಾಮೂಹಿಕವಾಗಿ ಜವಾಬ್ದಾರವಾಗಿರುತ್ತದೆ. ರಾಜ್ಯದ ನ್ಯಾಯಾಂಗ ಉಚ್ಚ ನ್ಯಾಯಾಲಯವನ್ನು ಹಾಗೂ ಜಿಲ್ಲೆ ನ್ಯಾಯಾಲಯ, ಸಿವಿಲ್ ನ್ಯಾಯಾಲಯ ಮತ್ತು ಮುನ್ಸೀಫ್ ಮ್ಯಾಜಿಸ್ಟ್ರೇಟರ ನ್ಯಾಯಾಲಯಗಳಂಥ ಅಧೀನ ನ್ಯಾಯಾಲಯಗಳನ್ನು ಹೊಂದಿದೆ. ರಾಜ್ಯದ ಆಡಳಿತ ಯಂತ್ರ ಸಚಿವಾಲಯ, ಕ್ಷೇತ್ರ ಇಲಾಖೆಗಳು, ಪ್ರಾದೇಶಿಕ ಅಥವಾ ವಿಭಾಗೀಯ ಘಟಕಗಳು ಹಾಗೂ ಜಿಲ್ಲೆ, ಉಪವಿಭಾಗ, ತಾಲ್ಲೂಕು ಮತ್ತು ಗ್ರಾಮ ಮಟ್ಟದ ಸಂಘಟನೆಗಳನ್ನು ಹೊಂದಿದೆ. ಸಚಿವಾಲಯವು ಮುಖ್ಯಮಂತ್ರಿಗಳ ಹಾಗೂ ಇತರ ಮಂತ್ರಿಗಳ ಕಛೇರಿ. ನೀತಿ ನಿರೂಪಣೆಯಲ್ಲಿ ಹಾಗೂ ಅತ್ಯುಚ್ಚ ಮಟ್ಟದಲ್ಲಿ ತೀರ್ಮಾನಗಳನ್ನು ಕೈಗೊಳ್ಳುವಲ್ಲಿ ಅದು ಸಂಪುಟಕ್ಕೆ ನೆರವಾಗುತ್ತದೆ. ಕ್ಷೇತ್ರ ಮಟ್ಟದ ಅಧಿಕಾರಿಗಳಿಗೆ ಅದು ಆದೇಶಗಳನ್ನು, ಸೂಚನೆಗಳನ್ನು, ಮಾರ್ಗದರ್ಶನವನ್ನು ಕೊಡು

ತ್ತದೆ. ಸಚಿವಾಲಯ ಮುಖ್ಯ ಕಾರ್ಯದರ್ಶಿಯನ್ನು ಹಾಗೂ ವಿವಿಧ ಇಲಾಖೆಗಳಿಗೆ, ಸಂಬಂಧಿಸಿದ ಸರ್ಕಾರಿ ಕಾರ್ಯದರ್ಶಿಗಳನ್ನು ಒಳಗೊಂಡಿರುತ್ತದೆ.

ಸರ್ಕಾರ ಹಾಕಿ ಕೊಟ್ಟ ನೀತಿಗಳನ್ನು ಸಚಿವಾಲಯದ ಹೊರಗಿನ ಕ್ಷೇತ್ರ ಇಲಾಖೆಗಳು ಕಾರ್ಯರೂಪಕ್ಕೆ ತರುತ್ತವೆ. ಈ ಇಲಾಖೆಗಳನ್ನು ಸ್ಥೂಲವಾಗಿ ಎರಡು ವರ್ಗಗಳಾಗಿ ವಿಂಗಡಿಸಬಹುದು: ಆಡಳಿತದ ನಿಯಮಕ ಮುಖಗಳೊಡನೆ ವ್ಯವಹರಿಸುವ ಒಂದು ವರ್ಗ. ಅಭಿವೃದ್ಧಿ ಮುಖದೊಡನೆ ವ್ಯವಹರಿಸುವ ಇನ್ನೊಂದು ವರ್ಗ. ಕಾನೂನು ಮತ್ತು ಶಾಂತಿ ಪಾಲನೆಯ ಕರ್ತವ್ಯವನ್ನು ನಿರ್ವಹಿಸುವಂಥ ಪೋಲೀಸು ಇಲಾಖೆಯನ್ನೂ, ಕಂದಾಯ, ಅಬಕಾರಿ, ವಾಣಿಜ್ಯ ತೆರಿಗೆಯಂಥ, ಕಾನೂನು ಜಾರಿಗೆ ಕೊಡುವ ಹಾಗೂ ರಾಜ್ಯಾದಾಯವನ್ನು ಸಂಗ್ರಹಿಸುವಂಥ ಇಲಾಖೆಗಳನ್ನೂ ಮೊದಲನೆಯ ವರ್ಗ ಒಳಗೊಂಡಿದೆ. ಈಚಿನ ದಿನಗಳಲ್ಲಿ, ಆಡಳಿತ ಅಭಿವೃದ್ಧಿ ಮುಖ ಹೆಚ್ಚಿನ ಮಹತ್ವ ಪಡೆದುಕೊಂಡಿದೆ. ಹೀಗಾಗಿ ಈ ವರ್ಗದಲ್ಲಿ ಕೃಷಿ, ಪಶು ಸಂಗೋಪನ, ಲೋಕೋಪಯೋಗಿ ಕಾರ್ಯಗಳು, ಅರಣ್ಯ, ಕೈಗಾರಿಕೆ ಮೊದಲಾದ ಇಲಾಖೆಗಳು ಸೇರುತ್ತವೆ. ಶಿಕ್ಷಣ, ಆರೋಗ್ಯ ಮತ್ತು ಸಮಾಜ ಕಲ್ಯಾಣ ಇಲಾಖೆಗಳು ಸಾಮಾಜಿಕ ಸೇವೆಯ ಹೊಣೆ ಹೊತ್ತಿವೆ. ಇವು ಇಂದು ಪ್ರಜಾಸತ್ತಾತ್ಮಕ ಸಮಾಜದಲ್ಲಿನ ಯಾವುದೇ ಆಡಳಿತ ವ್ಯವಸ್ಥೆಯ ಅನಿವಾರ್ಯ ಅಂಗಗಳಾಗಿವೆ.

ಪ್ರಾದೇಶಿಕವಾಗಿ ಈ ರಾಜ್ಯವನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಲಾಗಿದೆ. ಬೆಂಗಳೂರು ವಿಭಾಗ ಐದು ಜಿಲ್ಲೆಗಳನ್ನೂ, ಬೆಳಗಾಂ ವಿಭಾಗ ನಾಲ್ಕು ಜಿಲ್ಲೆಗಳನ್ನೂ ಗುಲ್ಬರ್ಗ ವಿಭಾಗ ನಾಲ್ಕು ಜಿಲ್ಲೆಗಳನ್ನೂ, ಮೈಸೂರು ವಿಭಾಗ ಆರು ಜಿಲ್ಲೆಗಳನ್ನೂ ಒಳಗೊಂಡಿದೆ. ಪ್ರತಿಯೊಂದು ವಿಭಾಗದ ಮೇಲ್ವಿಚಾರಣೆಗಾಗಿ ಒಬ್ಬೊಬ್ಬ ವಿಭಾಗಾಧಿಕಾರಿಯಿದ್ದಾರೆ. ಇತರ ಇಲಾಖೆಗಳಿಗೆ ಸಂಬಂಧಿಸಿದ ವಿಭಾಗೀಯ ಅಧಿಕಾರಿಗಳೂ ಇದ್ದಾರೆ. ಇಷ್ಟಾಗಿಯೂ, ಜಿಲ್ಲೆಯೇ ಆಡಳಿತದ ಮೂಲ ಘಟಕವಾಗಿದ್ದು, ಜಿಲ್ಲಾಧಿಕಾರಿ ಜಿಲ್ಲೆಯ ವರಿಷ್ಠರಾಗಿರುತ್ತಾರೆ. ಜಿಲ್ಲಾಧಿಕಾರಿಗಳ ಕಛೇರಿ ರಾಜ್ಯದಲ್ಲಿಯೇ ಒಂದು ವಿಶಿಷ್ಟ ಸಂಸ್ಥೆ. ಜಿಲ್ಲೆಯಲ್ಲಿ ಅವರಿಗೆ ಸಂಬಂಧವಿಲ್ಲದಿರುವಂಥ ಯಾವುದೇ ಒಂದು ಆಡಳಿತಾತ್ಮಕ ಮುಖವೂ ಇಲ್ಲ. ಕಾನೂನು ಮತ್ತು ವ್ಯವಸ್ಥೆ, ಭೂ ಆಡಳಿತ, ಜಿಲ್ಲೆಯ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿ, ಸ್ಥಳೀಯ ಸಂಸ್ಥೆಗಳು–ಇವೆಲ್ಲ ಅವರ ಕಾರ್ಯಚಟುವಟಿಕೆಗಳ ಕ್ಷೇತ್ರಗಳೇ ಆಗಿವೆ. ವಾಸ್ತವವಾಗಿ ಜಿಲ್ಲಾ ಹಂತದಲ್ಲಿ ಅವರು ಸರ್ಕಾರದ ಕಿವಿ ಮತ್ತು ಕಣ್ಣಾಗಿ ಇರುತ್ತಾರೆ. (ಜಿಲ್ಲೆ ಮತ್ತು ತಾಲ್ಲೂಕುಗಳ ನಡುವೆ ಉಪ ವಿಭಾಗದ ಒಂದು ಹಂತವಿದೆಯಾದರೂ) ಆಡಳಿತದ ಮುಂದಿನ ಮುಖ್ಯ ಘಟ್ಟವೆಂದರೆ ತಾಲ್ಲೂಕು. ತಹಶೀಲ್ದಾರರು ತಾಲ್ಲೂಕಿನ ಮೇಲ್ವಿಚಾರಕರಾಗಿರುತ್ತಾರೆ ಹಾಗೂ ತಾಲ್ಲೂಕಿನ ಹಂತದಲ್ಲಿ ಬಹುಪಾಲು ಇಲಾಖೆಗಳು ಆಯಾ ಇಲಾಖೆಯ ಅಧಿಕಾರಿಗಳಿಂದ ಪ್ರತಿನಿಧಿಸಲ್ಪಟ್ಟಿರುತ್ತವೆ. ಗ್ರಾಮದ ಹಂತದಲ್ಲಿ ಗ್ರಾಮ ಲೆಕ್ಕಿಗ ಮತ್ತು ಗ್ರಾಮಸೇವಕರಿರುತ್ತಾರೆ. ಗ್ರಾಮ ಲೆಕ್ಕಿಗ ಭೂಕಂದಾಯ ಮತ್ತು ಭೂಸಂಬಂಧವಾದ ವಿಚಾರಗಳನ್ನು ನೋಡಿಕೊಂಡರೆ, ಗ್ರಾಮಸೇವಕ ಅಭಿವೃದ್ಧಿ ಕಾರ್ಯಗಳತ್ತ ಗಮನ ಹರಿಸುತ್ತಾನೆ.

ಪ್ರಜಾಸತ್ತಾತ್ಮಕ ವಿಕೇಂದ್ರೀಕರಣದ ಆಶಯಕ್ಕನುಗುಣವಾಗಿ ಸ್ಥಳೀಯ ಹಂತದಲ್ಲಿಯೂ ಕರ್ನಾಟಕ ಪ್ರಜಾ–ಸಂಸ್ಥೆಗಳನ್ನು ನೆಲೆಗೊಳಿಸಿದೆ. ೧೯೫೯ರ ಮೈಸೂರು ಗ್ರಾಮ ಪಂಚಾಯಿತಿಗಳ ಅಧಿನಿಯಮ ಮೂರು ಹಂತದ ಆಡಳಿತ ವ್ಯವಸ್ಥೆಯನ್ನು ಜಾರಿಗೆ ಕೊಟ್ಟಿದೆ: ಗ್ರಾಮ ಪಂಚಾಯಿತಿ ಹಳ್ಳಿಗಳ ಸಮೂಹವನ್ನೊಳಗೊಂಡಿರುತ್ತದೆ; ತಾಲ್ಲೂಕು ಹಂತದಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಳಿ ಇರುತ್ತದೆ; ಜಿಲ್ಲೆಯ ಹಂತದಲ್ಲಿ ಜಿಲ್ಲಾಭಿವೃದ್ಧಿ ಪರಿಷತ್ತು ಇರುತ್ತದೆ. ಇದನ್ನು ಪಂಚಾಯಿತಿಗಳು ಮತ್ತು ತಾಲೂಕು ಮಂಡಳಿಗಳಿಂದ ಪರೋಕ್ಷವಾಗಿ ಆಯ್ದು ರಚಿಸಲಾಗಿರುತ್ತದೆ ಹಾಗೂ ಜಿಲ್ಲಾಧಿಕಾರಿಗಳು ಇದರ ಮುಖ್ಯಸ್ಥರಾಗಿರುತ್ತಾರೆ. ಈ ಸಂಸ್ಥೆಗಳು ಕೆಳ ಹಂತದ ಆಡಳಿತ ಪ್ರಕ್ರಿಯೆಯಲ್ಲಿ ಜನರು ಭಾಗಿಗಳಾಗುವುದಕ್ಕೆ ಅಗತ್ಯವಾದ ವೇದಿಕೆಯನ್ನು ಒದಗಿಸಿಕೊಡುತ್ತವೆ.

ಪುರಸಭಾ ಆಡಳಿತ ಕ್ಷೇತ್ರದಲ್ಲಿ ೧೯೬೪ರ ಕರ್ನಾಟಕ ಪುರಸಭೆಗಳ ಅಧಿನಿಯಮ ಹಾಗೂ ೧೯೭೬ರ ಕರ್ನಾಟಕ ಪೌರ–ನಿಗಮ ಅಧಿ ನಿಯಮಗಳು ರಾಜ್ಯದ ವಿವಿಧ ಭಾಗಗಳಲ್ಲಿ ಜಾರಿಯಲ್ಲಿದ್ದ ಬಹು ಸಂಖ್ಯೆಯ ಪುರಸಭಾ ನಿಯಮಗಳ ಸ್ಥಾನವನ್ನು ಆಕ್ರಮಿಸಿವೆ. ರಾಜ್ಯಾದ್ಯಂತ ಇಂದು ೨೪೫ ನಗರ ಪ್ರದೇಶದ ಸ್ಥಳೀಯ ಸಂಸ್ಥೆಗಳಿವೆ. ಈ ಸಂಖ್ಯೆಯಲ್ಲಿ ಆರು ನಿಗಮಗಳೂ ಸೇರಿವೆ. ಈ ಪುರಸಭಾ ಸಂಸ್ಥೆಗಳು ಪ್ರಜೆಗಳ ಪೌರ ವ್ಯವಹಾರಗಳನ್ನು ನೋಡಿಕೊಂಡರೆ, ದೊಡ್ಡ ಪಟ್ಟಣಗಳು ಮತ್ತು ನಗರಗಳ ವೃದ್ಧಿ ಮತ್ತು ಬೆಳವಣಿಗೆಯನ್ನು ನಗರಾಭಿವೃದ್ಧಿ ಮಂಡಳಿಗಳು ಹಾಗೂ ಬೆಂಗಳೂರಿನಲ್ಲಿ ಅಭಿವೃದ್ಧಿ ಪ್ರಾಧಿಕಾರ ನಿಯಂತ್ರಿಸುತ್ತವೆ. ನಗರೀಕರಣ ಹೆಚ್ಚುತ್ತ ಬರುತ್ತಿರುವ ಈ ದಿನಗಳಲ್ಲಿ ಈ ಸಂಸ್ಥೆಗಳು ನಿರ್ವಹಿಸುತ್ತಿರುವ ಪಾತ್ರ ಹೆಚ್ಚು ಹೆಚ್ಚು ಮಹತ್ವವನ್ನು ಪಡೆದುಕೊಳುತ್ತಲಿದೆ. ಕರ್ನಾಟಕದಲ್ಲಿ ನಗರಗಳಲ್ಲಿನ ಜನಸಂಖ್ಯೆ ೧೯೭೧ರಲ್ಲಿ ೫೧.೬ ಲಕ್ಷವಿದ್ದುದು ೧೯೮೧ರಲ್ಲಿ ೧೦೭ ಲಕ್ಷದಷ್ಟಾಗಿದೆ ಎಂಬುದನ್ನು ಇಲ್ಲಿ ಗಮನಿಸಬಹುದು.

ವಿವಿಧ ಕ್ಷೇತ್ರಗಳಲ್ಲಿ ಕರ್ನಾಟಕ ಸಾಧಿಸಿರುವ ತೀವ್ರವಾದ ಪ್ರಗತಿ ಆಡಳಿತಕ್ಕೆ ಹೊಸ ಸವಾಲುಗಳನ್ನೊಡ್ಡಿದೆ. ಒಂದೆಡೆ ಖಾಸಗಿ ಸಾಹಸೋದ್ಯಮಕ್ಕೆ ಪ್ರೋತ್ಸಾಹ ನೀಡುತ್ತಿರುವುದರ ಜೊತೆಗೆ, ಇನ್ನೊಂದೆಡೆ ಕೈಗಾರಿಕಾಭಿವೃದ್ಧಿಯ ಕ್ಷೇತ್ರದಲ್ಲಿ ರಾಜ್ಯ ಮಹತ್ವದ ಪಾತ್ರವನ್ನು ನಿರ್ವಹಿಸುತ್ತಿದೆ. ಸರ್ಕಾರಿ ವಲಯದಲ್ಲಿ ಹಲವಾರು ಉದ್ಯಮಗಳು ತಲೆಯತ್ತಿವೆ. ಹಾಗೂ ಇವು ವಿದ್ಯುತ್ ಉಪಕರಣಗಳು, ಕಾಗದ ಮೊದಲಾದ ಅನೇಕ ಪ್ರಮುಖ ಕ್ಷೇತ್ರಗಳನ್ನು ಆವರಿಸಿಕೊಂಡಿವೆ. ರಸ್ತೆ ಸಾರಿಗೆ, ನಾಗರಿಕ ಸರಬರಾಜು, ಗೃಹ ನಿರ್ಮಾಣ, ಕ್ಷೀರೋತ್ಪನ್ನಗಳು ಮೊದಲಾದುವುಗಳ ಕ್ಷೇತ್ರದಲ್ಲಿ ಜನರಿಗೆ ಸೇವೆ ಸಲ್ಲಿಸುವ ದೃಷ್ಟಿಯಿಂದ ನಿಗಮಗಳನ್ನು ಸ್ಥಾಪಿಸಲಾಗಿದೆ. ರಾಜ್ಯದ ತೀವ್ರತರ ಹಾಗೂ ಕ್ರಮಬದ್ಧ ಪ್ರಗತಿಗೆ ನೆರವಾಗುವ ದೃಷ್ಟಿಯಿಂದ ಈ ಸರ್ಕಾರಿ ವಲಯದ ಉದ್ಯಮಗಳ ನಿರ್ವಹಣೆ ಹೆಚ್ಚು ಪ್ರಾಮುಖ್ಯ ಗಳಿಸುತ್ತ ಬಂದಿದೆ.

ಕೊನೆಯದಾಗಿ ನೀತಿ ಮತ್ತು ತೀರ್ಮಾನಗಳನ್ನು ಕಾರ್ಯರೂಪಕ್ಕೆ ತರುವ ಆಡಳಿತ ಯಂತ್ರವಾದ ಪ್ರಶಾಸನ ಸೇವಾ ವಿಭಾಗದ ಬಗೆಗೆ ಒಂದು ಮಾತನ್ನು ಹೇಳಬೇಕಾಗಿದೆ. ಕರ್ನಾಟಕದ ಪ್ರಶಾಸನ ಸೇವಾ ವಿಭಾಗಕ್ಕೆ ಸುದೀರ್ಘವಾದ ಪರಂಪರೆಯೊಂದಿದೆ. ಆಡಳಿತದಲ್ಲಿನ ಉನ್ನತ ಹುದ್ದೆಗಳನ್ನು ತುಂಬುವ ಸಲುವಾಗಿ ಅರ್ಹರೂ ಪ್ರತಿಭಾವಂತರೂ ಆದ ತರುಣರನ್ನು ಆಯ್ದುಕೊಳ್ಳುವ ಸಲುವಾಗಿ ಕಳೆದ

ಶತಮಾನದ ಕೊನೆಯ ಹೊತ್ತಿಗಾಗಲೇ ನಮ್ಮ ರಾಜ್ಯ ಯೋಜನೆಯೊಂದನ್ನು ಜಾರಿಗೆ ತಂದಿತ್ತು. ೧೯೫೨ರಿಂದಲೇ ಪ್ರಶಾಸನಾ ಸೇವಾ ಸಂಬಂಧವಾದ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸಿಕೊಂಡು ಬರಲಾಗುತ್ತಿದೆ. "ಮೈಸೂರು ಪ್ರಶಾಸನ ಸೇವೆ"ಯ ಸ್ಥಾನವನ್ನೀಗ "ಕರ್ನಾಟಕ ಆಡಳಿತ ಸೇವೆ"ಯ ಅಧಿಕಾರಿಗಳು ತುಂಬುತ್ತಾರಾದರೂ, ಕರ್ನಾಟಕ ಆಡಳಿತ ಸೇವೆ ಮತ್ತಿತರ ಆ ಸಂಬಂಧವಾದ ಸೇವಾ ವಿಭಾಗಗಳು ವಾಸ್ತವವಾಗಿ ರಾಜ್ಯದ ಆಡಳಿತದ ಬೆನ್ನೆಲುಬುವಾಗಿವೆಯೆಂದೇ ಹೇಳಬೇಕು. ಆಡಳಿತ ಸೇವಾ ವಿಭಾಗದ ಸದಸ್ಯರ ಸೇವೆಯ ಜೊತೆಗೆ ಸರ್ಕಾರ, ಈಚೆಗೆ, ತನ್ನ ನೀತಿಗಳನ್ನು ರೂಪಿಸುವಲ್ಲಿ ಅರ್ಥಶಾಸ್ತ್ರ, ವಿಜ್ಞಾನ ಮತ್ತು ತಂತ್ರವಿದ್ಯೆಯಂಥ ಹಲವಾರು ಕ್ಷೇತ್ರಗಳಲ್ಲಿನ ತಜ್ಞರ ಸೇವೆಯನ್ನೂ ಬಳಸಿಕೊಳ್ಳುತ್ತಿದೆ. ಈ ರಾಜ್ಯದಲ್ಲಿನ ಸರ್ಕಾರಿ ಸೇವಾ ಸೇರ್ಪಡೆಯ ಬಗ್ಗೆ ಉಲ್ಲೇಖಾರ್ಹವಾಗಿರುವ ಮತ್ತೊಂದು ಸಂಗತಿಯೆಂದರೆ ಸರ್ಕಾರಿ ಸೇವೆಯಲ್ಲಿ ವಿವಿಧ ಸಮುದಾಯಗಳಿಗೆ ಒದಗಿಸಿಕೊಟ್ಟಿರುವ ಪ್ರಾತಿನಿಧ್ಯ. ೧೯೧೮ರಿಂದ ಈಚೆಗೆ ಸರ್ಕಾರ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ವಿಷಯದಲ್ಲಿ ಹೆಚ್ಚಿನ ಒಲವು ತೋರುತ್ತ ಬಂದಿದೆ.

ಕಾನೂನು ಮತ್ತು ವ್ಯವಸ್ಥೆಯ ಪಾಲನೆ ಹಾಗೂ ತೆರಿಗೆಗಳ ವಸೂಲಿಯ ಕಾರ್ಯಗಳಲ್ಲೇ ಆಡಳಿತಾಧಿಕಾರಿಗಳು ಮುಳುಗಿ ಹೋಗಿರುತ್ತಿದ್ದ ಕಾಲದಿಂದ ಹಿಡಿದು, ಆಧುನಿಕ ನಾಗರಿಕ ಸಮಾಜದಲ್ಲಿ ನಿರೀಕ್ಷಿಸಲಾಗುವಂಥ ಪರಿಸ್ಥಿತಿಗಳನ್ನು ಒದಗಿಸುವ ಅಥವಾ ಸೃಷ್ಟಿಸುವ ಹೊಣೆಯನ್ನು ಆಡಳಿತ ತಾನೇ ಹೊತ್ತುಕೊಂಡಿರುವಂಥ ನೆಲೆಗೆ ನಾವೀಗ ಬಂದು ತಲುಪಿದ್ದೇವೆ. ಸಾರಿಗೆ, ಗೃಹ ನಿರ್ಮಾಣ, ಆರೋಗ್ಯ ಪಾಲನೆ ಮತ್ತು ಶಿಕ್ಷಣ ಸೌಲಭ್ಯಗಳನ್ನು ಒದಗಿಸುವಲ್ಲಿ ಪ್ರಧಾನ ಪಾತ್ರ ವಹಿಸುತ್ತಿರುವುದರ ಜೊತೆಗೆ ಕೃಷಿ, ಕೈಗಾರಿಕೆ ಮತ್ತು ಉದ್ಯೋಗಗಳ ಕ್ಷೇತ್ರದಲ್ಲಿಯೂ ಅದು ಒತ್ತಾಸೆಯನ್ನು ನೀಡುತ್ತ ಬಂದಿದೆ. ಸಮಾಜದ ದುರ್ಬಲ ವರ್ಗಗಳ–ಅದರಲ್ಲಿಯೂ ಅನುಸೂಚಿತ ಜಾತಿ ಮತ್ತು ಅನುಸೂಚಿತ ವರ್ಗಗಳ–ಉತ್ಥಾನದ ಹೊಣೆಗಾರಿಕೆಯನ್ನು ರಾಜ್ಯ ತನ್ನದಾಗಿಸಿಕೊಂಡಿದೆ. ಅಭಿವೃದ್ಧಿಯ ಚೌಕಟ್ಟು ಮತ್ತು ತಂತ್ರಗಳನ್ನು ಒದಗಿಸುವ ತನ್ನ ಪಂಚವಾರ್ಷಿಕ ಯೋಜನೆಗಳ ಮೂಲಕ ತನ್ನ ನಾಲ್ಕು ಕೋಟಿ ಪ್ರಜೆಗಳ ಜೀವನದ ಮಟ್ಟವನ್ನು, ಎತ್ತರಿಸಲು ರಾಜ್ಯ ಪ್ರಯತ್ನಿಸುತ್ತಿದೆ. ಆಧುನಿಕ ಕರ್ನಾಟಕವನ್ನು ಕಟ್ಟುವ ಹಾಗೂ ಬೃಹತ್ತರವಾದ ಕಾರ್ಯದಲ್ಲಿ, ಜನತೆಯ ಅಗತ್ಯಗಳ ಮತ್ತು ಆಶೋತ್ತರಗಳ ವಿಷಯದಲ್ಲಿ ಹೆಚ್ಚು ಹೆಚ್ಚು ಅನುಕ್ರಿಯಾತ್ಮಕವಾಗಿರಬೇಕಾಗಿ ಬಂದಿರುವ ಆಡಳಿತದ ಪಾತ್ರ ಅತ್ಯಂತ ಮಹತ್ವದ್ದಾಗಿದೆ.

**ಕನ್ನಡ ಅನುವಾದ: ಪ್ರಧಾನ ಗುರುದತ್ತ**

# ರಾಜ್ಯ ಭಾಷೆಯಾಗಿ ಕನ್ನಡ

ಜಯತೀರ್ಥ ರಾಜಪುರೋಹಿತ್

**ಭಾರತದಲ್ಲಿ ಇಂಗ್ಲಿಷ್**

"ಯಾವ ವಿದೇಶೀ ಭಾಷೆಯೂ ಮಾತೃಭಾಷೆಯ ಸ್ಥಾನವನ್ನು ಪಡೆಯಲಾರದು. ಸ್ವತಂತ್ರವಾದ ಆಲೋಚನಾ ಪದ್ಧತಿ, ಸಂಕೀರ್ಣವಾದ ಭಾವಗಳ ಸಹಜ ಹಾಗೂ ಖಚಿತವಾದ ಅಭಿವ್ಯಕ್ತಿ ಸಾಮರ್ಥ್ಯಗಳು ಮಾತೃಭಾಷೆಯಲ್ಲಿಯೇ ಬೆಳೆಯಲು ಸಾಧ್ಯ." ಇದು ಭಾರತೀಯ ಶಿಕ್ಷಣ ಮಾಧ್ಯಮದ ವಿಚಾರವಾಗಿ ವಿದೇಶೀಯನಾದ ಪ್ರೊಫೆಸರ್ ಎಚ್. ವೈ. ಲಾಂಗ್‌ಹಾರ್ನ್ ೧೯೨೭ರಷ್ಟು ಹಿಂದೆಯೇ ಹೇಳಿದ ಮಾತು. ಮಹಾತ್ಮ ಗಾಂಧಿಯವರು "ಭಾರತೀಯ ಮಗು ತನ್ನ ತಂದೆಗೆ ಇಂಗ್ಲಿಷಿನಲ್ಲಿ ಪತ್ರ ಬರೆಯುವುದನ್ನು ನೋಡಿದರೆ ನನ್ನ ಕಣ್ಣಿನಲ್ಲಿ ರಕ್ತಾಶ್ರುಗಳು ಸುರಿಯುತ್ತವೆ" ಎಂದು ಉಸುರಿದರು. ಇವು ಕೇವಲ ಭಾವೋದ್ವೇಗದ ಉದ್ಗಾರಗಳಲ್ಲ. ಭಾರತೀಯ ಶಿಕ್ಷಣ ಪದ್ಧತಿಯ ಬಗ್ಗೆ ಗಂಭೀರವಾಗಿ ಚಿಂತಿಸಿದ ಅನಂತರ ಕಂಡು ಕೊಂಡ ಸತ್ಯಾಂಶಗಳು. ಈ ಮಾತುಗಳು ಶಿಕ್ಷಣ ಮಾಧ್ಯಮದ ವಿಚಾರದಲ್ಲಿ ಹೇಳಿದುದಾದರೂ, ಆಡಳಿತ ಮಾಧ್ಯಮದ ಪ್ರಶ್ನೆಗೂ ಅಷ್ಟೇ ಅನ್ವಯವಾಗುತ್ತವೆ.

ನಮ್ಮಲ್ಲಿ ಅನೇಕರಿಗೆ ಈ ದೇಶದಲ್ಲಿ ಇಂಗ್ಲೀಷ್ ಪ್ರಾರಂಭ, ಬೆಳವಣಿಗೆ ಹಾಗೂ ಔಚಿತ್ಯಗಳ ಬಗ್ಗೆ ಸ್ಪಷ್ಟ ಕಲ್ಪನೆ ಮೂಡಿಸುವುದು ಅವಶ್ಯವಿದೆ. ಮೊದಲು ಈಸ್ಟ್ ಇಂಡಿಯ ಕಂಪನಿಯ, ಆಮೇಲೆ ಬ್ರಿಟಿಷ್ ಸರಕಾರದ ಆಡಳಿತಕ್ಕೆ ಅನುಕೂಲ ಮಾಡಿಕೊಡುವುದೇ ಇಂಗ್ಲಿಷ್ ಶಿಕ್ಷಣದ ಮುಖ್ಯ ಉದ್ದೇಶವಾಗಿತ್ತೆಂಬುದು ಈಗ ಸ್ಪಷ್ಟವಾಗಿರಲಿಕ್ಕೆ ಸಾಕು. ಹೀಗೆ ಇಂಗ್ಲಿಷ್ ಆಡಳಿತ ಭಾಷೆಯಾಗಬೇಕಾಯಿತಾದ ಕಾರಣ ಅದು ಶಿಕ್ಷಣ ಮಾಧ್ಯಮದ ಭಾಷೆಯೂ ಆಯಿತು. ಇದಕ್ಕಿಂತ ಹೆಚ್ಚಿನ ಮಹಾನ್ ಧ್ಯೇಯವೇನೂ ಇರಲಿಲ್ಲ.

ಹೀಗೆ ಹೇಳುವಾಗ ಇಂಗ್ಲಿಷ್ ಭಾಷೆಯ ಪರಿಚಯದಿಂದ ಈ ದೇಶದ ವಿದ್ಯಾವಂತರ ವಿಚಾರ ಸರಣಿಯಲ್ಲಿ ಆದ ಬದಲಾವಣೆ ಹಾಗೂ ವಿನೂತನ ಸಿದ್ಧಾಂತಗಳ ಪರಿಚಯದ ಲಾಭ ಮುಂತಾದುವುಗಳನ್ನು ಕಡೆಗಣಿಸಬೇಕಾಗಿಲ್ಲ. ಹಾಗೆಯೇ ಭಾಷಾ ಅಲ್ಪ ಸಂಖ್ಯಾತರನ್ನೂ ಮರೆಯಬೇಕಾಗಿಲ್ಲ. ಅಂತರ ರಾಜ್ಯ ಪತ್ರ ವ್ಯವಹಾರ, ಕೇಂದ್ರ ಹಾಗೂ ವಿದೇಶಿ ಸರಕಾರಗಳ ಜೊತೆಗೆ ಮಾಡುವ ಪತ್ರ ವ್ಯವಹಾರ ಸಹ ಕನ್ನಡದಲ್ಲಿಯೇ ನಡೆಯಬೇಕೆಂದು ಯಾರೂ ಹೇಳಲಾರರು. ಅದು ಅವ್ಯವಹಾರ್ಯವಾದೀತು. ಇದಲ್ಲದೆ ಅಂತಹ ವ್ಯವಹಾರ ಸಚಿವಾಲಯಮಟ್ಟದಲ್ಲಿ ಮಾತ್ರ ನಡೆಯುವಂಥದು. ನಾವಿಲ್ಲಿ ಚರ್ಚಿಸುತ್ತಿರುವುದು ಈ ರಾಜ್ಯದ ಆಂತರಿಕ ಆಡಳಿತ ಭಾಷೆಯ ವಿಚಾರ. ಇಂಗ್ಲಿಷೇ ಬೇಡವೆಂದು ಹೇಳುವ ಉದ್ದೇಶವೂ ಇದಾಗಿಲ್ಲ. ಇಂಗ್ಲಿಷ್ ಇರಬೇಕು. ಎಲ್ಲಿ ಇರಬೇಕು? ಎಷ್ಟಿರಬೇಕು? ಇವು ನಮ್ಮೆದುರಿಗಿರುವ ಪ್ರಸ್ತುತ ಪ್ರಶ್ನೆಗಳು.

ಬಾವಿ ತೋಡಲು ಸಾಲ ಕೇಳಿ ಹಾಕಿಕೊಂಡ ಅರ್ಜಿಗೆ ಉತ್ತರವಾಗಿ "ಯುವರ್ ಅಪ್ಲಿಕೇಶನ್ ಈಸ್ ರಿಜೆಕ್ಟೆಡ್" ಎಂಬ ಇಂಗ್ಲಿಷ್ ಹಿಂಬರಹವನ್ನು ನಮ್ಮ ರೈತ ಸ್ವೀಕರಿಸಬೇಕೆ? ಸಾಲವಂತೂ ಸಿಗಲಿಲ್ಲ. ಅದು ಸಿಗಲಿಲ್ಲವೆಂಬುದನ್ನು ತಿಳಿದುಕೊಳ್ಳಲು ಅವನು ಈ ಇಂಗ್ಲಿಷ್ ಪತ್ರ ಹಿಡಿದು ಅಲೆಯಬೇಕೆ? ಅಲೆಯಬಹುದಾಗಿತ್ತು, ನಮಗೆ ಸ್ವಾತಂತ್ರ್ಯ, ಪ್ರಜಾಸತ್ತಾತ್ಮಕ ವ್ಯವಸ್ಥೆಗಳು ಬಂದಿರದಿದ್ದರೆ, ಅದು ಅನಿವಾರ್ಯವಾಗಿರುತ್ತಿತ್ತು.

ಈ ದಿಕ್ಕಿನಲ್ಲಿ ಹೊರಟಾಗ ನಮಗೆ ಅಡೆತಡೆಗಳಿಲ್ಲವೆಂದಲ್ಲ. ಇಂಗ್ಲಿಷ್ ಬಿಟ್ಟರೆ ಹೇಗೆ ನಡೆದೀತು? ಎಲ್ಲರಿಗೂ ಸಹಜವಾಗಿ ತಿಳಿಯುವಂತೆ ಸರಕಾರೀ ವ್ಯವಹಾರ ನಡೆದುಬಿಟ್ಟರೆ ಕಚೇರಿಯ ಗಾಂಭೀರ್ಯ ಆಢ್ಯತೆಗಳ ಗತಿಯೇನು? ಇಷ್ಟೇ ಅಲ್ಲದೆ ಇಂದಿನ ಜಟಿಲವಾದ ಆಡಳಿತ ನಡೆಸುವಷ್ಟು ಮಟ್ಟಿಗೆ ಕನ್ನಡದಂಥ ದೇಶ ಭಾಷೆಗಳು ಎಲ್ಲಿ ಬೆಳೆದಿವೆ? ಎಂದೆಲ್ಲ ಕೇಳುವವರು ಹಿಂದೆಯೂ ಇದ್ದರು. ಈಗಲೂ ಇದ್ದಾರೆ. ಇಂಗ್ಲಿಷನ್ನು ಇಂಗ್ಲಿಷರಿಗಿಂತ ಸಮರ್ಥವಾಗಿ ಬಳಸಬಲ್ಲಂಥ ನೆಹರು, ರಾಜಾಜಿ, ಪಣಿಕ್ಕರ್, ಲೋಹಿಯಾ, ಸಿ. ಆರ್. ರೆಡ್ಡಿ, ಡಾ. ರಾಜೇಂದ್ರ ಪ್ರಸಾದರಂಥ ಜನನಾಯಕರೂ, ತಂತ್ರಜ್ಞರೂ ಇಂಥ ಸಂದೇಹವಾದಿಗಳಿಗೆ ಉತ್ತರ ಕೊಟ್ಟಿದ್ದಾರೆ. ಪ್ರಜಾತಂತ್ರದಲ್ಲಿ ಜನರ ಭಾಷೆಯೇ ಆಡಳಿತ ಭಾಷೆ.

ವಾಸ್ತವವಾಗಿ ನೋಡಿದರೆ ಆಡಳಿತ ಭಾಷೆಯ ಸಮಸ್ಯೆಯೊಂದು ಸಮಸ್ಯೆಯೇ ಅಲ್ಲ. ಇದು ನಾವಾಗಿ ಅಂದರೆ ಇಂಗ್ಲೀಷು ರೂಢಿಸಿಕೊಂಡು ಲಾಭಸ್ಥಾನಗಳಲ್ಲಿ ಇರುವ ಕೆಲವೇ ಜನರು, ಕನ್ನಡದಂಥ ರಾಜ್ಯ ಭಾಷೆಯ ಹಿನ್ನೆಲೆ, ಸಮೃದ್ಧಿ ಹಾಗೂ ಸಾಧ್ಯತೆಗಳನ್ನು ತಿಳಿಯದಿರುವ ಕೆಲವೇ ಜನರು ಹುಟ್ಟಿಸಿಕೊಂಡ ಸಮಸ್ಯೆಯಾಗಿದೆ. ಪ್ರಪಂಚದಲ್ಲಿ ಸಾರ್ವಜನಿಕರು ಆಡದಿರುವ ಭಾಷೆ ಆಡಳಿತ ಭಾಷೆಯಾಗಿ ಇರುವ ದೇಶ ಭಾರತವನ್ನು ಬಿಟ್ಟರೆ ಮತ್ತೊಂದಿಲ್ಲವೆಂದು ತೋರುತ್ತದೆ.

### ಕನ್ನಡದಲ್ಲಿ ಆಡಳಿತ ಪರಂಪರೆ

ಕರ್ನಾಟಕ ಪ್ರಾಚೀನ ಕಾಲದಿಂದಲೂ ಜನರಾಡುವ ಮಾತಿನಲ್ಲಿಯೇ ಆಡಳಿತವನ್ನು ನಡೆಸುತ್ತ ಬಂದಿದೆ. ಹಿಂದೆ ಕರ್ನಾಟಕದ ಭಾಗಗಳಾಗಿದ್ದು ಈಗ ಮಹಾರಾಷ್ಟ್ರ ಆಂಧ್ರ ಹಾಗೂ ತಮಿಳುನಾಡಿನಲ್ಲಿ ಸೇರಿದ ಭಾಗಗಳಲ್ಲಿ ಸಹ ಕನ್ನಡ ರಾಜ್ಯಭಾಷೆಯಾಗಿದ್ದು ಕನ್ನಡದ ಶಿಲಾಶಾಸನಗಳು ಸಿಗುತ್ತಿರುವುದೇ ಇದಕ್ಕೆ ನಿದರ್ಶನ. ಇಷ್ಟೇ ಅಲ್ಲದೆ ಕನ್ನಡ ರಾಜರ ಆಳ್ವಿಕೆಗೆ ಸೇರಿದ್ದ ತಮಿಳು ಮತ್ತು ಆಂಧ್ರ ಭಾಗಗಳಲ್ಲಿ ಅಲ್ಲಿಯ ಜನರ ಭಾಷೆಗಳಲ್ಲಿ ಶಿಲಾಶಾಸನಗಳನ್ನು ಕೆತ್ತಿಸಿ ಕೆಳಗೆ ಕನ್ನಡ ರುಜು ಮಾಡಿದ ಅರಸರ ಉದಾಹರಣೆಗಳೂ ಉಂಟು. ಅಂದರೆ ರಾಜ ಭಾಷೆ ಕನ್ನಡವಾಗಿದ್ದರೂ ಕನ್ನಡೇತರ ಪ್ರದೇಶ ಕನ್ನಡ ರಾಜರ ವಶಕ್ಕೆ ಬಂದಾಗ ಆ ಪ್ರದೇಶದ ಜನರ ಭಾಷೆಯೇ ಅಲ್ಲಿಯ ಆಡಳಿತ ಭಾಷೆಯೆಂದು ಬಳಕೆಯಾಗುತ್ತಿತ್ತು. ಕರ್ನಾಟಕದಲ್ಲಿ ಇದುವರೆಗೆ ದೊರೆತಿರುವ ಸುಮಾರು ಇಪ್ಪತ್ತೈದು ಸಾವಿರ ಶಾಸನಗಳಲ್ಲಿ ಶೇಕಡ ಎಂಬತ್ತಕ್ಕಿಂತ ಹೆಚ್ಚು ಶಾಸನಗಳು ಕನ್ನಡ ಲಿಪಿ ಹಾಗೂ ಭಾಷೆಯಲ್ಲಿ ಇವೆ. ಈ ಶಾಸನಗಳಲ್ಲಿ ಬರುವ ಆಡುಮಾತಿಗೆ ಸಮೀಪವಿರುವ ಕನ್ನಡ ಭಾಷೆ, ವಿವಿಧ ಮಟ್ಟದ ಅಧಿಕಾರ ಸ್ಥಾನಗಳ ಹೆಸರುಗಳು, ಭೂಮಿ, ಅಳತೆ, ತೆರಿಗೆ, ನಾಣ್ಯ, ವಾಣಿಜ್ಯ, ದತ್ತಿ ಜಲಾಶಯ, ಧರ್ಮಶಾಲೆ, ದೇವಾಲಯ, ಅಪರಾಧ, ಶಿಕ್ಷೆ, ಅನುಗ್ರಹ ಇತ್ಯಾದಿ ವ್ಯವಸ್ಥೆಗಳಿಗೆ ಸಂಬಂಧಿಸಿದ ವಿಧಿ-ನಿಷೇಧ ಸೂಚಿಸುವ ಪದಸಮೂಹಗಳನ್ನು ನಮ್ಮ ಕಚೇರಿಯ ಜನ ಅರಿತಾಗ ಆಡಳಿತ ಭಾಷೆಯಾಗಲು ಕನ್ನಡಕ್ಕಿರುವ ಸಾಮರ್ಥ್ಯದ ಕಲ್ಪನೆ ಬರುತ್ತದೆ.

### ರಾಜಾಜ್ಞೆಯ ಮಾದರಿಗಳು

ಈವರೆಗೆ ದೊರೆತಿರುವ ಅತ್ಯಂತ ಪ್ರಾಚೀನ ಕನ್ನಡ ಶಿಲಾಶಾಸನವೆಂದರೆ ಹಲ್ಮಿಡಿಯ ಶಾಸನ (ಕ್ರಿ.ಶ. ೪೫೦). ಕದಂಬ ವಂಶದ ಕಾಕುಸ್ಥವರ್ಮ ಮಾಡಿಸಿದ ರಾಜಾಜ್ಞೆ ಇದರಲ್ಲಿದೆ. ಇದು ಹಳೆಗನ್ನಡ ಅಲ್ಲ; ಪೂರ್ವದ ಹಳೆಗನ್ನಡ.

"ನಮಃ ಶ್ರೀಮತ್....ಕದಂಬ ಪನ್....ಕಕುಸ್ಥ
ಭಟ್ಟೋರನ್
ಆಳೆ......ಎಲ್ಲ ಭಟಾರಿಯಾ......ಸುತನ್ಗೆ......ವಿಜ ಅರಸನ್ಗೆ
'ಬಾಳ್ಗಚ್ಚು'ಪಲ್ಮಡಿಉಂ ಮೂಳಿವಳ್ಳಿಯುಂ
ಕೊಟ್ಟಾರ್....

ರಾಜ್ಯಗಳಲ್ಲಿ ಕನ್ನಡವನ್ನು ಆರಂಭಿಸಿದ ಅರಸರಲ್ಲಿ ಕದಂಬರೇ ಮೊದಲಿಗರೆಂದು ತೋರುತ್ತದೆ. ಸಾವಿರದ ಐದು ನೂರು ವರ್ಷಗಳ ಹಿಂದೆಯೇ ಕನ್ನಡದ ಬೆಳವಣಿಗೆ ಈ ಮಟ್ಟದ್ದಿತ್ತು. ಆಗ ಇಂಗ್ಲೀಷ್ ಭಾಷೆ ಇನ್ನೂ ರೂಪುಗೊಂಡಿರಲಿಲ್ಲವೆಂಬುದನ್ನು ನಾವಿಲ್ಲಿ ನೆನೆಯುವುದು ಒಳ್ಳೆಯದು.

ಆ ಮುಂದಿನ ಶತಮಾನಗಳಲ್ಲಿ ಬಾದಾಮಿ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಕನ್ನಡದ ಬಳಕೆ ಹೆಚ್ಚುತ್ತ ಹೋದುದು ಕಂಡು ಬರುತ್ತದೆ.

ವಿಜೇತರಾದ ಅರಸು ತನ್ನ ಹಿಂದಿನ ಅರಸನು ನೀಡಿದ ಸೌಲಭ್ಯಗಳನ್ನು ಮುಂದುವರಿಸುವಂತೆ ಮಾಡಿದ ಆದೇಶವನ್ನು ಒಳಗೊಂಡ ಈ ಶಾಸನವನ್ನು ನೋಡಿ;

"ಕನ್ನರದೇವನ ಮರ್ಯಾದೆಯಲಾದ ಸುಂಕದ
ಮರ್ಯಾದೆಯಂ ತಪ್ಪದೆ ನಡೆಯಿಂ."

ಪ್ರವಾಸಿಗರ ಊಟಕ್ಕಾಗಿ ಛತ್ರಕ್ಕೆ ಕೊಟ್ಟ ದತ್ತಿಯ ಈ ಶಾಸನದ ಭಾಷೆಯನ್ನು ಗಮನಿಸಬಹುದು. (ಕ್ರಿ.ಶ. ೧೦೫೪):

"ಆ ವೃದ್ಧಿಯಲು ಎಣ್ಬರ್ ಪ್ರವಾಸಿಗರುಣ್ಬ ಸತ್ರಕ್ಕೆ
ಕೊಟ್ಟ...............ಕದ್ಯಾಣಮೆರಡು. ಇಂತೀ ಧರ್ಮವ
ನೂರೊಡೆಯನುಂ ಊರುಂ ನಡೆಯಿಸುವರ್."

### ಗ್ರಾಮಸೀಮಾ ನಿರ್ಧಾರ ಕ್ರಮ (ಸರ್ವೆ)

ನಾವಿಂದು ಸರ್ವೆಮಾಡಿ ಗ್ರಾಮಗಳ ಸೀಮಾರೇಖೆಗಳನ್ನು (ಗಡಿ) ಗುರುತು ಮಾಡುವ ಕ್ರಮ ಸುಮಾರು ಸಾವಿರ ವರ್ಷಗಳ ಹಿಂದೆಯೇ ಕರ್ನಾಟಕದಲ್ಲಿ ಇತ್ತೆಂಬುದನ್ನು ಈ ಶಾಸನ ವಿವರಿಸುತ್ತದೆ. ದೇಗಾಂವೆಯ ಸೀಮಾಕ್ರಮವಿದು:

ಅಲ್ಲಿಂ ಮೂಡಲ್ ಸಾಲ ಮಾವಿನನಟ್ಟ ಕಲ್ಲು:
ಅಲ್ಲಿಂ ಮೂಡಲ್ ಶ್ರೀಹೇಮ್ಮೇಶ್ವರ ದೇವರ ಕೆಯ್ಯ
ಮೂಡಣ
ಲಿಂಗದ ಕಲ್...............ಶ್ರೀಮಾದ್ರಾಜಾಜ್ಞೆನಿಯಮದ
ಸೀಮಾ
ಶಾಸನಮನಣ್ಣಮಯ್ಯಂ ಬರೆದಂ".

ಊರಿನ ಸೀಮೆಯನ್ನು ವಿವಿಧ ದಿಕ್ಕುಗಳಲ್ಲಿ ಇರುವ ದೇವಸ್ಥಾನದ ಕೆರೆಯ ಏರಿ, ತೋಟ, ಮಾವಿನ ಮರ, ಹುಣಸೇಮರ, ಅವಕ್ಕೆ ಹತ್ತಿರದಲ್ಲಿ ನಟ್ಟ ನಾಗರ ಕಲ್ಲು, ಲಿಂಗದ ಕಲ್ಲುಗಳ ನಿರ್ದೇಶನದಿಂದ ಖಚಿತಗೊಳಿಸಲಾಗಿದೆ.

### ತೆರಿಗೆಗಳು

ಆಯ ಎಂಬುದು ತೆರಿಗೆಗೆ ಪರ್ಯಾಯ ಶಬ್ದ. ತೆರಿಗೆಗಳು ಪನ್ನಾಯ, ಭತ್ತಾಯ, ದಂಡಾಯ, ಸುಂಕ, ನೀರುಣಿ ಸುಂಕ, ತಿಪ್ಪೆಸುಂಕ, ಮದುವೆ ಸುಂಕ, ಸೂಳೆವಳಪಣ, ತಳಾರಗೂಲಿ, ಮಗ್ಗತೆರೆ, ಗಾಣತೆರೆ, ನಾವಿಂದವಾರಿ.

'ಉಲುಪ' ಸಂದರ್ಶನಕ್ಕೆ ಬರುವ ಅಧಿಕಾರಿಗೆ ಮಾಡುವ ಸರಬರಾಜು ಆದರೆ, 'ಕುಲವರ್ತನೆ' ಗ್ರಾಮಾಧಿಕಾರಿಗಳಿಗೆ ಊರವರಿಂದ ಸಲ್ಲುವ ಮಾಮೂಲು ಕಾಣಿಕೆಯಾಗಿತ್ತು. ಕೊಳಗ ನಾಲ್ಕು ಬಳ್ಳದ ಒಂದು ಅಳತೆಯಾದರೆ ಕೋಲು ೧೮ ಗೇಣಿನ ಅಳತೆಗೋಲಾಗಿತ್ತು. "ಬಾಲಪಣ" "ಪುಟ್ಟಗೆ" ಪ್ರಾಯಶಃ ಹುಟ್ಟಿದ ಮಗುವಿನ ಮೇಲಿನ ಕರವಾಗಿತ್ತೇನೋ. ಸಿದ್ಧಾಯ ಸ್ಥಿರಗೊಳಿಸಿದ ಕಂದಾಯವೆನಿಸಿತು. "ಬಿರಾಡ" ಎಂಬ ಹೆಸರೂ ಅದಕ್ಕಿತ್ತು. ಮತ್ತರ, ಕೋಲು, ಗಳೆ ಎಂಬುವು ಭೂಮಿಯ ಸಂಕೇತಗಳಾಗಿದ್ದುವು.

### ನ್ಯಾಯದಾನದಲ್ಲಿ ಕನ್ನಡ

ಕ್ರಿ. ಶ. ೧೦೫೮ರ ಶಾಸನದಲ್ಲಿ ಚಾಲುಕ್ಯ ಸೋಮೇಶ್ವರ ವಿವರಿಸಿದ ನ್ಯಾಯದ ರೀತಿ ಇಲ್ಲಿದೆ;

"ಅಲ್ಲಿ ಪೂರ್ವಮರ್ಯಾದೆಯಾಜ್ಞೋಲಂಘನಕ್ಕೆ ದಣ್ಡಂ
ಕರಿಯ
ದ್ರಮ್ಮಮ್ ಆಯ್‌ವತ್ತೆರಡು ಪಿಡಿದಂಗೆ ದ್ರಮ್ಮ
ಪನ್ನೆರಡು
ಮರ್ಯಾದೆಯಂ ತಪ್ಪದೆ ಪ್ರತಿಪಾಳಿಸುವರ್"

ಬುಕ್ಕರಾಯನ ಸುಪ್ರಸಿದ್ಧ ಶ್ರವಣಬೆಳಗೊಳದ ಶಾಸನವು ವಿವಾದಗಳನ್ನು ವಿಚಾರಿಸಿ ತೀರ್ಪನ್ನು ನೀಡುತ್ತಿದ್ದ ರೀತಿಗೆ ಉತ್ತಮ ನಿದರ್ಶನವಾಗಿದೆ. ಜೈನ ಹಾಗೂ ಶ್ರೀವೈಷ್ಣವರ ಮತೀಯ ವಿವಾದದಲ್ಲಿ ಬುಕ್ಕರಾಯನು ನೀಡಿದ ತೀರ್ಪು ಇದು:

"ಮಹಾರಾಯನು ವೈಷ್ಣವರ ದರ್ಶನಕ್ಕೆ ಊ
ಜೈನದರ್ಶನಕ್ಕೆ ಊ
ಭೇದವಿಲ್ಲವೆಂದು ರಾಯನು ವೈಷ್ಣವರ ಕೈಯ್ಯಲು
ಜೈನರ
ಕೈವಿಡಿದು ಕೊಟ್ಟು ಈ ಜೈನದರ್ಶನಕ್ಕೆ ಪೂರ್ವ
ಮರ್ಯಾದೆಯಲು

ಪಂಚಮಹಾವಾದ್ಯಂಗಳೂ ಕಳಶಊ ಸಲ್ಲುವುದು.
ಜೈನದರ್ಶನಕ್ಕೆ
ಭಕ್ತರ ದೆಸೆಯಿಂದ ಹಾನಿವೃದ್ಧಿಯೂದರೂ ವೈಷ್ಣವ
ಹಾನಿವೃದ್ಧಿ
ಯೂಗಿ ಪಾಲಿಸುವರು."

ವಿಜಯನಗರದ ಅರಸರು ಕೆತ್ತಿಸಿದ ಸಂಸ್ಕೃತ ಶಾಸನಗಳಲ್ಲಿ ಸಹ ಅವರ ಬಿರುದುಗಳಾದ "ಮೂರುರಾಯರ ಗಂಡಶ್ಚೆ ಪರರಾಯಭಯಂಕರ", "ಭಾಷಗೆ ತಪ್ಪುವ ರಾಯರ ಗಂಡ" ಇತ್ಯಾದಿಗಳು ಕಾಣಸಿಗುತ್ತವೆ.

### ಉರ್ದು, ಪರ್ಷಿಯನ್ ಮತ್ತು ಕನ್ನಡ

ವಿಜಯನಗರದ ಪತನದ ನಂತರ ನಮ್ಮ ನಾಡು ಮುಸ್ಲಿಂ ಸುಲ್ತಾನರ ಪ್ರಭಾವಕ್ಕೊಳಗಾಗಿ ಕನ್ನಡಕ್ಕೆ ಪರ್ಷಿಯನ್ ಭಾಷೆಯ ಸಂಪರ್ಕ ಬರತೊಡಗಿತು. ಮರಾಠರ ವಿಜಯಗಳೊಂದಿಗೆ ಮರಾಠಿ ಸಂಪರ್ಕವೂ ಉಂಟಾಯಿತು. ಆಡಳಿತ ಕ್ಷೇತ್ರದಲ್ಲಿ ಉಂಟಾದ ಸ್ಥಿತ್ಯಂತರದ ಪರಿಣಾಮವನ್ನು ಆಗಿನ ಆಡಳಿತದಲ್ಲಿ ಬಳಸುತ್ತಿದ್ದ ಕನ್ನಡದಲ್ಲಿಯೂ ಕಾಣಬಹುದು.

೧೭೯೯ರ ಈ ಶಾಸನದ ಮಾದರಿ ನೋಡಿ:

"ಕುಲೂಸವೇಟಿಯೂ ರಾಜೆ ಮಹಾರಾಜೆ ಸಾಹೇಬರವರ ತಮ್ಮ ದೊಸ್ತರಾದ ಕರ್ನಲ್ ಕುಲೂಸ ಸಾಹೇಬರವರ ಹೆಸರಿನಲ್ಲಿ ಕಟ್ಟಿಸಿದರು."

ಟೀಪುವಿನ ಕಾಲದಲ್ಲಿ ತರಫದಾರರು (ಪ್ರಾಯಃ ಈಗಿನ ರೆವಿನ್ಯೂ ಇನ್ಸ್‌ಪೆಕ್ಟರ್) ಕನ್ನಡದಲ್ಲಿಯೇ ರೆವಿನ್ಯೂ ಲೆಕ್ಕಗಳನ್ನಿಡುತ್ತಿದ್ದರು. ಅದರ ಪ್ರತಿಗಳನ್ನು ಅಮಲ್ದಾರರಿಗೆ ಕಳಿಸುತ್ತಿದ್ದರು. ಅಲ್ಲಿ ಅವುಗಳ ಮರಾಠಿ ಮತ್ತು ಫಾರಸಿ ಪ್ರತಿಗಳು ತಯಾರಾಗುತ್ತಿದ್ದವು. ಆಠಾರಾ ಕಚೇರಿ, ರುಸುಂ, ಸುಬೇದಾರ, ಹುಜೂರ್ ಜನಾಬರು, ಖಾವಂದರು, ಅಹವಾಲ್ ಮೊದಲಾದ ಶಬ್ದಗಳು ಕನ್ನಡದಲ್ಲಿ ಸೇರಿದ್ದು ಈ ಕಾಲದಲ್ಲಿಯೇ. ಇದರಂತೆಯೇ ನಿಜಾಮನ ಆಡಳಿತಕ್ಕೆ ಸೇರಿದ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಉರ್ದು ಸಂಪರ್ಕವೂ ಮಹಾರಾಷ್ಟ್ರ ತಗುಲಿದ ಮುಂಬಯಿ ಕರ್ನಾಟಕ ಜಿಲ್ಲೆಗಳಲ್ಲಿ ಮರಾಠಿ ಸಂಪರ್ಕವೂ ಕನ್ನಡಕ್ಕುಂಟಾದವು.

### ವಿದೇಶೀಯರು ಮತ್ತು ಕನ್ನಡ

ಕನ್ನಡ ಭಾಷೆಗೆ ಪಾಶ್ಚಾತ್ಯ ಸಂಪರ್ಕ ಕ್ರಿ.ಶ.ದ ಆರಂಭದಿಂದಲೇ ಬಂತು. ಅರಬರ, ಪೋರ್ಚುಗೀಸರ ಹಾಗೂ ಇಂಗ್ಲಿಷರ ಸಂಪರ್ಕ ಹೆಚ್ಚುತ್ತ ಬಂದಂತೆ ಆಯಾ ಭಾಷೆಯ ಶಬ್ದಗಳ ವಿನಿಮಯವಾಗುತ್ತ ನಡೆದುದನ್ನು ಕಾಣಬಹುದು. ಅನಾನಸು, ಕಂದೀಲು, ಚಾವಿ, ಜುಗಾರು, ಪರಾಲ್ ಪಿಂಗಾಣಿ, ಮೇಜು, ಪೇರಲ, ಲಿಂಬೆ ಇತ್ಯಾದಿ ಪೋರ್ಚುಗೀಜ ಶಬ್ದಗಳು ಕನ್ನಡದಲ್ಲಿ ಸೇರಿದಂತೆ ಕನ್ನಡದ ಬಟಗಡಲೆ, ಬಡವ, ಕಾಲುದಾರಿ, ಕಾರೆಳ್ಳುಗಳು ಪೋರ್ಚುಗೀಜ ಶಬ್ದಕೋಶದಲ್ಲಿ ಸೇರಿದವು.

ವ್ಯವಸ್ಥಿತವಾಗಿ ಕನ್ನಡವನ್ನು ಕಲಿಯಲಾರಂಭಿಸಿದ ವಿದೇಶೀ ಪಾದ್ರಿಗಳು ಕನ್ನಡವನ್ನು ಬರೆಯಲಾರಂಭಿಸಿದರು. ಮತಪ್ರಚಾರ ಹಾಗೂ ವ್ಯಾಪಾರಕ್ಕಾಗಿ ಬಂದ ಈ ಜನರಿಗೆ ಇಲ್ಲಿ ಆಗ ಜನರ ಆಡುಮಾತು ಹಾಗೂ ಆಡಳಿತ ಭಾಷೆಯೂ ಗಿದ್ದ ಕನ್ನಡವನ್ನು ಕಲಿಯುವುದು ಅಗತ್ಯವಾಯಿತು.

೧೮೧೧ರಿಂದ ೧೯೦೦ರ ವರೆಗಿನ ತೊಂಬತ್ತು ವರ್ಷಗಳಲ್ಲಿ ೧೫೦೦ಕ್ಕೂ ಹೆಚ್ಚು ಪುಸ್ತಕಗಳೂ ೮೦ ಪತ್ರಿಕೆಗಳೂ ಹೊರಬಂದವು. ಕನ್ನಡ ಭಾಷೆಯ ವ್ಯವಸ್ಥಿತವಾದ ಅಧ್ಯಯನಕ್ಕೆ ಅನುಕೂಲವಾಗುವಂಥ ಲೇಖನಗಳು ಕರ್ನಾಟಕದ ಗಡಿ, ಶಿಲ್ಪ, ಸಾಹಿತ್ಯ, ಸಂಸ್ಕೃತಿಗಳ ಹಾಗೂ ರಾಜಕೀಯ ಇತಿಹಾಸ ಬರೆಯಲು ಬೇಕಾಗುವ ಮೂಲ ಸಾಮಗ್ರಿಯನ್ನೊದಗಿಸುವ ನೂರಾರು ಸಂಶೋಧನಾತ್ಮಕ ಲೇಖನಗಳು ಪಾಶ್ಚಾತ್ಯ ವಿದ್ವಾಂಸರ ಮೌಲಿಕ ದೇಣಿಗೆಗಳಾಗಿವೆ. ಕನ್ನಡಕ್ಕೆ ಇಂಥ ಅಮೋಘ ಸೇವೆಯನ್ನು ಸಲ್ಲಿಸಿದವರಲ್ಲಿ ಪ್ರಮುಖರಾದ ಕಾಲ್ಡವೆಲ್, ಮೆಕೆನ್ಜಿ, ಬುಕಾನನ್, ಬೂಹ್ಲರ್, ಬಿ. ಎಲ್. ರೈಸ್, ಫ್ಲೀಟ್, ಮೊಗ್ಲಿಂಗ್, ಕಿಟೆಲ್, ಗರೆಟ್ ಮೊದಲಾದ ಮಹನೀಯರನ್ನು ಇಲ್ಲಿ ಸ್ಮರಿಸಬೇಕು.

ಪ್ರಾರಂಭದಲ್ಲಿ ಸೂಚಿಸಿದಂತೆ ಆಡಳಿತದಲ್ಲಿ ಇಂಗ್ಲಿಷ್ ಬಳಸುವ ಕ್ರಮ ಒಂದು ತಾತ್ಕಾಲಿಕ ರಾಜಕೀಯ ಅಗತ್ಯವಾಗಿ ಕಂಡುದರಿಂದ ಅದು ೧೮೩೫ರಿಂದ ಆಳುತ್ತಿದ್ದ ಬ್ರಿಟಿಷ್ (ಕಂಪನಿ) ಸರಕಾರದ ನೀತಿಯಾಯಿತು. ಅದರ ಅನಿವಾರ್ಯ ಅಂಗವಾಗಿ ಇಂಗ್ಲಿಷ್ ಮಾಧ್ಯಮದ ಮೂಲಕ ಶಿಕ್ಷಣವನ್ನೀಯುವ ಪದ್ಧತಿ ಜಾರಿಯಲ್ಲಿ ಬಂತು. ಇದರಿಂದ ಆಡಳಿತ ಕ್ಷೇತ್ರದಲ್ಲಿ ಹಾಗೂ ಶಿಕ್ಷಣ ಮಾಧ್ಯಮದಲ್ಲಿ ಕನ್ನಡದ ಉಚ್ಚಾಟನೆಯಾಗಿ ದೇಶೀಯರಿಗೆ ಕನ್ನಡ ಅಧ್ಯಯನದಲ್ಲಿ ಉತ್ಸಾಹ ಭಂಗವಾಗುವಂತಹ ಪರಿಣಾಮವಾಯಿತಾದರೂ ಪಾಶ್ಚಾತ್ಯರ ಕನ್ನಡ ಅಧ್ಯಯನಕ್ಕೆ ಇದರಿಂದ ಅಡ್ಡಿಯಾಗಲಿಲ್ಲ.

### ಬ್ರಿಟಿಷ್ ಅಧಿಕಾರಿಗಳು ಮತ್ತು ಕನ್ನಡ

೧೮೮೧ರ ಹೊತ್ತಿಗೆ ಎಲ್ಲೆಲ್ಲಿಯೂ ಇಂಗ್ಲಿಷ್ ಶಾಲೆಗಳಾಗಿ ಹೊಸ ರೀತಿಯ ಶಿಕ್ಷಣ ಪಡೆದವರ ಸಂಖ್ಯೆ ಹೆಚ್ಚಾಯಿತಾದರೂ ಅನೇಕ ಬ್ರಿಟಿಷ್ ಅಧಿಕಾರಿಗಳು ಆಡಳಿತದಲ್ಲಿ ಕನ್ನಡ ಬಳಕೆಯ ಮಹತ್ವವನ್ನಾಗಲೀ ಆವಶ್ಯಕತೆಯನ್ನಾಗಲೀ ಮರೆತಿರಲಿಲ್ಲವೆಂಬುದು ಗಮನಾರ್ಹವಾಗಿದೆ. ಅವರು ಆಡಳಿತ ಸೌಲಭ್ಯಕ್ಕಾಗಿ ಕನ್ನಡವನ್ನು ಕಲಿತರಾದರೂ, ಬೇಕಾಗುವುದಕ್ಕಿಂತ ಹೆಚ್ಚು ಕನ್ನಡ ಕಲಿತು ಸಂಶೋಧನೆ, ಕೃತಿರಚನೆಗಳಲ್ಲಿ ತೊಡಗಿದರು. ಕಾಲಿನ್ ಮೆಕೆನ್ಜಿ, ಪ್ರದೇಶ ವೀಕ್ಷಣೆ (ಸರ್ವೇ) ಅಧಿಕಾರಿಯಾಗಿ ಕರ್ನಾಟಕಕ್ಕೆ ಬಂದನಾದರೂ ೧೮೦೭ರಲ್ಲಿ ಕೆಲಸ ಮುಗಿಸಿದಾಗ ಕರ್ನಾಟಕದಲ್ಲಿ ೪೦೦೦೦ ಮೈಲಿ ಸಂಚರಿಸಿ ೧೭೦೦ ಶಿಲಾಶಾಸನಗಳ ಪ್ರತಿಗಳನ್ನೂ, ೬೦೦ ಹಸ್ತಪ್ರತಿಗಳನ್ನೂ ದೊರಕಿಸಿ ಅವುಗಳ ಸೂಚಿಪಟ್ಟಿಯನ್ನೂ ಟಿಪ್ಪಣಿಗಳನ್ನೂ ಸರಕಾರಕ್ಕೆ ಒಪ್ಪಿಸಿದನು. ವೃತ್ತಿಯಲ್ಲಿ ಡಾಕ್ಟರನಾಗಿದ್ದು, ಕೃಷಿ ಪದ್ಧತಿಯ ಬಗ್ಗೆ ವರದಿ ಮಾಡಲು ಬಂದ ಬುಕಾನನ್ ಇತಿಹಾಸ ಬರೆದ. ಮೈಸೂರಿನ ರೆಸಿಡೆಂಟನಾಗಿ (೧೮೦೩–೧೮೦೮) ಬಂದ ವಿಲ್ಕ್ಸ್ ಮೈಸೂರಿನ ಇತಿಹಾಸವನ್ನೇ ಬರೆದ. ದಕ್ಷಿಣ ಕನ್ನಡ ಜಿಲ್ಲೆಗೆ ಸಬ್ ಕಲೆಕ್ಟರ್ ಆಗಿ ಬಂದ ಜಾನ್ ಮೆಕ್ಕರಲ್ (೧೮೦೬–೧೮೧೧) ಕನ್ನಡ ಕಲಿತು ಮುಂದೆ ಮದ್ರಾಸ್ ಸರಕಾರದಲ್ಲಿ ಕನ್ನಡ ಭಾಷಾಂತರಕಾರನಾದ; ಕನ್ನಡ ವ್ಯಾಕರಣವನ್ನು ತಯಾರಿಸಿದ. ವಾಲ್ಟರ್ ಎಲಿಯಟ್ ಸೈನಿಕನಾಗಿ ಸೇರಿ ೧೮೨೪ರಲ್ಲಿ ಕಿತ್ತೂರರಾಣಿ ಚೆನ್ನಮ್ಮನಿಂದ ಸೆರೆ ಹಿಡಿಯಲ್ಪಟ್ಟು ಬಿಡುಗಡೆಯಾದಮೇಲೆ ಶೈಕ್ಷಣಿಕ ಪಠ್ಯ ಪುಸ್ತಕಗಳ ಪ್ರಕಟನೆ, ಶಾಸನ ಸಂಗ್ರಹ, ಇತಿಹಾಸ ಲೇಖನಗಳ ಬರಹ ಇವುಗಳಲ್ಲಿ ತೊಡಗಿದ.

### ಪ್ರಥಮ ಕನ್ನಡ ಶಾಲೆ

ವಾಲ್ಟರ್ ಎಲಿಯಟ್ ಉತ್ತರ ಕರ್ನಾಟಕದಲ್ಲಿ ಕನ್ನಡವೇ ಆಡಳಿತ ಭಾಷೆಯಾಗಬೇಕೆಂದೂ, ಅದೇ ಶಿಕ್ಷಣ ಮಾಧ್ಯಮವಾಗಬೇಕೆಂದೂ ಸರ್ಕಾರಕ್ಕೆ ಸೂಚಿಸಿದ ಮೊದಲ ಬ್ರಿಟಿಷ್ ಅಧಿಕಾರಿಯಾಗಿದ್ದ. ಧಾರವಾಡದಲ್ಲಿ ಪ್ರಥಮ

ಕನ್ನಡ ಶಾಲೆಯನ್ನು ಆರಂಭಿಸಿ ತನ್ನ ಕೈಯಿಂದ ಸಂಬಳ ಕೊಟ್ಟು ಹಲವಾರು ವರ್ಷ ನಡೆಸಿದ. ಮುಂಬಯಿ ಕರ್ನಾಟಕದಲ್ಲಿ ಅನೇಕ ಕಡೆ ಕನ್ನಡ ಶಾಲೆಗಳು ಬರುವಂತೆ ಮಾಡಿದ ಕೀರ್ತಿ ಈತನದು. (ಎ ಸಿಲೆಕ್ಷನ್ ಆಫ್ ಸ್ಟೋರೀಸ್ ಎಂಡ್ ರೆವಿನ್ಯೂಪೇಪರ್ಸ್ ಇನ್ ಕನ್ನಡ ಲೇಂಗ್ವೇಜು) ಆಡಳಿತಗಾರರು ಕನ್ನಡ ಕಲಿಯಲೆಂದು ೧೯೪೭ರಲ್ಲಿ ಈತ ಬರೆದ ಪುಸ್ತಕವಿದು. "ಕ್ಯಾಸ್ಟ್ಸ್ ಆಫ್ ಸೌತ್ ಇಂಡಿಯೂ", ಹಿಂದೂ ಇನ್‌ಸ್ಕ್ರಿಪ್ಶನ್" ಈತನ ಇತರ ಗ್ರಂಥಗಳು.

ಗಜೆಟಿಯರ ಖ್ಯಾತಿಯ ಬಿ.ಎಲ್. ರೈಸ್ ೧೮೩೭ರಲ್ಲಿ ಬೆಂಗಳೂರಿನಲ್ಲಿಯೇ ಹುಟ್ಟಿ ಇಂಗ್ಲೆಂಡಿನಲ್ಲಿ ಅಧ್ಯಯನ ಮಾಡಿ ೧೮೬೦ರಲ್ಲಿ ಮತ್ತೆ ಬೆಂಗಳೂರಿಗೆ ಸೆಂಟ್ರಲ್ ಹೈಸ್ಕೂಲ್ ಮುಖ್ಯಾಧ್ಯಾಪಕನಾಗಿ ಬಂದ. ಕನ್ನಡ ಹೈಯರ್ ಸೆಕೆಂಡರಿ ಪರೀಕ್ಷೆ ಪಾಸಾದ ನಂತರ ಕನ್ನಡ ನಿಷ್ಠೆ ಬೆಳೆಯಿತು. ಶಾಲಾ ಇನ್ಸ್‌ಪೆಕ್ಟರ್ ಆಗಿ, ಜನಗಣತಿಯ ಅಧಿಕಾರಿಯಾಗಿ, ಪುರಾತತ್ವ ಇಲಾಖೆಯ ಮುಖ್ಯಾಧಿಕಾರಿಯಾಗಿ ರೈಸ್ ಮಾಡಿದ ಸೇವೆ, ರಚಿಸಿದ ಗಂಥಗಳು ಬಹು ಮಹತ್ವಪೂರ್ಣವಾದವು.

**ಇಂಗ್ಲೆಂಡಿನಲ್ಲಿ ಕನ್ನಡ**

ಬಿ. ಎಲ್. ರೈಸ್ ನಿವೃತ್ತರಾಗಿ ಇಂಗ್ಲೆಂಡಿನಲ್ಲಿ ನೆಲಸಿದ ನಂತರ ಅಲ್ಲಿಗೆ ಹೋಗಿದ್ದ ಮೈಸೂರಿನ ಎಸ್. ಜಿ. ಶಾಸ್ತ್ರಿಯೆಂಬುವರು ಅವರನ್ನು ಕಾಣಲು ಅವರ ಮನೆಗೆ ಹೋದರಂತೆ. ಇವರು ಮೈಸೂರಿನವರೆಂದು ತಿಳಿದ ಕೂಡಲೆ ರೈಸ್ ಅವರು "ಆಹಾ, ಕನ್ನಡ ಎಷ್ಟು ಚೆಂದ, ಎಷ್ಟು ಮಧುರ, ಕನ್ನಡದಲ್ಲಿಯೇ ಮಾತನಾಡುವ" ಎಂದರಂತೆ. ಕರ್ನಾಟಕದಲ್ಲಿದ್ದೇ ಕನ್ನಡಿಗರೊಂದಿಗೆ ಇಂಗ್ಲಿಷ್ ಮಾತನಾಡುವ ಚಪಲ ತೋರಿಸುವ ಕನ್ನಡಿಗರು ಇದನ್ನು ಗ್ರಮನಿಸಬೇಕು.

ಕನ್ನಡಕ್ಕೆ ಅಮೋಘ ಕಾಣಿಕೆ ಸಲ್ಲಿಸಿದ ಅಧಿಕಾರಿಗಳಲ್ಲಿ ಇನ್ನೊಂದು ದೊಡ್ಡಹೆಸರು ಜಾನ್. ಎಫ್. ಫ್ಲೀಟ್. ಈತ ಐ. ಸಿ. ಎಸ್. ಅಧಿಕಾರಿ. ಇಂಗ್ಲೆಂಡಿನಲ್ಲಿಯೇ ಸಂಸ್ಕೃತ ಕಲಿತು ಮುಂಬಯಿ ಸರಕಾರದಲ್ಲಿ ರೆವೆನ್ಯೂ ಅಧಿಕಾರಿಯಾಗಿ ೧೮೬೭ರಲ್ಲಿ ಬಂದ.

೧೦೦೦ ಶಾಸನಗಳ ಪರಿಶೀಲನೆಯನ್ನು ಮಾಡಿ "ಇಂಡಿಯನ್‌ಆಂಟಿಕ್ವೇರಿ" ಹಾಗೂ "ಎಪಿಗ್ರಾಫಿಯ ಇಂಡಿಕ" ಮೂಲಕ ಲೇಖನಗಳನ್ನು ಪ್ರಕಟಿಸಿದ.

ಕರ್ನಾಟಕವೆಂದರೆ "ಸದರ್ನ್ ಮರಾಠಾ ಕಂಟ್ರಿ" ಅಲ್ಲ, ಇದೊಂದು ಪ್ರತ್ಯೇಕ ಅಸ್ತಿತ್ವವುಳ್ಳ ನಾಡು ಎಂದು ಪ್ರತಿಪಾದಿಸಿ ೧೮೮೨ರಲ್ಲಿ ಪುಸ್ತಕ ಪ್ರಕಟಿಸಿದ ಕೀರ್ತಿ ಫ್ಲೀಟನದು. ಅನೇಕ ಜಾನಪದ ಹಾಡು, ಲಾವಣಿಗಳನ್ನು ಸಂಪಾದಿಸಿ ಪ್ರಕಟಿಸಿದ. ೧೮೬೭ರಲ್ಲಿ ನಿವೃತ್ತಿಹೊಂದಿದ ಫ್ಲೀಟ್ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಗೌರವ ಸದಸ್ಯನೂ ಆಗಿದ್ದ. ಇದೇ ಸಂಘಕ್ಕೆ ಈ ಮುಂದೆ ವಿದೇಶೀಯನಾದರೂ ಕನ್ನಡಕ್ಕಾಗಿ ದುಡಿದ ರೆ. ಕಿಟ್ಟೆಲ್ ಅಧ್ಯಕ್ಷನಾಗಿದ್ದನೆನ್ನುವುದನ್ನು ಇಲ್ಲಿ ಸ್ಮರಿಸಬಹುದು.

**ಶೈಕ್ಷಣಿಕ ಆಡಳಿತಗಾರರು– ಕನ್ನಡ**

೧೮೫೦ರಿಂದ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ವಿದ್ಯಾ ಇಲಾಖೆಯ ಅಧಿಕಾರಿಗಳಾಗಿದ್ದ ರೈಸ್, ಮಾರ್ಕ್ಸ ಡೆನ್, ಕ್ಯಾಂಬೆಲ್, ರಸೆಲ್, ಮೊದಲಾದವರು ಆಯಾ ಭಾಗದ ದೇಶೀಯ ಪಂಡಿತರಿಂದ ಕನ್ನಡ, ಗಣಿತ, ಚರಿತ್ರೆ, ಭೂಗೋಳ ಇತ್ಯಾದಿ ಪಠ್ಯಪುಸ್ತಕಗಳನ್ನು ಬರೆಸಿದರು. ವಿದ್ಯಾ ಇಲಾಖೆಯ ಆಡಳಿತದಲ್ಲಿ ಕನ್ನಡವನ್ನು ಪ್ರಧಾನವಾಗಿ ಬಳಕೆಗೆ ತಂದ ಕೀರ್ತಿ ವಿಲಿಯಮ್ ಎ. ರಸಲ್‌ಗೆ ಸೇರುತ್ತದೆ (೧೮೩೦–೯೨) ಉತ್ತರ ಕರ್ನಾಟಕದಲ್ಲಿ ಕನ್ನಡದ ಪ್ರತಿಷ್ಠಾಪನೆ ಈತನ ಕಾಲದಲ್ಲಿ ಆಯಿತೆಂದು ಹೇಳಬೇಕು. ಮರಾಠಿ ಶಿಕ್ಷಕರಿಗೆ ಕನ್ನಡ ಕಲಿಯಲು ಒತ್ತಾಯ ಮಾಡಿದ. ೧೦೦೦ ರೂಪಾಯಿ ಸ್ವತಃ ಕೊಟ್ಟು ಅದರ ಬಡ್ಡಿಯಲ್ಲಿ ಪ್ರತಿ ವರ್ಷ ಕನ್ನಡವನ್ನು ಹೆಚ್ಚು ಪರಿಶ್ರಮಪಟ್ಟು ಕಲಿತವರಿಗೆ ಬಹುಮಾನ (ಸ್ಪರ್ಧೆ ಬಹುಮಾನ) ಕೊಡುವ ವ್ಯವಸ್ಥೆ ಮಾಡಿದ.

"ಈತ ಪ್ರಾರಂಭಿಸಿದ "ಶಾಲಾಪತ್ರಕ" ಅವರ ಇಲಾಖೆಯ ಮುಖಪತ್ರವಾಗಿತ್ತು. ಇದರಲ್ಲಿ ಸರಕಾರೀ ಆಜ್ಞೆಗಳೆಲ್ಲ ಕನ್ನಡದಲ್ಲಿ ಹೊರಡುತ್ತಿದ್ದವು. ಹೊಸಗನ್ನಡ ಆಡಳಿತ ಭಾಷೆಯಾಗಿ ರೂಪುಗೊಳ್ಳುತ್ತಿರುವುದನ್ನು ಈ ಪತ್ರಿಕೆಯ ಸಂಚಿಕೆಗಳಲ್ಲಿ ನೋಡಬಹುದು. ಉದಾ: "ಧಾರವಾಡ ಜಿಲ್ಲೆಯೊಳಗಿನ ಯಾವತ್ತೂ ಶಾಲಾ ಮಾಸ್ತರರಿಗೆ: ಕಸಬಾ ಹಾನಗಲ್ ಶಾಲೆಯೊಳಗಿನ ಮೊದಲನೇ ಮದತನೀಸ ಸಿದ್ದಪ್ಪಾ ಬಿನ್ ಕರಲಿಂಗಪ್ಪಾಯವರು ಬಗೆರ ಹುಕುಮಿನಿಂದಾ ಕೆಲಸವನ್ನು ಬಿಟ್ಟು ಹೊರಟು ಹೋದ ತಪ್ಪಿನ ದಸಿಯಿಂದ ಅವರಿಗೆ ೨೦ ರೂಪಾಯಿ ದಂಡ ಮಾಡೋದರಲ್ಲಿ ಬಂದಿರುತ್ತದೆ." ಡೆಪ್ಯುಟಿ ಚೆನ್ನಬಸಪ್ಪ ಹಾಗೂ ವೆಂ. ರ. ಗೋಕಟ್ಟೆ ಈತನಿಗೆ ಸಹಾಯಕರಾಗಿದ್ದರು.

ಹೈದರಾಬಾದ್ ಕರ್ನಾಟಕ ಭಾಗದ ದಫ್ತರಗಳ ಭಾಷೆಯೂ ಇದೇ ಬಗೆಯದಾಗಿತ್ತು.

ಕಳೆದ ತತಮಾನದಲ್ಲಿಯೇ ಕನ್ನಡವನ್ನು ಈ ರೀತಿಯಾಗಿ ವೀದೇಶಿಯರು ಆಡಳಿತ ವ್ಯವಹಾರದಲ್ಲಿ ಬಳಸಿರುವುದು ಈಗ ಹಿಂದೆ ಮುಂದೆ ನೋಡುತ್ತಿರುವ ಕನ್ನಡ ಅಧಿಕಾರಿಗಳಿಗೆ ಮಾರ್ಗದರ್ಶಕವಾಗಿದೆ.

**ಇತರ ಇಲಾಖೆಗಳಲ್ಲಿ ಕನ್ನಡ ಹಾಗೂ ಕಾನೂನು ವ್ಯವಹಾರ**

೧೮೫೬ರಷ್ಟು ಹಿಂದೆಯೇ ಮದ್ರಾಸಿನಲ್ಲಿ ರೈಲ್ವೆ ಗೈಡು ಕನ್ನಡದಲ್ಲಿ ಪ್ರಕಟವಾಗಿತ್ತು. ಆಗ ಬೊಂಬಾಯಿ, ಮದ್ರಾಸು, ಹಳೆಯ ಮೈಸೂರು ಸರಕಾರಗಳಲ್ಲಿ ರಾಜ್ಯಾಂಗ ವ್ಯವಸ್ಥೆಯ ಕಾನೂನು ಪ್ರಕಟನೆಗಳನ್ನು ಕನ್ನಡಕ್ಕೆ ಭಾಷಾಂತರಿಸಿ ಹಂಚಲಾಗುತ್ತಿತ್ತು. ೧೮೬೫ರಲ್ಲಿ ಮೈಸೂರು "ವೃತ್ತಾಂತಬೋಧಿನಿ" ಪತ್ರಿಕೆಯಲ್ಲಿ ಪ್ರಕಟವಾದ ಈ ಸರಕಾರಿ ಆಜ್ಞೆ ನೋಡಿ:

"ಸದರ್ ಹೂಸದರ್ ಜಫರ್‌ದಾರಿ ಕೆಲಸಕ್ಕಾಗಿ ಜಮಾದಾರ್ ಖಾದರ್ ಖಾನರು ನಿಯಮಿಸಲ್ಪಟ್ಟರು."

೧೮೬೦ರಲ್ಲಿ 'ಎ ಗೈಡ್ ಟು ಪೋಲೀಸ್' ಎಂಬ ಶಿರೋನಾಮೆಯಲ್ಲಿ ಕನ್ನಡ ಪೋಲೀಸ್ ಕೈಪಿಡಿಯನ್ನು ತಯಾರಿಸಿ ಹಂಚಲಾಯಿತು.

"ಪೋಲೀಸು ಕಾನೂನು ಪುಸ್ತಕ"ವು, ೧೮೬೩ರಲ್ಲಿ ಕನ್ನಡದಲ್ಲಿ ಪ್ರಕಟವಾಗಿದೆ. ಅದೇ ವರ್ಷದಲ್ಲಿ ರಾಬರ್ಟ್ ಕೋಲ್ ಎಂಬ ಕೊಡಗಿನ ವಿದೇಶೀ ಅಧಿಕಾರಿ "ಮೊಹಮ್ಮಡನ್ ಲಾ" ಸಂಗ್ರಹಿಸಿ (೨೦ ಪುಟಗಳು) ಕನ್ನಡದಲ್ಲಿ ಪ್ರಕಟಿಸಿದನು. ಈತನು ಕೂರ್ಗ್ ಲಾ ಸಹ ಪ್ರಕಟಿಸಿದ್ದಾನೆ. ಜಿ. ಹಡ್ಸನ್ ಬರೆದ ವಿಲೇಜ ಡೈಲೀ ಕನ್ನಡದಲ್ಲಿ ಹಳ್ಳಿಗರಿಗೆ ಅನೇಕ ವಿಚಾರ ತಿಳಿಸುತ್ತದೆ.

"ನ್ಯಾಯಾಂಗ ಸಂಗ್ರಹ" ಎ ಸೆಲೆಕ್ಷನ್ ಆಫ್ ಲಾ ಮ್ಯಾಟರ್ಸ್–ಕಾನೂನು ಕೋರ್ಟು ಕಚೇರಿ ವ್ಯವಹಾರಗಳ ವಿವರ ಕೊಡುತ್ತಿದ್ದ ಕನ್ನಡ ಪಕ್ಷಪತ್ರಿಕೆ ೧೮೬೮ರಲ್ಲಿ ಮಂಗಳೂರಿನಿಂದ ಹೊರಟಿತು.

"ಬೆಳಗಾಂ ಸಮಾಚಾರ" ಸರಕಾರದ ಆಶ್ರಯದಿಂದ ಹಾಗೂ ಸ್ಥಳೀಯ ವಿದೇಶೀಯರಿಂದ ಬೆಂಬಲ ಪಡೆದ ಇನ್ನೊಂದು ಕನ್ನಡ ಶಾಲಾ ಪತ್ರಿಕೆ. ರೇಮಂಡ್ ವೆಸ್ಟ್ ಬೊಂಬಾಯಿ ಸರಕಾರದ ಅಧಿಕಾರಿ. ಅಲ್ಲಿಯ ಹೈಕೋರ್ಟಿನ ತೀರ್ಮಾನಗಳನ್ನು ಸಂಗ್ರಹಿಸಿ ೧೮೬೪ರಲ್ಲಿ ಕನ್ನಡಕ್ಕೆ ಭಾಷಾಂತರಿಸಿ (೯೯ ಪುಟಗಳು) ಮಂಗಳೂರಿನಲ್ಲಿ ಪ್ರಕಟಿಸಿದನು. ಕಾನೂನುಗಳನ್ನು ಭಾಷಾಂತರಿಸುವವರಿಗೆ ಇದೊಂದು ಮಾದರಿ. ಈ ಭಾಷೆ ಹಾಗೂ ಭಾಷಾಂತರ ಎಷ್ಟು ಸರಳ ಹಾಗೂ ಸಮಂಜಸವಾಗಿದೆ ನೋಡಿ:

> "ವಿವಾಹವಾದ ಒಬ್ಬ ಹೆಂಗಸು ತನ್ನ ಪೂರಾ ಆಸ್ತಿಯನ್ನು ತನ್ನ ಸಹೋದರನಿಗೆ ಗಂಡನ ಒಪ್ಪಿಗೆ ಹೊರ್ತು ದಾನವಾಗಿ ಕೊಟ್ಟಂಥದ್ದು ಮಹಮ್ಮದೀ ಶಾಸ್ತ್ರ ಪ್ರಕಾರ ಅಸಿಂಧು ಆಗಿರುತ್ತದೆ ಅಂತಾ ನಿರ್ಣಯಿಸಲಾಯಿತು."

ಇಂದಿಗೆ ಒಂದೂನೂರು ವರ್ಷಕ್ಕಿಂತ ಮುಂಚೆಯೇ ಮೈಸೂರು ಕಮಿಷನರ್ ಆಳ್ವಿಕೆಯಲ್ಲಿರುವಾಗ ಕನ್ನಡದಲ್ಲಿ ಸಲ್ಲಿಸಲಾದ ಅರ್ಜಿ ಅಪೀಲು ಮುಂತಾದವುಗಳ ವಿಚಾರಗಳನ್ನು ಕನ್ನಡದಲ್ಲಿಯೇ ಆದೇಶಗಳ ಮೂಲಕ ವಿಲೇವಾರಿ ಮಾಡಬೇಕೆಂಬ ಆಜ್ಞೆಯನ್ನು ಹೊರಡಿಸಲಾಗಿತ್ತು.

ನ್ಯಾಯಾಂಗ ವ್ಯವಹಾರಗಳಲ್ಲಿ ಕನ್ನಡದ ಬಳಕೆಯ ಮಹತ್ವವನ್ನು ಎಷ್ಟು ಮಟ್ಟಿಗೆ ಅರಿತಿದ್ದರೆಂದರೆ ಮೈಸೂರು ಸರ್ಕಾರದವರು ೧೯೧೦ರ ಹೊತ್ತಿಗೆ ಇಂಡಿಯನ್ ಪೀನಲ್ ಕೋಡ್ ಆದಿಯಾಗಿ ಉತ್ಪನ್ನಕರ, ಧರ್ಮಶಾಸ್ತ್ರ. ವ್ಯಾಪಾರ ನಿಬಂಧ, ಸಿವಿಲ್ ನಡೆವಳಿಕೆಯ ನಿಬಂಧನೆ, ಭಾರತೀಯ ಪೌರ ನೀತಿ, ಸಾಕ್ಷ್ಯದ ಕಾನೂನು, ಮೈಸೂರು ಇನ್ಸಾಲ್ವೆನ್ಸಿ ರೆಗ್ಯುಲೇಷನ್, ಕೋರ್ಟು ರುಸುಂಗಳ ರೆಗ್ಯುಲೇಷನ್ ಅನೇಕ ಕಾನೂನು ಹಾಗೂ ನಿಯಮಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಪ್ರಕಟಿಸಿದ್ದರು.

### ಕನ್ನಡ ಕಣ್ಮರೆಯಾದ ಬಗೆ

ರಾಜಕೀಯ ಕಾರಣಗಳಿಗಾಗಿ ಆಡಳಿತದಲ್ಲಿ ಇಂಗ್ಲಿಷನ್ನು ತಂದ ಇಂಗ್ಲಿಷರು ಸಹ ಆ ಕ್ರಮದ ಅವಾಸ್ತವತೆಯನ್ನು ಮರೆತಿದ್ದಿಲ್ಲವೆಂಬುದು ಈಗಾಗಲೇ ಸ್ಪಷ್ಟವಾಗಿರಲಿಕ್ಕೆ ಸಾಕು. ಈ ಶತಮಾನದ ಆದಿಯವರೆಗೂ ಕನ್ನಡವನ್ನು ಕೆಳಮಟ್ಟದ ಕಚೇರಿ ಕೋರ್ಟುಗಳಲ್ಲಿಯಾದರೂ ಉಳಿಸಿಕೊಳ್ಳುವ ಪ್ರಯತ್ನಗಳು ನಡೆದೇ ಇದ್ದವೆಂಬುದು ಈವರೆಗಿನ ವಿವೇಚನೆಯಿಂದ ತಿಳಿದಿರಬಹುದು. ಆದರೆ ಸಿವಿಲ್ ಪ್ರಕ್ರಿಯಾ ಸಂಹಿತೆಯ ೧೩೭ನೇ ಕಲಮು ಹಾಗೂ ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯ ೨೭೨ನೇ ಕಲಮುಗಳ ಮೂಲಕ ಅಧೀನ ನ್ಯಾಯಾಲಯಗಳಲ್ಲಿ ಪ್ರಾದೇಶಿಕ ಭಾಷೆ (ಕನ್ನಡ) ಗಳನ್ನು ಬಳಸಬಹುದೆಂಬ ಸೌಲಭ್ಯವನ್ನು ಬ್ರಿಟಿಷರೇ ನೀಡಿದ್ದರೂ ನಮ್ಮ ನ್ಯಾಯಾಧೀಶರು ಹಾಗೂ ವಕೀಲರು ಅದನ್ನು ಉಪಯೋಗಿಸಿಕೊಳ್ಳಲಿಲ್ಲ. ಕಳೆದ ಐವತ್ತು ಅರುವತ್ತು ವರ್ಷಗಳಲ್ಲಿ ಆಡಳಿತದಲ್ಲಿ ಕನ್ನಡ ಬಹು ವೇಗದಿಂದ ಕಣ್ಮರೆಯಾಗುತ್ತ ಬಂದುದನ್ನು ಕಾಣಬಹುದು. ಇಂಗ್ಲೀಷ್ ವಿದ್ಯಾಭ್ಯಾಸ ಮಾಡಿದ ಹಾಗೂ ಕನ್ನಡವನ್ನು ಸಾಕಷ್ಟು ಕಲಿಯದ ಜನರನ್ನು ತಾಲೂಕು ಮತ್ತು ಹೋಬಳಿ ಮಟ್ಟದವರೆಗೂ ನೇಮಕ ಮಾಡುವ ಪರಿಪಾಠ ಹಾಗೂ ಕನ್ನಡ ಬಾರದೇ ಇದ್ದಂತಹ ಅಥವಾ ಕನ್ನಡದಲ್ಲಿ ಶ್ರದ್ಧೆ ಇರದಂತಹ ಇಂಗ್ಲಿಷ್ ಪ್ರೇಮಿ ಅಧಿಕಾರಿಗಳನ್ನು ಉನ್ನತ ಸ್ಥಾನಗಳಿಗೆ ಆಮದು ಮಾಡಿಕೊಳ್ಳುವ ಪದ್ಧತಿಗಳಿಂದ ಇಂತಹ ಪರಿಸ್ಥಿತಿ ಉಂಟಾದಂತೆ ಕಾಣುತ್ತದೆ.

ಈ ವಿಚಾರದಲ್ಲಿ ಹೈದರಾಬಾದಿನ ನಿಜಾಮನ ಧೋರಣೆ ಧೈರ್ಯದ್ದಾಗಿದ್ದಿತು. ಉರ್ದು ಅಲ್ಲಿಯ ಜನತೆಯ ಭಾಷೆಯಾಗಿರಲಿಲ್ಲ. ಉರ್ದು ಮಾತೃಭಾಷೆಯಲ್ಲದ ಬಹು ಸಂಖ್ಯಾಕರ ದೃಷ್ಟಿಯಿಂದ ಇದು ಅಸಮಂಜಸ ಧೋರಣೆ ನಿಜ. ಆದರೆ ಇಂಗ್ಲಿಷ್ ಅಲ್ಲದ ದೇಶೀಯ ಭಾಷೆಯೊಂದನ್ನು ಶಿಕ್ಷಣ ಮಾಧ್ಯಮ ಹಾಗೂ ಆಡಳಿತ ಮಾಧ್ಯಮವನ್ನಾಗಿ ಮಾಡಿ ತೋರಿಸಿದ ನಿಜಾಮನ ಸಾಹಸ ಸ್ಮರಿಸಬೇಕಾದದ್ದೇ. ಕಛೇರಿ, ಕಾಯದೆ, ಆಡಳಿತ, ಟೈಪು, ಶೀಘ್ರಲಿಪಿ–ಎಲ್ಲ ಉರ್ದುಮಯವಾಗಿತ್ತು. ಆ ರಾಜ್ಯದಲ್ಲಿ ಸರಕಾರಿ ಕೆಲಸ ಬೇಕಾದರೆ ಉರ್ದು ಅಗತ್ಯವಾಗಿತ್ತು. ಹೊರ ಪ್ರಾಂತದವರು ಬಂದರೂ ಸಹ ಉರ್ದು ಕಲಿಯದೆ ಗತ್ಯಂತರವಿರಲಿಲ್ಲ. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಉರ್ದೂ ಮಾಧ್ಯಮದಿಂದ ಓದಿ ಡಿಗ್ರಿ ಪಡೆದವರಾರೂ ಇಂದು ಇತರರಿಗಿಂತ ನಿಕೃಷ್ಟ ಸ್ಥಿತಿಯಲ್ಲೇನೂ ಇಲ್ಲ. ಈ ಮಾದರಿಯನ್ನು ಇತರ ಪ್ರಾಂತ್ಯಗಳಲ್ಲಿಯೂ ಅನುಸರಿಸಿದ್ದರೆ ಪ್ರಾಯಶಃ ಆಡಳಿತ ಭಾಷಾ ಸಮಸ್ಯೆ ಈ ರೂಪದಲ್ಲಿ ಉಳಿಯುತ್ತಿರಲಿಲ್ಲ. ಅಂತೂ ಕನ್ನಡ ಕಣ್ಮರೆಯಾಯಿತು.

೧೮೮೧ರಲ್ಲಿ ಮೈಸೂರಿನ ಪ್ರಜಾಪ್ರತಿನಿಧಿ ಸಭೆ ಪ್ರಾರಂಭವಾಯಿತು. ಕನ್ನಡಕ್ಕೆ ಆಡಳಿತದಲ್ಲಿ ಸ್ಥಾನ ಬೇಕೆಂಬ ಕೂಗು ಆಗಾಗ ಕೇಳುತ್ತಲೇ ಇತ್ತು. ಆಗಾಗ ಪ್ರಜಾಪ್ರತಿನಿಧಿ ಸಭೆಯ ಕಲಾಪಗಳ ಕೆಲವು ವರದಿಗಳಲ್ಲಿ ಮಾತ್ರ ಕನ್ನಡವನ್ನು ಕಾಣಬಹುದಾಗಿತ್ತು. ಅದಕ್ಕಿಂತ ಹೆಚ್ಚಿನ ಕೆಲಸವಾದಂತೆ ಕಂಡುಬರುವುದಿಲ್ಲ. ಕನ್ನಡದ ಗುಡಿಯೆನಿಸಿಕೊಂಡ ಮೈಸೂರಿನಲ್ಲಿಯೇ ಹೀಗಾದಾಗ ಎಲ್ಲೆಡೆಯೂ ಅಲ್ಪ ಸಂಖ್ಯಾತರಾಗಿ ನಾಲ್ಕಾರು ಕಡೆಗೆ ಹಂಚಿ ಹೋಗಿದ್ದ ಇತರ ಕನ್ನಡಿಗರನ್ನಾರು ಕೇಳಬೇಕು? ಆದರೂ ದೇವರಾವ್ ಪದ್ಧತಿಯ ಶೀಘ್ರಲಿಪಿಗೆ (ಕನ್ನಡ) ಸರ್ಕಾರದ ಮನ್ನಣೆ ಸಿಕ್ಕಿತು. ಇನ್ನೊಂದು ಅವಶ್ಯಕ ವಸ್ತುವಾದ ಟೈಪುಯಂತ್ರವನ್ನು ರೂಪಿಸುವ ಪ್ರಯತ್ನವೂ ಸಹ ೧೯೩೦ರಷ್ಟು ಹಿಂದಿನಿಂದಲೇ ನಡೆದಿದೆ. ಮ. ನ. ಮೂರ್ತಿ, ಕೆ. ಅನಂತಸುಬ್ಬರಾವ್, ನಾರಾಯಣಾಚಾರ್ಯ ಕೇಶವ, ತಿವಾರಿ, ಟಿ. ಎಲ್. ನಾರಾಯಣರಾವ್ ಮುಂತಾದವರು ಈ ದಿಶೆಯಲ್ಲಿ ಶ್ರಮಿಸಿದರು. ಇದೆಲ್ಲ ವೈಯಕ್ತಿಕ ಹಣಗಾಟವೇ ಎಂಬುದನ್ನು ಇಲ್ಲಿ ಗಮನಿಸಬೇಕು. ಕೊನೆಗೆ ಅನಂತಸುಬ್ಬರಾಯರ ಮಾದರಿಗೆ ೧೯೫೮ರಲ್ಲಿ ನಮ್ಮ ಸರಕಾರದ ಮಾನ್ಯತೆ ಸಿಕ್ಕು ಉತ್ಪಾದನೆ ಪ್ರಾರಂಭವಾಗಿದೆ.

### ಮತ್ತೆ ರಾಜ್ಯಭಾಷೆಯಾಗಿ ಕನ್ನಡ

ವ್ಯಕ್ತಿಜೀವನದಲ್ಲಿ ಬರುವ ಏರಿಳಿತಗಳ ಹಾಗೆಯೇ ರಾಷ್ಟ್ರ, ಸಾಹಿತ್ಯ, ಭಾಷೆಗಳಲ್ಲಿಯೂ ಏರಿಳಿತಗಳಿದ್ದೇ ಇರುತ್ತವೆ. ಜನನಾಯಕರು ಜನರ ಭಾಷೆಯಲ್ಲಿ ಆಡಳಿತವನ್ನು ನಡೆಸುವುದು ಮತ್ತು ನ್ಯಾಯದಾನ ಮಾಡುವುದೂ ಪ್ರಜಾತಂತ್ರದ ಆವಶ್ಯಕತೆಗಳಲ್ಲೊಂದೆಂಬುದನ್ನು ಒಪ್ಪಿಕೊಂಡಿದ್ದಾರೆ. ೧೯೬೩ರಲ್ಲಿ ಕನ್ನಡವೇ ಕರ್ನಾಟಕ ರಾಜ್ಯ ಭಾಷೆ, ಆಡಳಿತ ಭಾಷೆಯೆಂದು ಕಾನೂನಿನ ಮೂಲಕ ಸಾರಲಾಗಿದೆ. ಶ್ರೀ ನಾರಾಯಣಸ್ವಾಮಿ ಸಮಿತಿಯವರು ಸಲ್ಲಿಸಿದ ಅಧ್ಯಯನಪೂರ್ಣ ವರದಿಯನ್ನು ಸರಕಾರ ಒಪ್ಪಿಕೊಂಡು ಅಲ್ಲಿ ಸೂಚಿಸಿದ ಶಿಫಾರಸುಗಳಂತೆ ಕಾರ್ಯಕ್ರಮ ಕೈಗೊಂಡಿದೆ. ೧೯೬೮

ರಿಂದ ತಾಲೂಕು ಮಟ್ಟದ ಎಲ್ಲ ಕಚೇರಿಗಳಲ್ಲಿಯೂ ೧೯೭೦ರಿಂದ ಉಪ ವಿಭಾಗ ಮಟ್ಟದ ಎಲ್ಲ ಕಛೇರಿಗಳಲ್ಲಿಯೂ ೧೯೭೨ರಿಂದ ಜಿಲ್ಲಾ ಮಟ್ಟದ ಎಲ್ಲ ಕಚೇರಿಗಳಲ್ಲಿಯೂ ಕನ್ನಡವೇ ವ್ಯವಹಾರದ ಭಾಷೆಯಾಗಿ ಬಳಕೆಯಲ್ಲಿ ಬರಬೇಕೆಂದು ಆದೇಶ ನೀಡಲಾಗಿದೆ. ೧೯೭೪ರ ರಾಜ್ಯೋತ್ಸವದ ದಿನದಿಂದ ತಾಲ್ಲೂಕು ಮಟ್ಟದ ನ್ಯಾಯಾಲಯಗಳಲ್ಲಿ ಸಹ ಕನ್ನಡವನ್ನು ಬಳಸಬೇಕೆಂಬ ಆದೇಶವಾಗಿದೆ. ಇತ್ತೀಚೆಗೆ ರಾಜ್ಯದ ಎಲ್ಲ ಮಟ್ಟದ ಕಚೇರಿಗಳಲ್ಲಿಯೂ ನ್ಯಾಯಾಂಗದಲ್ಲಿ ಜಿಲ್ಲಾ ಕೋರ್ಟುಗಳಲ್ಲಿಯೂ ಕನ್ನಡವನ್ನು ಬಳಸಬೇಕೆಂಬ ಆದೇಶಗಳು ಹೊರಟಿವೆ. ರಾಜ್ಯದ ಶ್ರೇಷ್ಠ ನ್ಯಾಯಾಲಯದಲ್ಲಿ ಸಹ ಕನ್ನಡದಲ್ಲಿ ಪ್ರತಿಪಾದನೆಗಳನ್ನು ಮಂಡಿಸಲು ಅವಕಾಶ ಮಾಡಿದ್ದಾರೆ. ಶಾಸನ ಸಭೆ ಹಾಗೂ ಮಂತ್ರಿ ಮಂಡಲದ ಕಾರ್ಯಕಲಾಪಗಳು ಕನ್ನಡದಲ್ಲಿಯೂ ನಡೆಯುತ್ತವೆ. ವಿಧೇಯಕಗಳನ್ನು ಕನ್ನಡದಲ್ಲಿಯೇ ಮಂಡಿಸಬೇಕೆಂದು ಈಚೆಗೆ ವಿಧಿಸಲಾಗಿದೆ. ಈ ದಿಕ್ಕಿನಲ್ಲಿ ರಾಜ್ಯ ವ್ಯಾಪ್ತಿಯುಳ್ಳ ಕನ್ನಡ ಅಭಿವೃದ್ಧಿ (ಈಗ ಕನ್ನಡ ಸಂಸ್ಕೃತಿ) ಇಲಾಖೆಯೊಂದನ್ನು ೧೯೭೪ರಲ್ಲಿಯೇ ಸ್ಥಾಪಿಸಿ ಸರ್ಕಾರ ಈ ನೀತಿಯ ನಿರ್ವಹಣೆಗಾಗಿ ಅಗತ್ಯವಾದ ಹಣವನ್ನು ಒದಗಿಸುತ್ತದಲ್ಲದೆ ಭಾಷೆ ಹಾಗೂ ಆಡಳಿತದಲ್ಲಿ ಸಿದ್ಧಸಾಮರ್ಥ್ಯವಿರುವ ನಿರ್ದೇಶಕರನ್ನು ನೇಮಿಸಿದೆ.

ಪೂರ್ವಭಾವಿ ಕ್ರಮವೆಂದು ಟೈಪು ಯಂತ್ರಗಳ ಸರಬರಾಜು, ಸಿಬ್ಬಂದಿ ತರಬೇತಿ, ಟೈಪಿಗರ ತರಬೇತಿ, ಕನ್ನಡ ಟೈಪು ಇತ್ಯಾದಿಗಳನ್ನು ಕಲಿತವರಿಗೆ ಆರ್ಥಿಕ ಉತ್ತೇಜನ ಮುಂತಾದ ಅನೇಕ ಯೋಜನೆಗಳನ್ನು ಸರಕಾರ ಪ್ರಾರಂಭಿಸಿದೆ. ರಸ್ತೆಗಳ ಕಚೇರಿಗಳ ನಾಮ ಫಲಕಗಳನ್ನೂ, ಮೊಹರುಗಳನ್ನೂ ಕನ್ನಡಕ್ಕೆ ಪರಿವರ್ತಿಸಲಾಗುತ್ತದೆ. ಎಲ್ಲ ಮಟ್ಟದ ಅಧಿಕಾರಿಗಳೂ ಆಜ್ಞೆಗಳನ್ನು ಕನ್ನಡದಲ್ಲಿಯೇ ಬರೆಯಲು ನಿರ್ದೇಶನ ಹೋಗಿದೆ.

ಇದಕ್ಕೆ ಸಂಬಂಧಿಸಿದಂತೆ ಭಾಷಾ ಪರಿಚಯ ಹಾಗೂ ಮಾದರಿಗಳ ಪರಿಚಯ ಮಾಡಿಕೊಡುವಂತಹ ಸಾಹಿತ್ಯ ಸೃಷ್ಟಿಯೂ ಆಗಿದೆ, ಆಗುತ್ತಲಿದೆ. ಕಛೇರಿ ಕೈಪಿಡಿ ಈ ವಿಚಾರದಲ್ಲಿ ಅನುಕರಣೀಯವಾದ ಗ್ರಂಥ. ಮಾದರಿ ಪತ್ರಗಳು, 'ಕಾರ್ಯಾಲಯ ಕೈಪಿಡಿ' 'ವ್ಯಾವಹಾರಿಕ ಕನ್ನಡ' 'ವಿಸ್ತರಣಾ ಕ್ರಮದ' ಕೈಪಿಡಿಗಳು ಪ್ರಕಟವಾಗಿವೆ. ಕಾನೂನು ಪದಕೋಶ, ಪದನಾಮಕೋಶ, ಇಲಾಖಾ ಮರುಪದಕೋಶ ಪ್ರಕಟವಾಗಿವೆ. ಭಾಷಾಂತರ ಇಲಾಖೆ ಮತ್ತು ರಾಜ್ಯಭಾಷಾ ಆಯೋಗಗಳಿಂದ ಕಾನೂನುಗಳ ಭಾಷಾಂತರ ಕೆಲಸ ನಡೆದಿದೆ. ನಿತ್ಯೋಪಯೋಗಿ ಕಾನೂನು ನಿಯಮಗಳು ಕನ್ನಡ ಆವೃತ್ತಿಗಳಲ್ಲಿ ಪ್ರಕಟವಾಗಿವೆ. ಕಾರ್ಯಾಲಯ ಕೈಪಿಡಿ, ಸೇವಾ ನಿಯಮಾವಳಿ, ಆರ್ಥಿಕ ಸಂಹಿತೆ, ಖಜಾನೆ ಸಂಹಿತೆ ಇತ್ಯಾದಿಗಳ ಅಧಿಕೃತ ಕನ್ನಡ ಆವೃತ್ತಿಗಳನ್ನು ಕನ್ನಡ ಅಭಿವೃದ್ಧಿ ಇಲಾಖೆ ಪ್ರಕಟಿಸಿದೆ. ಪ್ರಾಚೀನ ಕರ್ನಾಟಕದ ಆಡಳಿತ ಶಬ್ದಕೋಶ, ಕಾನೂನು ಪದವಿವರಣಾ ಕೋಶಗ್ರಂಥ, ಸಾಂದರ್ಭಿಕ ಗ್ರಂಥಗಳನ್ನು ಪ್ರಕಟನೆಗೆ ಸಿದ್ಧಗೊಳಿಸಲಾಗಿದೆ. ಕನ್ನಡ ಅಭಿವೃದ್ಧಿಯ ಇಲಾಖೆಯ ಯೋಜನೆಗಳಿಂದ ಸ್ಫೂರ್ತಿ ಪಡೆದ ಅನೇಕ ಅಧಿಕಾರಿಗಳು ಹಾಗೂ ಖಾಸಗಿ ನ್ಯಾಯವಾದಿ ಪ್ರಕಾಶಕರು ಕನ್ನಡದಲ್ಲಿ ಕಾನೂನು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಆಯ್ದ ಕಾನೂನು ಉದ್ಗ್ರಂಥಗಳನ್ನು ಭಾಷಾಂತರಿಸಿ ಪ್ರಕಟಿಸಲು ವಿಶ್ವವಿದ್ಯಾಲಯಗಳಿಗೆ ವಹಿಸಿಕೊಡಲಾಗಿದೆ. ಸಿಬ್ಬಂದಿಗೆ ಕನ್ನಡ ತರಬೇತಿಯ ವ್ಯವಸ್ಥೆಯಾಗಿದೆ. ಆಕರ್ಷಕವಾದ ಪ್ರೋತ್ಸಾಹ ಧನ ನೀಡುವ ಯೋಜನೆಗಳೂ ನಮ್ಮ ದುರಿಗೆ ಬಂದಿವೆ. ನಮ್ಮ ಲೋಕ ಸೇವಾ ಆಯೋಗದ ಕೆಲವು ಚಿಕ್ಕ ಪರೀಕ್ಷೆಗಳಲ್ಲಿ ಈಗೀಗ ಕನ್ನಡ ಮಾಧ್ಯಮಕ್ಕೂ ಸ್ಥಾನ ದೊರಕುತ್ತಲಿದೆ. ಈ ವಿಚಾರದಲ್ಲಿ ಬೇರೆ ಕೆಲವು ರಾಜ್ಯಗಳ ಲೋಕ ಸೇವಾ ಆಯೋಗಕ್ಕಿಂತ ನಮ್ಮ ರಾಜ್ಯದ ಆಯೋಗ ಹಿಂದೆ ಇದೆ.

**ನ್ಯಾಯಾಲಯಗಳಲ್ಲಿ ಕನ್ನಡ**

ನ್ಯಾಯಾಲಯಗಳ ತೀರ್ಪುಗಳಲ್ಲಿ ಕನ್ನಡದ ಬಳಕೆಯೇ ಅಸಾಧ್ಯವೆಂದು ಹೇಳುತ್ತಿರುವವರು ಇನ್ನೂ ಇದ್ದಾರೆ. ಆದರೆ ಅಂಥವರಿಗೆ ಉತ್ತರವೆಂಬಂತೆ ೧೯೭೪ರಷ್ಟು ಹಿಂದೆಯೇ ಚಿತ್ರದುರ್ಗ ಜಿಲ್ಲಾ ರೆವೆನ್ಯೂ ನ್ಯಾಯಾಲಯದಿಂದ ನೂರಾರು ಕನ್ನಡ ತೀರ್ಪುಗಳನ್ನು ನೀಡಿದ ಜಿಲ್ಲಾಧಿಕಾರಿ (ಕನ್ನಡ ಅಭಿವೃದ್ಧಿ ಇಲಾಖೆಯ ಪ್ರಥಮ ನಿರ್ದೇಶಕರಾದರು) ಇತಿಹಾಸ ನಿರ್ಮಿಸಿದರು. ಇವುಗಳಲ್ಲಿ ಕೆಲವನ್ನು ಆಯ್ದು ಮೈಸೂರು ವಿಶ್ವವಿದ್ಯಾಲಯ 'ಕನ್ನಡ ತೀರ್ಪುಗಳು' ಎಂಬ ಪುಸ್ತಕವನ್ನು ಪ್ರಕಟಿಸಿತು. ಈ ಪ್ರಕಟಣೆ ಉತ್ಸಾಹೀ ನ್ಯಾಯಾಧೀಶರಿಗೆ ಚಾಲನೆ ನೀಡಿತು. ಅನಂತರ ಇಲಾಖೆ ಏರ್ಪಡಿಸಿದ ಸ್ಪರ್ಧೆಗಳಲ್ಲಿ ಹಲವಾರು ಜನ ನ್ಯಾಯಾಂಗದ ಅಧಿಕಾರಿಗಳು ನೂರಾರು ಕನ್ನಡ ತೀರ್ಪುಗಳನ್ನು ನೀಡಿ ಈ ಭಾಷೆಯನ್ನು ಕೋರ್ಟುಗಳಲ್ಲಿಯೂ ಬಳಸಬಹುದೆಂಬುದನ್ನು ಸಾಬೀತುಪಡಿಸಿದರು. ಈಗಲೂ ಭೂನ್ಯಾಯ ಮಂಡಲಿಯ ಬಹುತರ ತೀರ್ಪುಗಳು ಕನ್ನಡದಲ್ಲಿ ಹೊರಬರುತ್ತಿವೆ. ನ್ಯಾಯಾಂಗದಲ್ಲಿ ಇನ್ನಷ್ಟು ಸೌಲಭ್ಯಗಳು ಒದಗಿಸಿದರೆ ಹೆಚ್ಚಿನ ಸಾಧನೆ ಸಾಧ್ಯವಿದೆ.

**ವಿವಿಧ ಇಲಾಖೆಗಳಲ್ಲಿ**

ಪೋಲೀಸ್ ಇಲಾಖೆಯ ಕೆಲವು ಮುಖ್ಯಾಧಿಕಾರಿಗಳ ಶ್ರದ್ಧೆಯ ಫಲವಾಗಿ ಕನ್ನಡದಲ್ಲಿ ವ್ಯವಹರಿಸಲು, ಟೈಪು ಮಾಡಲು ತರಬೇತಿ ಪಡೆದ ಪೇದೆಗಳ ಸೈನ್ಯವೇ ತಯಾರಾಗಿದೆ. ಆ ಇಲಾಖೆಯ ಪ್ರಾಥಮಿಕ ಸಮಾಚಾರ ವರದಿಗಳೂ ಕೆಳಮಟ್ಟದ ಪತ್ರ ವ್ಯವಹಾರವೆಲ್ಲ ಕನ್ನಡವಾಗಿದೆಯೆನ್ನಬಹುದು. ರೆವಿನ್ಯೂ ಇಲಾಖೆಯಲ್ಲಿ ವಿವಿಧ ಮಟ್ಟಗಳಲ್ಲಿ ಆಗೊಮ್ಮೆ ಈಗೊಮ್ಮೆ ಕನ್ನಡ ಪ್ರಕಟಣೆಗಳೋ ಪರಿಪತ್ರಗಳೋ ಕಂಡರೂ ಉಪ ವಿಭಾಗಕ್ಕಿಂತ ಮೇಲೆ ಕನ್ನಡ ಸಮರ್ಪಕವಾಗಿ ಏರಿಲ್ಲವೆನ್ನಬಹುದು. ಕೆಲಜನ ವಿಭಾಗಾಧಿಕಾರಿಗಳೂ, ಜಿಲ್ಲಾಧಿಕಾರಿಗಳೂ ತೋರಿದ ಅಸಾಧಾರಣ ಆಸಕ್ತಿಯಿಂದ ಸಾಧನೆಯೂ ಇದೆ. ಅದನ್ನು ಮುಂದುವರಿಸದೆ ಹಿಂದಕ್ಕೆ ತಳ್ಳಿದ ಇತರರೂ ಕಾಣುತ್ತಾರೆ. ಸಹಜವಾಗಿ ಕನ್ನಡವನ್ನು ಬಳಸಬಹುದಾದಂಥ ಶಿಕ್ಷಣ ಇಲಾಖೆ ಈ ವಿಚಾರದಲ್ಲಿ ಬಹಳ ಹಿಂದೆ ಉಳಿದಿರುವುದು ವಿಷಾದಕರ. ಇತರ ಇಲಾಖೆಗಳಲ್ಲಿ ಆಯಾ ಸಮಯದ ಅಧಿಕಾರಿಗಳ ಕನ್ನಡ ಪ್ರೀತಿಗನುಸರಿಸಿ ಕೆಲಸವಾಗಿದೆ. ಒಮ್ಮೊಮ್ಮೆ ತಾಂತ್ರಿಕ ಇಲಾಖೆಗಳಂಥ ಲೋಕೋಪಯೋಗಿ ಇಲಾಖೆಯಲ್ಲಿ, ಆದಾಯ ತೆರಿಗೆ ಇಲಾಖೆಯಲ್ಲಿ ಉತ್ಸಾಹಿ ಸಿಬ್ಬಂದಿಯವರು ಸಮರ್ಥವಾಗಿ ಕನ್ನಡವನ್ನು ಬಳಸಿ ಅಚ್ಚರಿಯನ್ನುಂಟುಮಾಡಿದ್ದಾರೆ. ಅನಾಸಕ್ತ ಮೇಲಾಧಿಕಾರಿಗಳಿಂದ ಬೈಸಿಕೊಂಡೂ ಇದ್ದಾರೆ. ಮನಸ್ಸು, ಪ್ರಯತ್ನವಿದ್ದರೆ ಯಾವ ಇಲಾಖೆಯಲ್ಲಾದರೂ ಕನ್ನಡವನ್ನು ಬಳಸಬಹುದೆಂಬುದಕ್ಕೆ ಈ ಸಮೀಕ್ಷೆಯೇ ಸಾಕು. ಕಾರ್ಖಾನೆಗಳಲ್ಲಿ ವಿವಿಧ ಮಂಡಲಗಳಲ್ಲಿ ಕನ್ನಡದ ಬಳಕೆ ಇನ್ನೂ ಸಾಧಿಸಬೇಕಾಗಿದೆ.

## ಸಮಸ್ಯೆಗಳು, ಪರಿಹಾರಗಳು

ಆಡಳಿತ ಭಾಷೆಯನ್ನು ಬಳಕೆಗೆ ತರುವಲ್ಲಿ ಸಮಸ್ಯೆಗಳು ಇಲ್ಲವೆಂದೇನೂ ಹೇಳುತ್ತಿಲ್ಲ. ಆ ಬಗ್ಗೆ ಸಮಾಲೋಚನೆ ಮಾಡಲು ೧೯೭೭ರಷ್ಟು ಹಿಂದೆಯೇ ಮೈಸೂರಿನಲ್ಲಿ ದಕ್ಷಿಣ ರಾಜ್ಯಗಳ ಆಡಳಿತ ಭಾಷಾ ಗೋಷ್ಠಿಯನ್ನು ಕರೆಯಲಾಗಿತ್ತು. ಆಯಾ ರಾಜ್ಯಗಳ ರಾಜ್ಯ ಭಾಷಾ ಆಯೋಗದವರೂ ಅಧಿಕಾರಿಗಳೂ ಸುಮಾರು ಮೂವತ್ತೆರಡು ಪ್ರಬಂಧಗಳನ್ನು ಮಂಡಿಸಿ ಎಲ್ಲ ಸಮಸ್ಯೆಗಳ ಮೇಲೆ ಬೆಳಕು ಬೀರಿ ಪರಿಹಾರ ಸೂಚಿಸಿದರು. ಈ ಗೋಷ್ಠಿಯ ಸಲಹೆಯಂತೆ ಇಂಥದೇ ಸಮ್ಮೇಳನವನ್ನು ೧೯೭೮ರಲ್ಲಿ ರಾಷ್ಟ್ರ ಮಟ್ಟದಲ್ಲಿಯೂ ಭಾರತ ಸರಕಾರ ಸೇರಿಸಿತು. ಆಮೇಲೆ ಅನೇಕ ಸೂಕ್ತ ಸಲಹೆಗಳನ್ನು ರಾಜ್ಯ ಸರಕಾರಗಳಿಗೆ ಕೇಂದ್ರ ಸರಕಾರ ಕಳಿಸಿತು.

ಆಡಳಿತ ಭಾಷಾ ನೀತಿಯ ಕಾರ್ಯಾಚರಣೆಯಲ್ಲಿ ಪ್ರಧಾನವಾದ ಸಮಸ್ಯೆ ಮಾನಸಿಕ ಸಿದ್ಧತೆಯಾಗಿದೆ. ಪಾರಿಭಾಷಿಕ ಸಮಸ್ಯೆ ಎಂದೋ ಬಗೆಹರಿದಿದೆ. ಆಡು ಭಾಷೆಯನ್ನೂ ಸಂದಿಗ್ಧವಿದ್ದಲ್ಲಿ ಇಂಗ್ಲೀಷ್‌ನ್ನೂ ಬಳಸಲು ಅವಕಾಶವಿದೆ. ಹೀಗಿರುವಾಗ ಇದು ಭಾಷೆಯ ತಯಾರಿಯ ಪ್ರಶ್ನೆಯಲ್ಲ, ಭಾಷೆ ಬಳಸುವವರ ತಯಾರಿಯ ಪ್ರಶ್ನೆ. ಪ್ರಾದೇಶಿಕ ಭಾಷೆ ಬರದಿದ್ದ ಮತ್ತು ಕಲಿಯಲು ತಯಾರಿಲ್ಲದ ನೌಕರರೇ ಈ ದಿಕ್ಕಿನಲ್ಲಿ ದೊಡ್ಡ ಆತಂಕವಾಗಿದ್ದಾರೆಂದು ಅನೇಕ ಆಯೋಗದವರು ಹೇಳಿದ್ದಾರೆ. ಇಂಥವರಿಗಾಗಿ ಈಗ ನೀಡುತ್ತಿರುವ ತರಬೇತಿಯಾಗಲೀ ನಿಯಮಿತವಾದ ಭಾಷಾ ಪರೀಕ್ಷೆಗಳಾಗಲೀ ಉದ್ದೇಶ ಸಾಧಿಸಲು ತೀರಾ ಅಸಮರ್ಥವಾಗಿವೆಯೆಂದು ಯಾರಾದರೂ ಹೇಳಬಹುದು. ಮೈಸೂರಿನ ಗೋಷ್ಠಿಯಲ್ಲಿ ಭಾಷೆ ಬಳಸಲು ಸಮರ್ಥರಲ್ಲದ ಅಧಿಕಾರಿಗಳನ್ನು ಜಿಲ್ಲಾ ತಾಲೂಕುಗಳಿಗೆ ಕಳಿಸಬಾರದೆಂಬ ಒಂದು ಗೊತ್ತುವಳಿಯೇ ಪಾಸಾಯಿತು. ಕನ್ನಡ ಬರುತ್ತಿದ್ದರೂ ಮೇಲಧಿಕಾರಿಗಳಿಗೆ ಅಂಜಿಯೋ, ಬರಿದಾದ ಇಂಗ್ಲೀಷ್ ಮೇಲಿನ ದುರಭಿಮಾನದಿಂದಲೋ ಸುಳ್ಳು ಪ್ರತಿಷ್ಠೆಗಾಗಿಯೋ ಕನ್ನಡವನ್ನು ಬಳಸಲೊಲ್ಲದ ನೌಕರರದು ಎರಡನೆಯ ಸಮಸ್ಯೆ. ಈ ಸಮಸ್ಯೆಯ ಪರಿಹಾರಕ್ಕೆ ನಮ್ಮ ಸರಕಾರದ ಈವರೆಗಿನ ಆದೇಶಗಳ ಶಕ್ತಿ ಸಾಲದು. ಆದೇಶಗಳು ಇನ್ನಷ್ಟು ಹರಿತವಾದರೆ ಅಪಾಯದ ಬೆದರಿಕೆಯಿಂದ ಕನ್ನಡದ ಕೆಲಸವಾದೀತು. ಸರ್ಕಾರೀ ಕೆಲಸಕ್ಕೆ ಸೇರುವವರಿಗೆ ಸಾಕಷ್ಟು ಮಟ್ಟದ ಕನ್ನಡದ ಜ್ಞಾನವಿರುವಂಥ ಭಾಷಾ ಪತ್ರಿಕೆ ಕಡ್ಡಾಯ ಮಾಡುವುದಲ್ಲದೆ, ಕನ್ನಡ ಮಾಧ್ಯಮಕ್ಕೆ ಅವಕಾಶ ನೀಡಿದರೆ ಸರ್ಕಾರದಲ್ಲಿ ಕನ್ನಡ ಬರಲಾರದವರ ಸಂಖ್ಯೆ ಕ್ರಮೇಣ ಕಡಿಮೆಯಾಗಿ ಆಡಳಿತ ಭಾಷಾ ಸಮಸ್ಯೆ ಸಡಿಲುತ್ತದೆ. ಈ ದಿಕ್ಕಿನಲ್ಲಿ ಕೇಂದ್ರ ಸರ್ಕಾರ ಈಗಾಗಲೇ ರಾಜ್ಯ ಸರ್ಕಾರಗಳಿಗೆ ಸಲಹೆ ನೀಡಿದೆ. ಹಲವು ರಾಜ್ಯಗಳಲ್ಲಿ ಮತ್ತು ಕೇಂದ್ರದ ಲೋಕಸಭಾ ಆಯೋಗದಲ್ಲಿ ಇಂಥ ಅನೇಕ ಸೂಚನೆಗಳು ಕಾರ್ಯಗತವಾಗಿವೆ. ಹಿಂದಿ ಪರೀಕ್ಷೆ ಬರೆಯಲಾರದವನಿಗೆ ಉತ್ತರ ಭಾರತದ ಅನೇಕ ರಾಜ್ಯಗಳಲ್ಲಿ, ಮರಾಠಿ ಬಾರದವನಿಗೆ ಮಹಾರಾಷ್ಟ್ರದಲ್ಲಿ, ತಮಿಳು ಬಾರದವನಿಗೆ ತಮಿಳು ನಾಡಿನಲ್ಲಿ ಕೆಲಸ ಸಿಗುವುದೇ ಕಷ್ಟ. ನಮ್ಮ ರಾಜ್ಯದ ಸೇವಾ ಆಯೋಗ ಹಾಗೂ ಇತರ ನೇಮಕಾತಿ ಸಂಸ್ಥೆಗಳು ಇಂಥ ನಿದರ್ಶನಗಳಿಂದ ಮಾರ್ಗದರ್ಶನ ಪಡೆಯುವುದು ಸೂಕ್ತ. ಇಂಥ ನೇಮಕಾತಿಗಳಲ್ಲಿ ಕನ್ನಡಕ್ಕೆ ಪ್ರಥಮ ಸ್ಥಾನ ಇನ್ನೂ ಕೆಲಕಾಲ ಸಿಗದಿದ್ದರೆ ಈ ರಾಜ್ಯದಲ್ಲಿ ಕನ್ನಡ ಓದುವವರಿಗೂ ಕನ್ನಡಕ್ಕೂ ಭವಿಷ್ಯ ಶೂನ್ಯವೆಂದೇ ಹೇಳಬೇಕಾಗುತ್ತದೆ.

ರಾಜ್ಯ ಸರ್ಕಾರದವರು ಸುಲಭವಾಗಿ ಪರಿಹರಿಸಬಹುದಾದ ಕೆಲವು ಅಡಚಣೆಗಳಿವೆ. ಕನ್ನಡ ಬಳಸಬೇಕೆಂಬ ಕುತೂಹಲವುಳ್ಳ ನ್ಯಾಯಾಲಯಗಳಲ್ಲಿ, ಕಛೇರಿಗಳಲ್ಲಿ ಟೈಪು ಯಂತ್ರಗಳಿರುವುದಿಲ್ಲ. ಯಂತ್ರಗಳಿದ್ದರೆ, ಟೈಪಿಸ್ಟರೋ, ಶೀಘ್ರಲಿಪಿಗಾರರೋ ಇರುವುದಿಲ್ಲ. ಅವರೆಲ್ಲ ಇದ್ದಲ್ಲಿ ಅಧಿಕಾರಿಗಳಿಗೆ ಆಸಕ್ತಿಯಿಲ್ಲದೆ ಶೀಘ್ರಲಿಪಿಕಾರನಿಂದ ಗುಮಾಸ್ತೆ ಕೆಲಸ ಮಾಡಿಸಲೂ ಬಹುದು. ಟೈಪಿಸ್ಟು ಮತ್ತು ಶೀಘ್ರಲಿಪಿಕಾರರ ನೇಮಕಾತಿ ನಿಯಮಗಳು ನೇಮಕ ಮಾಡಿಕೊಳ್ಳುವ ಅಧಿಕಾರಿಗೆ ಕನ್ನಡದವನನ್ನು ಕಡೆಗಣಿಸಿ ದಕ್ಕಿಸಿಕೊಳ್ಳುವ ಅಧಿಕಾರ ನೀಡಿದೆ. ಮತ್ತೆ ಕನ್ನಡ ಬರದಿದ್ದವನ ನೇಮಕ. ಅವನ ಅಸಮರ್ಪಕ ತರಬೇತಿ, ಅಲ್ಲಿಯವರೆಗೆ ಕನ್ನಡ ಬರೆಯಲಾಗುವುದಿಲ್ಲವೆಂಬ ಸಬೂಬು – ಹೀಗಿದೆ ವಿಷವರ್ತುಲ. ಹಲವು ರಾಜ್ಯಗಳಲ್ಲಿ ಹಂತವಾಗಿ ಇಂಗ್ಲಿಷ್ ಟೈಪ್‌ರೈಟರುಗಳನ್ನು ಹಿಂತೆಗೆದುಕೊಂಡು ರಾಜ್ಯ ಭಾಷಾ ಯಂತ್ರಗಳನ್ನು ಒದಗಿಸುವ ವ್ಯವಸ್ಥೆಯಿದೆ. ಕರ್ನಾಟಕದಲ್ಲಿಯೂ ಹೀಗೆ ಮಾಡದೇ ಇರಲು ಯಾವ ವಿಶೇಷ ಕಾರಣವೂ ಇಲ್ಲ. ಇಂಥ ಯೋಜನೆಗಳಲ್ಲಿ ಎಂಥದೋ ಒತ್ತಡ ಬೇಕು. ಸರ್ಕಾರದ್ದಾದರೂ ಸರಿ, ಸಾರ್ವಜನಿಕರದಾದರೂ ಸರಿ. ಈ ಎರಡೂ ಪರಿಣಾಮಕಾರಿ ಪ್ರಮಾಣದಲ್ಲಿ ಇಲ್ಲದಿರುವಾಗ ಇಂಥ ಯೋಜನೆಯನ್ನು ಕಾರ್ಯಗತ ಮಾಡುವ ಹೊಣೆ ಹೊತ್ತ ಇಲಾಖೆಯ ಅಧಿಕಾರಿಗಳ ಗತಿ ಸ್ಥಿತಿ ಹೇಗಾದೀತು? ಕೆಲವೊಮ್ಮೆ ಏನೋ ವೈಯಕ್ತಿಕ ವ್ಯಕ್ತಿತ್ವದ ಅಲ್ಪ ಸ್ವಲ್ಪ ಕೆಲಸ ಸಾಧಿಸಿದರೂ, ಸ್ವಯಂ ಪ್ರೇರಣೆ, ಕರ್ತವ್ಯ ಪ್ರಜ್ಞೆ, ಜನ ಹಿತದೃಷ್ಟಿ,ಅಥವಾ ಕನಿಷ್ಟ ಪಕ್ಷ ಸರ್ಕಾರೀ ಆದೇಶಗಳ ಬಗ್ಗೆ ಗೌರವವೂ ಇಲ್ಲದ ದರ್ಪೋದ್ಧತ ಅಧಿಕಾರಿಗಳೊಂದಿಗೆ ಅವಮಾನಕರ ಹಣಗಾಟದಲ್ಲಿ ಸಿಕ್ಕಿಕೊಳ್ಳುವ ಸಂದರ್ಭಗಳೂ ಉಂಟು.

ಕನ್ನಡ ನಾಡಿನಲ್ಲಿ ಕನ್ನಡವನ್ನು ಬಳಸಿ ಕನ್ನಡಕ್ಕೆ ಅಥವಾ ಕನ್ನಡ ನಾಡಿನ ಜನರಿಗೆ ಮಹದುಪಕಾರ ಮಾಡುತ್ತಿದ್ದೇವೆಯೆಂದು ಯಾರೂ ಭಾವಿಸಬೇಕಾಗಿಲ್ಲ.

ಇದು ನೂರಾರು ಜನ ಅಧಿಕಾರಿಗಳ ಪ್ರಶ್ನೆಯೂ ಅಲ್ಲ. ಅಥವಾ ಕೆಲಸಕ್ಕೆ ಸೇರಿಕೊಳ್ಳ ಬಯಸುವವರ ಪ್ರಶ್ನೆಯೂ ಅಲ್ಲ. ಇದು ಕೋಟಿ ಕೋಟಿ ಕನ್ನಡ ಜನಸಾಮಾನ್ಯರ ಅನುಕೂಲದ ಪ್ರಶ್ನೆಯೆಂಬುದನ್ನು ನಾವು ಬೇಗ ಅರಿಯಬೇಕು.

# ನ್ಯಾಯಾಲಯದಲ್ಲಿ ಕನ್ನಡ

ಕಂಠೀರಾವ್

ಕನ್ನಡ ರಾಜರು ರಾಜಾಜ್ಞೆಗಳನ್ನು ಹೊರಡಿಸಲು, ಪ್ರಜೆಗಳ ಆಸ್ತಿಪಾಸ್ತಿ ವಿವಾದಗಳನ್ನೂ ಸೀಮಾ ವಿವಾದಗಳನ್ನೂ ತೀರ್ಮಾನಿಸಲು ಕನ್ನಡ ಭಾಷೆಯನ್ನು ಮತ್ತು ಲಿಪಿಯನ್ನು ಸುಮಾರು ಸಾವಿರದ್ಯೆನೂರು ವರ್ಷಗಳಷ್ಟು ಪೂರ್ವ ಕಾಲದಿಂದಲೂ ಉಪಯೋಗಿಸುತ್ತ ಬಂದಿದ್ದಾರೆ. ಕದಂಬರು, ಗಂಗರು, ಹೊಯ್ಸಳರು, ರಾಷ್ಟ್ರಕೂಟರು. ಚಾಲುಕ್ಯರು ಮತ್ತು ವಿಜಯನಗರದರಸರ ಕಾಲಗಳಿಗೆ ಸಂಬಂಧಿಸಿದ ಶಿಲಾ ಶಾಸನಗಳಲ್ಲಿ ನ್ಯಾಯ ತೀರ್ಮಾನ ಮಾಡಿದ ರಾಜಾಜ್ಞೆಗಳ ಮಾದರಿಗಳು ಸಿಕ್ಕುತ್ತವೆ. ಜಯತೀರ್ಥರಾಜ ಪುರೋಹಿತರು 'ಕನ್ನಡ ತೀರ್ಪುಗಳು' ಎಂಬ ತಮ್ಮ ಗ್ರಂಥದ' ಸುದೀರ್ಘ ಪೀಠಿಕೆಯಲ್ಲಿ ಇಂಥ ಕೆಲವು ಮುಖ್ಯ ಶಿಲಾಶಾಸನಗಳನ್ನು ಉಲ್ಲೇಖಿಸಿದ್ದಾರೆ. ಇವುಗಳಲ್ಲಿ ದೊರೆಯುವ ನ್ಯಾಯ ತೀರ್ಮಾನ ಸ್ವರೂಪದ ಆಧಾರಗಳು ಹೆಚ್ಚು ಸಿಕ್ಕುತ್ತಿಲ್ಲವೇನೋ ನಿಜ. ಪ್ರಾಯಃ ಅಂದು ವ್ಯಾಜ್ಯಗಳ ಸಂಖ್ಯೆ ಕಡಿಮೆಯಾಗಿದ್ದು, ತೀರ್ಮಾನಗಳು ಕೂಡಲೇ ಜಾರಿಗೆ ಬಂದು, ಪ್ರಜೆಗಳಿಗೆ ವಿಲಂಬವಿಲ್ಲದೆ ನ್ಯಾಯ ದೊರೆಯುತ್ತಿದ್ದುದರಿಂದ ಅಂಥ ತೀರ್ಮಾನಗಳನ್ನು ಲಿಖಿತ ರೂಪದಲ್ಲಿ ಸಂಗ್ರಹಿಸಿ ಕೊಡಲಿಲ್ಲವೇನೋ ಎಂದಿದ್ದಾರೆ, ನ್ಯಾಯಾಧೀಶರಾದ ಜಿನದತ್ತ ದೇಸಾಯಿ ಅವರು.

## ಸ್ವಾತಂತ್ರ್ಯಪೂರ್ವ ಪರಿಸ್ಥಿತಿ

ಇಸ್ಲಾಮೀ ಮತ್ತು ಆಂಗ್ಲ ಆಧಿಪತ್ಯದ ಕಾಲದಲ್ಲಿ ಕೂಡ ಕನ್ನಡ ಭಾಗಗಳಲ್ಲಿ ಪ್ರಾರಂಭಿಕ ವಿಚಾರಣಾ ಹಂತದಲ್ಲಿ ನ್ಯಾಯ ಪರಾಮರ್ಶನ ಕನ್ನಡದಲ್ಲಿಯೇ ನಡೆಯುತ್ತಿದ್ದುದರಿಂದ ಪ್ರಾಚೀನ ಧರ್ಮಶಾಸ್ತ್ರಗಳನ್ನು ಕನ್ನಡಕ್ಕೆ ಅನುವಾದಿಸಲಾಯಿತು. ಕನ್ನಡ ಪ್ರಾಂತದ ಸಾವಿರಾರು ಮುಸ್ಲಿಂ ಬಂಧುಗಳು ಕನ್ನಡ ಮಾತನಾಡುವವರೇ ಆಗಿದ್ದುದರಿಂದ ಮಹಮ್ಮದೀಯ ಕಾನೂನನ್ನು ಕೂಡ ಕನ್ನಡಕ್ಕೆ ಅನುವಾದಿಸಲಾಯಿತು. ಆಂಗ್ಲ ಆಧಿಪತ್ಯದ ಕಾಲದಲ್ಲಿ ಜಾರಿಗೆ ಬಂದ (ಎವಿಡೆನ್ಸ್ ಆ್ಯಕ್ಟ್, ಪೀನಲ್ ಕೋಡ್) ಮೊದಲಾದ ಮಹತ್ವದ ಕಾನೂನುಗಳ ಕನ್ನಡ ಪಾಠಗಳೂ ಪ್ರಕಟವಾದುವು. ಕೆಲಕಾಲ ಕನ್ನಡಕ್ಕೆ ರಾಜಾಶ್ರಯ ತಪ್ಪಿದರೂ ಕೆಳಮಟ್ಟದ ನ್ಯಾಯಾಲಯಗಳಲ್ಲಿ ಕನ್ನಡದ ಬಳಕೆ ಮುಂದುವರಿದುಕೊಂಡು ಬಂತೆಂದೇ ಹೇಳಬಹುದು. ಪ್ರಜೆಗಳು ತಮ್ಮ ಖಾಸಗೀ ವ್ಯವಹಾರಗಳಲ್ಲಿ ಒಪ್ಪಂದ ಮತ್ತು ಕರಾರುಗಳನ್ನು ಬರೆಯಲು ಆಸ್ತಿ ವಿಭಜನೆ, ದಾನದತ್ತಿ, ದೇಣಿಗೆ ಮತ್ತು ಮರಣ ಶಾಸನಗಳನ್ನು ಕುರಿತು ದಸ್ತಾವೇಜುಗಳನ್ನು ಬರೆಯಲು ಕನ್ನಡವನ್ನೇ ಬಳಸುತ್ತ ಬಂದಿದ್ದಾರೆ. ಪರಕೀಯರ ಆಧಿಪತ್ಯದ ಕಾಲದಲ್ಲಿಯೂ ಕೂಡ ವಿದೇಶೀಯ ಪ್ರಭುಗಳ ರಾಜಭಾಷೆಯನ್ನರಿಯದ ಕನ್ನಡ ಪ್ರದೇಶಗಳ ಪ್ರಜೆಗಳು ಕಕ್ಷಿಗಾರರಾಗಿ ಸಾಕ್ಷಿಗಳಾಗಿ ನ್ಯಾಯಾಲಯದ ಮುಂದೆ ತಮ್ಮ ಹೇಳಿಕೆಗಳನ್ನೆಲ್ಲ ಕನ್ನಡದಲ್ಲಿಯೇ ನೀಡಿದ್ದಾರೆ. ಕನ್ನಡ ಲಿಖಿತಗಳೂ ಕೂಡ ಸಾಕ್ಷ್ಯಗಳಾಗಿ ಸ್ವೀಕರಿಸಲ್ಪಟ್ಟಿವೆ. ನ್ಯಾಯಾಲಯಗಳ ದಾಖಲೆಗಳಲ್ಲಿ ಇಂಥ ಆಧಾರಗಳು ಹೇರಳವಾಗಿ ಸಿಕ್ಕುತ್ತವೆ.

ವಿವಿಧ ಕನ್ನಡ ಭಾಗಗಳ ನ್ಯಾಯಾಲಯಗಳಲ್ಲಿ ಕನ್ನಡದ ಬಳಕೆಗೆ ಪೂರಕ ಸಾಹಿತ್ಯವಾಗಿ ನಿರ್ಮಾಣವಾದ ಅಪಾರ ಗ್ರಂಥರಾಶಿಯನ್ನು ನೋಡಿದರೆ ಕನ್ನಡ ನ್ಯಾಯಾಲಯ ಭಾಷೆಯಾಗಿ ತನ್ನ ಸ್ಥಾನವನ್ನು ಎಂದೂ ಸಂಪೂರ್ಣವಾಗಿ ಕಳೆದುಕೊಂಡಿಲ್ಲವೆಂದೇ ಹೇಳಬಹುದು. ೧೮೪೭ರಿಂದ ಸ್ವಾತಂತ್ರ್ಯ ಪ್ರಾಪ್ತಿಯ ಕಾಲದ ವರೆಗೆ ಸುಮಾರು ನೂರು ವರ್ಷಗಳ ಕಾಲದ ವರೆಗೆ ಅವ್ಯಾಹತವಾಗಿ ಕನ್ನಡದಲ್ಲಿ ರಚನೆಗೊಂಡ ನೂರಾರು ನ್ಯಾಯಗ್ರಂಥಗಳನ್ನೂ ವ್ಯಾಖ್ಯಾನ ಗ್ರಂಥಗಳನ್ನೂ ಡಾ.ರಾ.ಯ. ಧಾರವಾಡಕರರು "ಕನ್ನಡದಲ್ಲಿ ಕಾನೂನು ಸಾಹಿತ್ಯ" ಎಂಬ ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿರುವುದಲ್ಲದೆ ಅಂಥ ಮುನ್ನೂರಕ್ಕೂ ಮೇಲ್ಪಟ್ಟ ಸಂಖ್ಯೆಯ ಗ್ರಂಥಗಳ ಹೆಸರುಗಳನ್ನು ಪಟ್ಟಿಮಾಡಿ ಕೊಟ್ಟಿದ್ದಾರೆ. ಅಷ್ಟೇ ಅಲ್ಲ, ಅಂಥ ಗ್ರಂಥಗಳಲ್ಲಿ ಉಪಯೋಗಿಸಿರುವ ಪತ್ರಲೇಖನ, ಕರಾರು, ಒಪ್ಪಂದ, ಇವೇ ಅಲ್ಲದೆ ವೇಶ್ಯಾ ವ್ಯವಹಾರಕ್ಕೆ ಸಂಬಂಧಿಸಿದ ವಿಷಯಗಳನ್ನು ಕುರಿತು ಸುಸಂಸ್ಕೃತ ಪದ್ಧತಿಯಲ್ಲಿ ಬರೆದ ಪತ್ರಗಳ ಕನ್ನಡ ಮಾದರಿಗಳನ್ನೂ ಉಲ್ಲೇಖಿಸಿದ್ದಾರೆ.

ನ ಚ ಏವ ಭಾಷಾ ಶಾಸ್ತ್ರಾನುಪಯೋಗಿನೀ
ಕಾವ್ಯ ನಾಟಕ ಪ್ರಬಂಧ............ಪುಣ್ಯವತಿ ಪ್ರಮಿತ
ಗ್ರಂಥಸ್ಯ ಚೂಡಾಮಣಿ ಇತಿ ಅಭಿದಾನಸ್ಯ ಗ್ರಂಥಸ್ಯ
ಉಪಲಬ್ಧಮಾನತ್ವಾತ

ಎಂದು ಹದಿನೇಳನೆಯ ಶತಮಾನದಷ್ಟು ಹಿಂದೆಯೇ ಕನ್ನಡ ಮಹಾ ವೈಯಾಕರಣನಾದ ಭಟ್ಟಾಕಳಂಕ ಬರೆದಿದ್ದಾನೆ. ಸಕಲ ಬಗೆಯ ಶಾಸ್ತ್ರ ಗ್ರಂಥ ರಚನೆಗೆ ಕನ್ನಡ ಭಾಷೆ ಸರ್ವಸಮರ್ಥವಾದ ಸಂಪದ್ಭರಿತ ಭಾಷೆಯಾಗಿತ್ತೆಂದು ಹೊಗಳಿದ್ದಾನೆ.

ಕನ್ನಡವನ್ನು ಒಂದಲ್ಲೊಂದು ರೂಪದಲ್ಲಿ, ಅಂದರೆ ಸಾಕ್ಷ್ಯಗಳಾಗಿಯೋ ಹೇಳಿಕೆಗಳಾಗಿಯೋ, ಕಾನೂನು ಸಂಭಾ

ಪಣಗಳಿಗಾಗಿಯೋ ಒಂದಿಲ್ಲೊಂದು ಹಂತದಲ್ಲಿ ಅವ್ಯಾಹತವಾಗಿ ಉಪಯೋಗಿಸುತ್ತ ಬಂದಿರುವುದರಿಂದಲೇ ಕನ್ನಡ ಸಾಹಿತ್ಯದಲ್ಲಿಯೂ ನ್ಯಾಯ ಪ್ರಜ್ಞೆಯನ್ನು ಮೂಡಿಸುವ ಮತ್ತು ನ್ಯಾಯದರ್ಶನವನ್ನು ಒದಗಿಸುವ ಉಕ್ತಿ–ಸೂಕ್ತಿಗಳು ಹೇರಳವಾಗಿ ಸಿಕ್ಕುತ್ತವೆ. ಕಳ್ಳನೊಳ್ಳಿದನಲ್ಲ, ಕಳ್ಳ ಸೊಕ್ಕಲಾದುದಿಲ್ಲ, ಕಳ್ಳ ತಾಕಟ್ಟು ಏಳೊಕ್ಕಲಂ ಕೆಡಿಸಿದನೆ ಕಳವೇಲಿ ಕೊಲ್ಲದೆ ಕಾಯ್ವುದೇ. ಕಳ್ಳಸತ್ತೊಡಮಕ್ಕುಂ ಕಳ್ಳುಡುಕಿಗಳುಂ ನಿರ್ದಯರುಂ ಮಾಡದ ಪಾಪವಿಲ್ಲ, ಮಧುಪಾಯಿಗಳಿಗುಂಟೆ ಶುಚಿಭಾವ, ಶಪಥಮುಂಟೇ ದ್ಯೂತವರ್ತಿಗೆ, ಹೆಣನಿರಿದು ಪಗಗೊಂಡರೆ, ಪೆಂಡಿರದೋಷಕೆ ಮಕ್ಕಳ ಮೂಗಂ ಕೊಯ್ವರೆ, ಗಂಡನಿಲ್ಲದ ಶಶಿವದನೆಗೆ ಗರ್ಭಮಾದ ತೆರದಿಂ, ಹಾದರ ಸದರವೆ ಸಾವಿಗೆ ಮೊದಲು ಇವೇ ಮೊದಲಾದ ಮಾತುಗಳಲ್ಲಿ ಸಾಮಾಜಿಕ ದೋಷ ದೌರ್ಜನ್ಯಗಳ ಬಗ್ಗೆ ನಾಡಿನ ಪ್ರಚ್ಛನ್ನ ಶಾಸಕರೆನಿಸಿದ ಕವಿದಾರ್ಶನಿಕರು ನ್ಯಾಯಪ್ರಿಯ ಪ್ರಜಾಕೋಟಿಯ ಗಮನವನ್ನು ಸೆಳೆದಿದ್ದಾರೆ. ಅದೇ ರೀತಿಯಾಗಿ, ಸಾಲಮಾಡಲಿ ಬ್ಯಾಡ ಸಾಲವೆಂದನಬೇಡ, ಒತ್ತೆಯಿಲ್ಲದೆ ಸಾಲ ಕೊಡುವವನು ಕಡುಮೂರ್ಖ; ಋಣಭಾರಕ್ಕೆಣೆಯೊವ್ವುದ್ಯೆ, ತರಬೇಡೊತ್ತೆಗೆ ಬಡ್ಡಿಯಂ, ಸಾಕ್ಷಿಯಿಲ್ಲದೆ ಸಾಲಂಗೊಟ್ಟೋನಂತೆ, ಭೂಪನಂ ಹೊದ್ದುವುದು ರಾಷ್ಟ್ರದ ಪಾಪ, ಶಿಶುಗಳಪರಾಧಕ್ಕೆ ನಯನದಂಜಿಕೆ ಶಿಕ್ಷೆ– ಇವೇ ಮೊದಲಾದ ಮಾತುಗಳಲ್ಲಿ ಕನ್ನಡ ಸಮಾಜಕ್ಕೆ ಸಂಪದ್ಭರಿತವಾದ ನ್ಯಾಯದರ್ಶನವನ್ನೂ ನೀಡಿದ್ದಾರೆ. ವಿಸ್ತಾರಭಯದಿಂದ ಈ ಅಂಶವನ್ನು ಹೆಚ್ಚು ಬೆಳೆಸುವುದಿಲ್ಲ. ಒಟ್ಟಿನಲ್ಲಿ ನ್ಯಾಯಾಲಯ ಭಾಷೆಯಾಗಲು ಕನ್ನಡ ಸಕಲ ವಿಧದಲ್ಲಿಯೂ ಸಜ್ಜಾದ ಭಾಷೆಯಾಗಿದೆಯೆಂದು ಇಲ್ಲಿ ಹೇಳಿದರೆ ಸಾಕು.

**ಸ್ವಾತಂತ್ರ್ಯಾನಂತರ**

ನಮ್ಮ ಪ್ರಜಾಕೋಟಿಗೆ ತಿಳಿಯುವಂತೆ ಆಯಾ ಪ್ರದೇಶಗಳ ಬಹುಸಂಖ್ಯಾತರ ಭಾಷೆಯಲ್ಲಿಯೇ ಆಡಳಿತವೂ ನ್ಯಾಯದಾನವೂ ನಡೆಯಬೇಕೆಂಬುದನ್ನು ರಾಷ್ಟ್ರ ನಾಯಕರು ಮತ್ತು ಸಂವಿಧಾನ ಶಿಲ್ಪಿಗಳು ಮನ್ನಿಸಿ ಸ್ವತಂತ್ರ ಭಾರತದ ಭಾಷಾ ನೀತಿಯನ್ನು ಸಂವಿಧಾನದಲ್ಲಿ ನಿರೂಪಿಸಿದರು. (೩೪೩ ರಿಂದ ೩೫೧ರ ವರೆಗಿನ ಸಂವಿಧಾನದ ಅನುಚ್ಛೇದಗಳನ್ನು ನೋಡಬಹುದು).

ಆಡಳಿತದಲ್ಲಿ ಮತ್ತು ನ್ಯಾಯ ವಿತರಣೆಯಲ್ಲಿ ಹಂತಹಂತವಾಗಿ, ಪ್ರಗತಿಪರವಾಗಿ, ಭಾಷಾನೀತಿಯನ್ನು ಜಾರಿಗೆ ತರಲು ಸರಿ ಸುಮಾರು ಭಾರತದ ಎಲ್ಲ ರಾಜ್ಯಗಳೂ ೧೯೬೩ರಲ್ಲಿ ರಾಜ್ಯಭಾಷಾ ಅಧಿನಿಯಮಗಳನ್ನು ಜಾರಿಗೊಳಿಸಿದವು.

ಈ ಮೇರೆಗೆ ಕರ್ನಾಟಕದಲ್ಲಿ ಕನ್ನಡವನ್ನು ನ್ಯಾಯಾಲಯ ಭಾಷೆಯಾಗಿ ಜಾರಿಗೆ ತರುವ ಪೂರ್ವ ಸಿದ್ಧತೆ ಪ್ರಾರಂಭವಾಯಿತು. ಈ ಉದ್ದೇಶ ಪರಿಣಾಮಕಾರಿಯಾಗಿ ಈಡೇರಬೇಕಾದರೆ ಮೊದಲು ಕೇಂದ್ರ ರಾಜ್ಯಗಳ ಎಲ್ಲ ಮೂಲಭೂತ ಅಧಿನಿಯಮಗಳು, ನಿಯಮಗಳು, ವಿನಿಮಯಗಳು, ಮಹಾನ್ಯಾಯವೇತ್ತರ ಸಂಪದ್ಭರಿತವಾದ ನ್ಯಾಯದಾರ್ಶನಿಕ ನ್ಯಾಯಶಾಸ್ತ್ರಗಳು, ಉಲ್ಲೇಖ ಗ್ರಂಥಗಳು ಕನ್ನಡದಲ್ಲಿ ದೊರೆಯುವಂತಾಗಬೇಕು, ಇನ್ನು ಮುಂದೆ ಕಾನೂನುಗಳೆಲ್ಲ ಕನ್ನಡದಲ್ಲಿಯೇ ನಡೆಯಬೇಕು, ಸಿದ್ಧವಾದಷ್ಟು ಸಾಹಿತ್ಯವನ್ನು ಬಳಸಿಕೊಂಡು, ಹೆಚ್ಚು ಕಾಲ ಕಾಯದೆ ನಮ್ಮ ನ್ಯಾಯವಾದಿಗಳೂ, ನ್ಯಾಯಾಧೀಶರೂ ನ್ಯಾಯಾಲಯಗಳಲ್ಲಿ ಕನ್ನಡವನ್ನು ಬಳಸಲು ಪ್ರಾರಂಭಿಸಬೇಕು–ಇತ್ಯಾದಿಯಾಗಿ ಅಭಿಪ್ರಾಯಗಳು ಮೂಡಿಬಂದವು. ಕಾನೂನುಗಳ ಸಾಕಷ್ಟು ಕನ್ನಡ ಪಾಠಗಳು, ಉಲ್ಲೇಖ ಗ್ರಂಥಗಳು ನಿರ್ಮಾಣವಾಗದೆ ಕನ್ನಡ ಕಾನೂನು ವ್ಯಾಸಂಗ ಸಾಧ್ಯವಿಲ್ಲ ಎಂದು ಕೆಲವರು ವಾದಿಸಿದರೆ, ಕನ್ನಡದಲ್ಲಿ ಕಾನೂನು ವ್ಯಾಸಂಗ ಪ್ರಾರಂಭವಾಗದಿದ್ದರೆ ಅಂಥ ದುಬಾರಿ ಗ್ರಂಥಗಳ ರಚನೆ–ಪ್ರಕಟಣೆಗಳಿಗೆ ಯಾರು ಕೈಹಾಕುತ್ತಾರೆ ಎಂದು ಮತ್ತೆ ಕೆಲವರು ಕೇಳಿದರು. ಬೀಜವೃಕ್ಷ ನ್ಯಾಯವನ್ನು ಈ ವಾದ ಹೋಲುವಂತಿತ್ತು. ಕನ್ನಡದಲ್ಲಿ ಕಾನೂನು ವ್ಯಾಸಂಗ ಪ್ರಾರಂಭವಾಗದಿದ್ದರೂ ಗ್ರಂಥರಚನೆ ಮಾತ್ರ ಪ್ರಗತಿಪರವಾಗಿ ಸಾಗಿದೆಯೆಂದು ಹೇಳಬಹುದು. ನ್ಯಾಯ ವ್ಯವಹಾರಕ್ಕೆ ಅಗತ್ಯವಾದ ಸರಿಸುಮಾರು ಎಲ್ಲ ಮಹತ್ವದ ಅಧಿನಿಯಮಗಳನ್ನು ಪ್ರಕ್ರಿಯಾ ನಿಯಮಗಳನ್ನು ಮತ್ತು ಪಾರಿಭಾಷಿಕ ಕೋಶಗಳನ್ನು ಸರಕಾರದವರು ಪ್ರಕಟಿಸಿದ್ದಾರೆ. ಸಂವಿಧಾನದ ತೀರ ಇತ್ತೀಚಿನ ಕನ್ನಡ ಆವೃತ್ತಿಯೂ ಲಭ್ಯವಾಗಿದೆ. ಇದೀಗ ಬೃಹದ್ಗಾತ್ರದ 'ಕನ್ನಡ ಕಾನೂನು ಪದ ವಿವರಣಕೋಶ'ವೂ ಸಿದ್ಧವಾಗುತ್ತಿದೆ. ಇದು ಸರಕಾರಿ ವಲಯದಲ್ಲಿ ಕಂಡುಬಂದ ಪ್ರಗತಿಯಾದರೆ ಖಾಸಗೀ ವಲಯದಲ್ಲಿಯೂ ಸಾಕಷ್ಟು ಪ್ರಗತಿಯಾಗಿರುವುದನ್ನು ಇತ್ತೀಚೆಗೆ ಪ್ರಕಟವಾದ ಕನ್ನಡ ಕಾನೂನು ಗ್ರಂಥಗಳಿಂದ ತಿಳಿದುಕೊಳ್ಳಬಹುದಾಗಿದೆ. ಈಗಾಗಲೇ ಕನ್ನಡದಲ್ಲಿ 'ಭಾರತೀಯ ನ್ಯಾಯ ಪದ್ಧತಿ', 'ಇಸ್ಲಾಮೀ ನ್ಯಾಯಾಡಳಿತ', 'ನ್ಯಾಯನಿಬಂಧನೆಗಳು', 'ಕಾನೂನು, ಪ್ರಾರೂಪಣ ಮತ್ತು ಅರ್ಥ ವಿವರಣೆ', 'ಕಾನೂನು ಭಾಷೆ ಮತ್ತು ಭಾಷಾಂತರ ಸಮಸ್ಯೆ', 'ಮಕ್ಕಳ ಯೋಗಕ್ಷೇಮ ಮತ್ತು ಕಾನೂನು',, 'ಷಂಡತ್ವ ಹಾಗೂ ಕಾನೂನು', 'ವೈದ್ಯಕೀಯ ನ್ಯಾಯಶಾಸ್ತ್ರ ಮತ್ತು ವಿಷತಂತ್ರ' ಮುಂತಾದ ಸುಮಾರು ಹನ್ನೊಂದು ಮೂಲ ಕೃತಿಗಳನ್ನು ಈ ಲೇಖಕ ರಚಿಸಿದ್ದಾನೆ. ಸಿವಿಲ್ ನ್ಯಾಯಾಧೀಶರಾದ ಎಸ್. ಎಸ್. ಸಂಗೊಳ್ಳಿ ಅವರು 'ನ್ಯಾಯಶಾಸ್ತ್ರ', 'ಭಾರತ ಸಾಕ್ಷ್ಯ ವಿಧಿನಿಯಮ', 'ದಂಡ ಸಂಹಿತೆ', 'ತೀರ್ಪುರಚನಾ ವಿಧಾನ' 'ಪೋಲೀಸ್ ಕಾನೂನು' ಮೊದಲಾದ ಕೃತಿಗಳನ್ನೂ ವ್ಯಾಖ್ಯಾನಗಳನ್ನೂ ರಚಿಸಿದ್ದಾರೆ. ಜಿಲ್ಲಾ ನ್ಯಾಯಾಧೀಶರಾದ ಬಾ. ಕೃ. ಸೋಮಶೇಖರ್ ಅವರು law of Torts ನ್ನು ಕುರಿತು ಕನ್ನಡದಲ್ಲಿ 'ಅಪಕೃತ್ಯ ಕಾನೂನು' ಎಂಬ ಗ್ರಂಥವನ್ನು ರಚಿಸಿದ್ದಾರೆ. ಹರಪನ ಹಳ್ಳಿಯ ವಕೀಲ ವೀರಭದ್ರಯ್ಯನವರು 'ಪಾಟೀಸವಾಲು' ಎಂಬ ಉದ್ಗ್ರಂಥವನ್ನು ಬರೆದಿದ್ದಾರೆ. ಇತ್ತೀಚೆಗೆ ಎಸ್. ಸಿ. ಹಿರೇಮಠರ 'ಕಾನೂನು ರತ್ನಕೋಶ' ಎಂಬ ಕೃತಿಯೂ ಎಂ. ಎಸ್. ನಂಜುಂಡರಾಜ್ ಅರಸ್ ಅವರ 'ಆಡಳಿತ ಪದ ವಿವರಣ ಕೋಶ', ಎಂಬ ಕೃತಿಯೂ ಪ್ರಕಟವಾಗಿವೆ. ಈ ಎರಡು ಕೃತಿಗಳು ಕನ್ನಡದಲ್ಲಿ Laxicon ರಚನೆಯ ದಾರಿಯಲ್ಲಿ ಸುತ್ತ್ಯ ಪ್ರಯತ್ನಗಳಾಗಿವೆಯೆಂದು ಹೇಳಬಹುದು. ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸುತ್ತಿರುವ ಕನ್ನಡ ವಿಶ್ವಕೋಶದಲ್ಲಿ ಕಾನೂನು ವಿಚಾರಗಳನ್ನು ಕುರಿತು ಅನೇಕ ಉಪಯುಕ್ತ ಲೇಖನಗಳಿವೆ. ಇದಲ್ಲದೆ ಧಾರವಾಡದ ವಕೀಲ ವೆಂಕಟೇಶ ಕುಲಕರ್ಣಿ ಅವರು ಸ್ವತಃ ಹತ್ತಾರು ಕನ್ನಡ ಕಾನೂನು ಪುಸ್ತಕಗಳನ್ನು ಬರೆದಿರುವುದಲ್ಲದೆ ಈ ವರೆಗೆ ಕನ್ನಡ ಕಾನೂನು ಲೇಖಕರ ಸುಮಾರು ಐವತ್ತರಷ್ಟು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಇದೊಂದು ಸಾಹಸದ ಕಾರ್ಯವೇ ಸರಿ. ಅಷ್ಟೇ ಅಲ್ಲ, ಕುಲಕರ್ಣಿ ಅವರು ಕನ್ನಡ ಕಾನೂನು ಲೇಖಕರ ಸಮ್ಮೇಳನ, ಕನ್ನಡ ಪ್ರೇಮೀ ವಕೀಲರ ಸಮ್ಮೇ

ಳನ, ಕಾನೂನು ವಿದ್ಯಾರ್ಥಿಗಳ ಸಮ್ಮೇಳನಗಳನ್ನೂ ವಿಚಾರ ಸಂಕಿರಣಗಳನ್ನೂ ಏರ್ಪಡಿಸಿ ನ್ಯಾಯಾಲಯಗಳಲ್ಲಿ ಕನ್ನಡ ಒತ್ತಾಯವಾಗಿ ಬಳಸುವಂತೆ ಮಾಡಲು ಹಟಮಾರಿತನವೆನಿಸುವಷ್ಟು ದೀಕ್ಷಾಬದ್ಧವಾದ ಆಂದೋಲನವನ್ನೇ ನಡೆಸಿದ್ದಾರೆಂದರೆ ತಪ್ಪಾಗಲಿಕ್ಕಿಲ್ಲ.

ನ್ಯಾಯ ದಾರ್ಶನಿಕ ಉಲ್ಲೇಖ ಗ್ರಂಥಗಳನ್ನೂ ವ್ಯಾಖ್ಯಾನ ರೂಪದ ಉದ್ಗ್ರಂಥಗಳನ್ನೂ ಕನ್ನಡಕ್ಕೆ ಭಾಷಾಂತರಿಸುವ ಕಾರ್ಯವನ್ನು ಸರಕಾರದವರು ರಾಜ್ಯದ ಮೂರು ಪ್ರಮುಖ ವಿಶ್ವವಿದ್ಯಾನಿಲಯಗಳಿಗೆ ವಹಿಸಿಕೊಟ್ಟಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯವರು ಈಗಾಗಲೇ ಎ. ಬಿ. ಕೀಥರ ಗ್ರಂಥವನ್ನು ಭಾರತದ ಸಂವಿಧಾನಾತ್ಮಕ ಇತಿಹಾಸ ಎಂಬ ಹೆಸರಿನಿಂದ ಕನ್ನಡದಲ್ಲೇ ಪ್ರಕಟಿಸಿದ್ದಾರೆ. ಇದೀಗ ಕಾಣೆ ಅವರ "ಧರ್ಮಶಾಸ್ತ್ರ ಇತಿಹಾಸ"ದ ಪ್ರಥಮ ಸಂಪುಟವನ್ನೂ ಕನ್ನಡದಲ್ಲಿ ಹೊರ ತಂದಿದ್ದಾರೆ. ಮುಲ್ಲಾ ಅವರ "ಹಿಂದೂ ಲಾ" ಗ್ರಂಥದ ಅನುವಾದ ಕಾರ್ಯವನ್ನೂ ಕೈಗೆತ್ತಿಕೊಂಡಿದ್ದಾರೆ. ಈ ಕಾರ್ಯ ಕನ್ನಡ ಅಭಿವೃದ್ಧಿ ಯೋಜನೆಯನ್ವಯ ನಡೆಯುತ್ತಿದ್ದು ಕನ್ನಡ ಸಂಸ್ಕೃತಿ ಇಲಾಖೆಯವರು ಈ ಕೆಲಸದ ಪ್ರಗತಿಯನ್ನು ನಿರೀಕ್ಷಿಸುವುದಲ್ಲದೆ ಸಿದ್ಧವಾದ ಎಲ್ಲ ಸರಕಾರಿ ಮತ್ತು ಖಾಸಗಿ ಕನ್ನಡ ಕಾನೂನು ಪ್ರಕಟಣೆಗಳನ್ನು ಕೊಂಡು ರಾಜ್ಯದ ಎಲ್ಲ ನ್ಯಾಯಾಲಯಗಳಿಗೂ ಪೋಲೀಸ್ ಕಛೇರಿಗೂ, ಅಭಿಯೋಜನಾ ನಿರ್ದೇಶನಾಲಯಕ್ಕೂ ಒದಗಿಸಿದ್ದಾರೆ. ಇದಲ್ಲದೆ ಕನ್ನಡದಲ್ಲಿ ಮಹತ್ವದ ನ್ಯಾಯ ತೀರ್ಪುಗಳ ವರದಿ" (ಕರ್ನಾಟಕ ಲಾ ಜರ್ನಲ್) ಮತ್ತು "ನ್ಯಾಯ ಸುಧಾ" ಪತ್ರಿಕೆಗಳೂ ಕನ್ನಡದಲ್ಲಿ ಪ್ರಕಟವಾಗುತ್ತಿವೆ. ಇದೊಂದು ಮಹತ್ವದ ಹೆಜ್ಜೆ, ನ್ಯಾಯ ವರದಿಗಳು Law Reports ಆಧುನಿಕ ನ್ಯಾಯ ವ್ಯವಸ್ಥೆಯ ಅವಿಭಾಜ್ಯ ಅಂಗವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಆಗಬೇಕಾದುದು ಇನ್ನೂ ಬಹಳವಾಗಿದ್ದರೂ ಅತ್ಯಲ್ಪ ಕಾಲದಲ್ಲಿ ಈಗ ಆದದ್ದು ಕಡಮೆಯೇನೂ ಅಲ್ಲ ಎಂದು ಹೇಳಬಹುದು. ಹೀಗೆ ಸಿದ್ಧವಾದಷ್ಟು ಸಾಮಗ್ರಿಯನ್ನು ಬಳಸಿಕೊಂಡು ನ್ಯಾಯವಾದಿಗಳು, ನ್ಯಾಯಾಧೀಶರು, ನ್ಯಾಯಾಲಯಗಳ ಕಚೇರಿಗಳ ಸಿಬ್ಬಂದಿ ವರ್ಗದವರು ಕಾನೂನು ವ್ಯವಹಾರಗಳಲ್ಲಿ ಕನ್ನಡವನ್ನು ಬಳಸುವಂತೆ ಸಭೆ ಸಮ್ಮೇಳನ, ವಿಚಾರಸಂಕಿರಣ ಮತ್ತು ತರಬೇತಿ ಶಿಬಿರಗಳಲ್ಲಿ ಕೇಳಿಕೊಳ್ಳಲಾಗಿದೆ. ಹಾಸನ, ಕಲುಬುರ್ಗಿ, ಕಾರವಾರ ಮತ್ತು ಬೆಂಗಳೂರಿನಲ್ಲಿ ವಕೀಲರ ಸಂಘಗಳವರು, ಸಭೆ–ಸಮ್ಮೇಳನಗಳನ್ನು ಕರೆದು ಅಭಿಪ್ರಾಯ ರೂಪಿಸುತ್ತಿದ್ದಾರೆ. ಬೆಳಗಾಂವಿಯ ಕನ್ನಡ ಸಾಹಿತ್ಯ ಸಮ್ಮೇಳನ ವೇದಿಕೆಯಲ್ಲಿ "ಕನ್ನಡ ಕಾನೂನು ಗೋಷ್ಠಿ" ನಡೆದುದೂ ಅದರಲ್ಲಿ ಉದ್ಘಾಟಕರಾಗಿ ಕರ್ನಾಟಕ ಹೈಕೋರ್ಟಿನ ಆಗಿನ ಮುಖ್ಯ ನ್ಯಾಯಾಧೀಶರು, ಅಧ್ಯಕ್ಷರಾಗಿ ಈಗಿನ ಮುಖ್ಯ ನ್ಯಾಯಾಧೀಶರಾದ ಕೆ. ಭೀಮಯ್ಯನವರೂ ಭಾಗವಹಿಸಿದುದು ಮಹತ್ವಪೂರ್ಣವಾದದ್ದೆಂದೇ ಹೇಳಬೇಕು. ಈ ಪ್ರಯತ್ನಗಳ ಫಲವಾಗಿ ಮತ್ತು ಕನ್ನಡ ಅಭಿವೃದ್ಧಿ ಯೋಜನೆಯ ಅಂಗವಾಗಿ ಈಗಾಗಲೇ ನೂರಾರು ಜನ ನ್ಯಾಯಾಧೀಶರು ಕನ್ನಡದಲ್ಲಿ ಶ್ರೇಷ್ಠ ದರ್ಜೆಯ ಸಾವಿರಾರು ತೀರ್ಪುಗಳನ್ನು ನೀಡಿದ್ದಾರೆ. ಅವುಗಳಲ್ಲಿ ಕೆಲವನ್ನು "ನ್ಯಾಯಾಲಯ ತೀರ್ಪುಗಳು" ಎಂಬ ಹೆಸರಿನಿಂದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರು ಪ್ರಕಟಿಸಿದ್ದಾರೆ. ಕನ್ನಡದಲ್ಲಿ ತೀರ್ಪುಗಳನ್ನು ಬರೆಯುವ ಪ್ರಯತ್ನಕ್ಕೆ ಜಯತೀರ್ಥರಾಜಪುರೋಹಿತರ "ಕನ್ನಡ ತೀರ್ಪುಗಳು" ನಾಂದಿಯಾಯಿತೆಂದು ಹೇಳಬಹುದು. ಹೊಸದಾಗಿ ಕೆಲಸಕ್ಕೆ ಸೇರಿದ ವಿವಿಧ ಸ್ತರಗಳ ನ್ಯಾಯಾಧೀಶರುಗಳಿಗೆ ಕನ್ನಡ ಬಳಕೆಯ ತರಬೇತಿ ಶಿಬಿರಗಳನ್ನು ಏರ್ಪಡಿಸುವಲ್ಲಿ ಕನ್ನಡ ಪ್ರೇಮಿಗಳಾದ ಹೈಕೋರ್ಟಿನ ರಿಜಿಸ್ಟ್ರಾರರಾದ ಬಸವಾರ್ಯರು ಅಪಾರ ಆಸಕ್ತಿ ವಹಿಸುತ್ತಿದ್ದಾರೆ. ಅಭಿಯೋಜನ ನಿರ್ದೇಶನಾಲಯದ ವ್ಯಾಪ್ತಿಗೊಳಪಟ್ಟ ಅಭಿಯೋಜಕ prosecuting ಅಧಿಕಾರಿಗಳಿಗೂ ಕನ್ನಡ ತರಬೇತಿ ನೀಡಲಾಗಿದೆ. ಅವರು ನ್ಯಾಯಾಲಯಗಳಲ್ಲಿ ಮೊಕದ್ದಮೆಗಳನ್ನು ಕನ್ನಡದಲ್ಲಿಯೇ ನಡೆಸುವಂತೆ ಕೇಳಿಕೊಳ್ಳಲಾಗಿದೆ. ಇಷ್ಟೆಲ್ಲ ಸಿದ್ಧತೆ, ಪ್ರಯತ್ನ ನಡೆದಿದ್ದರೂ ಪ್ರಗತಿ ಮಂದವಾಗಿಯೇ ಇದೆ. ಭಾಷಾ ನೀತಿಯ ಬಗ್ಗೆ ವಿಳಂಬ ಧೋರಣೆ ತೋರಿದ ಅಧಿಕಾರಿಗಳಿಗೆ ಹಿಂದೆ ಇಂಗ್ಲೆಂಡಿನಲ್ಲಿ ದಂಡ ವಿಧಿಸಿದರಂತೆ. ಆದರೆ ಕನ್ನಡವನ್ನು ಕಡ್ಡಾಯವಾಗಿ ಬಳಸಬೇಕಾದ ವಿಳಂಬ ನೀತಿಯನ್ನು ಉದಾರಚರಿತರಾದ ಕನ್ನಡಿಗರು ಇನ್ನೂ ತಾಳಿಕೊಂಡಿದ್ದಾರೆ. "ಸಾಧುಗೆ ಸಾಧು ಮಾಧುರ್ಯಂಗೆ ಮಾಧುರ್ಯಂ, ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್" ಎಂಬ ಶಾಸನೋಕ್ತಿಯಂತೆ ಸರಕಾರದವರು ಬೆದರಿಕೆಯ ಬೆತ್ತವನ್ನೆತ್ತಬೇಕಾದೀತೇನೋ.

ಜಿಲ್ಲಾ ನ್ಯಾಯಾಲಯಗಳಲ್ಲಿ ಮತ್ತು ಉಚ್ಚ ನ್ಯಾಯಾಲಯದಲ್ಲಿ ಕೂಡ ಈಗ ವಕೀಲರ ಮತ್ತು ನ್ಯಾಯಾಧೀಶರ ನಡುವೆ ಕನ್ನಡದಲ್ಲಿ ಕಾನೂನು ಸಂಭಾಷಣೆಗಳು ನಡೆಯುತ್ತಿರುವುದನ್ನು ಕಾಣಬಹುದಾಗಿದೆ. ಇದು ಸಂತೋಷಕರ ಬೆಳವಣಿಗೆಯೆಂದೇ ಹೇಳಬೇಕು. ಇನ್ನು ಉಚ್ಚ ನ್ಯಾಯಾಲಯದಲ್ಲಿ ಕನ್ನಡದಲ್ಲೇ ತೀರ್ಪು ನೀಡುವುದಕ್ಕೂ ಸರಕಾರದವರು ಕಾನೂನುಗಳನ್ನು ಕನ್ನಡದಲ್ಲಿ ಮೂಲತಃ ರಚಿಸುವುದಕ್ಕೂ ಕೆಲವೊಂದು ಸಂವೈಧಾನಿಕ ಕ್ರಮಗಳು ಅಗತ್ಯ. ಕಾನೂನುಗಳನ್ನು ಕನ್ನಡದಲ್ಲಿ ಮೂಲತಃ ರಚಿಸುವ ವಿಷಯ ಕಳೆದ ಮೂರು ನಾಲ್ಕು ವರ್ಷಗಳಿಂದ ಸರಕಾರದವರ ಗಮನದಲ್ಲಿದೆಯೆಂದು ತಿಳಿದುಬಂದಿದೆ. ಫಲ ನಿರೀಕ್ಷಣೆ ಮಾಡೋಣ. ಕನ್ನಡದಲ್ಲಿ ಕಾನೂನು ವ್ಯಾಸಂಗವನ್ನು ಪ್ರಾರಂಭಿಸಲು ಆತಂಕಗಳು ಈಗ ಅಷ್ಟಿಲ್ಲ. ಕಾನೂನು ವ್ಯಾಸಂಗ ವ್ಯಾಪಕವಾಗಿ ಕನ್ನಡದಲ್ಲಿ ನಡೆಯಲಾರಂಭಿಸಿದರೆ ನ್ಯಾಯಾಲಯ ಭಾಷೆಯಾಗಿ ಕನ್ನಡಕ್ಕೆ ಭದ್ರ ಬುನಾದಿ ಹಾಕಿದಂತಾಗುವುದು.

ಕಾನೂನು ವ್ಯಾಸಂಗ ಕನ್ನಡದಲ್ಲಿ ನಡೆದು, ಉಚ್ಚ ನ್ಯಾಯಾಲಯದ ತೀರ್ಪುಗಳು ಕನ್ನಡದಲ್ಲಿ ಬರಲಾರಂಭಿಸಿದರೆ ಅಪೀಲು ಕೊಂಡು ದಿಲ್ಲಿಗೆ ಧಾವಿಸುವವರ ಗತಿಯೇನು? ಇತರ ಪ್ರದೇಶಗಳ ನ್ಯಾಯಾಲಯಗಳಿಗೆ ಹೋಗಿ ವಾದಿಸ ಬಯಸುವ ಇತರ ಪ್ರದೇಶಗಳಲ್ಲಿ ಮತ್ತು ದಿಲ್ಲಿಯ ಉಚ್ಚತಮ ನ್ಯಾಯಾಲಯದಲ್ಲಿ ವಕೀಲ ವೃತ್ತಿ ನಡೆಸಬಯಸುವ ಮುಂದಿನ ಪೀಳಿಗೆಯ ವಕೀಲರ ಗತಿಯೇನು? ಎಂಬ ಪ್ರಶ್ನೆಗಳೂ ಕೇಳಿಬಂದಿವೆ. ದಿಲ್ಲಿಗೆ ಹೋಗಬೇಕಾದ ಅಪೀಲುಗಳ ಸಂಖ್ಯೆ ಭಾರಿ ಪ್ರಮಾಣದ್ದಿರಲಾರದು. ಅನುವಾದಗಳ ನೆರವಿನಿಂದ ಸಮಸ್ಯೆಯನ್ನು ನಿವಾರಿಸಿಕೊಳ್ಳಬಹುದು. ಅಲ್ಲದೆ ತ್ರಿಭಾಷಾ ಸೂತ್ರ ಪರಿಣಾಮಕಾರಿಯಾಗಿ ಜಾರಿಗೆ ಬಂದರೆ ಈ ತೊಂದರೆ ಇರಲಾರದು ಎಂದು ಅಲ್ಲಲ್ಲಿಯೇ ಸಮರ್ಪಕ ಉತ್ತರಗಳು ದೊರೆತಿವೆ. ಅಲ್ಲದೆ ಅಖಿಲ ಭಾರತ ಮಾನ್ಯವಾದ ಪದಕೋಶವೊಂದನ್ನು ರೂಪಿಸುವ ಕಾರ್ಯವೂ ನಡೆದಿದೆಯೆಂಬುದನ್ನು ಇಲ್ಲಿ ನೆನೆಯಬಹುದು. ಈ ಸಮಸ್ಯೆ ಎಲ್ಲರೂ ಭಾವಿಸುವಷ್ಟು ತೀವ್ರವಲ್ಲ.

# ಕಾರ್ಖಾನೆಯಲ್ಲಿ ಕನ್ನಡ

ಎಚ್. ಎನ್. ದ್ವಾರಕಾನಾಥ್

ಯಾವುದೇ ಕಾರ್ಖಾನೆಯ ಪ್ರಥಮ ಮತ್ತು ಪ್ರಾಯಶಃ ಏಕೈಕ ಉದ್ದೇಶ್ಯ ಉತ್ಪಾದನ ಸಂವರ್ಧನೆ. ಕಚ್ಚಾ ಸಾಮಗ್ರಿಗಳನ್ನು ಆಧುನಿಕ ಯಾಂತ್ರಿಕ ವಿಧಾನದಿಂದ ಸಿದ್ಧ ವಸ್ತುಗಳನ್ನಾಗಿಸುವ ಒಂದು ವ್ಯವಸ್ಥೆ-ಕಾರ್ಖಾನೆ. ಗ್ರಾಹಕರ ವೈಶಿಷ್ಟ್ಯಪೂರ್ಣ ಬೇಡಿಕೆಗಳಿಗೆ ವಿನ್ಯಾಸ ರೂಪಿಸುವುದು, ತಯರಿಕಾ ವಿಧಾನ ಕಲ್ಪಿಸುವುದು, ಕೆಲಸಗಾರರರಿಗೆ ಕೌಶಲ್ಯ ತಿಳಿಯ ಹೇಳುವುದು, ನಿಗದಿತ ಸಮಯಕ್ಕೆ ಸರಿಯಾಗಿ ನಿರ್ದಿಷ್ಟ ಗುಣ ಮಟ್ಟದ ವಸ್ತುವನ್ನು ಉತ್ಪಾದಿಸುವುದು – ಇವು ಒಂದು ಕಾರ್ಖಾನೆಯ ಕಾರ್ಯಭಾರದ ಸ್ಥೂಲ ರೂಪರೇಷೆ. ತಯಾರಿಕೆಯ ಪ್ರತಿಯೊಂದು ಘಟ್ಟದಲ್ಲಿಯೂ ಅತ್ಯಂತ ಸೂಕ್ಷ್ಮತಮ ಎಚ್ಚರಿಕೆ, ಕಟ್ಟುಪಾಡುಗಳಿಗೆ ಮಾನ್ಯತೆ ಮತ್ತು ತನ್ನ ಕ್ಷೇತ್ರದಲ್ಲಿ ಒಲವು, ಈ ಅಂಶಗಳು ಇಲ್ಲಿ ಸಂಕೀರ್ಣ ಅರ್ಥವನ್ನು ಪಡೆಯುತ್ತವೆ. ಮಾನವ ಸಂಪನ್ಮೂಲ ವಿಭಾಗದಲ್ಲಿಯೂ ಸಿದ್ಧವಸ್ತುಗಳನ್ನು ತಯಾರಿಸುವ ಕಾರ್ಯಾಗಾರದಲ್ಲಿಯೂ ಕೆಲಸ ಮಾಡುವ ಕಾರ್ಮಿಕ, ಅವನಿಗೆ ಯುಕ್ತ ಮಾರ್ಗದರ್ಶನ ನೀಡುವ ಮೇಲ್ವಿಚಾರಕರು ಮತ್ತು ಉದ್ದಿಮೆಯ ಪ್ರಮುಖ ನಿರ್ಧಾರಗಳನ್ನು ಯೋಜನೆಗಳನ್ನು ರೂಪಿಸುವ ನಿರ್ವಾಹಕರು – ಇವರೆಲ್ಲರೂ ಗಣ್ಯರು.

ಕೈಗಾರಿಕೋದ್ಯಮ ಬಯಸುವ ತಾಂತ್ರಿಕ ಜ್ಞಾನ ನಮ್ಮಲ್ಲಿ ಸಿದ್ಧವಿಲ್ಲವೆಂದು ಅನೇಕರು ವಿಷಾದಿಸುತ್ತಾರೆ. ನಾವು ಅದನ್ನು ಆಮದು ಮಾಡಿಕೊಂಡು ನಮ್ಮಲ್ಲಿ ಉತ್ಪಾದನೆಯನ್ನು ವಿದೇಶೀ ಪರಿಣತರ ನೆರವಿನಿಂದ ಆರಂಭಿಸಿದಲೆ. ನಮ್ಮ ದೇಶದ ಬಹುಮಂದಿ ವಿದ್ಯಾವಂತರೇ ನಾಚುತ್ತಾರೆ. ಆದರೆ ಹಾಗೆ ವಿಷಾದಿಸುವ ಅಥವಾ ನಾಚುವ ಆವಶ್ಯಕತೆ ಎಳ್ಳಷ್ಟೂ ಸಲ್ಲದು. ಏಕೆಂದರೆ ಶತಶತಮಾನಗಳ ಕಾಲ ಭಾರತದ ಜ್ಞಾನವನ್ನು, ವಿದ್ಯೆಯನ್ನು ಇಡೀ ವಿಶ್ವದ ಮಾನವ ಕೋಟಿ ಕಾತರದಿಂದ ಸ್ವಾಗತಿಸಿ ತನ್ನದನ್ನಾಗಿಸಿಕೊಂಡಿದೆ. ಸನ್ನಿವೇಶದ ಆವಶ್ಯಕತೆಗಳಿಗೆ ಅನುಸಾರವಾಗಿ ನಾವೂ ವಿದೇಶೀ ತಂತ್ರಜ್ಞಾನವನ್ನು ಈ ಯಂತ್ರ – ನಾಗರಿಕತೆಯ ಪರ್ವಕಾಲದಲ್ಲಿ ಆಮದು ಮಾಡಿಕೊಂಡರೆ ತಪ್ಪೇನಿಲ್ಲ. ಕೈಗಾರಿಕೋದ್ಯಮವನ್ನು ಬಯಸಿದ ಭಾರತಕ್ಕೆ ಅದರೊಂದಿಗೆ ಅನಿವಾರ್ಯವಾಗಿ ತಾಂತ್ರಿಕ ಜ್ಞಾನ ಆಮದಾಗಿ ಬಂತು. ಈ ಜ್ಞಾನವನ್ನು ಎಲ್ಲರಿಗೂ ತಲಪಿಸುವ ಮುಖ್ಯ ಸಾಧನ ಭಾಷೆ.

ಮಾನವನ ಅತ್ಯಂತ ಮಹತ್ವದ ಸಂಶೋಧನೆ ಎಂದರೆ ಭಾಷೆ. ಈ ಸಂಶೋಧನೆ ಕೂಡ ಅನಿವಾರ್ಯ ಕಾರಣಗಳಿಂದಲೇ, ಆದರೆ ಅತ್ಯಂತ ಸಹಜವಾಗಿ ಆಗಿರಬೇಕು. ಭಾಷೆ ಸಂಪರ್ಕ ಸಾಧನ, ನಿಜ. ಆದರೆ ಯುಗ ಯುಗಾಂತರಗಳಿಂದ ಮಾನವನಿಗೂ ಆತನಾಡುವ ಭಾಷೆಗೂ ಬೆಳೆದು ಬಂದಿರುವ ನಂಟನ್ನು ಗಮನಿಸಿದಾಗ, ಆತನಿಗೆ ಆ ಭವ್ಯತೆಯ ಬಗ್ಗೆ ವ್ಯಾಮೋಹ ಇರುವುದು ಯಾವುದೇ ರೀತಿಯ ಆಶ್ಚರ್ಯವಲ್ಲ. ಅಪಭ್ರಂಶ ಕಾಲದಿಂದ ಇರಲಿ, ಚಾರಿತ್ರಿಕ ಹಿನ್ನೆಲೆಯಲ್ಲಿಯೇ ನೋಡಿದರೆ ನಮಗೆ ಭಾಷೆ, ಸಂಸ್ಕೃತಿಯ ಜೀವಂತ ಸೆಲೆ ಎಂದು ತೋರಿ ಬರುತ್ತದೆ. ಮಾನವ ಸಂಸ್ಕೃತಿಯ ಧಾರಾ ಪ್ರವಾಹ ಅವನ ಭಾಷೆಯಲ್ಲಿದೆ. ಆದುದರಿಂದಲೇ ಅದನ್ನು ಕುರಿತು ಆತನಿಗೆ ಭಾವಾವೇಶ. ತನ್ನದಲ್ಲದ ಭಾಷೆ ಆತನ ಎದುರು ಬಂದರೆ ಧ್ವನಿ ಕೊಟ್ಟು ಆತ ಅದನ್ನು ವಿರೋಧಿಸದಿದ್ದರೂ ಆಂತರಿಕವಾಗಿ ಆ ಬಗ್ಗೆ ಒಂದು ಕೆಟ್ಟ ಪ್ರತಿಕ್ರಿಯೆ ಸೆಟೆದು ನಿಲ್ಲುತ್ತದೆ.

ಭಾರತದಲ್ಲಿನ ಭಾಷಾ ಇತಿಹಾಸ ಗಮನಿಸಿದಾಗ ನಮಗೆ ಎದ್ದು ಕಾಣುವ ಅಂಶ ಎಂದರೆ ಭಾರತೀಯ ಭಾಷೆಗಳ ಮೇಲೆ ಪ್ರಭು ಭಾಷೆಗಳ ಪ್ರಭಾವ. ತಮ್ಮಷ್ಟಕ್ಕೆ ತಾವು ಸಕಲ ಸೌಭಾಗ್ಯ ಸಿಂಗಾರಗಳನ್ನು ಮೆರೆಯಿಸುತ್ತಿದ್ದರೂ, ಪರಭಾಷೆಯ ಛಾಯೆ ಆಗೊಮ್ಮೆ ಈಗೊಮ್ಮೆ ಲಕಲಕಿಸುತ್ತದೆ. ಹದಿನಾಲ್ಕನೆಯ ಶತಮಾನದಿಂದ ನಾಲ್ಕು ಶತಮಾನಗಳು ಮೊಗಲರ ಕಾಲ ಹಾಗೂ ಅನಂತರ ನಮ್ಮ ದೇಶವನ್ನಾಳಿದ ಆಂಗ್ಲರ ಕಾಲಗಳೆರಡೂ ತಮ್ಮ ಭಾಷೆಯ ನಿಚ್ಚಳ ಪ್ರಭಾವವನ್ನು ಭಾರತೀಯ ಸಂಸ್ಕೃತಿ ಮತ್ತು ಭಾಷೆಗಳ ಮೇಲೆ ಸಿಂಪಡಿಸಿ ಹೋಗಿವೆ. ಆದರೆ ಅದೇ ಸಮಯದಲ್ಲಿ ಭಾರತದ ಎಲ್ಲ ಭಾಷೆಗಳೂ ಸಜೀವ ಸ್ಪಂದನದಿಂದ ಮಿಡಿಯುತ್ತಿದ್ದುವೆಂಬುದನ್ನು ಮರೆಯಬಾರದು. ಆದುದರಿಂದಲೇ ಪ್ರಭು ..ಭಾಷೆಯಿಂದ ಅನೇಕ ಶಬ್ದಗಳನ್ನು ತನ್ನವಾಗಿಸಿಕೊಂಡು ಶ್ರೀಮಂತವಾಯಿತು. ಇದರ ಬಗ್ಗೆ ಯಾವ ಅಭಿಪ್ರಾಯ ಭೇದವೂ ಇಲ್ಲ.

ಕೈಗಾರಿಕಾ ನಾಗರಿಕತೆ ಸಾದರ ಪಡಿಸಿದ ಇನ್ನೊಂದು ಮುಖ್ಯ ಪರಿಕಲ್ಪನೆಯೆಂದರೆ ಉತ್ಪಾದಕತೆ. ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಉತ್ಪಾದನಾಂಗವೊಂದರಿಂದ ಆದ ಉತ್ಪಾದನೆಯ ಮೊತ್ತ, ಉತ್ಪಾದೀ ಸಾಧನಗಳ ಬಳಕೆಯ ಸಮಸಾರ್ಥಕತೆ ಹಾಗೂ ಒಂದು ಗೊತ್ತಾದ ಕಾಲಾವಧಿಯಲ್ಲಿ ಉತ್ಪಾದನೆಗೆ ಬಳಸಲಾದ ಭೌತ ಸಾಧನೆಗಳಿಗೂ ಉತ್ಪನ್ನ ಘಟಕಗಳಿಗೂ ಇರುವ ಸಂಬಂಧ ಉತ್ಪಾದಕತೆ. ಇದನ್ನೊಂದಿಷ್ಟು ಸರಳವಾಗಿ ಹೇಳುವುದಾದರೆ ಸಂಸ್ಥೆ ೧ ರಲ್ಲಿ ರೂ. ೧೦೦ ಹೂಡಿ ನಾಲ್ಕು ಜನ

ಶ್ರಮಿಕರು ರೂ. ೧೫೦ರ ಉತ್ಪಾದನೆ ಮಾಡುತ್ತಾರೆ. ಆದರೆ ಇನ್ನೊಂದು ಸಂಸ್ಥೆ ೨ರಲ್ಲಿ ಅದೇ ರೂ. ೧೦೦ ಹೂಡಿ ನಾಲ್ಕು ಜನ ಶ್ರಮಿಕರು ರೂ. ೨೦೦ರ ಉತ್ಪಾದನೆ ಮಾಡುತ್ತಾರೆ. ಎಂದಾಗ ಸಂಸ್ಥೆ ೨ರ "ಉತ್ಪಾದಕತೆ" ಸಂಸ್ಥೆ ೧ರ ಉತ್ಪಾದಕತೆಗಿಂತ ಹೆಚ್ಚಿದೆ ಎಂದು ಹೇಳುತ್ತಾರೆ. ಸಂಪನ್ಮೂಲಗಳ ಬರ, ಕುಶಲ ಕಾರ್ಮಿಕರ ಅಭಾವ, ತಾಂಡವವಾಡುತ್ತಿರುವ ಬಡತನ ಈ ಹಿನ್ನೆಲೆಯಲ್ಲಿ ನಾವು ಉತ್ಪಾದನೆಯ ಕ್ಷೇತ್ರದತ್ತ ನೋಡಿದರೆ ನಮಗೆ ಉತ್ಪಾದಕತೆಯನ್ನು ಪರಿಣಾಮಕಾರಿಯಾಗಿ ಅಭಿವರ್ಧಿಸಬಲ್ಲ ಒಂದು ಉಪಾಯದ ತುರ್ತು ಆವಶ್ಯಕತೆ ಇದೆ ಎಂಬುದು ಮನವರಿಕೆಯಾಗುತ್ತದೆ. ಕಾರ್ಮಿಕರು ಈ ಚಕ್ರವ್ಯೂಹದ ಅಭಿಮನ್ಯುಗಳು. ಉತ್ಪಾದಕತೆಯನ್ನು ಹೆಚ್ಚಿಸುವ ಅಥವಾ ಇಳಿಸುವ ಸಾಮರ್ಥ್ಯ ಅವರಲ್ಲಿದೆ. ಆದರೆ ಪರೋಕ್ಷವಾಗಿ ಅವರು ಸೇವಿಸುವ ದೈನಂದಿನ ಆಹಾರ, ಮಜೂರಿ, ದುಡಿತದ ಅವಧಿ, ಯಂತ್ರ ಸಾಮಗ್ರಿಯ ಕಾರ್ಯಕ್ಷಮತೆ, ವಿಶ್ರಾಂತಿ, ಪರಿಸರ ನೈರ್ಮಲ್ಯ, ಬೆಳಕಿನ ಸೂಕ್ತ ಸಂಯೋಜನೆ ಮಾಲೀಕ – ಕಾರ್ಮಿಕ ಸಂಬಂಧ – ಈ ಅಂಶಗಳು ಉತ್ಪಾದನೆಯನ್ನು ಪ್ರಭಾವಿಸುತ್ತವೆ. ಎಂದು ತಿಳಿದು ಬಂದಿದೆ.

ಹಿಂದುಳಿದ ರಾಷ್ಟ್ರಗಳಲ್ಲಿ ಉತ್ಪಾದಕತೆಯ ಪರಿಮಾಣ ಮುಂದುವರಿದ ರಾಷ್ಟ್ರಗಳಷ್ಟಿಲ್ಲ. ಸಂಸ್ಕೃತಿಯ ಹಿನ್ನೆಲೆಯ ಜೊತೆಗೆ ಇನ್ನೂ ಅನೇಕ ಪ್ರತಿಕೂಲಗಳು ಕಾರ್ಮಿಕರನ್ನು ಎದುರಿಸುತ್ತವೆ. ಅವುಗಳಲ್ಲಿ ಮುಖ್ಯವಾದದ್ದು ಭಾಷಾ ಸಮಸ್ಯೆ. ಮೆಟ್ರಿಕ್ ತನಕ ಓದಿ, ತನ್ನ ಗ್ರಾಮದಲ್ಲಿ ಪ್ರತಿಷ್ಠೆಯಿಂದ ಇಂಗ್ಲಿಷಿನ ವಾಕ್ಯ – ತುಣುಕುಗಳನ್ನು ಇಟ್ಟಾಡಿಸುವ ನಗರದ ಕಾರ್ಮಿಕ ಈ ತತ್ವವನ್ನು ಒಪ್ಪದಿರಬಹುದು. ಇಲ್ಲವೇ ವಿಶ್ವದ ಕಿರೀಟಪ್ರಾಯ ನಿರ್ವಹಣ – ಶಿಕ್ಷಣ ನೀಡುವ ಸಂಸ್ಥೆಗಳಿಂದ ಶಹಬಾಸ್‌ಗಿರಿ ಪಡೆದು ಈಗ ನಮ್ಮ ದೇಶದಲ್ಲಿ ಉದ್ಯಮ ನಿರ್ವಹಣೆ ಮಾಡುತ್ತಿರುವ ಆಡಳಿತಾಧಿಕಾರಿ ಭಾಷಾ ಸಮಸ್ಯೆ ಇಲ್ಲ ಎಂದು ಹೇಳಬಹುದು. ಆದರೆ ಕೈಗಾರಿಕೋದ್ಯಮದ ಬೆಳವಣಿಗೆ ಹಾಗೂ ಭಾಷೆಯ ಬೆಳವಣಿಗೆಯ ಪರಿಚಯ ಉಳ್ಳವರಿಗೆ, ನಮ್ಮ ದೇಶದಲ್ಲಿ ಮತ್ತು ನಮ್ಮದೇ ರೀತಿಯ ಇತರ ಅಭಿವೃದ್ಧಿಶೀಲ ದೇಶಗಳಲ್ಲಿ ಉತ್ಪಾದಕತೆಯ ವರ್ಧನೆಗೆ ಮುಖ್ಯ ಕುತ್ತಾಗಿ ಇರುವ ಅಂಶವೇನು ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ.

ಕನ್ನಡವನ್ನು ಕಾರ್ಖಾನೆಯಲ್ಲಿ ಬಳಸಬೇಕು–ಸ್ವಭಾಷೆಯ ಬಳಕೆಯಿಂದ ಉತ್ಪಾದಕತೆ ಹೆಚ್ಚುತ್ತದೆ ಎನ್ನುವ ಪರಿಕಲ್ಪನೆಯ ಆಧಾರದ ಮೇಲೆ ಕರ್ನಾಟಕ ಸರ್ಕಾರದ ಎನ್. ಜಿ. ಎಫ್. ಸಂಸ್ಥೆಯಲ್ಲಿ ಕೆಲವು ಪ್ರಯೋಗಗಳನ್ನು ಕೈಗೊಳ್ಳಲಾಗಿದೆ. ಈ ಪ್ರಯೋಗದ ಮೊದಲ ಹಂತಗಳು ಅತ್ಯಂತ ಕುತೂಹಲಕಾರಿಯಾಗಿವೆ. ಈ ಪ್ರಯೋಗದ ಲಾಭವನ್ನು ಕೇವಲ ಕನ್ನಡನಾಡಿನ ಕಾರ್ಖಾನೆಗಳಷ್ಟೇ ಅಲ್ಲದೆ, ದೇಶದ ವಿವಿಧ ಭಾಗದಲ್ಲಿ ಸ್ಥಾಪಿಸಲ್ಪಟ್ಟಿರುವ ಕಾರ್ಖಾನೆಗಳಲ್ಲಿ ಕೂಡ ಪಡೆಯಬಹುದಾಗಿದೆ.

ಕನ್ನಡ ಬಳಕೆ ಕಾರ್ಯಕ್ರಮದ ಮೂಲ ತತ್ವ, "ಉತ್ಪಾದಕತೆಗಾಗಿ ಕನ್ನಡ". ಆದ್ದರಿಂದ ಪ್ರಸ್ತುತ ಕಾರ್ಮಿಕರಿಗೆ ಯಾವ ಕ್ಷೇತ್ರದಲ್ಲಿ 'ಕನ್ನಡವಲ್ಲದ' ಭಾಷೆ ಬಳಕೆಯಾಗುತ್ತಿದೆಯೋ, ಅಲ್ಲಿ ಕನ್ನಡವನ್ನು ಬಳಸುವ ಯೋಜನೆ ಹಾಕಿಕೊಳ್ಳಲಾಯಿತು. ಕಾರ್ಖಾನೆ ಎಂದ ಮೇಲೆ ಅಲ್ಲಿನ ಪ್ರಮುಖ ಸಂಪರ್ಕ ಸೇತು ಕಾರ್ಯಾಗಾರದಲ್ಲಿ ಮಾರ್ಗದರ್ಶನ ಮಾಡುವ ವಿನ್ಯಾಸಗಳು ಹಾಗೂ ಉತ್ಪಾದನೆಯ ಕಾರ್ಯ ವಿಧಾನವನ್ನು ವಿವರಿಸುವ ನಿಯಮಗಳು. ತಾಂತ್ರಿಕ ರೇಖಾನಕ್ಷೆಗಳಲ್ಲಿ ಕನ್ನಡವನ್ನು ಇಂಗ್ಲಿಷ್ ಮಾರ್ಗದರ್ಶನದೊಂದಿಗೇ ನೀಡಲಾಗುತ್ತದೆ. ಇದರಿಂದ ಮೊದಲ ಘಟ್ಟದಲ್ಲಿ ಕನ್ನಡ ಉಲ್ಲೇಖವನ್ನು ಒಪ್ಪಿಕೊಳ್ಳಲು ಹಿಂಜರಿಕೆ ಇರಬಹುದಿದ್ದು, ಅನಂತರ ಅದು ಮಾಯವಾಗುತ್ತದೆ. ಅಲ್ಲದೆ ಕನ್ನಡಿಗರಲ್ಲದ ಕಾರ್ಮಿಕರಿಗೆ ಇದ್ದಕ್ಕಿದ್ದಂತೆ ಕನ್ನಡದಲ್ಲಿ ಉತ್ಪಾದನೆ ನಿಯಮಗಳು ಮತ್ತು ರೇಖಾ ನಕ್ಷೆಗಳು ಬದಲಾದಲ್ಲಿ ಅವರ ಉತ್ಪಾದನ ಸರಣಿಯಲ್ಲಿ ತಡೆಯಾಗುವದಲ್ಲದೆ, ಇಷ್ಟು ವರ್ಷಗಳು ಅವರು ದುಡಿದ ಸ್ಥಳದಲ್ಲಿ ಪರಕೀಯರಾಗುತ್ತಾರೆ. ಕನ್ನಡಿಗ ಕಾರ್ಮಿಕರಿಗೂ ಕೂಡ ಅಪ್ಪಟ ಕನ್ನಡದಲ್ಲಿ ಅಷ್ಟೊಂದು ಪರಿಶ್ರಮವಿಲ್ಲದಿರುವುದರಿಂದ ಉತ್ಪಾದನೆಗೆ ಅಡ್ಡಿಯಾಗುವುದು. ವಾರ್ಷಿಕ ಉತ್ಪನ್ನ ಸುಮಾರು ರೂ ೬೦ ಕೋಟಿ ಇರುವ ಕಾರ್ಖಾನೆಯಲ್ಲಿ ಈ ಘಟ್ಟದ ಪ್ರಯೋಗ ಅತ್ಯಂತ ಸೂಕ್ಷ್ಮತೆ ಹಾಗೂ ಆವೇಶರಹಿತವಾಗಿ ಮಾಡುವ ಅಗತ್ಯ ಕಂಡು ಬಂದಿತು.

ವಿನ್ಯಾಸಗಳಲ್ಲಿ ಮಾರ್ಗದರ್ಶನ ಹಾಗೂ ಉತ್ಪಾದನ ನಿಯಮಗಳು ಇಂಗ್ಲಿಷ್–ಕನ್ನಡ ಭಾಷೆಗಳೆರಡರಲ್ಲೂ ಇರಬೇಕು ಎಂದ ಮಾತ್ರಕ್ಕೆ ಕನ್ನಡದಲ್ಲಿ ಇಂಗ್ಲಿಷ್ ತತ್ಸಮಾನ ಪದಗಳು ಎಲ್ಲಿವೆ ಎಂಬ ಪ್ರಶ್ನೆ ಮೂಡಿ ಬಂದಿತು. ಇದುವರೆಗೆ ಪ್ರಕಟವಾಗಿರುವ ಕನ್ನಡ ವಿಜ್ಞಾನ ಪಠ್ಯ ಪುಸ್ತಕಗಳು, ಮೈಸೂರು ವಿಶ್ವ ವಿದ್ಯಾಲಯದ ಇಂಗ್ಲಿಷ್–ಕನ್ನಡ ನಿಘಂಟು, ತಾಂತ್ರಿಕ ವಿಷಯಗಳ ಬಗ್ಗೆ ಈಗಾಗಲೇ ಆಗಾಗ್ಗೆ ಪ್ರಕಟವಾಗಿರುವ ಲೇಖಕರ ಕೃತಿಗಳು, ಶಿವರಾಮ ಕಾರಂತರು ತಮ್ಮ ವಿಜ್ಞಾನ ಪ್ರಪಂಚದಲ್ಲಿ ಬಳಸಿರುವ ಕನ್ನಡ ಪದಗಳು–ಇವುಗಳನ್ನೆಲ್ಲ ಕಲೆಹಾಕಿ, ಕ್ರೋಢೀಕರಿಸಲಾಯಿತು. ನಂತರ ಕಾರ್ಖಾನೆಯ ವಿವಿಧ ಶಾಖೆಗಳಲ್ಲಿ, ಕಾರ್ಯಾಗಾರದಲ್ಲಿ ಕೆಲಸ ಮಾಡುತ್ತಿರುವ ಮೇಲ್ವಿಚಾರಕರ ಒಂದು ಸಮಿತಿಯನ್ನು ರಚಿಸಲಾಯಿತು. ಪ್ರತಿಯೊಬ್ಬ ಸದಸ್ಯರೂ ತಮ್ಮ ತಮ್ಮ ವಿಭಾಗಗಳಲ್ಲಿ ಬಳಸುತ್ತಿರುವ ತಾಂತ್ರಿಕ ಪಾರಿಭಾಷಿಕ ಶಬ್ದಗಳ ಪಟ್ಟಿಯೊಂದನ್ನು ಸಿದ್ಧ ಪಡಿಸುವುದಲ್ಲದೆ ಅವುಗಳಿಗೆ ಕನ್ನಡ–ಕಾರ್ಮಿಕರು ಕೊಡಬಹುದಾದ ತತ್ಸಮಾನ ಕನ್ನಡ ಪದಗಳನ್ನು ಸೂಚಿಸಬೇಕೆಂದು ಕೋರಲಾಯಿತು. ಕರ್ನಾಟಕದ ಮೂಲೆ ಮೂಲೆಗಳಿಂದ ಬಂದು ಕಾರ್ಖಾನೆಯಲ್ಲಿ ಉದ್ಯೋಗಿಗಳಾಗಿರುವ ಕಾರ್ಮಿಕರ ಹಿನ್ನೆಲೆ ವ್ಯವಸಾಯ ಇಲ್ಲವೇ ವ್ಯಾಪಾರವಷ್ಟೇ ಹೊರತು, ಯಾರೂ ಆಧುನಿಕ ಕೈಗಾರಿಕೆಯ ಹಿನ್ನೆಲೆಯಲ್ಲಿ ಬಂದವರೇನಲ್ಲ. ಆದುದರಿಂದ ಅವರು ಉತ್ಪಾದನೆಯ ರಂಗದಲ್ಲಿ ಇಂದು ಬಳಸುತ್ತಿರುವ ತಾಂತ್ರಿಕ ವಸ್ತುಗಳಿಗೆ ಜಾನಪದ ತತ್ಸಮಾನ ಸಿಗುವುದು ಅಷ್ಟೊಂದು ಸುಲಭವೇನಲ್ಲ. ಆದರೆ ಕಳೆದ ೨೦ ವರ್ಷಗಳಿಂದ ಈ ವಾತಾವರಣದಲ್ಲಿ ದುಡಿದ ಕನ್ನಡ ಕಾರ್ಮಿಕ ತನ್ನ ತಾಜಾ ಜಾಣ್ಮೆಯಿಂದ ಈಗಗಾಲೇ ಒಂದು ಕನ್ನಡ ಪದ ಹುಡುಕಿ ಇಟ್ಟಿರುತ್ತಾನೆ. ಅವನ ಅಂತರಾಳವನ್ನು ಸೂಕ್ಷ್ಮವಾಗಿ ಮುಟ್ಟಿ, ಅವನ ಮನಸ್ಸಿನಲ್ಲಿ ಮುದ್ರಿತಗೊಂಡಿರುವ ಪದಗಳನ್ನು ಸಂಗ್ರಹಿಸುವುದು ಅತ್ಯಾವಶ್ಯಕ. ಚರಕಿಯಂತ್ರದ ಇಂಗ್ಲಿಷ್ ತತ್ಸಮಾನ ಲೇತ್; ಸಾಲ್ಡರಿಂಗ್, ಮದು ಬೆಸುಗೆ, ವೆಲ್ಡಿಂಗ್, ಬೆಸುಗೆ ಹಾಗೂ ಬ್ರೇಜಿಂಗ್, ಕಡುಬೆಸುಗೆ–ಹೇಗಿದೆ? ಈ ರೀತಿ ಸುಮಾರು ನಾಲ್ಕುವರೆ ಸಾವಿರ ಪದಗಳ ಒಂದು ಕನ್ನಡ–ಇಂಗ್ಲಿಷ್ ಔದ್ಯಮಿಕ ನಿಘಂಟು ಈಗ ಸಿದ್ಧವಾಗಿದೆ. ಅದರ ಪರಿಷ್ಕರಣ ಕಾರ್ಯ ಕೇವಲ ತರ್ಜುಮೆಯಷ್ಟೇ ಆಗಿರದೆ ಪದಗಳ ಶಿಷ್ಟೀಕರಣವೂ ಆಗಿರುತ್ತದೆ.

ಇನ್ನು ಕನ್ನಡ ಅಕ್ಷರಗಳನ್ನು ತಾಂತ್ರಿಕ ವಿನ್ಯಾಸಗಳ ಮೇಲೆ ಬರೆಯಲಾರಂಭಿಸಲು ಹೋದಾಗ ಅಲ್ಲಿ ಮತ್ತೊಂದು ಸಮಸ್ಯೆ ತಲೆದೋರಿತು. ಏಕೆಂದರೆ ನಕ್ಷೆಗಾರ ಇದುವರೆಗ

ಕೇವಲ ಇಂಗ್ಲಿಷಿನಲ್ಲಿ ಮಾರ್ಗದರ್ಶನ ವ್ಯಾಖ್ಯೆ ನೀಡಿ ನೀಲ ಮುದ್ರಣಕ್ಕೆ ನಕ್ಷೆಯನ್ನು ಕಳುಹಿಸುತ್ತಿದ್ದ. ಆದರೆ ಈಗ ಕನ್ನಡದಲ್ಲಿಯೂ ಮಾರ್ಗದರ್ಶನ ನೀಡಬೇಕಾಗಿ ಬಂತು. ಕನ್ನಡ ತರ್ಜುಮೆಯನ್ನು ಕಡುಗಪ್ಪು ಇಂಕಿನಲ್ಲಿ ಬರೆಯಬೇಕಾದರೆ ಸ್ಟೆನ್ಸಿಲ್ ನೆರವು ಬೇಕು. ಇಲ್ಲದಿದ್ದರೆ, ನಿಧಾನವಾಗಿ ಅಕ್ಷರಗಳನ್ನು ಬರೆಯುತ್ತಾ ಕೂಡಬೇಕು. ಒಬ್ಬ ನಕ್ಷೆಗಾರನಿಂದ ಮತ್ತೊಬ್ಬ ನಕ್ಷೆಗಾರನಿಗೆ ಅಕ್ಷರ ವಿನ್ಯಾಸಗಳಲ್ಲಿ ವ್ಯತ್ಯಾಸ ಕಂಡು ಬಂದೇ ಬರುತ್ತದೆ. ನಕ್ಷೆಗಳು ನಕ್ಷಾ ತಯಾರಿಕಾ ಕ್ಷೇತ್ರದಿಂದ ನಿಧಾನವಾಗಿ ಹೊರಬರುತ್ತವೆ. ಇದರಿಂದಾಗಿ ಕಾರ್ಯಾಗಾರದಲ್ಲಿ ಕೆಲಸ ಸ್ಥಗಿತಗೊಳ್ಳುತ್ತದೆ. ಉತ್ಪಾದಕತೆಯನ್ನು ಹೆಚ್ಚಿಸ ಬಯಸುವ ನಾವು ಇಂತಹ ವಿಳಂಬಗಳನ್ನು ಸಹಿಸಲು ಅಸಾಧ್ಯ. ಪ್ರತಿ ದಿನ ನೂರಾರು ನಕ್ಷೆಗಳ ತಯಾರಿಕೆ ಬೇರೆ ಆಗಬೇಕಾದುದರಿಂದ ಮುದ್ದಾದ ಅಕ್ಷರಗಳನ್ನು ಬರೆಯುತ್ತಾ ಕುಳಿತರೆ ನಕ್ಷೆಗಾರರ ತಾಳ್ಮೆಯೂ ಕೆಡುತ್ತದೆ. ಅದರಿಂದಾಗಿ ಮಾತ್ರವಲ್ಲದೆ ತಾಂತ್ರಿಕ ನಕ್ಷೆಗಳಲ್ಲಿ ಮೂಡುವ ಅಕ್ಷರಗಳು ಹೀಗೆಯೇ ಇರಬೇಕೆಂದು ಅಂತರರಾಷ್ಟ್ರೀಯ ಪ್ರಮಾಣದ ಕಟ್ಟುಪಾಡು ವಿಧಿಸುತ್ತದೆ. ಅದರ ಪ್ರಕಾರ ತಾಂತ್ರಿಕ ನಕ್ಷೆಗಳಲ್ಲಿ ಬರೆಯಲ್ಪಡುವ ಅಕ್ಷರಗಳು ಅ) ಸ್ಪಷ್ಟವಾಗಿರಬೇಕು ಆ) ಸಮಾನಾಕೃತಿ ಉಳ್ಳವಾಗಿರಬೇಕು ಹಾಗೂ ಇ) ಛಾಯಾ ಚಿತ್ರಗ್ರಹಣ ಅಥವಾ ಮೈಕ್ರೋಫಿಲ್ಮ್‌ಗಳಿಗೆ ಸೂಕ್ತವಾಗಿರಬೇಕು. ವರ್ಣಮಾಲೆಯ ಅಕ್ಷರಗಳ ಆಕೃತಿ ಒಂದರಿಂದ ಮತ್ತೊಂದು ಸ್ಪಷ್ಟವಾಗಿ ಭಿನ್ನವಾಗಿ ತೋರುವಂತಿರಬೇಕು. ಏಕೆಂದರೆ ಹಾಗೊಮ್ಮೆ ಮುಂದೆ ಮೈಕ್ರೋ ಫಿಲ್ಮ್ ತೆಗೆದುಕೊಂಡು ಪುನಃ ಮುದ್ರಣ ಮಾಡುವಾಗ ಯಾವುದೇ ರೀತಿಯ ಬಣ್ಣ ಗುಪ್ಪೆ ಇರಬಾರದು. ಈ ನಿಯಮಗಳಿಗೆ ಅನುಸಾರವಾಗಿ ಕನ್ನಡ ವರ್ಣಮಾಲೆಯ ಅಕ್ಷರಗಳನ್ನು ರೂಪಿಸುವ ಕಾರ್ಯಕ್ರಮದ ಜೊತೆಯಲ್ಲಿಯೇ, ನಕ್ಷೆಗಾರರು ಇಂಗ್ಲಿಷ್ ಅಕ್ಷರಗಳಿಗೆ ಬಳಸುವ ಸ್ಟೆನ್ಸಿಲ್‌ನಂತಹುದನ್ನೇ ಕನ್ನಡ ಅಕ್ಷರಗಳಿಗೂ ರೂಪಿಸಲಾಯಿತು. ಭಾರತದ ಯಾವುದೇ ಪ್ರಾದೇಶಿಕ ಭಾಷೆ ಇದುವರೆಗೆ ಅಂತರರಾಷ್ಟ್ರೀಯ ಪ್ರಮಾಣನಗಳಿಗೆ ಹೊಂದುವಂತೆ ತನ್ನ ಅಕ್ಷರಗಳನ್ನು ರೂಪಿಸಿಕೊಂಡಿರಲಿಲ್ಲ. ಹೀಗಾಗಿ ಕನ್ನಡ ಭಾಷೆಗೆ "ಕಾರ್ಖಾನೆಯಲ್ಲಿ ಕನ್ನಡ" ಪ್ರಯೋಗದಿಂದಾಗಿ ಅಕ್ಷರ ಪ್ರಮಾಣನ ಹಾಗೂ ಸ್ಟೆನ್ಸಿಲ್ ಲಭ್ಯವಾಯಿತು.

ಕಾರ್ಖಾನೆಯ ಕನ್ನಡದ ವಾತಾವರಣ ಕೆಲವು ಪರೋಕ್ಷ ಲಾಭಗಳನ್ನು ತಂದುಕೊಟ್ಟಿದೆ. ಅವುಗಳಲ್ಲಿ ಒಂದು ಉತ್ತಮ ಸಲಹೆಗೆ ಬಹುಮಾನ ಯೋಜನೆಯಲ್ಲಿ ಈಗ ಹೆಚ್ಚಿನ ಸಂಖ್ಯೆಯಲ್ಲಿ ಕಾರ್ಮಿಕರು ಪಾಲ್ಗೊಳ್ಳುವಿಕೆ. ಯಾವುದೇ ಸುಸಜ್ಜಿತ ಕಾರ್ಖಾನೆಯಲ್ಲಿ ಕಾರ್ಮಿಕರು ನೀಡುವ ಜಾಣ ಸಲಹೆಗೆ ಪುರಸ್ಕಾರ ನೀಡುವ ಯೋಜನೆ ಜಾರಿಯಲ್ಲಿರುತ್ತದೆ. ಉತ್ಪಾದನೆಯ ಕಾರ್ಯವಿಧಾನದಲ್ಲಿ ಯಾವುದೇ ಒಂದು ಅನುಕೂಲತೆಯನ್ನು ಅಳವಡಿಸುವುದರಿಂದಲೋ, ಸರಣಿಯಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಳ್ಳುವುದರಿಂದಲೋ, ಕಚ್ಚಾ ಸಾಮಗ್ರಿಗಳನ್ನು ಕಡಿಮೆ ಬಳಸುವುದರಿಂದಲೋ, ಒಟ್ಟಿನಲ್ಲಿ ಗುಣಮೌಲ್ಯಕ್ಕೆ ಕುಂದು ಬಾರದಂತೆ ಉತ್ಪಾದನೆಯನ್ನು ಹೆಚ್ಚಿಸುವ ಅಥವಾ/ಮತ್ತು ಉತ್ಪಾದನ ವೆಚ್ಚವನ್ನು ಕಡಿತಗೊಳಿಸುವ ಸಲಹೆಗೆ ಯಾವಾಗಲೂ ಸ್ವಾಗತವಿದೆ. ಇಂಗ್ಲಿಷಿನಲ್ಲಿ ಸಮಸ್ತ ಕಾರ್ಯಾಚರಣೆಗಳೂ ನಡೆಯುತ್ತಿದ್ದರೆ ಕಾರ್ಮಿಕರಿಂದ ಸಲಹೆಗಳು ಖಂಡಿತ ಹೆಚ್ಚಾಗಿ ಮೂಡಿ ಬರುವುದಿಲ್ಲ. ಈಗ ಆಡಳಿತ ವರ್ಗವೇ ಸ್ವಇಚ್ಛೆಯಿಂದ ಕನ್ನಡವನ್ನು ಕಾರ್ಯಾಗಾರದವರೆಗೆ ತಂದಿರುವುದರಿಂದ ಕಾರ್ಮಿಕರು ತಮ್ಮ ಸಲಹೆಗಳ ಮೂಲಕ ಉಭಯತರ ಸಂಪರ್ಕ ಸಾಧಿಸಲು ಸಾಧ್ಯವಾಗಿದೆ.

ಕನ್ನಡೇತರರಿಗೆ ಕನ್ನಡ ತರಗತಿಗಳು, ಕನ್ನಡದಲ್ಲಿ ವಾರ್ತಾಪತ್ರ, ಕನ್ನಡದಲ್ಲಿ ಭಿತ್ತಿ ಫಲಕಗಳು ಹೀಗೆಲ್ಲಾ ಇನ್ನೂ ಹಲವಾರು ಕಾರ್ಯಕ್ರಮಗಳು ಸಮ್ಮಿಲಿತವಾಗಿ ನಡೆಯುತ್ತಿವೆ. ಭಾಷೆಯಲ್ಲಿರುವ ಕೆಚ್ಚನ್ನು ನಾಡಿನ ವರ್ಧನೆಗೆ ಬಳಸಿಕೊಳ್ಳಬೇಕೆಂಬ ಉತ್ಕಟ ಆಕಾಂಕ್ಷೆಯಿಂದ ಆರಂಭಗೊಂಡಿರುವ ಈ ಕನ್ನಡನಾಡಿನ ಕಾರ್ಮಿಕ–ಉತ್ಪಾದಕತೆ ಪ್ರಯೋಗ. ಕೇವಲ ಸೀಮಿತ ಉದ್ದೇಶ್ಯ ಉಳ್ಳದ್ದಲ್ಲ. ಕಾರ್ಮಿಕರಿಂದ, ಆಡಳಿತವರ್ಗದಿಂದ ತುಂಬು ಮನಸ್ಸಿನ ಈ ಕಾರ್ಯಕ್ರಮ ಹೆಚ್ಚಿನ ಆಶೋತ್ತರಗಳನ್ನಿಟ್ಟುಕೊಂಡು, ವೈಜ್ಞಾನಿಕ ಪಥದಲ್ಲಿ ಮುಂದುವರಿಯುತ್ತಿದೆ.

# ಕಾರ್ಖಾನೆಯಲ್ಲಿ ಕನ್ನಡ

| ಎನ್‌ಜಿಇಎಫ್ NGEF ಪ್ರ St | ಕನ್ನಡ ಅಕ್ಷರ ಸ್ಟೆನ್ಸಿಲುಗಳ ಬಳಕೆಗೆ ಪ್ರಮಾಣ<br>Standard for use of Kannada Lettering Stencils | 00 0391 0001<br>ಪುಟ Page 1 ರ Of 1 |
|---|---|---|

ಅಳತೆಗಳು ಮಿಮಿನಲ್ಲಿ Dimensions in mm.

1. ವ್ಯಾಪ್ತಿ : ಕನ್ನಡ ಅಕ್ಷರಗಳ ಸ್ಟೆನ್ಸಿಲುಗಳ ಬಳಕೆಗೆ ಅದರಲ್ಲೂ ನಕ್ಷೆ ಮತ್ತು ಇತರ ಸಂಬಂಧಿಸಿದ ಬಿದ್ಯವಿಕ ದಾಖಲೆಗಳ ಮೇಲೆ ಬರೆಯಲು ನಕ್ಷೆಗಾರರಿಗೆ ಮಾರ್ಗದರ್ಶನ ನೀಡುವುದು ಈ ಪ್ರಮಾಣನದ ಉದ್ದೇಶ
2. ಸರ್ವಾನ್ವಯ : ಅಕ್ಷರಗಳ ಮೂಲರೂಪ ಸಮಾನವಾಗಿರು ವೆಡೆಗಳಲ್ಲಿ ಒಂದೇ ಅಕ್ಷರವನ್ನು ಕೊಡುವುದರ ಮೂಲಕ ಸಾಧ್ಯವಾದಷ್ಟು ಮಟ್ಟಿಗೆ ಸ್ಟೆನ್ಸಿಲಿನ ಒಟ್ಟು ಗಾತ್ರವನ್ನು ಕಡಿಮೆ ಮಾಡಿ ಸರಾಗವಾದ ಬಳಕೆಗೆ ಅವಕಾಶ ಮಾಡಿಕೊಡಲಾಗಿದೆ. ಬರೆಯಲು ಉದ್ದೇಶಿಸಿರುವ ಅಕ್ಷರಗಳನ್ನು ಪೂರ್ತಿ ಮಾಡಲು ಅಂತಹ ಸಂದರ್ಭಗಳಲ್ಲಿ ಅನುಸರಿಸಬೇಕಾದ ನಿಖರವಾದ ಅನುಕ್ರಮವನ್ನು ಈ ಮಾರ್ಗದರ್ಶಿ ಕೊಡುತ್ತದೆ.
3. ವಿಧಾನ :

3.1 ಒಂದನೆಯ ಪಟ್ಟಿಯಲ್ಲಿ ಕೊಟ್ಟಿರುವ ಅನುಕ್ರಮದಂತೆ ಅಕ್ಷರಗಳನ್ನು ಬರೆಯತಕ್ಕದ್ದು. ಅಕ್ಷರ ಪ್ರಮಾಣನ ನಮೂದನೆಗೆ ಎನ್‌ಜಿಇಎಫ್ 00 0101 0007 ಅನ್ನು ನೋಡುವುದು. ಬರೆಯಲು ಬಳಸುವ ಲೇಖನಿ ಅಕ್ಷರಗಳ 1/10ನೇ ಗಾತ್ರದಷ್ಟಿರತಕ್ಕದ್ದು.

3.2 ಒತ್ತಕ್ಷರಗಳು : ಎರಡನೇ ಪಟ್ಟಿಯಲ್ಲಿ ಕೊಟ್ಟಿರುವ ಅನುಕ್ರಮದಂತೆ ಒತ್ತಕ್ಷರಗಳನ್ನು ಬರೆಯತಕ್ಕದ್ದು. ಇದಕ್ಕೆ ಬಳಸುವ ಲೇಖನಿ ಒತ್ತಕ್ಷರದ 1/10ನೇ ಗಾತ್ರದಷ್ಟಿರಬೇಕು.

1. SCOPE: This standard is intended to serve as a guide while using the Kannada lettering stencils, particularly for the draughtsmen to write on drawings and other connected documents.
2. GENERAL: To facilitate ease of handling, the overall size of the stencil has been reduced as far as possible, by providing a single letter wherever basic shapes of the letters are common. This guide gives the exact sequences to be followed in such cases in order to complete the letters intended to be written.
3. PROCEDURE :

3.1 Letters shall be written in accordance with sequence furnished in Table 1. For specification of the standard letters refer NGEF 00 0101 0007. The size of the pen selected for purpose shall be 1/10 of the size of letters.

3.2 Double consonants: The double consonants shall be written in accordance with the sequence furnished in Table 2. The size of the pens selected shall be 1/10 size of the double consonant.

ಪಟ್ಟಿ-1 Table - 1

| ಅಕ್ಷರ LETTER | ಅ | ಆ | ಇ | ಈ | ಉ | ಊ | ಋ | ೠ | ಎ | ಏ | ಐ | ಒ | ಓ | ಔ | ಅಂ | ಅಃ | ಕ | ಖ | ಗ |
|---|---|---|---|---|---|---|---|---|---|---|---|---|---|---|---|---|---|---|---|
| ಬಳಸು USE | 1 | 2 3 | 4 | 8 9 10 | 13 | 13 47 | 14 11 11 | 14 11 47 | 24 | 24 23 | 15 | 16 | 16 | 16 17 | 1 19 | 1 20 | 19 10 | 14 11 | 22 10 |

| | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|
| ಘ | ಙ | ಚ | ಛ | ಜ | ಝ | ಞ | ಟ | ಠ | ಡ | ಢ | ಣ | ತ | ಥ | ದ | ಧ | ನ |
| 24 25 12 7 10 | 16 5 7 | 27 28 | 24 12 23 | 16 18 | 8 10 11 11 12 | 4 5 | 30 | 8 10 6 | 31 10 | 31 10 12 | 32 | 10 33 | 29 10 12 6 | 29 10 | 29 10 12 | 34 10 |

| | | | | | | | | | | | | | | |
|---|---|---|---|---|---|---|---|---|---|---|---|---|---|---|
| ಪ | ಫ | ಬ | ಭ | ಮ | ಯ | ರ | ಲ | ವ | ಶ | ಷ | ಸ | ಹ | ಳ | ϕ |
| 24 10 7 | 24 10 7 12 | 27 | 27 12 | 24 10 11 | 8 11 11 | 8 10 | 1 | 24 10 | 35 10 | 24 10 26 7 | 34 10 7 | 36 36 37 10 | 38 40 | 57 58 |

ಪಟ್ಟಿ-2 Table - 2

| | | | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|
| ್ಕ | ್ಖ | ್ಗ | ್ಘ | ್ಙ | ್ಚ | ್ಛ | ್ಜ | ್ಝ | ್ಞ | ್ಟ | ್ಠ | ್ಡ | ್ಢ | ್ಣ | ್ತ | ್ಥ | ್ದ | ್ಧ | ್ನ | ್ಪ |
| 21 | 14 11 | 22 | 24 25 12 | 16 5 7 | 27 28 | 24 12 | 16 18 | 8 11 11 12 | 4 5 | 30 | 8 6 | 31 | 31 12 | 32 | 49 | 29 12 6 | 29 | 29 12 | 50 | 24 |

| | | | | | | | | | | | | | |
|---|---|---|---|---|---|---|---|---|---|---|---|---|---|
| ್ಫ | ್ಬ | ್ಭ | ್ಮ | ್ಯ | ್ರ | ್ರ | ್ಲ | ್ವ | ್ಶ | ್ಷ | ್ಸ | ್ಹ | ್ಳ |
| 24 12 | 27 | 27 12 | 51 | 52 | 53 | 54 | 55 | 24 10 | 35 | 56 | 34 | 36 36 | 38 40 |

| ದಾಖಲೆ REF. | ಲಗತ್ತಿಸಬೇಕಾದ ಪ್ರಮಾಣನಗಳು Standards to be enclosed |
|---|---|



EARLIER ISSUE

# ಹೊರನಾಡ ಕನ್ನಡಿಗರು

ನಿ. ವ್ಯಾಸರಾಯ ಬಲ್ಲಾಳ

ಸಂಪರ್ಕಕ್ಕೆ, ಸಹಜೀವನಕ್ಕೆ ಸಾಧನವಾಗಿರುವ ಭಾಷೆ ರೂಪಿಸಿದ ಸಂಸ್ಕೃತಿಯ ಬೇರುಗಳನ್ನು ಉಳಿಸಲು ಸಮರ್ಥವಾಗುವುದು, ಅನುಕೂಲ ಸ್ಥಿತಿಯಲ್ಲಿ ಮಾತ್ರ. ವಿಚಾರ ವಿನಿಮಯಕ್ಕೂ, ಸಾಮಾಜಿಕ ಜೀವನಕ್ಕೂ ಯಾವುದೊಂದು ಭಾಷೆಯ ಅಗತ್ಯ ಅಷ್ಟಾಗಿ ಇರದಂಥ ಪರಿಸರದಲ್ಲಿ ಅಂಥ ಭಾಷೆಗೆ ಸಂಬಂಧಿಸಿದ ಸಂಸ್ಕೃತಿಯ ವರ್ಚಸ್ಸು ಆ ಭಾಷೆಯನ್ನಾಡುವ ಜನರಲ್ಲೂ ದೀರ್ಘ ಕಾಲ ಉಳಿದೀತೆಂದು ಹೇಳುವಂತಿಲ್ಲ. ಸಹಜೀವನ ಪಥ್ಯವಾಗುವುದು, ಸಮಾನ ಸ್ತರದಲ್ಲಿ ಭಾಷೆಯನ್ನು ವಿಚಾರ ವಿನಿಮಯಕ್ಕಾಗಿ, ಕೂಟ ಜೀವನದ ಸಂತೋಷಕ್ಕಾಗಿ, ಕಲಾಭಿವ್ಯಕ್ತಿಗಾಗಿ ಬಳಸುವ ಸಾಧ್ಯತೆಯಿರುವಾಗ, ಈ ಸಾಧ್ಯತೆ ಅನಿವಾರ್ಯವೆನಿಸುವಾಗ. ಸಿಂಹಳ, ಬರ್ಮಾ ಮುಂತಾದ ನೆರೆಯ ದೇಶಗಳಲ್ಲೂ, ದೂರ ಪ್ರಾಚ್ಯದ ಹಲವಾರು ಪ್ರದೇಶಗಳಲ್ಲೂ ನಾವು ತಮಿಳು ಭಾಷೆಯ, ತಮಿಳು ಸಂಸ್ಕೃತಿಯ ವರ್ಚಸ್ಸನ್ನು ಇಂದಿಗೂ ಕಾಣುತ್ತೇವೆ. ಚಹಾ, ರಬ್ಬರ್ ತೋಟಗಳಲ್ಲಿ, ಹಲವಾರು ಉದ್ಯಮಗಳಲ್ಲಿ ಜೀವನೋಪಾಯವನ್ನು ಕಂಡುಕೊಂಡು ಗುಂಪು ಗುಂಪಾಗಿ ವಲಸೆ ಹೋಗಿ ನೆಲೆಸಿದ ಕೆಲಸಗಾರರೆಲ್ಲ ತಮ್ಮ ಭಾಷೆಯ ಬಾಂಧವ್ಯವನ್ನು ಉಳಿಸಿಕೊಂಡೇ ನೆಲೆಸಿದರು. ಕಾಲ, ಇತಿಹಾಸ, ಅಪರಿಚಿತ ನಾಡುಗಳಲ್ಲಿ ಇದಿರಿಸಬೇಕಾಗಿ ಬರುವ ಸ್ಥಿತ್ಯಂತರಗಳು ಇಂಥವರ ಜೀವನದ ಮೇಲೆ ಪರಿಣಾಮ ಮಾಡಿವೆಯಾದರೂ, ಇವರು ತಮ್ಮ ಭಾಷೆಯ ಬಾಂಧವ್ಯವನ್ನಾಗಲೀ, ಸಾಂಸ್ಕೃತಿಕ ಬೇರುಗಳನ್ನಾಗಲೀ ಕಡಿದುಕೊಂಡಿಲ್ಲ.

ಬಡತನದ ಕಾರಣಗಳಿಂದಾಗಿಯೂ, ಹೆಚ್ಚಿನ ಆರ್ಥಿಕ ಹಾಗೂ ಸಾಮಾಜಿಕ ಭದ್ರತೆಗಾಗಿಯೂ, ಬಾಳಲು ಸಾಧ್ಯವಾಗುವಂಥ ಶ್ರಮ ಜೀವಿಗಳ ದುಡಿಮೆಯನ್ನೇ ಉದಾ: ಚಹಾ, ರಬ್ಬರ್ ತೋಟಗಳಲ್ಲಿ ಕೆಲಸವನ್ನಾಶ್ರಯಿಸಿದ ತಮಿಳರು, ವ್ಯಾಪಾರವನ್ನೇ ಆಶ್ರಯಿಸಿ ಆಫ್ರಿಕಾದ ದೇಶಗಳಿಗೆ ಹೋಗಿರುವ ಗುಜರಾಥೀ ಜನರು, ಕೃಷಿಯ ಕ್ಷೇತ್ರದಲ್ಲಿ ಕಷ್ಟದ ದುಡಿಮೆಗೆ ವಿಶೇಷ ಪ್ರತಿಫಲವಿದೆಯೆಂದು ನಂಬಿ ಅಮೆರಿಕ, ಕೆನಡಾ ಮುಂತಾದ ರಾಷ್ಟ್ರಗಳಿಗೆ ವಲಸೆ ಹೋಗಿ ನೆಲಸಿರುವ ಪಂಜಾಬೀ ಜನರು. ಒಳ್ಳೆಯ ಬದುಕಿಗಾಗಿ ಎಲ್ಲಾದರೂ ನೆಲೆಸಬಹುದು, ಹಾಗೆ ನೆಲೆಸಿದಲ್ಲೆಲ್ಲ ತಮ್ಮ ಭಾಷೆ,ಸಂಸ್ಕೃತಿಗಳ ನೆನಪು ಮರೆಯದಂಥ ಆವರಣವನ್ನು ಸೃಷ್ಟಿಸಿಕೊಳ್ಳಲು ಸಾಧ್ಯವಿದೆಯಾದರೆ, ಅಪರಿಚಿತತೆ ಕಾಡುವುದಿಲ್ಲವೆಂದು ನಂಬಿ, ವಲಸೆ ಹೋದ ಇಂಥ ಜನರಿಂದ ಭಾರತೀಯ ಸಂಸ್ಕೃತಿಯ ವರ್ಚಸ್ಸನ್ನು ನಾವು ವಿಶ್ವದ ಕೆಲವು ರಾಷ್ಟ್ರಗಳಲ್ಲಿ ಇಂದಿಗೂ ಕಾಣುತ್ತೇವೆ.

ದೂರದ ನಾಡುಗಳಿಗೆ ವಲಸೆ ಹೋಗಲು ಬಡತನ ಒಂದು ಕಾರಣವಾದರೆ, ಸಾಹಸ ಪ್ರವೃತ್ತಿ ಇನ್ನೊಂದು ಕಾರಣ. ಈ ಪ್ರವೃತ್ತಿಯನ್ನೇ ಪೋಷಿಸುವಂಥ ಸಾರಿಗೆಯ ಸಂಪರ್ಕವೂ ವಲಸೆ ಹೋಗಿ ನೆಲೆಸಲು ಮತ್ತೊಂದು ಕಾರಣ. ಹಲವಾರು ಶತಮಾನಗಳಿಂದ ಸಾಗರದ ಸಾರಿಗೆಯ ಸಂಪರ್ಕದ ಇತಿಹಾಸವಿರುವ ಭಾರತದ ಕರಾವಳಿಯ ಜನರೇ ವಲಸೆಹೋಗುವ ಪ್ರವೃತ್ತಿಯನ್ನು ಬೆಳೆಸಿಕೊಂಡವರಲ್ಲಿ ಪ್ರಮುಖರು. ಈ ಮಾತು ತಮಿಳುನಾಡಿಗೂ ಅನ್ವಯಿಸುತ್ತದೆ; ಗುಜರಾತ ರಾಜ್ಯಕ್ಕೂ ಅನ್ವಯಿಸುತ್ತದೆ.

ಆದರೆ ಪ್ರಾಚೀನ ಕಾಲದಿಂದಲೂ ಸಾಗರದ ಸಾರಿಗೆಯ ಸಂಪರ್ಕದ ಇತಿಹಾಸವಿದ್ದ ಕರ್ನಾಟಕದ ಮಾತೇನು? ಬ್ರಿಟಿಷರ ಆಡಳಿತೆಯಡಿ ಇಂದಿನ ಕರ್ನಾಟಕದ ಕರಾವಳಿ, ಕರ್ನಾಟಕ ರಾಜ್ಯದ ಕರಾವಳಿಯಾಗಿರಲಿಲ್ಲ. ಕರ್ನಾಟಕಕ್ಕೆ ಒಂದೇ ಆಡಳಿತೆಯ ರಾಜ್ಯವಂತಿರಲಿ, ಮೈಸೂರು ಸಂಸ್ಥಾನವನ್ನುಳಿದು, ಬಹು ಸಂಖ್ಯಾಕ ಕನ್ನಡಿಗರನ್ನು ಪ್ರತಿನಿಧಿಸಬಹುದಾದ ಯಾವ ರಾಜ್ಯವೂ ಇರಲಿಲ್ಲ. ಎರಡು ಪ್ರಾಂತ್ಯಗಳಲ್ಲಿ, ಹಲವಾರು, ಸಂಸ್ಥಾನಗಳಲ್ಲಿ ಹರಿದು ಹಂಚಿಹೋಗಿದ್ದ ಕನ್ನಡನಾಡು ಸ್ವಾತಂತ್ರ್ಯ ಬಂದು ಒಂಭತ್ತು ವರ್ಷಗಳಾದ ಮೇಲೆ ಒಂದೇ ರಾಜ್ಯವಾಗಿ ಒಂದೇ ಆಡಳಿತೆಯನ್ನು ರೂಪಿಸಿಕೊಳ್ಳಲು ಸಾಧ್ಯವಾದ ಮೇಲೆ, ೧೬ನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಪತನವಾಗಿ ನಷ್ಟವಾಗಿದ್ದ ಕರ್ನಾಟಕತ್ವದ ಕಲ್ಪನೆ ಮತ್ತೆ ಚಿಗುರಲು ಅವಕಾಶ ದೊರೆತಂತಾಯಿತು.

ಗುಂಪುಗುಂಪಾಗಿ ದೇಶಗಳಲ್ಲಿ ನೆಲೆಸಿರುವ ತಮಿಳರಾಗಲೀ, ಗುಜರಾತಿ ಜನರಾಗಲೀ ಇತರರಾಗಲೀ ತಮ್ಮ ಪ್ರಾಂತ್ಯಗಳ, ತಮ್ಮ ಪರಿಸರದ ಗ್ರಾಮೀಣ ಸಂಸ್ಕತಿಯ ವರ್ಚಸ್ಸನ್ನು ಅಪರಿಚಿತ ಆವರಣದಲ್ಲೂ ಉಳಿಸಿಕೊಳ್ಳಲು ಸಮರ್ಥರಾಗಿರುವರಾದರೆ, ಅದಕ್ಕೆ ಕಾರಣ ಈ ಮೊದಲೇ ವಿವರಿಸಿದಂತೆ ಅವರು, ಆಶ್ರಯಿಸಿದ ಜೀವನ ಕ್ರಮ. ಗುಂಪುಗುಂಪಾಗಿ ನೆಲೆಸಿರುವಲ್ಲಿ, ಅಪರಿಚಿತ ನಾಡುಗಳಲ್ಲಿ ಅನುಭವಿ

ಸಲೇಬೇಕಾಗಿ ಬರುವ ಸಾಂಸ್ಕೃತಿಕ ಆಘಾತಗಳನ್ನು (ಕಲ್ಚರಲ್ ಶಾಕ್ಸ್) ಸಹಿಸಿಕೊಳ್ಳುವುದು ಸುಲಭವಾಗುತ್ತದೆ, ಆದರೆ ಕನ್ನಡಿಗರು ವಿದೇಶಗಳಿಗೆ ಸಾಮೂಹಿಕವಾಗಿ ವಲಸೆ ಹೋಗುವ ಅನಿವಾರ್ಯತೆಯೂ, ಭೌಗೋಲಿಕವಾದ ಒತ್ತಡ, ಅನುಕೂಲತೆಗಳೂ ಇಲ್ಲದೆ ಹೋದುದರಿಂದ, ಕನ್ನಡ ನಾಡನ್ನು ಬಿಟ್ಟು ಹೊರಗೆ ಹೋಗಿ ನೆಲೆಸಬಯಸಿದವರಲ್ಲಿ ಹೆಚ್ಚಿನವರು ತಮ್ಮ ವೈಯುಕ್ತಿಕ ಯೋಗ್ಯತೆಯ ನೆಲೆಯಲ್ಲಿ ಜೀವನೋಪಾಯವನ್ನರಸಿಕೊಂಡು ಹೋದಂಥವರು. ಇವರಿಗೆ ತಾಯಿನುಡಿಯ ಕುರಿತು ಆದರ ಅಭಿಮಾನಗಳಿರಬಹುದು. ಆದರೆ ಇಂಥ ಅಭಿಮಾನ ಅವರು ಅನಿವಾರ್ಯವಾಗಿ ಆಶ್ರಯಿಸಬೇಕಾದ ವ್ಯಾವಹಾರಿಕತೆಯ ನೆಲೆಯಲ್ಲಿ ಬರೀ ಒಂದು ಭಾವನಾತ್ಮಕ ಸಂಬಂಧವಾಗಿ ಉಳಿಯಲೂಬಹುದು, ಅಳಿಯಲೂಬಹುದು ಎನ್ನುವ ಸ್ಥಿತಿಯಲ್ಲಿರುವುದೇ ಹೆಚ್ಚು. ಅಮೆರಿಕೆಯ ಒಂದು ದೊಡ್ಡ ಶಹರದಲ್ಲಿ ಕನ್ನಡ ನಾಟಕವೊಂದನ್ನು ಅಲ್ಲಿ ನೆಲೆಸಿರುವ ಇಂಜಿನಿಯರುಗಳೋ, ಡಾಕ್ಟರರೋ, ಇತರ ತಂತ್ರಜ್ಞರೋ ಆಡಿದರೆನ್ನೋಣ. ಇದು ತಾಯಿ ನುಡಿಯ, ತಾಯಿ ನಾಡಿನ ನೆನಪು ಮಾಡಿಕೊಳ್ಳುವ ಮನಸ್ಸಿನ ಹಂಬಲಕ್ಕೆ ಸಂಬಂಧಿಸಿದ ವ್ಯಥೆ ಆಗಬಹುದಷ್ಟೆ. ಹಲವಾರು ಕುಟುಂಬಗಳು ಒಂದೆಡೆ ಬೆರೆತು, ಬಿಟ್ಟು ಬಂದ ನಾಡನ್ನು, ಮರೆಯುತ್ತಿರುವ ನುಡಿಯನ್ನು ಪರಕೀಯವೆನಿಸುವ ಆವರಣದಲ್ಲಿ ನೆನಪು ಮಾಡಿಕೊಳ್ಳುವುದು, ಆ ಪ್ರದೇಶದ ಆ ಪರಿಸರದ ಸಾಮಾಜಿಕ ಸಂದರ್ಭದಲ್ಲೂ ವರ್ಚಸ್ಸನ್ನು ಕೆಡವಲು ಸಮರ್ಥವಾಗಬಹುದಾದ ಅನನ್ಯತೆಯನ್ನು ಸ್ಥಾಪಿಸಲು ಸಮರ್ಥವಾಗಬಹುದೇ ಎಂಬುದು ಸಂದೇಹದ ಮಾತು. ಹೀಗೆ ಬರೆದ ಮಾತ್ರಕ್ಕೆ ಇಂಥ ಅಭಿಮಾನ, ಆದರಗಳ ಕುರಿತ ನಮ್ಮ ಗೌರವ ಕಡಮೆಯಾಗುವುದಿಲ್ಲ. ಅವು ಕಾಣಿಸಿಕೊಳ್ಳುವ ಸಾಮಾಜಿಕ ಸಂದರ್ಭಗಳಲ್ಲಿ, ಇಂಥ ಅಭಿಮಾನ, ತಾಯಿ ನುಡಿಗೆ ಸಂಬಂಧಿಸಿದ ಸಾಂಸ್ಕೃತಿಕ ಬೇರುಗಳನ್ನು ಬಲಪಡಿಸಲು ಅಥವಾ ಉಳಿಸಲು ವಿಶೇಷ ಸಹಾಯಮಾಡಬಹುದು ಎನ್ನಲು ಅನುಮಾನಿಸಬೇಕಾಗುವುದು.

ವಿಶ್ವದ ಬೇರೆ ಬೇರೆ ಕಡೆ ಹೋಗಿ ನೆಲೆಸಿರುವ ಕನ್ನಡಿಗರ ಮಾತು ಹೀಗಾದರೆ, ಇಂದಿನ ಕರ್ನಾಟಕದಿಂದ ಭಾರತದ ಬೇರೆ ಬೇರೆ ಕಡೆ ಹೋಗಿ ನೆಲೆಸಿರುವ ಕನ್ನಡಿಗರ ಪರಿಸ್ಥಿತಿ ಯಾವುದಿದೆಯೆನ್ನುವುದು ತುಂಬ ಕುತೂಹಲಕಾರಕ ವಿಷಯವಾಗಿದೆ. ಭಾರತದ ಎರಡು ಪ್ರಧಾನ ನಗರಗಳಾದ ಮುಂಬಯಿ ಮತ್ತು ಮದರಾಸು, ಬ್ರಿಟಿಷರ ಆಡಳಿತೆಯ ಕಾಲದಲ್ಲಿ ಆ ಪ್ರಾಂತಗಳಲ್ಲಿದ್ದ ಕನ್ನಡ ಜಿಲ್ಲೆಗಳಿಗೆ ರಾಜಧಾನಿ ನಗರಗಳಾಗಿದ್ದುವೆಂಬುದು ಗಮನಾರ್ಹ ವಿಚಾರ. ಆಡಳಿತೆಗೆ, ಶಿಕ್ಷಣಕ್ಕೆ, ನ್ಯಾಯಾಂಗಕ್ಕೆ ಸಂಬಂಧಿಸಿದ ಹಲವಾರು ಕಾರಣಗಳಿಂದ ರಾಜಧಾನಿ ಪ್ರಜೆಗಳನ್ನು ಸೆಳೆಯುತ್ತದೆ. ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳ ಜನರನ್ನು ಮುಂಬಯಿ ಸೆಳೆಯುತ್ತಿದ್ದುದು ಈ ಕಾರಣಗಳಿಗಾಗಿ. ಹಾಗೆಯೇ ಮುಂಬಯಿ ಮಹಾ ನಗರ ಜೀವನೋಪಾಯವನ್ನೊದಗಿಸುವ ವ್ಯಾಪಾರದ ಪ್ರಮುಖ ಕೇಂದ್ರವಾಗಿರುವುದರಿಂದಲೂ ದೇಶದ ಬೇರೆ ಬೇರೆ ಭಾಗಗಳಿಂದಲೂ ಇಂದಿಗೂ ಜನರನ್ನು ಆಕರ್ಷಿಸುತ್ತಿದೆ. ಇವೆಲ್ಲ ಕಾರಣಗಳಿಂದಾಗಿ ಬಂದಂಥ ಕನ್ನಡಿಗರು ಲಕ್ಷಗಟ್ಟಲೆ ಸಂಖ್ಯೆಯಲ್ಲಿರುವುದರಿಂದ ಈ ನಗರದಲ್ಲಿ ಅಪರಿಚಿತತೆಯ ಪ್ರಶ್ನೆ ಕಾಣುವುದಿಲ್ಲ. ಆದರೆ ಕನ್ನಡದ ಬದುಕು ಬೆಳೆದು ಬರುತ್ತಿರುವ ಬಗೆ ಮಾತ್ರ ವಿಸ್ಮಯಕಾರಿಯಾದದ್ದು. ಈ ಮೊದಲೇ ಹೇಳಿದಂತೆ ಕರಾವಳಿಯ ಸಾರಿಗೆ ಸಂಪರ್ಕ ವಲಸೆ ಹೋಗಲು ಒತ್ತಾಯಿಸುವ ಒಂದು ಪ್ರಮುಖ ಸಾಧನ. ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆ ಹಿಂದೆ ಮದರಾಸು ಪ್ರಾಂತದಲ್ಲಿದ್ದಾಗ, ಕರಾವಳಿಯ ಕಡಮೆ ಖರ್ಚಿನ ಸಾರಿಗೆ ಸಂಪರ್ಕವನ್ನಾಶ್ರಯಿಸಿ ಮುಂಬಯಿಯಲ್ಲಿ ಸುಲಭವಾಗಿ ದೊರಕಬಹುದಾಗಿದ್ದ ಆಫೀಸುಗಳ ಕೆಳದರ್ಜೆಯ ನೌಕರ (ಪೇದೆ ಇತ್ಯಾದಿ), ಹಾಗೂ ಹೋಟೆಲು ಕೆಲಸಗಾರರ ದುಡಿಮೆಗೆಂದು ಬರುತ್ತಿದ್ದವರು ಕನ್ನಡ ಕರಾವಳಿಯ ಮೊಗವೀರರು, ಬಿಲ್ಲವರು ಮೊದಲಾದವರು. ಇವರ ಮಾತೃಭಾಷೆ ತುಳು, ಸಂಪರ್ಕ ಭಾಷೆ ಕನ್ನಡ. ಈಗ ಕನ್ನಡಿಗರಿಗೆ ಹೊರನಾಡಾಗಿರುವ ಮುಂಬಯಿ ಮಹಾನಗರದಲ್ಲಿ ಕನ್ನಡ ಬದುಕಿ ಉಳಿಯಲು ಕಾರಣರಾದವರು ಇಂಥವರು. ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಿಂದ ತಾಯ್ನುಡಿ ಕನ್ನಡವೇ ಆಗಿರುವ ಸಾವಿರಾರು ಕುಟುಂಬಗಳೂ ಮುಂಬಯಿಗೆ ಬಂದು ನೆಲಸಿವೆ. ಇಲ್ಲಿನ ಕನ್ನಡಿಗರ ಸಾಂಸ್ಕೃತಿಕ ಬದುಕಿಗೆ ತಮ್ಮ ಪಾಲಿನ ಕೊಡುಗೆಯನ್ನೂ ಸಲ್ಲಿಸಿವೆ. ಆದರೆ ಇಂಥ ನೂರಾರು ಕುಟುಂಬಗಳು ಇಲ್ಲಿನ ಪರಿಸರ ಭಾಷೆಗಳಿಗೆ ಹೊಂದಿಕೊಂಡು ತಮ್ಮ ಮುಂದಿನ ಪೀಳಿಗೆಗಳಿಗೆ ಕನ್ನಡೇತರ ಭಾಷೆಗಳನ್ನೇ ಬಳುವಳಿಯಾಗಿ ಕೊಟ್ಟು ತಾವೂ ಕನ್ನಡವನ್ನು ಮರೆತ ಉದಾಹರಣೆಗಳೂ ಇವೆ. ಕನ್ನಡ ಮಾತೃಭಾಷೆಯಾಗಿರದ ತುಳುವ ಕನ್ನಡಿಗರು ಮಾತ್ರ, ಮುಂಬಯಿಯಲ್ಲಿ ದೊರಕುವ ಕನ್ನಡ ಶಿಕ್ಷಣ ಸೌಲಭ್ಯವನ್ನು ಚೆನ್ನಾಗಿಯೇ ಉಪಯೋಗಿಸಿಕೊಂಡವರು. ದೇಶಕ್ಕೆ ಮಾದರಿಯೆನಿಸುವ ರಾತ್ರಿ ಶಾಲೆಗಳನ್ನು ಕಟ್ಟಿಕೊಂಡು ಕನ್ನಡದ ಮೂಲಕ ಶಿಕ್ಷಣವನ್ನು ಮುಂದುವರಿಸಿದರು. ಆಫೀಸುಗಳಲ್ಲಿ ಪೇದೆಗಳಾಗಿಯೋ, ಕ್ಯಾಂಟೀನು, ಹೋಟೆಲುಗಳಲ್ಲಿ ಕೆಲಸಗಾರರಾಗಿಯೋ ದುಡಿಯುತ್ತಲೇ ಶಾಲಾಂತ ಪರೀಕ್ಷೆ ಮುಗಿಸಿ, ಹಿಂದೆ ಮುಂಬಯಿಯಲ್ಲಿ ಮಾತ್ರ ಲಭ್ಯವಿದ್ದ ಬೆಳಗಿನ ಪೂರ್ವಾರ್ಧದಲ್ಲಿ ನಡೆಯುವ ಕಾಲೇಜುಗಳಲ್ಲಿ ಶಿಕ್ಷಣ ಮುಗಿಸಿ ಪದವೀಧರರಾಗಿ, ಕೆಲವರಂತೂ ಅನನ್ಯ ಪ್ರತಿಭೆಯಿಂದ ದೇಶದ ಗಣ್ಯ ನಾಗರಿಕರಾಗಿ ಮೆರೆಯುತ್ತಿರುವ ನಿದರ್ಶನಗಳಿವೆ. ಮುಂಬಯಿಯಲ್ಲಿ ಹೀಗೆ ಸ್ಥಾಪಿಸಲಾದ ೧೩ ರಾತ್ರಿ ಶಾಲೆಗಳು, ಮುಂದೆ ನಗರದ ಹದಿನೆಂಟು ಕಾಲೇಜುಗಳಲ್ಲಿ ಕನ್ನಡ ಭಾಷಾಭ್ಯಾಸಕ್ಕೆ ಸ್ಥಾನ ಒದಗಿಸಿಕೊಡಲು ನೆರವಾದುದನ್ನು ನೆನೆಸಿಕೊಳ್ಳುವಾಗ, ಈ ರಾತ್ರಿ ಶಾಲೆಗಳ ಮಹತ್ವ ಸ್ಪಷ್ಟವಾಗುತ್ತದೆ. ಈ ರಾತ್ರಿ ಶಾಲೆಗಳನ್ನು ಕಟ್ಟಿದ ಹಿರಿಯರ ದೂರದರ್ಶಿತ್ವ ಹಾಗೂ ಕನ್ನಡಾಭಿಮಾನಗಳನ್ನು ಮುಂಬಯಿಯ ಎಲ್ಲ ಕನ್ನಡಿಗರು ಕೃತಜ್ಞತೆಯಿಂದ ನೆನೆಯುತ್ತಾರೆ. ಹಾಗೆಯೇ ಇಂದು ಮುಂಬಯಿ ಮಹಾನಗರ ಪಾಲಿಕೆಯ ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡಕ್ಕೆ ಒಂದು ಪ್ರಮುಖ ಸ್ಥಾನವಿದೆ. ಹದಿನೈದು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ನಗರ ಪಾಲಿಕೆಯ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡದ ಮೂಲಕ ಶಿಕ್ಷಣ ಪಡೆಯುತ್ತಿದ್ದಾರೆ. ನಗರ ಪಾಲಿಕೆ ಕನ್ನಡದ ಕೆಲವು ಮಾಧ್ಯಮಿಕ ಶಾಲೆಗಳನ್ನು ನಡೆಸುತ್ತಿದೆ. ಹಿಂದೆ ನಗರದ ಬೇರೆ ಬೇರೆ ವಿಭಾಗಗಳಲ್ಲಿ ಕನ್ನಡ ಮಕ್ಕಳನ್ನು ಕಲೆಹಾಕಿ, ಪ್ರಾಥಮಿಕ ಶಾಲೆಗಳನ್ನು ಕಟ್ಟಿ ನಗರ ಪಾಲಿಕೆಗೆ ಒಪ್ಪಿಸಲು ದುಡಿದ ಹಲವಾರು ಹಿರಿಯರ ಪ್ರಯತ್ನಗಳಿಂದಾಗಿಯೇ ಇಂದಿನ ವ್ಯವಸ್ಥೆ ರೂಪುಗೊಂಡಿದೆ. ನಗರದ ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡದ ಸ್ಥಾನ ಹೀಗೆ ಬಲಗೊಳ್ಳುತ್ತಿದ್ದಂತೆಯೇ ಕನ್ನಡ ಶಿಕ್ಷಣದ ಆದರ್ಶವನ್ನು ಮುಂದುವರಿಸಿಕೊಂಡು ಕೆಲವು ಪ್ರೌಢ ಶಾಲೆಗಳು ಹುಟ್ಟಿಕೊಂಡು ಕನ್ನಡ ಶಿಕ್ಷಣದ ಕಾರ್ಯ

ವನ್ನು ಮುಂದುವರಿಸಿವೆ. ಇಂಥ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದವರೆಲ್ಲ ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದು, ಕನ್ನಡದ ಸೇವೆ ಮಾಡಿದ ಹಿರಿಯರು.

ಇದು ಮುಂಬಯಿ ನಗರಕ್ಕೆ ಅನ್ವಯಿಸುವ ಮಾತು. ಹೈದರಾಬಾದು ಕರ್ನಾಟಕದ ಮೂರು ಜಿಲ್ಲೆಗಳ ರಾಜಧಾನಿಯಾಗಿದ್ದ ಹೈದರಾಬಾದು ಈಗ ಕನ್ನಡಿಗರಿಗೆ ಹೊರನಾಡ ನಗರ. ತಮಿಳುನಾಡಿನ ರಾಜಧಾನಿ ಮದರಾಸು ಕೂಡಾ ಹಾಗೆಯೇ. ಇಂಥ ನಗರಗಳಲ್ಲಿ ಕನ್ನಡ ಉಳಿದಿರಲು ಇತಿಹಾಸ ಕಾರಣವಾದರೆ, ಬದುಕಿರಲು ಕಾರಣ ಅಲ್ಲಿನ ಕನ್ನಡಿಗರ ಸಂಘಟಿತ ಪ್ರಯತ್ನ. ಕರ್ನಾಟಕ ರಾಜ್ಯ ಅಸ್ತಿತ್ವದಲ್ಲಿ ಬಂದ ಮೇಲೆ ಇಂಥ ನಗರಗಳಲ್ಲಿ ಕನ್ನಡ ಭಾಷೆಯ ವರ್ಚಸ್ಸನ್ನು ಉಳಿಸಿಕೊಳ್ಳುವುದು ಪ್ರಯಾಸದ ಕೆಲಸವಾಗುತ್ತಿದೆ. ಭಾಷಾವಾರು ಪ್ರಾಂತಗಳಲ್ಲಿ ಕನ್ನಡ ಅಲ್ಪ ಸಂಖ್ಯಾಕರ ಭಾಷೆಯಾಗಿ ಇತರ ಅಲ್ಪ ಸಂಖ್ಯಾಕರ ಭಾಷೆಗಳೊಂದಿಗೆ ಸಮಾನಸ್ತರದಲ್ಲಿ ನಿಲ್ಲುವಾಗ, ಕನ್ನಡದ ಕೆಲಸ ಹಲವಾರು ವ್ಯಾವಹಾರಿಕ ತೊಡಕುಗಳನ್ನು ಇದಿರಿಸಬೇಕಾಗುವುದು ಸಹಜವೇ. ಈ ತೊಡಕುಗಳನ್ನು ಇದಿರಿಸಿಯೂ ಕನ್ನಡಕ್ಕಾಗಿ ದುಡಿಯುವವರು ಇಂದಿಗೂ ಕಾಣಸಿಗುತ್ತಾರೆ. ಇವರೆಲ್ಲ ಕನ್ನಡೇತರ ಕ್ಷೇತ್ರಗಲ್ಲಿದ್ದು ಕನ್ನಡಕ್ಕಾಗಿ ದುಡಿಯುತ್ತಿರುವವರು.

ತಾಯ್ನುಡಿಯ ಮೂಲಕ ಶಿಕ್ಷಣ ಐತಿಹಾಸಿಕ ಕಾರಣಗಳಿಂದಾಗಿ ದೊರಕುತ್ತಿರುವ, ಕನ್ನಡಕ್ಕೆ ಹೊರನಾಡ ನಗರಗಳಾದ ಮುಂಬಯಿ, ಪುಣೆ, ಸೊಲ್ಲಾಪುರ, ಮದರಾಸು, ಹೈದರಾಬಾದು, ಕಾಸರಗೋಡು ಇತ್ಯಾದಿ ಹಾಗೂ ರಾಷ್ಟ್ರದ ರಾಜಧಾನಿಯಾದ ದೆಹಲಿಯನ್ನು ಬಿಟ್ಟರೆ, ಉದ್ಯೋಗಕ್ಕಾಗಿ ಭಾರತದ ಹಲವಾರು ಇತರ ಶಹರಗಳಲ್ಲಿ, ನಗರಗಳಲ್ಲಿ ನೆಲೆಸಿರುವ ಕನ್ನಡಿಗರಿಗೆ, ಕನ್ನಡದ ಸಂಬಂಧವನ್ನು ಉಳಿಸಲು, ಕನ್ನಡದ ನೆಲದ ಸಂಸ್ಕೃತಿಯ ನೆನಪನ್ನು ತರಲು ಕಾರಣವಾಗಿರುವ ನೂರಾರು ಕರ್ನಾಟಕ ಕನ್ನಡ ಸಂಘಗಳನ್ನು ಸ್ಥಾಪಿಸಲು ಕಾರಣರಾದವರಲ್ಲಿ ಬಹುಮಂದಿ ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದು ಕನ್ನಡದ ಶಾಲೆ ನಡೆಸುತ್ತಿರುವವರು. ನಮಗೆ ಸ್ವಾತಂತ್ರ್ಯ ದೊರಕಿ ಕೆಲವು ವರ್ಷಗಳಾಗುವ ತನಕ ಕರ್ನಾಟಕ ರಾಜಕೀಯ ಘಟಕವಾಗಿ ಅಸ್ತಿತ್ವದಲ್ಲಿ ಇರಲಿಲ್ಲ. ಆಗ ದೇಶೀಯ ಭಾಷೆಗಳ ಬೆಳವಣಿಗೆಗೆ ಅನುಕೂಲ ವಾತಾವರಣವೂ ಇದ್ದಿಲ್ಲ. ಇಂಥ ಸಂದರ್ಭದಲ್ಲಿ ಎಲ್ಲ ಕನ್ನಡಿಗರ ಬಾಂಧವ್ಯವನ್ನು ಬೆಸೆಯಲು ಕಾರಣವಾದದ್ದು ಕನ್ನಡ ಸಾಹಿತ್ಯ. ಸಾಹಿತ್ಯದ ಮೂಲಕ ಕರ್ನಾಟಕತ್ವದ ಕಲ್ಪನೆ, ನಮ್ಮ ಸಾಂಸ್ಕೃತಿಕ ಪರಂಪರೆಯ ಕುರಿತು ತಿಳಿವಳಿಕೆ ಇವೆಲ್ಲ ಬೆಳೆದು ಬಂದಿದೆ. ನಾಡಿನ ಬೇರೆ ಬೇರೆ ಭಾಗಗಳಲ್ಲಿ ಹುಟ್ಟಿಕೊಂಡ ಕರ್ನಾಟಕ ಸಂಘಗಳಿಂದಾಗಿ, ರಾಷ್ಟ್ರೀಯ ಜಾಗೃತಿಯ ಕಾಲದಲ್ಲಿ ಸ್ವಾಭಾವಿಕವಾಗಿಯೇ ಕುದುರಿದ ಭಾಷಾಭಿಮಾನ, ಕನ್ನಡ ಸಾಹಿತ್ಯದ ನವೋದಯ ಕಾಲದ ಹಿರಿಯ ಲೇಖಕರ ಸಾಹಿತ್ಯ ಕೃತಿಗಳು, ಸಾಹಿತ್ಯ ಪರಿಷತ್ತಿನಂಥ ಸಂಸ್ಥೆಯು ಹುಟ್ಟಿ, ನಾಡಹಬ್ಬದ ಆಚರಣೆ ಇವೆಲ್ಲ ಕನ್ನಡವನ್ನು ಬದುಕಿಗೆ ಹತ್ತಿರ ತರುವ ಸಾಧನಗಳಾಗಿ, ಹೊರನಾಡ ಕನ್ನಡಿಗರ ಬಾಂಧವ್ಯವನ್ನು ಬೆಸೆಯಲು ಮುಖ್ಯ ಕಾರಣಗಳಾಗಿವೆ.

'ಕನ್ನಡೇತರ ಕ್ಷೇತ್ರಗಳಲ್ಲಿ ಕನ್ನಡಿಗರು' ಎನ್ನುವ ಈ ಪ್ರಬಂಧದ ವ್ಯಾಪ್ತಿ ಹೊರನಾಡಲ್ಲಿ ನೆಲೆಸಿದ್ದು, ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದು, ಕನ್ನಡದ ಬಾಂಧವ್ಯವನ್ನು ಬಲಗೊಳಿಸಲು ಶ್ರಮಿಸುತ್ತಿರುವ, ದೇಶವಿದೇಶಗಳಲ್ಲಿರುವ ಕನ್ನಡಿಗರ ಚಟುವಟಿಕೆಗಳ ಪರಿಚಯಕ್ಕಷ್ಟೇ ಸೀಮಿತವಾಗಿದೆ. ಸಮಸ್ತ ಹೊರನಾಡ ಕನ್ನಡಿಗರನ್ನು ಪ್ರತಿನಿಧಿಸುವ ಯಾವ ಪ್ರಬಲ ಸಂಘಟನೆಯೂ ಸದ್ಯ ಇಲ್ಲದಿರುವುದರಿಂದಲೂ ಹೊರನಾಡಲ್ಲಿರುವ ಕನ್ನಡಿಗರಿಗಾಗಲೀ ಸಂಘಸಂಸ್ಥೆಗಳಿಗಾಗಲೀ ಪರಸ್ಪರ ಸಂಪರ್ಕಕ್ಕೆ, ವಿಚಾರ ವಿನಿಮಯಕ್ಕೆ ಅವಕಾಶ ಮಾಡಿಕೊಡುವ ಸೂಕ್ತ ವೇದಿಕೆಯ ಕೊರತೆಯಿಂದಾಗಿಯೂ ಈ ದೆಸೆಯಲ್ಲಿ ಗಮನಾರ್ಹವೆನಿಸಬಹುದಾದ ಎಲ್ಲ ಚಟುವಟಿಕೆಗಳ ವಿವರ ಸಂಗ್ರಹಿಸುವುದು ಕಷ್ಟದ ಕೆಲಸ. ಇಂಥ ಚಟುವಟಿಕೆಗಳಲ್ಲಿ ಆಸಕ್ತರಾಗಿರುವ ಹೆಚ್ಚಿನವರು ಭಾರತದ ಪ್ರಧಾನ ನಗರಗಳಲ್ಲಿರುವವರು. ಆದರೆ ತಾಯ್ನುಡಿಯ ಪ್ರೀತಿಯಿಂದ, ಯಾವ ಪ್ರಚಾರ ಆಡಂಬರಗಳನ್ನೂ ಬಯಸದೆ ಕನ್ನಡೇತರ ಕ್ಷೇತ್ರಗಳಲ್ಲಿದ್ದು ಕನ್ನಡದ ಕೆಲಸ ಮಾಡುತ್ತಿರುವವರು ಭಾರತದ ಮೂಲೆ ಮೂಲೆಗಳಲ್ಲೂ ವಿದೇಶಗಳಲ್ಲೂ ಕಾಣಸಿಗುತ್ತಾರೆ. ಮೇಲೆ ವಿವರಿಸಿದ ಕಾರಣಗಳಿಂದಾಗಿಯೂ ಮುಂಬಯಿಯಲ್ಲಿದ್ದು ದೇಶವಿದೇಶಗಳಲ್ಲಿ ನೆಲೆಸಿರುವ ಕನ್ನಡಿಗರೆಲ್ಲರ ಚಟುವಟಿಕೆಗಳ ವಿವರ ಸಂಗ್ರಹಿಸುವ ತೊಡಕುಗಳಿಂದಾಗಿಯೂ ಈ ಲೇಖನದ ಎರಡನೆಯ ಭಾಗದಲ್ಲಿ ಸೂಚಿಸಿರುವ ಮಾಹಿತಿ ಕೆಲಮಟ್ಟಿಗೆ ಪ್ರಾತಿನಿಧಿಕವೆನಿಸೀತಷ್ಟೇ ಹೊರತು ಸಮಗ್ರವೆನಿಸದು ಎನ್ನುವ ಸಂದೇಹ ಈ ಲೇಖಕನಿಗಿದೆ. ಈ ಮಿತಿಯನ್ನು ಗಮನಿಸಿಯೂ ಹೊರನಾಡಲ್ಲಿದ್ದು ಕನ್ನಡದ ಕೆಲಸ ಮಾಡಿರುವ, ಮಾಡುತ್ತಿರುವ ಕೆಲವರ ಪರಿಚಯವಾದರೂ ಆದರೆ ಈ ಲೇಖನ ಸಾರ್ಥಕವೆನಿಸುವುದು.

ಹೊರನಾಡಲ್ಲಿ, ನೇರವಾದ ಕನ್ನಡ ಶಿಕ್ಷಣಕ್ಕೆ ಸಂಬಂಧಿಸಿದ ಕ್ಷೇತ್ರವೊಂದನ್ನುಳಿದು ಕನ್ನಡದ ಕೆಲಸ ಮಾಡುತ್ತಿರುವವರೆಲ್ಲ ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿರುವವರೆ. ಪರಭಾಷಾವಲಯದಲ್ಲಿ ಕನ್ನಡಿಗರನ್ನು ಗುರುತಿಸಿ, ಸಾಂಘಿಕವಾಗಿ, ಸಾಮೂಹಿಕವಾಗಿ, ಕನ್ನಡದ ನೆನಪು ಮರೆಯದಂತೆ ಕನ್ನಡದ ವಾತಾವರಣವನ್ನು ಸೃಷ್ಟಿಸಿಕೊಳ್ಳಬೇಕು ಎಂದು ಬಯಸಿ ಈ ಉದ್ದೇಶ ಸಾಧನೆಗಾಗಿ ದುಡಿಯುತ್ತಿರುವವರು ನಮ್ಮ ದೇಶದ ಮೂಲೆ ಮೂಲೆಗಳಲ್ಲೂ, ವಿದೇಶಗಳಲ್ಲೂ ಇದ್ದಾರೆ. ಅಮೇರಿಕೆಯ ಆ್ಯನ್ಆರ್ಬರ್, ಮೇರಿಲ್ಯಾಂಡ್, ವಾಷಿಂಗ್ಟನ್, ಡೆಲವೇರ್, ಉತ್ತರ ಮತ್ತು ದಕ್ಷಿಣ ಕೆಲಿಪೋರ್ನಿಯಾ, ಷಿಕಾಗೋ, ಅಟ್ಲಾಂಟಾ, ಜಾರ್ಜಿಯಾ, ಮ್ಯಾಸಚುಸೆಟ್ಸ್, ಕನೆಕ್ಟಿಕಟ್, ರ್‍ಹೋಡ್ ಐಲೆಂಡ್, ಇಲಿನಾಯ್ಸ್, ಫಿಲಿಡೆಲ್ಫಿಯಾ ಕಡೆಗಳಲ್ಲಿ ಕನ್ನಡ ಸಂಘಗಳು ಕೆಲಸ ಮಾಡುತ್ತಿರುವುದು ವಿದೇಶಗಳಲ್ಲಿರುವ ಕನ್ನಡಿಗರು ತಾಯ್ನುಡಿಯ, ತಾಯ್ನೆಲದ ಸಂಸ್ಕೃತಿಯ ನೆನಪು ಮಾಡಿಕೊಳ್ಳುತ್ತಿರುವುದರ ತಿಳಿವಳಿಕೆ ತಂದು ಕೊಡುತ್ತಿದೆ. ಈ ಚಟುವಟಿಕೆಗಳನ್ನು ನಡೆಸುತ್ತಿರುವವರೆಲ್ಲ ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿರುವವರು; ಜ್ಞಾನ, ವಿಜ್ಞಾನಗಳ ಬೇರೆ ಬೇರೆ ಶಾಖೆಗಳಲ್ಲಿ ಗಮನಾರ್ಹ ಪರಿಣತಿಯನ್ನು ಸಾಧಿಸಿದಂಥವರು; ತೀರ ಪರಕೀಯವೆನಿಸುವ ಸಾಂಸ್ಕೃತಿಕ ಆವರಣದಲ್ಲಿ ಕನ್ನಡದ ನೆನಪನ್ನು ಉಳಿಸಿಕೊಳ್ಳಬೇಕು ಎಂದು ಅಪೇಕ್ಷಿಸಿ ಶ್ರಮಿಸುತ್ತಿರುವವರು.

ಭಾರತದ ಹಲವಾರು ಪ್ರಾಂತಗಳಲ್ಲೂ, ಕನ್ನಡಿಗರು ಹೆಚ್ಚಿನ ಸಂಖ್ಯೆಯಲ್ಲಿ, ನೆಲೆಸಿರುವ ಭಾರತದ ಪ್ರಮುಖ

ಔದ್ಯಮಿಕ ಕೇಂದ್ರಗಳಲ್ಲಿ, ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಕನ್ನಡಿಗರು ಕನ್ನಡದ ರಾಯಭಾರಿಗಳಾಗಿ ಕೆಲಸ ಮಾಡುತ್ತಿದ್ದಾರೆ. ಹೀಗೆ ದುಡಿಯುತ್ತಿರುವ ಚಟುವಟಿಕೆಗಳಲ್ಲಿ ಮುಖ್ಯವಾದವು:

೧) ಕರ್ನಾಟಕ – ಕನ್ನಡ ಸಂಘಗಳನ್ನು ಸ್ಥಾಪಿಸಿ ಕನ್ನಡ ಗ್ರಂಥಾಲಯವನ್ನು ನಡೆಸಿಕೊಂಡು ಬಂದು, ವಾರ್ಷಿಕ ದಿನಾಚರಣೆ, ನಾಡ ಹಬ್ಬದ ಆಚರಣೆ ಮುಂತಾದ ಸಾಮೂಹಿಕವಾಗಿ ಕನ್ನಡಿಗರ ಕುಟುಂಬಗಳಿಗೆ ತಾಯ್ನಾಡಿನ ನೆನಪು ಮಾಡಿಕೊಡುವ ಸಮಾರಂಭಗಳನ್ನು ಏರ್ಪಡಿಸುವುದು.

೨) ಸಾಧ್ಯವಿರುವಲ್ಲೆಲ್ಲ ಕನ್ನಡ ಶಿಕ್ಷಣಕ್ಕೆ ಅನುಕೂಲ ಮಾಡಿಕೊಡುವ ಶಾಲೆಗಳನ್ನು ಸ್ಥಾಪಿಸಿ ನಡೆಸುವುದು.

೩) ಕನ್ನಡ ನಾಟಕ ಪ್ರದರ್ಶನಗಳನ್ನೇರ್ಪಡಿಸುವುದು.

೪) ಕನ್ನಡ ಸಾಹಿತಿಗಳನ್ನು ಕಲಾವಿದರನ್ನು ಕರೆಸಿ, ಸಾಹಿತ್ಯ ಸಂಸ್ಕೃತಿಗಳಿಗೆ ಸಂಬಂಧಿಸಿದ ಉಪನ್ಯಾಸಗಳನ್ನೋ ಚರ್ಚಾಗೋಷ್ಠಿಗಳನ್ನೋ ಏರ್ಪಡಿಸುವುದು.

೫) "ಯಕ್ಷಗಾನ"ದಂಥ ಜಾನಪದ ನೃತ್ಯ, ಕಲೆಗಳಿಗೆ ಪ್ರೋತ್ಸಾಹ ಕೊಡುವ ಕಾರ್ಯಕ್ರಮಗಳನ್ನೇರ್ಪಡಿಸುವುದು.

ಕನ್ನಡಿಗರು ನೆಲೆಸಿದ್ದು ಕನ್ನಡದ ಸಂಪರ್ಕ ಹಿಂದಿನಿಂದಲೂ ಇದ್ದ ಹೈದರಾಬಾದ್ ಸಂಸ್ಥಾನದ ನಗರ ಪಟ್ಟಣಗಳಲ್ಲಿ, ಮದರಾಸು, ಮುಂಬಯಿಗಳಲ್ಲಿ ಕನ್ನಡ ಸಂಘಗಳು ಹುಟ್ಟಿಕೊಳ್ಳುವುದು ಆಶ್ಚರ್ಯದ ಮಾತೇನಲ್ಲ. ಆದರೆ ಕನ್ನಡಕ್ಕೆ ತೀರ ಅಪರಿಚಿತ ಪ್ರದೇಶಗಳೆನಿಸಬಹುದಾದ ಮಧ್ಯ ಪ್ರದೇಶದ ಭೋಪಾಲ, ಜಬಲಪುರ, ಇಂದೋರ್, ಗುಜರಾತದ ಅಹಮ್ಮದಾಬಾದ್, ಬರೋಡಾ, ಸೂರತ್, ಮಹಾರಾಷ್ಟ್ರದ ಪುಣೆ, ನಾಸಿಕ, ಅಂಕೋಲಾ, ಬಿಹಾರದ ಧನ್‌ಬಾದ್, ಪಟ್ನಾ, ಅಂಡಮಾನ್ ನಿಕೋಬಾರ್ ದ್ವೀಪಗಳು ಮುಂತಾದೆಡೆ ಕನ್ನಡ ಸಂಘಗಳು ಕೆಲಸ ಮಾಡುತ್ತಿರುವುದು ಅಲ್ಲೆಲ್ಲ ಉದ್ಯೋಗಾರ್ಥ ನೆಲೆಸಿರುವ ಕನ್ನಡಿಗರ ಕನ್ನಡ ಪ್ರೀತಿಯನ್ನು ಪ್ರದರ್ಶಿಸುತ್ತದೆ. ಇವರಲ್ಲಿ ಇಂಜಿನಿಯರುಗಳು, ಡಾಕ್ಟರ್‌ಗಳು, ಬ್ಯಾಂಕಿಂಗ್ ಉದ್ಯಮಗಳಲ್ಲಿರುವವರು ಹೀಗೆ ಜೀವನದ ಹಲವು ಕ್ಷೇತ್ರಗಳಲ್ಲಿ ಕೆಲಸ ಮಾಡುವವರಿದ್ದಾರೆ. ಹೆಸರು ಹೇಳಿ ಇವರೆಲ್ಲರ ಪರಿಚಯ ಮಾಡಿಕೊಡುವ ಸಾಹಸ ಅಪೂರ್ಣವೂ ಅಸಮರ್ಪಕವೂ ಆಗಬಹುದು. ಅದಕ್ಕೆ ಮುಖ್ಯ ಕಾರಣ ಇಂಥ ಕನ್ನಡ ಸಂಘಗಳನ್ನೆಲ್ಲ, ಒಂದೇ ಸಂಘಟನೆಯಡಿ, ಒಂದೇ ವೇದಿಕೆಯಲ್ಲಿ ತರುವ ಪಯತ್ನ ಫಲಕಾರಿಯಾಗದೆ ಇರುವುದು.

ಆದರೆ ಹೊರನಾಡ ಕನ್ನಡಿಗರು–ಕನ್ನಡೇತರ ಕ್ಷೇತ್ರಗಳಲ್ಲಿದ್ದು ಕನ್ನಡಕ್ಕಾಗಿ ದುಡಿಯುತ್ತಿರುವವರು–ಸಂಘಟಿತರಾಗಬೇಕೆಂಬ ಪ್ರಯತ್ನ ಬಹಳ ಹಿಂದೆಯೇ ನಡೆದಿತ್ತು. ಸ್ವಾತಂತ್ರ್ಯ ಪೂರ್ವದಲ್ಲೇ ೧೯೪೨ರಲ್ಲಿ ದಿ. ಬಿ. ಎಂ. ಶ್ರೀಯವರ ನೇತೃತ್ವದಲ್ಲಿ ಹೊರನಾಡ ಕನ್ನಡಿಗರ ಪ್ರಥಮ ಸಮ್ಮೇಳನ ಪುಣೆಯಲ್ಲಿ ಜರಗಿತ್ತು. ೧೯೭೦ರ ತನಕ ಇಂಥ ಹಲವಾರು ಸಮ್ಮೇಳನಗಳು ಭಾರತದ ಬೇರೆ ಬೇರೆ ಕಡೆ ನಡೆದಿವೆ. ಹೊರನಾಡ ಕನ್ನಡಿಗರ ಸಂಘದ ಮುಖಪತ್ರವಾಗಿ "ಕನ್ನಡ ಗುಡಿ" ಎಂಬ ತ್ರೈಮಾಸಿಕವು ಸುಮಾರು ೧೨ ವರ್ಷಕಾಲ ಪ್ರಕಟವಾಗುತ್ತಿತ್ತು. ಈ ಸಂಘಟನೆಯ ಸಾಹಸದ ಹಿಂದಿದ್ದ ಕನ್ನಡಿಗರು ಸ್ಮರಿಸಲೇಬೇಕಾದ ಹೆಸರು ದೆಹಲಿಯಲ್ಲಿ ದೀರ್ಘಕಾಲ ನೆಲೆಸಿದ್ದ ಶ್ರೀ ಎಚ್. ಎಸ್. ಪಾಟೀಲ ಅವರದು, ಹಾಗೆಯೇ ಮುಂಬಯಿಯ ಮಫತ್‌ಲಾಲ್ ಸಂಸ್ಥೆಯಲ್ಲಿ ಉನ್ನತಾಧಿಕಾರಿಯಾಗಿರುವ ಶ್ರೀ ವರದರಾಜ ಆದ್ಯ ಅವರದು.

ಹೊರನಾಡಲ್ಲಿ ಕನ್ನಡೇತರ ಕ್ಷೇತ್ರದಲ್ಲಿ ದುಡಿಯುತ್ತಿದ್ದು, ಕನ್ನಡದ ಹಾಗೂ ಕರ್ನಾಟಕದ ಏಳಿಗೆಯನ್ನು ತನ್ನ ಕೊನೆಯುಸಿರತನಕವೂ ಬಯಸಿ, ಇತ್ತೀಚೆಗೆ ನಿಧನರಾದ ಕೃಷ್ಣಕುಮಾರ ಕಲ್ಲೂರ ಅವರು ಕನ್ನಡಿಗರು ಚಿರಕಾಲ ನೆನಪಿಡಬೇಕಾದಂಥ ಹಿರಿಯರು. ಬೇಂದ್ರೆಯವರ ಸಮಕಾಲೀನರಾಗಿ, ಧಾರವಾಡದ ಗೆಳೆಯರ ಗುಂಪಿನ ಸದಸ್ಯರಾಗಿ, ಶಾಂತಿನಿಕೇತನದಲ್ಲಿ ವ್ಯಾಸಂಗ ನಡೆಸಿ ಹಿರಿಯ ಕತೆಗಾರ–ನಾಟಕಕಾರರೆಂದು ಖ್ಯಾತಿ ಪಡೆದ ಕೃಷ್ಣಕುಮಾರರು ಮುಂಬಯಿಯಲ್ಲಿ ನೆಲೆಸಿದ್ದು, ಕನ್ನಡ ಕರ್ನಾಟಕಗಳಿಗಾಗಿ ಮಾಡಿದ ಸೇವೆ ಅಷ್ಟಿಷ್ಟಲ್ಲ. ಕರ್ನಾಟಕ ಏಕೀಕರಣ, ರಾಜ್ಯ ನಿರ್ಮಾಣ, ಅದರ ಯೋಜನಾಬದ್ಧ ಬೆಳವಣಿಗೆ, ಜಿಲ್ಲೆಗಳ ಪುನರ್ವಿಂಗಡಣೆ, ಕರಾವಳಿಯ ಬಂದರುಗಳ ಆಯ್ಕೆ ಹಾಗೂ ಬೆಳವಣಿಗೆ, ಗಡಿ ಪ್ರದೇಶಗಳ ಸಮಸ್ಯೆಗಳು ಇವೆಲ್ಲವುಗಳ ವಿಚಾರ ಆಳವಾಗಿ ಅಭ್ಯಾಸ ಮಾಡಿ ಲೇಖನಗಳನ್ನು ಗ್ರಂಥಗಳನ್ನು ಬರೆದು, ಹೊರನಾಡಲ್ಲಿ ನೆಲೆಸಿಯೂ ಕರ್ನಾಟಕದ ಸರ್ವತೋಮುಖ ಬೆಳವಣಿಗೆಗಾಗಿ ದುಡಿದವರು ಕಲ್ಲೂರರು. "ಭಾರತೀ" ಎಂಬ ವಿಶಿಷ್ಟವಾದ ಕಥಾಮಾಸಿಕವನ್ನು ಕೆಲವು ವರ್ಷಕಾಲ ನಡೆಸಿಕೊಂಡು ಬಂದ ಕೀರ್ತಿಯೂ ಇವರಿಗಿದೆ.

ಹೊರನಾಡಲ್ಲಿರುವ ಕನ್ನಡಿಗರ ಜನಸಂಖ್ಯಾ ಪ್ರಮಾಣದಿಂದಲೂ ದೇಶದ ಹಲವಾರು ಪ್ರಾಂತಗಳ, ಹಲವಾರು ಭಾಷೆಗಳ ಸಾಂಸ್ಕೃತಿಕ ಚಟುವಟಿಕೆಗಳ ಸಂಗಮಕ್ಷೇತ್ರವಾಗಿ ಮೆರೆಯುವ ಕಾರಣದಿಂದಲೂ ಮುಂಬಯಿ ಮಹಾನಗರ ಕನ್ನಡ ಚಟುವಟಿಕೆಗಳ ಒಂದು ಅತ್ಯಂತ ಪ್ರಮುಖ ನಗರ. ಕನ್ನಡ ಶಿಕ್ಷಣ, ಕನ್ನಡ ಸಾಹಿತ್ಯ, ಕನ್ನಡ ರಂಗಭೂಮಿ ಇವೆಲ್ಲವುಗಳಿಗೆ ಸಂಬಂಧಿಸಿದ ಚಟುವಟಿಕೆಗಳು ಇಲ್ಲಿ ದೀರ್ಘ ಕಾಲದಿಂದ ನಡೆಯುತ್ತಿವೆ. ಕನ್ನಡ ಶಿಕ್ಷಣ ಕ್ಷೇತ್ರದಲ್ಲಿ ಅನುಕರಣೀಯ ಯಶಸ್ಸನ್ನು ಸಾಧಿಸಿರುವ ರಾತ್ರಿಶಾಲೆಗಳ ವಿಚಾರ ಈ ಮೊದಲೇ ವಿವರಿಸಿಯಾಗಿದೆ. ಈ ರಾತ್ರಿಶಾಲೆಗಳ ಪರಂಪರೆ ಬೆಳೆಯಲು ಕಾರಣವಾದ, ೧೯೦೮ರಲ್ಲಿ ಸ್ಥಾಪಿಸಲ್ಪಟ್ಟ ಮುಂಬಯಿ ಮೊದಲಿನ ರಾತ್ರಿಶಾಲೆಯಾದ ಮೊಗವೀರ ವ್ಯವಸ್ಥಾಪಕ ಮಂಡಳಿಯ ರಾತ್ರಿಶಾಲೆ, ೧೯೧೮ರಲ್ಲೇ ಸ್ಥಾಪಿಸಲ್ಪಟ್ಟ ಎರಡನೆಯ ರಾತ್ರಿಶಾಲೆಯಾದ ಮುಂಬಯಿ ಫೋರ್ಟ್ ಧರ್ಮಾರ್ಥ ರಾತ್ರಿಶಾಲೆ, ಮುಂದೆ ಹುಟ್ಟಿಕೊಂಡ ಕರ್ನಾಟಕ ರಾತ್ರಿಶಾಲೆ, ಮದರ್ ಇಂಡಿಯಾ ರಾತ್ರಿಶಾಲೆ ಮುಂತಾದ ಹಲವಾರು ರಾತ್ರಿಶಾಲೆಗಳನ್ನು ಕಟ್ಟಿ ಬೆಳೆಸಿದ ಹಿರಿಯರೆಲ್ಲ ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದವರು. ಇಂಥ ಶಾಲೆಗಳಲ್ಲಿ ಯಾವ ಪ್ರತಿಫಲವನ್ನು ಬಯಸದೆ ಅಧ್ಯಾಪನ ವೃತ್ತಿ ನಡೆಸಿ ಕನ್ನಡದ ಸೇವೆ ಮಾಡಿದ ನೂರಾರು ಹಿರಿಯರು ಕೂಡಾ ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಂಥವರು. ಹೀಗೆ ದುಡಿದವರಲ್ಲಿ ನಮ್ಮ ನಾಡಿನ ಸುಪ್ರಸಿದ್ಧ ಪತ್ರಿಕೋದ್ಯಮಿ ಎಂ. ವಿ. ಕಾಮತ್ ಕೂಡ ಸೇರಿದ್ದಾರೆ.

ಮುಂಬಯಿಯಲ್ಲಿ ಕನ್ನಡದ ಶಿಕ್ಷಣಕ್ಕೆ ಸಾಕಷ್ಟು ಅವಕಾಶ ಅನುಕೂಲತೆಗಳು ದೊರಕಬೇಕೆಂದು ದುಡಿದವರೆಲ್ಲ ಹೊರನಾಡ ಕನ್ನಡಿಗರಿಗೆ ಮಾಡಿರುವ ಉಪಕಾರವನ್ನು ಸ್ಮರಿಸಲು ಒಂದು ಲೇಖನ ಸಾಲದು. ಹಗಲಲ್ಲಿ ದುಡಿದು, ಕಲಿಯಬಯಸುವ ಬಡ ಕನ್ನಡ ಮಕ್ಕಳಿಗಷ್ಟೇ ರಾತ್ರಿಶಾಲೆಗಳಿದ್ದರೆ ಸಾಲದು, ಎಲ್ಲ ಕನ್ನಡ ಮಕ್ಕಳಿಗೂ ಕನ್ನಡ ಶಿಕ್ಷಣಾನುಕೂಲತೆಗಳು ಬೇಕು ಎಂದು ಹಲವಾರು ಶಿಕ್ಷಣ ಸಂಸ್ಥೆಗಳನ್ನೇ ಸ್ಥಾಪಿಸಲು ಮುಂದಾದವರೆಲ್ಲ ಕನ್ನಡೇತರ ಕ್ಷೇತ್ರಗಳಲ್ಲಿದ್ದು ಕನ್ನಡದ ಕೆಲಸ ಮಾಡಿದವರು. ಇಂಥ ಪ್ರಯತ್ನಗಳಿಂದಾಗಿಯೇ ಇಂದು ಮುಂಬಯಿಯಲ್ಲಿ ಹಲವಾರು ಪ್ರೌಢ ಶಿಕ್ಷಣ ಸಂಸ್ಥೆಗಳು ಕೆಲಸಮಾಡುತ್ತಿವೆ. ಇವುಗಳಲ್ಲಿ ಮೊದಲನೆಯದು ರಾಷ್ಟ್ರೀಯ ಕನ್ನಡ ಶಿಕ್ಷಣ ಸಮಿತಿಯ ಪ್ರೌಢ ಶಾಲೆ. ಮುಂದೆ ಹುಟ್ಟಿಕೊಂಡ ಸಂಸ್ಥೆಗಳಿಗೆ ಮಾರ್ಗದರ್ಶನ ಮಾಡಿದ ಸಂಸ್ಥೆ ಇದು. ಈ ಸಂಸ್ಥೆ ಹುಟ್ಟಿಕೊಂಡದ್ದೂ ಒಂದು ಕನ್ನಡ ಸಂಘದ ಆಶ್ರಯದಲ್ಲಿ. ಈ ಸಂಸ್ಥೆಯನ್ನು ಕಟ್ಟಿ ಬೆಳೆಸಲು ಕಾರಣರಾದ ಆರಂಭದ ಉತ್ಸಾಹಿ ಕಾರ್ಯಕರ್ತರು, ಇಂದಿನ ತನಕವೂ ಈ ಶಾಲೆಗಾಗಿ ಶ್ರಮಿಸುತ್ತಿರುವ ಸುಪ್ರಸಿದ್ಧ ಪತ್ರಿಕೋದ್ಯಮಿ ಆರ್. ವೆಂಕಟೇಶ ಮೂರ್ತಿ. ಶಾಲೆಯ ಕಟ್ಟಡ ರೂಪುಗೊಳ್ಳಲು ನೆರವಾದ ಶ್ರೀ ಆರ್. ಡಿ. ಚಾರ್ ಮೊದಲಾದ ಹಲವಾರು ಗಣ್ಯ ಉದ್ಯಮಪತಿಗಳು ಕನ್ನಡಕ್ಕಾಗಿ, ಕನ್ನಡ ಶಿಕ್ಷಣಕ್ಕಾಗಿ ದುಡಿದಂಥವರು.

ರಾತ್ರಿಶಾಲೆಗಳಿಗೆಲ್ಲ ಸ್ವಂತ ಕಟ್ಟಡದ ಅನುಕೂಲತೆಯಿಲ್ಲ. ಬಡ ಕನ್ನಡಿಗ ಮಕ್ಕಳು ರಾತ್ರಿ ಶಾಲೆಗಳಲ್ಲಿ ಕಷ್ಟಪಟ್ಟು ವಿದ್ಯಾಭ್ಯಾಸ ಮುಂದುವರಿಸುತ್ತಿರುವುದನ್ನು ಕಂಡು, ಅಂಥ ವಿದ್ಯಾರ್ಥಿಗಳಿಗೆ ಶಹರದ ಪ್ರಮುಖ ಬಡಾವಣೆಯಾದ ಕೋಟೆ ವಿಭಾಗದಲ್ಲಿ ಒಂದು ಸ್ವಂತ ಕಟ್ಟಡವೇ ಇರಲಿ, ಇಲ್ಲಿ ವ್ಯವಸ್ಥಿತವಾದ ಒಂದು ಪ್ರೌಢ ಶಾಲೆಯೇ ಬೆಳೆದು ಬರಲಿ ಎಂದ, ದೀರ್ಘ ಕಾಲದ ನಗರಪಾಲಿಕೆಯ ಸದಸ್ಯ ಶ್ರೀ ಬೊಮ್ಮನ್ ಬೆಹರಾಮ್ ಅವರ ಹೆಸರನ್ನು ಎಲ್ಲ ಕನ್ನಡಿಗರೂ ಅಭಿಮಾನದಿಂದ ನೆನೆಯಬೇಕಾಗಿದೆ. ಇವರು ಕನ್ನಡೇತರ ಕ್ಷೇತ್ರದಲ್ಲಿ ದುಡಿಯುವವರಷ್ಟೇ ಅಲ್ಲ, ಸ್ವತಃ ಕನ್ನಡೇತರರು. ಆದರೂ ಕನ್ನಡ ಮಕ್ಕಳ ಶಿಕ್ಷಣಾನುಕೂಲತೆಗಾಗಿ ಅನುಕರಣೀಯ ದಾನ ಮಾಡಿದಂಥವರು.

ಮುಂಬಯಿ ಶಹರದಂತೆಯೇ ಪುಣೆ, ಮದರಾಸು, ಹೈದರಾಬಾದು, ದೆಹಲಿ ಮುಂತಾದ ಪ್ರಮುಖ ಶಹರಗಳಲ್ಲಿ, ಪ್ರತಿಕೂಲ ಪರಿಸ್ಥಿತಿಯಲ್ಲೂ ಕನ್ನಡದ ಶಿಕ್ಷಣಾನುಕೂಲತೆ ಸಾಧ್ಯವಾದಷ್ಟು ಕನ್ನಡಿಗರಿಗೆ ದೊರಕಬೇಕು ಎಂಬ ಉದ್ದೇಶದಿಂದ ಶೈಕ್ಷಣಿಕ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದವರೆಲ್ಲ ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದು ಕನ್ನಡದ ಸೇವೆ ಸಲ್ಲಿಸಿದರು. ಇವರಲ್ಲಿ ಉದ್ಯಮಿಗಳು, ಅಧಿಕಾರಿಗಳು, ವಿಜ್ಞಾನಿಗಳು, ಡಾಕ್ಟರುಗಳು, ರಾಜಕಾರಣಿಗಳು ಎಲ್ಲ ಸೇರಿರಬಹುದು. ಆದರೆ ಹೊರನಾಡಲ್ಲಿ ನೆಲೆಸಿರುವ ಕನ್ನಡಿಗರಿಗ ಕನ್ನಡ ಶಿಕ್ಷಣಕ್ಕೆ ಸಾಧ್ಯವಿರುವ ಅನುಕೂಲತೆಗಳನ್ನು ದೊರಕಿಸಿಕೊಡಬೇಕು ಎಂದು ಮುಂದಾದ ಇವರೆಲ್ಲರ ಪರಿಶ್ರಮದಿಂದಾಗಿಯೇ ಭಾರತದ ಕೆಲವು ಪ್ರಮುಖ ಶಹರುಗಳಲ್ಲಿ ಕನ್ನಡದ ಅಭ್ಯಾಸ ಸಾಧ್ಯವಾಗಿದೆ.

ಹೊರನಾಡಲ್ಲಿದ್ದುಕೊಂಡು ಕನ್ನಡಕ್ಕೆ ವಿಶಿಷ್ಟ ರೀತಿಯ ಸೇವೆ ಸಲ್ಲಿಸಿರುವುದನ್ನು ನಾವು ನೆನೆಸಿಕೊಳ್ಳುವಾಗ ದೆಹಲಿಯ ಸಾಂಸ್ಕೃತಿಕ ಸಂಸ್ಥೆ ಕನ್ನಡ ಭಾರತಿಯ ಉಲ್ಲೇಖ ಅಗತ್ಯವಾಗುತ್ತದೆ. ಹೊರನಾಡಲ್ಲಿದ್ದು ಕನ್ನಡ ರಂಗಭೂಮಿಗೆ ಕೀರ್ತಿ ತರುವಂಥ ನಾಟಕಗಳನ್ನು ಪ್ರದರ್ಶಿಸಿದ ಕೀರ್ತಿ ಇವರಿಗಿದೆಯಷ್ಟೇ ಅಲ್ಲ, ಇವರು ಸಂಪಾದಿಸಿದ ಒಂದು ಗ್ರಂಥ 'ಶೇಕ್ಸ್‌ಪಿಯರನಿಗೆ ನಮಸ್ಕಾರ', ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿರುವ ಕೃತಿ.

ಹೊರನಾಡ ಕರ್ನಾಟಕ ಸಂಘಗಳು ಮಾಡಿರುವ-ಮಾಡುತ್ತಿರುವ ಗ್ರಂಥಾಲಯ ಸೇವೆಯಿಂದಾಗಿಯೇ ಲಕ್ಷಗಟ್ಟಲೆ ಕನ್ನಡಿಗರು ಕನ್ನಡದ ಸಂಬಂಧವನ್ನು ಇಂದಿಗೂ ಉಳಿಸಿಕೊಳ್ಳುವಂತಾಗಿದೆ. ಇಂಥ ಸಂಘಗಳೆಲ್ಲ ಕೆಲಸ ಮಾಡುತ್ತಿರುವುದು ಪ್ರತಿಕೂಲ ಪರಿಸ್ಥಿತಿಯಲ್ಲಿ. ಸ್ಥಳದ ಅಭಾವ, ಆರ್ಥಿಕಾನುಕೂಲತೆಯ ಕೊರತೆ, ಕಾರ್ಯಕರ್ತರ ಉತ್ಸಾಹದ ಪರಿಮಾಣ ಇವಕ್ಕೆಲ್ಲ ಹೊಂದಿಕೊಂಡು ಇಂಥ ಕೆಲಸಗಳು ನಡೆಯಬೇಕು. ಪ್ರಾಯಶಃ ಮುಂಬಯಿ ನಗರದಲ್ಲಿ ನಡೆಯುವಷ್ಟು ಕರ್ನಾಟಕ ಸಂಘಗಳ ಚಟುವಟಿಕೆಗಳು ಬೇರೆಲ್ಲೂ ನಡೆಯವುದಿಲ್ಲವೇನೋ. ಧರ್ಮ ಸಂಸ್ಕೃತಿಗಳ ಪ್ರಸಾರದ ಉದ್ದೇಶದಿಂದ ಮುಂಬಯಿಯಲ್ಲಿ ೧೮೮೮ರಲ್ಲಿ ಹುಟ್ಟಿಕೊಂಡ "ಶ್ರೀಮದ್ ಭಾರತ ಮಂಡಲ" ಎಂಬ ಸಂಸ್ಥೆಗೆ ನೂರು ವರ್ಷ ದಾಟಿದೆ. ನೂರಾರು ಕನ್ನಡ ಸಂಘಗಳು, ಕರ್ನಾಟಕ ಸಂಘಗಳು ಮುಂಬಯಿಯಲ್ಲಿದ್ದು ಕನ್ನಡದ ದೀವಿಗೆಯನ್ನು ಬೆಳಗುತ್ತಿವೆ. ಈಗ ೨೫ ಲಕ್ಷ ಬೆಲೆ ಬಾಳುವ ಸ್ವಂತ ಕಟ್ಟಡವನ್ನು ಹೊಂದಿರುವ ಕರ್ನಾಟಕ ಸಂಘ, ಹೊರನಾಡಲ್ಲೆ ಪ್ರಮುಖ ಕರ್ನಾಟಕ ಸಂಘವಾಗಿ ಮೆರೆಯುತ್ತಿದೆ. ಮುಂಬಯಿ ಜೀವನದ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದ ಹಲವಾರು ಹಿರಿಯರು ಈ ಕರ್ನಾಟಕ ಸಂಘವನ್ನೂ ಇತರ ಕನ್ನಡ ಸಂಘಗಳನ್ನೂ ಪೋಷಿಸಿ ಬೆಳೆಸಿದ್ದಾರೆ.

ಹೊರನಾಡಲ್ಲಿದ್ದರೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಪರಿಚಿತವಿರುವ ಹಲವಾರು ಹೆಸರುಗಳು ಕನ್ನಡೇತರ ಕ್ಷೇತ್ರಗಳಲ್ಲಿದ್ದು ಕನ್ನಡಕ್ಕಾಗಿ ದುಡಿಯುತ್ತಿರುವವರ ನೆನಪು ತಂದು ಕೊಡುತ್ತಿವೆ. ವಿದೇಶಗಳಲ್ಲಿರುವ ಎ. ಕೆ. ರಾಮಾನುಜನ್, ರಾಮಚಂದ್ರ ಶರ್ಮ, ಮೊನ್ನೆ ಮೊನ್ನೆಯ ತನಕ ಇದ್ದ ಹೇಮಂತ ಕುಲಕರ್ಣಿ ಮುಂತಾದ ಖ್ಯಾತನಾಮ ಕವಿಗಳು ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿರುವವರು. ಮುಂಬಯಿ ಶಹರದಲ್ಲೂ ಒಳನಾಡಿನ ಕನ್ನಡಿಗರು ಮೆಚ್ಚಿಕೊಂಡಿರುವ ಹಲವಾರು ಸಾಹಿತಿಗಳಿದ್ದಾರೆ. ಇತ್ತೀಚೆಗೆ ನಿಧನರಾದ ಕೃಷ್ಣಕುಮಾರ ಕಲ್ಲೂರ, ಮುಂಬಯಿಯಲ್ಲಿ ದೀರ್ಘಕಾಲ ನೆಲೆಸಿದ್ದ ದಿನಕರ ದೇಸಾಯಿ, ಕವಿಗಳಾದ ಗಂಗಾಧರ ಚಿತ್ತಾಲ, ವಿ. ಜಿ. ಭಟ್ಟ, ಅರವಿಂದನಾಡಕರ್ಣಿ, ಬಿ. ಎ. ಸನದಿ, ಕಥೆ ಕಾದಂಬರಿಕಾರರಾದ ಬಲ್ಲಾಳ, ಯಶವಂತ ಚಿತ್ತಾಲ, ಪ್ರಭಾಕರ, ವ್ಯಾಸರಾವ್ ನಿಂಜೂರ್ ಮೊದಲಾದವರೆಲ್ಲ ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿರುವವರು. ಸಂಶೋಧಕರಾದ ಚಿಟಗುಪ್ಪಿ, ಡಾ. ಹಾವನೂರ, ದಿ| ಚಿದಂಬರ ಕುಲಕರ್ಣಿ ಮೊದಲಾದ ಹಲವಾರು ಹೆಸರುಗಳು ಕನ್ನಡ ಸಾರಸ್ವತ ಲೋಕಕ್ಕೆ ಪರಿಚಿತವಾದಂಥವು. ಇವರೆಲ್ಲರ ವ್ಯವಸಾಯ ನೇರವಾಗಿ ಕನ್ನಡಕ್ಕೆ ಸಂಬಂಧಿಸಿದ ಕ್ಷೇತ್ರಗಳಲ್ಲಿಲ್ಲ. ಇದು ಮಹತ್ವದ ಮಾತು. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಗೌರವಕ್ಕೆ ಪಾತ್ರರಾದ ಇನ್ನೂ ಹಲವಾರು ಲೇಖಕರು, ಕವಿಗಳು, ವಿಮರ್ಶಕರು (ಉದಾ: ಕೀರ್ತಿನಾಥ ಕುರ್ತುಕೋಟಿ, ಶಾಂತಿನಾಥ ದೇಸಾಯಿ) ಹೊರನಾಡಲ್ಲಿದ್ದು, ಕನ್ನಡೇತರ ಕ್ಷೇತ್ರಗಳಲ್ಲಿದ್ದೂ ಕನ್ನಡದ ಕೆಲಸ ಮಾಡುತ್ತಿರುವವರು.

ಹೊರನಾಡಾದ ಮುಂಬಯಿಯಲ್ಲಿ ಕನ್ನಡ ಶಿಕ್ಷಣ ಕ್ಷೇತ್ರದಲಿರುವ ಚಿದಂಬರ ದೀಕ್ಷಿತ, ಜಿ. ವಿ. ಕುಲಕರ್ಣಿ, ಡಾ. ಬ್ಯಾತನಾಳ್ ಮೊದಲಾದವರು ಕನ್ನಡ ಸಾಹಿತ್ಯ ಕ್ಷೇತದಲ್ಲೂ ಪರಿಚಿತರು.

ನಾಡಿನ ಪತ್ರಿಕೋದ್ಯಮ ಕ್ಷೇತ್ರದಲ್ಲಿ ಖ್ಯಾತನಾಮರಾದ ಹಲವಾರು ಪತ್ರಿಕೋದ್ಯಮಿಗಳು ಕನ್ನಡದ ಚಟುವಟಿಕೆಗಳಿಗೂ ಕನ್ನಡದ ಪತ್ರಿಕೋದ್ಯಮಕ್ಕೂ ಸೇವೆ ಸಲ್ಲಿಸಿದ್ದಾರೆ. ಹಿರಿಯ ಪತ್ರಕರ್ತ–ಲೇಖಕ ವಿ. ಬಿ. ಕುಲಕರ್ಣಿ, "ಇಲಸ್ಟ್ರುಟೆಡ್ ವೀಕ್ಲಿ"ಯ ಸಂಪಾದಕರಾಗಿದ್ದ ಎಂ. ವಿ. ಕಾಮತ್, ದೆಹಲಿಯಲ್ಲಿರುವ ಎಚ್. ವೈ. ಶಾರದಾ ಪ್ರಸಾದ್, "ಕಾಮರ್ಸ್" ಪತ್ರಿಕೆಯ ಸಂಪಾದಕರಾಗಿದ್ದ ಆರ್. ವೆಂಕಟೇಶ ಮೂರ್ತಿ, "ಇಂಡಿಯನ್ ಎಕ್ಸ್‌ಪ್ರೆಸ್"ನಲ್ಲಿದ್ದು ಇತ್ತೀಚೆಗೆ ನಿಧನರಾದ ವಿಷ್ಣು ಭಟ್, ಕನ್ನಡ ಪತ್ರಿಕೋದ್ಯಮದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲೂ ಕೃಷಿ ಮಾಡಿರುವ ಕುಲಮರ್ವ ಬಾಲಕೃಷ್ಣ ಮೊದಲಾದವರೆಲ್ಲ ಕನ್ನಡೇತರ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದು, ಕನ್ನಡ ಸಂಬಂಧವನ್ನು ಉಳಿಸಿಕೊಂಡಂಥವರು. ಪಿ. ಟಿ. ಐ. ವಾರ್ತಾ ಸಂಸ್ಥೆಯಲ್ಲಿ ತಂತ್ರಜ್ಞರಾಗಿರುವ ಶ್ರೀ ಎ. ಎಸ್. ಕೃಷ್ಣರಾಯರು ದೀರ್ಘಕಾಲ ಮುಂಬಯಿಯ ಎಲ್ಲ ಕನ್ನಡ ಚಟುವಟಿಕೆಗಳಿಗಾಗಿ ದುಡಿದಂಥವರು.

ಹೊರನಾಡಲ್ಲಿ ಕನ್ನಡದ ರಂಗಭೂಮಿ ಹಾಗೂ ಜಾನಪದ ಕಲೆಗಳಿಗಾಗಿ ದುಡಿಯುತ್ತಿರುವ ಹಲವಾರು ಕನ್ನಡಿಗರು ಕನ್ನಡೇತರ ಕ್ಷೇತ್ರಗಳಲ್ಲಿ ವ್ಯವಸಾಯ ಮಾಡುತ್ತಿರುವವರು. ಕರವಳಿ ಕರ್ನಾಟಕದ "ಯಕ್ಷಗಾನ" ಕಲೆಗೆ ಮುಂಬಯಿ ನಿರಂತರ ಪ್ರೋತ್ಸಾಹ ಕೊಡುವ ನಗರ. ಕಾರಂತರ ಯಕ್ಷಗಾನ ಪ್ರಯೋಗಗಳಿಗೆ ಮೊದಲು ಪ್ರೋತ್ಸಾಹಕೊಟ್ಟ ಕೀರ್ತಿ ಮುಂಬಯಿಗಿದೆ. ಈ ದೆಸೆಯಲ್ಲಿ ದುಡಿದ ದಿ. ಮೂಡಬಿದರೆ ಸಂಜೀವರಾಯರು ದೀರ್ಘ ಕಾಲ ಮುಂಬಯಿಯ ಕನ್ನಡ ಚಟುವಟಿಕೆಗಳಿಗೆ ಆಧಾರಸ್ತಂಭದಂತಿದ್ದವರು. ಕರಾವಳಿಯಲ್ಲಿ ಯಕ್ಷಗಾನ ಕಾರ್ಯಕ್ರಮಗಳಿರದ ಮಳೆಗಾಲದ ದಿನಗಳಲ್ಲಿ ಮುಂಬಯಿ ಯಕ್ಷಗಾನಕ್ಕೆ ಆಶ್ರಯ ಕೊಡುತ್ತಿದೆ. ಇದನ್ನು ಸಾಧ್ಯವಾಗಿಸಿರುವ ಮಹನೀಯರೆಲ್ಲ ಕನ್ನಡೇತರ ಕ್ಷೇತ್ರಗಳಲ್ಲಿ, ಮುಖ್ಯವಾಗಿ ಹೋಟೇಲು ಮುಂತಾದ ವ್ಯವಸಾಯಗಳಲ್ಲಿ ತೊಡಗಿರುವಂಥವರು.

ಕನ್ನಡ ರಂಗಭೂಮಿಯ ಬೆಳವಣಿಗೆಗೂ ಹೊರನಾಡಲ್ಲಿರುವವರ ಕೊಡುಗೆ ಸಾಮಾನ್ಯವಾದುದೇನಲ್ಲ. ದೆಹಲಿಯ ಕನ್ನಡ ಭಾರತಿ, ಹೈದರಾಬಾದಿನ ಕನ್ನಡ ನಾಟ್ಯರಂಗ, ಮುಂಬಯಿಯ ಹಲವಾರು ನಾಟಕ ತಂಡಗಳು ಕನ್ನಡ ರಂಗಭೂಮಿಯ ಸೇವೆ ಸಲ್ಲಿಸಿವೆ. ಶ್ರೀರಂಗರ ಹಲವು ನಾಟಕಗಳು ಮೊದಲ ಪ್ರದರ್ಶನ ಕಂಡುದು ಮುಂಬಯಿಯಲ್ಲೇ. ಮುಂಬಯಿಯ ಕನ್ನಡ ರಂಗಭೂಮಿಯಲ್ಲಿ ಹಲವಾರು ದಿಗ್ದರ್ಶಕರು ಬೆಳಕಿಗೆ ಬಂದು ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ. ಆರ್. ಡಿ. ಕಾಮತ್, ಪ್ರೊ. ಕೆ. ಎಂ. ಮುತಾಲಿಕ, ವಿ. ಬಿ. ದೇಶಪಾಂಡೆ, ಕೆ. ಜೆ. ರಾವ್, ರಂಗನಾಥ ಭಾರದ್ವಾಜ್, ಕೆ. ಕೆ. ಸುವರ್ಣ, ಸದಾನಂದ ಸುವರ್ಣ, ಶ್ರೀಪತಿ ಬಲ್ಲಾಳ ಇವೆಲ್ಲ ಹೆಸರುಗಳು ಒಳನಾಡಿನ ಕನ್ನಡಿಗರಿಗೂ ಪರಿಚಿತ ಹೆಸರುಗಳು. ಕನ್ನಡ ನಾಟಕೋತ್ಸವಗಳನ್ನು ಜರುಗಿಸುವ ಪರಂಪರೆಯನ್ನು ಆರಂಭಿಸಿದ ಕೀರ್ತಿಯೂ ಮುಂಬಯಿಗಿದೆ. ಕನ್ನಡ ಕಲಾಕೇಂದ್ರವೆಂಬ ಒಂದು ಸಂಸ್ಥೆ ಹಲವಾರು ವರ್ಷಗಳಿಂದ ಕನ್ನಡ ನಾಟಕೋತ್ಸವಗಳನ್ನು ಜರುಗಿಸಿ ರಂಗಭೂಮಿಯ ಸೇವೆ ಸಲ್ಲಿಸುತ್ತಿದೆ. ಮುಂಬಯಿಯಲ್ಲಿ ಈ ಪರಂಪರೆಯನ್ನು ಈಗ ಮೈಸೂರು ಎಸೋಸಿಯೇಶನ್, ಕರ್ನಾಟಕ ಸಂಘ ಮುಂತಾದ ಸಂಸ್ಥೆಗಳು ಮುಂದುವರಿಸಿಕೊಂಡು ಬರುತ್ತಿವೆ.

ಈ ಲೇಖನದ ವ್ಯಾಪ್ತಿ ಕನ್ನಡೇತರ ಕ್ಷೇತ್ರಗಲ್ಲಿದ್ದು ಕನ್ನಡದ ಕೆಲಸ ಮಾಡುತ್ತಿರುವವರ ಚಟುವಟಿಕೆಗಳಿಗಷ್ಟೇ ಸೀಮಿತವಾಗಿದೆಯಾದ ಕಾರಣ, ಇಲ್ಲಿ ಕನ್ನಡಕ್ಕೆ ಸಂಬಂಧಿಸಿದ ಕೆಲಸವನ್ನ ಮಾಡುತ್ತಿರುವ ಹೊರನಾಡ ವಿಶ್ವವಿದ್ಯಾಲಯಗಳ ಚಟುವಟಿಕೆಗಳನ್ನು ವಿವರಿಸಲು ಹೋಗಿಲ್ಲ. ಇಂದು ಕನ್ನಡೇತರ ಪ್ರದೇಶಗಳಲ್ಲೂ (ವಿದೇಶಗಳಲ್ಲೂ) ಮಹತ್ವದ ಕನ್ನಡದ ಕೆಲಸ ಸಂಬಂಧಿಸಿದ ವಿಶ್ವವಿದ್ಯಾಲಯಗಳಲ್ಲಾಗುತ್ತಿದೆ. ಮದರಾಸು ವಿಶ್ವವಿದ್ಯಾಲಯ ಕನ್ನಡ ಭಾಷಾ ವಿಜ್ಞಾನ–ಸಂಶೋಧನೆಗಳಿಗೆ ಸಂಬಂಧಿಸಿದ ಕೆಲಸವನ್ನು ಹಿಂದಿನಿಂದಲೂ ಮಾಡುತ್ತಿದೆ. ದಿ. ಮರಿಯಪ್ಪ ಭಟ್ಟರಂಥ ವಿದ್ವಾಂಸರ ಸೇವೆ ಕನ್ನಡಕ್ಕಾಗಿರುವ ಮಹತ್ವದ ಸೇವೆ. ಪುಣೆ, ಶಿವಾಜಿ, ಮರಾಠವಾಡ, ಉಸ್ಮಾನಿಯಾ, ದಿಲ್ಲಿ, ಕೇರಳ, ವರಾಣಸಿ, ಪಂಜಾಬ್ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಶಿಕ್ಷಣಾನುಕೂಲತೆಗಳಿವೆ. ಕೆಲವೆಡೆ ಸಂಶೋಧನೆಗೂ ಅವಕಾಶವಿದ್ದು ಕೆಲಸ ನಡೆಯುತ್ತಿದೆ. ಮುಂಬಯಿ ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಪೀಠ ಈಗಷ್ಟೆ ಸ್ಥಾಪನೆಯಾಗಿದ್ದು, ಕನ್ನಡ ಶಿಕ್ಷಣ–ಸಂಶೋಧನೆಗಳಿಗೆ ಪ್ರೋತ್ಸಾಹ ಕೊಡುತ್ತಿದೆ. ಕನ್ನಡ ಕವಿಯೂಗಿಯೂ ಪರಿಚಿತವಿರುವ ಚಿದಂಬರ ದೀಕ್ಷಿತ್ ಇದರ ಮುಖ್ಯಸ್ಥರಾಗಿದ್ದಾರೆ. ಕನ್ನಡ ಸಾರಸ್ವತ ಲೋಕದ ಗೌರವಕ್ಕೆ ಪಾತ್ರರಾದ ಕೆಲವು ಹಿರಿಯ ವಿದ್ವಾಂಸರು, ಉದಾ: ಎಚ್. ಚೆನ್ನಕೇಶವ ಅಯ್ಯಂಗಾರ್, ಕೆ. ವಿ. ರಾಘವಾಚಾರ್, ಡಿ. ಕೆ. ಭೀಮಸೇನ ರಾವ್ ಮೊದಲಾದವರು ಕನ್ನಡೇತರ ಪ್ರದೇಶಗಳ ವಿಶ್ವವಿದ್ಯಾಲಯಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಈಗ ಪ್ರೊ. ಕೆ. ಕುಶಾಲಪ್ಪ ಗೌಡ, ಕೆ. ಎಂ. ಕೃಷ್ಣ ರಾವ್ ಮೊದಲಾದವರು ಇಂಥ ವಿಶ್ವವಿದ್ಯಾಲಯಗಳಲ್ಲಿ ಕನ್ನಡದ ಕೆಲಸ ಮಾಡುತ್ತಿದ್ದಾರೆ. ಅಚ್ಚ ಕನ್ನಡ ಪ್ರದೇಶವಾದ ಕಾಸರಗೋಡು ಈಗ ಹೊರನಾಡೆಂದು ಪರಿಗಣಿಸಲ್ಪಡುತ್ತಿದೆಯಾದರೂ ಇಲ್ಲಿ ನಡೆಯುವ ಕನ್ನಡ ಕೆಲಸವನ್ನು ಕನ್ನಡೇತರ ಪ್ರದೇಶಗಳಲ್ಲಿ ದುಡಿಯುತ್ತಿರುವವರ ಕನ್ನಡದ ಕೆಲಸವೆಂದು ಹೇಳಲು ಮನವೊಗ್ಗುತ್ತಿಲ್ಲ.

ಕನ್ನಡೇತರರಾದ ವಿದೇಶೀಯರು ಕನ್ನಡ ಸಾಹಿತ್ಯಕ್ಕೆ, ಸಂಸ್ಕೃತಿಗೆ ಸಲ್ಲಿಸಿದ ಸೇವೆ ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದ ವಿಚಾರವಾಗಿದೆ. ಕಿಟ್ಟೆಲ್, ರೈಸ್, ಮೊಗ್ಲಿಂಗ್, ಕಾಲ್ಡ್‌ವೆಲ್, ಫ್ಲೀಟ್ ಮುಂತಾದ ಹಲವಾರು ಕನ್ನಡೇತರ ವಿದ್ವಾಂಸರು ಕನ್ನಡವನ್ನು ಪ್ರೀತಿಯಿಂದ ನೆಚ್ಚಿಕೊಂಡು, ಕನ್ನಡಕ್ಕಾಗಿ ದುಡಿದು, ಕನ್ನಡ ಭಾಷೆ. ಸಾಹಿತ್ಯ, ಸಂಶೋಧನೆಗಳ ಕ್ಷೇತ್ರವನ್ನು ಶ್ರೀಮಂತಗೊಳಿಸಿರುವುದು ಐತಿಹಾಸಿಕ ಸತ್ಯ.

ಹೊರನಾಡಲ್ಲಿ ನೆಲೆಸಿರುವ ಕನ್ನಡಿಗರು, ಸ್ವಯಂವ್ಯಕ್ತಿ ಕಾರಣಗಳಿಗಾಗಿ ಕನ್ನಡೇತರ ಕ್ಷೇತ್ರಗಳಲ್ಲೇ ವ್ಯಾವಹಾರಿಕವಾದ ದುಡಿಮೆಯನ್ನು ಅವಲಂಬಿಸಿರಬೇಕಾಗಿದೆ. ಆದರೆ, ಅವರು ಕನ್ನಡ ನಾಡನ್ನಾಗಲೀ ನುಡಿಯನ್ನಾಗಲೀ ಕನ್ನಡದ ಸಾಂಸ್ಕೃತಿಕ ಪರಂಪರೆಯನ್ನಾಗಲೀ ಮರೆತಿಲ್ಲವೆಂಬುದು ದೇಶ ವಿದೇಶಗಳಲ್ಲಿರುವ ಕನ್ನಡಿಗರ ಚಟುವಟಿಕೆಗಳಿಂದ ವ್ಯಕ್ತವಾಗುತ್ತಿದೆ.

# ವಿದೇಶಿ ಕನ್ನಡ ಸಂಘಗಳು

ಡಾ. ಎಚ್, ಕೆ. ಚಂದ್ರಶೇಖರ್

ಅಮೇರಿಕ ವಲಸೆಗಾರರ ದೇಶ. ಪ್ರಪಂಚದ ಎಲ್ಲ ಭಾಗಗಳಿಂದ ವಿಧವಿಧವಾದ ಜನ ಬಂದು ಕಟ್ಟಿದ "ಕನಸಿನ ನಾಡು". ಅನೇಕಾನೇಕ ಸಂಸ್ಕೃತಿಗಳು, ಭಾಷೆಗಳು, ನಡವಳಿಕೆಗಳು ಒಂದು ಕಡೆ ನೆರೆದು ಬೆಳೆದ ಈ ದೇಶದಲ್ಲಿ ಕಾಣದ ಜನ ಸಂಪ್ರದಾಯವಿಲ್ಲ. ಕನ್ನಡ ಇಲ್ಲಿ ಬೆಳೆಯದೆ ಉಂಟೆ?

### ಭಾರತೀಯ ವಲಸೆಗಾರರು

ಭಾರತದಿಂದ ಜನ ಇಲ್ಲಿಗೆ ಬರಲು ಆರಂಭಿಸಿದ್ದು ಬಹುಮಟ್ಟಿಗೆ ಈ ಶತಮಾನದ ಆದಿ ಭಾಗದಲ್ಲಿ. ಒಂದು ಶತಮಾನಕ್ಕೆ ಹಿಂದೆ ಅಮೇರಿಕಕ್ಕೆ ಬರಲಿಚ್ಛಿಸಿದ ವಲಸೆಗಾರರ ಬಗ್ಗೆ ಕಾನೂನು ಇರದಿದ್ದರೂ ದೂರದ ಭಾರತದಿಂದ ಜನ ಬರಲು ಪ್ರಯತ್ನಿಸುತ್ತಿದ್ದದು ಅಪರೂಪವಾಗಿತ್ತು. ಇಲ್ಲವೇ ಇಲ್ಲ ಎಂದರೂ ಸರಿಯೆನಿಸಿತ್ತು. ೧೯೦೦ ಈಚೆಗೆ ಗಮನಾರ್ಹ ಸಂಖ್ಯೆಯಲ್ಲಿ ಭಾರತೀಯರು ಬರಲು ಆರಂಭಿಸಿದರು. ಸುಮಾರು ೧೯೧೭ರಲ್ಲಿ ಕಾನೂನೊಂದು ಜಾರಿಗೆ ಬಂದು "ಏಷ್ಯಾ ಪ್ರತಿಬಂಧೀ ಕ್ಷೇತ್ರ" ನಿರ್ಮಾಣವಾಗಿ ಜಪಾನಿನವರಲ್ಲದ ಇತರ ಎಲ್ಲ ಏಷಿಯಾದವರನ್ನೂ ತಡೆಹಿಡಿಯಿತು. ಮುಂದೆ ಆಗಾಗ ಕಾನೂನು ಮಾರ್ಪಾಡಾದರೂ ವರ್ಷಕ್ಕೆ ನೂರು ಮಂದಿ ಮಾತ್ರವೇ ವಲಸೆ ಬರಲು ಅವಕಾಶ ದೊರಕಿತು. ಹಾಗಾಗಿ ಅಲ್ಲೊಬ್ಬರು, ಇಲ್ಲೊಬ್ಬರು ಕನ್ನಡದವರು ಇಲ್ಲಿ ಬಂದು ನೆಲಸಿದ್ದುಂಟು. ೧೯೨೪ರ ಸುಮಾರಿನಲ್ಲಿ ಬಂದ ನಾ. ಸು. ಹರ್ಡೀಕರ್ ಅಂಥವರಲ್ಲೊಬ್ಬರು. ಮಿಷಿಗನ್‌ನಲ್ಲಿ ಇಂಡಿಯಾ ಅಸೋಸಿಯೇಶನ್ ಕಟ್ಟಿದ ಖ್ಯಾತಿ ಇವರದು. ಅಮೆರಿಕ ಪೌರಸ್ತ್ಯ ವಲಸೆಗಾರರ ಬಗ್ಗೆ ತಾಳಿದ ನೀತಿಯಲ್ಲಿದ್ದ ರಾಷ್ಟ್ರಭೇದದ ಪೂರ್ವಾಗ್ರಹವನ್ನು ಕೊನೆಗಾಣಿಸಿದವರು ಅಧ್ಯಕ್ಷ ಜಾನ್‌ಸನ್. ೧೯೬೫ರಿಂದ ಈಚೆಗೆ ಭಾರತದಿಂದ ಹೆಚ್ಚಿನ ಸಂಖ್ಯೆಯಲ್ಲಿ ವಲಸೆಗಾರರು ಬರಲು ಆರಂಭಿಸಿದರು. ಈ ಸಂಖ್ಯೆಗಳನ್ನು ನೋಡಿ: ೧೯೬೫ರಲ್ಲಿ ಬಂದವರು ೫೮೨ ಮಂದಿ, ೧೯೭೫ರಲ್ಲಿ ಸುಮಾರು ಹದಿನೈದು ಸಾವಿರ. ಈಚೆಗೆ ವಲಸೆ ಬರುವುದನ್ನು ತಡೆಗಟ್ಟುವ ಹೊಸ ಕಾನೂನುಗಳು ಹುಟ್ಟಿಕೊಳ್ಳುತ್ತಿವೆ.

### ಕನ್ನಡ ಸಂಘಗಳು

ಕನ್ನಡದ ಜನ ಗಮನಾರ್ಹ ಸಂಖ್ಯೆಯಲ್ಲಿ ಇಲ್ಲಿಗೆ ಬಂದದ್ದೂ ೧೯೬೫ರಿಂದ ಈಚೆಗೆ. ಬಂದವರೆಲ್ಲ ವಿಶಾಲ ಅಮೇರಿಕದಲ್ಲಿ ಹರಿದು ಹಂಚಿ ಹೋಗಿದ್ದಾರೆ. ಆದರೂ ಕೆಲವು ನಗರಗಳಲ್ಲಿ ಹೆಚ್ಚು ಸಂಖ್ಯೆಯಲ್ಲಿ ಕನ್ನಡದ ಮಂದಿ ನೆಲೆಸಿದ್ದು ಸಂಘಗಳನ್ನು ನಿರ್ಮಾಣ ಮಾಡಲು ಸಾಧ್ಯವಾಗಿವೆ. ಅಂಥ ಸ್ಥಳಗಳು ನ್ಯೂಯಾರ್ಕ್, ವಾಷಿಂಗ್ಟನ್. ಲಾಸ್ ಏಂಜಲೀಸ್ ಇತ್ಯಾದಿ. ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ಭಾರತೀಯ ಸಂಘಗಳನ್ನು ಕಟ್ಟಲು ನೆರವಾದವರಲ್ಲಿ ಬಹುಮಂದಿ ಕನ್ನಡಿಗರಿದ್ದಾರೆ. ಆದರೆ ಕನ್ನಡ ಸಂಘವೊಂದನ್ನು ಅಧಿಕೃತವಾಗಿ ಆರಂಭಿಸಿದ ಕೀರ್ತಿ ಮಿಷಿಗನ್‌ನ ಅನ್ ಆರ್ಬರ್ ಕನ್ನಡಿಗರಿಗೆ ಸೇರಬೇಕು. ಅನ್ ಆರ್ಬರ್ ವಿಶ್ವವಿದ್ಯಾನಿಲಯದ ಊರು. ಊರ ತುಂಬ ವಿದ್ಯಾರ್ಥಿಗಳೇ. ಅಲ್ಲಿನ ಉತ್ಸಾಹಿ ಎಸ್. ಪ್ರಕಾಶ್ ೧೯೭೧ರಲ್ಲಿ 'ಪಂಪ' ಎಂಬ ಹೆಸರಿನಲ್ಲಿ ಸಂಘ ಆರಂಭಿಸಿ ಕೂಡಲೇ ತ್ರಿಮಾಸ ಪತ್ರವೊಂದನ್ನು ಪ್ರಕಟಿಸಲು ತೊಡಗಿದರು. 'ಪಂಪ ಸಮಿತಿ' ಅಮೇರಿಕದಲ್ಲಿ ನೆಲೆಸಿರುವ ಎಲ್ಲ ಕನ್ನಡಿಗರ ವಿಳಾಸಗಳನ್ನು ಹೊತ್ತ ದರ್ಶಿಕೆಯೊಂದನ್ನು ಹೊರತರುವ ಸಾಹಸ ಮಾಡಿತು. ಒಂದು ಚಿಕ್ಕ ವಾರ್ಷಿಕ ಪ್ರಕಟಣೆಯೂ ನಡೆಯಿತು. ವಾರ್ಷಿಕವನ್ನು ವರ್ಷ ವರ್ಷವೂ ಪುನರಾವೃತ್ತಿಗೊಳಿಸಲು ಸಾಧ್ಯವಾಗದೆ ಅದರ ಉಪಯುಕ್ತತೆ ಜೀವಂತವಾಗಿಲ್ಲ. (ಉದ್ಯೋಗ ನಿಮಿತ್ತ ಪದೆಪದೇ ವಸತಿ ಬದಲಾಯಿಸುವ ಮಂದಿ ಹೊಸ ವಿಳಾಸಗಳನ್ನು ವಾರ್ಷಿಕದ ಸಮಿತಿಗೆ ತಿಳಿಸಿಯಾರು ಎಂದು ನಂಬುವಂತಿಲ್ಲ). ಪಂಪ ಸಂಸ್ಥೆಯನ್ನು ಕೇಂದ್ರವಾಗಿರಿಸಿಕೊಂಡು ದೇಶದ ವಿವಿಧ ಎಡೆಗಳಲ್ಲಿ "ಅಧ್ಯಾಯ"ಗಳನ್ನು ಆರಂಭಿಸಲು ಮಿಷಿಗನ್ ಸಮಿತಿ ನಿರ್ಧರಿಸಿತು. ಮುಖ್ಯವಾದ ಅಧ್ಯಾಯಗಳು ಇವು.

೧. ಕಾವೇರಿ (ಮೇರಿಲ್ಯಾಂಡ್, ವಾಷಿಂಗ್ಟನ್, ಡೆಲವೇರ್)
೨. ಕರ್ನಾಟಕ (ಉತ್ತರ ಕ್ಯಾಲಿಫೋರ್ನಿಯ)
೩. ದಕ್ಷಿಣ ಕ್ಯಾಲಿಫೋರ್ನಿಯ ಕನ್ನಡ ಕೂಟ
೪. ನೃಪತುಂಗ (ಜಾರ್ಜಿಯ)
೫. ನ್ಯೂ ಇಂಗ್ಲೆಂಡ್ ಕನ್ನಡ ಕೂಟ (ಮ್ಯಾಸಚುಸೆಟ್ಸ್ ಹೋಡ್ ಐಲೆಂಡ್, ಕನೆಕ್ಟಿಕಟ್)
೬. ವಿದ್ಯಾರಣ್ಯ (ಇಲ್ಲಿನಾಯ್, ಇಂಡಿಯಾನ, ವಿಸ್‌ಕಾನ್ಸಿನ್)

ಈ ಅಧ್ಯಾಯಗಳು ಸದಸ್ಯರು ಸಲ್ಲಿಸಿದ ಚಂದಾ ಹಣದಲ್ಲಿ ನಿಗದಿ ಮಾಡಿದಷ್ಟು ಭಾಗವನ್ನು ಕೇಂದ್ರಕ್ಕೆ ಪಾವತಿ ಮಾಡಿ ನಿಧಿಯೊಂದನ್ನು ಕೂಡಿಸುವ ಪ್ರಯತ್ನ ನಡೆಸಿದವು. ಇದರ ಉದ್ದೇಶವೇನೋ ಘನವಾದದ್ದೇ. ವರ್ಷಕ್ಕೊಂದು ಬಾರಿ ದೇಶದ ಎಲ್ಲ ಕನ್ನಡಿಗರನ್ನೂ ಒಂದೆಡೆ ಸೇರಿಸಿ

ಸಮ್ಮೇಳನ ನಡೆಸುವ ಮಹತ್ವಾಕಾಂಕ್ಷೆ, ಕನ್ನಡಿಗರೆಲ್ಲರ ಬಗ್ಗೆ ಮಾಹಿತಿ ಒದಗಿಸುವ ಸಾಹಸ—ಇವು. ಆಕಾಂಕ್ಷೆ ಘನವಾಗಿದ್ದರೂ ಇದನ್ನು ಕಾರ್ಯಗತ ಮಾಡುವುದು ಅಷ್ಟೇ ಕಷ್ಟವೂ ಆಯಿತು. ಸಂದಾಯವಾದ ಚಂದಾ ಹಣ ಅಧ್ಯಾಯದ ಚಟುವಟಿಕೆಗಳನ್ನು ನಡೆಸಲು ಸಾಕಾಗದಿದ್ದಾಗ ಕೇಂದ್ರದ ಪಾಲು ತೆರುವುದಾದರೂ ಹೇಗೆ? ಎರಡನೆಯ ಕಾರಣ ದೂರವನ್ನವ ಲಂಬಿಸಿದ್ದು. ವಿವಿಧ ಅಧ್ಯಾಯಗಳ ಸದಸ್ಯರು ಸಾವಿರಾರು ಮೈಲಿ ಪ್ರಯಾಣ ಮಾಡಿ ಒಂದೆಡೆ ಸೇರಿ ಸಮ್ಮೇಳನವನ್ನು ನಡೆಸುವುದು ಆಗದ ಹೋಗದ ಮಾತು ಆಯಿತು. ಹೀಗಾಗಿ ಈ ಅಧ್ಯಾಯಗಳು ಕೇಂದ್ರವೊಂದಕ್ಕೊಳಪಡದೆ ಅಲ್ಲಲ್ಲಿಯೇ ಸ್ವತಂತ್ರವಾಗಿ ಕೆಲಸ ಮಾಡಲು ಆರಂಭಿಸಿದವು.

ಮೇಲೆ ಹೇಳಿದ ಸಂಘಟನೆಗಳಲ್ಲದೆ ನನಗೆ ತಿಳಿದ ಮಟ್ಟಿಗೆ ಇತರ ಅನೇಕ ಕಡೆಗಳಲ್ಲಿ ಕನ್ನಡ ಸಂಘಗಳು ಕೆಲಸ ಮಾಡುತ್ತಿವೆ. ನ್ಯೂ ಯಾರ್ಕ್ ಕನ್ನಡ ಕೂಟ, ಫಿಲಿಡೆಲ್ಫಿಯಾದ ತ್ರಿವೇಣಿ ಹ್ಯೂಸ್ಟನ್ ಕನ್ನಡ ಕೂಟಗಳು ಬೆಳೆಯುತ್ತ ಬಂದಿವೆ. ಟೊರಾಂಟೋದಲ್ಲಿ ಮೊದಲ ಕೂಟ ಆರಂಭವಾಯಿತು. ಈಚೆಗೆ ವಾಂಕುವರ್, ಎಡ್ಮಂಟನ್ (ಆಲ್ಬರ್ಟ್) ಮತ್ತು ಮಾಂಟ್ರಿಯಲ್ ನಗರಗಳಲ್ಲಿ ಕೂಟಗಳು ಸ್ಥಾಪಿತವಾಗಿದ್ದು ಬಹು ದಕ್ಷತೆಯಿಂದ ಕೆಲಸ ಮಾಡುತ್ತಿವೆ. ಸುಮಾರು ನೂರು ನೂರೈವತ್ತು ಸಂಸಾರಗಳ ಬೆಂಬಲದಿಂದ ನಿಂತ ಈ ಒಂದೊಂದು ಸಂಸ್ಥೆಯೂ ವರ್ಷದಲ್ಲಿ ಬಹುಮಟ್ಟಿಗೆ ಕರ್ನಾಟಕದ ಹಬ್ಬದ ದಿನಗಳಲ್ಲಿ ಕಲಾಪಗಳನ್ನು ನಡೆಸುತ್ತದೆ. ವಿವಿಧ ಕೂಟಗಳಲ್ಲಿ ಪ್ರಥಮದಲ್ಲಿ ಕೆಲಸ ಮಾಡಿದವರಲ್ಲಿ ನನಗೆ ತಿಳಿದಂತೆ ಈ ಕೆಲಮಂದಿ ನೆನಪಿಗೆ ಬರುತ್ತಾರೆ. ವಾಷಿಂಗ್ಟನ್‌ನ ವಿಮಲಾ ಚೆನ್ನಬಸಪ್ಪ, ಬಾಲ್ಟಿಮೋರ್‌ನ ಶಂಕರ ನಾರಾಯಣ, ಪೆನ್‌ಸಿಲ್‌ವೇನಿಯಾದ ವಿ. ಪ್ರಸನ್ನ ಕುಮಾರ್, ವಿಮಲಾ ಮತ್ತು ರಾಜಗೋಪಾಲ್, ಜಾರ್ಜಿಯಾದ ರಾಮಮೂರ್ತಿ, ಡೆಲವೇರಿನ ಬಿ. ಟಿ. ಲಕ್ಷ್ಮಣ್, ಷಿಕಾಗೋನ ಎನ್. ಎಸ್. ರಾಮಚಂದ್ರ, ಹವಾಯಿಯ ಶ್ರೀಪಾದರಾಜು, ಕ್ಯಾಲಿಫೋರ್ನಿಯಾದ ಬಿ. ಎಸ್. ಧ್ರುವಕುಮಾರ್ (ಕೆಲಸ ಮಾಡಿದ ಎಲ್ಲರ ಹೆಸರುಗಳನ್ನು ಇಲ್ಲಿ ಕಾಣಿಸುವುದು ಸಾಧ್ಯವಿಲ್ಲದ ಮಾತು).

**ನ್ಯೂಯಾರ್ಕ್ ಕನ್ನಡ ಕೂಟ**

ಮೊದಲಿನಿಂದ ಸ್ವತಂತ್ರವಾಗಿ ಕಾರ್ಯ ನಡೆಸಿದ ಕೂಟವೆಂದರೆ ನ್ಯೂ ಯಾರ್ಕ್ ಕನ್ನಡ ಕೂಟ. ೧೯೭೭ರ ಅಕ್ಟೋಬರ್ ತಿಂಗಳಲ್ಲಿ ಗಣೇಶನ ಹಬ್ಬದ ದಿನ ಸಂಜೆ ನ್ಯೂ ಯಾರ್ಕ್ ಕ್ವೀನ್ಸ್ ವಿಭಾಗದ ಫ್ಲಷಿಂಗ್ ಮೆಡೋವನದಲ್ಲಿ ಸೇರಿದ ನೂರು ಮಂದಿಗೂ ಹೆಚ್ಚು ಜನ ಬಹುಮಟ್ಟಿಗೆ ಕನ್ನಡಿಗರೇ ಆಗಿದ್ದು ಅವರಲ್ಲಿ ಕೆಲವು ಮಂದಿ ಉತ್ಸಾಹಿಗಳಿಗೆ ಒಂದು ಸಂಘ ಸ್ಥಾಪಿಸಬಾರದೇಕೆ ಎಂಬ ಕುತೂಹಲ ಉದಯಿಸಿದ್ದು ಆಶ್ಚರ್ಯವೇನಲ್ಲ. ಈ ಸಂದರ್ಭದಲ್ಲಿ ಉತ್ಸಾಹೀ ತರುಣ ವಾಸುದೇವ ಮೂರ್ತಿ (ಈಗ ಹೂಸ್ಟನ್‌ನಲ್ಲಿದ್ದಾರೆ) ಅವರ ಹೆಸರನ್ನು ನೆನೆಯಬೇಕು. "ವಾಸು" ಮನೆಯಲ್ಲಿ ಒಂದು ಸಭೆ ಸೇರಿ ಮೊದಲ ಹಂಗಾಮಿ ಸಮಿತಿ ನಿರ್ಮಾಣವಾಯಿತು. ಡಾ. ಶ್ರೀದೇವಿ ಚಂದ್ರಶೇಖರ್ ಪ್ರಥಮ ಅಧ್ಯಕ್ಷಿಣಿಯಾದರು. ಕೂಟಕ್ಕೆ ಸಂಕೇತವೊಂದನ್ನು ಆರಿಸಿ (ಕುವೆಂಪು ಅವರ "ಎಲ್ಲಾದರೂ ಇರು. ಎಂದಾದರೂ ಇರು, ಎಂದೆಂದಿಗೂ ನೀ ಕನ್ನಡವಾಗಿರು) ರಚನಾಂಗ ಸಿದ್ಧಪಡಿಸಲಾಯಿತು. ಸುಂದರವಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೇರ್ಪಡಿಸಿ ಸದಸ್ಯರನ್ನು ಒಟ್ಟುಗೂಡಿಸುವ ಕೆಲಸ ವರ್ಷೇ ವರ್ಷೇ ನಡೆಯುತ್ತ ಬಂತು. ಈ ವರ್ಷ (೧೯೮೨) ಅಧ್ಯಕ್ಷ ಸ್ಥಾನದಲ್ಲಿ ನಿಂತವರು ಶ್ರೀಮತಿ ಸತ್ಯ ವಿಶ್ವನಾಥ್. ಇದುವರಗೆ ಅಧ್ಯಕ್ಷರಾಗಿದ್ದವರು ಎಚ್. ಕೆ. ಚಂದ್ರಶೇಖರ್ (೪ ವರ್ಷಗಳು), ಎಂ. ಸಿ. ಸಂಪತ್ಕುಮಾರ್ (೨ ವರ್ಷಗಳು) ಮತ್ತು ಸತ್ಯ ವಿಶ್ವನಾಥ್ (೨ ವರ್ಷಗಳು). ಒಂದು ವರ್ಷದಲ್ಲಿ ಸುಮಾರು ಎರಡು ತಿಂಗಳಿಗೊಂದರಂತೆ ನಿಗದಿಯಾದ ಕಾರ್ಯಕ್ರಮಗಳು ನಡೆಯುತ್ತಿವೆ. ಮಾರ್ಚ್, ಎಪ್ರಿಲ್ ತಿಂಗಳಲ್ಲಿ, ಕಡು ಚಳಿಗಾಲ ಕಳೆದು ವಸಂತ ಕಾಲಿಡುತ್ತಿದ್ದಂತೆ ಹೊಸದಾಗಿ ಆರಿಸಿ ಬಂದ ಕಾರ್ಯ ಸಮಿತಿ ವಸಂತೋತ್ಸವ ಆಚರಿಸುತ್ತದೆ. ಸಂಗೀತ, ನೃತ್ಯ, ಮಕ್ಕಳಿಂದ ಏಕಾಂಕ ನಾಟಕ, ಜತೆಗೆ ಒಳ್ಳೆಯ ತಿನಿಸು ಇತ್ಯಾದಿ. ಮುಂದೆ ಸುಡು ಬೇಸಗೆಯಲ್ಲಿ ಒಂದು ದಿನ ಕೂಟ ಸದಸ್ಯರನ್ನು ವನ ವಿಹಾರಕ್ಕೆ ಕರೆದೊಯ್ಯುತ್ತದೆ. ಹತ್ತಿರದ ಸುಂದರವಾದ ರಾಷ್ಟ್ರೀಯ ವನವೊಂದರಲ್ಲಿ ಮಕ್ಕಳಿಗೆ, ದೊಡ್ಡವರಿಗೆ ಕ್ರೀಡೆಗಳು, ಓಟದ ಪಂದ್ಯಗಳು, ಕ್ರಿಕೆಟ್, ಈಜಾಟ, ಟೆನಿಸ್ ಇತ್ಯಾದಿ, ವನಭೋಜನ, ಕಾಫಿ ಸಮೃದ್ಧವಾಗಿ ಒದಗಿಸಲಾಗುತ್ತದೆ. ನಂತರದಲ್ಲಿ ಬೇಸಗೆಯ ಕಡೆಯ ದಿನಗಳಲ್ಲಿ ಬರುವ ಸಮಾರಂಭವೆಂದರೆ ಗಣೇಶನ ಹಬ್ಬ. ಬೆಳಗ್ಗೆ ಶಾಸ್ತ್ರೋಕ್ತವಾಗಿ ಗೌರಿಹಬ್ಬ, ಗಣೇಶನ ಆರಾಧನೆ ನಡೆಸಿ ಹಬ್ಬದ ಊಟ ಮಾಡಿ ಮಧ್ಯಾಹ್ನ ಸಂಗೀತ ಕಚೇರಿ ಕೇಳುವುದು. ಬಹುಮಟ್ಟಿಗೆ ಕನ್ನಡದ ಸಂಗೀತಗಾರರಿಗೇ ಪ್ರಾಶಸ್ತ್ಯ. ಪೂಜೆಗಿಡುವ ಬಣ್ಣದ ಮಣ್ಣಿನ ಗಣಪತಿಯನ್ನು ಸಮಯಕ್ಕೆ ಸರಿಯಾಗಿ ಯಾರಾದರೂ ಬೆಂಗಳೂರಿನಿಂದ ತಂದೇ ಇರುತ್ತಾರೆ. ಸಂಜೆ ಕಾರುಗಳಲ್ಲಿ ಮೆರವಣಿಗೆ ಹೊರಟು ಹತ್ತಿರದ ಫ್ಲಷಿಂಗ್ ಮೆಡೋ ವನದ ಕೆರೆಯಲ್ಲಿ ವಿಸರ್ಜನೆ. ಸಂಜೆಯ ಊಟವೂ ವನದಲ್ಲಿಯೇ. ಮುಂದೆ ಮಾಗಿಯ ದಿನಗಳಲ್ಲಿ ಕೂಟಕ್ಕೆ ಹಣ ಸೇರಿಸಲು ದೊಡ್ಡ ಕಾರ್ಯಕ್ರಮವೊಂದನ್ನು ಇಟ್ಟುಕೊಳ್ಳುವುದೂ ಸಂಪ್ರದಾಯವಾಗಿ ಬಂದಿದೆ. ಕಳೆದ ವರ್ಷ ಮೈಸೂರು ದೊರೆಸ್ವಾಮಿ ಅಯ್ಯಂಗಾರರ ವೀಣಾ ವಾದನ, ಈ ವರ್ಷ ಬೆಂಗಳೂರು ಸುರೇಶನ ಕೊಳಲು ವಾದನ. ಈ ಕಾರ್ಯಕ್ರಮಕ್ಕೆ ಜಾಹೀರಾತುದಾರರನ್ನು ಹಿಡಿದು ಸ್ಮರಣ ಸಂಚಿಕೆಯೊಂದನ್ನು ಹೊರಡಿಸಿ ಟಿಕೆಟ್‌ಗಳನ್ನು ಮಾರಿ ಭಾರೀ ಸಭಾಭವನದಲ್ಲಿ ಕಚೇರಿ ನಡೆಯಿಸಿ ಸಂಘಕ್ಕೆ ಹಣ ಸೇರಿಸುವ ಹೊಣೆ ಕೂಟಕ್ಕೆ ಇರುತ್ತದೆ. ಇನ್ನು ಚಳಿಗಾಲದ ಆರಂಭದಲ್ಲಿ – ಎಂದರೆ ಡಿಸೆಂಬರ್‌ನಲ್ಲಿ ನಡೆಯುವ ಸಮಾರಂಭ "ಕನ್ನಡ ರಂಗಭೂಮಿಯ ದಿನ". ಮೊದಲಿನ ವರ್ಷಗಳಲ್ಲಿ ಇದು ಕೈಲಾಸಂ ದಿನಾಚರಣೆಯಾಗಿ ಆರಂಭವಾದ ಸಂಪ್ರದಾಯ. ವರ್ಷಕ್ಕೊಂದು ಒಳ್ಳೆಯ ನಾಟಕ ಆಡಿಯೇ ತೀರಬೇಕು. ಪಾತ್ರ ವಹಿಸುವ ಕಲಾವಿಲಾಸಿಗಳಿಗೇನೂ ಕೊರತೆಯಿಲ್ಲ. ಮುಂದೆ ಜನವರಿ, ಫೆಬ್ರವರಿ ಸಮಯದಲ್ಲಿ ನಡೆಯುವುದು ಕನ್ನಡ ಗಾಯಕರ ದಿನ. ಮೊದಮೊದಲಲ್ಲಿ ಪುರಂದರದಾಸರ ದಿನಾಚರಣೆಯಾಗಿ ಆರಂಭವಾದದ್ದು ಈಗ ಗಾಯಕರ ದಿನವಾಗಿದೆ. ಕನ್ನಡ ಭಾವಗೀತೆಗಳು, ದೇವರ ನಾಮಗಳು ಶಿವಶರಣರ ವಚನಗಳು ಈ ವಿಭಾಗಗಳಲ್ಲಿ ಮಕ್ಕಳಿಗೆ, ದೊಡ್ಡವರಿಗೆ ಸ್ಪರ್ಧೆಗಳು ಏರ್ಪಟ್ಟು ಬಹುಮಾನ ವಿತರಣೆ ನಡೆಯುತ್ತದೆ. ಯಾರಾದರೂ ಪ್ರಸಿದ್ಧ ಗಾಯಕರು ದೊರೆತರೆ ಅವರಿಂದ ಕಚೇರಿಯೂ ಇರುತ್ತದೆ. ಈ ಉತ್ಸವ ಬೆಳಗ್ಗೆ ಹತ್ತು ಗಂಟೆಗೆ ಆರಂಭವಾಗಿ ಸಂಜೆ ಆರು ಗಂಟೆಯ ವರೆಗೂ ನಡೆಯುವಂಥದ್ದು. ಭೋಜನ, ಕಾಫಿ ಎಲ್ಲ ಅಲ್ಲಿಯೇ ಒದಗುತ್ತದೆ.

ಈ ಸಾಂಪ್ರದಾಯಿಕ ಚಟುವಟಿಕೆಗಳಲ್ಲದೆ ವರ್ಷದಲ್ಲಿ ವಿಶಿಷ್ಟ ಸಮಾರಂಭಗಳೂ ನಡೆಯುತ್ತವೆ. ಕರ್ನಾಟಕದಿಂದ ಈ ಹೆಸರಾಂತ ಸಾಹಿತಿಗಳು ದಯಮಾಡಿಸಿದಾಗ – ಶ್ರೀ ಗೋಪಾಲ ಕೃಷ್ಣ ಅಡಿಗರು, ಶ್ರೀ ಗೋರೂರು ಅವರು, ಶ್ರೀ ದೇಜಗೌ. ಅವರು, ಶ್ರೀ ಜೀ. ಶಂ. ಪರಮಶಿವಯ್ಯನವರು, ಡಾ. ಪು.ತಿ.ನ. ಅವರು, ಡಾ. ಪ್ರಭುಶಂಕರ, ಡಾ. ಎ.ಎನ್. ಮೂರ್ತಿರಾಯರು– ವಿಶೇಷ ಸನ್ಮಾನಗಳನ್ನು ಏರ್ಪಡಿಸಲಾಗಿತ್ತು. ಡಾ. ಎಚ್. ಕೆ. ರಂಗನಾಥ್ ಕರೆತಂದಿದ್ದ ಬಾಲ ಯಕ್ಷಗಾನ, ಮಾರ್ಥಾ ಆಷ್ಟನ್ ಅವರಿಂದ ಯಕ್ಷಗಾನ, ಮಾಸ್ಟರ್ ಶಂಕರ್ಸ್ ಇಂದ್ರ ಜಾಲ ಇತ್ಯಾದಿ ವಿಶೇಷ ಕಲಾ ಪ್ರದರ್ಶನಗಳನ್ನು ಇಟ್ಟುಕೊಳ್ಳಲಾಗಿತ್ತು. ಗತಿಸಿದ ಸಾಹಿತಿಗಳು ಡಿ. ವಿ. ಜಿ., ಬೇಂದ್ರೆಯವರು, ಜಿ. ಪಿ. ರಾಜರತ್ನಂ ಇವರೆಲ್ಲರ ಪುಣ್ಯ ಸ್ಮರಣೆ ಆಚರಿಸಲಾಯಿತು. ಕರ್ನಾಟಕ ಸರ್ಕಾರದ ಪರವಾಗಿ ಆಗಮಿಸಿದ ಮಂತ್ರಿಗಳಿಗೆ, ಅಧಿಕಾರಿಗಳಿಗೆ (ಶ್ರೀ ಮಲ್ಲಿಕಾರ್ಜುನ ಸ್ವಾಮಿ, ಶ್ರೀ ಎಸ್. ಎಂ. ಕೃಷ್ಣ, ಶ್ರೀ ಜಿ. ವಿ. ಕೆ. ರಾವ್, ಶ್ರೀ ವೈ ರಾಮಕೃಷ್ಣ) ಸತ್ಕಾರ ಕೂಟಗಳನ್ನು ಇಟ್ಟುಕೊಳ್ಳಲಾಗಿತ್ತು. ಜಗದ್ಗುರು ಮಾತೆ ಮಹಾದೇವಿ, ಗುರು ಕೇಶವ ದಾಸರು, ಶ್ರೀ ಎಂ. ಸಿ. ಮೋದಿ ಈ ಗಣ್ಯರನ್ನು ಕೂಟ ಸನ್ಮಾನಿಸಿದೆ.

ಕೂಟದ ಸುದ್ದಿ ಪ್ರಸಾರ "ಸುದ್ದಿ ಸಾರಂಗಿ" ಎಂಬ ವರ್ಷಕ್ಕೆ ನಾಲ್ಕೈದು ಬಾರಿ ಪ್ರಕಟವಾಗುವ ಸುದ್ದಿ ಪತ್ರದ ಮೂಲಕ ನಡೆಯುತ್ತದೆ. ಸ್ಥಳೀಯ ಕೊಲಂಬಿಯಾ ವಿಶ್ವವಿದ್ಯಾನಿಲಯದ ಇಂಡಿಯಾ ಕ್ಲಬ್‌ನವರು ಪ್ರಸರಿಸುವ ರೇಡಿಯೋ ಕಾರ್ಯಕ್ರಮದಲ್ಲಿ ಎರಡು ತಿಂಗಳಿಗೊಮ್ಮೆ ಕನ್ನಡದಲ್ಲಿ ಪ್ರಸಾರ ನಡೆಯುತ್ತದೆ. ನಮ್ಮದೊಂದು ಗ್ರಂಥಾಲಯವೂ ಇದೆ. ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ನೀಡಿದ ಪುಸ್ತಕಗಳೊಂದಿಗೆ ಆರಂಭವಾದ ಗ್ರಂಥಾಲಯ ಅವರಿವರ ಕೊಡುಗೆಗಳಿಂದ ವೃದ್ಧಿಯಾಗುತ್ತ ಬಂದಿದೆ. ಕೂಟದಲ್ಲಿ ಆಗೊಂದು ಈಗೊಂದು ಕನ್ನಡ ಚಿತ್ರವನ್ನು ತೋರಿಸುವ ಪ್ರಯತ್ನ ನಡೆದಿದೆ.

ಇಲ್ಲಿ ಬೆಳೆಯುತ್ತಿರುವ ಮಕ್ಕಳಿಗೆ ಆಗೀಗ ಚರ್ಚಾಕೂಟ ಏರ್ಪಡಿಸುವುದೂ ಉಂಟು. ವಿಷಯ ಬಹುಮಟ್ಟಿಗೆ ಇಲ್ಲಿ ಭಾರತೀಯರಾಗಿ ಬೆಳೆಯುವವರ ಸುಖ ಸಂಕಟಕ್ಕೆ ಸಂಬಂಧಿಸಿದ್ದು. ಅವರಿಗಾಗಿ ಕನ್ನಡ ತರಗತಿಗಳೂ ನಡೆಯುತ್ತವೆ. ಕನ್ನಡ ಓದಲು ಬರೆಯಲು ಸಾಕಷ್ಟು ಪ್ರಾವೀಣ್ಯ ದೊರಕಿಸುವುದು ಈ ತರಗತಿಗಳ ಪಾಠ ಕ್ರಮದ ಉದ್ದೇಶ.

೧೯೭೬ರಲ್ಲಿ ಅಧ್ಯಕ್ಷ ಡಾ. ಚಂದ್ರಶೇಖರ್‌ರವರು ಕೈಲಾಸಂ ನಾಟಕ "ಹುತ್ತದಲ್ಲಿ ಹುತ್ತ" ಕಲಾವಿದರೊಂದಿಗೆ ವಾಷಿಂಗ್ಟನ್, ಬಾಸ್ಟನ್, ಫಿಲಡೆಲ್ಫಿಯ ನಗರಗಳಿಗೆ ತೆರಳಿ ನಾಟಕ ಪ್ರದರ್ಶನಗಳನ್ನು ನಡೆಸಿ ಈಶಾನ್ಯ ಅಮೆರಿಕದಲ್ಲಿ ಸ್ಥಾಪಿತವಾಗಿರುವ ಕನ್ನಡ ಕೂಟಗಳೆಲ್ಲ ವರ್ಷಕ್ಕೊಂದು ಬಾರಿ ಸೇರಿ ಸಮ್ಮೇಳನ ಆಚರಿಸುವ ಬಗ್ಗೆ ಮನವಿ ಮಾಡಿಕೊಂಡರು. ಎಲ್ಲರೂ ಉತ್ಸಾಹದಿಂದ ಒಪ್ಪಿ ಆ ಸಂಪ್ರದಾಯವೂ ಆರಂಭವಾಯಿತು. ೧೯೭೬ರಲ್ಲಿ ಪ್ರಥಮ ಸಮ್ಮೇಳನ ನ್ಯೂಯಾರ್ಕ್ ನಗರದಲ್ಲಿ ನಡೆಯಿತು. ೧೯೭೭ರಲ್ಲಿ ಫಿಲಡೆಲ್ಫಿಯ, ೧೯೭೮ರಲ್ಲಿ ಬಾಸ್ಟನ್, ೧೯೭೯ರಲ್ಲಿ ವಾಷಿಂಗ್ಟನ್ ನಗರಗಳಲ್ಲಿ ಸಮ್ಮೇಳನಗಳು ನಡೆದವು. ೧೯೭೯ರ ಈಚೆಗೆ ಎರಡು ವರ್ಷಕ್ಕೊಂದು ಸಮ್ಮೇಳನ ನಡೆಸಲು ತೀರ್ಮಾನಿಸಿ ೧೯೮೧ರಲ್ಲಿ ನ್ಯೂಯಾರ್ಕ್‌ನಲ್ಲಿ ಐದನೆಯ ಈಶಾನ್ಯ ಅಮೆರಿಕ ಸಮ್ಮೇಳನ ಬಹು ವೈಭವದಿಂದ ಕಾಲೇಜು ಆವರಣವೊಂದರಲ್ಲಿ ನಡೆಯಿತು. ನ್ಯೂಯಾರ್ಕ್, ಫಿಲಡೆಲ್ಫಿಯ, ವಾಷಿಂಗ್ಟನ್ ಮತ್ತು ಹೊಸದಾಗಿ ಆರಂಭವಾದ ಮಾಂಟ್ರಿಯಾಲ್ ಕನ್ನಡ ಕೂಟ–ಈ ಸಮ್ಮೇಳನದಲ್ಲಿ ಭಾಗ ವಹಿಸಿದ್ದವು. ಖ್ಯಾತ ನಟ, ನಿರ್ದೇಶಕ ಗಿರೀಶ್ ಕಾರ್ನಾಡ್ ಪ್ರಧಾನ ಅತಿಥಿಯಾಗಿ ಬಂದು ಸಮ್ಮೇಳನಕ್ಕೆಂದೇ ಸಿದ್ಧಪಡಿಸಿದ್ದ ಪ್ರೊ. ಎ. ಎನ್. ಮೂರ್ತಿರಾಯರ "ಪೂರ್ವಸೂರಿಗಳೊಡನೆ" ಗ್ರಂಥವನ್ನು ಬಿಡುಗಡೆ ಮಾಡಿದರು. ಷಿಕಾಗೋ ವಿಶ್ವವಿದ್ಯಾನಿಲಯದಲ್ಲಿ ಪ್ರೊಫೆಸರ್ ಆಗಿರುವ ಸಾಹಿತಿ ಡಾ. ಎ. ಕೆ. ರಾಮಾನುಜನ್ ಅಧ್ಯಕ್ಷರಾಗಿದ್ದು ಅಮೆರಿಕದಲ್ಲಿ ಕನ್ನಡದ ಬೆಳವಣಿಗೆಯ ಬಗ್ಗೆ ಸ್ವಾರಸ್ಯವಾದ ಭಾಷಣ ಮಾಡಿದರು.

ಸ್ಥಳೀಯ ಸ್ಟೋನೀಬ್ರೂಕ್ ಕಾಲೇಜಿನಲ್ಲಿರುವ ಭಾಷಾಶಾಸ್ತ್ರಜ್ಞ ಶ್ರೀ ಎಸ್. ಎನ್. ಶ್ರೀಧರ್ ಅಮೆರಿಕದಲ್ಲಿ ಕನ್ನಡ ನುಡಿಯ ಬಗ್ಗೆಯೂ, ಬಾಸ್ಟನ್‌ನ ಭಾಷಾಶಾಸ್ತ್ರಜ್ಞ ಶ್ರೀ ಸೂಡಾ ಎಲ್. ಭಟ್ಟರು ಕನ್ನಡದ ವಿಶಿಷ್ಟ ಪ್ರಾಚೀನತೆಯ ಬಗ್ಗೆಯೂ ಮಾತನಾಡಿದರು. "ಕರ್ನಾಟಕ ಭಿತ್ತಿ ಚಿತ್ರಗಳು" ಪ್ರದರ್ಶನ, ಜಾನಪದ ಸಂಗೀತ, ಭಾವಗೀತೆಗಳ ಹಾಡಿಕೆ, ಸುಂದರವಾದ ನೃತ್ಯಗಳು, ಮುಂತಾದ ಸೊಗಸಾದ ಮನರಂಜನೆಯ ಕಾರ್ಯಕ್ರಮಗಳು ಏರ್ಪಟ್ಟಿದ್ದವು. ವಾಷಿಂಗ್ಟನ್ ಕೂಟದ ಶ್ರೀ ಎಂ. ಎಸ್. ನಟರಾಜ್ ಇಲ್ಲಿ ನೆಲಸಿರುವ ಕನ್ನಡಿಗರ ಸಮಸ್ಯೆಯೊಂದನ್ನು ಉದ್ದೇಶಿಸಿ ಬರೆದ "ಮಡಿದು ಮಡಿದವರು" ನಾಟಕ ಪ್ರದರ್ಶಿತವಾಯಿತು.

ನ್ಯೂಯಾರ್ಕ್ ಕನ್ನಡ ಕೂಟ ಹೊರನಾಡಿನಲ್ಲಿ ಸ್ಥಾಪಿತವಾಗಿರುವ ಎಲ್ಲ ಕನ್ನಡ ಸಂಸ್ಥೆಗಳಿಗಿಂತ ದೊಡ್ಡದು. ವಿಶಾಲ ನ್ಯೂಯಾರ್ಕ್ ನಗರ ಪ್ರದೇಶದಲ್ಲಿ ಸುಮಾರು ಒಂದು ಸಾವಿರ ಕನ್ನಡ ಸಂಸಾರಗಳಿದ್ದಾವು– ನಾಲ್ನೂರು ಸಂಸಾರಗಳು ಸದಸ್ಯತ್ವವನ್ನು ಪಡೆದಿವೆ.

**ಅಮೇರಿಕದಲ್ಲಿ ನುಡಿಯು ಬೇವಣಿಗೆ**

ಕನ್ನಡದ ಮಂದಿ ಇಲ್ಲಿ ಎಷ್ಟು ಜನ ಒಟ್ಟು ಇದ್ದಾರೆ ಎಂಬುದು ಇನ್ನೂ ಖಚಿತವಾಗಿ ತಿಳಿಯದ ವಿಷಯ. ಸದ್ಯದಲ್ಲಿ ದೇಶದ ಎಲ್ಲ ಕನ್ನಡಿಗರ ಹೆಸರುಗಳನ್ನೂ ಒಟ್ಟು ಹಾಕುವ ಸನ್ನಾಹ ಆರಂಭವಾಗಿದೆ. ಇನ್ನೊಂದು ವರ್ಷದಲ್ಲಿ ಅಂಥ ದರ್ಶಿಕೆ ಸಿದ್ಧವಾದೀತು. ವಿವಿಧ ಕನ್ನಡ ಕೂಟಗಳ ಸದಸ್ಯ ವರ್ಗ ಮತ್ತು ಯಾವ ಸಂಘಕ್ಕೂ ಸೇರದ ಇತರರು, ಎಲ್ಲ ಸೇರಿ ಪ್ರಾಯಶಃ ಅಮೆರಿಕದಲ್ಲಿ ೨೦೦೦ ಸಂಸಾರಗಳಿದ್ದಾವು. ಈ ಮಂದಿ ಈ ವಿಶಾಲ ದೇಶದಲ್ಲಿ ಚದರಿ ಹೋಗಿರುವುದರಿಂದ ನುಡಿಯ ಬೆಳವಣಿಗೆ ಎಲ್ಲರ ಕುಟುಂಬದಲ್ಲಿಯೂ ಒಂದೇ ಬಗೆಯಲ್ಲಿ ನಡೆದಿದೆಯೆಂದು ಹೇಳಲಾಗದು. ಅಮೆರಿಕದ ಪಶ್ಚಿಮ ಮಧ್ಯ ಸಂಸ್ಥಾನವೊಂದರ ಸಣ್ಣ ನಗರದಲ್ಲಿ ವಾಸಿಸುವ ಒಂದೇ ಕನ್ನಡ ಕುಟುಂಬಕ್ಕೆ ಕನ್ನಡ ಭಾಷೆ ಸೋಂಕುವಂತೆಯೇ ಇಲ್ಲ. ಅಂಥ ಮನೆಯಲ್ಲಿ ಬೆಳೆದ ಮಕ್ಕಳು ಕನ್ನಡ ಎಲ್ಲಿ ಕಲಿತಾರು?

ಕನ್ನಡ ಇಲ್ಲಿ ಉಳಿದೀತೆ? ನಾವು ಇಲ್ಲಿ ಬಳಸುವ ಭಾಷೆ ಇಂಗ್ಲೀಷ್. ನಮ್ಮ ಮಕ್ಕಳಂತೂ ಸಮ ವಯಸ್ಕರ ಉತ್ಕಟ ಪ್ರಭಾವಕ್ಕೊಳಗಾಗಿ ಇಂಗ್ಲೀಷ್ ಹೊರತು ಬೇರೆ ಆಡುವಂತೆಯೇ ಇಲ್ಲ. ಇನ್ನು ಭಾಷೆಯ ಗತಿ? ಬಳಕೆಯ ಆವಶ್ಯಕತೆ ಇಲ್ಲದಿದ್ದರೆ ಭಾಷೆ ನಶಿಸಿಹೋಗುತ್ತದೆ ಎಂದು ಭಾಷಾ ಶಾಸ್ತ್ರಜ್ಞರು ಹೇಳುತ್ತಲೇ ಇದ್ದಾರೆ. ಊರು ಬಿಟ್ಟು ಬಂದಿರುವ ಪ್ರಥಮ ಪೀಳಿಗೆಯ ನಮಗೆ ದೂರದ ಹಂಬಲವೂ ಸೇರಿ ಭಾಷೆಯ ಮೇಲಿನ ವ್ಯಾಮೋಹ ಅಭಿಮಾನ ಉತ್ಕಟವಾಗಿದೆ–

ನಮ್ಮ ಮಕ್ಕಳ ಕಾಲಕ್ಕೆ ಇದು ಬಿಟ್ಟು ಹೋದೀತೇನೋ ಎಂಬ ಭಯ. ಮಕ್ಕಳು ಭಾಷೆ ಕಲಿಯದಿದ್ದರೆ ಊರಿನಲ್ಲಿರುವ ನಮ್ಮ ಮೂಲದ ಒಡನಾಡಿಗಳನ್ನು, ಸಂಬಂಧಿಗಳನ್ನು ದೂರ ಮಾಡಿಕೊಂಡಾರೆಂಬ ಭಯ. ಬಹುಪಾಲು ಈ ಕಾರಣಕ್ಕಾಗಿಯೇ ಸಂಘಗಳನ್ನು ಕಟ್ಟಿದ್ದಾಯಿತು. ನಮ್ಮ ಸಂಗೀತ, ನೃತ್ಯ ಪರಂಪರೆಗಳ ಪರಿಚಯ, ಪ್ರಾವೀಣ್ಯಗಳಿಗೆ ಗಮನ ಕೊಟ್ಟಿದ್ದಾಯಿತು. ಕನ್ನಡದ ಸಂಪ್ರದಾಯದ ಹಬ್ಬಗಳನ್ನು ಶ್ರದ್ಧೆಯಿಂದ ಆಚರಿಸುವುದು ಪದ್ಧತಿಯಾಯಿತು. ಎರಡು ಮೂರು ವರ್ಷಗಳಿಗಾದರೂ ಒಮ್ಮೆ ಮಕ್ಕಳನ್ನು ಊರಿಗೆ ಕಳಿಸಿ, ಕರೆಸುವ ವಾಡಿಕೆ ಆರಂಭವಾಯಿತು. ಅಲ್ಲಲ್ಲಿ ಕನ್ನಡದ ತರಗತಿಗಳು, ಮಾತುಗಾರಿಕೆಯ ಅನುಭವ ನೀಡಿದ್ದಾಯಿತು. ಇಷ್ಟೆಲ್ಲ ಪ್ರಯತ್ನ ಪಟ್ಟರೂ ಮುಂದಿನ ಪೀಳಿಗೆಯಲ್ಲಿ ಕನ್ನಡ ಭಾಷೆ ಇಲ್ಲಿ ಉಳಿದೀತು ಎಂದು ಹೇಳುವ ಹಾಗಿಲ್ಲ. ಆದರೆ, ಪೂರ್ಣವಾಗಿ ನಿರಾಶೆಪಡುವುದು ಬೇಕಿಲ್ಲ ಎಂಬುದು ಇಲ್ಲಿ ನೆಲೆಸಿರುವ ಯುರೋಪಿಯನ್ ಮತ್ತಿತರ ವಂಶೀಯರನ್ನು ನೋಡಿದರೆ ತಿಳಿಯುತ್ತದೆ. ಈ ಮಕ್ಕಳು ಮುಂದೆ ತಾವಾಗಿ ತಮ್ಮ ಮೂಲದ ಭಾಷೆಯನ್ನು ಕಂಡು ಹಿಡಿದುಕೊಳ್ಳಲು ತವಕಿಸಿ ಭಾಷೆ ಕಲಿಯುವ ಸಾಧ್ಯತೆಯಿದೆ. ಕೆಲವು ಮಕ್ಕಳಾದರೂ ಹಾಗೆ ಮಾಡಿಯಾರು.

ಕನ್ನಡದ ಬೆಳವಣಿಗೆಯನ್ನು ಇಲ್ಲಿ ಪ್ರಚೋದಿಸಲು ಕರ್ನಾಟಕ ಸರ್ಕಾರ, ಸಂಸ್ಥೆಗಳು ನೆರವಾಗಬಹುದು. ಕನ್ನಡದ ವಿದ್ವಾಂಸರು, ಬರಹಗಾರರು, ಕಲಾವಿದರನ್ನು ಆಯ್ಕೆ ಮಾಡಿ ಇಲ್ಲಿಗೆ ಕಳಿಸಿ ಭಾಷೆಯ ಪ್ರಗತಿಯ ಬಗ್ಗೆ ಇಲ್ಲಿ ನೆಲಸಿದವರಿಗೆ ತಿಳಿವಳಿಕೆ ಕೊಡುವ ಏರ್ಪಾಡು, ಇಲ್ಲಿನ ವಿದ್ಯಾರ್ಥಿಗಳಿಗೆ ಬೇಸಗೆಯ ದಿನಗಳಲ್ಲಿ ವೇತನ ಒದಗಿಸಿ ಕನ್ನಡ ನಾಡಿನಲ್ಲಿ ಅಧ್ಯಯನಕ್ಕೆ ಅವಕಾಶ ಮಾಡಿಕೊಡುವುದು, ಇಲ್ಲಿರುವ ಮಂದಿಗೆ ಪ್ರಕಟವಾಗುವ ಉದ್ಗ್ರಂಥಗಳನ್ನು, ಚಿತ್ರಪತ್ರಿಕೆಗಳನ್ನು, ಮಾಸಿಕ, ತ್ರೈಮಾಸಿಕ ಪ್ರಕಟಣೆಗಳನ್ನು ಏಕಪ್ರಕಾರವಾಗಿ ಒದಗಿಸುವುದು, ಅತ್ಯುತ್ತಮವೆನಿಸಿದ ಕನ್ನಡ ಗ್ರಂಥಗಳನ್ನು ಇಂಗ್ಲಿಷಿಗೆ ಭಾಷಾಂತರ ಮಾಡಿಸುವುದು–ಇಷ್ಟು ಸ್ಥೂಲವಾಗಿ ಮಾಡಬಹುದು. ಕನ್ನಡದ ಚಿತ್ರರಂಗ ಉತ್ತಮ ಮಟ್ಟದಲ್ಲಿದೆ. ಆರಿಸಿದ ಚಿತ್ರಗಳನ್ನು ವಿಡಿಯೋ ಕ್ಯಾಸೆಟ್ ರೂಪದಲ್ಲಿ ಒದಗಿಸುವ ಸನ್ನಾಹ, ಇಲ್ಲೊಂದು ಕನ್ನಡ ಅಚ್ಚು ಯಂತ್ರದ ಸ್ಥಾಪನೆಗೆ ಅವಕಾಶ ಮಾಡಿಕೊಡುವುದು–ಇವೂ ಪ್ರಾಯಶಃ ಸಾಧ್ಯವಾದಾವು. ಸಾವಿರಾರು ಮೈಲು ದೂರದಲ್ಲಿದ್ದರೂ ಕನ್ನಡದ ಮೇಲೆ ನಮಗಿರುವ ಉತ್ಕಟ ಪ್ರೇಮವನ್ನು ಮನಗಂಡು ಸರಕಾರ ನ್ಯೂಯಾರ್ಕ್ ಅಥವಾ ಇತರ ಮಹಾನಗರವೊಂದರಲ್ಲಿ ಕನ್ನಡ ಭವನವೊಂದರ ಸ್ಥಾಪನೆಗೆ ಉತ್ತೇಜನ ಕೊಡಬಹುದು. ಇಲ್ಲಿಯ ವಿಶ್ವವಿದ್ಯಾನಿಲಯವೊಂದರಲ್ಲಿ ಕನ್ನಡ ಕಲಿಕೆಯ ಬಗ್ಗೆ ದತ್ತಿಯೊಂದನ್ನು ಕಲ್ಪಿಸಬಹುದು.

### ಅಮೇರಿಕದಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ನಡೆದಿರುವ ಕೆಲಸ

ಕನ್ನಡ ಭಾಷೆಯ ಬಗ್ಗೆ ಶೋಧನೆ ನಡೆಯಿಸಿದ ಅಮೆರಿಕನ್ನರು ಕೆಲವರಿದ್ದಾರೆ. ಲಾಸ್ ಏಂಜಲೀಸ್‌ನ ವಿಲಿಯಂ ಬ್ರೈಟ್ "ಆಡುಭಾಷೆಯ ವ್ಯಾಕರಣ" ಒಂದನ್ನು ಬರೆದಿದ್ದಾರೆ. ಹೆಲೆನ್ ಉಲ್‌ರಿಕ್ ಬೇಸ್ "ಹವ್ಯಕ ಕನ್ನಡದ ವ್ಯಾಕರಣ" ಬರೆದರು. ಯೇಲ್ ವಿಶ್ವವಿದ್ಯಾನಿಲಯದ ಸೂಸನ್ ಬೀನ್ "ಕನ್ನಡದಲ್ಲಿ ಸಂಬೋಧನೆಯ ಪದ್ಧತಿಯ" ಬಗ್ಗೆ ವಿಚಾರ ಮಾಡಿದ್ದಾರೆ. ಕ್ಯಾಲ್‌ಗರಿ ವಿಶ್ವವಿದ್ಯಾನಿಲಯದ ವಿಲಿಯಂ ಮೆಕಾರ್ಮಿಕ್ "ಕನ್ನಡದ ಜಾತಿ ಆಡು ಭಾಷೆ"ಯ ಬಗ್ಗೆಯೂ ಕನ್ನಡ ದ್ವಿತೀಯ ಭಾಷೆಯಾಗಿ ಕಲಿಸಲು ಒಂದು ಪಠ್ಯಪುಸ್ತಕವನ್ನೂ ಬರೆದರು. ಭಾರತದಿಂದ ಇಲ್ಲಿಗೆ ಬಂದು ಕನ್ನಡದ ಕೆಲಸ ಮಾಡಿದವರಲ್ಲಿ ಮಂಗೇಶ ನಾಡಕರ್ಣಿ ಒಬ್ಬರು. (ಲಾಸ್ ಏಂಜಲೀಸ್‌ನಲ್ಲಿ ಕನ್ನಡದಲ್ಲಿ ಡಾಕ್ಟರೇಟ್ ಪಡೆದವರು), ಅಮೃತವಲ್ಲಿ "ಕನ್ನಡದಲ್ಲಿ ನಕಾರ"ದ ಬಗ್ಗೆ ಬರೆದು ಮಾಸ್ಟರ್ಸ್ ಪದವಿ ಪಡೆದರು. ಇಲ್ಲಿರುವ ಎಸ್. ಎನ್. ಶ್ರೀಧರ್ ಇಂಗ್ಲಿಷ್ ಸೇರಿದ ಬೆರಕೆಗನ್ನಡದ ವಿಷಯವಾಗಿ, ಅನಕ್ಷರಸ್ಥರಿಗೆ ಕನ್ನಡ ಕಲಿಸುವ ಬಗ್ಗೆ, "ಕನ್ನಡದ ಆಧುನೀಕರಣ"ದ ಬಗ್ಗೆ ಗ್ರಂಥ ರಚನೆ ಮಾಡಿದ್ದಾರೆ. ಪ್ರೊ. ಎ. ಕೆ. ರಾಮಾನುಜನ್ ಕನ್ನಡದ ವಾಕ್ಯರಚನೆಯ ಬಗ್ಗೆ (ಜತೆಗೆ ಬರೆದವರು ಶ್ರೀಧರ್ ಮತ್ತು ನಾಡಕರ್ಣಿ) ಮತ್ತು ಕನ್ನಡದಲ್ಲಿ ಜಾತಿಭೇದ, ಸಾಮಾಜಿಕ ಭೇದಗಳ ಬಗ್ಗೆ (ಮೆಕ್ಯಾರ್ಮಿಕ್ ಮತ್ತು ಬ್ರೈಟ್ ಜತೆಗೂಡಿ) ಬರೆದಿದ್ದಾರೆ.

ಕನ್ನಡ ಜನಜೀವನ, ಸಂಪ್ರದಾಯಗಳನ್ನು ಪರಿಚಯ ಮಾಡಿಕೊಡುವ ಉತ್ತಮ ಗ್ರಂಥಗಳನ್ನು ಬರೆದವರು ಪ್ರೊ. ರಾಮಾನುಜನ್ ಮತ್ತು ಟೆಕ್ಸಾಸ್‌ನಲ್ಲಿರುವ ಡಾ. ರಾಜಾರಾವ್. ಅಲ್ಲಿ ಇಲ್ಲಿ ಕನ್ನಡದ ಗ್ರಂಥ ರಚನೆಯಾಗಿ ಭಾರತದಲ್ಲಿ ಪ್ರಕಟವಾಗಿರುವುದೂ ಉಂಟು. ನ್ಯೂಯಾರ್ಕ್ ಕನ್ನಡ ಕೂಟ ಪ್ರಕಟಿಸಿದ ಪ್ರೊ. ಮೂರ್ತಿರಾಯರ "ಪೂರ್ವಸೂರಿಗಳೊಡನೆ" ಪ್ರಾಯಶಃ ಇಲ್ಲಿ ನಡೆದ ಪ್ರಥಮ ಪ್ರಕಟಣೆ. ಇಲ್ಲಿನ ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡ ವಿಭಾಗಗಳು ಇದ್ದು ಕನ್ನಡ ಶಾಸ್ತ್ರ ಸಾಹಿತ್ಯದ ಬಗ್ಗೆ ಕೆಲಸ ನಡೆಯುತ್ತಿದೆ. ಚಿಕಾಗೋ ವಿಶ್ವವಿದ್ಯಾನಿಲಯದ ಪ್ರೊ. ರಾಮಾನುಜನ್ ಕನ್ನಡ ಕಲಿಸುವುದರಲ್ಲಿ ಅಗ್ರಗಣ್ಯರು. ಪ್ರೊ. ಹೆರಾಲ್ಡ್ ಸ್ಟಿಫ್‌ಮನ್ (ಸಿಯಾಟಲ್ – ವಾಷಿಂಗ್ಟನ್ ವಿಶ್ವವಿದ್ಯಾಲಯ), ಪ್ರೊ. ಸ್ಟೀಫನ್ ಅನೆಕರ್ (ಇಲ್ಲಿನಾಯ್ ವಿಶ್ವವಿದ್ಯಾಲಯ) ನುರಿತ ಕನ್ನಡ ಬೋಧಕರು. ಅನೇಕ ವಿಶ್ವವಿದ್ಯಾನಿಲಯಗಳು ಭಾರೀ ಕನ್ನಡ ಗ್ರಂಥಾಲಯಗಳನ್ನು ಹೊಂದಿವೆ. ನ್ಯೂಯಾರ್ಕ್ ನಗರದ ಸಾರ್ವಜನಿಕ ಗ್ರಂಥ ಭಂಡಾರದಲ್ಲಿ ಕೂಡ ನಾಲ್ಕು ಸಾವಿರಕ್ಕೂ ಮಿಕ್ಕಿ ಕನ್ನಡ ಪುಸ್ತಕಗಳಿವೆ.

### ಸಹಭಾಷೆಗಳೊಂದಿಗೆ ಕನ್ನಡ

ನ್ಯೂಯಾರ್ಕ್‌ನಲ್ಲಿ ಭಾರತೀಯ ಭಾಷಾ ಸಂಸ್ಥೆಗಳಿಗೇನೂ ಕೊರತೆಯಿಲ್ಲ. ತಮಿಳು, ತೆಲುಗು, ಬಂಗಾಳಿ, ಗುಜರಾತಿ ಹೀಗೆಲ್ಲ ಭಾಷಾ ಕೂಟಗಳನ್ನು ಏರ್ಪಡಿಸಿಕೊಂಡದ್ದು ದೇಶ ಹರಿದು ಹಂಚಿದಂತೆ, ಒಂದು ಸಂಸ್ಥೆ ಸಾಲದೆ ಎಂದು ಜನ ಕೇಳಿದ್ದುಂಟು. ಇದಕ್ಕೆ ಉತ್ತರವಾಗಿ ನಾನೊಂದು ಬಾರಿ ಸುದ್ದಿ ಸಾರಂಗಿಯಲ್ಲಿ ಹೀಗೆ ಬರೆದಿದ್ದೆ: ಭಾರತೀಯರ ವೈಶಿಷ್ಟ್ಯವೇ ವೈವಿಧ್ಯತೆ. ನಮ್ಮ ಸಂಸ್ಕೃತಿಗೆ ಭಾಷಾರೂಪಗಳಲ್ಲಿರುವ ಎಲ್ಲ ಮುಖಗಳಿಗೂ ವಿಶಿಷ್ಟವಾದ ಸೊಬಗು ಇದೆ. ನಾವು ತೋರಿಸಲು ತೊಡಗಿರುವ ಮುಖ ಕನ್ನಡ ಭಾರತಿಯದು. ನನಗೆ ಬರುವ ಭಾಷೆ ಕನ್ನಡ, ನಾವು ಹಾಡುವುದು, ನಾಟಕ ಮಾಡುವುದು ಕನ್ನಡದಲ್ಲಿ, ಪಂಜಾಬಿ ನನಗೆ ಬರದು, ಹಿಂದಿ ನನಗೆ ಬರದು, ನಿಮಗೆ ಮೆಚ್ಚಿಗೆಯಾಗಲೆಂದು ನನ್ನ ಮೂಲ ನಾನು ಮರೆಯಲೆ? ತಮಿಳಿನಲ್ಲಿ ಹಾಡಿ, ಒಡಿಯದಲ್ಲಿ ನೃತ್ಯ ಮಾಡಿ, ಕೇಳಿ ನೋಡಿ ತಲೆದೂಗಿಯೇನು; ನೀವು ಬನ್ನಿ, ಕನ್ನಡದ ಮಾತು ಕೇಳಿ, ಕಲೆಗಾರಿಕೆಯನ್ನು ನೋಡಿ."

"ಆರಂಕುಶವಿಟ್ಟೊಡಂ ನೆನೆವುದೆನ್ನ ಮನಂ
ಕರ್ನಾಟಕ ದೇಶಮಂ"
"ಅಮೆರಿಕನ್ನಡಂ ಗೆಲ್ಗೆ"

# ಪ್ರೇಕ್ಷಣೀಯ ಸ್ಥಳಗಳ ಪಕ್ಷಿನೋಟ

ಎಂ. ಎಸ್. ನರಸಿಂಹ ಮೂರ್ತಿ

ಕೀರ್ತಿಯುತವಾದ ಚರಿತ್ರೆಯುಳ್ಳ ಕನ್ನಡ ನಾಡಿನಲ್ಲಿ ಪ್ರೇಕ್ಷಣೀಯ ಸ್ಥಳಗಳಾವುವು ಎಂದು ಪ್ರತ್ಯೇಕಿಸುವುದು ಕಷ್ಟವೇ ಸರಿ. ಕರ್ನಾಟಕ ರಾಜ್ಯದ ಯಾವ ಮೂಲೆಯಿಂದ ಯಾವ ಮೂಲೆಗೆ ಸಂಚರಿಸಿದರೂ ಒಂದೊಂದು ಕಲ್ಲು ತನ್ನ ಕತೆಯನ್ನು ಹೇಳುತ್ತದೆ; ತನ್ನ ಇತಿಹಾಸದ ಸ್ವಾರಸ್ಯದ ಜತೆಗೆ ಲಲಿತ ಕಲೆಯ ಸೊಬಗನ್ನು ತೋರಿಸಿ ನಮ್ಮನ್ನು ಬೆರಗುಗೊಳಿಸುತ್ತದೆ. ಇಲ್ಲಿಯ ಸ್ಥಳಗಳು ಕೇವಲ ಕಣ್ಮನಗಳಿಗೆ ಹರ್ಷವನ್ನುಂಟು ಮಾಡದೆ, ನಾಡಿನ ಅಂದಿನ ಮತ್ತು ಇಂದಿನ ಜನರ ನಡವಳಿಕೆ, ಸಂಪ್ರದಾಯ, ಸಾಮಾಜಿಕ ಮೌಲ್ಯಗಳ ಸಮಗ್ರ ದರ್ಶನ ಮಾಡಿಕೊಡುತ್ತವೆ. ಧರ್ಮಸಹಿಷ್ಣುತೆಗೆ ಹೆಸರಾದ ಕರ್ನಾಟಕ ಚಾಲುಕ್ಯ, ಹೊಯ್ಸಳ ವಾಸ್ತು ಶಿಲ್ಪಗಳಿಂದ, ಅಭಯಾರಣ್ಯ ಪಕ್ಷಿಧಾಮಗಳಿಂದ, ಭವ್ಯ ಜಲಪಾತಗಳಿಂದ, ನೈಸರ್ಗಿಕ ಚೆಲುವಿನ ವೈಭವದಿಂದ ಇಡೀ ಭರತ ಖಂಡದಲ್ಲೇ ಅದ್ವಿತೀಯ ಎನ್ನಿಸಿದೆ. ಅನೇಕ ಪ್ರೇಕ್ಷಣೀಯ ತಾಣಗಳಿಂದ ತುಂಬಿರುವ ಕರ್ನಾಟಕ "ದಕ್ಷಿಣ ಭಾರತದ ಚಪ್ಪರ" – ಕಾರಣ ಇಲ್ಲಿಯ ವಾಯುಗುಣ, ಬೇಸಗೆಯಾಗಲಿ, ಚಳಿಗಾಲವಾಗಲಿ, ಮಳೆಗಾಲವಾಗಲಿ, ಯಾವುದೂ ಅತಿರೇಕವಲ್ಲದ ಹಿತಕರ ವಾತಾವರಣ. ಇದು ಪ್ರಕೃತಿಯ ವರದಾನ.

**ಮೈಸೂರು - ಸುತ್ತಮುತ್ತ**

ವಿಶ್ವದಲ್ಲೇ ಅತಿ ಸುಂದರ ಬೃಹತ್ ಏಕ ಶಿಲಾಮೂರ್ತಿ ಶ್ರವಣಬೆಳಗೊಳದ ೧೭ ಮೀಟರ್ ಎತ್ತರದ ಗೊಮ್ಮಟ. ವಿಶ್ವದಲ್ಲೇ ಅತಿ ದೊಡ್ಡ ನಂದಿ, ಮೈಸೂರಿನ ಚಾಮುಂಡಿ ಬೆಟ್ಟದ ಮೇಲೆ ಮಲಗಿರುವ ೫ ಮೀಟರ್ ಎತ್ತರ ಹಾಗೂ ೮ ಮೀಟರ್ ಉದ್ದ ಇರುವ ಬೃಹತ್ ಬಸವ. ಜಗತ್ತಿನ ಬೇರೆಲ್ಲಿಯೂ ಇರದ "ಪಿಸುಮಾತಿನ ಗ್ಯಾಲರಿ" – ಬಿಜಾಪುರದ ೬೦ ಮೀ. ಎತ್ತರದ ಗೋಳಗುಮ್ಮಟ. ಭಾರತದಲ್ಲೇ ಭಾರಿಯಾದ ಗಣೇಶ – ಹಂಪೆಯ ಕಡಲೆಕಾಳು ಗಣೇಶ – ಎತ್ತರ ೫ ಮೀಟರ್. ಅಲ್ಲದೆ ರಾಮಾಯಣ, ಮಹಾಭಾರತಕ್ಕೆ ಸಂಬಂಧಿಸಿದ ದಂತಕತೆಗಳ ಐತಿಹ್ಯ ಹೊಂದಿರುವ ನದಿ, ಬೆಟ್ಟ, ಕಾಡು, ಗುಹೆ, ದೇವಾಲಯಗಳು ಕರ್ನಾಟಕ ರಾಜ್ಯವಿಡೀ ತುಂಬಿ ಹೋಗಿವೆ.

ಮೈಸೂರು ಎಂದೊಡನೆಯೇ ಪ್ರಪಂಚದ ಜನ ನೆನಪು ಮಾಡಿಕೊಳ್ಳುವುದು ಶ್ರೀಗಂಧವನ್ನು, ದಸರಾ ಉತ್ಸವವನ್ನು. ಬಹು ಹಿಂದಿನ ರಾಜಮಹಾರಾಜರುಗಳ ಕಾಲದಿಂದ ದಸರಾ ಉತ್ಸವ ವೈಭವಕ್ಕೆ ತನ್ನದೇ ಆದ ಹೆಸರು ಮಾಡಿದೆ. ವಸ್ತುಪ್ರದರ್ಶನ, ಕಲಾಪ್ರದರ್ಶನ, ಸಾಂಸ್ಕೃತಿಕ ಕಾರ್ಯಕ್ರಮಗಳಿಂದ ನವರಾತ್ರಿ ಹಬ್ಬದ ಸಂದರ್ಭದಲ್ಲಿ ಮೈಸೂರಿಗೆ ನೂರ್ಮಡಿ ಶೋಭೆ ಬಂದಿರುತ್ತದೆ. ದೀಪಾಲಂಕೃತ ಅರಮನೆ, ೭ ಟನ್ ತೂಕದ ರತ್ನಖಚಿತವಾದ ಸುವರ್ಣ ಸಿಂಹಾಸನ, ಜಗನ್ಮೋಹನ ಬಂಗಲೆ, ಲಲಿತಮಹಲ್ ಅರಮನೆ, ಮೃಗಾಲಯ ಮೊದಲಾದವುಗಳು ಪ್ರೇಕ್ಷಣೀಯ. ಜಗನ್ಮೋಹನ ಬಂಗಲೆಯಲ್ಲಿ ಇರುವ ಚಿತ್ರಶಾಲೆಯಲ್ಲಿ "ರವಿವರ್ಮನ ಕುಂಚದ ಕಲೆಯ ಬಲೆ"ಯ ಜೊತೆಗೆ ವಿವಿಧ ವಸ್ತುಗಳ ಸಂಗ್ರಹಾಲಯ ಆಕರ್ಷಣೀಯ.

ಮೈಸೂರು ನಗರದ ವೀಕ್ಷಣೆಗೆಂದು ನಿಸರ್ಗ ನಿರ್ಮಿಸಿದೆಯೇನೋ ಎಂಬಂತಿದೆ ಚಾಮುಂಡಿ ಬೆಟ್ಟ. ದ್ರಾವಿಡ ಶಿಲ್ಪವಿರುವ ಪುರಾತನ ಸುಂದರ ಚಾಮುಂಡೇಶ್ವರಿ ದೇವಸ್ಥಾನ ಬೆಟ್ಟದ ಮೇಲೆ. ರಾತ್ರಿಯ ವೇಳೆ ಬೆಟ್ಟದ ಮೇಲೆ ನಿಂತರೆ ಇಡೀ ಮೈಸೂರು ನಗರ ಪುಟ್ಟ ಪುಟ್ಟ ವಿದ್ಯುತ್ ದೀಪಗಳಿಂದ ನೀಲಾಕಾಶದ ನಕ್ಷತ್ರಗಳಂತೆ! ಮಹಿಷಾಸುರನ ವಿಗ್ರಹ ಹಾಗೂ ಬೃಹತ್ ಬಸವ ಬೆಟ್ಟದ ಮೇಲಿರುವ ಎರಡು ಶಿಲ್ಪಾಕೃತಿಗಳು.

ಮೈಸೂರು ನಗರದ ಸುತ್ತ ಪ್ರೇಕ್ಷಣೀಯ ಸ್ಥಳಗಳು ವಿಪುಲವಾಗಿವೆ. ೧೬ ಕಿ.ಮೀ. ದೂರದಲ್ಲಿ ಕಾವೇರಿ ನದಿಯ ಮಧ್ಯೆ ಇರುವ ಶ್ರೀರಂಗಪಟ್ಟಣ ಹಿಂದುಗಳಿಗಷ್ಟೇ ಅಲ್ಲ, ಮುಸ್ಲಿಮ್ ಬಂಧುಗಳಿಗೂ ಪವಿತ್ರವಾದ ಸ್ಥಳ. ಶ್ರೀರಂಗನಾಥ ದೇವಾಲಯ ಹಾಗೂ ಎರಡಾಗಿ ಕವಲೊಡೆದ ಕಾವೇರಿ ಮತ್ತೆ ಸೇರುವ "ಸಂಗಮ" ಸುಂದರ ನೋಟಗಳು. ಕಾವೇರಿಯ ಮಡಿಲಿನಲ್ಲಿ ಪೂರ್ಣ ರಕ್ಷಣೆ ಸಿಗುವುದೆಂದು ಟಿಪ್ಪು ಸುಲ್ತಾನ್ ಶ್ರೀರಂಗಪಟ್ಟಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡ. ಅವನು ಕಟ್ಟಿಸಿದ "ದರಿಯಾ ದೌಲತ್" ಅರಮನೆಯಲ್ಲಿ ದೊಡ್ಡ ದರ್ಬಾರು ಸಭಾಂಗಣ. ಗೋಡೆಗಳ ಮೇಲೆಲ್ಲ ತನ್ನ ರಾಜ್ಯಭಾರ ಕಾಲದ ಮುಖ್ಯ ಘಟನೆ ಹಾಗೂ ಯುದ್ಧ ವಿಚಾರಗಳನ್ನು ಪ್ರತಿಬಿಂಬಿಸುವ ಭಿತ್ತಿಚಿತ್ರಗಳು. ಅರಮನೆಯ ಮುಂಭಾಗದಲ್ಲಿ ಉದ್ಯಾನ, ಅನತಿದೂರದಲ್ಲಿ ನಿರ್ಮಿಸಿರುವ ಗುಂಬಜ್ ಕಟ್ಟಡವೂ ಸುಂದರ.

ಶ್ರೀರಂಗಪಟ್ಟಣಕ್ಕೆ ಒಂದೂವರೆ ಕಿ.ಮೀ. ದೂರದಲ್ಲಿರುವ ರಂಗನತಿಟ್ಟು ಒಂದು ಸುಂದರ ಪಕ್ಷಿಧಾಮ. ಬಣ್ಣ ಬಣ್ಣದ ಪಕ್ಷಿಗಳು ದೇಶದ ಮೂಲೆ ಮೂಲೆಗಳಿಂದ ಬಂದು ಸೇರುವ ಈ ಹಸಿರು ಸ್ಥಳವನ್ನು ದೂರದಿಂದ ನೋಡಿದರೆ ಹಕ್ಕಿಗಳು ಬಿಳಿಯ ಹೂಗಳಂತೆ ಕಾಣಿಸುತ್ತವೆ.

ಮೈಸೂರಿನ ಬಳಿಯ ನಂಜನಗೂಡು ಒಂದು ಪ್ರಸಿದ್ಧ ಶೈವಕ್ಷೇತ್ರವಾದರೆ ಮೇಲುಕೋಟೆ ಒಂದು ಪ್ರಸಿದ್ಧ ವೈಷ್ಣವ ಕ್ಷೇತ್ರ. ಈ ಎರಡೂ ಸ್ಥಳಗಳಲ್ಲಿರುವ ಹಳೆಯ ದೇವಾಲಯಗಳು ಪ್ರೇಕ್ಷಣೀಯ. ಮೈಸೂರಿನ ಬಳಿ ಇರುವ ಇನ್ನೊಂದು ಸ್ಥಳ ಸೋಮನಾಥಪುರ. ಕಾವೇರಿಯ ದಡದಲ್ಲಿರುವ ಸೋಮನಾಥಪುರದ ಶ್ರೀಕೇಶವ ದೇವಾಲಯ ಸಣ್ಣದಾದರೂ ಕಲಾದೃಷ್ಟಿಯಿಂದ ಅತ್ಯಂತ ಪ್ರಮುಖವಾಗಿದ್ದು ಜಗತ್ಪ್ರಖ್ಯಾತವಾಗಿದೆ. ದೇವಾಲಯದ ಗೋಡೆಗಳ ಮೇಲೆ ಅರಳಿರುವ ಹೊಯ್ಸಳ ವಾಸ್ತುಶಿಲ್ಪ ರಮಣೀಯ. ಚಿತ್ರವಿಚಿತ್ರದ ಪ್ರಭಾವಳಿಗಳಿರುವ ಸ್ತ್ರೀ ವಿಗ್ರಹಗಳು, ಪುರುಷ ವಿಗ್ರಹಗಳು, ಆನೆಗಳು ನೂರಾರು ಇವೆ.

**ಬೇಲೂರು–ಹಳೇಬೀಡು–ಶ್ರವಣಬೆಳಗೊಳ**

ಹೊಯ್ಸಳ ರೂವಾರಿಗಳ ಕೈಚಳಕ ನೋಡಲು ಬೇಲೂರು ಹಳೆಬೀಡುಗಳಿಗೆ ಬರಬೇಕು. ೧೧೧೭ರಲ್ಲಿ ದೊರೆ ವಿಷ್ಣುವರ್ಧನ ಕಟ್ಟಿಸಿದ ಬೇಲೂರಿನ ಚೆನ್ನಕೇಶವ ದೇವಾಲಯ ಹಾಗೂ ಹಳೇಬೀಡಿನ ಹೊಯ್ಸಳೇಶ್ವರ ಮತ್ತು ಕೇದಾರೇಶ್ವರ ದೇವಾಲಯಗಳು ಅತ್ಯಂತ ಕಲಾತ್ಮಕವಾಗಿ ಕೆತ್ತಿದ ಗೋಡೆಗಳಿಂದ ಕೂಡಿ ಬೆರಗುಗೊಳಿಸುತ್ತವೆ. ಹಾಸನ ಜಿಲ್ಲೆಯಲ್ಲಿರುವಷ್ಟು ಹೊಯ್ಸಳದೇವಾಲಯಗಳು, ಸುಂದರ ಶಿಲಾಕೃತಿಗಳು ರಾಜ್ಯದ ಬೇರೆ ಯಾವ ಜಿಲ್ಲೆಯಲ್ಲೂ ಇಲ್ಲ. ಅಂದಿನ ಶಿಲ್ಪಿಗಳಿಗೆ ಕಪ್ಪು ಕಲ್ಲು, ಕಪ್ಪು ಮೇಣದಷ್ಟೇ ಮೃದುವಾಗಿ ಇದ್ದಿತೇನೋ ಎಂಬಂಥ ಅತ್ಯಂತ ನವುರಾದ ಕುಸುರಿ ಕೆಲಸದಲ್ಲಿ ಪೌರಾಣಿಕ ಕಥೆಗಳೆಲ್ಲ ಬಿಚ್ಚಿಕೊಂಡಿವೆ. ಇಲ್ಲಿರುವ ಸಹಸ್ರಾರು ವಿಗ್ರಹಗಳ ಹಿಂದಿರುವ ಪೌರಾಣಿಕ ಕಥೆಗಳನ್ನು ಅಧ್ಯಯನ ಮಾಡಿದರೆ ಭಾರತೀಯ ಪುರಾಣ ಪರಂಪರೆಯ, ವೈದಿಕ ಪರಂಪರೆಯ ಸಂಪೂರ್ಣ ದರ್ಶನ ಲಭಿಸುವುದರಲ್ಲಿ ಸಂದೇಹವಿಲ್ಲ.

ಹಾಸನ ಜಿಲ್ಲೆಯ ಇನ್ನೊಂದು ಸ್ಥಳ ಜೈನಕಾಶಿ ಎಂದು ಪ್ರಸಿದ್ಧವಾದ ಶ್ರವಣಬೆಳಗೊಳ, ಇಂದ್ರಗಿರಿ ಬೆಟ್ಟದ ಮೇಲೆ ನಿರ್ವಾಣಕ್ಕಾಗಿ ನಿಂತಿರುವ ಗೊಮ್ಮಟ. ಈಗ್ಗೆ ಒಂದು ಸಹಸ್ರ ವರ್ಷಗಳ ಹಿಂದೆ ಏಕಶಿಲೆಯಲ್ಲಿ ನಿರ್ಮಿತವಾದ ಮೋಕ್ಷ ಸಾಮ್ರಾಜ್ಯದ ಚಕ್ರವರ್ತಿ ಬಾಹುಬಲಿಯ ವಿಗ್ರಹ ವಿಶ್ವದಲ್ಲೇ ಒಂದು ಅದ್ಭುತವಾದ ಶಿಲ್ಪ. ೧೨ ವರ್ಷಗಳಿಗೊಮ್ಮೆ ನಡೆಯುವ ಮಹಾ ಮಸ್ತಕಾಭಿಷೇಕಕ್ಕೆ ಪ್ರಪಂಚದ ಮೂಲೆ ಮೂಲೆಗಳಿಂದ ಭಕ್ತಾದಿಗಳು, ಶಿಲ್ಪಕಲಾ ರಸಿಕರು ಆಗಮಿಸುತ್ತಾರೆ. ಯಾರು ಎಷ್ಟೇ ಮಜ್ಜನ ಮಾಡಿಸಿದರೂ ದೇಹವಿಡೀ ನನೆಸಲಾಗದ ಈ ಭವ್ಯ ಮೂರ್ತಿಯನ್ನು ಆಕರ್ಷಕವಾಗಿ ಕಡೆದ ಶಿಲ್ಪಿಯನ್ನು ಕೊಂಡಾಡಲೇಬೇಕು. ಅನೇಕ ಬಸ್ತಿಗಳಿರುವ ಈ ಜೈನಕಾಶಿ ತ್ಯಾಗದಿಂದ ಮಾತ್ರ ಶಾಂತಿ ದೊರೆಯಲು ಸಾಧ್ಯ ಎಂಬಂಶವನ್ನು ಜಗತ್ತಿಗೆ ಸಾರುತ್ತದೆ.

ಮತ್ತೆರಡು ಬೃಹತ್ ಬಾಹುಬಲಿಗಳನ್ನು ಕಾರ್ಕಳ ಹಾಗೂ ಧರ್ಮಸ್ಥಳಗಳಲ್ಲಿ ಕಾಣಬಹುದು. ಪ್ರಸಿದ್ಧ ಯಾತ್ರಾಸ್ಥಳವಾದ ಧರ್ಮಸ್ಥಳ ಧರ್ಮಸಹಿಷ್ಣುತೆಗೆ ಒಂದು ಉತ್ತಮ ಉದಾಹರಣೆ. ಶ್ರೀ ಮಂಜುನಾಥೇಶ್ವರ ಶೈವ ದೇವರು. ಅಲ್ಲಿಯ ಪೂಜಾರಿಗಳು ವೈಷ್ಣವರು. ಅದರ ಧರ್ಮಾಧಿಕಾರಿ ಜೈನರು!

**ಹಂಪೆ**

ಒಂದು ಕಾಲಕ್ಕೆ ಭವ್ಯವಾಗಿ ಬೆಳಗಿ ಲೋಕ ಖ್ಯಾತವಾಗಿ ಇಂದು ಹಾಳು ಸುರಿಯುತ್ತಿರುವ ಹಂಪೆ ಬಳ್ಳಾರಿಯ ಬಳಿ ಇದೆ. ಅಳಿದುಳಿದಿರುವ ಅವಶೇಷಗಳನ್ನು ನಾವು ನೋಡಿ ಮೆಚ್ಚುಗೆ ವ್ಯಕ್ತಪಡಿಸುವುದೇಕೆಂದರೆ ಇವು ಮುಸ್ಲಿಮ್ ದೊರೆಗಳ ವಿಧ್ವಂಸಕ ಕೃತ್ಯಗಳನ್ನೂ ಮೀರಿ ಉಳಿದಿರುವುದರಿಂದ. ೧೫೬೫ರಲ್ಲಿ ನಡೆದ ರಕ್ಕಸತಂಗಡಿ ಯುದ್ಧದಲ್ಲಿ ವಿಜಯನಗರದ ಅರಸ ಅಳಿಯ ರಾಮರಾಯ ಮಡಿಯದಿದ್ದಿದ್ದರೆ, ಮುಸ್ಲಿಮ್ ದಾಳಿಕಾರರನ್ನು ಹೊಡೆದೋಡಿಸಲು ಶಕ್ತನಾಗಿದ್ದಿದ್ದರೆ ಪ್ರಾಯಶಃ ಹಂಪೆ ಪ್ರಪಚದ ಮೊದಲನೆಯ ಪ್ರೇಕ್ಷಣೀಯ ಸ್ಥಳ ಆಗುತ್ತಿತ್ತೇನೋ! ಹಂಪೆಯ ಅರಸನನ್ನು ಕೊಂದ ದಾಳಿಕಾರರು ಆರು ತಿಂಗಳ ಕಾಲ ಹಗಲಿರುಳೂ ಲೂಟಿ ಮಾಡಿ ಎಲ್ಲ ದೇವಾಲಯ, ವಿಗ್ರಹಗಳನ್ನು ಧ್ವಂಸ ಮಾಡಿದ್ದಾರೆ. ಈ ಭಗ್ನಾವಶೇಷಗಳು ೨೫ ಚದರ ಕಿ.ಮೀ. ಪ್ರದೇಶದಲ್ಲಿ ಚೆಲ್ಲಾಡಿವೆ ಮತ್ತು ರತ್ನಗಳನ್ನು ಬಳ್ಳದಿಂದ ಕಡಲೆ ಪುರಿಯಂತೆ ಅಳೆದು ಮಾರಿದ ಖ್ಯಾತಿ ಹಂಪೆಗಿದೆ. ಆದರೆ ಇಂದಿನ ಸ್ಥಿತಿ ಕಣ್ಣೀರು ಮಿಡಿಸುತ್ತದೆ.

ತುಂಗಭದ್ರಾ ನದಿಯ ದಡದಲ್ಲಿರುವ ವಿರೂಪಾಕ್ಷ ಗುಡಿಯ ಗೋಪುರ ಭಾರತದ ಭಾರೀ ಗೋಪುರಗಳಲ್ಲಿ ಒಂದು ಎನ್ನಬಹುದು. ದೇವಾಲಯದ ಪ್ರಾಂಗಣಗಳು, ಉತ್ತಮ ಶಿಲ್ಪಾಕೃತಿಗಳು, ಬಾಗಿಲವಾಡಗಳು ಸುಂದರವಾಗಿವೆ. ಪಂಪಾಪತಿಯಾದ ವಿರೂಪಾಕ್ಷನ ದೇವಾಲಯದ ಹತ್ತಿರ ಪಂಪಾಂಬಿಕೆಯ ಗುಡಿ, ಬಳಿಯಲ್ಲೆ ಕನ್ನಡ ನಾಡಿನ ಆರಾಧ್ಯದೇವತೆ ತಾಯಿ ಭುವನೇಶ್ವರಿಯನ್ನು ಕಾಣಬಹುದು.

ಹಂಪೆಯ ಹೇಮಕೂಟ ಗುಡ್ಡದ ಮೇಲೆ ೧೭ ಜೈನ ಮಂದಿರಗಳಿವೆ. ಇಲ್ಲಿರುವ ಸಾಸಿವೆಕಾಳು ಗಣಪ, ಕಡಲೇಕಾಳು ಗಣಪನ ಭವ್ಯಮೂರ್ತಿಗಳು, ವಿಜಯ ವಿಠಲಸ್ವಾಮಿ ದೇವಸ್ಥಾನ ಒಂದು ವಿಖ್ಯಾತ ಸ್ಮಾರಕ. ಇಲ್ಲಿರುವ ಕಂಬಗಳನ್ನು ತಟ್ಟಿದರೆ ಸಪ್ತಸ್ವರಗಳು ಬರುತ್ತವೆ. ಏಕಶಿಲೆಯಲ್ಲಿ ಕೆತ್ತಿದ ಶಿಲಾರಥವೋ ಮತ್ತೊಂದು ಅದ್ಭುತ. ಇದರ ಅಂಗುಲ ಅಂಗುಲವೂ ಸೂಕ್ಷ್ಮ ಕೆತ್ತನೆ ಕೆಲಸದಿಂದ ಕೂಡಿದೆ. ಅಂದವಾಗಿ ಅಲಂಕರಿಸಲ್ಪಟ್ಟ ಕಲ್ಲು ಚಕ್ರಗಳು ಒಂದುಕಾಲಕ್ಕೆ ತಿರುಗುತ್ತಿದ್ದುವಂತೆ. ಆದರೆ ಈಗ ನೆಲಕ್ಕೆ ತಾಗಿವೆ. ಏಕಶಿಲೆಯಲ್ಲಿ ಕೆತ್ತಿರುವ ನರಸಿಂಹನ ಬೃಹತ್ ವಿಗ್ರಹ ಪೂರ್ಣ ಭಗ್ನವಾಗಿದೆ.

**ಬಿಜಾಪುರ**

ಹಿಂದೂ ಮತ್ತು ಮುಸ್ಲಿಂ ಸಂಸ್ಕೃತಿಗಳೆರಡೂ ಆಳವಾಗಿ ಪ್ರಭಾವ ಬೀರಿರುವ ಜಿಲ್ಲೆಯೆಂದರೆ ಬಿಜಾಪುರ ಜಿಲ್ಲೆ. ಚಾಳುಕ್ಯರ ಸ್ಮಾರಕಗಳನ್ನು ಇಲ್ಲಿ ನೋಡಿ ಮೆಚ್ಚುವಂತೆಯೇ ಚಚ್ಚೌಕವಾದ ಬುನಾದಿಯ ಮೇಲೆ ಅಂಡಾಕಾರವಾಗಿ ಕಟ್ಟಿರುವ ಗೋಳಗುಮ್ಮಟವನ್ನು ಮೆಚ್ಚುತ್ತೇವೆ. ಇಲ್ಲಿ ಆಡುವ ಮಾತು ಮೂಡುವ ಶಬ್ದ ಅನೇಕ ಬಾರಿ ಪ್ರತಿಧ್ವನಿತವಾಗುತ್ತದೆ. ಮೊಗಸಾಲೆಯ ಒಂದು ಪಾರ್ಶ್ವದಲ್ಲಾಡಿದ ಪಿಸು ಮಾತೂ ಸಹ ಸ್ಪಷ್ಟವಾಗಿ ಇನ್ನೊಂದು ಪಾರ್ಶ್ವ ತಲುಪುವುದು ಒಂದು ಸೋಜಿಗ! ಪಿಸುಮಾತಿನ ಗ್ಯಾಲರಿ ಎಂಬ ಹೆಸರು ಇದಕ್ಕೆ ಅನ್ವರ್ಥ. ೧೬೫೬ರಲ್ಲಿ ೩೦ ವರ್ಷಗಳ ಸತತ ಪರಿಶ್ರಮದಿಂದ ಮುಗಿದ ಈ ಗೋಲಗುಮ್ಮಟ ಹಿಂದೂಮುಸ್ಲಿಮ್ ಕಲಾಶೈಲಿಗಳ ಸಮನ್ವಯದ ಸಂಕೇತವಾಗಿದೆ. ಇದಕ್ಕೆ ಮತ್ತೊಂದು ಉದಾಹರಣೆಯೆಂದರೆ ಇಬ್ರಾಹಿಂ ಆದಿಲ್‌ಶಾಹನ ಸಮಾಧಿಯಾದ ಇಬ್ರಾಹಿಮ್ ರೋಜಾ ಹಾಗೂ ಅದರ ಮಸೀದಿ. ಇಬ್ರಾಹಿಮ್ ರೋಜಾದಲ್ಲಿರುವ ವಾಸ್ತುಶಿಲ್ಪ ವೈಭವಯುತವಾಗಿದೆ. ಇಲ್ಲಿರುವ ಕಂಬಗಳ ಮೇಲೆಲ್ಲ ಸುಂದರ ಆಕೃತಿಗಳನ್ನು ಕೆತ್ತಲಾಗಿದೆಯಲ್ಲದೆ ಕಟ್ಟಡದ ಹೊರ ಮೈ ತುಂಬ ಕುರಾನಿನ ವಾಕ್ಯಗಳನ್ನು ತುಂಬಿಸಲಾಗಿದೆ.

### ಬಾದಾಮಿ-ಪಟ್ಟದಕಲ್ಲು

ಬಿಜಾಪುರದಿಂದ ಸುಮಾರು ೮೫ ಕಿ.ಮೀ. ಪ್ರಯಾಣ ಮಾಡಿದರೆ ಬಾಗಲಕೋಟೆಯ ಸಿಮೆಂಟ್ ಕಾರ್ಖಾನೆ ನೋಡಬಹುದು. ಬಾಗಲಕೋಟೆಯಿಂದ ೨೨ ಕಿ.ಮೀ. ದೂರದಲ್ಲಿ ಬಾದಾಮಿ ಇದೆ. ಹಿಂದೊಮ್ಮೆ ಚಾಳುಕ್ಯರ ರಾಜಧಾನಿಯಾಗಿ ಮೆರೆದ ಬಾದಾಮಿ ಚಾಳುಕ್ಯರ ಗುಹಾಂತರ್ದೇಗುಲಗಳಿಗೆ ಹೆಸರುವಾಸಿ. ಈ ಗುಹೆಗಳಲ್ಲಿ ಶೈವ, ವೈಷ್ಣವ ಮತ್ತು ಜೈನ ಸಂಪ್ರದಾಯಗಳ ಪ್ರಭಾವ ಕಂಡುಬರುತ್ತದೆ. ಧರ್ಮಸಹಿಷ್ಣುತೆಗೆ ಇದು ಮತ್ತೊಂದು ಉದಾಹರಣೆ. ಬಾದಾಮಿ ಗುಹೆಗಳಲ್ಲಿರುವ ಶಿಲ್ಪಾಕೃತಿಗಳ ಸೌಂದರ್ಯದ ಜತೆಗೆ ಅಜಂತಾ ಮಾದರಿಯ ವರ್ಣಚಿತ್ರಗಳೂ ಸೇರಿ ಸ್ಥಳ ಮೌಲ್ಯವನ್ನು ಹೆಚ್ಚುಮಾಡಿವೆ.

ಚಾಳುಕ್ಯ ಶೈಲಿಯ ವೈಭವವನ್ನು ಸಾರುವ ಕೆಲವು ದೇವಾಲಯಗಳನ್ನು ನೋಡಲು ಬಾದಾಮಿಯಿಂದ ದೂರದ ಪಟ್ಟದಕಲ್ಲಿಗೆ ಬರಬೇಕು. ಅಂದಿನ ಜನಜೀವನದ ರೀತಿನೀತಿಗಳನ್ನು ತೋರಿಸುವ ಶಿಲಾಫಲಕಗಳಿರುವ ವಿರೂಪಾಕ್ಷ ದೇವಾಲಯ ತುಂಬ ಸುಂದರ. ಪಾಪನಾಥ ದೇವಾಲಯ, ಮಲ್ಲಿಕಾರ್ಜುನ ದೇವಾಲಯ ಹಾಗೂ ಜಂಬುಲಿಂಗ ದೇವಾಲಯಗಳು ಪ್ರೇಕ್ಷಣೀಯ.

### ಐಹೊಳೆ

ಬಾದಾಮಿಯಿಂದ ೩೨ ಕಿ.ಮೀ. ದೂರದಲ್ಲಿರುವ ಐಹೊಳೆ ಹಿಂದೊಮ್ಮೆ ಚಾಳುಕ್ಯ ದೊರೆಗಳ ಸಂಸ್ಕೃತಿಯ ನೆಲೆಯಾಗಿತ್ತು. ಐಹೊಳೆಯ ಸುತ್ತಮುತ್ತ ಎಪ್ಪತ್ತು ದೇವಾಲಯಗಳಿದ್ದು ಎಲ್ಲವೂ ಉತ್ತಮ ಸ್ಥಿತಿಯಲ್ಲಿಯೇ ಇವೆ. ಲಾಡ್‌ಖಾನ್ ದೇವಾಲಯ ತುಂಬ ಪ್ರಾಂಜಲವಾದ್ದು.

### ಗುಲ್ಬರ್ಗ

ಗುಲ್ಬರ್ಗ ಇನ್ನೊಂದು ಪ್ರೇಕ್ಷಣೀಯ ಸ್ಥಳ. ಗುಲ್ಬರ್ಗದ ಶರಣ ಬಸವೇಶ್ವರ ದೇವಾಲಯ ಹಿಂದುಗಳಿಗೆ ಪವಿತ್ರ ಯಾತ್ರಾಸ್ಥಳ.

ಬಿದರೆಯ ಕೋಟೆ ದಕ್ಷಿಣ ಭಾರತದ ಯಾವುದೇ ಕೋಟೆಗಿಂತ ಸುಭದ್ರ, ಸುಂದರ. ಹಾಳಾಗದೆ ಇಡೀ ಕೋಟೆ ಸುರಕ್ಷಿತವಾಗಿ ಉಳಿದಿರುವುದು ಇದೊಂದೇ ಎನ್ನಬಹುದು. ಈ ಕೋಟೆ ಜಲದುರ್ಗದ ಮಾದರಿಯಲ್ಲಿ ನಿರ್ಮಿತವಾಗಿದೆ. ತೋಪುಗಳನ್ನು ನಿಲ್ಲಿಸಲು ಎತ್ತರದ ಬುರುಜುಗಳಿವೆ. ಸೈಫನ್ ತಂತ್ರದಲ್ಲಿ ಮೇಲೆ ನೀರು ಬರುವ ವ್ಯವಸ್ಥೆ ಮಾಡಲಾಗಿದ್ದ ಕೋಟೆ ಇದು.

ಬಹಮನಿ ರಾಜ್ಯದ ಪ್ರಸಿದ್ಧ ಮಂತ್ರಿ ಹಾಗೂ ಶಿಕ್ಷಣ ತಜ್ಞನಾಗಿದ್ದ ಮಹಮ್ಮದ್ ಗವಾನ ೧೪೭೨ರಲ್ಲಿ ಕಟ್ಟಿಸಿದ ಗವಾನ ವಿದ್ಯಾಲಯ ಮೂರು ಅಂತಸ್ತಿನ ಭವ್ಯ ಕಟ್ಟಡ. ಸಭಾಂಗಣಗಳು, ಪುಸ್ತಕಭಂಡಾರ, ಗುರು-ಶಿಷ್ಯರು ವಾಸಿಸಲು ಯೋಗ್ಯ ಸ್ಥಳಗಳು ಅಲ್ಲದೆ ಪ್ರಾರ್ಥನೆಗಾಗಿ ಒಂದು ಮಸೀದಿಯೂ ಇದರಲ್ಲಿವೆ. ಇದಲ್ಲದೆ ಇತರ ಪ್ರೇಕ್ಷಣೀಯ ಕಟ್ಟಡಗಳೆಂದರೆ ಚೀಣೀಮಹಲು, ತುರ್ಕಿ ಮಹಲುಗಳು. ಗುರುನಾನಕರಿಂದ ಸೃಷ್ಟಿಸಲ್ಪಟ್ಟಿದೆ ಎಂದು ಹೇಳಲಾಗುವ ನಾನಕ್‌ಘರ್ ಇಂದು ಸಿಖ್ ಜನರಿಗೆ ಒಂದು ಪವಿತ್ರ ಸ್ಥಳ. ಗುಹಾಂತರ ನರಸಿಂಹ ದೇವಾಲಯಕ್ಕೆ ಹೋಗಲು ಸುಮಾರು ೩೦೦ ಮೀಟರ್ ದೂರ ಎದೆಮಟ್ಟ ಸದಾಕಾಲ ನೀರಿರುವ ನರಸಿಂಹ ಝರಾನಲ್ಲಿ ನಡೆದುಕೊಂಡು ಹೋಗಬೇಕು.

### ರಾಯಚೂರು

ರಾಯಚೂರಿನಲ್ಲಿರುವ ಏಕ್ ಮಿನಾರ್ ಮಸೀದಿ ನಿರ್ಮಿಸಿದವನು ಬಹಮನಿ ದೊರೆ ಮಹಮದ್‌ಷಾ. ೧೮ ಮೀಟರ್ ಎತ್ತರದ ಒಂದೇ ಮಿನಾರ್ ಉಳ್ಳ ಈ ಮಸೀದಿ ಭಾರತದಲ್ಲೇ ಬಹು ಅಪರೂಪದ ಮಾದರಿಯದು. ರಾಯಚೂರಿನ ಭವ್ಯ ಕೋಟೆಯೂ ಪ್ರೇಕ್ಷಣೀಯ. ಚೆನ್ನಾಗಿ ನಯಗೊಳಿಸಿದ ಒಂದೇ ಆಕಾರದ ಬೃಹತ್ ಶಿಲೆಗಳನ್ನು ಕೂಡಿಸಿ ಈ ಕೋಟೆ ನಿರ್ಮಿಸಲಾಗಿದೆ. ಯಾವುದೇ ಗಾರೆ ಅಥವಾ ಸಿಮೆಂಟನ್ನು ಇಲ್ಲಿ ಬಳಸಲಿಲ್ಲ.

### ಚಿತ್ರದುರ್ಗ

ಚಿತ್ರದುರ್ಗದ ಕಲ್ಲಿನಕೋಟೆ ಏಳುಸುತ್ತಿನ ಕೋಟೆ. ಗಿರಿದುರ್ಗಕ್ಕೆ ಇದು ಉದಾಹರಣೆ. ಒನಕೆ ಓಬವ್ವ ಏಕಾಂಗಿಯಾಗಿ ನಿಂತು ಹೈದರಾಲಿಯ ನೂರಾರು ಸೈನಿಕರನ್ನು ಬಲಿತೆಗೆದುಕೊಂಡಿದ್ದು ಈ ಕೋಟೆಯಲ್ಲೇ.

### ಬೆಂಗಳೂರು ಸುತ್ತಮುತ್ತ

ಕರ್ನಾಟಕದ ರಾಜಧಾನಿಯಾದ ಬೆಂಗಳೂರು ಭಾರತದಲ್ಲೇ ಒಂದು ಉತ್ತಮ ಉದ್ಯಾನ ನಗರವೆಂದು ಖ್ಯಾತಿ ಪಡೆದಿದೆ. ಸಮುದ್ರಮಟ್ಟಕ್ಕಿಂತ ಸುಮಾರು ಒಂಬೈನೂರು ಮೀಟರ್ ಎತ್ತರದಲ್ಲಿರುವ ಬೆಂಗಳೂರು ಕ್ಷಣಕ್ಷಣಕ್ಕೂ ಬೆಳೆಯುತ್ತಿರುವುದಕ್ಕೆ ಕಾರಣ ಇಲ್ಲಿಯ ಹಿತಕರ ವಾಯುಗುಣ ಹಾಗೂ ಆರೋಗ್ಯಕರ ವಾತಾವರಣ.

ಬೃಹತ್ ಕಟ್ಟಡಗಳಿಗೆ ಹೆಸರುವಾಸಿಯಾದ ಬೆಂಗಳೂರಿನಲ್ಲಿರುವ ಒಂದು ಭವ್ಯ ಕಟ್ಟಡವೆಂದರೆ ವಿಧಾನಸೌಧ. ಇದರ ಉದ್ದ ೨೧೦ ಮೀಟರ್, ಅಗಲ ೧೦೫ ಮೀಟರ್. ಮುಂಡನೆಯ ಬೃಹತ್ ಕಂಬಗಳು, ಕಂಬಗಳ ಮೇಲೆ ಕೆತ್ತಿರುವ ಬೋದಿಗೆಗಳು, ಒಳಭಾಗದಲ್ಲಿ ಎಲ್ಲಿ ನೋಡಿದರಲ್ಲಿ ವಿವಿಧಾಕೃತಿಯ ಚಿತ್ರ ಕೆಲಸ ಮಾಡಿರುವ ಮೇಲ್ಛಾವಣಿ, ಸುಂದರವಾದ ಮೆಟ್ಟಿಲುಗಳು ಈ ಕಟ್ಟಡದ ಭವ್ಯತೆಯನ್ನು ಹೆಚ್ಚಿಸಿವೆ. ಕಟ್ಟಡದ ಮೇಲಿರುವ ಆರು ಗುಮ್ಮಟಗಳ ನಡುವೆ ಒಂದು ಬೃಹತ್ ಗುಮ್ಮಟ ಇದೆ. ಅದರ ಮೇಲೆ ಬಂಗಾರವರ್ಣದ ಭಾರತದ ಲಾಂಛನ–ಅಶೋಕ ಸ್ತಂಭ.

ಔದ್ಯೋಗಿಕವಾಗಿ ದಿಗ್ಭ್ರಮೆ ಹುಟ್ಟಿಸುವ ವೇಗದಲ್ಲಿ ಈ ನಗರ ಬೆಳೆಯುತ್ತಿದೆ ಎಂಬುದನ್ನು ಎಂಥವರೂ ಒಪ್ಪುತ್ತಾರೆ. ಹತ್ತಾರು ಅತಿ ದೊಡ್ಡ ಕಾರ್ಖಾನೆಗಳ ಜೊತೆಗೆ ಲೆಕ್ಕವಿಲ್ಲದಷ್ಟು ಸಣ್ಣ ಕಾರ್ಖಾನೆಗಳು ಇಲ್ಲಿವೆ. ದೇವಾಲಯಗಳು, ಚರ್ಚುಗಳು, ಮಸೀದಿಗಳು ಎಲ್ಲವೂ ಇರುವ ಈ ನಗರ ಧರ್ಮ ಸಮನ್ವಯದ ಸಂಕೇತ.

ಬೆಂಗಳೂರಿನ ಒಳಗೆ ಮತ್ತು ಹೊರಗೆ ನೋಡಬೇಕಾದ ಸ್ಥಳಗಳು ಬಹಳಷ್ಟು ಇವೆ. ೧೭೬೦ರಲ್ಲಿ ಹೈದರಾಲಿ ಕಟ್ಟಿಸಿದ ಲಾಲ್‌ಬಾಗ್ ತೋಟ ೨೪೦ ಎಕರೆಗಳಷ್ಟು ವಿಸ್ತಾರವಾಗಿ ಹರಡಿದೆ. ೧೦೦ ಬಗೆಯ ವೃಕ್ಷಗಳು ಇರುವ ಈ ತೋಟದಲ್ಲಿ ೧೦೦೦ ಕ್ಕೂ ಹೆಚ್ಚು ವಿವಿಧ ಸಸ್ಯಗಳಿವೆ. ಈ ಸಸ್ಯಕಾಶಿಯ ಗರ್ಭಗುಡಿ ಒಂದು ಸುಂದರ ಗಾಜಿನ ಮನೆ. ಇದು ಲಂಡನ್ನಿನ ಕ್ರಿಸ್ಟಲ್ ಪ್ಯಾಲೇಸಿನ ಗಾಜಿನ ಮನೆಯ ಮಾದರಿಯಲ್ಲಿದೆ. ಇಲ್ಲಿ ಪ್ರತಿವರ್ಷವೂ ಫಲ-ಪುಷ್ಪಗಳ ಪ್ರದರ್ಶನ ನಡೆಯುತ್ತದೆ. ಅಲ್ಲದೆ ಮೂರು ಸಾವಿರ ದಶಲಕ್ಷ ವರ್ಷ ಹಳೆಯದೆಂದು ಹೇಳುವ ಒಂದು ಕಲ್ಲುಬಂಡೆ ಇಲ್ಲಿದ್ದು ಪ್ರಪಂಚದ ಮೂಲೆ ಮೂಲೆಗಳಲ್ಲಿರುವ ಭೂಗರ್ಭಶಾಸ್ತ್ರಜ್ಞರನ್ನು ಆಕರ್ಷಿಸುತ್ತದೆ.

೩೦೦ ಎಕರೆ ಪ್ರದೇಶದಲ್ಲಿ ಹಬ್ಬಿಕೊಂಡಿರುವ ಮತ್ತೊಂದು ಸುಂದರ ಉದ್ಯಾನ ಕಬ್ಬನ್ ಪಾರ್ಕ್. ಈ ಉದ್ಯಾನದಲ್ಲಿರುವ ಸಾರ್ವಜನಿಕ ಪುಸ್ತಕ ಭಂಡಾರದ ಕಟ್ಟಡ ಗಾಥಿಕ್ ಶೈಲಿಯಲ್ಲಿ ಕಟ್ಟಲಾಗಿದೆ. ಇದೇ ಬಗೆಯ ಇನ್ನೊಂದು ಕಟ್ಟಡ ಸರ್ಕಾರಿ ವಸ್ತು ಸಂಗ್ರಹಾಲಯ. ೧೮೭೭ರಲ್ಲಿ ನಿರ್ಮಿತವಾದ ಇದು ಭಾರತದ ಕೆಲವೇ ಪುರಾತನ, ಭವ್ಯ ವಸ್ತು ಸಂಗ್ರಹಾಲಯಗಳಲ್ಲಿ ಒಂದು. ಎಲ್ಲ ಶಾಸ್ತ್ರಗಳಿಗೆ ಸಂಬಂಧಿಸಿದ ಅನೇಕ ಅಪರೂಪದ, ಅತ್ಯಂತ ಪುರಾತನ ವಸ್ತುಗಳನ್ನು ಇಲ್ಲಿ ಕಾಣಬಹುದು. ಕ್ರಿಸ್ತಪೂರ್ವ ೫೦೦೦ ಕ್ಕೆ ಸಂಬಂಧಿಸಿದ ಪುರಾತನ ಸಾಂಸ್ಕೃತಿಕ ಕುರುಹುಗಳು, ಅವಶೇಷಗಳನ್ನು ಇಲ್ಲಿ ಸಂಗ್ರಹಿಸಿ ಇಡಲಾಗಿದೆ. ಈ ಉದ್ಯಾನದಲ್ಲಿರುವ ಮತ್ತೆ ಕೆಲವು ವಿಶೇಷಗಳೆಂದರೆ, ವಿಶ್ವೇಶ್ವರಯ್ಯ ತಾಂತ್ರಿಕ ಹಾಗೂ ಔದ್ಯೋಗಿಕ ವಸ್ತುಸಂಗ್ರಹಾಲಯ, ಮಕ್ಕಳ ರೈಲುಬಂಡಿ ಇರುವ ಬಾಲಭವನ, ವೆಂಕಟಪ್ಪ ಚಿತ್ರಕಲಾ ಶಾಲೆ ಮತ್ತು ಹೈಕೋರ್ಟ್ ಕಟ್ಟಡ.

ಯಲಹಂಕ ಭೂಪಾಲ ರಾಜಾ ಕೆಂಪೇಗೌಡನ ಆಶ್ರಯದಲ್ಲಿ ಬೆಂಗಳೂರು ನಗರ ಅಭಿವೃದ್ಧಿಹೊಂದಲು ಪ್ರಾರಂಭವಾಯಿತು. ೧೫೩೭ರಲ್ಲಿ ಕೆಂಪೇಗೌಡ ಕಟ್ಟಿದ ಕೋಟೆ ಅನಂತರ ಹೈದರಾಲಿಯಿಂದ ವಿಸ್ತಾರಗೊಂಡು, ಈ ಕೋಟೆಯ ಅವಶೇಷಗಳು ಇಂದಿಗೂ ಸುಂದರವಾಗಿವೆ. ಗವಿಗಂಗಾಧರೇಶ್ವರನ ಗುಡಿ, ದ್ರಾವಿಡ ಶೈಲಿಯಲ್ಲಿ ಕೆತ್ತಲಾಗಿರುವ ೫ ಮೀಟರ್ ಎತ್ತರ ೬ ಮೀಟರ್ ಅಗಲದ ಕಲ್ಲಿನ ಬಸವ, ಕೆಂಪೇಗೌಡ ಊರಿನ ಸರಹದ್ದಿಗೆಂದು ನಿರ್ಮಿಸಿದ ೪ ಗೋಪುರಗಳು ಹಳೆಯ ಸ್ಮಾರಕಗಳು. ಟಿಪ್ಪು ಅರಮನೆ ಇಂದಿಗೂ ಚೆನ್ನಾಗಿದೆ. ಸಾವಿರ ಎಕರೆ ಹಸಿರಿನ ನಡುವೆ ನೂರು ವರ್ಷಗಳ ಹಿಂದೆ ನಿರ್ಮಿತವಾದ ಮೈಸೂರು ರಾಜರ ಅರಮನೆ ಇಂಗ್ಲೆಂಡಿನ ಪುರಾತನ ವಾಸ್ತುಶಿಲ್ಪಗಳಂತೆ ಗಾಥಿಕ್ ಶೈಲಿಯಲ್ಲಿ ಸುಂದರವಾಗಿ ಕಟ್ಟಲ್ಪಟ್ಟಿದೆ.

ಬೆಂಗಳೂರಿನ ಸುತ್ತಮುತ್ತ ಇರುವ ಪ್ರೇಕ್ಷಣೀಯ ಸ್ಥಳಗಳಲ್ಲಿ ಒಂದಾದ ಹೆಸರ ಘಟ್ಟ ೨೮ ಕಿ.ಮೀ. ದೂರದಲ್ಲಿದೆ. ೧೦೦೦ ಎಕರೆಯಲ್ಲಿ ಕಟ್ಟಲ್ಪಟ್ಟಿರುವ ವಿಶಾಲಕೆರೆ, ಸರ್ಕಾರಿ ತೋಟಗಾರಿಕೆ ಇಲಾಖೆ, ಹೈನುಗಾರಿಕೆ ಇಲಾಖೆಗಳು ಪೇಕ್ಷಣೀಯ. ವನಭೋಜನಕ್ಕೆ ಹೇಳಿಮಾಡಿಸಿದ ಸ್ಥಳ. ಬೆಂಗಳೂರಿಂದ ಇಷ್ಟೇ ದೂರ ಇರುವ ಮತ್ತೊಂದು ಇಂಥದೇ ಸ್ಥಳ ರಾಮೋಹಳ್ಳಿ: ಇಲ್ಲಿರುವ ಅಗಾಧವಾದ ಆಲದ ಮರ ತನ್ನ ಬೀಳಲುಗಳನ್ನು ಮೂರು ಚದರ ಎಕರೆ ವಿಸ್ತೀರ್ಣ ಪ್ರದೇಶದಲ್ಲಿ ಊರಿದೆ. ಬೆಂಗಳೂರ ಬಳಿಯ ವೈಟ್‌ಫೀಲ್ಡಿನಲ್ಲಿ ಒಂದು ಗಾಜಿನ ಕಾರ್ಖಾನೆ ಇದೆ. ಬೆಂಗಳೂರಿಗೆ ೫೬ ಕಿಲೋ ಮೀಟರ್ ದೂರದಲ್ಲಿರುವ ಶಿವಾರಪಟ್ಟಣ ಶಿಲ್ಪಿಗಳಿಂದ ತುಂಬಿದೆ. ಇಲ್ಲಿ ಕೆತ್ತಲ್ಪಟ್ಟ ಕಲ್ಲಿನ ಹಾಗೂ ಲೋಹಗಳ ವಿಗ್ರಹಗಳು ಇಂದು ಪ್ರಪಂಚಾದ್ಯಂತ ಹರಡಿ ಕುಳಿತಿವೆ. ಪಾಂಡವ ಸಹೋದರರಿಗೆ ಬಿಡಿಬಿಡಿಯೊದ ಐದು ದೇವಸ್ಥಾನಗಳನ್ನು ನೋಡಲು ೮೦ ಕಿ: ಮೀ. ದೂರದ ಕೈವಾರಕ್ಕೆ ಬರಬೇಕು. ಇಲ್ಲಿನ ಬೆಟ್ಟವೂ ಆಕರ್ಷಕ. ಪ್ರಪಂಚದಲ್ಲೇ ಆಳವಾದ ಚಿನ್ನದ ಗಣಿಗಳನ್ನು ನೋಡಲು ಕೋಲಾರ ಜಿಲ್ಲೆಗೆ ಬರಬೇಕು. ಭಾರತದಲ್ಲಿ ಇರುವ ಎರಡು ಚಿನ್ನದ ಗಣಿಗಳಲ್ಲಿ ಇದೊಂದು.

ಕೋಲಾರದ ಕೋಲಾರಮ್ಮನ ದೇವಾಲಯ ಮತ್ತು ಸೋಮೇಶ್ವರ ಗುಡಿಗಳು ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಾಮುಖ್ಯ ಪಡೆದಿವೆ. ಪ್ರಾಕಾರ, ಮಹಾದ್ವಾರ, ವಿಶಾಲಮಂಟಪಗಳನ್ನೊಳಗೊಂಡ ಕೋಲಾರಮ್ಮನ ಗುಡಿ, ಗೋಪುರವಿಲ್ಲದಿದ್ದರೂ ಅಂದವಾಗಿದೆ. ಚೋಳರ ಕಾಲದ ಈ ಗುಡಿಯ ಹೊರಗೋಡೆಗಳ ಮೇಲೆ ತಮಿಳು, ಕನ್ನಡ ಶಿಲಾಲಿಖಿಗಳನ್ನು ನೋಡಬಹುದು. ದ್ರಾವಿಡ ಶೈಲಿಯ ಸೋಮೇಶ್ವರ ಗುಡಿ ಆಕರ್ಷಕ ಕೆತ್ತನೆ ಕೆಲಸಗಳಿಂದ ಕೂಡಿದೆ. ದೊಡ್ಡ ಮಹಾದ್ವಾರ, ಅದರ ಮೇಲೆ ಸುಂದರ ಗೋಪುರ, ಗರ್ಭಗೃಹ, ವಿಶಾಲವಾದ ಸುಕನಾಸಿ ಮತ್ತು ನವರಂಗಗಳು ಕುತೂಹಲವನ್ನು ಕೆರಳಿಸುತ್ತವೆ. ಈ ದೇವಾಲಯ ವಿಜಯನಗರ ಅರಸರ ಕಾಲದ್ದು.

ಬೆಂಗಳೂರು ಜಿಲ್ಲೆ ನೆಲಮಂಗಲ ತಾಲ್ಲೂಕಿನ ಶಿವಗಂಗೆ ಒಂದು ಕಡಿದಾದ ಬೆಟ್ಟ. ..ಸಮುದ್ರ ಮಟ್ಟಕ್ಕಿಂತ ೧೩೮೦ ಮೀಟರ್ ಎತ್ತರವಿರುವ ಈ ಬೆಟ್ಟದ ವೈಶಿಷ್ಟ್ಯವೆಂದರೆ ಅದು ಒಂದೊಂದು ದಿಕ್ಕಿನಿಂದ ಒಂದೊಂದು ಬಗೆಯಲ್ಲಿ ಕಾಣುತ್ತದೆ. ನಂದಿಯಂತೆ, ಗಣೇಶನಂತೆ, ಸರ್ಪದಂತೆ, ಲಿಂಗದಂತೆ ನಾವು ಕಲ್ಪಿಸಿಕೊಳ್ಳಬಹುದು. ಗಂಗಾಧರೇಶ್ವರ ಗುಡಿ ಹಾಗೂ ಹೊನ್ನಾದೇವಿ ಗುಡಿಗಳು ಪ್ರಾಚೀನ ಕುರುಹುಗಳು. ಎಂದೂ ಬತ್ತದ ಪಾತಾಳಗಂಗೆಯ ಸಿಹಿ ತೀರ್ಥ ಇಲ್ಲಿ ಸದಾ ಸಿದ್ಧ. ಕಡಿದಾದ ಬೆಟ್ಟದ ಮೇಲೆ ಮಲಗಿರುವ ಬೃಹತ್ ಕಲ್ಲಿನ ನಂದಿಯ ಸೌಂದರ್ಯದ ಜತೆಗೆ ಪಕ್ಕದಲ್ಲೇ ಇರುವ ಪ್ರಪಾತ ಕಾಣಿಸಿ, ಇಂಥ ಕಡಿದಾದ ಸ್ಥಳದಲ್ಲಿ ನಿಂತು ಈ ಏಕಶಿಲಾ ವಿಗ್ರಹ ಕಡೆಯಲು ಹೇಗೆ ಸಾಧ್ಯ ಎಂದೂ ಯೋಚಿಸುವಂತಾಗುತ್ತದೆ.

**ಗಿರಿಧಾಮಗಳು**

ಬೆಂಗಳೂರಿಗೆ ೬೦ ಕಿ. ಮೀ. ದೂರದಲ್ಲಿರುವ ನಂದಿಬೆಟ್ಟ ಒಂದು ಪ್ರಶಾಂತ ಗಿರಿಧಾಮ. ಇದು ಸಮುದ್ರ ಮಟ್ಟಕ್ಕಿಂತ ೧೪೬೦ ಮೀಟರ್ ಅಡಿಗಳಷ್ಟು ಎತ್ತರದಲ್ಲಿದ್ದು "ಬಡವರ ನೀಲಗಿರಿ" ಎನ್ನಿಸಿದೆ. ಇಲ್ಲಿನ ಹಿತಕರ ಹವಾಗುಣ ಮೆಚ್ಚಿದ ಮಹಾತ್ಮಗಾಂಧಿಯವರು ಕೆಲಕಾಲ ತಂಗಿದ್ದ ತಾಣವಿದು. ಜೈನ ಕ್ಷೇತ್ರವಾಗಿದ್ದ ಇದು ಚೋಳರಿಗೆ ಸೇರಿದ ನಂತರ ಶೈವಕ್ಷೇತ್ರವಾಯಿತು. ಬೆಟ್ಟದ ಮೇಲಿರುವ ಯೋಗನಂದೀಶ್ವರ ದೇವಾಲಯದ ತಪ್ಪಲಲ್ಲಿ ಇರುವ ಭೋಗ ನಂದೀಶ್ವರ ದೇವಾಲಯ ತನ್ನ ಶಿಲ್ಪಕಲಾ ವೈಭವದಿಂದ ಮೆರೆಯುತ್ತಿದೆ. ೪೮ ಮೀಟರ್ ಉದ್ದ, ೭೫ ಮೀಟರ್ ಅಗಲವಾದ ಭೋಗ ನಂದಿಶ್ವರ ದೇವಾಲಯ ಎಂಟನೆಯ ಶತಮಾನದ್ದು. ವಿಶಾಲ ಪ್ರಾಕಾರದ ಉತ್ತರ ಭಾಗದಲ್ಲಿ ಶೃಂಗತೀರ್ಥ, ಮಧ್ಯಭಾಗದಲ್ಲಿ ವಸಂತ ಮಂಟಪ, ದಕ್ಷಿಣ ಭಾಗದಲ್ಲಿ ಅನೇಕ ಆಲಯಗಳೂ ಕೂಡಿ ಬೇರೆ ಬೇರೆ ಕಾಲಗಳ ಶಿಲ್ಪ ಕಲೆಗಳನ್ನು ಈ ದೇವಾಲಯಕ್ಕೆ ಸೇರಿದ ಕಟ್ಟಡಗಳು ಉದಾಹರಿಸುತ್ತವೆ. ನಂದಿ ಬೆಟ್ಟದ ಮೇಲಿರುವ ಪ್ರೇಕ್ಷಣೀಯ ಸ್ಥಳಗಳಲ್ಲಿ ಅಮೃತಸರೋವರ, ಕಬ್ಬನ್ ಹೌಸ್, ಟಿಪ್ಪು ಅರಮನೆಗಳು ಮುಖ್ಯ. ಬೆಟ್ಟದ ಮೇಲೆ ಹಳೆಯ ಕೋಟೆ ಇದೆ. ಟಿಪ್ಪೂಸ್ ಡ್ರಾಪ್ ಎಂದು ಹೆಸರಾಗಿರುವ ಶಿಲಾ ಪ್ರಪಾತದ ಆಳ ೬೦೦ ಮೀಟರ್.

ಕರ್ನಾಟಕದ ಮತ್ತೊಂದು ಪ್ರಸಿದ್ಧ ಗಿರಿಧಾಮ ಕೆಮ್ಮಣ್ಣುಗುಂಡಿ. ಬೆಂಗಳೂರಿಗೆ ೨೬೦ ಕಿ.ಮೀ. ದೂರದಲ್ಲಿರುವ ಈ ಪಶ್ಚಿಮಘಟ್ಟ ಶ್ರೇಣಿ ಸಮುದ್ರಮಟ್ಟದಿಂದ ೧೪೩೫ ಮೀಟರ್ ಎತ್ತರದಲ್ಲಿದೆ. ಅಬ್ಬೆ ಜಲಪಾತ, ಕಲ್ಲತ್ತಿಗಿರಿ ಜಲಪಾತಗಳು ಇಲ್ಲಿವೆ. ಮಲೆನಾಡಿನ ಸೌಂದರ್ಯವೆಲ್ಲ ಘನೀಭವಿಸಿ ಇಲ್ಲೇ ಇದೆಯೇನೋ ಎಂಬಂಥ ಮಧುರ ಅನುಭವ ನೀಡುವ ಈ ಗಿರಿಧಾಮದಲ್ಲಿ ನಿಂತು ಎಲ್ಲಿ ನೋಡಿದರೂ ಗಿರಿ ಶ್ರೇಣಿಗಳು, ಕಾಡುಗಳು, ಉದ್ಯಾನ, ತೋಟಗಾರಿಕೆ ಕೆಲಸಗಳನ್ನು ಮಾಡಿ ಇಲ್ಲಿನ ಸೌಂದರ್ಯಕ್ಕೆ ಮೆರುಗು ನೀಡಲಾಗಿದೆ. ಕುದುರೆ ಮುಖಿ ಕಬ್ಬಿಣ

ಅದುರು ಯೋಜನೆ ಇರುವುದು ಇಲ್ಲೇ. ಇಲ್ಲಿಗೆ ೨೮ ಕಿ. ಮೀ. ದೂರದ ಬಾಬಾಬುಡನ್‌ಗಿರಿ ಬೆಟ್ಟ ಹಿಂದು–ಮುಸಲ್ಮಾನ್ ಇಬ್ಬರಿಗೂ ಪವಿತ್ರ ಯಾತ್ರಾಸ್ಥಳ. ಕಾಫಿ ಬೀಜವನ್ನು ಭಾರತಕ್ಕೆ ಮೊದಲು ತಂದವನೆಂದು ಹೇಳಲಾದ ಬಾಬಾಬುಡನ್ ಸಮಾಧಿ ಇರುವ ಈ ಸ್ಥಳ ಮುಸಲ್ಮಾನರಿಗೆ "ದಕ್ಷಿಣ ಮಕ್ಕಾ." ಹಿಂದುಗಳಿಗೆ ಇದು ದತ್ತಾತ್ರೇಯ ಪೀಠ. ಹಿಂದು–ಮುಸಲ್ಮಾನರಿಬ್ಬರೂ ಅಣ್ಣ–ತಮ್ಮಂದಿರಂತೆ ಒಂದೇ ಸ್ಥಳದಲ್ಲಿ ಪೂಜೆ ಮಾಡುತ್ತಿರುವುದು ಕನ್ನಡ ನೆಲದ ಹಿರಿಮೆ. ಇದು ಧರ್ಮಸಮನ್ವಯದ ಸಂಕೇತ.

ದಕ್ಷಿಣದ ಚಿರಾಪುಂಜಿಯೆಂದು ಹೆಸರು ಪಡೆದ ಆಗುಂಬೆ ಶಿವಮೊಗ್ಗ ಜಿಲ್ಲೆಯಲ್ಲಿದೆ. ಇಲ್ಲಿ ಸೂರ್ಯಾಸ್ತ ದೃಶ್ಯ ಒಂದು ಅಪೂರ್ವ ಅನುಭವ ನೀಡುತ್ತದೆ.

**ಅಭಯಾರಣ್ಯಗಳು**

ಬಂಡಿಪುರ ಮೈಸೂರು–ಊಟಿ ರಸ್ತೆಯಲ್ಲಿ ಮೈಸೂರು ಜಿಲ್ಲೆಯಲ್ಲಿದೆ. ಈ ಅರಣ್ಯದಲ್ಲಿ ಸುತ್ತಾಡಲು ಜೀಪು, ಆನೆಗಳನ್ನು ಬಾಡಿಗೆಗೆ ಪಡೆಯಬಹುದು. ಆನೆಗಳ ಹಿಂಡು ಇಲ್ಲಿ ಸಾಮಾನ್ಯ. ಕಾಡುಕೋಣ, ನವಿಲು, ಜಿಂಕೆ, ಸಾರಂಗ ಮೊದಲಾದ ಪ್ರಾಣಿಗಳನ್ನು ನೋಡಬಹುದಲ್ಲದೆ ಅಪರೂಪಕ್ಕೊಮ್ಮೆ ಅಡ್ಡಾಡುವ ಭಯಂಕರ ಹುಲಿಗಳನ್ನೂ ನೋಡಬಹುದು.

ನಾಗರಹೊಳೆ ಕೊಡಗು ಜಿಲ್ಲೆಯಲ್ಲಿದೆ. ಈ ವನ್ಯಪ್ರದೇಶದಲ್ಲಿ ಸುತ್ತಾಡಲು ಪಳಗಿಸಿದ ಆನೆಗಳು ಸಹಾಯಕಾರಿ. ವ್ಯಾನುಗಳು ಬಾಡಿಗೆಗೆ ದೊರೆಯುತ್ತವೆ. ದಟ್ಟವಾದ ಕಾಡು, ಕೊಡಗಿನ ಪ್ರಕೃತಿ ಸೌಂದರ್ಯವನ್ನು ಇಲ್ಲಿ ಕಾಣಬಹುದು.

ಬೆಂಗಳೂರಿನ ಬಳಿಯ ಬನ್ನೇರುಘಟ್ಟದಲ್ಲಿ ಈಚೆಗೆ ಶೀಘ್ರಗತಿಯಲ್ಲಿ ಅಭಿವೃದ್ಧಿ ಪಡೆಯುತ್ತಿರುವ ರಾಷ್ಟ್ರೀಯ ಉದ್ಯಾನ ವನ್ಯಮೃಗಗಳ ಆಶ್ರಯಧಾಮವಾಗುತ್ತಿದೆ. ಮೊಸಳೆ ಹಾಗೂ ಹಾವುಗಳ ವನವನ್ನೂ ಇಲ್ಲಿ ಕಾಣಬಹುದು.

**ಜಲಪಾತಗಳು**

ಅತ್ಯಂತ ಎತ್ತರದಿಂದ ಧುಮುಕುವ ಜಲಪಾತಗಳ ಜೋಗ್ ವಿಶ್ವಪ್ರಸಿದ್ಧ. ಶರಾವತಿ ನದಿ ೨೯೦ ಮೀಟರ್ ಎತ್ತರದಿಂದ ಭೋರ್ಗರೆಯುತ್ತ ನಾಲ್ಕು ಭಾಗಗಳಲ್ಲಿ ಧುಮುಕುವ ದೃಶ್ಯ ಮನಮೋಹಕ, ರಾಜಾ, ರಾಣಿ, ರೋರರ್, ರಾಕೆಟ್ ಎಂದು ಕರೆಯಲ್ಪಡುವ ಈ ನಾಲ್ಕು ಭಾಗಗಳು ಮಳೆಗಾಲದಲ್ಲಿ ಮೈದುಂಬಿಕೊಂಡು ಹೊಸ ವೈವಿಧ್ಯ ಪಡೆಯುತ್ತವೆ. ಶಿವಮೊಗ್ಗದ ಬಳಿ ಇರುವ ಈ ಹೆಮ್ಮೆಯ ತಾಣ ಕರ್ನಾಟಕಕ್ಕೆ ಬೆಳಕು ನೀಡುವಲ್ಲಿ ಮುಖ್ಯ ಪಾತ್ರ ವಹಿಸಿದೆ. ಮಹಾತ್ಮ ಗಾಂಧಿ ಜಲವಿದ್ಯುತ್ ಉತ್ಪಾದನಾ ಕೇಂದ್ರ ಇಲ್ಲಿದೆ.

ಭಾರತದಲ್ಲಿ ಪ್ರಥಮವಾಗಿ ೧೯೦೨ರಲ್ಲಿ ಜಲವಿದ್ಯುತ್ ಪ್ರಾರಂಭಿಸಿದ ಹಿರಿಮೆ ಶಿವನ ಸಮುದ್ರಕ್ಕೆ ಸೇರುತ್ತದೆ. ಕಾವೇರಿ ನದಿ ೯೦ ಮೀಟರ್ ಎತ್ತರದಿಂದ ಗಗನಚುಕ್ಕಿ, ಭರಚುಕ್ಕಿ ಜಲಪಾತಗಳ ಹೆಸರಿನಲ್ಲಿ ಧುಮುಕಿ ಕಣ್ಮನಗಳನ್ನು ತಣಿಸುತ್ತದೆ. ದಟ್ಟವಾದ ಕಾಡು ಮತ್ತು ಹಸಿರು ತುಂಬಿದ ಕಣಿವೆಗಳಿರುವ ಸಾಲು ಬೆಟ್ಟಗಳು ಈ ಜಲಪಾತಕ್ಕೆ ಹಿನ್ನೆಲೆಯಾಗಿ, ರಮ್ಯತೆಯನ್ನು ಹೆಚ್ಚಿಸಿವೆ.

ಗೋಕಾಕಿನ ಬಳಿಯ ಗೋಕಾಕ್ ಜಲಪಾತ ಬೆಂಗಳೂರಿನಿಂದ ೫೩೦ ಕಿ. ಮೀ.ಗಳಷ್ಟು ದೂರ. ಘಟಪ್ರಭಾ ನದಿ ೫೦ ಮೀಟರ್ ಎತ್ತರದಿಂದ ಭೋರ್ಗರೆಯುತ್ತ ಧುಮ್ಮಿಕ್ಕುವ ರಮ್ಯ ದೃಶ್ಯ ಅಮೇರಿಕಾದ ನಯಾಗರಾ ಜಲಪಾತವನ್ನು ನೆನಪು ಮಾಡುತ್ತದೆ.

ಮೇಕೆದಾಟು ಕಾವೇರಿ ಮತ್ತು ಅರ್ಕಾವತೀ ನದಿಗಳ ಸಂಗಮ ಸ್ಥಳದಲ್ಲಿದೆ. ನದಿ ಒಂದಾಗಿ ಸೇರಿ ಹರಿಯುವಾಗ ಬೆಟ್ಟಗಳ ನಡುವೆ ಬಹಳ ಎತ್ತರದಿಂದ ರಭಸವಾಗಿ ಬೀಳುತ್ತದೆ. ಸಂಗಮೇಶ್ವರ ದೇವಾಲಯ ಇದರ ಬಳಿ ಇದೆ.

ಮುತ್ತಿನಂತೆ ತುಂತುರು ತುಂತುರಾಗಿ ನೀರಿನ ಮಣಿಗಳನ್ನು ಉದುರಿಸುವ ಜಲಪಾತ ಬೆಂಗಳೂರಿಗೆ ೪೩ ಕಿ. ಮೀ. ದೂರದಲ್ಲಿರುವ ಮುತ್ತ್ಯಾಲ ಮಡುವು. ೯೦ ಮೀಟರ್ ಎತ್ತರದಿಂದ ಬೀಳುವ ನೀರು ಪರಿಸರದ ಆಕರ್ಷಣೆಯನ್ನು ಹೆಚ್ಚಿಸಿದೆ.

ಗಂಗಾವತೀ ನದಿ ೧೮೦ ಮೀಟರ್ ಎತ್ತರದಿಂದ ದುಮುಕುವ ಮಾಗೋಡು ಜಲಪಾತ (ಬೆಂಗಳೂರಿಗೆ ೩೭೨ ಕಿ. ಮೀ.) ಮಾಗೋಡು ಹಳ್ಳಿಯಲ್ಲಿದೆ. ಅಘನಾಶಿನಿ ನದಿ ೧೮೦ ಮೀಟರ್ ಎತ್ತರದಿಂದ ಧುಮುಕುವ ಲುಷಿಂಗ್‌ಟನ್ ಜಲಪಾತ ಸಿರ್ಸಿ ಬಳಿ ಇದೆ. ಕಾರವಾರದ ಬಳಿ ಇರುವ ಲಾಲ್‌ಗುಲಿ ಜಲಪಾತ ಅನೇಕ ಹಂತಗಳಲ್ಲಿ ೬೦ ಮೀಟರ್ ಎತ್ತರದಿಂದ ಬೀಳುವ ಕಾಳೀ ನದಿಯ ಸೊಬಗನ್ನು ತೋರಿಸುತ್ತದೆ.

**ಅಣೆಕಟ್ಟೆಗಳು**

ಮೈಸೂರಿನ ಬಳಿಯ ಕನ್ನಂಬಾಡಿ ಅಣೆಕಟ್ಟೆ (ಕೃಷ್ಣರಾಜಸಾಗರ) ಲೋಕ ಪ್ರಸಿದ್ಧ. ಕಾವೇರಿ ನದಿಗೆ ಬೃಹತ್ ಅಣೆಕಟ್ಟೆನ್ನು ಕಟ್ಟುವಲ್ಲಿ ಯಶಸ್ಸು ಗಳಿಸಿದವರು ಸರ್ ಎಂ. ವಿಶ್ವೇಶ್ವರಯ್ಯನವರು. ಅಣೆಕಟ್ಟೆನ ಕೆಳಗೆ ಹಲವು ಅಂತಸ್ತುಗಳಲ್ಲಿ ಕಟ್ಟಲಾಗಿರುವ ಬೃಂದಾವನ ಒಂದು ಕಿನ್ನರ ಲೋಕವನ್ನೇ ನಿರ್ಮಿಸಿದೆ. ಬಣ್ಣ ಬಣ್ಣದ ಕಾರಂಜಿಗಳು, ಝಗಝಗಿಸುವ ದೀಪಗಳು. ಕೃತಕ ಜಲಪಾತಗಳು ನೋಡುವವರ ಮನದಲ್ಲಿ ಆನಂದದ ಬುಗ್ಗೆಯನ್ನು ಚಿಮ್ಮಿಸುತ್ತವೆ.

ತುಂಗಾಭದ್ರಾ ಅಣೆಕಟ್ಟೆ ಹಂಪೆಯ ವಿರೂಪಾಕ್ಷನನ್ನು ನೋಡಲು ಹೋದಾಗ ನೋಡಬೇಕು. ೫೦ ಮೀಟರ್ ಎತ್ತರದ ಈ ಬೃಹತ್ ಜಲಾಶಯ ಬಳ್ಳಾರಿಯ ಬಳಿ ಇದೆ. ಇಲ್ಲಿರುವ ಉದ್ಯಾನ ಜಪಾನ್ ದೇಶದ ಉದ್ಯಾನಗಳನ್ನು ನೆನಪಿಗೆ ತರುತ್ತದೆ.

**ಬಂದರುಗಳು**

ಮಂಗಳೂರಿನಿಂದ ಕಾರವಾರದ ವರೆಗೆ ೨೮೦ ಕಿ. ಮೀ. ಕಡಲ ತೀರ ಕನ್ನಡ ನಾಡಿನದಾಗಿದೆ. ನೇತ್ರಾವತಿ ಮತ್ತು ಗುರುಪುರ ನದಿಗಳು ಸಮುದ್ರವನ್ನು ಸೇರುವ ಮಂಗಳೂರಿನಲ್ಲಿ ಹೊಸದಾಗಿ ಬಂದರನ್ನು ಕಟ್ಟಲಾಗಿದೆ. ಲೈಟ್‌ಹೌಸ್ ಹಿಲ್, ಸೈಂಟ್ ಅಲೋಷಿಯಸ್ ಚರ್ಚು, ಮಂಗಳಾದೇವಿ ಗುಡಿ, ವಸ್ತು ಸಂಗ್ರಹಾಲಯ ಮೊದಲಾದ ಪ್ರೇಕ್ಷಣೀಯ ಸ್ಥಳಗಳು ಇಲ್ಲಿವೆ. ಮಂಗಳೂರಿನ ಬಳಿ ಇರುವ ಕದ್ರಿ ಬೆಟ್ಟ ಸುಂದರವಾಗಿದೆ.

ಮತ್ತೊಂದು ಪ್ರಸಿದ್ಧ ಬಂದರು ಕಾರವಾರ. ಮಂಗಳೂರಿನಿಂದ ಕಾರವಾರಕ್ಕೆ ಸಮುದ್ರಯಾನ ಮಾಡಿದರೆ ಅದರ ಅನುಭವ ವರ್ಣಿಸಲಸದಳ. ಉದ್ದಕ್ಕೂ ಸಿಗುವ ಮಲ್ಪೆ, ಕುಂದಾಪುರ, ಭಟ್ಕಳ, ಹೊನ್ನಾವರ, ಗೋಕರ್ಣ ಮೊದಲಾದ ಸಮುದ್ರ ತೀರದ ಎಲ್ಲ ಊರುಗಳೂ ರಮಣೀಯವಾಗಿವೆ. ಪರ್ವತ ಶ್ರೇಣಿಯ ಪಕ್ಕದಲ್ಲಿ, ತೆಂಗಿನ ಮರಗಳ ಸಾಲುಗಳನ್ನು, ದಟ್ಟವಾದ ಕಾಡುಗಳನ್ನು, ಪುಟ್ಟ ಪುಟ್ಟ ದ್ವೀಪಗಳನ್ನು ನೋಡುತ್ತ ಪ್ರಯಾಣ ಮುಗಿಸಿದರೆ ಮತ್ತೊಂದು ಚೆಂದದ ಊರು ಸಿಗುತ್ತದೆ. ಅದೇ ಅರ್ಧ ಚಂದ್ರಾಕಾರದ

ನೈಸರ್ಗಿಕ ರೇವಿನಲ್ಲಿ ಕುಳಿತಿರುವ ಕಾರವಾರ! ಕಾರವಾರ, ಪ್ರಪಂಚದ ಮೂರು ಶ್ರೇಷ್ಠ ನೈಸರ್ಗಿಕ ಬಂದರುಗಳಲ್ಲಿ ಒಂದು ಎಂದು ಹೇಳಲಾಗಿದೆ. ಕಾರವಾರದ ಚೆಲುವು ಬಣ್ಣನೆಗೆ ನಿಲುಕದ್ದು.

ಕರ್ನಾಟಕದಲ್ಲಿರುವ ಪ್ರೇಕ್ಷಣೀಯ ಸ್ಥಳಗಳು ಇವಿಷ್ಟೇ ಎಂದು ಕೆಲವು ಸ್ಥಳಗಳ ಪರಿಚಯ ಮಾತ್ರ ಮಾಡಿ ಮುಗಿಸಿದರೆ ಮಾಹಿತಿ ಅಪೂರ್ಣವಾಗುತ್ತದೆ. ಕರ್ನಾಟಕದ ಯಾವುದೇ ಮೂಲೆಗೆ ಹೋದರೂ ಬಳಿಯಲ್ಲೇ ಒಂದು ಪ್ರೇಕ್ಷಣೀಯ ಸ್ಥಳವಿರುತ್ತದೆ; ಒಂದು ಕೋಟೆ-ಕೊತ್ತಲ ಇರುತ್ತದೆ. ಒಂದು ವಾಸ್ತುಶಿಲ್ಪ ಇರುತ್ತದೆ; ಒಂದು ಪುಣ್ಯಕ್ಷೇತ್ರ ಇರುತ್ತದೆ. ನಾವು ಯಾವುದೇ ಜಾಗದಲ್ಲಿ ಕಾಲಿರಿಸಿದರೂ ಆ ಜಾಗಕ್ಕೆ ರಾಮಾಯಣ ಮಹಾಭಾರತ ಕಾಲವೇ ಆದಿಯಾಗಿ ಯಾವುದೋ ಒಂದು ಸ್ಥಳ ಪುರಾಣ, ಒಂದು ವೈಶಿಷ್ಟ್ಯ ಇರುತ್ತದೆ. ಪ್ರೇಕ್ಷಣೀಯ ಸ್ಥಳಗಳ ಸಂದರ್ಶನದ ಜತೆಗೆ, ಅಲ್ಲಿಯ ಸ್ಥಳ ಪುರಾಣಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದೇ ಆದರೆ ಬೇರೆ ಯಾವ ರಾಮಾಯಣ, ಮಹಾಭಾರತ, ವೇದ ವಾಸ್ತುಶಿಲ್ಪ ಗ್ರಂಥಗಳನ್ನು ಓದುವ ಅಗತ್ಯವೇ ಇಲ್ಲ ಎನ್ನುವಂತೆ ಎಲ್ಲ ಅಂಶಗಳನ್ನು ಕನ್ನಡ ನೆಲದ ಒಂದೊಂದು ಸ್ಥಳವೂ ಸಾರಿ ಹೇಳತ್ತದೆ.